# ಸಾಹಸ ಯಾತ್ರಿ



ಸಂಪಾದಕರು
ಹ. ಕ. ರಾಜೇಗೌಡ
ಬಿ. ಜಯಪ್ರಕಾಶಗೌಡ

ತರುಣ ಸ್ನೇಹಿತ
ರಾದ [illegible]
ಡಾ|| ಪಿ. ವಿ. ನಾರಾಯಣ
ಅವರಿಗೆ
ವಂದನಾಪೂರ್ವಕವಾಗಿ
ಪಿ. ಎನ್. ಜಿ. ವರಪ್ರಸಾದ್
೨೦/7/91



ಪಿ. ಎಸ್. ಜವರಪ್ಪಗೌಡರು ಕುಟುಂಬದೊಂದಿಗೆ



ಶ್ರೀ ಎಚ್. ಟಿ. ಕೃಷ್ಣಪ್ಪ ಮತ್ತು ಜಿಲ್ಲಾಧಿಕಾರಿ
ಪ್ರಭು ಅವರೊಡನೆ



ಶ್ರೀ ಜವರಪ್ಪಗೌಡರು ಪತ್ರಿಕಾ ಅಕಾದೆಮಿ ಪ್ರಶಸ್ತಿ
ಸ್ವೀಕರಿಸುತ್ತಿರುವುದು



ರಾಷ್ಟ್ರಕವಿ ಕುವೆಂಪು ಅವರ ನಿವಾಸದಲ್ಲಿ
ಆದಿಚುಂಚನಗಿರಿ ಜಗದ್ಗುರು ಗಳೊಡನೆ



ವಿಶ್ವಮಾನ ಸಂದೇಶ ಅಮೃತ ಶಿಲಾಫಲಕವನ್ನು
ಕುವೆಂಪು ಅವರು ಉದ್ಘಾಟಿಸಿದಾಗ



ಮಂಡ್ಯ ಜಿಲ್ಲಾ ರಾಜಕೀಯ ಸಮ್ಮೇಳನದಲ್ಲಿ
ಶ್ರೀ ಎಸ್. ನಿಜಲಿಂಗಪ್ಪ ನವರೊಡನೆ



ವಯಸ್ಕರ ಶಿಕ್ಷಣ ಸಮಿತಿ ಕಾರ್ಯಕರ್ತರಾಗಿದ್ದಾಗ
ಕುಳಿತಿರುವವರಲ್ಲಿ ಬಲದಿಂದ ಎರಡನೆಯವರು



ಧರ್ಮಸಮ್ಮೇಳನದಲ್ಲಿ ಶ್ರೀರಾಘವೇಂದ್ರಸ್ವಾಮಿಗಳಿಂದ
ಸನ್ಮಾನ ಸ್ವೀಕರಿಸುತ್ತಿರುವುದು



ಕುವೆಂಪು ನಿವಾಸದಲ್ಲಿ ಜಿ. ಎಸ್. ಶಿವರುದ್ರಪ್ಪ
ನವರೊಡನೆ



ನಾಗಮಂಗಲದಲ್ಲಿ ಅಕ್ಷರಸೇನೆ ಉದ್ಘಾಟನೆ
ರಾಜ್ಯಪಾಲ ಧರ್ಮವೀರ ಉದ್ಘಾಟಿಸಿದಾಗ



ಶಂಕರಗೌಡರು ಸಚಿವರಾದಾಗ ಗೌಡರ ನಿವಾಸದಲ್ಲಿ



ಮುಖ್ಯಮಂತ್ರಿ ವೀರೇಂದ್ರಪಾಟೀಲರಿಂದ ಸನ್ಮಾನ
ಸ್ವೀಕರಿಸುತ್ತಿರುವುದು



ಪಂಪಾ ವಿದ್ಯಾಪೀಠದಲ್ಲಿ ಸಚಿವ ಕೆ. ಹನುಮಂತಯ್ಯ
ನೆಹರು ಸ್ಮಾರಕ ಭವನ ಪ್ರಾರಂಭಿಸಿದ ದಿನ



ಉಪರಾಷ್ಟ್ರಪತಿ ಶ್ರೀಪಾಠಕ್ ಅವರಿಂದ
ನೆಹರು ಸಾಕ್ಷರತಾ ಪ್ರಶಸ್ತಿ ಸ್ವೀಕರಿಸುತ್ತಿರುವುದು



ಜಬ್ಬಲ್ ಪುರದಲ್ಲಿ ನಡೆದ ಅಖಿಲ
ಭಾರತ ವಯಸ್ಕರ ಶಿಕ್ಷಣ ಸಮ್ಮೇಳನದಲ್ಲಿ



ಕೆಂಗೇರಿ ವಿದ್ಯಾಪೀಠದಲ್ಲಿ ಡಾ. ಶಿವರಾಮಕಾರಂತರು
ಮತ್ತು ಜಿ. ನಾರಾಯಣ ಅವರೊಡನೆ



ಜವರಪ್ಪಗೌಡರ ನಿವಾಸದಲ್ಲಿ ದೇ ಜ ಗೌ ಮತ್ತು
ಅವರ ಸಂಸಾರದೊಡನ



ಜವರಪ್ಪಗೌಡರು ಅಳಿಯಂದಿರು ಮಕ್ಕಳು ಮೊಮ್ಮಕ್ಕಳೊಂದಿಗೆ


ತಗಡೂರು ರಾಮಚಂದ್ರರಾಯರು


ಎಂ. ಎನ್. ಜೋಯಿಸರು


ಎಂ. ಆರ್. ಸಿ. ಬಸಪ್ಪನವರು


ಟಿ. ಎಸ್. ಸುಬ್ಬಣ್ಣನವರು



ವಿಶ್ವಾಮಿತ್ರ ಪತ್ರಿಕೆಯನ್ನು ಎಂ. ಕೆ. ಶಿವನಂಜಪ್ಪ
ಸ್ವಾಗತಿಸಿ ಓದುತ್ತಿರುವುದು



ಕೋಲಾರ ಕ್ಷಾಮಕ್ಕೆ ಮಂಡ್ಯದಿಂದ ಅಕ್ಕಿ
ತೆಗೆದುಕೊಂಡು ಹೋದ ಸಂದರ್ಭದಲ್ಲಿ
ಶ್ರೀಮನ್ ಮಹರಾಜರೊಡನೆ



ಕೆಮ್ಮಣ್ಣುಗುಂಡಿಯಲ್ಲಿ ಪುಸ್ತಕ ಭಂಡಾರ
ಪ್ರಾರಂಭೋತ್ಸವದಲ್ಲಿ
ರಾಜ್ಯಪಾಲ ಸುಖಾಡಿಯಾ ಅವರೊಂದಿಗೆ



ಅಖಿಲ ಭಾರತ ಕಾಂಗ್ರೆಸ್ ಸುವರ್ಣ ಮಹೋತ್ಸವ



ನೆಹರು ಸಾಕ್ಷರತಾ ಪ್ರಶಸ್ತಿ ಸಮಾರಂಭಕ್ಕೆ
ಶ್ರೀ ಪಾಠಕ್ ಅವರನ್ನು ಗೌಡರು ಪತ್ನಿಯೊಡನೆ
ಸ್ವಾಗತಿಸುತ್ತಿರುವುದು



ಏನಿಗದಲೆ ವಿದ್ಯಾಪೀಠದಲ್ಲಿ ಡಾ. ಕೆ. ಎಚ್
ರಾಮೇಗೌಡರೊಡನೆ



ಶ್ರೀ ಶಿವಾರಗುಡ್ಡ ವಿದ್ಯಾಪೀಠ ಸಮಾರಂಭದಲ್ಲಿ
ಶ್ರೀ ಜಿ. ಮಾದೇಗೌಡರೊಡನೆ



ಸಚಿವ ಲಿಂಗಾರೆಡ್ಡಿ ಅವರಿಂದ ಮೀನಿನಮರಿ ಸ್ವೀ
ತ್ತಿರುವುದು



ಮಂಡ್ಯದ ಸನ್ಮಾನದಲ್ಲಿ ವಯಸ್ಕರ ಶಿಕ್ಷಣ ಅಧಿಕಾರಿಗಳು ಮತ್ತು ಊರಿನ ಗಣ್ಯರೊಡನೆ



# ಕರ್ನಾಟಕ ಪತ್ರಿಕಾ ಅಕಾಡೆಮಿ

ಬೆಂಗಳೂರು

## ಪ್ರಶಸ್ತಿ ಪತ್ರ 1988

ಶ್ರೀ ಪಿ.ಎನ್. ಜವರಪ್ಪಗೌಡ ಅವರು

ಪತ್ರಿಕಾ ಕ್ಷೇತ್ರದಲ್ಲಿ ಸಲ್ಲಿಸಿರುವ ಸುದೀರ್ಘ ಸೇವೆಗಾಗಿ

ಗೌರವಪೂರ್ವಕವಾಗಿ ನೀಡಿದ ಪ್ರಶಸ್ತಿ ಪತ್ರ

ಕಾರ್ಯದರ್ಶಿ | ಅಧ್ಯಕ್ಷ

ಮುಖ್ಯ ಅತಿಥಿ

---

ಬೆಂಗಳೂರು * 26 ಫೆಬ್ರುವರಿ 1989



ಮೈಸೂರು ವಿಲೀನವಿರೋಧ ಸಮ್ಮೇಳನ ಶ್ರೀ ಕೆ. ಲಕ್ಕಪ್ಪ ಮತ್ತು ಶ್ರೀ ಕೆ. ವಿ. ಶಂಕರಗೌಡ,
ಮುಂತಾದವರೊಡನೆ



ದಿವಂಗತ ಬಿ. ಎಲ್. ಗೌಡ,
ಜಿ. ಎಸ್. ಬೊಮ್ಮೇಗೌಡರೊಡನೆ



ಎಚ್. ಎಲ್. ನಾಗೇಗೌಡರ ಸನ್ಮಾನದಲ್ಲಿ



ರಾಜ್ಯಪಾಲ ಸುಖಾಡಿಯ ಶ್ರೀ ಕೆ. ವಿ. ಶಂಕರಗೌಡ
ರೊಂದಿಗೆ



ವರುಣ ನಾಲಾ ಚಳುವಳಿ ಮೆರವಣಿಗೆಯಲ್ಲಿ



ಕೋಲಾರ ಕ್ಷಾಮಕ್ಕೆ ಮಂಡ್ಯ ರೈತರಿತ್ತ ಅಕ್ಕಿ ವಿತರಣೆಯನ್ನು ಮುಖ್ಯಮಂತ್ರಿ ಕೆ. ಹನುಮಂತಯ್ಯನವರೊಡನೆ ಜವರಪ್ಪಗೌಡರು



ಪಿ. ಎಸ್. ಜವರಪ್ಪಗೌಡರು ಉದಯರವಿಯಲ್ಲಿ



ಕೆಂಗೇರಿ ವಿದ್ಯಾಪೀಠದಲ್ಲಿ ರಾಜ್ಯಪಾಲ ಧರ್ಮವೀರ
ಅವರೊಂದಿಗೆ



ಘಟಿಕೋತ್ಸವದಲ್ಲಿ ಅ. ನ. ಕೃ. ರೊಂದಿಗೆ



ಸಚಿವ ಜಿ. ಬಿ. ಶಂಕರರಾವ್
ಮತ್ತು ಡಿ. ಮಂಜುನಾಥ್ ರೊಂದಿಗೆ

# ಅಭಿನಂದನ ಸಮಿತಿ

| | | |
|---|---|---|
| ಅಧ್ಯಕ್ಷರು | : | ಜಿ. ಮಾದೇಗೌಡ |
| ಉಪಾಧ್ಯಕ್ಷರು | : | ಎಚ್. ಡಿ. ಚೌಡಯ್ಯ |
| ಖಜಾಂಚಿ | : | ಎಂ. ಕೆ. ರಾಮಲಿಂಗೇಗೌಡ |
| ಕಾರ್ಯದರ್ಶಿಗಳು | : | ಎಂ. ಎಸ್. ಆತ್ಮಾನಂದ |
| | | ಕೆ. ಟಿ. ಶಿವಲಿಂಗಯ್ಯ |

# ಸಾಹಸಯಾತ್ರಿ

(ಶ್ರೀ ಪಿ. ಎನ್. ಜವರಪ್ಪಗೌಡ ಅಭಿನಂದನ ಗ್ರಂಥ)

ಪ್ರಧಾನ ಸಂಪಾದಕರು

ಕೆ. ವಿ ಶಂಕರಗೌಡ

ಸಂಪಾದಕರು

ಹ. ಕ. ರಾಜೇಗೌಡ

ಬಿ. ಜಯಪ್ರಕಾಶಗೌಡ

ಪ್ರಕಾಶಕರು

ಶ್ರೀ ಪಿ. ಎನ್. ಜವರಪ್ಪಗೌಡ ಅಭಿನಂದನ ಸಮಿತಿ

ಮಂಡ್ಯ 1989

*SAHASAYATRI :* A Felicitation volume presented to Sri P. N. Javarappa Gowda a veteran freedom fighter of Mandya District. Edited by H K. Rajegowda Institute of Kannada Studies Manasagangothri Mysore 570006. B. Jayaprakash gowda Principal Janata Evening College Mandya published by P. N. Javarappagowda Felicitation Comittee Mandya. First Edition 1989 pp xvi + 738. price Rs. 150.



ಬೆಲೆ : ಒಂದುನೂರ ಐವತ್ತು ರೂ.ಗಳು



ಮುಖಚಿತ್ರ
ಮಂಡ್ಯಸ್ಟುಡಿಯೊ ಮಂಡ್ಯ.

ಮುದ್ರಕರು
ಶ್ರೀ ವಿನಾರಾ ಪ್ರಿಂಟರ್ಸ್ ಶಿವರಾಂಪೇಟೆ ಮೈಸೂರು.

ಡಾ. ಕುವೆಂಪು



## ಮುನ್ನುಡಿ

ಶ್ರೀಮಾನ್ ಪಿ.ಎನ್. ಜವರಪ್ಪಗೌಡರನ್ನು ನಾನು ಸುಮಾರು ಐವತ್ತು ವರ್ಷಗಳಿಂದಲೂ ಬಲ್ಲೆ. ಅವರು ಜನ್ಮತಃ ಸ್ವಾತಂತ್ರ್ಯ ಯೋಧರು. ಬಡತನ, ಹೆಚ್ಚಿನ ವಿದ್ಯಾಭ್ಯಾಸದ ಕೊರತೆ ಇವು ಯಾವುವೂ ಅವರನ್ನು ಭಾರತದ ಮಹಾನ್ ಸ್ವಾತಂತ್ರ್ಯ ಸಮರದಲ್ಲಿ ಕಾಯಾ ವಾಚಾ ಮನಸಾ ಭಾಗಿಯಾಗುವುದರಿಂದ ವಿಮುಖರನ್ನಾಗಿ ಮಾಡಲಿಲ್ಲ. ಆ ವೇಳೆಗಾಗಲೇ ನಾನು ರಚಿಸಿದ್ದ ಕ್ರಾಂತಿಕಾರಕ ಕವನಗಳನ್ನು ಯಥೇಚ್ಛವಾಗಿ ಉದ್ಧರಿಸುತ್ತಾ ತರುಣ ಪಿ. ಎನ್. ಜವರಪ್ಪಗೌಡರು ಹಳೆಯ ಮೈಸೂರು ವಿಭಾಗದ ಒಂದೊಂದು ಗ್ರಾಮದಲ್ಲೂ ತಮ್ಮ ವಾಗ್ಝರಿಯಿಂದ ನಮ್ಮ ಜನತೆಯನ್ನು ಜಾಗ್ರತಗೊಳಿಸಿ ಸ್ವಾತಂತ್ರ್ಯ ಸಂಗ್ರಾಮದ ಜ್ವಾಲೆ ದಳ್ಳುರಿಯಾಗುವಂತೆ ಮಾಡಿದ ರೀತಿಯನ್ನು ಅವರು ತಮ್ಮ ಆತ್ಮಕಥೆಯಲ್ಲಿ ನಿರೂಪಿಸಿದ್ದಾರೆ. ಅವರ ಈ ನಿರೂಪಣೆಯು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಳೆಯ ಮೈಸೂರಿನ ವಿವಿಧ ಭಾಗಗಳು ವಹಿಸಿದ ಪ್ರಮುಖ ಪಾತ್ರವನ್ನು ಸ್ಪಷ್ಟವಾಗಿ ಚಿತ್ರಿಸುವ ಲಿಖಿತ ದಾಖಲೆಯೂ ಆಗಿರುವುದು ಅಮೂಲ್ಯವಾದ ವಿಷಯವಾಗಿದೆ.

ಶ್ರೀಮಾನ್ ಪಿ.ಎಸ್. ಜವರಪ್ಪಗೌಡರು ಇನ್ನೂ ಎರಡು ಕಾರಣಗಳಿಗಾಗಿ ನನಗೆ ಅತ್ಯಂತ ಪ್ರಿಯರಾಗಿದ್ದಾರೆ. ನನ್ನ **"ಮಂತ್ರ ಮಾಂಗಲ್ಯ"** ಯೋಜನೆಯನ್ನು ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರ ಮಾಡಿ ಅನೇಕರು ವಿವಾಹಾಡಂಬರದ ವಿಪತ್ತುಗಳಿಂದ ನಾಶವಾಗುವುದನ್ನು ತಪ್ಪಿಸುತ್ತಿದ್ದಾರೆ.

ಎರಡನೆಯದಾಗಿ ನನ್ನ **"ವಿಶ್ವಮಾನವ"** ಕಲ್ಪನೆಯನ್ನು ಅವರು ಆಮೂಲಾಗ್ರವಾಗಿ ಗ್ರಹಿಸಿರುವುದು ಮಾತ್ರವಲ್ಲದೆ ಅದನ್ನು ಕನ್ನಡ ನಾಡಿನ ಶ್ರೀ ಸಾಮಾನ್ಯನ ವ್ಯಕ್ತಿತ್ವದ ಅವಿಭಾಜ್ಯವಾದ ಅಂಗವಾಗಿ ಮಾಡುವುದಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದಾರೆ.

ಶ್ರೀಮಾನ್ ಪಿ. ಎಸ್. ಜವರಪ್ಪಗೌಡರು ಎಪ್ಪತ್ತರ ಪ್ರಾಯದಲ್ಲಿದ್ದಾರೆ. **ದೇಶಭಕ್ತಿ, ಸಮಾಜ ಸುಧಾರಣೆಯ ಆಸಕ್ತಿ, "ವಿಶ್ವಮಾನವ ಸಂದೇಶ"** ದ ಪ್ರಸಾರಸಕ್ತಿ ಈ ಮೂರು ಅವರು ಮುಂದಿನ ಪೀಳಿಗೆಗೆ ನೀಡುತ್ತಿರುವ ಸಂಪತ್ತು. ನಮ್ಮ ವಿದ್ಯಾವಂತ ತರುಣರು ಜವರಪ್ಪಗೌಡರ ವ್ಯಕ್ತಿತ್ವದ ಜ್ಯೋತಿಯಿಂದ ತಮ್ಮ ಜೀವನವನ್ನು ಬೆಳಗಿಸಿಕೊಳ್ಳುತ್ತಾರೆ ಎಂಬ ನಂಬಿಕೆ ನನಗಿದೆ. ನನ್ನ ನಂಬಿಕೆಯನ್ನು ಕಾರ್ಯರೂಪಕ್ಕೆ ತರುವ ಹೊಣೆ ನಮ್ಮ ನಾಡಿನ ಯುವ ಜನಾಂಗದ ಮೇಲಿದೆ.

ಇಂಥದೊಂದು ಅತ್ಯಂತ ಉಪಯುಕ್ತವಾದ ಕೃತಿ ಕನ್ನಡಿಗರಿಗೆ ದೊರೆಯಲು ಕಾರಣರಾದ ಎಲ್ಲರನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**ಉದಯರವಿ**

**ಮೈಸೂರು.** **ಕುವೆಂಪು**

# ಪ್ರಧಾನಸಂಪಾದಕರ ಮಾತು

ಬಹುಮುಖಪ್ರತಿಭೆಯ ನನ್ನ ಸನ್ಮಿತ್ರ ಶ್ರೀ ಪಿ. ಎನ್. ಜವರಪ್ಪಗೌಡರ ಸಾಧನೆಗಳನ್ನು ಕುರಿತ ಒಂದು ಅಭಿನಂದನಗ್ರಂಥವನ್ನು ಹೊರತರಬೇಕೆಂಬ ತುಡಿತ ನನ್ನ ಮನಸ್ಸನ್ನು ಕಾಡುತ್ತಿತ್ತು. ಆದರೆ ಅನೇಕ ಅನಿವಾರ್ಯ ಕಾರಣಗಳಿಂದಾಗಿ ಆ ಆಸೆ ಕೈಗೂಡಿರಲಿಲ್ಲ. ಅದು ಕೈಗೂಡುವಂತೆ ಮಾಡಿದವರು ನನ್ನ ಮತ್ತೊಬ್ಬ ಸನ್ಮಿತ್ರರಾದ ಜಿ. ಮಾದೇಗೌಡರು. ನಾನು ಮಾಡಬೇಕೆಂದಿದ್ದ ಕೆಲಸವನ್ನು ಅವರು ಮಾಡಲು ಮುಂದಾದರು. ನನ್ನ ಮನಸ್ಸಿಗೆ ಅತೀವ ಆನಂದವಾಯಿತು.

ಅಭಿನಂದನಗ್ರಂಥವನ್ನು ಹೊರತರುವುದು ಹಲವರು ತಿಳಿದಿರುವಂತೆ ಸುಲಭದ ಕೆಲಸವಲ್ಲ. ಬಹು ಕಠಿಣತರವಾದ ಕೆಲಸ ಅದು. ಅಭಿನಂದನೀಯ ವ್ಯಕ್ತಿಯ ಜೀವನ ಪರಿಚಯವುಳ್ಳವರನ್ನು ಹಾಗೂ ಅವರ ವ್ಯಕ್ತಿತ್ವವನ್ನು ಕುರಿತು ಲೇಖನಗಳನ್ನು ಬರೆಯುವವರನ್ನು ಹುಡುಕಿ ಒಪ್ಪಿಸಬೇಕಾಗುತ್ತದೆ. ಹೀಗೆ ಬರೆಯುವವರೆಲ್ಲ ಲೇಖಕರೇ ಆಗಿರುವುದಿಲ್ಲ. ಆದುದರಿಂದ ಅಂತಹ ಬರಹಗಳನ್ನು ಪರಿಷ್ಕರಿಸಿ ಮುದ್ರಣಕ್ಕೆ ಅಣಿಗೊಳಿಸಬೇಕು. ಇನ್ನು ಯಾವುದಾದರೊಂದು ವಿಷಯ ಇಟ್ಟುಕೊಂಡು ಅಭಿನಂದನಗ್ರಂಥ ಸಿದ್ಧಪಡಿಸುವುದೊಂದು ಸಾಹಸವೇ ಸರಿ. ಅಭಿನಂದನಗ್ರಂಥ ಒಂದು ಆಕರಗ್ರಂಥವಾಗಿ ಮೂಡಿಬರಬೇಕಾದರೆ ಅತ್ಯಂತ ಸಮರ್ಥರಾದ ಸಂಪಾದಕರೆ ಬೇಕಾಗುತ್ತದೆ.

ಸುದೈವದಿಂದ ಕನ್ನಡದ ಸುಪ್ರಸಿದ್ಧ ಲೇಖಕರೂ ಮೈಸೂರು ವಿಶ್ವವಿದ್ಯಾನಿಲಯದ ಹಿರಿಯ ಸಂಶೋಧಕರೂ ಆದ ಸನ್ಮಾನ್ಯ ಹ. ಕ. ರಾಜೇಗೌಡರು ಆ ಜವಾಬ್ದಾರಿಯನ್ನು ಹೊತ್ತು ಅತಿ ಶೀಘ್ರದಲ್ಲಿ ಅಭಿನಂದನಗ್ರಂಥ ಹೊರಬರುವಂತೆ ಮಾಡಿದ್ದಾರೆ. ಇದಕ್ಕಾಗಿ ಅವರು ಎಂದೂ ಪ್ರತಿಫಲವನ್ನು ಬಯಸಿದವರಲ್ಲ. ಯಾರ ಬಳಿಯೂ ಹೋಗಿ ಯಾಚಿಸುವ ಪ್ರವೃತ್ತಿಯಂತೂ ಅವರಲ್ಲಿ ಇಲ್ಲವೇ ಇಲ್ಲ. ಸನ್ಮಾನ್ಯ ಹ. ಕ. ರಾಜೇಗೌಡರ ಪ್ರಯತ್ನದಿಂದ ನಾಡಿನ ಅನೇಕ ಗಣ್ಯಮಹನೀಯರ ಪ್ರಬುದ್ಧ ಲೇಖನಗಳು ದೊರಕಿಬಂದು ಈ ಅಭಿನಂದನಗ್ರಂಥ ಸಾರವತ್ತಾಗಿ, ಬೋಧಪ್ರದವಾಗಿ, ಒಂದು ಆಕರಗ್ರಂಥವಾಗಿ ಮೂಡಿಬಂದಿದೆ. ಅದಕ್ಕಾಗಿ ನಾನು ನನ್ನ ಪ್ರಪ್ರಥಮ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸನ್ಮಾನ್ಯ ಹ. ಕ. ರಾಜೇಗೌಡರಿಗೆ ಸಲ್ಲಿಸಲೇ ಬೇಕಾಗಿದೆ.

ನಮ್ಮ ಜನತಾ ಶಿಕ್ಷಣ ಸಂಸ್ಥೆಯ ಸಂಜೆಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಬಿ. ಜಯಪ್ರಕಾಶಗೌಡರು ಹ ಕ. ರಾಜೇಗೌಡರೊಂದಿಗೆ ಈ ಗ್ರಂಥದ ಜತೆ ಸಂಪಾದಕ

ರಾಗಿದ್ದಾರೆ. ಯುವಕರೂ ಉತ್ಸಾಹಶಾಲಿಯೂ ಆದ ಜಯಪ್ರಕಾಶಗೌಡರು ಈ ಅನುಭವದ ಹಿನ್ನೆಲೆಯಲ್ಲಿ ಮುಂದೆ ಇಂತಹ ಅಭಿನಂದನಗ್ರಂಥಗಳ ಸಿದ್ಧತೆಯ ಜವಾಬ್ದಾರಿ ನಿರ್ವಹಿಸುವ ಶಕ್ತಿ ಪಡೆಯಲೆಂದು ಹಾರೈಸುತ್ತೇನೆ.

ನನ್ನ ಆರೋಗ್ಯ ಅಷ್ಟಾಗಿ ಸದೃಢವಾಗಿರದಿದ್ದರೂ ನನ್ನಲ್ಲಿ ಹೆಚ್ಚಿನ ಅಭಿಮಾನ ವಿರುವ ಗಣ್ಯರು ನನಗೆ ಪ್ರಧಾನ ಸಂಪಾದಕನ ಪಟ್ಟವನ್ನು ಬೇಡ ಬೇಡವೆಂದು ಬೇಡಿ ಕೊಂಡರೂ ಕಟ್ಟಿದರು. ಆದರಿಂದ ನನಗೆ ಒಂದು ರೀತಿಯ ಪ್ರಯೋಜನವೇ ಆಯಿತು. ನಿಶ್ಶಕ್ತಿಯಿಂದ ಬಳಲುತ್ತಿದ್ದ ನಾನು ಈ ಗ್ರಂಥ ಹೊರಬೀಳುವ ಹೊತ್ತಿಗೆ ಚೇತರಿಸಿ ಕೊಳ್ಳುವಂತಾಯಿತು. ಇಂತಹ ಸಂತೋಷ ಉಕ್ಕಿಬರುವಂತೆ ಮಾಡಿದವರು ಅಭಿನಂದನ ಗ್ರಂಥಕ್ಕೆ ಲೇಖನಗಳನ್ನು ನೀಡಿದ ಮಹನೀಯರಲ್ಲದೆ, ನಿಧಿಸಂಗ್ರಹಣೆಗೆ ತಮ್ಮ ಕಾಣಿಕೆ ಇತ್ತ ಗಣ್ಯಮಹನೀಯರೂ ಕಾರಣರಾಗಿದ್ದಾರೆ. ತಮ್ಮ ಕರ್ತವ್ಯವನ್ನು ಮಾನ್ಯ ಮಿತ್ರರಾದ ಹ. ಕ. ರಾಜೇಗೌಡರು ಯಶಸ್ವಿಯಾಗಿ ನಿರ್ವಹಿಸಿ ಒಂದುರೀತಿಯಲ್ಲಿ ನನ್ನ ಆರೋಗ್ಯ ಚೇತರಿಕೆಗೆ ಕಾರಣವಾಗಿದ್ದಾರೆಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಈ ಎಲ್ಲ ಮಹನೀಯರಿಗೂ ನನ್ನ ಪ್ರಣಾಮಗಳನ್ನು ಸಲ್ಲಿಸುತ್ತ ಈ ಕಾರ್ಯಕ್ಕೆ ಚಾಲನೆ ನೀಡಿದ ಮಾನ್ಯ ಮಿತ್ರರಾದ ಶ್ರೀ ಜಿ. ಮಾದೇಗೌಡರಿಗೆ ಹೃತ್ಪೂರ್ವಕವಾಗಿ ವಂದಿಸುತ್ತ ನನ್ನ ಈ ಎರಡು ಮಾತುಗಳನ್ನು ಮುಕ್ತಾಯಗೊಳಿಸುತ್ತೇನೆ.

ಮಂಡ್ಯ
21–7–1989

**ಕೆ. ಎ. ಶಂಕರಗೌಡ**

# ಸಂಪಾದಕರ ಮಾತು

ನಾಗಮಂಗಲದಲ್ಲಿ ಶುಕ್ರವಾರ ಸಂತೆ ನಡೆಯುತ್ತದೆ. ಈ ಸಂತೆಗೆ ತಾಲ್ಲೂಕಿನ ಎಲ್ಲ ಮೂಲೆಗಳಿಂದಲೂ ಜನರು ಬರುತ್ತಾರೆ. ಹೀಗೆ ಬರುವವರು ಸಂತೆಯೊಂದಿಗೆ ಕಛೇರಿಯ ಕೆಲಸ, ತಾಲ್ಲೂಕು ಅಧಿಕಾರಿಗಳನ್ನು ಕಾಣುವ ಕೆಲಸಗಳನ್ನೂ ಹೊಂದಿಸಿ ಕೊಂಡು ಬಂದಿರುತ್ತಾರೆ. ಆ ದಿನ ತಾಲ್ಲೂಕಿನ ಯಾವ ಅಧಿಕಾರಿಯೂ ಸಾಮಾನ್ಯವಾಗಿ ಹೊರಗೆ ಹೋಗುವುದಿಲ್ಲ. ಸಮಸ್ಯೆಗಳೊಂದಿಗೆ ಅಂದು ಜನರು ಬರುತ್ತಾರೆಂದು ಅವರಿಗೆ ಗೊತ್ತು. ತಾಲ್ಲೂಕಿಗೆ ಸೀಮಿತವಾದ ರಾಜಕೀಯಸಮಾವೇಶ, ಭಾಷಣ ಇತ್ಯಾದಿಗಳು ನಡೆಯುವುದಿದ್ದರೂ ಅಂದೆ. ನಿರಾಯಾಸವಾಗಿ ಸಭೆಗಳಿಗೆ ಜನ ಸಿಗುತ್ತಾರೆ. ಒಟ್ಟಿನಲ್ಲಿ ತಾಲ್ಲೂಕಿನ ಎಲ್ಲ ಮೂಲೆಗೂ ವಿಷಯ ತಲುಪಬೇಕಾದರೂ ಅಂದೆ. ಅಂತಹ ಒಂದು ಶುಕ್ರವಾರ ನಾಗಮಂಗಲದಲ್ಲಿ ಸಂತೆಯದಿನ ನಡೆದ ಚುನಾವಣಾ ಭಾಷಣದಲ್ಲಿ ನಾನು ಮೊಟ್ಟಮೊದಲಿಗೆ ಜವರಪ್ಪಗೌಡರನ್ನು ಕಿವಿಯಿಂದ ಕೇಳಿದೆ ಕಣ್ಣಿಂದ ದೂರದಲ್ಲಿ ನೋಡಿದೆ.

ಆಗ ನಾನಿನ್ನೂ ವಿದ್ಯಾರ್ಥಿ. ಯಾವುದೋ ಕಾರಣದಿಂದ ತಂದೆಯವರೊಂದಿಗೆ ನಾನು ನಾಗಮಂಗಲಕ್ಕೆ ಹೋಗಿದ್ದೆ. ಅದು ಚುನಾವಣೆಯ ಕಾಲ. ಕಾಂಗ್ರೆಸ್‌ನಿಂದ ಶ್ರೀ ಕೆ. ಸಿಂಗಾರಿಗೌಡರು, ಸ್ವತಂತ್ರವಾಗಿ ಶ್ರೀ ಟಿ. ಎಸ್. ಮಾದಪ್ಪಗೌಡರು ನಾಗ ಮಂಗಲ ಕ್ಷೇತ್ರದ ಅಭ್ಯರ್ಥಿಗಳು. ನನ್ನ ತಂದೆ ಸಿಂಗಾರಿಗೌಡರ ಪರ, ಅದು ನನಗೆ ಗೊತ್ತಿತ್ತು. ಆ ದಿನ ಎರಡೂ ಪಕ್ಷಗಳ ಚುನಾವಣಾ ಪ್ರಚಾರಭಾಷಣಗಳಾದವು. ಮೊದಲು ಮಾದಪ್ಪಗೌಡರ ಪರವಾದದ್ದು ನಡೆಯಿತು. ಆಗ ಮಾತನಾಡಿದವರೊಬ್ಬರು "ಈ ಚುನಾವಣೆಗಳ ದೆಸೆಯಿಂದಾಗಿ ಶ್ರೀ ಮಾದಪ್ಪಗೌಡರು ತಮ್ಮ ಹಿರಿಯರು ಗಳಿಸಿದ್ದ ಆಸ್ತಿ ಪಾಸ್ತಿಗಳನ್ನೆಲ್ಲ ಕಳೆದುಕೊಂಡರು" ಎಂದು ಹೇಳಿದರು, ಜನಾನುಕಂಪೆ ಗಳಿಸುವ ಉದ್ದೇಶದಿಂದ. ಜನರೂ ತಲೆದೂಗಿದರು ಅವರ ತ್ಯಾಗದ ಕಥೆ ಕೇಳಿ. ಸ್ವಲ್ಪ ಸಮಯದ ನಂತರ ಸಿಂಗಾರಿಗೌಡರ ಪರ ಪ್ರಚಾರಭಾಷಣಗಳು ಆರಂಭವಾದವು. ಮೊದಲು ಮಾತನಾಡಿದ ಜವರಪ್ಪಗೌಡರು "ಮಹಾಜನಗಳೇ ಸ್ವಲ್ಪ ಹೊತ್ತಿಗೆ ಹಿಂದೆ ಮಾತ ನಾಡಿದವರು ಮಾದಪ್ಪಗೌಡರು ತಮ್ಮ ಹಿರಿಯರ ಆಸ್ತಿಯನ್ನು ಕಳೆದುಕೊಂಡರೆಂದು ಹೇಳಿದರು. ತಮ್ಮ ಆಸ್ತಿಪಾಸ್ತಿಗಳನ್ನೇ ಉಳಿಸಿಕೊಳ್ಳಲಾರದ ಇವರು ಗೆದ್ದು ಬಂದರೆ ದೇಶದ ಆಸ್ತಿಪಾಸ್ತಿಗಳನ್ನು ಉಳಿಸಿಯಾರೆ ?" ಎಂದು ತಮ್ಮ ಭಾಷಣ ಆರಂಭಿಸಿ ಅದು ಮುಗಿಯುವ ಹೊತ್ತಿಗೆ ತಮ್ಮ ಕಥೆ ಉಪಕಥೆಗಳಿಂದ ಹಿಂದಿನ ಭಾಷಣಗಳು ಜನಮನ ದಿಂದ ಅಳಿಸಿ ಹೋಗುವಷ್ಟು ಪ್ರಭಾವ ಬೀರಿದರು.

ಮತ್ತೊಂದು ಇಂಥದೇ ಚುನಾವಣಾ ಪ್ರಚಾರಭಾಷಣ ಜವರಪ್ಪಗೌಡರು ಮಾಡಿದ್ದು ನನ್ನಲ್ಲಿ ಇಂದಿಗೂ ಹಸಿರಾಗಿ ಉಳಿದಿದೆ. ಈ ಹೊತ್ತಿಗಾಗಲೇ ಅವರಿಗೂ ನನಗೂ ಹತ್ತಿರದ ಪರಿಚಯವಿತ್ತು. ಅದು ಕಾಂಗ್ರೆಸ್ ಇಬ್ಭಾಗವಾಗಿ ಇಂದಿರಾಗಾಂಧಿಯವರು ಜನಮನವನ್ನು ಸೂರೆಹೊಡೆದಿದ್ದ ಕಾಲ. ಆಗ ಶ್ರೀ ಎಚ್. ಡಿ. ಚೌಡಯ್ಯನವರು ಸಂಸ್ಥಾಕಾಂಗ್ರೆಸ್ ಅಭ್ಯರ್ಥಿಯಾಗಿ ಲೋಕಸಭೆಗೆ ಮಂಡ್ಯಕ್ಷೇತ್ರದಿಂದ ಸ್ಪರ್ಧಿಸಿದ್ದರು. ಆ ದಿನ ಅವರು "ಮಹಾಜನಗಳೇ ಈ ಇಂದಿರಾ ಕಾಂಗ್ರೆಸ್ ನಿರ್ನಾಮವಾದಂತೆಯೇ ಅವರ ಚಿಹ್ನೆ ಹಸುಕರು ನೋಡಿದ್ದೀರಾ ? ನಮ್ಮ ಸಂಪ್ರದಾಯದಲ್ಲಿ ಹಸುವಿಗೆ ಎಡಗಡೆಯಿಂದ ಕರು ಬಿಡುವುದುಂಟೆ ? ಈ ಇಂದಿರಾ ಕಾಂಗ್ರೆಸ್ಸಿನವರು ಬಿಟ್ಟಿದ್ದಾರೆ ನೋಡಿ" ಎಂದರು. ಎಲ್ಲರೂ ಕುತೂಹಲದಿಂದ ಆ ಚಿಹ್ನೆಯತ್ತ ನೋಡಿದರು. ನಿಜ ! ಗ್ರಾಮಾಂತರ ಜನಸಾಮಾನ್ಯರ ಮೇಲೆ ಜವರಪ್ಪಗೌಡರು ಎಂತಹ ಮೋಡಿಯ ಅಸ್ತ್ರ ಬಿಟ್ಟಿದ್ದರು ! ಆ ಚುನಾವಣೆಯಲ್ಲಿ ಮಂಡ್ಯಜಿಲ್ಲಾ ಲೋಕಸಭಾ ಕ್ಷೇತ್ರದಲ್ಲಿ ಇಂದಿರಾಕಾಂಗ್ರೆಸ್ ನಿರ್ನಾಮವಾಗದಿದ್ದರೂ ನಾಗಮಂಗಲದ ಉಪಚುನಾವಣೆಯಲ್ಲಿ ನಿರ್ನಾಮವೇ ಆಯಿತು.

ನನ್ನ ವಿದ್ಯಾರ್ಥಿದೆಸೆಯಿಂದಲೂ ಆಧುನಿಕ ಮಂಡ್ಯದ ರೂವಾರಿ ಶ್ರೀ ಕೆ. ವಿ. ಶಂಕರಗೌಡರ ಪರಿಚಯ ನನಗಿತ್ತು. ನಾನವರನ್ನು ಆಗಾಗ ಭೇಟಿಯಾಗುತ್ತಿದ್ದುದಷ್ಟೇ ಅಲ್ಲ ಪತ್ರವ್ಯವಹಾರವೂ ಇತ್ತು. ಹೀಗಾಗಿ ಮಂಡ್ಯದ ಆ ಸಮಕಾಲೀನರೆಲ್ಲರ ಪರಿಚಯವೂ ಇತ್ತು. ಆ ಕಾಲದ ಮಂಡ್ಯದ ಆ ಜನರನ್ನು ಬರಿಯ ರಾಜಕಾರಣಿಗಳೆಂದು ಕರೆದರೆ ಅಪಚಾರವಾಗುತ್ತದೆಂದೇ ನನ್ನ ಭಾವನೆ. ಅವರು ರಾಜಕೀಯವೂ ಸೇರಿದಂತೆ ಮಂಡ್ಯ ಜಿಲ್ಲೆಯ ಎಲ್ಲವೂ ಆಗಿದ್ದರು. ರಾಜ್ಯದ ರಾಜಕೀಯ ಅವರನ್ನು ಪ್ರಧಾನವಾಗಿ ಗಮನಿಸದೆ ಮುಂದಡಿ ಇಡುವಂತಿರಲಿಲ್ಲ. ಅಲ್ಲಿ ಸಂಕುಚಿತತೆ ಇರಲಿಲ್ಲ, ಮೇಲು ಕೀಳಿರಲಿಲ್ಲ. ಸ್ವಾರ್ಥ ಲವಲೇಶವೂ ಇರಲಿಲ್ಲ. ಆ ಕಾಲದಿಂದ ನನ್ನ ಜವರಪ್ಪಗೌಡರ ಪರಿಚಯ ನಿಕಟವಾಯಿತು. ಗಾಢವಾಯಿತು. ನಾನೂ ಅವರ ಮನೆಯವರಲ್ಲೊಬ್ಬನಂತಾದೆ. ಅದು ಇಂದಿಗೂ ಹಾಗೆಯೇ ಇದೆ.

ಕಳೆದ ಮೂರುದಶಕಗಳ ಅವರೊಂದಿಗಿನ ನನ್ನ ಸಂಪರ್ಕದಲ್ಲಿ ಗೌಡರ ಅನೇಕ ಮುಖದ ಸಾಹಸಗಳನ್ನು ನಾನು ಕಂಡಿದ್ದೇನೆ. ನನಗೆ ಹಿಡಿಸಿದ ಅವರ ಗುಣಗಳೆಂದರೆ ಸ್ವಾಭಿಮಾನ ಮತ್ತು ಸಂತೃಪ್ತಿ, ಅವರು ಯಾವಾಗಲೂ ತಮ್ಮ ಸ್ವಾಭಿಮಾನವನ್ನು ಬಿಟ್ಟು ಕೊಡುವುದಿಲ್ಲ. ಬೇಕಾದಷ್ಟು ಇದ್ದರೂ ತಮಗೆ ಅದಿಲ್ಲ ಇದಿಲ್ಲ ಎನ್ನುವವರನ್ನು ನಿತ್ಯ ನೋಡುತ್ತೇವೆ, ಆದರೆ ಜವರಪ್ಪಗೌಡರು ತಮಗಿರುವುದರಲ್ಲಿಯೇ ಸಂತೃಪ್ತರಾಗಿ ಸಂತೋಷದಿಂದಿರುತ್ತಾರೆ. ಜವರಪ್ಪಗೌಡರನ್ನು ಇಂತಹ ಕೆಲವರು ಟೀಕಿಸುವುದೂ ಉಂಟು. ಇದಕ್ಕೆ ಕಾರಣ ತಮಗಿಲ್ಲದ ಶಕ್ತಿ ಇವರಿಗಿದೆಯಲ್ಲ ಎಂಬುದು. ಮನುಷ್ಯ ಗುಣಾವಗುಣಗಳ ಸಮ್ಮಿಶ್ರ ಎಂದು ತಿಳಿದವರು ಹೇಳಿದ್ದಾರೆ. ಯಾವನು

ತನ್ನ ಅವಗುಣಗಳನ್ನು ಮೆಟ್ಟಿ ನಿಲ್ಲುತ್ತಾನೆಯೋ ಅವನೇ ಒಳ್ಳೆಯವನೆಂಬುದು ನನ್ನ ಭಾವನೆ. ಶ್ರೀ ಜವರಪ್ಪಗೌಡರು ಈ ಗುಂಪಿಗೆ ಸೇರಿದವರು.

ಜವರಪ್ಪಗೌಡರ ಬಗ್ಗೆ ಕೆಲವು ದೂರುಗಳಿವೆ. ಅವುಗಳಲ್ಲಿ ಮೂರನ್ನು ಅನೇಕರು ಪ್ರಸ್ತಾಪಿಸುವುದನ್ನು ನಾನು ಕಂಡಿದ್ದೇನೆ, ಕೇಳಿದ್ದೇನೆ. ನಾಗಮಂಗಲ ತಾಲ್ಲೂಕನ್ನು ಜವರಪ್ಪಗೌಡರು ಅತಿಯಾಗಿ ಹೊಗಳುತ್ತಾರೆಂಬುದೊಂದು ಇವರ ಬಗೆಗಿನ ದೂರು. ಸ್ವಾಮಿವಿವೇಕಾನಂದರು ಅಮೆರಿಕೆಯಲ್ಲಿದ್ದಾಗ ಭಾರತದ ವಿವಿಧ ಪ್ರಾಂತಗಳಿಂದ ಹೋಗಿ ಅಲ್ಲಿ ನೆಲಸಿದ್ದ ವಿದ್ಯಾರ್ಥಿಗಳು ಒಮ್ಮೆ ಅವರನ್ನು ಕಾಣಲು ಹೋದರಂತೆ. ಆಗ ಸ್ವಾಮಿ ವಿವೇಕಾನಂದರು "ನನ್ನ ಬಂಗಾಳಿ ಮಿತ್ರ ಮೊದಲು ಮಾತನಾಡಲಿ" ಎಂದರಂತೆ. ಕನ್ನಡದ ಆದಿಕವಿ ಪಂಪನನ್ನು ಅರಿಕೇಸರಿ ತನ್ನ ಆಸ್ಥಾನದಲ್ಲಿರಿಸಿಕೊಂಡು ಅತುಲೈಶ್ವರ್ಯದಲ್ಲಿ ಮುಳುಗಿಸಿದ್ದ. ಆದರೂ ಪಂಪ "ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂದು ತನ್ನ ತಾಯಿನೆಲವನ್ನು ನೆನೆದಿದ್ದಾನೆ. ಜಗತ್ತಿಗೆ ವಿಶ್ವಮಾನವ ಸಂದೇಶ ನೀಡಿದ ಕವಿ ಕುವೆಂಪು "ಹೋಗುವೆನು ನನ್ನ ಒಲುಮೆಯ ಮಲೆನಾಡಿಗೆ" ಎನ್ನುತ್ತಾರೆ. ತನ್ನ ಮನೆಯನ್ನು ಪ್ರೀತಿಸದವ ಜಗತ್ತನ್ನು ಪ್ರೀತಿಸಲಾರ ಕಾಲುವೆ ಹಾರಲಾರದವ ಸಮುದ್ರ ಹಾರಲಾರ. ಜವರಪ್ಪಗೌಡರ ನಾಗಮಂಗಲ ಪ್ರೇಮ ಅಸಮರ್ಥನೀಯವಾದುದೇನಲ್ಲ.

ಜವರಪ್ಪಗೌಡರು ಅವರಿವರನ್ನು ಟೀಕಿಸುತ್ತಾರೆ, ಅವರ ಆಪ್ತ ಶಂಕರಗೌಡರನ್ನೇ ಟೀಕಿಸುತ್ತಾರೆ ಎಂಬುದು ಅವರ ಮೇಲಿನ ಮತ್ತೊಂದು ದೂರು. ನಿಜ, ಕೆಲವರು ಎದುರಿಗೆ ಹೊಗಳಿ ಹಿಂದೆ ಟೀಕಿಸುತ್ತಾರೆ. ಜವರಪ್ಪಗೌಡರು ತಮ್ಮ ಹತ್ತಿರದವರಲ್ಲಿ ತಪ್ಪುಕಂಡಾಗ ಟೀಕಿಸುವುದುಂಟು. ಜವರಪ್ಪಗೌಡರು ಶಂಕರಗೌಡರ ಜನತಾ ಶಿಕ್ಷಣ ಸಂಸ್ಥೆಯ ಆಡಳಿತದ ಬಗ್ಗೆ ಟೀಕಿಸಿ ಅದೇನು ಶಂಕರಗೌಡರ ಸ್ವಂತ ಆಸ್ತಿಯೇ ಎಂದಾಗ" ನಿಜ ಅವರ ಸ್ವಂತ ಆಸ್ತಿಯಲ್ಲ. ನಾನು ನೀವು ಇರದಿದ್ದರೂ ಅದು ಈಗಿನಂತೆಯೇ ಇರುತ್ತಿತ್ತು. ಆದರೆ ಶಂಕರಗೌಡರು ಇಲ್ಲದಿದ್ದರೆ ಅದು ಹುಟ್ಟುತ್ತಲೇ ಇರಲಿಲ್ಲ" ಎಂದು ಉತ್ತರಿಸಿ ನನಗೆ ಆಶ್ಚರ್ಯವನ್ನುಂಟುಮಾಡಿದ್ದಾರೆ. ಇದು ಶಂಕರಗೌಡರ ಬಗೆಗಿನ ಗೌಡರ ನಿಲುವು. ಶಂಕರಗೌಡರೇ ಈ ಗ್ರಂಥದಲ್ಲಿ ಜವರಪ್ಪಗೌಡರ ಬಗ್ಗೆ ಬರೆಯುತ್ತ "ಯಾವ ಜನ ಜವರಪ್ಪಗೌಡರಿಂದ ಶಂಕರಗೌಡರು ಕೆಟ್ಟರೆಂದು ಹೇಳುತ್ತಿದ್ದರೋ ಅದೇ ಜನ ಇಂದು ಶಂಕರಗೌಡರು ಜವರಪ್ಪಗೌಡರನ್ನು ಮರೆತು ನಡೆದಿದ್ದಾರೆ ಎಂದು ಹೇಳುತ್ತಿರುವುದು ವಿಪರ್ಯಾಸವೇ ಸರಿ" ಎಂದಿದ್ದಾರೆ. ಮನುಷ್ಯ ಸ್ವಭಾವವೇ ಹೀಗೆ, ತಮ್ಮ ಪರವಾಗಿಲ್ಲದಿರುವುದನ್ನು ಟೀಕಿಸುವುದು.

ಕುವೆಂಪು-ಚುಂಚನಗಿರಿ ಈ ಎರಡನ್ನೂ ಒಪ್ಪಿ ಜವರಪ್ಪಗೌಡರು ದ್ವಂದ್ವ ವ್ಯಕ್ತಿತ್ವ ಹೊಂದಿದ್ದಾರೆ ಎಂಬುದು ಕೆಲವರ ವಾದ, ಕುವೆಂಪು ಮಠ ಮಾನ್ಯಗಳ ಮೂಢನಂಬಿಕೆ, ಊಳಿಗಪದ್ಧತಿಗಳನ್ನು ತಿರಸ್ಕರಿಸುತ್ತಾರೆ. ಕಿರೀಟ, ಅಡ್ಡಪಲ್ಲಕ್ಕಿ

ಪಾದಪೂಜೆಗಳನ್ನು ದೂರವಿಡಲು ಹೇಳುತ್ತಾರೆ. ಅಧ್ಯಾತ್ಮಶಿಕ್ಷಣ. ಸಮಾಜಸೇವೆಗಳನ್ನು ಮಾಡುವ ಮಠಗಳನ್ನು ಅವರು ಗೌರವಿಸುತ್ತಾರೆ, ಸ್ವತಃ ಕುವೆಂಪು ಅವರೇ ಶ್ರೀ ರಾಮಕೃಷ್ಣ ಮಠದಲ್ಲಿದ್ದವರು. ಈ ಹೊತ್ತಿಗೂ ಅವುಗಳ ಬಗೆಗೆ ಗೌರವ ಹೊಂದಿರುವವರು, ಚುಂಚನಗಿರಿ ಮಠ ಮತ್ತು ಮಠಾಧೀಶರು ಕವಿಗಳ ಪಂಚಮಂತ್ರ, ಸಪ್ತ ಸೂತ್ರ ಮತ್ತು ವಿಶ್ವಮಾನವ ತತ್ತ್ವಗಳನ್ನು ಒಪ್ಪಿ ಎತ್ತಿಹಿಡಿದು ಅವುಗಳನ್ನು ಪ್ರಚಾರ ಮಾಡುತ್ತಿದ್ದಾರೆ. ನಮ್ಮಲ್ಲಿ ಅನೇಕರು ವಿಷಯ ಏನೆಂದು ತಿಳಿಯುವ ಗೋಜಿಗೇ ಹೋಗದೆ ತಾವು ಉಗ್ರ ಪ್ರಗತಿಪರರೆಂದು ತೋರಿಸಿಕೊಳ್ಳುವ ಹುಂಬತನ ಮಾಡುತ್ತಾರೆ. ಆದುದರಿಂದ ಕುವೆಂಪು ಆದಿಚುಂಚನಗಿರಿಯ ಸಂಬಂಧ ದ್ವಂದ್ವ ಎನ್ನುವುದು ಮೂರ್ಖತನವಾಗುತ್ತದೆ.

ಮಂಡ್ಯದ ಒಬ್ಬರು ನನ್ನ ಜೊತೆಸಂಪಾದಕರಾದ ಜಯಪ್ರಕಾಶಗೌಡರನ್ನು ಕುರಿತು "ರಾಜೇಗೌಡರಿಗೇನೋ ಸರಿ. ನೀವು ಜವರಪ್ಪಗೌಡರಂಥವರ ಅಭಿನಂದನ ಗ್ರಂಥಕ್ಕೆ ಸಂಪಾದಕರಾಗುವುದೆ ?" ಎಂದು ಕೇಳಿದರಂತೆ. ಈ ಮಾತಿಗೆ ನಾನು ಸೂಕ್ತ ಉತ್ತರ ಕೊಡಬಲ್ಲೆ, ಆದರೆ ಈ ದರ್ಜೆಯ ಜನರನ್ನು ಟೀಕೆಯ ದೃಷ್ಟಿಯಿಂದ ಕೂಡ ಈ ಗ್ರಂಥದಲ್ಲಿ ದಾಖಲಿಸುವುದು ಅಪಚಾರವಾಗುತ್ತದೆಯಷ್ಟೇ ಅಲ್ಲ ಗ್ರಂಥದ ಗೌರವವನ್ನು ಕಡಿಮೆ ಮಾಡುತ್ತದೆ. ಅಧಿಕಾರ, ಅಂತಸ್ತು, ಹಣವಿರುವವರ ಬಾಲ ಹಿಡಿದು ಬದುಕುವವರಿಗೆ ಶ್ರೀ ಜವರಪ್ಪಗೌಡರು ಮತ್ತು ಅವರಂತಹವರು ಮಹತ್ತಿನ ವ್ಯಕ್ತಿಗಳಾಗಿ ಕಾಣಲಾರರು. ಜವರಪ್ಪಗೌಡರಲ್ಲಿ ಲೋಪದೋಷಗಳಿಲ್ಲವೆಂದು ನಾನೇನೂ ನಂಬಿದವನಲ್ಲ. ನಮ್ಮಂತೆಯೇ ಮನುಷ್ಯರಾಗಿಯೂ ಶ್ರೀ ಜವರಪ್ಪಗೌಡರ ಸಾಧನೆ ದೊಡ್ಡದು, ಸದ್ದುಗದ್ದಲವಿಲ್ಲದ್ದು, ಅಧಿಕಾರ ದೂರವಾದದ್ದು. ಈ ಗ್ರಂಥದಲ್ಲಿಯೇ ಅವರನ್ನು ಕುರಿತು ಅರವತ್ತುಜನದವರೆಗೆ ಬರೆದಿದ್ದಾರೆ. ಅವರೆಲ್ಲ ದಾಕ್ಷಿಣ್ಯಕ್ಕಾಗಿ ಹೊಗಳಿ ಬರೆಯುವವರಲ್ಲ. ಶ್ರೀ ಜವರಪ್ಪಗೌಡ ಅಭಿನಂದನಗ್ರಂಥಕ್ಕೆ ಸಂಪಾದಕನಾಗುವುದು ನನಗೆ ಹೆಮ್ಮೆಯ ವಿಷಯವೆ. ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀ ಜಿ. ಮಾದೇಗೌಡರು ಜವರಪ್ಪಗೌಡರನ್ನು "ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪುರೋಹಿತ" ಎಂದು ಕರೆದು ಅವರಿಗೊಂದು ಅಭಿನಂದನ ಗ್ರಂಥ ಮಾಡೋಣ ಎಂದರು. ಹಿರಿಯರಾದ ಶಂಕರಗೌಡರು ಬರೆದರೆ ಜವರಪ್ಪಗೌಡರ ಜೀವನ ಚರಿತ್ರೆಯೇ ಆಗುತ್ತದೆ ಎಂದು ಹೇಳಿದ್ದಾರೆ. ಕಡೆಯಪಕ್ಷ ನಿಮ್ಮ ಆತ್ಮಕಥೆಯನ್ನಾದರೂ ಬರೆಯಿರಿ ಎಂದು ನಾನು ಜವರಪ್ಪಗೌಡರಿಗೆ ಹೇಳುತ್ತಲೇ ಇದ್ದೆ. ಈ ಎಲ್ಲ ಆಶಯಗಳೂ ಈ ಗ್ರಂಥದಲ್ಲಿ ನೆರವೇರಿದೆ ಎಂಬುದು ನನಗೆ ಹೆಮ್ಮೆಯ ಸಂಗತಿ.

ಈ ಸಂಭಾವನಾಗ್ರಂಥದಿಂದ ಜವರಪ್ಪಗೌಡರಿಗಾಗಲಿ, ನನಗಾಗಲಿ, ಸ್ವಾಗತ ಸಮಿತಿಯವರಿಗಾಗಲಿ ಯಾವ ಪ್ರಯೋಜನವೂ ಇಲ್ಲ. ಇದರಿಂದ ಜವರಪ್ಪಗೌಡರಿಗೆ ಅಧಿಕಾರ ಅಂತಸ್ತು ಬರುವುದಿಲ್ಲ. ನನಗೆ ಇದೇನೂ ಪಠ್ಯಪುಸ್ತಕವಾಗಿ ಹಣ ತರು

ವುದಿಲ್ಲ. ಆದರೆ ಇಂತಹ ಗ್ರಂಥಗಳಿಂದ ಒಂದು ಪ್ರದೇಶದ, ಒಂದು ಜನಾಂಗದ ಇತಿಹಾಸ ಬೆಳೆಯುತ್ತ ಹೋಗುತ್ತದೆ ಎಂಬುದನ್ನು ಯಾರೂ ಮರೆಯಬಾರದು. ಇದು ನಮ್ಮ ಇತಿಹಾಸ, ಸಂಸ್ಕೃತಿಗಳು ಬೆಳೆಯುವ ಬಗೆ. ಈ ದೃಷ್ಟಿ ಇಲ್ಲದವರಿಗೆ ಇವೆಲ್ಲ ಮಹತ್ವದ ಸಂಗತಿಗಳಾಗುವುದಿಲ್ಲ. ನಮ್ಮಲ್ಲಿ ಕೋಟಿ ಕೋಟಿ ಹಣವಿದ್ದವರಿದ್ದರು. ಅಪಾರವಾದ ಅಧಿಕಾರವಿದ್ದವರಿದ್ದರು. ಅವರಾರೂ ಇಂದು ಜನತೆಯ ನೆನಪಿನಲ್ಲಿ ಉಳಿದಿಲ್ಲ. ಆದರೆ ಸಾಮಾನ್ಯರಾಗಿಯೂ ಇತರ ಮಾನವರ ನೋವಿಗೆ ಸ್ಪಂದಿಸಿದವರನ್ನು ಜನ ಇಂದಿಗೂ ಸ್ಮರಿಸುತ್ತಾರೆ. ನಾನು ಯಾವುದೇ ಇಂತಹ ಗ್ರಂಥದ ಸಂಪಾದಕನಾಗೆಂದಾಗಲೆಲ್ಲ ನನ್ನ ಪ್ರದೇಶದ, ಜನಾಂಗದ ಇತಿಹಾಸ, ಸಂಸ್ಕೃತಿಗಳು ಬೆಳೆಯುತ್ತವೆಂಬುದನ್ನು ಯೋಚಿಸುತ್ತೇನೆ. ಆದುದರಿಂದಲೇ ಇಂತಹ ಸಮಯಗಳಲ್ಲಿ ನಾನು ಅಧಿಕಾರ ಅಂತಸ್ತುಗಳನ್ನು ಯೋಚಿಸುವುದಿಲ್ಲ. ನನ್ನನ್ನು ಅಥವಾ ಇಂತಹ ಕೆಲಸಗಳನ್ನು ಟೀಕಿಸಿ ತಮ್ಮ ಬಾಯಿತೀಟೆ ತೀರಿಸಿಕೊಳ್ಳುವವರು ಇಂಥದೇ ಒಂದು ಗ್ರಂಥವನ್ನು ಅಥವಾ ಇದಕ್ಕಿಂತ ಉತ್ತಮವಾದುದನ್ನು ಮಾಡಿ ತೋರಿಸಿದರೆ ನಾನು ಅಂತಹವರನ್ನು ಅಭಿನಂದಿಸುತ್ತೇನೆ. ಎಟುಕದ ದ್ರಾಕ್ಷಿ ಹುಳಿ ಎನ್ನುವವರ ಬಗ್ಗೆ ನನ್ನದು ದಿವ್ಯತಿರಸ್ಕಾರ.

ಈ ಅಭಿನಂದನ ಗ್ರಂಥದಲ್ಲಿ ಮೂರು ಭಾಗಗಳಿವೆ. ಭಾಗ—ಒಂದು ಶ್ರೀ ಜವರಪ್ಪಗೌಡರೇ ಬರೆದ ಅವರ ಆತ್ಮಕಥನ, ಬದುಕಿನ ಪುಟಗಳು. ಈ ಆತ್ಮಕಥನದ ಹರವು ವೈವಿಧ್ಯತೆ ನನಗೆ ಆಶ್ಚರ್ಯವನ್ನುಂಟುಮಾಡಿದೆ. ಕರ್ನಾಟಕದ, ವಿಶೇಷವಾಗಿ ಮಂಡ್ಯಜಿಲ್ಲೆಯ ಹೋರಾಟಗಳನ್ನು ಇದು ಸಮರ್ಥವಾಗಿ ದಾಖಲಿಸುತ್ತದೆ. ಭಾಗ–ಎರಡು ಜವರಪ್ಪಗೌಡರ ಆತ್ಮೀಯ ಹಿರಿಕಿರಿಯರು ಕಂಡು ಚಿತ್ರಿಸಿದ ಗೌಡರ ವ್ಯಕ್ತಿ ಚಿತ್ರಗಳು–ನಾನು ಕಂಡಂತೆ ಜವರಪ್ಪಗೌಡರು. ಒಬ್ಬ ವ್ಯಕ್ತಿ ಎಷ್ಟೊಂದು ಜನರ ಪ್ರೀತಿ ವಿಶ್ವಾಸಗಳಿಸಬಲ್ಲನೆಂಬುದರ ದ್ಯೋತಕ. ಭಾಗ––ಮೂರು ಜವರಪ್ಪಗೌಡರಿಗೆ ಶ್ರೀ ಕುವೆಂಪು ಶ್ರೀ ರಾಮಾಯಣದರ್ಶನಂ ಅಭಿನ್ನ. ಅವರ ಜೀವನಕಥನ ಓದಿದ ಯಾರಿಗಾದರೂ ಶ್ರೀ ಕುವೆಂಪು ಸಾಹಿತ್ಯಪ್ರಭಾವ ಅವರ ಜೀವನದ ಮೇಲೆಷ್ಟಾಗಿದೆ ಎಂಬುದು ತಿಳಿಯುತ್ತದೆ. ಅದರ ಫಲ ಕವಿವಿಭೂತಿಗೆ ನಮೋ–ಕೃತಿವಿಭೂತಿಗೆ ನಮೋ ಭಾಗದಲ್ಲಿರುವ ಶ್ರೀ ರಾಮಾಯಣದರ್ಶನಂ ತೌಲನಿಕ ಅಧ್ಯಯನ.

ಅಭಿನಂದನ ಗ್ರಂಥಕ್ಕೆ ಏನು ಹೆಸರಿಡಬೇಕೆಂದು ನಾನು ಯೋಚಿಸುವಾಗ ಪಾಲಗ್ರಹಾರದಂತಹ ಒಂದು ಹಳ್ಳಿಯಿಂದ ದೆಹಲಿಯವರೆಗೆ ಜವರಪ್ಪಗೌಡರು ನಡೆಸಿದ ಸಾಹಸಯಾತ್ರೆಯ ಚಿತ್ರ ಕಣ್ಣಮುಂದಿತ್ತು. ಆದುದರಿಂದ ಈ ಗ್ರಂಥಕ್ಕೆ ಸಾಹಸ ಯಾತ್ರಿ' ಎಂದು ಹೆಸರಿಟ್ಟಿದ್ದೇನೆ. ಇದು ಶ್ರೀ ಜವರಪ್ಪಗೌಡರ ಬದುಕಿಗೂ ಅನ್ವರ್ಥ ಎಂಬುದು ನನ್ನ ಅನಿಸಿಕೆ.

ಮೊದಲನೆಯ ಸಭೆಯಲ್ಲಿ ಇನ್ನೂರೈವತ್ತು ಪುಟಗಳ ಒಂದು ಗ್ರಂಥ ತರುವ

ದೆಂದು ನಿಗದಿಯಾಗಿತ್ತು, ಈಗ ಇದು ಎಂಟುನೂರು ಪುಟಗಳನ್ನು ಸಮೀಪಿಸಿದೆ. ಈ ಬೆಳವಣಿಗೆಗೆ ನೆರವಾಗಿ ನಿಂತವರು ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀ ಜಿ. ಮಾದೇಗೌಡರು. ನಾನು ಮಾದೇಗೌಡರನ್ನು ಬಲ್ಲೆನಾದರೂ ಹತ್ತಿರದ ಪರಿಚಯ ತೀರ ಇತ್ತೀಚಿನದು. ಈಗಿನ ತಳುಕಿನದಿನಗಳಲ್ಲಿ ಇದೊಂದು ಅಪೂರ್ವವಾದ ಗುಣ. ಅನೇಕರು ಅವರೊಂದಿಗೆ ವ್ಯವಹರಿಸುವುದು ಕಠಿಣ ಎಂಬ ಚಿತ್ರವನ್ನೇ ನನಗೆ ಕೊಟ್ಟಿದ್ದರು. ನಿಜ ಗೌಡರು ಖಂಡಿತವಾದಿ, ಕಥೆ, ಉಪಕಥೆ, ಮರಿಕಥೆ ಹೇಳುವ ಕೆಲಸಗಳ್ಳರ ಬಗ್ಗೆ. ನಾನು ಈ ಗ್ರಂಥದ ಕೆಲಸಕ್ಕಾಗಿ ಅವರನ್ನು ಅನೇಕ ಬಾರಿ ಕಾಣಬೇಕಾದಾಗಲೆಲ್ಲ ಅವರು ತಮ್ಮಲ್ಲಿಗೆ ಬರುವ ಜನರೊಂದಿಗೆ ಅಕೃತ್ರಿಮವಾಗಿ ನಡೆದುಕೊಳ್ಳುವುದನ್ನು ಕಂಡಿದ್ದೇನೆ. ಯಾವುದೇ ಹಮ್ಮುಬಿಮ್ಮುಗಳಿಲ್ಲ. ಕಾಳಮುದ್ದನದೊಡ್ಡಿಯ ಭಾರತೀ ಶಿಕ್ಷಣ ಸಂಸ್ಥೆ ಅವರ ಕಾರ್ಯದಕ್ಷತೆಗೊಂದು ನಿದರ್ಶನ ಎಂದು ಹಿರಿಯರು ಹೇಳಿದ್ದನ್ನು ಕೇಳಿದ್ದೇನೆ. ಜವರಪ್ಪಗೌಡರ ಬಗ್ಗೆ ಮಾದೇಗೌಡರಿಗೆ ಅಭಿಮಾನ. ಈ ಗ್ರಂಥ ಇಂತಹ ಅಪರೂಪದ ವ್ಯಕ್ತಿಯನ್ನು ಹತ್ತಿರದಿಂದ ಕಾಣುವ, ಪರಿಚಯ ಮಾಡಿಕೊಳ್ಳುವ ಅವಕಾಶ ಒದಗಿಸಿತು.

ಹಿರಿಯರೂ ಮಾನ್ಯರೂ ಆದ ಶ್ರೀ ಕೆ.ವಿ. ಶಂಕರಗೌಡರು ಈ ಗ್ರಂಥದ ಪ್ರಧಾನ ಸಂಪಾದಕರು. ಅವರಿಂದ ನನಗೆ ಬಹಳ ಉಪಕಾರವಾಗಿದೆ. ಹೀಗೆಂದಕೂಡಲೇ ಏನೋ ಹಣದ ರೂಪದಲ್ಲಿರಬೇಕೆಂದು ಊಹಿಸುವ, ಕಥೆಕಟ್ಟುವ ಮಹನೀಯರೇ ಜಾಸ್ತಿ. ಗ್ರಾಮಾಂತರ ಜನರ ಬಗ್ಗೆ ಅವರ ಸಮಸ್ಯೆಗಳ ಬಗ್ಗೆ ಶ್ರೀ ಶಂಕರಗೌಡರಿಗಿರುವ ಕಳಕಳಿಯನ್ನು ನಾವು ಬೇರೆಯವರಲ್ಲಿ ಕಂಡಿರುವುದು ಅಪರೂಪ. ಕೇವಲ ಒಮ್ಮೆ ಲೌಕಿಕಲೆಕ್ಕಾಚಾರಗಳಿಗೆ ಗೌಡರ ಮಾತುಗಳು ಉತ್ಪ್ರೇಕ್ಷೆಯಂತೆ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಅವರಿಂದ ಮಂಡ್ಯಕ್ಕೆ, ಕರ್ನಾಟಕ ಶಿಕ್ಷಣರಂಗಕ್ಕೆ ಸಂದಸೇವೆ ಮಾರ್ಗದರ್ಶನ ಅತ್ಯಪೂರ್ವವಾದುದು. ತಮ್ಮ ಹತ್ತಿರ ಬರುವ ಕಿರಿಯರಿಗೆ ಅವರು ಕೊಡುವ ಪ್ರೋತ್ಸಾಹ ಅನುಕರಣೀಯ. ಶಂಕರಗೌಡರು ನಾನು ಮಾಡಿದ್ದನ್ನು ಶಂಕಿಸದೆ ಒಪ್ಪಿದ್ದಾರೆ. ಬೇರೆಯವರು ಶಂಕಿಸಿದಾಗಲೂ ಅವರು ಅದಕ್ಕೆ ಬೆಲೆ ಕೊಟ್ಟಿಲ್ಲವೆಂಬುದನ್ನು ನಾನು ಬಲ್ಲೆ. ಈ ನಿಷ್ಪಕ್ಷಪಾತ ಹಿರಿತನಕ್ಕಾಗಿಯೇ ಅವರು ಹೇಳಿದ ಕೆಲಸವನ್ನು ಅದು ಎಷ್ಟೇ ಕಷ್ಟದ್ದಿರಲಿ ನಾನು ಒಪ್ಪಿ ಮಾಡುತ್ತೇನೆ. ಶಂಕರಗೌಡರು ಪ್ರಧಾನಸಂಪಾದಕರಾಗಿ ನನಗೆ ಸರ್ವತಂತ್ರ ಸ್ವಾತಂತ್ರ್ಯವನ್ನೆ ಕೊಟ್ಟಿದ್ದಾರೆ.

ಸಂಭಾವನಾಗ್ರಂಥಗಳ ಕೆಲಸ ಒಂದು ರೀತಿಯಲ್ಲಿ ತಲೆನೋವಿನ ಕೆಲಸ. ನಾನಾ ರೀತಿಯ, ನಾನಾರಂಗದ ಬರವಣಿಗೆಗಳನ್ನು ಸರಿಪಡಿಸಿ ಒಪ್ಪಮಾಡುವುದು ನಮ್ಮ ಶತ್ರುಗಳಿಗೂ ಬೇಡ. ಇನ್ನು ಎಂಟುನೂರು ಪುಟಗಳ ಈ ಗ್ರಂಥದ ಕರಡು ತಿದ್ದುವುದಂತೂ ನೆನೆದರೆ ಹೆದರಿಕೆಯ ಕೆಲಸ. ಒಮ್ಮೆ ಮತ್ತೊಮ್ಮೆ ಮಗದೊಮ್ಮೆ ಹೀಗೆ ಕರಡು ತಿದ್ದುವವರಿಗೇ ಗೊತ್ತು ಆ ಕಷ್ಟ. ಅತ್ಯುತ್ತಮವಾದ ಸಾಮಾನುಸರಂಜಾಮು ಒದಗಿಸ

ಬಹುದು. ಅಡಂಗೆಯುವನು ಸಮರ್ಥನಲ್ಲದಿದ್ದರೆ ಎಲ್ಲವೂ ಸರ್ವನಾಶ. ಮುದ್ರಣದ ಕೆಲಸವೂ ಅಂತಹ ಜವಾಬುದಾರಿಯುದು. ಈ ಕೆಲಸಗಳಲ್ಲಿ ನನಗೆ ಹೆಗಲೆಣೆಯಾಗಿ ದುಡಿದಿರುವವರು ನನಗೆ ಆತ್ಮೀಯರಾದ ಶ್ರೀ ಜಿ. ಜಿ. ಮಂಜುನಾಥನ್, ಶ್ರೀ ಕೆ. ಪಿ. ಪುಟ್ಟಸ್ವಾಮಿ ಮತ್ತು ಶ್ರೀಮತಿ ವೈ. ಸಿ. ಭಾನುಮತಿ.

ಸ್ವಾಗತಸಮಿತಿಯ ಖಜಾಂಚಿ ಶ್ರೀ ಎಂ. ಕೆ. ರಾಮಲಿಂಗೇಗೌಡರು ಕಾರ್ಯದರ್ಶಿಗಳಾದ ಶ್ರೀ ಕೆ.ಟಿ. ಶಿವಲಿಂಗಯ್ಯ ಮತ್ತು ಶ್ರೀ ಆತ್ಮಾನಂದ ಅವರು ಈ ಗ್ರಂಥದ ಮುದ್ರಣಕಾರ್ಯದಲ್ಲಿ ಅಪಾರ ನೆರವು ನೀಡಿದ್ದಾರೆ. ಈ ಮೂವರೂ ಜವರಪ್ಪಗೌಡರ ಅಭಿಮಾನಿಗಳು.

ನನ್ನ ಜೊತೆಸಂಪಾದಕ ಶ್ರೀ ಬಿ. ಜಯಪ್ರಕಾಶಗೌಡರು ಉತ್ಸಾಹಶಾಲಿ, ಕ್ರಿಯಾಶೀಲ ವ್ಯಕ್ತಿ. ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳಿಗೆ ಸಂಬಂಧಿಸಿದ ಯಾವುದೇ ಕೆಲಸದಲ್ಲಿ ಅವರು ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ, ಅವರ ಕಾರ್ಯವಿಧಾನವನ್ನು ಕಾರ್ಯತತ್ಪರತೆಯನ್ನು ನಾನು ಮೆಚ್ಚಿಕೊಂಡಿದ್ದೇನೆ. ಕರ್ನಾಟಕ ನಾಟಕ ಅಕಾದೆಮಿಯ ಸದಸ್ಯರೂ ಆಗಿರುವ ಶ್ರೀ ಜಯಪ್ರಕಾಶಗೌಡರು ಈ ಗ್ರಂಥದ ಕೆಲಸದಲ್ಲಿ ನನ್ನೊಂದಿಗಿರಲು ಒಪ್ಪಿದ್ದು ನನಗೆ ಸಂತೋಷವನ್ನುಂಟುಮಾಡಿದೆ.

ಈ ಅಭಿನಂದನ ಗ್ರಂಥದ ಸಿದ್ಧತೆಯಲ್ಲಿ ಮಂಡ್ಯಜಿಲ್ಲೆಯ ಮತ್ತು ಹೊರಗಿನ ಅನೇಕ ಸಾಹಿತಿಗಳು, ರಾಜಕಾರಣಿಗಳು ತಮ್ಮಗೊಂದು ಲೇಖನ ನೀಡಿ ಈ ಸಂಪುಟದ ಘನತೆ ಹೆಚ್ಚಿಸಿದ್ದಾರೆ. ಸ್ವತಃ ಶ್ರೀ ಜವರಪ್ಪಗೌಡರೇ ತಮ್ಮ ಅನಾರೋಗ್ಯದ ನಡುವೆಯೂ ನನ್ನೊಂದಿಗೆ ಸಹಕರಿಸಿದ್ದಾರೆ. ಶ್ರೀ ಜವರಪ್ಪಗೌಡರ ಶ್ರೀಮತಿಯವರು, ಮಕ್ಕಳು, ಸೊಸೆಯರು ನಾನು ಈ ಕೆಲಸಕ್ಕೆಂದು ಮಂಡ್ಯಕ್ಕೆ ಹೋದಾಗಲೆಲ್ಲ ನನ್ನನ್ನು ತಮ್ಮಲ್ಲೊಬ್ಬನೆಂಬಂತೆ ಕಂಡು ಸಹಕರಿಸಿದ್ದಾರೆ.

ಮಂಡ್ಯನಗರದ ಸುಪ್ರಸಿದ್ಧ ಛಾಯಾಗ್ರಾಹಕ ಶ್ರೀ ಪಿ. ಎಸ್. ರಾವ್ ಮಂಡ್ಯ ಸ್ಟುಡಿಯೋ ಅವರು ತಮ್ಮ ಕ್ಯಾಮರದಲ್ಲಿ ಹಿಡಿದುಕೊಟ್ಟ ಮುಖಚಿತ್ರ ಈ ಗ್ರಂಥದ ಅಂದವನ್ನು ಹೆಚ್ಚಿಸಿದೆ. ಇನ್ನೆಷ್ಟೋ ಅಭಿಮಾನಿಗಳ ಪ್ರತ್ಯಕ್ಷ, ಅಪ್ರತ್ಯಕ್ಷ ಸಹಾಯ ಸಹಕಾರಗಳು ಸಂದಿವೆ, ಈ ಎಲ್ಲರಿಗೂ ಸಂಪಾದಕನಾಗಿ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಮೈಸೂರು
21-7-1989

ಹ. ಕ. ರಾಜೇಗೌಡ

# ಪರಿವಿಡಿ

## ಭಾಗ – ಮೂರು

## ಅಧ್ಯಾಯ-ಒಂದು

೧

ಕನ್ನಡ ನಾಡಿನ ಚರಿತ್ರೆಯಲ್ಲಿ ನಾಗಮಂಗಲ ಪ್ರದೇಶ ಅನೇಕ ಕಾರಣಗಳಿಗಾಗಿ ಅತ್ಯಂತ ಪ್ರಾಚೀನ ಕಾಲದಿಂದಲೂ ಹೆಸರುವಾಸಿಯಾಗಿದೆ. ಪುರಾಣದ ಕಾಲದವೆಂದು ಹೇಳುವ ಪೌರಾಣಿಕ ಸ್ಥಳಗತೆಗಳಿಂದ ಹಿಡಿದು ಇಲ್ಲಿಯವರೆಗೆ ಈ ಪ್ರದೇಶದ ಹೆಚ್ಚುಗಾರಿಕೆಯನ್ನು ಕುರಿತು ಹೇಳಬಹುದಾಗಿದೆ. ಒಂದು ಕಾಲದಲ್ಲಿ ದಟ್ಟಾರಣ್ಯಗಳಿಂದ ಕೂಡಿದ ಪ್ರದೇಶವಾಗಿದ್ದು ಮಳೆ ಬೆಳೆಗಳಿಂದ ಸುಭಿಕ್ಷವಾಗಿದ್ದ ನಾಗಮಂಗಲ ಪ್ರದೇಶ ಪ್ರಕೃತಿಯ ವೈಪರೀತ್ಯ ಮತ್ತು ಕಾಡುನಾಶದಿಂದಾಗಿ ಮುಂದೆ ಭೀಕರ ಬರಗಾಲವನ್ನು ಎದುರಿಸಬೇಕಾಯಿತು. ಈ ಪ್ರದೇಶದಲ್ಲಿ ನಡೆದ ಯುದ್ಧಗಳಿಂದಾಗಿ ಇಲ್ಲಿನ ಪ್ರಕೃತಿ ನಾಶವಾಯಿತೆಂದೂ ಹೇಳುತ್ತಾರೆ. ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದ ಹೈದರಾಬಾದು ನಿಜಾಮನ ಸೇನೆ ಈ ಪ್ರದೇಶದ ಮರಗಿಡಗಳನ್ನು ನಾಶ ಮಾಡಿದ ವಿಚಾರವನ್ನು ಓದಿದಾಗ ಗಂಗರ ಕಾಲದಿಂದಲೂ ನಡೆದ ಯುದ್ಧಗಳಿಂದ ಪ್ರಕೃತಿ ನಾಶವಾಗಿರಬೇಕೆಂಬುದರಲ್ಲಿ ಅನುಮಾನವಿಲ್ಲ. ಈಗ ಮತ್ತೆ ಈ ಪ್ರದೇಶ ಮಳೆ ಬೆಳೆಯಲ್ಲಿ ಉತ್ತಮಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಸ್ವಾತಂತ್ರ್ಯಾನಂತರದ ನೀರಾವರಿ ಅನುಕೂಲಗಳೂ ಕಾರಣ. ಹೀಗಾಗಿ ನಾಗಮಂಗಲ ಪ್ರದೇಶ ಧಾರ್ಮಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಹೆಸರುವಾಸಿಯಾದ ಪ್ರದೇಶವಾಗಿದೆ.

ನಾಗಮಂಗಲದ ಪ್ರವಾಸಿಮಂದಿರದಿಂದ ಪೂರ್ವಕ್ಕೆ ಒಂದು ಒಂದೂವರೆ ಕಿಲೋ ಮೀಟರು ದೂರದಲ್ಲಿ ಪಾಲಅಗ್ರಹಾರ ಗ್ರಾಮವಿದೆ. ಊರ ಸುತ್ತಲೂ ಬೆಟ್ಟ ಸಾಲುಗಳಿದ್ದು ಒಂದು ರೀತಿಯ ಮರಿ ಮಲೆನಾಡಿನಂತೆ ಕಾಣುತ್ತದೆ. ಇದು ಹೊಯ್ಸಳರ ಕಾಲದಲ್ಲಿ ಅಗ್ರಹಾರವಾಗಿತ್ತೆಂದು ಹೇಳುತ್ತಾರೆ. ಆದರೆ ಇಂದು ನಮ್ಮ ಊರಿನಲ್ಲಿ ಒಂದೂ ಬ್ರಾಹ್ಮಣ ಕುಟುಂಬವಿಲ್ಲ. ಅದಕ್ಕೆ ಸಂಬಂಧಿಸಿದ ಕೆಲವು ಕುರುಹುಗಳನ್ನು ತೋರಿಸುತ್ತಾರೆ. ಅವುಗಳನ್ನು ಮುಂದೆ ಸಂದರ್ಭಾನುಸಾರ ಹೇಳುತ್ತಾ ಹೋಗುತ್ತೇನೆ. ನಾನು ಇಲ್ಲಿ ನಿರೂಪಿಸುತ್ತಿರುವ ಅನೇಕ ಸಂಗತಿಗಳು ಕೇವಲ ನೆನಪನ್ನು ನಂಬಿದಂಥವು. ಮುಂದೊಂದು ದಿನ ನಾನು ನನ್ನ ಜೀವನ ಕುರಿತು ಬರೆಯುತ್ತೇನೆಂದು ಯೋಚಿಸುವ ಸ್ಥಿತಿ ಮತ್ತು ವಾತಾವರಣದಲ್ಲಿ ನಾನು ಹುಟ್ಟಿ ಬೆಳೆದವನಲ್ಲ. ಅಂತಹ ಕಲ್ಪನೆಯೂ ನನಗಿರಲಿಲ್ಲ. ಆದುದರಿಂದ ನನ್ನ ಜೀವನದ ಬಗ್ಗೆ ಯಾವ ದಾಖಲೆಗಳನ್ನು ಇಟ್ಟುಕೊಳ್ಳಲಿಲ್ಲ. ಅಲ್ಲದೆ ನಾನೇನೂ ದೊಡ್ಡ ಬರಹಗಾರನೂ ವಿದ್ಯಾವಂತನೂ ಅಲ್ಲ. ಆದುದರಿಂದ ನಾನು ಲೋಕವನ್ನು ಕಂಡಂತೆ, ಅದರೊಂದಿಗಿನ ನನ್ನ ಸಂಬಂಧವನ್ನು

ನಿರೂಪಿಸುತ್ತಾ ಹೋಗುತ್ತೇನೆ. ಯಾರಿಗಾದರೂ ಇದರಲ್ಲಿ ಒಂದು ನಿಗದಿತ ಕ್ರಮವಿಲ್ಲ ಅನ್ನಿಸಿದರೆ ಆಶ್ಚರ್ಯವೇನಿಲ್ಲ. ಇಲ್ಲಿ ಇನ್ನೂ ಒಂದು ಮಾತನ್ನು ಹೇಳಿ ಬಿಡುತ್ತೇನೆ. ಈ ಬರಹದಲ್ಲಿ ನಾನು ಅಮುಖ್ಯ. ನನ್ನ ಜೀವನವನ್ನು ಉದ್ಧರಿಸಿದ, ನನಗೆ ಸ್ಫೂರ್ತಿ ನೀಡಿದ ಸಂಗತಿಗಳು ಮುಖ್ಯ ಎಂದು ಭಾವಿಸಿದ್ದೇನೆ. ಈ ಹಿನ್ನೆಲೆಯಲ್ಲಿ ಓದುಗರು ಇದನ್ನು ಪರಿಭಾವಿಸುವರಾಗಿ ನಂಬಿ ಮುಂದುವರಿಯುತ್ತಿದ್ದೇನೆ.

ಬರೆದಿಡುವ ಪದ್ಧತಿ ಇಲ್ಲದ ಸಮಾಜದಲ್ಲಿ ಹುಟ್ಟಿ ಬರುವ ಯಾವನೇ ವ್ಯಕ್ತಿಯು ಮೂರನೆಯ ತಲೆ ಮಾರಿನಿಂದಾಚೆಗೆ ತನ್ನ ವಂಶದ ಬಗ್ಗೆ ಹೇಳುವುದು ಸಾಧ್ಯವಾಗದು. ಅಂತೆಯೇ ನನ್ನ ವಂಶದ ಬಗ್ಗೆಯೂ ಹೇಳಬಹುದು. ನಮ್ಮ ಮುತ್ತಾತನ ತಂದೆಯ ಹೆಸರು ನರಸೇಗೌಡ ಎಂದು. ಆ ಕಾಲದಲ್ಲಿ ಅವರು ಭಾರಿ ಆಳಾಗಿದ್ದುದರಿಂದಲೋ ಏನೋ ಅವರನ್ನು ದಡಿ ನರಸೇಗೌಡ ಎಂದು ಕರೆಯುತ್ತಿದ್ದರಂತೆ ಹೆಸರಿಗೆ ತಕ್ಕಂತೆ ಅವರು ಭೀಮ ಕಾಯರಂತೆ. ಉಣ್ಣುವುದರಲ್ಲಿಯೂ ಅವರನ್ನು ಭೀಮನಿಗೇ ಹೋಲಿಸ ಲಾಗುತ್ತದೆ. ಈಗಲೂ ನಮ್ಮ ಊರಲ್ಲಿ ಯಾರಾದರೂ ಮದುವೆ ಮುಂಜಿಗಳಲ್ಲಿ ಚೆನ್ನಾಗಿ ಉಣ್ಣುವವರನ್ನು ಕಂಡರೆ "ಏನು ದಡಿ ನರಸೇಗೌಡನಂತೆ ಉಣ್ಣುತ್ತಾನೆ" ಎನ್ನುವುದುಂಟು.

ಇದಕ್ಕೂ ಹಿಂದಿನ ಇನ್ನೊಬ್ಬ ಪೂರ್ವಿಕರ ಹೆಸರೂ ಜನರ ಬಾಯಲ್ಲಿ ಉಳಿದಿದೆ. ಅದು ಮುದಿ ನರಸೇಗೌಡ ಎಂಬುದು. ಆಗ ಊರಿನ ಪಟೇಲಿಕೆ ನಮ್ಮ ಮನೆತನಕ್ಕೆ ಸೇರಿತ್ತಂತೆ. ಮುದಿ ನರಸೇಗೌಡರು ತುಂಬಾ ಸಾತ್ವಿಕರೂ ಧಾರ್ಮಿಕ ಭಾವನೆಯುಳ್ಳ ವರೂ ಆಗಿದ್ದರಂತೆ. ಅವರು ಬೆಳಿಗ್ಗೆ ಎದ್ದು ತಮ್ಮ ನಿತ್ಯಕರ್ಮಗಳನ್ನು ಮುಗಿಸಿ, ಊರ ಮುಂದಿನ ಕೊಳಕ್ಕೆ ಹೋಗಿ ಮಿಂದು ಸುಮಾರು ಅರ್ಧ ಘಂಟೆಯ ಕಾಲ ಸೂರ್ಯ ದೇವನಿಗೆ ನಮಸ್ಕಾರ ಸಲ್ಲಿಸುತ್ತಿದ್ದರಂತೆ. ಆಗ ಒಂದು ದಿನ ಬೆಳಗಿನ ಹೊತ್ತು ಊರಿಗೆ ಸುಬೇದಾರರು ಬಂದರು. ಪಟೇಲರಿಗೆ ಹೇಳಿಕಳಿಸಿದರು. ಅದೇ ಕಾಲದಲ್ಲಿ ಪಟೇಲ ಮುದಿ ನರಸೇಗೌಡರು ತಮ್ಮ ಸೂರ್ಯ ನಮಸ್ಕಾರದಲ್ಲಿದ್ದರು. ಸುಬೇದಾರರ ಜವಾನ ಅವರಿದ್ದಲ್ಲಿಗೇ ಹೋಗಿ ಸುಬೇದಾರರು ಬಂದಿರುವ ಸುದ್ದಿ ಮುಟ್ಟಿಸಿ ಬೇಗ ಬರುವಂತೆ ಜ್ಞಾಪಿಸಿದನಂತೆ. ಆದರೆ ಗೌಡರು ಈ ಯಾವುದನ್ನೂ ಪರಿಗಣಿಸದೆ ತಮ್ಮ ಪ್ರಾರ್ಥನೆಯನ್ನು ಯಥಾ ಸಾವಧಾನವಾಗಿ ಮುಗಿಸಿ ಸುಬೇದಾರ ರಲ್ಲಿಗೆ ಬಂದರು. ತಮ್ಮ ಆಜ್ಞೆಯಾದೊಡನೆಯೇ ಪಟೇಲರು ಓಡಿ ಬರಲಿಲ್ಲವೆಂಬ ಕೋಪದಲ್ಲಿ "ಏನು ಪಟೇಲ ಸುಬೇದಾರರು ಕರೆದರೆ ಬರಲು ಇಷ್ಟು ಹೊತ್ತೆ ?" ಎಂದು ಅಧಿಕಾರ ದರ್ಪ ತೋರಿದರು ನೆರೆದ ಊರ ಜನರ ಮುಂದೆ. ತಮ್ಮ ಪ್ರಾರ್ಥನೆಗೆ ಅಡ್ಡಿಯಾದುದರಿಂದಲೇ ಬೇಸರಗೊಂಡಿದ್ದ ಮುದಿ ನರಸೇಗೌಡರಿಗೆ ಸುಬೇದಾರರ ದರ್ಪದ ಮಾತು ಕೇಳಿ ಅಸಹನೀಯ ಕೋಪ ಬಂತು. ಪಟೇಲರು ಸುಬೇದಾರರ ಮಾತು ತಮ್ಮ ಕಿವಿಗೆ ಬೀಳಲೇ ಇಲ್ಲ ಎಂಬಷ್ಟು ತಿರಸ್ಕಾರದಿಂದ ಮನೆಯತ್ತ ನಡೆದರು.

ಕೆಲವೇ ನಿಮಿಷಗಳಲ್ಲಿ ಹಿಂತಿರುಗಿದ ಅವರು ಪಟೇಲಿಕೆಗೆ ಸಂಬಂಧಿಸಿದ ಅಧಿಕಾರ ಲಾಂಛನಗಳನ್ನು ತಂದು ಸುಬೇದಾರರ ಮುಂದಿಟ್ಟು "ಆತ್ಮ ಗೌರವವಿಲ್ಲದ ಈ ತಾಪೇದಾರಿ ನನಗೆ ಬೇಕಾಗಿಲ್ಲ ದಯಮಾಡಿ ಒಪ್ಪಿಸಿಕೊಳ್ಳಿ" ಎಂದು ಹೇಳಿ ನಡದೇ ಬಿಟ್ಟರಂತೆ. ಆ ನಂತರ ತಮ್ಮ ತಪ್ಪು ನಡವಳಿಕೆಯ ಅರಿವಾಗಿಯೋಯೇನೋ ಮುದಿ ನರಸೇಗೌಡರ ಮನವೊಲಿಸಲು ಸುಬೇದಾರರು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದವಂತೆ.

ನಮ್ಮ ವಂಶದ ಪೂರ್ವಿಕರ ಇಂಥ ಕಥೆಗಳನ್ನು ಕೇಳಿದಾಗ ಅವರ ಧಾರ್ಮಿಕ ನಿಲುವಿನ ಬಗೆಗೆ ನನಗೆ ಈಗಲೂ ಹೆಮ್ಮೆಯೆನಿಸುತ್ತದೆ. ದಡಿ ನರಸೇಗೌಡರ ಬಗ್ಗೆಯೂ ಇಂಥದೊಂದು ಕಥೆಯಿದೆ. ಹಳ್ಳಿಗಳಲ್ಲಿ ತಮ್ಮ ತಮ್ಮ ತರಕಾರಿ ತೋಟಗಳನ್ನು ಎಲ್ಲರೂ ಒಂದೇ ಕಡೆ ಹೊಂದಿರುತ್ತಾರೆ. ಇವನ್ನು ಕೀರೇಮಡಿ ಎಂದು ಕರೆಯುತ್ತಾರೆ. ಇವುಗಳಿಗೆ ಸಾಮಾನ್ಯವಾಗಿ ಸಂಜೆ ಹೊತ್ತು ನೀರು ಹುಯ್ಯುವುದು ಪದ್ಧತಿ. ಒಂದು ದಿನ ಸಂಜೆ ದಡಿ ನರಸೇಗೌಡರು ತಮ್ಮ ಸೊಪ್ಪಿನ ಮಡಿಗಳಿಗೆ ನೀರು ಹುಯ್ದು ಕಣದ ಹತ್ತಿರ ಬಂದರು. ಕಣದ ತುಂಬಾ ಒಣಗಿದ ಹರಳುಗೊನೆಗಳನ್ನು ಹರಡಿದ್ದರು. ರಾತ್ರಿ ಎಳೆಂಟು ಗಂಟೆಯ ಸಮಯ. ಗ್ರಾಮದೇವತೆಯ ಹಬ್ಬದ ಅಂಗವಾಗಿ ರಂಗ ಕುಣಿಯುವ ಕಾಲ ಅದು. ತಮಟೇ ಸದ್ದು ಕೇಳಿದರೆ ಸಾಕು ಕಾಲುಗಳು ತಮಗೆ ತಾವೇ ಲಯ ಬದ್ಧವಾಗುತ್ತವೆ. ದಡಿ ನರಸೇಗೌಡರು ಕಣದಲ್ಲಿ ಹರಡಿದ ಹರಳು ಕಾಯಿ ಒಣಗಿವೆಯೇ ಎಂದು ತುಳಿದು ನೋಡುತ್ತಿದ್ದರು. ಅದೇ ಸಮಯದಲ್ಲಿ ಊರೊಳಗಿನ ರಂಗದಲ್ಲಿ ತಮಟೆಗಳು ಆರಂಭವಾದುವು. ಗೌಡರು ಆವೇಶ ಬಂದವರಂತೆ ಕಣದಲ್ಲಿ ಕುಣಿಯಲಾರಂಭಿಸಿದರು. ರಂಗದ ಕುಣಿತ ಅರ್ಧ ರಾತ್ರಿಗೆ ಮುಗಿಯಿತು. ದಡಿ ನರಸೇಗೌಡರು ಅಲ್ಲಿಯೇ ಹುಲ್ಲಿನ ಮೇಲೆ ಮಲಗಿ ನಿದ್ದೆ ಹೋದರು. ಬೆಳಗ್ಗೆ ಬಂದ ಮನೆಯವರು ನೋಡುತ್ತಾರೆ ಯಾರೋ ಹರಳು ಕಾಯಿ ಬಡಿದು ಒಕ್ಕಣೆ ಮಾಡಿದ್ದಾರೆ. ದಡಿ ನರಸೇಗೌಡರನ್ನು ಕೇಳಿದರೆ ತಮಗೇನೂ ತಿಳಿಯದೆಂದರಂತೆ. ಹೀಗೆ ಒಕ್ಕಣೆಯಾಗಿದ್ದ ಹರಳನ್ನು ತೂರಿ ಕೊಚ್ಚಿದಾಗ ಎರಡು ಖಂಡುಗ ಆದುವಂತೆ. ನಮ್ಮ ಗ್ರಾಮಾಂತರ ಬದುಕಿನಲ್ಲಿ ಇಂತಹ ವ್ಯಕ್ತಿಗಳು, ಘಟನೆಗಳು ಅಪರೂಪವಲ್ಲ ಕಾಲ್ಪನಿಕವೂ ಅಲ್ಲ.

ನಮ್ಮ ತಂದೆಯ ಹೆಸರೂ ನರಸೇಗೌಡರೆಂದೆ. ನಮ್ಮ ಮನೆ ದೇವರು ನರಸಿಂಹ ಸ್ವಾಮಿಯಾದುದರಿಂದ ಸಾಮಾನ್ಯವಾಗಿ ಮನೆಯ ಮೊದಲ ಮಗು ನರಸಿಂಹನ ಹೆಸರಿಂದಲೇ ಆಗಬೇಕು. ನಮ್ಮ ತಾಯಿಯಹೆಸರು ತಿಮ್ಮಮ್ಮ. ನಮ್ಮ ತಾತನ ಹೆಸರು ನಿಂಗೇಗೌಡ, ಹೆಸರಾಂತ ಮನೆತನಗಳು ಮುಂದೆ ಸಾಮಾನ್ಯವಾಗುವುದು ಲೋಕರೂಢಿ. ರಾಜ ಮಹಾರಾಜರ ವಂಶದವರೇ ಇಂದು ಪರಿಚಾರಕರಾಗಿರುವುದನ್ನು ನಾವು ಕಂಡಿದ್ದೇವೆ ಕೇಳಿದ್ದೇವೆ. ನಮ್ಮ ತಾತ ನಿಂಗೇಗೌಡರ ಕಾಲಕ್ಕೆ ನಾವೂ ನಮ್ಮ ಹಿರಿಯರ ಹೆಸರಿನ ನೆರಳಿನಲ್ಲಿ ಬೆಳೆಯಲಾಗದೆ ಆಲದ ನೆರಳಿನ ಗಿಡವಾಗಿದ್ದೆವೆಂದು ಹೇಳ ಬಹುದು. ನಮ್ಮ ತಾತನಿಗೆ ಮೂವರು ಗಂಡುಮಕ್ಕಳು, ಒಬ್ಬಳು ಹೆಣ್ಣು ಮಗಳು. ಮಧ್ಯದವರೆ

ನಮ್ಮ ತಂದೆ. ನಮ್ಮ ದೊಡ್ಡಪ್ಪ ವೆಂಕಟನರಸೇಗೌಡ, ಚಿಕ್ಕಪ್ಪ ನರಸಿಂಹಯ್ಯ. ನಮ್ಮ ತಾತ ಹಿರಿಯರಂತಲ್ಲದಿದ್ದರೂ ಅಂತಹ ಕಳಪೆ ಕುಳವೇನೂ ಅಲ್ಲ. ಸುತ್ತ ಮುತ್ತಲ ಹಳ್ಳಿಗಳಿಗೆ ಬೇಕಾದವರು, ವಿದ್ಯಾವಂತರು ಅನ್ನಿಸಿಕೊಂಡಿದ್ದರು. ತಮ್ಮ ನ್ಯಾಯ ನಿಗ್ರಗಳನ್ನು ಬಗೆಹರಿಸಲು ಜನರು ಸಿಂಗೇಗೌಡರ ಮೊರೆಹೋಗುತ್ತಿದ್ದರು.

ನಮ್ಮ ದೊಡ್ಡಪ್ಪ ವೆಂಕಟನರಸೇಗೌಡರು ಹಾಸ್ಯ ಸ್ವಭಾವದವರಾಗಿದ್ದರಂತೆ. ಮಕ್ಕಳೊಂದಿಗೆ ತೀಟೆ ಆಡುವುದು, ಮಾಡುವುದು ಅವರಿಗೆ ಅತ್ಯಂತ ಪ್ರಿಯವಾದ ಹವ್ಯಾಸ. ಯಾವಾಗಲೂ ಎಲೆ ಅಡಿಕೆ ಅಗಿಯುತ್ತಿದ್ದ ಅವರು ತಮ್ಮ ತಾಂಬೂಲದ ಸಂಚಿಯಲ್ಲಿ ಬತಾಸು, ಕಲ್ಯಾಣಸೇವೆ ಮುಂತಾದ ಸಿಹಿತಿಂಡಿಗಳನ್ನು ಇಟ್ಟಿರುತ್ತಿದ್ದರಂತೆ. ಮಕ್ಕಳನ್ನು ಕಂಡಕೂಡಲೇ ಅವುಗಳನ್ನು ಕೀಟಲೆಮಾಡಿ ಅಳಿಸುವುದು, ಆಮೇಲೆ ಮುದ್ದಿಸಿ ಬತಾಸು ಕಲ್ಯಾಣಸೇವೆ ಕೊಟ್ಟು ನಗಿಸುವುದು. ಅವರು ಒಳ್ಳೆಯ ತೋಟಗಾರರು, ಅವರ ತೋಟದಲ್ಲಿ ತೆಂಗು, ಅಡಕೆ, ಬಾಳೆ, ವಿಳ್ಳೇದೆಲೆಗಳೊಂದಿಗೆ ಒಳ್ಳೆಯ ಮಲ್ಲಿಗೆಯೂ ಇರುತ್ತಿತ್ತು. ವೆಂಕಟನರಸೇಗೌಡರು ತಮ್ಮ ತೋಟದ ಮಲ್ಲಿಗೆ ಯಿಂದ ದಂಡೆಯೊಂದನ್ನು ಕಟ್ಟಿ ಪ್ರತಿದಿನ ಲಕ್ಷ್ಮೀದೇವಿಗೆ ಅರ್ಪಿಸುವ ಪರಿಪಾಠ ಮಾಡಿಕೊಂಡಿದ್ದರಂತೆ. ಗುಣದಲ್ಲಿ ಪ್ರಶಾಂತಮೂರ್ತಿ. ಅವರು ಎಂತಹ ವಿಕೋಪ ಪ್ರಸಂಗಗಳಲ್ಲಿಯೂ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಿರಲಿಲ್ಲ. ತಮ್ಮಲ್ಲಿಗೆ ಬಂದ ಯಾರನ್ನೂ ಅವರು ಬರಿಗೈಯಲ್ಲಿ ಕಳಿಸುತ್ತಿರಲಿಲ್ಲ. ಅಂತಹ ಉದಾರಿ ಅವರು. ಅವರ ಪತ್ನಿ ನನ್ನ ದೊಡ್ಡಮ್ಮ ಒಂದೇ ಊರಿನವರು. ಗಂಡನಿಗೆ ಅನುರೂಪೆಯಾದ ವರು. ಅವರಿಗೆ ನಾಲ್ಕು ಜನ ಹೆಣ್ಣು ಮಕ್ಕಳು, ಗಂಡುಮಕ್ಕಳಿರಲಿಲ್ಲ. ಆದುದರಿಂದ ನಾನು ಹುಟ್ಟಿದಾಗ ತೊಟ್ಟಿಲು ಬದಲಾಯಿಸಿಕೊಳ್ಳಲು ನನ್ನ ತಂದೆ ತಾಯಿಯರನ್ನು ಕೇಳಿದರಂತೆ. ಆದರೆ ಹುಟ್ಟಿದ ಮಕ್ಕಳೆಲ್ಲ ಜವರಾಯನ ಪಾದಸೇರುತ್ತಿದ್ದುದರಿಂದ ನನಗೆ ಜವರಾಯನ ಹೆಸರನ್ನೇ ಇಟ್ಟು ಯಮದೂತರು ನನ್ನ ಹತ್ತಿರ ಸುಳಿಯದಂತೆ ಪ್ರಯತ್ನಿಸುತ್ತಿದ್ದ ನನ್ನ ತಂದೆ ತಾಯಿಗಳು ಅದಕ್ಕೆ ಒಪ್ಪಲಿಲ್ಲವಂತೆ.

ನಾನು ಹುಟ್ಟಿದ ಎರಡೇವರ್ಷಕ್ಕೆ ನಾಡಿಗೆ ನಾಡನ್ನೇ ಮೃತ್ಯುಕೂಪಕ್ಕೆ ತಳ್ಳಿದ ಇನ್‌ಫ್ಲುಯೆಂಜಾ ಅಥವಾ ನಮ್ಮ ಹಳ್ಳಿಯವರು ಕರೆದ ಮಾರಿಜ್ವರ ಊರೂರು ಗಳನ್ನೇ, ಮನೆ ಮನೆಗಳನ್ನೇ ಗುಡಿಸಿ ಗುಂಡಾಂತರ ಮಾಡಿತಂತೆ. 1918ರಲ್ಲಿ ಪಾಶ್ಚಿಮಾತ್ಯ ದೇಶದಕಡೆಯಿಂದ ಬಂದ ಇದರ ಕೋಲಾಹಲ ಇಂದಿಗೂ ಕೇಳಿದವರ ಎದೆ ನಡುಗಿಸುತ್ತದೆ. ಇದರ ಮುಂದೆ ಈ ವರ್ಷ ಲಕ್ಷಾಂತರ ಜನರನ್ನು ಆಹುತಿ ತೆಗೆದು ಕೊಂಡ ಸೋವಿಯತ್ ರಷ್ಯಾದ ಆರ್ಮೇನಿಯಂ ಭೂಕಂಪ ಏನೇನೂ ಅಲ್ಲ. ಆಗ ನಮ್ಮ ಮನೆಯಲ್ಲಿಯೇ ಇಪ್ಪತ್ತು ಮುವ್ವತ್ತು ಜನ ಸತ್ತರಂತೆ, ಅವರಲ್ಲಿ ನನ್ನ ದೊಡ್ಡಪ್ಪ ವೆಂಕಟನರಸೇಗೌಡರೂ ಒಬ್ಬರು. ಅವರಿಗೆ ಗಂಡುಮಕ್ಕಳಿಲ್ಲದ್ದರಿಂದ ಎರಡುವರ್ಷವಾಗಿದ್ದ ನನ್ನ ತಲೆ ಬೋಳಿಸಿ ಅವರ ಉತ್ತರ ಕ್ರಿಯಾದಿಗಳನ್ನು ಮಾಡಿಸಿ

ದರಂತೆ. ನನ್ನ ತಲೆ ಬೋಳಿಸಿದ ಹಜಾಮ ಎಂತಹ ಕತ್ತಿಯನ್ನು ಉಪಯೋಗಿಸಿದನೋ ಏನೋ ಆ ಎಳೆಯ ಚರ್ಮಕ್ಕೆ ನಂಜು ಬಡಿದು ನನ್ನ ಬಲಗಣ್ಣು ಹೂಕೂತು ಊನ ವಾಯಿತಂತೆ.

ನನ್ನ ಚಿಕ್ಕಪ್ಪ ನರಸಿಂಹಯ್ಯನವರಿಗೆ ಒಳ್ಳೆಯ ಕಂಠಶ್ರೀ ಇತ್ತು. ಅನೇಕ ಕವಿತೆ ಗಳನ್ನು ದಾಸರ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಇದರ ಜೊತೆಗೆ ಪೀಟೀಲು ವಾದನದಲ್ಲಿಯೂ ಅವರಿಗೆ ಒಳ್ಳೆಯ ಪರಿಶ್ರಮವಿದ್ದಿತು. ಅಕ್ಕ ಪಕ್ಕದ ಹಳ್ಳಿಗಳಲ್ಲಿ ನಡೆಯುತ್ತಿದ್ದ ಹರಿಕಥೆಗಳಿಗೆ ಅವರು ಪಿಟೀಲು ಬಾರಿಸಲು ಹೋಗು ತ್ತಿದ್ದರು. ಅವರಿಗೆ ಬೇಸಾಯದ ಬಗ್ಗೆ ಅಷ್ಟೇನೂ ಆಸಕ್ತಿ ಇರಲಿಲ್ಲ. ನಮ್ಮ ದಾಯಾದಿ ಯೊಬ್ಬರ ಮಗನನ್ನು ತಪ್ಮೊಂದಿಗಿರಿಸಿಕೊಂಡಿದ್ದರು. ಮನೆವಾಳ್ತೆ ಮತ್ತು ವ್ಯವಸಾಯ ವೆಲ್ಲ ಅವನದೆ. ಈ ಚಿಕ್ಕಪ್ಪನಿಗೆ ಸಂಬಂಧಿಸಿದ ಘಟನೆಯೊಂದನ್ನು ಹೇಳಿದರೆ ಅಪ್ರಸ್ತುತ ವಾಗಲಾರದೆಂದುಕೊಂಡಿದ್ದೇನೆ.

ಒಮ್ಮೆ ಜಾತ್ರೆಯೊಂದರಲ್ಲಿ ನಮ್ಮ ತಂದೆ ಒಂದು ಜೊತೆ ಎತ್ತು ತಂದರು. ಒಂದು ವಿಮಾನಕ್ಕೆ ಎಂಜಿನ್ನುಗಳು ಹೇಗೊ ಹಾಗೆ ರೈತನಿಗೆ ಎತ್ತುಗಳು. ವಿಮಾನದ ಯಾವುದಾದರೊಂದು ಯಂತ್ರ ಕೆಟ್ಟರೂ ಅದು ಹೇಗೆ ಭೂಸ್ಪರ್ಶ ಮಾಡುತ್ತದೆಯೋ ಹಾಗೆಯೇ ರೈತನ ಎತ್ತುಗಳಲ್ಲಿ ಒಂದು ಸರಿಯಿಲ್ಲದಿದ್ದರೆ ಅವನ ಆರಂಭ ಕುಸಿದು ಬೀಳುತ್ತದೆ. ತಂದೆಯವರು ತಂದ ಹೊಸ ಎತ್ತುಗಳನ್ನು ನಮ್ಮ ಚಿಕ್ಕಪ್ಪ ವಶಕ್ಕೆ ತೆಗೆದುಕೊಂಡರು. ಮಾರನೆ ಬೆಳಿಗ್ಗೆ ಅವುಗಳನ್ನು ಗಾಡಿಗೆ ಹೂಡಿದರು. ಮನೆಯಲ್ಲಿ ಗಾಡಿ ಹೂಡಿದರೆಂದರೆ ಮನೆಯ ಮಕ್ಕಳಿಗೆಲ್ಲಾ ಆನಂದವೋ ಆನಂದ, ಈಗಿನ ಮಕ್ಕಳಿಗೆ ಕಾರು ಹೊರಟರೆ ಆಗುವಂತೆ. ಸರಿ ನಾವು ಮೂರು ನಾಲ್ಕು ಹುಡುಗರು ಗಾಡಿ ಹತ್ತಿದೆವು. ಗಾಡಿ ಸೌದೆ ತರಲು ಹೋಗುತ್ತಿದ್ದುದರಿಂದ ಹುಡುಗರು ಬಂದರೆ ತುಂಬಲು ಅನುಕೂಲವಾಗುತ್ತದೆಂದು ಚಿಕ್ಕಪ್ಪನೂ ನಮ್ಮನ್ನು ಗದರಿಸಲಿಲ್ಲ. ಗಾಡಿ ಕಾವಲು ತಲುಪಿತು. ನಾವು ಎತ್ತಬಲ್ಲ ಸೌದೆ ತುಂಡುಗಳನ್ನು ತಂದು ಕೊಟ್ಟಂತೆಲ್ಲ ಚಿಕ್ಕಪ್ಪ ತುಂಬಿದರು. ಗಾಡಿ ಭರ್ತಿಯಾದ ಮೇಲೆ ಎತ್ತುಗಳನ್ನು ಹೂಡಿದರು. ಚಿಕ್ಕಪ್ಪ ಗಾಡಿಯ ಮೂಕಿಯ ಮೇಲೆ ನೆಗೆದು ಕುಳಿತರು. ನಾವೆಲ್ಲ ಸೌದೆತುಂಡುಗಳ ಮೇಲೆ ವಾನರರಾಗಿದ್ದೆವು. ಗಾಡಿಯ ಚಕ್ರ ಎರಡು ಮೂರು ಉರುಳು ಉರುಳಿತ್ತೋ ಇಲ್ಲವೋ ಒಂದು ಎತ್ತು ಕಣಿ ಹಾಕಿಕೊಂಡಿತು. ಕಣಿ ಹಾಕುವುದು ಎಂದರೆ ಗಾಡಿ ಎಳೆಯಲಿರುವ ಎತ್ತು ತನ್ನ ಹೆಗಲ ಮೇಲಿದ್ದ ನೊಗವನ್ನು ಕೆಳಗೆ ಜಾರಿಸಿ ಅಡ್ಡ ನಿಲ್ಲು ವುದು.ಸಾಮಾನ್ಯವಾಗಿ ಗಾಡಿಗಳಿಗೆ ತುಂಬಿದ ವಸ್ತುಗಳು ಸರಿಸಮನಾಗಿರದೆ ಹಿಂದೆಯೋ ಮುಂದೆಯೋ ಅತಿಯಾಗಿ ಹಿಂಭಾರ ಅಥವಾ ಮುಂಭಾರವಾದರೆ ಎಳೆಯಲು ಬಿಗಿ ಸಿಗದೆ ಎತ್ತುಗಳು ಹೀಗೆ ಮಾಡುವುದುಂಟು. ಚಿಕ್ಕಪ್ಪನವರೂ ಹಾಗೇನೋ ಆಗಿರ ಬಹುದೆಂದೇ ಭಾವಿಸಿ ಮತ್ತೆ ನೊಗವನ್ನು ಎತ್ತಿನ ಕೊರಳಿಗಿರಿಸಿ ಮೈಮುಟ್ಟಿ ನಪ್ಪರಿಸು

ಹುರಿದುಂಬಿಸಿದರು. ಇಲ್ಲ ಅದು ಮತ್ತೆ ಕಣಿ ಹಾಕಿತು. ಚಿಕ್ಕಪ್ಪ ಹಿಂಭಾರ ಮುಂಭಾರ ನೋಡಿದರು. ಅದು ಸರಿಯಾಗಿತ್ತು. ಮತ್ತೆ ಹೆಗಲಿಗೆ ನೊಗ ಏರಿಸಿ ನೋಡಿದರು ಅದು ಮತ್ತೆ ಕಣಿ ಹಾಕಿತು. ಚಿಕ್ಕಪ್ಪನವರಿಗೆ ಅದು ಕಳ್ಳೆತ್ತಿರಬೇಕೆಂಬ ಅನುಮಾನ ಉಂಟಾಯಿತು. ದಾರಿಯ ಪಕ್ಕದಲ್ಲಿದ್ದ ಹೊಂಗೆ ಮರದಿಂದ ಒಳ್ಳೆ ಉದ್ದಕ್ಕಿದ್ದ ಬೆರಳು ಗಾತ್ರದ ಸೆಬ್ಬೆಯೊಂದನ್ನು ಮುರಿದುಕೊಂಡರು. ಮತ್ತೆ ಎತ್ತಿನ ಕೊರಳಿಗೆ ನೊಗ ಇಟ್ಟು ಹೊಂಗೆ ಸೆಬ್ಬೆಯಿಂದ ಎರಡು ಕೊಟ್ಟರು. ಎತ್ತು ಎಳೆಯುವಂತೆ ಕೊಸರಾಡಿತು. ಬೆನ್ನಮೇಲೆ ಮತ್ತೆರಡು ಬಿದ್ದವು. ಎತ್ತು ತನ್ನ ಕೊನೆಯ ಅಸ್ತ್ರ ಪ್ರಯೋಗಿಸಿತು. ದೊಪಕ್ ಎಂದು ಮಲಗಿ ಬಿಟ್ಟಿತು ಈಗಿನ ಸರ್ಕಾರಿ ನೌಕರರು, ಅಧ್ಯಾಪಕರು, ವಿದ್ಯಾರ್ಥಿಗಳು ದಿಡೀರ್ ಧರಣಿ ನಡೆಸುತ್ತಾರಲ್ಲ ಹಾಗೆ. ಎಷ್ಟೇ ಹೊಡೆದರೂ ಬಾಲ ಮುರಿದರೂ ಅದು ಜಪ್ಪಯ್ಯ ಅನ್ನಲಿಲ್ಲ. ಅಕ್ಕಪಕ್ಕದವರೆಲ್ಲಾ ಬಂದು ಸೇರಿದರು. ಸರಿಯಾಗಿದೆ ಎಂದು ಕೊಟ್ಟ ಯಂತ್ರವೊಂದು ಬರುವ ದಾರಿಯಲ್ಲೇ ಕೆಟ್ಟು ನಿಂತಾಗ ಅದನ್ನು ತಯಾರಿಸಿದವನು, ಮಾರಿದವನ ಮೇಲೆ ಕೊಂಡವನಿಗೆ ಎಂತಹ ಕೋಪ ಬರುತ್ತದೆಂದರೆ ಅವರಲ್ಲಿ ಯಾರಾದರೊಬ್ಬ ಆ ಕ್ಷಣದಲ್ಲಿ ಎದುರಾದರೆ ಅವರ ಮುಖದ ಮೇಲೆ ಹೊಸೆದು ಬಿಡುತ್ತಾನೆ. ನಮ್ಮ ಚಿಕ್ಕಪ್ಪನಿಗೆ ಎತ್ತುಗಳನ್ನು ತಂದ ನನ್ನ ತಂದೆಯ ಮೇಲೆ ಅಂತಹ ಕೋಪ ಬಂದಿತ್ತೆಂದು ಕಾಣುತ್ತದೆ. ಅಪಮಾನದಿಂದ ಸುತ್ತಲೂ ನೋಡಿದರು. ಬಡಪಾಯಿ ನಾನು ನಮ್ಮಪ್ಪನ ಪ್ರತಿನಿಧಿಯಾಗಿ ಕಂಡೆನೇನೋ "ಲೋ ನಿಮ್ಮಪ್ಪ ಕುಂಕುಮದ ಮೇಲೆ ಇಭೂತಿ ಇಟ್ಕಂಡು ತಂದನಲ್ಲೊ ಇವ." ಎಂದವರೆ ಹೊಂಗೆ ಸೆಬ್ಬೆಯಿಂದ ನನಗೇ ಒಂದು ಬಿಟ್ಟರು. ತೋಳ ನೀನೋ ನಿಮ್ಮಪ್ಪನೋ ಬೈದಿರಬೇಕು ಎಂದು ಕುರಿಮರಿ ತಿನ್ನಲು ಕಾರಣ ಹುಡುಕಿದಂತೆ. ನಾನು ಅಯ್ಯೋ ಅಪ್ಪ ಕೆಟ್ಟೆನೋ ಎಂದು ಮನೆಗೆ ಓಡಿಹೋಗಿ ತಾಯಿಯ ಮರೆ ಹೊಕ್ಕೆ.

ನನ್ನ ತಂದೆ ಸ್ವಲ್ಪ ಅಧ್ಯಾತ್ಮವಾದಿ. ಇದು ನಮ್ಮ ವಂಶದಲ್ಲಿ ನಡೆದು ಬಂದುದು. ಆಗಿನ ಕಾಲದ ಹಳ್ಳಿಯ ಜೀವನ ರೀತಿಗೆ ವಿರುದ್ಧವೋ ಎಂಬಂತೆ ಅವರು ದಿನಾ ಸ್ನಾನ ಮಾಡಿ ಮಡಿಯುಟ್ಟು ಹಣೆಗೆ ನರಸಿಂಹನ ಕುಂಕುಮ, ಭೈರವನ ವಿಭೂತಿ ಎರಡನ್ನು ಇಡುತ್ತಿದ್ದರು. ನಾವು ಒಕ್ಕಲಿಗರ ರೀತಿಯೇ ಹಾಗೆ. ಸರ್ವಧರ್ಮ ಸಮನ್ವಯದ ಜನ. ಆಮೇಲೆ ಪುರಾಣ ಪುಣ್ಯಕಥೆ ನ್ಯಾಯ ತೀರ್ಮಾನ ಇತ್ಯಾದಿ ಇತ್ಯಾದಿ. ತಾವು ತಂದ ಎತ್ತುಗಳಲ್ಲಿ ಒಂದು ಕಳ್ಳೆತ್ತೆಂದೂ ಆ ಬಗ್ಗೆ ಚಿಕ್ಕಪ್ಪ ಕುಪಿತರಾಗಿರುವ ವಿಚಾರ ತಂದೆಯವರಿಗೆ ವರದಿಯಾಯಿತು, ತಾಯಿಯುವರಿಂದ. ತಂದೆಯುವರು ಬೇರೆಯವರ ಎತ್ತು ಕಳಿಸಿ ಗಾಡಿ ಎಳೆತರಿಸಿದರು. ಆ ನಂತರ ಆ ಎತ್ತುಗಳನ್ನು ಹೋದಷ್ಟಕ್ಕೆ ಬಿಸಾಕಿ ತಮಗೆ ಇಷ್ಟವಾದ ಎತ್ತುಗಳನ್ನು ತರುವಂತೆ ತಮ್ಮನಿಗೆ ಹೇಳಿ ಈ ಪರಿಸ್ಥಿತಿಯಿಂದ ಪಾರಾದರು.

ಚಿಕ್ಕಪ್ಪ ಎತ್ತುಗಳನ್ನು ಬಹಳ ಚೆನ್ನಾಗಿ ಮೇಯಿಸಿದರು. ಜೋಳದ ಕಡ್ಡಿ ಹುಳ್ಳಿಕಾಯಿ ತಿಂದ ಎತ್ತುಗಳು ಮೈತುಂಬಿ ಮಿಂಚುತ್ತಿದ್ದವು. ನೊಣ ಕೂತರೆ ಜಾರುವಂತಿದ್ದವು. ಸರಿ ಜಾತ್ರೆಗೆ ಹೊಡೆದುಕೊಂಡು ಹೋದರು. ಇವರಂತೆಯೇ ಜೋಡಿ ಸರಿಯಿಲ್ಲದೆ ಮಾರಲು ಬಂದಿದ್ದ ಜೋಡಿಯೊಂದನ್ನ ಕಂಡರು. ಸರಿ ತಮ್ಮ ಕಳ್ಳ ಎತ್ತನ್ನು ಅವನಿಗೆ ರವಾನಿಸಿ ಅವನ ಒಳ್ಳೆಯ ಎತ್ತನ್ನು ಪಡೆದು ಊರಿಗೆ ಬಂದರು. ಆದರೂ ಅವರಿಗೆ ತಾನು ಮೋಸ ಮಾಡಿದೆನೆಂಬ ಅಳುಕು ಕೊರೆಯುತ್ತಲೇ ಇತ್ತಂತೆ. ಆದರೆ ಈಗ ಮೋಸ ಹೋದವನು ಹಿಂದೆ ಯಾರಿಗೋ ಮೋಸ ಮಾಡಿರಬೇಕೆಂದೂ ಆದುದರಿಂದ ನಿನಗೆ ಯಾವುದೇ ತೊಂದರೆ ಇಲ್ಲವೆಂದು ಹಿರಿಯರು ಹೇಳಿದರಂತೆ.

ನಾನು ಕಂಡು ಕೇಳಿದಂತೆ ನನ್ನ ಪೂರ್ವಿಕರು ತಾವು ಬದುಕುವ ಸಮಾಜಕ್ಕೆ ಅಂಜಿ ಬದುಕಿದವರು. ದೇವರು ಧರ್ಮದ ವಿಚಾರಗಳಲ್ಲಿ ಸ್ವಲ್ಪ ಅಂಧಶ್ರದ್ಧೆ ಎನ್ನಬಹುದಾದಷ್ಟೇ ನಿಷ್ಠರಾಗಿದ್ದವರು. ತೊಂದರೆಯಲ್ಲಿರುವವರಿಗೆ ತಮ್ಮ ಕೈಲಾದ ಸಹಾಯ ಮಾಡಿದವರು. ಈ ಅವರ ಒಳ್ಳೆಯ ರೀತಿ ನೀತಿಯೇ ನಮ್ಮ ತಲೆ ಕಾಯ್ದುಕೊಂಡು ಬಂದಿದೆಯೆಂದು ಇಂದಿನ ಸಾಮಾಜಿಕ ಕವಲುದಾರಿಗಳನ್ನು ಕಾಣುತ್ತಿರುವ ನನಗೆ ಅನ್ನಿಸುತ್ತದೆ.

೨

ನಾನು ಜನ್ಮತಳೆದದ್ದು ಹಳ್ಳಿಯೂ ಅಲ್ಲ ಗ್ರಾಮವಂತೂ ಅಲ್ಲವೇ ಅಲ್ಲ. ಅದೊಂದು ಕೊಪ್ಪಲು. ಕೊಪ್ಪಲು ಎಂದರೆ ಒಂದು ಪ್ರಧಾನ ಊರಿನಿಂದ ಸಿಡಿದುಹೋಗಿ ತಮ್ಮ ಜಮೀನುಗಳ ಹತ್ತಿರದಲ್ಲೋ ಅನತಿ ದೂರದ ಬೇರೊಂದು ಜಾಗದಲ್ಲಿಯೋ ಮನೆ ಕಟ್ಟಿ ವಾಸಿಸುವ ವ್ಯಕ್ತಿಯ ಹೆಸರಲ್ಲೇ ಕರೆಯುವಂಥವು. ಅದು ಕ್ರಮೇಣವಾಗಿ ಆ ವ್ಯಕ್ತಿಯ ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳಾಗಿ ಬೆಳೆದು ಊರುಗಳಾದ ಉದಾಹರಣೆಯೂ ಉಂಟು. ಅಂತಹ ಒಂದು ಕೊಪ್ಪಲು ಕೆಂಚೇಗೌಡನ ಕೊಪ್ಪಲು ನನ್ನ ತಾಯಿಯ ತೌರು. ಪ್ರಾಯಃ ಕೆಂಚೇಗೌಡ ಎಂಬುವನು ಮೊದಲು ಇಲ್ಲಿ ತರಗು ಗುಡಿಸಿ ಮನೆ ಕಟ್ಟಿದವನಿರಬೇಕು. ನಾನು ಈ ಭೂಮಿಗೆ ಅವತರಿಸುವಷ್ಟರಲ್ಲಿ ಅದು ಏಳು ಮನೆಯ ಊರಾಗಿತ್ತಂತೆ. 1916 ನೆಯ ಇಸವಿ ಜೂನ್ 19 ನೆಯ ದಿನ ಉತ್ತರಾಷಾಢ ನಕ್ಷತ್ರ ಮಕರ ರಾಶಿಯಲ್ಲಿ ನಾನು ಈ ಭೂಮಿಗೆ ಬಂದೆನೆಂದು ಆಗ ಜೋಯಿಸರಿಂದ ಬರೆಯಿಸಿದ ನನ್ನ ಜನ್ಮ ಕುಂಡಲಿ ಹೇಳುತ್ತದೆ.

ಆ ಕಾಲದಲ್ಲಿ ನಮ್ಮ ತಾತ, ಅಮ್ಮ ಪುರೋಹಿತರನ್ನು ಸಾಕ್ಷಾತ್ ದೇವರೆಂದೇ ಪರಿಗಣಿಸುತ್ತಿದ್ದರಂತೆ. ಆಕಸ್ಮಿಕವಾಗಿ ಪುರೋಹಿತರೇನಾದರೂ ಊರಿಗೆ ಬಂದರೆ ದೀಪಾವಳಿಗೆ ಅಳಿಯ ಬಂದ ಸಡಗರಕ್ಕಿಂತ ಮಿಗಿಲಾಗಿ ತಾತನ ಮನೆಯವರು ಸಡಗರ ಪಡುತ್ತಿದ್ದರಂತೆ. ತಮ್ಮ ತೆಂಗಿನ ತೋಟದಲ್ಲಿ ಸಕಲ ಸರಂಜಾಮುಗಳನ್ನಿತ್ತು ಅವರಿಂದ ಇಷ್ಟ ಭೋಜನವಾದ ಮೇಲೆ ಉಳಿದುದನ್ನು ಅವರು ಮನೆಯವರಿಗೆಲ್ಲಾ ತಮ್ಮ ಕೈಯೆಲ್ಲಾದರೂ ತಾಕಿ ಮೈಲಿಗೆಯಾದೀತೆಂದು ನಾವು ನಾಯಿಗಳಿಗೆ ಹಾಕಿದ ಹಾಗೆ ಎತ್ತಿ ಹಾಕಿದ್ದನ್ನು ಇವರು ಮಹಾಪ್ರಸಾದವೆಂದು ಸ್ವೀಕರಿಸುತ್ತಿದ್ದರಂತೆ. ಈ ಪುರೋಹಿತರು ಮೇಲುಕೋಟೆಯಿಂದ ಬರುತ್ತಿದ್ದರು. ನಾವು ನರಸಿಂಹ ದೇವರ ಒಕ್ಕಲಾದುದರಿಂದ ಇವರನ್ನು ಕುಲಗುರುಗಳೆಂದು ಭಾವಿಸಲಾಗುತ್ತಿತ್ತು. ಊರಿನ ಪ್ರತಿ ಮನೆಯವರೂ ಒಂದೊಂದು ದಿನ ಇವರಿಗೆ ಬೇಕಾದುದನ್ನೆಲ್ಲಾ ಒದಗಿಸುತ್ತಿದ್ದರು. ಅದು ಸಮೃದ್ಧಿಯ ಕಾಲ. ಮಳೆ ಬೆಳೆ ಚನ್ನಾಗಿ ಆಗುತ್ತಿದ್ದ ಕಾಲ. ಈ ದಿನನಿತ್ಯದ ಸಮಾರಾಧನೆಯೊಂದಿಗೆ ಅವರಿಗೆ ಭತ್ತ, ಎಳ್ಳು, ಹುಚ್ಚೆಳ್ಳು, ಅವರೆ, ಹಲಸಂದೆ ಮುಂತಾಗಿ ಒಂದು ವರ್ಷಕ್ಕೆ ಆಗುವಷ್ಟು ದವಸ ಧಾನ್ಯಗಳನ್ನು ಸಂಗ್ರಹಿ ಕೊಡುತ್ತಿದ್ದರು. ರಾಗಿಯನ್ನು ಮಾತ್ರ ಇವರು ಮುಟ್ಟುತ್ತಿರಲ್ಲಿಲ್ಲ ಅದು ಶೂದ್ರರ ಆಹಾರವಲ್ಲವೆ ? ಹೀಗೆ ಸಂಗ್ರಹಿಸಿದ ದವಸ ಧಾನ್ಯಗಳನ್ನು ತುಂಬಿದ ಸಾಲು ಗಾಡಿಗಳು ಹೊರಡುತ್ತಿದ್ದವು. ಹಳ್ಳಿಯ ಹೆಂಗಸರು ಮಕ್ಕಳೆಲ್ಲರೂ ಅವರಿಗೆ ಅಡ್ಡ ಬಿದ್ದು ಆಶೀರ್ವಾದ ಪಡೆಯು ತ್ತಿದ್ದರು. ಊರಿನ ಮುಖಂಡರು, ಹಿರಿಯರು ನಾಗಮಂಗಲದವರೆಗೆ ಗಾಡಿಗಳ

ಜೊತೆಯಲ್ಲಿ ಹೋಗಿ ಅಲ್ಲಿನ ಹೊರ ಉಕ್ಕಡದ ಹತ್ತಿರ ಸಾಲಾಗಿ ನಿಂತು ಅವರನ್ನು ಬೀಳ್ಕೊಳ್ಳುವ ದೃಶ್ಯ ಯಾರನ್ನೂ ದಿಗ್ಭ್ರಾಂತರನ್ನಾಗಿಸುತ್ತಿತ್ತು. ಇದನ್ನೆಲ್ಲಾ ಈಗ ನೆನೆಸಿಕೊಂಡರೆ ನಮ್ಮ ಜನ ಎಂತೆಂತಹವರ ಶೋಷಣೆಗೆ ಗುರಿಯಾಗಿ ಮೂಢನಂಬಿಕೆಗಳ ಹೊರೆ ಹೊತ್ತು ನರಳಿದ್ದಾರೆಂದು ಸಂಕಟವಾಗುತ್ತದೆ, ಸಿಟ್ಟೂ ಬರುತ್ತದೆ.

ಒಂದು ಕಡೆ ಪುರೋಹಿತರು, ಜ್ಯೋತಿಷಿಗಳು ಮುಂತಾದ ಮೇಲುವರ್ಗದವರ ಶೋಷಣೆ ಅವ್ಯಾಹತವಾಗಿ ನಡೆಯುತ್ತಿರುವಾಗಲೇ ಮತ್ತೊಂದು ಕಡೆ ಬೇರೆಲ್ಲಾ ಕೋಮುಗಳಿಗೂ ಗುರುಮಠಗಳಿವೆ. ಒಕ್ಕಲಿಗರಿಗೆ ಏಕಿಲ್ಲ ಎಂಬ ಜಿಜ್ಞಾಸೆಯೂ ನಡೆಯುತ್ತಿತ್ತು. ಇದಕ್ಕೆ ನಾಂದಿಯೋ ಎಂಬಂತೆ ಪಾಂಡವಪುರ ತಾಲ್ಲೂಕು ದರಸ ಗುಪ್ಪೆಯ ರಾಮಯ್ಯ ಎಂಬುವರು ಸಂಸಾರ ವಿಮುಕ್ತರಾಗಿ ಸನ್ಯಾಸ ಸ್ವೀಕರಿಸಿ ನಮ್ಮ ಊರು ಪಾಲಗ್ರಹಾರವನ್ನು ಕೇಂದ್ರವಾಗಿರಿಸಿಕೊಂಡು ಊರೂರಲ್ಲಿ ಒಕ್ಕಲಿಗರ ಸಂಘಟನೆಯ ಕೆಲಸ ಮಾಡುತ್ತಿದ್ದರು. ಅವರ ಜೊತೆಯಲ್ಲಿ ಕನಕಪುರದ ಅಹೋಬಲದಾಸರು, ನಾಗಮಂಗಲದ ತಾಲ್ಲೂಕು ನೆಲ್ಲೀಗೆರೆಯ ಲಕ್ಷ್ಮಯ್ಯನವರು ಸೇರಿ ಕೊಂಡಿದ್ದರು. ಈ ಮೂವರೂ ಜನರಲ್ಲಿ ತುಂಬಿಕೊಂಡಿದ್ದ ಮೂಢನಂಬಿಕೆಗಳನ್ನೂ ಹಳ್ಳಿಯ ಜನರು ಇತರ ಮೇಲು ವರ್ಗದವರಿಗಿಂತ ಯಾವುದರಲ್ಲಿಯೂ ಕೀಳಲ್ಲವೆಂದೂ ಶೂದ್ರವರ್ಗದ ಜನರಿಗೆ ತಿಳಿಯ ಹೇಳುತ್ತಿದ್ದರು. ಪಾಂಡವಪುರದ ಕುಂತೀ ಬೆಟ್ಟದಲ್ಲಿ ಭಾರತೀಸ್ವಾಮಿಗಳೆಂಬ ಸನ್ಯಾಸಿಗಳಿದ್ದರು. ಅವರು ಹುಟ್ಟಿನಿಂದ ಬ್ರಾಹ್ಮಣರು, ಆದರೆ ಅವರು ಶೂದ್ರ ಸಮುದಾಯವನ್ನು ಮೇಲೆತ್ತಲು ಕ್ರಾಂತಿಕಾರಕವಾಗಿ ಶ್ರಮಿಸು ತ್ತಿದ್ದರು. ಶೂದ್ರರು ಭಗವದ್ಗೀತಾದಿ ಪುರಾಣ ಪುಣ್ಯ ಕಥೆಗಳನ್ನು ಕೇಳಬಾರದು. ಓದಬಾರದು, ಅವರಿಗೆ ಸನ್ಯಾಸಿಯಾಗುವ ಅಧಿಕಾರವಿಲ್ಲವೆಂಬುದು ಸುಳ್ಳೆಂದೂ ಸ್ವಾರ್ಥಿ ಗಳ ವಾದವೆಂದೂ ಸುತ್ತಮುತ್ತಲಿನ ಜನರಿಗೆ ತಿಳಿಯ ಹೇಳುತ್ತಿದ್ದರು. ಅವರು ತಮ್ಮ ವಾದಕ್ಕೆ ವೈಜ್ಞಾನಿಕ ರೂಪಕೊಡಲು ದರಸಗುಪ್ಪೆಯ ರಾಮಯ್ಯನವರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಅವರು ತಮ್ಮಲ್ಲಿ ರಾಮಾಯಣ, ಭಾರತ, ಭಗವದ್ಗೀತಾದಿ ಪುರಾಣಗಳ ಭಂಡಾರವನ್ನೆ ಇಟ್ಟುಕೊಂಡು ಗ್ರಾಮ ಗ್ರಾಮಗಳಲ್ಲಿ ತಿರುಗಿ ಮಾನವರಲ್ಲಿ ಮೇಲು ಕೀಳೆಂಬುದು ಅವರು ಮಾಡುವ ಕೆಲಸಗಳಿಂದ ಬರುತ್ತದೆಯೇ ಹೊರತು ಹುಟ್ಟಿ ನಿಂದ ಅಲ್ಲ ಎಂದು ತಿಳಿಯ ಹೇಳುತ್ತಿದ್ದರು. ಇದರ ಪರಿಣಾಮವಾಗಿ ಭಾರತೀಸ್ವಾಮಿ ಗಳನ್ನು ಜಾತ್ಯಂಧರು ಕೊಲೆ ಮಾಡುವ ಯತ್ನವನ್ನೂ ಮಾಡಿದರು.

ಭಾರತೀಸ್ವಾಮಿಗಳಿಂದ ದೀಕ್ಷೆ ಪಡೆದ ಗುರು ರಾಮಯ್ಯನವರು ಅಹೋಬಲ ದಾಸರು ಮತ್ತು ಲಕ್ಷ್ಮಯ್ಯ ಅವರನ್ನು ಕೂಡಿಕೊಂಡು ಗ್ರಾಮಾಂತರ ಜನರಿಗೆ ಸರಿಯಾದ ತಿಳಿವಳಿಕೆಯನ್ನು ಕೊಡುತ್ತಿದ್ದರು. ಗುರು ರಾಮಯ್ಯನವರು ಒಕ್ಕಲಿಗರು, ಅಹೋಬಲದಾಸರು ಈಡಿಗರು, ಲಕ್ಷ್ಮಯ್ಯನವರು ವೈಷ್ಣವರು. ಈ ಮೂವರೂ ನಾಗಮಂಗಲ ತಾಲ್ಲೂಕಿನ ಸುತ್ತ ಮುತ್ತಲ ಹಳ್ಳಿಗಳಿಗೆ ಸಂಜೆಯ ಹೊತ್ತು ಭೇಟಿ

ನೀಡುವುದು, ಜನರು ತಮ್ಮ ಕೆಲಸಕಾರ್ಯ ಮುಗಿಸಿ ಊಟ ಮಾಡಿ ಊರ ಚಾವಡಿಯಲ್ಲೋ, ದೇವಾಲಯಗಳ ಮುಂದೋ ಸೇರುತ್ತಿದ್ದರು. ಈ ಮೂವರೂ ಧರ್ಮ, ಪುರಾಣ ಇವುಗಳ ನಿಜವಾದ ಅರ್ಥವನ್ನು ಜನರಿಗೆ ವಿವರಿಸುವುದರ ಮೂಲಕ ಅವುಗಳ ಬಗ್ಗೆ ಪುರೋಹಿತರು ಮೂಡಿಸಿದ್ದ ಅವೈಜ್ಞಾನಿಕ ನಂಬಿಕೆಗಳನ್ನು ಹೋಗಲಾಡಿಸಲು ಯತ್ನಿಸುತ್ತಿದ್ದರು. ತಲೆತಲಾಂತರದಿಂದ ಪುರೋಹಿತರು ಹೇಳಿದ್ದನ್ನು ತಮ್ಮ ಮೆದುಳಿನ ಆಳಕ್ಕೆ ಇಳಿಸಿದ್ದ ಜನರು ಅಷ್ಟು ಸುಲಭವಾಗಿ ಇವರ ಮಾತುಗಳನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲವಾದರೂ ಅವರ ಮನಸ್ಸಿನಲ್ಲಿ ಹೀಗೂ ಉಂಟೆ ಎಂಬ ಭಾವನೆ ಮೂಡುತ್ತಿತ್ತು. ಪರಿವರ್ತನೆಯ ಬೀಜ ಮೊಳೆಯಲು ಅಷ್ಟುಸಾಕು. ಕೆಲವರು ಈ ಮೂವರ ಮಾತುಗಳನ್ನು ಕೇಳಿ ಪರಿವರ್ತಿತರಾಗಿ ಪುರೋಹಿತರ ಹಿಡಿತದಿಂದ ಪಾರಾದುದೂ ಉಂಟು. ಇಂತಹ ಬೋಧನೆಗಳು ರಾತ್ರಿ ಒಂಬತ್ತು ಗಂಟೆಯವರೆಗೂ ನಡೆಯುತ್ತಿದ್ದವು. ಪ್ರತಿ ಶನಿವಾರ ಈ ಮೂವರೂ ಕತ್ತಿಗೆ ಹಾರ್ಮೋನಿಯಂ ನೇತು ಹಾಕಿಕೊಂಡು ಭಜನೆ ಮಾಡುತ್ತ ಊರಿನ ಬೀದಿಗಳಲ್ಲಿ ಹೋಗುತ್ತಿದ್ದರು. ಜನರು ಅವರು ಹಿಡಿದುಕೊಂಡು ಹೋಗುತ್ತಿದ್ದ ದೀಪದಲ್ಲಿ ಆರುಕಾಸು ಮೂರುಕಾಸು ಹಾಕುತ್ತಿದ್ದರು. ಈ ಕಾಸು ಹಾಕಿದ ದೀಪವನ್ನು ಬೀಗಹಾಕದ ರಾಮಮಂದಿರದಲ್ಲಿ ಇಡುತ್ತಿದ್ದರು. ಎಷ್ಟೋ ದಿನಗಳಾದರೂ ಈ ಕಾಸುಗಳನ್ನು ಯಾರೂ ಮುಟ್ಟುತ್ತಿರಲಿಲ್ಲ. ಇಂತಹ ಎಷ್ಟೋ ಸಂಗತಿಗಳನ್ನು ಈಗಿನ ಕಾಲಕ್ಕೆ ಹೋಲಿಸಬಹುದೆ ? ಓದುಗರಿಗೆ, ಬಿಡುತ್ತೇನೆ.

ಈ ರೀತಿಯ ಪ್ರಚಾರಗಳಿಂದಾಗಿ ಒಕ್ಕಲಿಗರು ಮತವೊಂದರ ಬಗ್ಗೆ ಯೋಚಿಸುವಂತಾಯಿತು. ಒಂದು ಕಾಲದಲ್ಲಿ ಅತ್ಯಂತ ಪ್ರಬುದ್ಧವಾಗಿದ್ದ ಒಕ್ಕಲಿಗರು ಕಾಲಕ್ರಮೇಣ ತಮ್ಮ ಬದುಕನ್ನು ಹಳ್ಳಿಗಳಿಗೇ ಸೀಮಿತಗೊಳಿಸಿಕೊಂಡು ಅನಕ್ಷರತೆ. ಮೂಢನಂಬಿಕೆಗಳಿಂದ ತುಂಬಿ ಹೋಗಿದ್ದರು. ನಾಗಮಂಗಲ ತಾಲ್ಲೂಕಿನಲ್ಲಿರುವ ಶ್ರೀ ಆದಿಚುಂಚನಗಿರಿಯು ಒಕ್ಕಲಿಗರ ಮಠವಾಗಿದ್ದು ಮಧ್ಯೆ ಕೈತಪ್ಪಿ ಹೋಗಿರುವ ಸಂಗತಿ ಬೆಳಕಿಗೆ ಬಂದಿತು. ಇದರಿಂದಾಗಿ ಅನೇಕ ಒಕ್ಕಲಿಗ ಮುಖಂಡರು ಶ್ರೀ ಕೆ. ಎಚ್. ರಾಮಯ್ಯನವರ ಮುಂದಾಳುತನದಲ್ಲಿ ನಾಗಮಂಗಲದ ಪ್ರವಾಸಿಮಂದಿರದಲ್ಲಿ ಸೇರಿ ಚರ್ಚೆಯಲ್ಲಿ ಪಾಲುಗೊಳ್ಳುತ್ತಿದ್ದರು. ಈ ಸಭೆಯಲ್ಲಿ ರಾವ್‌ಬಹದ್ದೂರ್ ಚನ್ನಯ್ಯ, ಬ್ಯಾರಿಸ್ಟರ್ ನಾಗಪ್ಪ, ವಿಜಯದೇವ, ಕಾಂತರಾಜಪುರದ ನಂಜಪ್ಪನವರು ರಾಮನಗರದ ಟಿ. ಮಾದಯ್ಯಗೌಡರು, ಮದ್ದೂರಿನ ಎಂ. ಸಿ. ಲಿಂಗೇಗೌಡರು, ಎಸ್. ಸಿ. ಮಲ್ಲಯ್ಯನವರು, ಇಂಡುವಾಳು ಹೊನ್ನಯ್ಯನವರು, ಕ್ಯಾತನಹಳ್ಳಿಯ ಮಾಸ್ಟರ್ ಕೆಂಗೇಗೌಡರು, ತಲಕಾಡು ಮಾಯಿಗೌಡರು, ಅಕ್ಕಿ ಹೆಬ್ಬಾಳಿನ ಲಿಂಗೇಗೌಡರು, ಮಡುವಿನಕೋಡಿ ಸಿದ್ದೇಗೌಡರು, ಎಚ್. ಕೆ. ವೀರಣ್ಣಗೌಡರು, ಎಚ್. ಸಿ. ದಾಸಪ್ಪನವರು, ನೀಲಗಿರಿ ಸಂಜೀವೇಗೌಡರು, ಕಡಬದ ಹುಚ್ಚೇಗೌಡರು, ಬೆಂಗಳೂರಿನ

ಚಿಕ್ಕವೀರಪ್ಪನವರಾದಿಯಾಗಿ ಅನೇಕ ಮಹನೀಯರು ಗಣನೀಯ ಸಂಖ್ಯೆಯಲ್ಲಿ ಸೇರುತ್ತಿದ್ದರು.

ನಮ್ಮೂರು ಪಾಲಗ್ರಹಾರ ಈ ಪ್ರವಾಸಮಂದಿರದಿಂದ ಕೇವಲ ಒಂದು ಮೈಲಿ ದೂರವೆಂದು ಹಿಂದೆಯೇ ಹೇಳಿದ್ದೇನೆ. ಈ ಸಭೆಗೆ ಬರುತ್ತಿದ್ದ ಮುಖಂಡರೆಲ್ಲ ಪಾಲಗ್ರಹಾರವನ್ನೇ ತಮ್ಮ ತಂಗುದಾಣವನ್ನಾಗಿ ಮಾಡಿಕೊಂಡಿದ್ದರು. ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ಮುಗಿಸಿ, ಉಪಾಹಾರ ಸ್ವೀಕರಿಸಿ ಪ್ರವಾಸಿಮಂದಿರಕ್ಕೆ ತೆರಳುತ್ತಿದ್ದರು. ಆ ಭಾರಿ ಭಾರಿ ಜನರನ್ನು ನೋಡುವುದೆ ಮಕ್ಕಳಿಗೆ, ಹೆಂಗಸರಿಗೆ, ಮುದುಕರಾದವರಿಗೆ ಒಂದು ವೈಭೋಗ. ಮಾತಿನಲ್ಲಿ, ಬಣ್ಣದಲ್ಲಿ, ವಿದ್ಯೆಯಲ್ಲಿ ಬ್ರಾಹ್ಮಣರನ್ನು ಮೀರಿಸುತ್ತಿದ್ದ ಆ ನಾಯಕರ ಬಗ್ಗೆ ಜನರಿಗೆ ಎಲ್ಲಿಲ್ಲದ ಗೌರವ ಭಯಭಕ್ತಿಗಳು. ಆ ಸಭೆಗಳಲ್ಲಿ ಹಿಂದುಳಿದವರ ಏಳಿಗೆಯ ಬಗ್ಗೆ ಚರ್ಚೆಯಾಗುತ್ತಿತ್ತು. ಆ ಸಂದರ್ಭಗಳಲ್ಲಿ ಬ್ರಾಹಣರು ಹೇಗೆ ಹಿಂದುಳಿದವರ ಪ್ರಗತಿಗೆ ಅಡ್ಡಿಯಾಗಿದ್ದರೆಂಬ ಟೀಕೆಗಳೂ ಬರುತ್ತಿದ್ದವು. ಈ ಸಭೆಗಳಲ್ಲಿ ಪಾಲುಗೊಳ್ಳುತ್ತಿದ್ದ ಗ್ರಾಮಾಂತರ ಯುವಕರ ಮನಸ್ಸಿನಲ್ಲಿ ಬ್ರಾಹ್ಮಣರ ವಿರುದ್ಧ ಕಟುಭಾವನೆಯ ಕಿಡಿಗಳು ಸಹಜವಾಗಿಯೇ ಮೂಡುತ್ತಿದ್ದವು.

ಈ ಎಲ್ಲದರ ಫಲವಾಗಿ ಮೈಸೂರು ಸಂಸ್ಥಾನದ ಒಕ್ಕಲಿಗರ ಮಹಾಸಮ್ಮೇಳನವನ್ನು ಕೆ.ಎಚ್.ರಾಮಯ್ಯನವರ ಅಧ್ಯಕ್ಷತೆಯಲ್ಲಿ ನಮ್ಮ ಊರಿನಲ್ಲಿ ಕರೆಯಲಾಯಿತು. ಈ ಸಮ್ಮೇಳನದ ಅನೇಕ ತೀರ್ಮಾನಗಳಲ್ಲಿ ಬಹಳ ಮುಖ್ಯವಾದುದು ಗ್ರಾಮಾಂತರದ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ್ದು. ಒಕ್ಕಲಿಗರು ತಮ್ಮ ತಮ್ಮ ಹಳ್ಳಿಗಳಲ್ಲಿ ಕಡೆಯ ಪಕ್ಷ ಕೂಲಿಮಠವನ್ನಾದರೂ ಮಾಡಿಕೊಂಡು ಮಕ್ಕಳಿಗೆ ಶಿಕ್ಷಣ ಕೊಡಿಸಬೇಕು. ಅವರು ಓದಲು ಬರೆಯಲು ಕಲಿತರೆ ಪಟ್ಟಭದ್ರ ಹಿತಾಸಕ್ತರ ಕಪಿಮುಷ್ಟಿಯಿಂದ ಪಾರಾಗುವ ಯತ್ನವನ್ನಾದರೂ ಮಾಡುತ್ತಾರೆ. ಆದುದರಿಂದ ತಂದೆ ತಾಯಿಯರು ತಮ್ಮ ಮಕ್ಕಳ ಶಿಕ್ಷಣಕ್ಕೆ ಆದ್ಯಗಮನ ಕೊಡಬೇಕು. ಮುಖಂಡರು, ಸಾಕಷ್ಟು ಸಂಪಾದನೆ ಇರುವವರು ತಾಲ್ಲೂಕು ಕೇಂದ್ರಗಳಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿಸಲು ಸಹಕರಿಸಬೇಕು. ಹೀಗೆ ಒಕ್ಕಲಿಗರು ಆರಂಭಿಸುವ ಇಂತಹ ವಿದ್ಯಾರ್ಥಿನಿಲಯಗಳಿಗೆ ಕಾಂತರಾಜ ಪುರದ ನಂಜಪ್ಪನವರು ಉಚಿತವಾಗಿ ಪಾತ್ರೆಗಳನ್ನು ಒದಗಿಸುವುದಾಗಿ ಸಭೆಯಲ್ಲಿ ಪ್ರಕಟಿಸಿದರು. ಬೆಂಗಳೂರಿನ ಚಿಕ್ಕವೀರಪ್ಪನವರು ವಿದ್ಯುತ್ ಇರುವಕಡೆ ಒಕ್ಕಲಿಗರ ವಿದ್ಯಾರ್ಥಿನಿಲಯಗಳಿಗೆ ಉಚಿತವಾಗಿ ವಿದ್ಯುತ್ ಸಂಪರ್ಕ ಮಾಡಿಸಿ ಕೊಡಲು ಒಪ್ಪಿದರು.

ಈ ಸಮ್ಮೇಳನ ಗ್ರಾಮಾಂತರ ಶಿಕ್ಷಣ ಮತ್ತು ಪರಸ್ಪರ ಸಹಕಾರ ಸಂಘಗಳ ಸ್ಥಾಪನೆಯ ಚಳುವಳಿಗೆ ನಾಂದಿಯಾಯಿತೆಂದು ಹೇಳಬಹುದು. ಶ್ರೀ ಕೆ. ಎಚ್. ರಾಮಯ್ಯನವರು ಹೊರ ದೇಶಗಳಿಗೆ ಹೋಗಿ ಬಾರಟ್ಲಾ ಮಾಡಿದುದರ ಜೊತೆಗೆ ಸಹಕಾರ ವಿದ್ಯೆಯ ವ್ಯಾಸಂಗವನ್ನೂ ಮಾಡಿಕೊಂಡು ಬಂದವರಾಗಿದ್ದರು. ಪ್ರಪ್ರಥಮ

ವಾಗಿ ಚನ್ನಪಟ್ಟಣದ ಹತ್ತಿರವಿರುವ ಬೈರಾಪಟ್ಟಣದಲ್ಲಿ ಸಹಕಾರ ಸಂಘವೊಂದನ್ನು ಸ್ಥಾಪಿಸಿದರು. ಎರಡನೆಯದು ಶ್ರೀರಾಮದೇವರ ಪರಸ್ಪರ ಸಹಾಯಕ ಸಂಘ ನಮ್ಮ ಊರು ಪಾಲಗ್ರಹಾರದಲ್ಲಿ ಆರಂಭವಾಯಿತು. ಈ ಸಂಘದ ಕಾರ್ಯದರ್ಶಿ ಅಧ್ಯಕ್ಷರಾಗಿ ನನ್ನ ತಂದೆ ನರಸೇಗೌಡರು ಸುಮಾರು ನಲವತ್ತು ವರ್ಷಗಳ ಕಾಲ ದುಡಿದರು. ಅವರು ಅನಕ್ಷರಸ್ಥರು, ಈ ನಾಯಕರ ಪ್ರೇರಣೆಯ ಫಲವಾಗಿ ನರಸೇಗೌಡ ಎಂದು ರುಜು ಮಾಡುವುದನ್ನು ಮಗನಾದ ನನ್ನಿಂದ ಕಲಿತುಕೊಂಡರು ಎಂದರೆ ಈ ಒಕ್ಕಲಿಗರ ಸಮ್ಮೇಳನದ ಪ್ರಭಾವ ಯಾರಿಗಾದರೂ ಅರ್ಥವಾದೀತು.

ಸಹಕಾರ ಸಂಘವನ್ನು ಉದ್ಘಾಟಿಸುತ್ತಾ ಕೆ. ಎಚ್. ರಾಮಯ್ಯನವರು ಮಾಡಿದ ಭಾಷಣ ಕ್ರಾಂತಿಕಾರಕವಾಗಿತ್ತು. "ಜಗದ ಜನರ ಪರಸ್ಪರ ಸಹಕಾರವೊಂದೇ ರಾಷ್ಟ್ರ ರಾಷ್ಟ್ರಗಳ ಮಧ್ಯೆಯ ಪೈಪೋಟಿಯನ್ನು ಯುದ್ಧದಾಹವನ್ನು ರಕ್ತರಹಿತ ಕ್ರಾಂತಿ ಯಿಂದ ರಕ್ಷಿಸಬಲ್ಲದು, ನಮ್ಮದು ಬೇಸಾಯ ಮತ್ತು ಪಶುಸಂಗೋಪನೆಯನ್ನು ಅವಲಂಬಿಸಿದ ದೇಶ. ಇಂತಹ ದೇಶವೊಂದಕ್ಕೆ ಸಹಕಾರ ನೀತಿ ಪ್ರಮುಖವಾದ ತಿರುವು ನೀಡಬಲ್ಲದು. ಗ್ರಾಮಾಂತರದ ಜನರೆಲ್ಲರೂ ಜಾತಿ ಮತ ಭೇದವಿಲ್ಲದೆ ಸಹಕಾರ ಸಂಘದ ಸದಸ್ಯರಾಗಿ'' ಎಂದು ಕರೆ ನೀಡಿದರು. ಶ್ರೀ ರಾಮಯ್ಯನವರು ಈ ಸಹಕಾರ ತತ್ವಕ್ಕೆ ಎಷ್ಟು ಬದ್ಧರಾಗಿದ್ದರೆಂದರೆ ಯಾವುದೇ ಸಭೆ ಸಮಾರಂಭವಾಗಿರಲಿ, ಅಲ್ಲಿ ಅದು ಪ್ರಸ್ತುತವಿರಲಿ ಇಲ್ಲವೆ ಅಪ್ರಸ್ತುತವಿರಲಿ ಅಂತೂ ಸಹಕಾರಾವಲಂಬನೆಯ ಅವಶ್ಯಕತೆಯನ್ನು ಕುರಿತು ಹೇಳಿಯೇ ತೀರುತ್ತಿದ್ದರು.

ಶೂದ್ರಸಮುದಾಯಗಳಿಂದ ಹೀಗೆ ವಿದ್ಯಾವಂತರಾದವರು ಆ ಜನರ ಉದ್ಧಾರದ ಬಗ್ಗೆ ಚಿಂತಿಸಿದಂತೆಯೇ ಭಾರತವನ್ನು ದಾಸ್ಯದಿಂದ ಮುಕ್ತಗೊಳಿಸುವ ಬಗ್ಗೆಯೂ ಚಿಂತಿಸುತ್ತಿದ್ದರು. ಈ ಹೊತ್ತಿಗಾಗಲೇ ಉತ್ತರಭಾರತದ ದೆಹಲಿ, ಕಲ್ಕತ್ತ, ಬೊಂಬಾಯಿ ಹೀಗೆ ಪ್ರಮುಖ ನಗರಗಳಲ್ಲಿ ಸ್ವಾತಂತ್ರ್ಯ ಚಳುವಳಿಯ ಕಾವು ಏರುತ್ತಿತ್ತು. 1867ರ ಸಿಪಾಯಿದಂಗೆಯೊಂದಿಗೆ ಕಿಡಿ ಹೊತ್ತಿದ ಅದು ನಿಧಾನ ವಾಗಿ ಕವರಿಕೊಳ್ಳುತ್ತ ಉಜ್ವಲ ಜ್ವಾಲೆಯಾಗುತ್ತಿತ್ತು. ಆಗ ಅಪರೂಪವಾಗಿದ್ದ ಸ್ವಾತಂತ್ರ್ಯಪರ ಪತ್ರಿಕೆಗಳ ಮೂಲಕ, ಸ್ವಾತಂತ್ರ್ಯವೀರರು ಹೊರಡಿಸು ತ್ತಿದ್ದ ರಹಸ್ಯಪತ್ರಗಳನ್ನು ಓದಿ ಗ್ರಾಮಾಂತರವಿದ್ಯಾವಂತರೂ ಇದನ್ನು ಅರಿಯು ತ್ತಿದ್ದರು. ಮತ್ತೊಂದು ಕಡೆ ಸ್ವಾಮಿವಿವೇಕಾನಂದರ ಪ್ರಗತಿಪರ ಧೋರಣೆಯ ಸಿಂಹವಾಣಿ ಮೊಳಗುತ್ತಿತು. ದಕ್ಷಿಣ ಭಾರತದಲ್ಲಿ ಬ್ರಾಹ್ಮಣೇತರ ಚಳುವಳಿ ಆರಂಭ ವಾಗಿತ್ತು. ಮೈಸೂರು ಸಂಸ್ಥಾನದ ಯುವರಾಜ ಕಂಠೀರವ ನರಸರಾಜ ಒಡೆಯರು ಪಾಶ್ಚಿಮಾತ್ಯ ದೇಶ ಬಲ್ಲವರಾಗಿದ್ದು ಬ್ರಾಹ್ಮಣೇತರರಿಗೆ ಸರ್ಕಾರದ ಉನ್ನತ ಹುದ್ದೆ ಗಳಲ್ಲಿ ಅವಕಾಶ ನೀಡಬೇಕೆಂದು ತಮ್ಮ ಅಣ್ಣ ನಾಲ್ವಡಿ ಕೃಷ್ಣರಾಜರ ಮೇಲೆ ಒತ್ತಡ ತಂದಿದ್ದರು. ಸರ್ಕಾರದ ಉನ್ನತ ಹುದ್ದೆಗಳಿಗೆ ಶೂದ್ರರು ಅರ್ಹರಲ್ಲ ಎಂಬ ನಿಲುವು

ತಳೆದು ವಿಶ್ವೇಶ್ವರಯ್ಯನವರು ಇದನ್ನು ವಿರೋಧಿಸುತಿದ್ದರು. ಗುರು ರಾಮಯ್ಯನವರು ತಾವು ಸಂಗ್ರಹಿಸಿದ ಇಂತಹ ಹೊಸ ಹೊಸ ವಿಚಾರಗಳನ್ನು ಹಳ್ಳಿಗರಿಗೆ ಸ್ವಾರಸ್ಯವಾಗಿ ಹೇಳುತ್ತಿದ್ದರು. ಕೆ. ಎಚ್. ರಾಮಯ್ಯನವರು ರಾಜ್ಯದಾದ್ಯಂತ ಪ್ರವಾಸಮಾಡಿ ಹಿಂದುಳಿದ ಜನಾಂಗಗಳ ಸಂಘಟನೆಗೆ ನಾಂದಿ ಹಾಕುತ್ತಿದ್ದರು. ಗಾಂಧಿಜೀಯವರ ಬಗ್ಗೆಯಂತೂ ವಿವಿಧ ರೀತಿಯ ಪವಾಡ ಸದೃಶವಾದ ಕಥೆಗಳು ಹಳ್ಳಿಗಳನ್ನು ತಲುಪುತ್ತಿದ್ದವು. "ಬೊಂಬಾಯಿಯಲ್ಲಿ ಜೈಲಿಗೆ ಹಿಡಿದುಕೊಂಡು ಹೋದರಂತೆ ಅವರಿಗೆ ಅನ್ನ ಚಪಾತಿ ಕೊಡುವ ಬದಲು ದನದ ಮಾಂಸವನ್ನು ತಿನ್ನಲು ಕೊಟ್ಟರಂತೆ. ಅದನ್ನು ತಿನ್ನುವಂತೆ ಒತ್ತಾಯ ಮಾಡಿದರಂತೆ, ಆಗ ಮಹಾತ್ಮರು ತಟ್ಟೆಸುತ್ತ ಕೈ ಆಡಿಸಿದರಂತೆ ತಟ್ಟೆಯಲ್ಲಿದ್ದ ದನದ ಮಾಂಸ ಮಾವು, ದಾಳಿಂಬೆ ಇತ್ಯಾದಿ ಹಣ್ಣುಗಳಾಯಿತಂತೆ" ಇಂತಹ ನೂರಾರು ಕಥೆಗಳು ಹಳ್ಳಿಗರಿಗೆ ತಲುಪಿ ಅವರಲ್ಲಿ ಬ್ರಿಟಿಷರ ವಿರುದ್ಧ ಆಕ್ರೋಶದ ಬೀಜ ಬಿತ್ತುತ್ತಿದ್ದವು.

ಪಡ್ಡೆ ಹುಡುಗನಾಗಿದ್ದ ನನಗೆ ಗಾಂಧೀಜೀಯವರ ಬಗೆಗಿನ ಇಂಥ ಕಥೆಗಳು ರೋಮಾಂಚನವನ್ನುಂಟು ಮಾಡುತ್ತಿದ್ದವು. ಕದ್ದುಮಾಡಿ ಹಣ ಸಂಗ್ರಹಿಸಿಯಾದರೂ ಬೊಂಬಾಯಿಗೆ ಹೋಗಿ ಈ ಮಹಾತ್ಮನ ದರ್ಶನಮಾಡಬೇಕೆಂಬ ಆಸೆ ಪ್ರಬಲವಾಗಿತ್ತು. ಮೈಸೂರಿನಲ್ಲಿ ಸೋದರತ್ತೆಯ ಮನೆಯಿತ್ತು, ಮನೆಯವರೆಲ್ಲಾ ಮೈಸೂರಿಗೆ ಹೋಗಿ ಬಂದಿದ್ದರು. ನಾನು ಮಾತ್ರ ಮೈಸೂರನ್ನು ನೋಡಿಯೇ ಇರಲಿಲ್ಲ. ಅಂದ ಮೇಲೆ ಬೊಂಬಾಯಿಗೆ ಹೋಗುವ ಸಾಹಸಮಾಡುವುದೆಂತು ? ಅದು ಕನಸಾಗಿಯೇ ಉಳಿಯಿತು. ಆದರೆ 1929ರಲ್ಲಿ ಮೈಸೂರಿಗೆ ಬಂದಿದ್ದ ಗಾಂಧೀಜೀಯನ್ನು ನೋಡಿದೆ. ನನಗೆ ದೊಡ್ಡ ಆಶ್ಚರ್ಯಕಾದಿತ್ತು. ನನ್ನ ಗಾಂಧಿ ಕಲ್ಪನೆಯೇ ಬೇರೆಯಾಗಿತ್ತು. ಜನಪದ ಕಥೆಗಳ ರಾಜಕುಮಾರನಂತೆ, ಮಹಾಭಾರತದ ಭೀಮಾರ್ಜುನರಂತೆ. ಆದರೆ ಮೈತುಂಬಾ ಹೊದೆಯಲು, ಉಡಲು ಬಟ್ಟೆಯಿಲ್ಲದೆ, ಬೋಡುಬಾಯಿನ ಸಣಕಲು ವ್ಯಕ್ತಿಯನ್ನು ಕಂಡು ನನಗೆ ನಿರಾಸೆಯಾಯಿತು. ಈ ದರಿದ್ರ ಮನುಷ್ಯ ಎಲ್ಲಾದರೂ ಇಂಗ್ಲಿಷರನ್ನು ಬಡಿದೋಡಿಸಲು ಸಾಧ್ಯವೆ ? ನಾವೇನೋ ಹಳ್ಳಿಯ ಜನ ಕೇಳಿದ್ದೆಲ್ಲಾ ನಂಬುತ್ತೇವೆ. ಆದರೆ ಈ ಮೈಸೂರಿನ ಜನರಿಗೇನುಬಂದಿದೆ ಎಳ್ಳು ಎರಚಿದರೆ ಕೆಳಗೆ ಬೀಳದಂತೆ ಇಷ್ಟೊಂದು ಜನರು ಸೇರಿದ್ದಾರಲ್ಲ ! ಎಂದುಕೊಂಡು ತಂದೆಯವರ ಜೊತೆ ಊರಿಗೆ ಹಿಂತಿರುಗಿ ಬಂದೆ.

1929ರ ಹೊತ್ತಿಗೆ ಎಲ್ಲಾ ಅಡೆ ತಡೆಗಳನ್ನೂ ದಾಟಿ ಜನಾಂಗದ ಮುಖಂಡರು ಆದಿಚುಂಚನಗಿರಿಯನ್ನು ಒಕ್ಕಲಿಗರ ವಶಕ್ಕೆ ಮತ್ತೆ ಪಡೆದುಕೊಂಡರು. ಗುರುರಾಮಯ್ಯನವರಿಗೆ ನಾಸಿಕ್‌ನ ನಾಥಪಂಥದ ಮಠದಿಂದ ದೀಕ್ಷೆ ಕೊಡಿಸಿ ಶ್ರೀ ಶ್ರೀ ಭಕ್ತನಾಥ ಸ್ವಾಮಿಗಳೆಂಬ ಅಭಿಧಾನದಿಂದ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಜಗದ್ಗುರಗಳನ್ನಾಗಿ ಸ್ವೀಕರಿಸಲಾಯಿತು. ಭಕ್ತನಾಥರ ಪಟ್ಟಾಭಿಷೇಕದ ಕಾಲಕ್ಕೆ ಆದಿ

ಚುಂಚನಗಿರಿಯಲ್ಲಿ ಸೇರಿದ್ದ ಮಹಾಜನಸ್ತೋಮ ಇನ್ನೂ ನನ್ನ ಮನಸ್ಸಿನಿಂದ ಅಳಿಸಿ ಹೋಗಿಲ್ಲ. ಎತ್ತಿನಗಾಡಿಗಳಲ್ಲಿ ಸಾಲುಗಟ್ಟಿ ಬರುತ್ತಿದ್ದ ಆ ಜನಸಮೂಹದ ಸಡಗರ ಸಂಭ್ರಮ ಹೇಳತೀರದು. ಎತ್ತ ತಿರುಗಿದರೂ ಜನಸಮೂಹ. ಅಡುಗೆಯಂತೂ ಎಲ್ಲಾ ಕಡೆಯೂ ನಡೆಯುತ್ತಿತ್ತು. ಸಂಸ್ಥಾನದ ಕಣ್ಣಾದ ಒಕ್ಕಲಿಗ ಮುಖಂಡರು ಒಬ್ಬರೂ ತಪ್ಪದಂತೆ ಬಂದಿದ್ದರು. ಶ್ರೀ ಎಚ್. ಕೆ. ವೀರಣ್ಣಗೌಡರು ಹಿಪ್ಪಿಗಳಂತೆ ತಲೆಗೂದಲು ಬೆಳೆಸಿಕೊಂಡು, ಖಾದಿ ಶಾಲನ್ನು ಮಠಾಧೀಶರಂತೆ ಹೊದೆದುಕೊಂಡಿದ್ದರು. ಕೆಂಪಗೆ ಪರಂಗಿ ಜನರಂತೆ ಕಾಣುತ್ತಿದ್ದ ಅವರನ್ನು ನಾಡಿನ ಎಲ್ಲ ಒಕ್ಕಲಿಗ ಮುಖಂಡರೂ ಸಂಪರ್ಕಿಸುತ್ತಿದ್ದುದು ಎದ್ದು ಕಾಣುತ್ತಿತ್ತು.



## ೩

ನನ್ನ ತಾತನ ಮನೆ ಅಂದರೆ ತಾಯಿಯ ತಂದೆಯ ಮನೆ ನೂರುಮಂದಿಗೂ ಹೆಚ್ಚಿದ್ದ ಒಟ್ಟು ಕುಟುಂಬ. ನಾನು ಹುಟ್ಟಿದ ಆರೇಳು ವರ್ಷಗಳ ಕಾಲ ಈ ತಾತನ ಮನೆಯಲ್ಲಿಯೇ ಬೆಳೆದೆ. ಈ ತಾತ ದಾಸೇಗೌಡರು ಸಹ ಅನಕ್ಷರಸ್ಥರು. ಆದರೆ ಅವರ ಏಕೈಕಪುತ್ರ ನಾರಾಯಣಗೌಡರನ್ನು ಲೋಯರ್ ಸೆಕೆಂಡರಿಯವರೆಗೆ ಓದಿಸಿದ್ದರು. ಹಳ್ಳಿಗರ ದೃಷ್ಟಿಯಲ್ಲಿ ಅದು ಇಂದಿನ ಪಿ ಎಚ್ ಡಿ ಗಿಂತ ಹೆಚ್ಚು. ಆ ಮನೆಯಲ್ಲಿ ಮೊಮ್ಮಕ್ಕಳೇ ಏನಿಲ್ಲ ಎಂದರೂ ನಲವತ್ತು ಐವತ್ತು ಮಂದಿ ಇದ್ದೆವು. ಅವರು ಕಡಲೆ ಬೆಳೆಯುತ್ತಿದ್ದರು. ಈ ಹಸಿಕಡಲೆಯನ್ನು ಒಕ್ಕಣೆಮಾಡುವಾಗ ಮೊಮ್ಮಕ್ಕಳೆಲ್ಲ ಕಣಕ್ಕೆ ದಾಳಿಯಿಡುತ್ತಿದ್ದೆವು. ಎಲ್ಲರಿಗೂ ಒಂದೊಂದು ಹಿಡಿ ಕಡಲೆ ಸಿಗುತ್ತಿತ್ತು. ಹುರಿಯಲು ಅದೆಲ್ಲವನ್ನು ಒಂದೆಡೆ ಸುರಿದರೆ ಹತ್ತು ಹನ್ನೆರಡು ಸೇರಿನಷ್ಟಾಗುತ್ತಿತ್ತು. 1918ರಲ್ಲಿ ಬಂದ ಇನ್‌ಫ್ಲೂಯೆಂಜಾ ಕಾಯಿಲೆ ನಾಡಿನ ಯಾವ ಮನೆಯನ್ನೂ ಬಿಡಲಿಲ್ಲವಷ್ಟೆ. ಆ ಇನ್‌ಫ್ಲುಯೆಂಜಾ ರೋಗ ಈ ಮನೆಗೂ ಮುತ್ತಿಗೆ ಹಾಕಿತು. ಮನೆಯನ್ನು ಬಹು ಮಟ್ಟಿಗೆ ಕಾಲಿ ಮಾಡಿತು. ನಾವು ಎಂಟು ಜನ ಜನ್ಮತಳೆದೆವಾದರೂ ಉಳಿದವರು ಇಬ್ಬರು ತಮ್ಮಂದಿರು, ಇಬ್ಬರು ತಂಗಿಯರು ಒಬ್ಬ ಅಕ್ಕ. ನಮ್ಮ ತಂದೆ, ತಾಯಿ, ತಾತ ನನ್ನನ್ನು ಉಳಿಸಿಕೊಳ್ಳಲು ಜವರಾಯನನ್ನು ಮೊರೆಹೋದ ಕಥೆಯನ್ನು ಈ ಹಿಂದೆಯೇ ಹೇಳಿದ್ದೇನೆ. ಅದಲ್ಲದೆ ತಿರುಪತಿ ತಿಮ್ಮಪ್ಪನಿಗೂ ಹರಕೆ ಮಾಡಿಕೊಂಡಿದ್ದ ರಂತೆ. ಇನ್ನು ಸ್ಥಳದ ದೇವತೆಗಳನ್ನು ಬಿಡಲಾದೀತೆ ? ಒಟ್ಟಿನಲ್ಲಿ ಈ ಎಲ್ಲ ದೇವಾನು ದೇವತೆಗಳ ರಕ್ಷಣೆಯ ಬಲವೋ ಎಂಬಂತೆ ನನ್ನ 73 ನೆಯ ವಯಸ್ಸನ್ನು ದಾಟು ತ್ತಿದ್ದೇನೆ.

ಒಕ್ಕಲಿಗರ ಮಹಾ ಸಮ್ಮೇಳನದ ತೀರ್ಮಾನದಂತೆ ಹಳ್ಳಿ ಹಳ್ಳಿಗಳಲ್ಲಿ ಕೂಲಿ ಮಠಗಳನ್ನು ಸ್ಥಾಪಿಸಲು ಮುಖಂಡರು ಮುಂದಾದರು. ಅಂತೆಯೇ ನಮ್ಮ ತಾತನೂ ತಮ್ಮ ಮೊಮ್ಮಕ್ಕಳಿಗೆ ಕೂಲಿಮಠದಲ್ಲಿ ತಮ್ಮ ಮಗನ ಉಪಾಧ್ಯಾಯತ್ವದಲ್ಲಿ ಒಂದು ಉಚಿತ ಮಠವನ್ನೆ ತೆರೆದರು ತಮ್ಮ ಮನೆಯಲ್ಲಿಯೆ. ಹಾಗೂ ಹೀಗೂ ನಾನು ಶ್ರೀ ಓಂ ನಾಮದಿಂದ ಆಟ ಊಟ ಓಟದ ವರೆಗೂ ದಾಟಿದೆ. ಸೋದರಮಾವನ ಮೇಷ್ಟ್ರುತನ ದಲ್ಲಿ ಹುಡುಗ ಕಲಿಯಲಾರ ಎಂಬ ಖಚಿತ ಅಭಿಪ್ರಾಯಕ್ಕೆ ಬಂದ ನನ್ನ ತಂದೆ ನಮ್ಮ ಊರಿನ ಗ್ರಾಂಟ್ ಸ್ಕೂಲಿಗೆ ನನ್ನನ್ನು ಕರೆದೊಯ್ದು ಸೇರಿಸಿದರು. ತಾತನ ಮನೆಯ ಮುದ್ದಿನ ಮೊಮ್ಮಗನಾಗಿದ್ದ ನನಗೆ ತಂದೆಯ ಮನೆ ಸುತರಾಂ ಒಗ್ಗಲಿಲ್ಲ. ಪಾಲಗ್ರಹಾರಕ್ಕೂ ನನ್ನ ತಾತನ ಊರು ಕೆಂಚೇಗೌಡನ ಕೊಪ್ಪಲಿಗೂ ಎರಡೂವರೆ

ಮೈಲಿದೂರ. ಊರುಗಳ ಮಧ್ಯೆ ಬೆಟ್ಟಸಾಲು. ತಾತನ ಮನೆಗೆ ಓಡಿ ಹೋಗುತ್ತಿದ್ದ ನನ್ನನ್ನು ತಪ್ಪದೆ ದಿನವೂ ಎಳೆದು ತರುತ್ತಿದ್ದರು. ಸಂಜೆ ಶಾಲೆ ಬಿಟ್ಟ ಕೂಡಲೇ ಅಲ್ಲಿಂದ ನೇರ ತಾತನ ಮನೆಗೆ ಓಡುತ್ತಿದ್ದೆ. ಒಂದೆರಡುತಿಂಗಳು ಹೀಗೆಯೇ ನಡೆಯಿತು. ಕೊನೆಗೆ ನಮ್ಮ ತಾತ ''ಬಿಡ್ರಪ್ಪಾ ಅವನಿಗೆ ವಿದ್ಯೆ ಹತ್ತೋದಿಲ್ಲ. ನಾನೂ ಅಕ್ಷರ ಕಂಡವನಲ್ಲ. ನೂರಾರು ಎಕರೆ ಜಮೀನು ಮನೆ, ಮಠ ಸಂಪಾದಿಸಿಲ್ಲವೆ ?'' ಎಂದು ಹೇಳಿ ಶಾಶ್ವತವಾಗಿ ಓದಿಗೆ ತೆರೆ ಎಳೆಯುವ ಪ್ರಯತ್ನ ಮಾಡಿದರು ಮೊಮ್ಮಗನ ಮೇಲಿನ ಅಪಾರ ಪ್ರೀತಿಯ ಫಲವಾಗಿ.

ಜವರಾಯ, ತಿಮ್ಮಪ್ಪರ ಔದಾರ್ಯದಿಂದ ಉಳಿದ ನನ್ನ ಬಗ್ಗೆ ತಾತ ಅಪಾರ ಮಮತೆ ತೋರುತ್ತಿದ್ದರೆಂದು ಕಾಣುತ್ತದೆ. ಆರೇಳು ವರ್ಷದ ಹುಡುಗನಾದ ನನ್ನನ್ನು ಯಾರಾದರೊಬ್ಬರ ಹೆಗಲು ಸವಾರಿಯಲ್ಲೇ ಕರೆದೊಯ್ಯುತ್ತಿದ್ದರು. ನನ್ನ ತಾತ ಬುಡಿಯ ಎಂಬ ನಮ್ಮೂರಿನ ಹೊಲೆಯುರವನನ್ನು ನನ್ನನ್ನು ಹೋದಲ್ಲೆಲ್ಲಾ ಹೊರಲು ನೇಮಿಸಿಕೊಂಡಿದ್ದರು. ನಾಗಮಂಗಲ, ದೇವಾಲಪುರದ ಸಂತೆಗಳಿಗೆ ನನ್ನನ್ನು ಹೊತ್ತು ಬುಡಿಯಣ್ಣ ತಾತನನ್ನು ಹಿಂಬಾಲಿಸುತ್ತಿದ್ದ. ಇಂತಹ ಸರಪಾಹನಕ್ಕೆ ಒಗ್ಗಿ ಹೋಗಿದ್ದ ನನಗೆ ತಂದೆಯ ಮನೆ ಹೇಗೆ ಒಗ್ಗಬೇಕು ? ಆ ಕಾಲಕ್ಕೆ ನನಗೆ ತಮ್ಮಂದಿರಾಗಲಿ ತಂಗಿಯರಾಗಲಿ ಇರಲಿಲ್ಲ, ಹೀಗಾಗಿ ನನ್ನ ಓದಿಗೆ ಇತಿಶ್ರೀಯಕಾಲ ಬಂದಿತ್ತು. ಆದರೆ ನಮ್ಮ ತಂದೆಯವರಿಗೆ ಆಪ್ತರಾಗಿದ್ದ ಭಕ್ತನಾಥ ಸ್ವಾಮಿಗಳು '' ನಿನ್ನ ಮಗ ಬಹಳ ಚುರುಕಾಗಿದ್ದಾನೆ. ಶಿಕ್ಷೆಕೊಟ್ಟಾದರೂ ಸ್ಕೂಲಿಗೆ ಕಳಿಸು'' ಎಂದು ಬುದ್ಧಿ ಹೇಳಿದರಂತೆ. ಆದರೆ ನಾನೂ ಸೋಲುವ ಸ್ಥಿತಿಯಲ್ಲಿರಲಿಲ್ಲ ತಾತನ ಬೆಂಬಲದ ಧೈರ್ಯದಿಂದ. ಆದರೆ ನನ್ನ ತಂದೆ ಕಡೆಗೂ ಬಿಡಲಿಲ್ಲ. ನನ್ನನ್ನು ಬಲವಂತವಾಗಿಯೆ ಊರಿಗೆ ಎಳೆದೊಯ್ದರು.

ಪಾಲಗ್ರಹಾರದ ಪಟೇಲರನ್ನು ಕಂಡರೆ ಊರಿನವರಿಗೆ ತುಂಬಾ ಗೌರವ. ಊರಿನ ಮುಖಂಡ, ಸರ್ಕಾರಿ ಪ್ರತಿನಿಧಿಯಾದುದರಿಂದ ಭಯ, ಭಕ್ತಿಗಳು, ಅವರನ್ನು ಕಂಡರೆ ಅವರ ಹೆಸರು ಕೇಳಿದರೆ ಸಾಕು ಊರವರು ಹೆಂಗಸರು ಮಕ್ಕಳೆನ್ನದೆ ಹೆದರುತ್ತಿದ್ದರು. ನಾನು ಶಾಲೆಗೆ ಕದಿಯುವ ಸಂಗತಿಯ ಮೇಲೆ ನನ್ನ ತಂದೆ ಪಟೇಲರಿಗೆ ದೂರಿತ್ತು ಮನೆಗೆ ಕರೆಸಿದರು. ಪಟೇಲರು ಬೆಳಿಗ್ಗೆ ಮನೆಗೆ ಬಂದವರೆ ಹೊಟ್ಟೆತುಂಬಾ ತಿನ್ನಿಸಿ ಶ್ರೀ ರಾಮ ಮಂದಿರಕ್ಕೆ ಕರೆದೊಯ್ದರು. ನನ್ನ ಬಟ್ಟೆಗಳನ್ನೆಲ್ಲಾ ತೆಗೆಸಿ ನಿರ್ವಾಣಮಾಡಿ ಒಂದು ಕಂಬಕ್ಕೆ ಕಟ್ಟಿಹಾಕಿದರು ಈಗಿನ ಪೊಲೀಸರು ಮಾಡುವಂತೆ, ಆದರೆ ಬಿಗಿಯಾಗಿ ಕಟ್ಟಿದ್ದರೇ ವಿನಃ ಪೊಲೀಸರಂತಹ ಶಿಕ್ಷೆಗಳನ್ನೇನು ಕೊಡಲಿಲ್ಲ. ಹೆತ್ತಕರುಳು ನನ್ನ ತಾಯಿಯ ''ಬಿಡಿರಪ್ಪಅವನು ಓದದಿದ್ದರೆ ಅಷ್ಟೇ ಹೋಯಿತು'' ಎಂಬ ಆಕ್ರೋಶಕ್ಕೂ ಪಟೇಲರು ಸೊಪ್ಪು ಹಾಕಲಿಲ್ಲ, ದಾರಿಯಲ್ಲಿ ಹೋಗಿ ಬರುವವರೆಲ್ಲ 'ಅಯ್ಯೋ' ಎಂದು ಮರುಗಿದರೂ ಪ್ರಯೋಜನವಿಲ್ಲ. ಉಚ್ಚೆ ಇತ್ಯಾದಿ ಶರೀರ ಬಾಧೆಗಳ ಕಾರಣ

ಹೇಳಿದೆ. ಇಲ್ಲ. ಕಡೆಗೆ ಅಲ್ಲಿಗೆ ಬಂದವರೆಲ್ಲ "ನಿನಗೇನಾಗಿದೆ ನಾಳೆಯಿಂದ ಸ್ಕೂಲಿಗೆ ಹೋಗುತ್ತೇನೆಂದು ಒಪ್ಪಿಕೊ" ಎಂದರು. ಪಟೇಲರು ಕಲ್ಲಿನಂತಾಗಿದ್ದರು. ಕಡೆಗೆ ನಾನೇ ಸೋತೆ. ಪಟೇಲರ ಕೈಮುಟ್ಟಿ ಪ್ರಮಾಣ ಮಾಡಿದೆ. ಕಂಬಸೇವೆಯಿಂದ ಬಿಡುಗಡೆಯಾಯಿತು. "ನೋಡು ನನ್ನ ಕೈ ಮುಟ್ಟಿದ್ದೀಯಾ ಈ ದಿನ ಏನಾದರೂ ಕೊಪ್ಪಲಿಗೆ ಹೋದೆ ನಿನ್ನ ಕೈ ಕತ್ತರಿಸಿಬಿಡುತ್ತೇನೆ" ಎಂದರು.

ಮನೆಗೆ ಬರುತ್ತೇನೆ ನನ್ನ ತಾಯಿ ನೆಲದ ಮೇಲೆ ಮಕಾಡೆ ಮಲಗಿ ಪಟೇಲರನ್ನು ಶಪಿಸುತ್ತಿದ್ದಾರೆ. ನಾನು ಹೋದೆನೋ ಇಲ್ಲವೋ ಆಕೆಯ ಪಟೇಲರ ಮೇಲಿನ ಕೋಪ ನನ್ನ ಮೇಲೆ ತಿರುಗಿತು. "ಆ ಜವರಾಯನ ಮನೆ ಹಾಳಾಗ. ಇದನ್ನೆಲ್ಲಾ ನಾನು ಕಣ್ಣಲ್ಲಿ ನೋಡಲಿ ಎಂದು ನಿನ್ನನ್ನು ಉಳಿಸಿದನೆ" ಎಂದು ಕೈಗೆ ಸಿಕ್ಕಿದ ಮಂತಿನ ಕೋಲು ತೆಗೆದುಕೊಂಡು ಚನ್ನಾಗಿ ಬಡಿದರು. ತಾಯಿಯ ಮಂತಿನ ಕೋಲಿನ ಬಡಿತ, ಪಟೇಲರ ಕಂಬದ ಸೇವೆ ಇವೆಲ್ಲದರ ಪ್ರಭಾವದಿಂದ ನಾನು ತಾತನ ಮನೆ ಮರೆತು ಸಲೀಸಾಗಿ ಸ್ಕೂಲಿಗೆ ಹೋಗಲಾರಂಭಿಸಿದೆ. ಈ ವಿಚಾರವನ್ನು ಕೇಳಿ ತಾತನೂ ತುಂಬಾ ಸಂತೋಷಪಟ್ಟರಂತೆ. ಪಾಪ ನನ್ನ ಅಭ್ಯುದಯಕ್ಕಾಗಿ ಪಟೇಲರು ಎಲ್ಲರಿಂದ ಶಪಿಸಿಕೊಂಡರು. ಅವರಿಗೆ ನಾನು ಇಂದೂ ಕೃತಜ್ಞ. ಇಲ್ಲದಿದ್ದಲ್ಲಿ ನನ್ನ ಜೀವನದ ತಿರುವೆತ್ತ ತಿರುಗುತ್ತಿತ್ತೋ ದೇವರೇಬಲ್ಲ.

ನಮ್ಮ ತಾತ ನಾನಿಲ್ಲದೆ ನಾಗಮಂಗಲದ ಶುಕ್ರವಾರ ಸಂತೆಗೆ ಹೋದುದು ಅದೇ ಮೊದಲಂತೆ. ಆದರೂ ತಾತನ ಪ್ರೀತಿಯ ಎಳೆತ ನನ್ನನ್ನೂ ಅವರನ್ನೂ ಬಿಡುತ್ತಿರಲಿಲ್ಲ. ಸೋಮವಾರದಿಂದ ಶನಿವಾರದವರೆಗೆ ನಾನು ತಪ್ಪದೆ ಶಾಲೆಗೆ ಹೋಗುವುದು, ಶನಿವಾರ ಮಧ್ಯಾಹ್ನ ಬುಡಿಯಣ್ಣ ಬಂದು ನನ್ನನ್ನು ತಾತನ ಮನೆಗೆ ಕರೆದೊಯ್ಯುತ್ತಿದ್ದ. ಸೋಮವಾರ ಬೆಳಿಗ್ಗೆ ಶಾಲೆಯ ಹೊತ್ತಿಗೆ ತಪ್ಪದೇ ತಂದು ಊರಿಗೆ ಬಿಡುತ್ತಿದ್ದ. ಪ್ರತಿ ಶನಿವಾರ ಮಧ್ಯಾಹ್ನಶಾಲೆ ಬಿಡುವ ಹೊತ್ತಿಗೆ ಬುಡಿಯಣ್ಣ ಮನೆಯಲ್ಲಿ ಹಾಜರಾಗುತ್ತಿದ್ದ. ಇಬ್ಬರೂ ಊಟ ಮುಗಿಸಿ ತಾತನ ಮನೆಯತ್ತ ಹೊರಡುತ್ತಿದ್ದೆವು. ಒಂದು ಶನಿವಾರ ಶಾಲೆ ಬಿಡುವ ಸಮಯಕ್ಕೆ ಅಡುಗೆ ಇನ್ನೂ ಆಗಿರಲಿಲ್ಲ. "ಬುಡಪ್ಪೊ ನಿನ್ನೆ ಒಂದು ಹೋತ್ನಾ ಕಿರುಬಹಿಡ್ದಿತ್ತು ಬುಡಿಸಿಕೊಂಡವರೆ ಅಲ್ಲೇ ಉಣ್ತೇವಿ" ಎಂದು ಹೊರಟೇ ಬಿಟ್ಟ ಬುಡಿಯಣ್ಣ. ಈ ಎರಡೂ ಊರುಗಳ ಮಧ್ಯೆ ಇರುವ ಬೆಟ್ಟದ ಕಣಿವೆಯಲ್ಲಿ ತಿಗಳರ ಹಟ್ಟಿ ಇದೆ. ಅಲ್ಲಿಗೆ ತಲುಪಿದಾಗ ಬುಡಿಯಣ್ಣ "ಲೋ ಮಗ ಬಾಯಾರ್ಕೆ ಆಯ್ತಾ ಅದೆ ವಸಿ ಮಜ್ಗೆ ಕುಡ್ಕೊಂಬುತ್ತೀನಿಲ್ಲೇ ನಿಂತಿರು" ಎಂದು ಗುಡಿಸಲೊಂದರ ಕಡೆಗೆ ನಡೆದ. ನನಗೂ ಬಾಯಾರಿಕೆಯಾದಂತಾಗಿ ನಾನೂ ಅವನ ಹಿಂದೆಯೇ ಹೋದೆ. ದೊಡ್ಡ ಸೀಸೆಯೊಂದರಿಂದ ಅವನು ಬಿಳಿಯ ದ್ರವವನ್ನು ಕುಡಿಯುತ್ತಿದ್ದ. "ನನಗೂ ಮಜ್ಜಿಗೆ ಬೇಕು" ಎಂದೆ. ಒಂದು ಸಣ್ಣ ಸೀಸೆಯಲ್ಲಿ ನನಗೂ ಮಜ್ಜಿಗೆ ಬಂತು. ಕುಡಿದೆ. ಆದರೆ ನಮ್ಮ ಮನೆಯ ಮಜ್ಜಿಗೆಗೂ

ಇದಕ್ಕೂ ಏನೇನೂ ಸಂಬಂಧವಿರಲಿಲ್ಲ. 'ಆದರೂ ಇನ್ನೊಂದು ಸೀಸೆ ಬೇಕು' ಎಂದೆ, ಕೊಟ್ಟ. ನನಗೆ ತಲೆ ತಿರುಗುವಂತಾಯಿತು. ಬುಡಿಯಣ್ಣ ಎತ್ತಿ ಹೆಗಲೇರಿಸಿಕೊಂಡು ಊರತ್ತ ನಡೆದ. ಮಜ್ಜಿಗೆ ಸ್ವಲ್ಪ ಮುಜುಗರ ಉಂಟು ಮಾಡಿದರೂ ಊರು ಸೇರುವ ಹೊತ್ತಿಗೆ ಅದು ಸರಿ ಹೋಗಿತ್ತು. ''ಮಗಾ ಮಜ್ಜಿಗೆ ಕುಡ್ದ ವಿಚಾರ ತಾತೌವ್ರಿಗೆ ಹೇಳ ಬೇಡ'' ಎಂದ ಬುಡಿಯಣ್ಣ ನನ್ನನ್ನು ಮನೆಯ ಮುಂದೆ ಇಳಿಸಿ ಕಣದ ಕಡೆಗೆ ಹೋದ. ನಾನು ಮನೆಯೊಳಗೆ ಓಡಿದೆ.

ತಾತ ಮನೆಯಲ್ಲಿರಲಿಲ್ಲ. ಮಜ್ಜಿಗೆ ಕುಡಿದ ವಿಚಾರವನ್ನು ತಾತನಿಗೆ ಹೇಳಬೇಡ ವೆಂದು ಬುಡಿಯಣ್ಣ ಏಕಾಗಿ ಹೇಳಿದ ? ಈ ವಿಷಯ ನನ್ನ ತಲೆಯಲ್ಲಿ ದುಂಬಿಯಂತೆ ಕೊರೆಯಲಾರಂಭಿಸಿತು. ಬುಡಿಯಣ್ಣ ಹೇಳಿದಂತೆ ಹೋತವೊಂದನ್ನು ಕಿರುಬ ಹಿಡಿದು ಅದನ್ನು ಬಿಡಿಸಿಕೊಂಡಿದ್ದರು. ಮನೆಯಲ್ಲಿ ಬಾಡಿನಡುಗೆಯ ತಯಾರಿ ನಡೆಯುತ್ತಿತ್ತು. ರಾತ್ರಿ ಊಟದ ಸಮಯಕ್ಕೆ ತಾತ ಬಂದರು. ನನ್ನ ಊಟ ಯಾವಾಗಲೂ ಅವರೊಂದಿಗೆಯೆ. ನಾವಿಬ್ಬರೂ ಗಳಪುತ್ತ ಉಣ್ಣುತ್ತಿದ್ದೆವು. ಮಾತಿನ ಭರಾಟೆಯಲ್ಲಿ ತಿಗಳರ ಹಟ್ಟಿಯಲ್ಲಿ ಬುಡಿಯಣ್ಣ ಮತ್ತು ನಾನು ಮಜ್ಜಿಗೆ ಕುಡಿದ ಸಂಗತಿ ತಾತನಿಗೆ ಹೇಳಿದೆ. ಊಟವಾದ ಕೂಡಲೇ ತಾತ ಬುಡಿಯಣ್ಣನನ್ನ ಕರೆಸಿ ಅವನ ಕಂಬಳಿ ಗೊಪ್ಪಟೆ ಸಹಿತ ಕೆಲಸದಿಂದ ತೆಗೆದು ಹಾಕಿ ಮನೆಗೆ ಕಳಿಸಿ ಬಿಟ್ಟರು ತಾತ. ಸೋಮವಾರ ನಾನು ಹೋಗುವುದು ಹೇಗೆ ಎಂದೆ. ''ಗಾಡಿ ಕಟ್ಟಿಸಿಕೊಂಡು ಹೋಗು'' ಎಂದರು. ಆ ಮೇಲೆ ಕೆಲವು ದಿನ ಗಾಡಿಯಲ್ಲಿ ಓಡಾಡಿದೆ. ಯಾರು ಹೇಳದಿದ್ದರೂ ಬುಡಿಯಣ್ಣ ಕುಡಿಸಿದ ಮಜ್ಜಿಗೆ ಹೆಂಡ ಎಂದು ಮುಂದೆ ನನಗೆ ತಿಳಿಯಿತು. ಕೆಲದಿನಗಳನಂತರ ತಾತ ಕಾಯಿಲೆ ಮಲಗಿದರು ಮುಂದೆ ನಾಲ್ಕಾರು ತಿಂಗಳಲ್ಲಿ ಅವರು ತೀರಿಕೊಂಡರು. ನನ್ನ ಜೀವನದ ಒಂದು ಅಧ್ಯಾಯ ಮುಗಿಯಿತು. ಅಲ್ಲಿಂದು ಮುಂದೆ ತಾತನಿಲ್ಲದ ಕೊಪ್ಪಲಿಗೆ ಹೋಗುವುದು ಅಪರೂಪವಾಯಿತು.

## ಅಧ್ಯಾಯ – ಎರಡು

### ೧

ಮೇಲುಕೋಟೆಯ ನರಸಿಂಹಯ್ಯನವರು ನಮ್ಮ ಊರಿನ ಗ್ರಾಂಟ್ ಶಾಲೆಯ ಉಪಾಧ್ಯಾಯರಾಗಿದ್ದರು. ಆಗ ಅವರಿಗೆ ತಿಂಗಳಿಗೆ ಎಂಟು ರೂಪಾಯಿ ಸಂಬಳ. ಚಾವಡಿಯಲ್ಲಿ ಶಾಲೆ ನಡೆಯುತ್ತಿತ್ತು. ಅದರ ಪಕ್ಕದಲ್ಲಿಯೇ ನರಸಿಂಹಯ್ಯ ಮೇಷ್ಟ್ರು ಒಂದು ಮನೆಯಲ್ಲಿ ವಾಸವಾಗಿದ್ದರು. ಬೆಳಿಗ್ಗೆ ಐದು ಗಂಟೆಗೇ ಎದ್ದು ತಮ್ಮ ಕೆಲಸ ಗಳಲ್ಲಿ ತೊಡಗುವುದರೊಂದಿಗೆ ನಮ್ಮನ್ನೆಲ್ಲ ಕೂಗಿ ಎಬ್ಬಿಸುತ್ತಿದ್ದರು. ಆಮೇಲೆ ಕರೆದು ಕೊಂಡು ಹೋಗಿ ಪಾಠಗಳನ್ನು ಅರೆದು ನುಂಗಿಸುತ್ತಿದ್ದರು. ನಮಗೋ "ಇವನ ಮನೆ ಹಾಳಾಗ ಇವನೆಲ್ಲಿ ಬಂದನಪ್ಪ" ಎನ್ನಿಸುತ್ತಿತ್ತು. ನರಸಿಂಹಯ್ಯನವರು ಒಳ್ಳೆಯ ಉಪಾಧ್ಯಾಯರು. ಆದುದರಿಂದ ನಮ್ಮೂರಿನ ಪ್ರಾಥಮಿಕ ಶಾಲೆಯ ನಾಲ್ಕನೆಯ ತರಗತಿವರೆಗೆ ಚೆನ್ನಾಗಿಯೇ ಓದಿ ಮೇಷ್ಟರಿಂದ ಶಾಹಬಾಸ್ ಗಿರಿಯನ್ನು ಪಡೆದೆ.

ಮಿಡಲ್‌ಸ್ಕೂಲಿಗೆ ನಾಗಮಂಗಲಕ್ಕೆ ಹೋಗಬೇಕಾಗಿತ್ತು. ಅಲ್ಲಿ ನನ್ನ ಸೋದರತ್ತೆಯ ಮಗ ಇದ್ದರು. ಅವರು ಜವಳಿ ವ್ಯಾಪಾರದ ಜೊತೆಗೆ ವ್ಯವಸಾಯ ವನ್ನೂ ಮಾಡುತ್ತಿದ್ದರು. ಅವರ ಮನೆಯಲ್ಲಿ ನನ್ನನ್ನು ಬಿಟ್ಟು ಓದು ಮುಂದುವರಿಸಲು ನನ್ನ ತಂದೆ ಪ್ರಯತ್ನಿಸಿದರು. ಅದೇಕೋ ಅವರ ಮನೆಯಲ್ಲಿರಲು ನನ್ನ ಮನಸ್ಸೊಪ್ಪ ಲಿಲ್ಲ. ನಾನೂ ಇನ್ನಿತರ ಸ್ನೇಹಿತರಂತೆ ಊರಿನಿಂದಲೇ ಶಾಲೆಗೆ ಬಂದು ಹೋಗುವ ವ್ಯವಸ್ಥೆಗೆ ಒಗ್ಗಿಕೊಂಡೆ. ನಮ್ಮ ಊರಿನಿಂದ ಹತ್ತು ಹನ್ನೆರಡು ಮಂದಿ ನಾಗಮಂಗಲದ ಮಿಡಲ್ ಸ್ಕೂಲಿಗೆ ಬರುತ್ತಿದ್ದೆವು. ಸುಮಾರು ಒಂಬತ್ತು ಒಂಬತ್ತುವರೆಗೆ ರೊಟ್ಟಿ ತಿಂದು ಊರು ಬಿಡುತ್ತಿದ್ದೆವು. ಆಗ ಈಗಿನಂತೆ ಶಾಲಾ ಕಾಲೇಜುಗಳಿಗೆ ಡಬ್ಬಿಗಳಲ್ಲಿ ಊಟ ತಿಂಡಿ ಹೊರುವ ಪದ್ಧತಿ ಇರಲಿಲ್ಲವೆಂದೇ ಹೇಳಬೇಕು. ಈ ಎಲ್ಲ ಅನುಕೂಲ ಗಳೂ ನಗರದವರಿಗೇ ಹೊರತು ಹಳ್ಳಿಗರಿಗೆಲ್ಲಿ ಬರಬೇಕು. ಶಾಲೆ ಬಿಟ್ಟ ಕೂಡಲೇ ಊರತ್ತ ಪೇರಿಕೀಳುತ್ತಿದ್ದವು. ಅದಕ್ಕೆ ಹೊಟ್ಟೆಯೂ ಕಾರಣವಾಗಿರುತ್ತಿತ್ತು. ಆಷಾಢಮಾಸದಲ್ಲಿ ದಾರಿಯ ಅಕ್ಕ ಪಕ್ಕದ ಕಾರೇಗಿಡಗಳ ಕಾಯಿ ಹಣ್ಣಾಗುತ್ತಿದ್ದವು. ನಾವು ಕಾಲದ ಪರಿವೇ ಇಲ್ಲದೆ ಕಾರೇ ಹಣ್ಣುಗಳನ್ನು ಕಿತ್ತು ತಿನ್ನುತ್ತಿದ್ದೆವು. ಸಹಜ ವಾಗಿಯೇ ಶಾಲೆಗೆ ತಡವಾಗುತ್ತಿತ್ತು. ಸರಿ ಅಲ್ಲಿ ಇಲ್ಲಿ ಅಂಗಡಿ ಬೀದಿಯಲ್ಲಿ ಕಾಲ ಹಾಕಿ ಸಂಜೆ ಊರಿಗೆ ಹಿಂತಿರುಗುತ್ತಿದ್ದೆವು,

ಸರಿಯಾಗಿ ಶಾಲೆಗೆ ಬರದ ನಮ್ಮ ಬಗ್ಗೆ ಉಪಧ್ಯಾಯರುಗಳೇನೂ ತಲೆ ಕೆಡಿಸಿ ಕೊಳ್ಳುತ್ತಿರಲಿಲ್ಲ. ನಮ್ಮ ತಂದೆ ತಾಯಿಯರಿಗೆ ನಮ್ಮ ಗೈರು ಹಾಜರಿಯನ್ನು

ತಿಳಿಸುತ್ತಲೂ ಇರಲಿಲ್ಲ. ಹಳ್ಳಿಯ ಹುಡುಗರು ವಿಶೇಷವಾಗಿ ಬ್ರಾಹ್ಮಣೇತರರು ಏಕೆ ಓದಬೇಕೆಂಬುದು ತಂದೆ ತಾಯಿಗಳ ನಿಲುವೇ ಆಗಿರುತ್ತಿತ್ತು. "ನೀನೇನು ಓದಿ ಅಮುಲ್ದಾರಿ ಮಾಡಾಕಾದತೆ" ಎಂಬುದು ಗಾದೆ ಮಾತಾಗಿತ್ತು. ಬ್ರಾಹ್ಮಣ ಇತ್ಯಾದಿ ಮೇಲುವರ್ಗದವರಿಗೂ ಶೂದ್ರಾದಿಗಳು ಓದಿ ಮೇಲೆ ಬರುವುದು ಇಷ್ಟವಿರಲಿಲ್ಲ. ತಲೆತಲಾಂತರದಿಂದ ಅನುಭವಿಸಿಕೊಂಡು ಬಂದ ಅಧಿಕಾರದ ಸವಲತ್ತುಗಳಿಗೆ ಪ್ರತಿಸ್ಪರ್ಧಿಯಾಗುವುದನ್ನು ಯಾರು ಸಹಿಸಿಯಾರು. ಹೀಗಾಗಿ ಶಾಲೆಗೆ ಬಂದರೆ ಏನಾದರೂ ಪಾಠ ಹೇಳುವುದು ಬರದಿದ್ದರೆ ಶಂಟಿ ಕಳೆಯುತೆನ್ನುವುದು ಮೇಲು ವರ್ಗದ ಉಪಾಧ್ಯಾಯರ ನೀತಿಯಾಗಿರುತ್ತಿತ್ತು. ನಾವೂ ಅವರನ್ನು ಸುಪ್ರೀತಗೊಳಿಸಲು ನಮ್ಮ ನಮ್ಮ ಹೊಲಗದ್ದೆ, ತೋಟತುಡಿಕೆಗಳಲ್ಲಿ ಬೆಳೆಯುತ್ತಿದ್ದ ಹೀರೇಕಾಯಿ, ಬದನೆಕಾಯಿ, ಹಸಿ ಮೆಣಸಿನಕಾಯಿ, ಇತ್ಯಾದಿ ಇತ್ಯಾದಿ ತರಕಾರಿಗಳನ್ನು ದವಸ ಧಾನ್ಯಗಳನ್ನು ಹಸು ಕಟ್ಟಿದ ಉಪಾಧ್ಯಾಯರಿದ್ದರೆ ಅವಕ್ಕೆ ಹುಲ್ಲನ್ನು ತಂದು ಕೊಡುತ್ತಿದ್ದೆವು. ತರಗತಿಗೆ ಬರದೇ ಇದ್ದುದನ್ನಾಗಲಿ ನಾವು ಸರಿಯಾಗಿ ಓದದಿರುವುದನ್ನಾಗಲಿ ಪ್ರಶ್ನಿಸದಿರುವುದು ನಮ್ಮ ಘನತೆ ಎಂದೇ ತಿಳಿದೆವು. ಆದರೆ ನಾವು ಲೋಯರ್ ಸೆಕೆಂಡರಿ ಪರೀಕ್ಷೆಗೆ ಕೂರಲು ನಾಲಾಯಕ್ ಎಂದು ತಿಳಿದಾಗಲೇ ನಾವು ಮೂರ್ಖರಾಗಿರುವುದರ ಅರಿವಾದುದು. ಆದರೇನೂ ಮಾಡುವಂತಿರಲಿಲ್ಲ. ಕಾಲ ಮಿಂಚಿಹೋಗಿತ್ತು.

ನಮ್ಮ ಕಾಲದ ಶಾಲೆಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದೆನಿಸುತ್ತದೆ. ಮುಂದಿನ ಬೆಂಚುಗಳಲ್ಲಿ ಊರಿನ ಗಣ್ಯರ ಶಾನುಭೋಗರ, ಕಂಟ್ರಾಕ್ಟರುಗಳ, ಅಧಿಕಾರಿಗಳ ಮಕ್ಕಳು ಕುಳಿತುಕೊಳ್ಳುತ್ತಿದ್ದರು. ಓದುಬರಹ ಬ್ರಾಹ್ಮಣರ ಹಕ್ಕು ಎಂದು ತಿಳಿದಿದ್ದ ಕಾಲ ಅದು. ಅಲ್ಲದೆ ಅವರು ಇತರರಿಗಿಂತ ಶ್ರೇಷ್ಠ ಎಂದು ಬ್ರಾಹ್ಮಣರೇ ಒಪ್ಪದಿದ್ದರೂ ನಮ್ಮವರು ಒಪ್ಪುತ್ತಿದ್ದರು. ಹೀಗಾಗಿ ನಮಗೆ ಯಾವಾಗಲೂ ಹಿಂದಿನ ಬೆಂಚು. ಅದಿಲ್ಲದಿದ್ದರೆ ನೆಲ. ನಾವು ಭೂಮಿತಾಯಿಯ ಮಕ್ಕಳಲ್ಲವೆ? ಆದರೆ ನಮ್ಮಲ್ಲಿ ಕೆಲವರಿಗಾದರೂ ಊರಲ್ಲಿ ಸೇರುತ್ತಿದ್ದ ಒಕ್ಕಲಿಗ ಮುಖಂಡರ ಪ್ರಭಾವದಿಂದಾಗಿ ನಾವು ಯಾರಿಗೂ ಕಡಿಮೆಯಲ್ಲ ಎಂಬ ಆತ್ಮಪ್ರತ್ಯಯವೂ ಇತ್ತು. ಇಂತಹ ಕೆಲವು ಸಂಗತಿಗಳಿಂದಾಗಿ ನಗರದ ಹುಡುಗರಿಗೂ ನಮಗೂ ಒಳಗೊಳಗೆ ವೈರತ್ವವಿತ್ತು. ಆದರೆ ಅವರು ನಮಗೆ ಹೆದರುತ್ತಿದ್ದರು. ಅವರಿಗಿದ್ದುದು ಅಧ್ಯಾಪಕರ ಬಲವೊಂದೆ. ನಾನು ಮಿಡಲ್‌ಸ್ಕೂಲ್ ಮುಗಿಸುವವರೆಗೂ ನಾಗಮಂಗಲದ ಆ ಶಾಲೆಗೆ ಒಬ್ಬರೂ ಬ್ರಾಹ್ಮಣೇತರ ಅಧ್ಯಾಪಕ ಅಥವಾ ಮುಖ್ಯೋಪಾಧ್ಯಾಯರೂ ಬರಲಿಲ್ಲ.

ಆ ಮುಂದೆ ಕೆಲವು ದಿನಗಳ ನಂತರ ಬಿ. ಎಂ. ಕಾಳಪ್ಪ ಎಂಬುವರು ಮುಖ್ಯೋಪಾಧ್ಯಾಯರಾಗಿ ಬಂದರು. ಅವರು ಯಾರೆಂಬುದನ್ನು ಈಗಿನ ಪ್ರಸಿದ್ಧಿಯ ಮೇಲೆ ಹೇಳಬಹುದಾದರೆ ಸುಪ್ರಸಿದ್ಧ ಚಲನಚಿತ್ರ ತಾರೆ ಬಿ. ಸರೋಜಾದೇವಿಯವರ ಪತಿ ಶ್ರೀಹರ್ಷ ಅವರ ತಂದೆ. ಶ್ರೀ ಕಾಳಪ್ಪನವರು ಒಕ್ಕಲಿಗರು. ಅವರು ನಾಗಮಂಗಲದ

ಶಾಲೆಗೆ ಸುತ್ತಲಿನ ಪಡುವಲ ಪಟ್ಟಣ, ತುಪ್ಪದ ಮಡು, ಪಾಲಗ್ರಹಾರ, ಅಂಚೆ ಚಿಟ್ಟನ ಹಳ್ಳಿ, ಕರಡಹಳ್ಳಿ ಶೆಟ್ಟಿಹಳ್ಳಿ ಮುಂತಾದ ಊರುಗಳಿಂದ ಬರುತ್ತಿದ್ದ ಹಳ್ಳಿಯ ಹುಡುಗರನ್ನೆಲ್ಲಾ ಮನೆಗೆ ಕರೆದೊಯ್ದು "ವಿದ್ಯೆಯಲ್ಲಿ ನೀವು ಹಿಂದೆ ಬೀಳುತ್ತಿದ್ದೀರಿ" ಎಂದು ಎಚ್ಚರಿಸುತ್ತಿದ್ದರು. ಆದರೆ ಕಾಲ ಮಿಂಚಿ ಹೋಗಿತ್ತು.

ಹೆಡ್ಮಾಸ್ಟರ್ ಕಾಳಪ್ಪನವರಿಗೆ ಹಳ್ಳಿಯ ಹುಡುಗರ ಸಮಸ್ಯೆಗಳು ತಿಳಿದಿದ್ದವು. ಆಗಿನ ಕಾಲದಲ್ಲಿ ಹಳ್ಳಿಗಳಲ್ಲಿ ಓದಿಗೆ ಯಾವುದೇ ಸೌಲಭ್ಯವಾಗಲಿ, ವಾತಾವರಣವಾಗಲಿ ಇರಲಿಲ್ಲ. ಆದುದರಿಂದ ಇಂತಹ ಮಕ್ಕಳಿಗೆ ಶಾಲೆಯಿರುವಲ್ಲಿಯೇ ಉಳಿದು ಓದಲನು ಕೂಲವಾಗುವಂತೆ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಬೇಕೆಂಬ ಆಸೆಯಿತ್ತು. ಅವರು ಹುಡುಗರ ಮೂಲಕ ಒಂದೊಂದು ಹಳ್ಳಿಗೂ ಮೊದಲೇ ಹೇಳಿಕಳಿಸಿ ಗೊತ್ತಾದ ದಿನ ದಂದು ತಮ್ಮ ಪತ್ನಿ ಯಶೋದಮ್ಮನವರೊಂದಿಗೆ ಆ ಊರಿಗೆ ಬರುತ್ತಿದ್ದರು. ನಮ್ಮ ಊರು ಪಾಲಗ್ರಹಾರ ಆಗಲೇ ಮಾದರಿ ಗ್ರಾಮವೆನಿಸಿಕೊಂಡಿತ್ತು. ಆ ಹೊತ್ತಿಗಾಗಲೇ ಕೆಲವು ಮನೆಗಳಿಗೆ ಬೆಳಕಿಂಡಿ ಹಾಕಿಸಿತ್ತು. ಇವು ಸಿಮೆಂಟ್‌ನಿಂದ ಮಾಡಿದಂಥವು.ಊರಿನ ಬೀದಿಗಳಿಗೆ ಚರಂಡಿ ವ್ಯವಸ್ಥೆಯಿತ್ತು. ಯಾರಾದರೂ ಸರ್ಕಾರಿ ಅಧಿಕಾರಿಗಳು ಮಾದರಿ ಗ್ರಾಮಗಳನ್ನು ಸಂದರ್ಶಿಸಲು ಬಯಸಿದರೆ ನಮ್ಮ ಊರಿಗೇ ಕರೆದು ತರುತ್ತಿದ್ದರು. ಈಗಿನ ವಿದೇಶಿಗಣ್ಯರನ್ನು ನಗರಗಳ ಮುಖ್ಯ ಬೀದಿಗಳಲ್ಲಿ ಮಾತ್ರ ಕರೆದೊಯ್ಯುವ ಪದ್ಧತಿಯಂತೆ. ಕಾಳಪ್ಪನವರು ಒಂದು ಸಂಜೆ ನಮ್ಮ ಊರಿಗೂ ಬಂದರು ಪತ್ನಿ ಯಶೋದಮ್ಮ ಸಹಿತರಾಗಿ.

ಮುಂದುವರಿದ ಹಳ್ಳಿಯವರಾದ ನಾವು ಕೆಲವರು ಆಗಲೇ ಓದಿನಲ್ಲಿ ಹಿಂದೆ ಬಿದ್ದು ಹಳ್ಳಿ ಸೇರಿದ್ದೆವಷ್ಟೆ. ನಮ್ಮ ಊರಿನ ಪಕ್ಕದಲ್ಲಿಯೇ ಅರ್ಧ ಮೈಲಿ ದೂರ ದಲ್ಲಿರುವ ಕಸುವನಹಳ್ಳಿಯ ಪುಟ್ಟೇಗೌಡರು ಒಳ್ಳೆಯ ವೇದಾಂತಿ. ಅವರು ದಿನವೂ ನಮ್ಮೂರಿನ ರಾಮಮಂದಿರದಲ್ಲಿ ಪುರಾಣಗಳನ್ನು ಓದಿ ಅರ್ಥ ಹೇಳುತ್ತಿದ್ದರು. ಅನಂತರ ಅವರು ಅಲ್ಲಿಯೇ ಮಲಗುತ್ತಿದ್ದರು. ಕಾಳಪ್ಪನವರು ಬಂದ ದಿನವೂ ಅವರ ಪ್ರವಚನ ನಡೆಯಿತು. ಕಾಳಪ್ಪನವರು ಅದನ್ನೇ ಉಪಯೋಗಿಸಿಕೊಂಡು "ನೋಡಿ ನೋಡಿ ನಿಮ್ಮ ಮಕ್ಕಳು ಚೆನ್ನಾಗಿ ಉಂಡು, ತಿಂದು ಓದುವಂಥ ಕಾಲ ವಯಸ್ಸು. ಆದರೆ ಬೆಳಿಗ್ಗೆ ರೊಟ್ಟಿ ತಿಂದು ಶಾಲೆಗೆ ಬಂದರೆ ಇನ್ನು ರಾತ್ರಿಯೇ ಊಟ. ಈ ಸ್ಥಿತಿಯಲ್ಲಿ ಓದು ಹೇಗೆ ತಲೆಗೆ ಹತ್ತೀತು ? ಆದುದರಿಂದ ನಿಮ್ಮ ಮಕ್ಕಳು ಚೆನ್ನಾಗಿ ಓದಬೇಕಾದರೆ ನಾಗಮಂಗಲದಲ್ಲಿಯೇ ಒಂದು ಹಾಸ್ಟಲ್ ಸ್ಥಾಪಿಸಿ ಅಲ್ಲಿ ಇರಿಸುವ ಏರ್ಪಾಡಾಗಬೇಕು. ಅದಕ್ಕಾಗಿ ನೀವೆಲ್ಲರು ಮುಂದೆ ಬರಬೇಕು" ಎಂದು ಸಲಹೆಮಾಡಿ ದರು. ಕಾಕತಾಳೀಯವೆಂಬಂತೆ ಶ್ರೀ ಆದಿಚುಂಚನಗಿರಿ ಮಠದ ಸ್ವಾಮಿಗಳು ಭಕ್ತನಾಥರೂ ಅಲ್ಲಿಗೆ ಬಂದಿದ್ದರು. ಅವರೂ ಕಾಳಪ್ಪನವರ ಸಲಹೆಯನ್ನು ಬಹಳ ವಾಗಿ ಮೆಚ್ಚಿ ಕೊಂಡಾಡಿದರು.

ಶ್ರೀ ಭಕ್ತನಾಥ ಸ್ವಾಮಿಗಳು ತಮ್ಮ ಪೂರ್ವಾಶ್ರಮದಲ್ಲಿ ಗುರುರಾಮಯ್ಯ ಆಗಿದ್ದಾಗಲೇ ಮೇಲುಕೋಟೆಯಲ್ಲಿ ಧರ್ಮಛತ್ರವೊಂದನ್ನು ಸುಮಾರಾಗಿ ನಿರ್ಮಿಸಿ ಕೈ ಬಿಟ್ಟಿದ್ದರು. ಕಾಳಪ್ಪನವರ ಸಲಹೆಯನ್ನು ಕೇಳಿದನಂತರ ಕಸುವನಹಳ್ಳಿ ಪುಟ್ಟೇ ಗೌಡರಿಗೆ ಸನ್ಯಾಸ ದೀಕ್ಷೆಯಿತ್ತು ಶಿವಾನಂದಸ್ವಾಮಿಗಳೆಂದು ನಾಮಕರಣ ಮಾಡಿ ಅವರನ್ನು ಮೇಲುಕೋಟೆಯ ಧರ್ಮಛತ್ರದ ವಿದ್ಯಾರ್ಥಿ ನಿಲಯದ ಅಧಿಕಾರಿ ಮಾಡಿದರು. ಪ್ರಾರಂಭದ ದಿನಗಳಲ್ಲಿ ಸ್ವತಹ ಸ್ವಾಮಿಗಳೇ ಕೆಲವುಕಾಲ ಅಲ್ಲಿ ವಾಸ್ತವ್ಯ ಮಾಡಿ ಸುತ್ತಮುತ್ತಲಿನ ಗಣ್ಯರಾದ ಕ್ಯಾತನಹಳ್ಳಿ ಬೋರೇಗೌಡರು, ಲಕ್ಷ್ಮೀ ಸಾಗರದ ಚಿಕ್ಕ ಪುಟ್ಟೇಗೌಡರು, ಮಾದೇಶ್ವರಪುರದ ಸಣ್ಣಪ್ಪನವರು, ಕಂಟ್ರಾಕ್ಟರ್ ವೆಂಕಟೇ ಗೌಡರು, ಸೀಳನೆರೆ ತಮ್ಮೇಗೌಡರು, ಚಿಕ್ಕಣ್ಣನವರು, ಶಂಭೂನಹಳ್ಳಿ ಮರಿಗೌಡರು. ನ್ಯಾಮನಹಳ್ಳಿ ಬೋರೇಗೌಡರು, ಕಾಡೇನಹಳ್ಳಿ, ಕದಲಗೆರೆ, ಬಳಿಘಟ್ಟಗಳ ಮುಖಂಡರು ಹೀಗೆ ಅನೇಕರಿಂದ ದಾನ ಪಡೆದು ಆ ವಿದ್ಯಾರ್ಥಿನಿಲಯ ಸಾರೋದ್ಧಾರವಾಗಿ ನಡೆಯು ವಂತೆ ಏರ್ಪಾಡು ಮಾಡಿದರು. ಕರ್ನಾಟಕ ವಿಧಾನ ಸಭೆಯ ದಕ್ಷ ಕಾರ್ಯದರ್ಶಿಯಾಗಿ ನಿವೃತ್ತರಾಗಿ ಈಗ ಲೋಕಸೇವಾ ಆಯೋಗದ ಸದಸ್ಯರಾಗಿರುವ ಕೆ. ಸಿಂಗ್ರಿಗೌಡರು ಬೆಂಗಳೂರು ಕಾರ್ಪೊರೇಷನ್ನಿನ ಮೇಯರ್ ಆಗಿದ್ದ ಟಿ. ಕೆ. ತಿಮ್ಮರಾಯಿಗೌಡರು, ಕನ್ನಡದ ಹೆಸರಾಂತ ಸಾಹಿತಿ ಸಂಶೋಧಕ ಹ. ಕ. ರಾಜೇಗೌಡರು, ಮಂಡ್ಯದಿಂದ ಪಿ. ಟಿ. ಐ. ವರದಿಗಾರರಾಗಿರುವ ಕೆ. ಎನ್. ನರಸಿಂಹೇಗೌಡರು ಹೀಗೆ ಅನೇಕರು ಈ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ವ್ಯಾಸಂಗ ಮಾಡಿದವರು. ಇಂದು ನಾಡಿನ ನಾನಾ ಕ್ಷೇತ್ರಗಳಲ್ಲಿ ಪ್ರಮುಖರಾಗಿದ್ದಾರೆ, ಇವರೆಲ್ಲರ ಶ್ರೇಯಸ್ಸಿನ ಕೀರ್ತಿ ಶ್ರೀ ಕಾಳಪ್ಪನವ ರಿಗೆ ಸಲ್ಲಬೇಕು.

ನಾವು ಓದುತ್ತಿದ್ದ ಕಾಲದಲ್ಲಿ ಉಪಾಧ್ಯಾಯರಾಗಿ ಬರುತ್ತಿದ್ದವರೆಲ್ಲ ಬ್ರಾಹ್ಮಣರೇ ಆದರಲ್ಲೂ ಸ್ಥಳೀಯರೇ ಆಗಿರುತ್ತಿದ್ದರು. ಸ್ಥಳೀಯರಾದುದರಿಂದ ಸಂಪ್ರದಾಯ ಜಾತಿಯಸಂಗತಿಗಳು ಪ್ರಬಲವಾಗಿಯೇ ಇರುತ್ತಿದ್ದವು. ರೋಗಿ ಬಯಸಿದ್ದು ಅದೇ ವೈದ್ಯ ಹೇಳಿದ್ದೂ ಅದೇ ಎಂಬಂತೆ ಅವರು ನಮ್ಮ ವಿದ್ಯೆಯ ಅಲಕ್ಷ್ಯತೆಗೆ ಬೆಂಬಲವನ್ನೇ ಕೊಡುತ್ತಿದ್ದರು. ಹೀಗಿದ್ದರೂ ಎಲ್ಲ ಬ್ರಾಹ್ಮಣ ಉಪಾ ಧ್ಯಾಯರೂ ನಮ್ಮ ಬಗ್ಗೆ ತಿರಸ್ಕಾರ ಹೊಂದಿರಲಿಲ್ಲ ಅನ್ನಿಸುತ್ತದೆ. ಕೃಷ್ಣೈಯಂಗಾರ್ ಎಂಬ ಕನ್ನಡ ಪಂಡಿತರಿದ್ದರು. ಅವರಿಗೆ ಸ್ವಲ್ಪ ಕಿವುಡಿತ್ತು. ನಾವು ಎಲ್ಲ ಬ್ರಾಹ್ಮಣ ಉಪಾಧ್ಯಾಯರಿಗೆ ಕೊಡುವಂತೆಯೇ ಇವರಿಗೂ ತರಕಾರಿ ದವಸ ಧಾನ್ಯ ಕೊಡು ತ್ತಿದ್ದೆವು. ಮಿಕ್ಕವರು ಕೊಡುವ ಕರ್ಮ ನಿಮ್ಮದು. ನಮ್ಮದು ಈಸಿ ಕೊಳ್ಳುವ ಧರ್ಮ ಎಂಬಂತೆ ನಮ್ಮ ಬಗ್ಗೆ ನಡೆದು ಕೊಳ್ಳುತ್ತಿದ್ದರು. ಆದರೆ ಕೃಷ್ಣೈಯಂಗಾರ್ಯರು ನಾವು ಕೊಟ್ಟಿದ್ದರಲ್ಲಿ ವಿಶೇಷ ಮಾಡಿದಾಗ ನಮಗೂ ಕೊಡುತ್ತಿದ್ದರು. ಅಷ್ಟೆ ಅಲ್ಲ ಅವರ ಗಮನ ಕೊನೇ ಬೆಂಚಿನ ಪ್ರಭುಗಳಾದ ನಮ್ಮ ಬಗ್ಗೆಯೂ ವಿಶೇಷವಾಗಿರುತ್ತಿತ್ತು.

ಸರಿಯಾಗಿ ಓದಿಕೊಂಡು ಉತ್ತರ ಹೇಳದಿದ್ದರೆ ಲಾತಾ ಕೊಡುತ್ತಿದ್ದರು, "ಅಲ್ರೋ ಕೆಪರ ಮುಂಡೇವ ನಿಮ್ಮ ಅಪ್ಪ ಅಮ್ಮ ನನ್ನ ಮಗ ನಾಗಮಂಗಲದಲ್ಲಿ ಓದಿ ದೊಡ್ಡವ ನಾಗ್ತಾನೆ ಅಂತ ಆಸೆ ಇಟ್ಟು ಕೊಂಡಿರ್ತಾರೆ. ಇಲ್ಲಿ ನೋಡಿದರೆ ನಿಮಗೆ ತಾ ಅಪ್ರೆ ತೋ ಅನ್ನೋಕು ಬರದಲ್ರೋ" ಎಂದು ಛೇಡಿಸಿ ಮತ್ತೆ ಮತ್ತೆ ಹೇಳಿ ಅಲ್ಪ ಸ್ವಲ್ಪ ನಮ್ಮ ಮೆದುಳಿಗೆ ಹೋಗುವಂತೆಯೂ ಮಾಡುತ್ತಿದ್ದರು.

ನನ್ನ ವಿದ್ಯೆ ನೈವೇದ್ಯವಾಗುವ ಮೊದಲೇ ನಮ್ಮ ಊರಿನ ನನ್ನ ದಾಯಾದಿ ಚಿಕ್ಕನರಸಿಂಹಯ್ಯ ಎಂಬುವರು ನಾಗಮಂಗಲದ ತಮ್ಮ ಶಿಕ್ಷಣ ಮುಗಿಸಿ ಮೈಸೂರಿನಲ್ಲಿ ನೆಂಟರ ಮನೆಯಲ್ಲಿದ್ದುಕೊಂಡು ಹೈಸ್ಕೂಲು ಸೇರಿದ್ದರು. ಅವರೂ ನನ್ನ ಹಾಗೆ ತುಂಬಾವಾಚಾಳಿ. ಮುಂದೆ ಅವರು ಕಾಲೇಜಿನಲ್ಲಿ ಹಿಂದಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿ ಮೈಸೂರಿನಲ್ಲಿಯೇ ನೆಲೆಸಿದ್ದಾರೆ. ಇವರು ರಜಾ ದಿನಗಳಲ್ಲಿ ಊರಿಗೆ ಬರುತ್ತಿದ್ದರಷ್ಟೆ. ಆಗ ಒಮ್ಮೆ ಬಂದಾಗ ಕೆ. ವಿ. ಪುಟ್ಟಪ್ಪನವರ ರಕ್ತಾಕ್ಷಿ ನಾಟಕವನ್ನು ನನಗೆ ಪರಿಚಯಿಸಿದರು. ನಾಟಕ ನನ್ನನ್ನು ಆಕರ್ಷಿಸಿದುದರ ಜೊತೆಗೆ ಅದರಲ್ಲಿದ್ದ ಕವಿಗಳ ಭಾವ ಚಿತ್ರವೂ ನನ್ನಲ್ಲಿ ಅವರ ಬಗ್ಗೆ ಭಕ್ತಿ ಗೌರವ ಮೂಡಿಸಿತು. ಅವರೂ ನಮ್ಮ ಜಾತಿಯವರೆಂಬ ಹೆಮ್ಮೆ ಬೇರೆ, ಅವರಿಗಿಲ್ಲದಿದ್ದರೂ. ಚಿಕ್ಕನರಸಿಂಹಯ್ಯನವರು ರಕ್ತಾಕ್ಷಿನಾಟಕವನ್ನು ಅಭಿನಯ ಪೂರ್ವಕವಾಗಿ ವಾಚಿಸಿದರು. ನಾನು ಆ ನಾಟಕಕ್ಕೆ ಮಾರು ಹೋದೆ. ಆದರೆ ಅದು ದುರಂತದಲ್ಲಿ ಕೊನೆಗೊಂಡುದು ನನಗೆ ಹಿಡಿಸಲಿಲ್ಲ. "ಈ ಕವಿಗೇನು ಬಂತು, ಪಾಪ. ರುದ್ರಾಂಬೆ, ಬಸವಯ್ಯರಿಗೆ ಮದುವೆ ಮಾಡಿಸಿದ್ದರೆ ಗಂಟೇನು ಹೋಗುತ್ತಿತ್ತು" ಎಂದು ಚಿಕ್ಕನರಸಿಂಹಯ್ಯನವರಲ್ಲಿ ಹೇಳಿದೆ. ಅವರು ನಿಮಗೆ ಸಿಕ್ಕಿದರೆ ರಕ್ತಾಕ್ಷಿಯ ಮುಂದಿನ ಭಾಗ ಬರೆಯಲು ಹೇಳುತ್ತೀರಾ ಎಂದು ಹೇಳಿದೆ.ಅದಕ್ಕವರು "ಅವರನ್ನು ಭೇಟಿಯಾಗುವುದು ಕಷ್ಟ. ಅವರ ಹತ್ತಿರ ಮಾತನಾಡುವುದಂತೂ ಸಾಧ್ಯವೇ ಇಲ್ಲದ ಮಾತು" ಎಂದರು. ನನಗೆ ಅಸಮಾಧಾನವಾಯಿತು. "ಏನಯ್ಯ ಕಾಲೇಜು ಮೇಷ್ಟ್ರು ಅಂತೀಯ, ಅವರೊಂದಿಗೆ ಮಾತನಾಡಲು ಸಾಧ್ಯವಿಲ್ಲ ಅಂತೀಯ ಇನ್ನು ನೀನು ನಾಗಮಂಗಲದ ಅಮಲ್ದಾರ್ರು, ಸುಬೇದಾರ್ರು, ಶೇಕದಾರ್ರ ಜೊತೆ ಮಾತಾಡಿದಂತೆಯೆ" ಎಂದು ಛೇಡಿಸಿದೆ. ಒಕ್ಕಲಿಗ ಮುಖಂಡರ ಸಭೆಗಳಲ್ಲಿ ಭಾಗವಹಿಸಿ, ಅವರೊಂದಿಗೆ ಮಾತನಾಡಿದ್ದ ನನಗೆ ಯಾರೊಂದಿಗೆ ಬೇಕಾದರೂ ಮಾತನಾಡುವ ಧೈರ್ಯವಿತ್ತು. ಚಿಕ್ಕನರಸಿಂಹಯ್ಯನವರಿಂದ ರಕ್ತಾಕ್ಷಿ ಪಡೆದುಕೊಂಡದ್ದಲ್ಲದೆ ಪುಟ್ಟಪ್ಪನವರ ಎಲ್ಲ ಪುಸ್ತಕಗಳನ್ನೂ ಕೊಂಡು ನನಗೆ ಕಳಿಸಿ ಕೊಡುವಂತೆ ಚಿಕ್ಕನರಸಿಂಹಯ್ಯನವರಿಗೆ ತಿಳಿಸಿದೆ. "ಈ ಸಾರಿ ಫೌಜಿಗೆ ನೀನೂ ಬಾ ಪುಟ್ಟಪ್ಪನವರನ್ನು ನೋಡಬಹುದು" ಎಂದರು ಚಿಕ್ಕನರಸಿಂಹಯ್ಯ. ಫೌಜು ಎಂದರೆ ಮೈಸೂರಿನ ಸುಪ್ರಸಿದ್ಧ ದಸರಾ ಉತ್ಸವ. ಬಹುಶಃ ಹಿಂದೆ ಇದು ಸೇನೆಯ ಮೆರವಣಿಗೆಯಾಗಿರುತ್ತಿದ್ದುದರಿಂದ ಈ ಹೆಸರು

ಬಂದಿರಬೇಕು. ಈಗಲೂ ಹಳ್ಳಿಯ ಕಡೆಯ ಹಳಬರು ಪೌಜು ಎಂದೇ ಹೇಳುತ್ತಾರೆ.

ಆಗಿನ ಕಾಲದಲ್ಲಿ ಮೈಸೂರಿಗೆ ಹೋಗಿ ಬರಲು ನಮ್ಮ ಕಡೆಯಿಂದ ರೈಲಾಗಲಿ, ಬಸ್ಸಾಗಲಿ ಇರಲಿಲ್ಲ. ಅಲ್ಲದೆ ಆಗ ಹಳ್ಳಿಗರಿಗೆ ಈಗಿನಂತೆ ರಾಜಧಾನಿಗಳಲ್ಲಿ ಕೆಲಸವೂ ಇರುತ್ತಿರಲಿಲ್ಲ. ಮಹಾರಾಜರ ವರ್ಧಂತಿ, ದಸರ ಇತ್ಯಾದಿ ಉತ್ಸವಗಳಿಗೆ ಹೋಗಿ ಮೈಸೂರು ನೋಡಲು ಅಪೇಕ್ಷಿಸುವಂಥವರು ಗಾಡಿಗಳಲ್ಲಿ ಹೋಗುತ್ತಿದ್ದರು. ಹೀಗೆ ಒಂದು ಊರಿಂದ ಹೊರಡುವ ಗಾಡಿಗಳೇ ನಾಲ್ಕಾರು ಇರುತ್ತಿದ್ದುವು. ನಮ್ಮೂರು ಪಾಲಗ್ರಹಾರದಿಂದ ಮೈಸೂರಿಗೆ ನಲವತ್ತೆರಡು ಮೈಲಿ ದೂರ. ಗಾಡಿ ಬಾಡಿಗೆ ಆರು ರೂಪಾಯಿಗಳು, ರಾತ್ರಿ ಊಟ ಮುಗಿಸಿ ಗಾಡಿ ಹೂಡುತ್ತಿದ್ದರು. ಎತ್ತಿನ ಕೊರಳು ಗಳಿಗೆ ಗೆಜ್ಜೆಸರ ಕಟ್ಟಿರುತ್ತಿದ್ದರು. ಗಾಡಿಗಳು ಸಾಲಾಗಿ ಹೊರಡುತ್ತಿದ್ದವು. ಹಿಂದಿನ ಗಾಡಿಯಲ್ಲಿ ಇಬ್ಬರು ಮುಂದಿನ ಗಾಡಿಯಲ್ಲಿ ಇಬ್ಬರು ಶಕ್ತರಾದವರು ಕಾವಲಿಗಿದ್ದು ಎಚ್ಚರವಾಗಿರುತ್ತಿದ್ದರು. ಮಿಕ್ಕಂತೆ ಹೆಂಗಸರು ಮಕ್ಕಳು, ಗಾಡಿ ಹೊಡೆಯುವವರೂ ಸಹ ಹಾಯಾಗಿ ಮಲಗುತ್ತಿದ್ದರು. ಆ ರಸ್ತೆಯಲ್ಲಿ ಹೋಗಿ ಬಂದು ಅನುಭವವಿದ್ದ ಎತ್ತುಗಳೇ ಮುಂದಿರುತ್ತಿದ್ದುವಾದುದರಿಂದ ಮಿಕ್ಕವು ಅವನ್ನು ಹಿಂಬಾಲಿಸುತ್ತಿದ್ದವು. ಎತ್ತುಗಳ ಗೊರಸಿನ ಸದ್ದು, ಕೊರಳ ಗೆಜ್ಜೆಯನಾದ ನಿಶ್ಶಬ್ದವಾದ ಆ ರಾತ್ರಿಯಲ್ಲಿ ಒಂದು ಅದ್ಭುತವಾದ ಅನುಭವ. ಮಾರನೆ ಬೆಳಗಿನ ಹೊತ್ತಿಗೆ ಗಾಡಿಗಳು ಹಿರೋಡೆ (ಈಗಿನ ಪಾಂಡವಪುರ) ತಲುಪುತ್ತಿದ್ದವು. ಅಲ್ಲಿನ ಮುಸಾಫಿರಖಾನೆಯ ಆವರಣದಲ್ಲಿ ಗಾಡಿ ಬಿಟ್ಟು ಅಡಿಗೆ ಊಟಗಳ ಏರ್ಪಾಟು ಮಾಡುತ್ತಿದ್ದರು. ಕೆಲವರು ಶ್ರೀ ರಂಗ ಪಟ್ಟಣದ ಹತ್ತಿರದ ಕಾವೇರಿ ತೀರದವರೆಗೆ ಹೋಗುತಿದ್ದುದೂ ಉಂಟು, ಮತ್ತೆ ಸಂಜೆ ತಂಪು ಹೊತ್ತಿನವರೆಗೆ ಅಲ್ಲಿಯೇ ವಿಶ್ರಾಂತಿ. ಸಂಜೆ ನಾಲ್ಕರನಂತರ ಗಾಡಿ ಹೂಡಿ ರಾತ್ರಿಮೈಸೂರು ಸೇರುತ್ತಿದ್ದರು. ನೆಂಟರಿಷ್ಟರಿದ್ದವರು ಅವರ ಮನೆಗಳಿಗೆ ಹೋದರೆ ಅವುಗಳಿಲ್ಲದವರು ಗಾಡಿಚೌಕಗಳಲ್ಲಿಯೇ ಬಿಡಾರ ಮಾಡುತ್ತಿದ್ದರು.

ಮೈಸೂರಿನಲ್ಲಿ ನೆಂಟರಮನೆಗಳಿದ್ದವರು ಅವರ ಮನೆಗಳಿಗೆ ಹೋಗುತ್ತಿದ್ದ ರೆಂದೆನಲ್ಲವೆ ? ಪಾಪ ! ಅಂತಹವರು ಮೈಸೂರಲ್ಲಿದ್ದರೂ ದಸರೆಯನ್ನೇ ನೋಡ ಲಾಗುತ್ತಿರಲಿಲ್ಲ. ಬಂದ ನೆಂಟರಿಗೆ ತಿಂಡಿ, ಮಧ್ಯಾಹ್ನದ ಊಟ, ರಾತ್ರಿಯ ಊಟ ತಯಾರಿಸುವುದೇ ಆಗಿ ಹೋಗುತ್ತಿತ್ತು. ಆಗಿನ ಕಾಲದಲ್ಲಿ ದಸರೆಗೆ ಹೋದವರು ಆಯುಧ ಪೂಜೆಯ ಹಿಂದಿನ ದಿನ ಮೈಸೂರು ತಲುಪಿದರೆ ಚಾಮುಂಡೇಶ್ವರಿಯ ರಥೋತ್ಸವದ ನಂತರವೇ ಹೊರಡುತ್ತಿದ್ದುದು. ಮೈಸೂರಿನಲ್ಲಿ ನಮ್ಮ ಸೋದರತ್ತೆಯ ಮನೆಯಿದ್ದು, ಅವರು ಅನುಕೂಲಸ್ಥರೂ ಆಗಿದ್ದರು. ಎರಡು ಮೂರು ವರ್ಷಕ್ಕೊಮ್ಮೆ ನಮ್ಮ ಮನೆಯವರು ಗಾಡಿಯಲ್ಲಿ ಮೈಸೂರಿಗೆ ಹೋಗಿ ಬರುತ್ತಿದ್ದೆವು. ಈ ಬಾರಿಯ ದಸರಕ್ಕೆ ಹೋದ ನಾನು ಬಂಧು ಚಿಕ್ಕ ನರಸಿಂಹಯ್ಯ ನವರಲ್ಲಿ ಉಳಿದೆ. ದಸರೆಯೆಲ್ಲ ಮುಗಿದ ನಂತರ ನನ್ನ ಸಾಹಿತ್ಯಾಸಕ್ತಿಯ ಪುಟ್ಟಪ್ಪ

ನವರ ಪುಸ್ತಕ ಕೊಳ್ಳಲು ಚಿಕ್ಕಗಡಿಯಾರದ ಹತ್ತಿರದ ಪುಸ್ತಕದ ಅಂಗಡಿಯೊಂದಕ್ಕೆ ಹೋದೆ. ಆ ಅಂಗಡಿಯವನು ಅವನು ವೈಶ್ಯ ಎಂದು ಭಾವಿಸಿದ್ದೇನೆ "ಅವು ಈ ಊರಲ್ಲಿ ಸಿಗುವುದಿಲ್ಲ. ಶಿವಮೊಗ್ಗದಲ್ಲಿ ಸಿಗುತ್ತವೆ. ಅವೇನು ಪತ್ರ ಪುಸ್ತಕಗಳೆ ಏನು ? ಅವುಗಳಿಗೇಕೆ ಒದ್ದಾಡುತ್ತೀರಿ" ಎಂದು ಮುಂತಾಗಿ ಪುಟ್ಟಪ್ಪನವರ ಬಗ್ಗೆ ಅವರ ಪುಸ್ತಕಗಳ ಬಗ್ಗೆ ಅಸಾದರಣೆಯಿಂದ ಮಾತನಾಡಿದ. ನಾನು ಈ ಮೊದಲೇ ಹೇಳಿರುವಂತೆ ವಾದಕ್ಕೆ ನಿಲ್ಲುವ ಸ್ವಭಾವದವನು. ಸರಿ ಪುಸ್ತಕದ ಅಂಗಡಿಯವ ನೊಂದಿಗೆ ಕಾಲು ಕೆರೆದು ಜಗಳಕ್ಕೇ ನಿಂತೆ. ದಸರೆಗೆ ಬಂದಿದ್ದ ಜನಗುಂಪು ಸೇರಿದರು. ಶೆಟ್ಟರಿಗೂ ಜನ ಕಂಡು ಭಯವಾಗಿರಬೇಕು. ತೆಪ್ಪಗಾದರು. ಹಳ್ಳಿಯ ಹುಡುಗನೊಬ್ಬ ನಗರದ ಶೆಟ್ಟರನ್ನು ಬಾಯಿ ಮುಚ್ಚಿಸಿದ್ದು ಅನೇಕರಿಗೆ ಆಶ್ಚರ್ಯವಾಗಿರಬೇಕು, ಅವರಲ್ಲಿ ಕೆಲವರು ನನ್ನ ಊರು, ಕೇರಿ ವಿಚಾರಿಸಿಕೊಂಡು ಶಹಬ್ಬಾಸ್ ಗಿರಿಯನ್ನು ಕೊಟ್ಟರು.

ಮೈಸೂರಿನ ಅಂಗಡಿಯ ಮುಂದೆ ಉಂಟಾದ ಈ ಗಲಾಟೆ ನನಗೆ ಎರಡು ಪ್ರಮುಖ ಅನುಕೂಲಗಳನ್ನು ಉಂಟುಮಾಡಿತು. ಒಂದು ಒಳ್ಳೆಯ ಮಾತುಗಾರಿಕೆ, ವಾದಸರಣಿ ಜನರಲ್ಲಿ ಗೌರವಭಾವನೆ ಮೂಡಿಸುತ್ತದೆ. ಎರಡನೆಯದು ಅನ್ಯಾಯವನ್ನು ವಿರೋಧಿಸುವಂತವನಿಗೆ ಜನ ಬೆಂಬಲ ದೊರೆಯುತ್ತದೆ. ಈ ಸಂದರ್ಭದಲ್ಲಿ ಅನೇಕರು ನನ್ನ ವಿವರ ಕೇಳಿದರಷ್ಟೆ. ನಾನು ಪಾಲಗ್ರಹಾರದವನೆಂದು ಬೆಳ್ಳೂರಿನ ಹತ್ತಿರದ ಜವರನ ಹಳ್ಳಿಯ ಬೋರೇಗೌಡ ಎಂಬುವರು ನನ್ನ ಪರಿಚಯ ಮಾಡಿಕೊಂಡರು. ನನ್ನನ್ನು ಅವರ ಕೊಠಡಿಗೆ ಕರೆದೊಯ್ದು ಪುಟ್ಟಪ್ಪನವರ ಹಾಳೂರು ಪುಸ್ತಕ ಕೊಟ್ಟರು. ಅದನ್ನು ಅಲ್ಲೇ ಕುಳಿತು ಓದಿದೆ. ಆ ಓದಿನಿಂದ ನನಗಾದ ಅನುಭವ ಶ್ರೀರಾಮಾಯಣ ದರ್ಶನಂ ಮಹಾಕಾವ್ಯವನ್ನು ಓದಿದಾಗಲೂ ಆಗಲಿಲ್ಲ ಎಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ಇದೇ ಮೈಸೂರಿಗೆ ಕೊನೆಯ ಗಾಡಿ ಪಯಣ. ಮುಂದೆ ನಾಗಮಂಗಲ ದಿಂದ ಎರಡು ಬಸ್ಸುಗಳು ಮೈಸೂರಿಗೆ ಹೋಗಲಾರಂಭಿಸಿದವು. ಈ ಬಸ್ಸಿನಲ್ಲಿ ನಮ್ಮೂರ ಅಗಸರ ಬೋನಾಸಿ ಮತ್ತು ಅವನ ಹೆಂಡತಿ ಹೋಗಿ ಬಂದರು.

ಆಗಿನ ಕಾಲದ ಗ್ರಾಮಾಂತರ ಸಂಗತಿ ಕೆಲವನ್ನು ಇಲ್ಲಿಯೇ ಹೇಳಿದರೆ ಒಳ್ಳೆಯ ದೆಂದು ಕಾಣುತ್ತದೆ. ಹಳ್ಳಿಗಳಲ್ಲಿ ಆಗ ಈಗಿನಂತೆ ಜಾತಿ ಜಗಳಗಳಿರಲಿಲ್ಲ. ಅವನು ಯಾವ ಜಾತಿಯವನೇ ಆಗಿರಲಿ ಅವನ ವಯಸ್ಸಿಗೆ ತಕ್ಕಂತೆ ಅಣ್ಣ, ಮಾವ ಇತ್ಯಾದಿ ಯಾಗಿ ಅವಳ ವಯಸ್ಸಿಗೆ ತಕ್ಕಂತೆ ಅಕ್ಕಾ, ಅತ್ತೆ ಇತ್ಯಾದಿಯಾಗಿ ಕರೆಯುತ್ತಿದ್ದರು. ಜಾತಿ ಬೇರೆ ಬೇರೆಯಾಗಿದ್ದು ಕೊಟ್ಟು ತರುವುದಾಗಲಿ ಪರಸ್ಪರ ಮನೆಗಳಲ್ಲಿ ಉಣ್ಣುವು ದಾಗಲಿ ಇರಲಿಲ್ಲ. ಆದರೆ ಹಳ್ಳಿಗಳಲ್ಲಿ ಅಸ್ಪೃಶ್ಯತೆ ಇರಲಿಲ್ಲ. ನಾನು ಈ ಅಗಸರ ಬೋನಾಸಿಯನ್ನು ಮಾವ ಎಂದೂ ಅವನ ಹೆಂಡತಿಯನ್ನು ಅತ್ತೆಯೆಂದೂ ಕರೆಯು ತ್ತಿದ್ದೆ. ಅವರಿಬ್ಬರೂ ಮೈಸೂರಿನಿಂದ ಬಂದಮೇಲೆ "ಏನು ಮಾವ ದಸರ ಹೇಗಿತ್ತು?"

ಎಂದೆ. ಆಗ ಅವನು ತಾನು ದಸರೆಗೆ ಹೋಗಿಬಂದುದರ ಕುರುಹಾಗಿ ಗೌಡರ ಮನೆಗೆ ಮಿಠಾಯಿ ಹಂಚಲು ಬಂದಿದ್ದ, ಈಗಿನವರು ತಿರುಪತಿಗೋ ಧರ್ಮಸ್ಥಳಕ್ಕೋ ಹೋಗಿ ಬಂದು ಪ್ರಸಾದ ಹಂಚುವಂತೆ. ಬೋನಾಸಿ ಹೇಳಿದ ಕಥೆಯೊಂದು ಸ್ವಾರಸ್ಯವಾಗಿದೆಯಷ್ಟೇ ಅಲ್ಲ ಆಗಿನ ಕಾಲದ ಸಮಾಜದ ಸ್ಥಿತಿಯನ್ನು ತಿಳಿಸುತ್ತದೆ. ನಾನು ದಸರಾ ಹೆಂಗಿತ್ತು ಅಂದೆನೊ ಇಲ್ಲವೊ "ಅಯ್ಯೋ ಬುಡಪ್ಪ ದಸರ ಉಪವಾಸ ಸಾಯೊಂಗ್ಮಾಡ್ತು ಎಂದ." "ಯಾಕೆ ರೊಟ್ಟಿ ಬುತ್ತಿ ತಕೊಂಡೋಗಿರಲಿಲ್ವೆ" ಅಂದೆ. "ಅಯ್ಯೋ ತಕೊಂಡೋಗಿದ್ದ್ವಪ್ಪ ಅವನು ನಿಮ್ಮ ಮಾವನ ಬಸ್ ಡ್ರೈವರು ಬುಡನ್ ಸಾಬಿ ಅದ ಮುಟ್ಟಿದ" ಎಂದ. ಅದು ಆದುದು ಹೀಗೆ. ಬೋನಾಸಿ ಮತ್ತು ಆತನ ಪತ್ನಿ ಮೈಸೂರಿನಲ್ಲಿ ತಮಗೆ ಎಂಟು ದಿನಗಳಿಗೆ ಬೇಕಾಗುವ ರೊಟ್ಟಿ ಬುತ್ತಿ ಮಾಡಿ ಒಂದು ಗೋಣಿಚೀಲದಲ್ಲಿ ಆ ಗಂಟುಗಳನ್ನೆಲ್ಲಾ ತುಂಬಿ ತೆಗೆದುಕೊಂಡು ಹೋದರು. ಬೇಯಿಸಿದ ವಸ್ತುಗಳು ಎಂಟು ದಿನ ಕೆಡದೆ ಇರಲು ಹೇಗೆ ಸಾಧ್ಯ ಎಂದು ಈಗಿನವರು ಫ್ರಿಜ್ ಇತ್ಯಾದಿ ಇಟ್ಟಿರುವವರು ಕೇಳಬಹುದು. ಆಗಿನ ಕಾಲದಲ್ಲಿ ಹಳ್ಳಿಗರು ಪಯಣಕ್ಕಾಗಿ ಹಾಕುತ್ತಿದ್ದ ವಿವಿಧ ರೊಟ್ಟಿಗಳು, ಅಡಕೆ ಹಾಳೆಯಲ್ಲಿ ಕಟ್ಟುತ್ತಿದ್ದ ಬುತ್ತಿಗಳು ಎಂಟು ದಿನವಲ್ಲ ಹದಿನೈದು ದಿನವೂ ಕೆಡುತ್ತಿರಲಿಲ್ಲ. ಆ ರುಚಿಯನ್ನು ನೆನೆಸಿಕೊಂಡರೆ ಇಂದೂ ಬಾಯಲ್ಲಿ ನಿರೂರುತ್ತದೆ.

ದಸರಾ ಕಾಲವಾದುದರಿಂದ ಬಸ್ಸು ಜನರಿಂದ ತುಂಬಿತ್ತು. ಕಾಲಿಡಲು ಸ್ಥಳವಿಲ್ಲವಂತೆ. ಬೋನಾಸಿ ಪತ್ನಿ ಮತ್ತು ಮೂಟೆ ಸಮೇತನಾಗಿ ಕುಳಿತಿದ್ದ. ಬುಡನ್ ಸಾಬಿ ಬಂದವನೆ "ಯಾರ್ದು ಈ ಮೂಟೆ ? ಜನ್ಕೆ ಕುಂತ್ಕಳಾಕೆ ಜಾಗಿಲ್ಲ ಮೂಟೆ ಬ್ಯಾರೆ ಒಳ್ಗೆ ಹಾಕಿದೀರಲ್ಲ, ಮೇಲಾಕಿ" ಎಂದವನೆ ಅದನ್ನು ತೆಗೆದು ಬಸ್ಸಿನ ಮೇಲೆ ಒಗೆದನಂತೆ. ಬೋನಾಸಿ ಹೆಂಡ್ತಿ "ಹೋಯ್ತಲ್ಲೊ ತಿನ್ನೋ ಅನ್ನ ಮುಟ್ಟಿ ಕೆಡಿಸ್ದಲ್ಲೋ" ಅಂತ ಬುಡನ್‌ಗೆ ಶಾಪ ಹಾಕಿದಳು. "ಸಾಬರು ಮುಟ್ಟಿದ್ದನ್ನ ಎಲ್ಲಾದರೂ ತಿಂದೋರುಂಟೆ ? ಅದೇನ್ ಜಾತಿ ಕುಲ ಇಲ್ವೆ" ಎಂದು ಹೌಹಾರಿದಳು. ಬುಡನ್ ಮುಟ್ಟಿದ್ದು ಗೋಣಿಚೀಲ ಎಂದರೂ ಕೇಳದೆ ಬೋನಾಸಿ ಹೆಂಡತಿ ರೊಟ್ಟಿ ಬುತ್ತಿ ಮುಟ್ಟಲೇ ಇಲ್ಲವಂತೆ. ಹೋಟ್ಲಿಗೆ ಕರೆದುಕೊಂಡು ಹೋದರೆ ಮೂರುಕಾಸಿಗೊಂದರಂತೆ ಮುವ್ವತ್ತು ದೋಸೆ ತಿಂದರೂ ಆಕೆಯ ಹೊಟ್ಟೆ ತುಂಬದು. ಜಂಬೂಸವಾರಿ ನೋಡಲು ಹೋದರೆ ಅದೇನು ಜನ, ಕಾಲಿಡಲು ಸ್ಥಳವಿಲ್ಲ. ಕಡೆಗೂ ಕಷ್ಟಪಟ್ಟು ಜಾಗ ಮಾಡಿ ನಿಂತರೆ ಆನೆ ಕಾಲುನೋಡಿ ಮೇಲಿನ ಮಹಾರಾಜರ ಮುಖನೋಡುವ ಹೊತ್ತಿಗೆ ಅದು ಮುಂದೆ ಹೊರಟೇ ಹೋಗಿತ್ತು. ಕಡೆಗೆ ಬೆಟ್ಟದ ಜಾತ್ರೆ ಗೀತ್ರೆ ಎಲ್ಲ ಬಿಸಾಕಿ ಇಬ್ರೂ ಊರಿಗೆ ಬಂದ್ರಂತೆ. ಇಂತಹ ಎಷ್ಟು ಕಥೆಗಳನ್ನು ಬೇಕಾದರೂ ಹೇಳಬಹುದು.

೨

ನಮ್ಮ ಪೂರ್ವೀಕರು ಬಸ್ತಿಕಂಬದ ಹಳ್ಳಿಯಿಂದ ಬಂದವರಂತೆ. ಕಂಬದ ಹಳ್ಳಿ ಇತಿಹಾಸ ಪ್ರಸಿದ್ಧವಾದ ಊರು. ಶ್ರವಣ ಬೆಳಗೊಳಕ್ಕೂ ಮುಂಚೆಯೇ ಅದೊಂದು ಜೈನ ಕ್ಷೇತ್ರವಾಗಿತ್ತೆಂದೂ ಹೇಳುತ್ತಾರೆ. ಗಂಗದೊರೆಗಳ ಕಾಲದಲ್ಲಿ ಅದೊಂದು ಉಪರಾಜಧಾನಿಯಾಗಿತ್ತಂತೆ. ಆ ಊರಿನಲ್ಲಿರುವ ಬ್ರಹ್ಮದೇವರ ಕಂಬದಿಂದಾಗಿ ಆ ಹೆಸರು ಬಂದಿರಬೇಕು. ಅಲ್ಲಿ ಒಂದು ಪಂಚಕೂಟ ಬಸದಿಯೂ ಇದೆ. ಈ ಕಂಬ, ಬಸದಿ ಎರಡನ್ನೂ ಸೇರಿಸಿ ಬಸ್ತಿಕಂಬದ ಹಳ್ಳಿ ಎಂದು ಕರೆದಿರಬೇಕು. ಈಗ ಅದು ಬರಿಯ ಕಂಬದ ಹಳ್ಳಿ. ನಮ್ಮ ಬಿ. ವೆಂಕಟಾಚಾರ್ಯರ ಬಿಂಡಿಗ ನವಿಲೆ ಪಕ್ಕದಲ್ಲೇ ಈ ಊರು ಇದೆ. ಎಂ. ಆರ್ ಶ್ರೀನಿವಾಸ ಮೂರ್ತಿಗಳ ರಂಗಣ್ಣನ ಕನಸಿನ ದಿನಗಳು ಪುಸ್ತಕದಲ್ಲಿ ಈ ಊರಿನ ವರ್ಣನೆಯಿದೆ. ಮೇಲೆ ಅತ್ಯಂತ ಪ್ರಾಚೀನ ಕಾಲದ ಹಿರೆಕೆರೆಯಿದೆ, ಅಲ್ಲಿ ಹಸಿಹಾಲು ಬಿಸಿ ಬೆಲ್ಲ ತಪ್ಪಿದ ದಿನವೇ ಇಲ್ಲವಂತೆ. ಊರಪಕ್ಕದಲ್ಲಿಯೇ ಅಷ್ಟೇ ದೊಡ್ಡದಾದ ಬಿಂಡಿಗನವಿಲೆ ಕೆರೆಯಿದೆ. ಈ ಕೆರೆಯ ತೆಂಕಲ ಕೋಡಿ ಕಂಬದ ಹಳ್ಳಿಯಲ್ಲೂ ಬಡಗಲ ಕೋಡಿ ಬಿಂಡಿಗನವಿಲೆಯಲ್ಲೂ ಇದೆ. ಇಂತಹ ಫಲವತ್ತಾದ ಪ್ರದೇಶವನ್ನು ಬಿಟ್ಟು ನಮ್ಮವರು ಏಕೆ ಪಾಲಗ್ರಹಾರಕ್ಕೆ ವಲಸೆ ಬಂದರೋ ಅರ್ಥ ವಾಗುವುದಿಲ್ಲವಾದರೂ ಕೆಲವು ದಂತ ಕಥೆಗಳು ಹುಟ್ಟಿಕೊಂಡಿವೆ.

ಕಂಬದಹಳ್ಳಿ ಜೈನಧಾರ್ಮಿಕ ಕೇಂದ್ರವಾಗಿತ್ತಷ್ಟೆ. ಜೈನಧರ್ಮದ ಪ್ರಕಾರ ಮಾಂಸಾಹಾರ ನಿಷಿದ್ಧ. ಆದರೆ ಒಕ್ಕಲಿಗರಾದ ನಾವು ಮಾಂಸಾಹಾರಿಗಳು. ಕಂಬದಹಳ್ಳಿ ಯಲ್ಲಿ ಮಾಂಸಾಹಾರವನ್ನು ಯಾರೂ ಮಾಡಕೂಡದೆಂದು ನಿರ್ಬಂಧಿಸಲಾಯಿತಂತೆ. ತಮ್ಮ ಆಹಾರಕ್ಕೆ ನಿರ್ಬಂಧ ಹಾಕಿದ ಸ್ಥಳದಲ್ಲಿ ಇರಬಾರದೆಂದು ನಮ್ಮವರು ಹೊರಟ ರಂತೆ. ಇದಕ್ಕಿಂತಲೂ ಪ್ರಬಲವಾದ ಕಾರಣ ಬೇರೇನೋ ಇರಬೇಕು. ಈ ರೀತಿಯ ವಲಸೆಗಳು ಅನೇಕಬಾರಿ ಧಾರ್ಮಿಕ ಒತ್ತಡದಿಂದ ಆಗಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಯೋಚಿಸಿದಾಗ ಆಗಿನ ಸಾಮಾಜಿಕ, ರಾಜಕೀಯ ಅಥವಾ ಧಾರ್ಮಿಕ ಒತ್ತಡಗಳಿಂದಾಗಿ ನಮ್ಮ ಪೂರ್ವೀಕರು ವಲಸೆ ಬಂದಿದ್ದರೂ ಬಂದಿರಬಹುದು, ಕಂಬದ ಹಳ್ಳಿಯ ಲಕ್ಷ್ಮಿದೇವಿಯೇ ನಮ್ಮ ಮನೆದೇವತೆ. ನಮ್ಮ ಊರಿನಲ್ಲೂ ಆಕೆಯ ಒಂದು ಗುಡಿಯಿದೆಯಾದರೂ ಮೂಲದೇವತೆಯನ್ನೇ ಆರಾಧಿಸಲು ಆಗಾಗ ವರ್ಷಕ್ಕೋ ಎರಡುವರ್ಷಕ್ಕೋ ಒಮ್ಮೆ ಕಂಬದಹಳ್ಳಿಗೇ ಹೋಗಿ ಪೂಜೆಸಲ್ಲಿಸಿ ಬರುವುದೂ ಉಂಟು.

ಪಾಲಗ್ರಹಾರ ಪ್ರಾಚೀನ ಕಾಲದಲ್ಲಿ ಬ್ರಾಹ್ಮಣ ಅಗ್ರಹಾರವಾಗಿತ್ತೆಂದು ಈ ಹಿಂದೆಯೆ ಹೇಳಿದ್ದೇನೆ. ಈಗಲೂ ಪಾಳು ಬಿದ್ದಿರುವ ಸಂಧ್ಯಾವಂದನ ಮಂಟಪಗಳು,

ಕೊಳಗಳ ಅವಶೇಷಗಳಿವೆ. ಆದರೆ ನಮ್ಮ ಊರಿನಲ್ಲಿ ಒಂದೇ ಒಂದು ಬ್ರಾಹ್ಮಣ ಪಿಳ್ಳೆಯಾಗಲಿ ಅದರ ಕುರುಹಾಗಲಿ ಇಲ್ಲ. ಪಾಲಗ್ರಹಾರವೂ ನಿಸರ್ಗ ಸೌಂದರ್ಯದಿಂದ ಕೂಡಿದ ಗ್ರಾಮ. ಊರಿನ ಮೂಡಲಿಗೆ ಪಾಲು ಕೆರೆ ಇದೆ. ಇದರ ನೀರು ಊರ ಹತ್ತಿರದವರೆಗೂ ಹರಡಿ ರಾತ್ರಿಯ ಬೆಳದಿಂಗಳಲ್ಲಿ ಹಾಲಿನಂತೆಯೇ ಕಾಣುತ್ತದೆ. ಇದರಿಂದಲೇ ಈ ಊರಿಗೆ ಪಾಲು ಕೆರೆಯ ಅಗ್ರಹಾರ ಎಂಬ ಹೆಸರು ಬಂದು ಮುಂದೆ ಪಾಲಗ್ರಹಾರ ಆಗಿರಬೇಕು. ಉದ್ದಕ್ಕೂ ಹಬ್ಬಿರುವ ಬೆಟ್ಟಸಾಲು, ಕೆರೆಯ ಸುತ್ತಲ ವನರಾಜಿ, ಕೆರೆಯ ಹಿಂದಿನ ತೋಟ ತುಡಿಕೆಗಳು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಈ ಬೆಟ್ಟಸಾಲಿನಲ್ಲಿ ಅನೇಕ ಪುಣ್ಯಕ್ಷೇತ್ರಗಳಿವೆ. ಕೋಟೆಬೆಟ್ಟದ ವೆಂಕಟರಮಣ ಸ್ವಾಮಿ ದೇವಾಲಯ. ಇದು ಒಂದು ಶಿಖರದಲ್ಲಿದೆ. ಇದನ್ನು ಚಿಕ್ಕ ದೇವರಾಜನ ಮಂತ್ರಿ ತಿರುಮಲಾರ್ಯ ಸ್ಥಾಪಿಸಿದನೆಂಬ ಪ್ರತೀತಿಯಿದೆ. ಅದರಎಡದ ಎತ್ತರವಾದ ಶಿಖರದಲ್ಲಿ ಕಂಬದ ನರಸಿಂಹ ಸ್ವಾಮಿದೇವಾಲಯವಿದೆ. ಇದರ ಎದುರು ಸಾಲಿನಲ್ಲಿ ಆಲತಿ ಮಲ್ಲೇಶ್ವರ ಕ್ಷೇತ್ರವಿದೆ. ಹಾಗೆಯೇ ಮುಂದೆ ಹೋದರೆ ಶ್ರೀ ಆದಿಚುಂಚನಗಿರಿ, ಕಾವೇಟಿರಂಗ, ಹದ್ದಿನಕಲ್ಲು ಹನುಮಂತರಾಯ ಹೀಗೆ ಶೈವ ಮತ್ತು ವೈಷ್ಣವ ಧಾರ್ಮಿಕ ಕ್ಷೇತ್ರಗಳ ಸಾಲೇ ಕಂಡುಬರುತ್ತವೆ.

ಮಿಡಲ್ ಸ್ಕೂಲಿಗೇ ಓದಿಗೆ ತಿಲಾಂಜಲಿ ಇತ್ತು ಬಂದುದು ತಂದೆಗೆ ತುಂಬಾ ನೋವನ್ನುಂಟುಮಾಡಿತ್ತು. ಊರಿನ ಮುಖಂಡರೂ, ತಲೆಯಾಳೂ ಆಗಿದ್ದವರ ಮಗನೇ ಹೀಗಾದರೆ ಯಾವ ತಂದೆಗೆ ನೋವಾಗುವುದಿಲ್ಲ. ಕೆಲವು ದಿನ ಅವರು ಸುಮ್ಮನಿದ್ದು ಆಡು ಕಾಯುವ ಕೆಲಸವನ್ನು ನನಗೆ ವಹಿಸಿದರು. ಸುಮಾರು ಹದಿನೈದು ಇಪ್ಪತ್ತು ಆಡುಗಳನ್ನು ಬೆಟ್ಟ ಗುಡ್ಡಗಳಲ್ಲಿ ಮೇಯಿಸಿಕೊಂಡು ಬರಬೇಕಾಗಿತ್ತು. ಬೆಳಿಗ್ಗೆ ಆರು ಕಟ್ಟಿಕೊಂಡು ಹೋಗುವುದು, ಅಲ್ಲಿಂದ ಬಂದ ಮೇಲೆ ಕೈಲಿ ಲೋಟಿ ಹಿಡಿದು ಆಡುಗಳನ್ನು ಮೇಯಲು ಅಟ್ಟಿಕೊಂಡು ಹೋಗುವುದು. ಆಡು, ಕುರಿಗಳನ್ನು ಮೇಯಿಸುವುದು ದನ, ಎಮ್ಮೆ ಮೇಯಿಸುವುದಕ್ಕಿಂತ ಕಷ್ಟದ ಕೆಲಸ. ಆಡು, ಕುರಿಗಳು ತುಂಬಾ ಚಂಚಲ ಸ್ವಭಾವದವು. ಹಸಿರು ಕಂಡರೆ ಸಾಕು ಪರಾರಿ. ಆದರೂ ನನಗೆ ಈ ಕೆಲಸ ಪ್ರಿಯವಾದುದೇ ಆಗಿತ್ತು. ಪ್ರತಿಯೊಂದು ಆಡಿಗೂ ನಾನು ಒಂದೊಂದು ಹೆಸರಿಟ್ಟಿದ್ದೆ. ಆ ಹೆಸರಿನಿಂದ ಕರೆದರೆ ಸಾಕು ಆ ಆಡು ಅರಚುತ್ತಾ ನನ್ನ ಹತ್ತಿರ ಬರುತ್ತಿತ್ತು. ಸೊಪ್ಪು ತಿನ್ನುವಾಗ ಅಶಕ್ತವಾದುವುಗಳನ್ನು ಬಲಿಷ್ಠವಾದವು ಗುದ್ದಿ ಓಡಿಸಿ ಆ ಪಾಲನ್ನೂ ತಾವೇ ಕಬಳಿಸಲು ನೋಡುತ್ತಿದ್ದವು. ಅಂತಹ ಸಮಯದಲ್ಲಿ ನಾನು ಗದರಿಸಿದರೆ ಅವು ತೆಪ್ಪಗಾಗುತ್ತಿದ್ದವು. ಈಗಲೂ ನನ್ನ ಸಂಸಾರದಲ್ಲಿ ಹಸು, ಎಮ್ಮೆ, ನಾಯಿ, ಬೆಕ್ಕು. ಕೋಳಿ ಮುಂತಾದ ಪ್ರಾಣಿ ಪಕ್ಷಿಗಳಿವೆ. ನಾನು ಎಲ್ಲಿಯಾದರೂ ಹೊರಗೆ ಹೋಗಿ ಬಂದದ್ದನ್ನು ಕಂಡರೆ, ಕೇಳಿದರೆ ಅವು ತಮ್ಮದೇ ಆದ ಪ್ರತಿಕ್ರಿಯೆ ವ್ಯಕ್ತಪಡಿಸುತ್ತವೆ. ಹೀಗೆ ಗ್ರಾಮಾಂತರ ಬದುಕಿನಲ್ಲಿ ಮನುಷ್ಯನಿಗೂ ಪ್ರಾಣಿ

ಪಕ್ಷಿಗಳಿಗೂ ಇರುವ ಸ್ನೇಹಸಂಬಂಧ ಆಶ್ಚರ್ಯಕರವಾದುದು.

ಬಿಡುವಿನ ವೇಳೆಯಲ್ಲಿ ಕೈಗೆ ಸಿಕ್ಕಿದ್ದನ್ನು ಓದುವುದು [illegible] ನರಸಿಂಹಯ್ಯನವರಿಂದಾಗಿ ಪುಟ್ಟಪ್ಪನವರ ಕೃತಿಗಳನ್ನು ಓದುತ್ತಿದ್ದೆ. ಇದರೊಂದಿಗೆ ಕಾವ್ಯ ಕಥೆಗಳನ್ನು ಓದುತ್ತಿದ್ದೆ. ಇವುಗಳನ್ನು ಓದಿದಂತೆಲ್ಲ ಈ ಬಗ್ಗೆ ನಮ್ಮ ಜನರಿಗೆ ಹೇಳಬೇಕು ಅನ್ನಿಸುತ್ತಿತ್ತು, ಈ ತುಡಿತ ದಿನದಿನಕ್ಕೆ ಹೆಚ್ಚಾಗ ತೊಡಗಿತು. ನಮ್ಮ ಊರಿನಲ್ಲಿ ಶ್ರೀರಾಮ ಮಂದಿರ ಬಹು ಹಿಂದೆಯೇ ಸ್ಥಾಪನೆಯಾಗಿತ್ತಷ್ಟೆ. ನಾನೇಕೆ ಅಲ್ಲಿ ನಮ್ಮ ಊರವರಿಗೆ ರಾಮಾಯಣ, ಭಾರತ, ಭಾಗವತಾದಿ [illegible]ಗಳನ್ನು ಓದಿ ಹೇಳಬಾರದು ಅನ್ನಿಸಿತು. ಸಂಜೆ ಆಡುಗಳನ್ನು ಹಟ್ಟಿಗೆ ಕೂಡಿ ಊಟ ಮುಗಿಸಿ ರಾಮಮಂದಿರದಲ್ಲಿ ಕಾವ್ಯಪಠನ ಆರಂಭಿಸುತ್ತಿದ್ದೆ. ಆ ಮೇಲಾಮೇಲೆ ಈ ಕುರಿತು ಉಪನ್ಯಾಸದ ತರಹ ಭಾಷಣ ಮಾಡಲು ಆರಂಭಿಸಿದೆ. ಕಥೆ, ಉಪಕಥೆಗಳೊಂದಿಗೆ ನಾನು ಮಾತನಾಡುತ್ತಿದ್ದ ರೀತಿ ಜನರಿಗೆ ಹಿಡಿಸಿತೆಂದು ಕಾಣುತ್ತದೆ. ಸುತ್ತ ಮುತ್ತಲ ಹಳ್ಳಿಯವರು ತಮ್ಮ ನಾಟಕ, ಹಬ್ಬ ಹರಿದಿನಾದಿಗಳಲ್ಲಿ ನನ್ನನ್ನು ಕರೆದು ಭಾಷಣ ಮಾಡಿಸುತ್ತಿದ್ದರು. ಇದರಿಂದಾಗಿ ನನ್ನ ಹೆಸರು ಸುತ್ತಮುತ್ತಲ ಹಳ್ಳಿಗಳಲ್ಲಿ ಜನರ ಬಾಯಲ್ಲಿ ಬರಲಾರಂಭಿಸಿತು. ಮುಂದೆ ನನ್ನ ಭಾಷಣದಲ್ಲಿ ಪುಟ್ಟಪ್ಪ ನವರ ವೈಚಾರಿಕದೃಷ್ಟಿಯನ್ನು ಬೆರಸಿ ಮಾತನಾಡುತ್ತಿದ್ದೆ. ತಲೆತಲಾಂತರದಿಂದ ಉತ್ತಮರ ಶೋಷಣೆಯಿಂದ ಬೆಂದು ಬೇಸತ್ತ ಜನರಿಗೆ ಇವೆಲ್ಲಾ ಆಪ್ಯಾಯಮಾನವಾಗು ರುತ್ತಿದ್ದವು. ಕೆಲವರು ಹಿರಿಯರು "ಮಗಾ ನಿಮ್ಮ ತಾತ ಬದುಕಿದ್ದು ನಿನ್ನ ಮಾತು ಕೇಳಿದ್ದರೆ ಎಷ್ಟು ಆನಂದ ಪಡುತ್ತಿದ್ದರೊ" ಎನ್ನುತ್ತಿದ್ದರು. ನನ್ನ ತಂದೆಯವರೂ ಎಲ್ಲೋ ಹಿಂದೆ ಕುಳಿತು ನನ್ನ ಮಾತುಗಾರಿಕೆಗೆ ತಲೆದೂಗಿ ಸಂತೋಷಿಸುತ್ತಿದ್ದರೆಂದು ಅವರಿವರು ಹೇಳುತ್ತಿದ್ದರು.

ನನ್ನ ಭಾಷಣದ ವೈಖರಿ ದೂರದ ಹಳ್ಳಿಗಳಿಗೂ ಪಯಣಿಸಿತ್ತೆಂದು ಕಾಣುತ್ತದೆ, ಕುಣಿಗಲು ತಾಲ್ಲೂಕು ಅಮೃತೂರು ಹೋಬಳಿ, ನಮ್ಮ ತಾಲ್ಲೂಕಿಗೆ ಪಶ್ಚಿಮದ ಕೊನೆಯ ಬಿಂಡಿಗನವಿಲೆ ಹೋಬಳಿ, ಪಾಂಡವಪುರ ತಾಲ್ಲೂಕಿನ ಮೇಲುಕೋಟೆಯ ಹೋಬಳಿಯ ಹಳ್ಳಿಗಳವರು ನನ್ನನ್ನು ಭಾಷಣಕ್ಕೆ ಕರೆಯುತ್ತಿದ್ದರು. ವಾಸ್ತವವಾಗಿ ಕಾಲಕ್ರಮೇಣ ನನ್ನ ಭಾಷಣ ನನ್ನ ಕಾವ್ಯ ಪಠನವನ್ನು ಮಸುಗಿ ಹಾಕಿತೆಂದೇ ಹೇಳಬೇಕು. ಇದರಿಂದ ನನ್ನ ಆಡು ಮೇಯಿಸುವ ಕೆಲಸಕ್ಕೆ ಅಡಚಣೆಯಾಗ ತೊಡಗಿತು. ಆದರೂ ನನ್ನ ತಂದೆಯವರು ಈ ಕೆಲಸಕ್ಕೆ ಬೇರೊಬ್ಬರನ್ನು ನೇಮಿಸಿ ನನಗೆ ಬಿಡುವುನೀಡುತ್ತಿದ್ದರು. ರಾಮಕೃಷ್ಣಪರಮಹಂಸ, ಬೀರ್‌ಬಲ್, ತೆನಾಲಿ ರಾಮಕೃಷ್ಣ, ಮಹಾಭಾರತ ಕಥೆಗಳನ್ನು ಬಳಸಿ ಮಾತನಾಡುತ್ತಿದ್ದುದು ಜನಾಕರ್ಷ ಣೀಯವಾಗಿತ್ತು. ಒಮ್ಮೆ ನಾಗಮಂಗಲದಲ್ಲಿ ದೊಂಬಿದಾಸರ ನಾಟಕ ಏರ್ಪಾಡಾಗಿತ್ತು. ನರಿ ತಾಲ್ಲೂಕು ದಣಿ ಅಮಲ್ದಾರ್ ದುರ್ಗಪ್ಪನವರು ಅಧ್ಯಕ್ಷತೆ ವಹಿಸಿದ್ದರು, ಮುಖ್ಯ

ಅತಿಥಿಯಾಗಿ ನಾನು ಮಾತನಾಡುತ್ತಾ ಮಹಾಭಾರತ ಕಾಲದಲ್ಲೂ ಲಂಚ ಇದ್ದ ಕಥೆ ಯೊಂದನ್ನು ಜನರಿಗೆ ಹೇಳಿದೆ.

ಬೇಟೆಗೆ ಹೋದ ಪರೀಕ್ಷಿತರಾಜ ಸತ್ತ ಹಾವನ್ನು ಋಷಿಯ ಕತ್ತಿಗೆ ಸುತ್ತಿ ಸರ್ಪಮರ್ದನದಿಂದಲೇ ಸಾಯಲೆಂದು ಶಾಪಗ್ರಸ್ತನಾದನಷ್ಟೆ. ಇದರಿಂದ ಪಾರಾಗಲು ಪರೀಕ್ಷಿತ ಸಮುದ್ರ ಮಧ್ಯದಲ್ಲಿ ಉಕ್ಕಿನ ಅರಮನೆ ಕಟ್ಟಿಸಿಕೊಂಡು ಅಲ್ಲಿ ಇರ ತೊಡಗಿದ. ಇಷ್ಟಾದರೂ ಮುನ್ನೆಚ್ಚರಿಕೆಯ ಕ್ರಮವಾಗಿ ಒಂದು ವೇಳೆ ಪರೀಕ್ಷಿತ ನನ್ನು ಸರ್ಪ ಕಚ್ಚಿದರೆ ಅವನನ್ನು ಉಳಿಸುವ ವೈದ್ಯನಿಗೆ ಲಕ್ಷಾಂತರ ವರಹ ಸಂಭಾವನೆ ಕೊಡುವುದಾಗಿಯೂ ಸಾರಿಸಿದರು. ಈ ಆಕರ್ಷಣೆಯಿಂದ ಹದಿನಾಲ್ಕು ಲೋಕದ ವೈದ್ಯರುಗಳೂ ಪರೀಕ್ಷಿತನ ರಾಜಧಾನಿಯತ್ತ ಹೊರಟರು. ಹೀಗೆ ಹೋಗುತ್ತಿದ್ದ ಒಂದು ಗುಂಪಿನಲ್ಲಿ ಪರೀಕ್ಷಿತನನ್ನು ಕಚ್ಚಲು ತಕ್ಷಕನೂ ಉಳಿಸಲು ದೇವ ವೈದ್ಯ ಧನ್ವಂತರಿಯೂ ಅಕ್ಕಪಕ್ಕದಲ್ಲಿಯೇ ನಡೆಯುತ್ತಿದ್ದರು. ಪರಸ್ಪರರಿಗೆ ಪರಿಚಯವಿರಲಿಲ್ಲ. ಹೀಗೆಯೇ ಹೋಗುತ್ತಾ ತಕ್ಷಕ "ತಾವು ಯಾರು ಸ್ವಾಮಿ" ಎಂದು ಧನ್ವಂತರಿಯನ್ನು ಕೇಳಿದ. ಧನ್ವಂತರಿ ತಾನೊಬ್ಬ ದೊಡ್ಡ ವೈದ್ಯ ನೆಂದೂ ಒಂದು ವೇಳೆ ತಕ್ಷಕ ಪರೀಕ್ಷಿತನನ್ನು ಕಚ್ಚಿದರೆ ಅವನನ್ನು ಉಳಿಸಲು ಹೋಗು ತ್ತಿದ್ದೇನೆಂದೂ ಹೇಳಿದ. ತಕ್ಷಕನಿಗೆ ಕೋಪ ಬಂತು "ತಕ್ಷಕನನ್ನು ನಿಮ್ಮ ಹೊಲದ ಹಾವು ಎಂದು ತಿಳಿದಿರುವೆಯ ಎಂದ. ಧನ್ವಂತರಿ 'ನಾನೇನೂ ನಿಮ್ಮೂರಿನ ಅಳಲೆಕಾಯಿ ಪಂಡಿತನೆಂದು ತಿಳಿದೆಯ' ಎಂದ. ಹೀಗೆ ವಾದ ಮಾಡುತ್ತ ಅವರಿಬ್ಬರೂ ಗುಂಪಿನಿಂದ ಹಿಂದುಳಿದು ಒಂದು ಆಲದ ಮರದ ಹತ್ತಿರ ಬಂದರು. "ನೋಡು ನಾನೇ ತಕ್ಷಕ ಈ ಆಲದ ಮರವನ್ನು ಕಚ್ಚುತ್ತೇನೆ, ನೀನು ದಕ್ಷ ವೈದ್ಯನಾದರೆ ಉಳಿಸು ನೋಡೋಣ" ಎಂದವನೇ ಆಲದ ಮರವನ್ನು ಕಚ್ಚಿದ. ಅದು ಕ್ಷಣ ಮಾತ್ರದಲ್ಲಿ ಉರಿದು ಬೂದಿ ಯಾಯಿತು. ಧನ್ವಂತರಿ "ಇಷ್ಟೇನಾ ನಿನ್ನ ಶಕ್ತಿ" ಎಂದವನೇ ತನ್ನಲ್ಲಿದ್ದ ಒಂದು ತೊಟ್ಟು ಔಷದವನ್ನು ಆ ಮರದ ಬೂದಿಯ ಮೇಲೆ ಹಾಕಿದ, ಕೂಡಲೇ ಆಲದ ಮರ ಮೊದಲಿದ್ದಂತೆಯೇ ಆಯಿತು, ತಕ್ಷಕ ಹೆದರಿ ಹೋದ "ಅಯ್ಯ ವೈದ್ಯರೆ ಋಷಿ ಮುನಿಗಳ ಶಾಪಕ್ಕೆ ಬೆಲೆ ಇಲ್ಲದ ಹಾಗೆ ಮಾಡುವುದು ಸರಿಯೆ ? ಇದರಿಂದ ನಿಮಗೇನು ಲಾಭ ? ಎಂದ", ಇದರಿಂದ ನನಗೆ ಲಕ್ಷಾಂತರ ವರಹ ಹಣ ದೊರೆಯು ತ್ತದೆ" ಎಂದ ಧನ್ವಂತರಿ. ತಕ್ಷಣ ಕೂಡಲೇ "ಅಷ್ಟೆ ತಾನೆ ನಾನು ಅದರ ಎರಡರಷ್ಟು ವರಹ ನಿಮಗೆ ಕೊಡುತ್ತೇನೆ. ನೀವು ಹಿಂತಿರುಗಿ" ಎಂದು ಅವನ ಕೈಗೆ ಹಣದ ಚೀಲ ವನ್ನು ಕೊಟ್ಟ. ಧನ್ವಂತರಿ ಹಿಂತಿರುಗಿದ. ಆಲದ ಮರದ ಮೇಲೆ ಸೊಪ್ಪು ಕಡಿಯಲು ಹತ್ತಿ ಕುಳಿತಿದ್ದ ಮನುಷ್ಯನೊಬ್ಬ ಇದನ್ನೆಲ್ಲಾ ಕೇಳಿಸಿಕೊಂಡ. ಈ ವಿಚಾರವನ್ನು ಅವನು ಜನರಿಗೆ ಹೇಳಿದ, ಅವರು ಲಂಚದಿಂದ ಯಾವುದೆ ಕೆಲಸ ಆಗುತ್ತದೆಂದು ಅರಿತು ಅದನ್ನು ಉಳಿಸಿಕೊಂಡು ಬಂದರು. ಇಂತಹ ಕಥೆಗಳಿಗೆ ಜನರು ಹುಚ್ಚಾಗುತ್ತಿದ್ದರು,

ಜನರು ನನ್ನ ಭಾಷಣಗಳ ಬಗೆಗೆ ಆಸಕ್ತಿ ತೋರಿದಂತೆಲ್ಲ. ನನ್ನನ್ನು ಹೆಚ್ಚು
ಹೆಚ್ಚು ಭಾಷಣಗಳಿಗೆ ಕರೆದಂತೆಲ್ಲ ನಾನು ಇನ್ನೂ ಓದಬೇಕು, ಹೆಚ್ಚು ತಿಳಿಯಬೇಕು
ಎಂಬ ಹಂಬಲ ಬೆಳೆಯಿತು. ಶ್ರೀ ಆದಿಚುಂಚನಗಿರಿಯ ಜಗದ್ಗುರುಗಳು ಭಕ್ತನಾಥ
ಸ್ವಾಮೀಜಿಯವರು ಗ್ರಂಥಗಳನ್ನು ಕೊಳ್ಳಲು ನನಗೆ ಹಣ ಸಹಾಯಮಾಡು
ತ್ತಿದ್ದರು. ಸ್ವಾಮೀಜಿಯವರ ಆಣತಿಯಂತೆ ನಾನು ಅನೇಕ ದಿನಗಳ ಕಾಲ ಮಠ
ದಲ್ಲಿಯೇ ಇದ್ದು ಬಿಡುತ್ತಿದ್ದೆ. ಆಗ ಈಗಿನಂತೆ ತಂಗಲು ಒಳ್ಳೆಯ ಕೊಠಡಿ
ಗಳಾಗಲಿ, ಅತಿಥಿಗೃಹಗಳಾಗಲಿ, ಕಡೆಗೆ ವಿದ್ಯುದ್ದೀಪಗಳಾಗಲಿ ಇರಲಿಲ್ಲ. ಇಂದು
ಹಂಪೆಗೆ ಹೋದರೆ ಹೇಗೆ ಪಾಳುಮಂಟಪಗಳನ್ನು ಲಂಟಾನವನ್ನು ಪೊದೆಗಳನ್ನು ಕಾಣ
ಬಹುದೋ ಹಾಗೆ ನಮ್ಮ ಆಗಿನ ಚುಂಚನಗಿರಿಯ ಸ್ಥಿತಿ ಇತ್ತು.ಹಗಲಲ್ಲೂ ಒಬ್ಬರ ಮುಖ
ಒಬ್ಬರಿಗೆ ಕಾಣದಂತಹ ಕಲ್ಲುಮಂಟಪಗಳಲ್ಲಿ ಅಡುಗೆಮನೆ. ಕಣಜ ಇತ್ಯಾದಿ ಇತ್ಯಾದಿಗ
ಳೆಲ್ಲ ಇದ್ದವು. ಭಕ್ತರೂ ಅಷ್ಟೆ. ಕಾಪಾಲಿಕರ ಕೈಗೆ ಹೋದ ಮೇಲೆ ಅವರ ಹಾವಳಿ
ತಡೆಯಲಾರದೆ ಜನರು ಬರವುದನ್ನೇ ಮರೆತಿದ್ದರೊ ಏನೋ ಎನ್ನುವಂತೆ ಆಗೊಬ್ಬರು
ಈಗೊಬ್ಬರು ಬರುತ್ತಿದ್ದರು. ಆಗ ಶ್ರೀಗಳವರ ಪ್ರವಾಸವನ್ನು ಚರಾಯ ಎಂದು ಕರೆ
ಯುತ್ತಿದ್ದರು. ಸ್ವಾಮಿಗಳಿಗಾಗಿ ಸೊಗಸಾದ ಕಮಾನು ಕಟ್ಟಿದ ಪೆಟ್ಟಿಗೆ ಗಾಡಿ ಇತ್ತು,
ಈಗಿನವರ ಮರ್ಸಿಡಿಸ್‌ಬೆಂಜ್ ಕಾರಿಗೆ ಸಮನಾಗಿ. ಅದರಲ್ಲಿ ಸ್ವಾಮಿಗಳು ಮಾತ್ರ
ಕೂರುತ್ತಿದ್ದರು. ಅವರ ಪರಿವಾರದವರಿಗೆ ಬೇರೆ ಗಾಡಿಗಳಿರುತ್ತಿದ್ದವು.ಚರಾಯ ಎಂದರೆ
ಭಕ್ತರ ಊರುಗಳಿಗೇ ಸ್ವಾಮಿಗಳು ಹೋಗಿ ಅವರಲ್ಲಿ ಧಾರ್ಮಿಕ ಭಾವನೆಯನ್ನು
ಉದ್ದೀಪಿಸಿ ಮಠಕ್ಕೆ ಬೇಕಾಗುವ ದವಸ ಧಾನ್ಯಗಳನ್ನು ಸಂಗ್ರಹಿಸುವುದು. ಊರ
ಹೊರಗಿನ ಮಂಟಪ, ದೇವಾಲಯ ಅಥವಾ ಗುಂಡುತೋಪುಗಳಲ್ಲಿ ಸ್ವಾಮಿಗಳು ಬಿಡಾರ
ಬಿಡುತ್ತಿದ್ದರು. ಸನ್ಯಾಸಿ ಊರೊಳಗೆ ಲೌಕಿಕರೊಂದಿಗಿರಬಾರದೆಂಬ ಕಾರಣದಿಂದ.
ಸ್ವಾಮಿಗಳ ಜೊತೆ ಸುಬೇದಾರರು, ಶ್ಯಾನುಭೋಗರು. ಕಾಲಾಳುಗಳು ಇತ್ಯಾದಿ ಇರು
ತ್ತಿದ್ದರು. ಒಬ್ಬ ಚೋಪುದಾರ ಸ್ವಾಮಿಗಳ ಬೆಂಗಾವಲಾಗಿರುತ್ತಿದ್ದ. ಈಗಿನ ಮಂತ್ರಿ
ಗಳಿಗಿರುವ ಗನ್‌ಮ್ಯಾನ್‌ನಂತೆ. ಶ್ರೀಗಳು ಹೋದಲ್ಲೆಲ್ಲ ಜನರ ಆಸಕ್ತಿ ಸಡಗರ
ಹೇಳತೀರದು. ಅದೊಂದು ಅಪೂರ್ವ ಸಂದರ್ಭ.

ಆ ಕಾಲದಲ್ಲಿ ಮಠದ ನಗಾರಿಗಳನ್ನು ಹೊರಲು ಒಂದು ಬಸವ ಇತ್ತು. ಅದರ
ಹೆಸರು ಗಂಗಾಧರ. ಅದು ಭಕ್ತನಾಥ ಸ್ವಾಮಿಗಳ ಹಿಂದಿನ ಮೂವರು ಸ್ವಾಮಿಗಳನ್ನು
ಕಂಡಿತ್ತೆಂದು ಹೇಳುತ್ತಿದ್ದರು. ಅದಕ್ಕೆ ಎಲ್ಲ ಹಲ್ಲುಗಳೂ ಉದುರಿ ಮರಿ ಹಲ್ಲುಗಳು
ಹುಟ್ಟಿದ್ದವು ಎಂದು ಹೇಳುತ್ತಿದ್ದರು. ದೊಡ್ಡ ಆನೆಯಂತಿದ್ದ ಅದರ ಮೈ ಮಿಂಚು
ತ್ತಿತ್ತು. ಅದಕ್ಕೆ ಕಾಲಭೈರವ, ಗಂಗಾಧರೇಶ್ವರರಿಗೆ ದೊರೆಯುತ್ತಿದ್ದಷ್ಟೇ ಬೆಲೆ
ಇತ್ತು. ಕಾಲಭೈರವ, ಗಂಗಾಧರೇಶ್ವರರು ತಮಗೆ ಭಕ್ತರಿಟ್ಟ ಎಡೆಯನ್ನು ಮುಟ್ಟು
ತ್ತಿರಲಿಲ್ಲ. ಆದರೆ ಈ ಬಸವ ಅದನ್ನೆಲ್ಲ ಮುಗಿಸುತ್ತಿದ್ದ. ಚರಾಯದ ಕಾಲದಲ್ಲಿ

ಹಳ್ಳಿ ಮಕ್ಕಳೆಲ್ಲ ಗಂಗಾಧರನ ಕಾಲು, ಬೆನ್ನು, ಕೊಂಬುಗಳಲ್ಲೆಲ್ಲ ಆಟ ಆಡಿ ಆನಂದಿಸುತ್ತಿದ್ದರು. ಮಕ್ಕಳು ತನ್ನ ಮೇಲೇರಿ ಆಟ ಆಡುತ್ತಿದ್ದರೆ ಬಸವ ಕಣ್ಣು ಮುಚ್ಚಿ ಆನಂದಿಸುತ್ತಿತ್ತು. ಸ್ವಾಮಿಗಳು ಹೆಸರು ಹಿಡಿದು ಕರೆದರೆ ಅದು ಎಲ್ಲಿದ್ದರೂ ಆ ಧ್ವನಿ ಕೇಳಿದ ಕೂಡಲೇ ಓಡಿ ಬರುತ್ತಿತ್ತು. ರಾತ್ರಿಯ ಹೊತ್ತು ಗಂಗಾಧರ ಮಠದ ಮುಂದಿನ ಬಯಲಲ್ಲೇ ಮಲಗುತ್ತಿತ್ತು. ಒಂದು ರಾತ್ರಿ ಕಿರುಬವೊಂದು ಅದನ್ನು ಹಿಡಿಯಲು ಹೊಂಚು ಹಾಕಿ ಅದರ ಕೊರಳಿಗೆ ಬಾಯಿಹಾಕಿತು. ಅದರ ಗಂಗೆದೊವಲು ಎಷ್ಟು ಉದ್ದ ಮತ್ತು ದಪ್ಪವಿತ್ತೆಂದರೆ ಕಿರುಬನ ಹಲ್ಲಿಗೆ ಅದರ ಗಂಟಲು ಸಿಗಲೇ ಇಲ್ಲ. ಬಸವ ಕಿರುಬನನ್ನು ತನ್ನ ಕಾಲುಗಳ ಸಂದಿಯಲ್ಲಿ ಬಲವಾಗಿ ಇರುಕಿ ಹಿಡಿದು ಗುಟುರು ಹಾಕಿತು. ಅಪಾಯವರಿತ ಸ್ವಾಮಿಗಳು ಬಂದು ಬಂದೂಕಿನಿಂದ ಕಿರುಬವನ್ನು ಹೊಡೆದುರುಳಿಸಿದರು. ಗಂಗಾಧರ ಸಾಯುವವರೆಗೂ ಒಂದು ಸ್ಕಾರೆ ಅಕ್ಕಿ ಹಿಡಿಯುವಂಥ ಗಾಯದ ಗುಳಿ ಅದರ ಗಂಗೆದೊವಲಿನಲ್ಲಿತ್ತು.

ಶ್ರೀ ಆದಿಚುಂಚನಗಿರಿಯ ಬಗ್ಗೆ ಗಮನಿಸ ಬೇಕಾದ ಇನ್ನೊಂದು ಅಂಶ. ಆ ಕಾಲದಲ್ಲಿ ಶ್ರೀ ಆದಿಚುಂಚನಗಿರಿ ಮಠದ ಭಕ್ತರು ಗುರುಗಳಿಗೆ ಪಾದ ಕಾಣಿಕೆಯಿತ್ತು ನಮಸ್ಕರಿಸುವುದು ಪದ್ಧತಿ. ಆದಿಚುಂಚನಗಿರಿ ಒಂದು ಅನ್ನದಾನಿ ಮಠ. ಅಲ್ಲಿಗೆ ಬಂದ ಯಾರೂ ಅನ್ನವಿಲ್ಲದೆ ಹೋಗುವಂತಿಲ್ಲ. ಆದುದರಿಂದ ಈ ಮಠದ ಒಕ್ಕಲುಗಳು ಪ್ರತಿ ವರ್ಷ ಇಂತಿಷ್ಟು ಧಾನ್ಯ ಕೊಡಬೇಕೆಂದು ನಿಗದಿ ಪಡಿಸಲಾಗುತ್ತಿತ್ತು. ಇದನ್ನೆಲ್ಲ ಸುಬೇದಾರರು ಶ್ಯಾನುಭೋಗರು ಬರೆದಿಡುತ್ತಿದ್ದರು. ಸಂಕ್ರಾಂತಿ, ದಸರ, ಶಿವರಾತ್ರಿ ಮತ್ತು ಜಾತ್ರೆಯಕಾಲಗಳಲ್ಲಿ ಮಠಕ್ಕೆ ಹೆಚ್ಚು ಭಕ್ತರು ಬರುತ್ತಿದ್ದರು. ಮಕ್ಕಳಿಗೆ ಮುಡಿಕೊಡಿಸುವುದು ಇತ್ಯಾದಿಗೆ ಊರ ಜೋಗಪ್ಪನಿಂದ ಅನುಮತಿ ತರಬೇಕಾಗಿತ್ತು. ಭೈರವನ ಒಕ್ಕಲಲ್ಲದವರು ದೇವರಿಗೆ, ಸ್ವಾಮಿಗಳಿಗೆ ಕಾಣಿಕೆ ಕೊಡುತ್ತಿರಲಿಲ್ಲ. ಆ ಪದ್ಧತಿ ಈಗ ಮಾಯವಾಗಿದೆ. ಈಗ ಎಲ್ಲ ಜಾತಿಯವರೂ ಎಲ್ಲ ದೇವರ ಒಕ್ಕಲಿನವರೂ ಶ್ರೀ ಮಠಕ್ಕೆ ಕಾಣಿಕೆಕೊಡುತ್ತಾರೆ. ಸ್ವಾಮಿಗಳ ಜೊತೆಯಲ್ಲಿ ಸುತ್ತುತ್ತ ಭಾಷಣ ಮಾಡುತ್ತ ಇರುತ್ತಿದ್ದ ನನಗೆ ಒಕ್ಕಲಿಗ ಜನಾಂಗದ ಮುಖಂಡರನ್ನು ನೋಡುವ, ಅವರನ್ನು ಪರಿಚಯ ಮಾಡಿಕೊಳ್ಳುವ ಅವಕಾಶ ಒದಗಿತು. ಚುಂಚನಗಿರಿಯ ಜಾತ್ರೆಯ ಸಮಯದಲ್ಲಿ ಪ್ರತಿವರ್ಷ ಒಕ್ಕಲಿಗರ ಮಹಾಸಮ್ಮೇಳನ ಸೇರುತ್ತಿತ್ತು, ಆ ಮಹಾಸಭೆಯ ಕಾರ್ಯಕ್ರಮಗಳನ್ನು ಗೊತ್ತುಮಾಡುತ್ತಿದ್ದವರು ಶ್ರೀ ಎಚ್. ಕೆ. ವೀರಣ್ಣಗೌಡರು ಮತ್ತು ಹೊಸಗಾನ ಹಳ್ಳಿ ಪುಟ್ಟಣ್ಣನವರು. ಕಡಬದಹುಚ್ಚ ವೀರೇಗೌಡರು ಅವರ ದಪ್ಪತಲೆಗೆ ಜರಿಪೇಟ ಅಗಲವಾದ ಮುಖಕ್ಕೆ ಹೊಂದುವ ರಟ್ಟೆ ಗಾತ್ರದ ಮೀಸೆ ಇವುಗಳಿಂದಾಗಿ ಜನರಿಗೆ ಆಕರ್ಷಕ ವ್ಯಕ್ತಿಯಾಗಿದ್ದರು. ಇವರ ಜೊತೆ ಶ್ರೀ ಕೆ. ಎಚ್. ರಾಮಯ್ಯ, ಅವರ ಪತ್ನಿ ಶ್ರೀಮತಿ ರೇವಮ್ಮ, ಮಗಳು ಯಶೋಧರಾ ದಾಸಪ್ಪ, ಅಳಿಯ ಎಚ್. ಸಿ. ದಾಸಪ್ಪ, ಕಾಂತರಾಜಪುರದ ನಂಜಪ್ಪನವರು, ಬೆಂಗಳೂರಿನ

ಚಿಕ್ಕವೀರಪ್ಪನವರಾದಿಯಾಗಿ ನೂರಾರು ಮಂದಿ ಆ ಮಹಾಸಭೆಯಲ್ಲಿ ಸೇರುತ್ತಿದ್ದರು. ಈ ಸಭೆಗಳು ಮತ್ತು ಅಲ್ಲಿ ಸೇರುತ್ತಿದ್ದ ಮುಖಂಡರ ಪ್ರಶಂಸೆಗೆ ಪಾತ್ರನಾಗಿದ್ದುದಲ್ಲದೆ ಅವರ ಆದರ್ಶ ನನಗೆ ಹಿರಿಮೆಗರಿಮೆಗಳನ್ನು ಹೋರಾಟದ ಸ್ಫೂರ್ತಿಯನ್ನು ತಂದು ಕೊಡುತ್ತಿತ್ತು.

ಒಕ್ಕಲಿಗರ ಮಹಾಸಮ್ಮೇಳನ ಬೆಳಿಗ್ಗೆ ಎಂಟು ಎಂಟೂವರೆ ಗಂಟೆಗೆ ಆರಂಭ ವಾಗುತ್ತಿತ್ತು. ಮೊದಲು ಶ್ರೀ ಕೆ. ಎಚ್. ರಾಮಯ್ಯನವರು ಸ್ಫೂರ್ತಿಯುತವೂ ಉಜ್ವಲವೂ ಆದ ಭಾಷಣ ಮಾಡುತ್ತಿದ್ದರು. ನಂತರ ಶ್ರೀಮತಿ ರೇವಮ್ಮನವರು ಗ್ರಾಮಾಂತರ ಮಹಿಳೆಯರ ಅಭಿವೃದ್ಧಿಯನ್ನು ಕುರಿತು ಮಾತನಾಡುತ್ತಿದ್ದರು. ಅನೇಕ ಒಕ್ಕಲಿಗ ಮುಖಂಡರುಗಳು ಭಾಷಣ ಮಾಡುತ್ತಿದ್ದರು. ಈ ಎಲ್ಲರ ಭಾಷಣದ ತಿರುಳೂ ಗ್ರಾಮಾಂತರದ ಒಕ್ಕಲಿಗರ ಮಕ್ಕಳಿಗೆ ಶಿಕ್ಷಣ ಕೊಡುವುದು, ಉಚಿತ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವುದನ್ನು ಕುರಿತಂತೆಯೇ ಇರುತ್ತಿತ್ತು. ಅನೇಕರು ತಮ್ಮ ತಮ್ಮ ಕೊಡುಗೆಗಳನ್ನು ಸಭೆಯಲ್ಲಿಯೇ ಪ್ರಕಟಿಸುತ್ತಿದ್ದರು. ಮುಂದೆ ತಾಲ್ಲೂಕು ಜಿಲ್ಲಾ ಕೇಂದ್ರಗಳಲ್ಲಿ ಉಚಿತವಿದ್ಯಾರ್ಥಿನಿಲಯಗಳು ಆರಂಭಗೊಂಡು ಜನಾಂಗದ ಅನೇಕ ಬಡ ವಿದ್ಯಾರ್ಥಿಗಳು ವಿದ್ಯಾವಂತರಾಗಲು ಕಾರಣವಾಯಿತು. ಈ ಸಭೆ ರಾಜ ಕೀಯ, ಸರ್ಕಾರಿ ನೌಕರಿಯೂ ಸೇರಿದಂತೆ ಒಕ್ಕಲಿಗರಿಗೆ ಸಲ್ಲಬೇಕಾದ ಪಾಲಿನ ಬಗೆಗೆ ಚರ್ಚಿಸುತ್ತಿತು. ಇಂತಹ ಘಟಾನುಘಟಿಗಳ ಭಾಷಣಗಳ ಜೊತೆ ನನ್ನದೂ ಇರುತ್ತಿತ್ತು. ನನ್ನ ಮಾತುಗಾರಿಕೆಯನ್ನು ಮೆಚ್ಚಿಕೊಂಡ ಮುಖಂಡರು ನನ್ನನ್ನು ಕರೆದು ಮಾತ ನಾಡಿಸಿ ಮತ್ತಷ್ಟು ಹುರಿದುಂಬಿಸುತ್ತಿದ್ದರು. ಈ ಸಮ್ಮೇಳನ ಎಂಟುದಿನಗಳ ಕಾಲ ನಡೆಯುತ್ತಿತ್ತು. ಮುಖಂಡರಿಗೆಲ್ಲ ಡೇರೆಗಳನ್ನು ಹಾಕಿ ವಾಸದ ಏರ್ಪಾಡು ಮಾಡು ತ್ತಿದ್ದರು. ಆದಿಚುಂಚನಗಿರಿಯಲ್ಲಿ ನಡೆಯುತ್ತಿದ್ದ ಇಂತಹ ಸಮಾರಂಭಗಳಲ್ಲಿ ಪಾಲು ಗೊಂಡು "ಅಯ್ಯೋ ಹೋಯಿತೆ ಆ ಲೋಕ" ಎಂದುಕೊಂಡು ಊರಿಗೆ ಮರಳಿ ಅಲ್ಲಿನ ಜೀವನದಲ್ಲಿ ಮುಳುಗುತ್ತಿದ್ದೆ.

ಊರಿನಲ್ಲಿದ್ದಾಗಲೂ ನಾನು ಊರ ಹುಡುಗರ ಮುಖಂಡನಾಗಿರುತ್ತಿದ್ದೆ. ಸಂಕ್ರಾಂತಿಯಂದು ಮೆದೆಗಳಿಗೆ ಪತ್ರೆ ಹಾಕಿ ಪೂಜೆ ಮಾಡಿ "ಹೆಚ್ಚಲಿ" ಎಂದು ಕಣಗೆಲಸ ಆರಂಭವಾಗುತ್ತದೆ. ಮೆದೆಗಳ ಮೇಲೆ ಸಾಲಾಗಿ ಇಟ್ಟಿದ್ದ ಹುಲ್ಲು ಹೊರೆಗಳಲ್ಲಿ ಒಂದು ಹೊರೆ ದೇವಾಲಯದ ಪೂಜಾರಿಗೂ ಮತ್ತೊಂದು ಹಜಾಮನಿಗೂ ಮತ್ತೊಂದು ಬಡಗಿಗೂ ಐದನೆಯದು ಕಮ್ಮಾರನಿಗೂ ಮೊದಲು ಹಂಚಿಯೇ ರೈತರು ಮಿಕ್ಕುದನ್ನು ತಮಗಾಗಿ ತೆಗೆದುಕೊಂಡು ಹೋಗುತ್ತಿದ್ದರು, ಸಂಕ್ರಾಂತಿಯಾದ ಮೂರನೆಯ ದಿನ ಆರಂಭವಾಗುವ ಕಣಗೆಲಸ ಎಷ್ಟಿದ್ದರೂ ವ್ಯಾಸ ಪೂರ್ಣಿಮೆಯೊಳಗೆ ಮುಗಿಯಬೇಕಾ ಗಿತ್ತು. ಸಾಮಾನ್ಯವಾಗಿ ಸಣ್ಣ ಹಿಡುವಳಿದಾರರ ಕಣಗೆಲಸ ಬೇಗ ಮುಗಿಯುತ್ತಿತ್ತು. ಹಳ್ಳಿಗಳಲ್ಲಿ ಮುಯ್ಯಾಳು ಎಂಬ ಪದ್ಧತಿಯ ಸಹಕಾರ ರೀತಿಯೊಂದಿದೆ. ಬೇಸಾಯ

ಮತ್ತು ಕಣಗಾಲದಲ್ಲಿ ರೈತನಿಗೆ ಎಷ್ಟು ಜನರಿದ್ದರೂ ಸಾಲದು. ಆಗಿನ ಕಾಲದಲ್ಲಿ ಈಗಿನಂತೆ ಹಣದ ಪ್ರಭಾವವಿರಲಿಲ್ಲ. ಊರಿನ ಪ್ರತಿಯೊಬ್ಬರು ತಮ ತಮಗೆ ಬೇಕಾದವರ, ಆಪ್ತರ, ಬಂಧುಗಳ ಕೆಲಸಗಳನ್ನು ಪರಸ್ಪರ ಸಹಾಯ ಪದ್ಧತಿಯಿಂದ ಮಾಡುತ್ತಿದ್ದರು. ಇದನ್ನೇ ಮುಯ್ಯಾಳು ಪದ್ಧತಿ ಎಂದು ಕರೆಯುತ್ತಾರೆ. ಈ ಕಣಗೆಲಸದ ಕಾಲದಲ್ಲಿ ರೈತರು ತಮ್ಮ ಮಕ್ಕಳನ್ನು ಶಾಲೆಗೆ ಸಹ ಕಳಿಸುತ್ತಿರಲಿಲ್ಲ, ಮನೆಯ ಹಿರಿಯರು ಒಕ್ಕಣೆಯಲ್ಲಿ ನಿರತರಾದರೆ ಮಕ್ಕಳು ದನ, ಕರುಗಳನ್ನು, ಮಕ್ಕಳು ಮರಿಗಳನ್ನು ನೋಡಿಕೊಳ್ಳುತ್ತಿದ್ದರು.

## ೩

ಗ್ರಾಮಾಂತರ ಹುಡುಗ. ಹುಡುಗಿಯರ ದನ ಕಾಯುವ ಕೆಲಸದ ಅನುಭವ ನಾಗರಿಕರಾದವರಿಗೆ ಇರಲು ಸಾಧ್ಯವಿಲ್ಲ. ಕೆಲವರು ಇದೇನು ಇವನು ದನ, ಕುರಿ ಕಾಯುವ ಕೆಲಸವನ್ನು ಏನೋ ಮಹಾ ಕೆಲಸವೆಂಬಂತೆ ಹೇಳುತ್ತಿದ್ದಾನಲ್ಲ ಎಂದು ಮೂಗು ಮುರಿಯಬಹುದು. ದನ, ಕುರಿ ಕಾಯುವವನಿಗೆ ಲೋಕಸಭೆಯ ಇಲ್ಲವೆ ವಿಧಾನಸಭೆಯ ಸ್ಪೀಕರ್ ಆದವನಿಗಿರಬೇಕಾದ ಸಮಾಧಾನಕರ ಮನಸ್ಸಿರಬೇಕಾಗುತ್ತದೆ. ಅದರಲ್ಲೂ ಹೊಲಗಾಲದಲ್ಲಿ ಈ ಕಾಯಕದ ಬವಣೆ ಹೇಳತೀರದು. ದನ ಕರುಗಳು ಹಸಿರು ಕಂಡಕಡೆಗೆಲ್ಲ ಧಾವಿಸುವಾಗ ನಿಮ್ಮ ಸಹನೆಯ ಪರೀಕ್ಷೆಯಾಗಿ ಬಿಡುತ್ತದೆ. ಇಷ್ಟೆಲ್ಲ ತಾಪತ್ರಯಗಳ ಮಧ್ಯೆಯೂ ಅಲ್ಲಿ ನಡೆಯುವ ಬೇಟೆ, ಹಣ್ಣು ಹಂಪಲು ಕದ್ದು ತರುವುದು, ಕಡೆಗೆ ತರಕಾರಿ, ಕಾಳುಗಳು, ಕಡಲೆಕಾಯಿ ಬೇಯಿಸಿ ತಿನ್ನುವುದು ಇವೆಲ್ಲ ಖುಷಿ ಕೊಡುವ ಕೆಲಸಗಳು.

ನಮ್ಮ ದನಗಾಹಿ ಉದ್ಯಮದ ಕಾಲದಲ್ಲಿ ಬೆಳಿಗ್ಗೆ ದನಕರುಗಳನ್ನು ಕಾವಲಿಗೆ ಅಟ್ಟಿಕೊಂಡು ಹೋಗುತ್ತಿದ್ದೆವು. ಆಗ ಅಕ್ಕಪಕ್ಕದ ಹಳ್ಳಿಗಳಿಗೆ ಗಡಿಯಲ್ಲಿ ದನಕರುಗಳನ್ನು ಮೇಯಿಸಲಿಕ್ಕೆ ಕಾವಲುಗಳಿರುತ್ತಿದ್ದವು.ಈಗ ಮನುಷ್ಯರಿಗಿರುವಂತೆ ಆಗ ಪ್ರಾಣಿಗಳಿಗೂ ಭೂಮಿ ಮೀಸಲಾತಿ ಇತ್ತು. ಸಾಕಿದ ಪ್ರಾಣಿಗಳಿಗೆ ಹುಲ್ಲುಗಾವಲು ಕುಡಿನೀರು ಕಟ್ಟೆ ಬಿಸಿಲಿಗೆ ತಂಪು ಕೊಡುವ ಗುಂಡು ತೋಪುಗಳಿರುತ್ತಿದ್ದವು. ಕಾಡು, ಕಾಡು ಪ್ರಾಣಿಗಳಿಗಾಗಿ ಇರುತ್ತಿತು. ಇವುಗಳನ್ನು ಒತ್ತುವರಿ ಮಾಡುವುದು ಹಾಳು ಮಾಡುವುದು ಮಹಾಪಾಪ ಎಂದು ಜನ ತಿಳಿಯುತ್ತಿದ್ದರು. ನಮ್ಮ ಪೂರ್ವಿಕರು ಒಂದು ಮರ ಕಡಿಯ ಬೇಕಾದರೆ ಮತ್ತೊಂದನ್ನು ಬೆಳೆಸುತ್ತಿದ್ದರು. ಅವರಿಗೆ ಹಣದ ದಾಹವಿರಲಿಲ್ಲ. ಈಗ ಈ ಎಲ್ಲವೂ ಜನರ ಭೂಮಿ, ಹಣದ ದಾಹಗಳಿಗೆ ಬಲಿಯಾಗಿವೆ. ಮಳೆ ಇಲ್ಲವಾಗಿದೆ. ಹುಲ್ಲುಗಾವಲುಗಳ ಹೆಸರೇ ಈಗ ಅಪರೂಪವಾಗುತ್ತಿದೆ. ನಮ್ಮ ಊರಿನ ಹುಲ್ಲುಗಾವಲಿನಲ್ಲಿ ಸಂಕ್ರಾಂತಿಯ ಕಾಲದಲ್ಲಿ ಒಳ್ಳೆಯ ಹುಲ್ಲು ಬೆಳೆದಿರುತ್ತಿತ್ತು. ನಾವು ದನಗಳಲ್ಲಿ ಮುಖ್ಯವಾದವನ್ನು, ಕಳ್ಳದನಗಳನ್ನು ಉದ್ದನೆಯ ಹಗ್ಗ ಹಾಕಿ ಕಟ್ಟಿಹಾಕುತ್ತಿದ್ದೆವು. ತಮ್ಮ ಮುಖಂಡರನ್ನು ಅನುಸರಿಸುವ ರಾಜಕಾರಣಿಗಳಂತೆ ಮಿಕ್ಕವು ಅವುಗಳ ಸುತ್ತ ಮೇಯುತ್ತಿದ್ದವು.

ಸಂಕ್ರಾಂತಿಯ ಕಾಲದಲ್ಲಿ ಕೆಂಡವರೆ ಮಾಡಿ ತಿನ್ನುವುದು ನಮಗೆ ಅತ್ಯಂತ ಪ್ರಿಯವಾದ ಕೆಲಸ. ದನಕರುಗಳು ಕಾವಲಿನಲ್ಲಿ ಮೇಯ ತೊಡಗಿದ ಮೇಲೆ ಕೆಲವರು ಅಕ್ಕಪಕ್ಕದ ಹೊಲಗಳಿಗೆ ನುಗ್ಗಿ ಚೆನ್ನಾಗಿ ಬಲಿತ ಅವರೇಕಾಯಿ ಕುಯ್ದು ತರುತ್ತಿದ್ದೆವು.

ಸಂಕ್ರಾಂತಿ ಅವರೇಕಾಯಿ ಸುಗ್ಗಿಯೂ ಹೌದು. ಈ ಕೆಲಸಕ್ಕೆ ಇಂತಹವರದೇ ಹೊಲ ವೆಂದೇನೂ ಕಟ್ಟುಪಾಡುಗಳಿರಲಿಲ್ಲ. ಎಲ್ಲರೂ ಕಣಗೆಲಸಗಳಲ್ಲಿ ನಿರತರಾಗುತ್ತಿದ್ದುದರಿಂದ ನಮ್ಮ ಅವರೇಕಾಯಿ ಕಳ್ಳತನ ಅವರ ಗಮನಕ್ಕೆ ಬರುತ್ತಿರಲಿಲ್ಲ. ಸರಿ ಹೀಗೆ ಕುಯ್ದು ತಂದ ಅವರೇಕಾಯಿಯನ್ನು ಎಡೆದು ನೆಲದ ಮೇಲೆ ಹರಡುವುದು. ಹೇಗೂ ಪ್ರತಿದಿನ ಕಾವಲಿನಲ್ಲಿ ಮೇಯುವ ದನಗಳು ಹಾಕುತ್ತಿದ್ದ ಸಗಣಿ ಅಲ್ಲಿಯೇ ಒಣಗಿ ಬೆರಣಿಯಾಗಿ ಬಿದ್ದಿರುತ್ತಿತ್ತು. ಅವುಗಳನ್ನೆಲ್ಲ ಆಯ್ದು ತಂದು ಕಾಳಿನ ಮೇಲೆ ಒಡ್ಡುವುದು. ಅನಂತರ ಅದಕ್ಕೆ ಬೆಂಕಿ ಹಚ್ಚುವುದು ಈ ಕೆಂಡದಲ್ಲಿ ಅವರೇಕಾಳು ಕುಸುವಿದಂತೆ ಬೆಂದು ಬಾಯಿ ಬಿಟ್ಟು ಕೊಳ್ಳುತ್ತಿದ್ದವು. ಕೆಂಡ ಆರಿದ ಮೇಲೆ ಕಾಳುಗಳನ್ನು ಆಯ್ದು ಎಲ್ಲರೂ ಹಂಚಿ ಕೊಂಡು ತಿನ್ನುತ್ತಿದ್ದೆವು. ಅವರ ರುಚಿ ಆ ಸೊಗಸು ಈಗಿನವರಿಗೆ ಅರ್ಥವಾಗು ವುದಾದರು ಹೇಗೆ ?

ನಮ್ಮ ಊರು ಬೆಟ್ಟಗುಡ್ಡ ಪ್ರದೇಶ ಎಂದು ಈ ಹಿಂದೆಯೇ ಹೇಳಿದ್ದೇನೆ. ಕೆರೆಯ ಹಿಂದಿನ ಮತ್ತು ಕಣಿವೆಯ ಮಧ್ಯದ ಭೂಮಿ ಎರೆಮಣ್ಣಿನಿಂದ ಕೂಡಿದ್ದಾಗಿದೆ. ಇಂತಹ ಜಮೀನುಗಳಲ್ಲಿ ಎರಡನೆ ಬೆಳೆಯಾಗಿ ಸೊಪ್ಪಿನ ಕಡಲೆ ಬೆಳೆಯುತ್ತಾರೆ. ಅಕ್ಟೋಬರ್ ಕೊನೆ ವಾರ ಅಥವಾ ನವೆಂಬರ್ ಮೊದಲ ವಾರದಲ್ಲಿ ಇದನ್ನು ಬಿತ್ತುತ್ತಾರೆ. ಅದು ಸಂಕ್ರಾಂತಿಯ ಹೊತ್ತಿಗೆ ಕಾಯಿ ಬಿಟ್ಟಿರುತ್ತವೆ. ಈ ಕಡಲೆಯನ್ನು ಹಕ್ಕಿ ಪಕ್ಷಿಗಳು, ಜನರು ತಿನ್ನುವುದು ಜಾಸ್ತಿ. ಆದುದರಿಂದ ಹಗಲು ಈ ಕಡಲೆಯನ್ನು ಬೆಳೆದ ಹೊಲಗಳನ್ನು ಕಾಯುತ್ತಾರೆ. ನಾವು ರಾತ್ರಿ ಹೊತ್ತು ಕಡಲೆ ಹೊಲಗಳಿಗೆ ನುಗ್ಗಿ ಹೊಲದ ಮಾಲೀಕರಿಗೆ ಅನುಮಾನ ಬರದಂತೆ ಅಲ್ಲೊಂದು ಇಲ್ಲೊಂದು ತಾಳನ್ನು ಕಿತ್ತು ಎಲ್ಲವನ್ನು ಸಂಗ್ರಹಿಸಿ ಹೊರೆ ಕಟ್ಟಿ ಕಾವಲಿನ ಹುಲ್ಲಿನಲ್ಲಿ ಮುಚ್ಚಿಟ್ಟು ಬರುತ್ತಿದ್ದೆವು, ಬೆಳಿಗ್ಗೆ ದನಗಳನ್ನು ಹೊಡೆದು ಕೊಂಡು ಹೋದಾಗ ಬೆರಣಿ ಒಟ್ಟಿ ಸುಟ್ಟು ತಿನ್ನುತ್ತಿದ್ದೆವು. ಇದನ್ನು ಕಿಚ್ಚು ಕಡಲೆ ಎಂದು ಕರೆಯುತ್ತಾರೆ.

ಒಂದು ರಾತ್ರಿ ನಮ್ಮ ಗುಂಪು ಕಡಲೆ ಕದಿಯಲು ಹೊರಟಂತೆಯೇ ಊರಿನ ಮತ್ತೊಂದು ಗುಂಪೂ ಹೊರಟಿತು. ಆದರೆ ಹೊಲದ ಹತ್ತಿರ ಅನಾಹುತವಾಯಿತು. ಅವರನ್ನು ಕಂಡು ನಾವು, ನಮ್ಮನ್ನು ಕಂಡ ಅವರು ಉಂಟುಮಾಡಿದ ಗಡಿಬಿಡಿಯಲ್ಲಿ ಹೊಲದಲ್ಲಿ ಕಾವಲು ಮಲಗಿದ್ದವರಿಗೆ ಎಚ್ಚರವಾಗಿ ಅವರು ನಾವು ಕಡಲೆಗಿಡ ಕದಿಯಲು ಬಂದಿರುವುದಾಗಿ ಆರೋಪಿಸಿ ಊರ ಮುಖಂಡರಿಗೆ ದೂರು ನೀಡಿದರು. ರಾತ್ರಿ ಹೊತ್ತು ಹೊಲಗದ್ದೆಗಳಲ್ಲಿ, ತೋಟ ತುಡಿಕೆಗಳಲ್ಲಿ ಕದಿಯುವುದು ತನ್ನ ತಾಯಿಗೆ ದ್ರೋಹ ಬಗೆದಂತೆ ಎಂಬುದು ಹಳ್ಳಿಗರ ನಂಬಿಕೆ. ಆದರೂ ಶೆಟ್ಟರಚೊಟ್ಟಪ್ಪ ಎಂಬುವನು ಪಂಚಾಯಿತಿಗೆ ದೂರು ನೀಡಿಯೇ ಬಿಟ್ಟ. ಸರಿ ವಿಚಾರಣೆಗೆ ಸೇರಿದರು. ಇಷ್ಟು ಹೊತ್ತಿಗೆ ನಮ್ಮ ಎರಡುಗುಂಪೂ ಕಲೆತು ಉಪಾಯವೊಂದನ್ನು ರೂಪಿಸಿ ಕೊಂಡಿದ್ದೆವು. ಪಂಚಾಯಿತಿಯವರು ಕರೆದು ವಿಚಾರಿಸಿದಾಗ "ಬ್ಯಾಡರ ಹಳ್ಳಿಯವರು

ನಾಟಕ ಕಲಿತಿದ್ದು ಆ ರಾತ್ರಿ ಗೆಜ್ಜೆಪೂಜೆ ಇತ್ತೆಂದೂ ಅದನ್ನು ನೋಡಲು ಹೋಗಿ ಮಾತಾಡುತ್ತಾ ಓಂತಿರುಗುತ್ತಿದ್ದ ನಮ್ಮ ಮೇಲೆ ಕಳ್ಳತನದ ಆರೋಪ ಹೊರಿಸಿರುವುದು ಸರಿಯಲ್ಲವೆಂದೂ ಕಳ್ಳತನಕ್ಕೆ ಹೋಗುವವರೆಲ್ಲಿಯಾದರೂ ಗಲಾಟೆ ಮಾಡಿಕೊಂಡು ಹೋಗುತ್ತಾರೆಯೇ ಎಂದೂ ವಾದಿಸಿದೆವು. ನಮ್ಮ ಮಾತನ್ನು ನಿಜ ವೆಂದು ನಂಬಿ ಪಂಚಾಯಿತರು ನಮ್ಮನ್ನು ಅಪರಾಧ ಮುಕ್ತರಾಗಿಸಿದರು. ಶೆಟ್ಟರ ಚೊಟ್ಟಪ್ಪನಿಗೆ ಛೀಮಾರಿಯಾಯಿತು. ಗೌರವಸ್ಥಮನೆ ಮಕ್ಕಳ ಮೇಲೆ ಕಳ್ಳತನದ ಆರೋಪ ಮಾಡಿದ ತಪ್ಪಿಗೆ. ಬ್ಯಾಡರ ಹಳ್ಳಿಯಲ್ಲಿ ನಾಟಕ ಕಲಿತರೋ ಬಿಟ್ಟರೋ ಆದರೆ ಅದು ನಮ್ಮ ಮರ್ಯಾದೆ ಉಳಿಸಿತು.

ನಮ್ಮೂರ ಬಳಿಯ ಕೋಟೆ ಬೆಟ್ಟದ ವೆಂಕಟರಮಣಸ್ವಾಮಿ ಜಾತ್ರೆ ನಡೆಯು ವುದು ಫೆಬ್ರುವರಿ ತಿಂಗಳಲ್ಲಿ ಬರುವ ವ್ಯಾಸ ಪೂರ್ಣಿಮೆಯಂದು. ಅಂಕುರಾರ್ಪಣ ಪೂಜೆಯ ಎಲ್ಲ ಖರ್ಚುಗಳೂ ನಮ್ಮೂರಿನವರದೆ. ತಪ್ಪದೆ ಮನೆಗೊಬ್ಬರಂತೆ ಉತ್ಸವಕ್ಕೆ ಹೋಗುವುದು ಪದ್ಧತಿ. ಆಗಷ್ಟೇ ಕಣದ ಕೆಲಸ ಮುಗಿದಿದ್ದು ಬಡಿದ ಹುಲ್ಲು ಮತ್ತು ದವಸ ಧಾನ್ಯಗಳನ್ನು ಅಚ್ಚುಕಟ್ಟಾಗಿ ಶೇಖರಿಸುವ ಕೆಲಸವಿಪರೀತ ವಾಗಿರುತ್ತದೆ. ಆದುದರಿಂದ ಈ ಉತ್ಸವಕ್ಕೆ ಹೋಗುವವರು ಹುಡುಗರು ಮಾತ್ರ. ನಮ್ಮ ಗುಂಪು ಈ ಸಂದರ್ಭದಲ್ಲಿ ಕೋಟೆ ಬೆಟ್ಟಕ್ಕೆ ಬಿಜಯಮಾಡಿತು. ಹಿರಿಯರು ಇರದ್ದಿದರಿಂದ ನಮಗೆ ಎಲ್ಲಿಲ್ಲದ ಸದರ. ಅಷ್ಟು ಹೊತ್ತಿಗಾಗಲೇ ಹಂಡೆಗಳಲ್ಲಿ ಪುಳಿ ಯೋಗರೆ ಪಾಯಸ ಇತ್ಯಾದಿ ದೇವರ ನೈವೇದ್ಯಕ್ಕಾಗಿ ತಯಾರಾಗಿ ಕುಳಿತಿದ್ದವು. ನಾವು ಹುಡುಗರೆಲ್ಲ ಆ ಹಂಡೆಗಳ ಮಧ್ಯೆ ಹಾದು ಹೋಗುತ್ತಿದ್ದೆವು. ಅಲ್ಲಿ ಇದ್ದ ಒಬ್ಬ ಭಟ್ಟರು 'ಲೋ ಹುಡುಗರಾ ಪ್ರಸಾದದ ಹಂಡೆಗಳಿಗೆ ಕಾಲು ತಗುಲಿಸಿಕೊಂಡು ಹೋಗು ತ್ತಿದ್ದೀರೇನ್ರೋ ದೂರ ಹೋಗಿ' ಎಂದು ಗುಡುಗಿದರು. ನಾವೂ ಭಯಭಕ್ತಿಯಿಂದಲೇ ಹೋಗುತ್ತಿದ್ದೆವು. ಆದರೆ ಭಟ್ಟರು ಗುಡುಗಿದ ಮೇಲೆ ನನಗೆ ಕೋಪ ಬಂತು. ಎಲಾ ಇವನ ಇಲ್ಲಿರುವ ಎಲ್ಲವೂ ಹಂಡೆಗಳೂ ಸೇರಿದಂತೆ ನಮ್ಮವು, ನಾವೇ ತಂದು ಇವರಿಗೆ ಕೊಟ್ಟೆವು. ಆದರೂ ನಮ್ಮ ಗಾಳಿ ತಗುಲಿದರೇ ಮೈಲಿಗೆಯಾದಂತೆ ಇವರು ಹಾರಾಡು ತ್ತಿದ್ದಾರಲ್ಲ, ಇವರಿಗೆ ಏನಾದರೂ ಕೀಟಲೆ ಮಾಡಬೇಕೆನಿಸಿತು. ನಾನು ತಟ್ಟನೆ ನಿಂತ ವನೆ "ತಪ್ಪಾಯ್ತು ಭಟ್ಟರೆ ನಮಗೆ ತಿಳಿಯಲಿಲ್ಲ" ಎಂದವನೆ ಪುಳಿಯೋಗರೆ ಹಂಡೆ ಯನ್ನು ಎರಡೂ ಕೈಗಳಿಂದ ಮುಟ್ಟಿ ಕಣ್ಣಿಗೊತ್ತಿಕೊಂಡೆ. "ಭಟ್ಟರು ಹೌಹಾರಿ ಅಯ್ಯೋ ಅಯ್ಯೋ ಶೂದ್ರಮುಂಡೇದೆ ಮುಟ್ಟಿ ಮೈಲಿಗೆ ಮಾಡಿ ಬಿಟ್ಟೆಯಲ್ಲೋ" ಎಂದು ಕೂಗುತ್ತಲೇ ಇದ್ದರು. ನಾನು ಏನೂ ಕಾಣದವನಹಾಗೆ ಮುಂದೆ ನಡೆದೆ. ನಾವು ಮುಟ್ಟಿದ ಹಂಡೆಯ ಪುಳಿಯೋಗರೆಯನ್ನು ಹಾರುವರು ತಿನ್ನಲಾರರು, ನಮಗೇ ಹಂಚುತ್ತಾರೆ. ಎಂದು ಖುಷಿಪಟ್ಟೆವು, ಆದರೆ ನಮಗೆ ನಿರಾಶೆ ಕಾದಿತ್ತು. ಕೆರೆಯ ನೀರನ್ನೇ ತೀರ್ಥವೆಂದು ಸಂಪ್ರೋಕ್ಷಿಸಿ ಅದನ್ನೆಲ್ಲ ತಾವೇ ಮುಗಿಸಿ ನಾಯಿಗಳಿಗೆ

ಹಾಕುವಂತೆ ಒಂದೊಂದು ಹಿಡಿ ಪುಳಿಯೋಗರೆಯನ್ನು ಪ್ರಸಾದವೆಂದು ನಮ್ಮ ಕೈಗೆ ಹಾಕಿದರು. ಆಮೇಲೆ ಊರಿಗೆ ಬಂದು ಅರ್ಧ ರಾತ್ರಿಯಲ್ಲಿ ಊಟ ಮಾಡಿದೆವು. ಎಂಥ ಅನ್ಯಾಯ ! ನನ್ನ ಹೃದಯ ಮನಸ್ಸುಗಳು ಕುದಿಯುತ್ತಿದ್ದುವು.

ಚಿಕ್ಕಂದಿನಿಂದಲೂ ನನ್ನನ್ನು ಕಾಡಿಸುತ್ತಿದ್ದ ಪ್ರಶ್ನೆಯೊಂದಿತ್ತು. ನಮಗೆ ನಮ್ಮ ತಂದೆತಾಯಿಯರು, ತಾತ ಅಜ್ಜಿಯರು. ಹಿರಿಯರಿಗೆ ಭಯ ಭಕ್ತಿ ತೋರಿಸುವಂತೆ ಹೇಳಿದ್ದರು. ಅದರಂತೆಯೇ ನಾವು ನಡೆಯುತ್ತಿದ್ದೆವು. ಆದರೆ ಹಾಲು. ಮೊಸರು. ಬೆಣ್ಣೆಯಿಂದ ಕಾಯಿ ಕಸಿ ದವಸಧಾನ್ಯಗಳವರೆಗೆ ನಮ್ಮ ಮನೆಗಳಿಗೆ ಬಂದು ಯಾಚಿಸುತ್ತಿದ್ದ ಬ್ರಾಹ್ಮಣರ ಹುಡುಗರು ಅತಿ ಚಿಕ್ಕವರು ಕೂಡ ನಮ್ಮ ಹಿರಿಯ ರನ್ನು 80–90 ವರ್ಷದವರನ್ನು ಲೋ ಅವನೆ ಇವನೆ ಎನ್ನುತ್ತಿದ್ದರು. ಅದಕ್ಕೆ ಪ್ರತಿಯಾಗಿ ಈ ಹಿರಿಯರು ಆ ಲಂಗೋಟಿ ಹಾಕಲೂ ಬರದ ಹುಡುಗರನ್ನು ಸ್ವಾಮಿ, ಬುದ್ಧಿ, ಅಯ್ನೋರೆ ಎಂದೆಲ್ಲ ಕರೆಯುತ್ತಿದ್ದರು. ಇದನ್ನು ಕಂಡಾಗ, ಕೇಳಿ ದಾಗಲೆಲ್ಲ ನನಗೆ ಮೈ ಉರಿಯುತ್ತಿತ್ತು. ಆ ಹಾರುವರ ಹುಡುಗರಿಗೆ ನಾಲ್ಕು ಒದ್ದು ಆಚೆ ಹಾಕುವಷ್ಟು ಕೋಪ ಬರುತ್ತಿತ್ತು. ಅವರೇನು ಮಾಡುವುದು ನಮ್ಮ ಜನದ್ದೇ ಮೂರ್ಖತನ. ಇವರು ಅನ್ನಿಸಿಕೊಳ್ಳುವುದರಿಂದ ತಾನೆ ಅವರು ಅನ್ನುವುದು ? ಆಗ ಚುಂಚನಗಿರಿಯಲ್ಲಿ ನಡೆಯುತ್ತಿದ್ದ ಒಕ್ಕಲಿಗರ ಸಭೆಗಳನ್ನು ಕಂಡು ಇವರೆಲ್ಲ ಕರುಬಿ ಗೇಲಿ ಮಾಡುತ್ತಿದ್ದುದನ್ನು ಕೇಳಿ ನೊಂದುಕೊಂಡಿದ್ದೇನೆ. ಎಂಥ ನೀಚಜನ ಇವರು ಎಂದು.

ನಾಗಮಂಗಲ ಒಂದು ಕಾಲಕ್ಕೆ ವಿಜಯನಗರ ಅರಸರ ಉಪ ರಾಜಧಾನಿ ಯಾಗಿತ್ತೆಂದೂ ಈ ಊರಿನ ತಿಮ್ಮಣ್ಣನು ಕೃಷ್ಣದೇವರಾಯನ ಅಷ್ಟಪ್ರಧಾನರಲ್ಲಿ ಒಬ್ಬ ನಾಗಿದ್ದನೆಂದೂ ವಿದ್ವಾಂಸರು ಹೇಳಿದ್ದಾರೆ. ಅದರ ಕೋಟೆಕೊತ್ತಲು ಗುಡಿ ಗೋಪುರ ಗಳ ದೃಷ್ಟಿಯಿಂದ ಹೇಳುವುದಾದರೆ ಅವರ ಅಭಿಪ್ರಾಯ ಸರಿಯೆನ್ನಿಸದಿರದು. ಆದರೆ ನಾನು ಓದುತ್ತಿದ್ದ ಕಾಲಕ್ಕೆ ಅದು ಅಂತಹ ಅದ್ಭುತ ನಗರವೇನೂ ಆಗಿರಲಿಲ್ಲ. ಆಗ ವಿದ್ಯುದ್ದೀಪಗಳಿಲ್ಲದಿದ್ದುದರಿಂದ ಬೀದಿಯಲ್ಲಿ ಸಾಲಾಗಿ ಕಲ್ಲು ಕಂಬವಿದ್ದು ಅದರ ಮೇಲೆ ಲಾಂದ್ರಗಳನ್ನು ಹಚ್ಚುತ್ತಿದ್ದರು. ಅವೋ ಯಾವಾಗಲೂ ಪ್ರಕಾಶಮಾನವಾಗಿ ಉರಿದದ್ದನ್ನೆ ನಾನು ಕಾಣೆ. ನೀರಿನ ವ್ಯವಸ್ಥೆ ಕೂಡ ಚೆನ್ನಾಗಿರಲಿಲ್ಲ. ಸೇದುವ ಬಾವಿಗಳ ನೀರು ಕಡು ಜಲವಾಗಿದ್ದು ಉಪ್ಪು. ಅದರಲ್ಲಿ ಸ್ನಾನ ಮಾಡಿದರೆ ಕೂದಲು ತನಗೆ ತಾನೆ ಉದುರಿ ತಲೆ ಬೋಳಾಗುತ್ತಿತ್ತು. ಕುಡಿಯುವ ನೀರಿಗೆ ಊರವರೆಲ್ಲ ಆಶ್ರಯಿಸಿದ್ದು ಹಂಪೆಯರಸನ ಕೊಳ. ಈ ಕೊಳದ ಬಗ್ಗೆ ಒಂದೆರಡು ಮಾತು ಹೇಳ ಬೇಕೆನಿಸುತ್ತದೆ. ಈ ಕೊಳವನ್ನು ವಿಜಯನಗರದ ಸುಪ್ರಸಿದ್ಧ ಅರಸ ಕೃಷ್ಣದೇವ ರಾಯನ ಪಟ್ಟಾಭಿಷೇಕದ ನೆನಪಿಗೆ ನಾಗಮಂಗಲದ ಪ್ರಭು ತಿಮ್ಮಣ್ಣ ಕಟ್ಟಿಸಿದ್ದೆಂದು ಸಂಶೋಧಕರು ಹೇಳಿದ್ದಾರೆ. ಆದರೆ ಅದರ ನೀರು ಎಷ್ಟು ತೆಳ್ಳಗೆ ಪರಿಶುದ್ಧವಾಗಿತ್ತು

ಎಂದರೆ ಇಪ್ಪತ್ತು ಮೂವತ್ತು ಅಡಿ ಆಳದ ತಳ ಮೇಲಿನಿಂದ ನೋಡಿದವರಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಈ ನೀರು ಕುಡಿದು ಬೆಳೆದು ಆ ಮೇಲೆ ಬೇರೆ ಬೇರೆ ಊರಿಗೆ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ತಾವು ಗರ್ಭವತಿಯರಾದಾಗ ಉಂಟಾಗುತ್ತಿದ್ದ ಬಯಕೆಗಳಲ್ಲಿ ಈ ಕೊಳದ ನೀರು ಕುಡಿಯುವುದೂ ಒಂದಾಗಿರುತ್ತಿತ್ತು. ಅಂತಹವರು ಈ ನೀರನ್ನು ತಾವಿರುವಲ್ಲಿಗೆ ಗಂಗಾನದಿಯ ನೀರನ್ನು ತರಿಸುವಂತೆ ತರಿಸಿಕೊಳ್ಳುತ್ತಿದ್ದರು. ಈ ಕೊಳದಲ್ಲಿ ಕೈಕಾಲು ತೊಳೆಯುವುದು, ಬಟ್ಟೆ ಒಗೆಯುವುದು ಕಾನೂನು ಬಾಹಿರವೆಂದು ಆಗ ಇಲ್ಲಿ ತಹಶೀಲ್ದಾರರಾಗಿದ್ದ ಕನ್ನಡದ ಹಿರಿಯ ಲೇಖಕ ಜಿ. ವಾಸುದೇವಯ್ಯನವರು ಹಾಕಿಸಿದ ಬರಹವಿತ್ತು. ಈಗಲೂ ಇದೆಯೆಂದುಕೊಂಡಿದ್ದೇನೆ.

ನನ್ನ ತರಗತಿಯಲ್ಲಿನ ಆಪ್ತ ಸ್ನೇಹಿತರಲ್ಲಿ ಮೂವರು ಮುಸ್ಲಿಮರಿದ್ದರು. ಹಸನ್ ನಶ್ಯದ ವ್ಯಾಪಾರಿಯೊಬ್ಬರ ಮಗ. ಅಬ್ದುಲ್‌ಗಫಾರ್ ಈ ಮುಂದೆ ಪೊಲೀಸ್ ಇಲಾಖೆಯಲ್ಲಿ ಕೆಲಸಕ್ಕೆ ಸೇರಿ ಸರ್ಕಲ್ ಇನ್ಸ್‌ಪೆಕ್ಟರಾಗಿ ನಿವೃತ್ತನಾದ. 1939ರ ಹ್ಯಾಮಿಲ್ಟನ್ ಸತ್ಯಾಗ್ರಹ ಕಾಲದಲ್ಲಿ ನನ್ನ ಸತ್ಯಾಗ್ರಹಿ ಮಿತ್ರರನೇಕರನ್ನು ದಸ್ತಗಿರಿ ಮಾಡಿ ಜೈಲಿಗೆ ಕಳಿಸಿದ. ಈತ ಸತ್ಯಾಗ್ರಹಿಗಳನ್ನು ಕೋರ್ಟಿಗೆ ಕರೆದೊಯ್ಯುವಾಗ ಮತ್ತು ಅಲ್ಲಿಂದ ಹಿಂತಿರುಗುವಾಗ ಅವರಿಗೆಲ್ಲ ತಿಂಡಿ ಕೊಡಿಸುತ್ತಿದ್ದನಂತೆ. ಮತ್ತೊಬ್ಬ ಅವನ ಹೆಸರು ಮರೆತುಹೋಗಿದೆ. ಶಾಲಾ ಅಧ್ಯಾಪಕನಾಗಿ ನಿವೃತ್ತಿ ಹೊಂದಿ ಇತ್ತೀಚಿನವರೆಗೆ ಮಂಡ್ಯದಲ್ಲೇ ಇದ್ದ. ಈಚೆಗೆ ಕಾಣುತ್ತಿಲ್ಲ. ಈ ಮೂವರು ಮುಸ್ಲಿಂ ಮಿತ್ರರ ಹಬ್ಬಹರಿದಿನ ಮದುವೆ ಮುಂಜಿಗಳಿಗೆ ನಾನು ತಪ್ಪದೆ ಆಹ್ವಾನಿತನಾಗಿ ಹೋಗುತ್ತಿದ್ದೆ. ಹಾಗೆಯೇ ಅವರೂ ನನ್ನ ಮನೆಯ ಕಾರ್ಯಗಳಿಗೆ ಬರುತ್ತಿದ್ದರು. ಯಾಕೆ ಈ ಮಿತ್ರರ ಪ್ರಸ್ತಾಪ ಮಾಡಿದೆನೆಂದರೆ ಇತ್ತೀಚಿನ ದಿನಗಳಲ್ಲಿ ಹಿಂದೂ ಮುಸ್ಲಿಮರ ಸಂಬಂಧ ಕೆಡುತ್ತಿರುವುದನ್ನು ಕಾಣುತ್ತೇವೆ. ನಾಗಮಂಗಲ ಬೆಳ್ಳೂರಿನ ಮುಸ್ಲಿಮರು ಹಿಂದುಗಳು ಅಣ್ಣತಮ್ಮಂದಿರಂತಿದ್ದವರು. ಅವರಲ್ಲೂ ಭಿನ್ನಾಭಿಪ್ರಾಯ ಉಂಟಾಗುವಂತೆ ಮಾಡಿತು ನಮ್ಮ ರಾಜಕೀಯ ಸಂಸ್ಕೃತಿ. ಈ ವಿಷಸಲಾಕಿಯಿಂದಾಗಿ ಮುಸ್ಲಿಮರೇ ಬೇರೆ, ಹಿಂದೂಗಳೇ ಬೇರೆ ಎಂಬ ಭಾವನೆ ಬೆಳೆಯುತ್ತಿದೆ. ಇದು ಒಳ್ಳೆಯ ಬೆಳವಣಿಗೆಯಲ್ಲ. ಧಾರ್ಮಿಕ ಪದ್ಧತಿಗಳು ಮನೆ ಮತ್ತು ದೇವಾಲಯಗಳಿಂದ ಹೊರಬರಬಾರದು. ನಮ್ಮ ದೇಶದ ಪ್ರತಿ ಮಗುವೂ ಒಂದರೊಂದಿಗೊಂದು ಕೂಡಿ ಆಡುವಂತಿರಬೇಕು, ಕಲಿಯುವಂತಿರಬೇಕು. ಆಗ ಮಾತ್ರ ಪರಧರ್ಮಸಹಿಷ್ಣುತೆ, ಭಾವೈಕ್ಯತೆ ಸಾಧ್ಯವೆಂದು ನನಗನ್ನಿಸುತ್ತದೆ.

1931 ರ ಯುಗಾದಿಯ ಕಾಲಕ್ಕೆ ಊರಿಗೆ ಕಾಲರಾ ಮಾರಿ ಕಾಲಿಕ್ಕಿತು. ಮನೆ ಮನೆಯಲ್ಲಿ ಈ ಮಾರಿ ಮಾಡಿದ ಹಾವಳಿ ಭಯಂಕರವಾದುದು. ಹಿಂದಿನ ಇನ್‌ಫ್ಲುಯೆಂಜ ಮಾರಿಯನ್ನು ಮೀರಿಸುವಂತಿತ್ತು. ಸತ್ತವರನ್ನು ಹೊರುವವರಿಲ್ಲ. ಅಳು

ವವರ ಕಣ್ಣೀರು ಇಂಗಿ ಹೋಗಿದ್ದುವು. ನಾಲ್ಕಾರು ಹೆಣಗಳನ್ನು ಹೇರಿಕೊಂಡು ಹೂಳಲು ಹೋದರೆ ಅಲ್ಲಿಗೆ ಮತ್ತೆ ನಾಲ್ಕಾರು ಜನ ಸತ್ತ ಸುದ್ದಿ ಬರುತ್ತಿತ್ತು. ಊರಿಗೆ ಹಿಂತಿರುಗುವ ಹೊತ್ತಿಗೆ ಮತ್ತೆ ನಾಲ್ಕಾರು. ನನ್ನನ್ನು ಮತ್ತು ತಮ್ಮಂದಿರಿಬ್ಬರನ್ನೂ ತನ್ನ ತೌರುಮನೆಗಾದರೂ ಕಳಿಸಿ ಕಾಲರಾ ಮಾರಿಯ ದವಡೆಯಿಂದ ಪಾರುಮಾಡುವುದು ತಾಯಿಯ ಬಯಕೆ. ಆಕೆಯ ಮಾತಿನಂತೆ ತಾತನ ಮನೆಯ ದಾರಿ ಹಿಡಿದ ನಮ್ಮನ್ನು ಆ ಊರಿನವರು ಅರ್ಧದಾರಿಯಿಂದ ಹಿಂತಿರುಗಿಸಿದರು. ನಾವು ತೆಪ್ಪಗೆ ಮನೆಗೆ ಬಂದೆವು. ಅನೇಕರ ಮೈಮೇಲೆ ದೇವರು ಬಂದು ಈ ಮಾರಿಗೆ ತನ್ನದೇ ಆದ ಕಾರಣ ಹೇಳಿ ಜನರನ್ನು ಮತ್ತಷ್ಟು ಭಯಭೀತರನ್ನಾಗಿಸುತ್ತಿದ್ದರು. ಇದೊಂದು ಕೆಟ್ಟಕಾಯಿಲೆ. ಕೆಟ್ಟನೀರಿನಿಂದ, ಆಹಾರದಿಂದ ಬರುತ್ತದೆ. ಕಾಯಿಸಿ ಮರಳಿಸಿದ ನೀರು ಕುಡಿಯಿರಿ, ಬಿಸಿ ಆಹಾರ ತಿನ್ನಿ. ಚುಚ್ಚುಮದ್ದು ಹಾಕಿಸಿಕೊಳ್ಳಿ ಎಂದರೆ ಯಾರೂ ನಂಬರು. ತಲೆದೂಗಿ ನನ್ನ ಭಾಷಣ ಕೇಳುತ್ತಿದ್ದವರೂ ಈ ಬಗ್ಗೆ ನನ್ನ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲು ಸಿದ್ಧರಿರಲಿಲ್ಲ. ವಿಚಾರ ತಿಳಿದು ನಾಗಮಂಗಲ ಆಸ್ಪತ್ರೆಯಿಂದ ವೈದ್ಯರು ಬಂದು ಚುಚ್ಚುಮದ್ದು ಹಾಕಿದ ಮೇಲೆಯೇ ಅದು ಹತೋಟಿಗೆ ಬಂದದ್ದು. ಈ ಜನರಲ್ಲಿ ರಕ್ತಗತವಾಗಿರುವ ಮೂಢನಂಬಿಕೆಗಳನ್ನು ಅಷ್ಟು ಸುಲಭವಾಗಿ ಹೋಗಿಸುವುದು ಆಗದ ಕೆಲಸ ಎಂಬ ಅರಿವು ಮೂಡಿತು. ವೈದ್ಯರ ಮದ್ದಿನಿಂದ ಕಾಲರ ನಿಂತರೂ ಅಮ್ಮನನ್ನು ಕಳಿಸುವ ಹಬ್ಬಮಾಡಿ ನೂರಾರು ಮೂಕ ಪ್ರಾಣಿಗಳನ್ನು ಬಲಿಕೊಟ್ಟ ಈ ಜನರ ಬಗ್ಗೆ ಮರುಕವೆನಿಸುತ್ತಿತ್ತು.

ನಮ್ಮೂರಿನ ಗ್ರಾಮದೇವತೆ ಪಾಲುಕೆರೆ ಅಮ್ಮ. ಈಕೆಯನ್ನು ಪಡಲದಮ್ಮ ಎಂದೂ ಕರೆಯುತ್ತಾರೆ. ಈಕೆಯೇ ಕಂಬದಹಳ್ಳಿಯಿಂದ ನಮ್ಮ ಪೂರ್ವಿಕರೊಂದಿಗೆ ಬಂದ ಲಕ್ಷ್ಮೀದೇವಿ ಕೂಡ. ಕಂಬದಹಳ್ಳಿ ನಮ್ಮ ಊರಿನಿಂದ ನೇರ ಪಡುವಲು ಅಂದರೆ ಪಶ್ಚಿಮಕ್ಕಿರುವುದರಿಂದ ಪಡುವಲಿಂದ ಬಂದ ಅಮ್ಮ ಪಡುವಲಮ್ಮ ಪಡಲದಮ್ಮ ಆಗಿರಬೇಕೆಂದು ಹೇಳುತ್ತಾರೆ. ಈ ಹೆಸರಿನ ನಿಷ್ಪತ್ತಿಯ ಬಗ್ಗೆ ತಲೆಕೆಡಿಸಿಕೊಳ್ಳುವುದು ಬೇಡ. ಯುಗಾದಿಯಿಂದ ಯುಗಾದಿಯವರೆಗೆ ನಮ್ಮೂರಿನಲ್ಲಿ ಅನೇಕ ಹಬ್ಬಹರಿದಿನಗಳು ನಡೆಯುತ್ತವೆ. ಇವುಗಳನೇಕವು ವೈದಿಕ ಸಂಪ್ರದಾಯದಿಂದ ಬಂದವು. ಆದರೆ ನಮ್ಮ ಗ್ರಾಮದೇವತೆಯ ಹಬ್ಬ ವಿಶಿಷ್ಟವಾದುದು. ಅದರ ಆಚರಣೆಯ ಒಂದು ಚಿತ್ರವನ್ನು ನನ್ನ ಬದುಕಿನ ಅಧ್ಯಾಯದಲ್ಲಿ ಹೇಳಿದರೆ ಅಪ್ರಸ್ತುತವಾಗಲಾರದೆಂದು ಭಾವಿಸುತ್ತೇನೆ.

ಶಿವರಾತ್ರಿಯ ನಂತರ ಯುಗಾದಿಗಿಂತ ಇಪ್ಪತ್ತುದಿನ ಮುಂಚೆ ಒಂದು ನಿಗದಿಯಾದ ದಿನ ಅಮ್ಮನಿಗೆ ಕಂಬ ತರಲಾಗುವುದು. ಇದು ಗ್ರಾಮದೇವತೆ ಹಬ್ಬದ ಆರಂಭದ ದಿನ. ಅದೇ ದಿನ ರಾತ್ರಿ ರಂಗದಲ್ಲಿ ಕರಕಲು ಹಾಕಿ ತಮಟೆ ಕಾಯಿಸಿ ರಂಗದ ಕುಣಿತವನ್ನು ಆರಂಭಿಸುವರು. ಮುಂದೆ ಹದಿನೈದು ದಿನಗಳ ಕಾಲ ಈ ಕುಣಿತ ರಾತ್ರಿಯ

ಕಾಲದಲ್ಲಿ ನಡೆಯುತ್ತದೆ. ಸಾಮಾನ್ಯವಾಗಿ ಶುಕ್ರವಾರ ಆರಂಭವಾಗುವ ಈ ಕುಣಿತ ಹದಿನೈದನೆಯ ದಿನ ಗುರುವಾರ ಮುಗಿಯುತ್ತದೆ. ಅಕ್ಕಪಕ್ಕದ ಊರಿನವರೂ ಬಂದು ಕುಣಿಯುವುದುಂಟು. ಕೊನೆಯ ದಿನ ಮೂಡಹಳ್ಳಿಯವರು ಕುಣಿಯುತ್ತಾರೆ. ಅದರ ಮಾರನೆಯ ದಿನ ಗುರುವಾರ ರಾತ್ರಿಯಿಡೀ ರಂಗದ ಕುಣಿತ ನಡೆಯುತ್ತದೆ. ಹಬ್ಬಕ್ಕೆ ಮನೆ ಮನೆಯೂ ನೆಂಟರಿಷ್ಟರಿಂದ ತುಂಬಿರುತ್ತದೆ. ಇಲ್ಲಿನ ಒಂದು ವಿಶೇಷ ವೆಂದರೆ ಈ ಊರಿನಿಂದ ಬೇರೆ ಊರುಗಳಿಗೆ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ಈ ಹಬ್ಬಕ್ಕೆ ತಪ್ಪದೇ ಬಂದು ಅಮ್ಮನಿಗೆ ಪೂಜೆ ಸಲ್ಲಿಸಲೇಬೇಕು. ರಾತ್ರಿ ಹಡಲದಮ್ಮನ ಪೂಜಾರಿ ಪೂಜೆಯನ್ನು ಹೊತ್ತು ಮನೆ ಮನೆಗೆ ಬರುತ್ತಾನೆ. ಆಗ ಆ ಮನೆಗೆ ಎಷ್ಟು ಜನ ಹೆಣ್ಣು ಮಕ್ಕಳು ಬಂದಿರುತ್ತಾರೋ ಅಷ್ಟು ಈಡುಗಾಯಿ ಹಾಕಲೇಬೇಕು. ಒಂದು ವೇಳೆ ಯಾರಾದರೂ ಕಡಿಮೆ ಈಡುಗಾಯಿ ಹಾಕಿದರೆ ದೇವರು ಮುಂದೆ ಹೋಗುವುದೇ ಇಲ್ಲ.

ಊರಿನಿಂದ ಅರ್ಧ ಮೈಲಿ ದೂರದಲ್ಲಿ ಹಡಲದಮ್ಮನ ಮೂಲ ವಿಗ್ರಹವಿರುವ ದೇವಾಲಯವಿದೆ. ಶುಕ್ರವಾರ ಪ್ರಾತಃಕಾಲದಿಂದಲೇ ಅಲ್ಲಿ ಕೊಂಡದ ಏರ್ಪಾಡಾಗಿರು ತ್ತದೆ. ದೇವಸ್ಥಾನದ ಬಾಗಿಲಿನೆದುರಾಗಿ ಗರ್ಭಗುಡಿಯಲ್ಲಿರುವ ದೇವತೆಯ ಎದುರಿಗೆ ಸರಿಯಾಗಿ ಒಂದು ಹತ್ತು ಹನ್ನೆರಡು ಗಜದಷ್ಟು ದೂರ ನೆಲವನ್ನು ಅಗೆದು ಮಣ್ಣು ತೆಗೆದು ಹಳ್ಳ ಮಾಡಿರುತ್ತಾರೆ. ಅದಕ್ಕೆ ಒಂದು ಸೌದೆ ತುಂಬಿ ಬೆಂಕಿ ಹಾಕಿ ಕೆಂಡ ಮಾಡಿರುತ್ತಾರೆ. ಅನೇಕ ಭಕ್ತಾದಿಗಳು ನನ್ನ ತೊಂದರೆ ನಿವಾರಣೆಯಾದರೆ ಈ ವರ್ಷ ಬಂದು ನಿನ್ನ ಹಬ್ಬದಲ್ಲಿ ಕೊಂಡಹಾಯುತ್ತೇನೆಂದು ಹರಕೆ ಮಾಡಿಕೊಂಡಿರು ತ್ತಾರೆ. ಬರಿಗಾಲಲ್ಲಿ ಈ ಕೆಂಡದ ಮೇಲೆ ನಡೆದು ಹೋಗಿ ದೇವಿಗೆ ಪೂಜೆ ಸಲ್ಲಿಸುತ್ತಾರೆ. ಇದನ್ನೇ ಕೊಂಡಹಾಯುವುದೆನ್ನುವುದು. ಈ ಹರಕೆ ಹೊತ್ತವರು ಸ್ನಾನಾದಿಗಳನ್ನು ಮಾಡಿಕೊಂಡು, ಉಪವಾಸವಿದ್ದು ಅತ್ಯಂತ ನಿಷ್ಠೆಯಿಂದ ಈ ಕೆಲಸ ಮಾಡಬೇಕೆಂಬುದು ಜನರ ನಂಬಿಕೆ. ಮುಂದೆ ದೇವರು, ಹಿಂದೆ ಸಾಲಾಗಿ ಹರಕೆಹೊತ್ತವರು ಕೊಂಡ ಹಾಯುವ ದೃಶ್ಯ ಹೃದಯದಲ್ಲಿ ಭಯ ಕುತೂಹಲಗಳನ್ನುಂಟುಮಾಡುತ್ತದೆ. ಅಂದಿನ ಊಟೋಪಚಾರಗಳೊಂದಿಗೆ ಹಬ್ಬದ ಮೊದಲ ಹಂತ ಮುಗಿಯುತ್ತದೆ.

ಮಾರನೆಯ ದಿನ ಶನಿವಾರ ಅಮ್ಮನ ತೇರು. ತೇರಿನ ದಿನವೂ ಮಡೆ, ತಂಬಿಟ್ಟಿನ ಆರತಿ ಉಂಟು. ತೇರಿನ ಹಿಂದೆ ಇವುಗಳನ್ನು ಹೊತ್ತು ನಡೆಯುವ ಹೆಣ್ಣು ಮಕ್ಕಳ ಸಾಲು ಚೇತೋಹಾರಿಯಾಗಿರುತ್ತದೆ. ಆದಿನ ಸುತ್ತಮುತ್ತಲ ಹಳ್ಳಿಯವರೂ ಅಮ್ಮ ನಿಗೆ ತಂಬಿಟ್ಟಿನ ಆರತಿ ಒಪ್ಪಿಸುವರು. ಆದಿನ ಜನವೋ ಜನ. ಹಣ್ಣು, ದವನ, ಮಿಠಾಯಿ, ಕಡಲೇಪುರಿ, ಬೆಂಡುಬತಾಸು, ಕಲ್ಯಾಣಸೇವೆ, ಒಂದೆ ಎರಡೆ.ಕಣ್ಣು ಬಾಯಿ, ಕಿವಿಗಳಿಗೆ ಪರಮಾನಂದ. ರಂಗ ಆರಂಭವಾದಂದಿನಿಂದ ತೇರು ಹರಿದು ಮುಗಿಯುವ ವರೆಗೆ ಯಾರೂ ಮಾಂಸದ ಅಡುಗೆ ಮಾಡುವಂತಿಲ್ಲ. ಶನಿವಾರ ತೇರು ಮುಗಿಯುತ್ತದೆ

ಭಾನುವಾರ ಮಾಂಸದ ಅಡುಗೆ. ಮನೆಮನೆಗೂ ಅವರವರ ಸ್ಥಾನಮಾನಗಳಿಗನುಸಾರ ವಾಗಿ ನೆಂಟರಿಷ್ಟರ ಗಾತ್ರಾನುಸಾರ ಒಂದು ಎರಡು ಮರಿಗಳನ್ನು ಕಡಿಯುವರು. ಹಬ್ಬ ತೇರುಗಳಿಗೆ ಬರದವರೂ ಈ ದಿನ ತಪ್ಪದೆ ನೆಂಟರ ಮನೆಗೆ ಬರುತ್ತಾರೆ. ಹೀಗೆಯೇ ದೀಪಾವಳಿ, ಪಕ್ಷ ಇತ್ಯಾದಿ ಮುಖ್ಯಹಬ್ಬಗಳೂ ಅನೇಕ ಉಪಹಬ್ಬಗಳೂ ನಡೆಯು ತ್ತಿರುತ್ತವೆ.

ಕೋಟೆಬೆಟ್ಟವನ್ನು ಕುರಿತು ಅನೇಕ ಸಾರಿ ಈ ಹಿಂದೆಯೂ ಪ್ರಸ್ತಾಪಿಸಿದ್ದೇನೆ. ಈ ನಮ್ಮ ಕೆರೆ ತೊರೆ ಬೆಟ್ಟಗುಡ್ಡ ದೇವಾಲಯಗಳೆಲ್ಲ ನಮ್ಮ ಜೀವನದ ಅಂಗವೇ ಆಗಿಬಿಡುತ್ತವೆ. ಕೋಟೆ ಬೆಟ್ಟದ ಜಾತ್ರೆ ಮೈದಾನದಲ್ಲಿ ನೆರಳಿಗಾಗಿ ಮರನೆಟ್ಟಿದ್ದು, ರಸ್ತೆ ಮಾಡಿದ್ದು. ನಮ್ಮ ತಾಯಿಯ ತೌರಿನವರು ಆಡಿದ ಯಕ್ಷಗಾನವನ್ನು ನಾನು ಹೊಗಳಿದ್ದು ಇವೆಲ್ಲ ನೆನಪಿನ ಅಧ್ಯಾಯದಿಂದ ಹೊರಬರುತ್ತವೆ. ಮೊದಲು ಕೋಟೆ ಬೆಟ್ಟದಲ್ಲಿ ದನಗಳ ಮಾರಾಟದ ಜಾತ್ರೆ ನಡೆಯುತ್ತಿರಲಿಲ್ಲ. ಅದಕ್ಕಾಗಿ ಚುಂಚನಗಿರಿ, ಜೋಡಿಗಟ್ಟೆ, ಹೀಗೆ ದೂರ ಹೋಗಬೇಕಾಗಿತ್ತು. ಆಗ ಊರಿನವರೆಲ್ಲ ಸೇರಿ ಕೋಟೆಬೆಟ್ಟದಲ್ಲಿ ದನಗಳ ಪರಿಷೆ ನಡೆಸಲು ತೀರ್ಮಾನಿಸಿದರು. 1922ರಲ್ಲಿ ಆರಂಭವಾದ ಇದು ಇಂದು ಚುಂಚನಗಿರಿಯ ಜಾತ್ರೆಯನ್ನು ಮೀರಿಸಿದೆ. ಈ ಉದ್ದೇಶಕ್ಕಾಗಿ ಪ್ರತಿ ಮನೆಯವರೂ ಮರ ಬೆಳೆಸುವ ಸಾಮೂಹಿಕ ಜವಾಬ್ದಾರಿ ಹಂಚಿ ಕೊಂಡರು. ಇಂದು ಅಲ್ಲಿ ಮಹಾವೃಕ್ಷಗಳಾಗಿ ಬೆಳೆದಿರುವ ಆಲ, ಬಸರಿ, ಹಿಪ್ಪೆ. ಹುಣಿಸೆ ಮರಗಳು ಜನ ಬೆಳೆಸಿದಂತವು. ಅಲ್ಲಿ ಈಗ ನಾನು ನೆಟ್ಟು ಬೆಳೆಸಿದ ಮರಗಳೂ ಇರುವುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಇಂಥದೇ ಮತ್ತೊಂದು ಸಾಹಸ ನಾವು ಮಾಡಿದ್ದೆಂದರೆ ದೇವರನ್ನು ತೇರಿಗೆ ತರಲು ಕೆರೆಯ ಏರಿ ಮೇಲಿಂದ ಬರಬೇಕಾಗಿದ್ದ ತೊಂದರೆಯನ್ನು ತಪ್ಪಿಸಿ ನೇರ ದಾರಿ ಮಾಡಿದುದು. ಇಂದು ತಮ್ಮ ಮನೆಯ ಮುಂದಿನ ಮೋರಿ ಸ್ವಚ್ಛಗೊಳಿಸಲೂ ಜನರು ಮಂಡಲ ಪಂಚಾಯಿತಿ ನಿರೀಕ್ಷಿಸುತ್ತಾರೆಂಬುದನ್ನು ನೆನೆದಾಗ ಆ ಜನರ ಬಗ್ಗೆ ಹೆಮ್ಮೆಯೆನಿಸುತ್ತದೆ.

ಒಂದು ವರ್ಷ ಕೋಟೆಬೆಟ್ಟದ ಜಾತ್ರೆಯಲ್ಲಿ ನನ್ನ ತಾತನ ಊರಿನವರಿಂದ ಗಯಚರಿತ್ರೆ ಯಕ್ಷಗಾನ, ಪಾತ್ರಧಾರಿಗಳಲ್ಲಿ ಮುಕ್ಕಾಲು ಮೂರು ವೀಸಪಾಲು ನನ್ನ ತಾತನ ಮನೆಯವರೆ. ಸರಿಯಾದ ಅಭ್ಯಾಸವಿಲ್ಲದೆ ಅದೊಂದು ಅತ್ಯಂತ ಆಭಾಸದ ನಾಟಕವಾಗಿತ್ತು. ನನ್ನ ಸೋದರ ಮಾವಂದಿರು "ಲೋ ಹೋಗೋ ನೀನು ಅಲ್ಲಿ ಇಲ್ಲಿ ಹೊಡಿತೀಯಲ್ಲ ಈಗ ಅಟ್ಟದ ಮೇಲ್ಹೋಗಿ ಜನರಿಗೆ ಸುಮ್ಮನಿರುವಂತೆ ಏನಾರೂ ಪರಸಂಗವೊ, ಭಾಷಣವೋ ಮಾಡು'' ಎಂದರು ನನ್ನನ್ನು ಕುರಿತು. ನನಗೂ ನನ್ನ ಮಾವಂದಿರಿಗೆ ನನ್ನ ಹಿರಿಮೆ ತೋರಿಸಬೇಕೆಂಬ ಹೆಮ್ಮೆ. ಸರಿ ನಾಟಕದ ಅಟ್ಟ ಹತ್ತಿದೆ. ಗಯಚರಿತ್ರೆಯಲ್ಲಿ ಭಾವ, ಭಾವಮೈದುನರೇ ಸತ್ಯಕ್ಕಾಗಿ ಹೇಗೆ ಪರಸ್ಪರ ಯುದ್ಧದಲ್ಲಿ ಸೋದರ ಮಾವನೆ ಎಂಬಂತೆ ಯುದ್ಧ ಮಾಡಿದರೆಂಬುದನ್ನು ವಿವರಿಸಿ ನಮ್ಮ ಗ್ರಾಮದ

ಪಂಚಾಯಿತಿಗಳಲ್ಲಿ ಹೇಗೆ ಸ್ವಜನಪಕ್ಷಪಾತ ಮಾಡುತ್ತಾರೆಂಬುದಕ್ಕೆ ಒಬ್ಬ ಖಾಜಿಯ ಕಥೆ ಹೇಳಿದೆ. "ಒಂದು ಊರಿನಲ್ಲಿ ಒಬ್ಬ ಖಾಜಿ ಇದ್ದ. ಅವನು ನ್ಯಾಯ ನಿಷ್ಠುರಿ ಎಂದು ಜನ ಹೇಳುತ್ತಿದ್ದರು. ಒಂದು ದಿನ ಅವನು ಮಸೀದಿಯಲ್ಲಿ ನಮಾಜ್ ಮುಗಿಸಿ ಹೊರಗೆ ನಿಂತಿದ್ದ. ಆಗ ಒಬ್ಬ ಓಡಿ ಬಂದು "ಖಾಜಿ ಸಾಬ್ರೆ ಖಾಜಿ ಸಾಬ್ರೆ ಎರಡು ಎತ್ತುಗಳು ಗುದ್ದಾಡಿ ಒಂದು ಇನ್ನೊಂದನ್ನ ಸಾಯಿಸಿತು ಇದಕ್ಕೇನು ಶಿಕ್ಷೆ" ಎಂದು ಕೇಳಿದ. ಆಗ ಈ ಖಾಜಿ ಮೂಕ ಪ್ರಾಣಿಗಳು ಅವನ್ನೇನು ಮಾಡಕಾಗ್ತದೆ. ಗಟ್ಟಿದನ ಗೆಲ್ತು ನಾಮರ್ದ ದನ ಸಾಯ್ತು ಸತ್ತದ್ದು ಸಾಯ್ತು. ಅದ್ಕೇನೂ ಶಿಕ್ಷೆ ಇಲ್ಲ ಹೋಗ್" ಎಂದ. ಆಗ ಓಡಿ ಬಂದವನು "ಹಾಗಾದ್ರೆ ಸರಿ ಸಾಹೇಬ್ರೆ ನನ್ನ ಎತ್ತು ನಿಮ್ಮ ಎತ್ತನ್ನು ಸಾಯಿಸಿತು" ಎಂದ. ಆ ಕೂಡಲೇ ಹೌಹಾರಿದ ಖಾಜಿ" ಐಸಾಹೋಯೇತೋ ನ್ಯಾಯ್ ಬದಲ್‌ಗಯಾರೆ" ಎಂದ. ಏನು ಪರಿಹಾರ ಎಂದರೆ "ಎತ್ತಿಗೆ ಎತ್ತು ಕೊಡ್ಬೇಕು ಮೇಲೆ ವಿನಾಕಾರಣ ಕೊಂದ ತಪ್ಗೆ ಹತ್ತು ವರಹ ದಂಡ ಕೊಡಬೇಕು" ಎಂದನಂತೆ. ಆದರೆ ಗಯಚರಿತ್ರೆ ಇಂಥ ಕಥೆಯಲ್ಲ. ಸತ್ಯಕ್ಕಾಗಿ, ನ್ಯಾಯಕ್ಕಾಗಿ ಬಂಧುಗಳಾದರೂ ಬಿಡದೆ ಹೋರಾಡಿದವರ ಕಥೆ" ಎಂದು ಹೊಗಳಿದೆ. ಆ ನಂತರ ಆ ಯಕ್ಷಗಾನ ಗಲಾಟೆಯಿಲ್ಲದೆ ನಡೆಯಿತಷ್ಟೇ ಅಲ್ಲ ಅದರ ಇನ್ನೂ ಅನೇಕ ಪ್ರದರ್ಶನಗಳು ನಡೆದವು. ಹೀಗೆಯೇ ನನ್ನಬದುಕಿನ ನಾಟಕವೂ ನಡೆಯುತ್ತಿತ್ತೆನ್ನಬೇಕು.





# ಅಧ್ಯಾಯ–ಮೂರು

## ೧

ಬೇಸಾಯದ ಬದುಕು ನನಗೆ ಬಹಳ ಬೇಸರ ತರುತ್ತಿತ್ತು. ಆದಿಚುಂಚನಗಿರಿಯಲ್ಲಿ ಅಥವಾ ಬೇರೆಲ್ಲಿಯಾದರೂ ಭಾಷಣಕ್ಕೋ, ಸಭೆ, ಸಮಾರಂಭಗಳಿಗೋ ಹೋಗಿ ಬಂದಾಗ ಊರಿನಲ್ಲಿ ವ್ಯವಸಾಯದ ಕೆಲಸ ಹೆಗಲಿಗೇರುತ್ತಿತ್ತು. ಉತ್ತು ಬಿತ್ತಿ ಕಳೆತೆಗೆದು ಬೆಳೆಯನ್ನು ಕೊಯ್ಲುಮಾಡಿ ಕಣಕ್ಕೆ ಸಾಗಿಸುವ ಹೊತ್ತಿಗೆ ಹೆಣ ಬಿದ್ದು ಹೋಗುತ್ತದೆ. ಒಕ್ಕಣೆಯ ಕಾಲದಲ್ಲಿಯಂತೂ ಸಾಕೋಸಾಕಾಗಿ ಹೋಗುತ್ತದೆ. ಎಲ್ಲಿಯಾದರೂ ತಲೆ ಮರೆಸಿಕೊಂಡು ಹೋಗಿ ಬಿಡೋಣ ಅನ್ನಿಸುತ್ತದೆ. ಈ ಸಂಕಟ ನಮ್ಮ ವ್ಯವಸಾಯ ತಜ್ಞರಿಗೆ, ಆರ್ಥಿಕ ತಜ್ಞರಿಗೆ, ರಾಜಕಾರಿಣಿಗಳಿಗೆ ಅರ್ಥವಾಗುವುದಿಲ್ಲ. ಜಮೀನಿದ್ದರೆ ಸಾಕು ಅವನಿಗೇನು ಸುಖವಾಗಿದ್ದಾನೆ ಎಂದು ಬಿಡುತ್ತಾರೆ; ಹೆರುವವಳಿಗೇ ಗೊತ್ತು ಹೆರಿಗೆಯ ಸಂಕಟ. ಬೇಸಾಯಗಾರನಿಗೆ ಗೊತ್ತು ಈ ಗೋಳು, ಸಂಕಟ. ಅಮಲ್ದಾರರ ಕಛೇರಿಯ ಬಾಗಿಲು ಕಾಯುವ ದಲಾಯತ ನಮ್ಮ ಗ್ರಾಮಾಂತರದಲ್ಲಿ ಐವತ್ತು ಎಕರೆ ಭೂಮಿ ಹೊಂದಿರುವವನಿಗಿಂತ ಜಬರ್‌ದಸ್ತಿನಿಂದ ಸುಖದಿಂದ ಇರುತ್ತಾನೆ. ಹಾಗಾಗಿಯೇ ಇಂದು ಹಳ್ಳಿಯಲ್ಲಿ ಜನಿಸಿದ ಪ್ರತಿ ಮಗುವೂ ಸರ್ಕಾರಿ ನೌಕರಿಯತ್ತ ಕಣ್ಣಿಟುಕೊಂಡೇ ಬೆಳೆಯುತ್ತದೆ. ನನಗಂತೂ ಈ ಹಳ್ಳಿಯ ಬವಣೆಯಿಂದ ದೂರ ಹೋಗಿ ಬಿಡೋಣ ಅನ್ನಿಸುತ್ತಿತ್ತು. ಆದರೆ ಒಳಗೆ ಹೆದರಿಕೆ. ಇಲ್ಲಿ ಊರಿಗೊಬ್ಬ ಗೌಡ ಎಂದು ನನಗೆ ಗೌರವ ಸಿಗುತ್ತದೆ. ನಗರಗಳಲ್ಲಿ ತುಂಬಿದ ಪರಿಷೆಯಲ್ಲಿ ನಮ್ಮ ತುಂಡಂಗಿಯವನ ಕಂಡ್ಯ ಎಂಬಂತೆ ನನ್ನ ಕೇಳುವವರು ಯಾರು ಎಂಬ ಅಳುಕು. ಈ ಡೋಲಾಯಮಾನ ಸ್ಥಿತಿಯಲ್ಲಿ ಕೆಲವು ದಿನ ಕಳೆದೆವು. ಕಡೆಗೊಂದು ದಿನ ನಾನು ಮತ್ತು ನನ್ನ ದಾಯಾದಿ ಪಿ. ಎಸ್ ನರಸಿಂಹಯ್ಯ ಒಂದು ಪ್ರಾತಃಕಾಲ ಊರು ಬಿಟ್ಟೆವು.

ಪಾಲಗ್ರಹಾರದಿಂದ ತುರುವೇಕೆರೆಯ ಕಡೆಗೆ ಹೊರಟ ನಮ್ಮ ಮುಂದೆ ಸ್ಪಷ್ಟವಾದ ಯೋಜನೆಯೇನೂ ಇರಲಿಲ್ಲ. ಆದರೆ ಏನಾದರೂ ಮಾಡದೆ ಕಡೆಗೆ ಕೂಲಿಯನ್ನಾದರೂ ಮಾಡದೆ ಬದುಕಲು ಸಾಧ್ಯವೆ ? ಬೇಡುವುದಂತೂ ನಮ್ಮಿಂದ ಸಾಧ್ಯವಿಲ್ಲ. ಕಡೆಗೆ ಯಾವ ಹಳ್ಳಿಯಲ್ಲಿ ಶಾಲೆ ಇಲ್ಲವೋ ಅಲ್ಲಿ ಕೂಲಿ ಮಠ ಆರಂಭಿಸುವುದೆಂದು ತೀರ್ಮಾನಿಸಿದೆವು. ಈ ತೀರ್ಮಾನದಂತೆ ಗೂರ್ಲುಮಠ ಎಂಬ ಊರಿನಲ್ಲಿ ನಾನೂ ಮಾವಿನಕೆರೆಯಲ್ಲಿ ನರಸಿಂಹಯ್ಯನೂ ಕೂಲಿಮಠ ತೆಗೆದೆವು. ಈ ಎರಡೂ ಊರು ಅಕ್ಕ ಪಕ್ಕದಲ್ಲಿದ್ದುವು. ನಾವಿಬ್ಬರೂ ಹುಳ್ಳಾವಳ್ಳಿ ಎಂಬ ಹಳ್ಳಿಯ ಶಿವಣ್ಣನವರ ಮನೆಯಲ್ಲಿದ್ದೆವು. ಅವರು ಅನುಕೂಲಸ್ಥರು. ನಮ್ಮ ಮಾತುಕತೆ ಅವರಿಗೆ ಬಹಳ

ಹಿಡಿಸಿತ್ತು. ಹಳ್ಳಿಯ ತೆಂಗಿನ ತೋಟ ಹೊಲಗದ್ದೆ ಯಾರು ಬಂದರೂ ತಂಗೆ ಕೊಡಿ ಎಂಬ ಔದಾರ್ಯ. ಈ ಊರಿನ ಪಕ್ಕದ ಹೊಸಹಳ್ಳಿಯಲ್ಲಿ ನಾನು ಹಿಂದೆ ಹೇಳಿದ ಪಾಲಗ್ರಹಾರದ ಗ್ರಾಂಟ್ ಸ್ಕೂಲು ಮೇಷ್ಟ್ರ ಮನೆಯಿತ್ತು, ಅವರ ಪರಿಚಯವೂ ಆಯ್ತು. ಕೂಲಿ ಮಠದ ಮೇಷ್ಟ್ರರಾಗಿ ಹಾಗೂ ಹೀಗೂ ಮೂರು ನಾಲ್ಕು ತಿಂಗಳು ಕಾಲ ತಳ್ಳಿದೆವು.

ನಮ್ಮ ಶಾಲೆ ಗುಡಿಯಲ್ಲೊ, ಯಾವುದಾದರೂ ಖಾಲಿ ಮನೆಯಿದ್ದರೆ ಅಲ್ಲಿಯೋ ಅಥವಾ ವಿಶಾಲವಾದ ಜಗಲಿಯ ಮೇಲೋ ನಡೆಯುತ್ತಿತ್ತು. ಹುಡುಗರನ್ನು ಸಾಲಾಗಿ ನಿಲ್ಲಿಸಿ ಸ್ವಾಮಿ ದೇವನೆ ಲೋಕಪಾಲನೆ ಮತ್ತು ಜಯಗೌ ಶ್ರೀ ಗೌರಿ ಕರುಣಾಲಹರಿ ಗೀತೆಗಳನ್ನು ಊರಿಗೆಲ್ಲ ಕೇಳುವಂತೆ ಹೇಳಿಸುತ್ತಿದ್ದೆವು. ಅವರ ಹಾಗ್ಗಗಳನ್ನು ಕೂಗಿಸಿ ಪರವಾಗಿಲ್ಲ ಮೇಷ್ಟ್ರು ಎಂಬ ಅಭಿಪ್ರಾಯ ಜನರಲ್ಲಿ ಮೂಡುವಂತೆ ಮಾಡಿದ್ದೆವು. ಇದರೊಂದಿಗೆ ನಮ್ಮ ಒಕ್ಕಲಿಗ ನಾಯಕರು ಹೇಳುತ್ತಿದ್ದಂತೆ ನಾವೇಕೆ ವಿದ್ಯಾವಂತರಾಗ ಬೇಕೆಂಬ ಬಗ್ಗೆಯೂ ಜನರಿಗೆ ತಿಳಿಯ ಹೇಳುತ್ತಿದ್ದೆವು. ಬೇಸಿಗೆ ಬಂತೆಂದರೆ ಯಾವ ಊರಲ್ಲಿ ನೋಡಿದರೂ ನಾಟಕಗಳು, ಆ ವೇದಿಕೆಗಳಿಂದ ನನ್ನ ಭಾಷಣಗಳಿರುತ್ತಿದ್ದವು. ನಿಜ ಜೀವನ ಮತ್ತು ಪೌರಾಣಿಕ ಉದಾಹರಣೆಗಳಿಂದ ಕೂಡಿದ ನನ್ನ ಭಾಷಣ ಜನರಿಗೆ ಹಿಡಿಸಿತ್ತು. ರಾತ್ರಿ ಉಂಡು ಜನ ಚಪ್ಪರದ ಹತ್ತಿರ ತಮ್ಮ ತಮ್ಮ ಆಸನಗಳು ಚಾಪೆ, ಮಂದಲಿಗೆ, ಗೋಣಿತಾಟುಗಳೊಂದಿಗೆ ಬಂದು ಸೇರುತ್ತಿದ್ದರು. ಆಮೇಲೆ ನನ್ನ ಭಾಷಣ. ಬೇಸಿಗೆಯ ತಂಟಿಗೆ ಹಲರಾಗಿ ನಿದ್ರೆ ಹೋಗುತ್ತಿದ್ದರು. ಪ್ರೇಕ್ಷಕರನ್ನು ಎಚ್ಚರಗೊಳಿಸಲು ಮಧ್ಯದಲ್ಲೂ ಒಮ್ಮೊಮ್ಮೆ ನನ್ನ ಮಾತುಗಳಿರುತ್ತಿತ್ತು. ಈ ಪರಿಚಯ ಮುಂದೆ ನನ್ನ ಕಾಂಗ್ರೆಸ್ ಚಳುವಳಿಗೆ ಅನುಕೂಲವಾಯಿತು.

ಊರು ಬಿಟ್ಟವನು ಮೂರೂ ಬಿಟ್ಟ ಎಂಬ ಮಾತೊಂದಿದೆ ಹಳ್ಳಿಯ ಕಡೆ. ನಾವು ಊರು ಬಿಟ್ಟದ್ದು ಮುಂದೆ ನಮ್ಮ ಬದುಕಿನ ಗತಿಯನ್ನೇ ಬದಲಿಸುತ್ತದೆಯೆಂದು ಯಾರು ತಿಳಿದಿದ್ದರು. ಮೈಸೂರಲ್ಲಿ ನೋಡಿ ಬಂದ ಆ ಬಡ ಜೋಗಿ ಗಾಂಧಿ ನಿಧಾನವಾಗಿ ನನ್ನನ್ನಾವರಿಸತೊಡಗಿದ. ಸ್ವಾತಂತ್ರ್ಯ ಚಳುವಳಿಯ ಕಿಡಿ ಕವರಿ ಕೊಂಡು ಜ್ವಾಲೆಯಾಗಿ ಹಳ್ಳಿ ಹಳ್ಳಿಗಳನ್ನು ಆವರಿಸುತ್ತಿತ್ತು. ಈ ಬಗೆಗಿನ ಪತ್ರಿಕಾ ಸುದ್ದಿಗಳಲ್ಲದೆ ಭೂಗತ ಹೋರಾಟಗಾರರು ಹೊರಡಿಸುತ್ತಿದ್ದ ರಹಸ್ಯಪತ್ರಿಕೆಗಳೂ ನಮ್ಮ ಮೈನವಿರೇಳಿಸುತ್ತಿದ್ದವು. ನಾಡಿನ ಈ ಮಹಾಯಜ್ಞ ಪಾಲಗ್ರಹಾರದಂಥ ಹಳ್ಳಿಯ ಹುಡುಗನಾದ ನನ್ನನ್ನು ತನ್ನ ವಲಯಕ್ಕೆ ಎಳೆದುಕೊಂಡಿತು. ನಾನು ಭಾಷಣ ಮಾಡುವಾಗ ಪರಕೀಯರ ಆಳಿಡತ•ನಮ್ಮ ಗುಲಾಮಗಿರಿಗಳನ್ನು ವಿವರಿಸಿ ಸ್ವಾತಂತ್ರ್ಯದ ಮಹತ್ವವನ್ನು ವಿವರಿಸುತ್ತಿದ್ದೆ. ಮೊದ ಮೊದಲು ಸರ್ಕಾರ ಪೋಲೀಸರು ನನ್ನನ್ನು ಗಮನಿಸಲಿಲ್ಲ. ಹಳ್ಳಿಯ ಹೈದ ಇವನೇನು ಮಾಡಿಯಾನೆಂಬ ತಾತ್ಸಾರ. ಆದರೆ ನನ್ನ ಭಾಷಣಗಳಿಗೆ ಸೇರುತ್ತಿದ್ದ ಜನ ಮತ್ತು ಮಾತಿನ ತೀಕ್ಷ್ಣತೆಯನ್ನು ಗಮನಿಸಿದ ಪೋಲೀಸರು

ನನ್ನ ಮೇಲೆ ಕಣ್ಣಿಡಲಾರಂಭಿಸಿದರು. ಮೊದ ಮೊದಲು ಪೋಲೀಸ್ ಸ್ಟೇಷನ್ನಿಗೆ ಓಡಾಟ ಆರಂಭವಾಯಿತು. ನಾಲ್ಕಾರು ಬಾರಿ ಒಂದೆರಡು ದಿನ ಸೆರೆವಾಸವನ್ನು ಅನುಭವಿಸಿದೆ.

1937–1938ರಲ್ಲಿ ಸ್ವಲ್ಪ ಹೆಚ್ಚು ಜೈಲು ವಾಸ ಅನುಭವಿಸಿದೆ. ಅಲ್ಲಿಯವರೆಗೆ ಮನೆಯವರಿಗೆ ಊರಿನವರಿಗೆ ನಾನು ಪೋಲೀಸ್ ಸ್ಟೇಷನ್‌ಗೆ, ಜೈಲಿಗೆ ಹೋಗಿ ಬರುತ್ತಿದ್ದುದು ತಿಳಿದಿರಲಿಲ್ಲ. ಏನೋ ಊರೂರು ಸುತ್ತಿಕೊಂಡು ಕಾಲ ಹಾಕು ತ್ತಿದ್ದಾನೆಂದು ಅವರು ನಂಬಿದ್ದರು. 1943ರ ಜುಲೈ ತಿಂಗಳಿನಲ್ಲಿ ಈ ಜೈಲು ವಾಸದಿಂದ ಬಿಡುಗಡೆ ಹೊಂದಿ ಊರಿಗೆ ಬಂದೆ. ಆ ಕಾಲದಲ್ಲಿ ಜೈಲಿಗೆ ಹೋಗುವವರು ಕಳ್ಳರು ಕೊಲೆಗಡುಕರು ಮಾತ್ರ. ಹೀಗೆ ಒಮ್ಮೆ ಜೈಲಿಗೆ ಹೋದವರ ಸಾಮಾಜಿಕ ಚರಿತ್ರೆ ಮುಗಿ ದಂತೆಯೆ. ಯಾವುದೇ ಕಾರಣಕ್ಕೆ ಅಂತಹವರಿಗೆ ವಿನಾಯಿತಿ ಸಿಗುತ್ತಿರಲಿಲ್ಲ. ಅವರನ್ನು ಅಸ್ಪೃಶ್ಯರಿಗಿಂತ ಕಡೆಯಾಗಿ ಕಾಣುತ್ತಿದ್ದರು. ನಾನು ಜೈಲಿನಿಂದ ಊರಿಗೆ ಬಂದೆ. ಅಲ್ಲಿನ ವಾತಾವರಣವೇ ಬೇರೆಯಾಗಿತ್ತು. ಅಡುಗೆ ಮನೆಗೆ ಕಾಲಿಡುವಂತಿಲ್ಲ. ಊಟದ ಜಾಗಕ್ಕೆ ಹೋಗಬೇಕಾದರೂ ಸಗಣಿ ತುಳಿದು ಶುದ್ಧಿಹೊಂದಿಯೇ ಒಳಗೆ ಕಾಲಿಡಬೇಕು. ಊಟಕ್ಕೆ ಕಂಚಿನ ತಣಿಗೆ ಕೊಡುತ್ತಿರಲಿಲ್ಲ. ಕಲಾಯಿ ಮಾಡಿದ ಹಿತ್ತಾಳೆ ತಟ್ಟೆ ಕೊಡು ತ್ತಿದ್ದರು. ನಮ್ಮ ತಂದೆ ಮನೆಗೇ ಸೇರಿಸಬೇಡ ಎಂದು ಹೇಳಿದ್ದರಂತೆ. ಆದರೆ ತಾಯಿಯ ಕರುಳು. ಅದೂ ಕಷ್ಟ ಪಟ್ಟು ಜವರಾಯನಿಂದ ಉಳಿಸಿಕೊಂಡ ಮಗ. ನಮ್ಮ ತಾಯಿ "ಏನಪ್ಪ ಹೊಲೇರು ಮಾದಿಗರು, ತುರುಕರು ಎಲ್ಲಾ ಒಟ್ಟಿಗೇ ತಿಂತೀರಂತೆ ಕುಲ ಗೋತ್ರ ಏನಾಯ್ತಪ್ಪ ಇದೆಲ್ಲ ಮಾಡಿದ ದೇವರಿಗೇನು ಬುದ್ಧಿ ಇಲ್ಲವೆ" ಎಂದೆಲ್ಲ ಹೇಳಿ ಇನ್ನು ಮೇಲಾದ್ರು ಸರಿಯಾಗಿರಪ್ಪ. ನಿನಗೆ ಯಾರು ಕುಲಸ್ಥರು ಹೆಣ್ಣು ಕೊಡ್ತಾರಪ್ಪ. ಹಿಂದಿನ ಜನ್ಮದಲ್ಲಿ ಯಾರ ಮಕ್ಕಳಿಗೆ ಅನ್ಯಾಯ ಮಾಡಿದ್ನೊ ಈಗ ಹಿಂಗಾಯ್ತು ಎಂದು ದೇವರ ಕುಲಗೋತ್ರಗಳನ್ನು ಗಾಂಧೀಜಿಯ ಕುಲಗೋತ್ರಗಳನ್ನೆಲ್ಲ ನನ್ನ ತಾಯಿ ಜಾಲಾಡಿ ಬಿಡುತ್ತಿದ್ದರು.ಅವರ ಗೋಳು ನೋಡಿ ನನಗೂ ಯಾಕಾದರೂ "ಈ ಚಳುವಳಿಗೆ ಹೋದೆನಪ್ಪ ತಪ್ಪಾಗಿರುವುದನ್ನು ಬಿಟ್ಟು ಎನ್ನಿಸಿತು. ತಂದೆ ಮಾತು ಮಾತಿಗೆ "ಜೈಲಿಗೆ ಹೋಗಿ ಕುಲಕ್ಕೆ ಕೀರ್ತಿ ತಂದವ್ನೆ ಬೆಣ್ಣೆ ಗಿಣ್ಣೆ ಹಾಕಿ ಚೆನ್ನಾಗಿ ತಿನ್ನಿಸೆ" ಎಂದು ಹಂಗಿಸುತ್ತಿದ್ದರು. ಯಾರಾದ್ರು ನಿಮ್ಮ ಹುಡುಗ ಬಂದವನಲ್ಲ ಅಂದರೆ ಈ ಸರ್ಕಾರ್ದೋರ್ಗು ಬುದ್ಧಿ ಇಲ್ಲ. ಈ ಗಾಂಧೀಕು ಜೈ ಅನ್ನೋ ಪೋಲಿ ಮುಂಡೇವ ಕ್ಕೆಲ್ಲ ಚೆನ್ನಾಗಿ ತಿನ್ನಾಕಾಕಿ ತಿಕದಪ್ಪ ಮಾಡಿ ಕಳುಸ್ತಾರೆ. ಕೈಗುಳ್ಳೆ ಐರೋಗಂಟ ರಾಗಿ ಬೀಸಿದ್ರೆ ಗೊತ್ತಾಯ್ತಿತ್ತು. ಇನ್ನೊಂದ್ಸಾರಿ ಅತ್ತ ಮಕ ತಿರ್ಗುತಿದ್ದಿಲ್ಲ"ಎಂದು ಗುಡುಗು ತ್ತಿದ್ದರು. ರಾಜಕೀಯ ಕೈದಿಗಳಿಗೂ ಸಾಮಾನ್ಯ ಕೈದಿಗಳಿಗೂ ಇರುವ ವ್ಯತ್ಯಾಸ ಅವರಿಗೆ ತಿಳಿಯದು. ಅನಿಷ್ಟಕ್ಕೆಲ್ಲ ಶನೇಶ್ವರ ಹೊಣೆ ಎಂಬಂತೆ ಪಾಪ ನನ್ನ ತಾಯಿಯ ಸ್ಥಿತಿ ಯಾಗಿತ್ತು. ಅವರೋ ತಂದೆಯ ಹಂಗಿನ ಮಾತುಗಳಿಗೆ ಮೌನವಾಗಿದ್ದು ಬಿಡುತ್ತಿದ್ದರು.

ಈ ಪರಿಸ್ಥಿತಿಗೆ ಆಗಿನ ಕಾಲದ ಸಾಮಾಜಿಕ ರೀತಿ ನೀತಿಗಳೂ ಕಾರಣ. ನಾಗಮಂಗಲದ ಬ್ರಾಹ್ಮಣರು ನಮ್ಮ ಹಿರಿಯರಿಗೆ ಇಲ್ಲದ್ದು ಸಲ್ಲದ್ದು ಹೇಳಿ ಅವರ ತಲೆ ಕೆಡಿಸಿಬಿಡುತ್ತಿದ್ದರು. ''ಎಲ್ಲಾದರೂ ಉಂಟೇನಯ್ಯ ಗೌಡ ಬ್ರಿಟಿಷರು ಸಾರ್ವಭೌಮರು ಅವರಿಗೆ ಹೊತ್ತು ಮುಳುಗದ ಸಾಮ್ರಾಜ್ಯವಿದೆ. ಸುಮ್ಮನೇ ಈ ಪೋಲಿ ಹುಡುಗರು ಬೀದೀಲಿ ಕಿರಿಚಿದರೆ ಅವರು ಹೆದರುತ್ತಾರೆಯೆ, ಅಲ್ಲದೆ ನಿಮ್ಮ ಈ ಹುಡುಗರೆಲ್ಲ ಜೈಲಿಗೆ ಹೋಗಿ ಜಾತಿ ಕೆಡ್ತಿದಾರೆ ಮುಂತಾಗಿ ಹೇಳಿ ಇಲ್ಲದ ಧಾರ್ಮಿಕ ಭಯವನ್ನು ಹುಟ್ಟಿಸುತ್ತಿದ್ದರು. ಎಷ್ಟಾದರೂ ಇಂಗ್ಲಿಷಿನವರೂ ಆರ್ಯ ಸಂತತಿಯವರಲ್ಲವೆ? ಆದರೆ ಸ್ವಾತಂತ್ರ್ಯ ಬಂದ ನಂತರ ಅಧಿಕಾರ ಅಂತಸ್ತುಗಳಿಗೆ ಈ ಬ್ರಾಹ್ಮಣರೇ ಮುಂದು. ಅಷ್ಟೇ ಅಲ್ಲ ಈವರೆಗೆ ಪ್ರಕಟವಾಗಿರುವ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದ ಯಾವುದೇ ಪುಸ್ತಕ ಲೇಖನ ನೋಡಿ ಅಲ್ಲೆಲ್ಲ ಬರಿಯ ಬ್ರಾಹ್ಮಣರೇ . ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಎಂಬಂತೆ ಬರೆಯಲಾಗಿದೆ. ಗೆದ್ದಲು ಹುತ್ತ ಕಟ್ಟಿತು ಹಾವು ವಾಸ ಮಾಡಿತು. ಹಕ್ಕ ಬುಕ್ಕರು ಕಷ್ಟಪಟ್ಟು ವಿಜಯನಗರ ಸಾಮ್ರಾಜ್ಯ ಕಟ್ಟಿದರು. ಆದರ ಕೀರ್ತಿಗೆ ಇಲ್ಲದೇ ಇರುವ ವಿದ್ಯಾರಣ್ಯನೆಂಬ ಬ್ರಾಹ್ಮಣನನ್ನು ಇವರು ಸೃಷ್ಟಿಸಿದರು. ಯಾವುದೇ ವಿಚಾರ ತೆಗೆದುಕೊಳ್ಳಿ. ಬ್ರಾಹ್ಮಣರಿಲ್ಲದೆ ಏನೂ ನಡೆಯದೆಂಬ ಭ್ರಮೆ ಹುಟ್ಟಿಸುವುದೇ ಇವರ ಕೆಲಸ. ನಮ್ಮ ಈ ಹೊತ್ತಿನ ರಾಮಕೃಷ್ಣ ಹೆಗಡೆಯನ್ನೇ ತೆಗೆದುಕೊಳ್ಳಿ. ತನ್ನ ಸ್ವಂತ ಊರಿನಲ್ಲಿ ಠೇವಣಿ ಕಳೆದುಕೊಂಡಿದ್ದ ಈತನನ್ನು ಮೇಲೆ ತಂದವರನ್ನೆ ನುಂಗಿ ತನ್ನಿಂದಲೇ ಆಡಳಿತ ಸಾಧ್ಯ ಎಂಬ ಭ್ರಮೆ ಹುಟ್ಟಿಸಲಿಲ್ಲವೆ ? ಈ ಶೂದ್ರರಿಗೂ ಬುದ್ಧಿಯಿಲ್ಲ, ತಮಗಿರುವ ಶಕ್ತಿಯನ್ನು ಮರೆತು ಇವರ ಹಿಂದೆ ಬೀಳುತ್ತಾರಲ್ಲ. ಈ ಜನರಿಗೆ ಏನು ಹೇಳಬೇಕು. ತಾನಾಗೆ ಬಂದು ಪಾದಕ್ಕೆ ಬಿದ್ದರೆ ಯಾರು ಬೇಡ ಅನ್ನುತ್ತಾರೆ.

ನಮ್ಮ ನೆರೆಹೊರೆಯವರು ''ಲೋ ಮಗ ಇನ್ನು ಮೇಲಾದ್ರು ಹಿಂದಿನಂಗೆ ಇಲ್ಲೇ ಹಳ್ಳಿ ಪಳ್ಳೀಲಿ ಭಾಷ್ಣ ಮಾಡ್ಕೊಂಡು ತೆಪ್ಗಿರು. ಜೈಲು ಗಿಯ್ಲು ಮನೆತನಸ್ಥರ ಕೆಲಸ ಅಲ್ಲ. ನಾವೆಲ್ಲ ನಿಮ್ಮಪ್ಪೋರ್ಗೆ ಹೇಳ್ತೀವಿ. ಮದುವೆ ಗಿದುವೆ ಮಾಡ್ಕೊಂಡು ತೆಪ್ಪಗಿರೋದು ನೋಡು. ಎಲ್ಲೊ ಯಾರ್ಗೋ ರಾಜ್ಯ ಬಂದ್ರೆ,ನಮ್ಮೂರ ಜಮೀನು ಅಗ್ಲ ಆದಾವ ?'' ಎಂದೆಲ್ಲ ಬುದ್ಧಿವಾದ ಹೇಳುತ್ತಿದ್ದರು. ನನಗೆ ಇವುಗಳ ಬಗ್ಗೆ ಆಸಕ್ತಿ ಇಲ್ಲ. ಜಿಲ್ಲಾ ಬೋರ್ಡು, ನ್ಯಾಯ ವಿಧಾಯಕ ಸಭೆಗಳು ಹತ್ತಿರ ಬರುತ್ತಿದ್ದವು. ಎಲ್ಲ ಸ್ಥಾನಗಳನ್ನು ಕಾಂಗ್ರೆಸ್ ಗೆಲ್ಲಬೇಕೆಂಬ ಛಲ ನನಗೆ. ಆಗ ಓಟರುಗಳೆಂದರೆ ಇಪ್ಪತ್ತೈದು ರೂಪಾಯಿಗಿಂತ ಹೆಚ್ಚು ಕಂದಾಯ ಕಟ್ಟುವವರು ಮಾತ್ರ. ಹೀಗಾಗಿ ನಾಗಮಂಗಲ ತಾಲ್ಲೂಕಿನಲ್ಲೆಲ್ಲ ಇದ್ದ ಓಟರುಗಳ ಸಂಖ್ಯೆ ಇನ್ನೂರಕ್ಕಿಂತಲೂ ಕಮ್ಮಿ. ಇವರೆಲ್ಲ ಜಮೀನ್ದಾರರು. ಸ್ವಲ್ಪ ಮಟ್ಟಿಗೆ ಮಹಾರಾಜರ ಕೃಪಾಶ್ರಯವನ್ನೇ ಬಯಸುವವರು. ಇಂತಹವರ ಮನವೊಲಿಸಿ ಕಾಂಗ್ರೆಸ್‌ನತ್ತ ತಿರುಗಿಸುವುದು ಸುಲಭದ

ಕೆಲಸವಾಗಿರಲಿಲ್ಲ. ಆದುದರಿಂದ ನಾವು ಯಾರ ಯಾರ ಪರವಾಗಿ ಯಾವ ಕಡೆ ಚುನಾವಣಾ ಪ್ರಚಾರಕ್ಕೆ ಹೋಗಬೇಕು. ಮತದಾರರ ಒಲವು ಯಾವ ಕಡೆ ಇಂತಹ ವಿಷಯಗಳನ್ನು ಕುರಿತು ಚಿಂತಿಸುತ್ತಿದ್ದೆವು.

ನಾನು ಜೈಲಿನಲ್ಲಿದ್ದಾಗಲೇ ನನ್ನ ತಂಗಿಯರಿಬ್ಬರ ಮದುವೆ ನಡೆದುಹೋಗಿದ್ದವು. ತಂಗಿಯರ ಮದುವೆ ವಿಚಾರ ಸಹ ನನಗೆ ಮನೆಯವರು ತಿಳಿಸುತ್ತಿರಲಿಲ್ಲ ಎಂದರೆ ಜೈಲಿಗೆ, ಸ್ವಾತಂತ್ರ್ಯ ಚಳುವಳಿಗೆ ಹೋದವರ ಬಗ್ಗೆ ಎಂತಹ ಸಾಮಾಜಿಕ ತಿರಸ್ಕಾರ ವಿತ್ತೆಂಬುದು ತಿಳಿಯುತ್ತದೆ. ಊರಿಗೆ ಬಂದ ತಪ್ಪಿಗೆ ನಾಲ್ಕಾರು ದಿನ ಇರಬೇಕಾಗಿತ್ತು, ಅಷ್ಟೆ. ಎತ್ತ ನೋಡಿದರೂ ತಿರಸ್ಕಾರ ಭಾವನೆ, ಕುಹಕ ವ್ಯಂಗ್ಯ ಮಾತುಗಳು. ಮನೆಯವರ ಬಯ್ಗುಳ. ತಾಯಿಯೊಬ್ಬರೆ ಬಯ್ದರೂ ಪ್ರೀತಿಸುತ್ತಿದ್ದವರು. ಇದಕ್ಕೆ ನನ್ನ ಅಕ್ಕ ಒಬ್ಬರು ಹೊರತಾಗಿದ್ದರು ಎಂದು ಹೇಳಬೇಕು. ಅವರ ಮನೆಗೆ ಹೋಗುತ್ತಿದ್ದೆ "ಮಗ ವಯಸ್ಸಾಯ್ತು ಮದುವೆ ಮುಂಜಿ ಇಲ್ದೆ ಹಿಂಗೆ ಸನ್ಯಾಸಿ ಹಂಗಿರ್‍ತಿಯ ? ಮೊನ್ನೆ ಕುರಿಯಪ್ಪ (ನನ್ನ ತಂದೆಯನ್ನು ಅವರು ಒಟ್ಟು ಕುಟುಂಬದಲ್ಲಿ ದ್ದಾಗ ಕುರಿ ಕಾಯುತ್ತಿದ್ದ ಕಾರಣ ಕುರಿಯಪ್ಪ ಎಂದು ಕರೆಯುತ್ತಿದ್ದರು) ಬಂದಿದ್ರು ನಿನ್ನ ಬಾಯಿಗೆ ಬಂದಂಗೆ ಬಯ್ದ್ರು. ಮದುವೆಗಿದುವೆ ಮಾಡೋದಿಲ್ವೆ ಅಂತ ಕೇಳಿದ್ರೆ "ನಿನ್ನ ಮಗಳ ಕೊಡ್ತೀಯಪ್ವ ಮಾಡಾನ" ಅಂತ ಅಣಕಿಸಿದರು. ನನ್ಗೆ ಸ್ವಲ್ಪ ಸಿಟ್ಟು ಬಂತು "ಅದೇನಪ್ಪ ಹಂಗನ್ತಿ ಕೊಡು ಅನ್ನು ಕೊಟ್ಟು ಮದ್ವೆ ಮಾಡೇ ಬಿಡ್ತೀನಿ" ಅಂದೆ. ಅವರಿಗೆ ಮತ್ತಷ್ಟು ಕೋಪ ಬಂತು "ನಿನ್ಗೇನು ಬದ್ಧಿಗಿದ್ದಿ ಸರ್‍ಯಾಗಿದ್ಯೇನಮ್ಮ. ನಿನ್ನ ತಮ್ಮ ಮದ್ವೆ ಆಗಿ ಹೆಂಡ್ತಿ ಬಾಳುಸ್ತಾನ. ನಿನಗೆ ಅಷ್ಟೊಂದು ತಮ್ಮನ ಮೇಲೆ ಅಕ್ಕರೆ ಇದ್ರೆ ನಿನ್ನ ಮಗಳ್ನೆ ಕೊಡು ಮದುವೆ ಮಾಡಿಯಾದ್ರು ಸರಿ ಹೋಗ್ತಾನೋ ನೋಡೇ ಬಿಡೋಣ" ಎಂದರು. ನಾನೂ "ಕೊಡ್ತೀನಿ" ಅಂತ ಹೇಳಿದೆನಪ್ಪ ಎಂದು ನನ್ನ ತಂದೆಗೂ ಆಕೆಗೂ ನನ್ನ ಉದ್ಧಾರದ ಬಗ್ಗೆ ನಡೆದ ಮಾತು ಕತೆಗಳನ್ನು ಅಕ್ಕ ವಿವರಿಸುತ್ತಿದ್ದರು.

ನನ್ನ ಅಕ್ಕನಿಗೆ ತನ್ನ ತೌರು ಮನೆಗೇ ಮಗಳನ್ನು ಕೊಡಲು ಆಸೆ. ಅದು ಆಗಿನ ಕಾಲದ ಪದ್ಧತಿಯೂ ಹೌದು. ಕೊಟ್ಟ ಸಾಲಿನಲ್ಲಿ ಹೆಣ್ಣುತಾ ಬೆಟ್ಟದ ಸಾಲಿನಲ್ಲಿ ಹೊಲ ಮಾಡು ಎನ್ನುವ ನಂಬಿಕೆ ಅವರದು. ಕೊಟ್ಟ ಸಾಲಿನಲ್ಲೇ ಹೆಣ್ಣು ಕೊಟ್ಟು ತರು ವದಕ್ಕೆ ಕಾರಣ ಹುಡುಗಿಯ ಬಗ್ಗೆ, ಮನೆ ಮತ್ತು ಮನೆತನದ ಬಗ್ಗೆ ಪರಸ್ಪರ ಅರಿ ವಿದ್ದು ಮುಂದಿನ ಅಹಿತಕರ ಘಟನೆಗಳಿಗೆ ಅವಕಾಶವಿರದಿರುವುದು. ಹೆಣ್ಣು ಮಕ್ಕಳಿಗೆ ತೌರಿನ ಮೇಲೆ ಅಪಾರ ಮಮತೆಯಷ್ಟೆ. ಹೊರಗಿನ ಸೊಸೆಯರು ಬಂದರೆ "ಅಣ್ಣ ನಮ್ಮೋನಾದ್ರೆ ಅತ್ಗೆ ನಮ್ಮೋಳ" ಎಂಬಂತೆ ಹೆಣ್ಣು ಮಕ್ಕಳಿಗೆ ಅಲ್ಲಿ ಸದರವಿರುವುದಿಲ್ಲ. ಆದುದರಿಂದ ತಮ್ಮ ಹೆಣ್ಣು ಮಕ್ಕಳನ್ನೆ ಅಲ್ಲಿಗೆ ಕೊಟ್ಟು ತೌರು, ನೆಂಟಸ್ತಿಗೆ ಎರಡೂ ಉಳಿಸುವ ಉಪಾಯವದು. ನನ್ನ ಅಕ್ಕ "ಮಗಾ ನೀನು ನನ್ನ ಮಗಳನ್ನ ಆಗ್ದೆ

ಹೋದ್ರೆ ನಮ್ಮಪ್ಪನ ಮನೆ ಸಂಬಂಧವೇ ಹೋಗ್ತದೆ. ನೀವೆಲ್ಲಾ ಕಟ್ಟಿಕೊಳ್ಳೋರು ಯಾರೋ ಯಾವ ಸೀಮೆಯವರೊ. ತವರಿಗೆ ಕರಿಯೋರಿರೋದಿಲ್ಲ ಕಳಿಸೋರಿರೋದಿಲ್ಲ. ಯೋಚ್ನೆಮಾಡಪ್ಪ ಎಂದು ತನ್ನ ಹೃದಯವನ್ನು ತೋಡಿಕೊಳ್ಳುತ್ತಿದ್ದಳು. ನನಗೋ ಚಳುವಳಿಯ ಹುಚ್ಚು ಹಿಡಿದಿತ್ತು. ಊರ ಜನರ ಬುದ್ಧಿವಾದದ ಕಿರುಕುಳ ತಡೆಯಲಾರದೆ ಅಕ್ಕನ ಮನೆಗೆ ಬಂದರೆ ಇಲ್ಲಿ ಮದುವೆ ಕಿರುಕುಳ ಆರಂಭವಾಯಿತು. ನನಗೆ ಯಾಕಾದರೂ ಇಲ್ಲಿಗೆ ಬಂದೆನಪ್ಪ ಅನ್ನಿಸಿತು. ನನಗೆ ಮದುವೆಯ ಯೋಚನೆಯೇ ತಲೆಗೆ ಸುಳಿದಿರಲಿಲ್ಲ. ಒಂದು ಕಡೆ ರಾಷ್ಟ್ರದ ಬಿಡುಗಡೆಯ ಹೋರಾಟದ ಆಕರ್ಷಣೆ ಮತ್ತೊಂದು ಕಡೆ ನನ್ನ ಬಿಡುಗಡೆಯ ತೀವ್ರ ಹೋರಾಟ. ಅಂತೂ ಅಕ್ಕ ಕೋಳಿಸಾರು ಸ್ಯಾವಿಗೆಯ ಸವಿಯಾದ ಊಟ ಹಾಕಿದಳು. ಬೆಳಿಗ್ಗೆ ಎದ್ದು ಪಾಲಗ್ರಹಾರದ ದಾರಿ ಹಿಡಿದೆ.

ನಮ್ಮ ಮಾವನವರ ಚಿಕ್ಕಮ್ಮ ನನ್ನ ಸೋದರತ್ತೆ ಚನ್ನಮ್ಮನವರನ್ನು ಮೈಸೂರಿಗೆ ಮದುವೆ ಮಾಡಿಕೊಟ್ಟಿತ್ತು. ಬೊಮ್ಮನ ಹಳ್ಳಿಯ ಎಂ. ತಮ್ಮಯ್ಯನವರು ಅವರ ಮನೆಯಲ್ಲಿದ್ದುಕೊಂಡು ಬಿ. ಎ. ಪದವೀಧರರಾಗಿದ್ದರು. ಅವರು ಶ್ರೀ ಕುವೆಂಪು ಅವರ ಸಹಪಾಠಿಯಾಗಿದ್ದವರು. ಕವಿಗಳ ಜೀವನ ಚರಿತ್ರೆ ನೆನಪಿನ ದೋಣಿಯಲ್ಲಿ ತಮ್ಮಯ್ಯನವರ ಹೆಸರು ಅನೇಕ ಸಂದರ್ಭಗಳಲ್ಲಿ ಬಂದಿದೆ. ಮುಂದೆ ಇವರು ಸಹಕಾರ ಇಲಾಖೆಯ ನಾನಾಸ್ತರಗಳಲ್ಲಿ ಕೆಲಸ ಮಾಡಿ ಅದರ ರಿಜಿಸ್ಟ್ರಾರ್ ಆಗಿ ನಿವೃತ್ತರಾದರು. ತಮ್ಮಯ್ಯನವರು ಚನ್ನಮ್ಮನವರ ಮಗಳನ್ನೆ ಮದುವೆಯಾಗಿದ್ದು ನನ್ನ ಮಾವನವರಿಗೆ ಹತ್ತಿರದ ಸಂಬಂಧಿಯಾಗಿದ್ದರು. ಆಗ ಅವರು ಚಿತ್ರದುರ್ಗದಲ್ಲಿದ್ದು ರಜೆಯ ಮೇಲೆ ಊರಿಗೆ ಬಂದಿದ್ದರು. ಅವರನ್ನು ನೋಡಲು ಹೋಗಿದ್ದುದಾಗಿ ಮಾವ ಹೇಳಿದರು.

ತಮ್ಮಯ್ಯನವರು ಒಮ್ಮೆ ಮೈಸೂರಿಗೆ ಹೋಗಿದ್ದಾಗ ಅವರ ಮಿತ್ರರು ಕೆಲವರು "ನಾಗಮಂಗಲದ ಕಡೆಯ ಒಬ್ಬ ಹುಡುಗ ಅದ್ಭುತವಾಗಿ ಸ್ವಾತಂತ್ರ್ಯ ಚಳುವಳಿಯ ಸಭೆಗಳಲ್ಲಿ ಭಾಷಣ ಮಾಡುತ್ತಾನೆಂದೂ ಅವನ ಮಾತುಗಾರಿಕೆಗೆ ಜನರು, ನಾಯಕರೆಲ್ಲ ಮರುಳಾಗಿದ್ದಾರೆಂದೂ" ಹೇಳಿದರಂತೆ. ಆದರೆ ಚನ್ನಮ್ಮನವರು "ಜವರಪ್ಪ ಜೈಲು ಬಿದ್ದು ಸಿಕ್ಕಸಿಕ್ಕ ಜಾತಿಯವರೊಂದಿಗೆಲ್ಲಾ ತಿಂದು ಕುಲ ಕರ್ಮ ಎದ್ದು ಹೋಗಿದ್ದಾನೆಂದೂ ಅವನೇನಾದರೂ ಬಂದರೆ ಮನೆಗೆ ಸೇರಿಸಬಾರದೆಂದೂ ನರಸೇ ಗೌಡ ತನ್ನ ಅಕ್ಕನಿಗೆ ಹೇಳಿದ್ದರೆಂದು" ಹೇಳಿದ್ದರು. "ಅದನ್ನು ಕೇಳಿದ ತಮ್ಮಯ್ಯನವರು ಇದೇನು ನೀವು ಹೇಳುವುದು. ಅಲ್ಲಕ್ಕ ಕೆ. ಎಚ್. ರಾಮಯ್ಯನವರ ಅಳಿಯ ಎಚ್. ಸಿ ದಾಸಪ್ಪನವರು ಜೈಲಿಗೆ ಹೋಗಿಲ್ಲವೆ ? ಅವರ ಹೆಂಡತಿ ಯಶೋಧರಮ್ಮ ಹೋಗಿಲ್ಲವೆ ? ಮೊನ್ನೆ ಮೊನ್ನೆ ಅವರನ್ನು ಜೈಲಿನಿಂದ ಬಿಟ್ಟಿದ್ದಾರೆ. ಜನ ಅವರಿಗೆ ಹಾರ ತುರಾಯಿ ಹಾಕಿ ಮೆರವಣಿಗೆ ಮಾಡ್ತಿದ್ದಾರೆ. ಜವರಪ್ಪನ ಭಾಷಣಾನ ಅಂತಹವರೆಲ್ಲ ಹೊಗಳಿದ್ದಾರೆ. ಯಾರದೋ ಮಾತು ಕೇಳಿ ನೀವು ಹಾಗೆಲ್ಲಾದರೂ ಮನೆಗೆ

ಬರಬೇಡ ಎಂದು ಹೇಳಿ ಬಿಟ್ಟೀರಿ. ಅವನೇನಾದರೂ ಬಂದರೆ ನನ್ನ ಬಂದು ಕಾಣಲು ಹೇಳಿ'' ಎಂದಿದ್ದರಂತೆ. ಈ ಎಲ್ಲ ವಿಚಾರಗಳನ್ನು ತಮ್ಮಯ್ಯ ನಮ್ಮ ಭಾವನವರಿಗೆ ಹೇಳಿದ್ದರು. ನಾನು ಬಂದಿರುವುದನ್ನು ಕಂಡು ಅವರು ಮತ್ತೆ ಬೊಮ್ಮನ ಹಳ್ಳಿಗೆ ಹೋಗಿ ತಮ್ಮಯ್ಯನವರನ್ನು ಊಟಕ್ಕೆ ಕರೆದು ತಂದರು. ಅಂದು ರಾತ್ರಿ ನಾವಿಬ್ಬರೂ ರಾತ್ರಿ ಬಹು ಹೊತ್ತಿನವರೆಗೆ ಸ್ವಾತಂತ್ರ್ಯ ಚಳುವಳಿ, ಜೈಲುವಾಸದ ಅನುಭವಗಳನ್ನು ಕುರಿತು ಮಾತನಾಡುತ್ತ ಮಲಗಿದೆವು.

ದೇಶಾದ್ಯಂತ ಸ್ವಾತಂತ್ರ್ಯ ಹೋರಾಟದ ಜ್ವಾಲೆ ಹರಡುತ್ತಿತ್ತು. ಈ ಬೆಳಕಿನಲ್ಲಿ ಜನರ ಮೌಢ್ಯವೂ ಕರಗುತ್ತಿತ್ತು. ಸ್ವಾತಂತ್ರ್ಯ ಹೋರಾಟ ಮಾಡಿ ಜೈಲಿಗೆ ಹೋದವ ರನ್ನು ನಿಕೃಷ್ಟವಾಗಿ ಕಾಣುವುದು ಮರೆಯಾಗಿ ಅವರ ಬಗ್ಗೆ ಗೌರವ ಮೂಡತೊಡ ಗಿತ್ತು. ನನ್ನಆಕ್ಕನ ಮನೆಯಲ್ಲಿ ರಾತ್ರಿ ತಂಗಿದ್ದ ನಾನು, ತಮ್ಮಯ್ಯ ಬೆಳಿಗ್ಗೆ ಅವರೂರು ಬೊಮ್ಮನ ಹಳ್ಳಿಗೆ ಹೋದೆವು. ತಮ್ಮಯ್ಯನವರ ತಂದೆ ಜಗಲಿಯ ಮೇಲೆ ಒರಗು ದಿಂಬಿಗೆ ಆತು ಕುಳಿತು ಎಲೆ ಅಡಿಕೆ ಕುಟ್ಟುತ್ತಿದ್ದರು. ಅವರಿಗೆ ವಯಸ್ಸಾಗಿತ್ತು. ನಮ್ಮನ್ನು ಕಂಡು ''ಯಾರು ?'' ಎಂದರು ತಮ್ಮಯ್ಯ ''ನಾನು'' ಎಂದವರು ''ಇವನು ಪಾಲಗ್ರಹಾರದ ಸರಸೇ ಗೌಡರ ಮಗ ಜವರಪ್ಪ'' ಎಂದರು. ''ಓ ಹೋ ಹೋ ಗಾಂಧಿ ಗಲಾಟೇಲಿ ನಿನ್ನನ್ನು ಜೈಲಿಗೆ ಹಾಕಿದ್ರಂತಲ್ಲ ಯಾವಾಗಬಿಟ್ರು. ನಮ್ಮ ಹರದ್ನಳ್ಳಿ ತಪನಯ್ಯನ ಮಗ ಮೋಜಿಣಿದಾರ ನಿನ್ನ ಬಾಳ ಹೊಗಳಿದ ಕಣ್ ಮಗ ಬಾ ಬಾ ಮ್ಯಾಕೆ ಈ ಕಡೆ ಬಾರಪ್ಪ''ಎಂದು ಆದರದಿಂದ ಬರಮಾಡಿಕೊಂಡರು. ಮೊಟ್ಟ ಮೊದ ಲಿಗೆ ನನ್ನ ಸ್ವಾತಂತ್ರ್ಯ ಹೋರಾಟ ನಮ್ಮ ಸಮಾಜದ ಮನ್ನಣೆ ಪಡೆದಿತ್ತು. ಮಾಯಣ್ಣ ಗೌಡರು ನನ್ನ ಎಲ್ಲ ವಿಚಾರಗಳ ಜೊತೆಗೆ ಅಕ್ಕನ ಮನೆ ಅವಳ ಮಗಳನ್ನೇ ಮದುವೆ ಯಾಗುವುದರಿಂದ ಇರುವ ಅನುಕೂಲಗಳನ್ನೆಲ್ಲ ವಿವರಿಸಿ ಬುದ್ಧಿಯ ಮಾತು ಹೇಳಿದರು. ಮೈಸೂರಿಗೆ ಹೋದಾಗ ತಮ್ಮ ಅತ್ತೆ ಚನ್ನಕ್ಕನ ಮನೆಗೆ ತಪ್ಪದೆ ಹೋಗಬೇಕೆಂದು ತಾಕೀತು ಮಾಡಿದರು. ಮಾರನೆಯ ದಿನ ಊರಿಗೆ ಹೋದವನು ಮೈಸೂರಿಗೆ ಬಸ್ಸು ಹತ್ತಿದೆ. ಬೊಮ್ಮನ ಹಳ್ಳಿ ಚನ್ನಮ್ಮನವರ ಮನೆಗೂ ಹೋಗಿ ಊರಿಗೆ ಹೋಗಿದ್ದ ವಿಚಾರ ತಿಳಿಸಿದೆ. ಅವರು ಇಲ್ಲಿಯೇ ಮಲಗಿದ್ದು ಊಟ ತಿಂಡಿ ಮುಗಿಸಿ ಹೋಗು ಎಂದು ಪ್ರೀತಿಯಿಂದ ಮಾತನಾಡಿಸಿದರು. ಬೆಳಿಗ್ಗೆ ಅವರ ಮನೆಯಯಲ್ಲೇ ತಿಂಡಿ ತಿಂದು ನಮ್ಮ ಗುಂಪಿನ ಜೊತೆ ಮಂಡ್ಯಕ್ಕೆ ಚುನಾವಣಾ ಭಾಷಣಕ್ಕೆ ಹೋದೆ.

೨

1942 ನೆಯ ವರ್ಷದ ಮಹಾತ್ಮಗಾಂಧಿಯವರ ಮಾಡು ಇಲ್ಲವೆ ಮಡಿ ಎಂಬ ಘೋಷಣೆಯಂತೆ ಜೈಲಿಗೆ ಹೋಗಲು ಸನ್ನದ್ಧರಾದೆವು. ಬೊಂಬಾಯಿಯ ಸೋವೇಲಿಯಾ ಟ್ಯಾಂಕ್ ಮೈದಾನದಲ್ಲಿ ಸೇರಿದ್ದ ಕಾಂಗ್ರೆಸ್ ಅಧಿವೇಶನಕ್ಕೆ ಶಾರದಾ ಪ್ರಸಾದ್, ಲಾವಣಿ ವಿಷಕಂಠರಾವ್, ಅಬ್ದುಲ್ ಗಫಾರ್ ಮುಂತಾದವರು ಆ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ಬಂದಿದ್ದು ಮಹಾರಾಜಾ ಕಾಲೇಜ್ ಮೈದಾನದಲ್ಲಿ ಅವರ ಭಾಷಣ ಏರ್ಪಾಡಾಗಿತ್ತು. ಆ ದಿನ ಇಪ್ಪತ್ತು ಸಾವಿರ ಜನ ಸೇರಿದ್ದರು. ಗಾಂಧೀಜಿ, ಸರ್ದಾರ್ ಪಟೇಲ್, ನೆಹರು ಮುಂತಾದ ಅಗ್ರನಾಯಕರ ದಸ್ತಗಿರಿ, ಯಾರಿಗೂ ತಿಳಿಯದ ಅಜ್ಞಾತ ಜಾಗದಲ್ಲಿ ಅವರ ಸೆರೆ ಈ ಸಂಗತಿಗಳು ದೇಶವನ್ನೆ ಅಲ್ಲೋಲ ಕಲ್ಲೋಲ ಮಾಡಿದವು. ಆ ದಿನ ಆಗಸ್ಟ್ 10 ಎಂದು ನೆನಪು ನಮ್ಮ ಊರಿನಲ್ಲಿದ್ದ ತಗಡಿನಿಂದ ಕಟ್ಟಿದ್ದ ರಾಮ ಮಂದಿರವನ್ನು ಕಿತ್ತು ಕಲ್ಲಿನಿಂದ ಹೊಸದಾಗಿ ಕಟ್ಟಿ ವಾರಣಾಸಿಯಿಂದ ಶ್ರೀ ರಾಮನ ವಿಗ್ರಹ ತರಿಸಿ ಪ್ರತಿಷ್ಠಾಪನಾ ಕಾರ್ಯ ಇಟ್ಟುಕೊಂಡಿದ್ದರಂತೆ. ಈ ಕಾರ್ಯವನ್ನು ನೆರವೇರಿಸಲಿದ್ದವರು ನಮ್ಮ ಜನದವರೇ ಆದ ಸಂಜನಗೂಡಿನ ನಾರಾಯಣಸ್ವಾಮಿಯವರು. ನನ್ನ ತಂದೆ ನರಸಿಂಹೇಗೌಡರು ನಾರಾಯಣಸ್ವಾಮಿಯವರೊಂದಿಗೆ ಮೈಸೂರಿಗೆ ಬಂದರು. ಮಹಾರಾಜಾ ಕಾಲೇಜು ಮೈದಾನದ ಸಭೆ ವಿಷಯ ತಿಳಿದು ಅಲ್ಲಿಗೂ ಅವರನ್ನು ಕರೆದುಕೊಂಡು ಬಂದರಂತೆ. ನನ್ನ ಭಾಷಣ ಆರಂಭವಾದಾಗ ನಾರಾಯಣಸ್ವಾಮಿಯವರು ನನ್ನ ಬಗ್ಗೆ ತುಂಬಾ ಅಭಿಮಾನದ ಮಾತುಗಳನ್ನು ಆಡಿದರಂತೆ. ಆಗ ನನ್ನ ತಂದೆ "ಏನು ಸ್ವಾಮಿ ನಮ್ಮಕಡೆ ಇವರೆಲ್ಲ ಕುಲಗೆಟ್ಟುವರು ಅಪಾ ಪೋಲಿಗಳು ಅಂತಾರೆ. ನೀವು ಹಿಂಗೇಳ್ತೀರಿ" ಅಂದರಂತೆ ನಾನು ತಮ್ಮ ಮಗ ಎಂಬುದನ್ನು ಮರೆಸಿ. ಆಗ ನಾರಾಯಣಸ್ವಾಮಿಯವರು ರೇಗಿ "ನಿಮ್ಮ ಜನರಿಗೆ ಬುದ್ಧಿ ಇಲ್ಲ. ಸ್ವಾತಂತ್ರ್ಯ ಹೋರಾಟಗಾರರನ್ನು ನಿಂದಿಸುವವರು ದೇಶ ದ್ರೋಹಿಗಳು, ಚಂಡಾಲರು" ಎಂದು ನಿಂದಿಸಿದರಂತೆ. ಆಗ ನಮ್ಮ ತಂದೆ ಕಣ್ಣಲ್ಲಿ ನೀರು ತಂದು ಕೊಂಡು ಅವನು ನನ್ನ ಮಗ ಸ್ವಾಮಿ. ಏನೋ ಹೀಗಾದವಲ್ಲ ಎಂಬ ಸಂಕಟಕ್ಕೆ ಹಾಗೆ ಹೇಳಿ ಬಿಟ್ಟೆ. ನೀವೆಲ್ಲ ಹೇಳಿದ ಮೇಲೆ ಇದು ಒಳ್ಳೆ ಕೆಲಸವೇ ಸರಿ. ಇನ್ನು ಮುಂದೆ ಹಾಗೆ ನಡೆದುಕೊಳ್ಳುವುದಿಲ್ಲ ಕ್ಷಮಿಸಿ" ಎಂದರಂತೆ, ಮುಂದೆ ರಾಮ ವಿಗ್ರಹ ಪ್ರತಿಷ್ಠಾಪಿಸಲು ಬಂದಾಗ ನಾರಾಯಣ ಸ್ವಾಮಿಯವರು ಸ್ವಾತಂತ್ರ್ಯ ಹೋರಾಟದ ಪಾವಿತ್ರ್ಯವನ್ನು ವಿವರಿಸಿ ಜೈಲಿಗೆ ಹೋದವರನ್ನು ಹೊಗಳಿ ನಿಮ್ಮ ಊರಿಗೆ ಆ ಕೀರ್ತಿ ಬಂದುದು ನಿಮ್ಮ ಪುಣ್ಯ ಎಂದರಂತೆ.

ಸಮ್ಮೂರಿನ ಶ್ರೀರಾಮ ಪ್ರತಿಷ್ಠಾಪನೆ ನನ್ನ ಜೀವನದ ಎರಡು ಮುಖ್ಯ ಘಟನೆಗಳಿಗೆ ಕಾರಣವಾಯಿತೆಂಬುದನ್ನು ನಾನು ಹೇಳಬೇಕು. ಒಂದು ಜೈಲಿಗೆ ಹೋದ್ದರಿಂದ ಅಪಾಪೋಲಿ ಎನ್ನಿಸಿಕೊಂಡವನು ಅಂದಿನಿಂದ ಸ್ವಾತಂತ್ರ್ಯ ವೀರನಾದೆ. ಇನ್ನೊಂದು ಒಂದು ರೀತಿಯಲ್ಲಿ ನನ್ನ ಜೀವನ ಸಂಗಾತಿ ಯಾರೆಂಬುದು ತೀರ್ಮಾನವಾಯಿತು. ಈ ಪ್ರತಿಷ್ಠಾಪನಾ ಕಾರ್ಯಕ್ಕೆ ನನ್ನ ಅಕ್ಕ, ಭಾವ, ಮಗಳು ಪಾರ್ವತಿಯೊಂದಿಗೆ ಬಂದಿದ್ದರಂತೆ. ದೇವರ ಕಾರ್ಯವೆಲ್ಲ ಮುಗಿದ ಮೇಲೆ ನನ್ನ ತಂದೆ ತಮ್ಮ ಮಗಳು ಅಳಿಯ ಮತ್ತು ಮೊಮ್ಮಗಳನ್ನು ನಾರಾಯಣಸ್ವಾಮಿಯವರಿಗೆ ಪರಿಚಯ ಮಾಡಿಸಿದರಂತೆ. ಆಗ ಅವರು ಇಂದು ಪುಣ್ಯಕಾರ್ಯ ನಡೆದಿದೆ. ಶುಭ ದಿನ. ಅನಪೇಕ್ಷಿತವಾಗಿ ನನ್ನ ಮನಸ್ಸಿನಲ್ಲಿ ಉಂಟಾದುದನ್ನು ಹೇಳುತ್ತಿದ್ದೇನೆ. ಈ ಹುಡುಗಿಯನ್ನು ನಿಮ್ಮ ಮಗ ಜವರಪ್ಪನಿಗೆ ತಂದುಕೊಳ್ಳಿ. ಈ ಮದುವೆಯಿಂದ, ಈಕೆಯ ಕಾಲುಗುಣದಿಂದ ನಿಮ್ಮ ಮಗನಿಗೆ ಒಳ್ಳೆಯದಾಗುತ್ತದೆ'' ಎಂದು ಹೇಳಿ ಆಶೀರ್ವದಿಸಿದರಂತೆ. ಈ ವಿಚಾರ ಜೈಲಿನಿಂದ ಬಂದ ನನಗೆ ತಿಳಿಯಿತು. ಪಾರ್ವತಿಗೆ ಓದು ಬರಹವಿಲ್ಲ, ಚಿಕ್ಕ ವಯಸ್ಸು. ಕಟ್ಟಿಕೊಂಡು ಪಡು ಪಾಟಲಾಗುವುದಿಲ್ಲವೆ ಎಂಬ ಚಿಂತೆ ಹತ್ತಿತು. ಯಾಕೋ ಏನೋ ಆಕೆಯನ್ನು ತಿರಸ್ಕರಿಸುವುದು ನನ್ನಿಂದ ಆಗಲಿಲ್ಲ. ದೈವ ಮತ್ತು ಗುರು ಹಿರಿಯರಲ್ಲಿ ನನಗಿದ್ದ ಭಾವನೆ ಈ ನಿರ್ಧಾರಕ್ಕೆ ಕಾರಣವಿರಬಹುದೋ ಏನೊ ?

ಜೈಲಿನಿಂದ ಬಂದ ನನ್ನನ್ನು ಮೊದಲಬಾರಿಗೆ ತಂದೆಯವರು ಬಹು ವಿಶ್ವಾಸದಿಂದ ಮಾತನಾಡಿಸಿದರು. ನಾನು ಮತ್ತು ನನ್ನ ತಂದೆ ಒಂದೆಡೆ ಕುಳಿತು ಮಾತಾಡಿ ಅನೇಕ ವರ್ಷಗಳೇ ಆಗಿದ್ದವು. ಈ ದೃಶ್ಯ ನನ್ನ ತಾಯಿಗೆ ಅತ್ಯಾನಂದವನ್ನುಂಟು ಮಾಡಿತ್ತು. ತಾಯಿಯವರೂ ಬಂದು ಮಾತಿಗೆ ಸೇರಿಕೊಂಡರು, ತಂದೆಯವರು ನಾರಾಯಣ ಸ್ವಾಮಿಯವರ ಅಭೀಷ್ಟ ತಿಳಿಸಿ ''ಹುಡುಗಿ ನಮಗೆ ತಿಳಿದದ್ದು, ಅಲ್ಲದೆ ಮುತ್ತಿನ ಹಾಗಿದೆ. ನಿನ್ನ ಹಾಗೆ ಕಪ್ಪಲ್ಲ. ನಮಗೆ ಈ ವರ್ಷ ಬತ್ತ ಇಲ್ಲ, ನಿಮ್ಮಕ್ಕನಿಗೆ ಒಳ್ಳೆ ಭತ್ತ ಆಗಿದೆ. ಅಲ್ಲಿಂದಲೇ ತಂದ್ರಾಯ್ತು''ಇತ್ಯಾದಿ ಇತ್ಯಾದಿ ನನ್ನ ಅಭಿಪ್ರಾಯಕ್ಕೆ ಕಿಂಚಿತ್ತೂ ಅವಕಾಶವನ್ನೇ ಕೊಡದೆ ಹೇಳಿ ಮುಗಿಸಿದರು. ತಾಯಿಯವರೂ ಅದಕ್ಕೆ ತಮ್ಮ ಒಪ್ಪಿಗೆಯ ಮುದ್ರೆಯೊತ್ತಿ ''ನಾಳೆ ನಾಡಿದ್ದು ಕೊಪ್ಪಲಿಗೆ ಹೋಗಿ ಹೆಣ್ಣು ನೋಡಿದ ಶಾಸ್ತ್ರ ಮುಗಿಸಿ ಬಾ. ಆ ಮೇಲೆ ನಾಕು ಜನ ಹೋಗಿ ಮಾತು ಕತೆ ಮುಗಿಸಿದರಾಯಿತು'' ಎಂದರು. ನಾನು ಯಾವ ಪ್ರತಿರೋಧವೂ ಇಲ್ಲದೆ ಅವರ ಸಲಹೆಯನ್ನು ಒಪ್ಪಿದೆ. ಮದುವೆಗಳು ಸ್ವರ್ಗದಲ್ಲಿ ನಿಶ್ಚಯವಾಗುತ್ತವೆಂಬ ಮಾತು ನಿಜವಿರಬೇಕೇನೋ ಯಾರಿಗೆ ಗೊತ್ತು.

ಒಂದು ದಿನ ಸಂಜೆ ನಾವು ನಾಲ್ವರು ಮಿತ್ರರು ಅಕ್ಕನ ಊರ ಮಾವಿನ ಕಟ್ಟೆ ಕೊಪ್ಪಲಿಗೆ ಹೊರಟೆವು. ಅಕ್ಕನ ಮನೆಯಾದರೂ ಶುಭಕಾರ್ಯ ಒಂಟಿ ಹೋಗಬಾರದಲ್ಲ ಎಂಬುದು ಆಗಿನ ಕಾಲದ ಪದ್ಧತಿ. ಅಲ್ಲದೆ ಇಂತಹ ಕೆಲಸಗಳಿಗೆ ಒಬ್ಬರಿಗಿಂತ

ಇಬ್ಬರು ಲೇಸು ಎಂಬ ಜನಪದ ಅನುಭವವೂ ಉಂಟು. ನಮ್ಮನ್ನು ಕಂಡ ಅಕ್ಕ "ಏನ್ರೋ ಇಷ್ಟೊತ್ನಲ್ಲಿ ? ಎಲ್ಲಿಗೋಗಿದ್ರಿ ?" ಎಂದೆಲ್ಲ ವಿಚಾರಿಸಿದಳು. "ಇಲ್ಲೇ ಶೆಟ್ಟಳ್ಳಿಗೋಗಿದ್ದೊ ಕಣಕ್ಕ ಜವರಪ್ಪಂಗೆ ಹೆಣ್ಣು ನೋಡಾಕೆ" ಎಂದ ಮಿತ್ರ. "ಇದೇನ್ರೋ ಹಿಂಗ್ಮಾತಾಡ್ತೀರಿ! ಕುರಿಯಪ್ಪಾ ಪಾರ್ವತೀನೆ ಮಾಡ್ಕೋತೀವಿ ಅಂದಿದ್ದ: ಬೊಮ್ಮನಹಳ್ಳಿ ತಮ್ಮಯ್ಯನೂ ಅಂದಿದ್ದ ನೀವೇನೋ ಅಪ್ಮಾತಾಡ್ತೀರಿ" ಎಂದಳು. ಆನಂತರ ಆಕೆಗೇನನ್ನಿಸಿತೋ ಏನೋ "ಆಯ್ತು ಕತ್ಲಾಯ್ತದೆ ಇದ್ದು ಬೆಳಿಗ್ಗೋಗಿ" ಎಂದು ಸುಮ್ಮನಾದಳು. ನಾವು ಈ ವಿಚಾರ ಹೇಳದೆ ಸುಮ್ಮನೆ ಬಂದೊ ಅಂದಿದ್ರೆ ಅಕ್ಕ ಕೂಡಲೇ ಕೋಳಿ ಕತ್ತಿಗೆ ಕುಡ್ಲು ಹಾಕುತ್ತಿದ್ದಳು. ಆಕೆಗೆ ಸ್ವಲ್ಪ ನಿರಾಶೆಯಾಗಿದ್ದಿರಬೇಕು ಯಾವುದೇ ವಿಶೇಷ ಊಟೋಪಚಾರದ ಕಡೆಗೆ ಗಮನ ಹರಿಸಲಿಲ್ಲವೆಂದು ಈಗ ಅನ್ನಿಸುತ್ತದೆ.

ನಾವು ನಾಲ್ವರು ಜಗಲಿಯ ಮೇಲೆ ಕುಳಿತೆವು. ಮೇಯಲು ಹೋಗಿದ್ದ ದನ ಕರುಗಳು ಊರಿಗೆ ಮರಳಿ ಬರುತ್ತಿದ್ದವು. ನಮ್ಮ ಅಕ್ಕನ ಮಗಳು ಪಾರ್ವತಿ ಕೆರೆಯ ಅಂಗಳಕ್ಕೆ ಎಮ್ಮೆಗಳನ್ನು ಮೇಯಲು ಹೊಡೆದುಕೊಂಡು ಹೋಗಿದ್ದವಳು ಎಮ್ಮೆಯೊಂದರ ಮೇಲೆ ಕುಳಿತು ಸವಾರಿ ಮಾಡುತ್ತಲೇ ಬಂದಳು. ನಮ್ಮನ್ನು ಕಂಡಕೂಡಲೇ ಎಮ್ಮೆ ಮೇಲಿಂದ ಚಕ್ಕನೆ ಭೂಮಿಗೆ ನಗೆದು " ಓ ಹೋ ಹೋ ಏನು ಮಾವದೀರೆಲ್ಲ ಒಟ್ಟಿಗೆ ಬಂದು ಬಿಟ್ಟಿದ್ದೀರಿ. ಕೋಳಿ ಸಾರಿನರುಚಿ ಹಳ್ಳಿಗೆ ಇಳಿತೂ ಅಂತ ಕಾಣ್ತದೆ" ಎಂದು ಪರಿಹಾಸ್ಯ ಮಾಡಿದಳು. ನಾವು ಪರಸ್ಪರ ಮುಖ ನೋಡಿಕೊಂಡು ನಕ್ಕೆವು. ಆ ಕ್ಷಣದವರೆಗೆ ಮತ್ತು ಮದುವೆ ಮಾತು ಆಕೆಯ ಕಿವಿಗೆ ಬೀಳುವವರೆಗೆ ನಾವು ಅವಳಿಗೆ ಸೋದರ ಮಾವಂದಿರೆ. ಅವಳಿಗೆ ನಮ್ಮಲ್ಲಿ ಸದರವೇ. ಗ್ರಾಮಾಂತರ ಸಂಬಂಧವೇ ಅಂಥದು. ರಾತ್ರಿ ಊಟದ ಹೊತ್ತಿಗೆ ಭಾವನವರೂ ಬಂದರು. ವಿಶೇಷ ಅಡುಗೆ ಇಲ್ಲದ್ದೂ ಅವರಿಗೆ ಆಶ್ಚರ್ಯವನ್ನುಂಟು ಮಾಡಿರಬೇಕು. ಊಟವಾದ ಮೇಲೆ ಮದುವೆಯ ಸಂಗತಿಯನ್ನೂ ಅಪ್ಪ ಅವ್ವನ ಒಪ್ಪಿಗೆಯನ್ನು ತಿಳಿಸಿದೆವು. ಅಕ್ಕ ನಿರಾಳವಾಗಿ ಉಸಿರಾಡಿದರು. ಪಾರ್ವತಿ ಆ ಮೇಲೆ ಪತ್ತೆಯೇ ಇಲ್ಲ. ಮಾರನೆ ದಿನ ಊರಿಗೆ ಹಿಂತಿರುಗಿ ನನ್ನ ಒಪ್ಪಿಗೆ ತಿಳಿಸಿದೆ. ಕೆಲವೇ ದಿನಗಳಲ್ಲಿ ನಮ್ಮ ಮನೆತನದ ಜೋಯಿಸರು ಮಿಡಚಂಭಟ್ಟರಿಂದ ಲಗ್ನ ಕಟ್ಟಿಸಿದರು. ಅಂದೇ ಭಾವನ ಮನೆಯಿಂದ ಮೂಗಂಡುಗ ಭತ್ತ ಬಂದು ಬಿತ್ತು. ಕೇವಲ ಒಂದು ವಾರದಲ್ಲಿ ಮದುವೆಯ ಸಿದ್ಧತೆಗಳು ಮುಗಿದವು. ಹೆಣ್ಣು ಗಂಡು ಒಂದೇ ಮನೆಯವರಾದುದರಿಂದ ಯಾವ ಅಬ್ಬರ ಆರ್ಭಟಗಳೂ ಇರಲಿಲ್ಲ. ದಿನಾಂಕ 13-4-1944 ರಂದು ಶುಭ ಮುಹೂರ್ತದಲ್ಲಿ ಚಿ॥ ಸೌ॥ ಪಾರ್ವತಿಯೊಡನೆ ನನ್ನ ಮದುವೆ ನಡೆಯಿತು. ಶ್ರೀ ಆದಿ ಚುಂಚನಗಿರಿಯ ಕಿರಿಯ ಸ್ವಾಮಿಗಳಾದ ಶ್ರೀ ಶ್ರೀ ಚಂದ್ರಶೇಖರನಾಥ ಸ್ವಾಮಿಯವರು ಈ ಕಾರ್ಯವನ್ನು ನೆರವೇರಿಸಿ ಆಶೀರ್ವದಿಸಿದರು.

ಮೈಸೂರು ಮತ್ತು ಆಜುಬಾಜಿನ ಜನರು ತಮ್ಮ ಮಕ್ಕಳ ಮದುವೆಯಾದ ವರುಷ ನಂಜನಗೂಡಿನ ದೊಡ್ಡ ಜಾತ್ರೆಗೆ ಅವರನ್ನು ಕರೆದುಕೊಂಡು ಹೋಗಿ ತೇರಿನ ಪಂಚಕಲಶ ದರ್ಶನ ಮಾಡಿಸುವುದು ಬೆಳೆದು ಬಂದಿರುವ ಪದ್ಧತಿ. ಮದುವೆಯ ಅನಂತರ ಗೃಹಕೃತ್ಯ ಕಲಿಕೆಗಾಗಿ ನನ್ನ ಪತ್ನಿಯನ್ನು ಮೈಸೂರಿನಲ್ಲಿ ಸೋದರತ್ತೆಯ ಮನೆಯಲ್ಲಿ ಬಿಡಲಾಗಿತ್ತು. ನನ್ನ ಸೋದರತ್ತೆ ನಮ್ಮಿಬ್ಬರನ್ನೂ ನಂಜನಗೂಡು ದೊಡ್ಡ ಜಾತ್ರೆಗೆ ಕರೆದುಕೊಂಡು ಹೋದರು. ನಂಜುಡೇಶ್ವರ ಮತ್ತು ದೇವೀರಮ್ಮನವರ ದೇವಾಲಯಗಳಲ್ಲಿ ಅರ್ಚನೆ ಮಾಡಿಸಿ ಆಶೀರ್ವಾದ ಪಡೆದೆವು. ಹಾಗೆಯೆ ಪಾರ್ವತಿಯನ್ನು ಕೈ ಹಿಡಿಯಲು ಕಾರಣರಾಗಿದ್ದ ನಂಜನಗೂಡಿನ ನಾರಾಯಣ ಸ್ವಾಮಿಯವರನ್ನು ಕಂಡು ಅವರ ಆಶೀರ್ವಾದವನ್ನು ಪಡೆದೆವು. ಕುವೆಂಪು ಅವರು ತಮ್ಮ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ "ಲೋಕ ಗುರುಕೃಪೆಯಿರಲಿ, ಲೋಕ ಕವಿ ಕೃಪೆಯಿರಲಿ, ಲೋಕ ಹೃದಯದ ಬಯಕೆಯಾಶೀರ್ವಾದಗಳೈತರಲಿ" ಎಂದಿದ್ದಾರೆ ಹಿರಿಯರ, ಗುರುಗಳ, ಜನತೆಯ, ಭಗವಂತನ ಆಶೀರ್ವಾದ ನಮ್ಮ ಬದುಕನ್ನು ಸುಗಮವಾಗಿಸುತ್ತದೆ ಎಂಬುದನ್ನು ಅನುಭವದಿಂದ ಕಂಡವನು ನಾನು.



೩

ಈ ನನ್ನ ಜೀವನದ ಕೆಲವು ನೆನಪುಗಳನ್ನು ಬರೆಯುತೊಡಗಿದ ಆರಂಭದಲ್ಲಿಯೇ ದಿನಚರಿ, ಕಾಗದ ಪತ್ರಗಳು ಇತ್ಯಾದಿಗಳನ್ನು ಇಡದ ಕಾರಣ ಬರವಣಿಗೆ ಅನೇಕ ಕಡೆ ಕ್ರಮಬದ್ಧವಾಗಿಲ್ಲ ಎಂಬುದನ್ನು ಹೇಳಿದ್ದೇನೆ. ಬರೆಯುತ್ತ ಹೋದಂತೆ ಮರೆತಿದ್ದ ಅಥವಾ ನುಸುಳಿ ಬರುವ ಕೆಲವು ಸಂಗತಿಗಳೂ ಬರುತ್ತವೆ ನಾನು ಅಲ್ಪ ಸಲ್ಪವಾದರೂ ವಿದ್ಯಾವಂತನಾಗಲು ಕಾರಣರಾದ ನಮ್ಮ ಊರಿನ ಪಟೇಲರಿಗೆ ಬರಬಾರದ ಕಾಯಿಲೆ ಯೊಂದು ಬಂತು. ಇದರಿಂದ ಮುಕ್ತರಾಗುವುದು ಸಾಧ್ಯವಿಲ್ಲವೆಂದು ಅವರಿಗೂ ತಿಳಿದಿತ್ತು. ಕೈಕಾಲು ಸ್ವಾಧೀನ ತಪ್ಪಿ ಅನ್ಯರ ಆಶ್ರಯಕ್ಕೆ ಹಂಗಿಗೆ ಒಳಗಾಗುವುದು ಬೇಡ, ದೇವರೇ ಆದಷ್ಟುಬೇಗ ಈ ಬಂಧನದಿಂದ ನನ್ನನ್ನು ಮುಕ್ತನನ್ನಾಗಿ ಮಾಡಪ್ಪ ತಂದೆ ಎನ್ನುವ ಸ್ಥಿತಿ ಅವರದಾಗಿತ್ತು. ತಂದೆಯ ಕಾಯಿಲೆಗೆ ಚಿಕಿತ್ಸೆಮಾಡಿಸಿ ಇನ್ನೂ ನಾಲ್ಕು ದಿನ ತಮ್ಮೊಂದಿಗಿರುವಂತೆ ಮಾಡಬೇಕೆಂಬುದು ಅವರ ಮಕ್ಕಳ ಆಸೆ. ಈ ಆಸೆ ಯಿಂದಲೇ ಬೆಂಗಳೂರಿನ ಪ್ರಸಿದ್ಧ ವೈದ್ಯರಲ್ಲಿ ಚಿಕಿತ್ಸೆ ಮಾಡಿಸಿದರು. ಆದರೂ ಪ್ರಯೋಜನವಾಗಲಿಲ್ಲ. ತಮ್ಮ ಶಕ್ತಿ ಮೀರಿ ಪ್ರಯತ್ನಿಸಿದ ವೈದ್ಯರು "ಇನ್ನು ಪ್ರಯೋಜನವಿಲ್ಲ, ಇರುವಷ್ಟು ದಿನ ಇರಲಿ. ಊರಿಗೆ ಕರೆದುಕೊಂಡು ಹೋಗಿ" ಎಂದರಂತೆ. ಕಡೆಗೆ ನಿರಾಶರಾಗಿ ಮಕ್ಕಳು ಊರಿಗೆ ಕರೆದು ತಂದರು.

ಗ್ರಾಮಾಂತರ ಜನರ ಅನಕ್ಷರತೆ ಮೂಢನಂಬಿಕೆಗಳನ್ನು ದುರುಪಯೋಗಿಸಿ ಕೊಂಡು,ಅವರಲ್ಲಿ ಶೋಷಣೆ ಮಾಡುವ ಜನ ಆಗಲೂ ಇದ್ದರು ಈಗಲೂ ಇದ್ದಾರೆ. ಇಂತಹ ಒಬ್ಬ ತಲೆಹೋಕ "ನೋಡಿ ಕೊಳ್ಳೆಗಾಲದಲ್ಲಿ ದೊಡ್ಡ ಮಂತ್ರವಾದಿಯೊಬ್ಬ ನಿದ್ದಾನೆ. ಸತ್ತವರನ್ನು ಕೂಡ ಮತ್ತೆ ಮಾತನಾಡಿಸುವ ಶಕ್ತಿ ಅವನಿಗಿದೆ. ನನಗೆ ಸ್ವತಃ ಈ ವಿಚಾರ ಗೊತ್ತು" ಎಂದು ಪಟೇಲರ ಮಕ್ಕಳಿಗೆ ಹೇಳಿದ. ಪ್ರವಾಹದಲ್ಲಿ ತೇಲುವ ವನು ಹಾವನ್ನು ಆಸರೆಯೆಂದು ತಿಳಿಯುವಂತೆ ಅವರು ಏನಾದರೂ ಮಾಡಿ ತಮ್ಮ ತಂದೆಯನ್ನು ಉಳಿಸಿಕೊಳ್ಳಲು ಆ ತಲೆಹೋಕನ ಮಾತಿಗೆ ಬಲಿಯಾದರು. ಆತನಿಗೆ ನೂರು ರೂಪಾಯಿಗಳನ್ನು ಕೊಟ್ಟು ಆ ಮಂತ್ರವಾದಿಯನ್ನು ಪಾಲಗ್ರಹಾರಕ್ಕೆ ಕರೆದು ತರುವಂತೆ ಕೇಳಿಕೊಂಡರು.

ಮೂರೇದಿನದಲ್ಲಿ ಮಂತ್ರವಾದಿ ಪಾಲಗ್ರಹಾರದಲ್ಲಿ ಪ್ರತ್ಯಕ್ಷವಾದ. ಪಟೇಲರು ಹೊಸ ಮನೆಯೊಂದನ್ನು ಕಟ್ಟಿಸಿದ್ದು ಅವಕ್ಕಿನ್ನು ವಾಸಕ್ಕೆ ಹೋಗಿರಲಿಲ್ಲ. ಅದನ್ನೇ ಮಂತ್ರವಾದಿಯ ಬಿಡಾರ ಮಾಡಿದರು. ತಲೆಯ ಕೂದಲು ಜಡೆಗಟ್ಟಿ ಹತ್ತಾರು ಹಾವುಗಳಂತೆ ಸುತ್ತಲೂ ಇಳಿಬಿದ್ದಿದ್ದುವು. ಆ ಮಂತ್ರವಾದಿಯನ್ನು ಆ ಮುಗ್ಧ

ಹಳ್ಳಿಗರು ಜಡೇಮುನಿ ಎಂದುಕೊಂಡರು.ಅವನು ತನ್ನ ಕತ್ತಿಗೆ ಮನುಷ್ಯರ ತಲೆಬುರುಡೆಗಳಂತೆ ಕಾಣುವ ಶಂಕುವಿನ ಸರ ಧರಿಸಿದ್ದ. ಅರಿಶಿನ ಬಟ್ಟೆಯಲ್ಲಿ ಕಟ್ಟಿದ್ದ ಹತ್ತಾರು ಗಾತ್ರ ಮತ್ತು ತರಹದ ಮನುಷ್ಯರ ತಲೆಬುರುಡೆಗಳು, ಹಸ್ತಗಳು ಅವನ ಜೋಳಿಗೆ ಬಿಚ್ಚಿದರೆ. ಅವನ ವೇಷ, ಭೂಷಣಗಳು ನೋಡಿದವರಲ್ಲಿ ಭಯವನ್ನೂ, ದಿಗ್ಭ್ರಾಂತಿ ಹುಟ್ಟಿಸುವಂತಿದ್ದವು.

ಊರಿಗೆ ಬಂದ ಮಂತ್ರವಾದಿ ಪಟೇಲರ ಕಾಯಿಲೆಯ ಬಗ್ಗೆ ಯಾವುದೇ ಆಸಕ್ತಿಯನ್ನೂ ತೋರದೆ ಶಕ್ತಿದೇವತೆಗಳನ್ನು ಒಲಿಸಿಕೊಳ್ಳುವ ನೆಪದಲ್ಲಿ ದಿನವೂ ಎರಡು ಮೂರು ಕೋಳಿಗಳನ್ನು ಬಲಿಕೊಟ್ಟು ಭರ್ಜರಿಯಾಗಿ 'ಮಾಂಸದೂಟದಲ್ಲಿ ನಿರತನಾದ. ಮನೆಯ ಅಂಗಳದಲ್ಲಿ ಅವನು ಹರಡಿದ್ದ ಮನುಷ್ಯ ದೇಹದ ಅಂಗಾಂಗಗಳನ್ನು ಕಂಡು ಭಯಗೊಂಡ ಜನರು ಅತ್ತ ಸುಳಿಯುತ್ತಿರಲಿಲ್ಲ. ಯಾರಾದರೂ ಧೈರ್ಯಮಾಡಿ ಕೇಳಿದರೆ "ಅದೇನು ಅಷ್ಟು ಸುಲಭವೆ ? ಮೊದಲು ಶಕ್ತಿದೇವತೆಗಳನ್ನು ಒಲಿಸಿಕೊಳ್ಳಬೇಕು. ಭೂತಭೇತಾಳಾದಿಗಳಿಗೆ ಶಾಂತಿ ಮಾಡಿಸಬೇಕು. ಮಾಟ ಮಾಡಿರುವುದು ಹೆಂಗಸೆ, ಗಂಡಸೆ ಕಂಡುಹಿಡಿಯಬೇಕು. ಮುಂದಿನ ಅಮಾವಾಸ್ಯೆಯಂದು ನನ್ನ ಮಂತ್ರ ಪ್ರಯೋಗಿಸಲು ಯೋಚಿಸಿದ್ದೇನೆ" ಎಂದು ಕೇಳಿದವರಿಗೇ ದಿಗ್ಭ್ರಮೆಯಾಗುವಂತೆ ತನ್ನ ಕೆಲಸದ ಅಪಾಯ, ಜವಾಬ್ದಾರಿ ಇತ್ಯಾದಿಗಳನ್ನು ಹೇಳುತ್ತಿದ್ದ. ಹುಣ್ಣಿಮೆಯಿಂದ ಅಮಾವಾಸ್ಯೆಯವರೆಗೆ ಪ್ರತಿದಿನ ಕೋಳಿಪೂಜೆ ನಡೆಯುತ್ತಲೇ ಇತ್ತು. ಭೂತಭೇತಾಳಗಳ ಪ್ರೀತ್ಯರ್ಥವಾಗಿ.

ಸರಿಸುಮಾರು ಇದೇ ಸಮಯದಲ್ಲಿ ನನ್ನ ತಂದೆಯವರ ಆರೋಗ್ಯ ಕೆಟ್ಟು ಚಿಕಿತ್ಸೆಗಾಗಿ ಬೆಂಗಳೂರಿನಲ್ಲಿದ್ದರು. ಎಂಬತ್ತು ವರ್ಷ ದಾಟುತ್ತಿದ್ದ ಅವರು ಮತ್ತೆ ಆರೋಗ್ಯವಂತರಾಗುವುದು ಸಾಧ್ಯವಿಲ್ಲದ ಮಾತು, ಊರಿಗೆ ಕರೆದುಕೊಂಡು ಹೋಗಿ ಎಂದು ವೈದ್ಯರು ಹೇಳಿದರು. ಅದರಂತೆ ನಾನು ತಂದೆಯವರನ್ನು ಊರಿಗೆ ಕರೆದುತಂದೆ. ನಾವು ಇಳಿಯುವುದಕ್ಕೂ ಮಂತ್ರವಾದಿ ನಮ್ಮ ಕಾರಿನ ಹತ್ತಿರ ಬರುವುದಕ್ಕೂ ಸರಿಯಾಯಿತು. ಅವನ ವೇಷ ಭೂಷಣ ನೋಡಿದ ನನಗೆ ಅಸಹ್ಯವಾಯಿತು. ಅವನೂ ನನ್ನ ಖಾದಿಜುಬ್ಬ, ಗಾಂಧಿಟೋಪಿ ನೋಡಿ ತನ್ನ ಮಂತ್ರ ತಂತ್ರ ಇವನ ಹತ್ತಿರ ನಡೆಯಲಾರದೆಂದುಕೊಂಡಿರಬೇಕು. ಸುಮ್ಮನೇ ಹೊರಟು ಹೋದ. ಆಮೇಲೆ ಆತ ಯಾರೆಂದು ವಿಚಾರಿಸಲಾಗಿ ವಿಷಯ ತಿಳಿದು ಕನಿಕರವೆನಿಸಿತು. ನಮ್ಮ ತಂದೆ ಪಟೇಲರನ್ನು ನೋಡುವ ಆಸೆ ವ್ಯಕ್ತಪಡಿಸಿದರು. ನಾವು ಅಲ್ಲಿಗೆ ಕರೆದೊಯ್ದೆವು. ಪಟೇಲರು ಆ ನೋವಿನಲ್ಲೂ ಕೊಳ್ಳೇಗಾಲದ ಮಂತ್ರವಾದಿಯ ಶಕ್ತಿಯ ಬಗ್ಗೆ ನನ್ನ ತಂದೆಗೆ ಹೇಳಿದರು. ಇವರು ಎಲ್ಲಿ ಮಂತ್ರವಾದಿಯಿಂದ ಮಂತ್ರ ಮಾಟ ಮಾಡಿಸಲು ಹೇಳುತ್ತಾರೋ ಎಂದು ನಾನು ಹೆದರಿದ್ದೆ. ಆದರೆ ಅದನ್ನೆಲ್ಲ ಕೇಳಿದ ನನ್ನ ತಂದೆ "ಛೇ ಛೇ ಎಲ್ಲಾದರೂ ಉಂಟೇನೋ. ಅದನ್ನೆಲ್ಲಾ ನಂಬ ಬೇಡ"

ಎಂದವರೆ ನಮ್ಮೊಂದಿಗೆ ಮನೆಗೆ ಬಂದುಬಿಟ್ಟರು.

ಅಮಾವಾಸ್ಯೆಯ ರಾತ್ರಿ ಆಗಬೇಕಾದ ಪೂಜೆಯ ಏರ್ಪಾಟು ಭರದಿಂದ ಸಾಗಿತ್ತು. ಪಟೇಲರ ಮನೆಯವರೆಲ್ಲ ತಮ್ಮ ತಂದೆ ಉಳಿದರೆ ಸಾಕೆಂಬ ಭ್ರಮೆಯಲ್ಲಿದ್ದರು. ಇದುವರಲ್ಲಿ ಪಟೇಲರ ತಮ್ಮ ಒಬ್ಬರು ಪರವಾಗಿರಲಿಲ್ಲ. ನಾನು ಅವರನ್ನು ಕಂಡು ಇಂಥವರು ಮಾಡುವ ಮೋಸವನ್ನು ವಿವರಿಸಿ "ಪಟೇಲರು ಹುಶಾರಾದರೆ ನನಗೂ ಸಂತೋಷ. ಆದರೆ ನೀವು ಮೋಸ ಹೋದೀರಿ. ನೀನಾದರೂ ಹುಷಾರಾಗಿ ಮಂತ್ರವಾದಿಯನ್ನು ಗಮನಿಸುತ್ತಿರು" ಎಂದು ಹೇಳಿದೆ. ಆತ ಒಪ್ಪಿದ್ದ "ನಿನಗೊಬ್ಬನಿಗೆ ಹೆದರಿಕೆಯಾದರೆ ನಾನೂ ನಿನ್ನೊಂದಿಗೆ ಬರುತ್ತೇನೆ" ಎಂದೂ ಆಶ್ವಾಸನೆಕೊಟ್ಟೆ. ಅಮಾವಾಸ್ಯೆಯ ರಾತ್ರಿ ಪೂಜೆಗೆ ಒಂದು ಭಾರಿ ಕರೀಹೋತವೇ ಸಿದ್ಧವಾಗಿತ್ತು. ಅಂದು ರಾತ್ರಿ ಪಟೇಲರನ್ನು ಊರ ಹೊರಗಿನ ಕೆರೆಯ ಹತ್ತಿರ ಹೊತ್ತುಕೊಂಡು ಹೋಗಿ ಹುಟ್ಟಿದ ನಿರ್ವಾಣ ನೀರಿನಲ್ಲಿ ಕೂರಿಸಲಾಯಿತು. ಪಟೇಲರ ಕತ್ತಿಗೂ ಹೋತದ ಕತ್ತಿಗೂ ದಾರ ಕಟ್ಟಿಸಿದ.ಆ ನಂತರ ಅವರ ಹುಲ್ಲುಗಾವಲ ವರೆಗೂ ಹೋಗಿ ಬಂದ. ಹೋತನ ಮೇಲೆ ತಣ್ಣೀರು ಚಲ್ಲಿದ. ಆ ಹೆದರಿಕೆಗೆ ಅದು ಗಂಜಲ ಹುಯ್ದು ಹಿಕ್ಕೆ ಹಾಕಿತು. ಕೂಡಲೇ ಮಂತ್ರವಾದಿ ಅದರ ಕತ್ತು ಕತ್ತರಿಸಿ ಪಟೇಲರಿಗೆ ರಕ್ತಸ್ನಾನ ಮಾಡಿಸಿದ.

ಪೂಜೆಯ ಎರಡನೇ ಹಂತದಲ್ಲಿ ಮಂತ್ರವಾದಿ ಪಟೇಲರ ತಮ್ಮನ ಕಣ್ಣಿಗೆ ಅಂಜನ ಹಾಕಿ "ನೋಡು ಪಾತಾಳ ಲೋಕ ಕಾಣುತ್ತಿದೆಯೇ? ಹೆಂಗಸೊಬ್ಬಳು ಬರುತ್ತಿಲ್ಲವೆ? ಅವಳ ಜೊತೆ ಗಂಡಸೊಬ್ಬನಿದ್ದಾನೆ" ಪಟೇಲರ ತಮ್ಮ ಬೇಕಂತಲೇ ಗಂಡಸನ್ನು ಸೇರಿಸಿದ. ಕೂಡಲೇ ಮಂತ್ರವಾದಿ "ಗಂಡಸಿನ ವಿಚಾರ ನಾನು ಹೇಳಿದ ಮೇಲೆ ನೀನು ಗಮನಿಸಬೇಕು" ಎಂದು ಗದರಿಸಿದ. "ಅವರಿಬ್ಬರ ಹಿಂದೆ ಬರುತ್ತಿರುವ ಮಾಟಗಾರ ಕಾಣುತ್ತಿದ್ದಾನೆಯೇ ?" ನೋಡು ಹೋತದ ತಲೆ ಕತ್ತರಿಸುತ್ತಿದ್ದಾರೆ. ಹೋತದ ತಲೆ ಹಾರಿ ಗಣಗಿಲ ಗಿಡದ ಬುಡದ ಹುತ್ತದಲ್ಲಿ ಬೀಳುತ್ತಿದೆ, ಅದನ್ನು ಹೊರತೆಗೆಯಬೇಕು. ನಾಳೆ ಅದನ್ನು ಅಲ್ಲಿಂದ ತೆಗೆಯುವಾಗ ಆ ಮಂತ್ರವಾದಿ ನನ್ನ ಮೇಲೆ ಮಂತ್ರ ಪ್ರಯೋಗಿಸುತ್ತಾನೆ. ಆಗ ನನಗೆ ಪ್ರಜ್ಞೆ ತಪ್ಪುತ್ತದೆ. ಆಗ ನನ್ನ ದೇಹವನ್ನು ಜೋಪಾನವಾಗಿ ನೋಡಿಕೊಳ್ಳಿ. ತಲೆಗೆ ನೀರನ್ನು ಹಾಕುತ್ತಿರಬೇಕು" ಇತ್ಯಾದಿ ಇತ್ಯಾದಿಗಳನ್ನು ಹೇಳಿ ಮಂತ್ರವಾದಿ ಆ ದಿವಸ ಪೂಜೆಯನ್ನು ಮುಗಿಸಿದ.

ಪಟೇಲರ ತಮ್ಮ ಮೊದಲೇ ಯೋಚಿಸಿದ್ದುದರಿಂದ ಮಂತ್ರವಾದಿ ಮೋಸಗಾರನೆಂದು ಅರಿವಾಗಿತ್ತು. ರಾತ್ರಿ ನಾವು ಮಂತ್ರವಾದಿಯ ಚಲನವಲನಗಳ ಮೇಲೆ ನಿಗಾ ಇಟ್ಟಿದ್ದೆವು. ಬೆಳಗಿನ ಜಾವ ಸಾಮಾನ್ಯವಾಗಿ ಅದು ಕೋಳಿ ಕೂಗುವುದಕ್ಕಿಂತ ಸ್ವಲ್ಪ ಮುಂಚೆಯ ಕಾಲವಾಗಿದ್ದು ಒಳ್ಳೆಯ ನಿದ್ರೆ ಹೊತ್ತು. ಮಂತ್ರವಾದಿ ಮೆಲ್ಲಗೆ ಬಾಗಿಲು ತೆಗೆದುಕೊಂಡು ಹೊರ ಬಂದವನೆ ನೇರ ಹುಲ್ಲುಗಾವಲು ಕಡೆಗೆ ನಡೆಯ

ತೊಡಗಿದ. ಅವನ ಹೆಗಲಲ್ಲಿ ಚೀಲವಿತ್ತು. ಸ್ವಲ್ಪ ಸಮಯದ ನಂತರ ನಾವೂ ಅವನನ್ನು ಹಿಂಬಾಸಿದೆವು. ಅವನು ನೇರವಾಗಿ ಪಟೇಲರ ಹುಲ್ಲುಗಾವಲಿನ ಕಣಿಗಿಲು ಪೊದೆಯಲ್ಲಿದ್ದ ಹುತ್ತವನ್ನು ಎಚ್ಚರಿಕೆಯಿಂದ ಅಗೆದ. ಅವನ ಹೆಗಲ ಚೀಲದಿಂದ ರಾತ್ರಿ 'ಕಡಿಸಿದ್ದ ಹೋತದ ತಲೆಯನ್ನು ತೆಗೆದು ಆ ಗುಳಿಯಲ್ಲಿ ಇಟ್ಟು ಮುಚ್ಚ ತೊಡಗಿದ. ಇನ್ನೂ ಏನೇನು ನಡೆಯುತ್ತಿತ್ತೊ, ಪಟೇಲರ ತಮ್ಮನಿಗೆ ಅಸಾಧ್ಯ ಸಿಟ್ಟು ಬಂದು ನಾನು ತಡೆಯುವ ಮೊದಲೇ ಓಡಿಹೋಗಿ ಮಂತ್ರವಾದಿಯನ್ನು ಒದ್ದು "ಬೋಳಿಮಗ್ನೆ ಹೀಗೆ ಎಷ್ಟು ಮನೆ ಮುರ್ದಿದ್ದಿ. ಎಷ್ಟು ಜನರ್ನ ಸಾಯ್ಸಿದ್ದಿ" ಎಂದೆಲ್ಲ ಮೂದಲಿಸಿದ. ತನ್ನ ತಂತ್ರ ಬಯಲಾಗಿ ಇನ್ನು ಉಳಿಗಾಲವಿಲ್ಲವೆಂದರಿತ ಮಂತ್ರವಾದಿ ನಮ್ಮ ಕೈಕಾಲು ಹಿಡಿದು "ಹೊಟ್ಟೆಪಾಡಿಗಾಗಿ ಏನೋ ಮಣ್ಣು ತಿಂದು ಬಿಟ್ಟೆ ನನ್ನ ಬಿಟ್ಟು ಬಿಡಿ" ಎಂದು ಬೇಡಿ ಬಿಡಿಸಿಕೊಂಡು ಬೆಳಕು ಹರಿಯುವುದರಲ್ಲಿ ಊರಿಂದ ಪರಾರಿಯಾಗಿದ್ದ.

ಮುಂದೆ ಕೆಲವೇ ದಿನಗಳಲ್ಲಿ ಪಟೇಲರು ದೈವಾಧೀನರಾದರು. ಏನೇ ಚಿಕಿತ್ಸೆ ನಡೆಸಿದರೂ ನನ್ನ ತಂದೆಯವರ ಆರೋಗ್ಯವೂ ಮತ್ತೆ ಸುಧಾರಿಸಲೇ ಇಲ್ಲ. ಸಾಮಾನ್ಯವಾಗಿ ಸೆಪ್ಟೆಂಬರ್ ಕೊನೆವಾರದಿಂದ ದಸರೆಯವರೆಗೆ ಪಿತೃಪಕ್ಷಗಳು ನಡೆಯುತ್ತವೆ. ಗ್ರಾಮಾಂತರದ ಜನರು ಅದರಲ್ಲೂ ಒಕ್ಕಲಿಗರು ಬ್ರಾಹ್ಮಣರ ಹಾಗೆ ಸತ್ತ ಪಿತೃಗಳಿಗೆ ತಿಂಗಳ, ವರ್ಷದ ತಿಥಿ ಮಾಡುವುದಿಲ್ಲ. ಸತ್ತ ಹನ್ನೊಂದನೆಯ ದಿವಸಕ್ಕೆ ಉತ್ತರ ಕ್ರಿಯಾದಿ ಭೂಶಾಂತಿ ಕಾರ್ಯಕ್ರಮ. ಅಂದೇ ರಾತ್ರಿ ತಿಂಗಳ ತಿಥಿ. ಆನಂತರ ಅವರನ್ನು ಆ ಹಿಂದೆ ಸತ್ತ ಅಸಂಖ್ಯಾತ ಹಿರಿಯರ ಸಾಲಿಗೆ ಸೇರಿಸಿ ಹಬ್ಬಹರಿದಿನಗಳಂದು ಸಾಮೂಹಿಕ ಪೂಜೆಸಲ್ಲಿಸಿ ಬಿಡುತ್ತಾರೆ. ಆ ವರ್ಷದ ಪಿತೃಪಕ್ಷದಲ್ಲಿ ಊರಿನಲ್ಲಿದ್ದು ತಾವು ಪಿತೃಗಳಿಗೆ ಎಡೆಹಾಕಬೇಕೆಂದು ನಮ್ಮ ಜೊತೆ ಬೆಂಗಳೂರಿನಲ್ಲಿದ್ದ ತಂದೆ ಹಠ ಹಿಡಿದರು. ಈ ಕಾರಣದಿಂದ ನಾವು ಅವರನ್ನು ಊರಿಗೆ ಕರೆತಂದಿದ್ದೆವು. ಪಿತೃಪಕ್ಷದ ನಂತರ "ನಾನು ಚುಂಚನಗಿರಿ ಸ್ವಾಮಿಗಳನ್ನು ಕಂಡು ನಮಸ್ಕರಿಸಬೇಕು" ಎಂದರು. ಆ ಸ್ಥಿತಿಯಲ್ಲಿ ಅವರನ್ನು ಚುಂಚನಗಿರಿಯವರೆಗೆ ಕರೆದೊಯ್ಯುವಂತಿಲ್ಲ. ಸ್ವಾಮಿಗಳನ್ನು ಬಂದು ಹೋಗಿ ಎನ್ನುವುದು ಸಾಧ್ಯವಿಲ್ಲದ ಮಾತು. ನಾವು ಏನು ಮಾಡುವುದೆಂಬ ಸಂದಿಗ್ಧದಲ್ಲಿದ್ದಾಗ ಒಂದು ದಿನ ಸ್ವಾಮಿಗಳು ಕಾರ್ಯಾರ್ಥ ಎಲ್ಲೊ ಹೋಗಿದ್ದವರು ನಮ್ಮೂರಿಗೆ ಬಂದರು. ನಮಗೆ ಆಶ್ಚರ್ಯವಾಯಿತು. ತಂದೆಯವರು ಅವರಿಗೆ ಭಕ್ತಿ ಸಲ್ಲಿಸಿ ತೃಪ್ತರಾದರು. ದಿನಾಂಕ 12–10–1957ರಂದು ದೈವಾಧೀನರಾದರು. ಭಕ್ತನಕರೆ ಶ್ರೀಗುರುವಿಗೆ ತಲುಪಿತ್ತೆಂದು ಕಾಣುತ್ತದೆ. ಭಕ್ತಿ, ಆರಾಧನೆ, ಪ್ರಾರ್ಥನೆ ಮುಂತಾದ ನಿಸ್ವಾರ್ಥವಾದ ಅಧ್ಯಾತ್ಮದ ಬಗ್ಗೆ ಯೋಚಿಸಿದಾಗ ಇರಬಹುದೇನೊ ? ನನ್ನತಾಯಿ ತಿಮ್ಮಮ್ಮ ಆ ಮೇಲೆಯೂ ಅನೇಕ ಕಾಲ ನಮ್ಮೊಂದಿಗಿದ್ದು 2–5–1970 ರಂದು ನಿಧನರಾದರು, ಅವರು ಎಂಬತ್ತೈದು ವರ್ಷದ ತುಂಬು ಜೀವನ ನಡೆಸಿದ್ದರು.

ಮಂಡ್ಯದಲ್ಲಿ ಆರಂಭಿಸಿದ್ದ ಮುದ್ರಣಾಲಯ ಮತ್ತು ಪುಸ್ತಕದ ಅಂಗಡಿಗಳಿಂದಾಗಿ

ನನ್ನ ಸಂಸಾರ ಆರ್ಥಿಕವಾಗಿ ಚೇತರಿಸಿಕೊಳ್ಳುತ್ತಿತ್ತು. 1964 ರಲ್ಲಿ ಸ್ವಂತ ಮನೆಯೊಂದನ್ನು ಕಟ್ಟಿಸಿದೆ. ಅದರದೆ ಒಂದು ಸ್ವಾರಸ್ಯಕರವಾದ ಕಥೆ. ಅದನ್ನಿಲ್ಲಿ ಹೇಳಿದರೆ ಅಪ್ರಸ್ತುತವಾಗಲಾರದು. 1964 ರಲ್ಲಿ ಮಂಡ್ಯ ಪುರಸಭೆಯವರು ಪತ್ರಿಕಾ ಪ್ರತಿನಿಧಿಗಳಿಗೆ ನಿವೇಶನಗಳನ್ನು ಕೊಡಲು ತೀರ್ಮಾನಿಸಿದರು. ಅದರಂತೆ ಜನವಾಣಿ ಪತ್ರಿಕೆಯ ಪ್ರತಿನಿಧಿಯಾಗಿದ್ದ ನನಗೂ ಒಂದು ನಿವೇಶನ ಬಂದಿತು. ಆಗ ಗೃಹ ನಿರ್ಮಾಣ ಮಂಡಲಿಗೆ ಶ್ರೀ ಭೀಮಪ್ಪ ನಾಯಕ ಅಧ್ಯಕ್ಷರಾಗಿದ್ದರು. ಅವರು ರಾಜಕಾರಿಣಿಯಾದುದರಿಂದ ನನಗೆ ಬೇಗ ಸಾಲ ಮಂಜೂರು ಮಾಡುವ ಸಾಧ್ಯತೆಯಿತ್ತು. ಒಮ್ಮೆ ಕೆ. ವಿ. ಶಂಕರಗೌಡರು, ಎಂ. ಕೆ. ಶಿವನಂಜಪ್ಪನವರೊಂದಿಗೆ ನಾನು ಹೋಗಿ ಅವರನ್ನು ಕಂಡೆ. ನನಗೆ ಸಾಲ ಮಂಜೂರಾಯಿತು. ನಾನು ಮನೆ ಕಟ್ಟಲಿರುವ ವಿಚಾರವನ್ನು ಆದಿಚುಂಚನಗಿರಿಯ ಭಕ್ತನಾಥಸ್ವಾಮಿಗಳಿಗೆ ನಿವೇದಿಸಿಕೊಂಡು ಶ್ರೀಗಳೇ ದಯಮಾಡಿಸಿ ಗುದ್ದಲಿ ಪೂಜೆ ನಡೆಸಿಕೊಡಬೇಕೆಂದು ಪ್ರಾರ್ಥಿಸಿದೆ. ಸ್ವಾಮಿಗಳು ನನ್ನನ್ನು ಕೆಲವು ದಿನ ತಾವು ಹೇಳುವವರೆಗೆ ಮನೆಕಟ್ಟುವ ಕೆಲಸವನ್ನು ಮುಂದೂಡಬೇಕೆಂದೂ ತಮ್ಮ ಅನುಮತಿಯನಂತರವೇ ಆರಂಭಿಸಬೇಕೆಂದೂ ತಿಳಿಸಿದರು. ನನಗೆ ಯಾಕಾದರೂ ಮನೆಯ ವಿಚಾರವನ್ನು ಸ್ವಾಮಿಗಳಲ್ಲಿ ಪ್ರಸ್ತಾಪಿಸಿದೆನೋ ಅನ್ನಿಸಿತು. ಕಿರಿಯ ಸ್ವಾಮಿಗಳಾದ ಶ್ರೀ ಚಂದ್ರಶೇಖರ ನಾಥರಲ್ಲಿ ನನ್ನ ಅಳಲು ತೋಡಿಕೊಂಡೆ. ಅವರೂ ಗುರುಗಳು ಹೇಳಿದಂತೆ ಮಾಡುವುದೇ ಸರಿ ಎಂದರು. ಬೇರೆ ದಾರಿ ಕಾಣವೆ ನಿರಾಶೆಯಿಂದಲೇ ಮಂಡ್ಯಕ್ಕೆ ಹಿಂತಿರುಗಿದೆ.

ಕೆಲವು ದಿನಗಳ ನಂತರ ಮತ್ತೆ ಶ್ರೀ ಆದಿಚುಂಚನ ಗಿರಿಗೆ ಹೋಗಿ ಸ್ವಾಮಿಗಳನ್ನು ಕಂಡೆ. ಅವರು "ಹಿಂದಿನ ಜನ್ಮದಲ್ಲಿ ಯಾರು ಮನೆ ಕಟ್ಟಿಸುವುದನ್ನು ಕೆಡಿಸಿದ್ದೆಯೋ ಈ ಜನ್ಮದಲ್ಲಿ ನಿನಗೆ ಮನೆ ಕಟ್ಟುವ ಯೋಗವಿಲ್ಲ" ಎಂದು ಬಿಟ್ಟರು. ಭಕ್ತನಾಥರ ರೀತಿಯೇ ಹಾಗೆ. ಅರಿಯದವರಿಗೆ ಏನಪ್ಪಾ ಸನ್ಯಾಸಿಯಾಗಿ ಇವರು ಇಷ್ಟು ಒರಟಾಗಿ ಮಾತನಾಡುತ್ತಾರಲ್ಲ ಅನಿಸುತ್ತಿತ್ತು, ಅವರ ನೇರವೂ ಗಡಸೂ ಆದ ಮಾತುಗಳು. ನಾನು ಮತ್ತೆ ನಿರಾಶನಾಗಿ ಹಿಂತಿರುಗಿದೆ. ಆದರೆ ಸ್ವಾಮಿಗಳು ಒಪ್ಪಲಿ ಬಿಡಲಿ ಮನೆ ಕಟ್ಟುವುದೆಂದು ನಿರ್ಧರಿಸಿದೆ. ಸ್ವಾಮಿಗಳು ಮನೆ ಕಟ್ಟುವುದು ಬೇಡ ಎಂಬ ಸಂಗತಿಯನ್ನು ನನ್ನ ಪತ್ನಿಗೆ ತಿಳಿಸಲಿಲ್ಲ. ಕಾರಣ ಆಕೆ ಗುರುಗಳು ಬೇಡ ಎಂದ ಮೇಲೆ ಮನೆಯೇ ಬೇಡ ಎಂದು ಬಿಟ್ಟರೆ ? ನಾನು ಈ ಯೋಚನೆಯಲ್ಲಿ ನರಳುತ್ತಿದ್ದಂತೆಯೇ ಮುಂದಿನ ಬುಧವಾರ ಅನಿರೀಕ್ಷಿತವಾಗಿ ಸ್ವಾಮಿ ಚಂದ್ರಶೇಖರನಾಥರು ದಯಮಾಡಿಸಿದರು. ನಾನು ಮನೆ ಕಟ್ಟಿಸಬಹುದೆಂದೂ ಆದಕ್ಕೆ ದೈವಸಹಾಯವಿದೆಯೆಂದೂ ಭಕ್ತನಾಥರು ವಿಭೂತಿ ಕಳಿಸಿದ್ದಾರೆಂದೂ ಹೇಳಿದರು. ನನ್ನ ಪತ್ನಿಗೆ ಇನ್ನಿಲ್ಲದ ಆನಂದವಾಯಿತು. ಆಕೆ ನನ್ನ ಅನುಮತಿಗೂ ಕಾಯದೆ ಸಿಹಿ ಮತ್ತು ಹಣ್ಣು ಕಾಯಿ ತರಿಸಿ ಪೂಜೆಗೆ ಏರ್ಪಾಡು ಮಾಡಿಯೇ ಬಿಟ್ಟಳು. ಹಸುವಿನ ಹಿಂದೆ ಬಾಲ ಎಂಬಂತೆ ಸ್ವಾಮಿಗಳ ಹಿಂದೆ ಮಕ್ಕಳನ್ನು ಕಟ್ಟಿಕೊಂಡು ಗುದ್ದಲಿ ಪೂಜೆಗಾಗಿ ನಮ್ಮ ನಿವೇಶನಕ್ಕೆ ಹೊರಟೆವು.



## ಅಧ್ಯಾಯ–ನಾಲ್ಕು

೧

1936ನೆಯ ವರ್ಷದ ಕೋಟೆ ಬೆಟ್ಟದ ಜಾತ್ರೆಗೆ ತಗಡೂರು ರಾಮಚಂದ್ರ ರಾಯರು ಮತ್ತು ಎಂ. ಎನ್. ಜೋಯಿಸರು ಬಂದಿದ್ದರು. ಆಗ ಭಾಷಣ ಮಾಡು ವವರಿಗೆ ವೇದಿಕೆಗಳಾಗಲಿ, ಧ್ವನಿವರ್ಧಕಗಳಾಗಲಿ ಇರಲಿಲ್ಲ. ಆ ಇಬ್ಬರು ಮಹನೀ ಯರು ಎತ್ತರವಾದ ಬಂಡೆಯೊಂದರ ಮೇಲೆ ನಿಂತು ಭಾಷಣ ಮಾಡಿದರು. "ಬ್ರಿಟಿಷರು ಇಂಡಿಯಾ ದೇಶವನ್ನು ತಮ್ಮ ಊಳಿಗಮಾನ್ಯವನ್ನಾಗಿ ಮಾಡಿಕೊಂಡಿ ದ್ದಾರೆ. ಈ ದೇಶವನ್ನು ಅವರಿಂದ ಮುಕ್ತಗೊಳಿಸಬೇಕಾದರೆ ನೀವೆಲ್ಲರೂ ಒಂದಾಗಿ ನಿಲ್ಲಬೇಕು. ಕ್ರಿಶ್ಚಿಯನ್ ಪಾದ್ರಿಗಳು ಸಂತೆ ಸುತೆಗಳಲ್ಲಿ ನಮ್ಮ ಜನರಿಗೆ ದುಡ್ಡಿನ ಆಸೆ ತೋರಿಸಿ ಜಾತಿ ಕೆಡಿಸಿ ತಮ್ಮ ಜಾತಿಗೆ ಸೇರಿಸಿಕೊಳ್ಳುತ್ತಿದ್ದಾರೆ. ಅಂತಹವರು ನಿಮ್ಮಲ್ಲಿಗೆ ಬಂದರೆ ಅವರಿಗೆ ಒದ್ದು ಓಡಿಸಿ" ಮುಂತಾಗಿ ಸ್ವಾತಂತ್ರ್ಯ, ಧರ್ಮಗಳನ್ನು ಕುರಿತು ಜನರಿಗೆ ತಿಳಿಯಹೇಳಿದರು. ತಗಡೂರರು ಹಸಿರು ಜುಬ್ಬ ಬಿಳಿಪಂಚೆ ತೊಟ್ಟು ಕೇಸರಿ ಬಣ್ಣದ ಟೋಪಿ ಹಾಕಿದ್ದರು. ಹೆಗಲಮೇಲೊಂದು ಕಂಬಳಿ. ಆ ಕಂಬಳಿಯ ಮೇಲೆ ಕೆಲವು ಘೋಷಣೆಗಳನ್ನು ಬರೆಯಲಾಗಿತ್ತು. ಅವುಗಳಲ್ಲಿ ಕೆಲವು "ಶ್ರೀಮಂತರು ಹಣದ ಒಡೆಯರಲ್ಲ ಅದರ ಧರ್ಮದರ್ಶಿಗಳು. ಎಲ್ಲರೂ ಈಶ್ವರನ ಮಕ್ಕಳು, ಮೇಲು ಕೀಳೆಂಬುದಿಲ್ಲ." ಒಟ್ಟಿನಲ್ಲಿ ಅವರ ವೇಷಭೂಷಣ, ಮಾತುಕತೆಗಳೆಲ್ಲವೂ ಆಕರ್ಷಕ ವಾಗಿದ್ದು ಯಾರನ್ನಾದರು ಆಕರ್ಷಿಸುವಂತಿದ್ದವು. ನಾನು ಸಹಜವಾಗಿಯೇ ಅವರತ್ತ ಆಕರ್ಶಿತನಾದೆ.

ಆಮೇಲೆ ಎಂ. ಎನ್. ಜೋಯಿಸರ ಭಾಷಣ ಆರಂಭವಾಯಿತು. ಅವರು ಎಷ್ಟು ಧ್ವನಿ ಎತ್ತರಿಸಿ ಮಾತನಾಡಿದರೆಂದರೆ ನಮ್ಮೂರ ಪ್ರಹ್ಲಾದ ಚರಿತೆ ನಾಟಕದಲ್ಲಿ ಹಿರಣ್ಯಕಶ್ಯಪ ಮಾತನಾಡುವಂತಿತ್ತು. ಆ ಧ್ವನಿ ಇಡೀ ಜಾತ್ರೆಯಲ್ಲಿಯೇ ಅನುರಣನ ಗೊಂಡಿತು. ಸ್ವಾತಂತ್ರ್ಯದ ಮಹತ್ವ, ಅದಕ್ಕಾಗಿ ನಡೆಯುತ್ತಿರುವ ಗಾಂಧಿ ಚಳುವಳಿಯ ವಿಚಾರಗಳನ್ನೇ ಅವರು ಹೆಚ್ಚಾಗಿ ಪ್ರಸ್ತಾಪಿಸಿದರು. ಅವರ ಮಾತುಗಳನ್ನು ಜನರು ಕಿವಿಗೊಟ್ಟು ಕೇಳಿದರು. ಇದರಿಂದ ಪ್ರಭಾವಿತನಾದ ನಾನೂ ಅವರನ್ನು ಕುರಿತು "ಮೈಸೂರಿಗೆ ಬಂದು ಗಾಂಧೀ ಚಳುವಳಿಗೆ ಸೇರುತ್ತೇನೆ" ಎಂದೆ. ಅದಕ್ಕವರು "ಹಾಗೇ ಮಾಡು. ನಿನ್ನಂತಹ ಅನೇಕ ಹುಡುಗರು ಇದರಲ್ಲಿ ಸೇರಿದ್ದಾರೆ" ಎಂದರು. ನಾನು ಮತ್ತೆ ಮೈಸೂರಿಗೆ ಹೋದೆ ಅತ್ತೆಯ ಮನೆಯ ಕಡೆ ಸುಳಿಯಲಿಲ್ಲ. ಕಂಡರೆ ಎಲ್ಲಿ ಮತ್ತೆ ಊರಿಗೆ ಕಳಿಸಿಬಿಡುವರೋ ಎಂಬ ಹೆದರಿಕೆ. ನಾನು ಮೈಸೂರಿಗೆ ಹೋದ

ಸಂಜೆ ಮರಿಮಲ್ಲಪ್ಪ ಶಾಲೆಯ ಆವರಣದಲ್ಲಿ ವಿದೇಶಿ ಬಟ್ಟೆ ಸುಡುವ ಚಳುವಳಿಯಿತ್ತು. ಬೊಂಬಾಯಿನಿಂದ ಕಾಂಗ್ರೆಸ್ ಮುಖಂಡರೊಬ್ಬರು ಬಂದಿದ್ದರು. ಈ ಕಾರ್ಯಕ್ರಮದ ಚೀಟಿಗಳನ್ನು ಇಬ್ಬರು ಹುಡುಗರು ಕಿರುಚುತ್ತ ಅತ್ಯಂತ ಹೆಮ್ಮೆ ಮತ್ತು ಸಂತೋಷ ದಿಂದ ಹಂಚುತ್ತಿದ್ದರು. ನಾನೂ ಅವರಿಬ್ಬರೊಂದಿಗೆ ಸೇರಿ ಕಿರುಚುತ್ತ ನೆಗೆದಾಡುತ್ತ ಚೀಟಿ ಹಂಚುವವರೊಂದಿಗೆ ಬೆರೆತೆ. ಸಂಜೆ ವಿದೇಶಿ ಬಟ್ಟೆ ಸುಡುವ ಕಾರ್ಯಕ್ರಮ ಅತ್ಯು ತ್ಸಾಹದಿಂದ ನಡೆಯಿತು. ಅನೇಕರು ತಮ್ಮ ಅಮೂಲ್ಯವಾದ ಕೋಟು ಷರಟು ಪೇಟ ಗಳನ್ನೆ ಬೆಂಕಿಗೆ ಹಾಕಿದರು. ನಾನೂ ಆ ಉತ್ಸಾಹದಲ್ಲಿ ಒಂದು ಅಂಗಿ ಮತ್ತು ಚೌಕವನ್ನು ಬೆಂಕಿಗೆ ಬಿಸಾಡಿದೆ. ಚೀಟಿಹಂಚುತ್ತಿದ್ದ ಹುಡುಗರು ನನ್ನ ಉತ್ಸಾಹ ಗಮನಿಸಿ ನಾಳೆ ಕಾಲೇಜು ಹತ್ತಿರ ಖಾದಿಮಾರಾಟ ಮಾಡೋಣ ಬರುತ್ತೀಯ ಎಂದರು. ನನಗೆ ಖಾದಿ ಎಂದರೇನೆಂದೇ ಆಗ ತಿಳಿದಿರಲಿಲ್ಲ. ಅವರನ್ನೇ ಕೇಳಿದೆ. "ನೀನು ಬಾ ಅಲ್ಲಿಯೇ ಗೊತ್ತಾ ಗುತ್ತದೆ ಎಂದರು. ನಾವು ಹೊರಡುವ ವೇಳೆಯಲ್ಲಿ ಎಂ. ಎನ್. ಜೋಯಿಸರನ್ನು ಕಂಡೆ. ಅವರನ್ನು ಮಾತನಾಡಿಸಿ ಅವರ ಮನೆ ವಿಳಾಸ ತಿಳಿಯಲು ಯತ್ನಿಸಿದೆ. ಪೋಲೀ ಸರ ನೂಕಾಟದಿಂದ ಅದು ಸಾಧ್ಯವಾಗಲಿಲ್ಲ." ಬಾರಯ್ಯ ನಾವು ಅವರ ಮನೆಗೆ ಕರೆದೊಯ್ಯುತ್ತೇವೆಂದು ಆ ಮಿತ್ರರು ನನ್ನನ್ನು ತಮ್ಮ ಕೊಠಡಿಗೆ ಕರೆದುಕೊಂಡು ಹೋದರು. ಅವರ ಕೊಠಡಿಯ ಮುಂದೆ "ಜನಜಾಗೃತಿ ಸಂಘ" ಎಂಬ ಬರಹದ ಹಲಗೆಯಿತ್ತು. ಕೊಠಡಿಯಲ್ಲಿ ಮತ್ತೊಬ್ಬರಿದ್ದರು. ನನ್ನನ್ನು ಚೀಟಿ ಹಂಚಲು ಸೇರಿಸಿ ಕೊಂಡವರು ಟಿ. ಎಸ್. ಸುಬ್ಬಣ್ಣ, ರಾಜಶೇಖರ್ ಎಂಬುವರು ಅವರೇ ಕೊಠಡಿಯಲ್ಲಿ ಇದ್ದವರು. ಅರಕೆರೆಯ ಯು. ಕೆಂಚಪ್ಪ ಮತ್ತು ಹಳ್ಳದಕೇರಿಯ ಚಿಕ್ಕಣ್ಣನವರ ಮಗ ಶಂಭು ಎಲ್ಲರ ಪರಿಚಯವೂ ಆಯಿತು. ಅವರು ನನ್ನ ಊರು ಕೇರಿ ಕೇಳಿ ತಿಳಿದುಕೊಂಡು "ನಿನ್ನ ಬಟ್ಟೆ ಬರೆ ಎಲ್ಲಿ" ಎಂದರು. 'ಬೆಂಕಿಗೆ ಹಾಕಿದೆನಲ್ಲ' ಎಂದೆ, 'ಆಯಿತು ಬಾ,' ಎಂದವರೆ ನನ್ನನ್ನುಬಸ್‌ನಿಲ್ದಾಣದ ಹತ್ತಿರ ಕರೆದುಕೊಂಡುಹೋದರು. ಅಲ್ಲಿ ಎಂ.ಆರ್.ಸಿ. ಬಸಪ್ಪ ಎಂಬ ಕಾಂಗ್ರೆಸ್‌ಗೆ ಸೇರಿದ ಬೀಡಿ ಅಂಗಡಿ ಮಾಲೀಕ ರಿದ್ದರು. ಅವರಿಗೆ ಮಿತ್ರರು ನನ್ನ ಬಗ್ಗೆ ಹೇಳಿದರು. ಅವರು ಎರಡು ಖಾದಿ ಅಂಗಿ, ಪೈಜಾಮ ಮತ್ತು ಹೊದಿಯುವ ವಸ್ತ್ರ ಕೊಡುವಂತೆ ಖಾದಿ ಅಂಗಡಿಗೆ ಚೀಟಿ ಕೊಟ್ಟರು. ನಾವು ಅದನ್ನು ತೋರಿಸಿ ಬಟ್ಟೆ ಪಡೆದೆವು. ಅಂದಿನಿಂದ ಇಲ್ಲಿಯವರೆಗೆ ನಾನು ಖಾದೀ ಧಾರಿಯಾಗಿಯೇ ಉಳಿದಿದ್ದೇನೆ.

ಆಮೇಲೆ ಎಂ. ಎನ್. ಜೋಯಿಸರ ಮನೆಗೆ ಹೋಗಿ ಅವರನ್ನು ಪರಿಚಯ ಮಾಡಿ ಕೊಂಡೆ. ಅವರ ಮನೆಯಲ್ಲಿ ಸೂರ್ಯನಾರಾಯಣ ಪಂಡಿತರು. ಸುಬ್ಬರಾವ್, ಉಪಾಧ್ಯಾಯ, ವಿಷಕಂಠರಾವ್ ಮುಂತಾದವರ ಪರಿಚಯವಾಯಿತು. ಸಾಮಾನ್ಯ ವಾಗಿ ಜೋಯಿಸರ ಮನೆಯಲ್ಲಿ ಊಟ ಹಾಕುತ್ತಿದ್ದರು. ಉಳಿದಂತೆ ಎಂ. ಆರ್. ಸಿ. ಬಸಪ್ಪನವರು ಚೀಟಿ ಕೊಡುತ್ತಿದ್ದ ಹೋಟೇಲಿನಲ್ಲಿ ಊಟವಾಗುತ್ತಿತ್ತು. ಆಗ

ಪ್ರಮುಖವಾಗಿದ್ದುದು ವಿದೇಶಿ ವಸ್ತ್ರ ತಿರಸ್ಕಾರ ಚಳುವಳಿ, ಇದರೊಂದಿಗೆ ಕ್ರೈಸ್ತ ಪಾದ್ರಿಗಳ ಮತಾಂತರ ಕಾರ್ಯ ತಡೆಯುವುದು, ಹೊಲೆಯರು ಸತ್ತದನದ ಮಾಂಸ ತಿನ್ನುವುದು, ಹೆಂಡ ಕುಡಿಯುವುದನ್ನು ಬಿಡಿಸಲು ಅವರಿಗೆ ತಿಳಿಯ ಹೇಳುವುದು. ಇವೆಲ್ಲ ಸ್ವಾತಂತ್ರ್ಯ ಸಂಗ್ರಾಮದ ಅಂಗವೇ ಆಗಿದ್ದವು. ಹರಿಜನೋದ್ಧಾರ ಚಳುವಳಿಗೆ ತಗಡೂರು ರಾಮಚಂದ್ರರಾಯರು, ಶೇಷಾದ್ರಿಯವರು. ಖಾದಿ ಪ್ರಚಾರ ಚಳುವಳಿಗೆ ಲಕ್ಷ್ಮೀನಾರಾಯಣರು, ಗಾಂಧೀಚಳುವಳಿಗೆ ಗೋಪಾಲಸ್ವಾಮಿ ಅಯ್ಯಂಗಾರ್ ಹೀಗೆ ಒಂದೊಂದು ಚಳುವಳಿಗೂ ಒಬ್ಬೊಬ್ಬರು ಮುಖಂಡರಿದ್ದರು.

ಜನ ಜಾಗೃತಿ ಸಂಘದ ನಾವು ನಾಲ್ಕೈದು ಮಂದಿ ಸದಸ್ಯರ ಬಗ್ಗೆ ಪೋಲೀಸರು ತಲೆ ತಿನ್ನುತ್ತಿದ್ದರು. ಬೊಂಬಾಯಿನಿಂದ ಮಿರಜ್‌ಕರ್ ಎಂಬ ಕ್ರಾಂತಿಕಾರಿ ಗುಂಪಿನ ಕಾರ್ಯಕರ್ತನೊಬ್ಬ ಮೈಸೂರಿಗೆ ಬಂದಿದ್ದನಂತೆ. ಅವನು ಎಲ್ಲಿದ್ದಾನೆಂಬುದು ಪೋಲೀಸರಿಗೆ ತಿಳಿಯದು. ಆದುದರಿಂದ ಆತನ ಸುಳಿವಿನ ಬಗ್ಗೆ ನಮ್ಮನ್ನು ಪೀಡಿಸುತ್ತಿದ್ದರು. ಒಂದು ರಾತ್ರಿ ಒಬ್ಬ ಪೋಲೀಸ್ ಇನ್ಸ್‌ಪೆಕ್ಟರ್ ನನ್ನನ್ನು ಮಧುವನದ ಹತ್ತಿರ ಕರೆದುಕೊಂಡು ಹೋಗಿ ಮಿರಜ್‌ಕರ್ ಎಲ್ಲಿದ್ದಾನೆಂಬ ಬಗ್ಗೆ ತಿಳಿಸಲು ಹೇಳಿ ಬಹಳ ಹಿಂಸೆ ಕೊಟ್ಟ. ನನ್ನ ಎಡದ ಭುಜಕ್ಕೆ ದಬ್ಬಳದಿಂದ ಚುಚ್ಚಿದರು, ಆ ಗಾಯ ವಾಸಿಯಾಗಲು ನಾಲ್ಕಾರು ತಿಂಗಳೇ ಹಿಡಿಯಿತು. ವಾಸ್ತವವಾಗಿ ಮಿರಜ್‌ಕರ್ ಬಗ್ಗೆ ನನಗೇನೂ ಗೊತ್ತಿರಲಿಲ್ಲ. ಈ ಪೋಲೀಸು ಹಿಂಸೆಯನಂತರ ನನಗೆ ಆತನ ವಿಚಾರ ತಿಳಿಯಿತು. ಆತನು "ಗಾಂಧಿ ಹೇಳುವಂತೆ ನಾವು ಬರಿಕೈಲಿ ಉಪವಾಸ ಮಾಡಿದರೆ ಇಂಗ್ಲಿಷರು ಹೆದರಿ ಓಡಿ ಹೋಗುವುದಿಲ್ಲ. ಅವರು ಹೆದರುವುದು ಏನಿದ್ದರೂ ಬಾಂಬುಗಳಿಗೆ, ರಿವಾಲ್ವರುಗಳಿಗೆ" ಎಂದು ಹೇಳುತ್ತಿದ್ದ. ಅಷ್ಟೇ ಅಲ್ಲ ಮಣ್ಣಿನ ಕುಡಿಕೆಗಳಲ್ಲಿ ಬಾಂಬ್ ತಯಾರಿಸುವುದನ್ನು ಆತ ನಮಗೆ ಕಲಿಸಿದ. ಆದರೆ ತಗಡೂರರು ಮತ್ತು ಜೋಯಿಸರು ಹಾಗೆ ಮಾಡಬಾರದೆಂದು ತಡೆದರು. ನನಗೆ ಆತನ ವಿಚಾರ ತಿಳಿಯದೆಂದರೂ ಅವರು ನನ್ನನ್ನು ಬಿಡಲಿಲ್ಲ. ನಜರಬಾದು ಪೊಲೀಸ್ ಠಾಣೆಯಲ್ಲಿ ಒಂದು ವಾರ ಕೂಡಿ ಹಾಕಿದರು. ಊಟವೇನೋ ಚೆನ್ನಾಗಿ ಹಾಕಿದರು, ಆದರೆ ರಕ್ತದಿಂದ ತೊಯ್ದ ಬಟ್ಟೆಗಳು ಅಸಹ್ಯ ಹುಟ್ಟಿಸುತ್ತಿದ್ದವು. ಒಂದು ದಿನ ಸಬ್‌ಇನ್ಸ್‌ಪೆಕ್ಟರೊಬ್ಬರು ಬಂದರು. ಅವರು ನಾಗಮಂಗಲ ತಾಲ್ಲೂಕು ಬುರಡ ಗುಂಟೆಯವರಂತೆ. ಅವರ ಹೆಸರು ಸಿದ್ದಯ್ಯ ಎಂದಿದ್ದಂತೆ ನೆನಪು. ಅವರು ನನ್ನನ್ನು ಅಲ್ಲಿ ಕಂಡು "ಈತ ಹಳ್ಳಿ ಹುಡುಗ ಇವನನ್ನೇಕೆ ಇಲ್ಲಿ ಕೂರಿಸಿದ್ದೀರಿ" ಎಂದು ಹೇಳಿ ಬಿಡಿಸಿದರು. ಜನ ಜಾಗೃತಿ ಸಂಘ ತಲುಪುವ ಹೊತ್ತಿಗೆ ನಾನು ಕಾಣೆಯಾಗಿರುವ ಬಗ್ಗೆ ಸಮಾಲೋಚನೆ ನಡೆದಿತ್ತು. ನನ್ನನ್ನು ಕಂಡ ಕೂಡಲೆ ಅವರೆಲ್ಲರಿಗೂ ಸಮಾಧಾನ ವಾಯಿತು. ಅಲ್ಲಿ ಖಾದಿಧಾರಿಯೊಬ್ಬರು ಜನಾರ್ಧನನಾಯ್ಡು ಎಂಬುವರು ನನಗೆ ಹೊಸ ಒಂದು ಜೊತೆ ಬಟ್ಟೆ ತರಿಸಿಕೊಟ್ಟರು.

ಆ ದಿನ ಸಾಯಂಕಾಲ ಟೌನ್‌ಹಾಲ್ ಹತ್ತಿರ ಏರ್ಪಾಡಾಗಿದ್ದ ಪರದೇಶಿ ವಸ್ತ್ರ ದಹನ ಕಾರ್ಯಕ್ರಮವನ್ನು ರಕ್ತಸಿಕ್ತವಾಗಿದ್ದ ಖಾದಿಬಟ್ಟೆಗಳನ್ನು ಬೆಂಕಿಗೆ ಹಾಕುವುದರ ಮೂಲಕ ಆರಂಭಿಸಿದೆವು. ಬೊಂಬಾಯಿಯಿಂದ ಬಂದಿದ್ದ ಮಿರಜ್‌ಕರ್ ದಿನಕ್ಕೊಂದು ವೇಷ ಹಾಕಿ ಪೋಲೀಸರ ಕಣ್ಣಿಗೆ ಮಣ್ಣೆರಚುತ್ತಿದ್ದರು. ಪಾದ್ರಿ ಸಾಡೆ ಸಾಹೇಬ ತನ್ನ ಚಟುವಟಿಕೆಗಳನ್ನು ತಡೆಯುವರೆಂದು ನಮ್ಮ ಮೇಲೆ ಪೋಲೀಸರಿಗೆ ದೂರು ಕೊಟ್ಟಿದ್ದ. ಅವನು ಯಾವ ಸಂತೆಗೆ ಮತಪ್ರಚಾರಕ್ಕೆ ಹೋಗುತ್ತಿದ್ದನೋ ಅಲ್ಲಿ ನಾವು ಹಾಜರಿರುತ್ತಿದ್ದೆವು. ನಮ್ಮನ್ನು ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ಸ್ವಲ್ಪಹೊತ್ತು ಕೂರಿಸಿದ್ದು ಅನಂತರ ಬಿಡುಗಡೆ ಮಾಡುತ್ತಿದ್ದರು. ಪೋಲೀಸರಿಗೂ ಪಾದ್ರಿಯ ಮತಾಂತರಕಾರ್ಯ ಹಿಡಿಸುತ್ತಿರಲಿಲ್ಲ. ಒಮ್ಮೆ ಕುದೇರುಸಂತೆಯಲ್ಲಿ ಪಾದ್ರಿ ವ್ಯಾನೊಂದರ ಮೇಲೆ ನಿಂತು ಕ್ರಿಸ್ತನ ಭಾವಚಿತ್ರವನ್ನು ಜನರಿಗೆ ತೋರಿಸುತ್ತ ಕ್ರಿಸ್ತನ ಮಹಿಮೆ ಹೊಗಳುತ್ತ ನಮ್ಮ ದೇವರುಗಳನ್ನು ಬಯ್ಯುತ್ತಿದ್ದ. ನಾವು ನಾಲ್ಕೈದು ಜನ ವ್ಯಾನ್‌ಮೇಲೆ ಹತ್ತಿ ಕ್ರಿಸ್ತನಚಿತ್ರ ಕಿತ್ತು ಬಿಸಾಡಿದೆವು. ಪೋಲೀಸರು ನಮ್ಮನ್ನು ಕರೆದೊಯ್ಯಲು ಬಂದಾಗ "ಇವನು ನಮ್ಮ ಹಿಂದೂ ಧರ್ಮವನ್ನು ನಿಂದಿಸುತ್ತಿದ್ದಾನೆ. ಅದನ್ನು ತಡೆಯಲು ನಮಗೆ ಹಕ್ಕಿದೆಯೆಂದು" ವಾದಿಸಲಾರಂಭಿಸಿದೆವು. ಜನರೂ ನಮ್ಮ ಕಡೆ ಒಲಿಯಲಾರಂಭಿಸಿದರು. ಇದನ್ನು ತಿಳಿದ ಪೋಲೀಸರು ಪಾದ್ರಿಯನ್ನು ಸಂತೆಯಿಂದ ಹೊರಹಾಕಿದರು.

ಹರಿಜನೋದ್ಧಾರ, ಖಾದೀ ಪ್ರಚಾರ, ಕಾಂಗ್ರೆಸ್ ಪ್ರಚಾರ ಇವು ನಮ್ಮ ಕೆಲಸ. ಪೋಲೀಸರಿಗೆ ನಮ್ಮ ವಿಚಾರದಲ್ಲಿ ಹೆದರಿಕೆ. ಮಿರಜ್‌ಕರ್ ನಮಗೆಲ್ಲಾ ಬಾಂಬ್ ತಯಾರಿಸುವುದನ್ನೂ, ಉಪಯೋಗಿಸುವುದನ್ನೂ ಕಲಿಸಿದ್ದಾನೆಂದು ಅವರು ನಂಬಿದ್ದರು. ನಮ್ಮನ್ನು ಮೊದಲಿನಂತೆ ಸಣ್ಣಪುಟ್ಟ ಕಾರಣಗಳಿಗೆಲ್ಲ ಪೋಲೀಸ್‌ಸ್ಟೇಷನ್ನಿಗೆ ಕರೆದೊಯ್ಯುವುದನ್ನು ಬಿಟ್ಟರು. ನಮಗೆ ಪೋಲೀಸರ ಕಾಟ ತಪ್ಪಿತು. ನಾವು ಮಿರಜ್‌ಕರನಿಗೆ ಕೃತಜ್ಞತೆ ಸಲ್ಲಿಸಿದೆವು. ಪಂಡಿತ ಜವಹರಲಾಲ್ ನೆಹರೂ ಅವರು ತಮ್ಮ ವಿದೇಶಪ್ರವಾಸ ಮುಗಿಸಿ ಭಾರತಕ್ಕೆ ಹಿಂದಿರುಗಿದರು. ಸ್ವಾತಂತ್ರ್ಯ ಹೋರಾಟದ ಸಲುವಾಗಿ "ಆಲ್ ಇಂಡಿಯಾ ಸಿವಿಲ್ ಲಿಬರ್ಟೀಸ್ ಯೂನಿಯನ್" ಸ್ಥಾಪಿಸಿದರು. ಅದರ ಶಾಖೆಗಳು ದೇಶಾದ್ಯಂತ ಸ್ಥಾಪಿತವಾಗಿದ್ದುವು. ಮೈಸೂರು ಸಂಸ್ಥಾನದಲ್ಲಿ ಇದರ ಅಂಗಸಂಸ್ಥೆಗಳಿದ್ದುವು. ನಾವು ನಮ್ಮ ಜನಜಾಗೃತಿ ಸಂಘದ ಮತಿಯಿಂದಲೇ ಕಾಂಗ್ರೆಸ್‌ಪ್ರಚಾರದ ಕೆಲಸವನ್ನು ಮಾಡುತ್ತಿದ್ದೆವು.

1936 ಕ್ಕೆ ಮುಂಚೆಯೇ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಧಾರವಾಡವನ್ನು ಕೇಂದ್ರವಾಗಿ ಮಾಡಿಕೊಂಡು ತನ್ನ ಕಾರ್ಯ ಆರಂಭಿಸಿತ್ತು. ಈ ಸಮಿತಿಗೆ ಸದಸ್ಯರನ್ನು ಮಾಡಿಸಲು ನಾವು ತುಂಬಾ ದುಡಿಯುತ್ತಿದ್ದೆವು. ಆಗ ಬೊಂಬಾಯಿ ಸಂಸ್ಥಾನಕ್ಕೆ ಸೇರಿದ ಸಿರಸಿ ಸಿದ್ದಾಪುರಗಳಲ್ಲಿ ನಡೆಯುತ್ತಿದ್ದ ಕರನಿರಾಕರಣ ಚಳುವಳಿ

5

ಗಳಲ್ಲಿ ಮೈಸೂರು ಕಡೆಯ ಕೆಲವು ಮುಡುಗರು ಭಾಗವಹಿಸಿ ಕಾರಾಗೃಹವಾಸವನ್ನನು ಭವಿಸುತ್ತಿದ್ದರು. ಕನಕಪುರದ ಸರ್ದಾರ್ ವೆಂಕಟರಾಮಯ್ಯನವರು ಅಲ್ಲಿನ ಕರನಿರಾಕರಣ ಚಳುವಳಿಯ ನೇತಾರರಾಗಿದ್ದು ಅವರ ಪತ್ನಿ ಭಾಗೀರಥಮ್ಮನವರು ಆ ಚಳುವಳಿಯಲ್ಲಿ ಭಾಗಿಯಾಗಿದ್ದರು. ಕರನಿರಾಕರಣ ಚಳುವಳಿಯಲ್ಲಿ ಭಾಗವಹಿಸಿ ಕಾರಾಗೃಹ ಶಿಕ್ಷೆಗೆ ಗುರಿಯಾದ ಸಂಸಾರದ ಮಕ್ಕಳಿಗೆ ಪೋಷಣಾಗೃಹವೊಂದನ್ನು ಶಿರಸಿಯಲ್ಲಿ ಆರಂಭಿಸಲಾಗಿತ್ತು. ಆ ಪೋಷಣಾಗೃಹಕ್ಕೆ ಬೇಕಾಗುವ ವಸ್ತುಗಳನ್ನು ಸಂಗ್ರಹಿಸುವುದು ಜನಜಾಗೃತಿ ಸಂಘಕ್ಕೆ ಸೇರಿತ್ತು. ನಗರದ ಅನೇಕ ಕಡೆ ಇದಕ್ಕಾಗಿ ಬಹಿರಂಗ ಭಾಷಣ ಏರ್ಪಡಿಸುತ್ತಿದ್ದೆವು. ಎಂ. ಎನ್. ಜೋಯಿಸ್, ಸೂರ್ಯ ನಾರಾಯಣ ಪಂಡಿತ್, ಎಚ್. ಎಸ್. ದೊರೆಸ್ವಾಮಿ ಈ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದರು. ಕೊನೆಯಲ್ಲಿ ನನ್ನ ಭಾಷಣವೂ ಇರುತ್ತಿತ್ತು. ಪುಟ್ಟಪ್ಪನವರ ದೇಶಭಕ್ತಿ ಗೀತೆಗಳನ್ನು ಉದಾಹರಿಸಿ ಮಾತನಾಡುತ್ತಿದ್ದೆ. ಆ ಗೀತೆಗಳು ಜನರಲ್ಲಿ ಸ್ವಾತಂತ್ರ್ಯದ ದೇಶಭಕ್ತಿಯ ಕಿಚ್ಚೆಬ್ಬಿಸುತ್ತಿದ್ದವು. ಇದರಿಂದ ನಮಗೆ ಹೇರಳವಾಗಿ ವಂತಿಗೆ ದೊರೆಯುತ್ತಿದ್ದುದಲ್ಲದೆ ಅನೇಕರು ಮನೆಗೆ ಕರೆದು ಊಟ ಹಾಕುತ್ತಿದ್ದರು. ಹೀಗೆ ನಮ್ಮ ಅನ್ನಸಮಸ್ಯೆ ಸುಲಭವಾಗಿ ಪರಿಹಾರವಾಗುತ್ತಿತ್ತು.

ಈ ಸಮಯದಲ್ಲಿ ಕೆ. ಟಿ. ಭಾಷ್ಯಂ ಮತ್ತು ಗೌರಿಬಿದನೂರಿನ ತಿಮ್ಮಾರೆಡ್ಡಿ ಯವರನ್ನು ಸರ್ಕಾರದವರು ದಸ್ತಗಿರಿಮಾಡಿ ಕ್ರಿಮಿನಲ್ ಕಾನೂನಿನ ಪ್ರಕಾರ ಶಿಕ್ಷೆವಿಧಿಸಿದರು. ಈ ಪ್ರಕರಣ ದೇಶದಲ್ಲಿಯೇ ಕೋಲಾಹಲವನ್ನುಂಟು ಮಾಡಿತು. ನಮ್ಮ ಶಂಖು, ಜಾಗಟೆಗಳಿಗೆ ಬಿಡುವಿಲ್ಲದೆ ಕೆಲಸ ಒದಗಿಸಿತು. ಶಂಖು ಜಾಗಟೆ ಎಂದು ಗಾಬರಿಯಾಗಬೇಡಿ. ಆಗ ಈಗಿನಂತೆ ಧ್ವನಿವರ್ಧಕಗಳು ಇರಲಿಲ್ಲ. ಇದ್ದರೂ ಅವುಗಳಿಗೆ ಸರ್ಕಾರ ಅನುಮತಿ ನೀಡುತ್ತಿರಲಿಲ್ಲ. ಆದುದರಿಂದ ನಾವು ಜನಸೇರಲು ಶಂಖು ಜಾಗಟೆಗಳ ಮೊರೆ ಹೊಕ್ಕಿದ್ದೆವು. ಜಾಗಟೆ ಮತ್ತು ಶಂಖುಗಳ ಶಬ್ದಕ್ಕೆ ಬಂದು ನೆರೆಯುತ್ತಿದ್ದ ಜನರಿಗೆ ಎಲ್ಲೆಲ್ಲಿ ಎಷ್ಟೆಷ್ಟು ಹೊತ್ತಿಗೆ ಸಭೆಗಳು ನಡೆಯುತ್ತವೆ ಅಲ್ಲಿನ ಕಾರ್ಯಕ್ರಮಗಳೇನು, ಅಲ್ಲಿ ಯಾರುಯಾರು ಭಾಷಣ ಮಾಡುತ್ತಾರೆ ಇತ್ಯಾದಿ ವಿವರಗಳನ್ನು ನೀಡುತ್ತಿದ್ದೆವು. ಅವರಂತೆ ನಗರದ ಯಾವುದಾದರೂ ಒಂದೆರಡು ಕಡೆ ಬಹಿರಂಗ ಸಭೆಗಳು ನಡೆಯುತ್ತಿದ್ದವು. ನಗರದಿಂದ ಹೊರಗೂ ತಾಲ್ಲೂಕು ಕೇಂದ್ರ ಗಳಲ್ಲಿಯೂ ಸಂತೆಗಳಲ್ಲಿಯೂ ಖಂಡನಾ ಸಭೆಗಳನ್ನು ನಡೆಸುತ್ತಿದ್ದೆವು. ಈ ಸಂದರ್ಭ ದಲ್ಲಿ ಅನೇಕ ನಾಯಕರನ್ನು ದಸ್ತಗಿರಿ ಮಾಡಿ ರಾಜದ್ರೋಹದ ಆಪಾದನೆ ಹೊರಿಸಿ ಜೈಲಿಗೆ ಕಳಿಸುತ್ತಿದ್ದರು. ಸರ್ಕಾರದ ಈ ವಿಧಾನದಿಂದ ಜನ ಇನ್ನೂ ರೊಚ್ಚಿಗೆದ್ದರು.

ಮೈಸೂರಿನ ಟೌನ್‌ಹಾಲ್ ಮೈದಾನದಲ್ಲಿ ಭಾರಿ ಬಹಿರಂಗ ಸಭೆಯೊಂದನ್ನು ಏರ್ಪಡಿಸಲಾಯಿತು. ಆ ಸಭೆಯಲ್ಲಿ ಕೆ. ಟಿ. ಭಾಷ್ಯಂ, ಕಮಲಾದೇವಿ ಚಟ್ಟೋಪಾ ಧ್ಯಾಯ, ಎಚ್. ಕೆ. ವೀರಣ್ಣಗೌಡ ಮುಂತಾದವರು ಭಾಷಣ ಮಾಡುವರೆಂದು

ಪ್ರಚಾರ ಮಾಡಲಾಯಿತು. ಈ ನಾಯಕರುಗಳಲ್ಲಿ ವೀರಣ್ಣಗೌಡರನ್ನುಳಿದು ಮಿಕ್ಕವರು ಭಾಷಣ ಮಾಡ ಕೂಡದೆಂದು ನಿಷೇಧಾಜ್ಞೆ ಜಾರಿ ಮಾಡಿದರು. ರಂಗರಾಮಯ್ಯನವರ ಅಧ್ಯಕ್ಷತೆಯಲ್ಲಿ ವೀರಣ್ಣಗೌಡರು ಗಂಟೆಗಟ್ಟಲೆ ಭಾಷಣ ಮಾಡಿದರು. ಇಡೀ ಟೌನ್‌ಹಾಲ್ ಮೈದಾನ ಜನರಿಂದ ತುಂಬಿತುಳುಕುತ್ತಿತ್ತು. ಪ್ರತಿ ಮಾತಿಗೂ ಕಿವಿಗಡಚಿಕ್ಕುವಂತೆ ಜನರು ಚಪ್ಪಾಳೆ ತಟ್ಟುತ್ತ ಭಾಷಣಕ್ಕೆ ಇಂಬು ಕೊಡುತ್ತಿದ್ದರು. ಆಗ ನಡೆಯಬೇಕಾಗಿದ್ದ ಅಸೆಂಬ್ಲಿ ಚುನಾವಣೆಗೆ ಈ ಬಹಿರಂಗ ಸಭೆ ಬಹಳ ಅನುಕೂಲವಾಯಿತು. ನಾನು ಮತ್ತು ಎಂ. ಎನ್. ಜೋಯಿಸ್ ಆ ಸಭೆಯಲ್ಲಿ ಮಾತನಾಡಿದೆವು. ಅಧ್ಯಕ್ಷತೆ ವಹಿಸಿದ್ದ ರಂಗರಾಮಯ್ಯನವರು ಸರ್ಕಾರದ ಧೋರಣೆಯನ್ನು ಖಂಡಿಸಿ ಮುಂದಿನ ಚುನಾವಣೆಯಲ್ಲಿ ಕಾಂಗ್ರೆಸ್ ಉಮೇದುವಾರರಿಗೇ ಮತನೀಡುವಂತೆ ಜನತೆಯಲ್ಲಿ ಮನವಿ ಮಾಡಿಕೊಂಡರು.

ಆ ತರುಣದಲ್ಲಿ ಪ್ರಜಾಪ್ರತಿನಿಧಿ ಸಭೆಗೆ ನಡೆದ ಚುನಾವಣೆಯಲ್ಲಿ ಸುಮಾರು ನಲವತ್ತು ಮಂದಿ ಕಾಂಗ್ರೆಸ್ ಉಮೇದುವಾರರು ಚುನಾಯಿತರಾದರು. ಈ ಚುನಾವಣೆಯ ಸಮಯದಲ್ಲಿ ಶ್ರೀ ಟಿ.ಎಸ್. ಸುಬ್ಬಣ್ಣನವರ ನಾಯಕತ್ವದಲ್ಲಿ ನಾವು— "ಯುವಕರು ನಡೆಸಿದ ಹೋರಾಟ ಅವಿಸ್ಮರಣೀಯ. ಹಗಲು ರಾತ್ರಿಗಳ ಪರಿಜ್ಞಾನವಿಲ್ಲ. ಊಟ ತಿಂಡಿಗಳ ಬಗ್ಗೆ ಆಸಕ್ತಿ ಇಲ್ಲ. ಹೊತ್ತುಗೊತ್ತಿಲ್ಲದೆ ತಿರುಗಿ ಮತದಾರರನ್ನು ಹುರಿದುಂಬಿಸಿ ಮತಗಟ್ಟೆಗಳಿಗೆ ಕಳಿಸುತ್ತಿದ್ದೆವು. ನಮ್ಮ ಓಡಾಟವನ್ನು ನೋಡುತ್ತಿದ್ದ ಜನರು "ಯಾಕಪ್ಪಾ ಇಷ್ಟೊಂದು ಕಷ್ಟಪಡುತ್ತೀರಿ ಕಾಂಗ್ರೆಸ್‌ಗೇ ನಮ್ಮ ಓಟು. ಬನ್ನಿ ಊಟ ಮಾಡಿ ತಿಂಡಿ ತಿನ್ನಿ" ಎಂದೆಲ್ಲ ಹೇಳುತ್ತಿದ್ದರು. ಯಾವುದೇ ಹೋರಾಟದ ಜಯ ಜನತೆಯ ಅಭಿಮಾನದ ಮೇಲೆ ನಿಂತಿರುತ್ತದೆ ಎಂಬ ಮಾತು ಸತ್ಯ.

1937ರಲ್ಲಿ ಸೇರಿದ್ದ ಪ್ರಜಾಪ್ರತಿನಿಧಿಸಭೆಯಲ್ಲಿ ಕೌನ್ಸಿಲ್ ಆಫ್ ಆ್ಯಕ್ಷನ್ ಸದಸ್ಯರ ದಸ್ತಗಿರಿಯನ್ನು ವಿರೋಧಿಸಲು ದಿವಾನ್‌ಮಿರ್ಜಾ ಅವರಿಗೆ ಕಪ್ಪುಬಾವುಟ ಹಿಡಿಯಲು ತೀರ್ಮಾನಿಸಿ ಆ ಕೆಲಸವನ್ನು ನಮ್ಮ ಗುಂಪಿಗೆ ವಹಿಸಿದ್ದರು. ಮೊದಲೇ ಇದರ ವಾಸನೆ ಹಿಡಿದ ಪೊಲೀಸರು ರಾಜಶೇಖರ್, ಸುಬ್ಬಣ್ಣ ಅವರುಗಳನ್ನು ದಸ್ತಗಿರಿಮಾಡಿ ಜಗನ್ಮೋಹನ ಬಂಗಲೆಗೆ ಬರದಂತೆ ಮಾಡಿದರು. ನಾನು ಮತ್ತು ಯು. ಕೆಂಚಪ್ಪ ಹೇಗೋ ಮಾಡಿ ಕಪ್ಪುಬಾವುಟಗಳೊಂದಿಗೆ ಜಗನ್ಮೋಹನ ಬಂಗಲೆ ಸೇರಿಕೊಂಡೆವು. ಅಂದಿನ ಸಭೆಗೆ ಗೌರ್ನರಜನರಲ್ಲೋ ಯಾರೋ ಇಂಗ್ಲಿಷ್ ಉನ್ನತಾಧಿಕಾರಿಯೊಬ್ಬರು ಬಂದಿದ್ದರು. ಅವರೂ ಮಿರ್ಜಾ ಅವರೊಂದಿಗೆ ವೇದಿಕೆಯಲ್ಲಿ ಮಂಡಿಸಿದ್ದರು. ದಿವಾನರ ಎದುರಿಗೇ ಕಪ್ಪುಬಾವುಟ ಪ್ರದರ್ಶನ ನಡೆಸಬೇಕೆಂದೂ, ಅನಂತರ ಕಾಂಗ್ರೆಸ್ ಸದಸ್ಯರು ವಾಕೌಟ್ ಮಾಡಬೇಕೆಂದೂ ತೀರ್ಮಾನವಾಗಿದ್ದಿತು. ಆದರಂತೆ ಡೌನ್‌ವಿತ್ ಮಿರ್ಜಾ, ಮಿರ್ಜಾ ಮುರ್ದಾಬಾದ್

ಕಾಂಗ್ರೆಸ್ ಜಿಂದಾಬಾದ್ ಎಂದು ಕೂಗುತ್ತ ಕಪ್ಪುಬಾವುಟ ಪ್ರದರ್ಶಿಸಿದೆವು. ಪ್ರೇಕ್ಷಕರೂ ಸಮ್ಮೊಡನೆ ದನಿಗೂಡಿಸಿದರು. ಚಿವುಟಿದರೆ ರಕ್ತಚಿಮ್ಮುವಂತಿದ್ದ ಮಿರ್ಜಾರ ಮುಖ ಕಪ್ಪಿಟ್ಟಿತು. ಆ ಕೂಡಲೇ ಕಾಂಗ್ರೆಸ್ ಸದಸ್ಯರು ಎಚ್. ಕೆ. ವೀರಣ್ಣಗೌಡರ ನಾಯಕತ್ವದಲ್ಲಿ ಸಭಾತ್ಯಾಗ ಮಾಡಿದರು. ಪೋಲೀಸರು ಬಂದು ನಮ್ಮನ್ನ ನಾಯಿ ಎಳೆದೊಯ್ಯುವಂತೆ ಎಳೆಯುತ್ತಾ ಲಾಠಿಯಿಂದ ಬಡಿಯಲೆತ್ನಿಸಿದರು. ಆದರೆ ಪ್ರೇಕ್ಷಕರು ವಿರೋಧಿಸಿದ್ದರಿಂದ ನಮಗೆ ಅಲ್ಲಿ ಏಟು ಬೀಳಲಿಲ್ಲ. ಲಕ್ಷ್ಮೀಪುರಂ ಪೋಲೀಸ್‌ಸ್ಟೇಷನ್ನಿಗೆ ಎಳೆದೊಯ್ದು ಚನ್ನಾಗಿಯೇ ಬಡಿದರು, ಆದರೂ ನಾವು ದಕ್ಕಲಿಲ್ಲ. ನಾವು ಪ್ರತಿ ಬೆದರಿಕೆ ಹಾಕಿ ನಮ್ಮನ್ನು ಹೊಡೆದರೆ "ನಾಳೆ ನಿಮ್ಮ ಹೆಂಡತಿಯರು ಮುಂಡೆಯರಾಗುತ್ತಾರೆ, ಬೊಂಬಾಯಿನಿಂದ ಕ್ರಾಂತಿಕಾರಿಗಳು ಬಂದಿದ್ದಾರೆ" ಎಂದೆವು. ಈ ಪೋಲೀಸರು ಕ್ರಾಂತಿಕಾರಿಗಳಿಗೆ ಹೆದರಿ ನಡುಗುತ್ತಿದ್ದರು. ನಾವು ಬೆದರಿಕೆ ಹಾಕಿದೆವೋ ಇಲ್ಲವೋ ಅವರು ಹೆದರಿ ಬಡಿಯುವುದನ್ನು ನಿಲ್ಲಿಸಿದರು. ಆದರೆ ಆ ಹೊತ್ತಿಗೆ ಸಾಕಷ್ಟು ಏಟುಗಳು ಸಂದಾಯವಾಗಿದ್ದವು. ಬೆನ್ನು ಬಾತು ಕೊಂಡಿತು. ಬಲಗೈ ಆಡಿಸಲಾಗಲಿಲ್ಲ. ಮಧ್ಯಾಹ್ನ ಊಟ ತರಿಸಿದರು. ನೋವಿ ನಿಂದಾಗಿ ಊಟ ಮಾಡಲಾಗಲಿಲ್ಲ. ನಮ್ಮನ್ನು ಬಡಿದ ಪೋಲೀಸರ ಮುಖ ಕ್ರಾಂತಿಕಾರಿ ಗಳ ಹೆಸರು ಕೇಳಿ ಕುಂದಿ ಹೋಗಿತ್ತು. "ಏನಪ್ಪ ನೀವೇಲ್ಲ ನಮ್ಮಿಂದ ಈ ಕೆಲಸ ಮಾಡ್ಸಿ ನಮ್ಮನ್ನ ಏಕೆ ನರಕಕ್ಕೆ ತಳ್ತೀರಿ" ಎಂದು ಕಣ್ಣೀರುಗರೆದರು. ಅವರೂ ಮನುಷ್ಯರಲ್ಲವೆ ? "ನಮ್ಮನ್ನು ಬಿಡಿ ಆಸ್ಪತ್ರೆಗೆ ಹೋಗುತ್ತೇವೆ" ಎಂದೆವು. "ವ್ಯಾನು ಬರ್‍ಲಿ ಇರಿ ಕಳಿಸ್ತೀವಿ" ಎಂದರು. ಆ ವ್ಯಾನು ಮೂರು ಗಂಟೆಗೆ ಬಂತು. ಅದರಲ್ಲಿ ನಮ್ಮನ್ನು ಕೂರಿಸಿ ಕಳಿಸಿದರು. ನಮಗೋ ಕೂರಲೂ ಆಗುತ್ತಿರಲಿಲ್ಲ. ಇದರ ಮಧ್ಯೆಯೂ ಹಿತವೆನಿಸಿದ್ದು ಅವರು ವ್ಯಾನಿನಲ್ಲಿ ಕೊಟ್ಟ ಬಿಸಿ ಕಾಫಿ. ಆಮೇಲೆ ನಮಗೆ ನಿದ್ರೆ ಬಂದಿತು.

ನಮ್ಮನ್ನು ನಿದ್ರೆಯಿಂದ ಎಚ್ಚರಿಸಿದಮೇಲೆ ಇದು ಯಾವ ಆಸ್ಪತ್ರೆ ಎಂದು ಕೇಳಿದೆವು. "ಇದು ನಂಜನಗೂಡು ಇಲ್ಲಿ ಒಳ್ಳೆಯ ಡಾಕ್ಟರಿದ್ದಾರೆ. ಅದಕ್ಕೆ ಇಲ್ಲಿಗೆ ಕರೆತಂದಿದ್ದೇವೆ" ಎಂದರು. "ನಮ್ಮನ್ನು ಶ್ರೀಮಂತಿಕೆಯದು ಎನ್ನಬಹುದಾದ ಬಂಗಲೆಯೊಂದರಲ್ಲಿ ಕೂರಿಸಿದ್ದರು. ಪೋಲೀಸ್ ವ್ಯಾನ್ ನೋಡಿ ಜನರಿಗೆ ಅನುಮಾನ ಬಂದು 'ಯಾರನ್ನು ಹಿಡಿದು ತಂದಿದ್ದೀರಿ ನಮಗೆ ತೋರಿಸಿ" ಎಂದು ಗಲಾಟೆ ಮಾಡುತ್ತಿದ್ದರು. ನಮ್ಮನ್ನು ಕಾಣದಂತೆ ಮರೆಯಾಗಿ ಕೂರಿಸಿದ್ದರು. ಸುಮಾರು ಅರ್ಧ ಗಂಟೆಯ ನಂತರ ಡಾಕ್ಟರು ಬಂದರು. ಅವರು ತುರ್ತುಚಿಕಿತ್ಸೆ ಮಾಡಿದ ರಾದರೂ ನಮ್ಮ ಸ್ಥಿತಿ ನೋಡಿ ಇವರನ್ನು ಕೂಡಲೇ ಮೈಸೂರಿನ ದೊಡ್ಡಾಸ್ಪತ್ರೆಗೆ ಕರೆದುಕೊಂಡು ಹೋಗಿ ಎಂದು ಪೋಲೀಸರಿಗೆ ಸೂಚಿಸಿದರು. ಈ ಘಟನೆ ನಡೆದುದು ಎಲ್ಲಿ ಎಂದು ಡಾಕ್ಟರು ಕೇಳಿದರು. ಪೋಲೀಸರು ಅದನ್ನು ಮರೆಮಾಚಲು

ಯತ್ನಿಸಿದರು. ಆಗ ನಾವು ಜಗನ್ಮೋಹನ ಬಂಗಲೆಯಲ್ಲಿ ನಡೆದ ಸಂಗತಿಯನ್ನು ವಿವರಿಸಿದೆವು. ಆಗ ಅವರು ಪೋಲೀಸರನ್ನು ಕುರಿತು "ಇಂತಹ ಕೇಸುಗಳನ್ನು ಈ ಆಸ್ಪತ್ರೆಗೆ ತಂದಿದ್ದೀರಲ್ಲ. ಇಲ್ಲಿ ಎರಡು ಸುತ್ತು ಬ್ಯಾಂಡೇಜಿಲ್ಲ ಎಂದರು. ಮುಂದುವರಿದು ಪಾಪ! ಇವರನ್ನು ಹೀಗೆ ಹೊಡೆದಿದ್ದೀರಲ್ಲ ಇವರೇನು ಕಳ್ಳರೆ, ಕೊಲೆಗಡುಕರೆ. ನಮ್ಮ ನಿಮ್ಮ ಒಳ್ಳೆಯದಕ್ಕಲ್ಲವೆ ಇವರ ಹೋರಾಟ ಇವರನ್ನು ತಳ್ಳಿದಂತೆ, ಹೊಡೆದಂತೆ ಮಾಡಿಬಿಟ್ಟಿದ್ದರೆ ನಿಮ್ಮ ಸಂಬಳದಲ್ಲೇನು ಕಡಿಮೆಯಾಗುತ್ತಿತ್ತೆ ಎಂದೆಲ್ಲ ಮಾತನಾಡುತ್ತಿದ್ದರು ನಮ್ಮ ಮೇಲಿನ ಮರುಕದಿಂದ. ಇದನ್ನೆಲ್ಲ ಕೇಳುತ್ತಿದ್ದ ಸಬ್‌ಇನ್ಸ್‌ಪೆಕ್ಟರು "ನಾವು ಹೇಳಿದಷ್ಟು ಮಾಡಿ ಹೋಗಿ ನಿಮಗೇಕೆ ಅದೆಲ್ಲ" ಎಂದು ರೇಗಿ ಮಾತನಾಡಿದರು. ಡಾಕ್ಟರೇನು ಸುಮ್ಮನಿರಲಿಲ್ಲ "ನೀವು ಹೇಳಿದಷ್ಟು ಮಾಡಲು ನಾನೇನು ನಿಮ್ಮ ಕೈಕೆಳಗಿನ ಅಧಿಕಾರಿಯಲ್ಲ" ಎಂದು ಹೇಳಿ ಹೊರಟೇ ಹೋದರು.

ಡಾಕ್ಟರು ಹೊರಗೆ ಹೋದ ಮುಕ್ಕಾಲು ಗಂಟೆಗೆ ಆ ಬಂಗಲೆಯ ಸುತ್ತ ಜನರು ಘೇರಾಯಿಸತೊಡಗಿದರು. ಒಳಗಡೆ ಪೋಲೀಸರು ತಂದಿರುವವರು ಯಾರು ? ಅವರ ಸ್ಥಿತಿ ಹೇಗಿದೆ ? ಎಂದು ಕೂಗುವುದರ ಜೊತೆಗೆ ಮಿರ್ಜಾನಿಗೆ ಧಿಕ್ಕಾರ ಮೈಸೂರು ಪೋಲೀಸರಿಗೆ ಧಿಕ್ಕಾರ ಎಂದೂ ಕೂಗುತ್ತಿದ್ದರು. ನಂಜನಗೂಡಿನಲ್ಲಿ ನನ್ನ ಪರಿಚಯ ದವರೆಂದರೆ ಶ್ರೀ ಕೆ. ವಿಶ್ವೇಶ್ವರ ಗೌಡರು ಮತ್ತು ಶ್ರೀ ಮಹದೇವಯ್ಯನವರು. ಜನರ ಒತ್ತಡ ತಡೆಯಲಾರದೆ ವಿಶ್ವೇಶ್ವರಗೌಡರ ನೇತೃತ್ವದಲ್ಲಿ ನಾಲ್ಕೈದು ಜನ ಯುವಕ ರನ್ನು ಒಳಗೆ ಬಿಟ್ಟರು. ನಾನು ಯು. ಕೆಂಚಪ್ಪನವರನ್ನು ವಿಶ್ವೇಶ್ವರಗೌಡರಿಗೆ ಪರಿಚಯಿಸಿದೆ. ಅವರಿಗೆ ನಮ್ಮ ಸ್ಥಿತಿನೋಡಿ ಕಣ್ಣಲ್ಲಿ ನೀರು ಬಂತು. ಅವರು ನಮಗೆ ತಿಂಡಿ ಕಾಫಿ ತರಿಸಿ ಒತ್ತಾಯದಿಂದ ತಿನ್ನಿಸಿ ಸಮಾಧಾನ ಹೇಳಿದರು.

ನಮ್ಮನ್ನು ಅಲ್ಲಿಟ್ಟುಕೊಳ್ಳುವುದು ಅಪಾಯವೆಂದೂ ಜನರು ಮೇಲೆ ಬಿದ್ದರೂ ಬೀಳಬಹುದೆಂದೂ ಆದುದರಿಂದ ಇವರನ್ನು ಕೂಡಲೇ ಮೈಸೂರಿಗೆ ಕರೆದೊಯ್ಯುವುದು ಸೂಕ್ತವೆಂದು ವಿಶ್ವೇಶ್ವರಗೌಡರು ಪೋಲೀಸರಿಗೆ ಬುದ್ಧಿ ಹೇಳಿದರು. ಪೋಲೀಸರಿಗೂ ಅದರ ಅರಿವಾಗಿತ್ತು. ಅಷ್ಟು ಹೊತ್ತಿಗೆ ನಮ್ಮನ್ನು ಹೊರಗೆ ಕರೆದು ತರುವಂತೆ ಜನರು ಒತ್ತಾಯ ಮಾಡತೊಡಗಿದರು. ಜನರನ್ನು ಸುಮ್ಮನಿರಿಸಲು ಪೋಲೀಸರಿಗೆ ಸಾಧ್ಯವಾಗಲಿಲ್ಲ, ಕಡೆಗೆ ನಮ್ಮನ್ನು ಹೊರಗೆ ತಂದು ಜನರೆದುರು ನಿಲ್ಲಿಸಿದರು. ಕೆಲವೇ ದಿನಗಳ ಹಿಂದೆ ನಾನು, ತಗಡೂರರು, ಸುಬ್ಬಣ್ಣ, ಜೋಯಿಸರು ನಂಜನಗೂಡಿನಲ್ಲಿ ಭಾಷಣ ಮಾಡಿದ್ದೆವು. ಜನರು ನನ್ನನ್ನು ಗುರುತಿಸಿ ನಾಗಮಂಗಲದ ಜವರಪ್ಪಗೌಡ ಎಂದರು. ನಾಗಮಂಗಲದ ಹೆಸರು ಕೇಳಿ ನಾನು ಪುಲಕಿತನಾದೆ. ನಾನು ಪುಟ್ಟಪ್ಪನವರ ಪದ್ಯಗಳನ್ನು ಭಾಷಣದ ಮಧ್ಯದಲ್ಲಿ ಹೇಳುತ್ತಿದ್ದುದರಿಂದ ಜನರು ನನ್ನನ್ನು ಕವಿ ಎಂದೂ ಹೇಳುತ್ತಿದ್ದರು.

ನಾವು ಜನರೆದುರು ಬಂದ ಮೇಲೆ ಪರಿಸ್ಥಿತಿ ಬೇರೊಂದು ರೂಪ ತಾಳಿತು. ಜನರು ಇವರನ್ನು ಮೈಸೂರಿಗೆ ಕರೆದುಕೊಂಡು ಹೋಗುವುದು ಬೇಡ. ಇಲ್ಲಿಗೆ ಪಂಡಿತರನ್ನು ಕರೆದು ತರುತ್ತೇವೆ ವ್ಯಾನ್ ಕೊಡಿ ಎಂದರು. ಜನರ ಅಪೇಕ್ಷೆಯಂತೆ ನಂಜನಗೂಡಿನ ಪಂಡಿತರು ಬಂದು ಚಿಕಿತ್ಸೆ ನಡೆಸಿದರು. ಇಷ್ಟರಲ್ಲಿ ಮೈಸೂರಿನಿಂದ ಸುಬ್ಬಣ್ಣ, ರಾಜಶೇಖರ್, ನಾರಾಯಣಸ್ವಾಮಿ ಮುಂತಾದವರೂ ಸೇರಿ ನೂರಾರು ಮಂದಿ ಬಂದರು. ಅವರು ದೊಡ್ಡ ಗಲಾಟೆಯನ್ನೇ ಮಾಡಿಬಿಟ್ಟರು. ಶ್ರೀ ವಿಶ್ವೇಶ್ವರ ಗೌಡರು ಎಲ್ಲರನ್ನು ಸಮಾಧಾನಪಡಿಸಿದರು. ಅವರಿಲ್ಲದಿದ್ದರೆ ಪರಿಸ್ಥಿತಿ ಏನಾಗುತ್ತಿತ್ತೊ ತಿಳಿಯದು. ರಾತ್ರಿ ಸುಮಾರು 9 ಗಂಟೆಯ ಹೊತ್ತಿಗೆ ಮೈಸೂರಿಗೆ ಕರೆತಂದು ಕೃಷ್ಣರಾಜ ಆಸ್ಪತ್ರೆಗೆ ಸೇರಿಸಿದರು.

ಕೆಂಚಪ್ಪನವರಿಗೆ ಮೈಸೂರಿನಲ್ಲಿ ತುಂಬಾ ಬಂಧು ಬಳಗ. ಅವರನ್ನು ವಿಚಾರಿಸಿ ಕೊಂಡು ಹೋಗಲು ಅವರೆಲ್ಲ ಅಪಾರ ಸಂಖ್ಯೆಯಲ್ಲಿ ಬರುತ್ತಿದ್ದರು. ನಾಡಿನ ಪ್ರಮುಖ ನಾಯಕರುಗಳು ಬಂದು ವಿಚಾರಿಸಿಕೊಂಡರು. ಪೋಲೀಸರ ಇಂಥ ಆತಿಥ್ಯ ನನಗೆ ಮೂರನೆಯದು. ಒಂದು ರೀತಿಯಲ್ಲಿ ನಾನು ಅದಕ್ಕೆ ಒಗ್ಗಿಯೂ ಹೋಗಿದ್ದೆ. ಆದರೆ ಪಾಪ ! ಕೆಂಚಪ್ಪನಿಗೆ ಇದು ಹೊಸದು. ಅವನಿಗಾಗಿ ನಾನು ಮರುಗಿದೆ. ನಂಜನಗೂಡು ಪಂಡಿತರ ಔಷಧಿಯ ಪ್ರಭಾವ ಊತ ಇಳಿಸಿತು. ಎಂ. ಆರ್, ಸಿ. ಬಸಪ್ಪನವರು ಬೆಳಿಗ್ಗೆ ಸಂಜೆಯೆಲ್ಲ ಬಂದು ನೋಡಿಕೊಂಡು ಹೋಗುತ್ತಿದ್ದರು. ಬಂದಾಗಲೆಲ್ಲ ಏನಾದರೂ ಕುರುಕಲು ತಿಂಡಿ ತಂದು ಕೊಡುತ್ತಿದ್ದರು. ಕೆಂಚಪ್ಪನ ಬಂಧುಗಳು ತರಹೇವಾರಿ ಮಾಂಸದ ಭಕ್ಷ್ಯಗಳನ್ನು ಮಾಡಿ ತರುತ್ತಿದ್ದರು. ಇದರಿಂದಾಗಿ ನನ್ನ ತೂಕದಲ್ಲಿ ನಾಲ್ಕಾರು ಪೌಂಡು ಜಾಸ್ತಿಯಾಯಿತು.

ಹೋರಾಟಗಾರ ಮಿತ್ರರು ಬಂದು "ಏನು ನಾಲ್ಕು ಏಟು ಬಿತ್ತು ದಿವ್ ರಂಗ ಅಂತ ಮಲಗಿಬಿಟ್ಟೆ. ನೀನಿಲ್ಲದೆ ಸಭೆಗಳಿಗೆ ಕಳೆಯಿಲ್ಲ. ಬೇಗೂರಲ್ಲಿ ಸಭೆ ಇದೆ ಬೇಗ ಹೊರಗೆ ಬಾ" ಎಂದು ಛೇಡಿಸುತ್ತಿದ್ದರು. ನಾವೆಲ್ಲ ಸೇರಿ ಪೋಲೀಸರಿಗೆ ಬುದ್ಧಿಕಲಿಸುವ ಯೋಜನೆ ಹಾಕುತ್ತಿದ್ದೆವು. ಆದರೆ ನಮ್ಮನ್ನು ಮನೆಗೆ ಕಳಿಸುವುದಿಲ್ಲವೆಂದೂ ಶಿಕ್ಷೆ ವಿಧಿಸಿ ಜೈಲಿಗೆ ಕಳಿಸುವರೆಂದೂ ಪೋಲೀಸರು ಹೇಳಿದರು. ಆ ಜೈಲಿನ ನರಕಯಾತನೆಯ ಹಿಂದಿನ ಅನುಭವವೇ ನನ್ನನ್ನು ಹೆದರಿಸಿತು. ಏನು ಕಾರಣವೋ ಏನೋ ನಮ್ಮನ್ನು ಆಸ್ಪತ್ರೆಯಿಂದಲೇ ಬಿಡುಗಡೆ ಮಾಡಿದರು. ಮರಿಮಲ್ಲಪ್ಪಶಾಲೆಯಲ್ಲಿ ಬಿಡಾರ ಮಾಡಿದ್ದ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ನಮ್ಮನ್ನು ಕರೆಸಿ ಪರಿಚಯ ಮಾಡಿ ಕೊಂಡು ನಮ್ಮ ಧೈರ್ಯವನ್ನು ಹೊಗಳಿ ಕಪ್ಪು ಬಾವುಟ ತೋರಿಸಿದ ಬಗ್ಗೆ ತಮ್ಮ ಸಂತೋಷ ವ್ಯಕ್ತಪಡಿಸಿದರು.



೨

ಸುಬ್ಬರಾಯನಕೆರೆ ಮೈದಾನದಲ್ಲಿ ನಡೆದ ಬಹಿರಂಗ ಸಭೆ ಮುಗಿದ ನಂತರ ನಾಳೆ ಪ್ರಾತಃಕಾಲದ ಸತ್ಯಾಗ್ರಹಕ್ಕೆ ಸಿದ್ಧತೆ ನಡೆಸುತ್ತಿದ್ದೆವು. ರಾತ್ರಿ ಹೊತ್ತಾದ ಮೇಲೆ ಪೋಲೀಸ್ ಇನ್‌ಸ್ಪೆಕ್ಟರ್ ಸದಾಶಿವರಾವ್ ಬಂದು ನಮ್ಮನ್ನು ನೋಡಿ "ನಾಳೆ ಬೆಳಗಿನ ಸತ್ಯಾಗ್ರಹದಲ್ಲಿ ಎದ್ದದ್ದೆ ಹ್ಯಾಮಿಲ್‌ಟನ್ ಹೆಸರ. ಅಳಿಸಲು ಹೋಗಬೇಡಿ. ಇದರಿಂದ ನಿಮಗೆ ತೊಂದರೆ ಆಗುವುದು. ಗಳ ಸುಣ್ಣದ ಮಡಕೆಯೊಡನೆ ಬಂದವರು ಒಂದು ಕಡೆ ಕುಳಿತಿರಿ. ಸಂಜೆಗೆ ಎದ್ದು ಹೋಗುವ ಶಾಂತ ರೀತಿ ಕಾರ್ಯಕ್ರಮವಿರಲಿ'' ಎಂದು ತಿಳಿಸಿದರು.

''ನಮ್ಮ ಸತ್ಯಾಗ್ರಹ ವಿಚಾರ ನಿಮಗೇಕೆ ? ನಮ್ಮ ಕೆಲಸ ನಮ್ಮದು, ನಿಮ್ಮ ಕೆಲಸ ನಿಮ್ಮದು ನಮಗೆ ಉಪದೇಶ ಮಾಡುವ ನೈತಿಕಃಹಕ್ಕು ನಿಮಗಿಲ್ಲ'' ಮುಂತಾಗಿ ಮೂದಲಿಸಿ ಮಾತನಾಡಿದೆವು ನಾವು. ''ಹಿಡೋ ವಿಚಾರ ಹಾಗೋ ಈ ದಿನ ಬಸ್ಸಿ ನಿಮಗೆ ಹಣ್ಣುಗಾಯಿ ನೀರುಗಾಯಿ ಮಾಡಿ ನೀವೇ ಮೈಸೂರು ಬಿಟ್ಟು ಓಡಿ ಹೋಗುವ ಹಾಗೆ ಮಾಡುತ್ತೇವೆ.'' ಎಂದು ಕೋಪೋದ್ರೇಕದಿಂದ ಮಾತನಾಡಿ ಇನ್‌ಸ್ಪೆಕ್ಟರು ನನ್ನತ್ತ ನೋಡಿ ನೋಡಲು ಚೋಟುದ್ದದ ಹೈದ ನೀನು ತಲೆಯಿಲ್ಲ ಮಾತನಾಡುತ್ತೀಯೆ. ನಾಲಿಗೆ ಮೇಲೆ ಹತೋಟಿಯೇ ಇಲ್ಲ. ನಿನಗೆ ಮಹಾರಾಜರು ಕೂಡ ಲೆಕ್ಕವಿಲ್ಲದವರಾಗಿದ್ದಾರೆ. ಇಂದು ಅಲ್ಲಿಗೆ ಬಾ ತೋರಿಸುತ್ತೇನೆ, ಲಾಠಿ ಹೊಡೆತ ಎಂದು ಹಾರಾಡುತ್ತ ಹೊರಟು ಹೋದರು.

ಬೆಳಿಗಾಯಿತು 8 ಘಂಟೆಗೆ ಆಫೀಸಿನಿಂದ ಬಿದಿರುಗಳು, ಸುಣ್ಣದ ಮಡಕೆ. ಬ್ರಷ್ ಸಹಿತ ಎಂಟು ಹತ್ತು ಜನ ಸಾಲಾಗಿ ಹ್ಯಾಮಿಲ್‌ಟನ್ ಬಿಲ್ಡಿಂಗ್ ಅತ್ತ ಹೊರಟೆವು. ನಮ್ಮ ಜೊತೆಗೆ ದಾರಿಯುದ್ದಕ್ಕೂ ಜನರು ಜೊತೆ ಸೇರುತ್ತಿದ್ದರು. ಸತ್ಯಾಗ್ರಹ ಸ್ಥಳಕ್ಕೆ ಹೋಗುವಲ್ಲಿ 8¾ ಘಂಟೆ ಆಗಿತ್ತು. ನಮ್ಮ ಜೊತೆಗೂಡಿ ಬಂದ ಜನರೂ ಸೇರಿ ಎರಡು ಮೂರು ಸಾವಿರ ಜನರು ಸರ್ಕಲ್ ತುಂಬಾ ಸೇರಿದ್ದರು.

ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಎಂ. ಮೇಕ್ರಿ ಅವರು ಕುದುರೆ ಮೇಲೆ ಬಂದು ಜನರ ಗುಂಪನ್ನು ನೋಡಿ ಸರ್ಕಲ್ ದಾಟಿ ಮುಂದೆ ಹೋದರು. ಮುಂದೆ ಹೋದ ಜಿಲ್ಲಾಧಿಕಾರಿಗಳನ್ನು ಪೋಲೀಸ್ ಮುಖ್ಯಾಧಿಕಾರಿಗಳು ಹೋಗಿ ಭೇಟಿಮಾಡಿ ಬಂದರು.

ನಾವುಗಳು ಸುಣ್ಣದ ಮಡಕೆಯೊಡನೆ ಕಟ್ಟಿದ ಬಾಗಿಲು ಮೂಲಕ ಮಹಡಿಗೆ ಹೋಗಿ ಹೆಸರಿಗೆ ಸುಣ್ಣ ಬಳಿಯಲು ಪ್ರಯತ್ನಿಸುವುದು, ನಮ್ಮ ಪ್ರಯತ್ನಕ್ಕೆ ಪೋಲೀಸರು ಅಡ್ಡವಾಗುವುದು. ಹೀಗೆ ಪ್ರಾತಃಕಾಲ 10 ಘಂಟೆ ಆಯಿತು. ಜನರು

ಗುಂಪು ಗುಂಪಾಗಿ ಬರುತ್ತಲೇ ಇದ್ದರು. ಪೋಲೀಸ್ ಇನ್‌ಸ್ಪೆಕ್ಟರುಗಳಾದ ಸದಾಶಿವ ರಾವ್ ಮತ್ತು ಕೃಷ್ಣಮೂರ್ತಿಯವರು ಸತ್ಯಾಗ್ರಹಕ್ಕೆ ಕುಳಿತಿದ್ದ ಆರಕೆರೆ ಯು. ಕೆಂಚಪ್ಪ, ನಾನು ಮತ್ತು ಸುಬ್ಬಯ್ಯ ಮೂವರನ್ನು ಗಳು ಸಹಿತ ಸುಣ್ಣದ ಮಡಕೆ ಎಲ್ಲವನ್ನು ಕಿತ್ತು ಬಿಸಾಡಿದರು. ಗೌರವದಿಂದ ಮೆಟ್ಟಲನ್ನು ಬಿಟ್ಟು ದೂರದಲ್ಲಿ ಕುಳಿತು ಕೊಳ್ಳಿ ಎಂದು ತಿಳಿಸಿ ಎಳದಾಡಿದರು, ಅದಾದ ಮೇಲೆ ನಾವು ಪುನಃ ಮೆಟ್ಟಿಲಿಗೆ ಹೋಗಿ ಕುಳಿತೆವು.

ಪೋಲೀಸರು ರೌದ್ರಾವತಾರ ತಾಳಿದರು. ಶಾಂತವಾಗಿ ನೋಡುತ್ತಾ ನಿಂತಿದ್ದ ಜನರ ಮೇಲೆ ಲಾಠಿ ಪ್ರಹಾರ ಶುರು ಮಾಡಿ, ನಾಲ್ಕು ಮೂಲೆಗಳಲ್ಲಿ ಕುದುರೆ ಮೇಲೆ ಕುಳಿತಿದ್ದ ಸಿಪಾಯಿಗಳು ಜನರನ್ನು ಕುದುರೆಗಳಿಂದ ಚದುರಿಸಲು ಪ್ರಾರಂಭಿಸಿದರು. ಮೆಟ್ಟಿಲ ಮೇಲೆ ಕುಳಿತಿದ್ದ ನನ್ನನ್ನು ಇನ್‌ಸ್ಪೆಕ್ಟರ್ ಸದಾಶಿವರಾವ್ ಕೆಳಕ್ಕೆ ಎಳೆದು ಹಾಕಿ ಕಾಲಿನಿಂದ ಒದೆಯುತ್ತ, ಲಾಠಿಯಿಂದ ಬೆನ್ನು ಹೊಟ್ಟೆಗೆ ಬಲವಾಗಿ ಹೊಡೆದರು ಲಾಠಿ ಹೊಡೆತ ತಡೆಯಲಾರದ ನಾನು ತತ್ತರಿಸಿ ಬಡಿದುಕೊಳ್ಳಲು ಪ್ರಾರಂಭಿಸಿದೆ. ಆತನ ಕೈಗಳು ಸೋಲುವವರೆಗೂ ಹೊಡೆದನೋ ಏನೋ ಶಾನರಿಯೆ. ಕಣ್ಣಿಗೆ ಕತ್ತಲೆ' ಕವಿದಂತಾಯ್ತು ಯಾರೋ ಅವನು ನಿಮ್ಮ ಕವಿ ಸರ್ಕಾರ ಮಹರಾಜರು ಎಂದರೆ ಲೆಕ್ಕವಿಲ್ಲದೆ ಮೂದಲಿಸಿ ಬರೆದವನು ಮುಂತಾಗಿ ಮಹಾಕವಿ ಕುವೆಂಪು ಅವರನ್ನು ಮನಸ್ವಿಯಾಗಿ ಟೀಕಿಸುತ್ತ ಲಾಠಿಯಿಂದ ನನ್ನನ್ನು ತಿವಿಯುತ್ತಲೇ ಇದ್ದ. ನನ್ನ ಜೊತೆಯಿದ್ದ ಯು. ಕೆಂಚಪ್ಪ, ಸುಬ್ಬಯ್ಯನವರುಗಳು ಏನಾದರು ಎಂಬುದು ನನಗೆ ಗೊತ್ತಾಗಲಿಲ್ಲ.

ಇಷ್ಟಾಗುವಲ್ಲಿ 12 ಘಂಟೆ ಮಧ್ಯಾಹ್ನವಾಗಿತ್ತು. ಅಸಾಧ್ಯವಾದ ಬಾಯಾರಿಕೆ ಆರಂಭವಾಯಿತು. ನೀರು ಕೇಳಿದೆ ನೀರು ಕೊಡಲು ಬಂದ ಪೇದೆಯಿಂದ ಲೋಟಕಿತ್ತು ಬಿಸಾಡಿದ ಇನ್‌ಸ್ಪೆಕ್ಟರು. "ಇನ್ನಾದರೂ ನಾವು ಹೇಳಿದಂತೆ ಕೇಳುತ್ತೀಯಾ?" ಎಂದು ಸದಾಶಿವರಾವ್ ಪ್ರಶ್ನಿಸಿದರು. "ಇಲ್ಲ ನೀವು ಹೇಳುವಂತೆ ಕೇಳಲು ಬಂದವನಲ್ಲ, ಸತ್ತರೂ ಸರಿ ಪೋಲೀಸರಿಗೆ ಶರಣು ಹೋಗುವ ಕುಲದವನಲ್ಲ" ಎಂದು ತಿಳಿಸಿದೆ. ನನ್ನ ಮಾತುಗಳಿಂದ ಉದ್ರಿಕ್ತನಾದ ಇನ್‌ಸ್ಪೆಕ್ಟರು ರಟ್ಟೆ ಹಿಡಿದು ಒಳಕ್ಕೆ ಎಳೆದೊಯ್ದರು.

ಇದನ್ನು ನೋಡುತ್ತ ನಿಂತಿದ್ದ ಜನ ಸ್ತೋಮ ಕಟ್ಟಡದೊಳಕ್ಕೆ ನುಗ್ಗಲು ಪ್ರಾರಂಭಿಸಿತು. ಅವರನ್ನು ತಡೆಗಟ್ಟಲು ಪ್ರಯತ್ನಪೋಲೀಸರದು ಜವರಪ್ಪ ಗೌಡನನ್ನು ತೋರಿಸಿರಿ. ಅವನೇನು ಬದುಕಿದ್ದಾನೋ ಸತ್ತಿದ್ದಾನೋ ನೋಡಿಯೇ ಹೋಗಬೇಕು ಎಂದು ಕೂಗುತ್ತಿದ್ದರು. ನನ್ನನ್ನು ಇಬ್ಬರು ದಫೇದಾರರು ಎರಡು ಪಕ್ಕಗಳಿಗೆ ಕೈಹಾಕಿ ಹೊರಕ್ಕೆ ಕರೆದುಕೊಂಡು ಬಂದು ಜನಕ್ಕೆ ತೋರಿಸಿದರು. ಜನಕ್ಕೆ ಕೈ ಮುಗಿಯಲು ತೋಳುಗಳನ್ನು ಎತ್ತಲೂ ನಿಸ್ಸಹಾಯಕನಾಗಿದ್ದೆ. ಆದರೂ ಇಳಿ ಧ್ವನಿಯಲ್ಲಿ ಮಹಾತ್ಮ ಗಾಂಧಿ ಅವರ ಶಾಂತಿ ಶಿಸ್ತು ನಿಮ್ಮದಾಗಿರಲಿ. ದಯಮಾಡಿ ಶಾಂತಚಿತ್ತರಾಗಿ

ಮುಂತಾಗಿ ಮನವಿ ಮಾಡಿದೆ.

ಲಾಠಿ ಪ್ರಕರಣದಲ್ಲಿ ಎಷ್ಟು ಜನಕ್ಕೆ ಗಾಯವಾಯಿತೋ ಏನೋ ನನಗೆ ಗೊತ್ತಾಗಲಿಲ್ಲ. ಆಸ್ಪತ್ರೆಗೆ ವ್ಯಾನಿನಲ್ಲಿ ಕರೆದೊಯ್ದರು. ವ್ಯಾನಿನಲ್ಲಿ ಹೋಗುತ್ತ ನನ್ನನ್ನು ಲಾಠಿಯಿಂದ ಹೊಡೆದ ಇನ್‌ಸ್ಪೆಕ್ಟರನ್ನು ಸಿಕ್ಕಾಬಟ್ಟೆ ಬೈದರು. ಅವನೇನು ರಾಕ್ಷಸ ನನ್ನ ಮಗ. ಹೊಡೆಯಬೇಕು. ಹೊಡೆದರೆ ಹೀಗೆ ಹೊಡೆಯುವುದೇ ಮುಂತಾಗಿ ಟೀಕಿಸಿ ನನಗೆ ಸಾಂತ್ವನ ಹೇಳಿ ಎಮರ್ಜೆನ್ಸಿ ವಾರ್ಡಿಗೆ ಸೇರಿಸಿ ಚಿಕಿತ್ಸಾನಂತರ ತೆರಳಿದರು. ನಾನು ಆಸ್ಪತ್ರೆಗೆ ಹೋದಮೇಲೆ ನನ್ನನ್ನು ನೋಡಿ ವಿಚಾರಿಸಲು ರಂಗರಾಮಯ್ಯನವರು, ಜನಾರ್ದನನಾಯ್ಡು, ಟಿ. ಮರಿಯಪ್ಪನವರು, ಬಾಳೆಹಣ್ಣು ಅಂಗಡಿ ಶಿವಣ್ಣ ಎ. ರಾಮಣ್ಣ, ಸಂಜನಗೂಡಿನ ವಿಶ್ವೇಶ್ವರ ಗೌಡರು ಮುಂತಾದ ಮುಖಂಡರು ಬಂದಿದ್ದು ಪೋಲೀಸರ ವರ್ತನೆಯನ್ನು ಖಂಡಿಸಿದರು.

ಜನಸಮೂಹವನ್ನು ತಡೆಯುವುದೇ ಬಹು ಕಷ್ಟವಾಯಿತಂತೆ. ಆಸ್ಪತ್ರೆ ಸಿಬ್ಬಂದಿ ಅವರಿಗೆ ನಾಳೆ ಪ್ರಾತಃಕಾಲಕ್ಕೆ ಎಮರ್ಜೆನ್ಸಿಯಿಂದ ಮಹಡಿ ಮೇಲಿನ ಜನರಲ್ ವಾರ್ಡಿಗೆ ವರ್ಗಾಯಿಸುವುದಾಗಿ ತಿಳಿಸಿದರು. ದಿವಂಗತ ಎಂ. ಆರ್. ಸಿ. ಬಸಪ್ಪನವರು ಕಾಲ ಕಾಲಕ್ಕೆ ಕಾಫಿ, ತಿಂಡಿ, ಊಟ ವ್ಯವಸ್ಥೆ ಮಾಡುತ್ತ ನನ್ನ ಬಳಿಯೇ ವಾರ ಕಾಲ ಶುಶ್ರೂಷೆ ಮಾಡಿದ್ದನ್ನು ಸ್ಮರಿಸಿಕೊಳ್ಳುತ್ತಿದ್ದೇನೆ. ನಾನಿದ್ದ ವಾರ್ಡಿನಲ್ಲಿ ಸುಮಾರು 30 ಮಂದಿ ರೋಗಿಗಳಿದ್ದಿರಬಹುದು. ನನ್ನನ್ನು ನೋಡಲು ಬರುತ್ತಿದ್ದ ನಾಗರಿಕರು ತರುತ್ತಿದ್ದ ಹಣ್ಣುಹಂಪಲ ಇಡೀ ವಾರ್ಡಿನ ಎಲ್ಲ ರೋಗಿಗಳಿಗೂ ಸಾಕಾಗುತ್ತಿತ್ತು. ವಾರದನಂತರ ನಡೆಯಲು ಸಾಧ್ಯವಾದರೂ ಹೊಟ್ಟೆಯಬಾಧೆ ಹಾಗೇ ಉಳಿದಿತ್ತು. ಸರಿಯಾಗಿ ಆಹಾರ ಸೇವಿಸಲಾಗುತ್ತಿರಲಿಲ್ಲ. ಡಾಕ್ಟರು ತಮ್ಮ ತಮ್ಮಂದಿರನ್ನು ನೋಡುವಂತೆ ದಯಾದ್ರ್ರಹೃದಯ ದಿಂದ ಚಿಕಿತ್ಸೆ ನೀಡುತ್ತಿದ್ದರು. ಇನ್ನೆಲ್ಲ ಆಸ್ಪತ್ರೆಯಿಂದ ನಾಳೆ ನಾಡಿದ್ದರಲ್ಲಿ ಬಿಡುಗಡೆ ಮಾಡಬೇಕು ಅನ್ನುವಷ್ಟರಲ್ಲಿ ಸುಬ್ಬರಾಯನಕೆರೆ ಮೈದಾನದಲ್ಲಿ ಮಾಡಿದ ಭಾಷಣ ರಾಜದ್ರೋಹವಾಗಿದ್ದು 124A ಕಾನೂನು ಪ್ರಕಾರ ದಸ್ತಗಿರಿ ಮಾಡಿರುವುದಾಗಿ ಪೊಲೀಸರು ತಿಳಿಸಿದರು.

ಆ ಹೊತ್ತಿನಿಂದ ನಾನು ಪೋಲೀಸರ ವಶನಾದೆ. ಊಟ ತಿಂಡಿ ತರುವವರನ್ನು ನಿರ್ಬಂಧಿಸಲು ಇನ್‌ಸ್ಪೆಕ್ಟರು ಪೇದೆಗಳಿಗೆ ತಿಳಿಸಿದ್ದರು. ನಾನು ಕಾನೂನು ಹಿಡಿದು ಮಾತನಾಡಿ ನನಗೆ ಶಿಕ್ಷೆ ಆಗುವವರೆಗೆ ನನ್ನ ಮನೆಯಿಂದ ತಿಂಡಿ ಊಟ ತರಿಸಿಕೊಳ್ಳಬಹುದೆಂದು ತಿಳಿಸಿದೆ. ಅದು ನಿನ್ನ ಕಾನೂನು ಇದು ನನ್ನ ಕಾನೂನು ಎಂದು ಹೇಳಿ ಹೊರಟು ಹೋದರು.

ನನ್ನನ್ನು ಆಸ್ಪತ್ರೆಯಿಂದ 13 ನೆಯ ದಿನಕ್ಕೆ ಜೈಲಿಗೆ ಕರೆದೊಯ್ದರು ಜೈಲಿನಲ್ಲಿ ತಗಡೂರು ರಾಮಚಂದ್ರ ರಾಯರು ಮತ್ತೆ ಎಂ. ಎನ್. ಜೋಯಿಸರ ಜೊತೆಗೆ 30 ಮಂದಿಯಷ್ಟು ಸ್ವಯಂ ಸೇವಕರು ಸೇರಿದ್ದರು. ನನ್ನ ಜೊತೆ ಸತ್ಯಾಗ್ರಹಕ್ಕೆ ಕುಳಿತಿದ್ದ

ಸುಬ್ಬಯ್ಯ ಮತ್ತು ಯು. ಕೆಂಚಪ್ಪನವರಿಗೂ ಸಾಧಾರಣ ಲಾಠಿ ಏಟು ಬಿದ್ದಿದ್ದು ಕೋರ್ಟಿಗೆ ಕರೆದುಕೊಂಡು ಹೋಗಿ ತಲಾ 5 ತಿಂಗಳು ಸಾದಾ ಸಜ ಅನುಭವಿಸುವಂತೆ ಶಿಕ್ಷೆ ನೀಡಿ ಜೈಲಿಗೆ ಕಳುಹಿಸಿದರು.

ನಾನು ಜೈಲಿಗೆ ಹೋದದ್ದು ಮಧ್ಯಾಹ್ನ ಉರಿ ಬಿಸಿಲು, ತಗಡೂರರು ತಣ್ಣೀರು ಸ್ನಾನ ಮಾಡುತ್ತಿದ್ದವರು ನನ್ನನ್ನು ನೋಡಲು ಬರಿ ಮೈನಲ್ಲೆ ಓಡಿ ಬಂದರು. ದುಂಡುದುಂಡಗಿದ್ದ ನಿನ್ನನ್ನು ಆ ಮೂರ್ಖರು ಇಷ್ಟೊಂದು ಬಡಿದಿದ್ದಾರಲ್ಲ. ಆ ಸದಾಶಿವರಾವ್‌ಗೆ ಕೈ ಆದರು ಹೇಗೆ ಬಂತು ? ಎಂದು ಕಣ್ಣೀರು ಸುರಿಸುತ್ತ ನನ್ನ ಮೈ ಕೈ ತಡವಿ ಸಮಾಧಾನ ಹೇಳಿದರು. ಸತ್ಯಾಗ್ರಹ ಎಂದರೆ ಇದೆಲ್ಲ ಅನುಭವಿಸಲೇ ಬೇಕಲ್ಲ ತೆರಕಣಾಂಬಿ ಸಂತೆಯಲ್ಲಿ ಪಾದ್ರಿ ಸಾಡೆ ಕಡೆಯುವರು ಕೊಳೆತ ಮಾಂಸದ ಚೂರುಗಳು ಸೇರಿಸಿದ ಹೆಂಡವನ್ನೇ ನನ್ನ ಮೇಲೆ ಸುರಿದರು. ಅಂತಹದ್ದನ್ನೆಲ್ಲಾ ನೀನೇ ಕಂಡಿದ್ದಿ. ಇವನ್ನೆಲ್ಲ ಸಹಿಸಿ ಕಷ್ಟದ ಕೋಟೆಬಾಗಿಲುಗಳನ್ನು ನಾವು ದಾಟಿದರೆ ಸುಖದಬಾಗಿಲು ದೊರೆಯುವುದು ಎಂದು ಹೇಳಿ ಸಂತೈಸಿದರು.

ಬೆಂಗಳೂರುಜಿಲ್ಲೆಯ ರಾಮನಗರ (ಆಗ ಕ್ಲೋಸ್ ಪೇಟೆ)ದಲ್ಲಿ ದಿನಾಂಕ 15-7-1937 ರಂದು ಅಲ್ಲಿನ ಪುರಸಭೆಯವರು ಬಿನ್ನವತ್ತಳೆ ಅರ್ಪಿಸಿದ ಸಂದರ್ಭದಲ್ಲಿ ದಿವಾನರಾದ ಸರ್, ಮಿರ್ಜ ಅವರು ಮಾತನಾಡಿ ಸ್ವಾತಂತ್ರ್ಯ ಪ್ರೇಮಿಗಳನ್ನು ಕಟುವಾಗಿ ನಿಂದಿಸಿದರು. ಪರಿಣಾಮವಾಗಿ ಅಪಾರ ಸಿಟ್ಟಿಗೆದ್ದ ಸ್ವಾತಂತ್ರ್ಯ ಪ್ರೇಮಿಗಳು, ದಿವಾನರ ಭಾಷಣವನ್ನು ರಾಜ್ಯದ ಎಲ್ಲ ಕಡೆಗಳಲ್ಲಿ ಪ್ರತಿಭಟನಾಸಭೆಗಳನ್ನು ನಡೆಸಿ ತೀವ್ರ ಖಂಡನೆಗೆ ಗುರಿ ಮಾಡಿದರು. ಅನೇಕ ಕಡೆಗಳಲ್ಲಿ ಮೆರವಣಿಗೆ ನಡೆಸಿ ದಿವಾನರ ಭಾಷಣದ ಪ್ರತಿಗಳನ್ನು ಅಗ್ನಿದೇವನಿಗೆ ಅರ್ಪಿಸಿದರು.

ಈ ಕೋಲಾಹಲದಲ್ಲಿ ಮೈಸೂರಿನಲ್ಲಿ ಬೃಹತ್ ಜಾಗಟೆ ತಮಟೆಗಳ ಮೆರವಣಿಗೆ ನಡಸಿದೆವು. ಜಾಗಟೆ ಮತ್ತು ತಮಟೆಗಳ ಶಬ್ದವು ನಗರದಲ್ಲಿ ಪ್ರತಿಧ್ವನಿಗೊಂಡವು. ಜಾಗಟೆ ತಮಟೆಗಳನ್ನು ಗತ್ತಿಗೆ ಸರಿಯಾಗಿ ಬಾರಿಸುತ್ತ ಕಾರ್ಯಕರ್ತರಾದ ನಮ್ಮ ನೃತ್ಯ ಸುಗ್ಗಿಕುಣಿತದಂತಿದ್ದು ನೋಡುವ ಜನರಿಗೆ ಆಕರ್ಷಣೀಯ ಸನ್ನಿವೇಶವನ್ನುಂಟು ಮಾಡಿತ್ತು. ಮೆರವಣಿಗೆಯಲ್ಲಿ ಸಂಖ್ಯೆ ನೂರಾಗಿ ಸಿದ್ಧಗೊಂಡ ಮೇಲೆ ಮೈಸೂರಿನಲ್ಲಿ ಸಾವಿರವಾಗಿ ಸುಬ್ಬರಾಯನಕೆರೆ ಮೈದಾನ ತಲುಪುವ ಹೊತ್ತಿಗೆ ಹತ್ತು ಸಾವಿರಕ್ಕೂ ಮಿಕ್ಕ ಜನರು ಅಂದಿನ ಮೆರವಣಿಗೆಯಲ್ಲಿ ಭಾಗವಹಿಸಿದರು. ಸುಬ್ಬರಾಯನ ಕೆರೆ ಮೈದಾನ ಅಂದು ರಾಜಕೀಯ ಪಕ್ಷಗಳವರಿಗೆ ಲಂಡನ್‌ನಲ್ಲಿರುವ ಹೈಡ್ ಪಾರ್ಕಿನಂತಿತ್ತು. ಎಲ್ಲ ರಾಜಕೀಯ ಪಕ್ಷಗಳವರೂ ಕೆರೆ ಮೈದಾನದಲ್ಲೆ ತಮ್ಮ ಪಕ್ಷಗಳ ನೀತಿ ಮತ್ತು ಧೋರಣೆಗಳನ್ನು ವಿವರಿಸುತ್ತಿದ್ದರು. ಇಂದು ಸಹ ದಿವಾನರ ಭಾಷಣದ ಪ್ರತಿಗಳೆಂದು ಹೆಸರಿಸುವ ಕಾಗದದ ಸುರುಳಿಗಳನ್ನು ಜನರು ಒಬ್ಬೊಬ್ಬರಾಗಿ ಬಂದು ಬೆಂಕಿಗೆ ಹಾಕಿ ಹೋಗುವ ಸನ್ನಿವೇಶ ನೋಡಿದವರಿಗೆ ಜನರಲ್ಲಿ ದಿವಾನರ ವಿರುದ್ಧ ಭಾವನೆ ಹೇಗೆ

ಸ್ಫೋಟಗೊಂಡಿದೆ ಎಂಬುದು ವ್ಯಕ್ತವಾಗುತ್ತಿತ್ತು.

ಅಂದಿನ ನನ್ನ ಭಾಷಣದಲ್ಲಿ ರಾಜರತ್ನಂ ಅವರ ಗಂಡುಗೊಡಲಿಯನ್ನು ಅನುಕರಿಸಿದ ಕವನವನ್ನು ಬಿತ್ತರಿಸುತ್ತ ಮಾತನಾಡಿದೆ.

ಮೂರು ತೊಟ್ಟು ನೀರು ಬಿಟ್ಟು
ಮಸೆ ಗಂಡುಗೊಡಲಿ ಮಸೆ
ಮಿರ್ಜನದು ರಾಜ್ಯವಲ್ಲ
ರಾಜ್ಯ ದೇವನದು
ದೇವನೆದುರಲ್ಲಿ ಮಿರ್ಜ ಗಿರ್ಜರು ಒಂದೇ
ನಮ್ಮಂತೆ ಇವನೊಬ್ಬ
ಮಂತ್ರಿಯೆಂಬ ಹೆಸರೊಂದು
ತಗಲಿಕೊಂಡಾಕ್ಷಣಕೆ ಸ್ವೈರ್ಯವೃತ್ತಿಯ
ನೆತ್ತಿ ಮೆರೆಯಲೆಂದಿದೆಯೊ

ಮುಂತಾಗಿ ಬಿತ್ತರಿಸುತ್ತಿದ್ದಂತೆ ಜನಸ್ತೋಮವು ಗಾಂಧಿಕೀ ಜೈ- ಎಂಬ ಜೈಕಾರ ಹಾಕುತ್ತಾ ಚಪ್ಪಾಳೆ ತಟ್ಟುತ್ತ ತನ್ನ ಬೆಂಬಲವನ್ನು ಸೂಚಿಸಿತು.

ಈ ಮುನ್ನ ಬಿ. ನಾರಾಯಣಸ್ವಾಮಿ, ಎಂ. ಎಸ್. ಜೋಯಿಸರು. ಸೂರ್ಯನಾರಾಯಣ ಪಂಡಿತರು, ಟಿ. ಎಸ್. ರಾಜಗೋಪಾಲಯ್ಯಂಗಾರ್ ಅವರುಗಳೂ ಮಾತನಾಡಿ ದಿವಾನರ ಭಾಷಣವನ್ನು ತೀವ್ರವಾಗಿ ಖಂಡಿಸಿದ್ದರು.

ಮೈಸೂರಿನಲ್ಲಿ ದಸರಾ ಮೆರವಣಿಗೆ ಬಿಟ್ಟರೆ ಇಂದು ನಡೆದ ಮೆರವಣಿಗೆ ಜನರು ಎಂದೂ ಕಂಡರಿಯದ ಮೆರವಣಿಗೆಯಾಗಿತ್ತು. ಸುಬ್ಬರಾಯನ ಕೆರೆ ಮೈದಾನದ ಸಭೆಯಲ್ಲಿ ಭಾಷಣಕಾರರನ್ನು ಎಲ್ಲಿ ಯಾವ ಭಾಗದಲ್ಲಿ ನಿಂತಾದರು ನೋಡಲು ಸಾಧ್ಯವಾಗುವ ಅವಕಾಶವಿತ್ತು.

ಹುಣಸೂರು, ಕೃಷ್ಣರಾಜನಗರ, ಪಿರಿಯಾಪಟ್ಟಣ, ನಂಜನಗೂಡು. ಚಾಮರಾಜ ನಗರ, ಶ್ರೀರಂಗಪಟ್ಟಣ, ಟಿ. ನರಸೀಪುರಗಳ ಸಂತೆಯ ದಿನಗಳಲ್ಲಿ ಪ್ರತಿಭಟನಾ ಸಭೆಗಳನ್ನು ಸೇರಿಸಿ ದಿವಾನರ ಭಾಷಣಗಳ ಪ್ರತಿಗಳನ್ನು ಸುಡಲಾಯಿತು. ಈ ಒಂದು ಪ್ರಕರಣ ಗ್ರಾಮಾಂತರ ಜನಗಳಲ್ಲಿ ಒಂದು ರೀತಿಯ ಚೈತನ್ಯ ನೀಡಿತಲ್ಲದೆ, ಕಾಂಗ್ರೆಸ್ ಜನರ ಸಂಸ್ಥೆ, ಕಾಂಗ್ರೆಸ್ಸಿಗೆ ಸಹಾಯಕರಾಗಬೇಕೆಂಬ ಮನೋಭಾವನೆಯನ್ನುಂಟು ಮಾಡಿತು. ಈ ಒಂದು ಪ್ರಕರಣ ಬಿರುಗಾಳಿಯಂತೆ ರಾಜ್ಯಾದ್ಯಂತ ರಾಜಕೀಯ ಹೋರಾಟಕ್ಕೆ ಜನರನ್ನು ಅಣಿಮಾಡಿದಂತಾಗಿ ರಾಜ್ಯದ ಬುದ್ಧಿಜೀವಿಗಳು ಅದರಲ್ಲೂ ಬಹುತೇಕವಾಗಿ ಲಾಯರುಗಳು ಕಾಂಗ್ರೆಸ್ಸಿಗೆ ನೂಕು ನುಗ್ಗಲಲ್ಲಿ ಬಂದು ಸೇರಿದರು.

ದಿನಾಂಕ 6–10–37 ರಂದು ಬೆಂಗಳೂರು ಜೈಲಿನಿಂದ ಟಿ. ಸಿದ್ದಲಿಂಗಯ್ಯನವರಿಗೆ ಕೈಕೋಳ ಹಾಕಿ ಕರೆತರುವ ಸುದ್ದಿಯನ್ನು ಕಾರ್ಯಕರ್ತರಾದ ನಮಗೆ

ಸಾಹುಕಾರ್ ಚೆನ್ನಯ್ಯನವರು, ರಂಗರಾಮಯ್ಯನವರು ತಿಳಿಸಿದರು. ಸಂತೆ ಪೇಟೆಗೆ 10–15 ಮಂದಿ ಕಾರ್ಯಕರ್ತರುಗಳು ಹೋಗಿ ಸಿಕ್ಕಿದ ಮಂಡಿಗಳಿಂದ ಖಾಲಿ ಟಿನ್‌ಗಳನ್ನು ಎತ್ತಿಕೊಂಡು ರೈಲ್ವೆ ನಿಲ್ದಾಣಕ್ಕೆ ಬರುತ್ತ, ಟಿ. ಸಿದ್ಧಲಿಂಗಯ್ಯನವರ ಕೈಗೆ ಕೈಕೋಳ ಹಾಕಿ ಕರೆತರುತಿದ್ದಾರೆಂದು ಸಿಕ್ಕಿದ ಕಡೆ ಟಿನ್‌ಗಳನ್ನು ಬಡಿದು ಇದನ್ನು ವಿರೋಧಿಸಬೇಕೆಂದೂ ಕರೆಕೊಟ್ಟೆವು. ರೈಲ್ವೆ ನಿಲ್ದಾಣಕ್ಕೆ ಸುಮಾರು ಸಾವಿರಕ್ಕೂ ಹೆಚ್ಚು ಜನರನ್ನು ಸೇರಿಸಿದ್ದೆವು.

ರೈಲು ಬರುವುದನ್ನು ಜನರೊಡನೆ ಸಾಹುಕಾರ್ ಚೆನ್ನಯ್ಯನವರು, ಎಂ. ಎಸ್. ಜೋಯಿಸರು, ರಂಗರಾಮಯ್ಯನವರು, ಜನಾರ್ದನ ನಾಯ್ಡು, ಚಾಮುಂಡಯ್ಯ, ಬಾಳೆಹಣ್ಣಿಂಗಡಿ ಶಿವಣ್ಣನವರು, ಟಿ. ಎಸ್. ರಾಜಗೋಪಾಲಯ್ಯಂಗಾರ್, ಕಲಾಭವನದ ಸೂರ್ಯನಾರಾಯಣ ರಾಯರು, ಸೂರ್ಯನಾರಾಯಣ ಪಂಡಿತರು. ಎಂ. ಶಂಕರಯ್ಯನವರು, ಎಂ. ಆರ್. ಸಿ ಬಸಪ್ಪ(ಕಾಂಗ್ರೆಸ್ ಬೀಡಿ) ಹೀಗೆ ಹಲವಾರು ಮಂದಿ ಪ್ರಮುಖರು ಕಾಯ್ದು ನಿಂತಿದ್ದರು.

ರೈಲು ಬಂತು. ಛಳಿ ಉದ್ದನೆ ಕೋಟು ಧರಿಸಿದ್ದ ಟಿ. ಸಿದ್ಧಲಿಂಗಯ್ಯನವರು ರೈಲಿನಿಂದ ಇಳಿದರು. ಎಂ. ಎಸ್. ಜೋಯಿಸರು ಛಂಗನೆ ಗುಂಪಿನಿಂದ ಹಾರಿ ಸಿದ್ಧಲಿಂಗಯ್ಯನವರನ್ನು ತಬ್ಬಿ ಆನಂದಿಸಿದರು. ಸಿದ್ಧಲಿಂಗಯ್ಯನವರು ತಮ್ಮ ಕೈಯನ್ನು ಕೈಕೋಳ ಸಹಿತ ಕೋಟಿನ ಬಲಭಾಗದ ಜೇಬಿಗೆ ಸೇರಿಸಿಕೊಂಡಿದ್ದರು. ಇದು ಗೊತ್ತಾಗಲು 10 ನಿಮಿಷಗಳೇ ಬೇಕಾಯಿತು. ಕಾರಣ ಕೈ ಕುಲುಕಲು ಹೋಗುವ ಮುಖಂಡರಿಗೆ ಎಡಗೈಯನ್ನೇ ಕೊಡುತ್ತಿದ್ದರು. ಟಿ. ಎಸ್ ಸುಬ್ಬಣ್ಣ ಸ್ವಲ್ಪ ಚತುರನಾದ ಆಸಾಮಿ. ಎಡಗೈ ಬಲ್ಲೆ ಬಲಗೈ ಕೊಡಿ ಎಂದ ನಗುತ್ತ. "ಇಲ್ಲವೋ ಬಲಗೈ ಅವರ ಅಧೀನ ಅವರನ್ನುಕೇಳು"ಎಂದು ಪೋಲೀಸ್ ಇನ್ ಸ್ಪೆಕ್ಟರತ್ತ ಕೈ ತೋರಿಸಿದರು. ಕೈಕೋಳ ತೋರಿಸಿದರೆ ಗಲಾಟೆ ಆಗುವುದೆಂಬ ಆತಂಕ ಪೊಲೀಸರಿಗೆ. ನಗರದಿಂದ ಹೆಚ್ಚಿನ ಸಂಖ್ಯೆಯಲ್ಲಿ ಪೋಲೀಸರು ಬರುವುದನ್ನು ಕಾಯ್ದಿದ್ದ ಪೋಲೀಸರು ಜಬರ್ ಮಾಡಲು ಶುರು ಮಾಡಿದರು. ನಾವು ದಕ್ಕಲಿಲ್ಲ. ಪೋಲೀಸರನ್ನು ನೂಕಿ ಸಿದ್ಧಲಿಂಗಯ್ಯನವರನ್ನು ನಮ್ಮ ಗುಂಪಿನ ಕಡೆಗೆ ಎಳೆದುಕೊಂಡು ಹೋಗುವ ಪ್ರಯತ್ನ ಮಾಡಿದೆವು. ಈ ಪ್ರಯತ್ನದಲ್ಲಿ ಯು. ಕೆಂಚಪ್ಪ, ಸುಬ್ಬಣ್ಣ ಮತ್ತು ನನ್ನನ್ನು ಗುರ್ತಿಸಿದ್ದ ನಗರ ಪೋಲೀಸ್ ಇನ್ ಸ್ಪೆಕ್ಟರ್ ನಿಮ್ಮನ್ನು ದಸ್ತಗಿರಿ ಮಾಡಿದ್ದೇವೆಂದು ಹೆದರಿಸಿದರು.

ಮುಖಂಡರುಗಳು ಜನರನ್ನು ಸಮಾಧಾನ ಮಾಡಿ ಗಲಾಟೆಯಿಲ್ಲದೆ ತೆರಳುವಂತೆ ಬಿನ್ನವಿಸಿಕೊಂಡರು. ಸಿದ್ಧಲಿಂಗಯ್ಯನವರನ್ನು ಷಾಪಸಂದ್ ಗಾಡಿಗೆ ಕೂರಿಸಿಕೊಂಡ ಪೋಲೀಸರು ನಮ್ಮ ಮೂವರನ್ನು ಬೇರೊಂದು ಷಾಪಸಂದ್ ಗಾಡಿಗೆ ಕೂರಿಸಿದರು, ಸಿದ್ಧಲಿಂಗಯ್ಯನವರನ್ನು ಜೈಲಿಗೂ ನಮ್ಮನ್ನು ದೇವರಾಜ ಮಾರ್ಕೆಟ್ ಪೋಲೀಸ್ ಸ್ಟೇಷನ್‌ಗೂ ಕರೆದೊಯ್ದರು. "ಏನ್ರೋ ಲೋ ನಿಮಗೆ ಬಂದಿರೋದು ಸಿಟಿ ಜನ

ನೋಡ್ಕೊಳ್ಳಿ ನಿಮ್ಮ ಹಾಗೆ ಆಡ್ತಾರೇನ್ರೋ, ಎಷ್ಟು ಗಂಭೀರವಾಗಿದ್ದರು. ಎಲ್ರೋ ಕಾಡು ಕೋತಿಗಳ ಹಾಗೆ ಹಳ್ಳಿಯಿಂದ ಬಂದಿರೋ ನಿಮಗೆ ಆಗಲೇ ಎರಡ್ನೇಸಾರಿ ಶಾಸ್ತಿ ಮಾಡಿದ್ದೇವೆ. ಖಾಯಂ ಆಗಿ ಸೊಂಟ ಮುರಿದು ಮೂಲೆ ಪಾಡು ಮಾಡ್ತೀವಿ'' ಎಂದು ಅಬ್ಬರಿಸಿದ ಇನ್‌ಸ್ಪೆಕ್ಟರು.

ಆತನ ಅಬ್ಬರಕ್ಕೆ ನಾವು ಹೆದರಲಿಲ್ಲ. ಬೊಂಬಾಯಿಯಿಂದ ಕ್ರಾಂತಿ ಕಾರಿಗಳು ಬರುತ್ತಾರೆ. ನಿಮ್ಮ ಮನೆ ವಿಳಾಸ ಕೊಟ್ಟು ಖಾಯಂ ಆಗಿ ನೀವು ಭೂಮಿ ಮೇಲೆ ಇರ ಬಾರದು ಅಂತಹ ಕೆಲಸ ಮಾಡಿಸುತ್ತೇವೆ ಎಂದು ಬೆದರಿಸಿದೆವು. ಭಗತಸಿಂಗ್ ಮತ್ತು ಸ್ನೇಹಿತರನ್ನು ನೇಣುಗಂಬಕ್ಕೆ ಹಾಕಿದ ಮೇಲೆ ಮೈಸೂರೆ ಅಲ್ಲ ದೇಶದ ಎಲ್ಲ ಭಾಗ ಗಳ ಪೋಲೀಸರಿಗೆ ಕ್ರಾಂತಿಕಾರಿಗಳ ಭೂತ ಹಿಡಿದಿತ್ತು. ಹೊರಗಿನಿಂದ ಯಾರೇ ಬಂದರು ಅವರಿಗೆ ಸಂಶಯ. ಜನಜಾಗೃತಿ ಸಂಘದ ಸಂಬಂಧ ಕಲ್ಪಿಸಿ ನಮ್ಮನ್ನು ಪೀಡಿಸುತ್ತಿದ್ದರು. ಇಷ್ಟಾದರೂ ಎರಡು ದಿನಗಳು ಪೋಲೀಸ್ ಆಫೀಸಿನಲ್ಲಿರಿಸಿಕೊಂಡು ಅಚ್ಚುಕಟ್ಟಾದ ಊಟ ತಿಂಡಿ ಹಾಕಿ ಮನೆಗೆ ಕಳುಹಿಸಿದರು.

ಈ ಪ್ರಕರಣ ನಡೆದ ಎರಡು ವಾರಗಳಲ್ಲಿ ಟಿ. ಸಿದ್ಧಲಿಂಗಯ್ಯನವರು ಜೈಲಿನಿಂದ ಬಿಡುಗಡೆಯಾದರು. ಜೈಲಿನಿಂದ ಬರುವಾಗಲು ಸೂಟು ಟೈ, ಬೂಟು, ಹಾಕಿಕೊಂಡೆ ಹೊರ ಬಂದರು. ಪಿ. ಗೋಪಾಲ ಕೃಷ್ಣ ಶೆಟ್ಟರು, ಕಾಸಲು ಶ್ರೀನಿವಾಸ ಶೆಟ್ಟರು, ಎಂ. ಶಂಕರಯ್ಯನವರು, ಎಂ. ಎನ್. ಜೋಯಿಸರು, ಪಂಡಿತರು, ಸುಬ್ಬರಾವ್ ಉಪಾ ಧ್ಯಾಯ, ರಂಗರಾಮಯ್ಯನವರಾದಿಯಾಗಿ ಯುವಕರಾದ ನಾವು ಜೈಲು ಬಾಗಿಲ ಬಳಿ ಸ್ವಾಗತಿಸಿದೆವು. ಕಾಸಲು ಶ್ರೀನಿವಾಸ ಶೆಟ್ಟರು ಇವರ ಸಂಬಂಧಿ ರಾಜಂ ಶೆಟ್ಟರು ವಿಶೇಷ ರೀತಿಯಾಗಿ ಆಕರ್ಷಕವಾಗಿ ಕಟ್ಟಿಸಿದ್ದ ಹೂ ಹಾರವನ್ನು ಸಿದ್ಧಲಿಂಗಯ್ಯನವರಿಗೆ ಅರ್ಪಿಸಿದರು.

ಪಾಪಸಂದ್ ಗಾಡಿಯಲ್ಲಿ ಮೆರವಣಿಗೆ ಹೊರಟು ಸುಮಾರು 10 ಘಂಟೆಗೆ ಟೌನ್ ಹಾಲ್ ಮೈದಾನ ತಲುಪಿದೆವು. ಅಲ್ಲಿನ ಸಭೆಗೆ ಜನ ಬರಲು ಜಾಗಟೆ ಖಾಲಿ ಟಿನ್‌ಗಳನ್ನು ಬಡಿದು ತಿಳಿಸಿದ್ದೆವು. ಸಿದ್ಧಲಿಂಗಯ್ಯನವರು ಇಳಿಯುತ್ತಿದ್ದಂತೆಯೆ ಅಲ್ಲಿ ಭಾಷಣ ಮಾಡಬಾರದೆಂದು ಜಿಲ್ಲಾಧಿಕಾರಿಗಳ ಆಜ್ಞೆ ಜಾರಿ ಮಾಡಿದರು. ತಗಡೂರು ರಾಮಚಂದ್ರ ರಾಯರು ಹಾಸನದ ಜೈಲಿನಿಂದ ಬಿಡುಗಡೆಯಾಗಿ ಮೈಸೂರಿಗೆ ಇನ್ನೂ ಬಂದಿರಲಿಲ್ಲ. ಆ ಸಭೆಯಲ್ಲಿ ಯಾರೂ ಭಾಷಣ ಮಾಡಲಿಲ್ಲ. ಬಹುಶಃ ಸಭೆಯನ್ನೇ ನಿಷೇಧಿಸಿದ ಆಜ್ಞೆಯಾಗಿತ್ತೆಂದು ತೋರುತ್ತದೆ. ಅದರ ವಿವರ ನನಗೆ ಗೊತ್ತಿರಲಿಲ್ಲ.

ಸಿದ್ಧಲಿಂಗಯ್ಯನವರನ್ನು ಮಿರ್ಲೆ ಲಕ್ಷ್ಮೀನಾರಾಯಣ ರಾಯರ ಮನೆಗೆ ಊಟಕ್ಕೆ ಕರೆದುಕೊಂಡು ಹೋದರು. ನಾವು ನಮ್ಮ ಖಾಯಂ ಬಾಕಿ ಕೊಡುವ ಹೋಟೇಲಿಗೆ ಹೋಗಿ ಊಟ ಮಾಡಿದೆವು. ಸಂಜೆ 4 ಘಂಟೆಗೆ ದೇವನೂರಿನಲ್ಲಿ ಸಭೆ ಸೇರಿಸಲು ಡಿ. ಎಂ. ಸಿದ್ಧಯ್ಯನವರು ಏರ್ಪಾಟು ಮಾಡಿರುವುದಾಗಿ ತಿಳಿಸಿದರು. ಬೆಂಗಳೂರಿನಿಂದ

ಸಿದ್ಧಲಿಂಗಯ್ಯನವರ ಕಾರು ಮಧ್ಯಾಹ್ನ ಒಂದು ಘಂಟೆಗೆ ಬಂತು. ಈ ಮುನ್ನವೇ ಕಾರಿನ ಡ್ರೈವರ್ ಜಗನ್ನಾಥನ ಪರಿಚಯ ವೀರಣ್ಣಗೌಡರ ಸಂಜನಗೂಡಿನ ಸಭೆಯಲ್ಲಾಗಿತ್ತು. ಕಾರು ಹೇಗಯ್ಯ ಇದೆ ಎಂದೆವು! "ರಿಪೇರಿಯಾಗಿದೆ ಹತ್ತು ಜನ ಕೂತರು ಎಳೆಯಬಲ್ಲ ಶಕ್ತಿ ಹೊಸ ಹುರುಪು ಕಾರಿಗೆ ಬಂದಿದೆ" ಎಂದ ಜಗನ್ನಾಥ. ಅತನಿಗೂ ಹೋಟೆಲಿನಲ್ಲಿ ಊಟ ಹಾಕಿಸಿದೆವು.

ದೇವನೂರು ಸಭೆಗೆ ಹೊರಡಲು ಜೋಯಿಸರು, ಸಿದ್ಧಲಿಂಗಯ್ಯನವರ ಜೊತೆ ಗೂಡಿದರು. ಜೋಯಿಸರ ಭಾಷಣದ ಪದಗಳು ಕಂಚಿನ ಕುಡನಂತಿರುತ್ತಿದವು. ಜಗನ್ನಾಥನು ಹತ್ತಿರೋ ಎಲ್ಲೂ ತಳ್ಳೋಹಾಗಿಲ್ಲ. ಕಳೆದ ವಾರದಿಂದ ಎಲ್ಲೂ ಕೈಕೊಡ ಲಿಲ್ಲ ಮಹರಾಯನ ಕಾರು ಎಂದ. ಟಿ.ಎಸ್. ಸುಬ್ಬಣ್ಣ ತಪ್ಪಿಸಿಕೊಂಡ. ಜಗನ್ನಾಥನನ್ನು ಬಿಡಲೇ ಇಲ್ಲ. ನಾನು ಕಾರು ಹತ್ತಿದೆ. ದೇವನೂರಿಗೆ ಹೋದರೆ ನರಪಿಳ್ಳೆ ಮೈದಾನದಲ್ಲಿ ಸೇರಿಲ್ಲ. ಜಗನ್ನಾಥ ಕಾರಿನ ಡಿಕ್ಕಿಯಲ್ಲಿ ರೆಡಿಯಾಗಿ ಎರಡು ಟಿನ್‌ಗಳನ್ನು ಇಟ್ಟಿದ್ದ. ನನಗೊಂದು ಕೊಟ್ಟ ಅವನೊಂದು ತೆಗೆದುಕೊಂಡ. ಸರಿ ಹೊರಡಿ ಸಾರ್ ಊರೊಂದು ಸುತ್ತ ಮೆರವಣಿಗೆ ಬರೋಣ ಎಂದ ಜಗನ್ನಾಥ. ಸಿದ್ಧಲಿಂಗಯ್ಯನವರು, ಜೋಯಿಸರು, ಡಿ. ಎಂ. ಸಿದ್ಧಯ್ಯ, ಹೆಜ್ಜಿಗೆ ಲಿಂಗಣ್ಣ ಮತ್ತು ಹುಲ್ಲಳ್ಳಿ ಸಾಹೇಬರೊಬ್ಬರು ಗುಂಪಿಗೆ ಸೇರಿದರು. ನಾನು ಜಗನ್ನಾಥ ಟಿನ್‌ಗಳನ್ನು ಬಡಿದು "ನೋಡಿ ಹಿಂದೆ ಬರುತ್ತಿದ್ದಾರೆ ಜೈಲಿನಿಂದ ಬಂದ ಸಿದ್ಧಲಿಂಗಯ್ಯನವರು. ಮೈಸೂರಿನ ಜೋಯಿಸರು" ಮುಂತಾಗಿ ಮೆರವಣಿಗೆಯಿಂದ ಸ್ವಲ್ಪ ದೂರ ಮುಂದೆ ಹೇಳುತ್ತಾ ಹೋದೆವು. ಅಂತೂ ಸುಮಾರು ಜನ ಸೇರಿದರು. ಜವಾಬ್ದಾರಿ ಸರ್ಕಾರದ ವರ್ಣನೆ ಮಾಡಿದರು. ಮಿರ್ಜಾ ಅವರ ಖಂಡನೆ ಮಾಡಲಾಯಿತು. ಸಂಜೆ ದನ ಕರು ಬರುವ ಹೊತ್ತಿಗೆ ಸಭೆಯೂ ಮುಗಿಯಿತು. ಅಲ್ಲಿನ ಗುರುಮಠದಲ್ಲಿ ಉಪಾಹಾರ ಸ್ವೀಕರಿಸಿ ರಾತ್ರಿ ಏಳೂವರೆ ಘಂಟೆಗೆ ಮೈಸೂರಿಗೆ ಬಂದೆವು. ಆ ವೇಳೆಗಾಗಲೆ ಜೈಲಿನಿಂದ ಬಂದಿದ್ದ ತಗಡೂರರನ್ನು ರೈಲು ನಿಲ್ದಾಣದಿಂದ ಮೆರವಣಿಗೆಯಲ್ಲಿ ಕರೆ ತಂದಿದ್ದರು. ತಗಡೂರರು ಸಿದ್ಧಲಿಂಗಯ್ಯನವರಿಗೆ ಕಾಯ್ದಿದ್ದು ಮುಂದಿನ ಕಾರ್ಯಯೋಜನೆ ಬಗ್ಗೆ ಆಲೋಚನಾ ಮಗ್ನರಾದರು. ಅಂದಿನ ಪ್ರವಾಸ ದಲ್ಲಿ ಕಾರು ನಮ್ಮಿಂದ ತಳ್ಳಿಸಿ ಕೊಳ್ಳಲಿಲ್ಲ.

ಇದಕ್ಕು ಮೊದಲು ಕೆ. ಟಿ ಭಾಷ್ಯಂ, ಎನ್ ಸಿ. ತಿಮ್ಮಾರೆಡ್ಡಿಯವರನ್ನು ದಸ್ತಗಿರಿ ಮಾಡಿ ಜೈಲು ಶಿಕ್ಷೆಗೆ ಕಳುಹಿಸಿದ್ದು, ಸುಪ್ರಸಿದ್ಧ ಪತ್ರಿಕೋದ್ಯಮಿ ಬಿ. ಎನ್ ಗುಪ್ತರ ಗಡೀಪಾರು, ಆಕ್ಷನ್ ಸಮಿತಿ ಸದಸ್ಯರುಗಳಾದ ಟಿ.ಸಿದ್ಧಲಿಂಗಯ್ಯನರ ದಸ್ತಗಿರಿ ಹಾಗೂ ಅವರಿಗೆ ಕೈಕೋಳ ಹಾಕಿ ಜೈಲಿಗೆ ತಳ್ಳಿದುದು ಇವೆಲ್ಲ ಒಂದರ ಹಿಂದೊಂದು ಸೇರಿದಂತೆ ಬೊಂಬಾಯಿನ ಪ್ರಸಿದ್ಧಕಾಂಗ್ರೆಸ್ ಮುಖಂಡ ನರೀಮನ್ ದಸ್ತಗಿರಿ, ಇದರ ಪರಿಣಾಮ ವಾಗಿ ಬನಪ್ಪ ಪಾರ್ಕಿನಲ್ಲಾದ ಗೋಲೀಬಾರ್‌ನಲ್ಲಿ ಒಬ್ಬ ಬಾಲಕ ಸತ್ತದ್ದು ಇವೆಲ್ಲ ಒಂದು ಗೂಡಿ ಸರ್ಕಾರಕ್ಕೆ ಪಾಪದ ಹೊರೆ ಹೊರಲಾರದಷ್ಟಾಗಿ ಸಾಕಪ್ಪ ಎನಿಸುವ

ಮಟ್ಟಕ್ಕೆ ಹೋಗಿತ್ತು.

ಈ ಮೇಲಿನ ಘಟನಾವಳಿಗಳಿಂದ ರಾಜ್ಯದಲ್ಲೆಲ್ಲ ತೀವ್ರ ಪ್ರತಿಭಟನೆಗಳು ನಡೆದು, ರಾಜ್ಯದ ಹಳ್ಳಿ ಹಳ್ಳಿಗಳಲ್ಲೆಲ್ಲ ಸಭೆ ಮೆರವಣಿಗೆಗಳು, ಪಿಕೆಟಿಂಗ್ ಮುಂತಾದ ಪ್ರದರ್ಶನಗಳಿಂದ ಸರ್ಕಾರಕ್ಕೆ ಆತಂಕವುಂಟಾಗಿ ನಾನಾ ರೀತಿಯ ಪ್ರತಿಬಂಧಕಾಜ್ಞೆಗಳನ್ನು ಜಾರಿ ಮಾಡಿತ್ತು. ಅನೇಕ ಕಡೆ ಪ್ರತಿಬಂಧಕಾಜ್ಞೆಗಳನ್ನು ಮುರಿದದ್ದೂ ಆಯಿತು. ಮಿರ್ಜಾ ಅವರಿಗೆ ಬೆಂಬಲಿಗರಾಗಿದ್ದ ಬ್ರಾಹ್ಮಣೇತರ ಮುಖಂಡರು ಸರ್ಕಾರದ ವಿರುದ್ಧ ತಿರುಗಿ ಬಿದ್ದು ಕಾಂಗ್ರೆಸ್ಸಿಗೆ ವಿಲೀನಗೊಂಡ ಮುಖಂಡರು ಖಂಡ ತುಂಡಾಗಿ ಸರ್ಕಾರವನ್ನು ಬಗ್ಗು ಬಡಿಯಲು ಸೊಂಟ ಕಟ್ಟಿ ನಿಂತರು. ಸರ್ಕಾರದ ಪರಿಸ್ಥಿತಿ ಕೈಮೀರಿ ಹೋಗಿತ್ತು. ಸರ್ ಮಿರ್ಜಾ ಅವರ ಮನವಿಯಂತೆ ಗಾಂಧೀಜೀ ಅವರು ರಾಜಗೋಪಾಲಾಚಾರ್ಯರನ್ನು ರಾಜೀಸೂತ್ರ ಮಾಡಲು ಸಂಸ್ಥಾನಕ್ಕೆ ಕಳುಹಿಸಿದ್ದರು.

ರಾಜ್ಯದ ನಾನಾ ಕಡೆ ಪ್ರತಿಬಂಧಕಾಜ್ಞೆಗಳನ್ನು ಉಲ್ಲಂಘಿಸಿ ಸಾವಿರಾರು ಜನರು ಜೈಲುಗಳಿಗೆ ಹೋದರು. ಮೈಸೂರಿನ ಪ್ರಸಿದ್ಧ ಟೌನ್‌ಹಾಲ್ ಸತ್ಯಾಗ್ರಹದಲ್ಲಿ ನಗರ ಹಳ್ಳಿಗಳಿಂದ ಬಂದ ಸಾವಿರಕ್ಕು ಮೆಚ್ಚು ಮಂದಿ ಪ್ರತಿಬಂಧಕಾಜ್ಞೆ ಉಲ್ಲಂಘಿಸಿ ಜೈಲುವಾಸ ಅನುಭವಿಸಿದರು. ಈ ಉಲ್ಲಂಘನೆಗೆ 5 ತಿಂಗಳಿಂದ ಕೆಲವರಿಗೆ 8 ತಿಂಗಳು ಕಠಿಣ ಶಿಕ್ಷೆ ವಿಧಿಸಿದರು. ರಾಜಗೋಪಾಲಾಚಾರಿಯವರ ಮಧ್ಯಸ್ಥಿಕೆಯಿಂದ ಸತ್ಯಾಗ್ರಹಿಗಳಿಗೆ ಮೂರು ತಿಂಗಳ ಅವಧಿ ನಂತರ ಬಿಡುಗಡೆಯು ಆಯಿತು. ಈ ಬಿಡುಗಡೆಯಾಗುತ್ತಿದ್ದಂತೆಯೆ ಸುಭಾಷ್‌ಚಂದ್ರಬೋಸರ ಅಧ್ಯಕ್ಷತೆಯಲ್ಲಿ ಹರಿಪುರ ಕಾಂಗ್ರೆಸ್ ರಾಷ್ಟ್ರ ಕೂಟದ ವ್ಯವಸ್ಥೆಯು ಆರಂಭವಾಗಿತ್ತು. ಈ ಅಧಿವೇಶನಕ್ಕೆ ಮೈಸೂರು ಕಾಂಗ್ರೆಸ್ಸಿನ ನಾನಾ ಮುಖಂಡರು ಹೊರಟು ಗಾಂಧೀಜೀ ಆಶೀರ್ವಾದ ಪಡೆದು ರಾಜ್ಯದಲ್ಲಿ ತೀವ್ರ ಹೋರಾಟಕ್ಕೆ ಅನುವು ಮಾಡಿಕೊಂಡು ಬರಲು ಸನ್ನದ್ಧರಾದರು.

ಭಾರತದಲ್ಲಿ ಸಣ್ಣಪುಟ್ಟ ಪ್ರದೇಶಗಳನ್ನೊಳಗೊಂಡಂತೆ 563 ದೇಶೀಯ ಸಂಸ್ಥಾನಗಳು ಇದ್ದವು. ಇವುಗಳ ಅರಸರು ಬ್ರಿಟಿಷರಿಗೆ ಅಧೀನರಾಗಿ ಅವರಿಗೆ ಕಪ್ಪಕಾಣಿಕೆ ನೀಡುತ್ತಿದ್ದರು. ಒಟ್ಟಿನಲ್ಲಿ ಈ ದೇಶೀಯ ಸಂಸ್ಥಾನಗಳ ಆಗು ಹೋಗುಗಳು ಅಂತರ್ಯವಾಗಿ ಬ್ರಿಟಿಷರ ಕೈವಾಡದ ಕೃಪಾಶ್ರಯದಲ್ಲಿ ಬಾಳುತ್ತಿದ್ದವು. ದೇಶೀಯ ಸಂಸ್ಥಾನಗಳ ರಾಜಕೀಯ ಚಟುವಟಿಕೆಗಳಿಗೆ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಹೆಸರು ಬಳಸಬಾರದೆಂಬ ಕಟ್ಟುಪಾಡು ಬೇರೆ. ಇದರಿಂದಾಗಿ ದೇಶೀಯ ಸಂಸ್ಥಾನಗಳಲ್ಲಿ ಚಳುವಳಿಗಳನ್ನು ಸಂಘಟಿಸುವುದು ಕಷ್ಟವಾಗಿತ್ತು. ಅಖಿಲ ಭಾರತ ಕಾಂಗ್ರೆಸ್ ಮಹಾನಾಯಕರ ಅಭಿಪ್ರಾಯದಲ್ಲಿ ಇಂಗ್ಲೀಷರು ತೊಲಗಿದರೆ ರಾಜರುಗಳು ಹೇಳ ಹೆಸರಿಲ್ಲದೆ ತಾವಾಗೇ ತೊಲಗುವರು ಎಂಬ ಭಾವನೆ.

ದೇಶೀಯ ಸಂಸ್ಥಾನಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಶಾಖೆಗಳಿರಬಹುದು ಆದರೆ ಆ ಶಾಖೆಯು ಸತ್ಯಾಗ್ರಹ ಚಳುವಳಿ, ಕಾನೂನು ಭಂಗ ಮಾಡಬೇಕಾದರೆ

ತಮ್ಮದೇ ಆದ ಸ್ವತಂತ್ರ ರಾಜಕೀಯ ಪಕ್ಷವನ್ನು ಸಂಘಟನೆ ಮಾಡಿಕೊಳ್ಳಬೇಕು. ಈ ಸಂಸ್ಥೆಗೆ ಸದಸ್ಯರಾಗುವವರು ರಾಷ್ಟ್ರೀಯ ಮಹಾಸಭೆಗೆ ಸದಸ್ಯರಾಗಲೇಬೇಕು ಎಂಬ ನಿರ್ಣಯವನ್ನು ಹರಿಪುರ ಕಾಂಗ್ರೆಸ್ ಮೈಸೂರಿನ ಮುಖಂಡರ ಒತ್ತಾಯಕ್ಕೆ ಮಣಿದು ಅಂಗೀಕರಿಸಿತು. ಈ ಹಿಂದಿನ ನಿರ್ಣಯವನ್ನು ಸಹ ರದ್ದು ಮಾಡಿತು.

ಹರಿಪುರ ಕಾಂಗ್ರೆಸ್ ಮಹಾಧಿವೇಶನಕ್ಕೆ ಹೋಗಿದ್ದ ಮುಖಂಡರುಗಳು ಸ್ವತಂತ್ರ ಸಂಸ್ಥೆ ಸಂಘಟಿಸುವ ತೀರ್ಮಾನವನ್ನು ಹರಿಪುರ ಅಧಿವೇಶನದಲ್ಲಿ ಕೈಗೊಂಡರು. ಸ್ವತಂತ್ರ ಸಂಸ್ಥೆ ಹೆಸರಿನಲ್ಲಿ 1938ನೇ ನ್ಯಾಯವಿಧಾಯಕ ಸಭೆ ಚುನಾವಣೆಗೆ ಕಾಂಗ್ರೆಸ್ ಸ್ಪರ್ಧಿಸಬೇಕೆಂಬ ತೀರ್ಮಾನವನ್ನೂ ಕೈಗೊಂಡರು.

ದಿನಾಂಕ 28–2–1938ನೆಯ ಮಹಾಶಿವರಾತ್ರಿ ಅಂದು ಮೈಸೂರಿನಲ್ಲಿ ಮಿರ್ಲೆ ಲಕ್ಷ್ಮಿನಾರಾಯಣರಾಯರ ಮನೆಯಲ್ಲಿ ಟಿ. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಮುಖಂಡರ ಸಭೆ ಸೇರಿತ್ತು. ಸಭೆಗೆ ಪ್ರಮುಖ ಕಾರ್ಯಕರ್ತರು, ನಗರದ ಹಾಗೂ ಸಂಸ್ಥಾನದ ಎಂಟು ಜಿಲ್ಲೆಗಳಿಂದ ಬಂದಿದ್ದ ಕಾರ್ಯಕರ್ತರಲ್ಲಿ ನೂರಕ್ಕೆ 90 ಮಂದಿ ನ್ಯಾಯವಾದಿಗಳ ಸಂಖ್ಯೆಯಿತ್ತು. (ಆ ಕಾಲಕ್ಕೆ ಮಂಡ್ಯ ಜಿಲ್ಲೆ ಪ್ರತ್ಯೇಕವಾಗಿರದೆ, ಮೈಸೂರು ಜಿಲ್ಲೆಗೆ ಸೇರಿತ್ತು.) ಅಂದು ಮೈಸೂರು ಕಾಂಗ್ರೆಸ್ ಸ್ಥಾಪನೆಯಾಯ್ತು. ಸರಕಾರದ ದಬ್ಬಾಳಿಕೆಯನ್ನು ಪ್ರತಿಭಟಿಸಲು, ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ನಿಷ್ಕರ್ಷಿಸಲು, ಆದಷ್ಟು ಬೇಗ ಕಾಂಗ್ರೆಸ್ ರಾಷ್ಟ್ರಕೂಟವನ್ನು ಸೇರಿಸಬೇಕೆಂಬ ಉದ್ದೇಶವನ್ನು ಅಂದಿನ ಸಭೆಯಲ್ಲಿ ಕೈಗೊಳ್ಳಲಾಯಿತು. ಇದೇ ಸಭೆಯಲ್ಲಿ ಉಪಸ್ಥಿತರಿದ್ದ, ಹರಿಪುರ ಕಾಂಗ್ರೆಸ್ಸಿಗೆ ಟಿ. ಸಿದ್ಧಲಿಂಗಯ್ಯ ಇತರರೊಡನೆ ಹೋಗಿ ಬಂದಿದ್ದ ಸಾಹುಕಾರ್ ಚನ್ನಯ್ಯನವರಿದ್ದರು. ಹರಿಪುರ ಕಾಂಗ್ರೆಸ್ ಅಧಿವೇಶನದಂತೆ ನಮ್ಮಲ್ಲೂ ಅಷ್ಟೇ ಬೃಹತ್ ರಾಷ್ಟ್ರಕೂಟ ಏರ್ಪಾಡು ಮಾಡಲು ಒತ್ತಾಸೆಯಾಗುವುದಾಗಿ ಹೇಳಿದರು.

ರಾಷ್ಟ್ರಕೂಟದ ಏರ್ಪಾಡು ಮಾಡಲೆಂದು ಸಾಹುಕಾರ್ ಚನ್ನಯ್ಯನವರ ಮನೆಯಲ್ಲಿ ಪ್ರತ್ಯೇಕ ಸಭೆ ಸೇರಿತು. ಆ ಸಭೆಯಲ್ಲಿ ಎಚ್. ಸಿ. ದಾಸಪ್ಪನವರು ಶಿವಪುರದ ತಿರುಮಲೇಗೌಡರು, ಶ್ರೀರಂಗಪಟ್ಟಣದ ಎ. ಜಿ. ಬಂದೀಗೌಡರು, ಇಂಡುವಾಳ ಹೆಚ್. ಹೊನ್ನಯ್ಯನವರು, ಪಾಲಳ್ಳಿ ಸೀತಾರಾಮಯ್ಯನವರು, ನಂಜನಗೂಡಿನ ವಿಶ್ವೇಶ್ವರಗೌಡರು, ಎಂ. ಎನ್. ಜೋಯಿಸ್ ಹೀಗೆ ನಾನಾ ಮುಖಂಡರು ಅಂದಿನ ಸಭೆಯಲ್ಲಿ ಹಾಜರಿದ್ದರು. ಮೊದಲಿಂದ ಕಾಂಗ್ರೆಸ್‌ನಲ್ಲಿದ್ದ ಬ್ರಾಹ್ಮಣ ಮುಖಂಡರಿಗೂ, ಕಾಂಗ್ರೆಸ್‌ನಲ್ಲಿ ವಿಲೀನಗೊಂಡ ಬ್ರಾಹ್ಮಣೇತರ ಮುಖಂಡರಿಗೂ ಇನ್ನೂ ಸರಿಯಾದ ಭಾವೈಕ್ಯತೆಯ ಅಭಾವ ಎದ್ದು ಕಾಣುತಿತ್ತು. ಕಾಂಗ್ರೆಸ್ ಎಂದರೆ ಬ್ರಾಹ್ಮಣರದು ಎನ್ನುವ ಧೋರಣೆ ಜನರಲ್ಲಿ ನೆಲೆ ಮಾಡಿತ್ತು. ಬ್ರಾಹ್ಮಣೇತರ ನಾಲ್ಕಾರು ಮಂದಿ ನನ್ನಂತಹ ಪಡ್ಡೆ ಹುಡುಗರನ್ನು ಬಿಟ್ಟರೆ ಹೆಸರಾಂತ ಜನರು

ಕಾಂಗ್ರೆಸ್‌ನಲ್ಲಿರಲಿಲ್ಲ. ಹುಡುಗರಾದ ನಾವು ಜಾಗಟೆ, ಸೀಮೆಎಣ್ಣೆ ಟಿನ್‌ಗಳನ್ನು ಬಡಿದು ಸಭೆಗೆ ಕರೆ ಹೇಳಲು ಕನ್ನೇಗೌಡನ ಕೊಪ್ಪಲು ಇನ್ನಿತರ ಒಕ್ಕಲಿಗರ ಪ್ರಮುಖ ಸ್ಥಳಗಳಿಗೆ ಹೋದಾಗ ನಮ್ಮನ್ನು ಹೋಗ್ರೋ ಲೋ ನಿಮಗೇನು ಮಾಡಲು ಕೆಲಸ ವಿಲ್ಲವೆ ? ಯಾಕ್ರೋ ಬ್ರಾಹ್ಮಣರ ಕಚ್ಚೆ ಹಿಡಿದು ತಿರುಗುತ್ತೀರಿ ಎನ್ನುತ್ತಿದ್ದರು.

ಎಲ್ಲರೂ ಕಾಂಗ್ರೆಸ್‌ಗೆ ಸದಸ್ಯರಾಗಿ ಏಲಕ್ಕಪ್ಪಾಚಾರಿ ಛತ್ರದಲ್ಲಿ ಸೇರಿದ್ದರು. ಅದೇಕೋ ಏನೋ ಇನ್ನು ಮೈಛಳಿ ಬಿಟ್ಟಂತಿರಲಿಲ್ಲ. ಯಾವುದಾದರು ಮೀಟಿಂಗಿಗೆ ನಾವು ಬ್ರಾಹ್ಮಣ ಮುಖಂಡರನ್ನು ಕರೆಯಲು ಹೋದರೆ. ಬಂದಿದ್ದಾರಲ್ಲ ಘಟಾನು ಘಟಿಗಳು ದೇಶೋದ್ಧಾರಕರು ಮಾಡುತ್ತಾರೆ ಹೋಗ್ರೋ ಎನ್ನುತ್ತಿದ್ದರು. ಕಾರಣ ಸಾಹುಕಾರ್ ಚನ್ನಯ್ಯನವರ ಮನೆ ಸಭೆಗೆ ಸುಮಾರು 30 ಮಂದಿಯನ್ನು ಕರೆದಿದ್ದೆವು ಬಂದವರು ಕೆಲವೇ ಮಂದಿ.

ಇಕ್ಕೆಲದ ಮುಖಂಡರಲ್ಲು ಛಳಿ ಬಿಡಿಸಿದವರೆಂದರೆ ಎಂ. ಎಸ್. ಜೋಯಿಸರು ಮತ್ತು ತಗಡೂರು ರಾಮಚಂದ್ರರಾಯರು ಎಂದು ಹೆಸರಿಸಿದರೆ ತಪ್ಪಾಗಲಾರದು. ಎಂ. ಎಸ್. ಜೋಯಿಸರದು ಈ ವಿಚಾರದಲ್ಲಿ ಬಹುಮುಖ ಪಾತ್ರ. ಆ ಮೀಟಿಂಗ್ ಈ ಮೀಟಿಂಗ್ ಎಂದು ದಿನಬಿಟ್ಟು ದಿನ ಕರೆದು ಎಲ್ಲರನ್ನು ಒಂದೆಡೆ ಕಲೆ ಹಾಕಿ ನಾವೆಲ್ಲ ಒಂದೇ ಎನ್ನುವ ಭಾವನೆ ಒಡಮೂಡಿಸಲು ಮಹಾಪ್ರಯತ್ನ ಮಾಡಿದರು. ಇವರಿಂದಾಗಿ ಎಲ್ಲರು ಒಂದಾದ ತಿಂಗಳಲ್ಲೆ ಜೊತೆಗೂಡಿದರು. ನಾವು ಬೇರೆ ಬೇರೆ ಇದ್ದೆವು ಎನ್ನುವ ಭಾವನೆಯೇ ಮಾಯವಾಯಿತು. ಸಂಜೆ ಆಯ್ತೆಂದರೆ ಜೋಯಿಸರು ಎಚ್.ಸಿ. ದಾಸಪ್ಪನವರ ಆಫೀಸಿಗೆ ಹಾಜರಾಗುತ್ತಿದ್ದರು. ಇಲ್ಲಿ ಟಿ. ಮರಿಯಪ್ಪನವರು, ಎ. ಜಿ. ಬಂದೀಗೌಡರು, ಎಚ್. ಸಿ. ದಾಸಪ್ಪನವರು, ಗ್ರಾಮಾಂತರಗಳಿಂದ ಲಾಯರ್ ಆಫೀಸಿಗೆ ಬಂದ ಕಕ್ಷಿದಾರರುಗಳಿರುತ್ತಿದ್ದರು. ದಾಸಪ್ಪನವರಿಗಂತು ಜೋಯಿಸರನ್ನು ಕಂಡರೆ ಅಪಾರ ಪ್ರೇಮ. ಜೋಯಿಸರು ಬಂದೊಡನೆಯೆ ಎದ್ದುನಿಂತು ಹಸ್ತ ಲಾಘವವನ್ನಿತ್ತು ಬಾರಯ್ಯ ಹೋರಾಟದ ಕಲಿ ನೀನು ನಮ್ಮೂರ ಸರ್ದಾರ ಪಟೇಲನಾಗಬೇಕು ಎಂದು ಹೇಳುತ್ತಿದ್ದರು. ಜೋಯಿಸರೇ ನಾವು ಮೂರು ನಾಲ್ಕು ಜನಕ್ಕೆ ಗಾಂಧಿ ಅವರಿದ್ದಂತೆ. ಅವರೆಲ್ಲಿದ್ದಾರೆ ನಾವು ಅಲ್ಲಿರುತ್ತಿದ್ದೆವು. ನಮಗೆ ಏನು ಹೇಳಬೇಕಾದರೂ ಜೋಯಿಸರೇ ಹೇಳಬೇಕು. ಬೇರೆಯವರು ಯಾರು ಏನು ಹೇಳಿದರೂ ಜಪ್ಪಯ್ಯ ಎಂದರೂ ಜಗ್ಗದ ಮೊಂಡಾಟದವರು ನಾವು.

ಇನ್ನು ಸಾಹುಕಾರ್ ಚನ್ನಯ್ಯನವರ ಮನೆ ಸಭೆಯತ್ತ ಹೋಗೋಣ. ಆ ಸಭೆಯಲ್ಲಿ 1938ನೇ ಏಪ್ರಿಲ್ ಮಾಹೆ ಮಧ್ಯಭಾಗದಲ್ಲಿ ರಾಷ್ಟ್ರಕೂಟ ನಡೆಸಲು ತೀರ್ಮಾನಿಸಿದರು. ಈ ಕೂಟವನ್ನು ಎಲ್ಲಿ ಸೇರಿಸುವುದು ಎಂಬ ಬಗ್ಗೆ ಚರ್ಚೆಯಾಗಿ, ಮದ್ದೂರಿನ ಬಳಿ ಶಿವಪುರದಲ್ಲಿ ಶಿಂಷಾ ನದಿಯಿದ್ದು ಬಂದ ಜನರಿಗೆ ಸ್ನಾನಾದಿಗಳಿಗೆ ಸೌಕರ್ಯವಿದೆ ಮೈಸೂರು ಮತ್ತು ಬೆಂಗಳೂರಿನ ಮಧ್ಯ ರೈಲ್ವೆ ಸೌಕರ್ಯ ಇದ್ದು

ಮದ್ದೂರಲ್ಲೇ ನಡೆಸಲು ಅಂತಿಮವಾಗಿ ತೀರ್ಮಾನ ಕೈಗೊಳ್ಳಲಾಯ್ತು.

ಈ ತೀರ್ಮಾನದಂತೆ ಸ್ವಾಗತಸಮಿತಿಗೆ ಸಾಹುಕಾರ್ ಚನ್ನಯ್ಯನವರು ಅಧ್ಯಕ್ಷರು, ಎಚ್.ಸಿ. ದಾಸಪ್ಪನವರು, ಪಿ. ತಿರುಮಲೇಗೌಡರು, ಎಸ್.ರಂಗರಾಮಯ್ಯನವರು ಉಪಾಧ್ಯಕ್ಷರು, ಕೊಪ್ಪದ ಜೋಗಿಗೌಡರು ಖಜಾಂಚಿಗಳು, ಎಂ. ಎಸ್. ಜೋಯಿಸರು ಜಿ. ಓ. ಸಿ., ಎಚ್. ಕೆ. ವೀರಣ್ಣಗೌಡರು ಮತ್ತು ಎ. ಜಿ. ಬಂದೀಗೌಡರು ಪ್ರಧಾನ ಕಾರ್ಯದರ್ಶಿಗಳಾಗಿ ಆಯ್ಕೆ ಆದರು.

ಈ ತೀರ್ಮಾನದ ಪ್ರಾತಃಕಾಲವೇ ಶಿವಪುರಕ್ಕೆ ಹೋಗಿ ಪಿ. ತಿರುಮಲೇಗೌಡರ ಮನೆಯಲ್ಲಿ ಸ್ವಾಗತಕಚೇರಿ ತೆರೆಯಲಾಯಿತು. ಅವರ ಎದುರು ಮನೆಯನ್ನು ಸ್ವಯಂಸೇವಕರುಗಳಿಗಾಗಿ ಜಿ. ಓ. ಸಿ. ಜೋಯಿಸರು ಉದ್ಘಾಟಿಸಿದರು.

ಮುಖಂಡರುಗಳ ಸಭೆ ತೀರ್ಮಾನದಂತೆ ಯಾವುದೂ ಇಲ್ಲ ಎನ್ನದಂತೆ ಜನತೆ ರಾಷ್ಟ್ರಕೂಟಕ್ಕೆ ಎಲ್ಲ ನೆರವು ನೀಡಿತು. ಎಲ್ಲೆಲ್ಲು ಖಾದಿ ಟೋಪಿ ಧರಿಸಿದ ಜನರ ನೋಟ. 8-4-38 ರಂದು ರಾಷ್ಟ್ರಕೂಟವು ರಾಷ್ಟ್ರಾಧ್ಯಕ್ಷ ಟಿ. ಸಿದ್ಧಲಿಂಗಯ್ಯನವರ ಮೆರವಣಿಗೆಯಿಂದ ಆರಂಭವಾಯ್ತು. ತ್ರಿವರ್ಣಧ್ವಜ ಹಾರಿಸಬಾರದೆಂಬ ಸರ್ಕಾರದ ಪ್ರತಿಬಂಧಕಾಜ್ಞೆ ಧಿಕ್ಕರಿಸಿ ನಾನಾ ಮುಖಂಡರುಗಳು ಜೈಲುವಾಸಕ್ಕೆ ತೆರಳಿದರು. ದೇಶೀಯಸಂಸ್ಥಾನಗಳಲ್ಲಿ ಮೊದಲಿನದಾಗಿ ಮೈಸೂರು ಸಂಸ್ಥಾನ ಕೈಗೊಂಡ ಹೋರಾಟ ರಾಷ್ಟ್ರದಲ್ಲೇ ಪ್ರಮುಖ ಘಟನೆಯಾಯಿತು. ಈ ಹೋರಾಟದ ಮಾರ್ಗದರ್ಶನದಿಂದ ರಾಷ್ಟ್ರದ ಇತರ ದೇಶೀಯ ಸಂಸ್ಥಾನಗಳ ಜನರು ಸಂಘಟಿತರಾಗಲು ಅನುಕೂಲವಾಯಿತು. ದೇಶೀಯ ಸಂಸ್ಥಾನಗಳ ಜನರು ಹೋರಾಟ ನಡೆಸಿ ಜನರಲ್ಲಿ ಜಾಗ್ರುತಿ ಮೂಡಿಸಿ ಸ್ವತಂತ್ರರಾಗಲು ಅಣಿ ಮಾಡಿದರು.

ಮುಂದೆ 1947ರ ಆಗಸ್ಟ್ ಅರ್ಧರಾತ್ರಿಯಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಘೋಷಣೆ ಮಾಡಿ ದೇಶೀಸಂಸ್ಥಾನಗಳ ಆಳರಸರು ಸ್ವತಂತ್ರರೆಂದು ತಿಳಿಸಿದರು. ಇದರ ಪರಿಣಾಮವಾಗಿ ಹೈದರಾಬಾದ್ ಮತ್ತು ಜುನಾಘಡ್ ಅರಸರು ನಾವು ಸ್ವತಂತ್ರರೆಂದು ಹೇಳಿ ಕೇಂದ್ರ ಸರ್ಕಾರದ ಮೇಲೆ ಸಿಡಿದೆದ್ದರು. ದೈವವಶಾತ್ ಕೆಚ್ಚಿನ ಉಕ್ಕಿನ ಸ್ವಭಾವದ ಪಟೇಲರು ಆರಂಭದಲ್ಲೇ ಹತ್ತಿಕ್ಕಿದರು. ಅದಲ್ಲದೆ ಆ ಅರಸರಿಬ್ಬರು ಇಂಗ್ಲಿಷರ ಬೆಂಬಲ ಕೇಳಲು ಅವಕಾಶವಾಗಿದ್ದರೆ ಪುನಃ ಇಂಗ್ಲೀಷರು ಭಾರತ ನೆಲದ ಮೇಲೆ ಪದಾರ್ಪಣ ಮಾಡಲು ಅನುಕೂಲ ವಾತಾವರಣ ಏರ್ಪಡುತಿತ್ತು. ಇಂತಹ ದುಷ್ಪರಿಣಾಮ ರಾಷ್ಟ್ರದಲ್ಲಿ ನಡೆಯದಂತಾಗಲು ಹರಿಪುರದನಂತರ ಬಂದ ಶಿವಪುರ ರಾಷ್ಟ್ರಕೂಟ ಚರಿತ್ರಾರ್ಹ ಪ್ರಮುಖ ಘಟನೆಯಾಯಿತು.

ಶಿವಪುರ ರಾಷ್ಟ್ರಕೂಟಕ್ಕೆ ಸ್ವಯಂಸೇವಕರುಗಳು ಬೇಕು ಎಂಬ ಜಿ. ಓ. ಸಿ. ಎಂ. ಎಸ್. ಜೋಯಿಸರ ಪ್ರಕಟಣೆ ನೋಡಿ ತಾಮುಂದು ನಾಮುಂದು ಎಂದು ಸಾವಿರಗಟ್ಟಲೆ ಯುವಕರು ರಾಷ್ಟ್ರಕೂಟ ಸೇರುವ ಮುನ್ನ 12 ದಿನ ಮೊದಲೇ

ಬಂದು ಸೇರಿದರು. ಜಿ. ಓ. ಸಿ. ಯವರು ಸಂಜೆಗೆ ಮುಗಿಸಿ ಎಂದು ತೋರುವ ಕೆಲಸವನ್ನು ಮಧ್ಯಾಹ್ನವೇ ಮುಗಿಸುತ್ತಿದ್ದರು.

ಬೆಳಗಿನ 4–30 ಘಂಟೆಗೆ ಎದ್ದು ಕವಾಯಿತು ಮಾಡಿ 5–30 ಘಂಟೆಗೆ ಶಿಂಷಾ ನದಿಯಲ್ಲಿ ಸ್ನಾನ ಮಾಡಿ 6–30ಕ್ಕೆ ಪ್ರಾರ್ಥನಾ ಸಭೆ ಮುಗಿಸಿ ಉಪಾಹಾರ ಮುಗಿಸಿ ಅವರವರಿಗೆ ನೇಮಕ ಮಾಡಿದ ಕೆಲಸಕ್ಕೆ ನಿಯೋಜಿತರಾಗುತ್ತಿದ್ದರು. ರಾಮನು ಸೇತುಬಂಧನಕ್ಕೆ ಕರೆ ಬಂದಾಗ ಸೇರಿದ ಕಪಿಸೇನೆಯಂತೆ ಸ್ವಯಂಸೇವಕರು ರಾಜ್ಯಾದ್ಯಂತ ಬಂದು ಸೇರುತ್ತಲೇ ಇದ್ದರು. ಯುವಕರಿಗೆಲ್ಲ ಎಂ. ಎನ್. ಜೋಯಿಸರು ಎಂದರೆ ವಿಶೇಷ ಅಭಿಮಾನ. ಅವರಲ್ಲಿ ರಾಷ್ಟ್ರಕೂಟ ಮುಗಿವವರೆಗೂ ಸ್ವಯಂಸೇವಕರು ಶಿಸ್ತು ಸಂಯಮ ಪಾಲಿಸಿ ಧ್ವಜ ಸತ್ಯಾಗ್ರಹ ನಡೆಸಲು ಅವರುಗಳ ಸ್ಥಳಗಳಿಗೆ ತೆರಳಿದರು.

# ಅಧ್ಯಾಯ–ಐದು

೧

1938ನೆಯ ಇಸವಿಯಲ್ಲಿ ಮೈಸೂರು ಕಾಂಗ್ರೆಸ್ಸು ಸರ್ಕಾರದ ವಿರುದ್ಧ ನಾನಾ ಹೋರಾಟಗಳನ್ನು ನಡೆಸಿತು ಮತ್ತು ಪ್ರಜಾಪ್ರತಿನಿಧಿ ಸಭೆ ಚುನಾವಣೆಗಳಲ್ಲಿ ಸಾಧಾರಣ ಜಯಗಳಿಸಿತು. ಕಾಂಗ್ರೆಸ್ಸಿನ ತ್ರಿವರ್ಣಧ್ವಜವು ಸಂಸ್ಥಾನದ ಹಳ್ಳಿಗಳಲ್ಲಿ ಎತ್ತರದ ಮರಗಳ ಮೇಲೆ ಹಾರಾಡಲು ಆರಂಭಿಸಿದುವು.

ಶಿವಪುರ ರಾಷ್ಟ್ರಕೂಟಾನಂತರ ವಿದುರಾಶ್ವತ್ಥ ಧ್ವಜಸತ್ಯಾಗ್ರಹದಲ್ಲಿ ಸಂಸ್ಥಾನದ ಐ.ಜಿ.ಪಿ. ಆಗಿದ್ದ ಆಂಗ್ಲಅಧಿಕಾರಿ ಹ್ಯಾಮಿಲ್‌ಟನ್ ಶಾಂತಪ್ರಿಯರೂ, ನಿರಾಯುಧರೂ ಆದ ಸತ್ಯಾಗ್ರಹಿಗಳ ಮೇಲೆ ಗುಂಡುಹಾರಿಸಿ ಸಂಸ್ಥಾನದಲ್ಲಿ ದೊಡ್ಡ ಕೋಲಾಹಲವುಂಟುಮಾಡಿದ. ಮೈಸೂರಿನಲ್ಲಿ ಹಾಲಿ ಸೆಂಟ್ರಲ್ ಪೋಲೀಸ್ ಸ್ಟೇಷನ್, ಡಿ. ಸಿ. ಸಿ ಬ್ಯಾಂಕ್, ಮೈಸೂರು ಬ್ಯಾಂಕ್ ಮತ್ತು ಕೇಂದ್ರ ಅಂಚೆ ಕಛೇರಿ ಕಾರ್ಯಾಲಯ ಇರುವ ಚೌಕವಲ್ಲಿ, ಈಗಿನ ಸೆಂಟ್ರಲ್ ಪೋಲೀಸ್ ಸ್ಟೇಷನ್‌ಗೆ ವಿದುರಾಶ್ವತ್ಥ ದುರಂತದ ಕೊಡುಗೆಯಾಗಿ ದಿವಾನರು ಹ್ಯಾಮಿಲ್ಟನ್ ಅವರ ಹೆಸರನ್ನು ಆ ಕಟ್ಟಡಕ್ಕೆ ಕೆತ್ತಿಸಿದರು. ಇದರ ವಿರುದ್ಧ ನಗರದ ನಾಗರಿಕರು ಸಿಡಿದೆದ್ದರು. ಹ್ಯಾಮಿಲ್ಟನ್ ಹೆಸರು ತೆಗೆಸಿಬಿಡಿ ಎಂಬ ಒತ್ತಾಯವನ್ನು ಕಾಂಗ್ರೆಸ್ ವರಿಷ್ಠರಲ್ಲಿ ಮಾಡಿದರು.

ಧ್ವಜಸತ್ಯಾಗ್ರಹವನ್ನು ಸಂಸ್ಥಾನದಾದ್ಯಂತ ನಡೆಸಿ ಕಾರಾಗೃಹ ಅನುಭವಿಸಿ ಬಿಡುಗಡೆಯಾಗಿದ್ದರು ಸಹಸ್ರಾರು ಮಂದಿ ಸತ್ಯಾಗ್ರಹಿಗಳು. ಆದ್ದರಿಂದ ನಾಲ್ಕಾರು ತಿಂಗಳು ಕಾಲಾವಕಾಶದ ನಂತರ "ಹ್ಯಾಮಿಲ್‌ಟನ್" ಹೆಸರಿನ ಬಗ್ಗೆ ಕೈಗೊಳ್ಳಬೇಕಾದ ಕಾರ್ಯಕ್ರಮ ರೂಪಿಸಲು ಪರಿಷ್ಠ ಮಂಡಲಿ ಆಲೋಚಿಸಿತು. ಜನಸಾಮಾನ್ಯರ ನಿಕಟ ಸಂಪರ್ಕಪಡೆದಿದ್ದ ತಗಡೂರು ರಾಮಚಂದ್ರರಾಯರು ಮತ್ತು ಎಂ. ಎನ್. ಜೋಯಿಸ ರಿಗೆ ಆ ಕಾಲಕ್ಕೆ ನಗರದ ಕಾಂಗ್ರೆಸ್ ಗಣ್ಯರು ಮತ್ತು ನಗರದ ಜನರಿಗೆ ಹ್ಯಾಮಿಲ್‌ಟನ್ ಅವರ ಹೆಸರು ಬೆಳಗಾಗೆದ್ದು ನೋಡುವುದು ಸೈರಣೆ ಆಗಲಿಲ್ಲ.

ನಾಗರಿಕರು ತಗಡೂರರು ಮತ್ತು ಎಂ. ಎನ್. ಜೋಯಿಸರಲ್ಲಿ ಕಠೋರವಾದ ಸತ್ಯಾಗ್ರಹ ನಡೆಸಿಯಾದರೂ ಆತನ ಹೆಸರನ್ನು ಅಳಿಸಲೇಬೇಕು, ನಿಮ್ಮ ಬೆನ್ನ ಹಿಂದೆ ನಾವು ಬರುತ್ತೇವೆ ಮುಂತಾಗಿ ಒತ್ತಾಯ ತಂದರು, ಜನಸಾಮಾನ್ಯರ ಒತ್ತಾಯಕ್ಕೆ ತಗಡೂರರು ಮಣಿದರು. ಕಾಂಗ್ರೆಸ್ ಕಾರ್ಯಕಾರಿ ಮಂಡಲಿಯಲ್ಲಿ ಜನರ ಅಭಿಪ್ರಾಯ ತಿಳಿಸಿದರು, ಕಾರ್ಯಕಾರಿ ಮಂಡಲಿ ತನ್ನ ಹಿಂದಿನ ನಿರ್ಣಯ ಬದಲಿಸಲು ಮೀನ

ಮೋಷ ಎಣಿಸಿತು. ಕಾರ್ಯಕಾರಿ ಮಂಡಲಿಯು ವೈಯಕ್ತಿಕವಾಗಿ ಸೂಕ್ತವಾದ ಕಾರ್ಯಕ್ರಮದ ಮೂಲಕ ಹ್ಯಾಮಿಲ್ಟನ್ ಹೆಸರು ತೆಗೆಸಲು ಅವಕಾಶ ನೀಡುವಂತೆ ತಗಡೂರರು ತಂದ ಒತ್ತಾಯಕ್ಕೆ ಕಾಂಗ್ರೆಸ್ ಕಾರ್ಯಕಾರಿ ಮಂಡಲಿ ಮಣಿಯಿತು. ತಗಡೂರು ರಾಮಚಂದ್ರರಾಯರು ವೈಯಕ್ತಿಕವಾಗಿ ಕಾಂಗ್ರೆಸ್ಸಿನ ಹೆಸರಿನಲ್ಲಿ ಸೂಕ್ತ ಕಾರ್ಯಕ್ರಮ ಕೈಗೊಳ್ಳಬಹುದೆಂಬ ನಿರ್ಣಯ ಅಂಗೀಕರಿಸಿದರು,

ತಗಡೂರು ರಾಮಚಂದ್ರರಾಯರು, ಎಂ.ಎನ್. ಜೋಯಿಸರು, ಚಾಮುಂಡಯ್ಯನವರು, ಜನಾರ್ದನ ನಾಯ್ಡು, ಎಂ. ಆರ್. ಬಸಪ್ಪ, ಕಲಾಭುವನ ಸೂರ್ಯನಾರಾಯಣ ಪಂಡಿತರು, ಶಾಸ್ತ್ರಿಗಳು, ಸುಬ್ಬರಾವ್ ಉಪಾಧ್ಯಾಯ, ತರುಣ ವರ್ಗದ ಪಿ. ಎನ್. ಜವರಪ್ಪಗೌಡ, ಟಿ. ಎಸ್. ಸುಬ್ಬಣ್ಣ, ಎ. ರಾಮಣ್ಣ, ಶಂಭು, ರಾಜಶೇಖರ್, ದೊಡ್ಡವಕ್ಕಲಗೇರಿಯಿಂದ ಮಾಡರನ್ ಮ್ಯಾಚ್ ಕಂಪೆನಿ ಮಾಲೀಕರಾದ ಶ್ರೀ ಚಂದ್ರಶೇಖರ್, ಸುಬ್ಬಯ್ಯ, ಅರಕೆರೆ ಯು. ಕೆಂಚಪ್ಪ, ಕೃಷ್ಣೇಗೌಡ, ಪ್ಲಾಪಯ್ಯ, ಶರಣು ಮೊದಲಿಯಾರ್ ಬಳಿ ಕೆಲಸ ಮಾಡುತ್ತಿದ್ದ ಶ್ಯಾಮರಾವ್, ಕಾಮತ್. ದೊಡ್ಡಪೇಟೆ ಜ್ಯೂಯಲರಿ ಷಾಪ್ ವೈಶ್ಯಯುವಕರು, ಕೃಷ್ಣರಾಜೇಂದ್ರ ಮಿಲ್ ಸ್ಥಾಪಕರ ಮಗ ಡಿ. ನಾಗರಾಜ್ ಹೀಗೆ ನಾನಾ ಜನರ ಸಮುದಾಯದ ಸಭೆ ಸೇರಿತ್ತು.

ಈ ಸಭೆಗೆ ವಿಶೇಷ ಆಹ್ವಾನಿತರಾಗಿ ಮಾರ್ಗದರ್ಶನ ನೀಡಲು ಎಚ್. ಸಿ. ದಾಸಪ್ಪನವರು, ಟಿ. ಮರಿಯಪ್ಪನವರು, ಗೋಪಾಲಕೃಷ್ಣ ಶೆಟ್ಟರು. ಎಂ. ಶಂಕರಯ್ಯನವರು ಮುಂತಾದ ಗಣ್ಯರು ಸಭೆಗೆ ಆಗಮಿಸಿದ್ದರು.

ಸತ್ಯಾಗ್ರಹ ನಡೆಸಲು ಸರ್ವಸಿದ್ಧತೆಗೆ ರೂಪು ರೇಷೆಗಳನ್ನು ತಗಡೂರರು ಮತ್ತು ಎಂ. ಎನ್. ಜೋಯಿಸರು ಸಿದ್ಧಮಾಡಿದ್ದರು. ಸತ್ಯಾಗ್ರಹ ನಡೆವ ವಿಧಿ ವಿಧಾನ ಕುರಿತಂತೆ ಕರಡು ಪ್ರತಿಯನ್ನು ಸಭೆ ಗಮನಕ್ಕೆ ತರಲಾಯ್ತು. ಈ ಸಭೆ 1939 ನೇ ಇಸವಿ ಜನವರಿ 10 ರಂದು ಸಮಾವೇಶವಾಗಿತ್ತು. ಹ್ಯಾಮಿಲ್‌ಟನ್ ಹೆಸರನ್ನು ದಿನವು ಸತ್ಯಾಗ್ರಹಿಗಳು ಸುಣ್ಣ ಮತ್ತು ಬ್ರಷ್‌ನಿಂದ ಅಳಿಸತಕ್ಕದ್ದೆಂದು, ಈ ಕಾರ್ಯಕ್ರಮ ಅಹಿಂಸಾತ್ಮಕವಾಗಿ ಶಿಸ್ತಿನಿಂದ ನಡೆಯತಕ್ಕದ್ದೆಂದು ತೀರ್ಮಾನ ಕೈಗೊಳ್ಳಲು ಸಭೆ ಚರ್ಚಿಸಿತು.

ಎಚ್. ಸಿ. ದಾಸಪ್ಪನವರು ಏಕ್‌ದಂ ಸತ್ಯಾಗ್ರಹ ಆರಂಭಿಸುವ ಮೊದಲು ಈ ದಿನದಿಂದಲೇ ಸರ್ಕಾರಕ್ಕೆ 15 ದಿನಗಳ ಗಡುವು ಕೊಟ್ಟು,"ಶಾಂತಿ. ಶಿಸ್ತಿನಿಂದ ಅಹಿಂಸಾ ಧ್ವಜ ಸತ್ಯಾಗ್ರಹ ನಡೆಸಿದ ಸತ್ಯಾಗ್ರಹಿಗಳ ಮೇಲೆ ಅನವಶ್ಯಕವಾಗಿ ಗೋಲೀಬಾರ್ ನಡೆಸಿ ಮೈಸೂರು ಶ್ರೀಮನ್ ಮಹಾರಾಜರ ಸರ್ಕಾರಕ್ಕೆ ಕೆಟ್ಟಹೆಸರು ತಂದಿರುವ ಹ್ಯಾಮಿಲ್‌ಟನ್ ಅವರ ಹೆಸರನ್ನು 15 ದಿನಗಳೊಳಗೆ ತೆಗೆಯಲು ಸಮಿತಿ ಸರ್ಕಾರವನ್ನು ಒತ್ತಾಯ ಮಾಡುತ್ತದೆ. ಈ ಸಮಿತಿಯ ನಿರ್ಣಯಕ್ಕೆ ಸರ್ಕಾರ ಮನ್ನಣೆ ನೀಡುತ್ತದೆಂಬ ಭರವಸೆಯಿದೆ. ನಮ್ಮ ಸಮಿತಿ ಭರವಸೆಗೆ ಮನ್ನಣೆ ನೀಡದೇ

ಹೋದಲ್ಲಿ 4-2-39 ರಿಂದ ಶಾಂತಿಯುತ ಸತ್ಯಾಗ್ರಹವನ್ನು ಅಹಿಂಸಾರೀತ್ಯಾ ನಡೆಸ ತಕ್ಕದ್ದೆಂದೂ, ಸತ್ಯಾಗ್ರಹದಲ್ಲಿ ಪಾಲ್ಗೊಳಲು ಆಸಕ್ತ ಸ್ವಯಂಸೇವಕರು 25-1-39 ರೊಳಗೆ ತಮ್ಮ ಹೆಸರುಗಳನ್ನು ಎಂ. ಎಸ್. ಜೋಯಿಸರಲ್ಲಿ ನೊಂದಾಯಿಸಿಕೊಳ್ಳುವು ದೆಂದೂ ತೀರ್ಮಾನಿಸಲಾಯಿತು."

ಈ ನಿರ್ಣಯಕ್ಕೆ ಬದ್ಧವಾಗಿ ಅಂಕುರಾರ್ಪಣ ಮಾಡಲು ಎಚ್. ಸಿ. ದಾಸಪ್ಪ ನವರು ನಾಳೆ ಸಂಜೆ ಸುಬ್ಬರಾಯನಕೆರೆ ಮೈದಾನದ ಬಹಿರಂಗಸಭೆ ಅಧ್ಯಕ್ಷತೆ ವಹಿಸಿ ಮಾರ್ಗದರ್ಶಕರಾಗಬೇಕೆಂದು ಪ್ರಾರ್ಥಿಸಿ ಕೊಳ್ಳಲಾಯ್ತು. ಸಂಸ್ಥಾನದ ಪ್ರತಿಕೆಗಳಾದ ತಾಯಿನಾಡು, ವಿಶ್ವಕರ್ನಾಟಕ ಮುಂತಾದ ಪತ್ರಿಕೆಗಳು, ಹ್ಯಾಮಿಲ್‌ಟನ್ ಬಿಲ್ಡಿಂಗ್ ಸತ್ಯಾಗ್ರಹ ಕಾರ್ಯಕ್ರಮಕ್ಕೆ ಸಂಪೂರ್ಣ ಬೆಂಬಲಿಸಿ ಅಗ್ರಲೇಖನಗಳನ್ನು ಬರೆದವು.

ಸಂಕ್ರಾಂತಿ ಕಳೆದ ಪ್ರಾತಃಕಾಲ ಸುಬ್ಬರಾಯನ ಕೆರೆ ಮೈದಾನದಲ್ಲಿ ಬಹಿರಂಗ ಸಭೆಯನ್ನು ಕರೆಯಲಾಯ್ತು. ಎಚ್. ಸಿ. ದಾಸಪ್ಪ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಂ. ಎಸ್. ಜೋಯಿಸರು ಸ್ವಾಗತ ಭಾಷಣ ಮಾಡಿ ಬ್ರಿಟಿಷರು ಭಾರತೀಯರಾದ ನಮ್ಮನ್ನು ಪ್ರತಿ ಹಂತದಲ್ಲು ಅವರ ದಾಸಾನುದಾಸರನ್ನಾಗಿ ಮಾಡಿಕೊಳ್ಳಲು ಹವಣಿ ಸುತ್ತಿರುವುದಕ್ಕೆ ಸಾಕ್ಷಿ ನಮ್ಮೆದುರಿನಲ್ಲಿ ಕೊಲೆಗಡುಕ ಹ್ಯಾಮಿಲ್‌ಟನ್‌ನ ಹೆಸರಿನ ಅಣಕ. ನಾಗರೀಕರಾದ ತಾವು ಈತನ ಹೆಸರು ಅಳಿಸುವವರೆಗೂ ನಮಗೆ ಬೆನ್ನೆಲು ಬಾಗಿರಬೇಕು ಎಂದರು.

ತಗಡೂರರು ಮಾತನಾಡಿ ಎಚ್. ಸಿ. ದಾಸಪ್ಪನವರಂತಹ ಜನಾನುರಾಗಿ ನಾಯಕರು ಕಾಂಗ್ರೆಸ್ಸಿಗೆ ಸೇರಿ ಕಾಂಗ್ರಸ್ಸಿಗೆ ಮೈಸೂರಿನಲ್ಲಿ ಉತ್ತೇಜನವಿತ್ತು ಮಹಾ ನಾಯಕರಾಗಿದ್ದಾರೆ. ಈ ಒಂದು ಸತ್ಯಾಗ್ರಹಕ್ಕೂ ಸಹ ಜೀವನದ ಅನುಭವಗಳ ನಿಧಿ ಯಂತಿರುವ ಅವರ ಮಾರ್ಗದರ್ಶನ, ಸಹಾನುಭೂತಿ ಇದ್ದು ಹ್ಯಾಮಿಲ್‌ಟನ್ ಹೆಸರನ್ನು ಸರ್ಕಾರ ತೆಗೆದು ಮರ್ಯಾದೆ ಕಾಪಾಡಿ ಕೊಳ್ಳುವುದು ಎಂಬ ಆಶಯಕ್ಕೆ ಮೀರ್ಜಾ ಅವರು ನಿರಾಶೆ ಉಂಟು ಮಾಡಲಾರರೆಂದು ತಿಳಿಸಿದರು.

ಅಸ್ಪೃಶ್ಯತಾ ಯೋಜನೆ. ಪಾನನಿರೋಧ, ಹರಿಜನರ ದೇವಾಲಯ ಪ್ರವೇಶ, ಕ್ರೈಸ್ತ ಮತಾಂತರ ವಿರುದ್ಧ ಹೋರಾಟದಲ್ಲಿ ಸನ್ನ ಭಾಷಣ ಏರ್ಪಡಿಸಿ ಮಾತನಾಡಿ ಸಿದ್ದ ತಗಡೂರು ರಾಮಚಂದ್ರರಾಯರು ಅಧ್ಯಕ್ಷ ದಾಸಪ್ಪನವರಿಗೆ ಪರಿಚಯಿಸಿದ್ದಲ್ಲದೆ ಸಭಿಕರಿಗೆ ಪರಿಚಯ ಮಾಡುತ್ತ, ನೋಡಿ ಈತನು ನಾಗಮಂಗಲದಿಂದ ಬಂದಿರುವ ಹಳ್ಳಿಯ ಚಾಲೂಕು ಹೈದ.ಈತನೂ ನಾನೂ ಇಬ್ಬರೂ ಒಂದೇಕಾಲೇಜಿನ ಪದವೀಧ ರರು. ಅಂದರೆ ಮಿಡ್ಲ್‌ಸ್ಕೂಲ್ ಬಿಟ್ಟವರು. ಮಹಾಕವಿ ಕುವೆಂಪು ಅವರ ಕೃತಿಗಳಿಂದ ಮಾತು ಆರಂಭಿಸಿದನೆಂದರೆ ಹೊತ್ತೇ ಹೋದಂತೆ ಕಾಣದು. ಎಷ್ಟು ಹೊತ್ತು ಮಾತ ನಾಡಿದರು ಕೇಳುತ್ತಲೇ ಇರೋಣ ಎಂಬ ತವಕ ಸಭಿಕರಲ್ಲಿ. ಈ ಹಿಂದೆ ಈತನು ಸಂತೆ ಗಳಲ್ಲಿ ಮಾಡಿದ ಭಾಷಣದಲ್ಲಿ ಕುವೆಂಪು ಅವರ ಜಲಗಾರ ನಾಟಕವನ್ನೇ ವೇದಿಕೆಯಲ್ಲಿ

ಅಭಿನಯಿಸಿದ. ಸನ್ನಿವೇಶಕ್ಕೆ ಮಾರುಹೋದ ಸವರ್ಣ ಹಿಂದುವನ್ನು ಜೊತೆ ಹರಿಜನ ಮನೆ ಒಳಾಂಗಣದಲ್ಲಿ ಕೂರಿಸಿ ಊಟ ಹಾಕಿ ನನ್ನ ಜನ್ಮಸಾರ್ಥಕವಾಯ್ತೆಂದು ತಿಳಿಸಿದ. ಮೈಸೂರು ನಗರದ ಜನಕ್ಕೆ ಅನೇಕರಿಗೆ ಈತನು ಪರಿಚಿತನೂ ಆಗಿದ್ದಾನೆ. ಸಾಮಾಜಿಕ ಕಾರ್ಯಗಳಲ್ಲಿ ಈತ ತನ್ನ ಸ್ನೇಹಿತ ಅರಕೆರೆ ಕೆಂಚಪ್ಪ, ಟಿ. ಎಸ್. ಸುಬ್ಬಣ್ಣ ನವರೊಡನಿದ್ದು ದಂಡನಾಯಕರಂತೆ ನನಗೆ ಸಹಾಯಕವಾಗಿದ್ದಾನೆ. ನಗರದ ವೇದಿಕೆ ಯೊಂದರಿಂದ ಈತನು ಮಾತನಾಡುತ್ತಿರುವುದು ಇದೇ ಮೊದಲು. ಈತನು ನಾಗರೀಕ ರಾದ ತಮ್ಮೆದುರು ತೊದಲಿದರೆ ಕ್ಷಮೆಯಿರಲಿ'' ಎಂದುದೀರ್ಘವಾಗೇ ಹೊಗಳಿ ಹೊನಶೂಲಕ್ಕೆ ಏರಿಸಿದರು ತಗಡೂರರು.

ಬಂಧುಗಳೇ,

ನಾನು ನಾಗಮಂಗಲ ಬಳಿಯ ಹಳ್ಳಿ ಪಾಲಗ್ರಹಾರದವನು ಓದಿನಲ್ಲಿ ಹೈಸ್ಕೂಲ್ ಬಾಗಿಲು ತುಳಿದವನಲ್ಲ. ವೃತ್ತಿಯಲ್ಲಿ ಕೃಷಿಕನ ಮಗ. ಕೃಷಿಕನ ಜೀವನ ಎಂಬುದು ಎಂದೂ ಯಾವತ್ತೂ ಆಪತ್ತಿನ ಮಡಿಲಲ್ಲಿ ಕಟ್ಟಿರುವ ಬುತ್ತಿ. ಇದನ್ನು ಚೆನ್ನಾಗಿ ಬಲ್ಲೆ. ದೇಶದ ನಾಡಿ ಮಿಡಿತ ಹಿಡಿದು, ರೋಗ ಏನೆಂಬುದನ್ನು ಅಂತರ್ಮುಖಿ ಯಾದ ಮಾರ್ಗಸೂಚಿಯಾಗಿ ನಿರ್ಮಿಸಿರುವ 'ಹಾಳೂರು' ಕೃತಿ ಮಹಾಭಾರತ ರಾಮಾಯಣಗಳಂತಹ ಹೆಸರಾಂತ ಕೃತಿಗಳಿಗಿಂತ ಆದರ್ಶವಾದುದು ಎಂಬುದು ಅಜ್ಞನಾದ ನನ್ನ ಅನುಭವ. ಪಂಡಿತವರೇಣ್ಯರಾದ ನಗರದ ನಾಗರೀಕರೇನೆನ್ನುವಿರೋ ಎಂಬುದು ಗೊತ್ತಿಲ್ಲ.

ಈ ದೇಶ ನನ್ನಂತಹ ಶ್ರೀಸಾಮಾನ್ಯರಿಂದ ತುಂಬಿತುಳುಕುತ್ತಿದೆ. ಶ್ರೀಸಾಮಾನ್ಯನನ್ನು ಸ್ಪಂದಿಸಿ ಆತನು ಅರ್ಥೈಸಿಕೊಳ್ಳಬಲ್ಲ ಸಾಹಿತ್ಯ ಜೀವಂತ ವಾದುದು. ಪಂಡಿತರಿಂದ ವ್ಯಾಖ್ಯಾನ ಮಾಡಿಸಿ ಅರ್ಥಂಬರ್ಥ ತಿಳಿದು ಜೀವನಕ್ಕೆ ಅಳವಡಿಸಿಕೊಳ್ಳುವುದು ಬಹು ಕಷ್ಟ. ''ಹೇಳಿ ಕೊಟ್ಟ ಮಾತು'' ''ಕಟ್ಟಿಕೊಟ್ಟಬುತ್ತಿ'' ಎಷ್ಟು ದಿನ ಬಂದಾವು ಎನ್ನುವ ಹಿರಿಯರ ಉಕ್ತಿಯಂತೆ ಸಾಹಿತ್ಯ ಆಗಬಾರದು. ನೇರ ತಾನು ಓದಿದ ಕೃತಿಯನ್ನು ಸ್ಪಂದಿಸಿ ಅರ್ಥೈಸಿಕೊಂಡು ಜೀವನಕ್ಕೆ ಅಳವಡಿಸಿಕೊಂಡು ಹೋಗುವ ಕೃತಿಗಳೇ ಶ್ರೇಷ್ಠವಾದುವು. ನಾನು ಹೇಳುವ ಈ ಮಾತು ತಮಗೆ ಅಪಥ್ಯವಾದರೆ ನಾನೇನೂ ಮಾಡಲಾರೆ.

ಈ ದೇಶಕ್ಕೆ ವ್ಯಾಪಾರಕ್ಕೆಂದು ಬಂದ ಇಂಗ್ಲೀಷರು ನಮ್ಮ ಜನರನ್ನು ದಾಸಾನು ದಾಸರನ್ನಾಗಿ ಮಾಡಿಕೊಂಡಿದ್ದಾರೆ. ಜನ ಸಾಮಾನ್ಯರಾದವರ ಪಾಡೇನಾದರು ಆಗಲಿ. ''ವಃ ನಿಷ್ಣೀಃ ಪ್ರಥರೀಪಥಿಃ'' ಎಂದು ಹೇಳಿಕೊಳ್ಳುವ ಸ್ಥಿತಿಗೆ ಬಂದಿರುವ ನಮ್ಮ ರಾಜರುಗಳ ದುಸ್ಥಿತಿಗೆ ನಾವು ಮರುಕಗೊಳ್ಳಬೇಕಾಗಿದೆ. ಹ್ಯಾಮಿಲ್‌ಟನ್ ಅಂತಹ ಫ್ರೀಮನ್ ಮಹಾರಾಜರ ಸರ್ಕಾರದಲ್ಲಿ ಕೆಲಸ ಮಾಡುವ ಯಕಶ್ಚಿತ ವ್ಯಕ್ತಿಯ ಹೆಸರನ್ನು ನಗರದ ನಾಗರೀಕರ ಹಣೆಪಟ್ಟ ಕಟ್ಟಿ ನೋಡುತ್ತಿರುವ ಶ್ರೀಮನ್

ಮಹಾರಾಜರ ಸ್ಥಿತಿ ಬಗ್ಗೆ ನಾವೆಲ್ಲ ಯೋಚನೆ ಮಾಡಿ ಹೋರಾಟ ಮಾಡಿ ಶ್ರೀಮನ್ ಮಹಾರಾಜರ ಗೌರವವನ್ನಾದರು ಕಾಪಾಡೋಣ.

ಇಲ್ಲಿ ಕೇಳಿ ಮಹಾಕವಿ ಸಾಹಿತ್ಯ ಸಾರಸ್ವತ ಲೋಕದ ಸಾಮ್ರಾಟ ಕುವೆಂಪು ಅವರು ತಮ್ಮ ಹಾಳೂರಿನಲ್ಲಿ ನ್ಯಾಯವಿಧಾಯಕ ಸಭೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಮತ ಪಡೆದು ಹೋದವರ ಬಗ್ಗೆ ಕನಿಕರಿಸುತ್ತ

ಸಿರಿಸುತರು ಕಾನೂನುಗಳ ರಚಿಸುತಿಹರು
ಬಡವರದಕೊಳಗಾಗಿ ಗೋಳಾಡುತಿಹರು ;
ಸಿರಿಸುತರ ಬೊಬ್ಬೆಯಲಿ ಬಡಜನರ ದನಿಯು
ಸಾಗರದ ನಡುವೆ ಇಹ ತುಂತುರಿನ ಹನಿಯು.
ರಾಜ್ಯದಾಡಳಿತಗಳು ಹಣಗಾರರಲ್ಲಿ.
ರಾಜ್ಯದಲ್ಲಿಹ ದಾಸ್ಯವದು ಬಡವರಲ್ಲಿ ;
ಹಣಗಾರರಾನಂದ ಬಡಜನರ ಗೋಳು,
ಕೂಲಿಕಾರರ ರಕುತ ಧನಿಕರಿಗೆ ಕೊಳು.
ದಿನವು ತಿಂದರು ರೈತನೀಯುತಿಹ ನೆಲ್ಲ
ಧಿಕ್ಕರಿಪರಾತನನು ಪಟ್ಟಣಿಗರೆಲ್ಲ.
ಹಳ್ಳಿಯವನೆಂದರಾಯಿತು ದಡ್ಡನೆಂದು
ದೂರುವರು ಸುಲಿಯುವರು ಅವನನ್ನ ತಿಂದು.
ದೊಡ್ಡವರದಾಗಿಹುದು ತಾವಿದ್ದುದೆಲ್ಲ
ಬಡಜನರಿಗೊಂದಂಕಣದ ಜಾಗವಿಲ್ಲ.
ಲಕ್ಷಗಳ ಚೆಲ್ಲುವರು ನಾಯಿಗಳಿಗಾಗಿ
ಭಿಕ್ಷುಕರಿಗೀಯಲಾರರು ಮುಷ್ಟಿ ರಾಗಿ.
ಹರಿದಾರಿಯುದ್ದವಿಹುದಶ್ವಗಳ ಲಾಯ,
ಕೂಳಿಲ್ಲದರಿಗಿಲ್ಲ ಅವರಾ ಸಹಾಯ.
ಚೆಲ್ಲುವರು ತಣ್ಣಗಿಹ ಕಲ್ಲುಗಳ ಮೇಲೆ
ಎಣ್ಣೆಯನು ಬೆಣ್ಣೆಯನು ; ಹಾಕುವರು ಮಾಲೆ :
ತರತರದ ಹಣ್ಣುಕಾಯಲರುಗಳ ಕೊಟ್ಟು,
ಅಡ್ಡಬೀಳುವರು ಕರ್ಪೂರವನು ಸುಟ್ಟು.
ದಾರಿಯೊಳು''ಕಣ್ಣಿಲ್ಲ, ಕಾಲಿಲ್ಲವಪ್ಪಾ!
ಧರ್ಮರೇ ತಾಯ್ತಂದೆ ಕಾಸು ಕೊಡಿರಪ್ಪಾ!''
ಎಂಬುವನ ಕಣ್ಣೆತ್ತಿ ನೋಡದೆಯೆ ಹೋಗಿ
ನಮಿಸುವರು ವಿಗ್ರಹದ ಮುಂದೆ ತಲೆ ಬಾಗಿ!

ಮಾನವನೆ, ನಾರಾಯಣನು ಗುಡಿಯೊಳಿಲ್ಲ;
ಫಲಪುಷ್ಪವನು ಕೊಟ್ಟರದೆ ಭಕ್ತಿಯಲ್ಲ.
ಬಡ ನರನೆ ದೇವನಿಹ ದೇಗುಲವು, ಮುಕ್ತಿ;
ಬಡಜನರ ಸೇವೆಯನು ಮಾಡುವುದೆ ಭಕ್ತಿ;
ಬೀದಿಯ ದರಿದ್ರನಾರಾಯಣರ ನೋಡು,
ಅನ್ನವಸ್ತ್ರವನೀವ ಪೂಜೆಯನು ಮಾಡು.
ಮಾನವರ ಸೇವೆಯೇ ಪರಮಾತ್ಮ ಸೇವೆ,
ಪರಮೇಶ್ವರನ ಪರಮದಿವ್ಯಾಂಶ ನಾವೆ !

ಎಂದು ತಮ್ಮ ಮನೋವ್ಯಥೆಯನ್ನು ಸಾಹಿತ್ಯದ ಮೂಲಕ ನಿವೇದಿಸಿದ್ದಾರೆ. ಇದರ ಪರಿಹಾರಕ್ಕೆ ಕ್ರಾಂತಿ ಎಂಬುದು ದಿವ್ಯೌಷಧವೆಂದು ತಮ್ಮ "ಧನ್ವಂತರಿ" ಎಂಬ ಕಥೆಯಲ್ಲಿ ನಿರೂಪಿಸಿದ್ದಾರೆ.

ನನ್ನ ಭಾಷಣಾನಂತರ ಎಚ್.ಸಿ. ದಾಸಪ್ಪನವರು ನನ್ನನ್ನು ತಬ್ಬಿಕೊಂಡು ಸಂತೋಷ ವ್ಯಕ್ತಪಡಿಸಿ ಸ್ವಾಮಿವಿವೇಕಾನಂದರು "ಶ್ರೀಸಾಮಾನ್ಯರಿಂದ ಉದ್ಭವಿಸಿ ಬಂದವರ ಮೂಲಕ ಮಹಾನುಭಾವರು ತಮ್ಮ ಅಭಿಲಾಷೆ ಆಶೆ ಆಶೋತ್ತರಗಳನ್ನು ಈಡೇರಿಸಿ ಕೊಳ್ಳುತ್ತಾರೆ" ಎಂಬುದಕ್ಕೆ ಗ್ರಾಮಾಂತರದಿಂದ ಬಂದ ಈ ಯುವಕನ ಭಾಷಣದಿಂದ ನಾನಂತೂ ಪುಲಕಿತನಾಗಿದ್ದೇನೆ. ಹಳ್ಳಿಯ ನೈಜ ಚಿತ್ರಣವನ್ನು ತೋಡಿ ತೋಡಿ ನಮ್ಮ ಮುಂದೆ ಎಳೆಎಳೆಯಾಗಿ ಬಿಡಿಸಿದ್ದಾನೆ. ಮಹಾನುಭಾವ ಕುವೆಂಪು ಅವರೂ ಹಳ್ಳಿಯಿಂದ ಬಂದವರೇ, ಅವರ ಸಾಹಿತ್ಯದ ತುಣುಕಿನ ಸಾಲುಗಳಲ್ಲಿ ಬ್ರಹ್ಮಾಸ್ತ್ರವನ್ನು ಹೋಲುವ ಶಕ್ತಿ ತುಂಬಿದೆ ಎಂಬುದನ್ನು ಯುವಕ ಹಾಡಿದ್ದಾನೆ ಎಂದರು.

ನಾಳಿನ ಸಭೆ ರೈಲ್ವೆಸ್ಟೇಷನ್ ಬಳಿ ಬಸ್‌ಸ್ಟಾಂಡಿನಲ್ಲಿ ಸೇರುವದು. ಟಿ. ಮರಿಯಪ್ಪ ನವರು ಅಧ್ಯಕ್ಷತೆ ವಹಿಸುವರು ಎಂದು ಎಂ.ಎಸ್. ಜೋಯಿಸ್ ತಿಳಿಸಿದರು. ಸ್ವಾಮಿ. ಈಗ ಮಾತನಾಡಿದ ನಾಗಮಂಗಲದ ಯುವಕರು ಮಾತನಾಡುವರೇ ಎಂದು ಏಕ ಕಂಠದಿಂದ ಸಭೆ ಕೇಳಿತು. ಅಹುದು ಎಂದು ಉತ್ತರಿಸಿದರು.

ಸುಮಾರು ಹದಿನೈದು ದಿನಗಳ ಕಾಲ ಮೈಸೂರು ನಗರದ ನಾನಾ ಭಾಗಗಳಲ್ಲಿ ಬಹಿರಂಗ ಸಭೆಗಳನ್ನು ನಡೆಸಲಾಯ್ತು. ಸರ್ಕಾರ ತಾನಾಗಿಯೇ ಹ್ಯಾಮಿಲ್‌ಟನ್ ಹೆಸರು ತೆಗೆಯದಿದ್ದರೆ ಸತ್ಯಾಗ್ರಹದ ಮೂಲಕ ತೆಗೆಸಲೇಬೇಕೆಂಬ ಛಲವು ನಗರದ ನಾಗರೀಕರಲ್ಲಿ ಬೇರೂರುವಂತೆ ಬಹಿರಂಗ ಸಭೆ ಭಾಷಣಗಳು ಅನುವು ಮಾಡಿದವು. ಬಹಿರಂಗ ಸಭೆಗಳಲ್ಲಿ ಭಾಷಣ ಮಾಡಲು ಕಾಂಗ್ರೆಸ್ ಪ್ರಮುಖರು ಬರುತ್ತಿರಲಿಲ್ಲ. ನಾನು ಮತ್ತು ಎ. ರಾಮಣ್ಣನವರೇ ದಿನನಿತ್ಯದ ಬಹಿರಂಗಸಭೆ ಪ್ರಮುಖ ಭಾಷಣಕಾರರು.

ಶ್ರೀ ಎ. ರಾಮಣ್ಣನವರ ಭಾಷಣವು ಏರಿದ ಧ್ವನಿಯಲ್ಲಿ ಅದರಲ್ಲೂ ಮಂಗಳೂರಿನ ಕನ್ನಡದಲ್ಲಿ. ಮಾತನಾಡಲು ಎದ್ದುನಿಂತರೆವರೆ ಜನರು ತಮ್ಮ ಸಂತೋಷವನ್ನು

ಚಪ್ಪಾಳೆ ಮೂಲಕ ವ್ಯಕ್ತಪಡಿಸುತ್ತಿದ್ದರು.

ನನ್ನ ಭಾಷಣವೇ ಕೊನೆ ಕಾರ್ಯಕ್ರಮವಾಗಿರುತ್ತಿತ್ತು. ಕುವೆಂಪು ಅವರ ನಾನಾ ಗೀತೆಗಳನ್ನು ದಿನವೂ ಹೊಸ ಹೊಸದಾಗಿ ಹೇಳುತ್ತಿದ್ದೆ. ಜನರು ಕುವೆಂಪು ಅವರ ಸಾಹಿತ್ಯಕ್ಕೆ ಅದೆಷ್ಟು ಮಾರುಹೋಗಿದ್ದರೆಂದರೆ ಇನ್ನೊಮ್ಮೆ ಹೇಳಿ ಎಂದು ಕೂಗುತ್ತಿದ್ದರು. ಒಂದು ದಿನ ಕಲ್ಕಿಯ ಆಯ್ದ ಭಾಗದ ಸಾಲುಗಳನ್ನುಹೇಳಿದೆ.ಇಲ್ಲ ಕಲ್ಕಿಯನ್ನು ಪೂರ್ತಾ ದಯಮಾಡಿ ಹೇಳಿ ಎಂದು ಕೂಗಿದರು. ರಾತ್ರಿ 9 ಗಂಟೆಯಾಗಿದೆ. ನಾಳಿನ ಸಭೆಯಲ್ಲಿ ಹೇಳುತ್ತೇನೆಂದರೂ ಸಭಿಕರು ರಾತ್ರಿ 11 ಘಂಟೆಯಾಗಲಿ ಕೇಳುವವರು ನಾವಿದ್ದೇವೆ. ಪೂರ್ತಾ ಕಲ್ಕಿಯನ್ನುಕೇಳಿಯೆ ಹೋಗುತ್ತೇವೆ ಎಂದು ಹಠ ಮಾಡಿದರು. ಕವನ ಪೂರ್ತಾ ಕೇಳಿಯೆ ಸಭೆ ಬರಖಾಸ್ತಾಯಿತು. ಈ ದಿನದ ಸಭೆಗೆ ಬಂದಿದ್ದ ಮುಕ್ಕಾಲು ಪಾಲು ಸಭಿಕರು ಸರ್ಕಾರಿ ಉಪಾಧ್ಯಾಯರ ಟ್ರೈನಿಂಗ್ ಕಾಲೇಜಿನವರು.

ಉಪಾಧ್ಯಾಯ ವರ್ಗದವರು. ಅಂದಿನ ರಾತ್ರಿ ಊಟಕ್ಕೆ ನಮ್ಮ ನಾಲ್ಕಾರು ಜನರನ್ನು ತಮ್ಮ ಕಾಲೇಜಿನ ಹಾಸ್ಟಲಿಗೆ ಅತಿಥಿಗಳಾಗಿ ಕರೆದೊಯ್ದು ಸೊಗಸಾದ ಭೋಜನವಿತ್ತರು,

## ಕಲ್ಕಿ

ನಿದ್ದೆಯ ಲೋಕದಿ ಕನಸಿನ ಬೀದಿ.
ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ !
ಮುಂದೆ ಕಾಣಿಸಿತೊಂದು ಅರಣ್ಯ,
ಅನಂತವಾದುದು ವನ ವಿಸ್ತೀರ್ಣ.
ಹೆಮ್ಮರಗಳು ಕಿಕ್ಕಿರಿದುವು ಅಲ್ಲಿ,
ಬಿಡುವಿಲ್ಲದೆ ಹೆಣೆದಿದ್ದುವು ಬಳ್ಳಿ ;
ಮುಳ್ಳಿನ ಪೊದೆಗಳು, ಗರಗಸವಳ್ಳಿ,
ಪ್ರೇತದಂತೆ ಪಾಪಾಸಿನ ಕಳ್ಳಿ !
ಸುಗ್ಗಿದೆ ನಾನಾ ಹಳುವಿನಲಿ ;
ಆ ಕನಸಿನ ಹೆಗ್ಗಾಡಿನಲಿ.
ಅಲ್ಲಿದ್ದುದು ಬೆಳಕೆಂಬುವುದಲ್ಲ.
ಕತ್ತಲು ಅಲ್ಲ !
ಬೆಳಕೋ ಕತ್ತಲೊ ಶಿವನೇ ಬಲ್ಲ !
ಶಿವನೇ ಬಲ್ಲ !
ಪ್ರೇತಗಳಂದದಿ ಭೀತಿಯ ಛಾಯೆ
ಸುಳಿಸುಳಿದಾಡಿತು ಅಲ್ಲಿ,

ಆ ಘೋರ ಕಾನನದಲ್ಲಿ !
ನಡೆದೇ ನಡೆದೇ ನಡೆದೂ ನಡೆದೆ,
ಸಾಹಸ ಬಿಡದೆ, ಎದೆಗೆಡದೆ,
ಸುತ್ತಲು ಮೌನ !
ಶ್ಮಶಾನ ಮೌನ !
ಕಾಡನು ದಾಟಿದೆ : ಮುಂಗಡೆ ಬೆಟ್ಟ ;
ಶಿಖರವೊ ನಿಂತಿದೆ ಮುಗಿಲಿನ ಮುಟ್ಟ !

ಹತ್ತೀ ಹತ್ತೀ ಹತ್ತೀ ಹತ್ತಿ
ಕಡೆಯಲಿ ಸಿಕ್ಕಿತು ನಡುನೆತ್ತಿ !
ನೋಡಿದೆನಲ್ಲಿ
ನಡುನೆತ್ತಿಯಲಿ !—
ಯಾವುದೊ ಊರು ಆ ಊರು ?
ಬರಿ ಮಾಯದ ಊರು !
ಧನಿಕರ ಮನೆಗಳು ಒಂದೆಡೆ ನಿಂತಿವೆ,
ಬಡವರ ಗುಡಿಸಲು ಒಂದೆಡೆ ನಿಂತಿವೆ.
ಜ್ಯೋತಿಯ ಮಣಿದೀಪಗಳಲ್ಲಿ ;
ಕತ್ತಲು, ಕಗ್ಗತ್ತಲು ಇಲ್ಲಿ !
ಹಾಡಿನ ನುಣ್ದನಿಯುತ್ತ,
ಗೋಳಿನ ನೀಳ್ದನಿಯಿತ್ತ.
ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ !
ಆ ಕಡೆ ಉದ್ಯಾನ,
ಈ ಕಡೆ ಶ್ಮಶಾನ !
ಪೀತಾಂಬರಗಳ ಹೊದೆಯುವರಲ್ಲಿ,
ಕೌಪೀನಕೆ ಚಿಂದಿಯು ಸಿಗದಿಲ್ಲಿ !
ನೋಡುತ ನೋಡುತ ನೋಡುತ್ತಿದ್ದೆ ;
ನೋಡುತ್ತಿರೆಯಿರೆ ಬೆಚ್ಚಿ ಬಿದ್ದೆ :
ಬಡಬಗ್ಗರ ಜಠರಾಗ್ನಿಯು ಎದ್ದು
ಗುಡಿಸಿಲುಗಳಿಗೇ ಬೆಂಕಿಯು ಬಿದ್ದು
ಧಗಧಗ ಧಗಧಗ ಹೊತ್ತಿದುದು,



ಭುಗಿಭುಗಿಲೆನ್ನುತ ಮುತ್ತಿದುದು !
ಮುಗಿಲಿನ ವರೆಗೂ ಬಾನಿನ ವರೆಗೂ
ದಿಕ್ಕು ದಿಕ್ಕುಗಳ ಜುಟ್ಟಿನ ವರೆಗೂ

ಬಡವರ ಬೆಂಕಿಯು ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ !
ಬಡವರ ಸಿಟ್ಟದು ಏನು ಪಿಶಾಚಿ ?
ಬಡಬಾಗ್ನಿಯೆ ತಲೆತಗ್ಗಿತು ನಾಚಿ !
ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡಹೊಟ್ಟೆಯ ಉರಿಹೊತ್ತಿ !
ದೂರದ ಆ ಗಿರಿಶಿಖರದ ಮೇಲೆ
ನನಗೂ ತಟ್ಟಿತು ಬೆಂಕಿಯ ಜ್ವಾಲೆ !
ಕೇಳಿಸಿತೊಡನೆಯೆ ಹಾಹಾಕಾರ !
ಮಕ್ಕಳುಮರಿಗಳ ಚೀತ್ಕಾರ !
ಗರ್ಭಿಣಿ ಸ್ತ್ರೀಯರು, ಬಾಣಂತಿಯರು
ನವ ವಧುಗಳು ಮೇಣ್ ಶ್ರೀಮಂತೆಯರು ;
ಹುಡುಗರು, ಮುದುಕರು, ಕುಂಟರು, ಕಿವುಡರು :
ಬಡವರ ಗೋಳನು ಕೇಳದ ಕಿವುಡರು :
ಹೊಟ್ಟೆಯ ಪಾಡಿಗೆ ಕಾವಿಯನುಟ್ಟು
ಬಡವರ ಹಸಿವಿಗೆ ವರಾಗ್ಯವ ಕೊಟ್ಟು
ಸುಖಸಂಪತ್ತನು ಕೊಂಡವರು
ಮೃಷ್ಟಾನ್ನವನೇ ಉಂಡವರು ;
ಗುರುಗಳು ಶಿಷ್ಯರು ಮನೆಗಳು ಮಠಗಳು
ಎಲ್ಲರು ಬೆಂದರು ಬಡಬಾಗ್ನಿಯಲಿ,
ಬಡವರ ಬಗ್ಗರ ಜಠರಾಗ್ನಿಯಲಿ !
ಬಡವನ ಜಠರಾಗ್ನಿಯೆ ಬಡಬಾಗ್ನಿ !
ಬಡವನೆ ಕಲಿಯುಗದಂತ್ಯದ ಕಲ್ಕಿ !

ನೋಡುತಲಿದ್ದೆ ;
ನೋಡುತಲಿದ್ದೆ !
ಕಣ್ಮರೆಯಾಯಿತು ಆ ದೃಶ್ಯ !
ಏನಿದು ಈ ದೃಶ್ಯ ?

ರಕ್ತದ ಜಲಪಾತ !
ನರಮಾಂಸದ ನಾತ !
ಧುಮುಧುಮುಕುತಲಿದೆ ರಕ್ತದ ರಣಧುನಿ !
ಹೊರ ಹೊಮ್ಮುತ್ತಿದೆ ನರರಾರ್ತಧ್ವನಿ !
ಗಗನವು ರಕ್ತ ! ಭೂಮಿಯು ರಕ್ತ !
ನೋಡಿದರೆತ್ತಲು ರಕ್ತ ! ರಕ್ತ !
ಅಯ್ಯೋ ರಕ್ತ !
ಧುಮುಕುವ ಶೋಣಿತ ಗಿರಿಝರಿಯಲ್ಲಿ
ನರ ರುಂಡಗಳು
ನರ ಮುಂಡಗಳು
ಮುಂಗಾರ್ಗಾಲದ ಬಲ್ಸರಿಯಲ್ಲಿ
ಆಲಿಯ ಕಲ್ಲುಗಳುರುಳುರುಳ್ವಂತೆ
ಧುಮುಕುತಲಿರುವುವು ! ಬಂಡೆಗಳಂತೆ
ಧುಢುಂ ಧುಢುಂ ಧುಢುಮ್ಮನೆ ಬಿದ್ದು
ಹಾರುತಲಿವೆ ಬಿಸಿನೆತ್ತರು, ಸದ್ದು !
ಸುಂದರಿಯರ ತಲೆಮುಂಡೆಗಳು,
ಶ್ರೀಮಂತರ ನೆಣದುಂಡೆಗಳು,
ಪಾಪದ ದೇಹ, ಪುಣ್ಯದ ದೇಹ,
ಗುಡಿಗೋಪುರಗಳು, ಧರ್ಮದ ಗೇಹ,
ತೇಲಿ, ತೇಲಿ, ತೇಲಿ, ತೇಲಿ
ನುಗ್ಗುತಲಿವೆ ಕಸಕಡ್ಡಿಯು ಹೋಲಿ !

ಯಾರವನಲ್ಲಿ ? ದೂರದಲಿ,
ಧಾವಿಸಿ ಬರುವನು ಕ್ರೌರ್ಯದಲಿ !
ಅಸ್ಥಿಪಂಜರದಶ್ವವನೇರಿ,
ಬೆಳ್ಳಗೆ ಚಿಲಿಯುವ ದಾಡೆಯ ತೋರಿ,
ಅಸ್ಥಿಪಂಜರದಾಳವನು !
ಪ್ರೇತಸ್ವರೂಪಿ ಅದಾರವನು ?
ಬಲಗಡೆ ಕೈಯಲಿ ಮಿಂಚಿನ ಕತ್ತಿ !
ಎಡಗಡೆ ಕೈಯಲಿ ಸಿಡಿಲಿನ ಬುತ್ತಿ !
ಎಲುಬಿನ ಕುದುರೆ ! ಎಲುಬಿನ ಆಳು !

ಇವನೆಯೆ ಕಲ್ಕಿ ? ಬಡವರ ಬಾಳು ?
ಮೂರ್ತಿವೆತ್ತಿಹ ಬಡವರ ಗೋಳು ;
ನೋಡುತಲಿದ್ದೆ,
ಕೇಳುತಲಿದ್ದೆ !
"ಹಸಿವೇ ! ದಾಹಾ !" ಎನ್ನುತ ಬಂದು,
"ರಕ್ತಾ ! ರಕ್ತಾ ! ರಕ್ತಾ !" ಎಂದು
ನೆತ್ತರು ಹೊಳೆಯಲಿ ಧುಮುಕಿದನು,
ಕುದುರೆಯೊಡನೆ ಧುಮ್ಮಿಕ್ಕಿದನು !
ಕುಡಿದನು ರಕ್ತವ ಮೊಗೆಮೊಗೆದು,
ತಿಂದನು ತಲೆಗಳ ತೆಗೆತೆಗೆದು !
ಎಲುಬಿನ ಕುದುರೆಯು ಕೆನೆಯುತ್ತಿತ್ತು ;
ನಾದವು ಬೊಮ್ಮಪ ಬಿರಿವಂತಿತ್ತು !
ಎಲುಬಿನ ಮೂರ್ತಿಯು ಗಹಗಹಿಸಿತ್ತು ;
ಗುಡುಗಿನ ಮಾಲೆಯೆ ಪೊರಮಡುತಿತ್ತು !
ಕುದುರೆಯು ಕುಡಿದೂ, ಆಳೂ ಕುಡಿದೂ,
ತಿಂದರು ಶವಗಳ ಲರಿಲರಿ ಕಡಿದೂ !
ಬತ್ತಿತು ರಣಧುನಿ : ಇನ್ನೂ ದಾಹ !
ಮುಗಿದುವು ಹೆಣಗಳು : ಇನ್ನೂ ಹಸಿವೆ !
ಬಡವರ ಗಂಟಲ ಬೇಗೆಯ ದಾಹ !
ಬಡವರ ಹೊಟ್ಟೆಯ ಬೆಂಕಿಯ ಹಸಿವೆ !
ತುಂಬದು ಹೊಟ್ಟೆ ;
ತುಂಬದೊ ಹೊಟ್ಟೆ !...
ಕೆಟ್ಟೇ ! ಕೆಟ್ಟೇ !
ಅಯ್ಯೋ ಕೆಟ್ಟೇ !
ನೋಡಿದನೆನ್ನಂ ಬೆಟ್ಟದ ಮೇಲೆ !
ಬರುತಿಹನಯ್ಯೋ ! ಒಲ್ಲೇ ! ಒಲ್ಲೇ !
ನೋಡುತಲಿದ್ದೆ !
ಕಂಪಿಸಿ ಬಿದ್ದೆ !
"ಕಲ್ಕೀ ! ಕಲ್ಕೀ !" ಎನ್ನುತ ಚೀರಿ
ಕನಸೊಡೆದೆದ್ದೆ !
ಇನ್ನೆಲ್ಲಿಯ ನಿದ್ದೆ ?

ಸತ್ಯಾಗ್ರಹ ಸಮಿತಿ ಸರ್ಕಾರಕ್ಕೆ ಕೊಟ್ಟ ಗಡುವಿನಲ್ಲಿ ಹ್ಯಾಮಿಲ್‌ಟನ್ ಹೆಸರು ತೆಗೆಯಲಿಲ್ಲ. ಫೆಬ್ರವರಿ 1939 ಮೊದಲನೆ ವಾರದಿಂದ ಸತ್ಯಾಗ್ರಹ ಆರಂಭಿಸಲು ತೀರ್ಮಾನಿಸಲಾಯಿತು. ಸರ್ಕಾರದವರು ತಗಡೂರು ರಾಮಚಂದ್ರರಾಯರನ್ನು ನೇಕ್‌ಚಾಲ್ ಮೊಕದ್ದಮೆ 105ನೇ ಸೆಕ್ಷನ್ ಪ್ರಕಾರ ಮೊದಲೇ ದಸ್ತಗಿರಿ ಮಾಡಿದರು. ಅದಾದ ಪ್ರಾತಃಕಾಲವೋ ಸಂಜೆಯೋ ಎಂ. ಎಸ್. ಜೋಯಿಸರನ್ನು ದಸ್ತಗಿರಿಮಾಡಿ ವರ್ಷದ ಕಾಲ ಕಾರಾಗೃಹ ಶಿಕ್ಷೆ ನೀಡಲಾಯಿತು.

ದಿನವೂ ಪ್ರಾತಃಕಾಲ ಬಿದಿರ ಸಣ್ಣ ಬಂಬಿನ ತುದಿಗೆ ಬ್ರಷ್‌ಕಟ್ಟಿ ಮಡಕೆಯಲ್ಲಿ ಸುಣ್ಣತುಂಬಿ ಬ್ರಷ್ ಅದ್ದಿ 'ಹ್ಯಾಮಿಲ್‌ಟನ್' ಎಂಬ ಹೆಸರಿಗೆ ಸುಣ್ಣ ಬಳಿಯಲು ಮೂರು ನಾಲ್ಕು ಮಂದಿ ಸತ್ಯಾಗ್ರಹಿಗಳು ಪ್ರಯತ್ನಿಸುವುದು. ಪೋಲೀಸರು ಸತ್ಯಾಗ್ರಹಿಗಳನ್ನು ದಸ್ತಗಿರಿಮಾಡಿ ಕೋರ್ಟಿಗೆ ಹಾಜರು ಮಾಡುತ್ತಿದ್ದರು. ಕೋರ್ಟಿನಲ್ಲಿ ಐದುತಿಂಗಳು ಆರುತಿಂಗಳಂತೆ ಸತ್ಯಾಗ್ರಹಿಗಳಿಗೆ ಸಾದಾಸಜಾ ನೀಡುತ್ತಿದ್ದರು.

ಸತ್ಯಾಗ್ರಹದ ಮೂರನೇ ದಿನ ನನ್ನನ್ನು. ಶ್ರೀ ಎ. ರಾಮಣ್ಣ ಮತ್ತು ಟಿ. ಎಸ್. ಸುಬ್ಬಣ್ಣನವರನ್ನು ಜಿಲ್ಲಾಧಿಕಾರಿಗಳಾದ ಜಿ. ಎಂ. ಮೇಕ್ರಿ ಅವರು ಪೋಲೀಸ್ ವ್ಯಾನಿನಲ್ಲಿ ತಮ್ಮ ಕಛೇರಿಗೆ ಕರೆಸಿಕೊಂಡರು, ಸತ್ಯಾಗ್ರಹ ಸಮಿತಿಯಿದ್ದು ಪದಾಧಿಕಾರಿಗಳು ಇದ್ದರು ಸಹ ನಾವು ಈ ಸತ್ಯಾಗ್ರಹದಲ್ಲಿ ಪ್ರಮುಖ ಪಾತ್ರಧಾರಿಗಳಾಗಿ ಕಾಣಿಸಿಕೊಳ್ಳುತ್ತಿದ್ದೆವು, ತತ್‌ಪರಿಣಾಮವಾಗಿ ಜಿಲ್ಲಾಧಿಕಾರಿಗಳು ಕರೆಸಿ ದಿನವೂ ನೀವು ವ್ಯಾಪಾರದ ಪ್ರಮುಖ ಸ್ಥಳದಲ್ಲಿ ಗಲಾಟೆ ಮಾಡುವುದು ಸರಿಯಲ್ಲ, ನಾನು ಬೊಂಬಾಯಿನಲ್ಲಿ ನ್ಯಾಯಶಾಸ್ತ್ರ ವ್ಯಾಸಂಗ ಮಾಡುವಾಗ ಇಂತಹದೇ ಒಂದು ಘಟನೆ ನಡೆಯಿತು. ಬೊಂಬಾಯಿನ ರಾಜಕೀಯದಲ್ಲಿ ಹತ್ಯಾಕಾಂಡ ನಡೆಸಿದ ಬ್ರಿಟಿಷ್ ಅಧಿಕಾರಿ 'ನೈಲ್' ಎಂಬ ಅಧಿಕಾರಿಯ ಸ್ಟ್ಯಾಚ್ಯು ತೆಗೆಸಲು ನಮ್ಮ ಕಾಲೇಜಿನ ವಿದ್ಯಾರ್ಥಿಗಳು ಪ್ರಯತ್ನಿಸಿ ಸರದಿ ಉಪವಾಸ ನಡೆಸಿ ವಿಗ್ರಹವನ್ನು ತೆಗೆಯಿಸಲಾಯ್ತು. ಆ ರೀತಿ ಒಂದಿಬ್ಬರು ಸರದಿ ಉಪವಾಸ ಆಚರಣೆ ಮಾಡುವುದರಿಂದ ನಿಮ್ಮ ಉದ್ದೇಶವೂ ಸರ್ಕಾರಕ್ಕೆ ಗೊತ್ತಾಗುವುದಲ್ಲದೆ ಶಾಂತಿಯುತವಾಗಿ ಸತ್ಯಾಗ್ರಹ ನಡೆದು ಯಾರಿಗೂ ಹಿಂಸೆಯಾಗಲಿ ತೊಂದರೆ ಆಗಲಿ ಆಗದು ಎಂದರು. ಈಗ ತಾನೆ ಅರ್ಧ ಘಂಟೆ ಮುಂಚೆ ದೊಡ್ಡಪೇಟೆ ವರ್ತಕರು ಪೋಲೀಸರಿಗೆ ದೂರಿತ್ತು, ನಮ್ಮ ಅಂಗಡಿಗಳಲ್ಲಿ ವ್ಯಾಪಾರವಾಗಿ ವಾರದಮೇಲಾಯ್ತು, ಅಂಗಡಿ ತೆಗೆದು ವ್ಯಾಪಾರ ಮಾಡಲು ಭಯವಾಗುತ್ತಿದೆ. ಪೋಲಿ ಪುಂಡರುಗಳು ಖಾದಿ ಹಾಕಿಕೊಂಡು ಸತ್ಯಾಗ್ರಹಿಗಳೆಂದು ಓಡಾಡುತ್ತಾರೆ. ಅವರು ಯಾವ ಘಳಿಗೆಯಲ್ಲಾದರು ಅಂಗಡಿಗಳನ್ನು ಲೂಟಿ ಮಾಡಬಹುದು ಮುಂತಾಗಿ ತಮ್ಮ ಕಷ್ಟವನ್ನು ಹೇಳಿಕೊಂಡು ಮನವಿ ಸಲ್ಲಿಸಿದ್ದಾರೆ. ಆ ವರ್ತಕರ ಮನವಿಗೆ ನಿಮ್ಮಲ್ಲೊಬ್ಬರು ಜಿಲ್ಲಾಧಿಕಾರಿಯಾಗಿ ಏನು ಸಮಜಾಯಿಷಿ ಕೊಡುತ್ತೀರಿ ಹೇಳಿ ಎಂದರು.

ವರ್ತಕರು ಸತ್ಯಾಗ್ರಹಿಗಳಾದ ನಮ್ಮನ್ನು ಮನೆ ಮನೆಗೆ ಕರೆದು ತಿಂಡಿ ತೀರ್ಥಕೊಟ್ಟು ಸತ್ಕರಿಸಿ ಕೆಂಪು ಮುಸುಡಿಯವನ ಹೆಸರು ತೆಗೆಸುವವರೆಗೆ ಬಿಡಬೇಡಿ. ನಾವೆಲ್ಲ ನಿಮಗೆ ಸಹಾಯಕರಾಗಿರುತ್ತೇವೆ. ಬೇಕಾದರೆ ನಮ್ಮ ಯುವರಾಜರ ಹೆಸರನ್ನು ಹಾಕಲಿ. ಅವರ ಮಗ ಜಯಚಾಮರಾಜೇಂದ್ರ ಒಡೆಯರಿದ್ದಾರೆ. ಅವರ ಹೆಸರನ್ನು ಹಾಕಲಿ ಮುಂತಾಗಿ ವರ್ತಕರು ನಮ್ಮ ಸತ್ಯಾಗ್ರಹಕ್ಕೆ ನಾನಾ ರೀತಿ ನೆರವು ನೀಡುತ್ತಾರೆಂದು ತಿಳಿಸಿದೆವು.

ಸರ್ಕಾರದೊಡನೆ ವ್ಯವಹರಿಸುವುದು ಬೆಂಕಿಯೊಡನೆ ಸರಸವಾಡುವುದು ಒಂದೇ, ಯೋಚನೆ ಮಾಡಿರಿ. ನೀವು ಹಳ್ಳಿಯಿಂದ ಬಂದವರು. ಪೇಟೆ ಜನರ ಥಳುಕಿಗೆ ಮಾರು ಹೋಗಬೇಡಿರಿ, ಅವರು ಒಪ್ಪತ್ತು ನಿಮಗೆ ಹಾಕುವ ಅನ್ನ ಎಷ್ಟು ದಿನಕ್ಕಾದೀತು. ಸರ್ಕಾರವನ್ನು ನೋಡಿ. ಜೈಲಿನಲ್ಲಿ ಎಷ್ಟೊಂದು ಜನ ಸತ್ಯಾಗ್ರಹಿಗಳಿಗೆ ಅನ್ನ ಹಾಕುತ್ತಿದೆ. ನಾಳೆಯಿಂದ ನೀವು ಗಲಾಟೆ ಆಗಲು ಗುಂಪು ಸೇರಲು ಅವಕಾಶ ಕೊಡಬೇಡಿರಿ ಎಂದರು. ಹಾಗಲ್ಲ ಸಾರ್ ಸಮಿತಿ ಚಾಲಕರು ಸುಬ್ಬರಾವ್‌ಉಪಾಧ್ಯಾಯರಿದ್ದಾರೆ. ಅವರಿಗೆ ಹೇಳಿ ವ್ಯವಸ್ಥೆ ಮಾಡಲು ತಿಳಿಸಿರಿ ಎಂದೆವು. ಯಾವ ಸುಬ್ಬರಾವೋ ನವಾಸೇರೋ ನನಗೆ ಗೊತ್ತಿಲ್ಲ ನೀವು ಮೂವರು ನಾಲ್ವರು ಈ ಸತ್ಯಾಗ್ರಹಕ್ಕೆ ಚಾಟಿ ಇದ್ದಂತೆ. ನಾನು ಹೇಳುವ ವಿಚಾರ ಅರ್ಥಮಾಡಿಕೊಳ್ಳಿ ಎಂದರು.

ಜಿಲ್ಲಾಧಿಕಾರಿಗಳ ಕಛೇರಿಯಿಂದ ಬಂದು ಕೋರ್ಟಿಗೆ ಕರೆದುಕೊಂಡು ಹೋಗಿದ್ದ ಸತ್ಯಾಗ್ರಹಿಗಳಾದ ಚಂದ್ರಶೇಖರ್, ಸುಬ್ಬಯ್ಯ ಮತ್ತು ಶಾಮರಾವ್ ಅವರುಗಳನ್ನು ಕಂಡು ಜಿಲ್ಲಾಧಿಕಾರಿಯವರು ತಿಳಿಸಿದ ವಿಚಾರವನ್ನು ಎಂ. ಎನ್. ಜೋಯಿಸರಿಗೆ ಕಾಗದದ ಮುಖೇನ ತಿಳಿಸಿದೆವು.

ಈ ದಿನದ ಸಂಜೆ ಸಭೆಯನ್ನು ಜನರ ಒತ್ತಾಯದಂತೆ ಸುಬ್ಬರಾಯನ ಕೆರೆ ಮೈದಾನದಲ್ಲಿ ಸೂರ್ಯನಾರಾಯಣ ಪಂಡಿತರ ಅಧ್ಯಕ್ಷತೆಯಲ್ಲಿ ಸೇರಿಸಿದೆವು. ಸುಪ್ರಸಿದ್ಧ ವಕೀಲರೂ ಕಾಂಗ್ರೆಸ್ ಮುಖಂಡರೂ ಆದ ಎಸ್. ರಂಗರಾಮಯ್ಯನವರು ಮತ್ತು ಬಿ. ನಾರಾಯಣ ಸ್ವಾಮಿ ಅವರುಗಳು ಮಾತನಾಡಿ ಇಂಗ್ಲಿಷರನ್ನು ನಮ್ಮ ದೇಶದಿಂದ ಹೊರಗಟ್ಟಬೇಕು. ಅದರ ಪ್ರತೀಕವಾಗಿ ಅಖಿಲ ಭಾರತ ಕಾಂಗ್ರೆಸ್ ನೇತಾರರಾದವರು ಕಾರಾಗೃಹಾದಿ ಶಿಕ್ಷೆಗಳನ್ನು ಅನುಭವಿಸುತ್ತ ಹೋರಾಡುತ್ತಿದ್ದಾರೆ. ಹ್ಯಾಮಿಲ್‌ಟನ್ ಅಂತಹ ಚಿಕ್ಕ ಇಂಗ್ಲಿಷ್ ಅಧಿಕಾರಿಯ ಹೆಸರಿಗೆ ದಿವಾನರು ಹೋಗಲಿ ಶ್ರೀಮನ್ ಮಹಾರಾಜರು ಮಹತ್ವ ನೀಡಿ ನಮ್ಮ ಮುಖಂಡರುಗಳಾದ ತಗಡೂರು ರಾಮಚಂದ್ರ ರಾಯರು, ಎಂ. ಎನ್. ಜೋಯಿಸರು, ಹಾಗೂ 25 ಮಂದಿ ಸತ್ಯಾಗ್ರಹಿಗಳನ್ನು ಜೈಲಿಗೆ ನೂಕಿದ್ದಾರೆ. ಸರ್ಕಾರದವರು ಎಲ್ಲರನ್ನು ಜೈಲಿನಿಂದ ಬಿಡುಗಡೆಮಾಡಿ ಹ್ಯಾಮಿಲ್‌ಟನ್ ಹೆಸರು ತೆಗೆಯಲೆಂದು ಆಗ್ರಹಪಡಿಸಿದರು.

ಶ್ರೀ ಎ. ರಾಮಣ್ಣನವರು ಮಾತನಾಡಿ ಮಹಾಜನರು ಹ್ಯಾಮಿಲ್‌ಟನ್

ಬಿಲ್ಡಿಂಗ್ ಸತ್ಯಾಗ್ರಹಕ್ಕೆ ಪೂರ್ಣ ಬೆಂಬಲ ನೀಡುತ್ತ ಬಂದಿದ್ದೀರಿ. ಈ ಸಹಾನು ಭೂತಿ ಸಹಾಯದ ಹಸ್ತ ಕೊನೆತನಕ ಮುಂದುವರಿಯಲಿ ಎಂದರು.

ಅರಕೆರೆ ಯು. ಕೆಂಚಪ್ಪನ ಮಾರ್ಗ ನಮ್ಮಿಂದ ಬೇರೆಯದಾಗಿತ್ತು. ಆತನು ಮಾತೆತ್ತಿದರೆ ನಾವೇಕೆ ಪೋಲೀಸರಿಗೆ ತಲೆಬಾಗಬೇಕು. ದೇವರಿಗೆ ತಲೆ ಬಾಗೋಣ, ಗಾಂಧಿಯೆ ಹೇಳಲಿ, ತಗಡೂರುರಾಮಚಂದ್ರರಾಯರೇ ಹೇಳಲಿ. ಅವರ ಹೇಡಿತನದ ಮಾತುಗಳವು, ಪೋಲೀಸರು ಬಡಿಯುತ್ತಿದ್ದರೂ ತಲೆಬಗ್ಗಿಸಿ ಹೊಡೆಸಿಕೊಳ್ಳುವುದು ನಾಯಬಾಳು. ಇಂತಹ ಹೇಡಿತನಕ್ಕೆ ಒಲ್ಲೆ. ಹಂದಿಯಂತೆ ವರ್ಷ ಬಾಳುವುದು ಬೇಡ, ನಂದಿಯಂತೆ ಒಂದೇ ದಿನ ಬಾಳಿ ಸತ್ತರೂ ಸರಿಯೆ. ಮುಂತಾಗಿ ಕ್ರಾಂತಿಕಾರಕ ಮಾತುಗಳಿಗೆ ಯುವಕರು ಸೈಗೊಟ್ಟು ಚಪ್ಪಾಳೆ ತಟ್ಟುತ್ತಿದ್ದರು. ಕೆಂಚಪ್ಪನು ಸಭೆಗೆ ಬಂದರೆ ''ಭಗತ್‌ಸಿಂಗ್ ಕಿ ಜೈ'' ಎಂದು ಜೈಕಾರ ಮಾಡುತ್ತಿದ್ದರು.

ನಾನು ಎದ್ದು ಸಭೆಯನ್ನು ಉದ್ದೇಶಿಸಿ ಭಾಷಣ ಪ್ರಾರಂಭಿಸಿದೆ. ಸ್ವಾಮಿ ನೀವು ಸಾವಿರ ಮಾತು ಹೇಳುವುದಕ್ಕಿಂತ ಕುವೆಂಪು ಅವರ ಸಾಹಿತ್ಯದಿಂದ ಎರಡು ಸಾಲು ಹೇಳಿ, ಅದಕ್ಕಾಗಿ ನಾವಿಲ್ಲಿ ಬಂದಿದ್ದೇವೆ ಮುಂತಾಗಿ ಕೂಗಿ ಹೇಳಿದರು. ಇಂದು ನಮ್ಮಿಂದ ಮತ ಪಡೆದು ಹೋದ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆ ಸದಸ್ಯರು ಕಣ್ಣು ಮುಚ್ಚಿ ಸರಕಾರದೊಡನೆ ಷಾಮೀಲಾಗಿ ಪ್ರಜೆಗಳ ಕಷ್ಟವನ್ನು ಮರೆತಿದ್ದಾರೆ. ಅಂತಹ ಸದಸ್ಯರನ್ನು ಕುರಿತೇ ಮಹಾಕವಿ ಕುವೆಂಪು ಕವನ ರಚಿಸಿದ್ದಾರೆ. ನೋಡಿ ನೋಡಿ ನಿಮ್ಮೆದುರೇ ಸಾಲಾಗಿ ದೆವ್ವಗಳು ತಿರುಗದ ಚಾಮುಂಡಿಬೆಟ್ಟದ ಮೇಲೆ ದೀಪಗಳ ಮಾಲೆ, ಹೀಗೆ ಹೇಳಿ ಹಾಳೂರಿನಿಂದ ವರ್ಣಿಸಿದೆ.





ಲಾಠಿ ಏಟಿನಿಂದ ಚೇತರಿಸಿಕೊಂಡ ನನ್ನನ್ನು ದಸ್ತಗಿರಿ ಮಾಡಿ ಮೈಸೂರು ಜೈಲಿಗೆ ನ್ಯಾಯಾಂಗ ಕಸ್ಟಡಿಯಲ್ಲಿ ಸೇರಿಸಿದರು. ಈ ಮೊದಲೆ ತಗಡೂರು ರಾಮಚಂದ್ರ ರಾಯರು, ಎಂ. ಎಸ್. ಜೋಯಿಸರು ದಸ್ತಗಿರಿಯಾಗಿ ವಿಚಾರಣೆ ಎದುರಿಸುತ್ತಿದ್ದರು. ಸತ್ಯಾಗ್ರಹ ಆಚರಿಸಿದ ಸುಮಾರು 20 ಮಂದಿ ತಲಾ 5 ತಿಂಗಳಂತೆ ಸಾದಾ ಸಜಾ ಪಡೆದು ಅವರೊಡನಿದ್ದರು. ಜೈಲಿಗೆ ಹೋಗಿ ನೋಡಿದರೆ ನಮ್ಮವರೆಲ್ಲ ಬಹು ಖುಷಿ ವಂತರಾಗಿ ಹಸನ್ಮುಖಿಗಳಾಗಿದ್ದರು. ಜೈಲಿನಲ್ಲಿರುವವರೆಲ್ಲ ಕುಖ್ಯಾತ ವ್ಯಕ್ತಿಗಳು ಎಂದು ಕೊಳ್ಳಬೇಡಿರಿ. ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ನಾನಾ ವಿಚಾರಗಳನ್ನು ಮಥಿಸಿದ ವಿಚಾರವಂತರು. ಜೈಲಿನ ಶುಚಿ ಬಗ್ಗೆ ಆಗಲೆ ಹೇಳಿದ್ದೇನೆ. ಖೈದಿಗಳಿಗೆ ವಾಸಕ್ಕೆ ಕೊಡುವ ದೊಡ್ಡ ಕೊಠಡಿಗಳ ಹೆಸರನ್ನು ಬ್ಯಾರೆಕ್‌ಗಳೆಂದು ಕರೆಯುತ್ತಾರೆ. ಒಬ್ಬಿಬ್ಬರು ಇರುವಷ್ಟು ಜಾಗವಿರುವ ಕೊಠಡಿಗಳನ್ನು ಸೆಲ್‌ಗಳೆಂದು ಕರೆಯುತ್ತಾರೆ.

ದೊಡ್ಡ ಬ್ಯಾರೆಕ್‌ಗಳಲ್ಲಿ 30 ರಿಂದ 40 ಮಂದಿಯಷ್ಟು ಖೈದಿಗಳಿರುತ್ತಾರೆ. ಜೈಲಿನ ಶಿಸ್ತು ನಿಯಮಗಳನ್ನು ಮೀರಿ ನಡೆಯುವ ಖೈದಿಗಳನ್ನು ಚಿಕ್ಕಕೊಠಡಿಗಳಲ್ಲಿ (ಸೆಲ್‌ಗಳು)ಸೇರಿಸಿ ವಾರಗಟ್ಟಲೆ ದಿನದ 24 ಘಂಟೆಯೂ ಏಕಾಂಗಿಯಾಗಿ ಇರುವಂತೆ ಮಾಡುತ್ತಾರೆ. ಜೈಲಿಗೆ ಹೊಸದಾಗಿ ಸೇರಿ ವಿಚಾರಣೆಗೆ ಗುರಿಯಾದವರ ಹೆಸರನ್ನು ಗುಮಾನಿ ಖೈದಿಗಳೆಂದು ಕರೆಯುವರು). ಇಂತಹ ಗುಮಾನಿಖೈದಿಯನ್ನು ಕ್ವಾರಂಟೈನ್ ಬ್ಯಾರೆಕ್‌ನಲ್ಲಿಡುವರು. ಈ ಬ್ಯಾರೆಕ್ ಖೈದಿಗಳ ವಾಸದಬ್ಯಾರಕ್‌ನಿಂದ ಪ್ರತ್ಯೇಕ ಆವರಣದಲ್ಲಿದ್ದು, ಖೈದಿಗಳಿಗೂ ಗುಮಾನಿಖೈದಿಗೂ ಸಂಪರ್ಕವೇ ಇಲ್ಲದ ರೀತಿ ಕ್ವಾರಂಟೈನ್ ಬ್ಯಾರಕ್‌ನ್ನು ವ್ಯವಸ್ಥೆ ಮಾಡಿದ್ದಾರೆ.

ಹೊರಗಿನಿಂದ ಬರುವ ಖೈದಿಗಳಿಗೆ ಏನಾದರು ಸಾಂಕ್ರಾಮಿಕ ಜಾಡ್ಯವಿದ್ದರೆ ಜೈಲಿನ ಇನ್ನಿತರ ಪರಿಸರಕ್ಕೆ ರೋಗ ಹರಡಿ ಅನಾಹುತವಾದೀತೆಂಬ ಮುನ್ನೆಚ್ಚರಿಕೆ ಕ್ರಮ ಅದು. ಕ್ವಾರಂಟೈನ್ ಬ್ಯಾರೆಕ್ಕಿನಲ್ಲಿ ಎಂಟು ದಿನಗಳ ವಾಸಾನಂತರ ಇನ್ನಿತರ ಖೈದಿಗಳ ಜೊತೆ ಸೇರಿಸುವರು. ದಿನವೂ ಸರ್ಕಾರಿ ಆಸ್ಪತ್ರೆಯಿಂದ ಡಾಕ್ಟರು ಬಂದು ರೋಗಗ್ರಸ್ತಖೈದಿಗಳಿಗೆ ಚಿಕಿತ್ಸೆನೀಡುವ ವ್ಯವಸ್ಥೆಯಿದೆ. ಬೆಂಗಳೂರಿನ ಕೇಂದ್ರ ಸೆರೆಮನೆ ಯಲ್ಲಿ ಒಂದು ಆಸ್ಪತ್ರೆಯೇ ಇದೆ. ಜೈಲಿನ ಬ್ಯಾರೆಕ್‌ಗಳು, ಆವರಣದ ಸ್ವಚ್ಛತೆಗೆ ಹೆಸರಾಗಿದ್ದು ಸರ್ಕಾರದ ಯಾವ ಆಸ್ಪತ್ರೆಯೂ ಜೈಲಿನ ಸ್ವಚ್ಛತೆಯನ್ನು ಕಾಪಾಡಿ ಕೊಂಡಿಲ್ಲ ಎಂಬುದು ತುಂಬಾ ವ್ಯಥೆಪಡುವ ವಿಚಾರ.

ನಾನು ಈ ಮೊದಲೆ ಮೂರು ನಾಲ್ಕು ಬಾರಿ ಶಿಕ್ಷೆಗೆ ಒಳಗಾಗಿ ಜೈಲಿನಲ್ಲಿದ್ದು

ಹೋದ ಹಳಬ. ಎಲ್ಲರು ಪರಿಚಿತರಾಗಿದ್ದರು. ನನಗೆ ಯಾವ ಸಾಂಕ್ರಾಮಿಕ ರೋಗವು ಇಲ್ಲ ಎಂಬುದು ಜೈಲಿನ ಅಧಿಕಾರಿಗಳಿಗೆ ಮತ್ತು ಡಾಕ್ಟರರಿಗೆ ಗೊತ್ತಿತ್ತು. ಆದರೆ ಜೈಲು ನಿಯಮ ಕಟ್ಟುನಿಟ್ಟಿನದು, ಅನುಸರಿಸಲೇಬೇಕು. ಆ ಕಟ್ಟುನಿಟ್ಟಿನಂತೆ ಕ್ವಾರಂಟೈನಿಗೆ ಹಾಕಿದರು. ಶಾಸ್ತ್ರಕ್ಕೆ ಅಲ್ಲಿದ್ದು ಬೇರೆ ಸಮಯದಲ್ಲಿ ಎಲ್ಲರೊಡನೆ ಸೇರಿಕೊಂಡಿರುತ್ತಿದ್ದೆ. ಹಾಲುಚೆಲ್ಲಿದಂತಿರುವ ತಿಂಗಳ ಬೆಳಕಿನ ರಾತ್ರಿಗಳಲ್ಲಿ ಜೈಲು ಅದೆಂತಹ ಭವ್ಯತೆಯ ಸುಂದರ ತಾಣವಾಗಿರುವುದು. ನಾನು ಒಂದೆ ಹೇಳಿರುವಂತೆ ಖೈದಿಗಳು ಒಬ್ಬರಮೇಲೊಬ್ಬರು ಪೈಪೋಟಿಯಿಂದ ಯಕ್ಷಗಾನ ನಾಟಕಗಳು,ರಂಗಪದ, ಭಾವಗೀತೆಗಳು, ಸುಗಮಸಂಗೀತಗಳನ್ನು ತಮ್ಮ ಸುಶ್ರಾವ್ಯವಾದ ಮಧುರ ಕಂಠದಿಂದ ಹಾಡುತ್ತಿದ್ದರೆ ನಾವು ಗಾನಗಂಧರ್ವ ಲೋಕದಲ್ಲಿದ್ದೇವೋ ಎನ್ನುವ ವಾತಾವರಣ ಸೃಷ್ಟಿಯಾಗುತಿತ್ತು. ಭಾನುವಾರಗಳಲ್ಲಿ ಕೈಗಾರಿಕೆಗಳಿಗೆ ರಜ. ಅಂದು ಮಹಾಭಾರತ ತುಣುಕುಗಳನ್ನು ಹಾಡುವವರು ಸ್ಪರ್ಧೆಯಲ್ಲಿ ಹಾಡಿ ತಣಿಸುವ ಜನರಿದ್ದರು. ನಂಜನಗೂಡಿನ ಬಳಿ ಹುಲ್ಲಹಳ್ಳಿಯ ನಂಜಯ್ಯನೆಂಬ ಶಿಕ್ಷೆಗೊಳಗಾಗಿದ್ದ ಖೈದಿಯಿದ್ದ. ಆತನು ಮನೆವ್ಯವಹಾರದಲ್ಲಿ ಅಣ್ಣನೊಡನೆ ಹೊಡೆದಾಡಿ ಜೈಲಿಗೆ ಬಂದಿದ್ದ. ಆತನು ಇಂಟರ್‌ಮೀಡಿಯೆಟ್ ಉತ್ತೀರ್ಣನಾಗಿದ್ದ ವ್ಯಕ್ತಿ. ಆತನು ಕುವೆಂಪು ಅವರ 'ಜಲಗಾರ' ನಾಟಕವನ್ನು ಬಾಯಲ್ಲಿ ಒಂದು ಸಾಲೂ ತಪ್ಪಿಲ್ಲದಂತೆ ಅಭಿನಯಿಸುತ್ತಿದ್ದ. ನಾನು ಜೈಲಿಗೆ ಹೋದ ದಿನ ತಗಡೂರು ರಾಮಚಂದ್ರರಾಯರು ಬಾರಯ್ಯ ಪಾಲಗ್ರಹಾರದ ಜಲಗಾರ ನಂಜನಗೂಡಿನ ಜಲಗಾರ ನಂಜಯ್ಯನನ್ನು ನೋಡು ಎಂದು ಪರಿಚಯಿಸಿದರು. ದಿನಕ್ಕೆರಡು ಬಾರಿಯಂತು ಜಲಗಾರನನ್ನು ಹಾಡಿಸಿ ತಗಡೂರು ರಾಮಚಂದ್ರರಾಯರು ಕೇಳುವ ಪಾಡಿಕೆ. ಜಲಗಾರನನ್ನು ಹಾಡಿಸಿ ಕೇಳಲೆಂದೇ ನಂಜಯ್ಯನನ್ನು ತಮ್ಮ ಎದುರು ಬ್ಯಾರೆಕ್‌ಗೆ ಹಾಕಿಸಿಕೊಂಡಿದ್ದರು.

**ಜಲಗಾರ**
**(ಕೈಮುಗಿದು)**

ರಜತಗಿರಿಗೊಡೆಯನಾಗಿಹೆಯಂತೆ ; ಕೈಲಾಸ
ಪತಿಯಂತೆ ; ಮುಕುಟದಲಿ ಹಿಮಕರನ ತೊಟ್ಟಿರುವ
ಶಶಿಧರನು ನೀನಂತೆ. ಜಡೆಯೊಡವೆ ಗಂಗೆಯಾ-
ಗಿಹಳಂತೆ. ಕೊರಳಿನಲಿ ಹಾವುಗಳ ಕಟ್ಟಂತೆ.
ಹಣೆಯಲ್ಲಿ ಉರಿಗಣ್ಣನುಳ್ಳ ನೀಂ ಮುಕ್ಕಣ್ಣ-
ನಂತೆ !ಗಿರಿಜಾರಮಣನಂತೆ ! ವಿಷಕಂಠ
ನೀನಂತೆ ! ನೀಂ ಕುಬೇರನ ಮಿತ್ರನಂತೆ !
ಇಂತಿಹನು ಜಗದ ಜಲಗಾರನಹನೆಂತು ?
ಇಂತಿಹನೆನ್ನ ಬಾಂಧವನೆ ? ಸೋದರನೆ ?



**ಶಿವ**

(ಮುಗುಳು ನಗೆಯಿಂದಲೂ ದರ್ಪದಿಂದಲೂ)

ಸೋದರನೆ, ಶಿವನು ಶಾಸ್ತ್ರಗಳ ಶಿವನಲ್ಲ !
ಕಾವ್ಯಗಳ ಶಿವನಲ್ಲ ! ಕವಿತೆಯಾ ಶಿವನಲ್ಲ !
ಬೆಳ್ಳಿಬೆಟ್ಟದ ಮೇಲೆ ಗಿರಿಜೆಯೊಡಗೂಡಿ
ಸರಸವಾಡುವ ರಸಿಕ ಶಿವನಲ್ಲ ! ಬ್ರಹ್ಮಾಂಡ
ಒತ್ತುತಿಹ ಕಸದ ರಾಸಿಯ ಮೇಲೆ ಹತ್ತಿ,
ನಿಂತು, ನರ್ತನವನೆಸಗುತಿಹ ತೋಟಿ ನಾನು !
ನಿಜಶಿವನು ಜಲಗಾರ ! ನಿನ್ನ ಮುಂದಿಹನು ನೋಡು !

**ಜಲಗಾರ**

ಹೇ ದೇವ. ಪಂಡಿತರದೇಕಂತು ಬಣ್ಣಿಪರು

**ಶಿವ**

ಸೋದರನೆ, ಶಾಸ್ತ್ರಿಗಳ ಕಂಗಳಿಗೆ ನಾನು
ನೋಡಲು ಕುರೂಪಿಯಾಗಿದ್ದೆ. ಆದರಿಂದ
ಚೆಲ್ವಾಂತ ತಣ್ಗದಿರನೊಡಪೆ ಮಾಡಿದರೆನಗೆ !
ಅವರ ಭಾಗಕೆ ನಾನು ಪಾಪಿಯಾಗಿದ್ದೆ.
ಆದರಿಂದ ಗಂಗೆಯನು ತೊಡಿಸಿದರು ತಲೆಯಲ್ಲಿ,
ತೊಳೆದೆನ್ನ ಶುದ್ಧಮಾಡಲು ಎಂದು ! ಅಸ್ಪೃಶ್ಯನ್
ಆಗಿದ್ದೆ ! ಆದರಿಂದ ಹಣೆಗಣ್ಣ ಮುಡಿಸಿದರು,
ಸುಟ್ಟೆನ್ನ ಶುಚಿಮಾಡಲೆಂದು ! ರೌದ್ರತೆಯನ್
ಈಯಲೆಂದೆನಗೆ ಉರಗಗಳ ಸುತ್ತಿದರು
ಕೊರಳಲ್ಲಿ. ಜೋಯಿಸರ ಭಾಗಕ್ಕೆ ಶಿವನು
ಮುಟ್ಟದವನಾಗಿಹನು. ಚಂದ್ರನಿಲ್ಲದೆ, ಗಂಗೆ
ಇಲ್ಲದೆಯೆ, ಹಣೆಗಣ್ಣು ಹಾವುಗಳು ಇಲ್ಲದೆಯೆ,
ಜನಿವಾರ ಬೂದಿಗಳು ಇಲ್ಲದೆಯೆ, ಶಿವಗುಡಿಗೆ
ಸೇರಿಸರು ಶಿವನಾದ ಎನ್ನ. ಆದರಿಂದ
ನಿಜವಾದ ಶಿವನು ಜಲಗಾರ ಶಿವನು,
ಶಿವ್ಯಗುಡಿಯ ಪೀಠದಲಿ ಎಂದೆಂದಿಗೂ ಇಲ್ಲ !

ಜಲಗಾರನ ಈ ಸಾಲುಗಳನ್ನು ಕೇಳಿದ ರಾಯರು ಆವೇಶಪೂರಿತರಾಗುತ್ತಿದ್ದರು.ಅಯ್ಯ ಜವರಪ್ಪ ಈ ಕೃತಿಯನ್ನು ಹಳ್ಳಿಹಳ್ಳಿಗೆ ಜನರಿಂದ ಜನಕ್ಕೆ ಹಂಚಬೇಕು. ಎಲ್ಲರೂ

ಇದನ್ನು ಓದಬೇಕು, ಓದಿ ಹಾಡಬೇಕು, ಸಾಕ್ಷಾತ್ ಈಶ್ವರನನ್ನೇ ಶುದ್ಧಗೊಳಿಸುವ ಮೂರ್ಖ ಶಾಸ್ತ್ರಿಗಳು ನಿರ್ವಂಶಿಕರಾಗಬೇಕು, ಇಡೀ ಭಾರತ ಜಲಗಾರರ ಮಯ ವಾಗಬೇಕು. ಹಾಗೆ ಜಲಗಾರರಿಂದಾವೃತವಾದ ಭಾರತದಲ್ಲಿ ಗಾಂಧೀಜಿ ಹೇಳುವ ರಾಮರಾಜ್ಯ ಕಾಣಲು ಸಾಧ್ಯ. ಅದಿಲ್ಲದೆ ಮನುಷ್ಯ ಮನುಷ್ಯನಿಗೆ ಅಸ್ಪೃಶ್ಯತೆ, ಈ ಹಾಳು ಹೊಲಸುತನ ತೊಲಗಿದಲ್ಲದೆ ಯಾರದೂ ಉದ್ಧಾರವಾಗದು ಎಂದು ಉದ್ವೇಗಿತರಾಗಿ ತಗಡೂರರು ಹೇಳುತ್ತಿದ್ದರು, ಜಲಗಾರಸಲ್ಲದೆ ಬೇರಾವ ಕೃತಿಗೊಡವೆಯೂ ಬೇಡಪ್ಪ. ಈ ಕೃತಿಯೇ ಸನಾತನ ಧರ್ಮದ ಬುನಾದಿಯನ್ನು ಭದ್ರಗೊಳಿಸಲು ಮಹಾಸಾಧನ ಎಂದು ಭಾನುವಾರ ಖೈದಿಗಳಿಗೂ ಓದಿಸಿ ಹೇಳಿ ವಿವರಿಸುತ್ತಿದ್ದರು. ಈ ಮೊದಲೆ ನನಗೆ ಕುವೆಂಪು ಸಾಹಿತ್ಯ ಎಂದರೆ ಅಗ್ನಿಸ್ಫೋಟಕ ವಸ್ತುಗಳಾಗಿದ್ದುವು. ನಾನು ಸಹ ಮಾತನಾಡಿ ನೀವೆಲ್ಲರು ಬಿಡುಗಡೆಯಾಗಿ ಮನೆಗೆ ಹೋದಾಗ ಹೊಲೆಯ ಮಾದಿಗ ಎನ್ನುವ ಭಿನ್ನತೆಯನ್ನು ಬಿಟ್ಟು ಬಾಳಿ. ನಾವು ಬಿಡುಗಡೆ ನಂತರ ನಿಮ್ಮೂರುಗಳಿಗೆ ಬರುತ್ತೇವೆ. ನಮಗೆ ಸಹಾಯಕರಾಗಿ ಎಂದು ಕೇಳಿಕೊಂಡೆವು. ನಿಮ್ಮ ಸಹಾಯ ಕಳ್ಳತನ, ಸುಳ್ಳು.ತಟವಟಗಳಿಗಲ್ಲ. ಲೋಕೋದ್ಧಾರಕ್ಕೆ ಮುಡಿಪಾಗಿರಲಿ ಎಂದು ಉಪದೇಶಿಸುತ್ತಿದ್ದೆವು.

ಸರ್ಕಾರದ ಪರ ಜೈಲು ಅಧಿಕಾರಿಗಳಾದರು ಶ್ರೀ ರಾಮಾಯಣದರ್ಶನಂನಲ್ಲಿ ಬರುವ "ಮೀನ್ಗೆ ನೀರೊಳಗಿರ್ಪ ಗಾಳಿಯೆ ಗಾಳಿ, ನೀರನುಳಿಯಲ್ಕುಸಿರ್ ಕಟ್ಟಿ, ವಾಯುಮಂಡಲಮೆ ವಾಯುವಿಹೀನವೆಂಬಂತೆ ತೋರ್ಪುದಯ್" ಎಂದು ಹೇಳಿರು ವಂತೆ ಜೈಲು ಅಧಿಕಾರಿಗಳು ನಮ್ಮ ಮತ್ತು ಖೈದಿಗಳ ಜೊತೆ ದಿನನಿತ್ಯದ ವ್ಯವಹಾರ ವಾಗಿತ್ತು. ನಮ್ಮೊಡನೆ ಹೆಚ್ಚು ಕಮ್ಮಿಯಾಗಿ ಅವರು ಸಹವರ್ತಿಗಳಾಗಿರುತ್ತಿದ್ದರು.

ಕೋರ್ಟಿಗೆ ತಗಡೂರು ರಾಮಚಂದ್ರರಾಯರನ್ನು ಮತ್ತು ನನ್ನನ್ನು ಕರೆದುಕೊಂಡು ಹೋಗಲು ಪ್ರಾತಃಕಾಲ 9½ ಘಂಟೆಗೆ ಬಂದರು. ನಮ್ಮಿಬ್ಬರನ್ನು ಜಟಕಾಗಾಡಿಯಲ್ಲಿ ಕೂರಿಸಿಕೊಂಡು ಕೋರ್ಟಿಗೆ ಕರೆದೊಯ್ದರು. ಇನ್ನಿತರ ಗುಮಾನಿ ಖೈದಿಗಳನ್ನು ಅವರ ಕೈಗಳಿಗೆ ಕೋಳ ಹಾಕಿ ಒಬ್ಬನಿಂದ ಇನ್ನೊಬ್ಬನಿಂದ ಇನ್ನೊಬ್ಬನ ಕೈ ತಾಕ ಹಾಕಿ ಗುಂಪಿನಲ್ಲಿ ಕರೆದುಕೊಂಡು ಹೊರಟರು, ನಮಗಿಂತ ½ ಘಂಟೆ ಮೊದಲು. ಹಾಲಿ ನಮ್ಮ ಕಡೆಯಿಂದ ದನಕರುಗಳನ್ನು ಕೊಂಡು ಕೇರಳಕ್ಕೆ ಓಡಿಸಿ ಕೊಂಡು ಹೋಗುತ್ತಾರಲ್ಲ ಹಾಗಿರುತ್ತಿತ್ತು. ಖೈದಿಗಳನ್ನು ಪೋಲಿಸರು ಕರೆದುಕೊಂಡು ಹೋಗುವ ದೃಶ್ಯ ಅಮಾನವೀಯವಾಗಿ ಕಾಣುತ್ತಿತ್ತು. ಕಾಲುನೋವಿನವನು ಸಹ ಚೆನ್ನಾಗಿರುವವನ ಜೊತೆ ಹೆಜ್ಜೆ ಹಾಕಿ ಓಡಬೇಕು. ಬಿಡಿ ಈಗಂತು ಖೈದಿಗಳನ್ನು ಕೋರ್ಟಿಗೆ, ಆಸ್ಪತ್ರೆಗೆ ಮೋಟಾರುವ್ಯಾನಿನಲ್ಲಿ ಕರೆದೊಯ್ಯುವ ಪದ್ಧತಿ ಸಮಾಧಾನ ವಾದುದು.

ನಾವು ಕೋರ್ಟಿನ ಆವರಣಕ್ಕೆ ಹೋಗಿ ಇಳಿದೆವು. ನಗರದ ಪ್ರತಿಷ್ಠಿತ

ವಕೀಲರು ತಮ್ಮ ತಮ್ಮ ಕಕ್ಷಿದಾರರುಗಳೊಡನಿದ್ದರು. ನಮಗೆ ಕಾಫಿ ತಿಂಡಿ ಕೊಡಿಸಿದರು. ಯೋಗಕ್ಷೇಮ ವಿಚಾರಿಸಿದರು. ತಗಡೂರು ರಾಮಚಂದ್ರರಾಯರನ್ನು ಕೆಳಗಿನ ಕೋರ್ಟಿಗೆ ಕರೆದುಕೊಂಡು ಹೋದರು. ನನ್ನನ್ನು ಮಹಡಿ ಮೇಲಿನ ಕೋರ್ಟಿಗೆ ಕರೆದುಕೊಂಡು ಹೋದರು. ಪಿ. ಎಸ್. ಜವರಪ್ಪಗೌಡ ಎಂದು ಮೂರು ಬಾರಿ ಕೂಗಲೇಬೇಕಾದ ನಿಯಮವೋ ಏನೋ ನಾನಾಗಲೇ ಕೋರ್ಟಿನೊಳಗಿದ್ದರು ಮತ್ತೆರಡು ಬಾರಿ ಕೂಗಿದ ವೇದೆ.

ಒಳಗೆ ಹೋದೆ. ನನ್ನನ್ನು ಕುರಿತು ಬೆಂಚ್ ಕ್ಲಾರ್ಕ್ "ಜಡ್ಜರಿಗೆ ಕೈಮುಗಿಯಿರಿ" ಎಂದರು. ಜಡ್ಜರು, ಬೆಂಚ್ ಕ್ಲಾರ್ಕ್ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರಿಗೂ ಸಹ ಕೈ ಮುಗಿದೆನು. ಅನಂತರ ಆಸೀನನಾಗಲು ಲಾಯರುಗಳ ಸಾಲಿನಲ್ಲಿ ಹಾಕಿದ್ದ ಖಾಲಿ ಕುರ್ಚಿಯಲ್ಲಿ ಕೂರಲು ಹೋದೆ. ಕುಳಿತುಕೊಳ್ಳುವ ಮೊದಲೆ ಪೋಲೀಸಿನವನು, ಅಲ್ಲಿ ಕೂರಬೇಡಿ ಇಲ್ಲಿ ಬನ್ನಿ ಕಟಕಟೆಯಿದೆ. ಕೈಕಟ್ಟಿನಿಲ್ಲಬೇಕು ಎಂದ. ನಾನು ಆತನನ್ನು ರೇಗಿ ಅದ್ದರಿಸಿದೆ. ಹೇ ಹೋಗಯ್ಯ ನಾನೇನು ಕಳ್ಳತನ ಮಾಡಿಲ್ಲ ಯಾರ ಮನೆಗೂ ಕನ್ನ ಹಾಕಿಲ್ಲ ಏಕೆ ನಿಲ್ಲಬೇಕು, ನಾನು ನಿಲ್ಲುವುದಿಲ್ಲ ಎಂದೆ. ಪಬ್ಲಿಕ್ ಪ್ರಾಸಿಕ್ಯೂಟರ್ ಎದ್ದು ನಿಂತು ಅಲ್ಲಿ ಹೋಗಿ ನಿಂತು ನಾವು ಕೇಳುವ ಪ್ರಶ್ನೆಗೆ ಉತ್ತರಕೊಡಿ. ಏನಂ ಸ್ವಾಮಿ ನಾನಿರುವುದು ಸಹ ನೀವಿರುವ ಕೋರ್ಟಿನಲ್ಲೆ. ನಿಮ್ಮ ಪ್ರಶ್ನೆ ಕೇಳಿ. ನನಗೇನು? ಕಿವುಡಿಲ್ಲ, ಉತ್ತರ ಹೇಳುತ್ತೇನೆ ಎಂದೆ. ನೀವು ಆ ಕಟಕಟೆಗೆ ಹೋಗಿ ನಿಲ್ಲಲೇಬೇಕು ಎಂದರು ಪಬ್ಲಿಕ್ ಪ್ರಾಸಿಕ್ಯೂಟರ್. ಇಲ್ಲ ಸ್ವಾಮಿ ಇದೊಂದು ಸವಾಲು ನಿಮಗೂ ನನಗೂ ತಲೆ ಮೇಲೆ ತಲೆ ಬಿದ್ದರು ಸಭ್ಯ ನಾಗರೀಕನಾದ ನಾನು ಕಟಕಟೆ ಹತ್ತುವುದೇ ಇಲ್ಲ. ಇದು ನನ್ನ ಭೀಷಣ ಪ್ರತಿಜ್ಞೆ ಎಂದೆ

ಇದೇನು ? ಸುಬ್ಬರಾಯನ ಕೆರೆ ಮೈದಾನ ಎಂದು ತಿಳಿದಿರೋ ? ಇದು ನ್ಯಾಯಾಲಯ ಶಿಸ್ತು ನಿಯಮದಂತೆ ನಡೆಯಬೇಕು. ನಿಮ್ಮ ಅಹವಾಲೇನು ? ಕಟ ಕಟೆಯಲ್ಲಿ ನಿಲ್ಲಲು ಎಂಬುದನ್ನು ನ್ಯಾಯಾಧೀಶರಿಗೆ ಹೇಳಿಕೊಳ್ಳಿ, ಅವರು ಕೊಡುವ ತೀರ್ಪಿನಂತೆ ನಡೆದುಕೊಳ್ಳಿ ಎಂದರು. ಸರಿ ಸ್ವಾಮಿ ನಾನೇನು ಅಗೌರವವಾಗಿ ವರ್ತಿಸಿಲ್ಲ. ನಾನು ಸಹ ಜಡ್ಜರಂತೆ, ನಿಮ್ಮಂತೆ ಮತ್ತು ವಕೀಲರುಗಳಂತೆ ಸಭ್ಯ ನಾದವನು. ನನ್ನನ್ನು ಅಪರಾಧ ಮಾಡಿದ್ದಾನೆಂದು ಪೋಲೀಸರು ಹೇಳಿಬಿಟ್ಟಾಕ್ಷಣ ನಾನು ಅಸಭ್ಯನಾಗಿಬಿಟ್ಟೆನೆ. ವಿಚಾರಣೆ ಮಾಡಿ ನಾನು ಅಪರಾಧಿ ಎಂದು ಸಾಬೀತಾಗಿ ನ್ಯಾಯಾಧೀಶರಾದ ತಾವು ನೀಡುವ ಶಿಕ್ಷೆಯನ್ನು ತಲೆಬಾಗಿ ಸ್ವೀಕರಿಸಿ ಚಾಚೂ ತಪ್ಪದೆ ನಡೆದುಕೊಳ್ಳುತ್ತೇನೆ ಎಂದೆ. ಕೋರ್ಟ್ ಆವರಣದಲ್ಲಿದ್ದವರಲ್ಲಿ ಏನೋ ಒಂದು ರೀತಿಯ ಆತಂಕವುಂಟಾದಂತೆ ಕಂಡಿತು. ಜಡ್ಜರು ಸಹ ಏನೂ ಹೇಳದೆ ನನ್ನತ್ತಲೇ ತೀಕ್ಷಣವಾದ ನೋಟ ಬೀರಿದರು. ಈ ಮೊಕದ್ದಮೆಯನ್ನು ಮುಂದಿನ ವಾರಕ್ಕೆ ಹಾಕ ಲಾಗಿದೆ ಎಂದು ನನ್ನನ್ನು ತಗಡೂರು ರಾಮಚಂದ್ರರಾಯರಿದ್ದ ಕೆಳಕೋರ್ಟಿನ

ಕೊಠಡಿಗೆ ಕರೆದೊಯ್ದರು. ಅವರ ಕೇಸನ್ನು ಸಹ ನಾಲ್ಕು ದಿನ ಮುಂದೆ ಹಾಕಲಾಗಿತ್ತು.

ನಾನು ಕಟಕಟೆಗೆ ನಿಲ್ಲುವುದಿಲ್ಲ ಎಂದು ಹೇಳಿದ ವಿಚಾರವಾಗಲೇ ಕೋರ್ಟಿನಲ್ಲಿದ್ದ ಲಾಯರುಗಳಿಗೆಲ್ಲಾ ಗೊತ್ತಾಗಿದ್ದು ಅವರವರಲ್ಲೇ ಚರ್ಚೆ ಪ್ರಾರಂಭವಾಗಿತ್ತು. ಈ ಒಂದು ಪ್ರಕರಣದಲ್ಲಿ ಹುಡುಗ ಹಠ ಮಾಡಿದರೆ ನ್ಯಾಯಾಧೀಶರು ಏನು ಕ್ರಮ ಕೈಗೊಳ್ಳುವರು ಮುಂತಾಗಿ ಮಾತನಾಡಿಕೊಳ್ಳುತ್ತಿದ್ದರು. ಯಾವುದೋ ಊರಿನ ಹುಡುಗ ಏನೋ ಒದರಿದ ಹಿಡಿದು ತಂದಿದ್ದಾರೆಂಬ ಉದಾಸೀನ ಭಾವದ ವಕೀಲರು ಸಹ ಕಾಂಗ್ರೆಸ್‌ಗುಂಪಿನವರೊಡನಿದ್ದರು. ಕಟಕಟೆ ಪ್ರಕರಣಾನಂತರ ನನ್ನನ್ನು ಅವರೆಲ್ಲರು ತೀವ್ರವಾಗಿ ಗಮನಿಸಿದರು. ನಮ್ಮ ಊರು ಕೇರಿ ವಿದ್ಯಾಭ್ಯಾಸ ಎಲ್ಲ ವಿವರವನ್ನು ನನ್ನೆದುರಿನಲ್ಲೇ ರಾಮಚಂದ್ರರಾಯರಿಂದ ಕೇಳಿ ತಿಳಿದುಕೊಂಡ ವಕೀಲರು ಈ ಕಾಲದಲ್ಲಿ ಏನು ಹೇಳಲೂ ಸಾಧ್ಯವಿಲ್ಲ ಸ್ವಾಮಿ "ಯಾವ ಹುತ್ತದಲ್ಲಿ ಯಾವ ಹಾವಿರುತ್ತೋ" ಎಂದುಕೊಂಡರು.

ನನ್ನ ನಡವಳಿಕೆ ಕೋರ್ಟಿನಲ್ಲಾದ ಕೋಲಾಹಲ ಎಲ್ಲವನ್ನು ತಿಳಿದ ತಗಡೂರು ರಾಮಚಂದ್ರರಾಯರಿಗೆ ಮಿತಿ ಮೀರಿದ ಸಂತೋಷ, ಪ್ರತಿಯೊಬ್ಬನು ಒಂದಲ್ಲ ಒಂದು ರೀತಿಯಲ್ಲಿ ಚೊಳ್ಳೆಹಣ್ಣನ್ನು ಈ ಅಧಿಕಾರಿ ವರ್ಗಕ್ಕೆ ತಿನ್ನಿಸಿದರೇ ಬುದ್ಧಿ ಬರುವುದು. ಬಾಕಿಯುವರು ಕೋರ್ಟಿನ ಕೇಸಿಗೆ ಹೋಗುವಾಗ ಇಂತಹವೇ ನಾನಾ ತೊಡಕುಗಳನ್ನು ಗಂಟು ಹಾಕಲು ಹೇಳಿಕೊಡಬೇಕಯ್ಯ ಎಂದರು. ರಾಯರು ಹೇಳುವಂತೆ ತೊಡರು ಹಾಕಿಸಲು ದಸ್ತಗಿರಿಯಾಗುವ ಸತ್ಯಾಗ್ರಹಿಗಳನ್ನು ನೇರವಾಗಿ ಕೊರ್ಟಿಗೆ ಕರೆದುಕೊಂಡು ಹೋಗುತ್ತಿದ್ದರು. ಅಂದೇ ಅವರಿಗೆ ಶಿಕ್ಷೆ ನೀಡಿ ಜೈಲಿಗೆ ಕರೆತರುತ್ತಿದ್ದರು. ಈ ಪರಿಣಾಮವಾಗಿ ಕೋರ್ಟಿಗೆ ಹೋಗುವ ಮುನ್ನ ಸತ್ಯಾಗ್ರಹಿಗಳನ್ನು ಸಂಧಿಸುವ ಅವಕಾಶ ದೊರೆಯಲೇ ಇಲ್ಲ,

ನನ್ನ ಕಟಕಟೆ ಸವಾಲಿನ ಹಿಂದೆ ಜೋಯಿಸರೋ ತಗಡೂರು ರಾಮಚಂದ್ರ ರಾಯರೋ ಇದ್ದಾರೆಂದು ಕೋರ್ಟಿನಅಧಿಕಾರಿಗಳು ಮಾತನಾಡಿಕೊಂಡರೆಂದು ಪೋಲಿಸಿನ ಅಧಿಕಾರಿಗಳು ನಮಗೆ ತಿಳಿಸಿದರು. ತಗಡೂರರ ಕೇಸು ವಿಚಾರಣೆಗೆ ಕೋರ್ಟಿಗೆ ಕರೆದೊಯ್ದರು. ಸಾಕ್ಷಿ ಪುರಾವೆಗಳು ಮುಗಿದಿದ್ದುವು. ತಗಡೂರು ರಾಮಚಂದ್ರ ರಾಯರನ್ನು ನನ್ನ ಕೇಸಿನ ಹಿಯರಿಂಗ್ ಬರುವಷ್ಟರಲ್ಲಿ ಬೇರೆ ಜೈಲಿಗೆ ವರ್ಗಾಯಿಸುವ ಆಲೋಚನೆಯಿತ್ತೋ ಏನೋ ? ನ್ಯಾಯಾಧೀಶರು ಅಂದಿನ ಹಿಯರಿಂಗ್‌ನಲ್ಲಿ ಒಂದು ವರ್ಷ ಸಾದಾ ಸಜ ವಿಧಿಸಿದ್ದರು. ರಾಯರು ಜೈಲಿಗೆ ಬಂದು ವಿಚಾರ ತಿಳಿಸಿದರು. 5 ಘಂಟೆಗೆ ಊಟ ಮುಗಿಯಿತು. ತಗಡೂರು ರಾಮಚಂದ್ರರಾಯರು ನನ್ನ ಕಟಕಟೆ ವಿಚಾರ ಪ್ರಸ್ತಾಪ ಮಾಡುತ್ತ ನಿನಗೆ ಬರುವ ಹಿಯರಿಂಗ್ ದಿನ ಕೋರ್ಟ್ ನಿಂದನೆ ಆಪಾದನೆ ಮೇಲೆ ಮತ್ತೊಂದು ಕೇಸನ್ನು ದಾಖಲು ಮಾಡಬಹುದೆಂದು ಲಾಯರುಗಳು ಅಭಿಪ್ರಾಯಪಟ್ಟಿದ್ದಾರೆ. ಆದರೇನು? ಭಯಪಡಬೇಡ ಮುಂತಾಗಿ ಸಲಹೆ ಕೊಟ್ಟರು.

ಅಯ್ಯೋ ಬಿಡಿ ಸಾರ್ ದಂಡಿಗೆ ಹೆದರಲಿಲ್ಲ ಧಾಳಿಗೆ ಹೆದರಲಿಲ್ಲ, ದಾಸಯ್ಯನ ಕುಣಮಿಣೆಗೆ ಹೆದರೇನೆ ? ಎಂದು ಸಮಾಧಾನ ಹೇಳಿದೆ. ರಾತ್ರಿ 9 ಘಂಟೆಗೆ ಹೊರಡಿಸಿ ತಗಡೂರು ರಾಮಚಂದ್ರರಾಯರನ್ನು 10 ಘಂಟೆ ರೈಲಿಗೆ ಬೆಂಗಳೂರಿನ ಕೇಂದ್ರ ಸೆರೆ ಮನೆಗೆ ಕರೆದೊಯ್ದರು. ಅವರು ನಮ್ಮಲ್ಲಿದ್ದುದು ಒಂದು ರೀತಿಯ ಧೈರ್ಯತಂದಿರು ತಿತ್ತು. ಅವರು ಹೊರಡುವಾಗ ಈಗಾಗಲೆ 100 ಜನರ ಮೇಲಾಗಿದ್ದೀರಿ. ನಿಮ್ಮನ್ನು ಬೆಂಗಳೂರಿಗೆ ಸಾಗಿಸಬಹುದು ಮುಂತಾಗಿ ತಿಳಿಸಿ ಜಟಕಾದಲ್ಲಿ ಕುಳಿತು ಪ್ರಯಾಣ ಮಾಡಿದರು. ಜಲಗಾರ ನಾಟಕ ಕಳುಹಿಸಲು ಮರೆಯಬೇಡ ಎಂದರು.

ಇದಾದ ಪ್ರಾತಃಕಾಲ ನನ್ನನ್ನು ಕೋರ್ಟಿಗೆ ಕರೆದುಕೊಂಡು ಹೋಗಲು ಇನ್‌ಸ್ಪೆಕ್ಟರ್ ಕೃಷ್ಣಮೂರ್ತಿಯವರು ಪೇದೆಗಳ ಜೊತೆ ಬಂದಿದ್ದರು. 9½ ಘಂಟೆಗೆ ಹೊರಟಿದ್ದು ಜಟಕಾದಲ್ಲಿ ಇನ್‌ಸ್ಪೆಕ್ಟರು ದಾರಿಯಲ್ಲಿ ನೀವು ಹಳ್ಳಿಮಕ್ಕಳು, ಈ ನಗರದ ಜನ ಎಂದರೆ ದೇವರು ಎಂದು ಭಾವಿಸುವ ದಡ್ಡರು. ನಿಮ್ಮ ಕೆಲವು ಹಳ್ಳಿ ಹುಡುಗ ರನ್ನು ಬಿಟ್ಟರೆ ಯಾವನೇ ಕಾಂಗ್ರೆಸ್‌ಲಾಯರು ನಿಮ್ಮ ಜೊತೆ ಜೈಲಿಗೆ ಬಂದಿಲ್ಲ. ಬ್ರಾಹ್ಮಣ ಜನ ತುಂಬ ವಂಚಕರು. ಬ್ರಾಹ್ಮಣನಾದ ನಾನು ಹೇಳುವ ಮಾತಿನಲ್ಲಿ ನಂಬಿಕೆಯಿಡು. ಸುಮ್ಮನೇ ರಾಮಚಂದ್ರರಾಯರ ಮಾತಿಗೆ ಮರುಳಾಗಿ ಕೋರ್ಟಿನಲ್ಲಿ ಒರಟಾಗಿ ನಡೆದುಕೊಂಡು ಜಡ್ಜರ ಮನಸ್ಸಿಗೆ ಬೇಜಾರು ಮಾಡದಿರು, ನಿನಗೆ ಕಟಕಟೆಗೆ ನಿಲ್ಲಬೇಡ ಎಂದು ಹೇಳಿದ ತಗಡೂರು ರಾಮಚಂದ್ರರಾಯರು ಕಟಕಟೆಯಲ್ಲಿ ಕೈ ಕಟ್ಟಿನಿಂತು ಜಡ್ಜರಿಗೆ ಮರ್ಯಾದೆ ಕೊಟ್ಟು ಕೇವಲ ಒಂದು ವರ್ಷ ಶಿಕ್ಷೆ ಪಡೆದರು. ನಿನ್ನ ಹಾಗೆ ಆಗಿದ್ದರೆ ಅವರಿಗೆ ನಾಲ್ಕೈದು ವರ್ಷ ಸಜಾದ ಬರೆ ಎಳೆದು ಕಳುಹಿಸು ತ್ತಿದ್ದರು. ಸದ್ಯ ನಿನಗೆ ಅವರ ಕಾಟ ಇಲ್ಲದಂತೆ ಬೆಂಗಳೂರಿಗೆ ರಾತ್ರಿ ಸಾಗ ಹಾಕಲಾಯ್ತು.

"ಇಂದಾದರೂ ನೀವು ಕೋರ್ಟಿನಲ್ಲಿ ಮರ್ಯಾದೆಯಾಗಿ ನಡೆದುಕೊಳ್ಳಿ" ಎಂದು ಹೇಳಿದರು. ಪಾಪ ತಗಡೂರರು ಏನು ಮಾಡಿದರು ಎಂದು ದೂರುತ್ತಿದ್ದೀರಿ ಅದು ಸರಿಯಲ್ಲ. ಕೋರ್ಟಿನ ಮರ್ಯಾದೆಯಷ್ಟೆ ನನ್ನ ಮರ್ಯಾದೆಯು ಮುಖ್ಯವಲ್ಲವೆ ! ಸ್ವಾಮಿ, ನಾನು ಕುಳಿತುಕೊಳ್ಳುವುದರಿಂದ ಜಡ್ಜರಿಗೆ ಮರ್ಯಾದೆ ಹೋಗುವುದೇನು ಅದೆಲ್ಲ ಆಗದು ನಾನು ಮಾತ್ರ ಕಟಕಟೆಯಲ್ಲಿ ನಿಲ್ಲಲಾರೆ" ಎಂದೆ. ಕೋರ್ಟಿಗೆ ಹೋಗು ತ್ತಿದ್ದಂತೆಯೆ ನನ್ನನ್ನು ಕೂಗಿಸಿದರು. ಹೋದವನೆ ಜಡ್ಜರಿಗೆ ಮತ್ತಿತರರಿಗೆ ಕೈಮುಗಿದೆ. ಎಂದಿನಂತೆ ಲಾಯರುಗಳ ಖಾಲಿಯಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೋದೆ. ಇನ್‌ಸ್ಪೆಕ್ಟರು ಸೇರಿದಂತೆ ಪೇದೆಗಳು ನನ್ನನ್ನು ರಟ್ಟೆ ಹಿಡಿದು ಅನಾಮತ್ ಎತ್ತಿ ಹಿಡಿದರು. ನಾನು ಸಹ ಭುಜಕ್ಕೆ ನೇತು ಹಾಕಿಕೊಂಡೆ. ಮಧ್ಯ ಪ್ರವೇಶ ಮಾಡಿದ ಜಡ್ಜರು ನೀವು ನಿಲ್ಲಲಾಗದಿದ್ದರೆ ನನ್ನ ಆರೋಗ್ಯ ಚೆನ್ನಾಗಿಲ್ಲ ಕುಳಿತುಕೊಳ್ಳಲು ಅವಕಾಶಕೊಡಿ ಎಂದು ನನಗೆ ಲಿಖಿತಮನವಿ ಕೊಡಿ ಪರಿಶೀಲಿಸಿ ತೀರ್ಪನ್ನು ನೀಡ

ಲಾಗುವುದು ಎಂದರು. ಇಲ್ಲ ಸ್ವಾಮಿ ನಾನು ಹೇಳುವುದು ಹೇಳಿರುವುದು ನನ್ನ ಮರ್ಯಾದೆ ಸವಾಲಾಗಿದೆ ಅಷ್ಟೇ ಅಲ್ಲ ನ್ಯಾಯ ಧರ್ಮಸಮ್ಮತವೂ ಅಹುದು ಎಂದೆ.

ಪಬ್ಲಿಕ್ ಪ್ರಾಸಿಕ್ಯೂಟರ್ ಅವರು ಎದ್ದು ಇಂತಹುದೆ ಒಂದು ಪ್ರಕರಣದಲ್ಲಿ ಕಲ್ಕತ್ತ ಹೈಕೋರ್ಟು ತೀರ್ಪು ನೀಡಿ ಆಪಾದನೆ ಎದುರಿಸುವ ವ್ಯಕ್ತಿ ಆತನ ವಿಚಾರಣೆ ಮುಗಿವ ತನಕ ನ್ಯಾಯಾಸ್ಥಾನ ಕೇಳುವ ಪ್ರಶ್ನೆಗಳಿಗೆ ಉತ್ತರಿಸಬೇಕೆಂದರು. ''ಸ್ವಾಮಿ ಪಬ್ಲಿಕ್ ಪ್ರಾಸಿಕ್ಯೂಟರೇ ಕಲ್ಕತ್ತ ಎಲ್ಲಿ ನಾವೆಲ್ಲಿ. ಕಲ್ಕತ್ತ ಇಂಗ್ಲೀಷರು ಆಳುವ ಪ್ರಾಂತ. ನಾವಿರುವುದು "ನಾ ವಿಷ್ಣುಃ ಪೃಥವೀ ಪತಿಃ'' ಎನ್ನುವ ಧರ್ಮಿಷ್ಠರಾದ ''ರಾಜಾ ಪ್ರತ್ಯಕ್ಷ ದೇವತಾಃ'' ಎನ್ನುವ ಯದುವಂಶ ಧರ್ಮರಕ್ಷಕರಾದ ರಾಜರ ಆಶ್ರಯದಾತರಾದ ನೀವು ನಾವೆಲ್ಲ ಧರ್ಮಕ್ಕೆ ಮೊರೆಹೋಗಿ ಧರ್ಮರಕ್ಷಕರಾಗೋಣ. ''ಯಥಾ ರಾಜ ತಥಾಪ್ರಜಾ'' ಎನ್ನುವಂತೆ ನಾವು ಧರ್ಮಭಕ್ಷಕರಾಗಿ ರಾಜವಂಶಕ್ಕೆ ಅಪಕೀರ್ತಿ ಅಪಯಶಸ್ಸು ತರಬಾರದು ಎಂದು ತಿಳಿಸಿ. ನಮ್ಮ ದೇಶದ ಹಳ್ಳಿಯವರು ಮಾಡುವ ಧರ್ಮ ನೀತಿ ನೋಡಲು ಕಲ್ಕತ್ತಾ ವಿಚಾರ ಪ್ರಸ್ತಾಪಿಸಿದಿರಿ. ಇಲ್ಲೇ ತಮ್ಮ ಕೋರ್ಟಿನ ಕಾಂಪೌಂಡು ಪಕ್ಕದಲ್ಲಿರುವ ಕನ್ನೇಗೌಡನ ಕೊಪ್ಪಲಿಗೆ ಸಂಜೆ ಗೌಡರ ಚಾವಡಿಗೆ ಹೋಗಿ. ಅಲ್ಲಿ ನೋಡಿ ದೂರು ಕೊಟ್ಟವನು ದೂರು ಎದುರಿಸುವವ ರಿಬ್ಬರೂ ಸಮಾಸಸ್ಕರಾಗಿ ಪಂಚಾಯ್ತಿಚಾವಡಿಯಲ್ಲಿ ಪಂಚಾಯ್ತಿರ ವಿಚಾರಣೆ ಯಲ್ಲಿ ಭಾಗವಹಿಸುವರು. ಪಂಚಾಯ್ತಿ ಎದುರಿನಲ್ಲಿ ಎದ್ದು ನಿಂತವನೇ ಇರುವುದಿಲ್ಲ. ದಯಮಾಡಿ ಇದಿಷ್ಟು ತಿಳಿದು ಜಡ್ಜರಿಗೆ ವರದಿಮಾಡಿ ನನ್ನ ಮನವಿಗೆ ಮನ್ನಣೆನೀಡುವ ಸಲಹೆ ಮಾಡಿ.

ನೋಡಿ ಇಂಗ್ಲೀಷರ ನ್ಯಾಯಪೀಠಗಳು ಮಾಡುವ ನ್ಯಾಯಾಲಯಗಳು ಈ ನ್ಯಾಯ ಪೀಠವನ್ನು ಮತ್ತು ನ್ಯಾಯಾಧೀಶರನ್ನು ಕಿದಂತೆ ದೇಶದ ಎಲ್ಲಾ ನ್ಯಾಯಾಲಯ ಗಳು ಹಳ್ಳಿಯವರು ಹೇಳುವ ''ಖಾಜಿನ್ಯಾಯ'' ದಂತಿವೆ. ನಾಲ್ಕೇಸಾಲಿನಲ್ಲಿ ಖಾಜಿ ನ್ಯಾಯ ಕಥೆ ಹೇಳುತ್ತೇನೆ ಕೇಳಿರಿ. ಎಂದು ನಾನು ಹಿಂದೆ ಹೇಳಿದ ಖಾಜಿ ನ್ಯಾಯದ ಕಥೆಯನ್ನು ದಾಸಪ್ಪನವರಾದಿಯಾಗಿ ಬಹು ಮಂದಿ ವಕೀಲರು ಕೇಳಿ ಹರ್ಷಿತ ರಾದರು. ಕೋರ್ಟಿನಲ್ಲಿ ನಗುವಿನ ಗುಲ್ಲೋ ಗುಲ್ಲು ! ಏನಯ್ಯ ಹಳ್ಳಿಯ ಹೈದ ಅಂತ ತಿಳಿದ ಅಧಿಕಾರಿಗಳಿಗೆ ಉತ್ತಮವಾದ ಕಥೆ ಮೂಲಕ ಅವರ ಕತ್ತನ್ನೇ ಖಡ್ಗವಿಲ್ಲದೆ ಕೊಯ್ದುಬಿಟ್ಟೆ, ಎಂದು ದಾಸಪ್ಪನವರು ನನ್ನ ಬೆನ್ನು ಚಪ್ಪರಿಸಿ, ತಲೆಯಲ್ಲಿ ಇನ್ನೆಷ್ಟು ಕಥೆಗಳಿವೆ ಅವನ್ನೆಲ್ಲಾ ಈ ಕೋರ್ಟಿನಲ್ಲಿ ವಿಚಾರಣೆ ಮುಗಿಯುವುದರೊಳಗೆ ಹೇಳಿಬಿಡು ಎಂದರು.

ನಾಲ್ಕನೇ ದಿನಕ್ಕೆ ಕೋರ್ಟಿಗೆ ಹೋದೆ. ಕಟಕಟೆ ಪಕ್ಕದಲ್ಲಿ ಕುರ್ಚಿಯೊಂದನ್ನು ಹಾಕಲಾಗಿತ್ತು, ನಾನು ಹೋದ ಕೂಡಲೇ ಜಡ್ಜರು ಮುಸಿನಗೆಯಾಡುತ್ತ ''ನೋಡಿ ಗೌಡರೇ ನಿಮ್ಮ ಆಸನ ಸಿದ್ಧವಾಗಿದೆ. ಪಾಪ ನಿಮ್ಮ ಆರೋಗ್ಯ ನೆಟ್ಟಗಿಲ್ಲವೆಂದೂ

ವಿಚಾರಣೆಯನ್ನು ನಿಂತೇ ಎದುರಿಸಲಾರರೆಂದೂ "ಜೈಲಿನಿಂದ ಡಾಕ್ಟರ್ ವರದಿ ಮಾಡಿದ್ದಾರಾಗಿ ಕುಳಿತುಕೊಂಡು ಕೇಳಿದ ಪ್ರಶ್ನೆಗಳಿಗೆ ದಯಮಾಡಿ ಉತ್ತರಿಸಿ ಎಂದರು. ಏನೋ ಒಂದು ದೊಡ್ಡಪವಾಡವನ್ನು ಕಟಿ ಕಟಿ ಪ್ರಶ್ನೆ ನಿರ್ಮಿಸಲಿದೆ ಎಂದು ತಿಳಿದಿದ್ದ ನನಗೆ ತಲೆ ಮೇಲೆ ಹೊಡೆದಂತಾಯ್ತು. ಆದರೂ ಸವಾಲಿನಲ್ಲಿ ಗೆದ್ದೆನಲ್ಲ ಎಂಬ ಅಭಿಮಾನದಿಂದ ಹಿಗ್ಗಿದೆ,

ಪಬ್ಲಿಕ್ ಪ್ರಾಸಿಕ್ಯೂಟರ್ ನನ್ನ ಹೆಸರು, ತಂದೆ ಹೆಸರು, ಊರು ಕೇರಿಗಳ ಪ್ರಶ್ನೆಕೇಳಿ ಉತ್ತರ ಪಡೆದರು. ಅದಾದನಂತರ ಪಬ್ಲಿಕ್ ಪ್ರಾಸಿಕ್ಯೂಟರ್ ಅವರು ನನ್ನ ಮೇಲಿನ ಚಾರ್ಜುಷೀಟನ್ನು ಸಂಕ್ಷಿಪ್ತವಾಗಿ ಓದಿ ಹೇಳಿದರು.

" ನಮ್ಮ ಶ್ರೀಮನ್ ಮಹಾರಾಜರು ಹೊಸದಾಗಿ ಬಂದ ವೈಸ್‌ರಾಯರಿಗೆ ಬಂಡೀಪುರದ ಅರಣ್ಯ ಅತಿಥಿ ಗೃಹದಲ್ಲಿ ಹುಲುಸಾಗಿ ಬೆಳೆದ ಗೂಳಿಯ ನಾಲಗೆ ಮತ್ತು ಮಾಂಸದಿಂದ ವಿವಿಧ ರೀತಿಯ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ಭೋಜನಕೂಟ ಏರ್ಪಡಿಸಿ ಗೋಹತ್ಯೆ ನಡೆಸಿದ್ದಾರೆ. ನಮ್ಮ ಶ್ರೀಮನ್ ಮಹಾರಾಜರ ವಂಶದವರು ಯದುವಂಶದ ಅರಸರು. ಯದುವಂಶದವರು ಗೋಸಂರಕ್ಷಣೆಯಲ್ಲಿ ಗೋಸಂಪತ್ತು ಅಭಿವೃದ್ಧಿಯಲ್ಲಿ ಹೆಸರಾಂತ ಮನೆತನದವರು. ಗೋಹತ್ಯದಂತಹ ಅವಹೇಳನಕಾರಿ ಹತ್ಯಾಕಾಂಡ ನಡೆಸಿದ್ದಾರೆ. ಇವರನ್ನು ಕರ್ನಾಟಕ ಸಿಂಹಾಸನದಿಂದ ಪದಚ್ಯುತರನ್ನಾಗಿ ಮಾಡಲು ಜನತೆ ಒಂದುಗೂಡಬೇಕು. ಒಂದಾಗಿ ಹೋರಾಡಬೇಕು. ಯದುವಂಶದ ಅರಸಲ್ಲದವರು ಗೋಹತ್ಯ ಮಾಡಿದ್ದರೆ, ಕ್ಷಮ್ಯವಹುದು ಮುಂತಾಗಿ ನೇರವಾಗಿ ಶ್ರೀಮನ್ ಮಹಾರಾಜರನ್ನೇ ಅವಹೇಳನ ಮಾಡಿ ಕುತ್ಸಿತವಾಗಿ ಮಾತನಾಡಿ ರಾಜ ದ್ರೋಹದ 124ಎ ತಕ್ಸೀರ್ ಪ್ರಕಾರ ದಂಡನೆಗೆ ಗುರಿ ಮಾಡಲಾಗಿದೆ ಎಂದು ತಿಳಿಸಿದರು.

ಇದರ ಮೇಲೆ ನೀವು ಹೇಳುವುದೇನಾದರು ಇದೆಯೆ ? ಎಂದರು. ಇದೆ ಸ್ವಾಮಿ ನನ್ನ ಭಾಷಣದ ವರದಿಯಲ್ಲಿ ನಾನು ತಿಳಿಸಿರುವ ವಿಚಾರಗಳನ್ನು ಪೂರ್ಣವಾಗಿ ವರದಿ ಮಾಡಿಲ್ಲ. ವರದಿಗಾರನ ಸಾಕ್ಷ್ಯದ ಬಗ್ಗೆ ವಿಚಾರಣೆ ಆಗಬೇಕು ಮುಂತಾಗಿ ತಿಳಿಸಿದೆ. ಕೇಸನ್ನು ಮುಂದಿನ ವಾರಕ್ಕೆ ಹಾಕಲಾಯ್ತು, ಕೋರ್ಟಿನಿಂದ ಹೋದ ಮೇಲೆ ಜೋಯಿಸರಿಗೆ ನಡೆದ ವಿದ್ಯಮಾನಗಳನ್ನು ವರದಿ ಮಾಡಿದೆ. ಕೇಳಿ ಖುಷಿಯಾದರು. ಬಹುಶಃ ಜಡ್ಜರು ನಿನ್ನ ಬಗ್ಗೆ ಅಸಮಧಾನಗೊಂಡಿರಬೇಕಲ್ಲವೆ? ಎಂದರು. ಸರ್ಕಾರವೇ ಎದುರಾಗಿರುವಾಗ ಒಬ್ಬ ನ್ಯಾಯಾಧೀಶರದೇನು ಬಿಡಿ ಸರ್ ಎಂದೆ.

ಬರುವ ವಾರ ಕೋರ್ಟಿಗೆ ಕರೆದುಕೊಂಡು ಹೋದರು. 1ನೇ ಸಾಕ್ಷಿಯಾಗಿ ಸುಂದರೇಶನ್ ಎನ್ನುವ ಶೀಘ್ರಲಿಪಿಕಾರರನ್ನು ಕೂಗಿಸಿದರು. ಬಂದಾತನನ್ನು ಜವ ರಪ್ಪಗೌಡರನ್ನು ಗುರ್ತಿಸುವಂತೆ ಕೇಳಿದರು. ನನ್ನನ್ನು ಗುರ್ತಿಸಿ ತೋರಿಸಿದರು. ನಾನು ಶೀಘ್ರಲಿಪಿಕಾರನೆಂದೂ, ಜವರಪ್ಪಗೌಡರು ಮಾಡಿದ ಭಾಷಣದ ಪ್ರತಿ ಇದೆಂದು

ಮೇಲೆ ಪೋಲೀಸರು ಹೊರಿಸಿರುವ ಆಪಾದನೆಗೆ ಪೂರಕವಾಗಿ ಸಾಕ್ಷ್ಯ ನುಡಿದು ಕುವೆಂಪು ಇನ್ನಿತರ ಕವಿಗಳ ಕವನಗಳಿಂದ ಶ್ರೀಮನ್ ಮಹಾರಾಜರನ್ನು ದೂಷಣೆ ಮಾಡಿದರು. ಇವರ ಭಾಷಣದಿಂದ ಉದ್ರಿಕ್ತರಾದ ಜನ ಕೇಳಿ ! ಕೇಳಿ ! ಎಂದು ಹರ್ಷೋದ್ಗಾರ ಮಾಡಿ ಇವರ ಭಾಷಣವನ್ನು ಸ್ವಾಗತಿಸಿದರು ಎಂದರು.

ನಾನು ಅವರಿಗೆ ಪಾಟೀ ಸವಾಲು ಮಾಡಿ, ನಾನು ಹೇಳಿದ ಎಲ್ಲ ಅಂಶಗಳನ್ನು ನಿಮ್ಮ ಇಲಾಖೆಗೆ ವರದಿ ಮಾಡಿದ್ದೀರ? ಎಂದು ಕೇಳಿದೆ. ಅಹುದು ಅಕ್ಷರವೂ ಬಿಡದಂತೆ ವರದಿ ಮಾಡಲಾಗಿದೆ ಎಂದರು. ಸರಿ ಹಾಗಾದರೆ ಕವಿ ರಾಜರತ್ನಂ ಅವರ ಗಂಡು ಗೊಡಲಿಯಿಂದ ಕೆಲವು ಸಾಲುಗಳನ್ನು ಹೇಳುತ್ತೇನೆ. ಅವನ್ನು ಶೀಘ್ರಲಿಪಿಯಲ್ಲಿ ತೆಗೆದುಕೊಂಡು ನ್ಯಾಯಾಧೀಶರಿಗೆ ಒಪ್ಪಿಸಿ ಎಂದೆ. ನ್ಯಾಯಾಧೀಶರು ನಿಮ್ಮ ಕವನ ಏನು ಹೇಳಿ ಶೀಘ್ರಲಿಪಿಯಲ್ಲಿ ವರದಿ ಮಾಡುವರೆಂದು ತಿಳಿಸಿದ ಮೇಲೆ ಗಂಡು ಗೊಡಲಿಯ ಕೆಳಗಿನ ಸಾಲುಗಳನ್ನು ಬಿತ್ತರಿಸಿದೆ.

ಕೊಡಲಿ ಮಸೆ, ಮೂರು ತೊಟ್ಟು ನೀರು ಬಿಟ್ಟು ಮಸೆ ಗೌಡ ಒಡೆಯರೆಂದು ತಿಳಿದು ಮಸೆ ಕೊಡಲಿ ಮಸೆ ಎಂದು ಪರಶುರಾಮನು ತನ್ನ ಗಂಡುಕೊಡಲಿಯನ್ನು ಮಸೆಯುತ್ತಿದ್ದಾನೆ, ನೋಡಿದ ತಂದೆ.

ಗಂಡುಗೊಡಲಿಯು ಗಂಡ ಸರಿಯಹುದೊ ನಿನ್ನ ಕೊಡಲಿ ಅಲಗು. ತಂದೆಯನ್ನು ಕುರಿತು ಹಲ್ಲುಮಸೆಯುತ್ತ ಪರಶುರಾಮನು

ರಾಜನದು ರಾಜ್ಯವಲ್ಲ
ರಾಜ್ಯ ದೇವನದು, ದೇವನೆದುರಿನಲ್ಲಿ
ರಾಜಗೀಜರು ಒಂದೇ
ನಮ್ಮಂತೆ ಇವನೊಬ್ಬ
ರಾಜನೆಂಬ್ಹೆಸರೊಂದು, ತಗಲಿ ಕೊಂಡಾಕ್ಷಣಕೆ
ಸ್ವೈರ ವೃತ್ತಿಯನ್ನೆತ್ತಿ ಕುಣಿಯಲೆಂದಿದೆಯೋ
ನೇಗಿಲೆಳೆಯುವ ಹೋರಿ ಸಾಧುಗಳ ಸಾಧುವದು
ಕರುಳು ಕೆಚ್ಚಲು ಕೊಂಬುಗಳ ಮಸೆಯುತ್ತಾ
ಕಾಲನ್ನು ಕೆರೆಯುತ್ತ, ಯಜಮಾನನನು
ಲೆಕ್ಕಿಸದೆ ತಿವಿಮತೆ. ತಾನು ಸಹ ಜಾರುವನು ಪುಡಿಗೆ

ಇದಿಷ್ಟು ಸಾಕು ಶೀಘ್ರಲಿಪಿಯಿಂದ ವರದಿಯನ್ನು ಕೋರ್ಟಿಗೆ ಹಾಜರು ಮಾಡುವಂತೆ ಕೇಳಿದೆ. ಪೋಲೀಸ್ ಇನ್‌ಸ್ಪೆಕ್ಟರು ಮತ್ತು ಶೀಘ್ರಲಿಪಿಕಾರ ಜಡ್ಜರ ಹಿಂದಿನ ಕೊಠಡಿಗೆ ಹೋಗಿದ್ದರು. ಜಡ್ಜರು ಪೀಠದಿಂದ ಇಳಿದು ಹೋಗಿದ್ದು ಬಂದು ಪೀಠಸ್ಥ ರಾದರು. ಶೀಘ್ರಲಿಪಿಕಾರ ವರದಿಯನ್ನು ಮಧ್ಯಾಹ್ನದ ನಂತರ ನೀಡುವುದಾಗಿ ತಿಳಿಸಿ ದರು. ನಾನು ಆಕ್ಷೇಪಣೆ ಮಾಡಿ ರಾಜರತ್ನಂ ಅವರ ಕೃತಿ ನೋಡಿ ವರದಿ ಸಿದ್ಧ

ಪಡಿಸಲು ಕಾಲಾವಕಾಶ ಕೇಳುವುದು ಸಾಧ್ಯವಿಲ್ಲ. ಸಿದ್ಧಪಡಿಸಲು ಅವಶ್ಯವಾದರ ½ ಘಂಟೆ ಕಾಲಾವಕಾಶ ಕೊಡಿ ಎಂದೆ. ಜಡ್ಜರು ಆಗದು 10 ನಿಮಿಷದಲ್ಲಿ ಬರೆದು ತನ್ನಿ ಎಂದರು.

ಶೀಘ್ರಲಿಪಿಕಾರನು ಸ್ವಾಮಿ ಕವನವನ್ನು ಕನ್ನಡದಿಂದ ಇಂಗ್ಲಿಷಿಗೆ ತರ್ಜುಮೆ ಮಾಡಿ ಶೀಘ್ರಲಿಪಿಗೆ ತರುವುದು ಕಷ್ಟಸಾಧ್ಯವಾದುದರಿಂದ ವರದಿ ಸಿದ್ಧಗೊಳಿಸಲಾಗುವುದು ಕಷ್ಟ ಎಂದು ತಿಳಿಸಿದರು. ಹಾಗಾದರೆ ಪೋಲೀಸರಿಗೆ ತಾವು ಒದಗಿಸಿರುವ ನನ್ನ ಭಾಷಣವು ಸಹ ಸತ್ಯಾಂಶದಿಂದ ಕೂಡಿಲ್ಲ ? ಎಂದು ಪ್ರಶ್ನಿಸಿದೆ. ಇಲ್ಲ ಅದು ಸರಿ ಇದೆ ಎಂದರು.

ಸ್ವಾಮಿ, ನಾನು 20 ವಾಕ್ಯಗಳ ಭಾಷಣವನ್ನು ಮಾಡುತ್ತೇನೆ. ಈ ಶೀಘ್ರಲಿಪಿಕಾರರು ಸರಿಯಾಗಿ ವರದಿ ಮಾಡುವರೆ ಪರೀಕ್ಷಿಸಿ ಎಂದೆ. ಒಪ್ಪಿದ ನ್ಯಾಯಾಧೀಶರು ಶೀಘ್ರಲಿಪಿಕಾರನು ನನ್ನ ಭಾಷಣ ಶೀಘ್ರಲಿಪಿಗೆ ತೆಗೆದುಕೊಳ್ಳುವಂತೆ ತಿಳಿಸಿದರು.

ನ್ಯಾಯಾಧೀಶರೇ, ಸುಪ್ರಸಿದ್ಧ ವಕೀಲರುಗಳೇ ಮತ್ತು ನ್ಯಾಯಾಲಯದ ಆವರಣದಲ್ಲಿ ಸಮಾವೇಶಗೊಂಡಿರುವ ಮಹನೀಯರೇ,

ವ್ಯಾಪಾರ ದೃಷ್ಟಿಯಿಂದ ಇಂಡಿಯಕ್ಕೆ ಬಂದ ಇಂಗ್ಲೀಷರು ನಮ್ಮ ದೇಶವನ್ನೆ ತಮ್ಮ ದಾಸ್ಯಶೃಂಖಲೆಯಿಂದ ತಮ್ಮ ಕಬಂಧ ಬಾಹುಗಳಿಂದ ಬಂಧಿಸಿದ್ದಾರೆ. ನಮ್ಮ ನಾಡು ದಾಸ್ಯದಿಂದ ಬಿಡುಗಡೆ ಆಗಿ ಸ್ವಾತಂತ್ರ್ಯದ ಉಸಿರಾಡುವಂತಾಗಲು ಮಹಾತ್ಮ ಗಾಂಧಿ, ಮದನ ಮೋಹನ ಮಾಳವೀಯ, ಮೋತಿಲಾಲ್ ನೆಹರೂ ಮುಂತಾದ ಮಹಾನ್ ವ್ಯಕ್ತಿಗಳು ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ್ದಾರೆ ''ಹತೋವಾ ಪ್ರಾಪ್ಯಸಿ ಸ್ವರ್ಗಂ ನಿಶ್ಚಾಪ ಭೋಕ್ಷ್ಯಸೆ ಮಹೀಂ'' ಎಂಬ ಗೀತಾ ವಾಕ್ಯದಂತೆ ನಾವು ನೀವೆಲ್ಲ ಈ ಹೋರಾಟಕ್ಕೆ ಧುಮುಕಿ ರಣಧೀರರಾಗೋಣ. ರಘುಕುಲದ ಅರಸುಗಳಾದ ದಿಲೀಪ, ಮಾಂಧಾತ, ನಳ, ನಹುಷಾದಿಗಳು ತಮ್ಮ ತ್ಯಾಗದಿಂದ ಧರ್ಮವನ್ನು ರಕ್ಷಿಸಿ, ಧರ್ಮದಿಂದ ರಕ್ಷಣೆ ಹೊಂದಿದರು.

ಮೈಸೂರು ಅರಸು ಮನೆತನದ ಕೃತ್ಯದ ಬಗ್ಗೆ ತಮ್ಮ ಗಮನ ಸೆಳೆಯುಬಯಸುತ್ತೇನೆ. ದಿಲೀಪ ಚಕ್ರವರ್ತಿ ತನ್ನಲ್ಲಿದ್ದ ಕಾಮಧೇನುವನ್ನು ಸಿಂಹಕ್ಕೆ ಕೊಡಲೊಪ್ಪದೆ ತನ್ನ ರಾಜ್ಯವನ್ನೇ ಸಿಂಹಕ್ಕಿತ್ತು ಗೋಸಂರಕ್ಷಣೆ ಮಾಡಿರುವುದು ಕಟ್ಟು ಕಥೆಯಲ್ಲ. ದುರ್ದೃಷ್ಟವಶಾತ್ ಇಂಗ್ಲೀಷರ ದಾಸ್ಯಕ್ಕೆ ಒಳಗಾದ ನಮ್ಮ ಶ್ರೀಮನ್ ಮಹಾರಾಜರು ಹೊಸದಾಗಿ ಬಂದ ವೈಸ್ರಾಯರಿಗೆ ಗೋಮಾಂಸದ ಭಕ್ಷ್ಯ ಭೋಜ್ಯದ ಭೋಜನವಿತ್ತು ಹಿಂದೂ ಸನಾತನ ಧರ್ಮಕ್ಕೆ ತಿಲಾಂಜಲಿಯಿತ್ತಿದ್ದಾರೆ ಎಂದೆ. ಸ್ವಾಮಿ ನ್ಯಾಯಾಧೀಶರೆ ನನ್ನ ಆಕ್ಷೇಪಣೆಯಿದೆ ನೋಡಿ ನ್ಯಾಯಾಧೀಶರಾದ ತಮ್ಮ ಎದುರಿನಲ್ಲೇ ಎಂತಹ ಗುರುತರವಾದ ರಾಜದ್ರೋಹದ ಆಪಾದನೆ ಮಾಡುತ್ತಿದ್ದಾರೆ ಎಂದು ಪಬ್ಲಿಕ್ ಪ್ರಾಸಿಕ್ಯೂಟರ್ ಹೇಳಿದರು. ಜಡ್ಜರು ಈ ವಿಚಾರ ಬಿಟ್ಟು ಬೇರೆ ವಿಚಾರವನ್ನು

ನಾಲ್ಕು ಮಾತುಗಳಲ್ಲಿ ಮುಗಿಸಿ ಎಂದರು.

ಒಪ್ಪಿದ ನಾನು ಧರ್ಮಕ್ಕೆ ನಾವು ಅಧೀನರೋ ಅಥವ ಧರ್ಮ ನಮ್ಮ ಅಧೀನವೋ ಎಂಬುದು ಮುಖ್ಯವಾದ ವಿಚಾರ. ರಾಜರೇನು ? ಇದರಿಂದೇನು ಮುಕ್ತ ರಲ್ಲ. ನಮ್ಮಂತೆ ಅವರೂ ಧರ್ಮಕ್ಕೆ ಅಧೀನರು. ಧರ್ಮಚ್ಯುತಿ ನಡೆಸಿರುವ ನಮ್ಮ ಶ್ರೀಮನ್ ಮಹಾರಾಜರು ಸಿಂಹಾಸನವನ್ನು ತ್ಯಾಗ ಮಾಡಲಿ ಧರ್ಮರಕ್ಷಿಸಲಿ, ಧರ್ಮ ಅವರನ್ನು ರಕ್ಷಿಸುತ್ತದೆ ಎಂದೆ.

ಶೀಘ್ರಲಿಪಿಕಾರರು ಈ ಭಾಷಣವನ್ನು ಸಹ ಸರಿಯಾಗಿ ವರದಿ ಮಾಡಲಿಲ್ಲ ಎಂಬುದನ್ನು ನ್ಯಾಯಾಧೀಶರು ಒಪ್ಪಿದರು. ಪಬ್ಲಿಕ್ ಪ್ರಾಸಿಕ್ಯೂಟರ್ ಅವರು ಶೀಘ್ರ ಲಿಪಿಕಾರರನ್ನು ಬೆಂಬಲಿಸಿ ನ್ಯಾಯಾಧೀಶರಾದ ತಮ್ಮ ಎದುರೇ ಶ್ರೀಮನ್ ಮಹಾರಾಜ ರನ್ನು ಪದಚ್ಯುತಗೊಳಿಸಬೇಕೆಂದು ಹೇಳಿ ಸುಬ್ಬರಾಯನಕೆರೆ ಮೈದಾನದ ಭಾಷಣವನ್ನು ಪುಷ್ಟೀಕರಿಸಿದ್ದಾರೆಂದರು, ನಾನು ಮಧ್ಯದಲ್ಲಿ ಬಾಯಿ ಹಾಕಿ ಸ್ವಾಮಿ ನಿಮ್ಮ ಪಬ್ಲಿಕ್ ಪ್ರಾಸಿಕ್ಯೂಟರ್ ಸಾಹೇಬರು ಸಂಬಳಕ್ಕಾಗಿ ಆಡುವ ಮಾತು ತಾನೆ ಇವು. ಸಂಬಳ ಮರೆತು ಬಂದಿರಾದರೆ ತಾವು ಅಜ್ಞಾನಾದ ನನ್ನ ಮಾತುಗಳಿಗಿಂತ ತೀಕ್ಷ್ಣ ಮಾತುಗಳಿಂದ ರಾಜರನ್ನು ಟೀಕಿಸುತ್ತಿದ್ದಿರಿ ಎಂದು ಹೇಳುವ ನನ್ನ ಮಾತನ್ನು ಒಪ್ಪುವಿರಾ ? ಎಂದೆ ಇಲ್ಲ, ಇಲ್ಲ ಎಂದು ಹೇಳಿ ಕುಳಿತರು.

ಸರ್ಕಾರದ ವಿರುದ್ಧ ಸಾಕ್ಷ್ಯ ಹೇಳುವ ಯಾವ ಸಾಕ್ಷಿಯೂ ಇಲ್ಲ ಸ್ವಾಮಿ, ನಿಮ್ಮಲ್ಲಿ ಬೇರೆ ಸಾಕ್ಷಿಯಿದ್ದರೆ ತಿಳಿಸಿ ಕರೆಸಿ ಸಾಕ್ಷ್ಯ ಹೇಳಿಸಿ ಎಂದೆ. ಶೀಘ್ರಲಿಪಿಕಾರ ಹೇಳಿದಂತೆ ಇದೇ ಜವರಪ್ಪ ಗೌಡ ಭಾಷಣ ಮಾಡಿದವರು ಎಂದು ಗುರ್ತಿಸುವ ಸಾಕ್ಷ್ಯ ನೀಡಲು ನಾಳೆ ದಿನಕ್ಕೆ ಕೇಸ್ ಮುಂದೆ ಹಾಕಲು ಪ್ರಾಸಿಕ್ಯೂಟರ್ ಕೇಳಿದಂತೆ ನಾಳೆಗೆ ಹಿಯರಿಂಗ್ ಮುಂದೂಡಲಾಯ್ತು.

ಮಾರನೆಯ ದಿನ ಕೋರ್ಟಿಗೆ ಬಂದೆನು. ಯಥಾಸ್ಥಿತಿ ಆಗಲೆ ಅಲ್ಲಿಯ ಸಿಬ್ಬಂದಿ ಯೊಡನೆ ಸ್ನೇಹಪರತೆ ಉಂಟಾಗಿತ್ತು. ಕೂಗಿಸಿದರು. ಲಾಯರುಗಳ ಬಳಿ ಮಾತ ನಾಡುತ್ತಿದ್ದೆ. ಎದ್ದುಹೋಗಿ ಜಡ್ಜರಿಗೆ ನಮಸ್ಕರಿಸಿ ನನ್ನ ಜಾಗದ ಕುರ್ಚಿಯಲ್ಲಿ ಕುಳಿತೆ.

ರಂಗೇಗೌಡ, ಎಂದು ಮೂರು ಬಾರಿ ಕೂಗಿದರು. ಆತನು ಒಳಗೆ ಬಂದು ನೀದ ಸಾಕ್ಷಿ ಕಟ್ಟೆ ಹತ್ತಿದ. ಜವರಪ್ಪಗೌಡ ಯಾರು ಗುರ್ತಿಸಬಲ್ಲೆಯ ಎಂದು ಪಬ್ಲಿಕ್ ಪ್ರಾಸಿಕ್ಯೂಟರ್ ಆತನನ್ನು ಪ್ರಶ್ನಿಸಿದರು. ಅದೋ ಅವರೇ ಎಂದು ನನ್ನನ್ನು ಗುರ್ತಿಸಿದ ಸಾಕ್ಷಿ. ಸುಬ್ಬರಾಯನ ಕೆರೆ ಭಾಷಣ ಕೇಳಲು ಹೋಗಿದ್ದೆ ಏನಯ್ಯ ? ಎಂದು ಕೇಳಿದರು. ಅಹುದು ಸ್ವಾಮಿ ಎಂದ. ಶ್ರೀಮನ್ ಮಹಾರಾಜರು ಗೋಹತ್ಯ ಮಾಡಿಸವ್ರೆ ಅವರ್ನ ರಾಜ್ಯದಿಂದ ಓಡಿಸಿ ರಾಜ್ಯಚ್ಯುತರನ್ನಾಗಿ ಮಾಡಬೇಕು ಅಂತ ಹೇಳಿದರೆ ಇವರು. ಅಹುದು ಸ್ವಾಮಿ, ಆಗ ಜನ ಚಪ್ಪಾಳೆ ತಟ್ಟಿದರು ? ಅಹುದು ಸ್ವಾಮಿ. ಹೀಗೆ ಪ್ರಶ್ನೆಗಳ ರೂಪದಲ್ಲಿ ಸಿದ್ಧಮಾಡಿದ ಉತ್ತರಕ್ಕೆ ಅಹುದು ಸ್ವಾಮಿ

ರಂಗೇಗೌಡ ಹೇಳುತ್ತ ಬಂದ. ಪ್ರಾಸಿಕ್ಯೂಟರ್ ಕೇಳುವ ಪ್ರಶ್ನೆಗಳು ಶುದ್ಧ ಪ್ರೈಮರಿ ಶಾಲೆ ಮಕ್ಕಳು ನಗುವಂತಹವು ಎಂದು ಆಕ್ಷೇಪಣೆ ಎತ್ತಿದ ನಾನು ಜಡ್ಜರಿಗೆ ಪುಟ್ಟ ಕಥೆ ಹೇಳಿದೆ. ಪ್ರಾಸಿಕ್ಯೂಟರ್ ಆಕ್ಷೇಪಣೆ ವ್ಯಕ್ತಪಡಿಸಿದರು. ಅವಕ್ಕೆ ಜಡ್ಜರು ಅವರು ಹೇಳುವ ವಿಚಾರ ಆಕ್ಷೇಪಾರ್ಹ ಎಂದು ಮೊದಲೇ ಊಹಿಸುವುದು ತಪ್ಪು. ಅವರು ಹೇಳುವುದನ್ನು ಕೇಳಿ ಎಂದು ನ್ಯಾಯಾಧೀಶರು ಹೇಳಿ ನನ್ನನ್ನು ಅದೇನು ಹೇಳಿ ಎಂದರು.

ಒಂದು ಚಿಕ್ಕ ಊರು ಸ್ವಾಮಿ. ಅಲ್ಲಿ ಒಂದು ಸ್ಕೂಲು ಇತ್ತು. ಸ್ಕೂಲಿಗೆ ಒಬ್ಬರೇ ಮೇಷ್ಟರು. ಆತನು ಸ್ಕೂಲಿಗೆ ಸರಿಯಾಗಿ ಬರುತ್ತಿಲ್ಲ. ಬಂದರೂ ಸರಿಯಾಗಿ ಪಾಠ ಮಾಡುವುದಿಲ್ಲ ಮುಂತಾಗಿ ಮೇಲಧಿಕಾರಿಗಳಿಗೆ ದೂರಿದರು...ಮೇಷ್ಟರೊಡನೆ ಮೇಲಧಿಕಾರಿಗಳು ಊರಿಗೆ ತನಿಖೆಗೆ ಬಂದರು. ಊರಿನ ಗಣ್ಯರನ್ನು ಸ್ಕೂಲಿಗೆ ಕರೆಸಿದರು. ವಿಚಾರಣೆ ಪ್ರಾರಂಭಿಸಿ ಮೇಷ್ಟರಿಂದ ಹುಡುಗರಿಗೆ ಪ್ರಶ್ನೆ ಕೇಳಿಸಿದರು. ಹುಡುಗರು ಒಂದೂ ತಪ್ಪು ಇಲ್ಲದಂತೆ ಉತ್ತರಿಸಿದರು. ಆ ಪ್ರಶ್ನೆಗಳೇನು ? ಎಂಬುದನ್ನು ಲೋ ಕೆಂಪಯ್ಯ ಸೆಲ್ಲೋ ದಶರಥನ ಮಗನ ಹೆಸರು ರಾಮ ಅಲ್ಲವೇನೋ? ಅಹುದು ಸಾರ್, ಅವನ ತಮ್ಮ ಲಕ್ಷ್ಮಣನು ರಾಮನ ಜೊತೆ ಕಾಡಿಗೆ ಹೋಗಿದ್ದ ಅಲ್ಲವೇನೋ ? ಅಹುದು ಸಾರ್. ಲೋ ನಿಂಗಯ್ಯ ಏಳೋ ಮೇಲೆ, ರಾಮ ಕಾಡಿಗೆ ಹೋದ ಮೇಲೆ ಅವರ ತಂದೆ ದಶರಥ ತೀರಿ ಹೋದರಲ್ಲವೇನೋ ? ಅಹುದು ಸಾರ್. ರಾಮನ ಹೆಂಡತಿ ಸೀತೆಯನ್ನು ರಾವಣ ಕದ್ದು ಲಂಕೆಗೆ ಕೊಂಡೊಯ್ದನಲ್ಲವೇನೋ ? ಅಹುದು ಸಾರ್. ಹೀಗೆ ಸ್ವಾಮಿ, ರಾಮಾಯಣ, ಮಹಾಭಾರತ, ನಳಚಕ್ರವರ್ತಿ ಕಥೆಗಳಿಂದ ನೂರಾರು ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದರು. ಮೇಷ್ಟರು ದೂರಿತ್ತ ಊರಿನ ಗಣ್ಯರು ಮುಖದ ಮೇಲೆ ಬಟ್ಟೆ ಹಾಕಿಕೊಂಡು ಬಂದ ದಾರಿಗೆ ಸುಂಕವಿಲ್ಲ ವೆಂದು ಮನೆಗೆ ಹೋದರು ಎಂಬ ಪ್ರಚಲಿತ ಕಥೆಯಿದು. ಈ ಪ್ರಚಂಡ ಕಥನಾಯಕ ಸ್ಕೂಲ್ ಮೇಷ್ಟರು ಬಹುಶಃ ನಮ್ಮ ಪಬ್ಲಿಕ್ ಪ್ರಾಸಿಕ್ಯೂಟರ್ ಶ್ರೀ ರಾಮಸ್ವಾಮಿ ಯವರೇ ಆಗಿದ್ದು, ಹಿಂದಿನ ಜನ್ಮದ ಸಂಸ್ಕಾರದಿಂದ ಇಂದಿನ ಜನ್ಮದಲ್ಲಿ **Improved breed** ಆಗಿರುವುದನ್ನು ತಮಗೆ ತಿಳಿಸಲು ಸಂತೋಷವಾಗುವುದು.

ನಾನು ಸಾಕ್ಷಿ ರಂಗೇಗೌಡನನ್ನು ನಿಲ್ಲಿಸಿ ಪಾಟೀಸವಾಲು ಮಾಡಿದೆ. ಏನಪ್ಪ ರಂಗೇಗೌಡ ನಾನು ಭಾಷಣ ಮಾಡುವಾಗ ಮಧ್ಯೆ ಮಳೆ ಬಂತಲ್ಲ, ಆಗೆ ನಾವೇನೋ ಚಾಮುಂಡೇಶ್ವರಿ ಗುಡಿಗೆ ಹೋದೆವು ನೀನೆಲ್ಲಿ ನಿಂತೆ ಎಂದು ಕೇಳಿದೆ. ನಾನು ನಿಮ್ಮ ಜೊತೆಯಲ್ಲೇ ಚಾಮುಂಡೇಶ್ವರಿ ಗುಡಿ ಒಳಕ್ಕೆ ಬಂದೆ ಎಂದ.

ಚಾಮುಂಡಿ ಬೆಟ್ಟದ ಮೇಲಿನ ಸುಬ್ಬರಾಯನ ಕೆರೆ ಮೈದಾನದಿಂದ ನಾವೇನೋ ಬಸ್ಸಿನಲ್ಲಿ ಬಂದೆವು ನೀನು ಯಾತರಲ್ಲಿ ಮೈಸೂರಿಗೆ ಬಂದೆ ಎಂದು ಕೇಳಿದೆ, ಮೆಟ್ಟಿಲಿಳಿದು ಬಂದೆ ಎಂದ ರಂಗೇಗೌಡ. ಸುಬ್ಬರಾಯನ ಕೆರೆ ಮೈದಾನ ಚಾಮುಂಡಿ ಬೆಟ್ಟದ

ಮೇಲೆ ಅಗಲವಾಗಿತ್ತೆ ರಂಗೇಗೌಡ ಎಂದೆ ಸಾಧಾರಣ ಇತ್ತು ಸಾಮಿ ಎಂದ.

ನನ್ನ ಭಾಷಣ ಮಾಡಬೇಡ ಅಂತ ಪೋಲೀಸರು ಲಾಠಿ ಚಾರ್ಜ್ ಮಾಡಿದರಲ್ಲ, ನಿನಗೂ ಏಟು ಬಿತ್ತ ಎಂದು ಕೇಳಿದೆ ಇಲ್ಲ ಸ್ವಾಮಿ ನನಗೆ ಬೀಳಲಿಲ್ಲ, ಎಂದು ಹೇಳಿದ. ಅಪದ್ಧ ಸಾಕ್ಷಿ ಹೇಳಿದ್ದಾರೆ ಸ್ವಾಮಿ.

ನ್ಯಾಯಾಂಗಶಾಸ್ತ್ರದಲ್ಲಿ ಅಧ್ವರ್ಯರಾದ ತಾವು ನನಗೆ ಏನೇ ಕಾರಣದಿಂದ ಶಿಕ್ಷೆ ಕೊಡದಿರಲು ಅವಕಾಶವಿಲ್ಲದ ರಾಜಕೀಯ ಅಲಗು ನ್ಯಾಯಾಲಯಗಳ ನ್ಯಾಯ ಪೀಠದಲ್ಲಿ ತೂಗುತ್ತಿದೆ. ವಿಚಾರಣೆಯಿಂದ ಸಾಕ್ಷ್ಯಪುರಾವೆಗಳನ್ನು ಪೋಲೀಸರು ಒದಗಿಸುವಲ್ಲಿ ವಿಫಲರಾಗಿದ್ದಾರೆಂಬುದು ತಮಗೆ ವೇದ್ಯವಾಗಿದೆ. ಸಾಕ್ಷ್ಯ ಪುರಾವೆ ಗಳನ್ನು ಪೋಲೀಸರು ಸಿದ್ಧ ಮಾಡುವಲ್ಲಿ ಯಾವ ರೀತಿಯ ಹುಡುಗಾಟದ ಸಾಕ್ಷ್ಯ ಗಳನ್ನು ತಂದು ಕೋರ್ಟನ್ನು ನಗೆಪಾಟಲಿಗೆ ಈಡುಮಾಡುತ್ತಾರೆಂಬ ಅಂಶದತ್ತ ತಮ್ಮ ಗಮನ ಸೆಳೆಯಲು ಪಾಟೀಸವಾಲಿನಲ್ಲಿ ತಮ್ಮ ಮನಸ್ಸಿಗೆ ವೇದ್ಯ ಮಾಡುವ ಏಕೈಕ ದೃಷ್ಟಿಯಿಂದ ತಮ್ಮ ಗಮನ ಸೆಳೆದಿದ್ದೇನೆ.

ಸನ್ಮಾನ್ಯ ನ್ಯಾಯಾಧೀಶರೇ,

ನಾನು ಭಾಷಣದಿಂದ ಶ್ರೀಮನ್ ಮಹಾರಾಜರನ್ನು ನಿಂದಿಸಿಲ್ಲ. ಅವರ ಹಿಂದಿನ ಹಾಗೂ ಇಂದಿನ ಸ್ಥಿತಿ ಬಗ್ಗೆ ನೊಂದು ಅನುಕಂಪ ಸೂಚಿಸಿರುವ ಮಾತುಗಳವು. ಪಬ್ಲಿಕ್ ಪ್ರಾಸಿಕ್ಯೂಟರ್ ಹೇಳುವ ಸತ್ಯದಿಂದ ಬಹು ದೂರದ ಮಾತನ್ನು ಕೇಳಿದ ನನಗೆ ಇವರೇನು ? ನ್ಯಾಯಶಾಸ್ತ್ರ ಓದಿ ಬಂದವರೋ ಎನ್ನುವ ಭ್ರಮೆ ಉಂಟಾಯಿತು. ಶ್ರೀಮನ್ ಮಹಾರಾಜರು ಪ್ರೈಸ್ರಾಯರಿಗೆ ಗೋಮಾಂಸದ ಭಕ್ಷ್ಯ ಭೋಜ್ಯದ ಭೋಜನ ನೀಡಲಿಲ್ಲ, ಸರ್ಕಾರದವರು ನಡೆಸಿದರು ಎಂದು ವಾದಿಸಿ ನನ್ನ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ 20 ವರ್ಷದ ಶಿಕ್ಷೆಗೆ ಗುರಿ ಮಾಡಲು ಕೇಳಿಕೊಂಡಿದ್ದಾರೆ.

ಸ್ವಾಮಿ ನ್ಯಾಯಾಧೀಶರೇ

ಮೈಸೂರಿನಲ್ಲಿರುವುದು ಮೈಸೂರು ಶ್ರೀಮನ್ ಮಹಾರಾಜರ ಸರ್ಕಾರ The government of his highnes Mysore. ಎಂದು ತಾನೆ ಇರುವುದು. ಇಂತಹ ಮೂಲಭೂತವಾದ ಅಂಶವನ್ನೆ ಒತ್ತಿಹಾಕುವ ಪ್ರಯತ್ನ ಮಾಡಿದ್ದಾರೆ. ನನಗೆ ಶಿಕ್ಷೆ ಕಮ್ಮಿ ಆಗಲಿ ಎಂಬುದನ್ನು ಗಮನದಲ್ಲಿಟ್ಟು ನನ್ನ ಮೇಲಿನ ಆಪಾದನೆಗಳನ್ನು ತಳ್ಳಿ ಹಾಕಲು ಪ್ರಯತ್ನ ಮಾಡುತ್ತಿಲ್ಲ. ಪ್ರಾಸಿಕ್ಯೂಟರ್ ಅವರು ಹೇಳಿರುವಂತೆ ಸರ್ಕಾರದ ಹೊಣೆಗಾರಿಕೆಯೇ ರಾಜರಿಗಿಂತ ರಾಜ್ಯಭಾರದಲ್ಲಿ ಮುಖ್ಯ ಎಂದಾದರೆ, ಅದಕ್ಕಾಗೆ ನಾವು ಹೊಡೆದಾಡಿ ಇಂಗ್ಲೆಂಡಿನಂತೆ "king does no wrong" ಎಂಬ ರಾಜ್ಯಾಂಗ ತರುವ ಹಾದಿಯಲ್ಲಿ ನಮ್ಮ ಹೋರಾಟವಾಗಿದೆ. ಈ ಒಂದು ಹೋರಾಟಕ್ಕೆ ನ್ಯಾಯವಾಗಿ ಪಬ್ಲಿಕ್ ಪ್ರಾಸಿಕ್ಯೂಟರ್ ನನ್ನನ್ನು ಅಭಿನಂದಿಸಬೇಕಿತ್ತು. ಪಾಪ 20 ವರ್ಷದ ಪರಮಾವಧಿಶಿಕ್ಷೆಯನ್ನು ವಿಧಿಸಲು ಆಗ್ರಹ ಪಡಿಸಿದ್ದಾರೆ. ನನ್ನ 20 ವರ್ಷದ ಶಿಕ್ಷೆ

ಯಿಂದ ಪ್ರಾಸಿಕ್ಯೂಟರಿಗೆ ಅನುಕೂಲವಾಗುವುದಾದರೆ ನನ್ನ ಭಾಷಣ ಕೊನೇ ಪಕ್ಷ ಒಬ್ಬನ ಹಿತ ಕಾಪಾಡಿತಲ್ಲ ಎಂಬ ಹಿಗ್ಗು ನನಗೆ ಎಂದು ತಿಳಿಸಿದೆ.

ಸ್ವಾಮಿ, ತಾವು ಇಕ್ಕೆಲದ ವಾದವಿವಾದ ಕೇಳಿದ್ದೀರಿ. ನಾನು ಈ ಹಿಂದೆ ಮೊದಲನೆ ಪ್ಯಾರಾದಲ್ಲಿ ತಿಳಿಸಿದಂತೆ ನನ್ನನ್ನು ಆಪಾದನೆಯಿಂದ ಮುಕ್ತಗೊಳಿಸುವುದು ರಾಜಕೀಯ ಮೊಕದ್ದಮೆಯಲ್ಲಿ ಕಷ್ಟಸಾಧ್ಯವೆಂಬುದನ್ನು ನಿವೇದಿಸಿಕೊಂಡ ಅಂಶ ತಮ್ಮ ಮನಸ್ಸಿಗೆ ಕಿರಿ ಕಿರಿ ಉಂಟು ಮಾಡಿದೆ ಎಂಬುದನ್ನು ಅರಿತಿದ್ದೇನೆ.

ತಾವು ತೀರ್ಪು ನೀಡುವಾಗ ರಾಜಕೀಯ ಖೈದಿಗಳ ಆರೋಗ್ಯ ಚೆನ್ನಾಗಿ ನೋಡಿ ಕೊಳ್ಳುವಂತಹ ಒಂದು ಮಾತು ಸೇರಿಸಿದರೆ ನಮಗೆ ಅನುಕೂಲವೆಂಬುದನ್ನು ಬಿನ್ನವಿಸಿ ಕೊಳ್ಳುತ್ತೇನೆ ಎಂದು ಹೇಳಿಕೆ ಮುಕ್ತಾಯ ಮಾಡಿದೆ.

ಈ ಮೊಕದ್ದಮೆಯಲ್ಲಿ ಜಡ್ಜರು 124A ರಾಜದ್ರೋಹ ಮೊಕದ್ದಮೆಗೆ ಆಪಾದಿತ ಜವರಪ್ಪಗೌಡರು ಎಷ್ಟರ ಮಟ್ಟಿಗೆ ಕಾರಣೀಭೂತರು ಎಂಬ ಬಗ್ಗೆ ಸರಿಯಾದ ಸಾಕ್ಷ್ಯಾಧಾರ ಪುರಾವೆಗಳನ್ನು ನೀಡುವಲ್ಲಿ ಪೋಲೀಸರು ವಿಫಲರಾಗಿದ್ದಾರೆ. ಆದರೆ ಸ್ವತಃ ಆಪಾದಿತ ಜವರಪ್ಪಗೌಡರು ಕೋರ್ಟಿನಲ್ಲಿ ಆಡಿದ ಅವರ ಮಾತುಗಳ ಪುರಾವೆಯ ಮೇಲೆ ನೇರ ಆಪಾದನೆಗೆ ಗುರಿಯಾಗಿದ್ದಾರೆ. ಇನ್ನು ಚಿಕ್ಕ ವಯಸ್ಸಿನವ ರಾದ ಇವರಿಗೆ 1½ ವರ್ಷ ಕಠಿಣ ಸಜಾ ವಿಧಿಸಿದ್ದೇನೆ.

ಜೈಲಿನಲ್ಲಿ ರಾಜಕೀಯ ಖೈದಿಗಳ ಆರೋಗ್ಯ ಕಾಪಾಡುವ ಬಗ್ಗೆ ಕೋರ್ಟ್ ನೇರವಾಗಿ ಆಜ್ಞೆ ಮಾಡಲು ಅವಕಾಶವಿಲ್ಲ. ಜೈಲ್ ಮ್ಯಾನ್ಯುಯಲ್ ಅಲಾಯದ ಇರುವುದರಿಂದ ಅದರಂತೆ ಜೈಲ್ ಅಧಿಕಾರಿಗಳು ನಡೆಯಬೇಕಾಗುವುದು. ನ್ಯಾಯಾಂಗ ಕಸ್ಟಡಿಯಲ್ಲಿರುವ ಆಪಾದಿತರಿಗೆ ಸ್ವಲ್ಪ ಕೋರ್ಟ್ ಅನುಕೂಲ ಕಲ್ಪಿಸಬಹುದೇ ಹೊರತು ನೇರಖೈದಿಗಳ ಯೋಗಕ್ಷೇಮ ಜೈಲಿಗೆ ಸೇರಿದ್ದು ಎಂದು ತಿಳಿಸಿದರು.

೩

ನಾನು 1½ ವರ್ಷ ಕಠಿಣಶಿಕ್ಷೆ ಹೊಂದಿ ಸಂಜೆ 4½ ವೇಳೆಗೆ ಜೈಲಿಗೆ ಹೋದೆ. 5½ ಗೆಲ್ಲ ಊಟ ಮಾಡಿದೆವು, ಏಕೋ ಏನೋ ಚೀಫ್ ವಾರ್ಡರ್ ರೆಫರಿ ಮತ್ತು ಅರಕೆರೆ ಯು. ಕೆಂಚಪ್ಪನಿಗೆ ಜಗಳವಾಯಿತು. ನಾವು ಒಟ್ಟು ಸುಮಾರು 150 ಮಂದಿ ಇದ್ದೆವು. ನಮ್ಮ ಮುಚ್ಚಳವನ್ನೆಲ್ಲ ಚೆನ್ನಾಗಿ ತೊಳೆದು ಸಾಲಾಗಿ ಒಂದರ ಮೇಲೊಂದ ರಂತೆ ಜೋಡಿಸಿದ್ದೆವು. ಚೆನ್ನಾಗಿ ಮುಚ್ಚಳ ಮತ್ತು ಕುಡಿಕೆ ಇಟ್ಟುಕೊಂಡವರಿಗೆ 5 ತಿಂಗಳಿಗೆ 6 ದಿನ ಶಿಕ್ಷೆ ಕಮ್ಮಿ ಮಾಡುವುದಾಗಿ ತಿಳಿಸಿದ್ದರು. ಪಾಪ ಎಲ್ಲರೂ ಮುಚ್ಚಳ ಮಿನುಗುವಂತೆ ಕಡಲೆಕಾಯಿ ಎಣ್ಣೆ ಸವರಿ ತಮ್ಮ ಹೆಸರುಗಳನ್ನು ಮುಚ್ಚಳದ ಹಿಂದೆ ಕೆತ್ತಿದ್ದರು. ರೆಫರಿ ಜೊತೆ ಜಗಳವಾಡಿದ ಯು. ಕೆಂಚಪ್ಪ ಸರ್ಕಸ್‌ನಲ್ಲಿ ರಿಂಗ್‌ಗಳನ್ನು ಬಿಸಾಡಿ ಹಿಂದಕ್ಕೆ ತರಿಸಿಕೊಳ್ಳುತ್ತಾರಲ್ಲ ಹಾಗೆ ಮುಚ್ಚಳಗಳನ್ನು ಒಂದರ ಹಿಂದೆ ಒಂದರಂತೆ ಬಿಸಾಡಿ ಅಷ್ಟು ಮುಚ್ಚಳಗಳನ್ನು ಒಡೆದು ಚೂರು ಮಾಡಿದ.

ರಾತ್ರಿ 8 ಘಂಟೆ ಆಗುತಿದ್ದಂತೆ ಒಂದು ಬ್ಯಾಚು ಬೆಂಗಳೂರು ಕೇಂದ್ರ ಸೆರೆ ಮನೆಗೂ, ಒಂದು ಬ್ಯಾಚು ಶಿವಮೊಗ್ಗ ಸೆರೆಮನೆಗೂ ರಾತ್ರಿ 10 ಘಂಟೆ ರೈಲಿಗೆ ಹೊರಡಲು ಸಿದ್ಧವಾಗಲು ತಿಳಿಸಿದರು. ನಾನು, ಕೆಂಚಪ್ಪ ಮತ್ತು ಎಂ. ಎನ್. ಜೋಯಿಸರು ಸೇರಿದಂತೆ ಶಿವಮೊಗ್ಗ ಜೈಲಿಗೆ ಸುಮಾರು 65 ಮಂದಿಯನ್ನು ಮಿಕ್ಕವರನ್ನು ಬೆಂಗಳೂರಿಗೆ ಕರೆದೊಯ್ಯಲು ತರಾತುರಿಯಲ್ಲಿ ರೈಲ್ವೆ ಸ್ಟೇಷನ್‌ಗೆ ಪೋಲೀಸರು ಕರೆದೊಯ್ದರು. ಶಿವಮೊಗ್ಗ ಜೈಲು ಹೊಸದು ನೋಡೋಣ ಎಂಬ ಉತ್ಸಾಹಮೂಡಿತು. ರಾತ್ರಿರೈಲಿಗೆ ಹೊರಟೆವು. ತ್ರಿಪುರ ಕಾಂಗ್ರೆಸ್ ಮಹಾಧಿವೇಶನಕ್ಕೆ ಹೋಗಿದ್ದ ಹಾಸನದ ಗುಂಡಪ್ಪಗೌಡರು ತ್ರಿಪುರದಿಂದ ಹಾಸನಕ್ಕೆ ಬೆಂಗಳೂರಿನಿಂದ ಬಂದ ರೈಲಿನಲ್ಲಿ ಅರಸೀಕೆರೆಯಲ್ಲಿ ನಮಗೆ ಸಂಧಿಸಿದರು. ಅಷ್ಟು ಹೊತ್ತಿನಲ್ಲಿ ತಾವೇ ಸ್ವತಃ ಓಡಾಟ ಮಾಡಿ ಸ್ಟೇಷನ್ ಹೊಟೇಲ್‌ನಲ್ಲಿ ಸಿಗಬಹುದಾದ ತಿನಿಸುಗಳನ್ನು ಕೊಂಡು ತಂದು ಶಿವಮೊಗ್ಗ ಭೋಗಿಯಲ್ಲಿದ್ದ ನಮಗೆಲ್ಲ ಹಂಚಿದರು. ಬೆಳಗಿನ 5½ ಘಂಟೆಗೆ ಶಿವಮೊಗ್ಗ ಟವನ್ ರೈಲ್ವೆ ಸ್ಟೇಷನ್ ತಲುಪಿದೆವು. ಅಲ್ಲಿಂದ ದುರ್ಗಿಗುಡಿ ಚೌಕದ ಮುಖಾಂತರ ಜೈಲಿಗೆ ಕಾಲುನಡಿಗೆಯಲ್ಲಿ ಪ್ರಯಾಣ ಮಾಡಿದೆವು. ಮೈಸೂರು ಜೈಲಿಂದ ಶಿವಮೊಗ್ಗಜೈಲಿಗೆ ನಾವು ಬರುವ ವಿಚಾರ ತಿಳಿದಿದ್ದ ಸ್ಥಳೀಯ ಕಾಂಗ್ರೆಸ್ ಮುಖಂಡರುಗಳಾದ ಎಚ್. ಸಿದ್ಧಯ್ಯನವರು, ಕಡಿದಾಳ್ ಮಂಜಪ್ಪ, ಪಾರ್ಥ ನಾರಾಯಣ ಪಂಡಿತರು. ಎನ್.ಆರ್. ನಾಗಪ್ಪಶೆಟ್ಟಿ, ಭೂಪಾಳಂ ಚಂದ್ರಶೇಖರಯ್ಯ, ಕಾಳೋಜಿರಾವ್ ಜಾಧವ್, ಜ್ವರಾರಿ ಶ್ರೀನಿವಾಸರಾವ್, ಕೃಷ್ಣಮೂರ್ತಿ, ಭದ್ರಾವತಿ

ಯಿಂದ ಕೃಷ್ಣಭಟ್, ಶಾಸ್ತ್ರಿ, ಹಾಲಪ್ಪ ಮುಂತಾದ ಗಣ್ಯರು ಆಗಮಿಸಿ ಜೋಯಿಸರಿಗೆ ಪುಷ್ಪ ಹಾರಗಳನ್ನು ಅರ್ಪಿಸಿದರು. ಮುಖಪ್ರಕ್ಷಾಳನಾನಂತರ ರೈಲ್ವೆ ಸ್ಟೇಷನ್ ಹೋಟೆಲಿನಲ್ಲಿ ವಿಶೇಷ ರೀತಿಯ ತಿಂಡಿ ತಿನಿಸುಗಳನ್ನು ತಯಾರಿಸಿ ಸಿದ್ಧಪಡಿಸಿದ್ದರು. ಮೂರು ನಾಲ್ಕಕ್ಕೆ ಜೈಲಿಗೆ ಬಂದು ನೋಡುವುದಾಗಿ ಹೇಳಿ ಮುಖಂಡರು ತೆರಳಿದರು.

ನಾವು ಸಾಲಾಗಿ ರಸ್ತೆಯಲ್ಲಿ ಜೈಲಿಗೆ ಹೋಗುವಾಗ ರಸ್ತೆ ಇಕ್ಕೆಲದಲ್ಲು ಜನರು ನಿಂತು ಕೈಬೀಸಿ ಗಾಂಧೀಕಿ ಜೈ, ವಂದೇ ಮಾತರಂ ಘೋಷಣೆಗಳನ್ನು ಕೂಗಿ ದಾರಿ ಉದ್ದಕ್ಕೂ ಬೀಳ್ಕೊಟ್ಟರು. ಜನರ ಉತ್ಸಾಹ ಕಂಡ ನಮಗೆ ಮನಸ್ಸಿಗೆ ಏನೋ ಒಂದು ರೀತಿಯ ಆಹ್ಲಾದ. ಜನರಿಂದ ಇಂತಹ ಉತ್ಸಾಹಪೂರಿತ ಸನ್ನಿವೇಶವಲ್ಲಿ ನಾವಿದ್ದರು ಸಹ ಮನೆಕಡೆಯಿಂದ ಮೂರು ನಾಲ್ಕು ವರ್ಷದ ಅವಧಿಗೆ ಒಂದೇ ಒಂದು ಪೋಸ್ಟ್ ಕಾರ್ಡು ಮನೆಯವರ ಯೋಗಕ್ಷೇಮ ಹೊತ್ತುತರಲಿಲ್ಲ. ಹೀಗಾಗಿ ಮನೆ ಮತ್ತು ನನ್ನ ಸಂಬಂಧ ಪೂರ್ಣವಾಗಿ ಕಡಿದೇ ಹೋಗಿತ್ತೆಂದು ಹೇಳಬಹುದಾಗಿತ್ತು. ನನಗಂತು ಯಾವತ್ತೂ ಮನೆ ಜ್ಞಾಪಕಕ್ಕೆ ಬರಲೇ ಇಲ್ಲ. ಜಗತ್ತಿನ ಯಾವುದೇ ಮೂಲೆಯ ಸುದ್ದಿ ಹೊತ್ತು ತರುವ ವಾರ್ತಾಪತ್ರಿಕೆಗಳು ಕಡೇಪಕ್ಷ ನಾಗಮಂಗಲದ ಸುದ್ದಿಯ ಒಂದು ತುಣಕು ತರಲಿಲ್ಲ.

ಚೀಫ್ ವಾರ್ಡರ್ ಗಂಗಪ್ಪ, ಚೀಫ್ ಆಫೀಸರ್ ಕೈವಾರ್, ವಾರ್ಡರುಗಳಾದ ಕೆಂಚಪ್ಪ, ಮಾಳಪ್ಪ, ಶ್ರೀಕಂಠಯ್ಯ ಅವರುಗಳ ಪರಿಚಯವಾಯ್ತು. ನಾವಿದ್ದ ಜೈಲು ಬಿದನೂರು ಪಾಳೆಪಟ್ಟುವರು ಕಟ್ಟಿದ್ದ ಸೈನಿಕರ ಠಾಣವಾಗಿತ್ತಂತೆ. ಅದನ್ನು ಅರ್ಧಕ್ಕೆ ಒಡೆದು ಒಂದು ಭಾಗದಲ್ಲಿ ಬಿಗಿಯಾದ ಬ್ಯಾರಕ್‌ಗಳನ್ನು ಕಟ್ಟಿಸಿದ್ದರು. ಸುಮಾರು 250 ಜನರ ವಸತಿಗೆ ಅವಕಾಶವಿತ್ತು. 250 ಜನಕ್ಕಿಂತ 30 ಜನರಷ್ಟು ಹೆಚ್ಚಿದ್ದರು ಖೈದಿಗಳು. ಜೈಲಿನ ಒಂದು ಭಾಗದ ತೋಟದಲ್ಲಿ ಪಾಳಲ್ಲದಿದ್ದರು ಸಾಧಾರಣ ಮನೆ ಒಂದಿತ್ತು. ನಮ್ಮನ್ನಿಟ್ಟರೆ ಓಡಿ ಹೋಗರು ಎಂಬ ನಂಬಿಕೆಯಿಂದ ನಮ್ಮಲ್ಲಿ ಕೆಲವರನ್ನು ಆ ತೋಟದ ಮನೆಯಲ್ಲಿಟ್ಟಿದ್ದರು. ಹೊರಗೆ ಎಲ್ಲಿಗೆ ಬೇಕಾದರು ಹೋಗ ಬಹುದಾಗಿತ್ತು. ತಾಳಗುಪ್ಪದಿಂದ ಬರುವ ರೈಲಿಗೆ ಪತ್ರಿಕೆಗೆ ಕೈಬೀಸಿದರೆ ಓದಿದ ಪ್ರಯಾಣಿಕರು ನಮ್ಮತ್ತ ಪತ್ರಿಕೆಗಳನ್ನು ಬಿಸಾಡಿ ಹೋಗುತ್ತಿದ್ದರು. ಪ್ರಾತಃಕಾಲ ಬೆಂಗಳೂರಿನಿಂದ ಬರುವ ರೈಲಿನಲ್ಲಿ ಪ್ರಯಾಣಿಕರು ಪತ್ರಿಕೆಗಳನ್ನು ಬಿಟ್ಟು ಹೋಗುತ್ತಿದ್ದರು. ಶಿವಮೊಗ್ಗ ಜೈಲಿನ ಎದುರು ಕುಳಿತರೆ ಶಿಕಾರಿಪುರದ ಸಾಲಾದ ಬೆಟ್ಟ, ಜೈಲಿನ ಹಿಂಭಾಗದಲ್ಲಿ ದಟ್ಟವಾದ ಕಾಡಿತ್ತು. ನಾನು ಹಿಂದೆ ಹೇಳಿರುವ ಸೀನಿಯರ್ ಸರ್ಜನ್ ಬಿ. ಕೆ. ನಾರಾಯಣರು ಇನ್‌ಸ್ಪೆಕ್ಟರ್ ಆಫ್ ಪ್ರಿಸನ್ಸ್ ಆಗಿದ್ದವರು. ಎಂ. ಎಸ್. ಜೋಯಿಸರಿಗೆ ಸಂಬಂಧಿಕರೊ ಏನೋ. ಕಠಿಣ ಸಜ ವಾಗಿದ್ದ ನನಗೆ ಅಡಿಗೆ ಮನೆಗೆ ಸೇದುವಬಾವಿಯಿಂದ ನೀರು ಹಾಕುವ ಕೆಲಸ ತೋರಿಸಿ ಸಹಾಯ ಮಾಡಲು ಅಧಿಕಾರಿಗೆ ತಿಳಿಸಿದ್ದರು. ಎಂ. ಎಸ್. ಜೋಯಿಸರಿಗೆ

ಒಂದು ವರ್ಷ ಸಾದಾ ಸಜಾ ಕೊಡಲಾಗಿತ್ತು. ಅರಕೆರೆ ಯು. ಕೆಂಚಪ್ಪ ಸ್ವಲ್ಪವೇನು ಅಸಾಧ್ಯ ಜಗಳಗಂಟಿಮನುಷ್ಯ. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್ ಮಾಂಟೇರಿಯೋ ಎಂಬುವರು ಜೈಲಿನ ಸೂಪರಿಂಟೆಂಡೆಂಟ್ ಆಗಿದ್ದರು. ಅವರು 6 ಅಡಿ ಅಷ್ಟು ಎತ್ತರದ ಬಹುಸುಂದರಮೂರ್ತಿ. ಒಂದುದಿನ ಅವರು ಹೆಂಡತಿಯೊಡನೆ ಜೈಲಿಗೆ ಬಂದರು. ಅವರ ಹೆಂಡತಿಗೆ ವಯಸ್ಸಾಗಿತ್ತೊ ಅಥವಾ ಬಾಲನೆರೆಯೋ ಕಂಡವರಾರು. ಜಾತಿಯಲ್ಲಿ ಆಂಗ್ಲೋ ಇಂಡಿಯನ್. ಹೇ ಮುದಕಿಗಂಡ ಎಂದು ಕೂಗಿಬಿಟ್ಟ. ಇನ್ನೆಲ್ಲಾ 27 ದಿನದಲ್ಲಿ ಬಿಡುಗಡೆ ಆಗಬೇಕಾದ ಮನುಷ್ಯ. ಅನವ್ಯಶಕವಾಗಿ ಇಲ್ಲದ ತೊಂದರೆ ತಂದಿಟ್ಟ ನನಗೂ ಸೇರಿದಂತೆ. ಜೋಯಿಸರು ಗುಬ್ಬಕ್ಕಿ ಟವರ್ ಮೇಲೆ ಗೀತೆಯನ್ನು ಓದುತ್ತ ಕುಳಿತಿದ್ದರು. ನಾವಿಬ್ಬರು ತೋಟದಲ್ಲಿ ತರಕಾರಿ ಕೆದಕುತ್ತಿದ್ದೆವು. ಮಾಂಟೇರಿಯೋ ಬಂದವರೆ ನಮ್ಮಿಬ್ಬರನ್ನು ಸೆಲ್‌ಗೆ ಹಾಕಿ ರಾಗಿಬೀಸಲು ಕೊಡಿ ಎಂದು ಆಜ್ಞಾಪಿಸಿ ಈಗಿಂದೀಗಲೆ ನಾನಿರುವಾಗಲೇ ಸೆಲ್‌ಗೆ ಕರೆದುಕೊಂಡು ನಡೆಯಿರಿ ಎಂದು ಸೆಲ್ ಬಾಗಿಲು ತೆಗೆಸಿ ಬೀಗ ಹಾಕಿಸಿಯೇ ಬಿಟ್ಟರು. ಜೊತೆಗೆ ಅನ್ನವನ್ನು ರದ್ದು ಮಾಡಿ ಬರೀ ರಾಗಿಹಿಟ್ಟು ಮಾತ್ರ ಕೊಡುವಂತೆ ಆಜ್ಞಾಪಿಸಿಬಿಟ್ಟರು. ಇದೇ ಕಾಲಕ್ಕೆ ಎಚ್. ಸಿದ್ಧಯ್ಯನವರು ರಾಜದ್ರೋಹದ ಆಪಾದನೆ ಮೇಲೆ ಶಿವಮೊಗ್ಗ ಜೈಲಿನಲ್ಲಿ ಶಿಕ್ಷೆ ಅನುಭವಿಸುತ್ತಿದ್ದರು.

ಸಂಜೆ 5 ಘಂಟೆಗೆ ಅಡಿಗೆ ಗುಮ್ಮಿಯಲ್ಲಿ ನಾವಿಬ್ಬರಿಲ್ಲದ ವಿಚಾರ ಸಿದ್ಧಯ್ಯನವರಿಗೆ ಮತ್ತು ಜೋಯಿಸರಿಗೆ ಗೊತ್ತಾಗಿ ಸೆಲ್ ಬಳಿ ಬಂದು ಏನು ವಿಚಾರ ಎಂದು ವಿಚಾರಿಸಿದರು. ಕೆಂಚಪ್ಪನನ್ನೆ ಕೇಳಿ ಎಂದೆ. ನಡೆದ ವಿಚಾರ ತಿಳಿಸಿದ. ಅವಳು ಮುದುಕಿ ಆದರೇನು ? ಹುಡುಗಿ ಆದರೇನಾಗಬೇಕಿತ್ತು, ನೀವು ಶುದ್ಧ ತಲೆ ಹರಟೆಗಳು ಎಂದು ಸಿದ್ಧಯ್ಯನವರು ಚೆನ್ನಾಗಿ ಬೈದರು. ಅಡಿಗೆ ಮಾಡುತಿದ್ದ ಖೈದಿ ಅಂದಾನಿ ಅನ್ನುವವನಿಗೆ ಹೇಳಿ ಅವರಿಬ್ಬರಿಗೂ ಅನ್ನ ತಪ್ಪದೆ ಕೊಡಪ್ಪ ಎಂದು ತಿಳಿಸಿದರು ಸಿದ್ಧಯ್ಯನವರು. ಸಂಜೆಗೆ ಮರಳು ತುಂಬಿದ ಮಡಕೆಯನ್ನು ಸೆಲ್‌ಗೆ ತಂದಿಟ್ಟರು. ನಾವು ತೋಟದಿಂದ ಪರಂಗಿಗಿಡದ ಎಲೆಯಿರುವ ಕೊಳವೆಯನ್ನು ತಂದಿಟ್ಟುಕೊಂಡು ಬಾಗಿಲಿನಿಂದಾಚೆ ಒಂದ ಮಾಡಲು ಅನುಕೂಲ ಮಾಡಿಕೊಂಡಿದ್ದೆವು. ಬೆಳಗ್ಗೆ ನಮ್ಮ ಸೆಲ್ ಬಾಗಿಲನ್ನು ಬಿಚ್ಚಿದ ನಂತರ ಸೇದುವ ಬಾವಿಬಳಿ ಸ್ನಾನಮಾಡಿ ಊಟ ಮುಗಿಸಿದೆವು. ತಲಾ 15 ಸೇರಿನಂತೆ ರಾಗಿ ತುಂಬಿಟ್ಟು ಬೀಸುವಂತೆ ಹೇಳಿ ಹೋದರು. ಕುಳಿತು ರಾಗಿ ಒರಳಿಗೆ ಹಾಕಿ ಕಲ್ಲನ್ನು ಜಗ್ಗಿಸಿದೆವು. ಊಂ ಹೂಂ ಜಗ್ಗಲಿಲ್ಲ. ಒಂದೇ ಒಂದು ಸುತ್ತನ್ನು ತಿರುಗಿಸಲು ನಮ್ಮಿಂದ ಆಗಲಿಲ್ಲ. ಇಬ್ಬರೂ ಸೇರಿ ಒಂದೇ ಕಲ್ಲಿನಲ್ಲಿ ಬೀಸಿದರಾಯ್ತೆಂದು ಪ್ರಯತ್ನ ಮಾಡಿದೆವು. ಕಲ್ಲೇನೋ ಸುತ್ತಿತು. ಹಿಟ್ಟು ಕೆಳಕ್ಕೆ ಬೀಳಲಿಲ್ಲ. 2 ಘಂಟೆಗೆ ರೊಟ್ಟಿ ಸೊನ್ನೆಯಾಯ್ತಲ್ಲ ಎಂಬ ಯೋಚನೆ ನನ್ನದು.

ಎದುರು ಬ್ಯಾರಕ್‌ನಲ್ಲಿ ಲಂಬಾಣಿ ಹೆಂಗಸರು ಮೂರು ನಾಲ್ಕು ಮಂದಿ ಇದ್ದರು. ಕಳ್ಳಭಟ್ಟಿ ಕೇಸಿನಲ್ಲಿ ವಾರಕಾಲ ಶಿಕ್ಷೆಗೆ ಗುರಿಯಾಗಿದ್ದರು. ಅವರು ರಾಗಿ ಬೀಸುವ ವಿಧಾನವನ್ನು ಹೇಳಿಕೊಟ್ಟರು. ರಾಗಿಯನ್ನು ಕಲ್ಲಿಗೆ ತುಂಬಿ ಮೇಲಿನ ಕಲ್ಲನ್ನು ಎತ್ತಿ ರಾಗಿ ಕೆಳಗಿನ ಕಲ್ಲಿಗೆ ಚೆಲ್ಲುವಂತೆ ಹೇಳಿಕೊಟ್ಟರು. ಇದರಿಂದ ನಾವು ಕಲ್ಲಿಗೆ ಹಾಕುವ ಒಂದು ಸ್ಯಾರೆ ರಾಗಿ ಕಣ್ಣು ಮಿಟುಕಿಸುವಷ್ಟರಲ್ಲಿ ಎರಡು ಹೋಳಾಗಿ ತರಿಯಾಗಿ ರಾಗಿಹಿಟ್ಟು ಬೀಳಲಾರಂಭವಾಯಿತು. ಮಧ್ಯಾಹ್ನ ರಾಗಿ ಬೀಸುವ ವೇಳೆಗೆ ಮಾಂಟೇರಿಯೋ ಅವರು ಒಂದು ನಿಮಿಷ ನಿಂತು ನೋಡಿದರು. ರಾಗಿ ತರಿಯಾಗಿ ಬೀಳುತ್ತಿತ್ತು. ಕಾರಣವೇನು ಎಂದು ವಾರ್ಡರ್ ಕೆಂಚಪ್ಪನನ್ನು ಸಾಹೇಬರು ಪ್ರಶ್ನಿಸಿದರು. ರಾಗಿಕಲ್ಲು ಸರಿಯಿಲ್ಲವೆಂದು ಸಲೀಸಾಗಿ ಹೇಳಿಬಿಟ್ಟ. ಒಡಕಲಾಗಿ ಬಿದ್ದಿರುವ ಹಿಟ್ಟನ್ನು ಕ್ರಿಮಿನಲ್ ಖೈದಿಗಳಿಗೆ ಕೊಟ್ಟು ಹಿಟ್ಟು ಮಾಡಿಸುತ್ತೇವೆ ಎಂದು ತಿಳಿಸಿದ. ಕ್ರಿಮಿನಲ್ ಖೈದಿಗಳು ರಾಗಿಯನ್ನು ನಿಂತು ಬೀಸುವಂತೆ ಎತ್ತರದ stand ಮೇಲೆ ಕಲ್ಲನ್ನು ಅದ್ದಿದ್ದರು. ಸೆಲ್‌ನಲ್ಲಿ ಜಾಗ ಚಿಕ್ಕದು. ಬಿಡಿ ಸ್ವಾಮಿ ಇವರು ಈಗ ಬೀಸಿಕೊಡುವಂತೆ ಕೊಡಲಿ ಕ್ರಿಮಿನಲ್‌ಗಳು ಹಿಟ್ಟುಮಾಡಿ ಕೊಡಲಿ ಎಂದ. ನಾಳೆಯಿಂದ ಇವರಿಗೆ 20 ಸೇರು ರಾಗಿ ಕೊಡಿ ಎಂದ ಸಾಹೇಬ. ಬೀಸೋ ಲೋ ರಾಗೀನ ಬಡ್ಡೀಮಗ 20 ಇಲ್ಲದಿದ್ದರೆ 40 ಸೇರು ಕೊಡಲಿ ಎಂದ ಕೆಂಚಪ್ಪ. ಆತನ ಸಜಾ ದಿವಸ ಕಳೆದು ಹೋಗುತ್ತಾ ಬಂದು ಇನ್ನೆಲ್ಲಾ 12 ದಿನದ ಸಜಾ ಉಳಿದಿದೆ. ಅವನಿಗೊ ಊರಿಗೆ ಹೋಗುವ ಕಾತರ. ಪಾಪ ಅವನಿಗೂ ಊರಿಂದ ಮಗ ಏನಾದ ಎತ್ತಾದ ಎಂಬ ಕಾಗದವಿಲ್ಲ. ಅವರಿಂದ ಕಾಗದ ಇಲ್ಲದಿದ್ದರೆ ಹೋಯ್ತು, ನಾವೂ ಸಹ ಹೀಗಿದ್ದೇವೆ, ಇಂಥ ಕಡೆ ಇದ್ದೇವೆ ಎಂಬ ವಿಚಾರ ತಿಳಿಸಿದವರಲ್ಲ. ಅಂತು ಬಿಡುಗಡೆ ಆಗಿ ಕೆಂಚಪ್ಪ ಹೋದ. ನನಗೆ ಒಂದು ವರ್ಷದ ಒಂದು ತಿಂಗಳು ಜೈಲಲ್ಲಿರಬೇಕು. ಕೆಂಚಪ್ಪ ಬಿಡುಗಡೆಯಾಗಿ ಹೋದ ದಿನ ನನಗೆ ತಲೆಮೇಲೆ ಏನೋ ಆಗಿತುಕೊಂಡಿದೆಯೋ ಎನ್ನುವಷ್ಟು ತಲೆ ಭಾರ. ಹಾಗೂ ಹೀಗೂ ಎಲ್ಲ ಹುಡುಗರು ದಿನಕ್ಕೆ ಮೂವರು ನಾಲ್ವರಂತೆ ಜೂನ್ 1939ಕ್ಕೆ ಜೋಯಿಸರು ನನ್ನ ಬಿಟ್ಟು ಎಲ್ಲರೂ ಬಿಡುಗಡೆಯಾದರು.

ಪ್ರಾತಃಕಾಲ ಮಾಂಟೇರಿಯೋ ಬಂದರು. ಸರ್ ನಾನು ಜೋಯಿಸರ ಜೊತೆಯಿರಲು ಬಿಟ್ಟುಕೊಡಿ ಎಂದು ಮನಕರಗುವಂತೆ ವೇದನೆಯಿಂದ ಕೇಳಿಕೊಂಡೆ. ನೀನು ಹೇಗೂ ಕಠಿಣ ಸಜಾದವನು, ಹಗಲು ಸೆಲ್‌ನಲ್ಲಿ ರಾಗಿ ಬೀಸು. ರಾತ್ರಿ ಮಲಗಲು ಜೋಯಿಸರ ಬ್ಯಾರಕ್‌ಗೆ ಹೋಗು ಎಂದು ತಿಳಿಸಿದರು. ಸಂಜೆ ಮಾಂಟೇರಿಯೋ ಬೇಟೆ ಗಾರನ •ಡ್ರೆಸ್‌ನಲ್ಲಿ ಬಂದೂಕದೊಡನೆ ಬಂದರು. ಜೈಲ್ ಹಿಂದೆ ಬೊಮ್ಮನಕಟ್ಟೆ ಎಂಬ ಲಂಬಾಣಿಗರ ಹಟ್ಟಿ. ಅಲ್ಲೊಂದು ನೀರಿನ ಕಟ್ಟೆ. ಆ ಕಟ್ಟೆಯಲ್ಲಿ ತುಂಬ ಉದ್ದನಾದ ಬೆತ್ತದ ಹಾವಿದೆ ಎಂದು ಮಾಂಟೇರಿಯೋ ಅವರಿಗೆ ಲಂಬಾಣಿಗಳು

ತಿಳಿಸಿದರಂತೆ. ಸಂಜೆ ಬಂದವರೆ ಬಾ ಬೊಮ್ಮನಕಟ್ಟೆ ಹಟ್ಟಿಗೆ ಹೋಗಿ ಬೆತ್ತದ ಹಾವು ಬೇಟೆಮಾಡಿ ಬರೋಣ ಎಂದರು. ಹೋಗಿ ಸುಮಾರು ಹೊತ್ತು ಕಾಯ್ದರು. ಹಾವು ಕಾಣಲಿಲ್ಲ. ಅದಾದ ಮೂರು ನಾಲ್ಕುದಿನಗಳನಂತರ ಮಾಂಟೇರಿ ಅವರು ಬೆತ್ತದ ಹಾವನ್ನು ಬೆಳಗಿನ ಹೊತ್ತೆ ಕಾಯ್ದು ಹೊಡೆದು ತೆಗೆದುಕೊಂಡು ಹೋದರೆಂದು ಲಂಬಾಣಿಗಳು ತಿಳಿಸಿದರು.

ನಾವು ಜೈಲಿನಲ್ಲಿದ್ದಂತೆಯೆ ವಿದುರಾಶ್ವತ್ಥದಲ್ಲಿ 1939 ನೇ ಏಪ್ರಿಲ್‌ನಲ್ಲಿ ಎಚ್. ಸಿ. ದಾಸಪ್ಪನವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸಿನ ಎರಡನೇ ರಾಷ್ಟ್ರ ಕೂಟ ನಡೆಯಿತು. 1939ನೇ ಸೆಪ್ಟೆಂಬರ್ ಒಂದನೇ ತಾರೀಖು ಅರಸೀಕೆರೆ ಬಳಿ ಸೇರಿದ್ದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿ ಸಭೆ ಸೇರಿ ಪ್ರಪಂಚದ ಈ ಎರಡನೇ ಯುದ್ಧದಲ್ಲಿ ಕಾಂಗ್ರೆಸ್ ಭಾಗವಹಿಸಬಾರದೆಂದು ಕಾಂಗ್ರೆಸ್ ಸಮಿತಿ ಸ್ಪಷ್ಟೀ ಕರಿಸಿದರು. ಹಿಟ್ಲರ್ ಕೂಡ 1939 ನೇ ಸೆಪ್ಟೆಂಬರ್ 1ನೇ ತಾರೀಖು ಪ್ರಪಂಚದ ಎರಡನೇ ಮಹಾಯುದ್ಧ ಘೋಷಣೆ ಮಾಡಿದ್ದ. ಸೆಪ್ಟೆಂಬರ್ 3 ನೇ ತಾರೀಖು ಬೆಳಗಾಗಿ ಎದ್ದ ನಾನು ಜೋಯಿಸರಿಗೆ ಸರ್ ಚಂಗಲರಾಯರೆಡ್ಡಿಯವರು, ಎಚ್. ಸಿ. ದಾಸಪ್ಪನವರಾದಿ ಶಿವಮೊಗ್ಗ ಜೈಲಿಗೆ ಕರೆತಂದು ಒಳಗೆ ಕಳುಹಿಸುತ್ತಿದ್ದಂತೆ ಕನಸು ಕಂಡೆ ಎಂದು ತಿಳಿಸಿದೆ. ನನ್ನ ಮಾರ್ಗ ನಿನಗೆ ಹಿಡಿಸದು, ಏನೋ ನಿನಗೂ ಬೇಜಾರು, ಇನ್ನು ಯಾರೂ ಬರಲಿಲ್ಲವೆಂದು ನಿನಗೆ ಕನವರಿಕೆ. ಅದೇ ಕನಸಾಗಿದೆ ಎಂದರು. ನಾವಿಬ್ಬರು ಸೇದುವಬಾವಿ ಬಳಿ ಸ್ನಾನ ಮಾಡುತ್ತ ನಿಂತಿದ್ದೆವು. ಕೆ. ಚಂಗಲರಾಯರೆಡ್ಡಿ, ಕೆ. ಟಿ. ಭಾಷ್ಯಂ, ಸೇದ ಬಾವಿ ಹತ್ತಿರ ಬಂದು ನಮಗೂ ಸ್ವಲ್ಪ ನೀರು ಬಿಡಿಯಪ್ಪ ಸ್ನಾನಕ್ಕೆ ಎಂದರು.

ಇದೇನು ಸ್ವಾಮಿ ಆಶ್ಚರ್ಯ ಈಗತಾನೆ ಜವರಪ್ಪಗೌಡ ನಿಮ್ಮನ್ನು ಕರೆತಂದು ಜೈಲಿನ ಒಳಕ್ಕೆ ಕಳುಹಿಸುತ್ತಿದ್ದಂತೆ ಕನಸುಕಂಡೆ ಎಂದ. ಬಂದೇ ಇದ್ದೀರಿ ಎಂದರು, ಅವರಿಗೂ ಬಟ್ಟೆ ತೆಗೆಸಿ ಸ್ನಾನಕ್ಕೆ ನೀರು ಸೇದಿಕೊಟ್ಟೆವು, ಕೆ. ಚಂಗಲರಾಯರೆಡ್ಡಿ ಯವರ ತಂಡದಲ್ಲಿ ಎಚ್. ಸಿ, ದಾಸಪ್ಪ, ಡಿ. ಎಸ್ ಮಲ್ಲಪ್ಪ, ವಿ. ಎಸ್ ನಾರಾಯಣ ರಾವ್, ಎ. ಜಿ. ಬಂದೀಗೌಡ, ಕೆ. ಪಟ್ಟಾಭಿರಾಮನ್, ಡಾ॥ ಸಂಪಂಗಿರಾಮನ್, ವಾಸಪ್ಪ ಗೋಗಿ, ಎಸ್. ರಂಗರಾಮಯ್ಯ, ತಾಳಿಕೆರೆ ಸುಬ್ರಹ್ಮಣ್ಯ, ವಿ. ವೆಂಕಟಪ್ಪನವರು ಮತ್ತು ಕೆ. ಟಿ, ಭಾಷ್ಯಂ ಇದ್ದರು. ಈ ಹಿರಿಯರನ್ನೆಲ್ಲಾ ನೋಡಿದ ನನಗೆ ಸಜ್ಜನ ಸಲ್ಲಾಪಕ್ಕೆ ದೇವರು ಎಡೆಮಾಡಿಕೊಟ್ಟ ಸಂತೋಷ, ಇದಕ್ಕೆ ಉದಾಹರಿಸುವು ದಾದರೆ 'ಶ್ರೀರಾಮಾಯಣ ದರ್ಶನಂ"ನಲ್ಲಿ ಸೀತೆಯನ್ನು ಕಾವಲು ಕಾಯುವ ತ್ರಿಜಟೆಗೆ ಹೇಳಿದ ಮಾತುಗಳನ್ನು ಕೇಳಿ.

''ನಾನುಮೊರ್ವಳಾ ಜೀವರ್ಕಳೊಳ್ : ನಾಂ ಕೃತಜ್ಞೆ ಲಂಕೇಶ್ವರಗೆ !
ನಿನ್ನ ಸೇವಾಭಾಗ್ಯಮೆನಗಾದುದಾತನಿಂ

ನಾನೆಲ್ಲಿ ? ನೀನೆಲ್ಲಿ ? ಲಂಕಾ ಅಯೋಧ್ಯಾಂತರಂ !
ಲಭಿಸುತಿರ್ದುದೆ ನನಗೆ ನಿನ್ನ ದರ್ಶನಮಾ
ದಶಗ್ರೀವಸಾಹಸವಿನಾ ?"

ಅಂತೆಯೆ ನನಗೂ ಈ ದೊಡ್ಡಮಹಾನುಭಾವರ ಕಾವ್ಯಸಲ್ಲಾಪ ಅವರ ಸತ್ಸಂಗ ದೊರೆತುದು ಪೂರ್ವ ಜನ್ಮದ ಪುಣ್ಯಶೇಷ. ಶಿವಮೊಗ್ಗ ಎಲ್ಲಿ ನನ್ನೂರು ಪಾಲಗ್ರಹಾರದ ಅಂತರವೇನು ? ಕಮ್ಮಿಯೆ 150 ಮೈಲುಗಳು. ಈ ಮಹಾನುಭಾವರ ಸತ್ಸಂಗಕ್ಕಾದರು ನನ್ನ ಮೇಲೆ ಮೊಕದ್ದಮೆ ಹೂಡಿದ ಪೋಲೀಸ್ ಇನ್‌ಸ್ಪೆಕ್ಟರಿಗೆ ಚಿರಋಣಿ. ಸರಿಯಾದ ಸಾಕ್ಷ್ಯಾಧಾರಗಳು ಇಲ್ಲದಿದ್ದರೂ ಒಂದೂವರೆ ವರ್ಷ ಶಿಕ್ಷೆಯನ್ನಿತ್ತ ಮಹಾನುಭಾವ ನ್ಯಾಯಾಧೀಶನಿಂದ ನನಗೆ ದೊಡ್ಡವರ ಸತ್ಸಂಗ ದೊರೆತುದು ನನ್ನ ಭಾಗ್ಯ ಎಂದು ಕೊಂಡು ಹಿರಿಹಿಗ್ಗಿದೆ.

ಅಡಿಗೆಯನ್ನು ಸ್ವತಃ ನಾವೇ ಮಾಡಿಕೊಳ್ಳುವುದೆಂದು ತೀರ್ಮಾನಿಸಿ ನಳಪಾಕ ಎಂಬ ಅಡಿಗೆಗೆ ಸಂಬಂಧಪಟ್ಟ ಪುಸ್ತಕ ತಂದಿದ್ದರು. ಕೆ. ಟಿ. ಭಾಷ್ಯಂ. ಎ. ಜಿ. ಬಂದೀಗೌಡರು ಒಬ್ಬರು ಪುಸ್ತಕ ನೋಡಿ ಇಂತಿಷ್ಟು ವೇಳೆಗೆ ಇಂತಿಷ್ಟು ತರಪೆ ಸಾಮಾನು ಹಾಕಬೇಕು ಎಂದು ಓದಿ ಹೇಳಿ ಅಡಿಗೆಯನ್ನು ಮಾಡುವ ಕ್ರಮ ಅನುಸರಿಸಲಾಯ್ತು. ಹತ್ತು ಹನ್ನೊಂದು ತಿಂಗಳಿಂದ 300 ಜನರ ಲವಾಜಮೆಯಿಂದ ಅಧಿಕವಾಗಿ ಹಾಕುತ್ತಿದ್ದ ತಾಜಾ ಸೊಪ್ಪು ಮತ್ತು ತರಕಾರಿಯಿಂದ ಸಾಂಬಾರು ಚೆನ್ನಾಗಿರುತ್ತಿತ್ತು, ಒಂದು ದಿನ ಕ್ರಿಮಿನಲ್ ಗುಮ್ಮಿಯಿಂದ ತಂದ ಸಾಂಬಾರನ್ನು ಹಾಕಿಕೊಂಡು ಊಟ ಮಾಡುವುದನ್ನು ಕೆ. ಟಿ. ಭಾಷ್ಯಂ ನೋಡಿ ತಾವು ಸಾಂಬಾರನ್ನು ಕೇಳಿದರು. ಕೊಟ್ಟೆ. ನಾಳೆಯಿಂದ ಸಾಂಬಾರಿನ ಪದಾರ್ಥಗಳನ್ನು ಅಂದಾನಿ ಗುಮ್ಮಿಗೆ ·ಕೊಟ್ಟು ನಮಗಾಗುವಷ್ಟು ಸಾಂಬಾರನ್ನು ತೆಗೆದುಕೊಳ್ಳೋಣ ಎಂದರು.

ಪ್ರತಿ ಶನಿವಾರ ಮಾಂಸದ ಊಟ. ಅಂದು ಮಾತ್ರ ಕೆ. ಟಿ. ಭಾಷ್ಯಂ ಅವರು ಮೂರು ಜನಕ್ಕೆ ಸಾಂಬಾರು ಮಾಡಿಕೊಳ್ಳುತ್ತಿದ್ದರು. ಕ್ರಿಮಿನಲ್ ಖೈದಿಗಳಿಗೆ ಮಾಂಸಕ್ಕಿಂತ ಬೀಡಿ ಅಗತ್ಯವಾಗಿತ್ತು. ಮಾಂಸವನ್ನು ಖೈದಿಗಳಿಗೆ ತಲಾ ಹೆಚ್ಚಾಗೆ ಸರ್ಕಾರ ಮ್ಯಾನ್ಯುಯಲ್‌ನಲ್ಲಿ ಮಂಜೂರು ಮಾಡಿದೆ ಎಂದು ನನ್ನ ಅನಿಸಿಕೆ. ಕ್ರಿಮಿನಲ್ ಖೈದಿಗಳು ಮಾಂಸದ ತುಂಡೊಂದಕ್ಕೆ ಬೀಡಿ ಬದಲಾಯಿಸಿಕೊಳ್ಳುವದು ವಾಡಿಕೆ.

ಕಾರ್ಯಕಾರಿ ಮಂಡಲಿ ಸದಸ್ಯರುಗಳು ಬಂದ 15 ದಿನಗಳೊಳಗಾಗಿ ಸಂಜನ ಗೂಡಿನ ವಿಶ್ವೇಶ್ವರಗೌಡರು, ಮಳವಳ್ಳಿ ಕೆ.ವಿ. ವೀರಪ್ಪನವರು. ಬೇಲೂರು ಬಿ. ಎನ್. ಬೋರಣ್ಣಗೌಡರು, ಮೈಸೂರಿನಿಂದ ಚಾಮುಂಡಯ್ಯನವರು, ಎ. ರಾಮಣ್ಣನವರು. ಟಿ. ಎಸ್. ಸುಬ್ಬಣ್ಣನವರು, ಸೂರ್ಯನಾರಾಯಣರಾಯರು, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಕೃಷ್ಣಮೂರ್ತಿ ಮತ್ತು ಸ್ನೇಹಿತರು, ತುಮಕೂರಿನ ಕ್ಯಾತಸಂದ್ರದ ಕೆ. ಎಸ್. ನರಸಿಂಹೇಗೌಡರು, ಕುಂಡಲಗಿರಿಯವರು, ಮಾಯಸಂದ್ರದ ಮಾ. ಕೃ. ನರಸಿಂಹಯ್ಯ

ನವರು, ಅಮೃತೂರಿನಿಂದ ಶೇಷಾದ್ರಿ ಅಯ್ಯಂಗಾರ್, ಸಂಪತ್ತಯ್ಯಂಗಾರ್ ಮಿತ್ರರು ಹೀಗೆ 150 ಮಂದಿಯನ್ನು ದಿಢೀರನೆ ಶಿವಮೊಗ್ಗ ಜೈಲಿಗೆ ಕರೆತಂದರು. ಜಾಗದ ಅಭಾವ ಹೇಳತೀರದಾಯಿತು. 50 ಮಂದಿ ಉಳಿಸಿಕೊಂಡು 100 ಮಂದಿಯನ್ನು ತೀರ್ಥಹಳ್ಳಿ ಕೆತ್ತಾನೆ ಗಂಧದ ಕೋಟೆಯನ್ನು ತಾತ್ಕಾಲಿಕ ಕಾರಾಗೃಹವಾಗಿ ನಿರ್ಮಿಸಿ ಅಲ್ಲಿಗೆ ಕರೆದೊಯ್ದರು.

ಕೆ. ಟಿ. ಭಾಷ್ಯಂ ಅವರು ಅಡಿಗೆ ಮಾಡಿ ಎಲ್ಲರ ಸ್ನಾನ ಮುಗಿದ ಮೇಲೆ ಪ್ರಾರ್ಥನಾ ಸಭೆಯನ್ನು ಗಾಂಧೀಜಿ ಅವರ ಪ್ರಾರ್ಥನಾ ರೀತಿ ನಡೆಸುತ್ತಿದ್ದರು. ಊಟ ವಾದ ಮೇಲೆ ಸಭೆ ಸೇರುವುದು. ಪಯಸ್ಕರ ಮತದಾನ ಪದ್ಧತಿ ಎಂದರೇನು ? ಅದರಿಂದ ಆಗುವ ಸಾರ್ಥಕ್ಯ, ಸ್ವರಾಜ್ಯ ಹೋರಾಟ, ಅದಕ್ಕೆ ಪೂರಕವಾದ ಸವಲತ್ತು ಗಳು, ಪಾನನಿರೋಧ, ಅಸ್ಪೃಶ್ಯತೆ ಅದರಿಂದ ಆಗುವ ಅನಾಹುತ, ಹರಿಜನೋದ್ಧಾರ ಹೀಗೆ ನಾನಾ ಮುಖಗಳನ್ನು ಕುರಿತು ಕಾರ್ಯಕರ್ತರಿಗೆ ಪ್ರತಿದಿನ ಒಬ್ಬೊಬ್ಬ ಮುಖಂಡ ಒಂದೊಂದು ವಿಷಯ ಕುರಿತು ಮಾತನಾಡುತ್ತಿದ್ದರು. ಮಧ್ಯಾಹ್ನ 3 ಘಂಟೆಗೆ ಸಭೆ ಸೇರುತ್ತಿತ್ತು. ಆ ಸಭೆಯಲ್ಲಿ ಕಾರ್ಯಕರ್ತರು ಬೆಳಗಿನ ಕಾರ್ಯಕ್ರಮ ವಿಷಯದಲ್ಲಿ ಹೀಗೆ ತಾವೇ ರೂಪುರೇಷೆಗಳನ್ನು ಕಲ್ಪಿಸಿಕೊಂಡು ಮಾತನಾಡಿಸುತ್ತಿದ್ದರು. ಸಮಗ್ರ ವಾಗಿ ಅಂಕಿಅಂಶಗಳಿಂದ ಕೂಡಿದ ಸ್ವರಾಜ್ಯ ಕಲ್ಪನೆಗೆ "Liberty in Modern State" ಎನ್ನುವ ಪೆಂಗ್ವಿನ್ ಬುಕ್ ಸೀರೀಸ್ ಕೃತಿಯಿಂದ ಕೆ. ಟಿ. ಭಾಷ್ಯಂ ಅವರು ನಾನಾ ವಿಚಾರಗಳನ್ನು ವಿವರಿಸುತ್ತಿದ್ದರು. ವಿ. ಎಸ್. ನಾರಾಯಣರಾಯರು ಗಾಂಧೀಜಿ ವಿಚಾರಧಾರೆಯಿಂದ ಸತ್ಯ, ಅಹಿಂಸಾದಿಗಳ ಪಾಲನೆ ಹೇಗೆ ಸಾಧ್ಯ ಎಂಬ ವಿಚಾರ ಕುರಿತು ಮಾತನಾಡುತ್ತಿದ್ದರು. ಎಚ್. ಸಿ. ದಾಸಪ್ಪನವರು ಐರ್ಲೆಂಡಿನಿಂದ ತರಿಸಿದ್ದ ಆಂಗ್ಲ ಭಾಷಾ ಕೃತಿ "Agricultural organisation in Irlend" ಪುಸ್ತಕದಿಂದ ಸುಮಾರು ವಾರ ಕಾಲ ಸಹಕಾರ ನೀತಿ ಮತ್ತು ಸಹಕಾರ ತತ್ತ್ವದ ಆಧಾರದ ಮೇಲೆ ರೈತ ಸಂಘಟನೆ, ರೈತ ಮತ್ತು ಸರ್ಕಾರದ ಮಧ್ಯ ಸಹಕಾರ ಸಂಘದ ಕರ್ತವ್ಯ ನಿರ್ವಹಣೆ ಹೀಗೆ ಸಹಕಾರದ ನಾನಾ ಮಗ್ಗಲುಗಳನ್ನು ಕುರಿತು ವ್ಯಾಖ್ಯಾನ ಮಾಡಿದರು. ದಾಸಪ್ಪ ನವರು ವಿವರಿಸಿದ ಸಹಕಾರ ರೀತಿ ನೀತಿ ಚೆನ್ನಾಗಿ ಮನವರಿಕೆಯಾಯ್ತು.

ದಿನವೂ ನಾನು ಸಂಜೆ ಸಭೆಯಲ್ಲಿ ತಪ್ಪದೆ ಭಾಗವಹಿಸಿ ಮಾತನಾಡುತ್ತಿದ್ದೆ. ಕಾರ್ಯಕರ್ತಸಭೆ ವಿಷಯ ಮಂಡನೆ ವಿವರಣೆಯಲ್ಲಿ ನನಗೆ ಅಗ್ರಸ್ಥಾನದೊರೆಯುತ್ತಿತ್ತು. ಕ್ಯಾತಸಂದ್ರದ ನರಸಿಂಹಯ್ಯ, ಭೀಮಯ್ಯ ಅವರುಗಳು ಉತ್ತಮ ಮಟ್ಟದಲ್ಲಿ ಕಾರ್ಯ ನಿರೂಪಣೆ ಮಾಡಿಕೊಳ್ಳುತ್ತಿದ್ದರು. ನನಗೆ ಬಹಳವಾಗಿ ಮನಸಿನಾಳಕ್ಕೆ ಇಳಿದ ವಿಚಾರ ದಾಸಪ್ಪನವರು ವಿವರಿಸಿದ ಸಹಕಾರ ನೀತಿ. ಸಂಜೆ ಸಭೆಯಲ್ಲಿ ಸಹಕಾರಛತ್ರದಡಿ ಏನೆಲ್ಲ ಸಾಧನೆ ಮಾಡಲು ಸಾಧ್ಯ. ಇದನ್ನು ಕಾರ್ಯರೂಪಕ್ಕೆ ತರುವುದು ಹೇಗೆ ಮುಂತಾಗಿ ನೀಡಿದ ವಿವರಣೆ ದಾಸಪ್ಪನವರಿಗೆ ತುಂಬ ಹಿಡಿಸಿತು. ಶಿವಮೊಗ್ಗ

ಜೈಲಿಗೆ ಬಂದು 1½ ವರ್ಷದಲ್ಲಿ ಸುಮಾರು 5 ತಿಂಗಳ ಕಾಲ ನಾನು ದಾಸಪ್ಪನವರು ಸಂಜೆ ಗಾಳಿ ಸೇವನೆಯಲ್ಲಿ ಸಹಕಾರದ ವಿಚಾರವಲ್ಲದೆ ಬೇರೆ ವಿಚಾರ ಪ್ರಸ್ತಾಪವೇ ಮಾಡಲಿಲ್ಲ. ಜೊತೆಗೆ ಸಹಕಾರ ತತ್ವ ಸ್ಥಾಪನೆಗೆ ಮಂಡ್ಯವನ್ನೇ ಅಡಿಪಾಯ ಮಾಡಿ ಕೊಳ್ಳುವ ಆಲೋಚನೆಯನ್ನು ಶಿವಮೊಗ್ಗ ಜೈಲಿನಲ್ಲಿ ಕಾರ್ಯರೂಪಕ್ಕೆ ಇಳಿಸಲು ಆಲೋಚಿಸಿದ್ದರು.

1939ನೆಯ ಇಸವಿ ಅಂತ್ಯದಲ್ಲಿ ಮಂಡ್ಯ ಜಿಲ್ಲೆ ನಿರ್ಮಾಣವಾಗಿ 7 ತಾಲ್ಲೂಕು ಗಳನ್ನು ಈ ಜಿಲ್ಲೆಗೆ ಸೇರಿಸಲಾಗಿತ್ತು. ಮಂಡ್ಯ ಹೊಸ ಜಿಲ್ಲೆಗೆ 1940ನೇ ಇಸವಿ ಮೇ ತಿಂಗಳು ಹೊಸ ಜಿಲ್ಲಾ ಬೋರ್ಡಿನ ಚುನಾವಣೆ ನಡೆದುವು. ನನಗೆ ಮೇ ತಿಂಗಳು 13ರಂದು ಶಿವಮೊಗ್ಗ ಜೈಲಿನಿಂದ ಬಿಡುಗಡೆಯಾಯ್ತು, ಎಚ್. ಕೆ. ವೀರಣ್ಣ ಗೌಡರು ಚುನಾವಣಾ ಪ್ರಚಾರಕ್ಕೆ ಬಿಡುಗಡೆ ಆಗುವ ಕಾರ್ಯಕರ್ತರನ್ನು ಸೀದಾ ಮದ್ದೂರಿಗೆ ಕಳುಹಿಸುವಂತೆ ದಾಸಪ್ಪನವರಿಗೆ ಕಾಗದ ಬರೆದಿದ್ದರು. ಆ ಕಾಗದದಂತೆ ನಾನು ಮೊದಲ ದಿನ ರಾತ್ರಿ ಭದ್ರಾವತಿಯಲ್ಲಿದ್ದು ಬೆಳಗ್ಗೆ ಎದ್ದು ಸೀದಾ ರೈಲಿನಲ್ಲಿ ಹೊರಟು ಮದ್ದೂರಿಗೆ ರಾತ್ರಿ ತಲುಪಿದೆ, ಶಿವಪುರದಲ್ಲಿ ಪಿ. ತಿರುಮಲೇಗೌಡರ ಮನೆ ಯಲ್ಲಿ ಕಾರ್ಯಕರ್ತರ ಕ್ಯಾಂಪ್ ಹಾಕಲಾಗಿತ್ತು. ನನಗೆ ಈ ಮೊದಲೇ ಎಲ್ಲರು ಪರಿಚಿತ ರಾಗಿದ್ದರು. ಮದ್ದೂರು ತಾಲ್ಲೂಕು ವಿನಃ ಇತರ 6 ತಾಲ್ಲೂಕುಗಳಲ್ಲಿ ಕಾಂಗ್ರೆಸ್ ಉಮೇದುವಾರರು ಅವಿರೋಧವಾಗಿ ಆಯ್ಕೆ ಆಗಿದ್ದರು. ಸರ್ ಎಂ. ಮಿರ್ಜಾ ಅವರಿಗೆ ಈ ಅವಿರೋಧ ಆಯ್ಕೆಯಿಂದ ಕಣ್ಣು ಕೆಂಪಗಾಯ್ತು. ಎಂ. ಸಿ. ಲಿಂಗೇಗೌಡರು ಮತ್ತು ಎಸ್. ಸಿ. ಮಲ್ಲಯ್ಯನವರು ಕಾಂಗ್ರೆಸ್ ವಿರೋಧಿ ಗುಂಪಿನ ಸ್ಪರ್ಧಿಗಳಾಗಿದ್ದರು. ಕಾಂಗ್ರೆಸ್ ಉಮೇದುವಾರರಾಗಿ ಪಿ. ತಿರುಮಲೇಗೌಡರು ಮತ್ತು ಕುದರಗುಂಡಿ ಕೆ. ಮರಿಯಪ್ಪನವರು. ಸಾವಿರಾರು ಜನ ಕಾರ್ಯಕರ್ತರು. ಎತ್ತ ತಿರುಗಿ ದರು ತ್ರಿವರ್ಣ ಧ್ವಜ ಹಾರಾಡುವ ಸೈಕಲ್‌ಗಳು. ಬಿಳೀ ಗಾಂಧೀಟೋಪಿಧಾರಿ ಕಾರ್ಯಕರ್ತರು. ಎಡೆಯಿಲ್ಲದಂತೆ ಕಾಂಗ್ರೆಸ್ ಉಮೇದುವಾರರ ಪರ ಪ್ರಚಾರ ಮಾಡುತ್ತಿದ್ದರು,

ಎಚ್. ಕೆ. ವೀರಣ್ಣಗೌಡರು ಮಲೇರಿಯಾ ಜ್ವರದಿಂದ ಹಾಸಿಗೆ ಹಿಡಿದಿದ್ದರು. ಚುನಾವಣೆಗೆ ಓಡಾಡಲು ಅವರಿಂದ ಸಾಧ್ಯವೇ ಆಗಲಿಲ್ಲ. ಚುನಾವಣೆ ನಾಲ್ಕು ದಿನ ಇದೆ ಅನ್ನುವಾಗ ವೀರಣ್ಣಗೌಡರು ಏನಯ್ಯ ಜವರಾಯಿಗೌಡ ಸೋಮನಹಳ್ಳಿಗೆ ಓಟು ಕೇಳಲು ಹೋಗಿದ್ದೀರಾ ? ಎಂದು ಕೇಳಿದರು. ಇಲ್ಲ ಸರ್ ಯಾರು ಹೋದಂತಿಲ್ಲ ಎಂದೆ. ನೀನು ಮತ್ತು ಗೆಜ್ಜಲಗೆರೆ ಜಿ. ತಿಮ್ಮಯ್ಯ ಮನೆಮನೆಗೆ ಹೋಗಿ ಚೀಟಿ ಕೊಟ್ಟು ಬನ್ನಿ. ಆ ಊರಿನಲ್ಲೂ ನಮಗೆ ಓಟಿನ ಪಾಲಿದೆ ಎಂದರು. ನಾನು ಜಿ. ತಿಮ್ಮಯ್ಯ 9 ಘಂಟೆಗೆ ಹೊರಟು ಸೋಮನಹಳ್ಳಿ ¾ ಊರಿನ ಮನೆಗಳಿಗೆ ಓಟಿನ ಚೀಟಿಗಳನ್ನು ಹಂಚಿದ್ದೆವು. ಎಸ್. ಸಿ. ಮಲ್ಲಯ್ಯನವರ ಅಣ್ಣಂದಿರಾದ ಕೆಂಚೇಗೌಡರು

ಇಬ್ಬರನ್ನು ಕಳುಹಿಸಿ ಎಂ. ಸಿ. ರೋಡಿಗೆ ಕರೆಸಿಕೊಂಡರು. ಯಾರ್‍ರೋ ನೀವು ಈ ಊರಲ್ಲಿ ಚೀಟಿ ಹಂಚಲು. ಚೀಟಿ ಹಂಚಲು ಹೇಳಿದವರ್‍ಯಾರು ಎಂದು ಕೇಳಿದರು. ನೀವು ಎಲ್ಲ ಊರುಗಳಿಗೆ ಬಂದು ಹಂಚುವಂತೆ ನಾವು ಹಂಚಲು ಬಂದಿದ್ದೇವೆ ಎಂದೆವು. ಎಲಾ ಮುಂಡೇವ ಎಷ್ಟೋ ನಿಮಗೆ ತಲೆಹರಟೆ ಎಂದವರೆ ಕರೆಯೋ ಇಲ್ಲಿ ಆ ಹೊಲೆಯನ್ನ ಎಂದು ಯಾರನ್ನೊ ಕರೆಸಿದರು. ಇವರ ಟೋಪಿ ಕಿತ್ತುಕೊಳ್ಳೊ ಎಂದರು. ನಾವು ಟೋಪಿಗಳನ್ನು ಸೈಕಲ್ ಹ್ಯಾಂಡಲಿಗೆ ಹಾಕಿ ಸೈಕಲ್‌ಗಳೆರಡನ್ನು ಕೆಂಚೇಗೌಡರಿಗೆ ಒರಗಿಸಿ ನಿಲ್ಲಿಸಿದೊ. ಹೊಡೆಯೊ ಇವರ ಕಪಾಳಕ್ಕೆ ಎಂದರು. ಆತನು ನನಗೆ ಕಪಾಳಕ್ಕೆ ಹೊಡೆಯುವುದಕ್ಕೂ ವಳಗೆರೆಹಳ್ಳಿ ವೀರಣ್ಣಶೆಟ್ಟರು ನಿಡಘಟ್ಟ ಸಂತೆಗೆ ಹೋಗ್ತ ನಾವಿದ್ದ ಜಾಗಕ್ಕೆ ಬಂದು, ಪರಿಸ್ಥಿತಿ ನೋಡಿ ನೀವು ಶಿವಪುರಕ್ಕೆ ಬನ್ನಿ ನಾನು ವಳಗೆರೆಹಳ್ಳಿಗೆ ಹೋಗಿ ಜನರನ್ನು ಕರೆತರುತ್ತೇನೆಂದು ಸೈಕಲ್ ಹಿಂತಿರುಗಿಸಿ ವೇಗದಿಂದ ಹೊರಟರು. ಜಿ. ತಿಮ್ಮಯ್ಯನ ಕೆನ್ನೆಗೆ ಹೊಡೆಸಲಿಲ್ಲ. ಸೈಕಲ್‌ಗಳೆರಡನ್ನು ಇಬ್ಬರೂ ಅವರ ಮನೆಗೆ ಟೋಪಿಸಹಿತ ಕೊಂಡೊಯ್ದರು.

ಸುಮಾರು ಮಧ್ಯಾಹ್ನ 3 ಘಂಟೆ ಸಮಯಕ್ಕೆ ಎಸ್. ಸಿ. ಮಲ್ಲಯ್ಯನವರು ಟೋಪಿ ಮತ್ತು ಸೈಕಲ್‌ಗಳನ್ನು ಪಿ. ತಿರುಮಲೆಗೌಡರ ಮನೆಗೆ ಕಳುಹಿಸಿ ಅವರ ಅಣ್ಣ ನವರು ಎಸಗಿದ ಕೃತ್ಯಕ್ಕೆ ಅಪಾರ ವ್ಯಸನಪಟ್ಟರೆಂದು ತಿಳಿಯಿತು. ಈ ಪ್ರಕರಣಾನಂತರ ಕಾಂಗ್ರೆಸ್ ವಿರೋಧಿ ಗುಂಪಿನವರ ಸೈಕಲ್‌ಗಳು ಕಾರುಗಳು ಹೋದಲ್ಲಿ ಕಂಡ ಕಂಡಲ್ಲಿ ಚಕ್ರದ ಗಾಳಿಬಿಡುವುದು ಪ್ರಾರಂಭವಾಗಿ ಹೋಯಿತು. ಮಕ್ಕಳು ಗಾಳಿಬಿಡುವ ಕಾರ್ಯಕ್ರಮದಿಂದ ವಿರೋಧಿಬಣದವರಿಗೆ ಬಿಸಿ ತುಪ್ಪ ಬಾಯಿಗೆ ಹಾಕಿಕೊಂಡಂತಾಗಿ ನುಂಗುವ ಹಾಗೂ ಇಲ್ಲ ಉಗಿಯುವ ಹಾಗೂ ಇಲ್ಲದ ಪರಿಸ್ಥಿತಿ ಆಯಿತು. ಅಷ್ಟೇ ಅಲ್ಲ ಕಪಾಳ ಮೋಕ್ಷಾನಂತರ ವಿರೋಧಿ ಬಣದವರ ಚುನಾವಣಾ ಪ್ರಚಾರವೂ ಸಪ್ಪೆ ಯಾಗುತ್ತ ಬಂತು.

ಅರಕೆರೆ ಕೆ. ಪುಟ್ಟಸ್ವಾಮಿ, ಎ. ಸಿ. ಬೈರಪ್ಪ. ಯು. ಕೆಂಚಪ್ಪ. ಹೊಸಕೆರೆ ಎಂ. ಲಿಂಗಯ್ಯ, ಶಿವಪುರದ ದೊಳ್ಳಯ್ಯ, ನಾನು ಮುಂತಾದ ಸುಮಾರು 30 ಕ್ಕು ಹೆಚ್ಚು ಮಂದಿ ಕೆಸ್ತೂರು ಕಡೆಗೆ ಪ್ರಚಾರಕ್ಕೆ ಹೊರಟೆವು. ಹೆಮ್ಮನಹಳ್ಳಿಯ ಬೊಮ್ಮರಸೇಗೌಡರ ಮನೆಯಲ್ಲಿ ಬೆಳಗಿನ ತಿಂಡಿ ತಿಂದೆವು. ಊರಲ್ಲಿ ಚುನಾವಣಾ ಪ್ರಚಾರವನ್ನು ಚುರುಕಿನಿಂದ ನಡೆಸಿದೆವು. ಅಕ್ಕೂರಿನಲ್ಲಿ ಮರುಪಾತೇಗೌಡರು, ಹನುಮಂತಪುರದ ಸ್ವಸ್ತಲಿಂಗೇಗೌಡರು, ಕದಲೂರು ಮರಿಯಪ್ಪ, ಕೆಸ್ತೂರಿನವನಮಾಲ ಶೆಟ್ಟರು ಹೀಗೆ ಹಳ್ಳಿ ಪ್ರಮುಖರು ನಮ್ಮ ಬೆಂಬಲಕ್ಕಿದ್ದರು. ನಾವು ಹನುಮಂತ ನಗರದಿಂದ ಹೆಮ್ಮನ ಹಳ್ಳಿ ಮುಂದಿನ ರಸ್ತೆ ಪಕ್ಕದ ಯರಗನಹಳ್ಳಿಗೆ ಬಂದೆವು. ನಮ್ಮ ಚುನಾವಣಾ ಪೋಸ್ಟರನ್ನು ಅರಳಿಮರಕ್ಕೆ ಅಂಟಿಸಲಾಗಿತ್ತು. ಆ ಪೋಸ್ಟರಿಗೆ ಯಾರೋ ಸಗಣಿ ಹೊಡೆದಿದ್ದು ರೇಜಿಗೆಯಾಗಿತ್ತು. ಆ ಮರದ ಬಳಿಯೇ ಎರಡು

ಮೂರು ಜನರ ಗುಂಪೊಡನೆ ಹೆಮ್ಮನ ಹಳ್ಳಿ ಕೆಂಪೊಟ್ಟೇಗೌಡರು ನಿಂತಿದ್ದರು. ಕೆ. ಪುಟ್ಟಸ್ವಾಮಿ, ಕೆಂಚಪ್ಪ ಅವರುಗಳು ಹತ್ತಿರ ಇದ್ದ ಎತ್ತಿನ ಗಾಡಿಯ ಚಕ್ರದಿಂದ ಬಂಡಿಕಪ್ಪು ತೆಗೆದು ಅವರ ಹಣೆಗೆ ಮೂರು ನಾಮ ಹಾಕಿದರು. ಗೌಡರು ಭೀಮ ಕಾಯರು. ತಿರುಗಿಬಿದ್ದರೆ ಗತಿ ಏನಪ್ಪ ಎನ್ನುವ ಭಯ ನನಗೆ. ಕೆಂಪೊಟ್ಟೇಗೌಡರು ಅಪ್ಪ ನೀವು ಚಿಕ್ಕವರು ಈತರಹದ ಆಟ ನಿಮಗೆ ಒಳ್ಳೆಯದು ಮಾಡದು. ನನ್ನ ಹಣೆಗೆ ಬರೆದ ಕಪ್ಪಿನಿಂದ ನಿಮಗೆ ಬರುವ ಓಟು ಕಮ್ಮಿಯಾಗುವುದೇ ಹೊರತು ಹೆಚ್ಚಲ್ಲ ಎಂದು ಹಣೆಕಪ್ಪನ್ನು ಅಳಿಸಿ ಕಾಲುವೆಯಲ್ಲಿ ಮುಖ ತೊಳೆದುಕೊಂಡರು. ನಾವು ಮುಂದಕ್ಕೆ ಪ್ರಯಾಣಮಾಡಿದೆವು.

ಮದ್ದೂರು ತಾಲ್ಲೂಕಿನ ಕೊನೆ ಗಡಿವರೆಗೆ ಹೋಗಿ ಪ್ರಚಾರ ಮುಗಿಸಿಕೊಂಡು ರಾತ್ರಿ 7 ಘಂಟೆ ಹಾಗೆ ಹೆಮ್ಮನ ಹಳ್ಳಿಗೆ ಬಂದೆವು. ರಸ್ತೆಯಲ್ಲೆ ಕೆಂಪೊಟ್ಟೇಗೌಡರು ನಿಂತಿದ್ದರು. ನಮ್ಮನ್ನು ನೋಡಿದ ಗೌಡರು ಇಳಿಯಿರಯ್ಯ ದಣಿದಿದ್ದೀರಿ ಊಟಮಾಡಿ ಹೋಗಿ ಎಂದರು. ನಮಗೆ ಗಾಬರಿ. ಬೆಳಿಗ್ಗೆ ಅವರ ಮುಖಕ್ಕೆ ಕಪ್ಪು ಬಳಿದಿದ್ದೆವು. ಮನೆಗೆ ಕರದುಕೊಂಡು ಹೋಗಿ ಚೆನ್ನಾಗಿ ಇಕ್ಕಿದರೆ ಗತಿ ಏನು ? ಎನ್ನುವ ಗಾಬರಿ. ಬನ್ರಯ್ಯ ನಾನು ನಿಮ್ಮ ಕುಲದವನೆ, ಹಸಿದು ಬಂದಿದ್ದೀರಿ. ಇಲ್ಲಿಲ್ಲದಿದ್ದರು ಶಿವಪುರದಲ್ಲಾದರು ಊಟಮಾಡಬೇಕಲ್ಲ ಎಂದು ಹೇಳಿ ಮನೆಗೆ ಕರೆದುಕೊಂಡು ಹೋದರು. ಹೋಗಿ ಮನೆ ನೋಡುತ್ತೇವೆ. ಮನೆ ಹಜಾರ ಬಹು ದೊಡ್ಡದು, ದೊಡ್ಡ ತೊಟ್ಟಿ ಮನೆ. ಇಂದಿಗೂ ನಾನಂತು ಅಂತಹ ತೊಟ್ಟಿಮನೆ ನೋಡಿಲ್ಲ. ಅವರ ಮನೆ ಜನಕ್ಕೆ ಜೋಡಿಸಿ ಇಟ್ಟಿದ್ದ ಕಂಚಿನ ಗಂಗಳದ ಎತ್ತರ ಮೂರು ನಾಲ್ಕಡಿ ಎತ್ತರವಾಗಿದ್ದುವು. ನಮಗೂ ಕಂಚಿನ ಗಂಗಳದಲ್ಲಿ ಉಣಬಡಿಸಿದರು. ಊಟ ಆದ ಮೇಲೆ ಹೋಗಿ ಬನ್ನಿ ದೇವರು ನಿಮ್ಮನ್ನು ಚೆನ್ನಾಗಿರಿಸಲಿ. ದ್ವೇಷಮಾಡುವುದು ಯಾರಿಗೂ ಒಳ್ಳೆಯದಲ್ಲ ವೆಂದು ಉಪದೇಶ ಮಾಡಿ ಕಳುಹಿಸಿ ಕೊಟ್ಟರು. ಗೌಡರ ಆತ್ಮೀಯತೆ ಕಂಡು ನಾವಂತು ಬೆಕ್ಕಸ ಬೆರಗಾದವು. ಅವರ ಒಳ್ಳೆಯತನಕ್ಕೆ ನಮೋ ನಮಃ ಹೇಳಿ ಬೆಳಗ್ಗೆ ಎದ್ದು ಬೇರೆ ಕಡೆ ಪ್ರಚಾರಕ್ಕೆ ಹೋದೆವು.

ಚುನಾವಣೆ ಹತ್ತಿರವಾದಂತೆ ಕಾಂಗ್ರೆಸ್ ಉಮೇದುವಾರರಿಗೆ ಜಯದ ಖಾತರಿ ಹೆಚ್ಚುತ್ತ ಬಂದಿತು. ವೀರಣ್ಣಗೌಡರು ದಿನದ ಮಟ್ಟಿಗಾದರೂ ಚುನಾವಣಾ ಪ್ರಚಾರಕ್ಕೆ ಬರಲಾಗಲಿಲ್ಲ. ಚುನಾವಣಾ ಪ್ರಚಾರವನ್ನು ಆ ಹಳ್ಳಿಯ ಮಕ್ಕಳೇ ನಿರ್ವಹಿಸಿ ಅಹೋ ರಾತ್ರಿ ಮಕ್ಕಳ ಬಾಯಲ್ಲಿ ನಿಮ್ಮ ಓಟು ಯಾರಿಗೆ ಕಾಂಗ್ರೆಸ್ಸಿಗೆ ಎನ್ನುವ ಕೂಗು ಎಲ್ಲೆಲ್ಲು ಪ್ರತಿಧ್ವನಿಸಿಗೊಳ್ಳುತ್ತಿದ್ದುವು. ಮೇ 30ನೇ ದಿನಾಂಕ ಚುನಾವಣೆ ನಡೆಯಿತು. ದಿನಾಂಕ 31 ಎಣಿಕೆ ಪ್ರಾರಂಭವಾಯಿತು. ಮೇ 31ನೇ ದಿನಾಂಕ ಕಾಂಗ್ರೆಸ್ಸಿಗೆ ಕರಾಳದಿನವಾಗಿ ಪರಿಣಮಿಸಿತು. ಆರೇಳು ದಿನದಿಂದ ನ್ಯೂಮೋನಿಯಾ ಜ್ವರದಿಂದ ನರಳುತಿದ್ದ ಕಾಂಗ್ರೆಸ್ ಉಮೇದುವಾರ ಕೆ. ಮರಿಯಪ್ಪನ ಆರೋಗ್ಯವನ್ನು ಯಾರೂ

ವಿಚಾರಿಸಲೇ ಇಲ್ಲ, ಅಷ್ಟೇ ಅಲ್ಲ ಆತನು ಚುನಾವಣಾ ಪ್ರಚಾರದಲ್ಲಿ ಓಡಾಡುತ್ತಿದ್ದಾನೆಂದು ಭಾವಿಸಿದರು. ಆದರೆ ಆತನು ಜ್ವರದಿಂದ ಮೃತ್ಯು ಪಾಶಕ್ಕೆ ಸಿಕ್ಕಿರುವುದು ಯಾರಿಗೂ ಅರಿವಾಗಲಿಲ್ಲ.

ಚುನಾವಣಾ ಎಣಿಕೆ ಮದ್ದೂರಿನ ತಾಲ್ಲೂಕು ಕಛೇರಿಯಲ್ಲಿ ಪ್ರಾರಂಭವಾಗಿ ಸುಮಾರು 11 ಘಂಟೆ ವೇಳೆಗೆ ಕಾಂಗ್ರೆಸ್ ಉಮೇದುವಾರರಿಗೆ ಮತದಾನದ ಸಂಖ್ಯೆಯಲ್ಲಿ ೩ಮತಗಳು ಬಂದಿದ್ದು ಇಬ್ಬರೂ ಗೆದಿದ್ದರು. ಕೆ. ಮರಿಯಪ್ಪನವರ ಪ್ರಾಣಪಕ್ಷಿ ಹಾರಲು ಸನ್ನದ್ಧವಾಗಿ ನಿಂತಿದೆ. ಕೆ. ಪುಟ್ಟಸ್ವಾಮಿ ಕಾರಿನಲ್ಲಿ ಓಡೋಡಿ ಬಂದು ಕೆ. ಮರಿಯಪ್ಪನ ಕಿವಿಯಲ್ಲಿ ನೀನು ಚುನಾವಣೆಯಲ್ಲಿ ಗೆದ್ದಿದ್ದೀಯ ಎಂದು ಹೇಳಿದರು. ಅವರಿಗೆ ಕೇಳಿತೋ ಇಲ್ಲವೋ ಅಂತು ಮರಿಯಪ್ಪ ಸ್ವರ್ಗಸ್ಥರಾದರು. ಮರಿಯಪ್ಪನವರಿಗಿಂತ ಕಮ್ಮಿ ಮತ ಪಡೆದಿದ್ದ ಎಸ್. ಸಿ. ಮಲ್ಲಯ್ಯನವರು ಮರಿಯಪ್ಪನ ಜಾಗದಿಂದ ಗೆದ್ದರು. ಮರಿಯಪ್ಪನು ನಿಧನವಾದ ಸುದ್ದಿ ಕಾಡ್ಗಿಚ್ಚಿನಂತೆ ಹರಡಿ ಸುಮಾರು 5 ಸಾವಿರಕ್ಕು ಹೆಚ್ಚು ಜನರು ಸೇರಿ ಅಂತ್ಯದರ್ಶನ ಪಡೆದರು. ಜ್ವರದ ತಾಪ ಲೆಕ್ಕಿಸದೆ ವೀರಣ್ಣಗೌಡರು ಎದ್ದು ಬಂದು ಮೃತನ ಅಂತ್ಯದರ್ಶನ ಪಡೆದು ಶ್ರದ್ಧಾಂಜಲಿ ಅರ್ಪಿಸಿದರು. ಮಧ್ಯಾಹ್ನ 3 ಘಂಟೆಗೆ ಅಂತ್ಯಕ್ರಿಯೆ ನಡೆಸಿ ಮೃತರ ಆತ್ಮಕ್ಕೆ ಶಾಂತಿ ಹಾರೈಸಲಾಯ್ತು.

1942ನೇ ಇಸವಿ ಆರಂಭದಿಂದ ಜೈಲಿನಲ್ಲಿದ್ದ ನಾನಾ ಮುಖಂಡರುಗಳನ್ನು ಬ್ರಿಟಿಷರು ಬಿಡುಗಡೆ ಮಾಡುತ್ತ ಬಂದರು. ಗಾಂಧೀಜೀ ಸ್ವಾತಂತ್ರ್ಯ ಹೋರಾಟ ಚುರುಕುಗೊಳಿಸಲು ಸನ್ನದ್ಧರಾದರು. ಪ್ರಪಂಚದ ಎರಡನೇ ಮಹಾಯುದ್ಧವು ಇನ್ನೇನು ಮಂಡ್ಯಕ್ಕೆ ಬಂತಪ್ಪ ಎನ್ನುವಂಥ ಪರಿಸ್ಥಿತಿ. ಮಂಡ್ಯಪಾರ್ಕಿನಲ್ಲಿ ಬಾಂಬು ಬಿದ್ದರೆ ತಲೆಮರೆಸಿಕೊಳ್ಳಲು ಸಾಲಾಗಿ ದೋಣಿಯಂತೆ ಗುಂಡಿಗಳನ್ನು ನಿರ್ಮಿಸಿದರು. ವಿಮಾನಗಳು ಬಂದರೆ ತಲೆಮರೆಸಿಕೊಳ್ಳಲು ಸೈರನ್ ಕೂಗಿಸಿ ಜನರಿಗೆ ತಿಳಿವಳಿಕೆ ನೀಡಲು ತರಬೇತಿ ನೀಡುತ್ತಿದ್ದರು. ಈ ಯುದ್ಧದಲ್ಲಿ ಭಾರತ ಪಾಲ್ಗೊಳ್ಳಲು ಯುದ್ಧಾನಂತರ ಪೂರ್ಣ ಸ್ವರಾಜ್ಯವನ್ನು ಭಾರತಕ್ಕೆ ನೀಡುವ ಭರವಸೆಯನ್ನು ಬ್ರಿಟಿಷರು ನೀಡುವಂತೆ ರಾಷ್ಟ್ರೀಯ ಕಾಂಗ್ರೆಸ್ ಒತ್ತಾಯ ಹೇರಿತು. ಇದಕ್ಕೆ ಬ್ರಿಟಿಷ್ ಸರ್ಕಾರ ಒಪ್ಪಲಿಲ್ಲ. ಈ ಯುದ್ಧದಲ್ಲಿ ಭಾರತೀಯರು ಕೈಗೊಳ್ಳಬೇಕಾದ ಒಗ್ಗಟ್ಟಿನ ತೀರ್ಪಿಗಾಗಿ ಬೊಂಬಾಯಿನ 'ಗೋವೇಲಿಯಾ'ದಲ್ಲಿ ಸಭೆ ಸೇರಿತು. ಭಾರತೀಯರು ಯುದ್ಧದಲ್ಲಿ ಬ್ರಿಟಷರಿಗೆ ನೆರವು ನಿರಾಕರಿಸುವುದು. ಮಹಾತ್ಮ ಗಾಂಧಿ ಅವರು 'ದುಡಿ ಇಲ್ಲವೆ ಮಡಿ' ಎಂಬ ಕಾರ್ಯಕ್ರಮಕ್ಕೆ ಪ್ರತಿ ಭಾರತೀಯನು ಸಹಕರಿಸುವಂತೆ ಕರೆ ನೀಡಿದರು. ಈ ಕರೆಗೆ ಬೆಚ್ಚಿಬೆರಗಾದ ಬ್ರಿಟಿಷ್ ಸರ್ಕಾರಕ್ಕೆ ಹೆಚ್ಚಾಗಿ ಗಾಂಧೀಜೀ ಅವರ 'ಮಾಡು ಅಥವಾ ಮಡಿ' ಬಾಂಬ್ ಹಿಟ್ಲರನ ಅಣುಬಾಂಬಿಗಿಂತ ತೀವ್ರವಾಗಿ ಕಂಡಿತು.

ಗಾಂಧೀಜೀ ಅವರ ಕರೆಗೆ ಓಗೊಟ್ಟು ಭಾರತದ ಲಕ್ಷೋಪ ಲಕ್ಷ ಮಂದಿಯನ್ನು

ರಾತ್ರೋ ರಾತ್ರಿ ಬಂಧಿಸಿ ಕಾರಾಗೃಹವಾಸಕ್ಕೆ ತಳ್ಳಿದರು ಬ್ರಿಟಿಷರು. ಭಾರತಾದ್ಯಂತ ಟೆಲಿಫೋನ್ ತಂತಿ ಕತ್ತರಿಸುವುದು, ಸೇತುವೆಗಳಿಗೆ ಬಾಂಬ್ ಇಡುವುದು, ರೈಲುಕಂಬಿ ಕೀಳುವುದು ಹೀಗೆ ನಾನಾ ರೀತಿ ತೊಂದರೆಗಳನ್ನು ಸರ್ಕಾರಕ್ಕೆ ಸವಾಲಾಗಿ ಜನರು ಒಡ್ಡಿದರು.

ಮೈಸೂರಿನ ಎಲ್ಲ ಜಿಲ್ಲಾಕೇಂದ್ರಗಳಲ್ಲು ಸಹಸ್ರಾರು ಜನರು ಬಂಧನ ವಾಗಿದ್ದರು. ಮಂಡ್ಯದಲ್ಲಿ ಒಬ್ಬನೂ ಬಂಧನವಾಗಲಿಲ್ಲ ಆಗರ್ಭ ಶ್ರೀಮಂತ ಆರಳೆ ಸಂಗಪ್ಪನವರ ಮೊಮ್ಮಗ ಮಂಡ್ಯ ಮುನಿಸಿಪಲ್ ಹೈಸ್ಕೂಲಿನಲ್ಲಿ ಎಂಟೋ ಒಂಭತ್ತನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಶ್ರೀ ವಿ. ಎಸ್. ರಾಜಶೇಖರ್ ಆಗಸ್ಟ್ 10ನೇ ತಾರೀಖು ಸಂಜೆ ನಾಲ್ಕು ಘಂಟೆಗೆ ಬಂದು ಜವರಪ್ಪಗೌಡರೇ ಎಂದು ಕೂಗಿದ. ಕಾಂಗ್ರೆಸ್ ಹುಡುಗರೆಲ್ಲ ಸೇರುತ್ತಿದ್ದುದು ಇಂದು ಸಿನಿಮಾ ಮಾಲೀಕರಾಗಿರುವ ಶ್ರಿ ಎಚ್. ಸಿ. ಚನ್ನಯ್ಯನವರ ಮನೆಯಲ್ಲಿ. ಕೂಗಿದವರು ಯಾರೆಂದು ಬಾಗಿಲು ತೆಗೆದು ಹೊರ ಬಂದೆ. "ಏನ್‌ಸಾರ್ ಇದು, ಮಂಡ್ಯದಲ್ಲಿ ಕಾಂಗ್ರೆಸ್ ಗಲಾಟೆ ಬೇಡವೆ ? ಎಂದ. ಏನು ಮಾಡೋಣವೆಂದು ಆತನ ಸಲಹೆ ಕೇಳಿದೆ. ನೋಡಿ ಒಂದು ಚಿಕ್ಕದಾದ ಬಾವುಟವಿದೆ. ಮುನ್ಸಿಪಲ್ ಹೈಸ್ಕೂಲ್ ಮೇಲೆ ಹಾರಿಸೋಣ" ಎಂದು ಸಲಹೆ ಮಾಡಿದ. ಇಬ್ಬರು ಷರಟುಗಳನ್ನು ಕಳೆದು ಪಂಚೆಗಳನ್ನು ತಲೆಗೆ ಸುತ್ತಿದೆವು. ಹೈಸ್ಕೂಲಿನ ಬೆಟ್ಟರ ಶೆಟ್ಟಿ ಬ್ಲಾಕ್ ರಿಪೇರಿ ಆಗುತ್ತಿತ್ತು. ಅಲ್ಲಿ ಏಣಿ ಇಟ್ಟಿಗೆ ಸಾಮಾನುಗಳಿದ್ದುವು. ಇಬ್ಬರೂ ಕೂಲಿ ಯವರಂತೆ ಮೇಲಕ್ಕೆ ಇಟ್ಟಿಗೆ ಸಾಗಿಸುವಂತೆ ಮೇಲಕ್ಕೆ ಹತ್ತಿ ಬಾವುಟ ಕಟ್ಟಿದೆವು. ನಾವು ಕೆಳಕ್ಕೆ ಇಳಿಯುವ ಸಮಯಕ್ಕೆ ಮೇಸ್ತ್ರಿ ಮಾದಯ್ಯ ಅಲ್ಲಿಗೆ ಬಂದ. "ಇದೇನು ಸ್ವಾಮಿ ಚಡ್ಡಿ ಆಟ" ಎಂದ. ಇದ್ದ ಸಮಾಚಾರ ತಿಳಿಸಿದೆವು. ಆತನಿಗೆ ನನ್ನ ಪರಿಚಯವಿತ್ತು. ಆದರೆ ರಾಜಶೇಖರನ ಪರಿಚಯವಿರಲಿಲ್ಲ. "ಓ ಹೋ ಚೆನ್ನಾಗಿ ಮಾಡಿದ್ದೀರಿ ಪೋಲೀಸರಿಗೆ ಚಳ್ಳೆಹಣ್ಣು ತಿನ್ನಿಸಿ ಕಾಂಗ್ರೆಸ್ ಬಾವುಟ ಹಾರಿಸಿದ್ದೀರಿ" ಎಂದು ಸಂತಸ ಗೊಂಡು ಹೋಗಿ ಬಂದವರಿಗೆಲ್ಲಾ ಬಾವುಟ ತೋರಿಸಿ "ಚಡ್ಡಿ ಹಾಕ್ಕೊಂಡು ಕೂಲಿ ಯವರಂತೆ ನಮ್ಮ ಜವರಪ್ಪ ಬಾವುಟ ಹಾರಿಸಿದ್ದಾರೆ" ಎಂದು ತಿಳಿಸುತ್ತಿದ್ದ

ಪೋಲೀಸ್ ಇನ್‌ಸ್ಪೆಕ್ಟರು ಮೂರ್ತಿ ಎಂಬುವರಿದ್ದರು. ಎಲ್ಲರ ಬಾಯಲ್ಲು ನನ್ನ ಹೆಸರು. ಸೀದಾ ಚನ್ನಯ್ಯನವರ ಮನೆಗೆ ಬಂದು ಕೂಗಿದರು, "ಏನು ಸ್ವಾಮಿ" ಎಂದೆ. ಬನ್ನಿ ಮೈಸೂರಿಗೆ ಹೋಗೋಣ ಯಾರ್‍ಯಾರಿದ್ದೀರಿ ಎಲ್ಲರೂ ಹೊರಗೆ ಬನ್ನಿ ಎಂದರು. ಅರಕೆರೆ ಪುಟ್ಟೇಗೌಡರು ಮತ್ತೆ ರಾವಣಿ ನಂಜಯ್ಯ ಎಂಬುವರು ಸಕ್ಕರೆ ಕಂಪನಿ ಕೆಲಸಗಾರರು ಮತ್ತು ನಾನು ಇದ್ದೆವು. ಪುಟ್ಟೇಗೌಡರು ಈ ದಿನ ನಾನು ಜೈಲಿಗೆ ಬರು ವುದಿಲ್ಲ. ತಲೆಮರೆಸಿಕೊಳ್ಳುತ್ತೇನೆಂದು ತಿಳಿಸಿದರು.

ನಾನು ಇನ್‌ಸ್ಪೆಕ್ಟರಿಗೆ ಹೇಳಿದೆ "ನೋಡಿ ಸ್ವಾಮಿ ಅರಕೆರೆಯ ಬ್ಯಾಚಿನವರು

10 ಘಂಟೆಗೆ ಬರುತ್ತಾರೆ. ಆಮೇಲಿಂದ ಎಲ್ಲರು ಸೇರಿ ಮಧ್ಯಾಹ್ನ ಮೈಸೂರಿಗೆ ಹೋಗೋಣ'' ಎಂದು ಸಲಹೆ ಮಾಡಿದೆ. ''ಬೇಡಿ ಬೇಡಿ ನೀವೊಬ್ಬರಾದರೇನಂತೆ ಜಿಲ್ಲಾಧಿಕಾರಿಗಳು ಬಾವುಟ ಹಾಕಲು ಬಿಟ್ಟಿದ್ದಕ್ಕೆ ಭಾರವಾಗಿದ್ದಾರೆ ನೀವೊಬ್ಬರೇ ಬನ್ನಿ'' ಎಂದು ವ್ಯಾನಿನಲ್ಲಿ ಕೂರಿಸಿಕೊಂಡು ಮೈಸೂರಿಗೆ ಹೊರಟರು. ಮೈಸೂರಿನ ಯಾವ ಬೀದಿ ರಸ್ತೆ ನೋಡಿದರು ಮೆರವಣಿಗೆಯಲ್ಲಿ ಜನರು ಮಹಾರಾಜ ಕಾಲೇಜ್ ಮೈದಾನಕ್ಕೆ ಸಾಗುತ್ತಿದ್ದಾರೆ. ಲಾವಣಿ ವಿಷಕಂಠರಾವ್, ಬಾಳೆಹಣ್ಣು ಅಂಗಡಿ ಎ. ಶಿವಣ್ಣನವರು, ಶಾರದಾಪ್ರಸಾದ್, ಕೋಲಾರದ ಅಬ್ದುಲ್ ಗಫೂರ್. ಎಂ. ಟಿ. ಕೃಷ್ಣಪ್ಪ ಮುಂತಾದ ವರು ಬೊಂಬಾಯಿಗೆ ಹೋಗಿದ್ದು ತಪ್ಪಿಸಿಕೊಂಡು ಮೈಸೂರಿಗೆ ಬಂದಿದ್ದರು. ಮೈದಾನ ದಲ್ಲಿ ಅವರ ಭಾಷಣ ಕೇಳಲು ಜನರು ಲಗ್ಗೆ ಹಾಕುತ್ತಿದ್ದಾರೆ. ಪೋಲೀಸರನ್ನು ಮರೆ ಮಾಚಿ ವ್ಯಾನಿನಿಂದ ಇಳಿದು ಜನರ ಗುಂಪು ಸೇರಿಬಿಟ್ಟೆ. ಗುಂಪಿನಲ್ಲಿ ನನ್ನನ್ನು ಹಿಡಿಯಲು ಅವರಿಗೇಕೋ ಭಯ. ಹೇಳಿದರು, ''ನೋಡಪ್ಪ ಎಲ್ಲಾ ಮುಗಿದ ಮೇಲೆ ನಮ್ಮ ವ್ಯಾನಿಗೆ ಬಂದು ಕುಳಿತರೆ ಜೈಲು ತಲುಪಿಸಿ ಹೋಗುತ್ತೇವೆ'' ಎಂದು, ವ್ಯಾನನ್ನು ಮಹಾರಾಜ ಕಾಲೇಜತ್ತ ಓಡಿಸಿಕೊಂಡು ಹೋದರು. ಲಕ್ಷಾಂತರ ಜನರು. ಎತ್ತ ನೋಡಿದರು ಗಾಂಧಿ ಟೋಪಿಗಳ ಶ್ವೇತಸಾಗರ. ವಿಷಕಂಠರಾವ್ ಲಾವಣಿ ಹಾಡಿದನಂತರ ನನ್ನನ್ನೇ ಭಾಷಣ ಮಾಡಲು ಕರೆದರು. ಕುವೆಂಪು ಅವರ ಕವನ ನಡೆ ಮುಂದೆ ನಡೆ ಮುಂದೆ ಜಗ್ಗದೆಯೆ ಕುಗ್ಗದೆಯೆ. ಮುಂತಾಗಿ ಸತ್ಯಾಗ್ರಹಿ, ಸಭ್ಯತಾ ಮನುಷ್ಯ ಕವನಗಳನ್ನು ಹೇಳಿ ವಿಶ್ರಮಿಸಿದೆ. ಭಾಷಣಕಾರರುಗಳನ್ನು ದಸ್ತಗಿರಿ ಮಾಡಲಾಯ್ತು. ನನ್ನನ್ನು ಮೈಸೂರು ಪೋಲೀಸರು ದಸ್ತಗಿರಿ ಮಾಡಿದರು. ನಾನು ಇದ್ದ ಸಂಗತಿ ತಿಳಿಸಿದೆ. ಮಂಡ್ಯ ವ್ಯಾನಿಗೆ ಕಳುಹಿಸಿದರು. ಅಂತು ಮಧ್ಯಾಹ್ನ ಮೂರು ಘಂಟೆ ಸಮಯಕ್ಕೆ ಮೈಸೂರು ಜೈಲು ಸೇರಿದೆವು. ಊಟ ತಿಂಡಿ ಸಿದ್ಧವಾಗಿ ಕಾಯ್ದಿತ್ತು. ಜೈಲಾಗಲೆ ಭರ್ತಿಯಾಗಿ ಬೆಂಗಳೂರು ಶಿವಮೊಗ್ಗ ಹಾಸನ ಮುಂತಾದ ಜೈಲುಗಳಿಗೆ ಜನರನ್ನು ಹಂಚಲಾಗುತ್ತಿತ್ತು. ನಾನು ಬೆಂಗಳೂರು ಸೆಂಟ್ರಲ್ ಜೈಲಿಗೆ ಹೋಗಲು ಕೇಳಿಕೊಂಡೆ. ಸುಮಾರು 600 ಜನ ಡೆಟಿನ್ಯೂಗಳನ್ನು ಕರೆದುಕೊಂಡು ಬೆಂಗಳೂರಿಗೆ ಸ್ಪೆಷಲ್ ಟ್ರೈನ್ ಸಂಜೆ 6 ಘಂಟೆಗೆ ಹೊರಟಿತು. ರಾತ್ರಿ 10 ಘಂಟೆ ಆದರೂ ಬೆಂಗಳೂರು ತಲುಪಲು ಆಗದಂತೆ ಹಜ್ಜೆ ಹಜ್ಜೆಗೆ ಚೈನ್ ಎಳೆಯುತ್ತ ಕುಚೇಷ್ಟೆಯಲ್ಲಿ ತೊಡಗಿದ್ದೆವು. ಜಯಕಾರಗಳು ದಿಗಂತವನ್ನು ಮುಟ್ಟುವಂತಿದ್ದುವು.

ಜೈಲಿಗೆ ಹೋಗಿ ನೋಡಿದರೆ, ವಿದ್ಯಾರ್ಥಿಗಳ ತಂಡೋಪ ತಂಡಗಳು ಸಾಲಾಗಿ ವ್ಯಾನುಗಳಲ್ಲಿ ಬರುತ್ತಿವೆ. ಜೈಲಿನೊಳಗಡೆ ನೋಡಿದರೆ ಕುಳಿತುಕೊಳ್ಳಲು, ನಿಲ್ಲಲು ಸಾಲದ ಜಾಗ. ಅಧಿಕಾರಿಗಳಿಗೆ ಜಾಗದ ಸಮಸ್ಯೆ ಬಿಡಿಸಲಾರದ ಸಮಸ್ಯೆ ಆಯಿತು. ಹೊರಗಿನಿಂದ ಪೋಲೀಸರು ಲೆಕ್ಕವಿಲ್ಲದಂತೆ ಜನರನ್ನು ವ್ಯಾನುಗಳಲ್ಲಿ ತುಂಬಿ ತರುತ್ತಿದ್ದಾರೆ. ಅವರ ಊಟೋಪಚಾರಕ್ಕೆ ಸಿಕ್ಕಿ ಸಿಕ್ಕಿದ ಹೊಟೇಲುಗಳಿಂದ ಸಿಕ್ಕಿದ ಸಿಹಿ,

ಕಾರ ತಿಂಡಿಗಳ ಪೊಟ್ಟಣಗಳು, ದೋಸೆ ಇಡ್ಲಿಗಳು ಹೀಗೆ ಏನೆಂದರೆ ಅಂಥ ತಿಂಡಿ ತಿನಿಸು ಗಳನ್ನು ತುಂಬಿ ತರುವ ವ್ಯಾನ್‌ಗಳು. ನೋಡಿದವರಿಗೆ ಭ್ರಮನಿರಸನ ಉಂಟುಮಾಡುವ ಸನ್ನಿವೇಶವಾಗಿತ್ತು.

ದಿವಂಗತ ಎಚ್. ಕೆ. ವೀರಣ್ಣಗೌಡರ ಮುಖಂಡತ್ವದಲ್ಲಿ ಸುಮಾರು 800 ಮಂದಿ ಡೆಟಿನ್ಯೂಗಳನ್ನು ಬೆಂಗಳೂರಿಗೆ ರೈಲು ಮತ್ತು ಪೋಲೀಸ್ ವ್ಯಾನುಗಳಲ್ಲಿ ಸಾಗಿಸುವ ವ್ಯವಸ್ಥೆ ಮಾಡಿದರು. ರಾತ್ರಿ ಭೋಜನಾನಂತರ ವ್ಯಾನುಗಳಲ್ಲಿ ಕೆಲವರು ಹೊರಟೆವು. ಮೈಸೂರು ಬೆಂಗಳೂರು ರಸ್ತೆಯಲ್ಲಿ ಸಿಗುವ ಹಳ್ಳಿಗಳ ಜನರು ಇಡೀ ರಾತ್ರಿ ಎಚ್ಚರದಿಂದಿದ್ದು ವ್ಯಾನುಗಳಲ್ಲಿ ಸಾಗುವ ಕಾಂಗ್ರೆಸ್ ಕಾರ್ಯಕರ್ತರುಗಳಿಗೆ ಜಯಕಾರಗಳೊಂದಿಗೆ ಶುಭ ಹಾರೈಸುತ್ತಿದ್ದರು. ರಾತ್ರಿ 12 ಘಂಟೆ ಸಮಯಕ್ಕೆ ವ್ಯಾನುಗಳು ತಲುಪಿದುವು. ಬೀದಿಗಳಲ್ಲಿ ಹೆಸರಿಗೆ ನರಪಿಳ್ಳೆ ಇಲ್ಲ. ಸಾಲಾಗಿ ಅಲ್ಲಲ್ಲಿ ಕಾಯ್ದುನಿಂತ ಪೋಲೀಸರು, ಸೆಂಟ್ರಲ್ ಜೈಲಿಗೆ ಸೇರಿದಂತೆ ಒಂದು ಕಟ್ಟಡದ ನಿರ್ಮಾಣಕಾರ್ಯ ನಡೆಯುತ್ತಿತ್ತು. ಪೂರ್ತಿ ಕೆಲಸವಾಗ ದಿದ್ದ ಹಾಸ್ಟೆಲ್ ಬಿಲ್ಡಿಂಗ್‌ನ್ನು ಜೈಲಿಗೆ ಸೇರಿಸಿಕೊಂಡಂತೆ ಎತ್ತರದ ಕಾಂಪೌಂಡು ಕೆಲಸ ರಾತ್ರಿಯೂ ನಡೆಯುತ್ತಿತ್ತು. ಆ ಕೆಲಸ ಪೂರ್ತಿ ಆಗದಿದ್ದರೇನಂತೆ ಸ್ವಂತ ಖುಷಿ ಯಿಂದ ಜೈಲಿಗೆ ಬಂದ ನಾವು ಜೈಲಿಂದ ಕದ್ದು ಹೋಗುವ ಪ್ರಶ್ನೆ ಬಾರದಷ್ಟೆ? ಬಾಗಿಲು ಕಿಟಕಿಗಳಿಲ್ಲದ ಆ ಕಟ್ಟಡದಲ್ಲೇ ನಮ್ಮನ್ನು ಇಳಿಸಿ ಮಲಗಲು ವ್ಯವಸ್ಥೆ ಮಾಡಿ ದರು. ನಮ್ಮನ್ನು ಸುದರಾಯಿಸಲು ಹೆಣಗಾಡಿದ ಆ ಅಧಿಕಾರಿಗಳನ್ನು ನೋಡಿ ನಮಗೆ ಅಯ್ಯೋ ಪಾಪ ಎನ್ನಿಸುತ್ತಿತ್ತು. ಸೆಂಟ್ರಲ್ ಜೈಲಿನಲ್ಲಿ ಸುಮಾರು ನಾಲ್ಕು ಸಾವಿರಕ್ಕು ಹೆಚ್ಚು ಡೆಟಿನ್ಯೂಗಳಿದ್ದರೆಂದು ತೋರುವುದು. ನಮ್ಮ ಜೊತೆಗೆ ಖೈದಿಗಳು ಬೇರೆ. ಖೈದಿಗಳು ಕೆಲಸ ಮಾಡುತ್ತಿದ್ದ ನೇಯ್ಗೆ ವಿಭಾಗ, ಕಬ್ಬಿಣ ಕೆಲಸದ ಕುಲುಮೆಗಳ ಕೆಲಸ ಸ್ಥಗಿತಗೊಂಡುವು, ಎಲ್ಲ ಸ್ಥಳಗಳೂ ಡೆಟಿನ್ಯೂಗಳು ಮಲಗುವ ಸ್ಥಳವಾಗಿ ಪರಿವರ್ತಿತವಾದುವು. ಡೆಟಿನ್ಯೂಗಳ ಸಂಖ್ಯೆ ಕಮ್ಮಿಯಿದ್ದಾಗ ಜೈಲು ಗುಮ್ಮಿಯಲ್ಲೇ ಖೈದಿಗಳಿಂದ ಅಡಿಗೆ ಮಾಡಿಸುತ್ತಿದ್ದರು. ಅವರಿಂದ ಊಟದ ವ್ಯವಸ್ಥೆ ನಿರ್ವಹಣೆ ಸಾಧ್ಯವಾಗದ ಪರಿಣಾಮವಾಗಿ ಹೊಟೇಲು ಉದ್ಯಮದಲ್ಲಿ ಹೆಸರಾಂತ ದಿವಂಗತ ಬಿ. ಟಿ. ರಾಮಯ್ಯನವರಿಗೆ ಕಂಟ್ರಾಕ್ಟ್ ಕೊಟ್ಟು ಊಟದ ವ್ಯವಸ್ಥೆ ಕೈಗೊಂಡರು.



## ಅಧ್ಯಾಯ—ಆರು

೧

ಬ್ರಾಹ್ಮಣೇತರಪಕ್ಷದ ಮುಖಂಡರುಗಳನ್ನು ಅಖಿಲಭಾರತಮಟ್ಟದ ಕಾಂಗ್ರೆಸ್ ನಾಯಕರು ಆಗಾಗ ಭೇಟಿಮಾಡುತ್ತಿದ್ದರು. ದಿವಾನರಿಗೆ ಇದು ಆತಂಕವುಂಟು ಮಾಡಿತ್ತು. ಎಂದೋ ಯಾವುದೋ ವೇಳೆಯಲ್ಲಿ ಬ್ರಾಹ್ಮಣೇತರಮುಖಂಡರು ಕಾಂಗ್ರೆಸ್ಸಿಗೆ ಸೇರಿಬಿಟ್ಟರೆ ಸರ್ಕಾರಕ್ಕೆ ತೊಂದರೆಯಾಗುವುದು ಎಂಬ ಭವಿಷ್ಯತ್ ಬಗ್ಗೆ ಮಿರ್ಜಾ ಅವರು ಇದನ್ನು ತಡೆಗಟ್ಟಲು ಆಳವಾಗಿ ಯೋಚನೆ ಮಾಡಿದರು. ಮೈಸೂರಿ ನಲ್ಲಿ ಒಕ್ಕಲಿಗರು ಮತ್ತು ಲಿಂಗಾಯಿತರು ಬಹುಸಂಖ್ಯಾತ ಕೋಮುಗಳವರು. ಇವ ರೆಡು ಕೋಮುಗಳಲ್ಲಿ ಭಿನ್ನಾಭಿಪ್ರಾಯ ತಂದು ಅವರನ್ನು ಬಿಟ್ಟು ಇವರನ್ನು ಇವರನ್ನು ಬಿಟ್ಟು ಅವರನ್ನು ಆಡಿಸುವುದು. ಹೀಗೆ ರಾಜಕೀಯ ಮಾಡಲು ಕಾಂಗ್ರೆಸ್ ಹೊರಗಿದ್ದ ಬ್ರಾಹ್ಮಣರ ಚಿಂತನಚಾವಡಿಯಲ್ಲಿ ಆಲೋಚಿಸಿ ಕಾರ್ಯಮಗ್ನರಾದರು.

ಇದರ ಜೊತೆಗೆ ಮಹಾತ್ಮಗಾಂಧಿ ಅವರಿಗೆ ಯುವರಾಜರ ಮೂಲಕ ಅಧಿಕ ಹಾಲು ಕೊಡುವ ಮೇಕೆಯನ್ನು ಅರ್ಪಣೆ ಮಾಡಿದ್ದರು. ಗಾಂಧೀಜಿ ಅವರಿಗೆ ಬಹು ಪ್ರಿಯವಾದ ಖಾದಿಪ್ರಚಾರಕ್ಕೆ ಸರ್ಕಾರದ ವತಿಯಿಂದ ಆದ್ಯತೆ ಕೊಟ್ಟರು. ಜೊತೆಗೆ ಸರ್ಕಾರದ ನೆರವಿತ್ತು ಎರಡು ಮೂರು ಖಾದಿಕೇಂದ್ರಗಳನ್ನು ಆರಂಭಿಸಿ ಗಾಂಧೀಜೀ ಅವರ ಪ್ರೇಮ ಸಂಪಾದಿಸಿಕೊಂಡರು. ಅಠಾರ ಕಛೇರಿ ಮತ್ತು ಇನ್ನಿತರ ಕಛೇರಿಗಳ ನೌಕರಮಾನ್ಯರಿಗೆ ಖಾದಿಉಡುಪನ್ನು ಕಡ್ಡಾಯ ಮಾಡಿದರು. ಮೈಸೂರಿನಲ್ಲಿ ಪ್ರಜಾ ಪ್ರಭುತ್ವ ತಳಹದಿಗೆ ಮೂಲವಾಗಿ ಜನರಿಂದ ಚುನಾಯಿತರಾದ ಪ್ರಜಾಪ್ರತಿನಿಧಿಗಳ ಮೂಲಕ ರಾಜ್ಯಭಾರ ನಡೆಸುತ್ತಿರಲಾಗಿದೆ ಮುಂತಾದ ವಿಚಾರಗಳನ್ನು ಗಾಂಧೀಜೀ ಅವರ ಗಮನಕ್ಕೆ ತಂದರು.

ಸ್ವರಾಜ್ಯದ ಹೆಗ್ಗುರುತು ಚರಕ ಎಂಬ ಮೂಲಮಂತ್ರವಾಗಿಸಿಕೊಂಡ ಗಾಂಧೀಜೀ ಮೈಸೂರಿನ ಶ್ರೀಮನ್ ಮಹಾರಾಜರು ರಾಜರ್ಷಿಗಳೆಂದೂ, ಮೈಸೂರು ರಾಮರಾಜ್ಯವೆಂದೂ ಕರೆಯುತ್ತಿದ್ದರು. ಈ ಹಿನ್ನೆಲೆಯಲ್ಲಿ ಮಿರ್ಜಾ ಅವರ ಅಧ್ಯಕ್ಷತೆ ಯಲ್ಲಿ ಸಂಸ್ಥಾನ ಮಟ್ಟದ ವೀರಶೈವಸಮ್ಮೇಳನ ಕರೆಯಲು ಒಳಗೊಳಗೇ ಪ್ರಚೋ ದನೆಯಿತ್ತರು. ಕಬ್ಬಳ್ಳಿಯ ಸಾಹುಕಾರ್ ಸುಬ್ಬಣ್ಣನವರು ಜನಾನುರಾಗಿನಾಯಕ ರಾಗಿದ್ದರು. ಅವರ ನಾಯಕತ್ವದಲ್ಲಿ ಸಮ್ಮೇಳನ ಸಂಘಟಿಸಲಾಯಿತು. ವೀರಶೈವ ಮಹಾಸಮ್ಮೇಳನ ಕರೆದರು. ದಿವಾನ್ ಸರ್ ಎಂ. ಮಿರ್ಜಾ ಅವರದೇ ಅಧ್ಯಕ್ಷತೆ. ಸಾಹುಕಾರ್ ಸುಬ್ಬಣ್ಣನವರು, ಬಿ. ಎಸ್. ಪುಟ್ಟಸ್ವಾಮಿ, ಯಡತೊರೆ (ಕೆ.ಆರ್. ನಗರ)

ಬಳೆ ಸಿದ್ಧಲಿಂಗಶೆಟ್ಟರು, ಆರ್. ಬಿ. ಶಿವಣ್ಣ, ಆರ್.ಪಿ. ಪುಟ್ಟಬಸಪ್ಪ, ಮುಂತಾದವರ ಮುಂದಾಳತ್ವ ಮಹಾಸಭೆಗೆ. ಮಳೆಗಾಲದಲ್ಲಿ ಭೋರ್ಗರೆದು ಹರಿದುಬರುವ ನೀರಿನಂತೆ ಕಬ್ಬಳ್ಳಿ ಸಮ್ಮೇಳನಕ್ಕೆ ವೀರಶೈವರ ಪ್ರವಾಹ ಹರಿದು ಬಂದಿತು.

ಅಂದಿನ ಪ್ರಾತಃಕಾಲವೇ ಹಾಸ್ಟಲ್‌ನಲ್ಲಿ ರಾತ್ರಿ ಮಾಡಿದ್ದ ಅನ್ನಕ್ಕೆ ಉಪ್ಪು ಹಾಕಿ ತಿಂದು ನಾನು, ಟಿ. ಎಸ್. ಸುಬ್ಬಣ್ಣ, ಕಬ್ಬಳ್ಳಿ ಸಮೀಪದ ಹಳ್ಳಿಯ ಉಪ್ಪಲಿಗರ ಚನ್ನಯ್ಯ ಸೇರಿ ಮೈಸೂರು ಊಟಿಗೆ ಓಡುತ್ತಿದ್ದ ರಾಜಲಕ್ಷ್ಮಿ ಸರ್ವೀಸ್‌ನಲ್ಲಿ ನಂಜನಗೂಡಿಗೆ ತೆರಳಿ ಅಲ್ಲಿಂದ ಬಸ್ ಬದಲಾಯಿಸಿ, ಸಮ್ಮೇಳನಕ್ಕೆ ಹೋಗುತ್ತಿದ್ದ ಬಸ್‌ನಲ್ಲಿ ಕಬ್ಬಳ್ಳಿಗೆ ತೆರಳಿದೆವು. ಸುಮಾರು ಐವತ್ತೊಂದು ವರ್ಷಗಳ ಹಿಂದಿನ ದಿನಗಳು. ಮೋಟಾರ್ ಬಸ್‌ಗಳೇ ಅಪರೂಪವಾಗಿದ್ದ ಕಾಲ. ಏನೋ ಅಲ್ಲೊಂದು ಇಲ್ಲೊಂದು ಬಸ್ ಓಡುತ್ತಿದ್ದು, ಬಸ್‌ಗಳ ಸಂಖ್ಯೆ ಕಮ್ಮಿ ಎಂದೇ ಹೇಳಬೇಕು. ಅಂತಹ ಪರಿಸ್ಥಿತಿಯಲ್ಲು ನೂರಕ್ಕೂ ಹೆಚ್ಚು ಬಸ್‌ಗಳು ಜನರನ್ನು ಕರೆತಂದು ಸಾಲಾಗಿ ನಿಂತಿದ್ದ ದೃಶ್ಯ ಚೇತೋಹಾರಿಯಾಗಿತ್ತು. ಇಡೀ ಪೆಂಡಾಲನ್ನು ಬಿಳೀಬಟ್ಟೆಯಿಂದ ತಯಾರಿಸಲಾಗಿತ್ತು. ತಳಿರು ತೋರಣಗಳು, ವಿವಿಧ ಬಣ್ಣದ ಹೂಗೊಂಚಲುಗಳು, ಪೆಂಡಾಲಿನ ಶೃಂಗಾರಕ್ಕೆ ಅಪಾರ ಮೆರಗು ನೀಡಿದ್ದವು. ಜರತಾರಿ ಪೇಟಗಳನ್ನು ಧರಿಸುತ್ತಿದ್ದ ಕಾಲ ಅದು. ಮೊದಲೇ ರೇಷ್ಮೆಬೆಳೆ ತವರೂರು ಕಬ್ಬಳ್ಳಿ ಮತ್ತು ಆಜುಬಾಜು. ಹಳ್ಳಿಗಳಲ್ಲಿ ಸರ್ವೇಸಾಧಾರಣವಾಗಿ ಎಲ್ಲರೂ ಪೇಟ ಹಾಕಿಕೊಂಡು ಬಂದಿದ್ದವರೇ.

ಈ ಮುನ್ನ ದಿವಾನರನ್ನು ಸ್ವಾಗತಿಸಲು ಸಿದ್ಧಪಡಿಸಿದ್ದ ಚಪ್ಪರದಲ್ಲಿ ಸಾಹುಕಾರ್ ಸುಬ್ಬಣ್ಣನವರು, ಮತ್ತಿತರ ವೀರಶೈವ ಗಣ್ಯರು, ಅಧಿಕಾರಿ ವರ್ಗದವರು ಇದ್ದರು. ಹೂಹಾರ ಮತ್ತು ಫಲಪುಷ್ಪ ತಟ್ಟೆ ಹಿಡಿದಿದ್ದ ಆಸಾಮಿ ಟಿ. ಎಸ್. ಸುಬ್ಬಣ್ಣನ ಕಟ್ಟಾಶಿಷ್ಯ. ಅವನು ಲಿಂಗಾಯಿತರವನೇ. ಸುಬ್ಬಣ್ಣ ಆತನನ್ನು ತಟ್ಟೆ ಸಹಿತ ಪಕ್ಕಕ್ಕೆ ಕರೆದು "ನೋಡೋಲೇ ಹಾರ ಮತ್ತು ತಟ್ಟೆ ಮಿರ್ಜಾರಿಗೆ ಕೊಡಲು ನಿನ್ನಿಂದ ತೆಗೆದುಕೊಳ್ಳಲು ಬಂದಾಗ ಇದು ಮಹಾರಾಜರಿಗೆ, ಮಿರ್ಜಾ ಅವರಿಗಲ್ಲ ಎಂದು ಹೇಳಿ ತಟ್ಟೆ ಕೊಡಬೇಡ" ಎಂದು ಸುಬ್ಬಣ್ಣನವರು ತಮ್ಮ ಶಿಷ್ಯನಿಗೆ ಹೇಳಿಕೊಟ್ಟರು. ದಿವಾನರು ಬಂದರು. ಕಾರಿನಿಂದ ಇಳಿದರು. ಹೂ ಹಾರ ಅರ್ಪಿಸಿ ಫಲಪುಷ್ಪ ಅರ್ಪಿಸಲು ಸಾಹುಕಾರರು ತಟ್ಟೆಗೆ ಕೈ ಹಾಕಿದರು. ಶಿಷ್ಯ ಕೈ ಕಿತ್ತವನೆ "ಇದೇನು ಬಿಡುಡೋ, ದಿವಾನರಿಗಲ್ಲಪ್ಪೋ, ಮಹಾರಾಜರಿಗೆ ಕೊಟ್ಟಿದ್ದಾರೆ" ಎಂದು ಒದರಿಬಿಟ್ಟ. ಜೋರು ಮಾಡಿ ತಟ್ಟೆ ಅರ್ಪಿಸಿದರು ಸಾಹುಕಾರರು. ಮೊದಲ ಹಂತದಲ್ಲೇ ದಿವಾನರಿಗೆ ದಂತ ಭಗ್ನವಾಯಿತು. ತಟ್ಟೆ ಹಿಡಿದಿದ್ದವನನ್ನು ಹಿಂದಕ್ಕೆ ಕರೆದುಕೊಂಡು ಹೋಗಿ ಕಪಾಲಕ್ಕೆ ಹೊಡೆದು ಬಿಟ್ಟುಬಿಟ್ಟರು.

ದೇವತಾ ಪ್ರಾರ್ಥನೆಯೊಡನೆ ಸಮ್ಮೇಳನ ಆರಂಭವಾಯಿತು. ಸಾಹುಕಾರ್ ಸುಬ್ಬಣ್ಣನವರ ಸ್ವಾಗತ ಭಾಷಣ. ಆರಂಭಕ್ಕೆ ಮುನ್ನ ಬಿ. ಎಸ್ ಪುಟ್ಟಸ್ವಾಮಿಯವರು

ಎದ್ದು ಈ ಸಮ್ಮೇಳನ ವೀರಶೈವರದು. ವೀರಶೈವರಲ್ಲದವರು ಇಲ್ಲಿದ್ದರೆ ದಯಮಾಡಿ ಹೊರಹೋಗಬೇಕು ಎಂದು ತಿಳಿಸಿದರು. ಟಿ. ಎಸ್. ಸುಬ್ಬಣ್ಣ ಮತ್ತುನಾವು ವೇದಿಕೆಗೆ ಅತಿ ಸಮೀಪವಾಗಿಯೇ ಕುಳಿತಿದ್ದೆವು. ಪುಟ್ಟಸ್ವಾಮಿಯವರು ಮಾತು ಮುಗಿಸಿದಮೇಲೆ ಸುಬ್ಬಣ್ಣ ಎದ್ದು "ಸ್ವಾಮಿ ಮಿರ್ಜಾ ಸಾಹೇಬರು ಲಿಂಗಾಯಿತರಲ್ಲ. ಮಹಮದೀಯರು. ಮೊದಲು ಅವರನ್ನು ಹೊರಗೆ ಕಳುಹಿಸಿ ಅನಂತರ ಇನ್ನಿತರ ನಾವು ಹೊರ ಹೋಗುತ್ತೇವೆ ಎಂದರು. ಪರಂಗಿಯವರ ಬಣ್ಣವಿದ್ದ ಮಿರ್ಜಾ ಅವರ ಮುಖ ಕಪ್ಪಿಟ್ಟಿತು. ಮೂರು ನಾಲ್ಕು ಮಂದಿಯಿದ್ದ ನಮ್ಮನ್ನು ಪೋಲೀಸರು ಬಂದು "ನೀವು ಯಾವೂರವರು ನಡೆಯಿರಿ ಹೊರಗೆ" ಎಂದು ಎಳೆದಾಡಲು ಬಂದರು. ನಾವು ಭಂಡರಾಗಿ "ನಾವೂ ಲಿಂಗಾಯಿತರೆ" ಎಂದೆವು. ಸಾಹುಕಾರ್ ಸುಬ್ಬಣ್ಣನವರು ದಯ ಮಾಡಿ ಸರ್ವರೂ ಕುಳಿತು ದಿವಾನರ ಭಾಷಣ ಕೇಳಬೇಕು. ಯಾರೂ ಹೊರಕ್ಕೆ ಹೋಗಬೇಡಿ ಎಂದರು.

ಎಲ್ಲೋ ಸ್ವಲ್ಪ ಅನ್ನ ತಿಂದು ಬಂದಿದ್ದ ನನಗೆ ಬವಳೆ ಬಂದಂತಾಗಿದೆ. ಎಷ್ಟು ಹೊತ್ತಿಗಪ್ಪ ಊಟ ಎಂದು ಹೊಟ್ಟೆ ತಳಮಳಗೊಳ್ಳುತ್ತಿದೆ. ಸುಬ್ಬಣ್ಣನವರು ಎರಡೇ ಮಾತಿನಲ್ಲಿ ಸ್ವಾಗತ ಮಾಡಿದರು.

ದಿವಾನರು ಮಾತನಾಡಿ "ರಾಜ್ಯದ ರಾಜಕೀಯದ ಬಗ್ಗೆ ಹೇಳುತ್ತ, ರಾಮ ರಾಜ್ಯವೆಂದು ಹೆಸರಾದ ರಾಜಾಯುಷಿ ಎಂದು ಕೀರ್ತಿಪಡೆದಿರುವ ನಮ್ಮ ಶ್ರೀಮನ್ ಮಹಾರಾಜರ ಸರ್ಕಾರಕ್ಕೆ ಕಪ್ಪುಮಸಿ ಬಳಿಯಲು ಕೆಲವರು ನಿರುದ್ಯೋಗಿ ಜನ ಒದರಾಡುತ್ತಿದ್ದಾರೆ. ವೀರಶೈವರಾದ ನಿಮ್ಮ ಹೆಸರು ಆ ಚಂದ್ರಾರ್ಕವಾಗಿ ಉಳಿವಂತೆ ಒಡೆಯರು ಎಂಬ ಅಭಿಮಾನವು ಹೆಸರಿನ ಜೊತೆ ಸೇರಿದೆ ಮುಂತಾಗಿ ಹೇಳಿ ಜಾತಿ ಹೆಸರು ಹೇಳದಿದ್ದರು ಬ್ರಾಹ್ಮಣರ ಪ್ರಚೋದನೆ ಎಂಬುದು ಜನಕ್ಕೆ ಅರ್ಥವಾಗುವಂತೆ ಕೆಲವೇ ಮಾತು ಹೇಳಿ ಕುಳಿತರು.

ಅಡಿಗೆ ಸಂಭ್ರಮ ಹೇಳ ತೀರದು. ಹಸಿಅವರೆ ಕಾಲ ಬೇರೆ. ಆಳುದ್ದದ ನೂರಾರು ಹಂಡೆಗಳಲ್ಲಿ ಸಾರು. ರಾಶಿಯಾಗಿ ಬಿದ್ದಿರುವ ಅನ್ನ, ನೋಡಿದ ಹಸಿದ ಹೊಟ್ಟೆ ತಾ ಎನ್ನುತ್ತಿದೆ, ಸಭೆಯಲ್ಲಿ ಮಾತನಾಡಿದ ಸುಬ್ಬಣ್ಣಸಂಗಡಿಗರಾದ ನಮ್ಮನ್ನು ಊಟಕ್ಕೆ ಸೇರಿಸಬಾರದು ಎಂದು ಕೆಲವರು ಹೊರಹೋಗಿ ಎಂದು ಕೂಗಾಟ ಹಾಕು ತ್ತಿದ್ದರು. ದೂರದಲ್ಲಿ ನಿಂತು ನೋಡುತಿದ್ದ ಕಬ್ಬಳ್ಳಿ ಸುಬ್ಬಣ್ಣನವರು ಹತ್ತಿರಕ್ಕೆ ಬಂದು "ಬಿಡಿ ಅವರನ್ನ ಊಟ ಮಾಡಲಿ" ಎಂದು ತಿಳಿಸಿದರು. ಅನ್ನ ಹುಳಿ ಪಾಯಸ ಗಡದ್ದಾಗಿ ಊಟ ಮಾಡಿದೆವು.

ಊಟದ ನಂತರ ಸಮ್ಮೇಳನದ ಬಸ್ ಹತ್ತಿ ನಾವು ಕುಳಿತೆವು. ವಯಸ್ಸಾದವರಿಗೆ ಟಿ.ಎಸ್. ಸುಬ್ಬಣ್ಣ ಹೇಳಿದ ಮಾತು ಮನವರಿಕೆಯಾಗಿ "ಸಭೆಯಲ್ಲಿ ಯಾವನೋ ಹೇಳಿ ದಂತೆ ಸಾಬರು ಅದ್ಹೇಗೆ ಸಭೆಯಲ್ಲಿರಲು ಸಾಧ್ಯ ಹೇಳಿ ಮಂತೆ, ಹೀಗೆ ಪುಟ್ಟಸ್ವಾಮಿ

ಯವರು ಶಿವಪೂಜೆಯಲ್ಲಿ ಕರಡಿ ಬಿಟ್ಟಂತೆ ಅದೇಕೆ ಆ ಮಾತು ಹೇಳಬೇಕಿತ್ತು'' ಎಂದು ಮೈಸೂರವರೆಗೂ ಚರ್ಚೆ ನಡೆದಿತ್ತು. ನಾವು ಇಳಿದು ನಮ್ಮ ಕಛೇರಿಗೆ ಹೋದೆವು.

ಇದಾದ ಪೂರನೇ ದಿನಕ್ಕೆ ಇನ್‌ಸ್ಪೆಕ್ಟರುಗಳಾದ ಸದಾಶಿವರಾವ್ ಮತ್ತು ಕೃಷ್ಣಮೂರ್ತಿಯವರು ಬಂದರು. ನಿಮ್ಮನ್ನು ದಸ್ತಗಿರಿಮಾಡಿದ್ದೇವೆಂದು ತಿಳಿಸಿ ಜೊತೆಯಲ್ಲಿ ಕರೆದುಕೊಂಡು ನಜರಬಾದ್ ಪೋಲೀಸ್ ಸ್ಟೇಷನ್‌ಗೆ ಹೋದರು. ನಾವಾದರು ಏಕೆ ದಸ್ತಗಿರಿಮಾಡಿದ್ದೀರೆಂದು ಪ್ರಶ್ನಿಸಲಿಲ್ಲ.

''ಏನ್ರಯ್ಯ ನಿಮಗೆ ಮಾಡಲಿಕ್ಕೇನು ಕಸಬಿಲ್ಲವೊ ನೀವೇಕೆ ಕಬ್ಬಾಳಿಗೆ ಹೋಗಿ ದಿವಾನರನ್ನು ಅವಮಾನಿಸಲು ಪ್ರಯತ್ನಿಸಿದಿರಿ'' ಮುಂತಾಗಿ ಪ್ರಶ್ನಿಸಿದರು. ''ನಾವು ವೀರಶೈವ ಸಮ್ಮೇಳನಕ್ಕೆ ಹೋಗಿದ್ದೆವು. ವೀರಶೈವರಲ್ಲದವರು ಸಭೆಯಲ್ಲಿರಬಾರದೆಂದು ವ್ಯವಸ್ಥಾಪಕರು ತಿಳಿಸಿದರು. ವೀರಶೈವರಲ್ಲದ ದಿವಾನರು ಸಭೆಯಲ್ಲಿರಬಹುದೆ ಎಂದು ಕೇಳಿದೆವು ಅಷ್ಟೇ ಇನ್ನೇನಂತಹ ಮತ್ಯಾವುದೇ ಘಟನೆ ನಡೆದಿಲ್ಲ'' ಎಂದೆವು.

ಡೆಪ್ಯೂಟಿ ಕಮಿಷನರು ದಿವಾನರ ಜೊತೆ ಬಂದಿರಲಿಲ್ಲವೆ ? ಎಂದರು. ಅಹುದು ಡೆಪ್ಯೂಟಿ ಕಮಿಷನರ್ ಮೇಕ್ರಿಸಾಹೇಬರು ಬಂದಿದ್ದರು ಎಂದು ಹೇಳಿದೆವು. ಜಿಲ್ಲಾಧಿಕಾರಿಗಳು ನಮ್ಮ ಬಗ್ಗೆ ತಪ್ಪು ಮಾಹಿತಿ ನೀಡಿದ್ದರೆಂದು ಕಾಣುತ್ತದೆ. ಅವರಿಬ್ಬರಲ್ಲೇ ಚರ್ಚಿಸಿಕೊಂಡರು. ಮಾಡುವುದೇನು ''ಅಪ್ಪ ಹೇಳ್ದಂಗೆ ಕೇಳೆ ಅಪ್ಪಬಡ್ಡಿ'' ಅನ್ನೊ ಗಾದೆಯಿಲ್ಲವೆ ? ಹಾಗಾಗಿದೆ. ಏಳಿ ಕೋರ್ಟಿಗೆ ಹೋಗೋಣ ಎಂದರು. ''ನಾವು ತಿಂಡಿ ತಿಂದಿಲ್ಲ.'' ಎಂದೆವು. ಅಲ್ಲೇ ಸಮೀಪದ ಹೊಟೇಲಿಗೆ ನಮ್ಮನ್ನು ಕರೆದುಕೊಂಡು ಅವರು ಬಂದರು. ಕೋರ್ಟಿಗೆ ಹೊರಟೆವು. ''ಸಾಕ್ಷಿಗಳ್ಯಾರು ಹಾಕೋಣ ಸದಾಶಿವರಾವ್'' ಎಂದು ಕೃಷ್ಣಮೂರ್ತಿ ಕೇಳಿದರು. ''ಯಾರೋ ಇಬ್ಬರ ಹೆಸರು ಬರೆಯೋಣ'' ಎಂದು ಗಾಂಧಿಚೌಕದಲ್ಲಿದ್ದ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಹಾಜರು ಮಾಡಿದರು. ಕೋರ್ಟು ಆರಂಭವಾಗಿತ್ತು. ಜಡ್ಜರನ್ನು ಒಳಗಿನ ಕೋಣೆಗೆ ಕರೆದುಕೊಂಡು ಹೋದರು. ಅದೇನು ಮಾತುಕತೆ ನಡೆಯಿತೆನ್ನುವುದು ಗೋಪ್ಯ.

ಸಾರ್ವಜನಿಕ ಸ್ಥಳದಲ್ಲಿ ಗಲಾಟೆಮಾಡಿ ಸಾರ್ವಜನಿಕ ನೆಮ್ಮದಿಗೆ ಭಂಗತಂದಿದ್ದಾರೆ. ಪೋಲೀಸ್ ಆ್ಯಕ್ಟ್ ಪ್ರಕಾರ ಇವರ ಮೇಲೆ ಮೊಕದ್ದಮ್ಮೆ ಹೂಡಲಾಗಿದೆ, ಮುಂತಾಗಿ ತಿಳಿಸಿ ಸಾಕ್ಷ್ಯಗಳನ್ನು ಮುಂದಿನ ಹಿಯರಿಂಗ್ ಕಾಲಕ್ಕೆ ಕರೆತರಲಾಗುವುದು ಎಂದು ತಿಳಿಸಿದರು. ಕೇಸನ್ನು ಮುಂದಿನ ವಾರಕ್ಕೆ ಹಾಕಲಾಗಿದೆ ಎಂದು ಜಡ್ಜರು ತಿಳಿಸಿದರು. ನಮ್ಮೀರ್ವರನ್ನು ಜೈಲಿಗೆ ಕರೆದುಕೊಂಡು ಹೋದರು. ಆಗಲೇ ಮಧ್ಯಾಹ್ನ 3 ಘಂಟೆ ಆಗಿತ್ತು. ಜೈಲಿನ ಹೆಬ್ಬಾಗಿಲು ಪುರಾತನ ಕೋಟೆಗಳ ಹೆಬ್ಬಾಗಿಲಿನಂತಿತ್ತು ಅರಮನೆ ಅಂಬಾರಿ ಹೊರುವ ದ್ರೋಣನಂತಹ ಆನೆ ಸೀದಾ ಒಳ ಹೋಗಬಹುದಾದ ಎತ್ತರ, ಅಷ್ಟೇ ಅಗಲ ಅದರ ಕಿರು ಬಾಗಿಲು ಮೂಲಕ ಒಳಗೆ ಕರೆದೊಯ್ದರು ಪೋಲೀಸರು.

ಒಳಗಡೆ ಚೀಫ್ ವಾರ್ಡರೊಬ್ಬರು ನಮ್ಮನ್ನು ಪೋಲೀಸರಿಂದ ತಮ್ಮ ಸುಪರ್ದಿಗೆ

ತೆಗೆದುಕೊಂಡರು. ಮೊದಲು ಜೈಲರ್ ಇದ್ದ ಕೊಠಡಿಗೆ ಕರೆದೊಯ್ದರು. "ಏನ್ರಿ ಏನು ಕೇಸು ಇವರದ್ದು" ಎಂದು ಕೇಳಿದರು. ತನ್ನ ಕೈಲಿದ್ದ ಫೈಲ್‌ನ್ನ ಜೈಲರಿಗಿತ್ತ ವಾರ್ಡರ್. ಫೈಲ್ ನೋಡಿ ವಾಪಸ್ಸು ಕೊಟ್ಟು ಜೈಲ್ ಕಛೇರಿಗೆ ಕರೆದುಕೊಂಡು ಹೋಗುವಂತೆ ತಿಳಿಸಿದರು. ಜೈಲ್ ಆಫೀಸಿನಲ್ಲಿ ಊರು, ತಂದೆ ಹೆಸರು, ವಯಸ್ಸು, ಶರೀರದ ಮೇಲಿರುವ ಖಾಯಂ ಗುರುತು ಮುಂತಾದುವನ್ನು ವಿವರವಾಗಿ ರಿಜಿಸ್ಟರಿಗೆ ಬರೆದುಕೊಂಡು ರುಜುಮಾಡಿಸಿ ಕೊಂಡರು. ರುಜು ಜೊತೆಗೆ 5 ಬೆರಳುಗಳ ಗುರ್ತನ್ನು ಹಾಕಿಸಿಕೊಂಡು ನಮ್ಮಲ್ಲಿದ್ದ ಹಣ ಪಡೆದುಕೊಂಡು ಚಿಕ್ಕ ಚೀಲಕ್ಕೆ ಹಾಕಿ ಸೀಲ್ ಮಾಡಿದರು ಗುಮಾಸ್ತರು. ನನಗೆ ಬೀಡಿ ಸೇದುವ ಚಟವಿತ್ತು. ಮಹಾರಾಯ ಬೀಡಿ ಬೆಂಕಿಪೊಟ್ಟಣ ಬಿಟ್ಟುಕೊಟ್ಟ. ನಮ್ಮ ಮನೆಗಳಲ್ಲಿರುವ ಕಂಚಿನ ಸಾಧಾರಣ ಗಂಗಳದಷ್ಟು ಅಗಲದ ತಲಾ ಎರಡು ಮಣ್ಣಿನ ಮುಚ್ಚಳ ಒಂದೊಂದು ಮಗೆ (ಕುಡಿಕೆ) ಕೊಟ್ಟರು. ಬನ್ನಿ ಊಟಕ್ಕೆ ಕೂರಿ ಎಂದು ಹೇಳಿ ಮತ್ತೊಬ್ಬ ವಾರ್ಡರಿಗೆ ಕೂಗಿ ಹೇಳಿ "ಅಡಿಗೆ ಗುಮ್ಮಿಗೆ ಇವರನ್ನು ಕರೆದುಕೊಂಡು ಹೋಗು" ಎಂದು ತಿಳಿಸಿದ. ಅಲ್ಲಿ ಸಾಲಾಗಿ ಪ್ರತಿಯೊಬ್ಬನು ಮುಚ್ಚಳ ಇಟ್ಟುಕೊಳ್ಳಲು ಅನುಕೂಲವಿರುವ 1 ಅಡಿ ಎತ್ತರದ ಕಲ್ಲಿನಲ್ಲಿ ತೌಟಿಗೆಯಂತೆ ಮಾಡಿ ಸೌಲಭ್ಯ ಕಲ್ಪಿಸಿದ್ದರು. ಮುಚ್ಚಳಗಳನ್ನು ತೊಳೆದು ಕೈಕಾಲು ತೊಳೆದು ಇನ್ನಿತರ ಖೈದಿಗಳ ಜೊತೆ ಊಟಕ್ಕೆ ಕುಳಿತೆವು. ಜೆಲ್ಲದ ಅಚ್ಚಿನ ಆಕಾರದ 80 ತೊಲ ತೂಕ ತೂಗುವ ರಾಗಿ ಹಿಟ್ಟಿನ ಮುದ್ದೆ ಒಂದನ್ನು ಮುಚ್ಚಳಕ್ಕೆ ಬಡಿಸಿದರು. ಇನ್ನೊಂದು ಮುಚ್ಚಳಕ್ಕೆ ವಿವಿಧ ರೀತಿಯ ಸೊಪ್ಪು ಮತ್ತು ತರಕಾರಿಗಳಿಂದ ತಯಾರು ಮಾಡಿದ ಹುಳಿ ಬಡಿಸಿದರು. ಆ ಹುಳಿತೊಪ್ಪೆಯಂತೆ ಸೊಗಸಾಗಿದ್ದು ಮೂಗು ಕಿತ್ತುಹೋಗುವಂತೆ ಘಮ ಘಮಿಸುತ್ತಿತ್ತು. ಹಿಟ್ಟು ಬಡಿಸಿದ ಅಡಿಗೆಯವನು "ಇಷ್ಟು ಹಿಟ್ಟನ್ನು ಊಟ ಮಾಡುತ್ತೀರಾ ?" ಎಂದ. "ಆಗದು" ಎಂದೆ. ಅರ್ಧ ಮುರಿದು ತೆಗೆದುಕೊಂಡು ಹೋದ. ಆದರೆ ಸುಬ್ಬಣ್ಣ ಪೂರ್ತಾ ಮುದ್ದೆ ಉಂಡು ಮುಗಿಸಿಯೇ ಬಿಟ್ಟ. ಅನ್ನ ಕೇಳಿದೆವು." ನೀವು ಕೋರ್ಟಿನಲ್ಲಿ ಜಡ್ಜರಿಂದ ಬರೆಸಿ ತರಬೇಕು, ಇಲ್ಲ ಎಂದರೆ ಕೆ. ಆರ್. ಆಸ್ಪತ್ರೆಯಿಂದ ನಾಳೆ ಬೆಳಗ್ಗೆ ಡಾಕ್ಟರು ಬರುತ್ತಾರೆ ಯಾವುದಾದರು ಕಾಯಿಲೆ ಸಬೂಬು ಹೇಳಿ ಅನ್ನ ಬರೆಸಿಕೊಳ್ಳಿ" ಎಂದು ಅಡಿಗೆಯವನು ಅನ್ನಕ್ಕೆ ಮಾರ್ಗ ಸೂಚಿಸಿದ.

ಊಟದ ನಂತರ ತಟ್ಟೆ ತೊಳೆಯಲು ಪಕ್ಕದ ತೋಟದ ಬಾಗಿಲಿಗೆ ಹೋದೆವು. ಊಟದ ನಂತರ ಖೈದಿಗಳು ಎದುರು ಬದುರು ಸಾಲಾಗಿ ಕಕ್ಕಸ್ಸಿಗೆ ಕುಳಿತಿದ್ದಾರೆ. ಆ ವಾತಾವರಣ ನೋಡಿದ ನಮಗೆ ವಾಕರಿಕೆಯಾಯ್ತು. ಇಷ್ಟಕ್ಕೇ ಇದೇನಪ್ಪ ಜೈಲು ಎನಿಸಿತು ಮನದಲ್ಲಿ. ಕಕ್ಕಸ್ಸಿನದೇ ನಮಗೆ ದೊಡ್ಡ ಕಗ್ಗಂಟಾಗಿ ಮನಸ್ಸನ್ನು ಯೋಚನೆಗೀಡುಮಾಡಿತು.

ಅಲ್ಲಿಂದ ನಮಗೆ ಗೊತ್ತು ಮಾಡಿದ್ದ ಇಬ್ಬರಿಗೇ ಮಲಗಲು ಸೌಲಭ್ಯವಿರುವ

ಸೆಲ್‌ಗೆ ಕರೆದುಕೊಂಡು ಹೋಗಿ ಜಾಗ ತೋರಿದರು. ನಿಮಗೆ ಹಾಸಿಗೆ ಹೊದಿಕೆ ತರುವಂತೆ ನಿಮ್ಮ ಮನೆ ವಿಳಾಸ ಕೊಟ್ಟರೆ ತಿಳಿಸಲಾಗುವುದು. ನಮಗೆಲ್ಲಿ ಹಾಸಿಗೆ, ನೆಲವೇ ಹಾಸಿಗೆ ಆಕಾಶವೇ ಹೊದಿಕೆ ಮಾಡಿಕೊಂಡು ಕಾಲ ಕಳೆಯುತ್ತಿದ್ದ ನಮಗೆ. ಊಟ ತಿಂಡಿ ಸಹಿತ ನಿಮ್ಮ ಮನೆಯಿಂದಲೇ ತರಿಸಿಕೊಳ್ಳಲು ಅವಕಾಶವಿದೆ, ಎಂದರು. ಬೇಡಿ ನಮಗೆ ಜೈಲಿನ ಊಟವೇ ಸಾಕು ಎಂದು ತಿಳಿಸಿದೆವು. ಸಾಧಾರಣ ಸೈಜಿನ ಮಡಕೆಗೆ ಅರ್ಧ ಮರಳು ತುಂಬಿದ ಮಡಕೆಯನ್ನು ನಮ್ಮ ಬ್ಯಾರೆಕ್‌ಗೆ ತಂದು ಇರಿಸ ಲಾಯ್ತು, ನಮ್ಮ ಎರಡು ಮಗೆಗಳಿಗೆ ನೀರು ತುಂಬಿಕೊಟ್ಟರು ನೀವು ರಾತ್ರಿ ಉಚ್ಚೆ ಮಾಡಬೇಕಾದರೆ ಈ ಮಡಕೆಯಲ್ಲಿ ಮಾಡಬಹುದೆಂದು ತಿಳಿಸಿದರು.

ಸಂಜೆ ಆಗುತ್ತಿದ್ದಂತೆ ಖೈದಿಗಳು ಸಾಲಾಗಿ ಅವರವರ ಬ್ಯಾರೆಕ್‌ಗಳ ಮುಂದ ಬಂದು ನಿಂತರು. ಚೀಫ್ ವಾರ್ಡರು ರಿಜಿಸ್ಟರಿನಲ್ಲಿ ಖೈದಿಗಳ ನಂಬರ್ ಹಿಡಿದು ಉರ್ದು ವಿನಲ್ಲಿ ಕೂಗುವುದು. ಖೈದಿ ಹಾಜರ್ ಹೇಳಿ ಒಳ ಹೋಗುವುದು. ಇದಾದ ಮೇಲೆ ಮತ್ತೆ ಒಳ ಹೋಗಿ ಲೆಕ್ಕ ಹಾಕಿ ಅನಂತರ ಬೀಗ ಹಾಕಿದರು. ಇದಾದ ಅರ್ಧಘಂಟೆಗೆ ಚೀಫ್‌ವಾರ್ಡನಿನ ಮೇಲಧಿಕಾರಿ ಬಂದು ಬೀಗ ಎಳೆದು ಸರಿಯಿದೆಯೆ ಇಲ್ಲವೆ ನೋಡಿ ಸರಿಯೆಂದು ರಿಜಿಸ್ಟರಿಗೆ ರುಜು ಮಾಡುವನು. ಇದನ್ನೆಲ್ಲಾ ನೋಡುತಿದ್ದ ನಮಗೆ ಏನಪ್ಪ ಹುಜೂರು ಖಜಾನೆಯಲ್ಲಿ ಹಣದ ಎಣಿಕೆ ಮಾಡಿ ಬೀಗ ಮಾಡುವಷ್ಟೆ ಜತನ ವಾಗಿ ಕಳ್ಳತನ, ದರೋಡೆ, ಕೊಲೆ, ಮೋಸ. ಮುಂತಾದ ಅಪರಾಧ ಮಾಡಿದ ಈ ಮಹಾನುಭಾವ ಖೈದಿಗಳನ್ನು ರಕ್ಷಿಸುವಲ್ಲಿ ಸರ್ಕಾರ ಅದೆಂತಹ ಮೌಲ್ವಿಕವಾದ ಕ್ರಮ ಬದ್ಧತೆ ನಡೆಸುತ್ತಿದೆ ಎನ್ನಿಸಿತು.

ಜೈಲಿನ ಎಲ್ಲ ಬ್ಯಾರಕ್‌ಗಳು ಒಂದುಗೂಡುವ ಜಾಗದಲ್ಲಿ ಗಡಿಯಾರದ ಗೋಪುರವಿದೆ. ಈ ಗೋಪುರದ ಮೇಲೆ ಬಂದೂಕ ಹೊತ್ತು ವಾರ್ಡರ್ ಒಬ್ಬ ಗೋಪುರದ ಸುತ್ತ ತಿರುಗುತ್ತ ಯಾರಾದರು ಖೈದಿ ತಪ್ಪಿಸಿಕೊಂಡು ಗೋಡೆ ಹತ್ತಿ ಹೋದಾನೆಂದು ಕಣ್ಣಿನಲ್ಲಿ ಕಣ್ಣಿಟ್ಟು ಕಾಯುತ್ತಿರುತ್ತಾನೆ. ಗಂಟೆಗೊಮ್ಮೆ ಗಂಟೆ ಹೊಡೆದು "ಹೋಷಿಯಾರ್" ಎಂದು ಕೂಗುಹಾಕುತ್ತಾನೆ. ಗೋಪುರದ ಮೇಲೆ ಶತಪಥ ತಿರುಗುವ ವಾರ್ಡರ್. ನಮಗೆ ಹಾಸಿಗೆಯಷ್ಟೆ ದಪ್ಪವಾದ ಗೋಣಿತಾಟನ್ನು ಹಾಸಿಗೆಗೆ ಕೊಟ್ಟ. ಹೊದೆಯಲು ಕರಿ ಕಂಬಳಿ ಕೊಟ್ಟ, ಗಾರೆಯಲ್ಲೆ ಜಗಲಿ ಮತ್ತು ತಲೆ ದಿಂಬು ತಯಾರಿಸಿದ್ದರು, ದಿಂಬಿಗೆ ತಲೆ ಹಾಕಿದರೆ ಜಾರುತಿತ್ತು. ರಾತ್ರಿ 12 ಘಂಟೆ ಆದರು ನಿದ್ರೆ ಬರಲಿಲ್ಲ, ಅನಂತರ ಮಂಪರು ನಿದ್ರೆ ಬಂದು ಪ್ರಾತಃಕಾಲ ಗಂಟೆ ಹೊಡೆ ದಾಗ ಎಚ್ಚರವಾಯಿತು. ಎದ್ದು ತೋಟಕ್ಕೆ ಹೋಗಿ ತಣ್ಣೀರುಸ್ನಾನ ಮಾಡಿದೆವು. 7½ ಘಂಟೆಗೆ ಊಟಕ್ಕೆ ಕರೆಗಂಟೆ ಹೊಡೆದರು. ಖೈದಿಗಳಿದ್ದ ಬ್ಯಾರೆಕ್‌ಗಳ ಬಾಗಿಲು ತೆಗೆದು ಯಥಾ ಸ್ಥಿತಿ ರಿಜಿಸ್ಟರು ಹಿಡಿದು ನಿಂತ ವಾರ್ಡರ್ ನಂಬರ್ ಹಿಡಿದು ಕೂಗುವುದು, ಹಾಜರ್ ಹೇಳಿ ಹೊರ ಬರುವುದು. ಇದು ದಿನ ನಿತ್ಯದ ಕಾರ್ಯಕ್ರಮ, ಸ್ನಾನಮಾಡು

ವವರು ಮಾಡಬಹುದು, ಇಲ್ಲ ಮುಖ ತೊಳೆದು ಊಟಕ್ಕೆ ಹಾಜರಾಗುವರು. ಊಟದ ನಂತರ ನೇಯ್ಗೆ, ಮರಗೆಲಸ, ಬೆತ್ತದ ಕೆಲಸ, ಕುಲುಮೆ ಕೆಲಸ ಹೀಗೆ ಆಯಾ ತಮ್ಮ ದಿನ ನಿತ್ಯದ ಕೆಲಸಕ್ಕೆ ಕೈದಿಗಳು ತೆರಳಿದ ನಂತರ ಆಯಾ ವಿಭಾಗಕ್ಕೆ ಬೀಗ ಹಾಕುವರು. ಮಧ್ಯಾಹ್ನ 2 ಘಂಟೆಗೆ ಎಲ್ಲರಿಗೂ ಸ್ವಲ್ಪ ರೊಟ್ಟಿ ಕೊಟ್ಟು ಒಂದು ಘಂಟೆಕಾಲ ವಿಶ್ರಾಂತಿ ನೀಡುವರು.

ಒಂಬತ್ತು ಘಂಟೆಗೆ ಕೋರ್ಟಿಗೆ ಕರೆದುಕೊಂಡು ಹೋಗಲು ವ್ಯಾನಿನಲ್ಲಿ ಪೋಲೀಸರು ಬರುವರು. ವಿಚಾರಣೆಗೆ ಒಳಗಾದ ಗುಮಾನಿ ಖೈದಿಗಳನ್ನು ಜೈಲುವಶದಿಂದ ತಮ್ಮವಶಕ್ಕೆ ತೆಗೆದುಕೊಂಡು ಕೋರ್ಟಿಗೆ ಹೋಗುವರು. ಕೋರ್ಟಿಗೆ ಹೋದವರಲ್ಲಿ ಕೆಲವರ ಮೊಕದ್ದಮೆಗಳು ವಜಾ ಆಗಿ ಬಂದವರು. ಜೊತೆಗೆ ಹೊಸ ಮೊಕದ್ದಮೆಗಳಲ್ಲಿ ವಿಚಾರಣೆಗೆ ಗುರಿ ಆದವರು ಸೇರುವರು.

ದೊಡ್ಡ ಬ್ಯಾರಕ್ಕುಗಳಲ್ಲಿ ಕಕ್ಕಸ್ಸು ವ್ಯವಸ್ಥೆಯಿದ್ದು ಖೈದಿಗಳು ಕೆಲಸದ ಮೇಲೆ ಹೋದ ಮೇಲೆ ನಾವು ಆ ಬ್ಯಾರಕ್‌ಗಳಲ್ಲಿ ಕಕ್ಕಸ್ಸಿಗೆ ಹೋಗುವ ಏರ್ಪಾಟನ್ನು ಮಾಡಿಕೊಂಡಿದ್ದೆವು. ಹಾಗೂ ಹೀಗೂ ವಾರತುಂಬಿಸಿದೆವು. ದಿನವೂ ಸ್ನೇಹಿತರು ಸೋಪು ಹಲ್ಲುಪುಡಿ ತಂದುಕೊಡುತ್ತಿದ್ದರು. ಆಗಾಗ ತಿಂಡಿ ತರುತ್ತಿದ್ದರು. ನಾವು ಸಹ ನಾಲ್ಕೈದು ದಿನಗಳಲ್ಲಿ ಜೈಲು ವಾತಾವರಣಕ್ಕೆ ಒಗ್ಗಿ ಕೊಂಡೆವು. ಒಂದು ವಾರದ ನಂತರ ನಮ್ಮನ್ನು ಕೋರ್ಟಿಗೆ ವಿಚಾರಣೆಗೆ ಕರೆದುಕೊಂಡು ಹೋದರು. ಒಬ್ಬ ಸಾಕ್ಷಿ ಮಾತ್ರ ಬಂದಿದ್ದ. ಆತನು ನಾವು ಸಾರ್ವಜನಿಕ ನೆಮ್ಮದಿಗೆ ಭಂಗ ತಂದರು ಎಂಬುದಕ್ಕೆ ಸರಿಯಾದ ಸಾಕ್ಷ್ಯ ನೀಡಲಾರದೆ ಹೋದ. ಮಧ್ಯಾಹ್ನ 3 ಗಂಟೆಗೆ ನಮ್ಮನ್ನು ಬಿಡುಗಡೆ ಮಾಡಿದರು.

ಕಬ್ಬಳ್ಳಿ ವೀರಶೈವ ಸಮ್ಮೇಳನದಿಂದ ಬಂದಮೇಲೆ ನನ್ನ ಮತ್ತು ಸುಬ್ಬಣ್ಣನವರ ಮೇಲೆ ಮೊಕದ್ದಮೆ ಹೂಡಿ ಜೈಲಿಗೆ ಹಾಕುವಂತೆ ಮಿರ್ಜಾ ಅವರು ಅಧಿಕಾರ ವರ್ಗಕ್ಕೆ ಸೂಚನೆ ನೀಡಿದ್ದ ವಿಚಾರ "ಜನಜಾಗೃತಿ ಸಂಘಕ್ಕೆ" ಗೊತ್ತಾಯಿತು. ಪೋಲೀಸರು ನಮ್ಮ ಮೇಲೆ ಮೊಕದ್ದಮೆ ದಾಖಲು ಮಾಡಿ ಕೋರ್ಟಿನಲ್ಲಿ ನಡೆಸಿದ ಮೊಕದ್ದಮೆ ವಜ ಆಯಿತು. ಆದರೂ ಒಂದುವಾರ ಕಾಲ ಜೈಲು ಅನುಭವಿಸಿದೆವು. ಅದು ಒಳ್ಳೆಯದೂ ಆಗಿದ್ದು ಮುಂದೆ ಜೈಲಿಗೆ ಹೋಗಲು ಯಾವರೀತಿ ಸಜ್ಜಾಗಬೇಕು, ಜೈಲೆಂದರೆ ಹೇಗಿದೆ ಎಂಬ ಅನುಭವವನ್ನು ಪಡೆಯಲು ಅನುಕೂಲವೇ ಆಗಿದ್ದು, "ಆಗುವುದೆಲ್ಲ ಒಳ್ಳೆಯದಕ್ಕೆ" ಎನ್ನುವ ಹಿರಿಯರ ನುಡಿ ನಿಜವಾಯಿತು.

ಮುಂದೆ ಮಿರ್ಜಾ ಅವರು ಮೈಸೂರಿಗೆ ಬರುವ ಕಾರ್ಯಕ್ರಮವಿತ್ತು. ಅವರ ವಿರುದ್ಧ ಸೇಡು ತೀರಿಸಿಕೊಳ್ಳುವ ಯೋಜನೆಯನ್ನು ಎಲ್ಲರೂ ಸೇರಿ ಯೋಚಿಸಿದೆವು. ನಮ್ಮ ಆಲೋಚನೆಗೆ ಅವಕಾಶ ಎನ್ನುವಂತೆ ವಾರದಲ್ಲಿ ಮಿರ್ಜಾ ಅವರು ನಗರದ ಕಾರ್ಯಕ್ರಮಕ್ಕೆ ಬರಲಿದ್ದರು. ಇದನ್ನು ತಿಳಿದ ನಾವು ಕಳ್ಳಿಪುರಿ ನಂಜುಂಡಪ್ಪನ

ಮನೆಯಲ್ಲಿ ಮಿರ್ಜಾ ಅಣಕುಶವ ತಯಾರು ಮಾಡಿದೆವು. ನಂಜುಂಡಪ್ಪ ಸೊಗಸಾಗಿ ಗೊಂಬೆ ತಯಾರಿಕೆಯಲ್ಲಿ ನುರಿತಿದ್ದವನು. ಮಿರ್ಜಾರನ್ನು ಹೋಲುವಂತೆ ಮುಖವನ್ನು ತಿದ್ದಿದ್ದ. ಪೋಲೀಸರಿಗೆ ಶವ ನಂಜುಂಡಪ್ಪನ ಮನೆಯಲ್ಲಾದದ್ದು ಎಂದು ಗೊತ್ತಾಗದ ರೀತಿಯಲ್ಲಿ ನಡೆದುಕೊಂಡು ಶವವನ್ನು ಅರ್ಧರಾತ್ರಿಯಲ್ಲಿ ನಮ್ಮ ಕಚೇರಿಗೆ ಸಾಗಿಸಿ ಕೊಂಡೆವು. ಮಿರ್ಜಾರವರು ಹಾಲಿ ಡಿ. ಸಿ. ಸಿ. ಬ್ಯಾಂಕ್. ಪೋಲೀಸ್ ಸ್ಟೇಷನ್ ಬಳಿ ಹಳ್ಳದಲ್ಲಿರುವ ಮೈದಾನದಲ್ಲಿ ಸಂಜೆ 4 ಗಂಟೆಗೆ ಟ್ರೈನಿಂಗ್ ಸ್ಕೂಲಿನಲ್ಲಿ ತರಬೇತಿ ಪಡೆಯುವ ಉರ್ದು ಉಪಾಧ್ಯಾಯರುಗಳ ಸಭೆಗೆ ಬರುವರೆಂದು ಗೊತ್ತಾಯಿತು.

ನಮ್ಮ ಜೊತೆಗೆ ಇನ್ನಷ್ಟು ಹುಡುಗರನ್ನು ಪುಸಲಾಯಿಸಿ ಸೇರಿಸಿಕೊಂಡೆವು. ಎಲ್ಲರು ಕೈಯಲ್ಲಿ ಖಾಲಿಟಿನ್‌ಗಳನ್ನು ಹಿಡಿದು ಹತ್ತಾರು ತಂಡಗಳಲ್ಲಿ ನಗರದಲ್ಲಿ ಓಡಾಡಿ "ಇಂದು ನಿಧನರಾದ ಸಂಸ್ಥಾನದ ದೊಡ್ಡ ವ್ಯಕ್ತಿಯ ಅಂತ್ಯಸಂಸ್ಕಾರಕ್ಕೆ ಸ್ಮಶಾನ ಯಾತ್ರೆಯು ನಡೆಯಲಿದೆ. ನಾಗರೀಕರು ಸ್ಮಶಾನಯಾತ್ರೆಯಲ್ಲಿ ಪಾಲ್ಗೊಂಡು ಮೃತರ ಅಂತ್ಯದರ್ಶನ ಪಡೆದು, ಮೃತರ ಆತ್ಮಕ್ಕೆ ಶಾಂತಿ ಹಾರೈಸಬೇಕು ಎಂದು ನಾಗರೀಕರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇವೆ" ಎಂದು ಜನರಿಗೆ ತಿಳಿಸುತ್ತಿದ್ದೆವು. ಆದರೆ ದಿನಾಂಕ ಮತ್ತು ಸಮಯ ಮೆರವಣಿಗೆ ಬರುವ ದಾರಿ ತಿಳಿಸಲಿಲ್ಲ. ಜನಕ್ಕೋ ಕುತೂಹಲ. ಓಡೋಡಿ ಬಂದು ಟಿನ್ ಬಡಿವವರನ್ನು ಯಾರು ಸತ್ತವರು". ಮೆರವಣಿಗೆ ಬರುವ ದಾರಿ, ಸಮಯದ ವಿವರ ಕೇಳುತಿದ್ದರು. ಈ ವಿವರವನ್ನು ನಾಳೆ ಮಧ್ಯಾಹ್ನ ತಿಳಿಸಲಾಗುವುದು ಎಂದು ಹೇಳುತ್ತಿದ್ದೆವು. ಸಿ. ಐ. ಡಿ. ಗಳ ಮೂಲಕ ಜಿಲ್ಲಾಧಿಕಾರಿ ಗಳಾದ ಮೇಕ್ರಿಸಾಹೇಬರಿಗೆ ವಿಚಾರ ಗೊತ್ತಾಗಿ ನಮ್ಮ ಆರೇಳು ಜನರನ್ನು ವ್ಯಾನಿನಲ್ಲಿ ಕರೆತರುವಂತೆ ಹೇಳಿ ತಮ್ಮ ಕಛೇರಿಗೆ ಕರೆಸಿಕೊಂಡರು.

"ನಿಮ್ಮ ಸಂಘದ ಕಾರ್ಯಕ್ರಮವೇನು ? ಮೊಗಂ ಆಗಿ ಪ್ರಚಾರ ಮಾಡು ತ್ತಿದ್ದೀರಿ. ಯಾರು ಸತ್ತವ್ಯಕ್ತಿ ನಮಗೂ ಗೊತ್ತಾದರೆ ನಾವು ಸಹಿತ ಭಾಗವಹಿಸಿ ಮೃತರಿಗೆ ಸಂತಾಪ ವ್ಯಕ್ತಪಡಿಸಬಹುದಲ್ಲ" ಎಂದರು ಜಿಲ್ಲಾಧಿಕಾರಿಗಳು. ಮೊನ್ನೆ ಬೊಂಬಾಯಿನಲ್ಲಿ ಬಟ್ಟೆಮಿಲ್‌ಗಳ ಮುಷ್ಕರದಲ್ಲಿ ಮಡಿದ "ಜನ ಜಾಗೃತಿ" ಸಂಘದ ಮುಖಂಡನಿಗೆ ಅಶ್ರುತರ್ಪಣ ಅರ್ಪಿಸುವ ಕಾರ್ಯಕ್ರಮ ಎಂದು ಜಿಲ್ಲಾಧಿಕಾರಿಗಳಿಗೆ ತಿಳಿಸಿದೆವು. "ನಿಮ್ಮ ಸಂಘದ ಮುಖಂಡನ ನಿಧನಕ್ಕೆ ನೀವು ಸಂತಾಪ ವ್ಯಕ್ತಪಡಿಸುವುದು ಸರಿ ಎಂದರು. ಇದನ್ನೇಕೆ ನೀವು ಬಹಿರಂಗವಾಗಿ ಜನರಿಗೆ ಹೇಳದೆ ಮಗುಂ ಆಗಿ ನೀವು ಪ್ರಚಾರ ಮಾಡುತ್ತಿರುವುದು ? ಸಿ. ಐ. ಡಿ ಇಲಾಖೆಯವರಿಗೆ ದೊಡ್ಡ ಗಾಬರಿ ತಂದಿದ್ದು ನನ್ನಲ್ಲಿ ಓಡಿ ಬಂದಿದ್ದರು. ನಾಳೆ ಬೇರೆ ದಿವಾನರ ಕಾರ್ಯಕ್ರಮ ನಗರದಲ್ಲಿದೆ ಆ ಕಾರ್ಯಕ್ರಮಕ್ಕೇನಾದರೂ ಅಡಚಣೆಯಾದೀತೆಂಬುದು ಪೋಲೀಸರಿಗೆ ಆತಂಕ" ಎಂದರು. "ಇಲ್ಲ ಸಾರ್ ಬೊಂಬಾಯಿ ಮತ್ತು ಬೆಂಗಳೂರಿಂದ ಮುಖಂಡರು ಇಂದು ಸಂಜೆ ಬರಲಿದ್ದಾರೆ. ಅವರು ಬಂದನಂತರ ಕಾರ್ಯಕ್ರಮವನ್ನು ಗೊತ್ತುಪಡಿಸಿ

ಮೆರವಣಿಗೆ ಹೋಗುವ ದಾರಿ ಸಮಯ ಎಲ್ಲವನ್ನು ಜನರಿಗೆ ತಿಳಿಸಲಾಗುವುದು. ದಿವಾನರ ಕಾರ್ಯಕ್ರಮಕ್ಕೂ ನಮಗೂ ಏತರ ಸಂಬಂಧ'' ಎಂದೆವು.

ಕಳೆದವಾರ ಕಬ್ಬಳ್ಳಿಯಲ್ಲಿ ನಡೆದ ವೀರಶೈವರ ಸಮ್ಮೇಳನದಲ್ಲಿ ನಿಮ್ಮ ಸಂಘದ ಒಂದಿಬ್ಬರ ಅನವಶ್ಯಕ ವರ್ತನೆಯಿಂದ ದಿವಾನರು ತುಂಬಾ ಕುಪಿತರಾಗಿ ಈ ಹುಡುಗರನ್ನು ಹೀಗೆ ಬೆಳೆಯಬಿಡಬೇಡಿರಿ. ತಕ್ಕ ಬುದ್ಧಿ ಕಲಿಸಿ ಅವರುಗಳ ಊರಿಗೆ ಕಳುಹಿಸಿ ಎಂದು ತಿಳಿಸಿದರು. ನಾನು ನಿಮ್ಮ ಪರವಾಗಿ ''ಅವರೆಲ್ಲ ಒಳ್ಳೆ ಹುಡುಗರು ಏನೊ ಸಮಯ ಬಂತು ಹಾಗೆ ವರ್ತಿಸಿದರು ಎಂದು ದಿವಾನರಲ್ಲಿ ಶಿಫಾರ್ಸು ಮಾಡಿದೆ'' ಎಂದರು ಮೇಕ್ರಿ ಸಾಹೇಬರು. ಜಿಲ್ಲಾಧಿಕಾರಿಗಳ ಆದೇಶದಂತೆ ನಮ್ಮಿಬ್ಬರ ಮೇಲೆ ಪೋಲೀಸರು ಮೊಕದ್ದಮೆ ಹೂಡಿದ ವಿಚಾರ ಪೋಲೀಸರು ಜಿಲ್ಲಾಧಿಕಾರಿಗಳಿಗೆ ತಿಳಿಸಿದಂತಿರಲಿಲ್ಲ.

ದಿವಾನರು 4 ಗಂಟೆ ಕಾರ್ಯಕ್ರಮಕ್ಕೆ ಜಲದರ್ಶಿನಿಯಿಂದ ಬಂದು ದೊಡ್ಡ ಗಡಿಯಾರ ಬಳಸಿ ದೊಡ್ಡಪೇಟೆ ಮೂಲಕ ಪೂರ್ವನಿಯೋಜಿತ ಕಾರ್ಯಕ್ರಮಕ್ಕೆ ಬರುವವರಿದ್ದರು. ನಾವು ಮೂರು ಗಂಟೆಗೆ ಸರಿಯಾಗಿ ದೊಡ್ಡಪೇಟೆಯಲ್ಲಿ ಶವ ಮೆರವಣಿಗೆ ಬರಲಿದೆ ದಯಮಾಡಿ ಸರ್ವರು ಸಹಕರಿಸಿ ಅಂತ್ಯದರ್ಶನ ಪಡೆದು ಸಂತಾಪ ವ್ಯಕ್ತಪಡಿಸಿ ಎಂದು ಲಬೋ ಲಬೋ ಎಂದು ಬಡಿದುಕೊಂಡು ತಿಳಿಸಿದೆವು. 3½ ಗಂಟೆಗೆಲ್ಲ ಜನರು ಅಂಗಡಿ ಸಾಲುಗಳಲ್ಲಿ ಸಾಕಷ್ಟು ಸೇರಿದರು. ಬಹುಶಃ ಮಿರ್ಜಾ ಸಾಹೇಬರ ದರ್ಶನಾಕಾಂಕ್ಷಿಗಳೂ ಈ ಗುಂಪಿನಲ್ಲಿದ್ದಿರಬೇಕು.

ದಾರಿ ಉದ್ದಕ್ಕು ಅಲ್ಲಲ್ಲಿ ಪೋಲೀಸರು ಕಾವಲು ನಿಂತಿದ್ದರು. ನಮ್ಮ ಕಚೇರಿಯಿಂದ ಮಿರ್ಜಾ ಅವರ ಅಣಕುಶವ ಹೊತ್ತು ಬಂದೆವು. ಬಾಯಿ ಬಡಿದುಕೊಳ್ಳುತ್ತ ''ಮಿರ್ಜಾ ಅವರು ಇಂದು ಜಲದರ್ಶಿನಿಯಲ್ಲಿ ನಿಧನರಾದರಪ್ಪೋ, ಅವರ ಅಂತ್ಯ ಸಂಸ್ಕಾರಕ್ಕೆ ಬನ್ನಿ'' ಎಂದು ದುಃಖಿಸುತ್ತ ಜನರನ್ನು ಕೂಗುತ್ತಿದ್ದೆವು. ದಾರಿ ಉದ್ದಕ್ಕೂ ನಿಂತಿದ್ದ ಪೋಲೀಸ್ ಪೇದೆಗಳಿಗೆ ಏಕೋ ಏನೋ ನಮ್ಮ ಕಾರ್ಯಕ್ರಮಕ್ಕೆ ಅವರ ಸಹಾನುಭೂತಿ ನೀಡುವುದು ಎದ್ದು ಕಾಣುತ್ತಿತ್ತು. ಪೋಲೀಸ್ ಪೇದೆಗಳು ಮನಸ್ಸುಮಾಡಿದ್ದರೆ ಲ್ಯಾನ್ಸ್‌ಡೌನ್ ಬಿಲ್ಡಿಂಗ್ ಬಳಿಯೇ ಅಣುಕುಶವ ಕಿತ್ತು ಬಿಸಾಡಿ ಮೆರವಣಿಗೆ ಚದುರಿಸಬಹುದಿತ್ತು. ಹಾಗೂ ಹೀಗೂ ಬಡಿದುಕೊಳ್ಳುತ್ತ ಮಿರ್ಜಾ ಅವರ ಅಣಕುಶವ ಹೊತ್ತು ದೊಡ್ಡಪೇಟೆ ಅರ್ಧಕ್ಕೆ ಬಂದೆವು. ಆಗಲೇ 3¾ ಗಂಟೆಯಿರಬೇಕು. ಶವ ಹೊತ್ತ ನಮಗೆ ಚೆನ್ನಾಗಿ ಬಡಿದು ಶವವನ್ನು ಕಿತ್ತುಕೊಂಡು ರಾಜಶೇಖರ್, ಯು. ಕೆಂಚಪ್ಪ, ಚಂದ್ರಶೇಖರ, ಸುಬ್ಬಣ್ಣ ಅವರುಗಳನ್ನು ವ್ಯಾನಿನಲ್ಲಿ ಶವದೊಡನೆ ಗಾಂಧಿ ಸರ್ಕಲ್ ಕೋರ್ಟಿಗೆ ಕೊಂಡು ಹೋದರು. ನಾನು ಸಮೀಪದಲ್ಲಿದ್ದ ಚಿನ್ನ ಬೆಳ್ಳಿ ಅಂಗಡಿಗೆ ನುಸುಳಿ ತಪ್ಪಿಸಿಕೊಂಡೆ. ವಿಚಾರ ದಿವಾನರಿಗೆ ಗೊತ್ತಾಗಿ ಕಾರ್ಯಕ್ರಮ ರದ್ದುಮಾಡಿ ಬಿಟ್ಟರು ಎಂಬ ಸುದ್ದಿ ಗೊತ್ತಾಯಿತು. ಈ

ವಿಚಾರ ಉರ್ದು ಉಪಾಧ್ಯಾಯರುಗಳಿಗೆ ಗೊತ್ತಾಗಿ ಅವರುಗಳು ದಿವಾನರ ಪರವಾಗಿ ದಸ್ತಗಿರಿಯಾಗಿದ್ದ ಸ್ನೇಹಿತರುಗಳ ವಿರುದ್ಧ ಕೂಗಾಟ ಮಾಡುತ್ತ ಅವರುಗಳನ್ನು ಹೊರಗೆ ಹಿಡಿದು ತನ್ನಿ ಚೆನ್ನಾಗಿ ಬಡಿಯುತ್ತೇನೆ ಎಂದು ಕೂಗಾಡುತ್ತಿದ್ದರು.

ನನ್ನನ್ನು ಹುಡುಕಿ ಇನ್‌ಸ್ಪೆಕ್ಟರ್ ಸದಾಶಿವರಾವ್ ಬಂದರು. ಅಷ್ಟರಲ್ಲಿ ನಾನು ಸಹ ಅಂಗಡಿಯಿಂದ ಹೊರಬಂದಿದ್ದೆ. ಅಂಗಡಿ ಬಳಿಹೋಇದ್ದ ಪೋಲೀಸ್ ಪೇದೆಯನ್ನು ಕುರಿತು ''ಲೇ ಹಿಡಿದು ಎರಡು ಬಡಿಯೋ ಆ ಕರಿ ಹೃದಸಿಗೆ'' ಎಂದರು ಇನ್‌ಸ್ಪೆಕ್ಟರು. ''ಆತ ಏನು ಮಾಡಿದ ಎಂದು ಬಡಿಯಲಿ ಸ್ವಾಮಿ'' ಎಂದು ಪೇದೆ ಸಹಾನುಭೂತಿ ವ್ಯಕ್ತಪಡಿಸಿದರು. ಇನ್‌ಸ್ಪೆಕ್ಟರಿಗೆ ಇದು ಸ್ಥೈರಣೆ ತರಲಿಲ್ಲ. ನನ್ಮಕ್ಕಳು ಸರ್ಕಾರಿ ಸಂಬಳ ತಿಂದು ಪಿತೂರಿಕಾರರ ಸಂಚಿನಲ್ಲಿ ಸೇರಿ ಮೋಸಮಾಡ್ತೀರ ಎಂದು ಪೇದೆಯನ್ನು ಬೈದವನೆ ನನ್ನ ರಟ್ಟೆಹಿಡಿದು ಎಳೆದು ರಸ್ತೆ ಮಧ್ಯಕ್ಕೆ ಬೀಳುವಂತೆ ಮಾಡಿದ. ಜನ ಗಲಾಟೆ ಮಾಡಿದರು. ''ಸುಮ್ಮನೆ ನಿಂತಿರುವವನನ್ನು ನಾಯಿಯಂತೆ ಎಳೆದು ನೂಕುತ್ತೀರಲ್ಲ,ಇದು ನಿಮಗೆ ನ್ಯಾಯವೇ ''? ಮುಂತಾಗಿ ಮೂದಲಿಸಿದರು.

ವ್ಯಾನಿನಲ್ಲಿ ಕೂರಿಸಿ ಕೋರ್ಟಿಗೆ ಕರೆದುಕೊಂಡು ಹೋಗುತ್ತ ಸದಾಶಿವರಾವ್ ನನ್ಮಕ್ಕಳ ಈ ಊರಿನಲ್ಲಿ ನೀವಿರಬೇಕು. ಇಲ್ಲ ನಾವಿರಬೇಕು ಅನ್ನೋದನ್ನು ರಾತ್ರಿಗೆ ನಿಮಗೆಲ್ಲಾ ಬಿಸಿ ತೋರಿಸ್ತೇವೆ. ಆ ರುಚಿ ತೋರಿಸದೇ ಹೋದೆವಲ್ಲ ಅದು ಇಂದು ನಮ್ಮ ಮುಖಕ್ಕೆ ಮೇಲಧಿಕಾರಿಗಳು ಉಗಿಯುವಂತೆ ಆಗಿದೆ'' ಎಂದು ಏನೇನೋ ರೋದಿಸುತ್ತ ಲಾಠಿಯಿಂದ ಜೋರಾಗೆ ತಿವಿಯುತ್ತಿದ್ದ. ನಾನು ಏಟಿನ ನೋವಿನಿಂದ ''ನಮ್ಮ ಗೊಡ್ಡು ಬೆದರಿಕೆಯಿತ್ತಲ್ಲ. ಆ ಬೆದರಿಕೆ ಹಾಕಿ ಬೊಂಬಾಯಿನಿಂದ ಬಂದವರೆ. ಬಾಂಬು ತಂದವ್ರೆ. ನಿಮ್ಮ ನಿಮ್ಮ ಮನೆಯವರು ಇಲ್ಲ ಅನ್ನಿಸ್ತೇವೆ. ನಾವೇನೊ ಭಗತ್‌ಸಿಂಗ್ ದಾರಿಯಲ್ಲಿ ಹೋಗಲು ಕಾಯ್ತಿದ್ದೇವೆ'' ಎಂದೆ. ಪಾಪ ಇನ್‌ಸ್ಪೆಕ್ಟರು ಗಾಬರಿ ಆದರು ''ಅಲ್ಲಪ್ಪ ದಿವಾನರು ನಿಮಗೇನು ಮಾಡಿದರು ಅಂತ ಹೀಗೆಲ್ಲ ಮಾಡ್ತೀರ. ಪಾದ್ರಿಸಾಹೇಬರ ಕೆಲಸ ನಿಲ್ಲಿಸ್ತೀರಿ ನಾವು ಬೇಡ ಅಂದೆವ. ಹೊಲೆಯರನ್ನು ದೇವಸ್ಥಾನಕ್ಕೆ ಬಿಡಬೇಕು ಅಂತೀರ ಅದನ್ನ ನಾವು ಬೇಡ ಅನ್ನೋದಿಲ್ಲ. ಗಾಂಧೀಜಿ ಹೇಳೋ ಹಂಗೆ ಪರದೇಶಿ ಬಟ್ಟೆ ಸುಡ್ತೀರಿ ಅಂಗಡಿ ಅಂಗಡೀನೆ ಸುಡಿ ನಿಮ್ಮ ತಂಟೆಗೆ ನಾವು ಬಂದಾಗ ಕೇಳಿ ಮುಂತಾಗಿ ತಿಳಿಸಿ'' ಸ್ನೇಹಿತರ ಜೊತೆ ನನ್ನನ್ನು ಇಳಿಸಿ ನಿಟ್ಟುಸಿರು ಬಿಟ್ಟರು ಇನ್‌ಸ್ಪೆಕ್ಟರು.

ಕೋರ್ಟಿನ ಹತ್ತಿರ ಮುಸ್ಲಿಂ ಉಪಾಧ್ಯಾಯರು ''ಜನ ಜಾಗೃತಿ ಸಂಘ''ದ ಸದಸ್ಯರಾದ ನಮ್ಮಮೇಲೆ ಹಲ್ಲೆಮಾಡಲು ಸಿದ್ಧರಾಗುತ್ತಿದ್ದರೋ ಏನೋ, ಖಾಸಗಿ ಜನರು ಅಧಿಕ ಸಂಖ್ಯೆಯಲ್ಲಿ ಹಿಂದೂಗಳು ಸೇರಿದರು. ಹಾಗೂ ಹೀಗು ಸಂಜೆ 6 ಗಂಟೆ ಸಮಯಕ್ಕೆ ಗಾಂಧಿಚೌಕ ಜನರಿಂದ ತುಂಬಿ ತುಳುಕಿತು. ಮುಸ್ಲಿಮರು ಹಿಂದು ಹುಡುಗರನ್ನು ಹೊಡಿತಾರಂತೆ ಒಂದು ಕೈನೋಡುವ ಎಂದು ಹಿಂದೂಗಳು,

ಕನ್ನೇಗೌಡ್ನ ಕೊಪ್ಪಲ ಕುಸ್ತಿ ಅಖಾಡದವರು ಕಾಚಾ ಕಟ್ಟಿ ಬಂದು ನಮ್ಮ ಸಮೀಪ ನಿಂತು "ಯಾರ್ರೋ ಇವರ್ನ ಹೊಡಿಯೋರು ತಾಕತ್ತಿದ್ದರೆ ಬಂದು ಇವರ್ನ ಮುಟ್ಟಿ ನಿಮ್ಮ ಎದೆಗಾರಿಕೆ ನೋಡ್ತೀವಿ" ಮುಂತಾಗಿ ಕೂಗಾಟ ಹಾಕುತ್ತಿದ್ದರು. ಪಾಪ ಪೋಲೀಸರು ಮೂಕರಂತೆ ಪರಿಸ್ಥಿತಿ ನೋಡ್ತಾ ನಿಂತಿದ್ದರು ಹಿಂದೂಗಳ ಪ್ರವಾಹ ಹರಿದು ಬರುತ್ತಿತ್ತು.

ಜಿಲ್ಲಾಧಿಕಾರಿ ಮೇಕ್ರಿಸಾಹೇಬರು ಸ್ಥಳಕ್ಕೆ ಬಂದರು. ದಯಮಾಡಿ ಎಲ್ಲರೂ ಚದರಿ ಹೋಗಿರಿ ಎಂದು ವಿನಂತಿಸಿಕೊಂಡು, ನನ್ನನ್ನು ವ್ಯಾನಿನ ಬಾನೆಟ್ ಮೇಲೆ ನಿಲ್ಲಿಸಿ "ಜನಗಳಿಗೆ ಹೇಳಿ ನಮಗೇನು ಮಾಡಿಲ್ಲ ಎಂದು ತಿಳಿಸು" ಎಂದರು. ನಾನು ಕೈ ಮುಗಿದು "ನಮಗೆ ತೊಂದರೆ ಏನು ಮಾಡುತ್ತಿಲ್ಲ, ನಮ್ಮನ್ನು ಬಿಡುಗಡೆ ಸಹ ಮಾಡಿದ್ದಾರೆ ಮುಂತಾಗಿ ತಿಳಿಸಿದೆ" ಜನರು ಚದುರಲು ಆರಂಭವಾಯ್ತು. ಆದರೂ ಹಿಂದುಗಳು ಮುಸ್ಲಿಮರನ್ನು ಕುರಿತು, "ಮಿರ್ಜಾ ಇದ್ದಾರೆ ಅನ್ನುವ ಕೊಬ್ಬಿನಿಂದ ಹಿಂದು ಹುಡುಗರ ಮೇಲೆ ಕೈಮಾಡಿದರೆ ನಿಮ್ಮ ಅಳಿವು ಉಳಿವಿನ ಮಾತಾದೀತು" ಎಂದು ಎಚ್ಚರಿಸಿದರು.

ಪರಿಸ್ಥಿತಿ ಹತೋಟಿ ಮೀರಿ ಹೋಗುತ್ತಿದೆ ಎನ್ನುವುದನ್ನು ಪರಿಶೀಲಿಸಿ ಪರಿಸ್ಥಿತಿ ಹತೋಟಿಗೆ ತರಲು ಒಬ್ಬನಾದರು ಕಾಂಗ್ರೆಸ್ ಬ್ರಾಹ್ಮಣ ಮುಖಂಡ ಆ ಗುಂಪಿಗೆ ತಲೆ ಹಾಕಲಿಲ್ಲ. ಗೋಪಾಲಕೃಷ್ಣಶೆಟ್ಟರು. ಜನಾರ್ದನನಾಯ್ಡು. ಎಂ. ಆರ್. ಸಿ. ಬಸಪ್ಪ, ರಾಜಂಶೆಟ್ಟಿ, ದಾಸಪ್ಪನವರ ಆಫೀಸಿನಿಂದ ಟಿ. ಮರಿಯಪ್ಪನವರು. ಚಾಮುಂಡಯ್ಯನವರು ಮುಂತಾದ ಮುಖಂಡರುಗಳು ಬಂದು ನಮ್ಮನ್ನು ನೋಡಿ ಸಹಾನುಭೂತಿ ವ್ಯಕ್ತಪಡಿಸಿದರಲ್ಲದೆ, ನಮ್ಮನ್ನು ಬಿಡುಗಡೆ ಮಾಡಲು ಒತ್ತಾಯ ಮಾಡಿದರು.

ನಮ್ಮನ್ನು ಬಿಡುಗಡೆ ಮಾಡಿರುವುದಾಗಿ ತಿಳಿಸಿದ ಪೋಲೀಸರು. ಅವರಿಗೆ ತಿಂಡಿ ಕಾಫಿ ಕೊಡಿಸಿ ಕಳುಹಿಸುತ್ತೇವೆ ಎಂದು ಮುಖಂಡರಿಗೆ ಸುಳ್ಳು ಹೇಳಿದರು. ಮುಖಂಡರೆಲ್ಲ ಹೋದಮೇಲೆ ನಮ್ಮನ್ನು ಮತ್ತೆ ವ್ಯಾನು ಹತ್ತಿಸಿದರು. ಕೋರ್ಟ್ ಸಮಯ ಕಳೆದಿತ್ತು. "ನಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತೀರಿ" ಎಂದು ಕೇಳಿದೆವು. "ಸ್ಮಶಾನಕ್ಕೆ ಎಂದರು" ಇನ್‌ಸ್ಪೆಕ್ಟರ್. ಹೊಟ್ಟೆತುಂಬಾ ತಿಂಡಿ ಕೊಡಿಸಿದರು. ಚಾಮುಂಡಿ ಬೆಟ್ಟದ ತಪ್ಪಲಿಗೆ ವ್ಯಾನ್ ತಂದು ನಿಲ್ಲಿಸಿದರು. ನಮ್ಮ ಬಗ್ಗೆ ಸಹಾನುಭೂತಿಗಳ ಮಾತುಗಳಿಂದ ತಮ್ಮ ಅಳಲನ್ನು ತೋಡಿಕೊಂಡರು."ನಿಮ್ಮನ್ನು ಹೊಡೆದು ಬಡಿದು ಹೆದರಿಸಿ ಎಂದು ಮೇಲಿನವರು ಹೇಳುತ್ತಾರೆ. ಅವರ ಮಾತನ್ನು ಕೇಳುವುದೋ ಅಮಾಯಕರಾದ ತಮ್ಮನ್ನು ನೋಡುವುದೋ ಹೀಗೆ ನಮ್ಮಲ್ಲಿ ತೊಳಲಾಟವಾಗಿ ಹೇಳತೀರದಾಗಿದೆ" ಎಂದರು. "ನೀವೇಕೆ ಯೋಚನೆ ಮಾಡಬೇಕು. ಮೇಲಿನವರು ಹೇಳಿದಂತೆ ಕೇಳಿರಿ" ಎಂದು ತಿಳಿಸಿದೆವು. ಪಾಪ ಅವರಿಗೆ ಏನೆನ್ನಿಸಿತೋ ಆರೇಳು ಜನ ಪೋಲೀಸರು ವ್ಯಾನಿನಿಂದ ಇಳಿದು ದೂರದಲ್ಲಿ ನಿಂತು ಸ್ವಲ್ಪ ಕಾಲ

ಆಲೋಚಿಸಿ ಬಂದು ವ್ಯಾನುಹತ್ತಿ ಮೈಸೂರಿಗೆ ಹೋಗುವಂತೆ ತಿಳಿಸಿದರು. ಲಕ್ಷ್ಮೀಪುರಂ ಸ್ಟೇಷನ್‌ಗೆ ಕರೆದುಕೊಂಡು ಹೋದರು.

ರಾತ್ರಿ ಊಟಕ್ಕೆ ಹೇಳಿದರು. ನಮಗೆ ಸಂಜೆ ತಿಂಡಿ ತಿಂದಿದ್ದು ಹೊಟ್ಟೆ ಹಸಿವು ಇರಲಿಲ್ಲ. ಮಲಗಲು ಅನುಕೂಲವಾದ ಹಾಸಿಗೆ ಹೊದಿಕೆ ಕೊಟ್ಟಿದ್ದರು. ಬೆಳಗ್ಗೆ ಸಮೀಪದ ಹೋಟೇಲಿನಲ್ಲಿ ಸ್ನಾನಮಾಡಿಸಿ ಹೊಟ್ಟೆ ತುಂಬ ತಿಂಡಿ ಕೊಡಿಸಿದರು. ಅದೇಕೊ ಏನೋ ಪೋಲೀಸ್ ನೌಕರವಾನರಲ್ಲಿ ನಮ್ಮ ಬಗ್ಗೆ ತುಂಬಾ ಗೌರವ ಹಾಗೂ ಕನಿಕರವುಂಟಾಗಿದ್ದುದು ನೋಡಿ ನಮಗೆ ತುಂಬಾ ಆಶ್ಚರ್ಯವಾಯಿತು, ಈ ವಾತಾವರಣದಲ್ಲಿ ಸಿ. ಬಿ. ಪೊಣ್ಣಪ್ಪನಾಗಲೀ ಆದಿರಾಜಯ್ಯನಾಗಲಿ ಇರಲಿಲ್ಲ. ಟಿ. ಎಸ್. ಸುಬ್ಬಣ್ಣ, ಯು. ಕೆಂಚಪ್ಪ, ರಾಜಶೇಖರ ಮತ್ತು ನನ್ನನ್ನು ಮಾತ್ರ ಕೋರ್ಟಿಗೆ ಹೋಗಲು ವ್ಯಾನ್ ಹತ್ತಲು ಹೇಳಿ ಶಂಭುವನ್ನು ತುಂಬಾ ಚಿಕ್ಕವನೆಂದು ಮನೆಗೆ ಹೋಗುವಂತೆ ಹೇಳಿದರು. ಕೋರ್ಟಿನಿಂದ ಜೈಲಿಗೆ ಕರೆದುಕೊಂಡು ಹೋಗುವಿರಾ ? ಎಂದು ತಿಳಿದುಕೊಂಡು ಜೈಲಿಗೆ ಬೇಕಾದ ಸಾಬೂನು, ಹಲ್ಲುಪುಡಿ. ಟವಲ್‌ಗಳನ್ನು ಆಫೀಸಿಗೆ ಹೋಗಿ ತೆಗೆದುಕೊಂಡು ಹೋದೆವು.

ಕೋರ್ಟಿಗೆ ಹಾಜರುಮಾಡಿ ಸಾರ್ವಜನಿಕ ಜಾಗದಲ್ಲಿ ಜನರ ನೆಮ್ಮದಿಯನ್ನು ಹಾಳು ಮಾಡಿದ್ದೇವೆಂದು. ಆದಕ್ಕಾಗಿ ಪೋಲೀಸ್ ಕಾಯಿದೆ ಅನ್ವಯ ಶಿಕ್ಷೆ ವಿಧಿಸಬೇಕೆಂದು ಪ್ರಾಸಿಕ್ಯೂಟಿಂಗ್ ಇನ್‌ಸ್ಪೆಕ್ಟರು ವಾದಿಸಿದರು. "ಪೋಲೀಸರು ಹೇಳುವುದು ಸುಳ್ಳು ಸ್ವಾಮಿ ಮಿರ್ಜಾ ಸಾಹೇಬರ ಅಣಕು ಶವ ಹೊತ್ತು ಹೋಗುತ್ತಿದ್ದೆವು ಅದನ್ನು ಜನರು ದೂರ ನಿಂತು ನೋಡಿದರು. ನಮ್ಮ ಶವಯಾತ್ರೆಯಿಂದ ಜನರ ನೆಮ್ಮದಿ ಹಾಳಾಗಿಲ್ಲ" ಮುಂತಾಗಿ ಜಡ್ಜರಿಗೆ ನಾನು ವಿವರಿಸಿದೆ. ಸುಬ್ಬಣ್ಣ ಮಧ್ಯಬಾಯಿ ಹಾಕಿ "ಪಕ್ಕದ ಹಾಲಿನಲ್ಲಿ ನೆನ್ನೆ ಕಿತ್ತು ತಂದ ಮಿರ್ಜಾ ಸಾಹೇಬರ ಅಣಕು ಶವವಿದೆ ಬೇಕಾದರೆ ತರಿಸಿ ನೋಡಿ" ಎಂದು ಜಡ್ಜರಿಗೆ ಹೇಳಿದ. ನೆನ್ನೆ ಇದೇ ಕೋರ್ಟು ಬಳಿ ನಡೆಯಬೇಕಾಗಿದ್ದ ದಾಂಧಲೆ, ದೇವರ ದಯದಿಂದ ನಿಂತು ಪರಿಹಾರವಾದುದು ಎಲ್ಲ ವಿಚಾರ ಜಡ್ಜರಿಗೆ ಅರಿವಾಗಿರಬೇಕು.

ಪೋಲೀಸರು ಅಣಕುಶವದ ವಿಚಾರ ಒಪ್ಪಿಕೊಂಡರು. ಆ ಶವವನ್ನು ಕೋರ್ಟಿಗೆ ಹಾಜರು ಮಾಡುವಂತೆ ತಿಳಿಸಿದರು. ನಮ್ಮ ಪರವಾಗಿ ಗೋಪಾಲಕೃಷ್ಣಶೆಟ್ಟರು ವಾದ ಮಾಡಿದರು. ಏನು ಉಪಯೋಗವಾಗಲಿಲ್ಲ. ಆಗಿನ ಕೋರ್ಟುಗಳು ಸ್ವತಂತ್ರವಾದ ತೀರ್ಪನ್ನು ರಾಜಕೀಯ ಮೊಕದ್ದಮೆಗಳಲ್ಲಿ. ಕೊಡುವ ಸ್ಥಿತಿಯಲ್ಲೇ ಇರಲಿಲ್ಲವೆಂದು ವಕೀಲರುಗಳು ಆಡಿಕೊಳ್ಳುತ್ತಿದ್ದರು. 20 ದಿನಗಳ ಸಾದಾ ಸಜಾ ತಲಾ 50 ರೂ ದಂಡ ವಿಧಿಸಿದರು. "ಸ್ವಾಮಿ ನಮಗೂ ಹಣಕ್ಕೂ ಎಣ್ಣೆ ಸೀಗೆಕಾಯಿ ಇದ್ದಂತೆ ದಂಡಕ್ಕೆ ಹಣವನ್ನು ತಾವೂ ಭಾರತೀಯರಾದ್ದರಿಂದ ತಾವೇ ಭರಿಸಿದರೂ ಸರಿ" ಎಂದೆವು. ನಗುತ್ತ ದಂಡಕ್ಕೆ ಬದಲು 3 ದಿನ ಹೆಚ್ಚಿಗೆ ಸಜ ಅನುಭವಿಸುವ ತೀರ್ಪು

ನೀಡಿದರು. ಕೆಂಚಪ್ಪ 3 ದಿನವನ್ನು 5 ದಿನ ಮಾಡಿ ಒಟ್ಟು 25 ದಿನ ಸಜಾ ಮಾಡಿ ಸ್ವಾಮಿ, ಜೈಲು ಹೇಗಿದೆ ಅಲ್ಲಿನ ವಾತಾವರಣ ಏನು ಎಂಬುದನ್ನು ತಿಳಿದುಕೊಂಡು ಸ್ವರಾಜ್ಯ ಹೋರಾಟಕ್ಕೆ ವರ್ಷಾನುಗಟ್ಟಲೆ ಜೈಲಿನಲ್ಲಿರಬೇಕಲ್ಲ. ಅನುಭವಪಡೆದು ಬರುತ್ತೇವೆ'' ಎಂದ. ಪ್ರಾಸಿಕ್ಯೂಟಿಂಗ್ ಇನ್‌ಸ್ಪೆಕ್ಟರು ಕೆಂಚಪ್ಪನನ್ನು ''ಈತನ ತಲೆ ಹರಟೆಗೆ ಬೀಗ ಹಾಕಿ'' ಎಂದು ಜಡ್ಜರನ್ನು ಕೇಳಿಕೊಂಡರು. ''ಈ ತರಹ ಅಪರಾಧಿಗಳಿಗೆ ನನ್ನಲ್ಲಿ ಸರಿಯಾದ ಬೀಗವಿಲ್ಲ ನಿಮ್ಮ ಬೀಗ ಸರಿಹೋದರೆ ಹಾಕಿನೋಡಿ'' ಎಂದು ನಗುತ್ತ ಅಪರಾಧಿಗಳನ್ನು ಕರೆದುಕೊಂಡು ಹೋಗಿ ಎಂದು ಪೋಲೀಸರಿಗೆ ತಿಳಿಸಿದರು.

ನನಗೆ ಮತ್ತು ಸುಬ್ಬಣ್ಣನಿಗೆ ಜೈಲಿನಲ್ಲಿ ವಾರ್ಡರುಗಳ ಪರಿಚಯವಾಗಿತ್ತು. ಚೀಫ್ ವಾರ್ಡರ್ ಆಂಗ್ಲೊ ಇಂಡಿಯನ್ ರೆಫರಿ ಎನ್ನುವರು ನಮ್ಮನ್ನು ಕೋಟೆ ಹೆಬ್ಬಾಗಿಲಿನಂತಿರುವ ಜೈಲ್‌ಗೇಟಿನ ಕಿರುಬಾಗಿಲಿನಿಂದ ಒಳಕ್ಕೆ ಕರೆದುಕೊಂಡು ಪೋಲೀಸರ ವಶದಿಂದ ತಮ್ಮ ವಶಕ್ಕೆ ವಹಿಸಿಕೊಂಡು. ''ಇನ್ನೂ ವಾರ ಕಳೆಯಲಿಲ್ಲ ಆಗಲೇ ಪಂಚರಂಗಿಗಳಾಗಿ ಬಂದಿರಲ್ಲ'' ಎಂದರು. ''ಪೋಲೀಸರು ಬಿಡಬೇಕಲ್ಲ ಸ್ವಾಮಿ'' ಎಂದೆ. ನಾಲ್ಕು ಮಂದಿಗೂ ಹೊಸದಾದ ತಲಾ ಎರಡು ಮುಚ್ಚಳ, ಒಂದೊಂದು ಮಗೆ (ಕುಡಿಕೆ)ಕೊಟ್ಟರಲ್ಲದೆ, ನಿಮಗೆ ಸಾದಾಸಜಾ ಕೊಟ್ಟಿದ್ದಾರೆ. ನೀವು ನಿಮ್ಮ ಬಟ್ಟೆಯನ್ನೇ ಹಾಕಿಕೊಳ್ಳಬಹುದು ಇಲ್ಲ ಜೈಲು ಬಟ್ಟೆಯನ್ನಾದರು ಹಾಕಿಕೊಳ್ಳಬಹುದು ಎಂದರು ಗುಮಾಸ್ತರು. ನಾವು ಜೈಲು ಡ್ರೆಸ್ ಹಾಕಿ ನೋಡೋಣ ಹೇಗೆ ಕಾಣುತ್ತೇವೆಂದು ಜೈಲು ಜುಬ್ಬ ಮತ್ತು ಟೋಪಿ ಧರಿಸಿ ಒಬ್ಬರಿಗೊಬ್ಬರು ನೋಡಿ ಆನಂದಿಸಿದೆವು. ನಮ್ಮಲ್ಲಿ ದುಡ್ಡು ಕಾಸಿರಲಿಲ್ಲ.ಕೇವಲ ಗಣೇಶ ಬೀಡಿ ನನ್ನ ಬಳಿ ಮತ್ತು ಕೆಂಚಪ್ಪನ ಬಳಿಯಿದ್ದು ಏನೋ ದಾಕ್ಷಿಣ್ಯಕ್ಕೆ ಬಿಟ್ಟುಕೊಡುತ್ತೇನೆ ಎಂದರು ಗುಮಾಸ್ತರು. ಅವರಿಗೆ ಸಲಾಂ ಹಾಕಿ ಮುಚ್ಚಳ ಮತ್ತು ಕುಡಿಕೆ ತೆಗೆದುಕೊಂಡು ಊಟದ ಗುಮ್ಮಿಗೆ ಹೋದೆವು. ಮರೆತಿದ್ದೆ ಇಂದು ಬರುವಾಗ ರೊಟ್ಟಿನ ಜೊತೆ ಸ್ವಲ್ಪ ಅನ್ನ ಕೊಡಿಸಲು ಜಡ್ಜರನ್ನು ಕೇಳಿದೆವು. ಜೈಲರು ಅನುಕೂಲ ಮಾಡುವರೆಂದು ತಿಳಿಸಿದ್ದರು. ಆ ರೀತಿ ಆಗಲಿಲ್ಲ. ನಮ್ಮ ನಾಲ್ವರಿಗೂ ಜೈಲಿನಲ್ಲಿ ಕೊಡುವ 80 ತೊಲ ರಾಗಿ ರೊಟ್ಟಿ ಜಾಸ್ತಿಯಾಗುತ್ತಿತ್ತು. ಬಡಿಸುವಾತನಿಗೆ ಹೇಳಿ ಅರ್ಧ ರೊಟ್ಟಿ ಮುರಿದು ವಾಪಸ್ಸು ಕೊಟ್ಟು ಸ್ವಲ್ಪ ಅನ್ನ ಕೊಡುತ್ತೀಯಪ್ಪ ಎಂದು ಆತನಲ್ಲೇ ಅಂಗಲಾಚಿ ರೊಟ್ಟಿನ ಜೊತೆ ಸ್ವಲ್ಪ ಅನ್ನಕ್ಕೂ ದಾರಿ ಮಾಡಿಕೊಂಡೆವು.

ನಮ್ಮ ನಾಲ್ಕು ಜನಕ್ಕು ವಿಶಾಲವಾದ ಬ್ಯಾರಕ್ ಕೊಟ್ಟರು. ಬ್ಯಾರಕ್ಕಿನಲ್ಲಿ ಅಲಾಯದ ಕಕ್ಕಸಿದ್ದು ನಮಗೆ ಈ ಸಾರಿ ತೊಂದರೆ ಆಗಲಿಲ್ಲ. ಕೋರ್ಟಿಗೆ ಹೋಗುವ ಗುಮಾನಿ ಖೈದಿಗಳು, ಗೃಹಕೈಗಾರಿಕೆಯಲ್ಲಿ ಕೆಲಸ ಮಾಡುವ ಖೈದಿಗಳು ತಮ್ಮ ಕೆಲಸದ ಮೇಲೆ ಹೋಗಿದ್ದು ಇಡೀ ಬ್ಯಾರಕ್‌ಗಳು ಖಾಲಿ ಇದ್ದು ನಮಗೆ ಬೇಜಾರು ತರುವಂತಿತ್ತು. ಐದಾರು ಮಂದಿ ಸಾಲ ತೀರಿಸಲಾರದೆ ಸಾಲ ಕೊಟ್ಟವರ ಛತ್ರದಿಂದ

ಜೈಲನ್ನು ಅನುಭವಿಸುತ್ತಿದ್ದವರಲ್ಲಿ ಮೂರು ಜನರಿದ್ದರು. ಅವರನ್ನು ಭೇಟಿ ಮಾಡಿ ಸಾಲ ತೀರಿಸದೇ ಹೋದರೆ ಜೈಲು ಅನುಭವಿಸಿದರೆ ಸಾಲ ತೀರ್ವೆಯಾಗುವುದೇ ಮುಂತಾಗಿ ಅವರನ್ನು ಚೆನ್ನಾಗಿ ಕೊರೆದೆವು. ಅವರಿಗಂತು ನಮ್ಮ ಕೊರೆತ ಸಾಕು ಬೇಕಾಗಿ ಸ್ವಲ್ಪ ಬಿಸಿಲಿಗೆ ಮೈ ಒಡ್ಡಿ ಬರುತ್ತೇವೆಂದು ಬ್ಯಾರಕ್‌ನಿಂದ ಹೊರನಡೆದರು.

ಇನ್ನು ಉಳಿದವರು ಜೈಲರ್ ಸಾಹೇಬರು. ಇಂದು ಏಕವಚನದಲ್ಲಿ ಮಾತನಾಡು ವುದನ್ನು ಬಿಟ್ಟಿದ್ದರು. ಆಫೀಸ್ ಬಳಿ ಹೋದಕೂಡಲೇ"ಬನ್ನಿ ಬನ್ನಿ ಏನು ಸಮಾಚಾರ ಊಟ ಚೆನ್ನಾಗಿತ್ತೆ ರಾತ್ರಿ ನಿದ್ರೆ ಬಂತೆ'' ಮುಂತಾಗಿ ಕೇಳಿದರು. ''ಊಟ ತಿಂಡಿ ಬಿಡಿ ಸ್ವಾಮಿ ಏನು ಸೊಗಸಾದ್ದು, ಯಾವ ಆನಂದಭವನವೂ ನಿಮ್ಮ ಜೈಲಿನ ಸಾಂಬಾರು ಮಾಡಲಾರವು. ನಿದ್ರೆಗೇನು ಸೊಳ್ಳೆ ಹೆಸರಿಲ್ಲ. ನೈರ್ಮಲ್ಯದಿಂದಿರುವ ಬ್ಯಾರಕ್‌ಗಳು ತಲೆ ಕೊಟ್ಟಕೂಡಲೇ ನಿದ್ರೆ ಬರುತ್ತೆ'' ಮುಂತಾಗಿ ತಿಳಿಸಿ, ಸ್ವಲ್ಪ ಅವರನ್ನು ಬೆನ್ನು ತಟ್ಟಿಯೇ ಮಾತನಾಡಿದೆವು. ಅವರಿಗೂ ಖುಷಿ ಆಯ್ತು. ಆಗಲಿ ಹೋಗಿ ಬನ್ನಿ ಎಂದರು. ಹಾಗಲ್ಲ, ಮಾಡಲು ಕೆಲಸವಿಲ್ಲ ಸುಮ್ಮನೆ ಕೂರುವುದು ನಮ್ಮಿಂದಾಗದ ಕೆಲಸ ನಮಗೂ ಏನಾದರು ಕೆಲಸ ಕೊಡಿ ಎಂದೆವು.

ಕೈಗಾರಿಕೆ ಷೆಡ್‌ಗಳಿಗೆ ಕರೆದುಕೊಂಡು ಹೋಗಿ ನೇಯ್ಗೆ ವಿಭಾಗದಲ್ಲಿ ನೂಲನ್ನು ಕಡುಪು ಮಾಡುವ ಕೆಲಸಕ್ಕೆ ನೇಮಿಸಿದರು; ದಾರ ಕಡುಪು ಮಾಡುವ ಮೂವರನ್ನು ಬಟ್ಟೆಗೆ ಗಂಜಿಹಾಕುವ ಕೆಲಸಕ್ಕೆ ಕಳುಹಿಸಿದರು. ನಾವು ಸುಮಾರು 2 ಘಂಟೆ ನೂಲು ಕಡಪು ಮಾಡಿದೆವು. ಮುಂಗೈ ನರಗಳು ಉಬ್ಬಿನಿಂತು ಮೊಣಕೈ ನೋಯಲು ಪ್ರಾರಂಭವಾಯಿತು. ಹಾಗೂ ಹೀಗೂ ಮಧ್ಯಾಹ್ನದ ರೊಟ್ಟಿವೇಳೆ ಹೊತ್ತು ಕೆಲಸ ಮಾಡಿದೆವು. ಜೈಲರ್ ಹತ್ತಿರ ಹೋಗಿ ಒಂದೇ ದಿವಸದಲ್ಲಿ ಪೂರ್ತಿ ವೇಳೆ ಕೆಲಸ ಮಾಡಲು ಸಾಧ್ಯವಾಗದು ಆಗೀಗ ಸ್ವಲ್ಪ ಮಾಡುತ್ತಿದ್ದು, ನುರಿತಮೇಲೆ ಪೂರ್ತಿ ಕೆಲಸ ಮಾಡ್ತೇವೆ ಎಂದು ತಿಳಿಸಿದೆವು. ಬ್ಯಾರಕ್‌ಗೆ ಹೋಗಿ ಸ್ವಲ್ಪ ನಿದ್ರೆಹೋದೆವು. 4½ ಗಂಟೆಗೆ ಊಟಕ್ಕೆ ಕರೆಗಂಟೆ ಬಂತು. ಮುಚ್ಚಳ ತೊಳೆಯಲು ಹೋದರೆ ಮೊಣಕೈ ಆಡಿಸಲು ಆಗದಂತಾಗಿದೆ. ಅಂತು ಹೇಗೋ ನಿಭಾಯಿಸಿಕೊಂಡು ನೂಲು ಕಡುಪಿನ ಕೆಲಸವನ್ನು ಬಿಡುಗಡೆ ಆಗುವತನಕ ನಿಭಾಯಿಸಿದೆವು. ಕೇವಲ ವಾರದಲ್ಲಿ ಜೈಲು ಸಿಬ್ಬಂದಿ ಮತ್ತು ಖೈದಿಗಳ ಗುಂಪಿನವರಿಗೂ ನಾವು ಬೇಕಾದ ವ್ಯಕ್ತಿಗಳಾದೆವು. ಸಿ. ಬಿ. ಮೊಣ್ಣಪ್ಪ ಮತ್ತು ಶಂಭು ಕೆಲವು ಪುಸ್ತಕಗಳನ್ನು ತಂದುಕೊಟ್ಟರು. ಅವುಗಳನ್ನು ರಾತ್ರಿ ಓದಲಾಗದ ಮಂದ ಬೆಳಕು ಬ್ಯಾರಕ್ಕಿನಲ್ಲಿ. ಕೈಗಾರಿಕಾ ಷೆಡ್‌ನಲ್ಲಿ ಕೆಲಸ ಮಾಡುತ್ತಿದ್ದ ದಡೂತಿ ಆಸಾಮಿ ಒಬ್ಬ ಇದ್ದ. ನೇಯ್ಗೆಯಲ್ಲಿ ತರಹೆವಾರಿ ಡಿಸೈನು ಗಳಲ್ಲಿ ಬಟ್ಟೆ ತಯಾರುಮಾಡುತ್ತಿದ್ದ. ಅವನ ಹೆಸರು ಅರುಣಾಚಲಂ ಎಂದು. ಇಷ್ಟೊಂದು ಸೊಗಸಾದ ಚಿತ್ರವಿಚಿತ್ರದ ಬಟ್ಟೆ ನೇಯುತ್ತೀಯೆ ಏಕೆ ಇದೇ ಕಸಬನ್ನು ಮನೆಯಲ್ಲಿ ಮಾಡಬಾರದೆಂದು ಕೇಳಿದೆ, ''ಅಯ್ಯೋ ಬಿಡಿ ಸ್ವಾಮಿ ಅದರಲ್ಲೇನಾಗುತ್ತೆ,

ಒಳ್ಳೆ ಶ್ರೀಮಂತನ ಮನೆ ಹೊಂಚಿ ಹಾಕಿದ್ದು ನುಗ್ಗಿದೋಚಿದರೆ ಹತ್ತು ವರ್ಷ ಹೆಂಡತಿ ಮಕ್ಕಳೆಲ್ಲ ಉಂಡುಟ್ಟು ಮಿಗುವಂತೆ ತರಬಹುದು. ಇವುಗಳೆಲ್ಲ ಏನು ಸ್ವಾಮಿ ಗೊಂಜಾಯಿ ಕಸಬು" ಎನ್ನುತ್ತ ಕಳ್ಳತನಕ್ಕೆ ಅಗ್ರಸ್ಥಾನ ಕೊಟ್ಟು ಮಾತನಾಡುತ್ತಿದ್ದ.

ಕಳ್ಳತನ ಮಾಡಿದಾಗಲೆಲ್ಲ ಸಿಕ್ಕಿಹಾಕಿಕೊಳ್ಳೋ ಜಾಯಮಾನದವನಲ್ಲಪ್ಪ ಎಲ್ಲೋ ಒಮ್ಮೊಮ್ಮೆ ಗ್ರಹಚಾರಕ್ಕೆ ಸಿಕ್ಕಿಬೀಳುತ್ತೇನೆ. ಅದೂ ಏನೊ ನಾಲ್ಕೈದು ತಿಂಗಳು ಶಿಕ್ಷೆ, ಈ ಬಾರೀನೆ ಐದು ತಿಂಗಳು ಶಿಕ್ಷೆಗೆ ಗುರಿಯಾದೆ, ವ್ಯಾಜ್ಯಕ್ಕೆ ಲಾಯರುಗೀಯರು ಇಟ್ಟುಕೊಳ್ಳೋದಿಲ್ಲ. ನಾನೇ ವಾದವಿವಾದ ಮಾಡಿ ಪ್ರಾಸಿಕ್ಯೂಟಿಂಗ್ ಇನ್‌ಸ್ಪೆಕ್ಟರ್ ನರ ಕಿತ್ತುಹಾಕ್ತೇನೆ ಮುಂತಾಗಿ ತಿಳಿಸಿದ. ಅರುಣಾಚಲಂ ಕಳ್ಳತನಕ್ಕೆ ಏನು ಮಾರ್ಗ ಅನುಸರಿಸ್ತೀಯೆ. ಹೇಗೆ ಏನು ಎಂದು ಕೇಳಿದೆ. ಸುಬ್ಬಣ್ಣ ಮೌನಮುರಿದು"ಯಾಕಯ್ಯ ಆ ವಿಚಾರ ನಿನಗೆ ಕಳ್ಳತನ ಕಲೀತಿಯೇನು" ಎಂದು ನನ್ನನ್ನು ಪ್ರಶ್ನಿಸಿದ. "ಸ್ವಾಮಿ ಕಳ್ಳತನದ ಕಸಬು ಕಲಿಯೋದು ಸಾಧಾರಣ ಬುದ್ಧಿವಂತರಾದ ನಿಮ್ಮಿಂದ ಸಾಧ್ಯ ಅಂತ ತಿಳಿದಿದ್ದೀರ. ಬೀಡಿ ಕದಿಯೋಕೆ ಹೋಗಿ ಸಿಕ್ಕಿಬಿದ್ದು ಜೈಲಿಗೆಬರ್ತೀರಾ, ಸ್ವಾಮಿ ತುಂಬಾ ವರ್ಷಗಳ ಅನುಭವ ನಿಮ್ಮ ಹಿರಿಯರ ತರಬೇತಿ ಬೇಕು ಇದಕ್ಕೆಲ್ಲ. ನಮ್ಮಪ್ಪ 70ನೇ ವರ್ಷದಲ್ಲಿ ಸತ್ತ. ಅವನ ತಲೆಕೂದಲಷ್ಟು ಕಳ್ಳತನ ಮಾಡಿದವನು. ಒಂದೇ ಒಂದು ಕಳ್ಳತನದಲ್ಲಾದರು ಸಿಕ್ಕಿಬಿದ್ದವನಲ್ಲ. ಅಂದರೆ ಅದೇನು ಚಾತುರಿಕೆಯಿತ್ತೊ ನಮ್ಮಪ್ಪ ನಿಗೆ. ಅಂತಹವನ ಹೊಟ್ಟೆಯಲ್ಲಿ ಹುಟ್ಟಿದ ನಾನೇ ಸ್ವಲ್ಪ ಅಡ್ಡಕಸಬಿ. ಇದೂ ಸೇರಿ ಮೂರು ಸಾರಿ ಸಿಕ್ಕಿಬಿದ್ದೆ." ಮುಂತಾಗಿ ಹೇಳಿದ ಅರುಣಾಚಲಂ. "ನೋಡಿ ಸ್ವಾಮಿ ಮನೆಗೆ ಕನ್ನ ಹಾಕುವುದಕ್ಕೆ ದೊಡ್ಡ ಕಿಟಕಿಗಳ ಕೆಳಭಾಗದಲ್ಲಿ ಸರಕ್‌ಅನ್ನದ ಹಾಗೆ ಇಟಿಗೆ ತೆಗೆಯೋದು ಸುಲಭ. ಒಬ್ಬನೇ ಹೋದರೆ ಸಾಲದು ಇಬ್ಬರಾದರೂ ಬೇಕು, ಕನ್ನ ಬಿದ್ದ ಮೇಲೆ ಒಳಕ್ಕೆ ಹೋಗಿ ಮೊದಲು ಮನೆ ಹೊರಬಾಗಿಲು ತೆರೆದು ಗಲಾಟೆ ಆದರೆ ಓಡಿಹೋಗಲು ವ್ಯವಸ್ಥೆ ಮಾಡಿಕೊಳ್ಳಬೇಕು. ಮಲಗಿರುವ ಯಜಮಾನನ ಹತ್ತಿರ ಕೊಡಲಿಯೋ ಉದ್ದನೆ ಮಚ್ಚನ್ನೋ ಹಿಡಿದು ಒಬ್ಬ ನಿಲ್ಲಬೇಕು. ಮತ್ತೊಬ್ಬ ಪಿಠಾರಿಯೋ ಕಬ್ಬಿಣದ ಪೆಟ್ಟಿಯೋ ಬೀಗದ ಗೊಂಚಲಿಂದ ತೆಗೆದು ಒಡವೆ ವಸ್ತ್ರಗಳು ನೋಟುಗಳಲ್ಲಿ ನೂರು ರೂಪಾಯಗಳನ್ನು ಮಾತ್ರ ಚೀಲಕ್ಕೆ ತುಂಬಬೇಕು. ಮಲಗಿ ದ್ದಾತ ಕಣ್ಣುಬಿಟ್ಟರೆ ಕತ್ತರಿಸುವ ಬೆದರಿಕೆ ಹಾಕಿ ಕಣ್ಣುಮುಚ್ಚುವಂತೆ ಮಾಡಬೇಕು, ಇಲ್ಲದಿದ್ದರೆ ಒಳ್ಳೆಯದೇ ಆಯಿತು. ಮನೆ ಮುಖ್ಯದ್ವಾರದಿಂದ ಹೊರಬಿದ್ದು ಎಲ್ಲಿಂದಲೋ ಬಂದು ಎಲ್ಲಿಗೋ ಹೋಗುತ್ತಿರುವ ದೊಡ್ಡ ಮನುಷ್ಯರಂತೆ ಗತ್ತಿನಿಂದ ನಡಿಗೆ ಹಾಕಿಕೊಂಡು ಹೋಗಬೇಕು.

ಪೋಲೀಸರಿಗೆ ಸಿಕ್ಕಿಬಿದ್ದೊ ಎನ್ನಿ ನಮಗೆ ಸಿಕ್ಕಿದ್ದರಲ್ಲಿ ಮುಖಮೋರೆ ನೋಡದೆ ಅವರಿಗಷ್ಟು ಪಾಲಿತ್ತು ತಪ್ಪಿಸಿಕೊಳ್ಳಬೇಕು. ನಾನು ಮಾಡಿದ ಕಳ್ಳತನಕ್ಕೆ ಲೆಕ್ಕವೇ ಇಲ್ಲ, ಮುಂತಾಗಿ ಅರುಣಾಚಲಂ ತಿಳಿಸಿ ಬಟ್ಟೆಗೆ ಗಂಜಿಹಾಕುತಿದ್ದ ಮೈಸೂರು ಮಂದಿ

ಮೊಹಲ್ಲಾ ಟಾವರ್‌ನನ್ನು ಕುರಿತು, "ನೋಡಿ ಈ ಲೋಫರ್ ಸಾಬಿ ಅಂಗಡಿ ನುಗ್ಗಿದ ನಂತೆ ಯಾರೂ ಇರಲಿಲ್ಲವಂತೆ. ಸಿಕ್ಕಿದಷ್ಟು ದೋಚಿ ಮಗ ಮಗ್ನಲಾಗಬೇಡವೆ. ಇಲ್ಲಿ ಬೆಳ್ಳಿ ಗೆಜ್ಜೆ ಸರ ನೋಡಿದ. ಆ ಸರಕ್ಕೆ ಕೈಹಾಕಿದ ಕೆಳಗೆ ಬಿತ್ತು. ಗೆಜ್ಜೆಸರ ಜಲ್ ಜಲ್ ಎಂದು ಶಬ್ದವಾಗಿ ಪಕ್ಕದ ಅಂಗಡಿ ಮುಂದೆ ಮಲಗಿದ್ದ ಇಸಂ ಬಂದು ಚೆನ್ನಾಗಿ ಸಾಬಿಗೆ ಹಣ್ಣುಕಾಯಿ ನೀರುಗಾಯಿ ಮಾಡಿ, ಪೋಲೀಸಿಗೆ ಕೊಟ್ಟ. 7 ತಿಂಗಳ ಸಜಾ ತೆಕೊಂಡು ಬಂದವ್ನೆ ಈ ಅಡ್ಡಕಸಬಿ ಮಗ. ಅದಕ್ಕೆ ಹೇಳೋದು ಸ್ವಾಮಿ "ಹೊಸದರಲ್ಲೇ ಕಳ್ಳ ಗೆಜ್ಜೆ ಕದ್ದ" ಅನ್ನೋಗಾದೆ ಇವನಿಗೆ.

ಶಿವಪುರ ಧ್ವಜ ಸತ್ಯಾಗ್ರಹ ಮುಗಿಯುತ್ತಿದ್ದಂತೆ, ಶಿವಪುರಕ್ಕೆ ಬಂದಿದ್ದ ಸ್ವಯಂ ಸೇವಕರುಗಳು ಅವರ ಸ್ಥಳಗಳಲ್ಲಿ ಆರಂಭವಾಗುವ ಧ್ವಜ ಸತ್ಯಾಗ್ರಹವಲ್ಲಿ ಪಾಲ್ಗೊಳ್ಳುವ ತೀರ್ಮಾನದಂತೆ ಅವರವರ ಊರಿಗೆ ತೆರಳಿದರು. ನಾಗಮಂಗಲ, ಶ್ರೀರಂಗಪಟ್ಟಣ, ಪಾಂಡವಪುರ. ಕೃಷ್ಣರಾಜಪೇಟೆ ತಾಲ್ಲೂಕುಗಳ ಸ್ವಯಂಸೇವಕರು ಮೈಸೂರಿನ ಟೌನ್‌ಹಾಲ್ ಮೈದಾನದ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಲು ಮೈಸೂರಿಗೆ ತೆರಳಿದರು.

ಮೈಸೂರಿಗೆ ಹೊರಡುವ ಮುನ್ನ ನಾನು. ಎ. ರಾಮಣ್ಣ, ಟಿ. ಎಸ್. ಸುಬ್ಬಣ್ಣ, ಸುಬ್ಬರಾವ್ ಉಪಾಧ್ಯಾಯ, ರಾಜಶೇಖರ್, ಶಂಭು, ಜನಾರ್ದನನಾಯ್ಡು, ಯು. ಕೆಂಚಪ್ಪ, ಎಂ.ಆರ್.ಸಿ.ಬಸಪ್ಪ. ಸುಬ್ಬರಾವ್, ಗೋಪಾಲರಾವ್, ಈಶ್ವರರಾವ್, ವಿಷಕಂಠರಾವ್, ಚಂದ್ರಶೇಖರ್, ಒಕ್ಕಲಗೇರಿ ಸುಬ್ಬಣ್ಣ ಮತ್ತು ಕೃಷ್ಣ ಮುಂತಾದ ಮೈಸೂರಿನವರೇ ಸಭೆ ಸೇರಿ ನಾಳೆ ಪ್ರಾತಃಕಾಲ ಸುಬ್ಬರಾಯನ ಕೆರೆ ಮೈದಾನದಲ್ಲಿ ಐವತ್ತಕ್ಕೂ ಕಮ್ಮಿ ಇಲ್ಲದ ತ್ರಿವರ್ಣಧ್ವಜ ಹಾರಿಸತಕ್ಕದ್ದೆಂದು ತೀರ್ಮಾನಿಸಿದೆವು. ಅದಕ್ಕೆ ಬೇಕಾಗುವ ಗಳುವನ್ನು ಚಾಮುಂಡಯ್ಯನವರು ಒದಗಿಸಲು ಒಪ್ಪಿದರು. 50ಕ್ಕೂ ಹೆಚ್ಚು ತ್ರಿವರ್ಣ ಬಾವುಟಗಳನ್ನು ಎಂ. ಆರ್. ಸಿ. ಬಸಪ್ಪನವರು ಹೊಲಿಸಿ ಸಂಜೆ ನಮಗೆ ಒದಗಿಸುವುದಾಗಿ ತಿಳಿಸಿದರು. ರೈಲಿನಲ್ಲಿ ಮಧ್ಯಾಹ್ನ ಮೈಸೂರಿಗೆ ಪ್ರಯಾಣ ಮಾಡಿದೆವು.

ಮೈಸೂರಿಗೆ ಹೋದ ಕೂಡಲೇ ಚಾಮುಂಡಯ್ಯನವರು 50 ಗಳುಗಳನ್ನು ಕೆರೆ ಮೈದಾನಕ್ಕೆ ಕಳುಹಿಸಿದರು. ತಲಾ 5 ಗಳುವಿನಂತೆ ಅಕ್ಕಪಕ್ಕದವರಿಂದ ಹಾರೆ ಪಡೆದು ಸಂಜೆಯೊಳಗೆ ಗಳುಗಳನ್ನು ನೆಟ್ಟು ಮುಗಿಸಿದೆವು. ರಾತ್ರಿ ಬಾವುಟಗಳು ಸಿದ್ಧವಾಗಿ ಬಂದುವು. ಪ್ರಾತಃಕಾಲ ಟೌನ್‌ಹಾಲ್ ಮೈದಾನದ ಸತ್ಯಾಗ್ರಹದತ್ತ ಪೋಲೀಸರು ಮತ್ತು ಅದರ ಮುಖ್ಯಾಧಿಕಾರಿಗಳು ಕೇಂದ್ರೀಕೃತವಾಗಿದ್ದರು. ಸುಬ್ಬರಾಯನ ಕೆರೆ ಮೈದಾನ ಉಸ್ತುವಾರಿಗೆ ಎಂಟು ಹತ್ತು ಪೋಲೀಸರನ್ನು ನೇಮಿಸಿದ್ದರು. ನಾವು ಬಾವುಟಗಳನ್ನು ಪ್ರಾತಃಕಾಲ 10 ಗಂಟೆಯೊಳಗೆ ಹಾರಿಸಲು ನಿರ್ಧರಿಸಿದ್ದೆವು. ಪೋಲೀಸ್ ಮುಖ್ಯಾಧಿಕಾರಿಗಳು ಬಂದು ಅಲ್ಲೇ ಇದ್ದ ನಮ್ಮನ್ನು ಗಳುಗಳನ್ನು ಏಕೆ

ನೆಡಲಾಗಿದೆ ಎಂದು ಕೇಳಿದರು. ಸಂಜೆ ಸಭೆ ನಡೆಸುತ್ತೇವೆ. ದೀಪಗಳನ್ನು ಹಾಕಲು ನೆಡಲಾಗಿದೆ ಎಂದು ಎ. ರಾಮಣ್ಣನವರು ತಿಳಿಸಿದರು. ತೃಪ್ತರಾದ ಪೋಲೀಸ್ ಅಧಿಕಾರಿ ಇದ್ದ 10 ಜನ ಪೇದೆಗಳ ಪೈಕಿ 5 ಜನರನ್ನು ಬಿಟ್ಟು ಬಾಕಿಯವರನ್ನು ಜೊತೆಗೆ ಕರೆದುಕೊಂಡು ಹೋದರು.

ಇದ್ದ 5 ಜನ ಪೇದೆಗಳು ಎಚ್ಚರಿಕೆಯಿಂದ ಪರಿಸ್ಥಿತಿ ಗಮನಿಸುತ್ತಿದ್ದರು. ಬಾವುಟಗಳನ್ನು ನೋಡಿ ಗಾಬರಿಯಾಗಿ ತಡೆಯಬಂದರು. ಆದರೆ ಸುಬ್ಬಣ್ಣನವರು 100 ಅಡಿ ರಸ್ತೆಯಿಂದ ಕೆರೆ ಮೈದಾನಕ್ಕೆ ಬರುವ ಆಳೆತ್ತರದ ಮೋರಿಯಿಂದ ನಾಲ್ಕಾರು ಜನರ ಜೊತೆ ಬಂದು ಬಾವುಟ ಏರಿಸುತ್ತಾ ಬಂದರು.

ಅಲ್ಲಿಯೇ ಇದ್ದ ಪೇದೆಗಳಿಗೆ ಸಮಾಧಾನ ಹೇಳಿ ಸರ್ಕಾರದವರು ಟೌನ್‌ಹಾಲ್ ಮೈದಾನದಲ್ಲಿ ಮಾತ್ರ ಬಾವುಟ ಹಾರಿಸಬಾರದೆಂದು ಪ್ರತಿಬಂಧಕಾಜ್ಞೆ ಹಾಕಿದ್ದಾರೆ. ಸುಬ್ಬರಾಯನ ಕೆರೆ ಮೈದಾನಕ್ಕೆ ಅನ್ವಯವಾಗುವುದಿಲ್ಲ ಎಂದು ಸಮಜಾಯಿಷಿ ಹೇಳಿ ಪೇದೆಗಳಿಗೂ ಕಡಲೆಕಾಯಿ ಕೊಟ್ಟು ನಮ್ಮ ಜೊತೆ ತಿನ್ನಿಸುತ್ತ ಕುಳಿತೆವು. ಸುಬ್ಬರಾಯನಕೆರೆ ಮೈದಾನದಲ್ಲಿ ತ್ರಿವರ್ಣಧ್ವಜ ಹಾರಾಡುತ್ತಿರುವ ವಿಚಾರ ಜಿಲ್ಲಾಧಿಕಾರಿಗಳಾದ ಜಿ. ಎಂ. ಮೇಕ್ರಿ ಮತ್ತು ಐ. ಜಿ. ಹ್ಯಾಮಿಲ್ಟನ್ ಅವರಿಗೆ ಗೊತ್ತಾಗಿ ಮೂರು ನಾಲ್ಕು ವ್ಯಾನುಗಳ ತುಂಬ ಪೋಲೀಸರನ್ನು ತುಂಬಿಕೊಂಡು ಬಂದಿಳಿದರು.

ಬಾವುಟಗಳು ಗಾಳಿಯಲ್ಲಿ ಹಾರಾಡುತ್ತ ತಮ್ಮ ಚೆಲುವನ್ನು ಬೀರುತ್ತಿವೆ. ಕೆರೆ ಮೈದಾನದ ಸುತ್ತಲಿನ ರಸ್ತೆಯಲ್ಲಿ ಸಹಸ್ರಾರು ಜನರು ನಿಂತು ನೋಡುತ್ತಿದ್ದಾರೆ. ಅಲ್ಲಿದ್ದವರು ನಾನು, ಸುಬ್ಬಣ್ಣ, ವಿಷಕಂಠರಾವ್ ಮೂರೇ ಮಂದಿ. ಪೋಲೀಸರು ಬಾವುಟಗಳನ್ನು ಇಳಿಸಿ ಗಳುಗಳನ್ನು ಕಿತ್ತು ವ್ಯಾನಿನಲ್ಲಿ ಹಾಕಿಕೊಂಡು ಕೋರ್ಟಿಗೆ ನಮ್ಮನ್ನು ಹಾಜರುಪಡಿಸಿದರು. ಕೋರ್ಟಿನಲ್ಲಿ ನಾಲ್ಕೋ ಐದೋ ತಿಂಗಳ ಸಾದಾ ಸಜ ಅನುಭವಿಸುವಂತೆ ತೀರ್ಪಿತ್ತು ಜೈಲಿಗೆ ಕಳುಹಿಸಿದರು.

೨

ಟೌನ್ ಹಾಲ್ ಮೈದಾನದಲ್ಲಿ ಪ್ರತಿಬಂಧಕಾಜ್ಞೆ ಉಲ್ಲಂಘನೆ ಮೇಲೆ ನಮ್ಮೂರು ಪಾಲಗ್ರಹಾರದಿಂದ ಪಿ. ಎಸ್. ನರಸಿಂಹಯ್ಯ, ಓಬೇಗೌಡ, ಪಿ. ಕೆ. ವೆಂಕಟಾಚಲಶೆಟ್ಟಿ, ಪಿ. ಟಿ. ಕೃಷ್ಣಪ್ಪಗೌಡ, ನಾಗಮಂಗಲದಿಂದ ಎಂ. ಆರ್. ಎನ್. ಶಾಸ್ತ್ರಿಗಳು, ಸುಬ್ಬರಾಯ ಶೆಟ್ಟರು, ಎ. ಅಶ್ವತ್ಥನಾರಾಯಣ, ಚೀಣ್ಯದಿಂದ ಸಿ. ಕೆ. ಸಂಪತ್ತು, ಸಿ. ಕೆ. ರಾಮಪ್ಪ, ನಾಗರಾಜ್, ರಾಮಸ್ವಾಮಿ, ಶೇಷಯ್ಯ ಮುಂತಾದವರು, ಭೀಮನ ಹಳ್ಳಿಯಿಂದ ಗಾಂಧಿ ಶ್ರೀನಿವಾಸಯ್ಯ, ನರಸಿಂಹಯ್ಯ, ವೆಂಕಟಾಚಲಯ್ಯ ಮುಂತಾ ದವರು ನಮಗಿಂತ ಹಿಂದಿನ ದಿನವೇ ಪ್ರತಿಬಂಧಕಾಜ್ಞೆ ಮುರಿದು ಜೈಲು ಸೇರಿದ್ದರು.

ಪಾಂಡವಪುರದಿಂದ ವೈ. ಸಿ. ಮರಿಯಪ್ಪ, ಹನುಮಂತೇಗೌಡ, ಕ್ಯಾತನ ಹಳ್ಳಿಯಿಂದ ತಿಮ್ಮೇಗೌಡ, ಲಿಂಗೇಗೌಡ, ಈರೇಗೌಡ, ಪುಟ್ಟಸ್ವಾಮಿ ಮುಂತಾದವರು, ಶ್ರೀರಂಗಪಟ್ಟಣದಿಂದ ಅರಕೆರೆ ಯು. ಕೆಂಚಪ್ಪ, ಪಿ. ಚನ್ನಪ್ಪ, ಪಿ. ಸಿ. ಕೃಷ್ಣಪ್ಪಗೌಡ, ಎ. ಜಿ. ಬಂದೀಗೌಡ, ಎ. ಜಿ. ಲಿಂಗಪ್ಪ, ಯು. ಕೆಂಚಯ್ಯ, ಎ. ಸಿ. ಮಾದೇಗೌಡ ಮುಂತಾದವರು, ನಗುವನಹಳ್ಳಿಯಿಂದ ಕಾಳೇಗೌಡ, ವೆಂಕಟೇಶ್, ಎಸ್. ಬೋರು ಮುಂತಾದವರು, ಕೃಷ್ಣರಾಜಪೇಟೆಯಿಂದ ಎಂ. ಕೆ. ಬೊಮ್ಮೇಗೌಡ, ಮಡುವಿನ ಕೋಡಿ ಸಿದ್ದೇಗೌಡರು, ಸಿಂಧಘಟ್ಟದಿಂದ ಕಾಗೇಪುರದ ಸುಬ್ಬೇಗೌಡ, ಹೀಗೆ ನಾನಾ ಜನರು ಜೈಲು ಸೇರಿದ್ದರು. ಅಲ್ಲಿಂದಾಗಲೆ ಹೊಸ ಸುಧಾರಣೆಯಾಗಿತ್ತು. ಮಡಿಕೆ ಮುಚ್ಚಳ ಜಾಗಕ್ಕೆ ಅಲ್ಯೂಮಿನಿಯಂ ತಟ್ಟೆ ಚಂಬು ಕೊಡಲಾಗಿತ್ತು.

ಈ ಮಧ್ಯೆ ವೀರ ನಾರಿಮನ್ ದಸ್ತಗಿರಿ ಮಾಡಿ ಬಿಡುಗಡೆಯಾದ ನಂತರ ಅವರು ಮೈಸೂರಿಗೆ ಬಂದು ಎಚ್. ಸಿ. ದಾಸಪ್ಪನವರ ಅತಿಥಿಯಾಗಿದ್ದರು. ನಾನು, ರಾಮಣ್ಣ, ಸುಬ್ಬಣ್ಣ ಅವರ ಮನೆಗೆ ಹೋಗಿ ನಾಲ್ಕಾಣೆ ಕೊಟ್ಟು ಕಾಂಗ್ರೆಸ್ ಸದಸ್ಯರಾಗಲು ಒತ್ತಾಯ ಮಾಡಿದೆವು. ದಾಸಪ್ಪನವರು ಹುಡುಗರಿಗೇಕೆ ಈ ವಿಚಾರ ದೊಡ್ಡವರು ಸೇರಿ ಕೈಗೊಳ್ಳಬೇಕಾದ ತೀರ್ಮಾನ ಎಂದು ಗದರಿಸದಿದ್ದರೂ ನಮ್ಮ ನಿಲುವನ್ನು ಸ್ವಾಗತಿಸಲಿಲ್ಲ. ನಾರಿಮನ್ ಅವರು ದಾಸಪ್ಪನವರ ಅತಿಥಿಯಾಗಿದ್ದಾಗಲೆ ಒತ್ತಾಯದ ಮೇಲೆ ಒತ್ತಾಯ ಮಾಡಿ ಎಂಟಾಣೆ ಪಡೆದು ದಾಸಪ್ಪನವರನ್ನು ಮತ್ತು ಮರಿಯಪ್ಪ ನವರನ್ನು ಕಾಂಗ್ರೆಸ್ ಸದಸ್ಯರಾಗಿ ಮಾಡಿದೆವು.

ಜೈಲಿನ ಪರಿಸರವನ್ನು ಯಾವುದೇ ರೀತಿಯ ಮಾಲಿನ್ಯವಿಲ್ಲದಂತೆ ರಕ್ಷಿಸುತ್ತಿರ ಲಾಗಿದೆ. ತೋಟಗಳಲ್ಲಿ ಉತ್ತಮ ತರಕಾರಿ ಮತ್ತು ವಿವಿಧ ರೀತಿಯ ಸೊಪ್ಪನ್ನು ಖೈದಿಗಳು ಬೆಳೆಯುವರು. ಖೈದಿಗಳಿಗೆ ಅವರ ಊಟದಲ್ಲಿ ಪ್ರೋಟೀನ್‌ಗಳ ಕೊರತೆ

ಇಲ್ಲದಂತೆ ನೋಡಿಕೊಳ್ಳುವರು. ಹೊಸದಾಗಿ ಜೈಲಿಗೆ ಬರುವ ಖೈದಿಗಳನ್ನು ಕ್ವಾರಂಟೈನ್ ಬ್ಯಾರಕ್‌ಗಳಲ್ಲಿ ಎರಡು ಮೂರು ದಿನಗಳು ಇಟ್ಟು ಯಾವುದಾದರು ಸಾಂಕ್ರಾಮಿಕ ಜಾಡ್ಯದಿಂದ ಖೈದಿ ನರಳುತ್ತಿದ್ದಾನೆಯೆ ಎಂಬುದನ್ನು ಪರೀಕ್ಷಿಸುವರು. ವಾರದ ನಂತರ ಇನ್ನಿತರ ಖೈದಿಗಳೊಡನೆ ಓಡಾಡಲು ಅವಕಾಶ ನೀಡುವರು. ಖೈದಿಗಳು ವಾಸಮಾಡುವ ಬ್ಯಾರಕ್‌ಗಳು ಓಡಾಡುವ ಓಣಿ ಪ್ರತಿ ಇಂಚು ಜೈಲಿನ ನೆಲವು ಪರಿಶುದ್ಧವಾಗಿ ಕನ್ನಡಿಯಂತಿರುತ್ತದೆ.

ನಾಗರೀಕರಿಗೆ ಸಿಗದ ತಾಜಾ ತರಕಾರಿ ಮತ್ತು ಸೊಪ್ಪು ಜೈಲಿನಲ್ಲಿ ಸಿಗುತ್ತದೆ. ಅವರೇ ಬೆಳೆದ ಆಗತಾನೆ ಕಿತ್ತು ತಂದು ಸಾರೋ ಹುಳಿಯೋ ಮಾಡಿ ಉಣ್ಣುವುದು ಖೈದಿಗಳ ಮಹಾಭಾಗ್ಯವೆಂದೇ ಹೇಳಬೇಕು. ಉತ್ತಮ ಕೃತಿಗಳಿಂದ ಕೂಡಿದ ಪುಸ್ತಕ ಭಂಡಾರದ ಸೌಲಭ್ಯವಿದೆ. ನಿರಕ್ಷರ ಕುಕ್ಷಿಗಳಿಗೆ ಅಕ್ಷರಾಭ್ಯಾಸ ಮಾಡಿಸಿ ಓದುಬರಹ ಕಲಿಸುವ ವ್ಯವಸ್ಥೆಯಿದೆ. ಶ್ರೀರಾಮಕೃಷ್ಣ ಆಶ್ರಮದ ಸ್ವಾಮಿಗಳು, ಮತ್ತಿತರ ಆಧ್ಯಾತ್ಮವಾದಿಗಳಿಂದ ವಾರಕ್ಕೊಮ್ಮೆ ಪ್ರವಚನ ಕೊಡಿಸಲಾಗುವುದು. ಮಾನವನ ಸ್ವಭಾವ ತಪ್ಪು ಮಾಡುವುದು, ಕ್ಷಮಿಸುವುದು ದೈವತ್ವ ಎಂಬ ಅರಿವು ಅವರಲ್ಲಿ ಮೂಡುವಂತೆ, ಹಾಗೂ ಅವರು ಇಂದು ಮಾಡಿದ ತಪ್ಪು ಮುಂದೆ ಮರುಕಳಿಸದಂತೆ ಖೈದಿಗಳ ಮನ ಒಲಿಸುವ ಮಾರ್ಗ ಹಾಕಿಕೊಳ್ಳಲಾಗಿದೆ. ಸ್ವಾಮಿಗಳ ಪ್ರವಚನದಲ್ಲಿ ಇಂದಿನ ಜನ್ಮದಲ್ಲಿ ಮಾಡಿದ ಪಾಪಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು ತಿದ್ದಿಕೊಳ್ಳುವಿರಾದರೆ ಮುಂದೆ ಉತ್ತಮಜನ್ಮ ಪ್ರಾಪ್ತವಾಗುವುದೆಂಬುದನ್ನು ಹೇಳುವಾಗ ಖೈದಿಗಳು ಅವರಿಗೆ ಅರಿವಿಲ್ಲದಂತೆ ಸ್ವಾಮಿಗಳ ಪಾದಗಳ ಮೇಲೆ ಬಿದ್ದು ಕ್ಷಮಿಸು ಒಡೆಯ, ಕೋಪದಲ್ಲಿ ಮಾಡಿದ ತಪ್ಪು ಮುಂದೆ ಇಂತಹ ತಪ್ಪು ಖಂಡಿತ ಮಾಡಲಾರೆ ಇದು ದೇವರ ಮೇಲಿನ ಆಣೆ'' ಎಂತಾಗಿ ತಿಳಿಸಿ ಪಶ್ಚಾತ್ತಾಪ ಪಡುವವರು ಬಹಳ ಮಂದಿ. ''ತಪ್ಪು ಮಾಡಿ ಬಂದಾಯ್ತು, ಶಿಕ್ಷೆಗೆ ಒಳಗಾಗಿ ನೋವನ್ನುಣ್ಣುತ್ತಿದ್ದೇನೆ. ಏನೋ ಕೆಟ್ಟ ಘಳಿಗೆ ಆಗಬಾರದ್ದು ಆಗಿ ಹೋಗಿದೆ. ನನಗೆ ಉತ್ತಮ ಜನ್ಮಕೊಡುವಂತೆ ಆಶೀರ್ವದಿಸಿ ಸ್ವಾಮಿ'' ಎಂದು ಕಾಲ್ಹಿಡಿದು ಕಣ್ಣೀರು ಸುರಿಸುವವರು ಕೆಲವರು.

ಹೀಗೆ ತಪ್ಪು ಮಾಡಿದವರು ಪಶ್ಚಾತ್ತಾಪದಿಂದ ಕೊರಗಿ ಜೈಲಿನಿಂದ ಸಂತರಂತಾಗಿ ಹೋಗುವವರನ್ನು ಕಾಣಬಹುದು. ಶಿಕ್ಷೆಯಾದ ತಾರೀಖು ಬಿಡುಗಡೆಯಾಗುವ ತಾರೀಖು ಮತ್ತು ಖೈದಿ ನಂಬರು ಅಚ್ಚು ಮಾಡಿರುತ್ತಾರೆ. ಬೆಳಗಿನ ಆರು ಘಂಟೆಗೆ ಬೀಗ ತೆಗೆದು ನಂಬರು ಹಿಡಿದು ಕೂಗುವುದು ಹಾಜರ್ ಎಂದು ಹೇಳಿ ಹೊರಗೆ ಬರುವುದು. ಜೈಲಿನ ವಾತಾವರಣಕ್ಕೆ ಹೊಂದಿಕೊಂಡಿದ್ದ ಆ ಜನ ಅದೆಷ್ಟು ಆನಂದವಾಗಿದ್ದರು ಎಂದರೆ ಹೇಳತೀರದು.

ನೀರು ಕುಡಿಯಲು ಮಣ್ಣಿನ ಮಗೆಗಳನ್ನು ಕೊಡುತಿದ್ದರು. ಮುಚ್ಚಳ ಮತ್ತು ಮಗೆಗಳನ್ನು ವರ್ಷದವರೆಗೆ ಜೋಪಾನವಾಗಿಟ್ಟುಕೊಂಡು ಜೈಲಿನ ಉಡುಪನ್ನು

ಹರಿಯದಂತೆ ಜೋಪಾನ ಪಡಿಸಿಕೊಂಡ ಖೈದಿಗಳಿಗೆ ಅವರ ಕೋರ್ಟು ಶಿಕ್ಷೆಯಲ್ಲಿ ವರ್ಷದಲ್ಲಿಷ್ಟು ದಿನ ಎಂದು ರಿಯಾಯಿತಿ ನೀಡುವರು. ಯಾವುದೇ ತಂಟೆ ತಕರಾರುಗಳು ಮಾಡದ ಸಭ್ಯತೆಯಿಂದ ನಡೆದು ಕೊಳ್ಳುವವರಿಗೆ ಶಿಕ್ಷೆಯಲ್ಲಿ ಇಂತಿಷ್ಟು ದಿನ ರಿಯಾಯಿತಿ ನೀಡುವರು. ಮಹಾರಾಜರ ಮನೆ ಮದುವೆ ಮುಂಜಿಗಳಾದರೆ ಮಕ್ಕಳಾದರೆ ಅವರ ಸವಿನೆನಪಿಗಾಗಿ ಸಾಧಾರಣ ಶಿಕ್ಷೆಗೆ ಒಳಗಾದವರನ್ನು ಬಿಡುಗಡೆ ಮಾಡುವರು. ಬಂಕೋಲ್ (ಜೀವಾವಧಿ) ಶಿಕ್ಷೆಗೆ ಗುರಿಯಾದವರಿಗೆ ಅವರ ಶಿಕ್ಷೆಯಲ್ಲಿ ಇಳಿತಾಯ ಹೀಗೆ ನಾನಾ ರಿಯಾಯಿತಿಗಳ ಮೂಲಕ ಖೈದಿಗಳನ್ನು ಶಿಸ್ತಿಗೊಳಪಡಿಸಿಕೊಂಡಿದ್ದರು.

ಮರಣದಂಡನೆಗೆ ಒಳಗಾದ ಖೈದಿಗಳನ್ನು Condemned ಖೈದಿಗಳೆಂದು ಕರೆಯುವರು. ಅವರನ್ನು ಒಬ್ಬರೇ ಇರುವಷ್ಟು ಜಾಗದ ಚಿಕ್ಕ ಬ್ಯಾರಕ್‌ಗಳಲ್ಲಿ (cells) ಇಟ್ಟಿರುವರು. ಮರಣಶಿಕ್ಷೆಗೆ ಒಳಗಾದ ಖೈದಿಗಳು ಅವರಿಗೆ ಶಿಕ್ಷೆಕೊಟ್ಟ ಕೋರ್ಟಿನ ಮುಂದಿನ ಕೋರ್ಟಿಗೆ ಅಪೀಲು ಮಾಡಿಕೊಂಡು ಆ ಕೋರ್ಟಿನ ತೀರ್ಪು ನನ್ನ ಪರವೇ ಆಗುತ್ತದೆಂದು ಕಾಯುವರು. ಆ ಕೋರ್ಟಿನ ತೀರ್ಪು ಬರುವವರೆಗೆ ಜೀವನದಲ್ಲಿ ಬೇಸರ ಪಡದೆ ಕಾಲ ಕಳೆಯುವರು. ಆ ಖೈದಿಗಳನ್ನು ಇನ್ನಿತರ ಖೈದಿಗಳ ಜೊತೆ ಬೆರೆಯಲು ಬಿಡುವುದಿಲ್ಲ. ಅವರನ್ನು ಕಾಣಲು ಬರುವ ಬಂಧು ಬಳಗದವರು ತರುವ ತಿಂಡಿ ತೀರ್ಥಗಳನ್ನು ನೇರವಾಗಿ ಖೈದಿಗಳಿಗೆ ಭುಂಜಿಸಲು ಕೊಡುವುದಿಲ್ಲ. ಜೈಲ್ ಆಸ್ಪತ್ರೆ ಡಾಕ್ಟರು ಪರೀಕ್ಷಿಸಿ ಸಾಧುವಾಗಿ ಕಂಡರೆ ಮಾತ್ರ ಅವಕಾಶ ನೀಡಲಾಗುವುದು.

ಶ್ರೇಷ್ಠನ್ಯಾಯಾಲಯದ ತೀರ್ಪು ಖೈದಿ ವಿರುದ್ಧ ಆಯ್ತೆಂದರೆ ಆ ಖೈದಿ ಅರ್ಧ ಸತ್ತಂತಾಗಿ ಆತನ ಮಾತುಕತೆಗಳಲ್ಲಿ ವ್ಯವಹಾರದಲ್ಲಿ ಬದಲಾವಣೆ ಕಾಣಿಸಿಕೊಳ್ಳಲಾರಂಭವಾಗುವುದು. ದಿನವೂ ತಾನು ಮಾಡುತ್ತಿದ್ದ ಊಟದಲ್ಲಿ ಅರ್ಧವನ್ನೂ ತಿನ್ನಲಾರದ ಸ್ಥಿತಿಯನ್ನು ಆತ ಎದುರಿಸುತ್ತಾನೆ. ಸರಿಯಾಗಿ ನಿದ್ರೆಕೂಡ ಮಾಡಲಾರ, ನಿದ್ರೆಯಲ್ಲಿ ತನ್ನ ಈ ಹಿಂದಿನ ದಿನಗಳನ್ನು ಕುರಿತಂತೆ ಕನವರಿಕೆ. ನೋಡಲು ಬಂದವರೊಡನೆ ಸಹ ಸಲಿಗೆಯ ಮಾತುಗಳಿಲ್ಲ ಸಾವಿನ ದವಡೆಗೆ ಸಿಕ್ಕಿಕೊಂಡಿದ್ದೇನೆ. ನಾಳೆಯೋ ನಾಡಿದ್ದೋ ನೇಣುಕಂಬಕ್ಕೆ ತೂಗು ಹಾಕುತ್ತಾರಲ್ಲ ಎಂಬ ಭಯ.

ಸರ್ಕಾರದವರು ಈ ಹಿಂದೆ ಶ್ರೀಮನ್ ಮಹಾರಾಜರಿಗೆ ದಯೆತೋರಿ ಶಿಕ್ಷೆ ರದ್ದು ಮಾಡಲು ಸರ್ಕಾರ ತನ್ನ ವೆಚ್ಚದಿಂದ Mercy petition ಹಾಕಲು ಅವಕಾಶ ಕಲ್ಪಿಸಿ ವಕೀಲರನ್ನು ನೇಮಿಸಿ ಕೊಡುವುದು. ಈಗ ಶ್ರೀಮನ್ ಮಹಾರಾಜರ ಬದಲು ರಾಷ್ಟ್ರಾಧ್ಯಕ್ಷರಿಗೆ ದಯಾಭಿಕ್ಷೆ ಮನವಿ ಮಾಡಿಕೊಳ್ಳುವರು. ಆ ಮನವಿ ತಿರಸ್ಕೃತವಾಗಿ ಬಂದ ಮೇಲಂತು ಉಸಿರಾಡುವ ಜೀವಶವವಾಗಿ ಹೋಗುತ್ತಾನೆ ಖೈದಿ. ರಾಷ್ಟ್ರಾಧ್ಯಕ್ಷರ ತೀರ್ಪು ಬಂದ ಮೇಲೆ ಖೈದಿಯನ್ನು ಸಾಯುವತನಕ ನೇಣು ಹಾಕುವ ದಿನಾಂಕವನ್ನು ಗೊತ್ತುಮಾಡಲಾಗುವುದು. ಈ ದಿನಾಂಕ ಗೊತ್ತಾದ ಮೇಲೆ ಖೈದಿಯ ಸಂಬಂಧಿಗೆ ವಿಚಾರ ತಿಳಿಸಲಾಗುವುದು. ಖೈದಿಯ ಆಸ್ತಿ ಪಾಸ್ತಿಗಳ ವಿಲೇವಾರಿ ಹಾಗೂ

ಸಂಸಾರದಲ್ಲಿ ಆಗು ಹೋಗುಗಳ ಬಗ್ಗೆ ವಿಚಾರ ವಿನಿಮಯ ಮಾಡಲು ಸಂಬಂಧಿಗಳನ್ನು ಕರೆಸಲಾಗುವುದು. ಆಸ್ತಿ ಪಾಸ್ತಿಗಳ ಪಾಲು ಪಾರಿಕತ್‌ಗಳ ರಿಜಿಸ್ಟರು ಮಾಡಲು ಆ ಖೈದಿಯ ಸಂಬಂಧಿತ ಸಬ್-ರಿಜಿಷ್ಟ್ರಾರ್‌ರನ್ನು ಕರೆಸಿ ಕೊಡುವರು.

ಖೈದಿಯನ್ನು ನೇಣು ಕಂಬಕ್ಕೆ ಏರಿಸುವ ಮುನ್ನ ಎರಡು ಮೂರು ದಿನಗಳು ಆತನು ತಿನ್ನಲು ಆಶೆ ಮಾಡುವ ತಿಂಡಿ ತಿನಸುಗಳನ್ನು ಜೈಲಿನವರೇ ತರಿಸಿಕೊಡುವರು ನೇಣು ಹಾಕುವ ದಿನ ಇನ್ನಿತರ ಖೈದಿಗಳು ಎಚ್ಚರವಾಗುವ ಮುನ್ನವೇ ಖೈದಿಗೆ ಸ್ನಾನ ಮಾಡಿಸಿ ದೇವರ ಪೂಜೆ ಮಾಡಿಸಿ ಆತನ ಎರಡು ಕೈಗಳನ್ನು ಬೆನ್ನಿಗೆ ಸೇರಿಸಿ ಕೋಳ ಹಾಕಿ ನೇಣುಕಂಬದ ವಧಾಸ್ಥಾನಕ್ಕೆ ಕರೆದೊಯ್ದು ನಿಲ್ಲಿಸಿ ಉನ್ನತ ನ್ಯಾಯಾಧೀಶ ರೊಬ್ಬರು, ಜೈಲು ಸೂಪರಿಂಡೆಂಡೆಂಟ್. ಉನ್ನತ ವೈದ್ಯರು ಸೇರಿದಂತೆ ಹಾಜರಿದ್ದು ರಾಷ್ಟ್ರಾಧ್ಯಕ್ಷರ ತೀರ್ಪನ್ನು ಆತನಿಗೆ ಓದಿ ಹೇಳುವರು. ಅದರ ತೀರ್ಪಿನಲ್ಲಿ ನಿನ್ನಂತಹ ಹೀನ ಪ್ರಜೆ ದೇಶಕ್ಕೆ ಅನಾವಶ್ಯಕ, ನಿನ್ನ ಮೊಕದ್ದಮೆಯಲ್ಲಿ ನಿನ್ನ ಕೃತ್ಯ ಸಾಬೀತು ಗೊಳಿಸಲು ಸಾಕ್ಷ್ಯ ಹೇಳಿರುವ ಸಾಕ್ಷಿಗಳು ನಿನಗಾಗಿರುವ ನ್ಯಾಯಾನ್ಯಾಯಕ್ಕೆ ಹೊಣೆ ಗಾರರು. ಮುಂತಾಗಿ ತಿಳಿಸಲಾಗುವುದು.

ನೇಣುಕಂಬದ ವಧಾಸ್ಥಾನಕ್ಕೆ ಅನೇಕ ಸಾರಿ ಜ್ಞಾನವೇ ಇಲ್ಲದಂತಾದ ಖೈದಿಯನ್ನು ಎರಡು ಕಡೆ ಕಂಕುಳಿಗೆ ಕೈಹಾಕಿ ಕರೆತರುವರು. ಖೈದಿ ತೀರಾ ಜ್ಞಾನ ಕಳೆದು ಕೊಂಡವನು ವಧಪೀಠದಲ್ಲಿ ಪೂರ್ಣ ಎಚ್ಚರಗೊಳ್ಳುವನು. ಆತನ ತಲೆಗೆ ಕಣ್ಣು ಕಾಣದಂತೆ ಕಪ್ಪು ಟೋಪಿ ಹಾಕುವ ಮುನ್ನ ಅಧಿಕಾರಿ ಒಬ್ಬರು ಇನ್ನು ಮುಂದಿನ ಜನ್ಮದಲ್ಲಿ ಇಂತಹ ಅಪರಾಧ ಮಾಡುವುದಿಲ್ಲ ಎಂದು ದೇವರಲ್ಲಿ ಪ್ರಾರ್ಥನೆ ಸಲ್ಲಿಸಿ ಕ್ಷಮೆ ಕೇಳು ಎಂದು ಹೇಳುವರು. ನಿಜವಾಗಿ ತಪ್ಪಿತಸ್ಥನಾದವನು ದೇವರೆ ನಾನು ಮುಂದಿನ ಜನ್ಮದಲ್ಲಿ ಇಂತಹ ತಪ್ಪು ಮಾಡುವುದಿಲ್ಲ ಕ್ಷಮಿಸು ನನ್ನಪ್ಪನೇ ಮುಂತಾಗಿ ಎಲ್ಲರಿಗೂ ಕೇಳುವಂತೆ ದೇವರನ್ನು ಕೇಳಿಕೊಳ್ಳುವನು.

ತಪ್ಪನ್ನೇ ಮಾಡದ ನಿರಪರಾಧಿ ದೇವರೆ ತಪ್ಪನ್ನು ಮಾಡದ ನನ್ನನ್ನೇಕೆ ಈ ಶಿಕ್ಷೆಗೆ ಗುರಿಮಾಡಿದೆ ದೊರೆಯೆ ಮುಂತಾಗಿ ಪ್ರಲಾಪಿಸುವನು. ಇಂತಹ ಪ್ರಸಂಗದಲ್ಲಿ ನೂರ ರಲ್ಲಿ 8-10 ಮಂದಿ ಈ ರೀತಿ ನಿರಪರಾಧತ್ವವನ್ನು ವ್ಯಕ್ತಗೊಳಿಸುವರು ಎಂದು ಹೇಳ ಲಾಗಿದೆ.

1939ನೆಯ ಇಸವಿಯಲ್ಲಿ ಶಿವಮೊಗ್ಗ ಜೈಲಿನಲ್ಲಿ ರಾಜದ್ರೋಹ ಮೊಕದ್ದಮೆಯಲ್ಲಿ ಎಚ್. ಸಿದ್ಧಯ್ಯನವರು ಶಿಕ್ಷೆ ಅನುಭಸುತ್ತಿದ್ದರು. ಮನೆಗಳ ದರೋಡೆ ಮಾಡಿ ಕೊಲೆ ಮಾಡಿದ ಮೂರು ಜನಕ್ಕೆ ಸೆಷನ್ಸು ನ್ಯಾಯಾಧೀಶರು ಮರಣ ಶಿಕ್ಷೆ ವಿಧಿಸಿದ್ದರು. ಸಿದ್ಧಯ್ಯನವರು ಮರಣ ಶಿಕ್ಷೆಗೆ ಒಳಗಾದವರನ್ನು ನಿಜವಾಗಿ ನಡೆದದ್ದನ್ನು ಹೇಳಿ ಹೈಕೋರ್ಟಿಗೆ ಅಪೀಲು ಬರೆದುಕೊಡುತ್ತೇನೆಂದು ತಿಳಿಸಿ ಅವರಿಂದ ಪೂರ್ಣ ನಿಜಾಂಶ ತಿಳಿದು ಅಪೀಲನ್ನು ಅವರ ಹೆಸರಿನಲ್ಲಿ ಬರೆದುಕೊಟ್ಟರು. ಶ್ರೇಷ್ಠ ನ್ಯಾಯಾಲಯ

ವಾದವಿವಾದ ನಡೆಸಿ ಅವರ ಮರಣಶಿಕ್ಷೆ ರದ್ದು ಮಾಡಿತು.

ಹೀಗೆ ಆರೆಂಟು ಚಿಕ್ಕಪುಟ್ಟ ಮೊಕದ್ದಮೆಗಳಲ್ಲಿ ಮುಂದಿನ ಕೋರ್ಟುಗಳಿಗೆ ಅಪೀಲು ಬರೆದುಕೊಟ್ಟು ಉಪಕರಿಸಿದ ಸಿದ್ಧಯ್ಯನವರಿಂದ ಅನೇಕರ ಬಿಡುಗಡೆ ಸಹ ಆಯಿತು.

ವಾರಕ್ಕೊಮ್ಮೆ ಶನಿವಾರದಂದು ಮಾಂಸಾಹಾರಿಗಳಿಗೆ ಮಾಂಸ, ಸಸ್ಯಾಹಾರಿಗಳಿಗೆ ಈರುಳ್ಳಿ ಬೇಳೆ ತರಕಾರಿಹುಳಿ ಕೊಡಲಾಗುವುದು. ಸಾವಿರಾರು ಜನರಿಗೆ ಆಗುವ ಸಾಂಬಾರು ಲವಾಜಮೆಯಿಂದಾಗಿ ಸಸ್ಯಾಹಾರಿಗಳಿಗೆ ಅಮೃತದಂತಹ ಈರುಳ್ಳಿಹುಳಿ. ನಾನು ಮಾಂಸಾಹಾರಿಯಾದರೂ ಈರುಳ್ಳಿ ಹುಳಿಗಾಗಿ ಆತುರವಾಗಿ ಮತ್ತೊಮ್ಮೆ ಮುದ್ದೆ ರಾಗಿಹಿಟ್ಟು ಪಡೆದು ಈರುಳ್ಳಿ ಹುಳಿಯಲ್ಲಿ ಊಟ ಮಾಡುತ್ತಿದ್ದೆ. ಮಜ್ಜಿಗೆ ಬೆಲ್ಲದ ವಾಸನೆಯಂತು ಇಲ್ಲವೇ ಇಲ್ಲ. ನಮ್ಮ ಹೋರಾಟದನಂತರ ಜೈಲಿನ ಊಟದ ವ್ಯವಸ್ಥೆ, ಮತ್ತಿತರ ಅನುಕೂಲಗಳು ಎಂದರೆ ಸಾಧಾರಣ ಕಾಯಿಲೆ ಆದರೆ ಚಿಕಿತ್ಸೆಗಾಗಿ ಜೈಲಿನಲ್ಲಿ ಆಸ್ಪತ್ರೆಯಿದೆ. ಮಿತಿಮೀರಿದ ಕಾಯಿಲೆ ಆದರೆ ರೋಗಿಖೈದಿಗಳನ್ನು ಮೋಟಾರು ವ್ಯಾನಿನಲ್ಲಿ ದೊಡ್ಡ ಆಸ್ಪತ್ರೆಗೆ ಕರೆದೊಯ್ಯುವರು. ಅಲ್ಲಿ ಅವರಿಗಾಗಿಯೆ ಪ್ರತ್ಯೇಕ ವಾರ್ಡಿದ್ದು ಶೀಘ್ರ ಚಿಕಿತ್ಸಾ ಕ್ರಮಕ್ಕೆ ವೈದ್ಯರಿರುವರು. ತಂದೆ ತಾಯಿ ಕಳೆದು ಕೊಂಡವರು ಅವರ ಪಿತೃಗಳಿಗೆ ತಿಲತರ್ಪಣಾದಿಗಳನ್ನು ಬಿಟ್ಟು ಪಿಂಡಹಾಕಲು ಪಿತೃ ಪಕ್ಷವನ್ನು ಆಚರಿಸಲು ಜೈಲಿನಿಂದ ಖರ್ಚು ದೊರೆಯುವುದು. ಇತ್ತೀಚೆಗೆ ವರ್ಷಕ್ಕೆ ಇಷ್ಟುದಿನ ಪೆರೋಲ್ ಮೇಲೆ ಮನೆಗೆ ಹೋಗಿ ಸಂಸಾರದ ಆಗುಹೋಗುಗಳ ಬಗ್ಗೆ ತಿಳಿದು ವ್ಯವಸ್ಥೆಮಾಡಲು ಅವಕಾಶವಿವೆ.

ಮಹಾತ್ಮಗಾಂಧಿ, ಟಾಲ್‌ಸ್ಟಾಯ್. ಮ್ಯಾಕ್ಸಿಂಗಾರ್ಕಿ ಮುಂತಾದವರು ಹೇಳು ವಂತೆ ಹುಟ್ಟಿದ ಪ್ರತಿಯೊಬ್ಬನಿಗೂ ಕನಿಷ್ಠ ಇರಲು ಮನೆ, ಮೈಗೆ ಬಟ್ಟೆ, ಹೊಟ್ಟೆಗೆ ಹಿಟ್ಟು, ತಲೆಗೆ ಬುದ್ಧಿ ಇಷ್ಟನ್ನಾದರು ಕೊಡುವ ವ್ಯವಸ್ಥೆ ಮಾಡುವ ಸರ್ಕಾರವೇ ನಾಗರೀಕ ಸರ್ಕಾರ ಎನ್ನುವ ಮಾತುಗಳನ್ನು ಜೈಲಿನಲ್ಲಿ ಖೈದಿಗಳ ಬಗ್ಗೆ ನಡೆಸಿಕೊಡು ತ್ತಿದೆ. ಓದುಬರಹ ಬಲ್ಲ ಖೈದಿಗಳಿಗೆ ಪುಸ್ತಕ ಭಂಡಾರದ ವ್ಯವಸ್ಥೆಯಿದೆ. ನಿರಕ್ಷರ ಕುಕ್ಷಿ ಗಳಿಗೆ ಓದುಬರಹ ಕಲಿಸುವ ಏರ್ಪಾಟಿದೆ.

ಜೈಲಿನಲ್ಲಿ ನೇಯ್ಗೆ, ಕುಲುಮೆ, ಮರಗೆಲಸ, ಮುದ್ರಣ, ರತ್ನಕಂಬಳಿ ತಯಾರಿಕೆ, ಹೀಗೆ ನಾನಾ ಕಸಬುಗಳನ್ನು ಖೈದಿಗಳಿಗೆ ಕಲಿಸಿಕೊಡಲಾಗುವುದು. ಚೆನ್ನಾಗಿ ಕೆಲಸ ಕಲಿತು ವಸ್ತುಗಳನ್ನ ತಯಾರಿಸುವ ಖೈದಿಗಳಿಗೆ ದಿನಕ್ಕಿಷ್ಟು ಕೂಲಿ ಎಂದು ಅವರ ಖಾತೆಗೆ ಜಮಾ ಮಾಡಿ ಅವರ ಬಿಡುಗಡೆ ಆದಾಗ ಅವರ ಖಾತೆಯಲ್ಲಿರುವ ಹಣ ವನ್ನಿತ್ತು ಕಳುಹಿಸಲಾಗುವುದು. ಚೆನ್ನಾಗಿ ಮೈಮುರಿದು ದುಡಿದ ಖೈದಿಗಳು ಸಹ ಸಾವಿರಾರು ರೂಪಾಯಿ ಹಣ ಸಂಪಾದನೆ ಮಾಡುವುದರ ಜೊತೆಗೆ ನೇಯ್ಗೆ, ಕುಲುಮೆ, ಪ್ರಿಂಟಿಂಗ್, ರತ್ನಕಂಬಳಿ ತಯಾರಿಕಾ ಘಟಕಗಳಲ್ಲಿ ಖಾಯಂ ನೌಕರರಾಗಿ ಉದ್ಯೋಗ್ಯಕ್ಕೆ

ಸೇರಿ ಕೆಲಸ ಮಾಡುತ್ತಿದ್ದಾರೆ.

ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ತಯಾರಾದ ನಾನಾ ವಸ್ತುಗಳು ಲಂಡನ್‌ನಲ್ಲಿ ಸೇರುವ ವಸ್ತುಪ್ರದರ್ಶನದಲ್ಲಿ ಪ್ರಥಮ ಬಹುಮಾನ ಗಳಿಸಿರುವುದುಂಟು. ರತ್ನಕಂಬಳಿಯಂತು ಜಗತ್ಪ್ರಸಿದ್ಧವಾದುದು.

ನಮ್ಮ ಊಟಕ್ಕೆ ಎರಡು ಮಣ್ಣಿನ ಮುಚ್ಚಳ, ಒಂದು ಮಣ್ಣಿನ ಮೊಗೆ ಕೊಡುತಿದ್ದರೆಂದು ಈ ಹಿಂದೆ ಹೇಳಿದೆನಲ್ಲವೆ ! ನಮ್ಮ ಸಂಖ್ಯೆ ಹೆಚ್ಚಾಗುತ್ತ ಬಂದಂತೆ ನಾವು ಮುಚ್ಚಳ ಮತ್ತು ಮಗೆ ಬಿಸಾಡಿ ಒಡೆದುಹಾಕುವ ಪ್ರಸಂಗ ಹೆಚ್ಚಾದಂತೆ ಅವುಗಳನ್ನು ಒದಗಿಸುವುದು ಕಷ್ಟವಾಗಿ ಅಲ್ಯೂಮಿನಿಯಂ ತಟ್ಟೆ, ಚಂಬು ಕೊಡಲು ಪ್ರಾರಂಭಿಸಿದರು. ಕಾಲೇಜುಗಳ ಪರೀಕ್ಷಾ ಪ್ರಶ್ನಪತ್ರಿಕೆಗಳು ಜೈಲಿನ ಮುದ್ರಣಾಲಯದಲ್ಲಿ ನಡೆಯುತ್ತಿದ್ದುದು ನಮಗೆ ಗೊತ್ತಾಯಿತು. ಮುದ್ರಣಾಲಯದಿಂದ ಪ್ರಶ್ನ ಪತ್ರಿಕೆಗಳನ್ನು ದೊರಕಿಸಿಕೊಂಡು ಅಲ್ಯೂಮಿನಿಯಂ ತಟ್ಟೆಯಲ್ಲಿ ಪೆನ್ಸಿಲ್‌ನಿಂದ ಬರೆದು ಸೆಂಟ್ರಲ್ ಕಾಲೇಜ್ ಆವರಣಕ್ಕೆ ತಟ್ಟೆಗಳನ್ನು ತೂರಿಬಿಡುತ್ತಿದ್ದೆವು. ಇದಂತು ಸರ್ಕಾರಕ್ಕೆ ನುಂಗಲಾರದ ತುತ್ತಾಯಿತು. ತಡೆಗಟ್ಟುವ ಮಾರ್ಗ ಗೊತ್ತಾಗದೆ ಪ್ರಶ್ನಪತ್ರಿಕೆಗಳ ಮುದ್ರಣವನ್ನು ಬೇರೆಲ್ಲಿಗೋ ಬದಲಾಯಿಸಿದರು.

ಜೀವಾವಧಿ ಶಿಕ್ಷೆಗೆ ಒಳಗಾದವರನ್ನು ವಾರ್ಡರುಗಳ ಕೆಲಸಕ್ಕೆ ನೇಮಿಸಿಕೊಂಡು ಖೈದಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವರು. ಅನೇಕರು ಆಫೀಸುಗಳಲ್ಲಿ ಗುಮಾಸ್ತೆ ಕೆಲಸ ನಿರ್ವಹಿಸುವರು. ಒಳ್ಳೆಯ ನಡತೆಯುಳ್ಳ ಜೀವಾವಧಿ ಶಿಕ್ಷಿತರನ್ನು ಪಾಂಡವರ ವನವಾಸ 14 ವರ್ಷವೆಂದು ಜೀವಾವಧಿ ಶಿಕ್ಷೆಗೊಳಗಾದ ಖೈದಿಗಳನ್ನು ಅದೇ ಅವಧಿಗೆ ಬಿಡುಗಡೆಮಾಡುವರು. ಮೊರಿದ ವಸ್ತು ತಯಾರಿಕಾ ಘಟಕಗಳಲ್ಲಿ ಶ್ರಮವಹಿಸಿ ದುಡಿದು ಶಿಸ್ತುಸಿಪ್ಪರಾದಂಥ ಖೈದಿಗಳನೇಕರು ಅವರ ವಾರ್ಷಿಕ ಸನ್ನಡತೆಯ ರಿಯಾಯತಿ ದಿನಗಳನ್ನು ಪಡೆದು 9 ವರ್ಷಕ್ಕೆ ಬಿಡುಗಡೆ ಹೊಂದುವವರು ಇದ್ದಾರೆ.

ಏನೋ ಕೈತಪ್ಪಿ ಕಳ್ಳತನದಲ್ಲಿ ಸಿಕ್ಕಿ ಶಿಕ್ಷೆಗೊಳಗಾದ ಸಾಧಾರಣ ಪಡ್ಡೆಗಳ ಮನಸ್ಸನ್ನು ಜೈಲಿನ ಸೌಲಭ್ಯಗಳು ಆಕರ್ಷಿಸಿವೆ. ಅವರುಗಳು ಬಿಡುಗಡೆ ಬಂತೆಂದರೆ ಬೆದರುವರು. ತಮ್ಮ ತಟ್ಟೆ ಲೋಟಗಳನ್ನು ಜತನವಾಗಿ ತನ್ನ ಜೊತೆಗಾರರಿಗೆ ಕೊಟ್ಟು ನಾಳೆ ನಾಡಿದ್ದು ಬರುವುದಾಗಿ ಹೇಳಿಹೋಗುವವರೂ ಇದ್ದಾರೆ. ಮೂರು ನಾಲ್ಕು ಸಾರಿ ಶಿಕ್ಷೆಗೆ ಒಳಗಾಗಿ ಬಂದವರಿಗೆ ಅರ್ಧ ಕಪ್ಪು, ಅರ್ಧ ಬಿಳುಪು ಬಣ್ಣದ ಟೋಪಿಗಳನ್ನು ಕೊಡುವರು. ಅರ್ಥಾತ್ ಅವರು ಪಂಚರಂಗಿ ಖೈದಿಗಳು.

ಹ್ಯಾಮಿಲ್‌ಟನ್ ಬಿಲ್ಡಿಂಗ್ ಸತ್ಯಾಗ್ರಹದಲ್ಲಿ ಬಂಧಿತರಾಗಿ ಬಂದ ತಗಡೂರು ರಾಮಚಂದ್ರರಾಯರಿಗೆ ಪಂಚರಂಗಿಯೊಬ್ಬ ಸ್ನಾನ ಮಾಡಿಸಲು ಬಂದ. ರಾಯರ ತಲೆಗೆ ಮೈಸಾಬೂನು ಹಾಕಿ ತಿಕ್ಕುವಾಗ ಸ್ವಾಮಿ, ಸ್ವಾಮಿ ಸಾಬೂನು ಕೈಜಾರಿ ಬಚ್ಚಲಿಗೆ ಬಿದ್ದು ಕೊಚ್ಚಿಹೋಯಿತು ಎಂದು ತಿಳಿಸಿದ. ಏನೋ ಪಾಪ ಎಂದು ರಾಯರು

ಸುಮ್ಮನೆ ಬಟ್ಟೆ ಹಾಕಿಕೊಳ್ಳುತ್ತಿದ್ದರು. ನಾವು ಕೆಲವು ಪಂಚರಂಗಿಗಳೊಡನೆ ತರಕಾರಿಗೆ ನೀರು ಎರೆಯುತ್ತಿದ್ದೆವು. ಆ ಪೈಕಿ ಪಂಚರಂಗಿಯೊಬ್ಬ ಲೋ ಸತ್ತುಟ್ಟ ಸಾಬೂನು ಕೊಚ್ಚಿ ಎಲ್ಲಿಗೆ ಹೋಗುತ್ತೊ ಸ್ವಾಮಿ ಅವರಿಗೆ ಕೊಟ್ಟುಬಿಡು ಎಂದ. ಕೊಚ್ಚಿ ಹೋಯ್ತೆಂದು ಹಠ ಸಾಧಿಸಿದ ಸತ್ತುಟ್ಟ. ಇವನು ಹೋದವನೆ ಸ್ನಾನದ ಬಚ್ಚಲ ಬಳಿ ಇದ್ದ ಬಾಳೆಗಿಡದ ಪಟ್ಟೆ ಎಳೆದು ಸಾಬೂನನ್ನು ಸ್ವಾಮಿ ಅವರಿಗೆ ಕೊಟ್ಟ.

ನೋಡಿ ಸ್ವಾಮಿ ಈ ಸತ್ತುಟ್ಟ ನನ್ನ ಮಗನಿಗೆ ಹೊರಗೆ ಹೇಳೋರು ಕೇಳೋರು ಇಲ್ಲ. ಜೈಲಿಂದ ಬೆಳಿಗ್ಗೆ ಬಿಟ್ಟರೆ ಸಂಜೆ ಊಟಕ್ಕೆ ಹಾಜರಾಗೋ ನನ್ನ ಮಗನಿಗೆ ಜೈಲಿಂದ ಸಾಯೋ ಮಾತೇ ಇಲ್ಲ, ಅದಕ್ಕೆ ಇವನಿಗೆ ಸತ್ತುಟ್ಟ ಎಂದು ಹೆಸರಿಟ್ಟಿದ್ದೇವೆ. ಎಂದ. ಈ ಪಂಚರಂಗಿ ಹೇಳಿದ ಮಾತು ಕೇಳಿದ ನನಗೆ ತಲ ಸುತ್ತಿ ಬವಣೆ ಬಂದಂತಾಯಿತು. ಜೈಲು ಹೊರಗೆ ಲಕ್ಷಾಂತರ ಜನರು ಹೊಟ್ಟೆಗಿಲ್ಲದೆ ರೋಗರುಜಿನಾದಿಗಳಿಂದ ನರಕಪ್ರಾಯ ಜೀವನ ನಡೆಸುವ ಜನರಿಗೆ ನಾವ್ಯಾಕೆ ಜೈಲಿನ ಸೌಲಭ್ಯ ವಾತಾವರಣ ತಿಳಿಸಿ ಜೈಲಿಗೆ ಕರೆತಂದು ಅವರ ಜೀವನ ಉತ್ತಮಪಡಿಸಬಾರದು ಎನ್ನಿಸಿತು. ನಾನು ಹೊರಗೆ ಹೋದಮೇಲೆ ಈ ವಿಚಾರದಲ್ಲಿ ಅನೇಕ ಕಡೆ ಭಾಷಣಗಳಲ್ಲಿ ಕ್ರಾಂತಿಕಾರಕವಾಗಿ ಮಾತನಾಡಿದೆನಾದರು ಅದಕ್ಕೆ ಓಗೊಟ್ಟವನು ಒಬ್ಬನೂ ಸಿಗಲಿಲ್ಲ. ಜೈಲಿನ ಹೊರಗೆ ಅನಾಗರೀಕನಾಗಿ ಬಾಳುವಾತ ಜೈಲಿನ ವಾತಾವರಣ ಕಂಡರೆ, ಅಲ್ಲಿನ ಶುಚಿ ರುಚಿಯಾದ ಊಟದ ಸವಿ ನಾಲಗೆಗೆ ದೊರೆತು ಜನರು ಜೈಲು ನುಗ್ಗಿದರೆ ಸರ್ಕಾರದ ಗತಿ ಏನಾಗಬೇಕು ಎನ್ನಿಸಿತು. ಅಂತು ಪಂಚರಂಗಿಗಳಲ್ಲಿ ಕೆಲವರು 15–16 ವರ್ಷದ ಹುಡುಗರಾಗಿದ್ದಾಗಿನಿಂದ ಜೈಲಿಗೆ ಬರಲು ಪ್ರಾರಂಭಿಸಿ ನಾನು ಜೈಲಿಗೆ ಹೋದಾಗ ಸುಮಾರು 40–48 ವರ್ಷದ ಮೀಸೆ ಮಿಂಡಾಳುಗಳಾಗಿದ್ದರು. ಅವರಲ್ಲಿ ಜೈಲಿಂದ ಬೆಳಗ್ಗೆ ಬಿಡುಗಡೆಯಾಗಿ ಸಂಜೆ ಊಟಕ್ಕೆ ಬಂದವರೂ ಇದ್ದರು. ಇದೊಂದು ಅಪಾರ ಕನಿಕರವಾದ ವಿಚಾರ.

ನಾನು ಹಿಂದೆ ಹೇಳಿದಂತೆ ಬಹಿರ್ದೆಶೆಗೆ ಸಾಲಾಗಿ ಕೂರುವ ವಿಧಾನವನ್ನು ಸಂಖ್ಯೆ ಹೆಚ್ಚಾದ ಮೇಲೆ ದೊಡ್ಡ ದಾಂಧಲೆ ಮಾಡಿ ನಾಗರೀಕ ಪ್ರಪಂಚದ ಕಕ್ಕಸು ವ್ಯವಸ್ಥೆಮಾಡಿಸಿದೆವು. ಕಕ್ಕಸ್ಸಿಗೆ ಸಾಲುಗಳಲ್ಲಿ ಕೂರುವ ಅನಾಗರಿಕತನ ಯಾರಿಗಾದರು ಜೈಲು ಬೇಡಪ್ಪ ಎನ್ನಿಸುವಂತಿತ್ತು.

ತಪ್ಪು ಸಾಬೀತಾದರೆ ಕೋರ್ಟಿನಲ್ಲಿ ಇಂತಿಷ್ಟು ಶಿಕ್ಷೆ ಎಂದು ವಿಧಿಸುತ್ತಾರೆ. ಜೈಲಿನಲ್ಲಿ ತಪ್ಪು ಮಾಡಿದರೆ ಜೈಲು ಅಧಿಕಾರಿಗಳು ನೀಡುವ ಶಿಕ್ಷೆ ಯಮಶಿಕ್ಷೆ, ಅಂದರೆ ಮನುಷ್ಯ ಸತ್ತಮೇಲೆ ಯಮಲೋಕಕ್ಕೆ ಕರೆದೊಯ್ದು ನಾನಾ ಶಿಕ್ಷೆಗಳನ್ನು ನೀಡುತ್ತಿದ್ದರೆಂದು ಕೇಳಿರುವ ಶಿಕ್ಷೆಗಳನ್ನು ಜೈಲಿನಲ್ಲಿ ನೀಡುವರು. ಅವುಗಳಲ್ಲಿ ಹಾಕು ಬೇಡಿ, ನಿಲ್ ಬೇಡಿ, ನೂಕು ಬೇಡಿ, ಕಂಬಳಿಸೇವೆ ಹೀಗೆ ನಾನಾ ರೀತಿಯ ಶಿಕ್ಷೆಗಳು. ಪಿಸ್ತಿಲ್ಲ ನೋಡಿ ಕೈಬೆರಳುಗಳನ್ನು ಮಡಿಸಿ ಮುಷ್ಟಿಹಿಡಿದು ಜೈಲಲ್ಲಿ ಓಡಾಡುವುದು ಒಂದು

ಅಪರಾಧ.

ಜೈಲಿನಲ್ಲಿ ಗಲಾಟೆ ಮಾಡುವ ಖೈದಿಗಳ ಬಗ್ಗೆ ನಾನು ಮೇಲೆ ಹೇಳಿರುವ ಶಿಕ್ಷೆಯನ್ನು ವಿಧಿಸಲಾಗುವುದು. ನಿಲ್‌ಬೇಡಿ ಎಂದರೆ ಗೋಡೆಗೆ 6½ ಅಡಿ ಅಂತರದಲ್ಲಿ ಎರಡು ಬಳೆಗಳನ್ನು ಸೇರಿಸಿರುವರು ತಪ್ಪು ಮಾಡಿದವನನ್ನು ಪ್ರಾತಃಕಾಲ 6 ಘಂಟೆಗೆ ಊಟ ಮಾಡಿಸಿ ನಿಲ್‌ಬೇಡಿ ಕೆಳಗೆ ನಿಲ್ಲಿಸಿ ಮೇಲಿನ ಎರಡು ಬಳೆಗಳಿಗೆ ಈತನ ಎರಡು ಕೈಗಳನ್ನು ಎತ್ತಿ ಆ ಕೋಳಗಳಿಗೆ ಸೇರಿಸಿ ಬೀಗಹಾಕುವರು. ಕೋಳದ ಕೆಳಗೆ ನಿಂತವ ನನ್ನು ತುದಿ ಬೆರಳು ಮಾತ್ರ ನೆಲಕ್ಕೆ ಸೋಂಕುವಂತೆ ನಿಲ್ಲಿಸುವರು. ಪುನಃ ಆತನನ್ನು ಸಂಜೆ ಆರುಘಂಟೆಗೆ ಬಿಡುಗಡೆ ಮಾಡುವರು. ಅಷ್ಟರಲ್ಲಿ ಆತನ ನರಗಳು ಕಾಲಿಂದ ಕೈವರೆಗೆ ಹಗ್ಗದಂತೆ ಕಾಣುತ್ತಿದ್ದು ನರಗಳ ಒಡೆತದಿಂದ ತತ್ತರಿಸಿ ಹೋಗುವನು. ಮೂತ್ರ ವಿಸರ್ಜನೆಗೆ ಎರಡುಕಾಲು ಮಧ್ಯಕ್ಕೆ ಮಡಕೆ ಕೊಡುವರು.

ಇಂತಹ ಒಂದು ಶಿಕ್ಷೆಯನ್ನು 1942 ರಲ್ಲಿ ಚಳುವಳಿ ಕಾಲದಲ್ಲಿ ತುಮಕೂರಿನ ಆರ್. ಎಸ್. ಆರಾಧ್ಯರಿಗೆ ಜೈಲು ಅಧಿಕಾರಿಗಳು ನೀಡಿದ್ದು, ಸಹಪಾಠಿಗಳಾದ ನಮ್ಮ ನಿರಶನ ಸತ್ಯಾಗ್ರಹದಿಂದಾಗಿ ಸಂಜೆ 6 ಗಂಟೆಗೆ ಬದಲಾಗಿ 4 ಗಂಟೆಗೆ ಬಿಡುಗಡೆ ಮಾಡಿದರು. ಆರಾಧ್ಯರಂತು ತತ್ತರಿಸಿ ಹೋಗಿದ್ದು ಬೇಡಿ ಬಿಚ್ಚಿದ ಕೂಡಲೇ ನಿಲ್ಲ ಲಾಗದೆ ಹಾಗೇ ಕುಸಿದು ನೆಲದಲ್ಲಿ ಕುಳಿತು ಬಿಟ್ಟರು.

ಇನ್ನು ಹಾಕು ಬೇಡಿ–ಮನುಷ್ಯನ ನಡುವಿನಿಂದ ಪಾದದವರೆಗೆ ಕಬ್ಬಿಣದ ಸರಳನ್ನು ಎರಡು ಕಾಲುಗಳಿಗೂ ಕಾಲು ಕೋಳದ ಜೊತೆಗೆ ಸೇರಿಸಿ ಹಾಕಿಬಿಡುವರು ತಾನಾಗೆ ಕುಳಿತುಕೊಳ್ಳಲು ಸಾಧ್ಯವಾಗದು, ಕಾಲು ಮಡಿಸುವಂತಿಲ್ಲ. ನಡೆಯಲು ಕಾಲನ್ನು ಎತ್ತಲಾಗುವುದಿಲ್ಲ. ಹಾಗೆ ನೆಲದಲ್ಲಿ ಪಾದಗಳನ್ನು ಮುಂದೆ ಸರಿಸುತ್ತ ಹೋಗಬೇಕು. ಈ ಶಿಕ್ಷೆಯು ಮೇಲಿನ ಶಿಕ್ಷೆಗೆ ಸಮಾನಾಂತರವಾದುದು.

ಕಂಬಳಿ ಸೇವೆ–ಮಂದವಾದ ಐದಾರು ಕಂಬಳಿಗಳನ್ನು ಒಂದರ ಮೇಲೊಂದು ಸೇವಿಸಿ ಜೊತೆಗೂಡಿಸಿರುತ್ತಾರೆ. ತಪ್ಪಿತಸ್ಥನ ಮೇಲೆ ಈ ಕಂಬಳಿಯನ್ನು ಹಾಕಿ ಬಲವಾದ ಲಾಠಿಗಳಿಂದ ಸಿಕ್ಕಿದ ಕಡೆ ಬಾರಿಸುವರು. ಇದರಿಂದ ಮೂಳೆ ಮುರಿವುದಾಗಲಿ ಯಾವುದೇ ತರಹದ ಪ್ರಾಣಾಪಾಯವಿಲ್ಲದ ರೀತಿ ಮನುಷ್ಯನನ್ನು ಹಣ್ಣುಗಾಯಿ ನೀರುಗಾಯಿ ಮಾಡಿಬಿಡುವರು. ಇದರಿಂದ ಮಾಂಸಖಂಡಗಳಿಗೆ ನೋವಾಗಿ ಸುದರಾಯಿಸಿಕೊಳ್ಳಲು ವಾರಗಟ್ಟಲೆ ಹಿಡಿಯುವುದು.

೩

1937 ನೆಯ ಇಸವಿ ಆರಂಭದಲ್ಲಿ ತಗಡೂರು ರಾಮಚಂದ್ರರಾಯರು ಟಿ. ನರಸೀಪುರ ತಾಲ್ಲೂಕಿನ, ಸೋಮನಾಥಪುರ, ಸೋಸಲೆಗಳಿಗೆ ಹರಿಜನೋದ್ಧಾರ ಕಾರ್ಯಕ್ರಮವನ್ನು ಹಾಕಿಕೊಳ್ಳುತಿದ್ದರು. ಇವರ ಜೊತೆಗೆ ಶೇಷಾದ್ರಿಯವರು. ಇವರ ಹಿಂಬಾಲಕರಾಗಿ ನಾನು, ಸುಬ್ಬಣ್ಣ ಯು. ಕೆಂಚಪ್ಪ, ರಾಜಶೇಖರ್, ಶಂಭು ಅಪ್ಪ ಅಮ್ಮನ ಕಣ್ಣು ತಪ್ಪಿಸಿ ಬರಬೇಕು. ಧೈರ್ಯವಾಗಿ ಮುನ್ನುಗ್ಗಿ ಕುವೆಂಪು ಅವರ ಗೀತೆಯಂತೆ "ನಡೆ ಮುಂದೆ ನಡೆಮುಂದೆ ಜಗ್ಗದೆಯೆ ಕುಗ್ಗದೆಯೆ ನಡೆಮುಂದೆ" ವೀರ ಎನ್ನುವಂತೆ ಹೊಸದಾಗಿ ಜೊತೆ ಸೇರಿದ ಎ. ರಾಮಣ್ಣನವರು. ರಾಮಣ್ಣನವರ ಊಟ ಎಲ್ಲಿ ಸಾಗುತ್ತಿತ್ತು ಗೊತ್ತಿರಲಿಲ್ಲ.

ಟಿ.ಎಸ್. ಸುಬ್ಬಣ್ಣನವರು ಒಂದೇ ಮಡಕೆಯಲ್ಲಿ ಅಕ್ಕಿ, ತರಕಾರಿ ಸೊಪ್ಪು ಬೇಳೆ ಸೇರಿಸಿ ಅನ್ನಮಾಡಿ ತರುತಿದ್ದರು. ಆ ಅನ್ನದ ರುಚಿ ಎಂತದು ಎಂದು ವರ್ಣಿಸಿ ಹೇಳಲಾಗದು, ತಿಂದವರೇ ಹೇಳಬೇಕು. ಒಂದೇ ಮಡಿಕೆಯಲ್ಲಿ ಬೇಯಿಸಿ ತಂದ ಅನ್ನ ತಿಂದು ರಾಯರ ಪ್ರವಾಸಕ್ಕೆ ಜಾಗಟೆ ಬಾಲಿಟಿನ್ ಹಿಡಿದು ಮುಂದೆ ಹೊರಟು ಜಾಗಟೆ ಯಿಂದ ಎಚ್ಚರಿಸಿ ಜನರನ್ನು ಒಂದೆಡೆ ಸೇರಿಸುವುದು ನಮ್ಮ ಮುಖ್ಯ ಕೆಲಸ.

ಒಂದು ದಿನ ಸೋಮನಾಥಪುರದ ಬಳಿಯ ಸೋಸಲೆಯ ಶ್ರೀಮಂತ ಹರಿಜನ ಮುಖಂಡರು ತಗಡೂರರಲ್ಲಿ ಬಂದು ನಮ್ಮೂರಿಗೆ ದಯಮಾಡಿಸಬೇಕು. ಮಕ್ಕಳು ಮರಿ ಮದ್ಯಪಾನ ಮಾಡುವ. ವಿಾರಿ ಕುಡಿಯುವ ಹವ್ಯಾಸ ಬಿಡುವಂತೆ ಅವರಿಗೆ ಬುದ್ಧಿ ಹೇಳಬೇಕೆಂದರು. ನಮ್ಮ ಜೊತೆ ಎ. ರಾಮಣ್ಣನವರು ಹೊರಟರು. ಮೈಸೂರಿಂದ ತಲಕಾಡಿಗೆ ಹೋಗುವ ಬಸ್ಸಿನಲ್ಲಿ ಸುಮಾರು ಆರು ಮಂದಿ ಉಚಿತವಾಗಿ ಪ್ರಯಾಣಮಾಡಿ ಹೊತ್ತಿಗೆ ಮುಂಚೆ ಸೋಸಲೆ ತಲುಪಿದೆವು. ತಗಡೂರು ರಾಮಚಂದ್ರ ರಾಯರ ಕಾರ್ಯಕ್ರಮಕ್ಕೆ (ಮೈಸೂರು ಜಿಲ್ಲೆಯ ಎಲ್ಲ ಬಸ್‌ಗಳವರು ಉಚಿತ ಪ್ರಯಾಣಕ್ಕೆ ಅವಕಾಶನೀಡಿದ್ದರು.)

ಸೊಸಲೆಯ ಹರಿಜನ ಮುಖಂಡರುಗಳು ಬೆಳಗಿನ ತಿಂಡಿಗೆ ಒಬ್ಬೊಬ್ಬರು ಒಂದೊಂದು ತರಹದ ತಿಂಡಿ ಮಾಡಿಸಿದ್ದರು. ಕೇಸರಿಬಾತ್, ಕಡುಬು, ದೋಸೆ ಆಗ ಕಾಯಿಸಿದ ಹಸುವಿನ ತುಪ್ಪ, ಆರೆಗಡದ ಕೆನೆ ಮೊಸರು. ಶ್ರೀಮಂತರೊಬ್ಬರ ಮನೆಯ ಜಗಲಿಯಲ್ಲಿ ಜಮಖಾನ ಹಾಕಿ ನಮ್ಮನ್ನು ಕೂರಿಸಿದರು. ಇದೇಕಯ್ಯ ಜಗಲಿ ಯಲ್ಲಿ ಕೂರಿಸುತ್ತೀರಿ. ಎಳೆ ಬಿಸಿಲು ಮುಖಕ್ಕೆ ರಾಚಿಸುತ್ತಿದೆ. ಒಳ ಹೋಗಿ ತಿಂಡಿ ತೀರ್ಥ ತಿನ್ನೋಣ ಎಂದರು ತಗಡೂರು, ಓ!ಹೋ!! ಅದಾಗದು ಸ್ವಾಮಿ, ನಿಮ್ಮನ್ನು

ಜಗಲಿಗೆ ಸೇರಿಸಿರುವುದೇ ಹೆಚ್ಚು, ಒಳಗೆ ಮುದುಕಿ ಮುದುಕರು ಮುಜಗರ ಪಡು ತಿದ್ದಾರೆ.

ಆಯ್ತಪ್ಪ ತಿಂಡಿ ತನ್ನಿ ಎಂದೆವು. ಸೊಗಸಾದ ತಾಜಾಬೆಣ್ಣೆಯಲ್ಲಿ ದೋಸೆ ಕಡುಬಿನ ಸೇವನೆ ಮಾಡಿದೆವು. ''ಜನ ಜಾಗೃತಿ ಸಂಘ'' ದ ಸದಸ್ಯರಿಗೆ ಈ ಶ್ರೀಮಂತಿಕೆ ತಿಂಡಿ ಅಪರೂಪವೇ ಆಗಿತ್ತು. ಕಾರಣ ಸಾಧಾರಣವಾಗಿ ನಡೆಯುತ್ತಿದ್ದ ಸಾರ್ವಜನಿಕ ಬಡ ಹಾಸ್ಟಲನ್ನು ಸಮ್ಮಿಂದಾಗಿ Ride ಮಾಡಿ ಇದ್ದಬದ್ದ ಸಾಮಾನು ತೆಗೆದು ಕೊಂಡು ಹೋಗಿದ್ದರು. ಟಿ. ಎಸ್. ಸುಬ್ಬಣ್ಣ ಮತ್ತು ಒಂದೆರಡು ಹುಡುಗರು ಸೇರಿ ನಾಲ್ಕಾರು ಮನೆಗೆ ಹೋಗಿ ಭಿಕ್ಷಾಟನೆ ಮಾಡಿ ದೊರೆತಷ್ಟು ಅಕ್ಕಿ ತರುತ್ತಿದ್ದರು. ಹಾಸ್ಟಲಿನ ಆವರಣದಲ್ಲಿ ಬೆಳೆದ ಸೊಪ್ಪು ತರಕಾರಿ ಸೇರಿಸಿ ಒಂದೇ ಮಡಕೆಯಲ್ಲಿ ನಾನು ಹಿಂದೆ ಹೇಳಿರುವಂತೆ ಕುಂಚಿಟಿಗರ ಆಲಮ್ಮನ ಛತ್ರದಲ್ಲಿ ಅನ್ನಮಾಡಿ ತರುತಿದ್ದ. ಅನ್ನ ರುಚಿಕರವಾಗಿ ಎಲ್ಲರಿಗೂ ಸಾಕಾಗುತ್ತಿತ್ತು. ಕಾಂಗ್ರೆಸ್ ಬೀಡಿ ಎಂ. ಆರ್. ಸಿ. ಬಸಪ್ಪನವರು ಶಿವರಾಂಪೇಟೆ ಗಲ್ಲಿಯೊಂದರ ಹೋಟೇಲಿನಲ್ಲಿ ಅವರ ಖಾತೆ ಲೆಕ್ಕದಲ್ಲಿ ಊಟ ಹಾಕಲು ಏರ್ಪಾಟು ಮಾಡಿ ಊಟದ ಬಗ್ಗೆ ನೆಮ್ಮದಿಯನ್ನು ತಂದಿದ್ದರು.

ಸವರ್ಣಬಂಧುಗಳನ್ನು ಮನೆ ಒಳಗೆ ಬಿಟ್ಟರೆ ಹರಿಜನರಿಗೆ ಬಡತನ ಬಂದು ಬಿಡುತ್ತಂತೆ. ಈ ಹೆದರಿಕೆ ಅವರಿಗೆ, ''ಅಂತಹ ಪ್ರಸಂಗ ಯಾವುದಾದರು ಈ ಹಿಂದೆ ನಡೆದಿದೆಯೆ'' ಎಂದು ನಾನು ಕೇಳಿದೆ. ಅಹುದು ಒಂದೆರಡು ಮನೆಗಳವರು ಸವರ್ಣ ಹಿಂದು ದೊಡ್ಡ ಮನುಷ್ಯರನ್ನು ಒಳಕ್ಕೆ ಸೇರಿಸಿ ಹೇಳ ಹೆಸರಿಲ್ಲದಂತೆ ಬಡತನಕ್ಕೆ ಸಿಕ್ಕಿ ಊರು ಬಿಟ್ಟಿದ್ದಾರೆ ಎಂದರು. ಅಯ್ಯಾ ಇಲ್ಲೀ ನೋಡಿ ನಾವು ನೀವೆಲ್ಲ ಪಂಡಿತೋತ್ತ ಮರು ಅನ್ನೊ ಅವಿವೇಕಿಗಳ ಮಾತಿಗೆ ಮಾರು ಹೋಗಿ ನಮ್ಮ ನಿಮ್ಮ ತಲೆಮಾರವರು ಐದು ಸಾವಿರ ವರ್ಷಗಳಿಂದ ವಂಚಿತರಾಗಿ ಅಜ್ಞಾನ ಅಂಧಕಾರದಲ್ಲಿ ಸಿಲುಕಿ ತೊಳಲು ತಿದ್ದೇವೆ. ಮೊನ್ನೆ ನಾವೆಲ್ಲ ಬಿದರಳ್ಳಿ ಮುಂಡಿಗೆ ಹೋಗಿದ್ದೆವು. ನಮ್ಮ ಜೊತೆ ಇದ್ದ ಹರಿಜನ ವಿದ್ಯಾರ್ಥಿಯೊಬ್ಬನನ್ನು ಸವರ್ಣಹಿಂದುಗಳ ಮನೆಯಲ್ಲಿ ಅವರ ಮನಒಲಿಸಿ ನಮ್ಮ ಜೊತೆ ಊಟಕ್ಕೆ ಕುಳ್ಳಿರಿಸಿಕೊಂಡೆವು. ನಮಗೆ ಊಣ ಬಡಿಸಿದ ಎಲ್ಲ ತಿಂಡಿಗಳನ್ನು ಹರಿಜನ ವಿದ್ಯಾರ್ಥಿಗೆ ಬಡಿಸಿದರಾದರು ಮಜ್ಜಿಗೆ ಬಡಿಸಲು ಒಪ್ಪಲಿಲ್ಲ. ಆ ಊಟಕ್ಕೆ ಬಡಿಸಿದ ಅಜ್ಜಿ ಹೇಳಿದರು ನೀವು ಏನೇ ಮಾಡಿದರು ಹೊಲೆಯರಿಗೆ ಮಜ್ಜಿಗೆ ಬಿಡು ವುದಿಲ್ಲ. ಹಸು ರಕ್ತ ಕರೆದು ಬಿಡುತ್ತದೆ. ಅಜ್ಜಿ ಎಲ್ಲಾದರು ಉಂಟೆ ಎಂದು ಕೇಳಿದೆವು. ಎಲ್ಲೀಕೆ? ಈ ಊರಲ್ಲಿ ತಪ್ಪಿ ನಮ್ಮ ದಾಯಾದಿ ಮನೆ ಹೊಲೆಯನಿಗೆ ಮಜ್ಜಿಗೆ ಬಿಟ್ಟ ತಪ್ಪಿಗೆ ಹಸು ಬಕೆಟ್ ಗಟ್ಟಲೆ ರಕ್ತ ಕರೆಯಿತು. ರಂಗನಾಥಸ್ವಾಮಿಗೆ ಹರಕೆ ಹೊತ್ತು ಮಹದೇಶ್ವರನ ಬೆಟ್ಟಕ್ಕೆ ಹೋಗಿ ಹುಲಿವಾಹನ ಎತ್ತಿಸಿ ಸರಿಮಾಡಿ ಕೊಂಡೋ ಎಂದರು. ಇಲ್ಲಿ ನೋಡಿದರೆ ಮನೆ ಒಳಗೆ ಬರಬಾರದು ಅಂತೀರ ಇಂತಹ ಸಮಾಜ ವಿರೋಧಿ. ಅಜ್ಞಾನ ನಿಮ್ಮಂತಹ ವಿದ್ಯಾವಂತರಿಂದ ದೂರ

ವಾಗಿಲ್ಲ ಎಂದರೆ ನಾವು ಮಾಡುವುದೇನು? ಇಂತಹ ಅಜ್ಞಾನ ಬಿತ್ತಿದವರು—ಹಿಂದಿನಿಂದ ಬ್ರಾಹ್ಮಣರು, ಅವರ ಪಾಪ ಪರಿಹಾರಮಾಡಲೆಂದು ಬ್ರಾಹ್ಮಣರೇ ಬಂದಿದ್ದಾರೆ, ಎಂದು ತಿಳಿಸಿ ಕುವೆಂಪು ಅವರ ಜಲಗಾರ ನಾಟಕದ ಜಲಗಾರನು ಹೇಳುವ ಮಾತುಗಳನ್ನು ಎತ್ತಿ ಹಿಡಿದೆ.

ಅಯ್ಯೋ ಬಿಡಿ ಸ್ವಾಮಿ ಪುಸ್ತಕದ ಬದನೆ ಕಾಯಿ ತಿನ್ನೋಕಾಗುತ್ತ. ಹಂಗು ಮನೆ ಒಳಗೆ ಬಂದಿರಿ ಅನ್ನಿ, ನಿಮ್ಮನ್ನು ಹೊರಕ್ಕೆ ಕಳುಹಿಸುತ್ತಿದ್ದಂತೆ ನಿಮ್ಮ ಬೆನ್ನಿಗೆ ಹಸುವಿನ ಗಂಜಲ ಎರಚಿ ಪರಿಹಾರ ಮಾಡಿಕೊಳ್ಳುವ ಮಾರ್ಗ ಇದೆಯಂತೆ ಎಂದರು. ಆಯಿತು ಬನ್ನಿ ಅಪ್ಪ ಕುಳಿತುಕೊಳ್ಳಿ ಎಂದು ಅವರ ಮಕ್ಕಳು ಮರಿ ಸೇರಿಸಿ, ಮದ್ಯಪಾನ ಮಾಡಬಾರದು, ಇದರಿಂದ ಬಡತನ ಬರುವುದರ ಜೊತೆಗೆ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವುದೆಂದು ರಾಮಚಂದ್ರರಾಯರು ಹುಡುಗರಿಗೆ ಉಪದೇಶ ಆರಂಭಿಸಿದರು. ನೋಡಿ ನಮ್ಮ ತಾತ ತಂದೆಯರು ಮದ್ಯವನ್ನು ಮನೆಗೆ ತಂದು ನಮ್ಮ ಎದುರಿನಲ್ಲಿ ಸೇವಿಸುವುದು ಸರಿಯೇ ಅದನ್ನು ನೋಡಿದ ನಮಗೇನೆನ್ನಿಸಬೇಕು ಮುಂತಾಗಿ ಹುಡುಗರೂ ದೂರಿದರು.

ನೀವು ಮೊದಲು ಮದ್ಯಪಾನ ನಿಷೇಧಿಸಿ ಹಿಂದಿನಿಂದ ಮಕ್ಕಳಿಗೆ ಹೇಳಬೇಕು ಎಂದು ರಾಯರು ಹೇಳಿದರು. ಸ್ವಾಮಿ ನಮಗೇನು ವಯಸ್ಸಾಯ್ತು ಸಂಧ್ಯಾಕಾಲದಲ್ಲಿದ್ದೇವೆ. ಏನೋ ಹೇಗೋ ಕಾಲ ತಳ್ಳಿ ಹಾಕೋಣ, ನೀವಾದರು ಮದ್ಯಪಾನದಿಂದ ದೂರವಿರಿ ಎಂದರೆ ತಾವೂ ನಮಕುಳಿತು ಕುಡಿದರೆ ಮುಂದೆ ಇವರ ಜೀವನದ ಗತಿ ಏನು ? ಕುಳಿತುಣ್ಣೋನಿಗೆ ಕುಡಿಕೆ ಹಣ ಸಾಲದು ಅಂತ ಹೇಳಿ, ಮುಂದೆ ಇವರ ಪಾಡು ನಾಯಿ ಪಾಡಾದೀತು ಎಂದರು.

ತಾತ ತಂದೆ ತಾಯಿಯರು ಮಕ್ಕಳು ಎಲ್ಲರನ್ನು ಒಂದು ಮರದ ನೆರಳಿನಲ್ಲಿ ಸವರ್ಣ ಹಿಂದೂಗಳು ಸೇರಿದಂತೆ ಎಲ್ಲರ ಸಭೆಸೇರಿಸಿ ತಗಡೂರರು ತಮ್ಮದೇ ಆದ ಶೈಲಿಯಲ್ಲಿ ಮಾತನಾಡಿ ಇನ್ನು ಮುಂದೆ ಮದ್ಯಪಾನ ಮಾಡುವುದಿಲ್ಲ ಎಂದು ಆಣೆಯಿಡಬೇಕು. ಮುಂತಾಗಿ ತಿಳಿಸಿ ಎಲ್ಲರ ಮನ ಒಲಿಸಿ ಬರುವ ವಾರ ಸೋಮನಾಥಪುರ ದೇವಾಲಯಕ್ಕೆ ಎಲ್ಲರೂ ಹೋಗಿ ದೇವರ ಹೆಸರಿದಲ್ಲಿ ಮದ್ಯಪಾನ ನಿಷೇಧಿಸಲು ಭಾಷೆ ಇತ್ತು ಬರೋಣ ಎಂದರು. ಎಲ್ಲರೂ ಒಪ್ಪಿಗೆಯಿತ್ತರು.

ಮರದ ನೆರಳಿನ ಸಭೆಯಲ್ಲಿ ಸೇರಿದ್ದ ಸಭೆಯಲ್ಲಿ ತಗಡೂರು ರಾಮಚಂದ್ರ ರಾಯರನ್ನು ಸವರ್ಣ ಹಿಂದುಗಳು, ಏನು ಸ್ವಾಮಿ ನಿಮ್ಮನ್ನು ಬ್ರಾಹ್ಮಣರು ತಮ್ಮ ಜಾತಿಯಿಂದಲೇ ತೆಗೆದುಹಾಕಿದ್ದಾರಂತೆ. ಇಲ್ಲಿ ಹರಿಜನರು ಮನೆ ಸೇರಿಸರು, ಅಲ್ಲಿ ಬ್ರಾಹ್ಮಣರು ಮನೆ ಸೇರಿಸರು. ಈ ಮೂರು ನಾಲ್ಕು ಮಂಗನಂತಹ ನಮ್ಮ ಜಾತಿ ಹುಡುಗರನ್ನ ಕರೆತಂದು ತಲೆಕೆಡಿಸಿ ಹೊಲೆಯರ ಮನೆ ಊಟ ತಿನ್ನಿಸೋ ನೀತಿ ನಿಮಗೆ ಸರಿಯೇ ಮುಂತಾಗಿ ದೊಡ್ಡದಾದ ಅಪರಾಧ ಎನ್ನುವಂತೆ ವ್ಯಾಜ್ಯವನ್ನೇ

ಆರಂಭಿಸಿದರು.

ಎ. ರಾಮಣ್ಣನವರು ಕೊಸರಿದವರೇ ಮೇಲಿದ್ದು ಏರಿದ ಧ್ವನಿಯಲ್ಲಿ ಮಹ ನೀಯರೇ ರಾಯರ ಮೇಲೆ ವ್ಯಾಜ್ಯ ಮಾಡುವ ನೀವು ನಮ್ಮನ್ನು ತಿಂಡಿಗೆ ಕರೆಯು ಬೇಡಿರೆಂದು ಹೇಳಿದ್ದೇವೇನು ಈಗಲೂ ನಡೆಯಿರಿ ಊಟ ಹಾಕುವುದುಂಟೋ ನಾವು ಊಟ ಮಾಡುತ್ತೇವೆ. ಏನೋ ನಿಮ್ಮ ಹಳೆ ಕಾಲದ ವರ್ತನೆ ಬದಲು ಮಾಡಿ ಕೊಳ್ಳದೇ ಹೋದರೆ ನಿಮ್ಮ ಜೀವನ ಸುಗಮವಾಗಿ ಸಾಗದು ಎಂದರು.

ನಾನದ್ದು ಮಾತನಾಡಿ ಮಹಾನ್ ಕವಿ ಕುವೆಂಪು ಅವರು ನಮ್ಮ ನಿಮ್ಮವರೆ. ನೀವು ಹೊಲೆಯರು ಎನ್ನುವುದನ್ನು ಟೀಕಿಸಿ ಜಲಗಾರ ಎಂಬ ಕೃತಿಯಲ್ಲಿ ನಿಮ್ಮ ಹಿರಿಯರ ವಿಚಾರ ಪ್ರಸ್ತಾಪಿಸಿ ಹೇಗೆ ತಪ್ಪು ಎಂಬುದನ್ನು ಎತ್ತಿ ಹಿಡಿದಿದ್ದಾರೆ ಎಂದು ಕೆಳಗಿನ ಸಾಲುಗಳನ್ನು ಉದಾಹರಿಸಿದೆ.

ಮೊದಲನೆಯ ತರುಣ
ಪೂರ್ವಿಕರ ಮೂಢತನಕಾದಿಯೆಂಬುವುದೆಲ್ಲಿ ?
ಅಂತವೆಂಬುವುದೆಲ್ಲಿ ? ಹೇಳುವುದು ಒಂದು;
ಮಾಡುವುದು ಮತ್ತೊಂದು ! ಜಗದೊಡೆಯನೆಲ್ಲಿಯುಂ
ಇರುವನೆಂಬರು ಒಮ್ಮೆ ! ಗುಡಿಯಲಿರಸುವರೊಮ್ಮೆ !
ನಿರಾಕಾರನವನೆಂದು ಸಾರುವರು ಒಮ್ಮೆ ;
ಮೂರ್ತಿಗಳಮಾಡಿ ಆರಾಧಿಸುವರಿನ್ನೊಮ್ಮೆ
ಒಂದು ಸಲ ಸರ್ವರೊಳು ಅವನಿರುವನೆನ್ನುವರು :
'ಹೊಲೆಯ ನೀ ದೂರವಿರು' ಎಂದೆಂಬರಿನ್ನೊಮ್ಮೆ !
ನುಡಿಗೂ ನೆಗಳ್ತೆಗೂ ಸಂಬಂಧವೇ ಇಲ್ಲ !
ಇದೆ ನಮ್ಮ ಭಾರತಾಂಬೆಯ ದುರ್ಗತಿಗೆ ಕಾರಣ
ಬಡಜನರ ಕಣ್ಣೆತ್ತಿ ನೋಡದಿಹ, ಮರುಗದಿಹ
ಹಾಳು ಪೂಜೆಯದೇಕೆ ? ಹಸಿದ ಜನಗಳಿಗೆ
ಕೊಡರೊಂದು ಕಾಸ ; ತಣ್ಣಗಿಹ ಕಲ್ಲುಗಳ
ಮೇಲೆ ಎಣ್ಣೆಯನು ಬೆಣ್ಣೆಯನು ಸುರಿಯುವರು.
ಕರ್ಪೂರದಾರತಿಯ ಬೆಳಗುವರು ವಿಗ್ರಹದ
ಮುಂದ ತಲೆಬಾಗಿ. ಸತ್ತ ದೇವರ ಪೂಜೆ
ಮಾಡುವರು. ಜೀವದ ದರಿದ್ರನಾರಾಯಣರ
ಸೇವೆಯಲ್ಲವೆ ಪರಮ ಪೂಜೆ ?

ನಾನು ಉದಾಹರಿಸಿದ ಸಾಲುಗಳನ್ನು ತದೇಕಚಿತ್ತರಾಗಿ ಜನ ಕೇಳಿದರು. ಅರ್ಥ ವಾಯಿತೋ ಇಲ್ಲವೋ ನಮಗದು ಗೊತ್ತಾಗಲಿಲ್ಲ. ತಗಡೂರು ರಾಮಚಂದ್ರರಾಯರು

ಹೇಳಿದರು ಇಂದಿನ ಈ ಸಮಾವೇಶಕ್ಕೆ ಮಹಾಕವಿಗಳ ಈ ಕೃತಿ ತುಂಬ ಅರ್ಥ ಗರ್ಭಿತವೆಂದು. ಸಂಜೆ ದೇವನೂರು ಸೇರಿದೆವು.

1937ನೆಯ ಇಸವಿ ಪ್ರಸಂಗವೊಂದರಲ್ಲಿ ನಾನು ಮತ್ತು ಅರೆಕೆರೆ ಯು. ಕೆಂಚಪ್ಪ ನಂಜನಗೂಡಿನಲ್ಲಿ ಪೋಲೀಸರನ್ನು ಪರಿಪಾಟಲು ಬೀಳಿಸಿದ ಪ್ರಕರಣ ತಿಳಿಸಿದ್ದೇನೆ. ಇದಾಗುತ್ತಿದ್ದಂತೆ 1937ನೆಯ ಇಸವಿಯಲ್ಲಿ ಪ್ರಜಾ ಪಕ್ಷ ಮತ್ತು ಪ್ರಜಾಮಿತ್ರ ಪಕ್ಷ ಗಳು ಒಂದಾಗಿ ಪ್ರಜಾಸಂಯುಕ್ತ ಪಕ್ಷವಾಗಿ 1937ನೆಯ ಶಿವರಾತ್ರಿ ಅಂದು ಕಾಂಗ್ರೆಸ್ಸಿ ನಲ್ಲಿ ವಿಲೀನವಾಗಿ ರಾಜ್ಯದ ಗಣ್ಯರೆಲ್ಲರು ಒಂದುಗೂಡಿದಮೇಲೆ ಮೈಸೂರು ಕಾಂಗ್ರೆಸ್ ಪ್ರಬಲ ಸಂಸ್ಥೆಯಾಗಿ ಅಖಿಲ ಭಾರತ ಮಟ್ಟದಲ್ಲಿ ತಲೆಯೆತ್ತಿ ನಿಂತಿತು. ದಿವಂಗತ ಗೋಪಾಲಸ್ವಾಮಿ ಅಯ್ಯಂಗಾರ್ಯರ ಮನೆಯಲ್ಲಿ ಸೇರಿದ್ದ ಸಭೆ ಅವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ Constitution ಬರೆಯಲು ಸಮಿತಿ ನೇಮಿಸಿತು.

ಇದಾದ ಮೇಲೆ ಜನಜಾಗೃತಿ ಸಮಿತಿ ಹೆಸರು ತೆಗೆದುಹಾಕಿದರು. ಪೂರ್ಣಕಾಲದ ಕಾರ್ಯಕರ್ತರಾಗಿ ಟಿ. ಎಸ್. ಸುಬ್ಬಣ್ಣ, ರಾಜಶೇಖರ್, ಶಂಭು. ಕೆಂಚಪ್ಪ, ನಾನು ಎಲ್ಲರೂ ಕೈತುಂಬ ಕೆಲಸ ಸಿಕ್ಕಿತಲ್ಲ ಎಂದು ಹಿಗ್ಗಿದೆವು. ಕಾಕನಕೋಟೆ ಕಾಡಿಗೆ ಆನೆಗಳು ನುಗ್ಗುವಂತೆ ಘಟಾನುಘಟಿ ಮುಖಂಡರುಗಳಾದ ತಿಪಟೂರಿನ ಡಿ. ಎಸ್. ಮಲ್ಲಪ್ಪ, ಎಚ್. ಸಿ. ದಾಸಪ್ಪ, ಎಚ್. ಸಿದ್ಧಯ್ಯ, ಕೆ. ಎಂ. ಕೃಷ್ಣಪ್ಪಗೌಡ. ಟಿ. ಮರಿಯಪ್ಪ, ಎಸ್. ವಿಶ್ವೇಶ್ವರಗೌಡ, ಕೆ. ಚಿಕ್ಕಲಿಂಗಯ್ಯ, ಎಚ್. ಬಿ. ಗುಂಡಪ್ಪಗೌಡ, ಭೀಮಪ್ಪ ನಾಯಕ, ಭೂಪಾಳಂ ಚಂದ್ರಶೇಖರಯ್ಯ. ಟಿ. ಸುಬ್ರಮ್ಮಣ್ಯಂ, ಕೆ. ಚೆಂಗಲರಾಯರೆಡ್ಡಿ ಮುಂತಾದ ಮಹಾಮುಖಂಡರು ಮೈಸೂರು ಕಾಂಗ್ರೆಸ್ಸಿನಲ್ಲಿ ಸೇರಿ ಭೇರಿನಿನಾದ ಮೊಳಗಿಸಿದರು.

1937ನೆಯ ಇಸವಿ ಪ್ರತಿ ಸಾರಿಯಂತೆ ಮೈಸೂರು ಪ್ರಜಾಪ್ರತಿನಿಧಿ ಸಭೆ ಅಧಿವೇಶನ ದಸರಾ ಉತ್ಸವ ಕಾಲಕ್ಕೆ ಆರಂಭವಾಯಿತು. ಇದೇ ಕಾಲಕ್ಕೆ ಆಕ್ಷನ್ ಸಮಿತಿಯ ಕಾಂಗ್ರೆಸ್ ನಾಯಕರಾದ ತಗಡೂರು ರಾಮಚಂದ್ರರಾಯರು, ಟಿ. ಸಿದ್ಧಲಿಂಗಯ್ಯನವರು ಮತ್ತು ವೀರಕೇಸರಿ ಸೀತರಾಮಶಾಸ್ತ್ರಿಗಳು ಜೈಲಿನಲ್ಲಿ ಕಾರಾಗೃಹ ಶಿಕ್ಷೆ ಅನುಭವಿಸುತ್ತಿದ್ದರು. ಈ ಒಂದು ಪ್ರಕರಣದಿಂದಾಗಿ ಎಲ್ಲೆಲ್ಲು ಅತೃಪ್ತಿ ತಾಂಡವವಾಡುತ್ತಿತ್ತು.

ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ನಾಯಕರಾಗಿದ್ದ ಶ್ರೀ ಕೆ. ಟಿ. ಭಾಷ್ಯಂ ಅವರು ಮುಂಬಾಗದಲ್ಲಿ ಆಸೀನರಾಗಿದ್ದರು. ಪಕ್ಷದ ಕಾರ್ಯದರ್ಶಿ ಶ್ರೀ ಎಚ್. ಕೆ. ವೀರಣ್ಣಗೌಡರು ಭಾಷ್ಯಂ ಪಕ್ಕದಲ್ಲಿ ಕುಳಿತಿದ್ದರು. ದಿವಾನರಾದ ಸರ್ ಎಂ. ಮಿರ್ಜಾ ರವರ ಪಕ್ಕದಲ್ಲಿ ಬ್ರಿಟಿಷ್ ರೆಸಿಡೆಂಟರು ಇದ್ದರು. ದಿವಾನರು ಎದ್ದು ತಮ್ಮ ಭಾಷಣ ಓದಲು ಪ್ರಾರಂಭ ಮಾಡಿದ ಕೂಡಲೇ ಕಾರ್ಯದರ್ಶಿಯವರಾದ ಎಚ್. ಕೆ. ವೀರಣ್ಣ ಗೌಡರು ಎದ್ದು ನಿಂತು ದಿವಾನ್ ಸಾಹೇಬರೇ ತಮ್ಮ ದುರಾಡಳಿತ, ಸ್ವೇಚ್ಛಾ ವರ್ತನೆ

ಯನ್ನು ಪ್ರತಿಭಟಿಸಿ ಸಭೆ ಬಹಿಷ್ಕರಿಸಿ ಹೊರ ನಡೆಯುತ್ತೇವೆ ಎಂದು ತಿಳಿಸಿದರು. ಹಿಂದಿನ ಸಾಲಿನಲ್ಲಿದ್ದ ದೇವರಕೊಂಡಪ್ಪ, ಚಾಮರಾಜನಗರದ ಚಿಕ್ಕಲಿಂಗಯ್ಯನವರು ಈ ಇಬ್ಬರಿಗೂ ಮೀಸೆಗಳು ಗಡಸಾಗಿದ್ದು ಪತ್ತೊಮ್ಮೆ ನೋಡಬೇಕೆನ್ನುವ ಮುಖ ಚರ್ಯೆ. ಅವರು ಹಿಂದಿನಿಂದ ದಿವಾನರಿಗೆ ಧಿಕ್ಕಾರ ಕೂಗಿದರು.

ಹೊರಗೆ ಹೋಗಿದ್ದ ಕಾಂಗ್ರೆಸ್ ಸದಸ್ಯರು ಸಭೆಗೆ ಬರುವಾಗ ಟಿ. ಮಾದಯ್ಯ ಗೌಡರು, ಚಿಕ್ಕಲಿಂಗಯ್ಯನವರು ಮತ್ತು ದೇವರಕೊಂಡ ಅವರುಗಳು ಮಹಾತ್ಮ ಗಾಂಧೀಕಿ ಜೈ, ಜವಾಬ್ದಾರಿ ಸರ್ಕಾರ ರಚನೆಯಾಗಲಿ ಮುಂತಾದ ಜಯಕಾರಗಳನ್ನು ಕೂಗಿದರು.

ಇದೇ ಅಧಿವೇಶನವಲ್ಲಿ ಕೆ. ಟಿ. ಭಾಷ್ಯಂ ಅವರನ್ನು ನಡುರಾತ್ರಿ ಬಂಧಿಸಿ ಜೈಲಿಗೆ ಕರೆದೊಯ್ದ ಸುದ್ದಿ ನಗರದಲ್ಲಿ ಸಿಮಿಷಾರ್ಧದಲ್ಲಿ ಹರಡಿತು. ಈ ಬಗ್ಗೆ ಕಾರ್ಯಕ್ರಮ ಕೈಗೊಳ್ಳಲು ಇರ್ವಿನ್ ರಸ್ತೆಯಲ್ಲಿರುವ ಏಲಕ್ಕಪ್ಪ ಚಾರ್ ಛತ್ರವಲ್ಲಿ ಸಭೆ ಸೇರಲು ಮುಖಂಡರು ತೀರ್ಮಾನಿಸಿದರು. ಛತ್ರವನ್ನು ತಳಿರು ತೋರಣಗಳಿಂದ ಶೃಂಗಾರ ಮಾಡಲು ಎಂ. ಎಸ್. ಜೋಯಿಸರು ಯುವಕಾರ್ಯಕರ್ತರಾದ ನಮಗೆ ಆದೇಶ ವಿತ್ತರು. ಬೆಳಗಾಗ ಜನರು ಏಳುವುದರೊಳಗಾಗಿ ಯಾರ ಕಾಂಪೌಂಡೋ ಏನೋ ತೆಂಗಿನಗರಿ, ಬಾಳೆ ಕಂಬಗಳನ್ನು ಕಡಿದು ತಂದು ಸಿದ್ಧಮಾಡಿದೆವು.

ಚಂಗಲರಾಯರೆಡ್ಡಿಯವರನ್ನು ಕರೆತರಲು ನಾನು ಮತ್ತು ಹಾಲಿ ಮಾಡ್ರನ್ ವಾಚ್ ಕಂಪನಿ ಮಾಲೀಕರಾದ ಶ್ರೀ ಚಂದ್ರಶೇಖರ್ ಅವರು ಷಾಪಸಂಡ್‌ನಲ್ಲಿ ಕುಳಿತು ವೀರಣ್ಣಗೌಡರೊಡನೆ ಬಂಬೂಬಜಾರಿಗೆ ಹೋದೆವು, ಚಾಮುಂಡಯ್ಯನವರ ಮನೆ ಯಲ್ಲಿದ್ದ ಮೂರು ನಾಲ್ಕು ಜಮಖಾನಗಳನ್ನು ನಮಗೆ ಕೊಡಿಸಿ ಮುಂದೆ ಹೋಗು ವಂತೆ ತಿಳಿಸಿದರು. ಅಲ್ಲಿಯೇ ಇದ್ದ ಕೆ. ಚಂಗಲರಾಯರೆಡ್ಡಿ ಅವರನ್ನು ಕರೆತರಲು ವೀರಣ್ಣಗೌಡರು ಉಳಿದರು, ಕಾರ್ಯಕರ್ತರುಗಳಾದ ನಾವು ಸಭಾಂಗಣಕ್ಕೆ ಜಮಖಾನ ಗಳನ್ನು ಹಾಸಿ ಸಿದ್ಧಗೊಳಿಸಿದೆವು. 10 ಗಂಟೆ ಸುಮಾರಿಗೆ 400 ಜನಕ್ಕಿಂತ ಹೆಚ್ಚು ಮಂದಿ ಸಭೆಗೆ ಬಂದರು,

ವೀರಣ್ಣಗೌಡರು ಚಂಗಲರಾಯ ರೆಡ್ಡಿಯವರೊಡನೆ ಬಂದರು. ವಿಷಕಂಠರಾವ್ ಪ್ರಾರ್ಥನೆ ಮಾಡಿದರು. ಕಾರ್ಯಕಲಾಪಗಳು ಆರಂಭವಾದುವು. ಪ್ರಜಾಸಂಯುಕ್ತ ಪಕ್ಷವು ಕಾಂಗ್ರೆಸ್ಸಿನಲ್ಲಿ ವಿಲೀನವಾಗಲು ಸಭೆಯು ತೀರ್ಮಾನ ಕೈಗೊಂಡಿತು. ಮದ್ದೂ ರಿನ ಎಂ. ಸಿ. ಲಿಂಗೇಗೌಡರು ಮತ್ತು ಎಸ್. ಸಿ. ಮಲ್ಲಯ್ಯನವರು ಸಭೆಯ ತೀರ್ಮಾನ ವನ್ನು ವಿರೋಧಿಸಿ ಕಾಂಗ್ರೆಸ್ಸಿನಿಂದ ಹೊರಗುಳಿದರು.

ಈ ತೀರ್ಮಾನದ ನಂತರ ಕಾಂಗ್ರೆಸ್ ಪ್ರಚಾರ ಸಭೆ ನಡೆಸಲು ಸಭೆ ತೀರ್ಮಾನಿಸಿ ಈ ಕಾರ್ಯಕ್ಕೆ ವೀರಣ್ಣಗೌಡರು ಮತ್ತು ಪಾರ್ಥಸಾರಾಯಣ ಪಂಡಿತರನ್ನು ನೇಮಿ ಸಿತು. ನಂಜನಗೂಡಿನಲ್ಲಿ ಜನಜಾಗ್ರತಿ ಸಂಘದ ಯುವಕರಾದ ನಾವು ತಗಡೂರು

ರಾಮಚಂದ್ರರಾಯರು ಮತ್ತು ಎಂ. ಎಸ್. ಜೋಯಿಸರ ನೇತೃತ್ವದಲ್ಲಿ ಮೂರು ನಾಲ್ಕು ಸಭೆಗಳನ್ನು ನಡೆಸಿದ್ದೆವು. ಗಾಂಧೀಜೀ ಅವರ ವಿಚಾರಧಾರೆ ಬ್ರಿಟಿಷ್ ಪ್ರಭುತ್ವದ ದಬ್ಬಾಳಿಕೆಯ ವಿಚಾರಗಳನ್ನು ಜನರಿಗೆ ತಿಳಿಯ ಹೇಳಿದ್ದೆವು. ಅಲ್ಲಿ ಜನರು ಗಾಂಧಿ ಚಳವಳಿ ಬಗ್ಗೆ ಅಭಿಮಾನ ತೋರಿದ್ದರು.ಅಲ್ಲಿನ ಪ್ರತಿ ಸಭೆಯಲ್ಲಿಯೂ ಕುವೆಂಪು ಸಾಹಿತ್ಯ ಉದಾಹರಿಸಿ ಮಾತನಾಡಿದ್ದ ನಾನು ಸಹ ತಗಡೂರು ರಾಮಚಂದ್ರರಾಯರು ಮತ್ತು ಎಂ. ಎಸ್. ಜೋಯಿಸರಷ್ಟೆ ಜನರಲ್ಲಿ ಪರಿಚಿತನಾಗಿದ್ದೆ. ಅಲ್ಲಿಯ ಬಹು ಜನರು ನನ್ನನ್ನು ಅಭಿಮನ್ಯು ಎಂದು ಸಂಬೋಧಿಸುತ್ತಿದ್ದರು.

ನಂಜನಗೂಡಿನಲ್ಲಿ ನಾಲ್ಕಾರು ಸಭೆ ನಡೆದಿರುವುದರಿಂದ ಅಲ್ಲಿ ಜನರನ್ನು ಸಭೆ ಸೇರಿಸಲು ಸುಲಭ ಸಾಧ್ಯವೆಂದು ಸಭೆ ತೀರ್ಮಾನಿಸಿತು. ಇಂದಿನ ಸಭೆಯನ್ನು ಕಪಿಲಾ ನದಿ ತೀರದಲ್ಲಿರುವ ದೊಡ್ಡಛತ್ರದಲ್ಲಿ ಕರೆಯುವಂತೆ ವೀರಣ್ಣಗೌಡರು ಮತ್ತು ಪಾರ್ಥಸಾರಾಯಣ ಪಂಡಿತರು ಅಲ್ಲಿನ ಮುಖಂಡರಿಗೆ ತಿಳಿಸಿದರು. ಮುಂದೆ ಉದ್ದಾಮ ಲಾವಣಿಕಾರರಾಗಿ ತಮ್ಮ ಲಾವಣಿಗಳಿಂದ ಜನಚೇತನವನ್ನು ಬಡಿದೆಬ್ಬಿಸಿದ ವಿಷಕಂಠರಾವ್ ಅವರು ಅಂದು ಸಾಧಾರಣವಾದ ಲಾವಣಿಕಾರರಾಗಿದ್ದರು. ಮೂರು ನಾಲ್ಕು ಜನ ಕಾರ್ಯಕರ್ತರು ಅಂದರೆ ವಿಷಕಂಠರಾವ್ ತಮ್ಮ ಗೋಪಾಲರಾವ್, ಒಕ್ಕಲಗೇರಿ ಸುಬ್ಬಯ್ಯ ಮುಂತಾದವರು ನಂಜನಗೂಡಿನ ಸಭೆ ಸೇರಿಸಲು ಅಲ್ಲಿನ ಮುಖಂಡರ ಒತ್ತಾಸೆಗಿರಲು ತೆರಳಿದರು.

ಶ್ರೀ ವೀರಣ್ಣಗೌಡರು, ಪಾರ್ಥನಾರಾಯಣ ಪಂಡಿತರು ಮತ್ತು ಸೂರ್ಯ ನಾರಾಯಣ ಪಂಡಿತರು ಕಾರಿನಲ್ಲಿ ನಂಜನಗೂಡಿಗೆ ಹೊರಟರು. ನನ್ನನ್ನು ಮತ್ತು ಟಿ. ಎಸ್. ಸುಬ್ಬಣ್ಣನನ್ನು ತಮ್ಮ ಜೊತೆ ಕರೆದುಕೊಂಡು ಹೋದರು. ಟಿ. ಎಸ್. ಸುಬ್ಬಣ್ಣನು ತಗಡೂರಿನವನಾಗಿದ್ದು ತಗಡೂರರ ಖಾದಿ ಚಳವಳಿ ಮತ್ತು ಮತ್ತಿತರ ಹೋರಾಟಗಳಲ್ಲಿ ಭಾಗಿ ಆಗಿ ಆ ಸುತ್ತಿನ ಜನರಲ್ಲಿ ಪ್ರಭಾವಶಾಲಿ ಕಾರ್ಯಕರ್ತ ನಾಗಿದ್ದ, ಆದ್ದರಿಂದ ಆತನ ಸಹಕಾರ ಅಗತ್ಯವಾಗಿತ್ತು ಮುಖಂಡರಿಗೆ.

ನಂಜನಗೂಡಿಗೆ ಬಂದ ಮುಖಂಡರುಗಳು ಸೀದಾ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿದರು. ಅಂದಿನ ಕಾಂಗ್ರೆಸ್ ಪ್ರಚಾರ ಸಭೆಯನ್ನು ಕಪಿಲಾತೀರದ ಛತ್ರದಲ್ಲಿ ಸೇರಿಸಲಾಗಿತ್ತು.ಸಾಧಾರಣಸಂಖ್ಯೆಯ ಜನ ಸಭೆಗೆ ಬಂದಿದ್ದರು. ಛತ್ರದ ಪಕ್ಕದ ತೋಪಿ ನಲ್ಲಿ ಆನೆಗಳನ್ನುನೋಡುತ್ತ ದೇವಸ್ಥಾನಕ್ಕೆ ಬಂದಿದ್ದ ಜನರ ದೊಡ್ಡ ತಂಡವೇ ಇತ್ತು. ಈಗಿನಂತೆ ಧ್ವನಿವರ್ಧಕ ವ್ಯವಸ್ಥೆಯಿರಲಿಲ್ಲ. ಸೂರ್ಯನಾರಾಯಣಪಂಡಿತರ ಕಣ್ಣುಗಳು ಮಂಜಾಗಿದ್ದು ಬಹಳ ದೂರಕ್ಕೆ ಕಾಣುತ್ತಿರಲಿಲ್ಲ. ವೀರಣ್ಣಗೌಡರು ಪಂಡಿತರೇ ತಮ್ಮ ಭಾಷಣ ಆರಂಭಿಸಿ, ತುಂಬಾ ಜನರು ಸೇರಿದ್ದಾರೆ ಎಂದರು. ತುಂಬಿದ ಸಭೆಗೆ ಕೇಳು ವಂತೆ ಏರಿದ ಧ್ವನಿಯಲ್ಲಿ ಮಹನೀಯರೇ ಮತ್ತು ಮಹಿಳೆಯರೆ ಎಂಬ ಅಬ್ಬರದ ಮಾತುಗಳು ತೋಪಿನಲ್ಲಿದ್ದ ಜನರ ಕಿವಿಗೆ ಅಪ್ಪಳಿಸಿದವು. ಬಹಳ ಜನರು

ಇದೇಸು ? ಎಂದು ಬಂದು ಸಭೆಗೆ ಸೇರಿದರು. ಶ್ರೀಗಳಾದ ವಿಶ್ವೇಶ್ವರಗೌಡರು, ವೀರಣ್ಣಗೌಡರು, ಪಾರ್ಥನಾರಾಯಣ ಪಂಡಿತರು ಮಾತನಾಡಿ ಮಿರ್ಜಾ ಅವರ ದುರಾಡಳಿತವನ್ನು ಖಂಡಿಸಿ ಮಾತನಾಡಿದರು.

ನಂಜನಗೂಡಿನ ಸಭೆನಂತರ ಸೂರ್ಯನಾರಾಯಣ ಪಂಡಿತರು ರೈಲಿನಲ್ಲಿ ಮೈಸೂರಿಗೆ ವಾಪಸ್ಸಾಗಿದ್ದರು. ಚಿನ್ನದಗುಡಿ ಹುಂಡಿ ಗ್ರಾಮದಲ್ಲಿ ಜನರು ದನಕರುಗಳನ್ನು ನೇಪ್ರ್ಥ ಮಾಡಿ ಊಟಮಾಡಿ ರಾತ್ರಿ 7½ ಗಂಟೆಗೆ ಊರ ಮುಂದಲ ಮೈದಾನದಲ್ಲಿ ಸಭೆ ಸೇರಿದರು. ಸಭೆ ರಾತ್ರಿ ಒಂಭತ್ತುಘಂಟೆಗೆ ಮುಗಿಯಿತು. ರಾತ್ರಿ ಬದನವಾಳು ಖಾದಿ ಕೇಂದ್ರದ ಅತಿಥಿ ಗೃಹದಲ್ಲಿ ಬಿಡಾರ ಮಾಡಿದೆವು. ಆ ಕೇಂದ್ರದ ವ್ಯವಸ್ಥಾಪಕರಾದ ಶ್ರೀ ರಾಜಾ ರಾಮಯ್ಯಂಗಾರ್ ಅವರು ಊಟೋಪಚಾರಗಳ ವ್ಯವಸ್ಥೆ ಮಾಡಿದ್ದರು. ಮಹಾತ್ಮ ಗಾಂಧೀ ಅವರು ಖಾದಿ ಕೇಂದ್ರಕ್ಕೆ ಭೇಟಿಯಿತ್ತು ಅಲ್ಲೊಂದು ದಿನ ವಾಸ್ತವ್ಯ ಮಾಡಿದ್ದು ಆ ಸುತ್ತಿನ ಜನರಲ್ಲಿ ಗಾಂಧೀಜಿ ಬಗ್ಗೆ ಅಭಿಮಾನವಿದ್ದು ಗಾಂಧೀಜಿ ಅವರ ಖಾದಿ ಮತ್ತು ಗ್ರಾಮೋದ್ಯೋಗಗಳು ಜನಮನದಲ್ಲಿ ಗಾಢವಾದ ನಂಬಿಕೆ ತಂದಿದ್ದುವು.

ಪ್ರಾತಃಕಾಲ ಎದ್ದು ತಿಂಡಿ ತೀರ್ಥಾನಂತರ ಚಾಮರಾಜನಗರ ಸುತ್ತಿನಲ್ಲಿ ಪ್ರವಾಸ ಮಾಡಲು ಚಿಕ್ಕಲಿಂಗಯ್ಯನವರು ವೀರಣ್ಣಗೌಡರನ್ನು ಆಹ್ವಾನಿಸಿದರು. ಈಗ ಸಾಧ್ಯವಾಗದು ನಾವು ನಂಜನಗೂಡಿಗೆ ಬಂದುದು ನಂಜುಂಡೇಶ್ವರನ ಕೃಪಾದೃಷ್ಟಿ ಕಾಂಗ್ರೆಸ್‌ಗಿರಲಿ ಎಂದು ಪ್ರಾರ್ಥನೆಸಲ್ಲಿಸಲು. ಹಾಗೇ ತಮ್ಮ ಆಹ್ವಾನ ಗೌರವಿಸಿ ಎರಡು ಮೂರು ಸಭೆಗಳಿಗೆ ಬಂದೆವು ಎಂದರು. "ಏನ್ರಿ ನೀವು ಹೇಳುವುದು ಗೌಡ ಮಾಡದ್ದು ಗೌಡನ ಕಂಬಳಿ ಮಾಡೀತೆ" ಎನ್ನುವಂತೆ ನೀವು ನಾವು ಮಾಡದ್ದು ನಂಜುಂಡೇಶ್ವರ ಏನ್ರಿ ಮಾಡಬಲ್ಲ ಮುಂತಾಗಿ ಕೂಗಾಟ ಹಾಕಿದರು. ಏನಾದರು ಈ ಪ್ರವಾಸವನ್ನು ಮೊಟಕು ಮಾಡಿ ವ್ಯವಸ್ಥಿತವಾಗಿ ಪ್ರಚಾರ ಸಭೆಗಳನ್ನು ಏರ್ಪಡಿಸಿ ಜನರ ಗಮನವನ್ನು ಕಾಂಗ್ರೆಸ್ ಬೆಂಬಲಕ್ಕೆ ದೊರಕಿಸಿಕೊಳ್ಳೋಣ ಎಂದು ಹೇಳಿ ಮೈಸೂರಿಗೆ ವಾಪಸ್ಸು ಹೋಗಲು ಎಲ್ಲರು ಹತ್ತಿ ಕಾರಿನಲ್ಲಿ ಕುಳಿತರೆ ಜಪ್ಪಯ್ಯ ಎಂದರು ಕಾರು ನಿಂತ ಸ್ಥಳದಿಂದ ಕದಲಲಿಲ್ಲ. ಟಿ. ಎಸ್. ಸುಬ್ಬಣ್ಣ ಕಾರಿಂದ ಇಳಿದು ಇಳಿಯಪ್ಪ ಜವರಾಯ ತಳ್ಳೋಣ ಎಂದ. ಕೇಂದ್ರದ ನಾಲ್ಕಾರು ಜನರು ಸೇರಿ ಸಾಧಾರಣ ½ ಮೈಲು ಕಾರು ತಳ್ಳಿದ ಮೇಲೆ ಅದು ತಾನಾಗಿ ಓಡಲು ಆರಂಭವಾಯಿತು. ನಾವು ಕಾರು ತಳ್ಳುತ್ತಿದ್ದರೆ ಒಳಗಡೆ ಡ್ರೈವರನ ಮೇಲೆ ವೀರಣ್ಣಗೌಡರು ರೇಗಾಡುತ್ತಿದರು. ಸುಬ್ಬಣ್ಣ ಮತ್ತು ನಾನು ಕಾರಿಗೆ ಹತ್ತಿ ಕುಳಿತೆವು. ಯಾಕೆ ಸಾರ್ ಡ್ರೈವರ್‌ನ ದಬಾಯಿಸ್ತೀರ ಹಳೇಕಾರುಗಳೇ ಹಾಗೆ ಎಂದ ಸುಬ್ಬಣ್ಣ. ಕಾರಿನ ಮೇಲಿನ ಕೋಪವನ್ನು ವೀರಣ್ಣಗೌಡರು ಸುಬ್ಬಣ್ಣನ ಮೇಲೆ ತೀರಿಸಿಕೊಂಡು, ಇಳಿಯೋ ಕೆಳಗೆ ತಲೆಹರಟೆಗಳ ನಿಮ್ಮಲ್ಲಿ ಶಿಸ್ತಿಲ್ಲ ವಿನಯವಿಲ್ಲ ಎಂದು ಕಾರು ನಿಲ್ಲಿಸಿ ಇಳಿಸಿಯೇ ಬಿಟ್ಟರು. ನಾವು

ಕಾರಿಳಿದು ½ ಮೈಲಿ ದೂರವಿದ್ದ ನಂಜನಗೂಡು ತಲುಪಿ ವಿಶ್ವೇಶ್ವರಗೌಡರ ಮನೆಗೆ ಹೋದೆವು. ನಮ್ಮನ್ನು ನೋಡಿದ ಗೌಡರು ಅವರೆಲ್ಲಿ ಹೋದರು ಎಂದರು. ನೀವೇಕೆ ಬೇರೆ ಬಂದಿರಿ ಮುಂತಾಗಿ ಪ್ರಶ್ನಿಸಿದರು. ಸರಿ ಆಯ್ತು ಊಟ ಮಾಡಿ ರೈಲಿಗೆ ಹೋದ ರಾಯ್ತು. ನಾನೂ ಬರುತ್ತೇನೆ ಎಂದರು. ಗೌಡರು ಶಾಂತಚಿತ್ತ ಸ್ವಭಾವದವರು. ಸುಬ್ಬಣ್ಣನಿಗಂತು ವೀರಣ್ಣಗೌಡರು ಎಂದರೆ ಸಾಕು ರೇಗಿಹೋಗುತ್ತಿದ್ದ.

ನಾವು ನಂಜನಗೂಡಿನಲ್ಲಿ ವಿಶ್ವೇಶ್ವರಗೌಡರ ಮನೆಯಲ್ಲಿ ಊಟ ಮಾಡಿ ಗೌಡರ ಜೊತೆ ರೈಲಿನಲ್ಲಿ ಮೈಸೂರಿಗೆ ಬಂದೆವು. ರೈಲ್ವೆ ಚಾರ್ಜನ್ನು ಗೌಡರೇ ಕೊಟ್ಟರು. ನಾವು ಕೃಷ್ಣಮೂರ್ತಿಪುರಂನಲ್ಲಿ ರೈಲು ಇಳಿದು ಎಂ. ಎಸ್. ಜೋಯಿಸರ ಮನೆಗೆ ಹೋದೆವು. ಶಿರಸಿ ಸಿದ್ದಾಪುರಗಳಲ್ಲಿ ನಡೆದ ಕರನಿರಾಕರಣ ಹೋರಾಟದಲ್ಲಿ ಕಾರಾಗೃಹವಾಸ ಅನುಭವಿಸಿ ಅಂಕೋಲ ಜೈಲಿನಿಂದ ಬಿಡುಗಡೆ ಹೊಂದಿ ಬಂದಿದ್ದ ಸುಬ್ಬರಾವ್ ಉಪಾಧ್ಯಾಯ ಅವರನ್ನು ರೈಲ್ವೆ ನಿಲ್ದಾಣದಲ್ಲಿ ಸ್ವಾಗತಿಸಿ ಮೆರವಣಿಗೆಯಲ್ಲಿ ಕರೆತರಲು ಕಾರ್ಯಕರ್ತರು ಸೇರಿದ್ದರು. ಸುಮಾರು 50 ಮಂದಿ ಕಾರ್ಯಕರ್ತರು ಎಂ. ಎಸ್. ಜೋಯಿಸರ ನೇತೃತ್ವದಲ್ಲಿ ರೈಲ್ವೆ ಸ್ಟೇಷನ್‌ಗೆ ಹೋಗಿ ರೈಲಿನಿಂದ ಇಳಿದು ಬಂದ ಉಪಾಧ್ಯಾಯರನ್ನು ಸ್ವಾಗತಿಸಿ ಖಾದಿನೂಲಿನ ಹಾರಗಳನ್ನು ಹಾಕಿ "ಮಹಾತ್ಮ ಗಾಂಧೀ ಕೀ ಜೈ" "ಸುಬ್ಬರಾವ್ ಉಪಾಧ್ಯಾಯಕೀ ಜೈ" ಮುಂತಾದ ಜಯ ಘೋಷಗಳೊಡನೆ ಎಂ. ಎಸ್. ಜೋಯಿಸರ ಮನೆಗೆ ಕರೆತಂದೆವು. ಎಸ್. ರಂಗರಾಮಯ್ಯನವರು, ಬಿ. ನಾರಾಯಣಸ್ವಾಮಿಯವರು, ಅನಂತಾಚಾರ್ ಅವರು, ಟಿ. ಎಸ್. ರಾಜಗೋಪಾಲ್ ಐಯ್ಯಂಗಾರ್, ಕಲಾಮಂದಿರದ ಸೂರ್ಯನಾರಾಯಣ ಮುಂತಾದ ಹಿರಿಯರು ಮೆರವಣಿಗೆ ದಾರಿಯಲ್ಲಿ ಸೇರಿಕೊಂಡರು.

ಮೆರವಣಿಗೆ ನಂತರ ಸುಬ್ಬರಾವ್ ಉಪಾಧ್ಯಾಯರು ಮಾತನಾಡಿ ಕರನಿರಾಕರಣ ಚಳವಳಿಯಲ್ಲಿ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ ಹೆಂಗಸರು, ಗಂಡಸರುಗಳಿಗೆ ಪೋಲೀಸರು ನೀಡಿದ ದೌರ್ಜನ್ಯ. ತಾಯಂದಿರಿಂದ ಸಣ್ಣ ಮಕ್ಕಳನ್ನು ಅಗಲಿಸಿದುದು ಆ ಮಕ್ಕಳನ್ನು ಶ್ರೀಮತಿ ಸುಬ್ಬಮ್ಮ ಜೋಯಿಸ್ ಅವರ ನೇತೃತ್ವದಲ್ಲಿ ನಡೆಯುತ್ತಿರುವ ಮಕ್ಕಳ ಪೋಷಣಾಗೃಹ ವ್ಯವಸ್ಥೆ ಹಾಗೂ ಹಿಂದಿನ ರಾತ್ರಿ ಪೋಷಣಾಗೃಹದಲ್ಲಿ ತಂಗಿದ್ದ ವಿಚಾರಗಳನ್ನು ವಿವರಿಸಿ ಅವರಿಗೆ ಹೆಚ್ಚಿನ ಧನ ದವಸ ಸಹಾಯ ಅಗತ್ಯ ಎಂದು ತಿಳಿಸಿದರು.

ಇದಾದ ಪ್ರಾತಃಕಾಲ ಜೋಯಿಸರ ಮನೆ ಬಳಿಗೆ ವೀರಣ್ಣಗೌಡರು, ಪಾರ್ಥನಾರಾಯಣ ಪಂಡಿತರು ಮತ್ತು ಶ್ರೀಮತಿ ತಾಯಮ್ಮ ವೀರಣ್ಣಗೌಡರು ಬಂದರು. ಅವರ ಜೊತೆಗೆ ಕಾರ್ಯಕರ್ತರು ಬೇಕಿದ್ದು ನಾಗಮಂಗಲದ ಜವರಪ್ಪಗೌಡನನ್ನಿ ಕಳುಹಿಸಿ ಕೊಡಿ ಎಂದರು. ಕಾರನ್ನು ತಳ್ಳಿ ಭುಜದ ನೋವು ಅನುಭವಿಸಿದ ನಾನು ಬರುವುದಿಲ್ಲ ಎಂದೆ, ವೀರಣ್ಣಗೌಡರನ್ನು ಕಂಡರೆ ಉರಿದು ಬೀಳುತ್ತಿದ್ದ ಸುಬ್ಬಣ್ಣ

ನಂತು ಹೋಗ್ರಿ ನಿಮ್ಮ ಜೊತೆ ನಾವ್ಯಾರು ಬರುವುದಿಲ್ಲ ಎಂದ.

ಅಂಕೋಲ ಜೈಲಿನಿಂದ ಬಂದಿದ್ದ ಸುಬ್ರರಾವ್ ಉಪಾಧ್ಯಾಯರು ಅಂಗಿ ಕಳೆದು ನಿಂತರೆ ಆತನ ಬೋಡುತಲೆ, ಕಂಗಳಿಗೆ ಕನ್ನಡಕ, ಅಡ್ಡಲಾಗಿ ಹಾಕಿಕೊಂಡಿದ್ದ ಚೀಲ ಈ ವೇಶ ನೋಡಿದ ವೀರಣ್ಣಗೌಡರು ಇದ್ಯಾರಯ್ಯ ಮರಿಗಾಂಧಿ ಎಂದು ಕೇಳಿ ಆತನನ್ನು ಅವರ, ಜೊತೆ ಪ್ರವಾಸಕ್ಕೆ ಕರೆದುಕೊಂಡು ಹೋದರು.

ನಾವುಗಳು ಒಂದಾಗಿ ಮಕ್ಕಳ ರಕ್ಷಣಾಗೃಹಕ್ಕೆ ಸವಲತ್ತು ಒದಗಿಸಲು ಶಂಕು, ಜಾಗಟೆಗಳೊಡನೆ ಸಂತೆಪೇಟೆಗೆ ಹೋಗಿ ಗೋಲಕವಡಬ್ಬಿಯನ್ನು ಪ್ರತಿ ಮಂಡಿಯ ಮಾಲೀಕರಿಗೆ ತೋರಿದರಾಯ್ತು. ಅವರು ಬೇಜಾರು ಮಾಡಿಕೊಳ್ಳದೆ ಕೈಲಾದ ಸಹಾಯ ನೀಡುತ್ತಿದ್ದರು.

ಚಾಮರಾಜನಗರ ಪ್ರವಾಸ ಮಾಡಲು ವೀರಣ್ಣಗೌಡರು ನಿರಾಕರಿಸಿದ ಸಿಟ್ಟು, ಚಿಕ್ಕಲಿಂಗಯ್ಯನವರ ತಲೆಯಲ್ಲಿ ಬಿಸಿಯಾಗೇ ಇತ್ತು. ಯುವಕರಾದ ನೀವೇ ಬನ್ನಿ ಕುದೇರು ಮುಂತಾದ ಸ್ಥಳಗಳಲ್ಲಿ ಸಭೆ ಏರ್ಪಡಿಸುತ್ತೇನೆ ಎಂದು ತಿಳಿಸಿದರು. ನಾನು, ಗೋಪಾಲರಾವ್, ಸುಬ್ಬಣ್ಣ ಮತ್ತು ರಾಜಶೇಖರ ಜೊತೆಗೂಡಿ ಜೊತೆಗೆ ಹಿರಿಯ ಮುಖಂಡರಿರಲಿ ಎಂದು ಸೂರ್ಯನಾರಾಯಣ ಪಂಡಿತರನ್ನು ಕರೆದುಕೊಂಡು ಹೊರ ಟೆವು ರೈಲಿನಲ್ಲಿ. ಚಾಮರಾಜನಗರದಿಂದ ಎತ್ತಿನ ಬಂಡಿ ಪ್ರವಾಸವಲ್ಲಿ 3 ಕಡೆ ಬಹಿರಂಗ ಸಭೆಗಳನ್ನು ನಡೆಸಿದೆವಾದರು ಆ ಸುತ್ತಿನ ಜನರ ಮೇಲೆ ಚಿಕ್ಕಲಿಂಗಯ್ಯನವರ ಪ್ರಭಾವ ಅಷ್ಟಾಗಿ ಇದ್ದಂತೆ ತೋರಲಿಲ್ಲ.

ಕುದೇರು ಸಂತೆಯ ಸಭೆಯಲ್ಲಿ ಚಿಕ್ಕಲಿಂಗಯ್ಯನವರು ಮಾತನಾಡುತಿದ್ದರು. ಕಬ್ಬಳ್ಳಿಯ ಶ್ರೀಮಂತರಾದ ಸುಬ್ಬಣ್ಣನವರು ಆ ಸಂತೆ ಮೈದಾನಕ್ಕೆ ಬಂದರು. ಸಭೆ ಯಲ್ಲಿದ್ದ ಜನರು ಅವರನ್ನು ನೋಡಿದರು. ಒಬ್ಬೊಬ್ಬರಾಗಿ ಹೊರಡುತ್ತ ಸುಬ್ಬಣ್ಣ ನವರು ನಿಂತೇ ಇದ್ದಂತೆ ಸಭೆ ಕರಗುತ್ತ ಬರಖಾಸ್ತೆ ಆಯಿತು. ಕಬ್ಬಳ್ಳಿ ಶ್ರೀಮಂತ ರನ್ನು ಕಂಡರೆ ಆ ಜನಕ್ಕೆ ಭಯವೋ ಅಥವ ಪ್ರೀತಿಯೋ ಅವರ ಮನದಾಳದಲ್ಲಿ ಏನಿತ್ತು ಎಂಬುದನ್ನು ಚಿಕ್ಕವರಾದ ನಾವು ಅಳೆಯಲಾಗಲಿಲ್ಲ. ಚಿಕ್ಕದೋ ದೊಡ್ಡದೋ ಎರಡು ಮೂರು ಸಭೆಗಳನ್ನು ನಡೆಸಿ ರಾತ್ರಿ ಹೊತ್ತಾದ ಮೇಲೆ ರೈಲಿನಲ್ಲಿ ಮೈಸೂರು ತಲುಪಿದೆವು.

"ಏನೇ ಸಿಂಗಿ ಓಡಾಟ ಎಂದರೆ ಶ್ಯಾನುಭೋಗರ ಮನೆ ಬೀಗರ ಊಟ" ಎಂಬಂತೆ ಚಿಕ್ಕವರಾದ ನಮ್ಮ ಓಡಾಟದಿಂದ ಸರ್ಕಾರಕ್ಕೆ ತೊಂದರೆಯಾಗಲಿ, ಕಾಂಗ್ರೆಸ್‌ಗೆ ಉಪಯೋಗವಾಗಲಿ ಇದ್ದಂತಿಲ್ಲವೆಂದು ಜೋಯಿಸರ ಮನೆ ಕೂಳು ನಷ್ಟ ಎನಿಸುತ್ತಿತ್ತು. ಕಾರಣ ತಗಡೂರು ರಾಮಚಂದ್ರರಾಯರು ಜೈಲು ಸೇರಿದ ಮೇಲೆ ಪಾದ್ರಿ ಸಾಡೆ ಅವರ ಸಂತೆಪ್ರಚಾರ ಹೆಚ್ಚಾಗಿತ್ತು. ಲೋ ಏಕ್ರೋ ಬೇಜಾರಾಗಿದ್ದೀರ ನಾಳೆ ಹೊತ್ತಿಗೆ ಮುಂಚೆ ಎದ್ದು ಸಂತೆಮರಳ್ಳಿ ಕ್ಯಾಂಪ್ ಹಾಕಿಬಿಡಿ. ಸಾಡೆ ಅವರ ಪ್ರಚಾರಕ್ಕೆ ಅಡ್ಡಿ

ತಂದೊಡ್ಡಿ ಎಂದು ಜೋಯಿಸರ ಉಪದೇಶವಾಯ್ತು. ಬಸ್ಸಿನಲ್ಲಿ ಸಂತೆಗೆ ಹೋದೆವು ಸಾಡೆ ಸಾಹೇಬರು ಮೊದಲಿನಂತೆ ತನ್ನನ್ನು ಸಪೋರ್ಟ್ ಮಾಡುವವರೊಡನೆ ಬಂದಿದ್ದರು. ಬಡವರಾದವರಿಗೆ ಹಣದ ಆಶೆ ಮತ್ತು ಸಹಾಯವಿತ್ತು ಮತಾಂತರ ಮಾಡಿದ ಜನರು ಈ ಸಂತೆಯಲ್ಲಿ ಸಾಡೆ ಸಾಹೇಬರೊಡನಿದ್ದರು. ನಾನೇ ಮೊದಲನೆಯ ಭಾಷಣಕಾರನಾಗಿ ಕ್ರಿಸ್ತನನ್ನು ಪರಿಹಾಸ್ಯಮಾಡಿ ಮಾತನಾಡಿದೆ. ಮತಾಂತರ ಹೊಂದಿದ್ದ ಜನರು ನಮ್ಮ ಮೇಲೆ ಏರಿ ಬಂದರು. ಸಭೆಯಲ್ಲಿದ್ದ ಜನರಿಗೂ ಮತಾಂತರ ಹೊಂದಿದ್ದ ಜನರಿಗೂ ದೊಡ್ಡ ಹೊಡೆದಾಟ ಆರಂಭವಾಯ್ತು. ಸಾಡೆ ಸಾಹೇಬರು ತಾವಾಗೇ ಗಂಟು ಮೂಟೆಯೊಡನೆ ಸಂತೆ ಬಿಟ್ಟು ನಡೆದರು.

1938ನೆಯ ದಸರಾ ಮಹೋತ್ಸವದಂದು ಸಂಜೆ ನಂತರ ಶಿವನಸಮುದ್ರದಿಂದ ಬರುವ ವಿದ್ಯುತ್ ಪ್ರವಾಹ ನಿಲ್ಲಿಸಿ ಶ್ರೀಮನ್ ಮಹಾರಾಜರ ಮೆರವಣಿಗೆಗೆ ತೊಂದರೆ ಮಾಡಲು ದಿವಂಗತ ಎಂ. ವಿ. ಕೃಷ್ಣಪ್ಪ, ಕೆ. ಪುಟ್ಟಸ್ವಾಮಿ ಅವರು, ಲಾವಣಿ ವಿಷಕಂಠ ರಾವ್ ಮುಂತಾದವರು "ಜನ ಜಾಗೃತಿ ಸಂಘದ ಸದಸ್ಯರಾದ ನಮ್ಮನ್ನು ಪುಸಲಾಯಿಸಿ ವಿದ್ಯುತ್ ಪ್ರವಾಹವನ್ನು ನಮಗೆ ತೊಂದರೆಯಾಗದ ರೀತಿ ತಡೆಗಟ್ಟಬಹುದೆಂದು ತಿಳಿಸಿ ನಾನು, ಟಿ. ಎಸ್. ಸುಬ್ಬಣ್ಣ, ರಾಜಶೇಖರ್, ರಾಜಂಶೆಟ್ಟರು, ಗಂಜಾಮಿನಿಂದ ಬಂದಿದ್ದ ಜನಾರ್ದನನಾಯ್ಡು ಅವರ ತಮ್ಮ. ಎ. ರಾಮಣ್ಣನವರು ಬಂದಿದ್ದರೋ ಏನೋ? ನಮ್ಮನ್ನು ಸೇರಿಸಿಕೊಂಡು ಕಣ್ಣು ಬೆಳಕು ಇದ್ದ ಹಾಗೆ ಹೊಟಗಳ್ಳಿಗೆ ಕರೆದು ಕೊಂಡು ಹೋದರು ಎಂ. ವಿ. ಕೃಷ್ಣಪ್ಪನವರ ಮುಖಂಡತ್ವದಲ್ಲಿ.

ಅಲ್ಲಿ ಹೋಗಿ ನೋಡುತ್ತೇವೆ ರಾಶಿಗಟ್ಟಲೆ ಉಗನಿ ಹಂಬಿನ ರಾಶಿ ಬಿದ್ದಿದೆ. ಹಂಬುಗಳು ಸೇದುವ ಬಾವಿ ಹಗ್ಗದಷ್ಟು ದಪ್ಪನಾಗಿದ್ದವು. ಸ್ವಲ್ಪ ಮಬ್ಬು ಆರಂಭ ವಾಗುತ್ತಿದ್ದಂತೆ ವಿದ್ಯುತ್ ತಂತಿಗಳ ಮೇಲೆ ಉಗನಿ ಹಂಬುಗಳನ್ನು ಎಸೆಯುತ್ತ ಬಂದೆವು. ಸುಮಾರು 7 ಗಂಟೆ ಸಮಯಕ್ಕೆ ವಿದ್ಯುತ್ ತಂತಿಗಳು ಜಗ್ಗಿ ದೀಪಗಳು ಆರಿ ಹೋದವು. ನಮಗೆಲ್ಲ ಗಾಬರಿ. ಯಾವಾಗ ಯಾರು ಬರುತ್ತಾರೋ ಎಂಬ ಹೆದರಿಕೆ ಬೇರೆ. ನನ್ನ ಮಟ್ಟಿಗೆ ಶ್ರೀಮನ್ ಮಹಾರಾಜರ ಮೆರವಣಿಗೆಗೆ ತೊಂದರೆ ಮಾಡಿದರೆ ನಮಗೂ ಏನಾದರೊಂದು ತೊಂದರೆ ಆದೀತು ಎಂಬ ಭಯದಿಂದ ನನ್ನ ಎದೆ ಬಡಿದು ಕೊಳ್ಳುತ್ತಿದೆ. ನನ್ನಲ್ಲಿ ಉಂಟಾದ ಆತಂಕಕ್ಕೆ ಸರಿಯಾಗಿ ಸಾಧಾರಣ ದಪ್ಪವಾಗಿದ್ದ ಹಾವು ಟಿ. ಎಸ್. ಸುಬ್ಬಣ್ಣನ ಕಾಲು ಕಚ್ಚಿ ಉಗನಿಹಂಬಿನ ರಾಶಿಯಲ್ಲಿ ಮಾಯ ವಾಯಿತು. ಅಳಲಾರಂಭಿಸಿದೆವು.

ಸುಬ್ಬಣ್ಣನು ಏನೂ ಆಗದು ಒಂಟಿಕೊಪ್ಪಲ ಶ್ರೀರಾಮಕೃಷ್ಣ ಆಶ್ರಮಕ್ಕೆ ಕರೆದುಕೊಂಡು ನಡೆಯಿರಿ ಎಂದು ಧೈರ್ಯತುಂಬಿದ. ಇಷ್ಟರಲ್ಲಾಗಲೆ ಎಂ. ವಿ. ಕೃಷ್ಣಪ್ಪನವರು ಎತ್ತಲೋ ಏನೋ ಹಾವಿನ ಜೊತೆ ಮಾಯವಾಗಿದ್ದರು ಆದರೂ ಧೈರ್ಯಗೆಡದೆ ಸ್ವಲ್ಪ ದೂರ ನಡೆದ ಸುಬ್ಬಣ್ಣನನ್ನು ಅನಾಮತ್ ಎತ್ತಿ



ಕೊಂಡು ವೇಗವಾಗಿ ಶ್ರೀರಾಮಕೃಷ್ಣಾಶ್ರಮ ಸೇರಿದೆವು. ಹೊಟಗಳ್ಳಿ ವಿದ್ಯುತ್ ಲೈನ್ ಚಕಪ್‌ಮಾಡಲು ವಿದ್ಯುತ್ ಇಲಾಖೆಯುವರು ಬರುತ್ತಿದ್ದು ಸ್ಯಾನಿಟೋರಿಯಂ ಹಳ್ಳದಲ್ಲಿ ಎದುರಾದರು. ಯಾರು ನೀವು ಎಲ್ಲಿಂದ ಬರುತ್ತೀರೆಂದು ವಿಚಾರಿಸಿದರು. ದಸರಾ ಮೆರವಣಿಗೆ ನೋಡಲು ಹೋಗುತ್ತಿರುವುದಾಗಿ ಸುಳ್ಳು ಹೇಳಿ ಮುಂದೆ ಹೋದೆವು.

ಶ್ರೀರಾಮಕೃಷ್ಣಾಶ್ರಮ ಸೇರಿದೆವು. ಸ್ವಾಮಿಗಳು ಚಿಕಿತ್ಸೆ ಆರಂಭಿಸಿದರು. ನಮಗೆ ಎದುರು ಸಿಕ್ಕಿದ್ದ ಜನ ಆಶ್ರಮಕ್ಕೆ ಬಂದು ಇವರ್‍ಯಾರು ಸ್ವಾಮಿಗಳೆ ಇವರು ಇಲ್ಲಿಗೆ ಬರಲು ಕಾರಣವೇನೆಂದು ಕೇಳಿದರು. ನಮ್ಮ ಆಶ್ರಮದ ಜನರಲ್ ಸೆಕ್ರೆಟರಿ ಅವರಿಗೆ ಹಾವು ಕಡಿದಿದೆ. ಚಿಕಿತ್ಸೆ ಮಾಡುತ್ತಿದ್ದೇನೆ ಎಂದು ಸ್ವಾಮಿಗಳು ತಿಳಿಸಿ ಪ್ರಾತಃಕಾಲ ಬನ್ನಿ ನಿಜಾಂಶ ಗೊತ್ತಾಗುವುದು ಎಂದು ಬೀಳ್ಕೊಟ್ಟರು.

ಈಗಿನಂತೆ ಆಶ್ರಮ ದೊಡ್ಡದಾಗಿರಲಿಲ್ಲ ಬಾಡಿಗೆ ಮನೆಯೋ ಏನೋ ಇರಬೇಕು. ನಮ್ಮನ್ನು ಸೇರಿಸಿಕೊಂಡು ಬೆಳಗಿನ ಜಾವದವರೆಗೆ ಭಜನೆ ಮಾಡಿಸಿದರು. ಸುಬ್ಬಣ್ಣನ ಜೀವದಭಯದಿಂದಾಗಿ ನಮಗ್ಯಾರಿಗೂ ಕಣ್ಣುರೆಪ್ಪೆ ಒಂದಾಗಲಿಲ್ಲ. ಬೆಳಗಿನಜಾವಕ್ಕೆ ಎಂ. ವಿ. ಕೃಷ್ಣಪ್ಪ, ಕೆ. ಪುಟ್ಟಸ್ವಾಮಿ ಅವರು ಆಶ್ರಮಕ್ಕೆ ಬಂದರು. ಸುಬ್ಬಣ್ಣನು ತುಂಬಾ ವಾಂತಿಮಾಡಿ ಸುಸ್ತಾಗಿದ್ದ. ಶ್ರೀರಾಮಕೃಷ್ಣರ ಕೃಪಾದೃಷ್ಟಿಯಿಂದ ಆಸಾಮಿ ಅಪಾಯದಿಂದ ಪಾರಾಗಿದ್ದಾನೆ. ಧೈರ್ಯವಾಗಿ ಹೊರಡಬಹುದು ಎಂದು ಸ್ವಾಮೀಜೀ ಅಪ್ಪಣೆ ನೀಡಿದರು.

ನಡೆದ ವಿಚಾರವನ್ನು ಸವಿಸ್ತಾರವಾಗಿ ಸ್ವಾಮಿಗಳಿಗೆ ಹೇಳಿದ್ದೆವು. ಪೋಲೀಸರಿಗೂ ನನಗೆ ಹೇಳಿದಂತೆ ಸತ್ಯವನ್ನೇ ಹೇಳಬೇಕು ನಿಮ್ಮನ್ನು ಸತ್ಯಮಾತ್ರ ಕಾಯಬಲ್ಲುದು, ಅಸತ್ಯ ನರಕಕ್ಕೆ ತಳ್ಳುವುದು ಎಂದು ತಿಳಿಸಿದರು. ನಾವು ಹೊರಡುವ ವೇಳೆಗೆ ವಿದ್ಯುತ್ ಇಲಾಖೆಯುವರು ಪೋಲೀಸರೊಡಗೂಡಿ ಬಂದರು. ಸತ್ಯವಾದ ವಿಚಾರ ತಿಳಿಸಿದೆವು. ಹುಡುಗರು ಸತ್ಯಹೇಳುತ್ತಿದ್ದಾರೆ, ಅದಕ್ಕೆ ಪ್ರತ್ಯುಪಕಾರ ನಿಮ್ಮಿಂದ ಅವರು ನಿರೀಕ್ಷಿಸಬಹುದು ? ಎಂದು ಸ್ವಾಮಿಗಳು ಅವರಿಗೆ ತಿಳಿಸಿದರು. ಪೋಲೀಸರು ಇನ್ನು ಮುಂದೆ ಇಂತಹ ಕೆಟ್ಟ ಕೃತ್ಯಕ್ಕೆ ಕೈ ಹಾಕ ಬೇಡಿರಿ ಎಲ್ಲೂ ಬಾಯಿಬಿಡದೆ ಮನೆಗೆ ಹೋಗಿ ಎಂದು ಎಚ್ಚರಿಸಿ ಕಳುಹಿಸಿದರು, ಉಗನಿ ಹಂಬಿನ ಪ್ರಕರಣ ಏನಾಯಿತೋ ಎಂತಾಯಿತೋ ನಮಗೆ ತಿಳಿಯಲಿಲ್ಲ.

1938ನೆಯ ಇಸವಿ ದಸರಾದಲ್ಲಿ ಮೈಸೂರಿನ ಯಾಲಕಪ್ಪಾಚಾರಿ ಛತ್ರದಲ್ಲಿ ಪ್ರಜಾಪಕ್ಷ, ಪ್ರಜಾಮಿತ್ರ ಪಕ್ಷಗಳು ಪ್ರಜಾಸಂಯುಕ್ತ ಪಕ್ಷವಾಗಿ ಐಕ್ಯಗೊಂಡವು. ಮದ್ದೂರು ಎಂ.ಸಿ. ಲಿಂಗೇಗೌಡರು ಮತ್ತು ಎಸ್.ಸಿ. ವಲ್ಲಯ್ಯನವರ ವಿನಃ ಉಳಿದೆಲ್ಲಾ ಬ್ರಾಹ್ಮಣೇತರ ಮುಖಂಡರುಗಳನ್ನು ಸುಪ್ರಸಿದ್ಧ ಪತ್ರಿಕೋದ್ಯಮಿ ದಕ್ಷಿಣಭಾರತ ಬ್ರಾಹ್ಮಣೇತರ ಮುಖಂಡ ದಿವಂಗತ ಬಿ. ಎನ್. ಗುಪ್ತ ಅವರು ಪ್ರಜಾಸಂಯುಕ್ತ

ಪಕ್ಷಕ್ಕೆ ತಂದರು. ಈ ಪಕ್ಷದ ಮತ್ತು ಕಾಂಗ್ರೆಸ್ಸಿನ ಧ್ಯೇಯಗಳು ಜವಾಬ್ದಾರಿ ಸರ್ಕಾರ ಸ್ಥಾಪನೆಯ ಗುರಿ ಹೊಂದಿದ್ದವು. ಆದ್ದರಿಂದ ಪ್ರಜಾಸಂಯುಕ್ತ ಪಕ್ಷವು ಮೈಸೂರು ಕಾಂಗ್ರೆಸ್ಸಿನಲ್ಲಿ ವಿಲೀನಗೊಂಡಿರುವ ಬಗ್ಗೆ ಈ ಒಂದೆಯೆ ಉಲ್ಲೇಖಿಸಿದ್ದೇನೆ.

ಕೇವಲ ಬ್ರಾಹ್ಮಣಮುಖಂಡರ ಕೈಲಿ ಸಬಲವಾಗಿದ್ದ ಕಾಂಗ್ರೆಸ್ ಏನನ್ನೂ ಸಾಧಿಸಲು ಸಾಧ್ಯವಾಗದೆ ಜನಬಲದಿಂದ ವಂಚಿತವಾಗಿ ಕೇವಲ ಆಫೀಸ್ ಮುಂದೆ ಕಾಂಗ್ರೆಸ್ ಹೆಸರಿನ ಫಲಕ ಹೊಂದಿತ್ತು. ಬ್ರಾಹ್ಮಣೇತರಮುಖಂಡರು ಕಾಂಗ್ರೆಸ್ ಸೇರಿದ ಮೇಲೆ ಇಡೀ ಸಂಸ್ಥಾನದಲ್ಲಿ ಹೂಂಕರಿಸಿ ಎದ್ದುನಿಂತು ಎಲ್ಲೆಲ್ಲೂ ಕಾಂಗ್ರೆಸ್ ಹೆಸರು ಮೊಳಗತೊಡಗಿತು. ಸರ್ ಎಂ. ಮಿರ್ಜಾ ಅವರನ್ನು ಬೆಂಬಲಿಸುತ್ತಿದ್ದವರು ಕೈಬಿಟ್ಟರು. ಇದರಿಂದಾಗಿ ದಿವಾನರು ಕೆಲವರನ್ನು ಸೇರಿಸಿ ಬ್ರಾಹ್ಮಣೇತರ ಪಕ್ಷ ಕಟ್ಟಲು ಬ್ರಾಹ್ಮಣ ಅಧಿಕಾರಿಗಳ ಸಲಹೆಯಂತೆ ಆಂತರ್ಯವಾಗಿ ಕೆಲವರನ್ನು ಕರೆದು ಪ್ರಚೋದಿಸಿದರು. ಇವರುಗಳಲ್ಲಿ ಪ್ರಮುಖರಾದವರು ನೀಲಗಿರಿ ಸಂಜೀವಯ್ಯ, ನಾಗಮಂಗಲದ ದೇಶ ಬಂಧು ಎಂ. ಶಂಕರಲಿಂಗೇಗೌಡ, ಮದ್ದೂರಿನವರಾದ ಎಂ. ಸಿ. ಲಿಂಗೇಗೌಡ, ಎಸ್.ಸಿ. ಮಲ್ಲಯ್ಯ, ಕೊಡಗಿನ ಸಾಕಮ್ಮ, ಬಿ. ಎಸ್. ಪುಟ್ಟಸ್ವಾಮಿ, ಕೆ. ಆರ್ ನಗರದ ಬಳಿ ಸಿದ್ಧಲಿಂಗಶೆಟ್ಟರು, ಎಫ್. ಸಿ. ದೇವರಾಜ ಅರಸು. ರಾವ್‌ಬಹದ್ದೂರ್ ರಾಮಸ್ವಾಮಿ. ಶಿವರಾಮಪೇಟೆ ಅಕ್ಕಿಮಂಡಿ ಚಿಕ್ಕಣ್ಣ ಪ್ರಮುಖರು. ಮೈಸೂರಿನ ಸುಬ್ಬರಾಯನ ಕೆರೆ ಯಲ್ಲಿ ಸಾಕಮ್ಮನವರ ಅಧ್ಯಕ್ಷತೆಯಲ್ಲಿ ಬಹಿರಂಗ ಸಭೆ ಕರೆದರು. ಸಾಧಾರಣವಾಗಿ ಜನ ಸೇರಿದ್ದರು. ಪ್ರಥಮವಾಗಿ ನಾಗಮಂಗಲದ ದೇಶಬಂಧು ಎಂ. ಶಂಕರಲಿಂಗೇ ಗೌಡರು ಸಕ್ಕು ನಗಿಸುತ್ತಾ ಮೈಸೂರಿನ ಒಕ್ಕಲಿಗ ಲಿಂಗಾಯಿತ ಮುಖಂಡರುಗಳ ತಲೆಗೆ ಮೈಸೂರಿನ ಹಾರುವರು ಮಣ್ಣು ತುಂಬೇ ಬಿಟ್ಟರು. ಮೆದುಳನ್ನು ಹಾರುವರ ವಶಕ್ಕೆ ಒಪ್ಪಿಸಿ ರಾಜ್ಯದಲ್ಲಿ ಚಿಟ್ಟೆಗಳಂತೆ ಹಾರಾಡುತ್ತಿವೆ. ಜವಾಬ್ದಾರಿ ಸರ್ಕಾರ ಬೇಕಂತೆ ತಲೆಯಲ್ಲಿ ಮಣ್ಣು ಹೊತ್ತ ಒಕ್ಕಲಿಗ ಮತ್ತು ಲಿಂಗಾಯಿತ ಮುಖಂಡರಿಗೆ. ತಮ್ಮ ಜವಾಬ್ದಾರಿಯನ್ನೇ ಅರಿಯದ ಈ ಜನ ದೇಶಕ್ಕೆ ಜವಾಬ್ದಾರಿ ಸರ್ಕಾರ ತರುತ್ತಾರಂತೆ. ಅದೇನು ಮೈಸೂರಿನ ಮಂಡಿಗಳಲ್ಲಿ ಖಂಡುಗಕ್ಕಿಷ್ಟು ದುಡ್ಡು ಕೊಟ್ಟರೆ ದೊರೆಯುವ ದವಸ ಅಂತ ತಿಳಿದಿವೆ. ಸರ್. ಎಂ. ಮಿರ್ಜಾ ಅವರು ದಿವಾನರಾದ ಮೇಲೆ ಬಹು ಮುಖ್ಯವಾಗಿ ಒಕ್ಕಲಿಗ ಲಿಂಗಾಯಿತ ಜನರನ್ನು ಸರ್ಕಾರಿನೌಕರಿಯಲ್ಲಿ ಸೇರಿಸಿ ಮುಂದೆ ತಂದಿದ್ದಾರೆ. ಅವರ ಹಿಂದಿನ ದಿವಾನರುಗಳ ಕಾಲ ಹಿಂತಿರುಗಿ ನೋಡಲಿ ಮೆದಳು ಹಾರುವರಿಗೆ ಎರವಲು ಕೊಟ್ಟಿರುವ ಜನ. ತಾಲ್ಲೂಕು ಕಛೇರಿ ಗೇಟ್ ಕಾಯುವವನಿಂದ ಹಿಡಿದು ಅಠಾರಕಛೇರಿಯಲ್ಲಿ ದರ್ಬಾರು ಮಾಡುವವರೆಲ್ಲ ಬ್ರಾಹ್ಮಣರೇ ಆಗಿದ್ದಾರೆ. ಗ್ರಾಮಾಂತರ ಜನರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿ ನೌಕರಿಮಾಡಲು ಮೆದುಳೇ ಇಲ್ಲದಂತೆ ಮಾಡಿದ ಈ ಹಾರುವ ಜನ ಅಲ್ಲಿ ಇಲ್ಲಿ ಓದಿ ತಲೆಗೆ ಮೆದಳು ತುಂಬಿಕೊಂಡಿದ್ದವರ ಮೆದಳನ್ನು ಜವಾಬ್ದಾರಿ ಸರ್ಕಾರದ ಹೆಸರಿನಲ್ಲಿ ಭೋಗ್ಯ ಹಾಕಿಸಿ

ಕೊಂಡಿದ್ದಾರೆ. ದಿವಾನ್ ಮಿರ್ಜಾ ಅವರು ಬ್ರಾಹ್ಮಣೇತರರ ಬಗ್ಗೆ ತುಂಬಾ ವಿಶ್ವಾಸ ಹೊಂದಿ ಅಲ್ಲಲ್ಲಿ ಸರ್ಕಾರಿನೌಕರಿಯಲ್ಲಿ ಅವಕಾಶ ಕಲ್ಪಿಸಿದ್ದಾರೆ. ಈ ಹಿಂದುಳಿದ ಜನಕ್ಕೆ ಹಳ್ಳಿಗಳಲ್ಲಿ ಪಾಠಶಾಲೆಗಳನ್ನು ಪ್ರಾರಂಭಿಸಿದ್ದಾರೆ. ಅಲ್ಲೊಂದು ಇಲ್ಲೊಂದು ಹಾಸ್ಟೆಲುಗಳನ್ನು ಪ್ರಾರಂಭಿಸಿದ್ದಾರೆ, ಶತಮಾನಗಳಿಂದ ಪಾಳು ಬಿದ್ದಿದ್ದ ಅನೇಕ ಕೆರೆಗಳನ್ನು ಜೀರ್ಣೋದ್ಧಾರ ಮಾಡಿ ರೈತರ ಆರ್ಥಿಕ ಸ್ಥಿತಿ ಸುಮಾರಾಗಿ ಸುದರಾಯಿಸಿದ್ದಾರೆ. ಕೇವಲ ವರ್ಷದ ಹಿಂದೆ ನಾನೇ ಖುದ್ದಾಗಿ ದಿವಾನರನ್ನು ಭೇಟಿಮಾಡಿ ನಮ್ಮೂರಿನ ಬಳಿ ಪಾಳು ಬಿದ್ದಿದ್ದ ಹಿರುವ ಕೆರೆಯನ್ನು ಜೀರ್ಣೋದ್ಧಾರ ಮಾಡಲು ಕೇಳಿದೆ. ಅಲ್ಲಿಯೇ ಆರ್ಡರುಮಾಡಿ ಕೆರೆ ಕಟ್ಟಿಸಿದರು. ಆ ಕೆರೆ ಆಜುಬಾಜಿನ ಜನ ಬಡತನದಿಂದ ಬೆಂಗಳೂರಲ್ಲಿ ಹಾರುವರ ಮನೆ ಕಸ ಮುಸರೆ ತಿಕ್ಕಿ ಜೀವನ ಮಾಡುತ್ತಿದ್ದರು. ಈ ಕೆರೆ ಜೀರ್ಣೋದ್ಧಾರದಿಂದ ಬೆಂಗಳೂರಿಗೆ ವಲಸೆ ಹೋಗಿದ್ದವರು ವಾಪಸು ಬಂದು ಬೇಸಾಯಮಾಡಿ ತಾವೂ ಉಂಡು ಬಂದವರಿಗೂ ತುತ್ತು ಅನ್ನ ಹಾಕುವಂತಾದರು.

ಮೈಸೂರಿನ ಮಹಾಜನರೇ. ಜವಾಬ್ದಾರಿ ಸರ್ಕಾರ ಬೇಕಾದವರು ಲಂಡನ್‌ಗೆ ಹಾರಿ ಹೋಗಲಿ, ನಾವು ಮೈಸೂರಿನ ಶ್ರೀಮನ್ ಮಹಾರಾಜರ ಸರ್ಕಾರದಲ್ಲಿ ದಿವಾನ್ ಮಿರ್ಜಾ ಅವರ ಆಡಳಿತಕ್ಕೆ ನಿಷ್ಠಾವಂತರಾಗಿ ಬಾಳಿ ಬದುಕೋಣ. ಮಿದುಳು ಕಳೆದುಕೊಂಡ ನನ್ನ ಜನದ ಜೊತೆ ಹೊರಟು ನಡು ಹಾದಿಯಲ್ಲಿ ಅತಂತ್ರರಾಗಿ ತ್ರಿಶಂಕುವಿನಂತಾಗ ಬಾರದು ಮುಂತಾಗಿ ತಿಳಿಸಿದರು. ಶಂಕರಲಿಂಗೇಗೌಡರ ಭಾಷಣಕ್ಕೆ ಮಧ್ಯೆ ಮಧ್ಯೆ ನಾನು, ಸುಬ್ಬಣ್ಣ. ಸಿ. ಬಿ. ಪೊಣ್ಣಪ್ಪ ಸಾಧಾರಣ ಗಲಾಟೆ ಹಾಕುತ್ತಿದ್ವೊ. ಮಹನೀಯರೆ ನೋಡಿ ಇಲ್ಲೆ ಬಂದಿವೆ. ಈ ಪಡ್ಡೆ ಹುಡುಗರನ್ನ ಮುಂದೆ ತಳ್ಳಿ ಹಿಂದೆ ನಿಂತು ಆಡಿಸ್ತಾ ಇದ್ದಾರೆ. ಇರ್‍ಲಿ ನಮ್ಮ ಭಾಷಣ ಆಗ್ಲಿ ಆಮೇಲಿಂದ ನೀವು ಮಾತಾಡಿ. ಮಿರ್ಜಾ ಸಾಹೇಬ ಹೋದ ಮೇಲೆ ದಿವಾನನಾಗಿ ಹಾರುವಯ್ಯ ಬರ್‍ತಾನೆ. ಅವನಪ್ಪ ನೀವು ನಾವು ಎಲ್ಲಾ ಸೇರಿ ಈಸಿಕೊಳ್ಳೋಣ ಮೂರು ಮರಿಗೆಂಡೆ. ಹೀಗೆ ನಗಿಸುತ್ತಾ ತಮ್ಮ ಭಾಷಣ ಮುಗಿಸಿ ಸಿಗರೇಟ್ ಹಚ್ಚಿದರು.

ಈಗ ಎದ್ದರು ನೋಡಿ ದೇವರಾಜ ಅರಸು ಮಹಾರಾಜರ ಹತ್ತಿರದ ನೆಂಟರು. ನಾನೇನೊ ನಾಗಮಂಗಲದ ಬರನೆಲದ ಬಡಿಕಾರ ಹೇಳೋದು ನಿಮಗೆ ಸರಿಯಾಗಿ ಹಿಡಿಸದು. ಇಷ್ಟು ಹೇಳಿ ಆಗ್ಲಿ ಬುದ್ಧಿ ನಿಮ್ಮ ಬುದ್ಧಿವಾದದ ಭಾಷಣ ಎಂದರು.

ದೇವರಾಜ ಅರಸರು ಎದ್ದು ನಿಂತು ಶ್ರೀಮತ್ ಗಾಂಭೀರ್ಯದಿಂದ ಭಾಷಣ ಆರಂಭಿಸಿದವರೇ—ಬ್ರಾಹ್ಮಣರಿಗೂ ಅರಮನೆಗೂ ಇರುವ ಬಾಂಧವ್ಯ ದಿನವೂ ಇದ್ದದ್ದೇ. ಪುರೋಹಿತನ ದೇವರ ಪೂಜಾನಂತರವೇ ಅರಮನೆ ತನ್ನ ಕಾರ್ಯಗಳನ್ನು ಆರಂಭಿಸುವುದು. ಶ್ರೀಮನ್ ಮಹಾರಾಜರಿಗೆ ಬ್ರಾಹ್ಮಣರೆಂದರೆ ಗೌರವಾನ್ವಿತ ಜನ. ಯಾರು ಶ್ರೀಮನ್ ಮಹಾರಾಜರಿಂದ ಪೂಜ್ಯತೆಗೆ ಗೌರವಾರಾಧನೆಗೆ ಅರ್ಹರೋ ಅದೇ

ಜನ ಕಾಂಗ್ರೆಸ್ಸಿನ ಹೆಸರಲ್ಲಿ ಬ್ರಾಹ್ಮಣೇತರ ಮುಖಂಡರ ಬೆಂಬಲ ಸರ್ಕಾರಕ್ಕೆ ದೊರೆಯದ ರೀತಿ ಪಿತೂರಿ ನಡೆಸುತ್ತಿದ್ದಾರೆ. ಈ ಹಿಂದೆ ಒಡೆಯರಿಗೆ ಅನ್ಯಾಯ ಮಾಡಿ ಶತ್ರುಗಳನ್ನು ಬೆಂಬಲಿಸಿ ಮೋಸ ಮಾಡಿದ ಬ್ರಾಹ್ಮಣರ ಹೆಸರನ್ನು ನಾನು ಹೇಳುವುದು ಬೇಡ. ಮೈಸೂರಿನಲ್ಲಿ ಬ್ರಾಹ್ಮಣರನ್ನು ಹತೋಟಿಯಲ್ಲಿಟ್ಟುಕೊಂಡು ಅವರ ಪಿತೂರಿಗೆ ಸಿಗದಂತೆ ಜನರನ್ನು ಜಾಗ್ರತಗೊಳಿಸಲು ಶ್ರೀಮತಿ ಸಾಕಮ್ಮನವರ ನೇತೃತ್ವದಲ್ಲಿ ರಾಜಕೀಯ ಪಕ್ಷ ಸ್ಥಾಪನೆ ಮಾಡಿ ಬ್ರಾಹ್ಮಣರ ವಿರುದ್ದ ಹೋರಾಟಕ್ಕೆ ಇಳಿಯುತ್ತೇವೆ. ಶ್ರೀಮನ್ ಮಹಾರಾಜರಿಗೆ ಮೋಸ ಮಾಡಿದ ಈ ಜನರಿಗೆ ನಿಮ್ಮಂತಹ ನಮ್ಮಂತಹ ಸಾಧಾರಣ ಜನ ಲೆಕ್ಕಕ್ಕೆ ಬಾರದವರು. ಬ್ರಾಹ್ಮಣರನ್ನು ನಂಬಿ ಮೋಸ ಹೋಗಬೇಡಿ ಎಂದು ಬ್ರಾಹ್ಮಣರನ್ನು ಮಾತು ಮಾತಿನಲ್ಲಿ ಜಾಲಾಡಿದರು ದೇವರಾಜ ಅರಸು ಅವರು.

ನೀಲಗಿರಿ ಸಂಜೀವಯ್ಯನವರು ಮಾತನಾಡಿ ಜಗತ್ತಿನ ಸರ್ವರಿಗೂ ಹೆಂಗಸು ಮಾತೃ ಸ್ವರೂಪಳು. ಅಂತಹ ಮಾತೃ ಸಮಾನ ಸಾಕಮ್ಮನವರ ನೆರಳಲ್ಲಿ ರಾಜಕೀಯ ಪಕ್ಷ ಬೆಳೆಸಲು ನೀವೆಲ್ಲ ಒಂದಾಗಿ ಬೆಂಬಲಿಸಬೇಕೆಂದರು.

ದಿವಂಗತ ಸಾಕಮ್ಮನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಾತನಾಡುತ್ತ ''ಇಂದು ಮೈಸೂರು ವಿಶ್ವದ ದೃಷ್ಟಿಯಲ್ಲಿ ಅಷ್ಟೇ ಮಹಾತ್ಮ ಗಾಂಧಿ ಅವರ ದೃಷ್ಟಿಯಲ್ಲಿ ರಾಮರಾಜ್ಯವೆಂದು ಖ್ಯಾತಿ ಪಡೆವಂತೆ ದಿವಾನರಾದ ಸರ್. ಎಂ. ಮಿರ್ಜಾ ಅವರು ಅಹೋರಾತ್ರಿ ಕಣ್ಣಲ್ಲಿ ಕಣ್ಣಿಟ್ಟು ಸರ್ಕಾರಿ ಆಡಳಿತ ಯಂತ್ರವನ್ನು ಚುರುಕುಗೊಳಿಸುತ್ತಿದ್ದಾರೆ. ನಮ್ಮ ಅರಸು ಮನೆತನಕ್ಕೆ ದೇಶ ವಿದೇಶಗಳಲ್ಲಿ ಖ್ಯಾತಿ ದೊರೆವಂತೆ ಉದಾತ್ತ ಮಾರ್ಗದರ್ಶನ ಹಾಕಿದ್ದಾರೆ. ದಿವಾನರಾದ ಸರ್. ಎಂ. ಮಿರ್ಜಾ ಅವರನ್ನು ಇನ್ನೂ ಮುಂತಾಗಿ ಹೊಗಳಲು ಆರಂಭ ಮಾಡಿದರು. ಕೂಡಲೇ ಸಭೆಯಲ್ಲಿ ಅವರ ಭಾಷಣದ ವಿರುದ್ಧ ಘೋಷಣೆಗಳು ಆರಂಭವಾದುವು. ಕೆಲವರು ಸಾಕಮ್ಮನವರ ವಿರುದ್ಧ ಅಶ್ಲೀಲ ಘೋಷಣೆಗಳನ್ನು ಕೂಗಿದರು.

ಇದಕ್ಕೆ ''ಜನಜಾಗೃತಿ ಸಂಘ'' ದವರೇ ಕಾರಣ ಎಂದು ಏರಿಯಮೇಲಿದ್ದ ಟಿ. ಎಸ್. ಸುಬ್ಬಣ್ಣನವರನ್ನು ದಸ್ತಗಿರಿ ಮಾಡಿದರು. ನಾನು ಮತ್ತು ರಾಜಶೇಖರ ಎಚ್. ಎಸ್. ದೊರೆಸ್ವಾಮಿಯವರ 'ಸಾಹಿತ್ಯ ಮಂದಿರ'ದ ಬಳಿ ನಿಂತಿದ್ದೆವು. ಪೋಲೀಸರು ಬರುತಿದ್ದಂತೆ ರಾಜಶೇಖರ್ ಎಂ. ಎನ್. ಜೋಯಿಸರ ಮನೆಕಡೆ ಹೋಗಿ ತಲೆ ತಪ್ಪಿಸಿ ಕೊಂಡರು. ಪೋಲೀಸ್ ಇನ್‌ಸ್ಪೆಕ್ಟರು ನನ್ನ ಬಳಿ ಬಂದವರೇ ಲಾಠಿಯಿಂದ ತಿವಿದವರೇ ಲೇ ಹಳ್ಳಿಗಮೂರ್ ಎಲ್ಲೋ ನಿಮ್ಮ ಸಂಘದವರು ಬಾಕಿ ಜನ ಎಂದರು. ಯಾಕ್ರಿ ಈ ಸಭೆಗೂ ನಮಗೂ ಏನ್ರಿ ಸಂಬಂಧ. ಆ ಸಭೆಯಲ್ಲಿ ಗಲಾಟೆಮಾಡುತ್ತಿರೋ ನಿಮ್ಮ ಅಪ್ಪದಿರು ಯಾರೋ ಅವರು. ಜನರನ್ನು ಉದ್ರೇಕ ಮಾಡಿ ಕಳ್ಳನಂತೆ ಈ ಕಡೆ ಬಂದಿದೀಯ ಅಂತ ಕೈಕೋಳ ಹಾಕಿ ವ್ಯಾನಿಗೆ ಹತ್ತಿಸಿದರು. ವ್ಯಾನಿನಲ್ಲಿ ಸುಬ್ಬಣ್ಣ

ಆಗಲೇ ಕುಳಿತಿದ್ದರು. ಲಕ್ಷ್ಮೀಪುರ ಸ್ಟೇಷನ್‌ಗೆ ಕರೆದುಕೊಂಡು ಹೋಗಿ ಊಟೋಪಚಾರ ಮಾಡಿಸಿದರು. ನಾಳೆ ಬೆಳಗ್ಗೆ ನಿಮಗೇನು ಮಾಡ್ತೇವೆ ಗೊತ್ತೇನ್ರೊ ಕೈ ಕೋಳ ಹಾಕಿ ಮೈಸೂರಿನ ಬೀದಿಯಲ್ಲಿ ಮೆರವಣಿಗೆ ಮಾಡ್ತೇವೆ ಎಂದರು.

ನಮಗೇನು ಕೈಕೋಳ ವಿಚಾರ ಹೊಸದಲ್ಲ. ಟಿ. ಸಿದ್ಧಲಿಂಗಯ್ಯನವರಿಗೇ ಕೈ ಕೋಳ ಹಾಕಿ ಜೈಲಿಗೆ ಕರೆ ತಂದಿದ್ದರು. ಹಾಗೆ ಮಾಡಿ ಸ್ವಾಮಿ ನಾಳೆ ನಮಗೂ ಕೋಳ ಹಾಕಿ ಮೆರವಣಿಗೆ ಮಾಡಿ ಎಂದೋ, ಶ್ರೀ ಎ. ರಾಮಣ್ಣನನ್ನು ಕಂಡರೆ ನಮಗಿಂತ ಹೆಚ್ಚಾಗಿ ಆತನನ್ನು ಪೋಲೀಸರು ದ್ವೇಷಿಸುತ್ತಿದ್ದರು. ಪೋಲೀಸರು ಅಂದು ಬೆಳಗ್ಗೆ ರಾಮಣ್ಣ ಬೆಂಗಳೂರಿಗೆ ನಾರಿಮನ್ ಗಲಾಟೆ ನೋಡಲು ನಂಜನಗೂಡಿನ ಮಹದೇವಯ್ಯನವರ ಕಾರಿನಲ್ಲಿ ಹೋಗಿದ್ದು ಸಾಕಮ್ಮನವರ ಭಾಷಣ ಗಲಾಟೆಯಿಂದ ತಪ್ಪಿಸಿಕೊಂಡಿದ್ದರು.

ಬೆಳಗಿನ ತಿಂಡಿ ಆದ ಮೇಲೆ ಈ ಹೊತ್ತು ಜಡ್ಜರು ನಿಮಗೆ ರಾಗಿ ಹಿಟ್ಟು, ಉಪ್ಪು ನೀರು ಕೊಡೋ ಶಿಕ್ಷೆ ಮತ್ತೆ ಚಡ್ಡಿ ಹಾಕಿಸ್ತಾರೆ, ನೋಡ್ತಾ ಇರಿ. ನಿಮಗೇನು ಬಂತ್ರೋ ಹೋಗಿ ಹೋಗಿ ದಿವಾನರ ಸ್ನೇಹಿತರನ್ನೇ ಕೆಣಕುತ್ತೀರಾ ? ಮುಂತಾಗಿ ಹೇಳಿದರು. ಅಲ್ಲಾರೀ ಆ ಸಾಕಮ್ಮ ಅನ್ನೋ ಹೆಂಗಸಿಗೇನು ಬಂತು. ಹಾಳು ರಾಜಕೀಯ ಕಟ್ಟಿಕೊಂಡು, ದಿವಾನರಿಗೂ ಬುದ್ಧಿಯಿಲ್ಲ. ಆ ಅಮ್ಮನಿಗಿಂತ ಬುದ್ಧಿಯಿರೋ ಗಂಡಸರು ಕೊಡಗಿನಲ್ಲಿ ಸಿಗೋದಿಲ್ಲವೋ ಕಾಣೆ ಎಂದು ಇನ್‌ಸ್ಪೆಕ್ಟರು ಕೃಷ್ಣಮೂರ್ತಿ ಅವರು ಇತರ ಪೋಲೀಸರೊಡನೆ ಮಾತನಾಡುತ್ತ ಹಾಸ್ಯ ಮಾಡುತ್ತಿದ್ದರು.

ನಮ್ಮನ್ನು ಬೆಳಗಿನ 10 ಗಂಟೆಗೆ ಗಾಂಧಿ ಸರ್ಕಲ್ ಕೋರ್ಟಿಗೆ ಕರೆದುಕೊಂಡು ಹೋದರು. ನಾವು ಬೆಂಗಳೂರು ಗಲಾಟೆ ನೋಡಲು ಹೋಗಬೇಕೆಂಬ ತವಕ. ಹೇಗಾದರೂ ಶಿಕ್ಷೆ ತಪ್ಪಿಸಿಕೊಳ್ಳೋಣ ಎಂದು ಗೋಪಾಲಕೃಷ್ಣ ಶೆಟ್ಟರಿಗೆ ಹೇಳಿ ಕಳುಹಿಸಿದೆವು. ರಾಜಂಶೆಟ್ಟರು ಹೋಗಿ ಕರೆ ತಂದರು. ನಾವೇನು ಹೇಳಿದರೂ ಈ ಜಡ್ಜರು ಕೇಳುವುದಿಲ್ಲ. ಅವರುಂಟು ಪೋಲೀಸರುಂಟು. ಇಲ್ಲೇನು ನ್ಯಾಯ ಸಿಗುತ್ತ ಎಂದು ತಿಳಿಸಿ, ಆದರು ನೀವು ಒಂದು ಮಾತು ಕೇಳಿ ಸ್ವಾಮಿ ಸಭೆಯಲ್ಲಿದ್ದ ಗಣ್ಯರೊಬ್ಬರು ನಾವು ಗಲಾಟೆ ಮಾಡಿದೆವು ಎಂದು ಸಾಕ್ಷಿ ಹೇಳಿದರೆ ನೀವು ಕೊಡುವ ಶಿಕ್ಷೆಗೆ ಬಾಧ್ಯರು ಎಂದರು. ಸುಬ್ಬಣ್ಣ ಭಾಷಣ ಮಾಡುವವನು ಹೇಳುವ ಸಾಕ್ಷ್ಯ ಒಪ್ಪುವ ಇವರು ಭಾಷಣ ಕೇಳುವವನ ಸಾಕ್ಷ್ಯ ಒಪ್ಪಬಾರದೇಕೆ ? ಎಂದು ಪಬ್ಲಿಕ್ ಪ್ರಾಸಿಕ್ಯೂಟರ್ ಇನ್‌ಸ್ಪೆಕ್ಟರ್ ವಾದಕ್ಕೆ ಜಡ್ಜರು ಮಣಿದರು. ನಮ್ಮ ಗುರುತು ಪರಿಚಯವೇ ಇಲ್ಲದ ವರುಣ ಗ್ರಾಮದ ಚಿಕ್ಕೇಗೌಡ ಎಂಬುವವನು ನಮ್ಮನ್ನು ತೋರಿ ಇವರು ಬಹಳ ಗಲಾಟೆಕೋರರು ಸ್ವಾಮಿ ಏನು ಗಲಾಟೆ ಮಾಡ್ತಾರೆ ಮುಂತಾಗಿ ಸಾಕ್ಷ್ಯ ಹೇಳಿದನು.

ಜಡ್ಜರು ಒಪ್ಪಿ ತಿಂಗಳ ಸಜಾ ಕೊಟ್ಟರು ಮಧ್ಯಾಹ್ನ ಜೈಲು ಸೇರಿದೆವು. ಜೈಲು

ಹಳೆಯದಾಗಿತ್ತು, ಆದರು ಬೆಂಗಳೂರಿಗೆ ಹೋಗಿ ನಾರಿಮನ್ ಅವರನ್ನು ನೋಡಲಿಲ್ಲ ಎಂಬ ಅಳಕು ಹಾಗೇ ಉಳಿಯಿತು. ತಿಂಗಳು ಜೈಲು ಅನುಭವಿಸಿ ಬಿಡುಗಡೆ ಹೊಂದಿ ಕಾಂಗ್ರೆಸ್ ಪ್ರಚಾರಕ್ಕೆ ಹೆಚ್ಚು ಕಾಲ ವಿನಿಯೋಗಿಸಿದೆವು ಎ. ರಾಮಣ್ಣನವರ ಜೊತೆ ಸೇರಿ.

ಶಿವಪುರ ರಾಷ್ಟ್ರಕೂಟಾನಂತರ ಮೈಸೂರು ಸಂಸ್ಥಾನದ ನಾನಾ ಕಡೆ ಧ್ವಜ ಸತ್ಯಾಗ್ರಹ ನಡೆದು ಸಾವಿರಾರು ಜನರು ದಸ್ತಗಿರಿಯಾಗಿ ಕಾರಾಗೃಹವಾಸ ಅನುಭವಿಸಿದರು. ಆಚಾರ್ಯ ಕೃಪಲಾನಿ ಮತ್ತು ಸರ್ದಾರ್ ಪಟೇಲ್ ಅವರುಗಳು ಬಂದು ಸರ್ಕಾರಕ್ಕು ಮತ್ತು ಮೈಸೂರು ಕಾಂಗ್ರೆಸ್‌ಗೂ ರಾಜೀಮಾಡಿ ಯಾವುದೇ ಸಮಾರಂಭದಲ್ಲು ಮೈಸೂರು ಗಂಡಭೇರುಂಡ ಧ್ವಜ ಮತ್ತು ತ್ರಿವರ್ಣ ಧ್ವಜ ಎರಡನ್ನು ಹಾರಿಸುವ ಒಪ್ಪಂದ ಮಾಡಿದ ಮೇಲೆ ನಾಲ್ಕಾರು ತಿಂಗಳು ಕಾಲ ಸಜಾ ಅನುಭವಿಸಲಿದ್ದ ಸತ್ಯಾಗ್ರಹಿಗಳೆಲ್ಲರ ಬಿಡುಗಡೆಯಾಯಿತು.

ವಿದುರಾಶ್ವತ್ಥದಲ್ಲಿ ನಡೆದ ಧ್ವಜಸತ್ಯಾಗ್ರಹದಲ್ಲಿ ಗೋಲೀಬಾರ್ ನಡೆದು, ಇದರ ವಿಚಾರಣೆಗೆ ರಮೇಶ್ ಸಮಿತಿ ನೇಮಕಗೊಂಡು ವಿಚಾರಣೆ ನಡೆಸಿ ಸಾವು ನೋವು ಸಂಭವಿಸಿಲ್ಲ ಎಂಬ ತೀರ್ಪನ್ನು ರಮೇಶ್ ವಿಚಾರಣಾ ಸಮಿತಿ ನೀಡಿ ಧ್ವಜಸತ್ಯಾಗ್ರಹ ಪ್ರಕರಣಕ್ಕೆ ಸಂಪೂರ್ಣ ತೆರೆ ಎಳೆಯಿತು.

1942ನೆಯ ಇಸವಿ ಜೂನ್ ತಿಂಗಳಿಂದಲೇ ಗಾಂಧೀಜಿ ಅವರು ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ ಹೇಳಿಕೆಗಳನ್ನು ನೀಡಿತ್ತು, ಜಗತ್ತಿನ ಎರಡನೇ ಯುದ್ಧದಲ್ಲಿ ಭಾರತೀಯರು ಸಹಕರಿಸಲು ಯುದ್ಧಾನಂತರ ಸ್ವರಾಜ್ಯ ನೀಡುವ ಘೋಷಣೆಗೆ ಆಹ್ವಾನವಿತ್ತರು. ಬ್ರಿಟಿಷರು ಗಾಂಧೀಜೀ ಅವರ ಕರೆಗೆ ಮನ್ನಣೆ ನೀಡದೆ ಹೋದ ಪ್ರಯುಕ್ತ ಸ್ವಾತಂತ್ರ್ಯ ಹೋರಾಟಕ್ಕೆ ಕಾಲೇಜು ವಿದ್ಯಾರ್ಥಿಗಳು ಸೇರಿದಂತೆ ಭಾರತೀಯರು "ಮಾಡು ಇಲ್ಲವೆ ಮಡಿ" ಎಂಬ ಘೋಷಣೆ ಮಾಡಿದರು. ಇದ್ದ ಕೆಲಸವನ್ನು ಇದ್ದ ಹಾಗೆ ಬಿಟ್ಟು ಸ್ವಾತಂತ್ರ್ಯ ಜಯ ಘೋಷಣೆಗಳನ್ನು ಕೂಗುತ್ತಾ ಜೈಲು ಸೇರಿದೆವು. ಎಲ್ಲಾ ಜೈಲುಗಳು ತುಂಬೋ ತುಂಬು. ಇಡೀ ರಾತ್ರಿ ವ್ಯಾನುಗಳಲ್ಲಿ ಬರುವ ಸ್ವಾತಂತ್ರ್ಯ ವೀರರ ಜಯ ಘೋಷದಿಂದ ಜೈಲು ದೊಡ್ಡ ಜಾತ್ರೆ ಗದ್ದಲ ಯಾರಿಗೂ ನಿದ್ರೆಯಿಲ್ಲ. ರಾತ್ರೋ ರಾತ್ರಿ ಜೈಲಿಂದ ಜೈಲಿಗೆ ಡೆಟಿನ್ಯುಗಳನ್ನು ಸಾಗಿಸುವುದಕ್ಕಾಗಿ ಜೈಲು ಮುಂದೆ ಸಾಲು ಕಟ್ಟಿನಿಂತ ಪೋಲೀಸ್ ವ್ಯಾನುಗಳು. ಮೊದಲು ಮಂಡ್ಯದಿಂದ ಮೈಸೂರು ಜೈಲಿಗೆ ಸೇರಿಸಿದರು. ಅಲ್ಲಿ ಜಾಗದ ಕೊರತೆಯಿಂದಾಗಿ ರಾತ್ರಿ ಬೆಂಗಳೂರಿಗೆ ಸಾಗಿಸಿದರು. ಬೆಂಗಳೂರು ಕೇಂದ್ರಸೆರಮನೆಯಲ್ಲಿ ಜಾಗ ಸಾಲದೆ ಶ್ರೀರಂಗಪಟ್ಟಣದ ಗಂಧದಕೋಠಿಯನ್ನು ಜೈಲಾಗಿ ಪರಿವರ್ತಿಸಿ, ಊಟೋಪಚಾರಕ್ಕೆ ದಿವಂಗತ ಬಿ. ಟಿ. ರಾಮಯ್ಯನವರನ್ನು ನೇಮಿಸಿ ವ್ಯವಸ್ಥೆ ಮಾಡಿದರು. ನಾವು ಶ್ರೀರಂಗಪಟ್ಟಣಕ್ಕೆ ಹೊರಡುವ ವೇಳೆಗೆ ಮಂಡ್ಯದ ಗಾಂಧಿ ಎಂದು ಹೆಸರಾಗಿದ್ದ

ದಿವಂಗತ ಪಿ. ವೆಂಕಟಗಿರಿಯಪ್ಪನವರು ನ್ಯುಮೋನಿಯ ಜ್ವರದಿಂದ ಬಳಲುತ್ತಿದ್ದು, ಕಾಯಿಲೆ ಕಠಿಣ ಸ್ವರೂಪ ತಳೆದಿತ್ತು. ವೆಂಕಟಗಿರಿಯಪ್ಪನವರನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸುವ ಯೋಚನೆ ಜೈಲು ಅಧಿಕಾರಿಗಳಿಗೆ ಮತ್ತು ಡಾಕ್ಟರರಿಗೆ ಇರಲಿಲ್ಲ. ಮಂಡ್ಯದ ನಮ್ಮ ಮತ್ತು ವೆಂಕಟಗಿರಿಯಪ್ಪನವರ ಒತ್ತಾಯಕ್ಕೆ ಶ್ರೀರಂಗಪಟ್ಟಣಕ್ಕೆ ಕಳುಹಿಸಿದರು. ನಾಲ್ಕಾರು ದಿನಗಳಲ್ಲೆ ಕಾಯಿಲೆ ಉಲ್ಬಣಗೊಂಡಿತು, ಮಂಡ್ಯ ಆಸ್ಪತ್ರೆ ಚಿಕಿತ್ಸೆಗೆ ಕರೆದೊಯ್ದರಾದರು ಉಪಯೋಗವಿಲ್ಲದೆ ವೆಂಕಟಗಿರಿಯಪ್ಪನವರು ಆಸ್ಪತ್ರೆಯಲ್ಲಿ ಗಾಂಧಿ ಪಾದ ಸೇರಿದರು. ನಾವ್ಯಾರು ಅವರ ಅಂತ್ಯದರ್ಶನ ಮಾಡಲಾಗದೆ ಜೈಲಿನಲ್ಲೇ ಸಂತಾಪ ಸಭೆ ನಡೆಸಿ ಅಶ್ರುತರ್ಪಣ ಅರ್ಪಿಸಿದೆವು.

ಶ್ರೀರಂಗಪಟ್ಟಣದ ಜೈಲಿನಲ್ಲಿ ಪ್ರತಿಯೊಬ್ಬರು ಚರಕಾ ಇಟ್ಟುಕೊಂಡಿದ್ದು ದಿನವೂ ತಪ್ಪದೆ ಗಾಂಧೀಜಿ ಅವರ ಕಾರ್ಯಕ್ರಮದಂತೆ ಸೂತ್ರಯಜ್ಞ ನಡೆಸುವುದು. ಹಿಂದಿ ಮತ್ತು ತಮಿಳು ಅಕ್ಷರಾಭ್ಯಾಸ ಮಾಡುವುದು. ಸಂಜೆ ಜೈಲಿನಲ್ಲೆ ಸುತ್ತಾಡುವ ಕಾರ್ಯಕ್ರಮ. ಆರಕೆರೆಯ ಶ್ರೀ ಎ. ಸಿ. ಮಾದೇಗೌಡರು ಹಿಂದಿ ಮತ್ತು ತಮಿಳು ಪುಸ್ತಕಗಳನ್ನು ಹೊರಗಡೆಯಿಂದ ತರಿಸಿ ಕೊಡುತ್ತಿದ್ದರು. ಟಿ. ನರಸೀಪುರ ತಾಲ್ಲೂಕಿನ ಬನ್ನೂರಿನವರು, ನಾಗಮಂಗಲ, ಕೃಷ್ಣರಾಜಪೇಟೆ, ಶ್ರೀರಂಗಪಟ್ಟಣ, ಮೈಸೂರು ನಗರದವರೇ ಅಲ್ಲಿ ಹೆಚ್ಚಾಗಿದ್ದೆವು. 1943ನೆಯ ಇಸವಿ ಜೂನ್ ತಿಂಗಳಲ್ಲಿ ಬಿಡುಗಡೆ ಹೊಂದಿದೆವು. ಆದರು ಅಖಿಲಭಾರತ ಮಟ್ಟದಲ್ಲಿ ಹೋರಾಟ ತೀವ್ರವಾಗಿ ನಡೆಯುತ್ತಿದ್ದು ದಸ್ತಗಿರಿಗಳು ಸಾಗುತ್ತಲೆ ಇದ್ದವು.

ಶ್ರೀರಂಗಪಟ್ಟಣ ಜೈಲಿನಲ್ಲಿದ್ದವರೆಂದರೆ ನನಗೆ ಜ್ಞಾಪಕವಿದ್ದಂತೆ ಬನ್ನೂರಿನ ಹತ್ತಳ್ಳಿ ರಾಮಲಿಂಗಯ್ಯ, ಅದೇ ಊರಿನ ದಾಸರು, ಬೀಡನ ಹಳ್ಳಿ ಬೆಟ್ಟೇಗೌಡ, ಹನುಮಂನಹಾಳು ಹೊಂಬೇಗೌಡ, ಆರಕೆರೆಯ ಎ.ಸಿ. ಮಾದೇ ಗೌಡ, ಎ. ಜಿ. ಲಿಂಗಪ್ಪ, ಮೈಸೂರಿನ ಟಿ. ನರಸಿಂಹಯ್ಯಂಗಾರ್, ಟಿ. ಎಸ್. ರಾಜಗೋಪಾಲ ಅಯ್ಯಂಗಾರ್, ಕಲಾಮಂದಿರ ಸೂರ್ಯನಾರಾಯಣರಾವ್, ರಘು, ಶ್ರೀಧರಮೂರ್ತಿ, ಟಿ. ಮರಿಯಪ್ಪ, ಎಚ್. ಕೆ. ವೀರಣ್ಣಗೌಡ, ಎಂ. ಪುಟ್ಟೇಗೌಡ, ಎಚ್. ಸಿದ್ಧರಾಮಯ್ಯ, ಪಾಲಗ್ರಹಾರದ ಪಿ. ಎಸ್. ನರಸಿಂಹಯ್ಯ, ಪಿ. ಜವರಪ್ಪಗೌಡ, ಪಿ. ಕೆ. ವೆಂಕಟಾಚಲಶೆಟ್ಟಿ, ಪಿ. ಓಬೇಗೌಡ, ಪಿ. ಟಿ. ಕೃಷ್ಣಪ್ಪಗೌಡ, ಸಿಂಧಘಟ್ಟದ ಎಸ್. ಎಂ. ಮುದ್ದಲಿಂಗೇಗೌಡ, ಇವರ ತಮ್ಮ ಎಸ್. ಎಂ. ಲಿಂಗಪ್ಪ, ಮರಿಶೆಟ್ಟಿ, ಹೊಸ ಅಗ್ರಹಾರದ ರೈಸ್ ಮಿಲ್ ಬೋರೇಗೌಡರು, ಶ್ರೀನಿವಾಸ ಅಗ್ರಹಾರದ ಸಿ. ನರಸಪ್ಪನವರು, ಗಂಗವಾಡಿ ತೋಟೇಗೌಡರು ಮುಂತಾದವರಿದ್ದೆವು.

ನನ್ನ ಬಿಡುಗಡೆಯಾದ 20 ದಿನಗಳಲ್ಲಿ ಭೂಗತವಾಗಿದ್ದ ಟಿ. ಎಸ್. ಸುಬ್ಬಣ್ಣ ಹೊರ ಬಂದರು. ನಾನು ಅವರನ್ನು ನೋಡಲು ಹೋದೆ. ಅದೇ ದಿನ ಸುಬ್ಬಣ್ಣನವರ ಮೇಲಿದ್ದ ವಾರಂಟಿನಂತೆ ಆತನ ದಸ್ತಗಿರಿಗೆ ಬಂದರು. ನನ್ನನ್ನು ಕಂಡ ಪೋಲೀಸರು

ನೀವೆಲ್ಲಿದ್ದಿರಿ ? ಎಂದು ಪ್ರಶ್ನಿಸಿದರು. ನಾನು ಶ್ರೀರಂಗಪಟ್ಟಣ ಜೈಲಿನಲ್ಲಿ ಕಳೆದ ವರ್ಷದಿಂದ ಇದ್ದು ಬಿಡುಗಡೆ ಆಗಿ ಸುಬ್ಬಣ್ಣನನ್ನು ನೋಡಲು ಬಂದೆ. ಅವನು ಇನ್ನೂ ಬಿಡುಗಡೆ ಆಗಿ ಬಂದಿಲ್ಲ ಎಂದು ಒಂದು ಸುಳ್ಳು ಬಿಸಾಡಿದೆ.

ಎರಡು ಮೂರು ದಿನಗಳಲ್ಲಿ ದಾವಣಗೆರೆಯಲ್ಲಿ ಶ್ರೀಮನ್ ಮಹಾರಾಜರು ಬಟ್ಟೆ ಗಿರಣಿ ಪ್ರಾರಂಭೋತ್ಸವಕ್ಕೆ ಹೋಗುತ್ತಾರೆಂದೂ. ಅಲ್ಲಿ ನಾನು ಮತ್ತೆ ಕೆಲವರು ಸೇರಿ ಮಹಾರಾಜರ ಕಾರ್ಯಕ್ರಮಕ್ಕೆ ಅಡ್ಡಿ ತರುವರೆಂದು ಗೊತ್ತಾಗಿದೆಯೆಂದು ನನ್ನನ್ನು ಹುಡುಕುತ್ತಾ ಬಂದರು. ದುರದೃಷ್ಟ ನಾವಿಬ್ಬರು ಆವರಣದಲ್ಲೇ ಮಾತನಾಡುತ್ತ ನಿಂತಿದ್ದೆವು. ಇದ್ದಕ್ಕಿದ್ದಂತೆ ದಸ್ತಗಿರಿ ಮಾಡಿ ವ್ಯಾನಿಗೆ ನೂಕಿದರು.

ಕೇವಲ ಶ್ರೀಮನ್ ಮಹಾರಾಜರ ಕಾರ್ಯಕ್ರಮ ಹಾಳು ಮಾಡುವುದೇ ಅಲ್ಲದೆ ಯುದ್ಧಕ್ಕೆ ವಿರೋಧವಾಗಿ ಜನರಲ್ಲಿ ಭಯ ಬೀತಿ ಹುಟ್ಟಿಸುತ್ತಾರೆಂಬ ನೆಪ ಹೇಳಿ ಮೈಸೂರು ಜೈಲು, ಅಲ್ಲಿಂದ ಶಿವಮೊಗ್ಗ, ಅಲ್ಲಿಂದ ತೀರ್ಥಹಳ್ಳಿ ಗಂಧದ ಕೋಟಿ ಜೈಲುಗಳಿಗೆ ಬದಲಾಯಿಸಿ ಎಂಟೊಂಬತ್ತು ತಿಂಗಳನಂತರ ಬಿಡುಗಡೆ ಮಾಡಿದರು.

ಜೈಲಿಂದ ಬಂದ ನಾನು ಜನವಾಣಿ ಮತ್ತು ಪ್ರಜಾಮತ ಪತ್ರಿಕೆಗಳನ್ನು ಅರಕೆರೆ ಎ. ಸಿ. ಸುಬ್ಬಣ್ಣನವರಿಂದ ವಹಿಸಿಕೊಂಡು ನಡೆಸುತ್ತ ಬಂದೆ. ವಯಸ್ಕರ ಶಿಕ್ಷಣ ಸಮಿತಿ ವ್ಯವಸ್ಥಾಪಕನಾಗಿ ಕೆಲಸ ನಿರ್ವಹಣೆ ಸಹ ಹೊತ್ತು ಕೆಲಸ ಸಾಗಿಸುತ್ತ ಬಂದೆನು. 1944ನೆಯ ಇಸವಿ ತಲುಪುವಲ್ಲಿ ನನ್ನ ತಂದೆ ತಾಯಿಯರು ಮದುವೆ ಏರ್ಪಾಡಿಗೆ ನಿಂತರು.

## ಅಧ್ಯಾಯ–ಏಳು

### ೧

ನಾಗಮಂಗಲತಾಲ್ಲೂಕಿನಾದ್ಯಂತ ನಾನು, ಎಂ. ಆರ್. ಎಸ್. ಶಾಸ್ತ್ರಿ, ಪಿ. ಎಸ್. ನರಸಿಂಹಯ್ಯ ಸುತ್ತಿದ್ದೇವೆ. ಆಗಾಗ ಎ. ಅಶ್ವತ್ಥನಾರಾಯಣ, ಎಸ್. ವಿ. ಸುಬ್ಬರಾವ್ ನಮ್ಮ ಜೊತೆಗೂಡುತ್ತಿದ್ದರು. ನಾಗಮಂಗಲ ತಾಲ್ಲೂಕಿನ ಎಲ್ಲ ಹಳ್ಳಿಗಳನ್ನು ಸಂಚರಿಸುವುದು. ಅಲ್ಲಲ್ಲಿ ಹತ್ತಾರು ಹಳ್ಳಿಗಳವರನ್ನು ಯಾವು ದಾದರು ಗುಂಡು ತೋಪಿನಲ್ಲಿ ಸಭೆಸೇರಿಸಿ ಟಿ. ಮರಿಯಪ್ಪನವರು. ಎಚ್. ಸಿ. ದಾಸಪ್ಪ ನವರು, ಕೆ. ಎಂ. ಕೃಷ್ಣಪ್ಪಗೌಡರು ಮುಂತಾದ ಮುಖಂಡರುಗಳನ್ನು ಕರೆಸಿ ಅವರಿಂದ ಕಾಂಗ್ರೆಸ್ ಹೋರಾಟ ಏಕೆ ? ಈ ಹೋರಾಟದಿಂದ ಗ್ರಾಮಾಂತರ ಜನರಿಗೆ ಆಗುವ ಸಹಾಯ ಸವಲತ್ತುಗಳೇನು ? ಎಂಬುದನ್ನು ವಿಶದೀಕರಿಸುತ್ತಿದ್ದೆವು. ಇಂತಹ ಸಭೆ ಗಳು ವಿಶೇಷವಾಗಿ ಪಾಲಗ್ರಹಾರದ ವತಿಯಿಂದ ಕೋಟೆ ಬೆಟ್ಟ. ಚೀಣ್ಯದ ವತಿಯಿಂದ ಸೋಮನಹಳ್ಳಮ್ಮ ದೇವಸ್ಥಾನ ತೋಪು. ಭೀಮನಹಳ್ಳಿಯವರ ವತಿಯಿಂದ ದೇವಲಾಪುರ ತೋಪಿನಲ್ಲಿ ಹೀಗೆ ಹತ್ತಾರು ಕಡೆ ಸಭೆಗಳನ್ನು ನಡೆಸುತ್ತಿದ್ದೆವು. ಕಾಂಗ್ರೆಸ್ ಪ್ರಮುಖರ ಭಾಷಣ ಕೇಳಿದ ಜನರಲ್ಲಿ ಬಹುತೇಕ ಮಂದಿ ನಾಲ್ಕಾಣೆ ಕೊಟ್ಟು ಕಾಂಗ್ರೆಸ್‌ಗೆ ಸದಸ್ಯರಾಗುತ್ತಿದ್ದರು.

ಸ್ವರಾಜ್ಯಪೂರ್ವ ನಾಗಮಂಗಲ ಹಳ್ಳಿಗಳ ಚಿತ್ರ ಇಂದು ನೆನಸಿಕೊಂಡರೆ ಮೈ ಜುಮ್ಮೆನ್ನುವುದು. ಒಣನೆಲದ ಬರಬೇಸಾಯ ಭೂಮಿ. ಮಳೆ ಬಂದರೆ ಬೆಳೆ ಇಲ್ಲ ವಾದರೆ ಇಲ್ಲ. ಮೇಘವನ್ನು ನಂಬಿ ರೈತರು ಬಾಳುತ್ತಿದ್ದ ಕಾಲ. ಮಳೆರಾಯ ದಯೆ ತೋರಿದರೆ ಎರಡು ಹೊತ್ತು ರಾಗಿಹಿಟ್ಟು ಅನ್ನವಂತು ಕೇಳುವ ಹಾಗಿಲ್ಲ. ಅದೆ ಹೊಟ್ಟೆ. ಅದನ್ನು ಗಳಿಸಲು ಭದ್ರಾವತಿ, ನೀಲಗಿರಿ. ಬೆಂಗಳೂರುಗಳಿಗೆ ವಲಸೆ ಹೋಗುವ ಪರಿಸ್ಥಿತಿ. ಹೀಗಾದರು ಅಪ್ಪಹಾಕಿದ ಆಲದಮರ ನೇಣು ಹಾಕಿಕೊಂಡು ಸಾಯಿ ಎಂಬ ನಾಣ್ಣುಡಿಗೆ ಅನುಸಾರ ಉಂಡೋ ಹಸಿದೋ ಹುಟ್ಟಿದ ನೆಲದಲ್ಲೇ ಬಾಳ್ವೆ ನಡೆಸುವವರು ಬಹಳ ಮಂದಿ.

ಸ್ವಾತಂತ್ರ್ಯ ಪೂರ್ವ ಒಣಬೇಸಾಯಗಾರನ ಊಟತಿಂಡಿ ನೆನೆದರೆ ಬಾಯಲ್ಲಿ ನಿರೂರುವಂತಹ ರುಚಿ. ಸಂಕ್ರಾಂತಿ ದಿನ ರೈತ ಜಮೀನಿನಿಂದ ಕೊಯ್ಲುಮಾಡಿ ತಂದ ಎಳ್ಳು, ಹುಚ್ಚೆಳ್ಳು, ಅವರೆ, ತೊಗರಿ ಮತ್ತು ಹುರುಳಿ ಒಡ್ಡುಗಳಿಗೆ (ಮೆದೆ) ರಾಗಿ ಸೇರಿ ದಂತೆ ಬಿಲ್ವಪತ್ರೆಯನ್ನು ಹಾಕಿ ಪೂಜೆಸಲ್ಲಿಸುತ್ತಾನೆ. ಒಕ್ಕಣೆ ಮಾಡಿದ ಹೊಸ ಹುರುಳಿ ಯನ್ನು ದಿನನಿತ್ಯ ಬಳಸುವುದಕ್ಕಿಂತ ಎರಡು ಮೂರು ಪಟ್ಟು ಜಾಸ್ತಿ ಬೇಯಿಸಿ,

ಬಂದ ಹುರುಳಿ ಕಟ್ಟಿನಿಂದ ಸಾರುಮಾಡಿ, ಅಂದೇ ಕಡೆದು ತೆಗೆದ ಬೆಣ್ಣೆಕಾಯಿಸಿದ ತುಪ್ಪಕ್ಕೆ ಪರಿಕಾರ ಹಾಕುವ ವಾಸನೆ ಇಡೀ ಬೀದಿ ಮನೆಗಳ ಜನರ ಮೂಗನ್ನು ಸೆಳೆಯುತ್ತಿರುತ್ತದೆ. ಚೆನ್ನಾಗಿ ಬೆಂದ ಹುರುಳಿ ಕಟ್ಟಿನ ಸಾರಿಗೆ ತುಪ್ಪಬೆರಸಿ ರಾಗಿ ಮುದ್ದೆಯ ಗುಕ್ಕುಗಳನ್ನು (ತುತ್ತುಗಳನ್ನು) ಸಾರಿನಲ್ಲಿ ಅದ್ದಿ ನುಂಗಿದರೆ ದೇವ ಲೋಕದ ಅಮೃತವೋ ಅನ್ನುವ ರುಚಿ ನಾಲಿಗೆಗೆ. ಈ ರುಚಿಯನ್ನು ಪಟ್ಟಣವಾಸಿ ಗಳಾಗಿದ್ದ ದಾಸಪ್ಪನವರು, ಮರಿಯಪ್ಪನವರು, ಕೆ. ಎಂ. ಕೃಷ್ಣಪ್ಪಗೌಡರಾದಿಯಾಗಿ ಎಲ್ಲರು ಸವಿದವರು. ದಾಸಪ್ಪನವರಂತು ಪ್ರವಾಸಕ್ಕೆ ಬಂದರೆ ಹುರುಳಿಕಟ್ಟಿನ ಸಾರಿಗೆ ಗುರುತುಳ್ಳವರ ಮನೆಗೆ ಹೇಳಿ ಮಾಡಿಸಿ ಊಟ ಮಾಡುತ್ತಿದ್ದರು.

ಮದ್ದೂರಿನ ಚಿಕ್ಕರಸಿನಕೆರೆ ಹೋಬಳಿ ಗ್ರಾಮಾಂತರಗಳಲ್ಲಿ ಕೆ. ಟಿ. ಭಾಷ್ಯಂ, ಎಚ್. ಕೆ. ವೀರಣ್ಣಗೌಡರು, ಟಿ. ಸಿದ್ಧಲಿಂಗಯ್ಯನವರು, ತಗಡೂರು ರಾಮಚಂದ್ರ ರಾಯರು ಪ್ರವಾಸಕ್ಕೆ ಬಂದರು. ನಾನು, ಎಂ. ಆರ್. ಎಸ್. ಶಾಸ್ತ್ರಿ. ಎ. ಡಿ. ಬಿಳೀಗೌಡ, ಶಿವಪುರದ ದೊಳ್ಳಯ್ಯ, ಗೆಜ್ಜಲಗೆರೆ ಜಿ. ತಿಮ್ಮಯ್ಯ ಮುಂತಾದ ಯುವಕರು ಗ್ರಾಮಾಂತರ ಜನರನ್ನು ಒಂದೆಡೆ ಸೇರಿಸಿ ಸಭೆ ನಡೆಸುವ ಕೆಲಸಕ್ಕೆ ಹೋಗುತ್ತಿದ್ದೆವು. ಚಿಕ್ಕರಸಿನಕೆರೆ, ಛತ್ರದ ಹೊಸಹಳ್ಳಿ, ಗುರುದೇವರ ಹಳ್ಳಿ, ಕರಡಕೆರೆ, ಶೆಟ್ಟಿಹಳ್ಳಿ. ಬಿದರ ಹೊಸಹಳ್ಳಿ, ಯಲಾದಹಳ್ಳಿ, ಮಕೇನಹಳ್ಳಿ, ಮುಂತಾಗಿ ಹತ್ತಾರು ಹಳ್ಳಿಗಳನ್ನು ಭೇಟಿಮಾಡಿ ಕಾಂಗ್ರೆಸ್ ಸಂದೇಶವನ್ನು ಸಾರುವ ಏಕೈಕ ದೃಷ್ಟಿ ನಮ್ಮದು. ಪ್ರಜಾಸಂಯುಕ್ತ ಪಕ್ಷ ಕಾಂಗ್ರೆಸ್ಸಿನಲ್ಲಿ ವಿಲೀನ ವಿರೋಧಿಸಿ ಪ್ರತ್ಯೇಕವಾಗಿ ಉಳಿದ ಎಂ. ಸಿ. ಲಿಂಗೇಗೌಡರು, ಎಸ್. ಸಿ. ಮಲ್ಲಯ್ಯನವರು ಇಲ್ಲಿನ ಕೆಲವಾರು ಹಳ್ಳಿಗಳಲ್ಲಿ ಸಾಧಾರಣ ಪ್ರಾಬಲ್ಯ ಹೊಂದಿದ್ದರು. ಅಂತಹ ಗುಂಪಿಗೆ ಸೇರಿದ ಹಳ್ಳಿಯಲ್ಲಿ ದೊಡ್ಡರಸಿನಕೆರೆ ಒಂದು. ಊರ ಮುಂದಿನ ದೇವಸ್ಥಾನದ ಜಗಲಿ ಮೇಲೆ ನಾಯಕರು ಝಂಡಾ ಹಾಕಿದರು. ಹುಡುಗರಾದ ನಾವು ತುತ್ತೂರಿ ಊದಿದೆವು ಜನರು ಬಂದು ಸೇರಲು ಪ್ರಾರಂಭಿಸಿದರು. ದೊಡ್ಡಕರೀಗೌಡರು ಚಿಕ್ಕಕರೀಗೌಡರು ಎಂಬಿಬ್ಬರು ಅಣ್ಣ ತಮ್ಮಂದಿರು. ಚಿಕ್ಕಕರೀಗೌಡರು ಕಾಂಗ್ರೆಸ್ ಗುಂಪು. ಅಣ್ಣನದು ವಿರೋಧ ಗುಂಪು ದೊಡ್ಡದು. ಕೆ. ಟಿ. ಭಾಷ್ಯಂ ಅವರು ಜಗಲಿಮೇಲೆ ಎದ್ದುನಿಂತು ಭಾಷಣ ಮಾಡಲು ಪ್ರಾರಂಭಿಸಿದರು. ಬಂದಿದ್ದ ಜನರೆದ್ದು ಗುಲ್ಲೆಬ್ಬಿಸಿ ನಮಗೆ ಭಾಷಣ ಬೇಕಿಲ್ಲ. ದಯಮಾಡಿ ಮುಂದಲೂರಿಗೆ ಹೋಗಿ ಎಂದರು. ತಗಡೂರು ರಾಮಚಂದ್ರ ರಾಯರು ಎದ್ದು ನಮ್ಮ ಗುಂಪಿನ ಜನ ಇದ್ದಾರೆ ಅವರಿಗೆ ಭಾಷಣ ಮಾಡುತ್ತೇವೆ ಎಂದರು. ಆಗದು ಅವರನ್ನು ಕರೆದುಕೊಂಡು ಮುಂದಲ ಊರಿಗೆ ಹೋಗಿ ಎಂದು ಮರಿಹಾಕಿದ ನಾಯಿಗಳಂತೆ ಕಿರುಗುಡಲು ಆರಂಭಿಸಿದರು. ಕೊನೆಗೆ ಎಚ್. ಕೆ. ವೀರಣ್ಣ ಗೌಡರು ಒರಟಾಗಿ ಒದರಿ ಎದ್ದುನಿಂತು. "ನಾನು ಭಾಷಣ ಮಾಡುತ್ತೇನೆ. ಅದ್ಯಾವನು ನನ್ನ ತಡೆವವನು ತಡೆಯಿರಿ. ಒಂದು ಕೈ ನಾವೂ ವಿಲಾಯಿಸಿ ನೋಡುತ್ತೇವೆ" ಎಂದು ಗದರಿದರು.

ಕಾಂಗ್ರೆಸ್ ಗುಂಪಿನವರು ಮತ್ತು ಇಬ್ಬರ ಕಡೆ ಗುಂಪಿನ ಯುವಕರೆಲ್ಲ ಭಾಷಣ ಮಾಡಿ ಎಂದು ಕೂಗಲಾರಂಭಿಸಿದರು. ಊರಿನ ಮುಖಂಡರ ಪಾಳೆಗಾರಿಕೆಗೆ ಹೆದರದೇ ಗ್ರಾಮದ ನೀವು ಏಕತೆಯಿಂದ ಕಾಂಗ್ರೆಸ್ಸಿಗೆ ಒಂದುಗೂಡಿ ಬರಬೇಕೆಂದು ಮುಖಂಡರುಗಳು ತಿಳಿವಳಿಕೆ ಹೇಳಿದರು. ಕಾಂಗ್ರೆಸ್ಸಿನ ಸದಸ್ಯರುಗಳನ್ನು ಮಾಡಲು ಚಿಕ್ಕಕರೀಗೌಡರು ನೂರು ರೂಪಾಯಿನ ನೋಟು ತೆಗೆದು ಗೌಡರ ಕೈಗಿತ್ತು ಬನ್ನಿ ರುಜುಮಾಡಿ ಕಾಂಗ್ರೆಸ್ಸಿಗೆ ಮೆಂಬರಾಗಿ ಎಂದು ಜನರನ್ನು ಹುರಿದುಂಬಿಸಿದರು. ಒಂದು ಸಂಜೆಯೊಳಗೆ ನಾಲ್ಕುನೂರು ಜನ ಸದಸ್ಯರಾದರು. ಮುಂದೆ ಆ ಊರಿನಲ್ಲಿ ಭಾಷಣಕ್ಕೆ ತೊಂದರೆ ಆಗಲಿಲ್ಲ. ಮಡೇನಹಳ್ಳಿಯಲ್ಲಿ ಬಹುಶಃ ಲಿಂಗಾಯಿತರು ಹೆಚ್ಚಿರಬೇಕು. ಮಡೇನಹಳ್ಳಿ ಕಡಬು ಆ ಸುತ್ತಲ ಹಳ್ಳಿಗೆ ಪ್ರಸಿದ್ಧಿ, ಕಾಳಮುದ್ದನ ದೊಡ್ಡಿಯಲ್ಲಿ ತಂಗಿದ್ದ ಮುಖಂಡರಿಗೆ ಬೆಳಗಾಗೆದ್ದು ತಿಂಡಿ ತೀರ್ಥ ಮಾಡುವುದು ಕಷ್ಟದ ಕೆಲಸವಾದ್ದರಿಂದ ಸೈಕಲ್‌ನಲ್ಲಿ ನಾನು ಮತ್ತು ದೊಳ್ಳಯ್ಯ ಮಡೇನಹಳ್ಳಿಗೆ ಹೋಗಿ ಒಂದು ಸೊಪ್ಪಿನ ಮಂಕರಿ ದೊಡ್ಡ ಗೂಡೆ ಎಂದು ಕೊಳ್ಳಬೇಡಿ. ಒಂದು ರೂಪಾಯಿಗೆ ಆ ಗೂಡೆ ತುಂಬ ಕಾಸಿಗೊಂದರಂತೆ 192 ಇಡ್ಲಿ ಕೊಸರಿಗೆ 10 ಕಾಂಗ್ರೆಸ್‌ಗೆ 10 ಅಜ್ಜಿ ಕೊಸರು. ಇವಿಷ್ಟು ಕಡಬಿನ ಜೊತೆಗೆ ಹುರುಳಿ ಹುರಿಗಡಲೆ ಚಟ್ನಿಯನ್ನು ಅದೇ ಊರಿನಲ್ಲಿ ಸೇರು ಬೆಣ್ಣೆಗೆ ಆಗ ಎರಡಾಣೆಯಂತೆ. 2 ಸೇರು ಬೆಣ್ಣೆ ತಂದೆವು. ನಾವು ನಾಲ್ಕಾರು ಮಂದಿ ಜೊತೆಗೆ ಊರಿನ ಮೂರು ನಾಲ್ಕು ಜನರಿಗೆ ಕಡಬು ಸಾಕಾದುವು. ಹುರುಳಿಕಾರದ ಜೊತೆಗೆ ಬೆಣ್ಣೆ ಮಿಲಾಯಿಸಿ ಕಡಬು ತಿನ್ನುತ್ತಿದ್ದರೆ ಅದರ ಸೊಗಸೇಬೇರೆ. ಪಟ್ಟಣಿಗರಾಗಿದ್ದ ದಾಸಪ್ಪನವರಿಗೆ ಮತ್ತು ಕೆ. ಟಿ. ಭಾಷ್ಯಂ ಅವರಿಗೆ ಹಳ್ಳಿಯಲ್ಲಿ ಆಗ ಕಡೆದು ತೆಗೆದ ಬೆಣ್ಣೆ, ಅಪರೂಪವಾಗಿ ಸಿಗುವ ವಸ್ತು. ಹುರುಳಿ ಕಾರದ ಮುಖವಂತು ಕಾಣಲೇ ಕಾಣದವರು.

ಭಾಷ್ಯಂ ಅವರು ನಾಳೆ ಬೆಳಗಿಗೂ ಮಡೇಹಳ್ಳಿ ಕಡಬು ತರಿಸಿ ಬಿಡಿ ಎಂದು ಏನಪ್ಪ ರೂಪಾಯಿಗೆ ಇಷ್ಟೊಂದು ಕಡಬು ಎಂದರೆ ಇನ್ನೇನು ಸ್ವಾಮಿ ರೂಪಾಯಿಗೆ 9 ಸೇರು ಅಕ್ಕಿ ಎಂದ ಮೇಲೆ ರೂಪಾಯಿಗೆ ಇನ್ನೂ ಹೆಚ್ಚಿನ ಕಡಬೇ ನ್ಯಾಯವಾಗಿ ಕೊಡಬೇಕು ಎಂದೆ.

ಸ್ವಾತಂತ್ರ್ಯಕ್ಕಾಗಿ ಹೂಡಿದ ಹೋರಾಟದಲ್ಲಿ ಶ್ರಮಿಸಿ ನಾನಾ ಕಷ್ಟ ನಷ್ಟಗಳನ್ನು ಅನುಭವಿಸಿದ ಮಹಾನುಭಾವರ ಬಗ್ಗೆ ಜನರು ಅಪಾರವಾದ ಪ್ರೀತಿ ಗೌರವಗಳನ್ನು ವ್ಯಕ್ತಪಡಿಸುತ್ತಿದ್ದರು. ಅವರು ದಾರಿಯಲ್ಲಿ ಸಿಕ್ಕಿದರೆ ನಿಮಿಷ ನಿಂತು ನಮನಗಳನ್ನು ಸಲ್ಲಿಸಿ ಮುಂದೆ ಹೋಗುತ್ತಿದ್ದರು. ಸ್ವರಾಜ್ಯಾನಂತರ ರಾಜಕಾರಣಿಗಳ ಬಗ್ಗೆ ವ್ಯಕ್ತ ಮಾಡುತಿದ್ದ ಗೌರವಾದರಗಳು 1963ರ ಹೊತ್ತಿಗೆ ಅಪಾರವಾಗಿ ಕುಸಿಯಿತು. ರಾಜಕಾರ್ಯ ಮಾಡುವ ಮುಖಂಡರುಗಳನ್ನು ಕಾಂಗ್ರೆಸ್ ಪುಡಾರಿಗಳೆಂದು ಲಘುವಾಗಿ ಮಾತನಾಡಲಾರಂಭಿಸಿದರು. ಮುಖಂಡನಾದವನು ಕೆಲವರನ್ನು ತನ್ನ ಹಿಂಬಾಲಕತ್ವದಲ್ಲಿ

ಕರೆದುಕೊಂಡು ತಿರುಗಾಡುವುದು ಮುಖಂಡತ್ವದ ದ್ಯೋತಕವೆಂದು ಕೆಲವರು ಭಾವಿಸಿದರು. ಕಾರ್ಯ ಕಾರಣವಿಲ್ಲದೆಯೆ ಮುಖಂಡರ ಹಿಂದೆ ಓಡಾಡುವ ನಿರುದ್ಯೋಗಿಗಳು ಕೆಲವರು. ಇಂತಹ ಪರಿಪಾಟಲಿಂದಾಗಿ ಜನರು ಪುಢಾರಿಗಳೆಂಬ ಅಸ್ವರ್ಥನಾಮಾಂಕಿತದಿಂದ ಕೂಗಲಾರಂಭಿಸಿದರು.

ಹಿಂಬಾಲಕರುಗಳನ್ನು ಬೆಳಸಿಕೊಂಡು ಜೊತೆಯಲ್ಲಿ ಓಡಾಡಿಸುವುದರ ಖರ್ಚು ವೆಚ್ಚ ಸಾಮಾನ್ಯವಾಗುವುದೇನು ? ಈ ಖರ್ಚುವೆಚ್ಚ ಭರಿಸಲು ಮುಖಂಡನಾದವನು ಯಾವ ಆದಾಯ ಮಾರ್ಗ ಅನುಸರಿಸುತ್ತಾನೆಂಬುದನ್ನು ಅನುಭವದಾರನಿಂದ ತಿಳಿಯ ಬೇಕಾದ ವಿಚಾರ. 1947ರಲ್ಲಿ ಬಂದ ಸ್ವರಾಜ್ಯ ಅರ್ಥಾತ್ ಜವಾಬ್ದಾರಿ ಸರ್ಕಾರ ರಚನಾನಂತರ ಮಂತ್ರಿ ಮಹೋದಯರು ಅಗತ್ಯವಿರುವ ಕಾರ್ಯಕರ್ತರುಗಳನ್ನು ಕರೆಸಿಕೊಂಡು ರಾಜಕಾರಣದ ಆಲೋಚನೆ ಮಾಡುತ್ತಿದ್ದರು. ಇಂದು ಊರಿಗೆ ಮಂತ್ರಿಗಳು ಬರುತ್ತಾರೆಂದರಾಯ್ತು. ಸಂಬಂಧವೋ ಸಂಬಂಧವಿಲ್ಲವ್ರೋ ಮಂತ್ರಿಗಳು ಸೇರುವ ಜಾಗದಲ್ಲಿ ಮೀನಿನ ಮಾರುಕಟ್ಟೆಯಲ್ಲಿ ಸೇರುವ ಜನರ ಗುಜುಗುಂಪಲು. ಬಂದ ಮಂತ್ರಿಗಳು ಜನರ ಸಮಸ್ಯೆಗಳ ಬಗ್ಗೆ ಅಧಿಕಾರಿಗಳು, ಶಾಸಕರಲ್ಲಿ ವಿಚಾರ ವಿನಿಮಯ ಮಾಡಲು ಎಳ್ಳಷ್ಟು ಅವಕಾಶವಿರದು. ನಾಯಕರ ಹಿಂಬಾಲಕರುಗಳ ಜೀವನ ಸಮಸ್ಯೆಯನ್ನು ಕುರಿತಂತೆ ಜನರು ಸತ್ಯಾಸತ್ಯಗಳ ಪರಿವೆಗೆ ಹೋಗದೆ ಬೇಕಾ ಬಿಟ್ಟಿ ಟೀಕಿಸುವುದನ್ನು ಕಾಣಬಹುದು.

1947ಕ್ಕೆ ಮುನ್ನವೆ ನಾನು ಜೈಲಿನಿಂದ ಬಂದ ಮೇಲೆ ಮಂಡ್ಯದಲ್ಲಿ ಸಹಕಾರ ಸಂಘ ರಚನೆಮಾಡಲು ದಿವಂಗತ ಜಿ. ಎಸ್. ಬೊಮ್ಮೇಗೌಡರು ಮತ್ತು ಕೆ. ವಿ. ಶಂಕರ ಗೌಡರು ಒಂದಾಗಿ ಸೇರುತ್ತಿದ್ದೆವು. (ಈ ವಿಷಯದಲ್ಲಿ ಸಹಕಾರ ಸಂಘ ಸ್ಥಾಪನೆ ವಿಚಾರ ವಿವರವಾಗಿ ಅಲಾಯದ ಬರೆಯಲಾಗಿದೆ.) 1947ರ ನಂತರ ಶ್ರೀ ಕೆ.ವಿ. ಶಂಕರಗೌಡರು ವಿಧಾನ ಸಭಾ ಸದಸ್ಯರಾದರು. ಸಕ್ಕರೆ ಮೇಲೆ ತೆರಿಗೆ ವಿಧಿಸಿ ಅದರಿಂದ ಬರುವ ಉತ್ಪತ್ತಿಯಲ್ಲಿ ನಾಲಾಬಯಲಲ್ಲಿ ರಸ್ತೆ ವ್ಯವಸ್ಥೆ ಮಾಡಲು "ಷುಗರ್ ಕೇನ್ ಸೆಸ್ ಡಿವಿಷನ್" ಎಂಬ ಹೆಸರಿನಲ್ಲಿ ಅಲಾಯದ ಮರಾಮತ್ ಇಲಾಖಾ ಶಾಖೆ ಆರಂಭಿಸ ಲಾಯ್ತು. ಈ ಇಲಾಖೆ ಕೆಲಸ ನೋಡಿಕೊಳ್ಳಲು ಸಮಿತಿಯೊಂದನ್ನು ರಚಿಸಿ, ಆ ಸಮಿತಿಗೆ ಶಂಕರಗೌಡರು ಅಧ್ಯಕ್ಷರಾಗಿ, ಎಕ್ಸಿಕ್ಯುಟಿವ್ ಇಂಜಿನಿಯರ್ ಕಾರ್ಯದರ್ಶಿ ಗಳಾಗಿ ನೇಮಿಸಿ ಬಹುಶಃ ಜಿಲ್ಲೆಯ ನೀರಾವರಿ ಪ್ರದೇಶದ ಶಾಸಕರುಗಳು ಸದಸ್ಯ ರಾಗಿದ್ದರು. ಈ ಒಂದು ತೆರಿಗೆಯಿಂದ ನಾಲಾಬಯಲು ಜಮೀನುಗಳಿಗೆ ಗಾಡಿಗಳು, ಲಾರಿಗಳ ಓಡಾಟಕ್ಕೆ ಅನುಕೂಲವಾದ ರಸ್ತೆಗಳಾಗಿ ನಾಲಾಬಯಲರೈತರು ಒಂದ ಕ್ಕೆರಡು ಪಟ್ಟು ಬೆಳೆ ಬೆಳೆಯಲಾರಂಭಿಸಿದರು.

1940ನೆಯ ಇಸವಿಯಲ್ಲಿ ಹೊಸದಾಗಿ ನಿರ್ಮಾಣವಾದ ಮಂಡ್ಯ ಜಿಲ್ಲಾ ಬೋರ್ಡ್ ಚುನಾವಣೆಗಳಲ್ಲಿ ಮದ್ದೂರು ವಿನಹ ಆರು ತಾಲ್ಲೂಕುಗಳಲ್ಲಿ ಕಾಂಗ್ರೆಸ್ ಉಮೇದುವಾರರು ಅವಿರೋಧವಾಗಿ ಚುನಾಯಿತರಾದರು. ಮಂಡ್ಯ ಜಿಲ್ಲಾ

ಬೋರ್ಡಿಗೆ ಪ್ರಥಮ ಅಧ್ಯಕ್ಷರಾಗಿ ಕೆರಗೋಡಿನ ಕೆ. ಚಿಕ್ಕಲಿಂಗಯ್ಯನವರು ಅಧ್ಯಕ್ಷರಾದರು. ಕೃಷ್ಣರಾಜ ಪೇಟೆಯ ವಕೀಲರಾದ ಬಿ. ಕೆಂಪೇಗೌಡರು ಉಪಾಧ್ಯಕ್ಷರಾಗಿ ಅವಿರೋಧವಾಗಿ ಚುನಾಯಿತರಾದರು.

ನಾನು ಹಿಂದೆ ಹೇಳಿರುವಂತೆ ಇದೇ ಸಮಯಕ್ಕೆ ನಡೆದ ನ್ಯಾಯ ವಿಧಾಯಕ ಸಭೆ ಚುನಾವಣೆಯಲ್ಲಿ ಮಂಡ್ಯ ಜಿಲ್ಲೆಯಿಂದ ಕರಡಹಳ್ಳಿ ಕೃಷ್ಣಪ್ಪಗೌಡರು ಕಾಂಗ್ರೆಸ್ ಅಭ್ಯರ್ಥಿಯಾಗಿ ಚುನಾಯಿತರಾದರು. ನಾನು 1940ನೆಯ ಇಸವಿ ಮೇ ಮಧ್ಯಭಾಗದಲ್ಲಿ ಜೈಲಿನಿಂದ ಬಿಡುಗಡೆಯಾಗಿ ಬಂದಿದ್ದು ಮದ್ದೂರು ತಾಲ್ಲೂಕು ಜಿಲ್ಲಾ ಬೋರ್ಡು ಚುನಾವಣೆಯಲ್ಲಿ ಸ್ನೇಹಿತರೊಡನೆ ಕೆಲಸ ಮಾಡಿದೆ. ಇದರ ನಂತರ ಮಂಡ್ಯದಲ್ಲಿ ನ್ಯಾಯವಿಧಾಯಕ ಸಭೆ ಚುನಾವಣೆಯಲ್ಲಿ ಕೆಲಸ ಮಾಡಿದೆ.

ಈ ಚುನಾವಣೆಗಳಲ್ಲಿ ಜೈಲಿನಿಂದ ಬಿಡುಗಡೆಹೊಂದಿದ ಬಿದರಕೋಟೆ ಬಿ. ತಮ್ಮೇಗೌಡರು, ಚನ್ನೇಗೌಡರು, ಮರಿಶೆಟ್ಟರು, ವಳಗೆರೆ ಹಳ್ಳಿ ಬಿಲ್ಲಪ್ಪನ ತಿಮ್ಮೇಗೌಡರು, ದೊಡ್ಡತಮ್ಮೇಗೌಡರು, ಗೆಜ್ಜಲಗೆರೆ ಬಿ. ತಿಮ್ಮಯ್ಯನವರು, ಗೌಡಗೆರೆ ನಾಗಪ್ಪನವರ ಅವಿರತ ಹೋರಾಟ ಚಿರಸ್ಮರಣೀಯವಾದುವು. ನ್ಯಾಯವಿಧಾಯಕ ಸಭೆ ಚುನಾವಣೆ ಎಣಿಕೆ ಹಿಂದಿನ ದಿನ ನಾನು ಮೈಸೂರಿಗೆ ಹೋದೆ. ಕಾರಣ ಶ್ರೀಮತಿ ಯಶೋಧರ ದಾಸಪ್ಪನವರು ಕಾಂಗ್ರೆಸ್ ಅಭ್ಯರ್ಥಿಯಾಗಿ ಸರ್ಕಾರದವತಿಯಿಂದ ಸ್ಪರ್ಧಿಸಿದ್ದ ಮುನಿವೆಂಕಟಪ್ಪ ಎನ್ನುವರ ವಿರುದ್ಧ ಸ್ಪರ್ಧಿಸಿದ್ದರು. ಮೈಸೂರಿನ ಈ ಸ್ಪರ್ಧೆಯನ್ನೂ ಫಲಿತಾಂಶವನ್ನೂ ಸರ್ಕಾರ ಮತ್ತು ಸಂಸ್ಥಾನ ಕುತೂಹಲದಿಂದ ನಿರೀಕ್ಷಿಸುತ್ತಿತ್ತು.

ಶ್ರೀಮತಿ ಯಶೋಧರಾದಾಸಪ್ಪನವರು ಗೆದ್ದ ಈ ಫಲಿತಾಂಶದಲ್ಲಿ ಅರಮನೆ ಪಾಲು ಎಷ್ಟು ಎಂಬುದು ಕುತೂಹಲವಾದುದು. ಅರಮನೆ ಜನಾನಾದವರಿಗೆ ಪ್ರತ್ಯೇಕ ಮಹಿಳಾ ಮತದಾನ ಪೆಟ್ಟಿಗೆ ಇಡಲಾಗಿತ್ತಂತೆ. ಈ ಪೆಟ್ಟಿಗೆಯಲ್ಲಿ ಅರಮನೆ ಜನಾನಾದವರು ಪೂರ್ತಾ ಕಾಂಗ್ರೆಸ್ ಉಮೇದುವಾರರಿಗೆ ಮತವಿತ್ತಿದ್ದರಂತೆ. ಈ ವಿಚಾರವನ್ನು ವಾರ್ತಾ ಪತ್ರಿಕೆಗಳು ಮುಖಪುಟಗಳಲ್ಲಿ ಪ್ರಕಟಿಸಿ ಮೈಸೂರಿನ ರಾಜಮನೆತನದವರು ಪ್ರಜಾಪ್ರಭುತ್ವ ಸಂವಿಧಾನಕ್ಕೆ ಬದ್ಧರು ಎಂಬುದನ್ನು ಎತ್ತಿ ತೋರಿಸಿದ ಫಲಿತಾಂಶ ಎಂದು ಹೊಗಳಿ ಅಗ್ರಲೇಖನ ಬರೆದವು.

ಕಾಂಗ್ರೆಸ್ ಹೊತ್ತುತಂದ ಫಲಿತಾಂಶದಿಂದ ಎಲ್ಲೆಲ್ಲೂ ಜನರಲ್ಲಿ ಸಂತೋಷ ತಾಂಡವವಾಡುತ್ತಿತ್ತು. ಎಲ್ಲೆಂದರಲ್ಲಿ ಗುಂಪುಗುಂಪಾಗಿ ಜನರು ತಮಗೆ ತೋಚಿದ ರೀತಿಯಲ್ಲಿ ವ್ಯಾಖ್ಯಾನ ನಡೆಸುತ್ತಿದ್ದರು. ಕಾಂಗ್ರೆಸ್ ಕಾರ್ಯಕರ್ತರ ಗುಂಪಿನ ನಮಗೆ ಎಲ್ಲಿಲ್ಲದ ಉತ್ಸಾಹದ ಓಡಾಟ. ಫಲಿತಾಂಶ ಬಂದ ಪ್ರಾತಃಕಾಲ ಯಾರದೋ ಮನೆಯವರು ಸುಭಾಷ್ ಚಂದ್ರಬೋಸರು ಮತ್ತು ರಾಸ್‌ಬಿಹಾರಿ ಬೋಸ್ ಆಕಾಶವಾಣಿಯಲ್ಲಿ ಭಾಷಣ ಮಾಡಿ ಕೇವಲ ನಾಲ್ಕೈದು ದಿನಗಳಲ್ಲಿ ಇಂಡಿಯಾವನ್ನು ದಾಸ್ಯದಿಂದ ಬಿಡುಗಡೆ ಮಾಡಿಸುವುದಾಗಿ ತಿಳಿಸಿದರು ಎಂದು ನಮಗೆ ಹೇಳಿ ಹೊರಟುಹೋದ.

ಈ ಸುದ್ದಿಯನ್ನು ನಾನು ಇನ್ನೂ ಹೆಚ್ಚು ವಿಷದೀಕರಿಸಿ ಜನರಲ್ಲಿ ಅತ್ಯುತ್ಸಾಹದಿಂದ ಹೇಳುತ್ತಿದ್ದೆ. ಮಪ್ತಿಯಲ್ಲಿದ್ದ ಇಬ್ಬರು ಪೋಲೀಸ್ ಅಧಿಕಾರಿಗಳು ಬಂದು ನನ್ನನ್ನು ದೇವರಾಜ ಮಾರ್ಕೆಟ್ ಪೋಲೀಸ್ ಸ್ಟೇಷನ್‌ಗೆ ಕರೆದುಕೊಂಡು ಹೋದರು. ನೀನು ಹೇಳಿದ ರೇಡಿಯೋ ವಿಚಾರ ಯಾರ ಮನೆಯಲ್ಲಿ ಕೇಳಿದ್ದು ? ಅವರ ಹೆಸರೇನು ? ಯಾವ ವೇಳೆಗೆ ಸುಭಾಷ್‌ಚಂದ್ರಬೋಸರ ಭಾಷಣ ಪ್ರಸಾರವಾಗುವುದು ? ಹೀಗೆ ಪೋಲೀಸ್ ಇನ್‌ಸ್ಪೆಕ್ಟರು ಒತ್ತಾಯದಿಂದ ವಿವರ ಕೇಳಿ ತುಂಬಾ ಬೆದರಿಸಿ ಇಷ್ಟು ವಿವರ ವನ್ನು ನಿಜವಾಗಿ ಹೇಳಿದರೆ ಬಿಡುಗಡೆ ಮಾಡಲಾಗುವುದು, ಇಲ್ಲವಾದಲ್ಲಿ ಇಂಗ್ಲೀಷ್ ಮಿಲಿಟರಿ ಕ್ಯಾಂಪಿನಲ್ಲಿ ನಿನ್ನನ್ನು ಫಿರಂಗಿ ಬಾಯಿಗೆ ಕಟ್ಟಿ ತಲೆ ಒಡೆಯುವರೆಂದು ಏನಿಲ್ಲದಂತೆ ಹಿಂಸೆ ಮಾಡಿ ತನಿಖೆ ಮಾಡಿದರು.

ರೇಡಿಯೋ ಸಮಾಚಾರ ಹೇಳಿದವನು ಯಾವ ಮನೆಯವನೋ ಏನೋ ನನಗೆ ಒಂದೂ ತಿಳಿಯದು. ಬಂದಾತ ನಮಗೆ ಮೊಗಂ .ಆಗಿ ಹೇಳಿಹೋದ. ಈ ವಿಚಾರ ವನ್ನು ಬೀದಿಯಲ್ಲಿ ಪ್ರಚಾರ ಮಾಡಬಾರದೆಂದು ನನಗೆ ಗೊತ್ತೂ ಇರಲಿಲ್ಲ. ಈ ವಿಚಾರ ಒಬ್ಬರಿಗೇನು ? ಎಲ್ಲರಿಗೂ ತಿಳಿಯಲಿ ಎಂಬ ಆಶಯ ನನ್ನದು. ಕಾಂಗ್ರೆಸ್ ಮೀಟಿಂಗ್‌ಗಳಿಗೆ ಡಂಗೂರ ಹಾಕಿದಂತೆ ಮಾಡಿದೆ, ಪೋಲೀಸರು ನನ್ನನ್ನು ಬಂಧಿಸದೆ ಹೋಗಿದ್ದರೆ ಸುಭಾಷ ಚಂದ್ರಬೋಸರ ಭಾಷಣ ಡಂಗೂರ ಹಾಕಿ ಜನರಿಗೆ ಹೇಳ ಬೇಕೆಂಬ ತೀರ್ಮಾನಕ್ಕೆ ಬಂದಿದ್ದೆ. ನನ್ನ ಬಂಧನದಿಂದಾಗಿ ನಿಂತಿತು. ಈ ವಿಚಾರ ಕೇಳಿದ ಇತರರು ಈ ವಿಚಾರ ಅನ್ಯರಿಗೆ ಹೇಳಿದರೋ ? ಬಿಟ್ಟರೋ ಅಂತು ಈ ಪ್ರಸಂಗ ನನಗೆ ನುಂಗಲಾರದ ತುತ್ತಾಯಿತು.

ಮಧ್ಯಾಹ್ನ 3 ಗಂಟೆಯಾಯಿತು ಊಟವಿಲ್ಲ ಹೊಟ್ಟೆ ಹಸಿವು, ಬದಲಿ ಅಧಿಕಾರಿ ಗಳು ಬಂದು ಈ ಹಿಂದೆ ಕೇಳಿದ್ದನ್ನೇ ಕೇಳುತ್ತಿದ್ದರು. ನಾನು ಆ ಸುದ್ದಿ ಕೇಳಿದ್ದಲ್ಲದೆ ಇನ್ನಿತರ ವಿಚಾರ ತಿಳಿಯಲೇ ತಿಳಿಯದು. ನೀವು ನನ್ನನ್ನು ತುಂಡು ತುಂಡಾಗಿ ಕತ್ತರಿ ಸಿದರೂ ಸರಿಯೆ ಎಂದು ಹೇಳಿ ಸುಸ್ತಾಗಿದ್ದ ನನಗೆ ಮಾತೇ ಹೊರಡದಾದವು. ಸಂಜೆ ಹೊತ್ತಿಗೆ ಊಟ ತರಿಸಿಕೊಟ್ಟರು, ಮನೆಗೆ ಹೋಗಲು ಹೇಳಿ ಬೆಳಿಗ್ಗೆ ಸ್ಟೇಷ್ಟನ್‌ಗೆ ಬರುವಂತೆ ಆಜ್ಞಾಪಿಸಿದರು. ಹೆಚ್ಚು ಕಡಿಮೆ ನನ್ನ ಜೊತೆಯವರೆಲ್ಲ ಜೈಲ್ಲಿನಲ್ಲಿದ್ದರು. ಮುಖಂಡರುಗಳಲ್ಲಿ ಕೆಲವರು ಹೊರಗೆ ಉಳಿದಿದ್ದರು. ತಿಂಡಿ ತಿಂದು 9 ಘಂಟೆ ಸಮಯಕ್ಕೆ ಪೋಲೀಸ್ ಸ್ಟೇಷನ್‌ಗೆ ಹೋದೆ. ಯುದ್ಧ ವಿರೋಧಿ ನೀತಿಗೆ ಸಂಬಂಧಿಸಿ ದಂತೆ ಕಾನೂನು ಹೇರಿ ಕೇಸ್ ಹಾಕಿದರು. ನನಗೂ ಜೈಲಿನಿಂದ ಹೊರಗುಳಿಯಲು ಇಷ್ಟವೂ ಇರಲಿಲ್ಲ. ಈ ಕೇಸಿಗೆ ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರು ವಾದ ಮಾಡಿ ಜನರು ಯುದ್ಧಕ್ಕೆ ಸಹಾಯಮಾಡಬಾರದೆಂದು ಪ್ರಚಾರ ಮಾಡುತ್ತಿದ್ದರು ಎಂಬ ಆಪಾದನೆ ಹೊರಿಸಿದರು. ಐದೋ ಅಥವಾ ಆರು ತಿಂಗಳು ಶಿಕ್ಷೆಯಿತ್ತರು. ಮೈಸೂರು ಜೈಲಿಗೆ ಹೋಗಿ ಸ್ನೇಹಿತರುಗಳೊಡನೆ ಸೇರಿದೆ. ಅವರೆಲ್ಲರಿಗೂ ಸುಭಾಷ್ ಚಂದ್ರಬೋಸರು

ಇಂಡಿಯಾಕ್ಕೆ ಸ್ವರಾಜ್ಯವನ್ನು ವರ್ಷದಲ್ಲಿ ತರಲಿರುವುದಾಗಿ ರೇಡಿಯೋದಲ್ಲಿ ಭಾಷಣ ಮಾಡಿದರೆಂದು ತಿಳಿಸಿ ಅವರನ್ನೆಲ್ಲ ಸಂತುಷ್ಟಗೊಳಿಸಿದೆ.

ಶಿವಮೊಗ್ಗಜೈಲಿನಲ್ಲಿ ಷಿಕಾರಿಪುರದ ಕಡೆಯ ಸಿವಿಲ್ ಖೈದಿಗಳಿಬ್ಬರು (ಕೊಟ್ಟ ಸಾಲ ತೀರಿಸದವರು) ಹೊಡೆದಾಡಿದ್ದು ನನ್ನನ್ನು ಕೋರ್ಟಿಗೆ ಸಾಕ್ಷಿ ಕಟ್ಟಿದರು. ಶಿವಮೊಗ್ಗಜೈಲಿಗೆ ಕರೆದುಕೊಂಡು ಹೋದರು ಕೋರ್ಟಿನಲ್ಲಿ ಸಾಕ್ಷಿ ಹೇಳಿದೆ. ಮೂರನೇ ದಿನ ನನ್ನನ್ನು ತೀರ್ಥಹಳ್ಳಿ ಜೈಲಿಗೆ ಕಳುಹಿಸಿಕೊಟ್ಟರು. 1941ನೆಯ ಇಸವಿ ಫೆಬ್ರುವರಿಯಲ್ಲೋ ಏನೋ ಬಿಡುಗಡೆ ಆಗಿ ಮಂಡ್ಯಕ್ಕೆ ಬಂದೆನು.

ಸ್ವರಾಜ್ಯಾನಂತರ ನಾಗಮಂಗಲ ತಾಲ್ಲೂಕಿನಲ್ಲಿ ನಡೆದ ಚುನಾವಣೆಗಳಲ್ಲಿ ಸಿಂಗಾರಿ ಗೌಡರ ಪರವಾಗಿ ನನ್ನದೇ ಪ್ರಮುಖಪಾತ್ರ. ಅಂತೆಯೆ ನಾಗಮಂಗಲ ತಾಲ್ಲೂಕು ಅಭಿವೃದ್ಧಿ ಮಂಡಲಿ ಚುನಾವಣೆಗಳಲ್ಲಿ ಕಾಂಗ್ರೆಸ್ ಜಯಭೇರಿ ಭಾರಿಸಿತು. ಶ್ರೀ ಕೆ. ಸಿಂಗಾರಿಗೌಡರು ಅಧ್ಯಕ್ಷರಾದರು. ಟಿ. ಎನ್. ಮಾದಪ್ಪಗೌಡರು ಉಪಾಧ್ಯಕ್ಷ ರಾದರು. ಎದುರು ಪಕ್ಷದವರು ಸಿಂಗಾರಿಗೌಡರ ಮಂಡ್ಯ ವಾಸ್ತವ್ಯದ ಬಗ್ಗೆ ಟೀಕೆ ಮಾಡಿದರು. ಗೌಡನ ಕೂಗು ಒಂದು ಕಡೆ, ಮನೆ ಒಂದು ಕಡೆ. ಜನರಿಗೆ ನೇರ ಸಂಪರ್ಕದ ತಾಲ್ಲೂಕು ಅಭಿವೃದ್ಧಿ ಮಂಡಳಿ ಸಹಾಯ ಸವಲತ್ತು ಪಡೆಯಲು ಸಿಂಗಾರಿ ಗೌಡರನ್ನು ಹುಡುಕಿಕೊಂಡು ಮಂಡ್ಯಕ್ಕೆ ಹೋಗಬೇಕೇನು ? ಅವರಂತಹ ಗಂಡಸು ಇನ್ನಾರೂ ನಮ್ಮಲ್ಲಿಲ್ಲವೆ ಮೊದಲಾಗಿ ಟೀಕಿಸುತ್ತಿದ್ದರು. ಈ ಟೀಕೆಗೆ ಉತ್ತರವಾಗಿ, ಸಿಂಗಾರಿಗೌಡರು ತಮ್ಮ ಮಂಡ್ಯ ವಾಸ್ತವ್ಯವನ್ನು ಬದಲಿಸಿ ಕರಡಹಳ್ಳಿಯಲ್ಲೇ ವಾಸಮಾಡ ತೊಡಗಿದರು.

ಸಿಂಗಾರಿಗೌಡರು ಮತ್ತು ಮಾದಪ್ಪಗೌಡರು ಇಬ್ಬರೂ ಐಕ್ಯತೆಯಿಂದಿದ್ದು ತಾಲ್ಲೂಕು ಅಭಿವೃದ್ಧಿ ಮಂಡಲಿ ಮೂಲಕ ತಾಲ್ಲೂಕಿನಲ್ಲಿ ಕೆರೆಕಟ್ಟೆಗಳ ನಿರ್ಮಾಣ ಕಾರ್ಯ ಮುಳ್ಳಿ ಬಿದ್ದಿದ್ದುವನ್ನು ಜೀರ್ಣೋದ್ಧಾರ ಮಾಡಿದರು.

ನಾಗಮಂಗಲದ ಚುನಾವಣೆಗಳಲ್ಲಿ ಪ್ರಮುಖ ಭಾಷಣಕಾರನಾಗಿ ತಿಂಗಳಕಾಲ ನಾನು ನಾಗಮಂಗಲದಲ್ಲಿ ತಂಗಿರುತ್ತಿದ್ದೆ. ನನ್ನ ಜೊತೆಗೆ ನನ್ನ ಊರಿನ ಪಾಲಗ್ರಹಾರದ ಕಾರ್ಯಕರ್ತರ ಪಾತ್ರವೂ ಸಹ ನನ್ನ ಇರುವಿನಷ್ಟೆ ಮುಖ್ಯವಾಗಿತ್ತು. ಪ್ರಚಾರ ಸಭೆಗಳ ಏರ್ಪಾಟು, ಚಪ್ಪರ ಗುಡಾರಗಳ ನಿರ್ಮಾಣ ಹೀಗೆ. ಚುನಾವಣೆಗಳ ಹಾಸುಹೊಕ್ಕಾಗಿ ಪಾಲಗ್ರಹಾರದ ಜನ ಮನೆ ತಪ್ಪದೆ ಕೆಲಸ ಮಾಡುತ್ತ ಇದ್ದರು. ಬಹುಶಃ ಇಂದಿಗೂ ಸಿಂಗಾರಿಗೌಡರಿಗೂ ಪಾಲಗ್ರಹಾರಕ್ಕು ಇರುವ ಬಾಂಧವ್ಯ ಹಿಂದಿನಂತೆಯೆ ಇದೆ.

ಈ ದಿಶೆಯಲ್ಲಿ ಸಿಂಗಾರಿಗೌಡರನ್ನು ಕರಡಹಳ್ಳಿಯವರು ಎನ್ನುವುದಕ್ಕಿಂತ ಪಾಲಗ್ರಹಾರದವರು ಎಂದು ಕರೆಯುವುದು ಸೂಕ್ತ. ಚುನಾವಣೆಗಳಲ್ಲಿ ಯಾವ ಬಿಡಾರ ದಲ್ಲು ಕಾಣುತ್ತಿದ್ದವರು ಪಾಲಗ್ರಹಾರದ ಯುವಕರೇ. ಹಳ್ಳಿಹಳ್ಳಿಗಳಲ್ಲಿ ಜೇಬುಗಳಿಗೆ ಕರಪತ್ರಗಳನ್ನು ಇಟ್ಟುಕೊಂಡು ಮನೆ ಮನೆ ಬಾಗಿಲು ತಿರುಗಿ ಓಟಿನ ಬೇಟೆ ನಡೆಸು

ತ್ತಿದ್ದ ಯುವಕರು ನೂರಕ್ಕೆ ಎಂಬತ್ತು ಮಂದಿ ಮುಲಗ್ರಹಾರದ ಯುವಕ ತಂಡದವರು.

ಶ್ರೀ ಎಂ. ಶಂಕರಲಿಂಗೇಗೌಡರು ಸ್ವತಂತ್ರವಾಗಿ ಚುನಾವಣೆಗೆ ಸ್ಪರ್ಧಿಗಳಾಗಿ ನಿಂತರು. ಅವರ ಪರವಾಗಿ ಚುನಾವಣಾ ಪ್ರಚಾರಕ್ಕೆ ಸ್ಥಳೀಯವಾಗಿ ಹೇಳಿಕೊಳ್ಳುವಂತಹ ಜನರು ಇರಲಿಲ್ಲ. ಅವರು ಏಕಾಕಿ ಆಗಿ ತಾವೊಬ್ಬರೇ ನಿಂತು ಹೋರಾಟ ನಡೆಸಬೇಕಿತ್ತು. ದಿನಕ್ಕೆ ಏನಿಲ್ಲ ಎಂದರು ಹತ್ತಾರು ಸಭೆಗಳಲ್ಲಿ ಭಾಷಣ ಮಾಡಿದರೂ ದಣಿದವರಲ್ಲ. ನಾಲ್ಕಾರು ಜನರಿದ್ದರೂ ಶಂಕರಲಿಂಗೇಗೌಡರಿಗೆ ಅದೊಂದು ಸಭೆ. ಆ ಸಭೆಗಳಲ್ಲಿ ನೂರಾರು ಜನಕ್ಕೆ ಕೇಳುವಷ್ಟು ದೀರ್ಘಧ್ವನಿಯಲ್ಲಿ ಭಾಷಣ ಬಿಗಿಯುತ್ತಿದ್ದ ಆ ಮಹಾರಾಯನ ಗಂಟಲು ಅದೆಷ್ಟು ದೊಡ್ಡದಾಗಿತ್ತು ದೇವರೆಬಲ್ಲ. ಶಾಂತವೇರಿ ಗೋಪಾಲಗೌಡರು, ಬಾಟ್ರು ಶಾಮಣ್ಣನವರು. ದಾವಣಗೆರೆ ಶಿವಾನಂದಸ್ವಾಮಿ ಮೊದಲಾದವರು ಅವರ ಪರ ಚುನಾವಣಾ ಪ್ರಚಾರಕ್ಕೆ ಬಂದು ಭಾಗವಹಿಸಿ ಪ್ರಚಾರ ಭಾಷಣ ಮಾಡುತ್ತಿದ್ದರು.

ಈ ಚುನಾವಣೆಯಲ್ಲೇ ಎಂ. ಎಸ್. ಗುರುಪಾದಸ್ವಾಮಿ ಅವರು ಬೆಳಕಿಗೆ ಬಂದುದು. ಸ್ವಾತಂತ್ರ್ಯಕ್ಕೆ ಅಖಂಡ ಹೋರಾಟ ನಡೆಸಿ ನಿಸ್ವಾರ್ಥಿಗಳಾಗಿ ದೇಶ ಸೇವೆ ಸಲ್ಲಿಸಿದ ಕಾಂಗ್ರೆಸ್ಸಿನ ಒಳಗುಂಪಿನ ಅಪ್ಯಾಹತ ಮೋಸದಿಂದ ಎಚ್. ಸಿ. ದಾಸಪ್ಪನವರು ಲೋಕಸಭಾ ಚುನಾವಣೆಯಲ್ಲಿ ಸೋತರು. ಈ ಸೋಲು ಕಾಂಗ್ರೆಸ್ಸಿನ ಒಳಗುಂಪನ್ನು ಬೆಳೆಸಿದ ಸಾಹುಕಾರ್ ಚನ್ನಯ್ಯನವರಿಗೆ ಮುಂದೆ ಸೋಲಿನ ಪರಂಪರೆಯನ್ನು ಹೇಗೆ ತಂದಿತೆಂಬುದನ್ನು ನೋಡುವಿರಿ ! ಬೇಳೂರಿನಲ್ಲಿ ಕೆ. ಎಂ. ಪಿ. ಪಕ್ಷದವರು ಶಂಕರಲಿಂಗೇಗೌಡರು ಮತ್ತು ಎಂ. ಎಸ್. ಗುರುಪಾದ ಸ್ವಾಮಿ ಅವರುಗಳನ್ನು ವಿವಿಧ ಪುಷ್ಪಾಲಂಕಾರ ವಾಹನದಲ್ಲಿ ಮೆರವಣಿಗೆ ಏರ್ಪಡಿಸಿದ್ದರು. ಗುರುಪಾದಸ್ವಾಮಿ ಅವರು ಬಂದಿರಲಿಲ್ಲ, ಮಾಡುತ್ತಾರಾದರು ಏನು ? ಗುರುಪಾದಸ್ವಾಮಿ ಅವರ ಪರ ಚುನಾವಣಾ ಪ್ರಚಾರಕ್ಕೆ ಬಂದಿದ್ದ ಮಳವಳ್ಳಿ ಪ್ರಸಿದ್ಧ ವಕೀಲರಾದ ಶ್ರೀ ಬಿ. ಪಿ. ನಾಗರಾಜಮೂರ್ತಿ ಅವರು ಗುರುಪಾದಸ್ವಾಮಿ ಅವರಿಗಿಂತ ಲಕ್ಷಣವಾಗಿ ಎತ್ತರದ ನಿಲುವಿನ ವ್ಯಕ್ತಿ. ಶಂಕರಲಿಂಗೇಗೌಡರು ಬಂದದ್ದೇ ನಾಗರಾಜಮೂರ್ತಿ ಅವರ ರಟ್ಟೆಗೆ ಕೈಹಾಕಿ ಎಳೆದು ಮೆರವಣಿಗೆ ವಾಹನಕ್ಕೆ ಹತ್ತಿಸಿಯೇ ಬಿಟ್ಟರು. ನಾವಂತು ಕಕ್ಕಾಬಿಕ್ಕಿ ಆದೆವು. ಶಂಕರಲಿಂಗೇಗೌಡರು ಶ್ರೀ ನಾಗರಾಜಮೂರ್ತಿ ಅವರನ್ನು ಮೆರವಣಿಗೆ ಗಾಡಿಯಲ್ಲೆ ನಿಂತು, ಜನರಿಗೆ ಪರಿಚಯಿಸುತ್ತಿದ್ದರು. "ಲೇ ನೋಡ್ರೋ ಇಲ್ಲಿ, ಇವನೇ ಗುರುಪಾದಸ್ವಾಮಿ ಎಷ್ಟು ಲಕ್ಷಣವಾಗಿದ್ದಾನೆ. ಬಹು ವಿದ್ಯಾವಂತ, ಹೆಚ್ಚಿನ, ದಾಸಪ್ಪನವರಂತೆಯೆ ಲಾಯರು ಆಗವ್ನೆ. ನಿಮ್ಮ ಓಟುಗಳನ್ನು ಇವನ ಗುಡಿಸಿಲಿನ ಗುರ್ತಿಗೆ ಹಾಕಿ ಡೆಲ್ಲಿಗೆ ಕಳುಹಿಸಿಕೊಡ್ರೋ'' ಎಂದು ಮುಂತಾಗಿ ಶಂಕರಲಿಂಗೇಗೌಡರು ಎಂದಿನ ತಮ್ಮ ಭಾಷಣದಂತೆ ಏಕವಚನದಲ್ಲಿ ವಿವರಿಸಿದರು. ಬೇಳೂರಿನ ಪ್ರಮುಖ ರಸ್ತೆಗಳಲ್ಲಿ ಮೆರವಣಿಗೆ ನಡೆಸಿಯೇ ಬಿಟ್ಟರು.

ಮೆರವಣಿಗೆ ಊರಮುಂದೆ ಬಂದು ನಿಂತನಂತರ ನಾನು ಕಾಂಗ್ರೆಸ್ ವ್ಯಾನಿನಲ್ಲಿ ನಿಂತು ಧ್ವನಿವರ್ಧಕದ ಮೂಲಕ "ಬಂಧುಗಳೇ, ಗುರುಪಾದಸ್ವಾಮಿಯವರೆಂದು ಶಂಕರಲಿಂಗೇಗೌಡರು ಮೆರವಣಿಗೆ ಮಾಡಿದ ವ್ಯಕ್ತಿ ನಮ್ಮ ಸ್ನೇಹಿತರು. ಮಂಡ್ಯದಲ್ಲಿ ವಕೀಲರಾಗಿದ್ದಾರೆ. ಅವರ ಹೆಸರು ನಾಗರಾಜಮೂರ್ತಿ. ಮಳವಳ್ಳಿಬಳಿ ರಾಗಿಬೊಮ್ಮನ ಹಳ್ಳಿಯವರು. ಮುಂತಾಗಿ ಕೂಗಿ ಕೂಗಿ ಹೇಳಿದೆ. ನನ್ನ ಮಾತಿನ ಮಧ್ಯೆ ಮಧ್ಯೆ ಶಂಕರಲಿಂಗೇಗೌಡರು ಬಾಯಿ ಹಾಕಿ, "ನೋಡ್ರೋ ಬೆಳ್ಳೂರಿನ ಜನ ಮಂಕುದಿಣ್ಣೆ ಜನ ಅಂತ ಹೇಳಿ ಆರೆಸುಳ್ಳನ ಮನೆಗೆ ಬರಿ ಸುಳ್ಳ ಬಂದ್ರೆ, ಹೊರಿಸಿದನಲ್ಲೋ ಮೂರು ಮೊರ ಸುಳ್ಳ" ಅಂತಾರಲ್ಲ ಹಂಗಾಯ್ತು, ಈ ಅಗ್ರಹಾರದ ಜವರಪ್ಪಗೌಡ ಹೇಳೋದು ಎಂದರು. ಶಂಕರಲಿಂಗೇ ಗೌಡರು ಆಡುವ ಮಾತುಗಳಿಗೆ ಶ್ರೀಸಾಮಾನ್ಯ ಜನಸ್ಪಂದಿಸಿ ಚಪ್ಪಾಳೆ ಹೊಡೆದು ಜೈಕಾರ ಮಾಡುತ್ತಿದ್ದರು. ಕಾಂಗ್ರೆಸ್ ಗುಂಪಿನವರ ಮಾತಿನತ್ತ ಜನರು ಒಲವು ತೋರುತ್ತಿರಲೇ ಇಲ್ಲ.

ನಾನು, ಮಾದಪ್ಪಗೌಡರು ಮತ್ತು ಶ್ರೀ ಕೆ. ಸಿಂಗಾರಿಗೌಡರೆ ಚುನಾವಣೆಯ ಪ್ರಮುಖ ಭಾಷಣಕಾರರು. ಸಿಂಗಾರಿಗೌಡರು ಭಾಷಣದಲ್ಲಿ ಬಹುಮಿತಿಯಾಗಿ ಮಾತನಾಡುವ ವ್ಯಕ್ತಿ.ಅವರ ಭಾಷಣವತ್ತ ಜನರು ಎಳ್ಳಷ್ಟು ಒಲವು ತೋರುತ್ತಿರಲಿಲ್ಲ. ಉಮೇದುವಾರರಲ್ಲಿ ಅವರು ಒಬ್ಬರು ಆದ್ದರಿಂದ ಅವರಿಂದಲೂ ಮಾತನಾಡಿಸುತ್ತಿದ್ದೆವು ಅವರ ಭಾಷಣದ ಸಾರಾಂಶ ಎಂದರೆ "ದಯಮಾಡಿ ನನಗೆ ಮತವಿತ್ತು ನಿಮ್ಮ ಸೇವೆ ಮಾಡಲು ಅವಕಾಶ ಮಾಡಿಕೊಡಿ ಚುನಾವಣಾ ನಂತರ ಬಂದು ನನ್ನ ಹೆಗಲ ಮೇಲೆ ಕುಳಿತು ನಿಮ್ಮ ಕೆಲಸಗಳನ್ನು ಮಾಡಿಸಿಕೊಳ್ಳಿ, ಸದಾ ನನ್ನ ಮನೆ ಬಾಗಿಲು ನಿಮಗಾಗಿ ತೆರೆದಿರುತ್ತದೆ" ಎಂಬುದು. ರಿಕಾರ್ಡ್ ಮಾಡಿದ ಭಾಷಣವೋ ಎನ್ನಬಹುದಾಗಿತ್ತು

ಟಿ. ಎನ್. ಮಾದಪ್ಪಗೌಡರು ಜನರ ಮೇಲೆ ಪರಿಣಾಮ ಬೀರುವಂತಹ ಭಾಷಣ ಮಾಡುತ್ತಿದ್ದರು. ಸಿಂಗಾರಿಗೌಡರ ವ್ಯಕ್ತಿತ್ವ ಮನೆತನ ನಿಗರ್ವದ ವಿದ್ಯಾವಂತ ಮುಂತಾಗಿ ವಿವರಿಸಿ ಮಾತನಾಡಿ ಮತದಾರರ ಮನಸ್ಸನ್ನು ಕಾಂಗ್ರೆಸ್ ಅತ್ತ ಸೆಳೆಯುತ್ತಿದ್ದರು.

ಶಂಕರಲಿಂಗೇ ಗೌಡರು ನಡೆಸುತ್ತಿದ್ದ ಚುನಾವಣಾ ಪ್ರಚಾರ ವೈಖರಿ ನಮಗಂತು ದಿಗ್ಭ್ರಮೆಗೊಳಿಸುವಂತಿತ್ತು. ನಾಗಮಂಗಲ ಚನಾವಣಾ ಪ್ರಚಾರಗಳು ಪ್ರಮುಖ ವಾಗಿ ಸಂತೆ ದಿನದಂದು ಜೋರಾಗಿರುತ್ತಿದ್ದವು. ಸಂತೆ ಮೈದಾನದ ಮಧ್ಯೆ ಶಂಕರ ಲಿಂಗೇ ಗೌಡರ ಪ್ರಚಾರ ಚಪ್ಪರ. ಆ ಚಪ್ಪರಕ್ಕೆ ಶಂಕರಲಿಂಗೇ ಗೌಡರನ್ನು ತುರಾಯಿ ಹಾಕಿದ ಪೇಟ, ನಿಲುವಂಗಿ, ದೇಹಕ್ಕೆ ಅಡ್ಡಲಾಗಿ ಹಾಕಿದ ದಲಾಯ್, ದಲಾಯ್‌ಗೆ ಸಿಕ್ಕಿಸಿದ ಉದ್ದನೆಯ ಚೂರಿ (ಸಿಕ್ಕರು ಹಾಕಿಕೊಳ್ಳುವಂತಹು) ಧರಿಸಿ ಹತ್ತಾರು ಜನರು ತಮ್ಮ ಭುಜಗಳಲ್ಲಿ ಎತ್ತಿಹಿಡಿದು ಚಪ್ಪರಕ್ಕೆ ಕರೆ ತರುತ್ತಿದ್ದರು. ಮುಂದೆ ಓಲಗ, ತಮಟೆ, ನಗಾರಿ, ಡೋಲು, ಕಹಳೆ ಮುಂತಾದ ವಾದ್ಯಗಳೊಡನೆ ಚಪ್ಪರಕ್ಕೆ ದಯ

ಮಾಡಿಸುವ ಮೆರವಣಿಗೆ. ನೋಡಿದ ಜನರು ಬೆಕ್ಕಸ ಬೆರಗಾಗಿ ನಮ್ಮ ಚಪ್ಪರದಿಂದ ನಮ್ಮನ್ನು ಲೆಕ್ಕಿಸದೆ ಎದ್ದು ಶಂಕರಲಿಂಗೇಗೌಡರ ಮೆರವಣಿಗೆಗೆ ದೌಡಾಯಿಸುತ್ತಿದ್ದ ದೃಶ್ಯ ಕಂಡು ನಾವು ತಲೆ ತಗ್ಗಿಸುವಂತಾಗುತ್ತಿತ್ತು. ಈ ಮೆರವಣಿಗೆ ವೈಖರಿ ಗುಟ್ಟನ್ನು ಹಾಲಿ ಸೆಷನ್ಸ್ ಜಡ್ಜರಾಗಿ ನಿವೃತ್ತರಾಗಿರುವ ತಟ್ಟೇಕೆರೆ ಬಳಿಯ ಕರಿ ಕ್ಯಾತನ ಹಳ್ಳಿ ಹನುಮಂತಯ್ಯನವರು ಬೋಧಿಸಿದರು. ಆ ಚುನಾವಣಾ ಕಾಲಕ್ಕೆ ಹನುಮಂತಯ್ಯನವರು ಮಂಡ್ಯದಲ್ಲಿ ಸಿಂಗಾರಿಗೌಡರ ಜೊತೆ ವಕೀಲರಾಗಿ ವೃತ್ತಿ ನಿರತರಾಗಿದ್ದರು.

ಚಪ್ಪರ ಹಾಕಲು ಇಂತಿಷ್ಟು ದುಡ್ಡು, ದಾರಿ ಉದ್ದಕ್ಕೂ ಅಡ್ಡ ಬೀಳುವವರಿಗೆ ತಲಾ ಇಷ್ಟು, ಹೂ ಹಾರಹಾಕುವವರಿಗೆ ಇಂತಿಷ್ಟು ದುಡ್ಡು, ಹೀಗೆ ಈ ಶಂಕರಲಿಂಗೇ ಗೌಡರು ಹಂಚಿದ್ದಾರೆಂದು ತಿಳಿದುಬಂತು. ಹನುಮಂತಯ್ಯನವರು ಶಂಕರಲಿಂಗೇ ಗೌಡರ ಗುಂಪಿನ ಮುಖಂಡನಿಗೆ ಸ್ವಲ್ಪ ಹೆಚ್ಚಿನ ಹಣ ತೆತ್ತು ಕಾಂಗ್ರೆಸ್ಸಿನವರ ಮೆರವಣಿಗೆ ಯನ್ನೂ ನಡೆಸಲು ತಿಳಿಸಿದರು. ಶಂಕರಲಿಂಗೇಗೌಡರು ಗೊತ್ತು ಮಾಡಿದ್ದ ವೇಳೆಗೆ ಮೊದಲೇ ಕಾಂಗ್ರೆಸ್ಸಿನ ನಮ್ಮನ್ನು ಕಹಳೆ, ತಮಟೆ, ನಗಾರಿ, ಡೋಲು ವಾದ್ಯಗಳ ಸಹಿತ ಸಂತೆ ಮೈದಾನದ ಚಪ್ಪರಕ್ಕೆ ವೈಭವದ ಮೆರವಣಿಗೆಯಲ್ಲಿ ಕರೆದೊಯ್ದರು. ಸಿಂಗಾರಿ ಗೌಡರು ಜನರ ಮೇಲೆ ಸಿಂತು ಮೆರವಣಿಗೆ ಹೋಗಲು ಒಪ್ಪಲಿಲ್ಲ. ಕಾಲು ನಡಿಗೆಯಲ್ಲೆ ಚಪ್ಪರಕ್ಕೆ ಮೆರವಣಿಗೆ ಹೋದೆವು. ಶಂಕರಲಿಂಗೇ ಗೌಡರ ಮೆರವಣಿಗೆಗಿಂತ ವೈಭವ ವಾಗಿದ್ದರೂ, ಶಂಕರಲಿಂಗೇ ಗೌಡರು ಬರುತ್ತಿದ್ದ ಠೀವಿ, ಠಕಾವುಗಳ ಮೆರಗು ನಮ್ಮ ಮೆರವಣಿಗೆಗೆ ಬರಲಿಲ್ಲ. ಜನರು ಸಹ ಶಂಕರಲಿಂಗೇ ಗೌಡರಿಗೆ ತೋರಿದ ಒಲ ವನ್ನಾಗಲಿ, ಆಸಕ್ತಿಯನ್ನಾಗಲಿ ನಮಗೆ ತೋರುತಿದ್ದ ಸನ್ನಿವೇಶ ಕಮ್ಮಿ. ಕಾರಣ ಶಂಕರ ಲಿಂಗೇ ಗೌಡರ ಭಾಷಣ ಹೇಳಿದೆನಲ್ಲ. ಬರೀ ಏಕ ವಚನದಲ್ಲಿ ಮಾತನಾಡುವುದು, ಆ ಏಕ ವಚನದ ಸಂಯೋಜನೆ ಹಾಳು ಜನಕ್ಕೆ ಏನೆನ್ನಿಸುತ್ತಿತ್ತೆಂಬುದು ಅರ್ಥವಾಗದ ಒಗಟು.

ನಾಗಮಂಗಲದಲ್ಲಿ ಸಂತೆ ಶುಕ್ರವಾರ. ಆ ಸಂತೆ ದಿನ ಎಚ್. ಸಿ. ದಾಸಪ್ಪನವರು, ರಾಚಯ್ಯನವರು ಚುನಾವಣಾ ಪ್ರಚಾರಕ್ಕೆ ಬಂದರು. ಕಾಂಗ್ರೆಸ್ ಪ್ರಚಾರಾನಂತರ "ನಾನೊಂದೆರಡು ನಿಮಿಷ ಮಾತನಾಡುತ್ತೇನೆಂದು ಶಂಕರಲಿಂಗೇಗೌಡರು ದಾಸಪ್ಪ ನವರಲ್ಲಿ ಕೇಳಿಕೊಂಡರು. ಸರ್ ನಮ್ಮ ಚಪ್ಪರದಲ್ಲಿ ಶಂಕರಲಿಂಗೇಗೌಡರು ಮಾತ ನಾಡಲು ಅವಕಾಶ ಕೊಡಬೇಡಿರೆಂದು ದಾಸಪ್ಪನವರಲ್ಲಿ ತಿಳಿಸಿದೆನಾದರೂ ಉಪಯೋಗ ವಾಗಲಿಲ್ಲ. ನಮ್ಮದನ್ನು ಹೇಳಿ ಆಗಿದೆ. ಶಂಕರಲಿಂಗೇಗೌಡರದ್ದು ಏನಿದೆ ಹೇಳಿ ಕೊಳ್ಳಲಿ" ಎಂದು ಅವಕಾಶ ನೀಡಿದರು.

ಶಂಕರಲಿಂಗೇ ಗೌಡರು ಭಟಕಲ್ ಹಾರ್ಬರ್ ವಿಚಾರ ಸರದಾರ್ ಪಟೇಲರ ವಿಚಾರವನ್ನೊಳಗೊಂಡಂತೆ ಮಾತನಾಡಿದರು. ಸರದಾರರು ನಿಧನರಾಗಿ ವರ್ಷದ

ಮೇಲಾಗಿತ್ತು. ಕಳೆದ ನಾಲ್ಕು ತಿಂಗಳ ಹಿಂದೆ ಅವರನ್ನು ಭೇಟಿ ಮಾಡಿದ್ದುದಾಗಿ ಚುನಾವಣೆಗೆ ಸಂಬಂಧವಿಲ್ಲದ ಮಾತುಗಳನ್ನು ಆಡುತ್ತಿದ್ದರು. ನಾನು ಮಧ್ಯ ಬಾಯಿ ಹಾಕಿ ಶಂಕರಲಿಂಗೇ ಗೌಡರು ಸುಳ್ಳು ಹೇಳುತ್ತಿದ್ದಾರೆಂದು ಕೂಗಾಡಿದೆ. ನನ್ನನ್ನು ದಾಸಪ್ಪನವರು ಸಮಾಧಾನ ಮಾಡಿದರು. ಶಂಕರಲಿಂಗೇ ಗೌಡರು ಕೋಪ ಕಾರುತ್ತಾ ಎದ್ದು ನಿಂತರು, "ಏನ್ರೊ ಈ ಅಗ್ರಾರ್ರ್ದೈನ ಮಾತು ಕೇಳಿ ತಲೆ ತೂಗ್ತೀರಲ್ರೋ ಮುಂಡೇವ. ನಾನು ಸರ್ದಾರ್ ಪಟೇಲರು ನಿಧನರಾದ ದಿನಾಂಕ ಸುಳ್ಳು ಹೇಳಿದ್ರೆ ಬಿಡ್ತಾ ಇದ್ರೇನ್ರೋ ಇಲ್ಲೇ ಇರೋ ಕೈಗಾರಿಕಾ ಸಚಿವ ದಾಸಪ್ಪನೋರು. ನೋಡ್ರೋ ಹೀಗೆ ಕಾಂಗ್ರೆಸ್ ಹೈಕ್ಳು ಹೊಡೆ ಗದ್ದೆ ಕುಯ್ದು ಮೆದೆ ಹಾಕೋದು. ಅವರ ಕೈಗಾರಿಕಾ ಮಂತ್ರಿ ಎದುರೇ ಸುಳ್ಳು ಹೇಳೋ ಈ ಹೈಕ್ಳು ಇವರಿಲ್ಲದಾಗ ಅದೆಷ್ಟು ಸುಳ್ಳು ಹೇಳ್ತಾರೆ ಅನ್ನೋದನ್ನ ಲೆಕ್ಕ ಹಾಕ್ಕೊಳ್ರೋ" ಎಂದು ಪ್ರಲಾಪಿಸಿ ನನ್ನದೇ ಸುಳ್ಳೆಂದು ಸಾಧಿಸಿದರು ಶಂಕರಲಿಂಗೇ ಗೌಡರು. ಅವಕಾಶ ಕೊಟ್ಟ ದಾಸಪ್ಪನವರು ಶಂಕರ ಲಿಂಗೇ ಗೌಡರ ವ್ಯವಹಾರ ಚತುರತೆಗೆ ಬೆಚ್ಚಿರಗಾಗಿ ಹೋದರು.

ಶಂಕರಲಿಂಗೇ ಗೌಡರು ತಾವು ಗೆಲ್ಲುವ ದಾರಿಯಲ್ಲಿ ನಾನಾ ತಂತ್ರಗಳನ್ನು ಬಳಸಿದರು. ಸಿಂಗಾರಿ ಗೌಡರ ಹತ್ತಿರದ ಸಂಬಂಧಿಯೊಬ್ಬರ ಊರಿಗೆ ಹೋದರು.ಮಧ್ಯಾಹ್ನದ ಊಟದ ಸಮಯ ಹಳ್ಳಿಗರು ಚುನಾವಣೆಗೂ ಕುಲಕ್ಕೂ ಗಂಟು ಹಾಕುವವರಲ್ಲವಷ್ಟೆ. ಗೌಡರನ್ನು ಊಟ ಮಾಡಲು ಕರೆದರು. "ನಿನ್ನ ಊಟವೂ ಬೇಡ ಏನೂ ಬೇಡ ನೋಡಪ್ಪ ನೆನ್ನೆಯಿಂದ ಒಂದೇ ಸಮನೆ ಪಡುವಲ ಹಳ್ಳಿಗಳನ್ನು ಓಟಿಗಾಗಿ ಸುತ್ತಾಡಲು ಹೋದೆ. ಆ ಕಡೆ ಎಲ್ಲ ಎಲ್ಲಾ ಊರುಗಳವರು ತಮ್ಮ ಓಟುಗಳನ್ನು ತಿರುಪತಿ ತಿಮ್ಮಪ್ಪ ನಿಗೆ ಮುಡುಪು ಕಟ್ಟಿದಂತೆ ನಿನ್ನ ಅಳಿಯನಿಗಾಗಿ ಮುಡಿಪು ಕಟ್ಟಿದ್ದಾರೆ. ಸದ್ಯ ಅವರು ನನಗೆ ಓಟು ಕೊಡುವುದಿರಲಿ ಕರೆದು ಕೂರಿಸಿ ಮಾತೂ ಸಹ ಆಡರು. ಈಗಿನ ಕಾಲದ ಹುಡುಗರ ಜೊತೆ ಎಲೆಕ್ಷನ್‌ಗೆ ನಿಂತುದೇ ಮೊದಲ ತಪ್ಪಾಯ್ತು. ನನ್ನ ಹೆಂಡತಿ ಕಡಗ ಬಳೆ ಅಡವಿಟ್ಟು ಎಲೆಕ್ಷನ್ ಡಿಪಾಜಿಟ್ ಮಾಡಿದೆ. ಒಡವೆಗಳನ್ನು ಕಳೆದುಕೊಳ್ಳುವ ಅವಮಾನ ಒಂದು ಕಡೆ. ನಿಮ್ಮೂರ ಪಟ್ಟಿನ ಓಟುಗಳನ್ನಾದರೂ ನನಗೆ ಕೊಡಿಸಿದರೆ ನನ್ನ ಹೆಂಡತಿ ಒಡವೆಗಳನ್ನು ಬಿಡಿಸಿಕೊಳ್ಳಲು ಡಿಪಾಜಿಟ್ ಬರುವುದೆಂದು ಹೇಳಿದರು. "ಅಷ್ಟಾದ ಮೇಲೇನು, ಬನ್ನಿ ಊಟಮಾಡಿ ನಮ್ಮೂರಿನ ಬೂತಿನ ಓಟುಗಳನ್ನು ನಿಮಗೇ ಕೊಡಿಸುತ್ತೇನೆಂದು ಮಾತು ಕೊಟ್ಟರು. ಶಂಕರಲಿಂಗೇಗೌಡರು ಊಟ ಮಾಡಿ ಹೋದರು. ಪ್ರಾತಃಕಾಲವೇ ಓಟು ನಡೆಯಿತು. ಜನರಿಗೆ ಶಂಕರಲಿಂಗೇಗೌಡರ ಕನಿಕರದ ಮಾತುಗಳನ್ನು ತಿಳಿಸಿದರು. ಎಲ್ಲರೂ ತಪ್ಪದೆ ಶಂಕರಲಿಂಗೇ ಗೌಡರಿಗೆ ಓಟು ಹಾಕಿದರು. ಸುಮಾರು 900 ಮತಗಳು ಅವರಿಗೆ ಬಂದಿದ್ದವು. ಅತ್ತ ಸಿಂಗಾರಿ ಗೌಡರು ಚುನಾವಣೆಯಲ್ಲಿ ಸೋತರು. ಮತಗಳ ಎಣಿಕೆಯಲ್ಲಿ ಭಾಗವಹಿಸಲು ಬಂದಿದ್ದ (ದೊಂದೇಮಾದ ಹಳ್ಳಿಯ ಸಿಂಗಾರಿಗೌಡರ ಸಂಬಂಧಿ) ಸೋತ ಸಿಂಗಾರಿಗೌಡರ

ಹಣೆ ಬರಹಕ್ಕೆ ನೊಂದು ತನ್ನೂರಿನ ಓಟಿನ ಕತೆ ಹೇಳಿ ಮುಗಿಸಿದರು.

ದೇವಲಾಪುರದ ಸಂತೆ. ನಮ್ಮ ಪ್ರಚಾರ ಭಾಷಣ ಚಪ್ಪರಕ್ಕೆ ಶಂಕರಲಿಂಗೇ ಗೌಡರು ಬಂದು ಸೀಗರೇಟು ಸೇದುತ್ತಾ ಕುಳಿತಿದ್ದರು. ತುಂಬಾ ಜನ ಸೇರಿದ್ದರು. ಅವರ ಮಧ್ಯ ಅಪರವಯಸ್ಕನಾದ ಹುಡುಗನೊಬ್ಬ ಹರಕಲು ಚಡ್ಡಿ ಹಾಕಿಕೊಂಡು ನಿಂತಿದ್ದ. ಶಂಕರಲಿಂಗೇ ಗೌಡರು ಆ ಹುಡುಗನನ್ನು ಕೂಗಿ ಹತ್ತಿರಕ್ಕೆ ಕರೆದರು. "ನೋಡಿ ಈ ಸ್ವರಾಜ್ಯ ತಂದ ಭೂಪರನ್ನ, ಹರಕಲ ಚಡ್ಡಿ ಬದಲು ಎರಡು ರೂಪಾಯಿನ ಚಡ್ಡಿ ಹೊಲಿಸಲಾರದ ಈ ಜನ ನಿಮಗೆ ಮಹಡಿ ಮನೆ ಕಟ್ಟಿಸಿಯಾರೆ ? ಎಂದು ಮೂದಲಿಸಿ ಆ ಹುಡುಗನ ಕೈಗೆ ಎರಡು ರೂಪಾಯಿಗಳನ್ನಿತ್ತು ಹೊಸ ಚಡ್ಡಿ ಹೊಲೆಸಿಕೊಂಡು ಜುಂ ಅಂತ ಊರಿಗೆ ಹೋಗ್ಲ" ಅಂತ ಹೇಳಿ ಕಳುಹಿಸಿದರು.

ನಾಳೆ ನಾವು ದೇವಲಾಪುರದ ಆಜು ಬಾಜು ಹಳ್ಳಿಗಳಿಗೆ ಪ್ರಚಾರಕ್ಕೆ ಯಾವ ಊರಿಗೆ ಹೋದರು ಚಡ್ಡಿ ಹೊಲೆಸಲು ಶಂಕರಲಿಂಗೇ ಗೌಡರು ಕೊಟ್ಟ ಎರಡು ರೂಪಾಯಿ ವಿಚಾರವೇ. ಹೀಗೆ ಜನ ಸಮೂಹವನ್ನೇ ತನ್ನ ಎರಡು ರೂಪಾಯಿನಿಂದ ತನ್ನತ್ತ ಸೆಳೆದಿದ್ದ ಶಂಕರಲಿಂಗೇ ಗೌಡರು ಬದುಕಿದ್ದರೆ ಇಂದಿರಾ ಗಾಂಧಿ ವಿರುದ್ಧವೂ ಸೆಣಸಿ ಜಯಗಳಿಸುತ್ತಿದ್ದರೇನೋ ಎನಿಸುತ್ತದೆ ಅಂದಿನ ಅವರ ಚುನಾವಣಾ ಪ್ರಚಾರ ವೈಖರಿ. ಶಂಕರಲಿಂಗೇ ಗೌಡರು ಗೆದ್ದ ಈ ಚುನಾವಣೆಯ ಭಾಷಣವೊಂದರಲ್ಲಿ "ನೊಡ್ರೋ ಅಳಿಯ ಸಿಂಗಾರಿಗೌಡನಿಗಿಂತ ನಾನೇ ಬುದ್ಧಿವಂತ, ನನ್ನಂತರ ಅಳಿಯ ಸಿಂಗಾರೀನೆ ಬುದ್ಧಿವಂತ. ನಾನು ಸತ್ತರೆ ಸಿಂಗಾರಿಗೌಡನಿಗೆ ನೀವೆಲ್ಲ ಓಟು ಕೊಡಬೇಕ್ರೊ." ಎಂದು ಹೇಳಿ ಚುನಾವಣಾ ಪ್ರಚಾರ ಭಾಷಣ ಮುಕ್ತಾಯ ಹಂತದಲ್ಲಿ ಶಂಕರಲಿಂಗೇ ಗೌಡರು ತಿಳಿಸಿದರು.

ಮತ್ತೊಂದು ಊರು. ವಡಾರ ಹಳ್ಳಿ ಎಂಬ ಹಳ್ಳಿ. ಅಲ್ಲಿಯ ಮತದಾನ ಕಟ್ಟೆಯ ಸಾರಾಸಗಟು ಮತಗಳು ಸಿಂಗಾರಿಗೌಡರಿಗೆ ಬರುವಂತಹವು ಮತದಾನ ಕಟ್ಟೆಗೆ ಸರಬರಾಜು ಮಾಡಬೇಕಾದ ಕಾಗದ ಪತ್ರಗಳ ಸರ್ವವ್ಯವಸ್ಥೆಯನ್ನು ನಾವು ಮಾಡಿ ಮುಗಿಸಿ ಆಗಿತ್ತು. ಪುನಃ ಆ ಹಳ್ಳಿಯನ್ನು ಚುನಾವಣಾ ದಿನ ಭೇಟಿ ಮಾಡುವ ಆವಶ್ಯಕತೆಯಿರಲಿಲ್ಲ ನಮಗೆ. ಶಂಕರಲಿಂಗೇ ಗೌಡರು ಚುನಾವಣಾ ದಿನ ಪ್ರಾತಃಕಾಲ 8 ಘಂಟೆಗೆ ವಡಾರ ಹಳ್ಳಿಗೆ ಹೋಗಿ, "ನನ್ಮಕ್ಕಳ ನೀವೇನು ನನಗೆ ಓಟು ಕೊಡೋ ಜನ ಅಲ್ಲ. ಮೈಸೂರಿಂದ ಸಾಹುಕಾರ್ ಚನ್ನಯ್ಯ ನೆನ್ನೆ ದಿನ ಬಂದು ಆಯಾ ಊರಿನ ಮಾರಿ ಗುಡಿ ರಿಪೇರಿಗೆ ಇಂತಿಷ್ಟು ಎಂದು ಹಣ ಕೊಟ್ಟು ಹೋಗವನೆ. ನಿಮ್ಮೂರ ಮಾರಿ ಗುಡಿಗೂ ಸಿಂಗಾರಿಗೌಡನ ಕೈಲಿ ಹಣ ಕೊಟ್ಟವನೆ. ಹೇಗೂ ನಿಮ್ಮೂರ ಓಟು ನಮಗೆ ಖಾಯಂ ಅಂತೇಳಿ ಸಿಂಗಾರಿ ನಿಮ್ಮ ಹಣ ಬಳಸಿಕೊಂತಾನೆ ಎಲೆಕ್ಷನ್‌ಗೆ. ಜೋಪಾನ "ಹೇಗೂ ಸಿಂಗಾರಿ ಗೌಡನಿಗೆ ಓಟು ಕೊಡೋದು ಕೊಡ್ತೀರಿ, ಸಾಹುಕಾರ ಕೊಟ್ಟಿರೋ ಹಣ ಈಸಿಕೊಂಡು ಕೊಡಿ" ಎಂದು ಮೊಗಂ ಆಗಿ ಹೇಳಿಹೋದರಂತೆ,

ಶಂಕರಲಿಂಗೇ ಗೌಡರ ಮಾತನ್ನು ನಂಬಿದ ಆ ಜನ ಮತ ಕಟ್ಟೆಗೆ ತಲೆ ಹಾಕೇ ಇಲ್ಲ. ಹಣ ಕೊಡಲು ಬರುತ್ತಾರೆಂಬ ನಿರೀಕ್ಷೆಯಲ್ಲಿ ಊರಲ್ಲೇ ಕುಳಿತರು. ನಾನು ಆಕಸ್ಮಿಕ 5 ಘಂಟೆ ಸುಮಾರಿಗೆ ಎಷ್ಟು ಓಟು ನಡೆದಿದೆ ಕೇಳಿ ಹೋಗೋಣವೆಂದು ಹೋದರೆ 100ಓಟಿನ ಒಳಗೆ ಎಂದು ಗೊತ್ತಾಯಿತು. ಶಂಕರಲಿಂಗೇ ಗೌಡರು ಹೇಳಿದ ಸಮಾಚಾರ ಜನ ತಿಳಿಸಿದರು. ಆದರೇನು ? ವೇಳೆ ಮೀರಿ ಹೋಗಿತ್ತು. ಸಿಂಗಾರಿಗೌಡರಿಗೆ 1000 ಓಟು ಕಮ್ಮಿಯಾದ್ದರಿಂದ ಶಂಕರಲಿಂಗೇ ಗೌಡರಿಗೆ 1000 ಓಟು ಕೂಡಿ ಬಂತು. ಹೀಗೆ ನಾನಾ ದಾರಿಯಲ್ಲಿ ಮತಗಳಿಸುವ ವಿಧಾನದಿಂದ ಶಂಕರಲಿಂಗೇ ಗೌಡರು ಚುನಾವಣೆಯಲ್ಲಿ ಗೆದ್ದು ಸಿಂಗಾರಿಗೌಡರು ಸೋತರು. ಮೊದಲಿಂದ ಸಕ್ಕರೆ ಕಾಯಿಲೆ ಯಿಂದ ನರಳುತಿದ್ದ ಶಂಕರಲಿಂಗೇ ಗೌಡರು ಚುನಾವಣಾನಂತರ ಎರಡು ವರ್ಷದಲ್ಲಿ ನಿಧನರಾದರು. ಬಾಯುಳ್ಳವಳು ಬರದಲ್ಲಿ ಗೆದ್ದಳು ಎಂಬಂತೆ ಶಂಕರಲಿಂಗೇ ಗೌಡರ ಬಾಯಿ ಜನರನ್ನು ಆಕರ್ಷಿಸುತ್ತಿತ್ತು. ನಮ್ಮ ಚುನಾವಣೆಗಳಲ್ಲಿ ಎದುರು ಪಕ್ಷದವರನ್ನು ಸಮರ್ಥವಾಗಿ ನಿಂದಿಸುವವರನ್ನೆ ಜನ ಮೆಚ್ಚುವುದು. ರಾಜಕೀಯ ಸಿದ್ಧಾಂತಗಳನ್ನು ಕುರಿತ ಭಾಷಣ ಯಾರಿಗೂ ಬೇಕಾಗಿರಲಿಲ್ಲ, ಈ ಹೊತ್ತಿನ ಚುನಾವಣೆಗಳಿಗೂ ಇದು ಅನ್ವಯಿಸುತ್ತದೆ.

ಶ್ರೀ ಕೆ. ಸಿಂಗಾರಿಗೌಡರು ತಾಲ್ಲೂಕು ಅಭಿವೃದ್ಧಿ ಮಂಡಳಿ ಅಧ್ಯಕ್ಷರಾಗಿಯೂ, ಉಪಾಧ್ಯಕ್ಷರಾಗಿ ಟಿ. ಎನ್. ಮಾದಪ್ಪಗೌಡರೂ ಮುಂದುವರಿಯುತ್ತಿದ್ದರು. ಮರು ಚುನಾವಣಾನಂತರ ಮಾದಪ್ಪಗೌಡರು ತಾಲ್ಲೂಕು ಅಭಿವೃದ್ಧಿ ಮಂಡಲಿ ಅಧ್ಯಕ್ಷರಾಗಲು ಮುಖಂಡರ ಮೇಲೆ ಒತ್ತಾಯ ತಂದರು. ಈ ಬಗ್ಗೆ ತೀರ್ಮಾನ ಕೈಗೊಳ್ಳಲು ಮುಖಂಡರುಗಳ ಸಭೆ ಸೇರಿತು. ಸಾಹುಕಾರ್ ಚನ್ನಯ್ಯನವರು, ಟಿ. ಮರಿಯಪ್ಪ ನವರು, ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆ. ವಿ. ಶಂಕರಗೌಡರು, ಪ್ರಧಾನ ಕಾರ್ಯ ದರ್ಶಿಯಾಗಿದ್ದ ನಾನು ಸೇರಿದಂತೆ ಸಭೆಯಲ್ಲಿ ಹಾಜರಿದ್ದ ಯಾರೂ ಮಾದಪ್ಪಗೌಡರ ಅಭಿಪ್ರಾಯಕ್ಕೆ ಅಷ್ಟು ಮನ್ನಣೆ ಕೊಡಲಿಲ್ಲ. ಈಗಿರುವಂತೆಯೇ ವ್ಯವಸ್ಥೆಯಿರಲಿ ಎಂದು ತೀರ್ಮಾನ ಕೈಗೊಂಡು ಮಾದಪ್ಪಗೌಡರಿಗೆ ತಿಳಿಸಿದೆವು.

ಈ ಒಂದು ತೀರ್ಮಾನದಿಂದ ಶ್ರೀ ಎಂ. ಆರ್. ಎಸ್. ಶಾಸ್ತ್ರಿಗಳು ಕೆರಳಿ ನಿಂತರು. ಆಗತಾನೆ ರಾಜಾಜಿ ಸ್ವತಂತ್ರಪಕ್ಷ ಸಂಘಟಿಸಿದ್ದರು. ಶ್ರೀ ಶಾಸ್ತ್ರಿಗಳು ಮಾದಪ್ಪಗೌಡರು ಮತ್ತವರ ಅನುಯಾಯಿಗಳೊಡನೆ ಸ್ವತಂತ್ರ ಪಕ್ಷ ಸೇರಿದರು. ನಾಗಮಂಗಲದಲ್ಲಿ ಒಕ್ಕಲಿಗ ಕೋಮಿನ ಸರ್ವರು ಸ್ವತಂತ್ರ ಪಕ್ಷಕ್ಕೆ ಸದಸ್ಯರಾದರು. ಟೌನ್ ಮತ್ತು ಗ್ರಾಮಾಂತರಗಳ ಶ್ಯಾನುಭೋಗರ ಗುಂಪೊಂದು ಶ್ರೀ ಎಂ. ಆರ್. ಎಸ್. ಶಾಸ್ತ್ರಿಗಳ ಅಭಿಪ್ರಾಯಕ್ಕೆ ಒಲಿಯುವ ಗುಂಪಾಗಿತ್ತು. ಸಾರ್ವತ್ರಿಕ ಚುನಾವಣೆಗೆ ಮಾದಪ್ಪಗೌಡರನ್ನು ಉಮೇದುವಾರರಾಗಿ ನಿಲ್ಲಿಸುವ ತೀರ್ಮಾನ ಕೈಗೊಂಡ ಸ್ವತಂತ್ರ ಪಕ್ಷದವರು ವರ್ಷ ಮೊದಲೇ ಪ್ರಚಾರ ಪ್ರಾರಂಭಿಸಿದರು.

ಈ ಮುನ್ನ ನಾನು ಮಾದಪ್ಪಗೌಡರ ವಿಚಾರ ಪ್ರಸ್ತಾಪಿಸಿ ಅವರ ನನ್ನ ಬಾಂಧವ್ಯ ಅವಿಚ್ಛಿನ್ನವಾದುದೆಂದು ತಿಳಿಸಿದ್ದೇನಷ್ಟೆ. ಚುನಾವಣಾ ವೇಳಾಪಟ್ಟಿ ಪ್ರಕಟವಾಗುವ ಮುನ್ನ ದಿನಗಳಂದಿನವರೆಗೂ ಎಂದಿನಂತೆ ಮಾದಪ್ಪಗೌಡರಲ್ಲಿ ಹೋಗಿ ಬರುತ್ತಿದ್ದೆನು.ಇಬ್ಬರದು ರಾಜಕೀಯವಾಗಿ ಕವಲುದಾರಿ ಆದಾಗಲು ಅವರು ಅದನ್ನುನನ್ನಲ್ಲಿ ತೋರಿಸಿಕೊಳ್ಳಲಿಲ್ಲ. ಚುನಾವಣೆ ಬಂದರೆ ನನಗೆ ಸಹಾಯ ಮಾಡಲಾರೆಯ ಎಂಬ ಒಂದೇ ಒಂದು ಮಾತನ್ನು ಕೇಳಿದವರಲ್ಲ ಮಾದಪ್ಪಗೌಡರು. ನಾನು ಮತ್ತು ಮಾದಪ್ಪ ಗೌಡರು ಗಳಸ್ಯ ಕಂಠಸ್ಯರಾಗಿದ್ದರು ಸಹ ಶ್ರೀ ಕೆ. ಸಿಂಗಾರಿಗೌಡರು ನನ್ನ ಬಗ್ಗೆ ಎಳ್ಳಷ್ಟು ಸಂಶಯ ಪಟ್ಟವರಲ್ಲ. ಆಕಸ್ಮಿಕವಾಗಿ ನಾಗಮಂಗಲದಲ್ಲಿ ಕೆ. ಸಿಂಗಾರಿಗೌಡರು ಸಿಕ್ಕಿದರೆ ಏನಣ್ಣ ! ಮಾದಪ್ಪ ಸಿಕ್ಕಿದ್ದರೋ ? ಏನು ಅಳಿದು ಸುರಿದಿರಿ ಎಂದು ಕೇಳಿ ಬಾಪ್ಪ ಕಾಫಿಕುಡಿಯೋಣವೆಂದು ಹತ್ತಾರು ನಿಮಿಷ ಮಾತನಾಡಿದನಂತರ ನಾನು ನನ್ನ ದಾರಿ ಹಿಡಿದು ಮಂಡ್ಯಕ್ಕೆ ಬರುತ್ತಿದ್ದೆ.

ಚುನಾವಣೆ ಆರಂಭವಾಯಿತು. ಪ್ರಚಾರ ಹಣಾ ಹಣೆ ನಡೆಯುತ್ತಿದೆ. ಪಾಪ ಮಾದಪ್ಪಗೌಡರಿಗೆ ಹಣದ ಮುಗ್ಗಟ್ಟು ಎದುರಿಸಿ ನಿಂತಿದೆ. ಯಾರಲ್ಲು ಮೊದಲಿಂದಲೂ ಕೈಒಡ್ಡಿದವರಲ್ಲ. ಹಣ ಬಣ್ಣಕೆಡಿಸಿತು ಎನ್ನುವಂತೆ ಅವರು ಅನ್ಯರಲ್ಲಿ ಕೈಚಾಚಲು ಹೋಗಲಿಲ್ಲ. ತಮ್ಮ ಪಿತ್ರಾರ್ಜಿತ ಆಸ್ತಿ ತರೀ ಜಮೀನು ಮಾರಿ ಚುನಾವಣೆ ಎದುರಿಸಲು ನಿಂತರು. ತಾವು ತಮ್ಮ ಪಿತ್ರಾರ್ಜಿತ ಆಸ್ತಿ ಮಾರಿದ ವಿಚಾರದಲ್ಲಿ ಚುನಾವಣಾ ಪ್ರಚಾರ ಮಾಲಿಕೆ ಪ್ರಕಟಣೆ ಅಚ್ಚು ಮಾಡಿಸಿ ಜನರಲ್ಲಿ ವಿತರಿಸಿದರು.

ಗ್ರಾಮಾಂತರಗಳಲ್ಲಿ ಪ್ರಚಾರ ಮುಗಿಸಿ ಸಂಜೆ ನಾಗಮಂಗಲದಲ್ಲಿ ಪಾಪ ಮಾದಪ್ಪಗೌಡರು ಆಸ್ತಿಮಾರಿ ಚುನಾವಣೆ ನಡೆಸುತ್ತಿದ್ದಾರೆಂಬ ಗುಲ್ಲು. ಅಂದಿನ ನನ್ನ ಭಾಷಣಕ್ಕೆ ಇದೇ ಮುಖ್ಯಗ್ರಾಸವಾಯಿತು. ನ್ಯೂಯಾರ್ಕಿನಲ್ಲಿ ಸ್ವಾಮಿ ವಿವೇಕಾನಂದರಿಗೆ ಟಾಲ್‌ಸ್ಟಾಯ್ ಸಿಕ್ಕಿ ನಿಮ್ಮ ಭಾರತದೇಶದ ಜನರ ದಾರಿದ್ರ್ಯ ಬಗೆಹರಿಯಲು ಮೊದಲು ಸ್ವರಾಜ್ಯಗಳಿಸಿ. ತಾನಾಗೇ ಜನ ಸಂಪಾದಿಸಿ ಸಂಪದ್ಭರಿತರಾಗುತ್ತಾರೆ. ಆದ್ದರಿಂದ ಬಡತನದ ನಿರ್ಮೂಲನಕ್ಕೆ ತಳಹದಿ ಸ್ವರಾಜ್ಯ ಎಂದು ಉಪದೇಶಿಸಿದರಂತೆ. ಟಾಲ್‌ಸ್ಟಾಯ್ ಮಹಾಶಯ ಹೇಳಿದ ಮಾತನ್ನೇ ಮೆಲಕು ಹಾಕುತ್ತಾ ಭಾರತಕ್ಕೆ ವಾಪಸ್ಸು ಬಂದ ಸ್ವಾಮಿ ವಿವೇಕಾನಂದರು ಪಂಜಾಬಿನಲ್ಲಿ ತಮ್ಮ ಮೊದಲ ಭಾಷಣ ಧಾರೆ ಹರಿಸಿ, ನೀವು ನಿಮ್ಮ ಪಿತ್ರಾರ್ಜಿತ ಆಸ್ತಿ ರೂಢಿಸಿಕೊಂಡು ಒಂದಕ್ಕೆರಡು ಮಾಡಿ ಶ್ರೀಮಂತರಾಗಲು ಸ್ವರಾಜ್ಯಕ್ಕೆ ಹೋರಾಡಿ. ಇಲ್ಲವಾದರೆ ಇದೇ ರೀತಿ ನಿಮ್ಮ ಬಡತನ ಮುಂದುವರಿದರೆ ನಿಮ್ಮ ಮೂಲಧನ ಪಿತ್ರಾರ್ಜಿತ ಆಸ್ತಿ ಪಾಸ್ತಿಯನ್ನು ಮಾರಿ ದರಿದ್ರರಾಗುತ್ತೀರಿ ? ಜೋಕೆ ! ಏಳಿ ; ಎದ್ದೇಳಿ ; ಸ್ವಾತಂತ್ರ್ಯ ಕಹಳೆಗೆ ಕಿವಿಗೊಡಿ ಎಂದರು. ಸ್ವಾಮಿವಿವೇಕಾನಂದರ ಮಾತಿನ ಜಾಡೆಲ್ಲಿ ಸ್ವರಾಜ್ಯ ಬಂದರೂ ಪಿತ್ರಾರ್ಜಿತ ಆಸ್ತಿಮಾರಿದ ಮಾದಪ್ಪಗೌಡರ ಕೃತಿ ಜಾಡೆಲ್ಲಿ.

ಕಾಂಗ್ರೆಸ್ಸಿಗೆ ಮತವಿತ್ತರೆ ನಿಮಗೆ ಮತ್ತು ನಿಮ್ಮ ಮಕ್ಕಳಿಗೆ ಉದ್ಯೋಗಾವಕಾಶ ಕಲ್ಪಿಸಿ ನಿಮ್ಮ ಜೀವನ ಹಸನಾಗಲು ಸಂಸ್ಥೆ ನೆರವಾಗುವುದೆಂದು ಹೇಳುವ ನಮ್ಮ ಮಾತೆಲ್ಲಿ.

ನೋಡಿ ಮಾದಪ್ಪಗೌಡರು ಕೈಲಾಗದ ಸಾಹಸಕ್ಕೆ ಕೈಹಾಕಿದರು. ತಲೆ ಇದೆ ಎಂದು ಬಂಡೆ ಗುದ್ದಿದರು. ಇದರಿಂದ ಬಂಡೆಗಾದ ನಷ್ಟವೇನು ? "ಹೊಸದರಲ್ಲೇ ಕಳ್ಳ ಗೆಜ್ಜೆಕದ್ದ" ಎಂಬ ಗಾದೆಯಂತೆ ಮೆಂಬರಾಗುವ ಮುನ್ನವೇ ತಮ್ಮ ಪಿತ್ರಾರ್ಜಿತ ಆಸ್ತಿ ಮಾರಾಟ ಮಾಡಿದ ಮಾದಪ್ಪಗೌಡರು ನಿಮ್ಮ ನಮ್ಮ ಆಸ್ತಿಯನ್ನು ಮೆಂಬರಾದರೆ ಉಳಿಸಾರೆ, ಎಲ್ಲರ ಆಸ್ತಿಯನ್ನು ಮಾರಿಸಿ ಬಿಟ್ಟಾರು ಎಚ್ಚರಿಕೆ ಎಂದು ಭಾಷಣದಲ್ಲಿ ತಿಳಿಸಿದೆ. ಜನರೋ ರೊಚ್ಚಿದ್ದು ಖುಷಿಯಾಗಿ ಚಪ್ಪಾಳೆಗಳ ಸುರಿಮಳೆಗರೆದರು. ಮಾದಪ್ಪಗೌಡರು ಸೋತರು. ಸೋತೆನೆಂದು ವಿಚಲಿತರಾಗಿರಲಿಲ್ಲ. ಮಾರನೇ ದಿನವೇ ಮಂಡ್ಯಕ್ಕೆ ಬಂದು ನನ್ನ ಮನೆಗೆ ಬಂದರು. ಉಪಹಾರ ಸ್ವೀಕರಿಸಿದರು. ಇದು ಸಿಂಗಾರಿ ಜಯವಲ್ಲ. ಜಯ ನಿನ್ನದು ನೀನೇ ನನ್ನನ್ನು ಗೆದ್ದವನು ಎಂದು **Shake Hand** ಇತ್ತರು ಅಸಮಾಧಾನಗೊಳ್ಳಲಿಲ್ಲ.

ಚುನಾವಣಾ ನಂತರ ಶಾಸ್ತ್ರಿಗಳು, ಖಾಜಿ ಸಾಹೇಬರು ಮುಂತಾದವರು ಶಂಕರ ಗೌಡರಿಗೆ ಕಾಗದ ಬರೆದು ನಾಗಮಂಗಲದ ಚುನಾವಣೆ ಜಯ ಕಾಂಗ್ರೆಸ್ಸಿನದ್ದಲ್ಲ ಜವರಪ್ಪಗೌಡರ ಜಯ ಎಂದು ಉಲ್ಲೇಖಿಸಿದ್ದನ್ನು ನನಗೆ ತೋರಿಸಿದರು.

ಶ್ರೀ ಸಿಂಗಾರಿಗೌಡರು ಮತ್ತು ಮಾದಪ್ಪಗೌಡರು ಚುನಾವಣೆಯಲ್ಲಿ ಮತ್ತೆ ಎದುರಾದುದು. ಶ್ರೀ ಟಿ. ಮರಿಯಪ್ಪನವರು ಚುನಾವಣೆಗೆ ನಿಂತಾಗ ಶ್ರೀ ಟಿ. ಮರಿಯಪ್ಪನವರನ್ನು ಒಕ್ಕಲಿಗರಲ್ಲ ಕುರುಬ ಎಂಬ ಜಾತಿ ಬೇಧದ ಹೆಸರಿನಲ್ಲಿ ಹೋರಾಟ ಮಾಡಿದ್ದು ಮಾನಸಿಕವಾಗಿ ನನಗೆ ಚುನಾವಣೆ ಎಂದರೆ ವಾಕರಿಕೆ ತರುವಂತಾಯಿತು. ನಾಗಮಂಗಲಕ್ಷೇತ್ರವೇ ಅಲ್ಲ, ಇಡೀ ಸಂಸ್ಥಾನದ ಮೇಲ್ಮೆಗಾಗಿ ಶ್ರಮಿಸಿದ; ಪ್ರಜಾರಾಜ್ಯಕ್ಕಾಗಿ ನಾಲ್ಕಾರು ಬಾರಿ ಕಾರಾಗೃಹವಾಸ ಅನುಭವಿಸಿದ ದಿವಂಗತ ಮರಿಯಪ್ಪನವರನ್ನು ಒಕ್ಕಲಿಗ ಕುರುಬ ಎಂಬ ಜಾತಿ ಬೇಧ ಕಲ್ಪಿಸಿ ಚುನಾವಣೆಯಲ್ಲಿ ಗೆಲ್ಲಲು ಮರಿಯಪ್ಪನವರು ಪಟ್ಟ ಪಾಡು ಇಂದಿಗೂ ಮೈ ಜುಮ್ಮೆನಿಸುವಂತಹುದು.

ಪಂಚಾಯ್ತಿಗಳೋ, ತಾಲ್ಲೂಕು ಅಭಿವೃದ್ಧಿಮಂಡಲಿಗಳೋ ಅಥವ ಶಾಸನ ಸಭೆಗಳ ಚುನಾವಣೆಗಳೇ ಆಗಬಹುದು. ನಾನು ಈ ಚುನಾವಣೆಗಳಲ್ಲಿ ಪಾತ್ರವಹಿಸುತ್ತಿದ್ದುದು ನಾಗಮಂಗಲ ತಾಲ್ಲೂಕಿನ ಚುನಾವಣೆಗಳಲ್ಲಿ ಮಾತ್ರ. ತಿಂಗಳಾನುಗಟ್ಟಲೆ ಕಾಲ ನಾಗಮಂಗಲದ ಪ್ರವಾಸಿಮಂದಿರದಲ್ಲಿ ಮೊಕ್ಕಾಂ ಮಾಡುತ್ತಿದ್ದೆ. ಶ್ರೀ ಕೆ. ಸಿಂಗಾರಿ ಗೌಡರೊಡನೆ ಸರಿ ಸಮಾನವಾಗಿ ಸಹಕರಿಸಿ ದುಡಿಯುತ್ತಿದ್ದ ವ್ಯಕ್ತಿ ಟಿ. ಎಸ್. ಮಾದಪ್ಪ ಗೌಡರು, ಶ್ರೀ ಕೆ. ಸಿಂಗಾರಿಗೌಡರು ಮಾದಪ್ಪಗೌಡರ ಸೋದರತ್ತೆ ಅವರ ಮಗ.

ಆರೆಂಟು ತಿಂಗಳ ಮಗುವನ್ನು ಬಿಟ್ಟು ಸಿಂಗಾರಿಗೌಡರ ತಾಯಿ ನಿಧನರಾದರು, ಮಾದಪ್ಪಗೌಡರು ಮತ್ತು ಸಿಂಗಾರಿಗೌಡರು ಒಂದೆರಡು ವಾರಗಳ ವ್ಯತ್ಯಾಸದ ಒಂದೇ ವಯಸ್ಸಿನವರು. ಈ ಎರಡು ಮಕ್ಕಳನ್ನೂ ಸಾಕುವ ಹೊಣೆಗಾರಿಕೆ ಟಿ. ಎಸ್. ಮಾದಪ್ಪಗೌಡರ ತಾಯಿಯವರ ಪಾಲಿಗೆ ಬಂತು.

ನಾನು ತಟ್ಟೇಕೆರೆಗೆ ಆಗಾಗ ಮಾದಪ್ಪಗೌಡರ ಜೊತೆಹೋಗುತ್ತಿದ್ದೆ. ಗ್ರಾಮಾಂತರಗಳಲ್ಲಿ ಪುಸ್ತಕ ಭಂಡಾರ ಹೊಂದಿದ್ದಮನೆ ಮಾದಪ್ಪಗೌಡರದು. ಪುಸ್ತಕ ಓದುವ ಗೀಳು ಮೊದಲಿಂದ ಬೆಳೆದು ಬಂದ ನನಗೆ. ಕುವೆಂಪು ಅವರ ಕಾನೂರು ಹೆಗ್ಗಡಿತಿ, ಶಿವರಾಮ ಕಾರಂತರ ಮರಳಿ ಮಣ್ಣಿಗೆ, ವೀರಕೇಸರಿ ಅವರ ದೌಲತ್ ಮುಂತಾದ ಬೃಹತ್ ಕಾದಂಬರಿಗಳು ಪ್ರಕಟವಾಗಿ ಅವರಲ್ಲಿದ್ದುವು. ಅವುಗಳನ್ನು ಓದಿ ಮುಗಿಸಲು ಮೂರು ನಾಲ್ಕು ದಿನಗಳು ಮಾದಪ್ಪಗೌಡರ ಜೊತೆ ತಟ್ಟೇಕೆರೆಯಲ್ಲಿ ತಂಗಿರುತ್ತಿದ್ದೆ.

ಕರ್ನಾಟಕದಲ್ಲಿ ಯಾವುದೇ ಉತ್ತಮ ಕೃತಿ ಪ್ರಕಟವಾದ ಕೂಡಲೇ ಮಾದಪ್ಪಗೌಡರು ಕೊಂಡು ತರುತ್ತಿದ್ದರು. ಮಾದಪ್ಪಗೌಡರ ತಮ್ಮಂದಿರಾದ ಟಿ. ಎಸ್. ಬಸಪ್ಪಗೌಡರು ಮತ್ತು ಟಿ. ಎಸ್. ಶ್ರೀಕಂಠೇಗೌಡರುಗಳು ಸಹ ಸಾಹಿತ್ಯ ಓದುವುದರಲ್ಲಿ ಮಾದಪ್ಪಗೌಡರಷ್ಟೇ ಆಸಕ್ತರಾಗಿದ್ದರು. ಪ್ರಾತಃಕಾಲ ಉಪಾಹಾರ ಸ್ವೀಕರಿಸಿ ಪುಸ್ತಕ ಭಂಡಾರದ ಕೊಠಡಿ ಸೇರಿದರಾಯ್ತು. ಎಲ್ಲರೂ ಒಂದೊಂದು ಕೃತಿ ಹಿಡಿದು ನಿಶ್ಯಬ್ದವಾಗಿ ಓದಿನಲ್ಲಿ ತಲ್ಲೀನರಾಗಿರುತ್ತಿದ್ದೆವು.

ಮಧ್ಯಾಹ್ನದ ಊಟಕ್ಕೆ ಕರೆದಾಗಲೇ ಕೃತಿಬಿಟ್ಟು ಎಚ್ಚರಗೊಳ್ಳುತ್ತಿದ್ದದ್ದು ಯಾವುದೇ ಕಾರ್ಯಾರ್ಥ ನಾಗಮಂಗಲಕ್ಕೆ ಹೋದರೆ ಮಾದಪ್ಪಗೌಡರನ್ನು ನೋಡಿ ಬರುವುದು ವಾಡಿಕೆ ನನಗೆ. ಮಾದಪ್ಪಗೌಡರು ಸಹ ಮಂಡ್ಯಕ್ಕೆ ಬಂದರೆ ನನ್ನ ಮನೆಗೆ ಊಟಕ್ಕೆ ಬರುವ ರೂಢಿ. ನನ್ನ ಮನೆ ಸಮೀಪವೆ ಅವರ ತಂಗಿ ಮಗಳ ಮನೆ. ಅವರಲ್ಲಿ ಹೋಗಿ ಯೋಗಕ್ಷೇಮ ವಿಚಾರಿಸಿ ಊಟಕ್ಕಂತು ನನ್ನ ಮನೆಗೇ ಬರುತಿದ್ದರು. ಇತ್ತೀಚೆಗೆ ನಾನು ಓದಿದ ಹೊಸ ಕೃತಿಗಳನ್ನೂ ಮಾದಪ್ಪಗೌಡರು ಓದಿದ ಹೊಸ ಕೃತಿಗಳನ್ನೂ ಕುರಿತು ಇಬ್ಬರೂ ಸೇರಿ ವಿಮರ್ಶೆಮಾಡಿ ಅಳೆದು ಸುರಿಯುತ್ತಿದ್ದೆವು ಗಂಟೆಗಟ್ಟಲೆ.

ಈ ಹಿಂದೆ ನಾನು 1937ನೆಯ ದಸರಾ ಪ್ರಜಾ ಪ್ರತಿನಿಧಿ ಸಭೆ ಕಪ್ಪು ಬಾವುಟ ಪ್ರದರ್ಶನ ಪ್ರಸ್ತಾಪಿಸಿದ್ದೇನಲ್ಲ ಆಗಿನಿಂದ ರಾಜಕೀಯವಾದ ಸಂಬಂಧ ಸಾಹಿತ್ಯಾಭಿರುಚಿ ಸಂಬಂಧ ಹೀಗಾಗಿ ನನಗೂ ಮಾದಪ್ಪಗೌಡರಿಗೂ ಹೆಚ್ಚಿನ ನಿಕಟ ಸಂಪರ್ಕ ಮಾದಪ್ಪಗೌಡರೊಡನೆ. ನಾನು ಮಂಡ್ಯ ಜಿಲ್ಲೆ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿಯಾಗಿದ್ದ ಸುಮಾರು 12 ವರ್ಷಗಳ ಕಾಲ ಮಾದಪ್ಪಗೌಡರು ಜಿಲ್ಲಾ ಕಾಂಗ್ರೆಸ್ಸಿನ ಉಪಾಧ್ಯಕ್ಷರಾಗಿದ್ದರು.

ಮೈಸೂರು ರಾಜ್ಯಾಂಗ ಸಭೆ ಮೈಸೂರು ವಿಧಾನ ಸಭೆಯಾಗಿ ಪರಿವರ್ತನೆಯಾದ

ಕಾಲಕ್ಕೆ ಶ್ರೀ ಕೆ. ಸಿಂಗಾರಿಗೌಡರು ಸದಸ್ಯರಾಗಿದ್ದರು. ಇವರ ನಂತರ ಬಂದ ವಿಧಾನ ಸಭೆ ಚುನಾವಣೆಯಲ್ಲಿ ಎಂ. ಶಂಕರಲಿಂಗೇಗೌಡರು ಕೆ. ಸಿಂಗಾರಿಗೌಡರಿಗೆ ಸ್ಪರ್ಧಿಯಾಗಿ ಚುನಾವಣೆಗೆ ನಿಂತರು. ನಾನು ಈ ಹಿಂದೆ ಪ್ರಸ್ತಾಪಿಸಿರುವಂತೆ ಸಾಹುಕಾರ್ ಚನ್ನಯ್ಯನವರು ಮತ್ತು ಟಿ. ಮರಿಯಪ್ಪನವರು ಸಿಂಗಾರಿಗೌಡರ ತಂದೆ ಅವರೊಡನೆ ಸ್ನೇಹದಿಂದಿದ್ದು ಹೊಂದಾಣಿಕೆಯಾಗಿದ್ದರು. ಆದರೆ ಮಂಡ್ಯ ಜಿಲ್ಲೆಯ ರಾಜಕೀಯದಿಂದಾಗಿ ಶ್ರೀ ಕೆ. ಸಿಂಗಾರಿಗೌಡರು ಶಂಕರಗೌಡ ಮಿತ್ರರೊಡನಿರುವುದು ಅವರಿಗೆ ಹಿಡಿಸುತ್ತಿರಲಿಲ್ಲ. ಮಾದಪ್ಪಗೌಡರ ರಾಜಕೀಯ ಮಾತ್ರ ನೇರವಾದುದು. ಅದೂ ಕಾಂಗ್ರೆಸ್ಸಿನ ಹೈಕಮ್ಯಾಂಡ್ ನಿರ್ಧಾರಕ್ಕೆ ತಲೆ ಬಾಗುತ್ತಿದ್ದರು. ಈ ಒಂದು ಪ್ರಕರಣ. ಮಾದಪ್ಪಗೌಡರಲ್ಲಿ ನನಗೆ ಹೆಚ್ಚಿನ ಪ್ರೀತ್ಯಾದರಗಳನ್ನುಂಟುಮಾಡಿತು. ಮಾದಪ್ಪಗೌಡರೊಡನೆ ದಿನಗಟ್ಟಲೆಯಿದ್ದರೂ ಕೇವಲ ಗಂಟೆ ಕಾಲವೋ ಎನ್ನುವಂತೆ ಕಾಲಗೊತ್ತಾಗದಂತೆ ಕಳೆದು ಹೋಗುತ್ತಿತ್ತು. ನಾನು ಓದಿದ ಕೃತಿಗಳ ಪರಿಚಯ ಅವರಿಗೆ ಅವರು ಓದಿದ ಕೃತಿಗಳ ಪರಿಚಯ ನನಗೆ ಹೀಗೆ ಅವುಗಳ ವಿಮರ್ಶಾತ್ಮಕವಾದ ಚರ್ಚೆಯಲ್ಲಿ ತೊಡಗಿರುತ್ತಿದ್ದೆವು. ಮಾದಪ್ಪಗೌಡರ ಮನೆ ಪಕ್ಕದಲ್ಲೇ ಅವರ ತೆಂಗಿನ ತೋಟ. ಬೇಸಿಗೆ ಬಂತೆಂದರೆ ಮಾದಪ್ಪಗೌಡರ ಸೋದರರೂ ಸೇರಿದಂತೆ ಪ್ರಾತಃಕಾಲದ ಉಪಹಾರಾನಂತರ ಕುರ್ಚಿಗಳ ಸಮೇತ ತೆಂಗಿನತೋಟ ಸೇರುತ್ತಿದ್ದೆವು. ಬಾಯಾರಿದಂತೆ ಎಳನೀರು ಸೇವಿಸುತ್ತಾ ಓದಿನಲ್ಲಿ ತಲ್ಲೀನರಾಗಿರುತ್ತಿದ್ದೆವು.

ಹೀಗೆ ನನಗೆ ಸಾಹಿತ್ಯ ಸಲ್ಲಾಪ, ಸಜ್ಜನರ ಸತ್ಸಂಗ ಈಶ್ವರನ ಕೃಪೆಯಿಂದ ನನಗೆ ದೊರಕುತ್ತಿದ್ದು ನನ್ನ ಜೀವನದ ಸಾರ್ಥಕ್ಯಕ್ಕೆ ಹೆದ್ದಾರಿಯಂತಿತ್ತು ಮಾದಪ್ಪಗೌಡರ ಪರಿಚಯ ಹಾಗೂ ಅವರ ಸಾಹಿತ್ಯ ಸಲ್ಲಾಪದ ಒಡನಾಡಿತನ.

ಶಂಕರಲಿಂಗೇಗೌಡರ ಮರಣಾನಂತರ ಬಂತು ವಿಧಾನ ಸಭಾ ಕ್ಷೇತ್ರದ ಮರು ಚುನಾವಣೆ. ಈ ಮರುಚುನಾವಣೆಯ ಮುಂದಾಳತ್ವವನ್ನು ಮಂತ್ರಿಗಳಾಗಿದ್ದ ಟಿ. ಮರಿಯಪ್ಪನವರು ವಹಿಸಿದ್ದರು. ಮಂಡ್ಯದಿಂದ ಕೆ. ವಿ. ಶಂಕರಗೌಡರು, ಜಿ. ಎಸ್. ಬೊಮ್ಮೇಗೌಡರು, ಎಚ್. ಡಿ. ಚೌಡಯ್ಯ, ಜಿ. ಮಾದೇಗೌಡರು, ಗೌಡಗೆರೆ ನಾಗಪ್ಪ ಮುಂತಾದ ಸ್ನೇಹಿತರೆಲ್ಲರು ಮರುಚುನಾವಣೆಯ ಪ್ರಚಾರಕ್ಕೆ ನಾಗಮಂಗಲದಲ್ಲಿ ತಂಗಿದ್ದು ಹಗಲು ರಾತ್ರಿ ಸಿಂಗಾರಿಗೌಡರ ಜಯಕ್ಕೆ ದುಡಿದರು. ನಾಗಮಂಗಲದ ಶ್ರೀ ಜಿ. ತಿಮ್ಮೇಗೌಡರು ಸಿಂಗಾರಿಗೌಡ ಪ್ರತಿಸ್ಪರ್ಧಿಯಾಗಿದ್ದರು.

ನಾನು, ಶಂಕರಗೌಡರು ಮತ್ತು ಜಿ. ಎಸ್. ಬೊಮ್ಮೇಗೌಡರನ್ನು ಬಿಂಡಿಗನವಿಲೆ ಮತದಾನ ಕಟ್ಟೆ ಉಸ್ತುವಾರಿ ಮತ್ತು ಕ್ಯಾನ್‌ವಾಸ್‌ಗೆ ಮರಿಯಪ್ಪನವರು ನೇಮಿಸಿದ್ದರು. ಅಲ್ಲಿನ ಮತಗಟ್ಟೆಯಲ್ಲಿ ಸಿಂಗಾರಿಗೌಡರಿಗೆ ಹೇಳಿಕೊಳ್ಳುವಷ್ಟು ಮತಗಳು ಬರುವ ನಿರೀಕ್ಷೆಯಿರಲಿಲ್ಲ. ನಾವು ಕೂಡ ಒಳಗುಟ್ಟು ಅರಿತಿದ್ದು ಕೆರೆ ಏರಿಯ ಮೇಲೆ ಅರಳೀ ಮರದ ಸೊಂಪಾದ ನೆರಳಿನಲ್ಲಿ ವಿಶ್ರಾಂತಿಗಾಗಿರುತ್ತಿದ್ದೆವು. ಮಧ್ಯಾಹ್ನ 3½

ಘಂಟೆ ಸಮಯ. ಮರಿಯಪ್ಪನವರು ಕಾರಿನಲ್ಲಿ ಬಂದರು. ನಾವು ಎದ್ದು ಕುಳಿತೆವು ಹೇಗಿದೆ ಬಲಾಬಲ ಎಂದರು. ನಮಗೆ ಚೆನ್ನಾಗಿದೆ ಸಾರ್ ಎಂದೆವು. ಗುಡ್ ಎಂದು ಹೇಳಿ ಮುಂದಿನ ಮತಕಟ್ಟೆಗೆ ಹೋದರು.

ಸಂಜೆ ಎಲ್ಲ ಮತಕಟ್ಟೆಗಳಲ್ಲಿ ನಡೆದಿರುವ ಮತಗಳ ಸಂಖ್ಯೆಯೊಡನೆ ರಾತ್ರಿ 9 ಘಂಟೆಯೊಳಗೆ ನಾಗಮಂಗಲದಲ್ಲಿ ಕಾಂಗ್ರೆಸ್ ಆಫೀಸಿಗೆ ಸೇರಿದೆವು. ಅವಸರವಸರವಾಗಿ ಮರಿಯಪ್ಪನವರು ಬಂದರು. ಎಲ್ಲಿ ಎಲ್ಲರೂ ಊಟ ಮುಗಿಸಿ ಸಮಾಧಾನವಾಗಿ ಬಂದು ಕುಳಿತುಕೊಳ್ಳಿ. ನಮಗೆಷ್ಟು ಓಟು ಬಂದಿವೆ ಲೆಕ್ಕ ಹಾಕೋಣ ಎಂದರು. ಎಂ. ಆರ್. ಎನ್. ಶಾಸ್ತ್ರಿಗಳು ನೋಟುಬುಕ್ ಪೆನ್ಸಿಲ್ ಹಿಡಿದು ಕುಳಿತರು. ಎಲ್ಲಿ ಬಿಂಡಿಗನವಲೆ ಬೂತ್‌ನಲ್ಲಿ ಆದ ಓಟುಗಳೆಷ್ಟು ನಮಗೆಷ್ಟು ನಿರೀಕ್ಷೆ ಮಾಡಬಹುದು ? ಎಂದು ಮರಿಯಪ್ಪನವರು ನನ್ನನ್ನು ಕೇಳಿದರು. 900 ಓಟುಗಳಾಗಿವೆ ನಮಗೆ 500 ಓಟುಗಳು ಬರಬಹುದೆಂದೆನು. ಶಾಸ್ತ್ರಿಗಳೇ ನೀವು ಹೋಗಿದ್ದ ಭೀಮನಹಳ್ಳಿ ಬೂತ್‌ನಲ್ಲಿ ಏನಾಗಬಹುದೆಂದು ಮರಿಯಪ್ಪನವರು ಕೇಳಿದರು ಅಲ್ಲಿ 1020 ಮತಗಳು ನಡೆದಿವೆ. 600 ಮತಗಳು ಬರಬಹುದು ಎಂದರು. ದೇವಲಾಪುರ ಯಾರು ಬನ್ನಿ ವಿವರ ಹೇಳಿ ಎಂದರು. ಅಲ್ಲಿಯೂ 1100 ಮತಗಳು ನಡೆದಿವೆ 700 ಮತಗಳು ಬರ ಬಹುದು ಎಂದು ಹೇಳಿದರು, ಹೀಗೆ ಮರಿಯಪ್ಪನವರು ಬೂತವಾರು ಎಲ್ಲಾ ಬೂತುಗಳ ಲೆಕ್ಕ ತೆಗೆದರು.

ಮರಿಯಪ್ಪನವರ ಮೊದಲನೆಯ ಸುತ್ತಿನ ಲೆಕ್ಕಾಚಾರದಂತೆ 22,000 ಮತ ಗಳು ಸಿಂಗಾರಿಗೌಡರಿಗೆ ಬಂದುವು. ಇದು ಕಮ್ಮಿ ಶಾಸ್ತ್ರಿಗಳೇ ಇನ್ನಷ್ಟು ಸೇರಿಸೋಣ ಎಂದವರೇ ಎರಡನೇ ಸುತ್ತಿನ ಲೆಕ್ಕಾಚಾರಕ್ಕೆ ಬಂದರು. ಜವರಪ್ಪಗೌಡ ಬಿಂಡಿಗ ನವಿಲೆ ಬೂತಿಗೆ ಇನ್ನೊಂದು ಎರಡುನೂರು ಸೇರಿಸೋಣವೆ ? ಎಂದರು. ಆಗಬಹುದು ಸೇರಿಸಿ ಸಾರ್ ಎಂದೆ. ಹೀಗೆ ಎಲ್ಲ ಬೂತುಗಳಿಗೂ 100 ಅಥವಾ 200ರಂತೆ ಎರಡನೇ ಸುತ್ತಿಗೆ ಸೇರಿಸಿದರು 24,000 ಮತಗಳಾದುವು. ಕುಳಿತಿದ್ದವರು ಹಾಗೆ ಚಂಗನೆ ಎದ್ದು "ಹೋಗಿ ಮಲಗಿ 24000 ಓಟುಗಳು ಸಿಂಗಾರಿಗೌಡರಿಗೆ ಬಂದಿವೆ" ಎಂದು ತಾವೂ ಮಲಗಲು ಹೋದರು. ಪ್ರಾತಃಕಾಲ ಎಣಿಕೆ ಆರಂಭವಾಗಿ ಮಧ್ಯಾಹ್ನ 2 ಘಂಟೆಗೆಲ್ಲ ಚುನಾವಣಾ ಫಲಿತಾಂಶ ಪ್ರಕಟವಾಯ್ತು. ಮರಿಯಪ್ಪನವರ ಎರಡನೇ ಸುತ್ತಿನ ಲೆಕ್ಕದಂತೆ 24 ಸಾವಿರಕ್ಕೂ ಸ್ವಲ್ಪ ಹೆಚ್ಚು ಮತಗಳೇ ಬಂದಿದ್ದವು ಸಿಂಗಾರಿ ಗೌಡರಿಗೆ.

ನನ್ನ ರಾಜಕೀಯ ಜೀವನದ 60 ವರ್ಷಗಳನ್ನು ದಾಟಿ ಮುಂದೆ ಹೋಗುತ್ತಿದ್ದೇನೆ. ನನ್ನ ಬಗ್ಗೆ ಸದಭಿಪ್ರಾಯವುಳ್ಳವರಿರುವಂತೆಯೇ ದುರಭಿಪ್ರಾಯ ಹೊಂದಿರುವ ಜನರೂ ಇದ್ದಾರೆ. ಈ ಗುಂಪುಗಳವರ ಎಲ್ಲ ರಾಜಕಾರಣಿಗೂ ಶಕ ಪುರುಷರು ಮತ್ತು ಯುಗ ಪುರುಷರುಗಳು ತಪ್ಪಿಸಿಕೊಳ್ಳಲಾಗದೆ ಹೋದರು. ಹಾಗೆ ಹಿಂತಿರುಗಿ ನೋಡಿದಾಗ

ಗಾಂಧೀಜೀ, ಭಗವಾನ್ ಬುದ್ಧ, ಸಾಕ್ರೆಟೀಸ್ ಮುಂತಾವ ಪ್ರವಾದಿಗಳ ಜೀವನ ನೋಡಿದಾಗ ಮುಂದೆ ಹೋಗೋಣ ಎನಿಸುತ್ತದೆ.

ರಾಜಕಾರಣದಲ್ಲಿ ದೊಡ್ಡದಾಗಿ ಬೆಳೆದ ವ್ಯಕ್ತಿಯ ಜೊತೆ ಯಾರಾದರು ಸ್ನೇಹ ಬೆಳೆಸಿದರೆ, ಆತನಿಗೆ ತುಂಬಾ ಸಮೀಪ ವರ್ತಿಯಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸು ತ್ತಿದ್ದರೆ—"ಅವನು ಸುಮ್ಮನೆ ಧುರೀಣರ ಜೊತೆ ಇದ್ದಾನೆಯೆ ? ಯಾವ ಯಾವ ಸಮಿತಿಗಳಲ್ಲಿ ಸದಸ್ಯನಾಗಿದ್ದಾನೋ ? ಏನೋ ? ಈತನ ದಿನನಿತ್ಯದ ಖರ್ಚಿಗೆ ಧುರೀಣರ ತಲೆ ಮೇಲೆ ಕೈಯಿಟ್ಟೇ ಜೀವನ ನಡೆಸುತ್ತಾನೆ" ಎನ್ನುವ ಮಾರ್ಮಿಕವಾದ ಮಾತು ಗಳನ್ನು ಬೆನ್ನಹಿಂದೆ ಆಡುವವರಿದ್ದಾರೆ. ಅನೇಕ ಬಾರಿ ಎದುರಿಗೇ ಈ ಮಾತುಗಳು ಕೇಳಿ ಬರುತ್ತವೆ.

ನಾನು ಮತ್ತು ಮತ್ತೆ ನಾಲ್ಕೈದು ಮಂದಿ ಮದ್ದೂರಿನಲ್ಲಿ ಕಾಂಗ್ರೆಸ್ ಸದಸ್ಯರು ಗಳನ್ನು ಸೇರಿಸುವ ಕೆಲಸ ಮಾಡುತ್ತಿದ್ದೆವು. ಅಂತಹ ಕಾಲದಲ್ಲಿ ಶಿವಪುರದ ಪಿ. ತಿರಮಲೇ ಗೌಡರ ಮನೆ ಕಾಂಗ್ರೆಸ್ ಕಾರ್ಯಕರ್ತರಿಗೆ ಹಾಗೂ ಮದ್ದೂರಿಗೆ ಹೋಗಿ ಬರುವ ಗ್ರಾಮಾಂತರ ಹಳ್ಳಿ ಮುಖಂಡರಿಗೆ ಬಿಡಾರವಾಗಿತ್ತು. ಜಮೀನಿನಿಂದ ಸಮೃದ್ಧವಾಗಿ ಬೆಳೆ ತರುತ್ತಿದ್ದ ಸಂಸಾರ. ಯಾರು ಬಂದರು ಹೋದರು ಎಂದು ಕೇಳುವಂತಿಲ್ಲ. ಊಟದ ವೇಳೆಗೆ ಬಂದವರಿಗೆಲ್ಲ ರಾಜಭೋಜನ.

1947 ರಲ್ಲಿ ಕೆ. ಚಂಗಲರಾಯ ರೆಡ್ಡಿ ಅವರ ಮಂತ್ರಿಮಂಡಲ ಕಾರ್ಯಭಾರ ವಹಿಸಿತು. ಮಂಡ್ಯಕ್ಕೆ ಬಂದಾಗ ಮಂತ್ರಿಗಳು ಕಾಂಗ್ರೆಸ್ ಕಾರ್ಯಕರ್ತರನ್ನು ವಾಹನ ಗಳನ್ನು ಕಳುಹಿಸಿ ಕರೆಸಿಕೊಳ್ಳುತಿದ್ದರು. ಸಾರ್ವಜನಿಕವಾಗಿ ನಡೆಯಬೇಕಾದ ಕೆಲಸ ಕಾರ್ಯಗಳನ್ನು ಅವರೊಂದಿಗೆ ಚರ್ಚಿಸಿ ತೀರ್ಮಾನ ತೆಗೆದು ಕೊಳ್ಳುತ್ತಿದ್ದರು. ಅಂದರೆ ಎಲ್ಲವನ್ನು ಆಯಾ ಪಕ್ಷದ ಕಾರ್ಯಕರ್ತರನ್ನು ಕೇಳಿ ಮಾಡಬೇಕೆಂಬುದು ನನ್ನ ಅಭಿ ಪ್ರಾಯವಲ್ಲ. ಆದರೆ ಯಾವನು ನಿಸ್ವಾರ್ಥವಾಗಿ ಅದೂ ಶ್ರೀ ಸಾಮಾನ್ಯನೊಂದಿಗಿದ್ದು ಕೆಲಸ ಮಾಡುತ್ತಾನೆಯೋ ಅವನನ್ನು ಗೌರವದಿಂದ ಕಾಣ ಬೇಕಾದುದು ಆ ಧುರೀಣರ ಆದ್ಯ ಕರ್ತವ್ಯ ಎಂಬುದಷ್ಟೇ ನನ್ನ ಅಭಿಪ್ರಾಯ. ಉನ್ನತಾಧಿಕಾರದಲ್ಲಿರುವವರ ಮಿತ್ರರೆಲ್ಲ ಏನಾದರೂ ಮಾಡಿಕೊಳ್ಳುತ್ತಾರೆಂಬುದು ಅನೇಕ ವೇಳೆ ಪೂರ್ವಾಗ್ರಹ ಪೀಡಿತವಾಗಿರುತ್ತದೆ.





1947 ಆಗಸ್ಟ್ 15ರ ಸರಿ ರಾತ್ರಿ ಭಾರತ ಸ್ವತಂತ್ರವಾಯಿತು. ಬ್ರಿಟಿಷರು ಸ್ವಾತಂತ್ರ್ಯಘೋಷಣೆ ಮಾಡುವ ಕಾಲಕ್ಕೆ ದೇಶೀಯ ಸಂಸ್ಥಾನಗಳು ಸ್ವತಂತ್ರ ಎಂದು ಸಹ ಘೋಷಣೆ ಮಾಡಿದ್ದರು. ದೇಶೀಯ ಸಂಸ್ಥಾನಗಳಲ್ಲಿ ಇಂಗ್ಲೀಷರ ವಿರುದ್ಧ ಹೋರಾಟ ಅಸಗತ್ಯ. ರಾಜರ ರಾಜರಾದ ಇಂಗ್ಲೀಷರು ಭಾರತ ಬಿಟ್ಟರೆ ರಾಜರು ಜನರಿಗೆ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪಿಸಲು ಸಹಾಯಕರಾಗುವರೆಂಬ ನಂಬಿಕೆ ಮಹಾತ್ಮಗಾಂಧೀಜಿ ಅವರಿಂದ ಹಿಡಿದು ಎಲ್ಲ ನಾಯಕರ ಮನಸಿನಲ್ಲಿತ್ತು. ಮೈಸೂರಿನಲ್ಲಿ ಆಕ್ಷನ್ ಕಮಿಟಿ ಹೆಸರಿನಲ್ಲಿ ಸ್ವಾತಂತ್ರ್ಯಹೋರಾಟಕ್ಕೆ ಟಿ. ಸಿದ್ಧಲಿಂಗಯ್ಯ, ತಗಡೂರು ರಾಮಚಂದ್ರ ರಾವ್ ಮತ್ತು ವೀರಕೇಸರಿ ಸೀತಾರಾಮ ಶಾಸ್ತ್ರಿ ಅಖಿಲ ಭಾರತ ನಾಯಕರಲ್ಲಿ ಹೋರಾಡಿ ಮೈಸೂರು ಕಾಂಗ್ರೆಸ್ ಸ್ಥಾಪಿಸಿಕೊಂಡರು. ಇತಿಹಾಸ ಪ್ರಸಿದ್ಧ ಶಿವಪುರ ರಾಷ್ಟ್ರಕೂಟ ಟಿ. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ರಾಷ್ಟ್ರಕೂಟದ ಹಿನ್ನೆಲೆಯಲ್ಲಿ ಭಾರತದ ಎಲ್ಲಾ ದೇಶೀಯ ಸಂಸ್ಥಾನಗಳು ಆಯಾ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಸಂಘ, ಸಂಸ್ಥೆಗಳನ್ನು ಸ್ಥಾಪಿಸಿ ಜನರಲ್ಲಿ ರಾಜರ ಮತ್ತು ಇಂಗ್ಲೀಷರ ವಿರುದ್ಧ ಅಭಿಪ್ರಾಯವನ್ನು ರೂಢಿಸಿದುವು.

ಆಯಾ ದೇಶೀಯ ಸಂಸ್ಥಾನಗಳ ಪ್ರಜೆಗಳು ಹೋರಾಟದಲ್ಲಿ ಸಾಕಷ್ಟು ಅನುಭವ ಗಳಿಸಿ ಜನಾಭಿಪ್ರಾಯ ರಾಜರ ವಿರುದ್ಧವಾಗಿದ್ದುವು. ಪರಿಸ್ಥಿತಿ ಇಷ್ಟು ಗಂಭೀರವಾಗಿದ್ದರೂ ಹೈದರಾಬಾದ್ ಮತ್ತು ಜುನಾಘಡ್ ರಾಜರುಗಳು ಸ್ವತಂತ್ರರೆಂದು ಘೋಷಿಸಿಕೊಂಡರು. ಉಕ್ಕಿನ ಮನುಷ್ಯನೆಂದು ಖ್ಯಾತಿ ಪಡೆದಿದ್ದ ಭಾರತ ಸರ್ಕಾರದ ಗೃಹಮಂತ್ರಿ ಸರ್ದಾರ್ ಪಟೇಲರು ದಿನಾರ್ಧದ ಕಾರ್ಯಕ್ರಮದಿಂದ ಅವೆರಡು ಸಂಸ್ಥಾನಗಳನ್ನು ಭಾರತದಲ್ಲಿ ವಿಲೀನವಾಗಿಸಿದರು. ಸರ್ದಾರ್ ಪಟೇಲರ ಮುಂದಾಲೋಚನೆ ಹಾಗೂ ಶಿವಪುರ ರಾಷ್ಟ್ರಕೂಟದ ಹಿನ್ನೆಲೆಯಲ್ಲಿ ದೇಶೀಸಂಸ್ಥಾನಗಳಲ್ಲಿನ ಜನ ಸಮೂಹದಲ್ಲಿ ಜಾಗೃತಿ ಮೂಡದೇ ಹೋಗಿದ್ದರೆ ಅದೆಂತಹ ಅನಾಹುತ ಭಾರತಕ್ಕೆ ಕಾಯ್ದಿತ್ತು ಎಂಬುದನ್ನು ಹೇಳಲಾಗುತ್ತಿರಲಿಲ್ಲ. ದೇವರ ದಯ ಎಲ್ಲವು ಸುಗಮವಾಗಿ ಬಗೆ ಹರಿದು ಅಶೋಕನ ಕಾಲದಿಂದಲೂ ಭಾರತ ಒಂದಾಗಿಲ್ಲದ ಸಾಧನೆಯನ್ನು 1947ನೆಯ ಆಗಸ್ಟ್ ಸರಿ ರಾತ್ರಿ ಜನ ಚೇತನ ಸಾಧಿಸಿ ಖ್ಯಾತಿಗಳಿಸಿತು.

ಮೈಸೂರು ಅರಸರಾದ ಶ್ರೀಮನ್ ಮಹಾರಾಜ ದಿವಂಗತ ಜಯ ಚಾಮರಾಜ ಒಡೆಯರು ಭಾರತ ಒಕ್ಕೂಟಕ್ಕೆ ಸೇರಲು ಮೊದಲು ಅಂಕತ ಹಾಕಿ ಜನಾಭಿಪ್ರಾಯಕ್ಕೆ ಮನ್ನಣೆಯಿತ್ತರು. ಭಾರತದ ದೇಶೀಯ ಸಂಸ್ಥಾನಗಳ ಅರಸರಲ್ಲಿ ವಿಲೀನವಾದವರಲ್ಲಿ

ಮೊದಲಿಗರಾದರು. ಇಂತಹ ಪ್ರಜಾಸತ್ತಾತ್ಮಕವಾದಿ ಅರಸರ ಆಳ್ವಿಕೆಯ ಮೈಸೂರಲ್ಲಿ ಜವಾಬ್ದಾರಿ ಸರ್ಕಾರ ಮಂತ್ರಿಮಂಡಲ ಸ್ಥಾಪನೆಯಾಗಲು 2½ ತಿಂಗಳು ಸಿಥಾಸ ವಾಯ್ತು. ಅತಿ ಚಿಕ್ಕವಯಸ್ಸಿನ ಹನುಮಂತಯ್ಯನವರು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಅವರು ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ "ಅರಮನೆ ಚಲೋ" ಚಳುವಳಿಯ ಘೋಷಣೆ ಮಾಡಿದರು.

1936ರಿಂದ ರೈತರ ಹೋರಾಟವನ್ನು 1938ರಲ್ಲಿ ಶಿವಪುರ ರಾಷ್ಟ್ರಕೂಟಗಳನ್ನು ಜಯಪ್ರದವಾಗಿ ನಡೆಸಿದ ಇಂಡುವಾಳಿನ ಹೆಚ್. ಹೊನ್ನಯ್ಯನವರ ಬೆಂಬಲಕ್ಕೆ ದಿವಾನ ರಾದ ಸರ್ ಮಿರ್ಜಾ ಅವರು ಕಾತುರರಾಗಿದ್ದರು. ಅರವಿನ್ ನಾಲಾ ರೈತರಿಗೆ ಹೆಚ್. ಹೊನ್ನಯನವರ ಹೆಸರು ಮನೆ ಮಾತಾಗಿತ್ತು. 1939 ರಲ್ಲಿ ಭಾರತಕ್ಕೆ ಹೊಸ ದಾಗಿ ವೈಸ್‌ರಾಯ್ ಬಂದರು. ಅವರನ್ನು ಮಂಡ್ಯದಲ್ಲಿ ಸ್ವಾಗತಿಸಲು ಈಗಿನ ಮಹಾತ್ಮಗಾಂಧಿ ಉದ್ಯಾನವನಕ್ಕೆ ವಿಶೇಷ ರೀತಿಯ ರೈಲ್ವೆ ಕಂಬಿ ಹಾಕಿ, ಶ್ರೀಮನ್ ಮಹರಾಜರ ವಿಶೇಷ ರೀತಿಯಾದ ರೈಲ್ವೆ ಭೋಗಿಯನ್ನು ಉದ್ಯಾನವನಕ್ಕೆ ತರುವ ವ್ಯವಸ್ಥೆ ಮಾಡಲಾಗಿತ್ತು. ಅರವಿನ್ ನಾಲಾ ಬಯಲ ಸಿಂಹನೆಂದು ಖ್ಯಾತಿ ಪಡೆದಿರುವ ಹೆಚ್. ಹೊನ್ನಯ್ಯನವರು ಕಾಂಗ್ರೆಸ್ ಸೇರಿದ ಮೇಲೆ ಇವರ ಸಹಪಾಠಿಗಳಾಗಿದ್ದ ಕೆಲವರು ಕಾಂಗ್ರೆಸ್‌ನಿಂದ ಹೊರಗೇ ಉಳಿದಿದ್ದರು. ಮಂಡ್ಯಟೌನ್‌ನಲ್ಲಿ ಅಪಾರ ಜನ ಸಂಪರ್ಕ ಹೊಂದಿದ್ದ ಹೆಚ್. ಹೊನ್ನಯ್ಯನವರು ಮಂಡ್ಯ ಟೌನ್ ಮುನಿಸಿಪಲ್ ಉಪಾಧ್ಯಕ್ಷರಾಗಿದ್ದರು.

ಈ ಒಂದು ಸ್ಥಾನ ಬಲವನ್ನು ಮುಂದು ಮಾಡಿಕೊಂಡು ಕಾಂಗ್ರೆಸ್‌ನಿಂದ ಹೊರಗುಳಿದಿದ್ದ ಹಿರಿಯರು ಎಚ್. ಹೊನ್ನಯ್ಯನವರಿಂದ ವೈಸ್‌ರಾಯರಿಗೆ ಮತ್ತು ಶ್ರೀಮನ್ ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರಿಗೆ ಪುಷ್ಪ ಹಾರಗಳನ್ನರ್ಪಿಸುವ ಅವಕಾಶ ಕಲ್ಪಿಸಿದರು. ಶ್ರೀಮನ್ ಮಹಾರಾಜರ ಮೂಲಕ ವೈಸ್ ರಾಯರಿಗೆ ಎಚ್. ಹೊನ್ನಯ್ಯನವರನ್ನು ಪರಿಚಯಿಸಿದರು. ಇದೇ ಸಂದರ್ಭ ಕಾಯ್ದಿದ್ದ ಸರ್ ಮಿರ್ಜಾ ಅವರು ಹೆಚ್. ಹೊನ್ನಯ್ಯನವರನ್ನು ತಮ್ಮ ಜೊತೆ ಇರಬೇಕೆಂದು ಮಾಡಿದ ಒತ್ತಾಯಕ್ಕೆ ಮಣಿದು ಹೊನ್ನಯ್ಯನವರು ಕಾಂಗ್ರೆಸ್ಸಿಗೆ ರಾಜೀನಾಮೆ ಸಲ್ಲಿಸಿ ಕಾಂಗ್ರೆಸ್ಸೇತರರಾಗಿ ಉಳಿದರು. 1939 ರಲ್ಲಿ ಮೈಸೂರು ಜಿಲ್ಲೆಯಿಂದ ಪ್ರತ್ಯೇಕವಾಗಿ ಮಂಡ್ಯ ಜಿಲ್ಲೆ ರಚಿತವಾಯಿತು. 1940 ರಲ್ಲಿ ಮಂಡ್ಯ ಜಿಲ್ಲೆಗೆ ದೊರೆತ ನ್ಯಾಯ ವಿಧಾಯಕ ಸಭೆ ಚುನಾವಣೆ ನಡೆಯಿತು. ಈ ಚುನಾವಣೆಗೆ ಕರಡ ಹಳ್ಳಿ ಕೆ. ಎಂ. ಕೃಷ್ಣಪ್ಪಗೌಡರು ಕಾಂಗ್ರೆಸ್ ಉಮೇದುವಾರರಾದರು ಎಚ್. ಹೊನ್ನಯ್ಯನವರು ಕಾಂಗ್ರೆಸ್ಸೇತರ ಉಮೇದುವಾರರಾಗಿ ಸ್ಪರ್ಧಿಸಿದರು. ಕಾಂಗ್ರೆಸ್ ಉಮೇದುವಾರರಾದ ಕರಡಹಳ್ಳಿ ಕೃಷ್ಣಪ್ಪಗೌಡರು ಜಯಶಾಲಿಗಳಾದರು. 1939 ನೆಯ ವರ್ಷಾಂತ್ಯದಿಂದ ಹೆಚ್. ಹೊನ್ನಯ್ಯನವರು 1947ರ ಆಗಸ್ಟ್ ವರೆಗೆ ಕಾಂಗ್ರೆಸ್ಸೇತರ ಪ್ರಮುಖರಾಗಿ

ಉಳಿದರು. 1940ನೆಯ ಇಸವಿಯ ಮೇ ಅಂತ್ಯದಲ್ಲಿ ನಡೆದ ಮಂಡ್ಯ ಹೊಸ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಮದ್ದೂರು ಕ್ಷೇತ್ರವನ್ನುಳಿದು ಜಿಲ್ಲೆಯ ಆರು ತಾಲ್ಲೂಕು ಗಳಲ್ಲಿ ಕಾಂಗ್ರೆಸ್ ಉಮೇದುವಾರರು ಅವಿರೋಧವಾಗಿ ಚುನಾಯಿತರಾದರು.

ಹೆಚ್. ಹೊನ್ನಯ್ಯನವರು ಕಾಂಗ್ರೆಸ್ ಕಾರ್ಯಕ್ರಮಗಳಿಗೆ ನೇರವಾಗಿ ಭಾಗ ವಹಿಸುತ್ತಿರಲಿಲ್ಲ. ಆದರು ಕಾಂಗ್ರೆಸ್ ಮುಖಂಡರಿಗೆ ಊಟ ತಿಂಡಿ ವ್ಯವಸ್ಥೆ ನಡೆಸುತ್ತಿದ್ದರು. ಹೊನ್ನಯ್ಯನವರು ನ್ಯಾಯವಿಧಾಯಕ ಸಭೆ ಚುನಾವಣೆಗೆ ಸ್ಪರ್ಧಿಸಿದ್ದಾಗ ನಾವು ಆರೆಂಟು ಮಂದಿ ಕಾಂಗ್ರೆಸ್ ಉಮೇದುವಾರರ ಪರ ಕೆಲಸ ಮಾಡಿ ಅವರ ಸಾಕು ಮಗ ಎಚ್. ಸಿದ್ಧರಾಮಯ್ಯನವರ ಜೊತೆ ಹೆಚ್. ಹೊನ್ನಯ್ಯ ನವರ ಮನೆ ಊಟಕ್ಕೆ ಬಂದೆವು. ಹೊನ್ನಯ್ಯನವರು ತಮ್ಮ ಹೆಂಡತಿ ಹೊಂಬಾಳಮ್ಮ ನವರನ್ನು ಕರೆದು "ಲೇ ನೋಡೇ ಇಲ್ಲಿ ಕಾಂಗ್ರೆಸ್ಸಿನ ಆನೆ ಗುರ್ತಿಗೆ ಕೆಲಸ ಮಾಡಿ ನನ್ನ ಹಸುವಿನ ಗುರ್ತು ಗೊಡ್ಡುಹಸುವೆಂದು ಹಳ್ಳಿ ಹಳ್ಳೀಲಿ ಸಾರಿ ಬಂದಿದ್ದಾರೆ. ತುಂಬಾ ದಣಿದವರೇ, ಸ್ವಲ್ಪ ತುಪ್ಪ ಹೆಚ್ಚಿಗೆ ಹಾಕಿ ಊಟಕ್ಕೆ ಬಡಿಸು" ಎಂದರು.

"ನಿಮಗೇನು ಬುದ್ಧಿಯಿಲ್ಲವೆ ? ಊಟಕ್ಕೆ ಬಂದ ಹುಡುಗರನ್ನ ಹೀಗೆಲ್ಲ ಹೀಯಾಳಿಸಿ ಮಾತನಾಡಿದರೆ ಅವಕ್ಕೆ ಊಟ ಹಿಡಿದೀತೆ ? ಸುಮ್ಮನೆ ಎದ್ದು ಕ್ಯಾನ್ ವಾಸ್ ಮಾಡಿ ಗೆಲ್ಲೋಕೆ ಪ್ರಯತ್ನ ಮಾಡಿ. ಈ ಹುಡುಗರು ಮೊದ್ಲಿಂದ ನಿಮ್ಮ ಜತೆ ಕಾಂಗ್ರೆಸ್ ಮಾಡ್ತಿದ್ದುವು. ಈಗಲೂ ಅದನ್ನೇ ಮಾಡ್ತಿವೆ. ನಿಮಗೆ ಕಾಂಗ್ರೆಸ್ ಬಿಡಲು ಅವರು ಹೇಳಿದ್ದರೆ" ಮುಂತಾಗಿ ಹೊನ್ನಯ್ಯನವರಿಗೆ ಮನ ನಾಟುವಂತೆ ಮಾತ ನಾಡಿದರು. ಅವರ ಪತ್ನಿ ಹೊಂಬಾಳಮ್ಮ ನಮ್ಮನ್ನು ಕರೆದು ಊಟ ಹಾಕಿದರು. "ಯಾವ ಕಡೆ ಹೋಗ್ತೀರಾ ? ಎಲೆಕ್ಷನ್ ಯಾರ ಕಡೆಗೆ ಚೆನ್ನಾಗಿದೆ" ಎಂದು ಕೇಳಿದರು. ಕಾಂಗ್ರೆಸ್ಸಿಗೆ ಎಂದು ಹೇಳಿದೆವು. "ನೋಡಿ ಕಾಂಗ್ರೆಸ್‌ನೋರು ನಿಮ್ಮ ಹೊನ್ನಯ್ಯ ನವರನ್ನ ಕಾಂಗ್ರೆಸ್ಸಿನಲ್ಲಿ ಉಳಿಸಿಕೊಂಡಿದ್ದರೆ ಚೆನ್ನಾಗಿರ್ತಿತ್ತು" ಎಂದು ಗೊಣಗಿ ಕೊಂಡರು.

ಚುನಾವಣೆಯಲ್ಲಿ ಹೊನ್ನಯ್ಯನವರು ಸೋತರು. ಕಾಂಗ್ರೆಸ್ ಪಕ್ಷಕ್ಕಂತು ಬರಲಿಲ್ಲ. ಇದ್ದಲ್ಲೇ ಐದಾರು ವರ್ಷಗಳು ಸಂದುವು. ಈ ಮಧ್ಯೆ ಮಂಡ್ಯ ಪುರಸಭೆ ಚುನಾವಣೆಗಳು ಬಂದು ಕಾಂಗ್ರೆಸ್ ಪಕ್ಷವು ಚುನಾವಣೆಯಲ್ಲಿ ಸ್ಪರ್ಧಿಸಿ ಬಹುಮತ ಗಳಿಸಿತು. ಹೆಚ್. ಹೊನ್ನಯ್ಯನವರ ಜೊತೆ ಮತ್ತೊಂದಿಬ್ಬರು ಕಾಂಗ್ರೆಸ್ ವಿರುದ್ಧ ಸ್ಪರ್ಧಿಸಿದವರಲ್ಲಿ ಗೆದ್ದಿದ್ದರು. ಈ ಮೊದಲು ಪುರಸಭೆಗಳಿಗೆ ಉಪಾಧ್ಯಕ್ಷರನ್ನು ಮಾತ್ರ ಚುನಾಯಿಸಲಾಗುತ್ತಿತ್ತು. ಸ್ಥಳೀಯ ಅಸಿಸ್ಟೆಂಟ್ ಕಮಿಷನರ್ ಗ್ರೇಡಿನ ಅಧಿಕಾರಿ ಅಧ್ಯಕ್ಷರಾಗಿರುತ್ತಿದ್ದರು. ಈ ಒಂದು ವ್ಯವಸ್ಥೆಗೆ ಸರ್ಕಾರ ಸುಧಾರಣೆ ತಂದು ಅಧ್ಯಕ್ಷರೂ ಸಹ ಚುನಾಯಿತ ಪ್ರತಿನಿಧಿಯಿರತಕ್ಕದೆಂದು ತೀರ್ಮಾನಿಸಿತು. ಮಂಡ್ಯ ಪುರ ಸಭೆಗೆ ಕಾಂಗ್ರೆಸ್ ಪಕ್ಷ ಸ್ಪರ್ಧಿಸಿದ್ದು ಬಹುಮತ ಪಡೆದಿತ್ತು. ವಕೀಲರಾದ ವೆಂಕಟಕೃಷ್ಣಯ್ಯ

ನವರು ಕಾಂಗ್ರೆಸ್ ಪಕ್ಷದಿಂದ ಅಧ್ಯಕ್ಷರಾಗಿ ಚುನಾಯಿತರಾದರು.

ಭಾರತಕ್ಕೆ ಸ್ವಾತಂತ್ರ್ಯ ಘೋಷಣಾನಂತರ ಹೆಚ್. ಹೊನ್ನಯ್ಯನವರಿಗೆ ಕಾಂಗ್ರೆಸ್ ಅತ್ತ ಮನಸ್ಸು ವಾಲುತಿತ್ತು. ಕೆ. ವಿ. ಶಂಕರಗೌಡರು ನ್ಯಾಯ ಶಾಸ್ತ್ರ ಪಾರಂಗತರಾಗಿ ಬೆಳಗಾಂನಿಂದ ಬಂದಿದ್ದು ಶ್ರೇಷ್ಠ ನ್ಯಾಯಾಧೀಶರಾಗಿದ್ದ ದಿವಂಗತ ಎಚ್. ಹೊಂಬೇಗೌಡರಲ್ಲಿ ಕಿರಿಯ ವಕೀಲರಾಗಿದ್ದರು. ಆಗತಾನೆ ಲಾ ಪಾಸು ಮಾಡಿ ಬಂದ ಎಂ. ಕೆ. ಶಿವನಂಜಪ್ಪ, ವಿ.ಸಿ.ಕೆ. ಗೌಡ ಈ ಮೂವರು ಸೇರಿ ವಕೀಲಿ ಆಫೀಸು ತೆರೆದರು ವಿ. ಸಿ. ಕೆ. ಗೌಡರನ್ನು ಬಿಟ್ಟು ಶಿವನಂಜಪ್ಪ ಮತ್ತು ಶಂಕರ ಗೌಡರು ದಿನದ ಹೆಚ್ಚುಕಾಲವನ್ನು ರಾಜಕೀಯಕ್ಕೆ ವಿನಿಯೋಗಿಸುತ್ತಿದ್ದು. ಕ್ರಮೇಣ ವಕೀಲಿ ವೃತ್ತಿಯಿಂದಲೇ ದೂರವಾದರು.

ಎಚ್. ಹೊನ್ನಯ್ಯನವರು ಯುವಕರ ಗುಂಪಾದ ನಮ್ಮಲ್ಲಿ ದಿನದ ಬಹು ಪಾಲು ಕಾಲ ಕಳೆಯುತ್ತಿದ್ದರು. ಈ ಸಮಯ ಸಂದರ್ಭವನ್ನು ಉಪಯೋಗಿಸಿಕೊಂಡು ಎಚ್. ಹೊನ್ನಯ್ಯನವರನ್ನು ಕಾಂಗ್ರೆಸ್ಸಿಗೆ ಸೇರಿಸಿಕೊಳ್ಳುವಂತೆ ಶಿವನಂಜಪ್ಪನವರ ಮನೆಯವರು ನಮ್ಮನ್ನು ಒತ್ತಾಯಿಸುತ್ತಿದ್ದರು. ಕಾಂಗ್ರೆಸ್ ಮೆಂಬರಾಗಿ ಎಂದು ಎಚ್. ಹೊನ್ನಯ್ಯನವರನ್ನು ನಾನು ಶಂಕರ ಗೌಡರು ಒತ್ತಾಯ ಮಾಡುತ್ತಿದ್ದೆವು. ಆ ಬಗ್ಗೆ ಅವರು ಏನೊಂದು ಅಭಿಪ್ರಾಯವನ್ನು ವ್ಯಕ್ತ ಪಡಿಸಲು ಹಿಂಜರಿಯುತ್ತಿದ್ದರು. "ಏನೋ ನೀವು ಹುಡುಗರು ಊರಿಗೆಲ್ಲ ಮುಂದಾಗಿ ಜಿಲ್ಲೆಯಲ್ಲಿ ಕಾಂಗ್ರೆಸ್ ಕಟ್ಟಿ, ಕಾಂಗ್ರೆಸ್ ಬೆಳೆಸಿದವ ನಾನು, ಕೆಲವರು ಮೂರ್ಖರಾದ ಸ್ವಾರ್ಥಿ ಸ್ನೇಹಿತರಿಂದಾಗಿ ಕಾಂಗ್ರೆಸ್‌ನಿಂದ ಸಿಡಿದು ಬಂದವನು. ದೇಶದ ಎಲ್ಲ ಮುಖಂಡರುಗಳು ಕಂಡವರು. ನಾಚಿಕೆಲ್ಲದೆ ಕಾಂಗ್ರೆಸ್ಸಿಗೆ ಬರುವುದಾದರು ಹೇಗೆ ?" ಎಂಬ ಆತಂಕ ವ್ಯಕ್ತಪಡಿಸಿದರು. 1947ನೆಯ ಸೆಪ್ಟೆಂಬರ್ ಮೊದಲ ವಾರ "ಅರಮನೆ ಚಲೋ" ಆಂದೋಳನಕ್ಕೆ ಕಾಂಗ್ರೆಸ್ ಅಧ್ಯಕ್ಷ ಕೆ. ಹನುಮಂತಯ್ಯ "ಹಸಿರು ಬಾವುಟ" ಬೀಸಿದರು. ಬೆಂಗಳೂರಿ ನಿಂದ ಜಾಥಾಗಳು ಮೈಸೂರಿನತ್ತ ಹೊರಟವು. ಜಾಥಾಗಳನ್ನು ತಡೆಯಲು ಬೆಂಗಳೂರಿನ ಮೈಸೂರು ಬ್ಯಾಂಕ್ ಚೌಕದಲ್ಲಿ ಕಾಲೇಜ್ ವಿದ್ಯಾರ್ಥಿನಿಯರ ಮೇಲೆ ಗುಂಡು ಹಾರಿಸಿದ ಸುದ್ದಿ ಎಚ್. ಹೊನ್ನಯ್ಯನವರಿಗೆ ಗೊತ್ತಾಗಿತ್ತು.

ಮಂಡ್ಯ ಕ್ಲಬ್ ಮುಂದೆ ಒಂದು ಮೋಟು ಮರ ಈಗ ಚಿಗುರಿ ಪಲ್ಲೈಸುತ್ತಿದೆ. ದಿನವೂ ಶಂಕರ ಗೌಡ, ಶಿವಸಂಜಪ್ಪ ಮತ್ತು ನಾನು ಮೂವರು ಅಲ್ಲಿ ಸಂಜೆ ಕಾಲ ಕಳೆವ ವೇಳೆ, ನಮ್ಮನ್ನು ಹುಡುಕಿಕೊಂಡು ಎಚ್. ಹೊನ್ನಯ್ಯನವರು ಬಂದರು. "ಏನ್ರಯ್ಯ ಆರ್ಕಾಟ್ ದಿವಾನ ಮಿರ್ಜಾನ್ನ ಮೀರಿಸಿದ್ದಾನೆ. ಬೆಂಗಳೂರಿನಲ್ಲಿ ಕಾಲೇಜ್ ಹುಡುಗಿ ಯರು ಮೈಸೂರಿಗೆ ಜಾಥಾ ಬರುವಾಗ ಗುಂಡು ಹಾರಿಸಿದ್ದಾರಂತೆ. ಎಷ್ಟು ಜನ ಸತ್ತರೋ ಏನೋ ಸಂಖ್ಯೆ ಗೊತ್ತಿಲ್ಲ." ಎಂದರು

ಎಚ್. ಹೊನ್ನಯ್ಯನವರು ದಿವಾನರಾದ ಆರ್ಕಾಟ್ ರಾಮಸ್ವಾಮಿ ಮೊದಲಿ

ಯಾರರ ಮೇಲೆ ರೇಗಾಡಿದರು. ಮೈಸೂರಿಗೆ ಬಂದವರೆಲ್ಲ ಕಾವೇರಿ ನೀರು ಕುಡಿದರೆ ಹೀಗಾಗುತ್ತಾರಲ್ಲ ಮುಖ್ಯವಾಗಿ ರಾಮಸ್ವಾಮಿ ಮೊದಲಿಯಾರರ ನಡವಳಿಕೆ ಬಗ್ಗೆ ಟೀಕೆ ಟಿಪ್ಪಣಿಮಾಡಿದರು. ನಾವು ಸಹ ಸರ್ಕಾರದ ಬಗ್ಗೆ ನಾನಾ ದೂರುಗಳನ್ನು ಹೇಳಿದೆವು. ಅಂದಿನ ದಿನವೆಲ್ಲ ಎಚ್. ಹೊನ್ನಯ್ಯನವರು ಹಳೆ ಸಂಗಾತಿಗಳ ಸಹವಾಸಕ್ಕೆ ಹೋಗ ಲಿಲ್ಲ. ದೇಶದ ರಾಜಕೀಯ ವಿದ್ಯಮಾನಗಳನ್ನು ಕುರಿತು ಚರ್ಚಿಸಿದೆವು. ರಾತ್ರಿ 9 ಘಂಟೆಗೆ ನಮ್ಮ ನಮ್ಮ ಮನೆಗೆ ಹೋಗಿ ಊಟಮಾಡಿ ಎಚ್. ಸಿ. ಚನ್ನಯ್ಯನವರ ಸಂಜಯ ಟಾಕೀಸ್ ಬಳಿ ಪುನಃ ಸೇರಿದೆವು.

ಪ್ರಾತಃಕಾಲ ಹೆಂಡದ ಅಂಗಡಿಗಳ ಪಿಕೆಟಿಂಗ್ ಮತ್ತು ಈಚಲಮರಗಳಿಗೆ ಸೇಂದಿ ಇಳಿಸಲು ಕಟ್ಟಿರುವ ಮಡಕೆಗಳನ್ನು ಒಡೆದುಹಾಕಲು ಕಾರ್ಯಕ್ರಮ ಹಾಕಿಕೊಂಡೆವು. ಶ್ರೀ ಕೆ. ವಿ. ಶಂಕರಗೌಡರ ಶೋಭನ ಪ್ರಸ್ತವು ಅಂದೇ ರಾತ್ರಿ ನಿಶ್ಚಯವಾಗಿತ್ತು. ಏನೇ ಆಗಲಿ ಬೆಳಗಿನ ಕಾರ್ಯಕ್ರಮಕ್ಕೆ ಎಚ್. ಹೊನ್ನಯ್ಯನವರನ್ನು ಕರೆದುಕೊಂಡು ಹೋಗಲೇಬೇಕು. ಅವರ ಸಿದ್ಧತೆ ಬಗ್ಗೆ ವ್ಯವಸ್ಥೆಮಾಡಲು ನಾನು ಶಿವನಂಜಪ್ಪ, ಎಚ್.ಸಿ. ಚನ್ನಯ್ಯ ಸೇರಿ ಶಿವನಂಜಪ್ಪನವರ ಮನೆಗೆ ಹೋಗಿ ಹೆಣ್ಣುಮಕ್ಕಳಾದಿಯಾಗಿ ಎಲ್ಲರನ್ನು ಸೇರಿಸಿ ನಾಳೆ ಪ್ರಾತಃಕಾಲ ಎಚ್. ಹೊನ್ನಯ್ಯನವರನ್ನು ಕರೆದುಕೊಂಡು ಸತ್ಯಾಗ್ರಹಕ್ಕೆ ಹೊರಡುತ್ತೇವೆ. ಹೆಣ್ಣುಮಕ್ಕಳಾದ ನೀವೆಲ್ಲರೂ ಸೇರಿ ಹೊನ್ನಯ್ಯ ನವರಿಗೆ ಆರತಿ ಬೆಳಗಿ. ರಜಪೂತ ಹೆಂಗಸರು ಗಂಡಸರನ್ನು ಯುದ್ಧಭೂಮಿಗೆ ಕಳುಹಿಸು ತಿದ್ದರಲ್ಲ ಹಾಗೆ ಸತ್ಯಾಗ್ರಹಕ್ಕೆ ಹೋಗಿ ಬನ್ನಿ ಎಂದು ದೃಷ್ಟಿತೆಗೆದು ಕಳುಹಿಸಿಕೊಡಿ ಎಂದು ವ್ಯವಸ್ಥೆ ಮಾಡಿದೆವು.

ಪ್ರಾತಃಕಾಲ ನಾನು, ಶಂಕರಗೌಡರು, ಡಿ. ವಿದ್ಯಾಧರಪ್ಪ ಮತ್ತು ಎಚ್. ಹೊನ್ನಯ್ಯನವರು ಒಂದೆಡೆ ಸೇರಿ ಪೋಲೀಸರಿಗೆ ಗೊತ್ತಾಗದಂತೆ ಪಾಪೇಗೌಡರ ಹೆಂಡದ ಲಾರಿಯಲ್ಲಿ ಕುಳಿತು ಗರುಡನಹಳ್ಳಿ, ಹಲ್ಲೇಗೆರೆ ಗ್ರಾಮಗಳತ್ತ ಹೋಗಲು ನಿರ್ಧರಿಸಿದೆವು. ಮನೆಯಿಂದ ಎಚ್. ಹೊನ್ನಯ್ಯನವರು ಹೊರಟರು. ಅವರ ನಾದಿನಿಯರಾದ ಪುಟ್ಟಮ್ಮ, ಚಿಕ್ಕಹೊಂಬಾಳಮ್ಮ ಅವರು ಆರತಿ ಬೆಳಗಿ ಹೊನ್ನಯ್ಯ ನವರಿಗೆ ದೃಷ್ಟಿತೆಗೆದು ಬೀಳ್ಕೊಟ್ಟರು. "ಅರಮನೆ ಚಲೋ" ಸತ್ಯಾಗ್ರಹದಲ್ಲಿ ಪೋಲೀಸರು ಕಾಂಗ್ರೆಸ್ಸಿಗರೊಡನೆ ತುಂಬಾ ಸರೀಕಾಗಿದ್ದರು. ನನ್ನ ಮತ್ತು ಶಂಕರ ಗೌಡರನ್ನು ದಸ್ತಗಿರಿಮಾಡಲು ವಾರಂಟುಗಳು ಸಿದ್ಧವಾಗಿವೆ ಎಂದೂ, ಕೂಡಲೆ ತಲೆ ತಪ್ಪಿಸಿಕೊಳ್ಳಿರಿ ಎಂದು ದಫೇದಾರರೊಬ್ಬರು ನಮಗೆ ತಿಳಿಸಿದರು. ನಾವು ಸಹ ಪಾಪೇಗೌಡರ ಹೆಂಡದ ಲಾರಿಯಲ್ಲಿ ಪೀಪಾಯಿ ಸಂದುಗಳಲ್ಲಿ ಕುಳಿತು ಪ್ರಯಾಣ ಮಾಡಿದೆವು. ಈ ಕಾರ್ಯಕ್ರಮದ ಹಿಂದಿನ ದಿನ ಹೊಸದಾಗಿ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿ ಶ್ರೀ ಪಟ್ಟಾಭಿರಾಮನ್ ಅವರು ಬಂದಿದ್ದರು. ಅವರು ಅಡ್ಡದಾರಿಯಿಂದ ಜೀಪಿನಲ್ಲಿ ಬಂದು ಲಾರಿಯನ್ನು ಅಡ್ಡಗಟ್ಟಿದರು.

ನಮ್ಮನ್ನು ಲಾರಿಯಿಂದ ಇಳಿಸಿ ಜೀಪಿಗೆ ಕೂರಿಸಿಕೊಂಡು ದಸ್ತಗಿರಿ ಮಾಡಿರುವು ದಾಗಿ ತಿಳಿಸಿದರು. ಎಚ್. ಹೊನ್ನಯ್ಯನವರನ್ನು ಮತ್ತು ಡಿ. ವಿದ್ಯಾಧರಪ್ಪನವರನ್ನು ಊರಿಗೆ ಹೋಗಲು ತಿಳಿಸಿದರು. ನಮ್ಮ ಯೋಜನೆ ತಲಕೆಳಗಾಗುವಂತಾಯಿತು. ಆದರು ಧೈರ್ಯಗೆಡದೆ ಎಚ್. ಹೊನ್ನಯ್ಯನವರ ಹತ್ತಿರ ಮನೆಗೆ ಸುದ್ದಿಮುಟ್ಟಿಸಲು ಮಾತನಾಡುವುದಾಗಿ ತಿಳಿಸಿ ಪೋಲೀಸರಿಗೆ ಕೇಳುವಂತೆ ನೀವಿಬ್ಬರು ಇತರ ಹುಡುಗ ರನ್ನು ಜೊತೆಗೂಡಿಸಿಕೊಂಡು ಯಲಿಯೂರು ಬಳಿ ಸೇತುವೆಯನ್ನು ನಾಶಮಾಡಿ ಬಿಡಿ ಎಂದೆನು. ಎಸ್. ಪಿ. ಅವರು ಕಾತುರರಾಗಿ ಏನು ಸಲಹೆ ಮಾಡುತ್ತಿದ್ದೀರಿ. ಈ ಇಬ್ಬರನ್ನು ದಸ್ತಗಿರಿ ಮಾಡುತ್ತೇವೆ ಎಂದು ತಿಳಿಸಿ ಜೀಪಿನಲ್ಲಿ ಕೂರಿಸಿಕೊಂಡರು.

ನಮ್ಮನ್ನು ಜೀಪಿನಲ್ಲಿ ನಾಗಮಂಗಲಕ್ಕೆ ಕರೆದೊಯ್ದರು. ಅಲ್ಲಿ ಎಂ. ಆರ್. ಎಸ್. ಶಾಸ್ತ್ರಿ ಮುಂತಾದವರ ಮೇಲೆ ವಾರಂಟಿದ್ದು ಅವರನ್ನು ದಸ್ತಗಿರಿ ಮಾಡುವ ಬಗ್ಗೆ ಆಲೋಚಿಸಿ, ನನ್ನನ್ನು ಕುರಿತು "ಶಾಸ್ತ್ರಿಯನ್ನು ನೋಡಿ ಕರೆತನ್ನಿ ಎಂದು ತಿಳಿಸಿ ದರು. ನಾನೇ ಹೋಗಿ ಕರೆತರುತ್ತೇನೆ ಎಂದು ಹೇಳಿ ಶಾಸ್ತ್ರಿಗಳ ಅಂಗಡಿ ಬಳಿ ಹೋದೆ. ವಿಚಾರ ತಿಳಿಸಿದೆ, ಅಂಗಡಿ ಮುಂದೆ ಬೆಳ್ಳೂರಿಗೆ ಹೋಗಲು ನಿಂತಿದ್ದ ಬಸ್ಸಿ ನಲ್ಲಿ ಶಾಸ್ತ್ರಿಗಳು ಪ್ರಯಾಣಿಸಿದರು, ನಮ್ಮೂರಿನ ಪಾಲಗ್ರಹಾರದ ಪಿ. ಎಸ್. ನರಸಿಂಹಯ್ಯ, ಓಬೇಗೌಡ, ಪಿ. ಕೆ. ವೆಂಕಟಾಚಲಶೆಟ್ಟಿ, ಸಿ. ಜವರಪ್ಪಗೌಡ, ಸಿ. ಟಿ. ಕೃಷ್ಣಪ್ಪಗೌಡರುಗಳಿಗೆ ವಾರಂಟಿತ್ತು. ಬೆಳಗ್ಗೆ ಕರೆತರುವಂತೆ ನಮ್ಮ ಎದುರಿನಲ್ಲೆ ನಾಗಮಂಗಲ ಪೋಲೀಸರಿಗೆ ತಿಳಿಸಿದರು. ಈ ಐದು ಮಂದಿಯಲ್ಲಿ ಮೂವರು ನಮ್ಮೊಡನೆ ಮಾತನಾಡುತ್ತಿದ್ದು ಅವರ ಪರಿಚಯವಿಲ್ಲದ ಮಂಡ್ಯ ಪೋಲೀಸರು ನಿಸ್ಸಹಾಯಕರಾಗಿದ್ದರು. ನಾಗಮಂಗಲ ಪೋಲೀಸರು ಸಹ ಮೌನ ಆಗಿ ವಿಚಾರ ತಿಳಿಸಲಿಲ್ಲ. ಅಂದು ಶುಕ್ರವಾರದ ಸಂತೆ. ನಾಗಮಂಗಲದಲ್ಲಿ ನೂರಾರು ಜನ ಸೇರಿ ದರು. ಜೈಕಾರ ಕೂಗಿದರು. ಪೋಲೀಸರು ಬೆಳ್ಳೂರಿನತ್ತ ಜೀಪ್ ಓಡಿಸಿ ಕತ್ತಲಾಗುವ ವರೆಗೆ ಆದಿಚುಂಚನಗಿರಿ ರಸ್ತೆಯ ಬಳಿ ಕರೀಜೀಕಳ್ಳಿ ಕಲ್ಲುಗುಡ್ಡದಲ್ಲಿ ಜೀಪ್ ನಿಲ್ಲಿಸಿದರು. ರಾತ್ರಿ 8 ಘಂಟೆಗೆ ಹೊರಟು ರಾತ್ರಿ 9½ ಘಂಟೆಗೆ ಮಂಡ್ಯ ತಲುಪಿದರು. ಮಂಡ್ಯ ಪಾರ್ಕಿನಲ್ಲಿ ಅಪಾರ ಜನಸಂದಣಿ ಸೇರಿತ್ತು. ಅಷ್ಟು ಹೊತ್ತಿನಲ್ಲು ಸಹ ಎಚ್. ಸಿದ್ಧರಾಮಯ್ಯ, ಮಂಡ್ಯದಲ್ಲಿ ಈಚೆಗೆ ಕೊಲೆಗೀಡಾದ ಅನಂತರಾಮಶೆಟ್ಟಿ, ಕೆ. ಸಿದ್ಧಯ್ಯ, ಎಸ್. ಎಂ. ಸಿದ್ದಯ್ಯ, ಗೌಡಗೆರೆ ನಾಗಪ್ಪ ಮುಂತಾದವರು ಭಾಷಣ ಮಾಡಿದರೆಂದು ತಿಳಿಯಿತು. ನಾವು ಪಾರ್ಕ್ ಬಳಿ ಬಂದಾಗ ನಮ್ಮ ಜೀಪನ್ನು ನೋಡಿ ಜನರ ಗುಂಪು ಓಡಿ ಬಂತು. ಜೀಪನ್ನು ಬೇರೆ ಮಾರ್ಗದಿಂದ ಜನರಿಗೆ ದಾರಿ ತಪ್ಪಿಸಿ ಓಡಿಸಿದರು.

ಸರಿರಾತ್ರಿ ಆಗುತ್ತ ಬಂದಿತ್ತು. ಎಚ್. ಹೊನ್ನಯ್ಯನವರನ್ನು ಈ ರಾತ್ರಿ ಸಹ ಆರತಿ ಬೆಳಗಿ ಮನೆಗೆ ಕರೆದುಕೊಂಡರೆಂದು ಹೇಳಿದರು. ನನ್ನ ಮತ್ತು ಶಂಕರಗೌಡ

ರನ್ನು ಜೈಲಿಗೆ ಬಿಟ್ಟು ನಮ್ಮ ಮನೆಗಳಿಗೆ ಹೋಗಿ ಹಾಸಿಗೆಹೊದಿಕೆಗಳನ್ನು ತಂದು ಕೊಟ್ಟರು. ಬೆಳಗಿನ 9½ ಗಂಟೆಗೆಲ್ಲ ಎಚ್. ಹೊನ್ನಯ್ಯ, ಡಿ. ವಿದ್ಯಾಧರಪ್ಪ, ಚಂದಗಾಲಿನ ಬೀಸೇಗೌಡರು. ತಮ್ಮಯ್ಯ ಎಂಬುವರು ಎಚ್. ಸಿದ್ಧರಾಮಯ್ಯ, ಅನಂತರಾಮಶೆಟ್ಟಿ, ಗೌಡಗೆರೆ ನಾಗಪ್ಪ, ಶಾಲಗ್ರಹಾರದ ಪಿ. ಎಸ್. ನರಸಿಂಹಯ್ಯ, ಪಿ. ಜವರಪ್ಪಗೌಡ, ಪಿ. ಟಿ. ಕೃಷ್ಣಪ್ಪಗೌಡ. ಪಿ. ಕೆ. ವೆಂಕಟಾಚಲಶೆಟ್ಟಿ. ಓಬೇಗೌಡರು. ಕರಡಹಳ್ಳಿ ಕೆ. ಎಂ. ಕೃಷ್ಣಪ್ಪಗೌಡರು, ಎಂ.ಆರ್.ಎಸ್. ಶಾಸ್ತ್ರೀ ಮುಂತಾಗಿ ವ್ಯಾನ್ ತುಂಬಾ ಜನರನ್ನು ಕರೆತಂದು ಜೈಲಿಗೆ ತುಂಬಿದರು. ಮಂಡ್ಯ ಜೈಲು ಹೊಸದಾಗಿ ನಿರ್ಮಾಣವಾಗಿದ್ದು ಹೆಚ್ಚು ಜನ ವಸತಿಗೆ ಅವಕಾಶವಿರಲಿಲ್ಲ. ಸಂಜೆಗೆ ಅನಂತರಾಮ ಭಟ್ಟರು, ಡಾ|| ಪಶುಪತಿರಾವ್, ಎಂ. ಆರ್. ಕೃಷ್ಣಮೂರ್ತಿ, ಪಿ. ಸಿ. ಕೃಷ್ಣಪ್ಪಗೌಡ, ಬಿ. ಎಂ. ಸಿದ್ಧೇಗೌಡ, ಕೆ. ಸಿ. ಚನ್ನಯ್ಯ, ಕೆ. ಚೆಟ್ಟಿಶೆಟ್ಟಿ ಮುಂತಾದವರ ತಂಡದವರು ಗಳನ್ನು ಊಟದ ವೇಳೆಗೆ ಜೈಲಿಗೆ ಕರೆದು ತಂದರು.

ಊಟದ ನಂತರ ಈ ಜೈಲಿನಲ್ಲಿದ್ದವರನ್ನು ಬೆಂಗಳೂರಿಗೆ ಕಳುಹಿಸಲು ವ್ಯವಸ್ಥೆ ಮಾಡಿ ನಾಳೆ ಬರುವವರಿಗೆ ಜಾಗ ಮಾಡಲು ಆಲೋಚನೆ ಮಾಡಿದರು. ಅಧಿಕಾರಿಗಳು ರಾತ್ರಿ 9 ಘಂಟೆಯ ನಂತರ ಬೆಂಗಳೂರಿಗೆ ಎರಡು ವ್ಯಾನ್‌ಗಳಲ್ಲಿ ನಮ್ಮನ್ನು ಕಳುಹಿಸಿ ದರು. ಬೆಂಗಳೂರನ್ನು ರಾತ್ರಿ 11 ಘಂಟೆಗೆ ತಲುಪಿದರೆ ಅಲ್ಲಿ ಕಂಡದ್ದು ಕರ್ಫ್ಯೂ ಆಜ್ಞೆಯಿಂದ ನಗರದ ಬೀದಿಗಳು ಬಿಕೋ ಎನಿಸಿ ನಿಂತಿದ್ದವು. ಸೆಂಟ್ರಲ್ ಜೈಲಿಗೆ ಹೋದರೆ ಕಾಂಗ್ರೆಸ್ಸಿಗರ ದೊಡ್ಡ ಜಾತ್ರೆಯೇ ನೆರೆದಿತ್ತು, ಜೈಲಿನ ದಿನನಿತ್ಯದ ಶಿಸ್ತು ನಿಯಮಗಳು ಗಾಳಿಗೆ ತೂರಿ ಹೋಗಿ ಜನರು ಆಡಿದ್ದೇ ಆಟವಾಗಿತ್ತು. ಹತ್ತರಲ್ಲಿ ಹನ್ನೊಂದು ಎಂದು ನಾವು ಹಳಬರೊಡನೆ ಸೇರಿ, ಈ ಹಿಂದೆ ಬಂದಿದ್ದವರಲ್ಲಿ ಯಾರ್ಯಾರು ಬಂದಿದ್ದಾರೆಂದು ತಡಕಾಡಿ ನೋಡುವುದರಲ್ಲಿ ತಲ್ಲೀನರಾಗಿದ್ದೆವು. ಇಷ್ಟ ರಲ್ಲಾಗಲೇ ಮೊದಲ ಕೋಳಿ ಕೂಗಿತು. ಯಾರಿಗೂ ನಿದ್ರೆಬಾರದು. ಜವಾಬ್ದಾರಿ ಸರ್ಕಾರ ಬರುತ್ತೆ ಎನ್ನುವ ಖುಷಿ ನಮಗೆ, ಎರಡನೇ ಕೋಳಿ ಕೂಗುತ್ತಿದ್ದಂತೆ ಬಂತು ತುಮಕೂರಿನ ವ್ಯಾನ್, ನಭೋಮಂಡಲ ತಲಪುವಂತೆ ಜೈಕಾರದ ಜಯಘೋಷ. ಕೋಲಾರದಿಂದ, ಕೆ. ಜಿ. ಎಫ್. ಇಂದ, ಕನಕಪುರದಿಂದ, ಎರಡನೇ ದಫ ಮಂಡ್ಯದಿಂದ ವ್ಯಾನ್ ಮೇಲೆ ವ್ಯಾನ್‌ಗಳು ಜನರನ್ನು ತುಂಬಿ ಮದುವೆಗಳ ಸಮಾರಂಭಕ್ಕೆ ಕರೆತರು ವಂತೆ ಕರೆತರುತ್ತಲೇ ಇದ್ದವು. ಸ್ಥಳದ ಅಭಾವ ಅಧಿಕಾರಿಗಳಿಗೆ ಕಣ್ಣುಬಾಯಿ ಬಿಡು ವಂತೆ ಬಿಗಡಾಯಿಸಿತು. ಪ್ರಾತಃಕಾಲ 9 ಘಂಟೆಯಾಗಿದೆ. ತಣ್ಣೀರು ಸ್ನಾನಮಾಡಲು ಬಿಡುವು ಸಿಗುತ್ತಿಲ್ಲ. ಜನರ ಒತ್ತಡದಿಂದ ಬಿ. ಟಿ. ರಾಮಯ್ಯನವರು ಏನೇ ಗಲಾಟೆ ಯಿದ್ದರು ಸಮಯಕ್ಕೆ ಸರಿಯಾಗಿ ತಿಂಡಿ ಊಟದ ವ್ಯವಸ್ಥೆ ನಿರ್ವಹಿಸುತ್ತಿದ್ದರು. ಅನೇಕರು ತಿಂಡಿ ತೀರ್ಥ ತಿಂದಾದ ಮೇಲೆ ಸ್ನಾನ ಮಾಡಿದರು.

ಬೆಂಗಳೂರಿನ ಕೇಂದ್ರ ಸೆರೆಮನೆಯ ಸ್ಥಳದ ಅಭಾವನೀಗಲು ಹಾಲಿ ಎಸ್. ಜಿ.

ಇ.ಎಫ್ ಇರುವ ಜಾಗದಲ್ಲಿ ಎರಡನೇ ಮಹಾಯುದ್ಧದ ದಕ್ಷಿಣ ವಲಯದ ಮಿಲಿಟರಿ ಸ್ಟೋರ್ಸ್ ಕಟ್ಟಡಗಳನ್ನು ಕಟ್ಟಿ ಯುದ್ಧಾನಂತರ ಪಾಳು ಬಿಟ್ಟಿದ್ದರು. ಚಿಕ್ಕಪುಟ್ಟ ಕಟ್ಟಡಗಳನ್ನೊಳಗೊಂಡಂತೆ ಕೃಷ್ಣರಾಜಪುರಂ ರೈಲ್ವೆ ನಿಲ್ದಾಣದ ಹೊರಗೆ ಸುತ್ತಲು ತಂತಿಬೇಲಿ ಹಾಕಿ ಹಂಗಾಮಿ ಜೈಲು ನಿರ್ಮಾಣಮಾಡಿ, ಕೇಂದ್ರ ಸೆರಮನೆಯಿಂದ ಮೂರು ನಾಲ್ಕುಸಾವಿರ ಜನರನ್ನು ಈ ಪಾಳು ಜೈಲಿಗೆ ಸಾಗಿಸಿದರು. ಅಡಿಗೆ ವ್ಯವಸ್ಥೆಯನ್ನು ಜಿಲ್ಲಾವಾರು ಹಂಚಿಕೊಂಡು ಕೆಲಸ ಮಾಡಲಾಗುತ್ತಿತ್ತು. ಡೆಟಿನ್ಯೂ ಆಕ್ಟ್ ಪ್ರಕಾರ ತಲಾ ವ್ಯಕ್ತಿಗೆ ಆಗಿ ಮಿಗುವಷ್ಟು ಸರಕು ಬರುತ್ತಿತ್ತು. ದಿನವೂ ವಿವಿಧ ಸಿಹಿ ಮತ್ತು ಕಾರ ತಿಂಡಿ ತಯಾರು ಮಾಡಿಕೊಂಡು ತಿಂದು ಸಂತುಷ್ಟರಾಗಿರುತ್ತಿದ್ದೆವು. ಯಾರು ಎಲ್ಲಿಗೆ ಬೇಕಾದರು ಹೋಗಲು ತಡೆಯುವ ಅಡ್ಡಗೋಡೆ ಆ ಜೈಲಿಗೆ ಇರಲಿಲ್ಲ. ಈಗಿನಂತೆ ಬೆಂಗಳೂರು ತನ್ನ ವಸತಿನಾಲಗೆಯನ್ನು ಅಲ್ಲಿವರೆಗೆ ಚಾಚಿರಲಿಲ್ಲ. ನಗರಕ್ಕೂ ನಾವಿದ್ದ ಕ್ಯಾಂಪಿಗೂ 1947ರಲ್ಲಿ ನಾಲ್ಕೈದು ಕಿ. ಮೀ. ಅಂತರದ ಪಾಳು ಭೂಮಿಯಿತ್ತು. ನಾವಿದ್ದ ಕ್ಯಾಂಪಿನಲ್ಲಿ ಬಹು ಸಂಖ್ಯೆಯ ಸೇದು ಬಾವಿಗಳಿದ್ದು ಕೆಲವು ಬಾವಿಗಳಲ್ಲಿ ಓವಲ್‌ಟಿನ್ ಡಬ್ಬಗಳು, ಕೆಲವು ಬಾವಿಗಳಲ್ಲಿ ಸಿಗರೇಟ್ ತುಂಬಿದ ಟಿನ್‌ಗಳು, ಕೆಲವು ಬಾವಿಗಳಲ್ಲಿ ಪೆಟ್ರೋಲ್ ತುಂಬಿಟ್ಟಿದ್ದ ಟಿನ್‌ಗಳು ತುಂಬಿದ್ದುವು. ಹೀಗೆ ಹಾಳಾಗಿಹೋಗಿದ್ದ ಸಾಮಾನುಗಳನ್ನು ನೋಡಿದಾಗ ಮುಗಿದ ಈ ಹಾಳು ಮಹಾಯುದ್ಧದಲ್ಲಿ ಕೆಲಸಕ್ಕೆ ಬಾರದೆ ಹಾಳಾದ ಸಾಮಾಗ್ರಿಗಳೆಷ್ಟೋ ಎನಿಸುತ್ತಿತ್ತು. ಈ ಹಾಳಾದ ಯುದ್ಧಕ್ಕೆ ಅದೆಷ್ಟು ಜನ ಬಡಬಗ್ಗರ ಜೀವನ ಬಲಿಯಾಯಿತೋ ಎಂದು ಮರುಕ ಉಂಟಾಗುತ್ತಿತ್ತು.

ನನ್ನ ಪತ್ನಿ ಪಾರ್ವತಮ್ಮನನ್ನು ಚೊಚ್ಚಲು ಹೆರಿಗೆಗೆ ನಾನು ಜೈಲಿಗೆ ಬರುವ ಮುನ್ನ ತೌರಿಗೆ ಕರೆದುಕೊಂಡು ಹೋಗಿದ್ದರು. 1947ನೆಯ ಸೆಪ್ಟೆಂಬರ್ 27ನೆಯ ದಿನಾಂಕ ಹೆಣ್ಣುಮಗು ಜನನವಾಗಿ ಮಗು ಬಾಣಂತಿ ಆರೋಗ್ಯವಾಗಿದ್ದಾರೆಂದು ಕಾಗದ ಬಂತು.ಇದು ನನ್ನ ನಾಲ್ಕಾರುಬಾರಿ ಜೈಲುವಾಸದಲ್ಲಿ ಜೈಲಿನಲ್ಲಿದ್ದ ನನಗೆಬಂದ ಮೊದಲ ಕಾಗದ. ನಿನ್ನ ಮಗಳು ಹುಟ್ಟಿದ ವರ್ಷ ಶುಭದಾಯಕವಾದದ್ದು ಇನ್ನು ನಾಲ್ಕಾರು ದಿನದಲ್ಲೇ ಜವಾಬ್ದಾರಿ ಸರ್ಕಾರ ಬಂದೇ ಬರುತ್ತೆ. ಮಗಳಿಗೆ ಜಯಲಕ್ಷ್ಮಿ ಎಂದು ನಾಮಕರಣ ಮಾಡಲು ಕಾಗದ ಬರೆ ಎಂದರು ಶಂಕರಗೌಡರು ಮತ್ತು ಇನ್ನಿತರ ಸ್ನೇಹಿತರು. ನಾನು ಜೈಲಿನಿಂದ ಬಿಡುಗಡೆ ಆದ ಕೂಡಲೇ ಊರಿಗೆ ಬರುವುದಾಗಿ ಕಾಗದ ಬರೆದೆ. ಹಾಗೂ ಜೈಲಿನಿಂದ ಬಿಡುಗಡೆಯಾದ ವಾರದಲ್ಲಿ ಶಂಕರಗೌಡರು, ಎಚ್. ಹೊನ್ನಯ್ಯನವರು, ಪಿ. ಸಿ. ಶ್ರೀನಿವಾಸಯ್ಯ, ಜಿ. ಎಸ್. ಬೊಮ್ಮೇಗೌಡರು ವ್ಯಾನೊಂದರಲ್ಲಿ ನನ್ನ ಪತ್ನಿ ಊರಿಗೆ ಮುಸ್ಸಂಜೆ ಹೊರಟೆವು. ಅದೋ ಕಾಡುದಾರಿ, ತಿಂಗಳ ಬೆಳಕಿತ್ತು. ಕಾಡೆಲ್ಲ ರಸ್ತೆಯಂತೆ ಕಾಣುತ್ತಿತ್ತು. ಊರು ಆರೇಳು ಪ ಸೆ ಕೊಪ್ಪಲು. ನೆಂಟರಿಷ್ಟರು ಬಂದರು ಎಂದು ಬೇರೇನೂ ವಿಶೇಷ ಮಾಡಲು ಅವಕಾಶ

ವಿಲ್ಲ. ಏನಾದರೂ ಕೋಳಿ ಕತ್ತಿಗೆ ಚೂರಿ ಹಾಕುವುದು ಸ್ವಾಮಿಗೆ ಮಾಡುವುದು ಇಷ್ಟು ಮಾತ್ರ. ಸಾಧ್ಯವಾದುದನ್ನೆ ಅಕ್ಕ ಅಷ್ಟು ಹೊತ್ತಿನಲ್ಲಿ ಸಿದ್ಧಮಾಡಿ ಬಡಿಸಿದರು. ಎಲ್ಲರೂ ಮಗುವನ್ನು ನೋಡಿ ಅದೃಷ್ಟವಂತಳೆಂದು ತಿಳಿಸಿದರು. ಮಗಳ ಹೊಗಳಿಕೆಗೆ ಯಾವ ತಾಯಿ ತಾನೆ ಹಿರಿಹಿಗ್ಗುವುದಿಲ್ಲ. ನನ್ನ ಸ್ನೇಹಿತರು ಮಗಳನ್ನು ಹೊಗಳಿದುದು ಪತ್ನಿ ಪಾರ್ವತಮ್ಮನಿಗೆ ಆನಂದವೋ ಆನಂದ. ಎಲ್ಲ ಸ್ನೇಹಿತರು ನನ್ನ ಪತ್ನಿಗೆ ಒಂದು ವರ್ಷಕ್ಕಿಂತ ಹೆಚ್ಚಿನ ಪರಿಚಿತರು.

ನಾನು ಹಿಂದೆ ಒಂದು ಕಡೆ ತಿಳಿಸಿರುವಂತೆ ನಮ್ಮ ಮಹಾರಾಜರು ಭಾರತ ಒಕ್ಕೂಟಕ್ಕೆ ಸೇರಲು ಅಂಕಿತ ಹಾಕಿದ ದೇಶೀಯ ಸಂಸ್ಥಾನಗಳ ಅರಸರಲ್ಲಿ ಮೊದಲಿಗ ರಾಗಿದ್ದರು. ಆದರೂ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು ಅದೇನು ಸಾಧನೆಮಾಡಲು ಮೈಸೂರಿನ ಜನರನ್ನು ಹೋರಾಟದ ಕಣಕ್ಕಿಳಿಸಿದ ರೆಂಬುದು ಇಂದಿಗೂ ನಿಗೂಢವಾದುದು. ಬುದ್ಧಿವಂತರು ಖ್ಯಾತನಾಮರಾಗಿದ್ದ ಶ್ರೀಮನ್ ಮಹಾರಾಜರಾದರೂ ಅದೇಕೆ ಈ ಹೋರಾಟಕ್ಕೆ ಅವಕಾಶಕೊಟ್ಟರೆಂಬುದು ಅರ್ಥವಾಗದ ವಿಚಾರ. ಸೆಪ್ಟೆಂಬರ್ ಮೊದಲವಾರ ಆರಂಭವಾದ ಜನತಾ ಹೋರಾಟ ನವಂಬರ್ ಎರಡನೇ ವಾರದ ವರೆಗೆ ನಡೆದು ಮೈಸೂರು ಸಂಸ್ಥಾನದ ಚಿಕ್ಕ ಪುಟ್ಟ ಜೈಲುಗಳು ಮತ್ತು ಲಾಕಪ್‌ಗಳೆಲ್ಲ ಭರ್ತಿಯಾಗಿದ್ದವು. ಜಾಗದ ಅಭಾವವನ್ನು ನೀಗಿ ಕೊಳ್ಳಲು ನಾನಾ ಜನರನ್ನು ಲಾರಿಗಳಲ್ಲಿ ತುಂಬಿಕೊಂಡು ಹೋಗಿ ಕಾಡುಗಳಲ್ಲಿ ಬಿಟ್ಟು ಬರುತ್ತಿದ್ದರು. ಭಯಭೀಕರ ಸನ್ನಿವೇಶವನ್ನು ಅನುಭವಿಸಿದವರಿಂದ ಕೇಳಿದರೆ ನಾವಿದ್ದಲ್ಲೇ ಭಯವೆನಿಸುತ್ತಿತ್ತು. ಸರ್ಕಾರದವರು ನವಂಬರ್ ಎರಡನೇವಾರ ಎಲ್ಲ ರನ್ನು ಬೇಷರತ್ತಾಗಿ ಜೈಲಿನಿಂದ ಬಿಡುಗಡೆ ಮಾಡಿದರು.

ಮೈಸೂರು ಕಾಂಗ್ರೆಸ್‌ನ ಮುಖಂಡರಲ್ಲಿ ಅಧಿಕಾರವಿಲ್ಲದೆಯೆ ಮುಂದೆ ಬರುವ ಅಧಿಕಾರಕ್ಕಾಗಿ ಕಿತ್ತಾಟ ಆರಂಭವಾಯಿತು. ಈ ಕಿತ್ತಾಟದ ಅಂತರಗುಂಪಿನಲ್ಲಿ ನಾನಾ ಚುನಾವಣೆಗಳು ತಿರುಗ ಮುರಗವಾಗಿದ್ದವು. ಹೆಚ್ಚು ಹೇಳುವುದೇ ಬೇಡ. ಗಾಂಧೀಜೀ ಬೆಂಬಲಿಸಿದ್ದ ಪಟ್ಟಾಭಿ ಸೀತಾರಾಮಯ್ಯನವರ ವಿರುದ್ಧ ಸುಭಾಷ್ ಚಂದ್ರಬೋಸರು ಗೆದ್ದಿದ್ದರು. ಹಿರಿಯ ಕಾಂಗ್ರೆಸ್ ನಾಯಕರ ಬಗ್ಗೆ ಅಸಮಾಧಾನಗೊಂಡ ಯುವ ಪೀಳಿಗೆ ಸುಭಾಷ್ ಚಂದ್ರಬೋಸರನ್ನು ಗೆಲ್ಲಿಸಿ ಬುದ್ಧಿ ಕಲಿಸಿತ್ತು. ಅಧಿಕಾರವೇ ಇಲ್ಲದೆ ಕಿತ್ತಾಡುತ್ತಿದ್ದ ಮುಖಂಡರಿಗೆ ಹಂಚಿಕೊಳ್ಳಲು ಅಧಿಕಾರ ಕೈಗೆ ಬಂದಿದೆ. ಆ ಹಂಚಿಕೆ ಬಗ್ಗೆ ಹಗಲು ರಾತ್ರಿ ಕನಸು ಕನವರಿಕೆ ಮುಖಂಡರಲ್ಲಿ. ನಾನು ಮಂತ್ರಿ ಆಗಬೇಕೆಂಬ ಹಂಬಲಕ್ಕಿಂತ ಇಂತಹವನನ್ನು ಏನಾದರಾಗಲಿ ಮಂತ್ರಿ ಮಾಡಬಾರದೆಂಬ ಛಲದ ಹೋರಾಟದ ಮಸಲತ್ತು ನಡೆಯುತ್ತಿತ್ತು. ಇಂತಿಂತಹವರನ್ನೇ ಮಂತ್ರಿ ಮಂಡಲಕ್ಕೆ ತೆಗೆದುಕೊಳ್ಳಬೇಕೆಂದು ಯುವ ಪೀಳಿಗೆಯವರು ಸಹಸ್ರ ಸಂಖ್ಯೆಯಲ್ಲಿ ಕಾಂಗ್ರೆಸ್ ಅಧ್ಯಕ್ಷರಿಗೆ ತಂತೀ ಕಳುಹಿಸುತ್ತಿದ್ದರು. ಹಿರಿಯರಿಗೂ ಕಿರಿಯರಿಗೂ ಈ ಒಂದು

ಹೋರಾಟದ ಕೆಟ್ಟಪರಿಣಾಮದಿಂದ ಯುವ ಪೀಳಿಗೆಯವರಿಗೆ ಬೇಸರ ಬಂದಿತ್ತು.

ದೊಡ್ಡವರ ಒಂದು ಗುಂಪು ಎಚ್. ಸಿ. ದಾಸಪ್ಪನವರನ್ನು ಮಂತ್ರಿ ಮಂಡಲಕ್ಕೆ ಸೇರಿಸಬಾರದೆಂಬ ಹೋರಾಟ ನಡೆಸಿತ್ತು. ಎಚ್. ಸಿ. ದಾಸಪ್ಪನವರು ರಚನಾತ್ಮಕ ಕಾರ್ಯದ ಬಗ್ಗೆ ಗಾಂಧೀಜಿ ಆಶ್ರಮದಲ್ಲಿ ಅನುಭವ ಪಡೆದು ಬಂದಿದ್ದವರು. ಗಾಂಧೀಜಿ ಅವರ ಅಹಿಂಸಾತ್ಮಕ ನೀತಿಯ ತಳಹದಿ ಮೇಲೆ ನಿರ್ಮಾಣ [illegible]ದಲ್ಲಿ ಸಹಕಾರ ಸಂಘ ಚಳುವಳಿಯ ನೇತಾರರಾಗಿ ಮಂಡ್ಯದಲ್ಲಿ ಕಾರ್ಯಕ್ರಮ ಆರಂಭಿಸಿದ್ದರು. ನಾನು ಶಂಕರಗೌಡರು, ಕೆ. ಸಿಂಗಾರಿಗೌಡರು, ಕೆ. ಚಿಟ್ಟಿಶೆಟ್ಟಿ ಮತ್ತು ಜಿ. ಎಸ್. ಬೊಮ್ಮೇಗೌಡ ರೈತರ ಸಹಕಾರ ಸಂಘ ಮತ್ತು ಅರ[illegible] ನಾಲಾ ರೈತಸಂಘ ಸ್ಥಾಪನೆ ಮಾಡಿಕೊಂಡು ಕಾರ್ಯರೂಪಕ್ಕೆ ತಂದಿದ್ದೆವು. ರೈತರಿಂದ ಷೇರು ಹಣವನ್ನು ವಸೂಲಿ ಮಾಡಿ ಮಂಡ್ಯ ನಾಗಮಂಗಲ ಮತ್ತು ಶ್ರೀರಂಗಪಟ್ಟಣಗಳಲ್ಲಿ ರೈತ ಸಹಕಾರ ಸಂಘದ ಶಾಖೆಗಳನ್ನು ಆರಂಭಿಸಿದ್ದೆವು.

ಈ ಹಿನ್ನೆಲೆಯಲ್ಲಿ ಎಚ್.ಸಿ. ದಾಸಪ್ಪನವರ ಮತ್ತು ಮಂಡ್ಯ ಯುವಕರ ಸಂಬಂಧ ಬಹುನಿಕಟವಾಗಿ ಕೇವಲ ಒಂದೆರಡು ವರ್ಷಗಳಲ್ಲಿ ಬೆಳೆದಿತ್ತು. ಏನೇ ಆದರು ದಾಸಪ್ಪನವರನ್ನು ಕೈಗಾರಿಕಾ ಮಂತ್ರಿಗಳಾಗಿ ಮಂತ್ರಿಮಂಡಲ ರಚನೆಯಲ್ಲಿ ಸೇರಿಸಿಕೊಳ್ಳಲೇಬೇಕು. ಅವರಿಲ್ಲದ ಮಂತ್ರಿಮಂಡಲವನ್ನು ಮಂಡ್ಯಕ್ಕೆ ಸೇರಿಸಲೇ ಬಾರದು ಎಂಬ ಛಲದ ಸವಾಲು ಮಂಡ್ಯದ ಯುವಕರಲ್ಲಿ ಮೂಡಿತು. ಮುಖ್ಯಮಂತ್ರಿ ಕೆ.ಚಂಗಲರಾಯ ರೆಡ್ಡಿಯವರಿಗೆ ಸಹಸ್ರಾರು ತಂತಿಗಳ ಮೂಲಕ ದಾಸಪ್ಪನವರನ್ನು ಕೈಗಾರಿಕಾ ಮಂತ್ರಿಯಾಗಿ ಆರಿಸಿ ಎಂದು ಕೋರಿ ತಂತಿ ಮೇಲೆ ತಂತಿ ಕಳುಹಿಸುವ ಹೋರಾಟ ನಡೆಯಿತು. ಮಂಡ್ಯ ಯುವಕರ ಹೋರಾಟವನ್ನು ಕಡೆಗಾಣುವುದು ಸರಿಯಲ್ಲವೆಂಬ ಅಭಿಪ್ರಾಯದಿಂದ ದಾಸಪ್ಪನವರನ್ನು ಮಂತ್ರಿಮಂಡಲಕ್ಕೆ ಸೇರಿಸಿಕೊಳ್ಳಲೇ ಬೇಕಾಯಿತು. ಇದರ ಜೊತೆಗೆ ದಾಸಪ್ಪನವರ ವಿಚಾರ ಅರಿತಿದ್ದ ಶ್ರೀಮನ್ ಮಹಾರಾಜರು ಮತ್ತು ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು ದಾಸಪ್ಪನವರನ್ನು ಮಂತ್ರಿಮಂಡಲಕ್ಕೆ ಸೇರಿಸಲು ಸಹಾಯಕರಾಗಿದ್ದರೆಂದು ದಾಸಪ್ಪನವರಿಂದ ನನಗೆ ಗೊತ್ತಾಯಿತು.

ಕಾಂಗ್ರೆಸ್ ಹೋರಾಟ ಕಾಲದಲ್ಲಿ ಮಂಡ್ಯದಲ್ಲಿ ಬಂದು ಹೋಗುವ ಮುಖಂಡರಿಗೆ ಊಟ ವಸತಿ ಎ. ಜಿ. ಬಂದೀಗೌಡರ ಭಾವಮೈದುನ ಶ್ರೀ ಟಿ. ಸಿ. ಶ್ರೀನಿವಾಸಯ್ಯನವರ ಮನೆಯಲ್ಲಿ ನಡೆಯುತ್ತಿತ್ತು. ಅಷ್ಟೇ ಅಲ್ಲದೆ ನಾನಾ ಸಭೆಗಳನ್ನು ಅವರ ವಾಸದ ಮನೆ ಮುಪಡಿಯಲ್ಲಿ ನಡೆಸಲಾಗುತ್ತಿತ್ತು. ಶ್ರೀ ಟಿ. ಸಿ. ಶ್ರೀನಿವಾಸಯ್ಯನವರು ದಿನಸಿ ವ್ಯಾಪಾರಿಗಳಾಗಿ ಹೊಸದಾಗಿ ಮಂಡ್ಯಕ್ಕೆ ಬಂದಿದ್ದರು. ಇವರ ತಮ್ಮ ಟಿ. ಸಿ. ಕೃಷ್ಣಪ್ಪಗೌಡರು ಸಹ ಎರಡು ಮೂರು ಸಾರಿ ಸ್ವಾತಂತ್ರ್ಯ ಸಂಗ್ರಾಮದ ಜೈಲು ಅನುಭವಿಸಿದವರು. ಮಂಡ್ಯದ ಕಾಳನಾಯ್ಕನ ದಿವಂಗತ ಬಿ. ನಾಚಪ್ಪ ಇವರ ಮನೆ ಆಶ್ರಯವೂ ಕಾಂಗ್ರೆಸ್ಸಿಗರಿಗಿತ್ತು. ಅಂತೆಯೆ 1947ನೆಯ ನವಂಬರ್ 26 ರಂದು ಜವಾಬ್ದಾರಿ

ಸರ್ಕಾರ ಚಂಗಲರಾಯರೆಡ್ಡಿ ಮುಖ್ಯ ಮಂತ್ರಿತ್ವದಲ್ಲಿ ಪ್ರಮಾಣವಚನ ಸ್ವೀಕರಿಸಿತು. ನವಂಬರ್ 26 ರಂದು ವಿದ್ಯಾಸಚಿವರಾದ ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಈಗಿರುವ ಸ್ಟೇಡಿಯಂ ಮೈದಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆ ದಿನ ಆಚರಿಸ ಲಾಯಿತು. ಅಂದಿನ ಭೋಜನಕೂಟವು ಹಿಂದಿನಿಂದ ನಡೆದು ಬಂದಂತೆ ಶ್ರೀ ಪಿ. ಸಿ. ಶ್ರೀವಾಸಯ್ಯನವರ ಮನೆಯಲ್ಲಿ ನಡೆಯಿತು. ಸ್ವರಾಜ್ಯಾನಂತರ ಬಹುಶಃ ಶ್ರೀನಿ ವಾಸಯ್ಯನವರ ಮನೆ ಭೋಜನವೆ ಕೊನೆಯದು. ಇದಾದನಂತರ ಊರಿಗ ಬರುವ ಕಾಂಗ್ರೆಸ್ ಮುಖಂಡರುಗಳು ಮತ್ತು ಮಂತ್ರಿಗಳು ಯಾವ ಮನೆಗೆ ಊಟಕ್ಕೆ ಹೋಗ ಬೇಕು, ಹೋಗಬಾರದು ಎಂಬುದನ್ನು ತೀರ್ಮಾನಿಸಲು ಜಿಲ್ಲೆಯ ಪ್ರತಿಷ್ಠಿತ ವ್ಯಕ್ತಿ ಯೊಬ್ಬರಿಗೆ ವಹಿಸಲಾಗಿತ್ತು. ಈ ಒಂದು ರೀತಿ ನೀತಿ ಚಿಕ್ಕ ಮಕ್ಕಳೂ ನಗುವಂತೆ ಮಾಡಿತ್ತು. ಮುಖಂಡರು ಮತ್ತು ಮಂತ್ರಿಗಳಿಗೆ ಭೋಜನಕ್ಕೆ ಆಮಂತ್ರಣ ನೀಡು ವವರ ಸಂಖ್ಯೆ ದಿನ ದಿನಕ್ಕೆ ಬೆಳೆಯುತ್ತ ಅತಿಥಿಗಳು ಯಾರ ಮನೆಗೆ ಹೋಗುವುದೆಂಬ ಆತಂಕ ಅವರಿಗೆ ಉಂಟಾಯಿತು.

ಶ್ರೀ ಪಿ. ಸಿ. ಶ್ರೀನಿವಾಸಯ್ಯನವರು ಮಂಡ್ಯದಲ್ಲಿ ಕಾಂಗ್ರೆಸ್ ಬೆಳೆಸಲು ಸಹಾ ಯಕರಾಗಿದ್ದರು. ಅವರನ್ನು ಸ್ವರಾಜ್ಯಾನಂತರ ಯಾರೂ ಗುರ್ತಿಸಲೇ ಇಲ್ಲ. ಹೀಗೆ ಕಾಂಗ್ರೆಸ್ ಹಣವಂತರ ಕೈವಶವಾಗುತ್ತ ಬಂದು ಮಹಾಕವಿ ಕುವೆಂಪು ಅವರು ಬೆಂಗಳೂರು ವಿಶ್ವವಿದ್ಯಾಲಯ ಘಟಿಕೋತ್ಸವದಲ್ಲಿ ಮಾಡಿದ ''ಕರೆಯುತಿಪೆ ಸಮೂಲ ಕ್ರಾಂತಿ''ಯಲ್ಲಿ ಹೇಳಿರುವಂತೆ ಸ್ವರಾಜ್ಯಾನಂತರ ಭಾರತ ಸಾಗುತ್ತಿದೆ.

''ನಮ್ಮ ಸ್ವಾತಂತ್ರ್ಯ ಸಂಪಾದನೆಗೆ ನಮ್ಮ ರಾಷ್ಟ್ರಪಿತನನ್ನೇನೊ ಉಪಯೋಗಿಸಿ ಕೊಂಡೆವು. ಆತ ಬೋಧಿಸಿದ ಸ್ವದೇಶಿ, ಸತ್ಯಾಗ್ರಹ, ಅಹಿಂಸೆ, ಗ್ರಾಮ ಸ್ವರಾಜ್ಯ, ಸರಳ ಜೀವನ, ತ್ಯಾಗಬುದ್ಧಿ ಮೊದಲಾದುವನ್ನು ತ್ಯಾಗಮಾಡಿದೆವು. ಸ್ವಾತಂತ್ರ್ಯ ಸಂಪಾದನೆ ಆದೊಡನೆಯೆ ಆತನನ್ನು ತೊಲಗಿಸಿದೆವು ; ಶ್ರೀಮಂತರಿಗೆ ಬೇಕಾದ ಭೋಗ ಮತ್ತು ಷೋಕಿಯ ವಸ್ತುಗಳ ತಯಾರಿಕೆಗೆ ಬಡರೈತರ ತೆರಿಗೆಯ ಧನವನ್ನು ವ್ಯಯ ಮಾಡಿದೆವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಭೋಗ ಜೀವನ ನಡೆಸುವ ಶ್ರೀಮಂತರ ಸುಖಕ್ಕಾಗಿ ಹಳ್ಳಿಗಳನ್ನು ರೈತವರ್ಗವನ್ನು ಮರೆತು ಬಿಟ್ಟೆವು. ನಗರಗಳಲ್ಲಿ ಮಹಾ ಪರ್ವತೋಪಮ ಕಟ್ಟಡಗಳನ್ನು ಕಟ್ಟುವುದಕ್ಕೆ ನಮಗೆ ದುಡ್ಡಿತ್ತು. ಬಡರೈತನನ್ನು ಹಿಂಡಿ ತೆಗೆದ ತೆರಿಗೆ ದವಸ ಧಾನ್ಯಗಳು ನಗರಗಳ ಶ್ರೀಮಂತವರ್ಗಕ್ಕೂ ಅಧಿಕಾರ ವರ್ಗದ ಧಾಳಾಧೂಳಿಗೂ ವ್ಯಯವಾಯಿತು.

ಸಮಾಜವಾದವೇ ನಮ್ಮ ಗುರಿ ಎಂದು ಘೋಷಿಸಿದ್ದೆವು. ಪ್ರಜಾಸತ್ತೆಯೆ ನಮ್ಮ ವಿಧಾನಮಾರ್ಗ ಎಂದು ಸಾರಿಸಾರಿ ಪ್ರತಿಜ್ಞೆ ಮಾಡಿದ್ದೆವು. ಆದರೂ ಹೀಗಾಯಿ ತಲ್ಲ ಏಕೆ ? ಇತರ ದೇಶಗಳು ಶತಮಾನಗಳ ವಿಕಾಸದಿಂದ ಸಾವಧಾನವಾಗಿ, ಆದರೂ ಸಧೃಡವಾಗಿ ಸಾಧಿಸಿದ್ದನ್ನು ನಾವು ತಕ್ಷಣವೇ ಸಾಧಿಸಲು ಹೊರಟಿದ್ದು ನಮಗೊದ ಗಿರುವ ಅಪಘಾತಕ್ಕೆ ಮೂಲಕಾರಣವಾಯಿತು. ನೂರಕ್ಕೆ ಎಪ್ಪತ್ತರಷ್ಟು ಅನಕ್ಷ

ರಸ್ಥರಿರುವ ದೇಶದಲ್ಲಿ ಅದೆಂತಹ ಪ್ರಜಾಸತ್ತೆ ಸಾಧ್ಯವಾದೀತು ? ಅದರಲ್ಲಿಯೂ ನಮ್ಮದೇಶ ? ಯಾವತ್ತೂ ಪ್ರಜಾಸತ್ತೆಯ ಗಾಳಿಯನ್ನೂ ಮೂಸಿ ನೋಡದಿದ್ದ ದೇಶ, ರಾಜರನ್ನು ಪ್ರತ್ಯಕ್ಷ ದೇವರೆಂದು ಪೂಜಿಸಿದ ದೇಶ. ಪುರೋಹಿತರನ್ನು ಭೂಸುರರೆಂದು ಆರಾಧಿಸಿದ ದೇಶ. ಮತಮೌಢ್ಯ ಎಂಬ ನಿತ್ಯರೋಗವು ಇವರ ನರನಾಡಿಗಳಲ್ಲಿ ಸರ್ವವ್ಯಾಪಿಯಾಗಿದ್ದು ವರ್ಗ ವರ್ಣ ಮತ ಜಾತಿ ಪಂಥ ಪಂಗಡ ಎಂಬ ನೂರಾರು ಭೇದಗಳಿಂದ ನರಳುತ್ತಿರುವ ದೇಶ. ಈ ಮತಭ್ರಾಂತಿಯಿಂದ ಲೋಕಕ್ಕೆ ಆಗಿರುವಷ್ಟು ಹಾನಿ ಮತ್ತಾವುದರಿಂದಲೂ ಆಗಿಲ್ಲ. ಇನ್ನು ಮುಂದೆ ಆದರೂ ಅಧ್ಯಾತ್ಮವನ್ನು ಉಳಿಸಿಕೊಂಡು ಮತ ಮತ್ತು ಅದರಿಂದ ಜನ್ಯವಾದ ಮತಭ್ರಾಂತಿ ಮತ್ತು ಮೌಢ್ಯಗಳನ್ನು ನಿರಾಕರಿಸದಿದ್ದರೆ ಪ್ರಜಾಸತ್ತೆಯಾಗಲಿ, ಸಮಾಜವಾದವಾಗಲಿ ಸಮಾನತಾ ಭಾವ ಸ್ಥಾಪನೆಯಾಗಲಿ ಎಂದೆಂದಿಗೂ ಸಾಧ್ಯವಾಗುವುದಿಲ್ಲ.

ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ, ಈ ಪದಗಳು ಮಂತ್ರಗಳಾಗಿ ಜಾತಿಮತ ಭೇದ ಭಾವಗಳಿಂದ ಪಾರಾಗಿ ಪ್ರಜಾಸತ್ತೆ ಮತ್ತು ಸಮಾಜವಾದ ಸ್ಥಾಪನೆಯಾಗಲಿ'' ಎಂದಿದ್ದಾರೆ ಮಹಾಕವಿ ಕುವೆಂಪು.

ಸ್ವರಾಜ್ಯಾನಂತರದ ಪಟ್ಟಣಿಗರು, ಮಂತ್ರಿ ಮಹೋದಯರು ಅತಿ ಭೋಗ ಜೀವನದಿಂದ ದೂರ ಉಳಿಯದಿದ್ದರೆ ಆಗುವ ಅನಾಹುತವನ್ನು ತಮ್ಮ ಹಾಳೂರು ಕವನದಲ್ಲಿ ವಿವರಿಸಿದ್ದಾರೆ— ಓದಿ.

ಅತಿಭೋಗವದು ರೋಗ, ಕೊಲ್ಲುವುದು ಬೇಗ ;
ಪುರಗಳಿಂದೈತಂದಿಹುದು ಹಳ್ಳಿಗೀಗ.
ಸಾಮಾನ್ಯ ಜೀವನವು ಪರಮ ಸುಧೆಯಂತೆ,
ಮಿತಿಮೀರಿದತಿಭೋಗ ಘೋರ ವಿಷದಂತೆ.
ದೇಶಗಳು ಹಾಳಾದುದತಿಭೋಗದಿಂದ,
ನೀತಿ ನಾಶವು ಕೀರ್ತಿನಾಶವದರಿಂದ.
ಬೇಸಾಯದಾಧಾರದಿಂದಿರುವ ದೇಶ
ಎಂದಿಗೂ ಸುಖಕರವು, ಅದಕಿಲ್ಲ ನಾಶ ! ೫೨.೦
ಹಳ್ಳಿಯಿಲ್ಲದ ದೇಶವದು ನಿತ್ಯ ರೋಗಿ,
ಕೊಳೆಯುವುದು ನಿರ್ಜೀವ ಶವದಂತೆಯಾಗಿ.
ಹಳ್ಳಿಗಳಿರುವ ದೇಶವದು ಸದಾ ಭೋಗಿ,
ಅದೆ ಎಂದಿಗಾನಂದದಿಂದಿರುವ ಯೋಗಿ !
ಅಮ್ಮ, ಭಾರತಿ, ಹಳ್ಳಿ ಹಾಳಾಗದಿರಲಿ !
ನಿನಗೆಂದು ಸುಖ ಶಾಂತಿಯಾನಂದವಿರಲಿ !
ಹಳ್ಳಿಗಳ ಮಾತಾಯಿ, ಭಾರತಿಯೆ, ಅಮ್ಮಾ,
ಹಳ್ಳಿಗಳು ಹಾಳಾಗದಂತೆ ಸಲಹಮ್ಮಾ !

ರಾಜಕೀಯ ಒಂದು ವಿಚಿತ್ರವಾದ ಹವ್ಯಾಸವೂ ಹೌದು. ಮಾನವ ಸಮಾಜದಲ್ಲಿ ಆಡಳಿತ ವ್ಯವಸ್ಥೆಯು ರೂಪುಗೊಂಡಾಗಿನಿಂದಲೂ ಇದು ಅನೇಕ ಮುಖವಾಗಿ ನಡೆದುಕೊಂಡು ಬಂದಿದೆ. ಮೊದಮೊದಲಿಗೆ ರಾಜಕೀಯವನ್ನು ಹವ್ಯಾಸವಾಗಿ ಆರಂಭಿಸಿ ಕಡೆಗೆ ಅದನ್ನೇ ತಮ್ಮ ಪ್ರಧಾನವೃತ್ತಿಯಾಗಿ ಮಾಡಿಕೊಂಡವರೂ ಉಂಟು, ಅಧಿಕಾರದ ರುಚಿ ಹತ್ತಿದಂತೆಲ್ಲ ಅದನ್ನು ಉಳಿಸಿಕೊಳ್ಳಲು ಮಾಡಬಾರದ ಕೆಲಸಗಳನ್ನೆಲ್ಲಾ ಮಾಡಿದವರ ಕಥೆಗಳು ರಾಜಕೀಯದಲ್ಲಿ ವಿಪುಲವಾಗಿ ದೊರೆಯುತ್ತವೆ. ಇತಿಹಾಸದ ಚಕ್ರವರ್ತಿಗಳು, ರಾಜಮಹಾರಾಜರು, ಮಂತ್ರಿ, ಪ್ರಧಾನಿಗಳ ಜೀವನದ ಒಳಕೋಟೆಯನ್ನು ತೆರೆದರೆ ಅಲ್ಲಿನ ದ್ವೇಷ. ಅಸೂಯೆ, ಕುತಂತ್ರ, ಕುತ್ಸಿತ ಬುದ್ಧಿಯ, ರಕ್ತಪಾತ ನಮ್ಮನ್ನು ದಿಗ್ಭ್ರಮೆಗೊಳಿಸುತ್ತದೆ. ತಮ್ಮ ಸ್ಥಾನದ ಉಳಿವಿಗಾಗಿ ಕೊಲೆ, ಹಾದರ, ಕುಡಿತ ಭ್ರಷ್ಟಾಚಾರ ಪರಂಪರೆಗಳನ್ನೇ ನಡೆಸಿದವರುಂಟು, ಕಾಲ ಬದಲಾದರೇನಂತೆ ಅದೇ ರಾಜಕೀಯ ಆಧುನಿಕವೇಶವಲ್ಲಿ ಇಂದು ಮುಂದುವರಿದಿದೆ. ಮುಂದುವರಿಯುತ್ತದೆ.

ರಾಷ್ಟ್ರಕವಿ ಕುವೆಂಪು ಅವರು ಈ ಜಿಜ್ಞಾಸೆ ಕುರಿತಂತೆ ಬೆಂಗಳೂರು ವಿಶ್ವ ವಿದ್ಯಾನಿಲಯ ಘಟಿಕೋತ್ಸವ ಭಾಷಣದಲ್ಲಿ "ರಾಜಕೀಯ ಅಯೋಗ್ಯನ ಕೊನೆಯ ಸಾಧನ ಎಂದಿದ್ದನಂತೆ ಒಬ್ಬ ಪಾಶ್ಚಾತ್ಯ ಮನೀಷಿ, ನಮ್ಮ ಇಂದಿನ ರಾಜಕಾರಣ ರಂಗವನ್ನು ನೋಡಿದ್ದರೆ ಅದೇ ಮನೀಷಿ ತನ್ನ ಸೂಕ್ತಿಯನ್ನು ತಿದ್ದಿಕೊಂಡು ರಾಜಕೀಯ ಅಯೋಗ್ಯನ ಮೊದಲ ಸಾಧನ ಎಂದು ಹೇಳುತ್ತಿದ್ದ" ಎಂದಿದ್ದಾರೆ.

ಇದರ ಸತ್ಯಾಸತ್ಯತೆ ಏನೇ ಇರಲಿ ಇಂದು ಜಗತ್ತಿನ ರಾಜಕೀಯ ತುಳಿದ ಹಾದಿಯನ್ನು ಕಂಡಂಥ ಯಾರಿಗಾದರೂ ಮಾನವ ಸಮುದಾಯದ ಭವಿಷ್ಯದ ಬಗ್ಗೆ ಅನುಮಾನವುಂಟಾಗದಿರದು. ತಮ್ಮ ಪ್ರತಿಷ್ಠೆಗಾಗಿ ವಿಷಮ ಯುದ್ಧದ ಕಾರ್ಮೋಡ ಹಬ್ಬಿಸಿ ರಕ್ತದ ಹೊಳೆಹರಿಸುವ, ತಮ್ಮ ಅಧಿಕಾರ ಉಳಿಸಿಕೊಳ್ಳಲು ಕೊಲೆ ಸುಲಿಗೆಗಳನ್ನು ಮಾಡಿಸುವ, ಚುನಾವಣೆಗಳಲ್ಲಿ ಗೆಲ್ಲಲು ಶ್ರೀಸಾಮಾನ್ಯನಿಗೆ ಇಲ್ಲದ ಆಶೆ ಆಮಿಷಗಳನ್ನು ತೋರಿಸುವ ಭ್ರಷ್ಟ ರಾಜಕಾರಣವೇ ಇಂದು ಮೇಲುಗೈ ಆಗಿದೆ. ಇಂಥ ಹದಗೆಟ್ಟ ಪರಿಸ್ಥಿತಿಎಲ್ಲಾ ರಾಜಕಾರಿಣಿಗಳಲ್ಲು ಇದ್ದರೆ ದೇಶ ನಾಶವಾಗಿ ಹೋಗುತ್ತಿತ್ತು. ದೇವರ ದಯದಿಂದ ಹಾಗಾಗಲಿಲ್ಲ. ಅಲ್ಲೊಬ್ಬ ಇಲ್ಲೊಬ್ಬ ಅಯೋಗ್ಯ ರಾಜಕಾರಿಣಿ ಇಡೀ ಸಮುದಾಯವನ್ನೇ ತೊಟ್ಟು ಹುಳಿ ಹಂಡೆಪೂರ್ತಾ ಹಾಲನ್ನು ಕೆಡಿಸುವಂತೆ, ಸಮೂಹವನ್ನೆ ದುರಂತಕ್ಕೀಡು ಮಾಡಿದ ಒಂದು ಹದಗೆಟ್ಟ ರಾಜಕಾರಣ

ಮಂಡ್ಯ ಜಿಲ್ಲೆಯಲ್ಲಿ ತಲೆಹಾಕಿತು.

ಈ ಹಿನ್ನೆಲೆಯ ರಾಜಕೀಯಕ್ಕೆ ಹೊಂದಿದಂತೆ 1945ನೆಯ ಇಸವಿಯ ಮಧ್ಯ ಭಾಗದಲ್ಲಿ ಕಾಂಗ್ರೆಸ್ ಮುಖಂಡರಾದ ಕೆ. ಸಿ. ರೆಡ್ಡಿಯವರು ಹೊರದೇಶಕ್ಕೆ ಹೋಗಿ ಬಂದರು. ಅವರು ಬರುತ್ತಿದ್ದಂತೆಯೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷ ಚುನಾವಣೆಗೆ ವೇಳಾಪಟ್ಟಿಯನ್ನು ಕಾರ್ಯಕಾರಿಮಂಡಳಿ ಸಿದ್ಧಗೊಳಿಸಲು ಅನುವಾಗಿತ್ತು. ಈ ಚುನಾವಣೆಗೆ ಕೆ. ಸಿ. ರೆಡ್ಡಿಯವರು ಮತ್ತು ಶ್ರೀಮತಿ ಯಶೋಧರಾ ದಾಸಪ್ಪನವರು ಅಧ್ಯಕ್ಷಸ್ಥಾನಕ್ಕೆ ಸ್ಪರ್ಧಿಸಿದರು. ನಾನು ಈ ಹಿಂದೆಯೇ ಹೇಳಿದಂತೆ ಶಿವಮೊಗ್ಗ ಜೈಲು ವಾಸದಲ್ಲಿ ಎಚ್. ಸಿ. ದಾಸಪ್ಪನವರು ಐರ್ಲೆಂಡ್ ಮಾದರಿಯ ಸಹಕಾರ ಸಂಘವನ್ನು ಮಂಡ್ಯದಲ್ಲೇ ಸ್ಥಾಪನೆ ಮಾಡಬೇಕೆಂದು ತೀರ್ಮಾನಿಸಿ ಜೈಲಿನಿಂದ ಬಿಡುಗಡೆಯಾದ ಪ್ರಾತಃಕಾಲವೇ ಮಂಡ್ಯಕ್ಕೆ ಬಂದರು. ದಿವಂಗತ ಕೆ. ಎಂ. ಕೃಷ್ಣಪ್ಪಗೌಡರು ಮಂಡ್ಯ ಜಿಲ್ಲಾಬೋರ್ಡಿನ ಎರಡನೇ ಚುನಾವಣೆಯಲ್ಲಿ ಅಧ್ಯಕ್ಷರಾಗಿಯೂ ಓಟ್ನನ ಹಳ್ಳಿ ಕೊಪ್ಪಲು ಎಚ್.ವಿ. ವೀರೇಗೌಡರು ಉಪಾಧ್ಯಕ್ಷರಾಗಿ ಅವಿರೋಧವಾಗಿಯೂ ಚುನಾ ಯಿತರಾಗಿದ್ದರು. ವಕೀಲರಾಗಿ ಕೆಲಸ ಮಾಡಲು ಮಂಡ್ಯಕ್ಕೆ ಬಂದಿದ್ದ ಶ್ರೀ ಕೆ. ಸಿಂಗಾರಿ ಗೌಡ ಅವರು ತಂದೆಯೊಡನೆ ವಾಸ್ತವ್ಯ ಮಾಡಿದ್ದರು. ದಾಸಪ್ಪನವರು, ಕೃಷ್ಣಪ್ಪ ಗೌಡರ ಮನೆಗೆ ಬಂದು ಪಿ. ಎಸ್. ಜವರಪ್ಪಗೌಡ, ಕೆ. ವಿ. ಶಂಕರಗೌಡರು, ಜಿ. ಎಸ್. ಬೊಮ್ಮೇಗೌಡರುಗಳನ್ನು ಕರೆಸಿಕೊಂಡರು. ಜೈಲಿನಲ್ಲಿ ದಾಸಪ್ಪನವರು ಸಹಕಾರ ಸಂಘದ ಬಗ್ಗೆ ಆರುತಿಂಗಳು ನನಗೆ ಅರೆದು ಕುಡಿಸಿದ್ದರು. ನಾನು ಈ ಬಗ್ಗೆ ಸ್ನೇಹಿತ ರನ್ನೆಲ್ಲ ಸೇರಿಸಿ ವಿಷದೀಕರಿಸಿದ್ದೆ. ಜಿಲ್ಲೆಯ ಏಳು ತಾಲ್ಲೂಕುಗಳಲ್ಲು ರೈತರ ಸಹಕಾರ ಸಂಘದ ಶಾಖೆಗಳನ್ನು ಪ್ರಾರಂಭಿಸಿ ರೈತರನ್ನು ಕಳ್ಳಸಂತೆ ಖದೀಮರಿಂದ ಪಾರು ಮಾಡುವ ಪ್ರಯತ್ನದತ್ತ ನಾವು ಸುಮಾರು ಸಾಗಿದ್ದೆವು. ದಾಸಪ್ಪನವರು ಇದೇ ಕಾರ್ಯಾರ್ಥ ಒಂದು ಇಡೀ ದಿನ ಯೋಜನೆಯನ್ನು ವಿಷದೀಕರಿಸಿದರು. ಸಂಘದ ಬೈಲಾ ಬಗ್ಗೆ ಸಹ ರೂಪುರೇಷೆಗಳನ್ನು ಗುರ್ತು ಹಾಕಿಸಿ ಆದಷ್ಟುಬೇಗ ತ್ವರಿತಗತಿ ಯಿಂದ ಸಹಕಾರ ಸಂಘ ಪ್ರಾರಂಭಿಸಿ ಬಿಡಬೇಕು ಎಂದು ಹೇಳಿದರು.

ಇದರ ಜೊತೆಗೆ ದಾಸಪ್ಪನವರಿಗೆ ಜೈಲಿನ ಆಹಾರ ವ್ಯತ್ಯಾಸದಿಂದ ಆರೋಗ್ಯ ಹದಗೆಟ್ಟು ಸ್ಥಳೀಯವಾಗಿ ವೈದ್ಯರು ಚಿಕಿತ್ಸೆ ಮಾಡಲು ವಿಫಲರಾದ ವಿಚಾರ ಮಹಾತ್ಮ ಗಾಂಧಿ ಅವರಿಗೆ ಗೊತ್ತಾಯಿತು. ದಾಸಪ್ಪನವರನ್ನು ನಿಮಿಷವೂ ಬಿಡುವಿಲ್ಲದ ಕಾರ್ಯ ಗೌರವಗಳ ಮಧ್ಯೆಯೂ ಮಹಾತ್ಮಗಾಂಧಿ ಅವರು ಹುರುಳಿಕಾಂಚನ ಪ್ರಕೃತಿ ಚಿಕಿತ್ಸಾ ಕೇಂದ್ರಕ್ಕೆ ಕರೆಸಿಕೊಂಡು ಪ್ರಕೃತಿ ಚಿಕಿತ್ಸೆನಡೆಸಿ ಗುಣಮುಖರನ್ನಾಗಿ ಮಾಡಿ ದರು, ಸಾಕ್ಷಾತ್ ಲೋಕಮಾನ್ಯ ಯುಗಪುರುಷರೇ ನಿಂತು ಚಿಕಿತ್ಸೆನಡೆಸಿ ಗುಣಮುಖ ರಾದ ದಾಸಪ್ಪನವರು ಒಬ್ಬ ಅಪರೂಪದ ಪುಣ್ಯಜೀವಿ. ಈ ಒಂದು ಪ್ರಸಂಗಾನಂತರ ದಾಸಪ್ಪನವರು ಮಹಾತ್ಮಗಾಂಧಿ ಹಾಗೂ ಅಖಿಲ ಭಾರತ ಮಟ್ಟದಲ್ಲಿ ಖ್ಯಾತಿವೇತ್ತ

ರಾದರು. ದಾಸಪ್ಪನವರ ರಾಜಕೀಯ ಮೊಕದ್ದಮ್ಮೆಯಲ್ಲಿ ಮೈಸೂರಿನ ಶ್ರೇಷ್ಠ ನ್ಯಾಯಾಧೀಶರಾಗಿದ್ದ ರೈ ಎಂಬ ಆಂಗ್ಲನು ತೀರ್ಪುನೀಡಿ "ಭಾರತೀಯರಿಗೆ ಸತ್ಯ ಎಂಬುದು ತುದಿನಾಲಗೆ ಮಾತು" ಎಂದು ಕ್ಷುಲ್ಲಕವಾಗಿ ಟೀಕಿಸಿದ್ದನ್ನು ವೃತ್ತ ಪತ್ರಿಕೆ ಗಳಲ್ಲಿ ಓದಿದ ಗಾಂಧೀಜಿ ಅವರು ತಮ್ಮ ಹರಿಜನ ಪತ್ರಿಕೆಯಲ್ಲಿ ದಾಸಪ್ಪನವರನ್ನು ನಾನು ಬಲ್ಲೆ, ಸತ್ಯಸ್ವರೂಪಿ ಅವರು ಎಂದು ಪ್ರಶಂಸಿಸಿ ಲೇಖನ ಬರೆದರು.

ಈ ಎಲ್ಲಾ ಗಣ್ಯತೆಯ ಮಹಾನ್ ವ್ಯಕ್ತಿ ತಮ್ಮ ಮನದಾಳದಲ್ಲಿದ್ದ ನಾನಾ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಮಂಡ್ಯವನ್ನೆ ತೌರು ಮಾಡಿಕೊಂಡಿದ್ದರು. ದಾಸಪ್ಪನವರ ಯೋಜನೆಗಳನ್ನು ನಡೆಸಿ ಜಯಶಾಲಿಗಳಾಗಲು ದಾಸಪ್ಪನವರ ಮಾರ್ಗ ದರ್ಶನವನ್ನೆ ಬೀಜ ವೃಕ್ಷನ್ಯಾಯದಂತೆ ಅವಲಂಬಿಸಿದ್ದೆವು. ನಮಗೆ ದಾಸಪ್ಪನವರು, ದಾಸಪ್ಪನವರಿಗೆ ನಾವು ಪ್ರಿಯರಾಗಿದ್ದವರು. ಹಿಂದಿನ ಪ್ಯಾರಾದಲ್ಲಿ ಪ್ರಸ್ತಾಪಿಸಿರುವ ಮೈಸೂರು ಕಾಂಗ್ರೆಸ್ ಅಧ್ಯಕ್ಷಸ್ಥಾನ ಚುನಾವಣಾ ಪ್ರಚಾರಕ್ಕೆ ಎಚ್. ಕೆ. ವೀರಣ್ಣ ಗೌಡರೊಡನೆ ಸಾಹುಕಾರ್ ಚನ್ನಯ್ಯನವರು ಬಂದರು. ಕೃಷ್ಣಪ್ಪಗೌಡರ ಮನೆಗೆ ನಮ್ಮನ್ನು ಕರೆಸಿ, "ಕೆ. ಸಿ. ರೆಡ್ಡಿಯವರು ಹೊರದೇಶಕ್ಕೆ ಹೋಗಿ ಅಲ್ಲಿನ ಸರ್ಕಾರ ಹೇಗೆ ಕೆಲಸಮಾಡುತ್ತದೆ. ಪ್ರಜಾಪ್ರಭುತ್ವ ಎಂದರೇನು ? ಎಂಬುದನ್ನೆಲ್ಲ ತಿಳಿದು ಕೊಂಡು ಬಂದಿದ್ದಾರೆ. ನೀವೆಲ್ಲ ನಿಂತು ಜಿಲ್ಲೆಯಾದ್ಯಂತ ಕೆಲಸಮಾಡಿ ಓಟು ಮಾಡಿಸ ಬೇಕು" ಎಂದು ಚನ್ನಯ್ಯನವರು ದವಲತ್ತಿನ ಶೈಲಿಯಲ್ಲಿ ಹೇಳಿದರು. ಸಾಹುಕಾರರ ಶೈಲಿ, ದರ್ಪ ನನಗಂತು ಹಿಡಿಸಲಿಲ್ಲ. ಸರ್ ಜಗತ್ತಿಗೆ ಮಾರ್ಗದರ್ಶನ ನೀಡಬಲ್ಲ ಮಹಾತ್ಮಗಾಂಧಿ ಇಲ್ಲೇ ಇದ್ದಾರೆ. ಜಗದ ಪ್ರಜಾಪ್ರಭುತ್ವವಾದಿ ಅವರು. ಅವರಿಗೆ ಅರಿ ಯದ ವಿಷಯವನ್ನು ರೆಡ್ಡಿಯವರು ಲಂಡನ್ ಪಟ್ಟಣದಲ್ಲಿ ಗಳಿಸಿ ಬಂದಿದ್ದಾರೆಂಬುದು ದಡ್ಡರು ಒಪ್ಪುವ ಮಾತೇ ವಿನಃ ನಮ್ಮಂತಹ ತಿಳಿವುಳ್ಳ ಯುವಕರು ಒಪ್ಪಲಾರೆವು ಎಂದೆ. ಸುಮ್ಮನೆ ಕುಳಿತುಕೋ "ಎತ್ತು ಹಾರುವ ಮೊದಲೇ ಗೋಣಿ ಹಾರಿತು" ಎನ್ನುವಂತೆ ಇನ್ನಿತರರು ಮಾತನಾಡುವ ಮೊದಲೇ ನೀನು ಹಾರಾಡುತ್ತೀಯೋ ಎಂದು ಗದರಿಸಿದರು. "ಏಕೆ ಸ್ವಾಮಿ ನಾನೇನು ಜಾತಿಯಲ್ಲಿ ಕಮ್ಮಿಯೆ ಇಲ್ಲಿ ಸೇರಿರುವರಿಗಿಂತ ನಿಮ್ಮಷ್ಟೆ ರಾಜಕೀಯದಲ್ಲಿ ಹಿರಿಯ ನಾನು. ಸಭೆಯಲ್ಲಿ ಹಿರಿಯರು ತಾನೆ ಮುಂದಾಗಿ ಮಾತನಾಡಬೇಕು" ಎಂದೆ. ಸಾಹುಕಾರರು ಸಭಕ್ಕೆ ಹಾರಿದರು. ಏನಯ್ಯ ಶಂಕರಗೌಡ ನಿಂತು ಕೆಲಸ ಮಾಡುತ್ತೀಯೋ ಇಲ್ಲವೊ ಮಾತನಾಡು, ನಾನು ನೀನು ಈ ಊರಿ ನವರು. ನನ್ನ ಮರ್ಯಾದೆ ನಿನ್ನ ಮರ್ಯಾದೆ ಎಂದು ನಿಂತೇ ಕೇಳಿದರು. ಶಂಕರಗೌಡರು ಸಾವಧಾನವಾಗಿ ಇಲ್ಲ ಸರ್ ನಾವು ಶ್ರೀಮತಿ ಯಶೋಧರಾ ದಾಸಪ್ಪನವರ ಪರ ಕೆಲಸ ಮಾಡುತ್ತೇವೆ ಎಂದರು ಜೊತೆಯಲ್ಲಿ ಬಂದಿದ್ದ ಎಚ್. ಸಿದ್ಧರಾಮಯ್ಯ ಮತ್ತು ಬೂದನೂರಿನ ಗೋಸಪ್ಪನ ಜವರಾಯಿಗೌಡರನ್ನು ಏಳಯ್ಯ ಮೇಲೆ ಅದು ಹೇಗೆ ಗೆಲ್ತಾರೆ ನೋಡ್ತೇನೆ ಒಂದು ಕೈ ಎಂದು ಹೇಳಿ ಕಾರಿನಲ್ಲಿ ಪ್ರಯಾಣ ಮಾಡಿದರು.

ನಾವೇನು ಉದ್ವೇಗಕ್ಕೆ ಒಳಗಾಗಲಿಲ್ಲ. ಇದೇನು ಹೊಲ ಮನೆ ಆಸ್ತಿ ಪಂಚಿಕೆಯೇ? ಇದಕ್ಕೇಕೆ ಸಾಹುಕಾರರಿಗೆ ಇಷ್ಟೊಂದು ಕೋಪ ಎಂದು ನಮ್ಮಷ್ಟಕ್ಕೆ ನಾವು ನಮ್ಮ ಗೀಳಾದ ಸಹಕಾರ ಸಂಘ ನಿರ್ಮಾಣದತ್ತ ಕಾರ್ಯೋನ್ಮುಖರಾದೆವು. ಚುನಾವಣೆಯಲ್ಲಿ ಕೆ. ಸಿ. ರೆಡ್ಡಿಯವರೇ ಅಧ್ಯಕ್ಷರಾಗಿ ಚುನಾಯಿತರಾದರು. ಈ ಚುನಾವಣೆಯ ಪ್ರಕರಣ ವನ್ನೇ ಕೊನೆ ತನಕ ಸಾಧನೆ ಮಾಡಿದರು. ಈ ಸಾಧನೆಯಲ್ಲೆ ಸಾಹುಕಾರರು ಸ್ವರ್ಗವಾಸಿ ಗಳಾದರು. ಮುಂದೆ ಮೈಸೂರು ಜಿಲ್ಲೆಯಿಂದ ಎಚ್. ಸಿ. ದಾಸಪ್ಪನವರು ಮತ್ತು ಎನ್. ರಾಚಯ್ಯನವರು ಲೋಕ ಸಭೆಗೆ ಕಾಂಗ್ರೆಸ್ ಉಮೇದುವಾರರಾಗಿ ಸ್ಪರ್ಧಿಸಿದರು. ಯುವಕರಾಗಿದ್ದ ಎಂ. ಎಸ್. ಗುರುಪಾದಸ್ವಾಮಿಯವರನ್ನು ಒಳಗುಂಪಿನವರು ದಾಸಪ್ಪನವರ ವಿರುದ್ಧ ಪಿತೂರಿಮಾಡಿ ನಿಲ್ಲಿಸಿದರು. ಚುನಾವಣೆಯಲ್ಲಿ ದಾಸಪ್ಪನವ ರನ್ನು ಸೋಲಿಸಿ ಅಪಖ್ಯಾತಿಗೆ ಈಡಾದರು ಸಾಹುಕಾರ್ ಚನ್ನಯ್ಯನವರು ಮತ್ತು ಗುಂಪಿನವರು. ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವವನ್ನೆ ಪಣವಾಗಿಟ್ಟು ಹೋರಾಟ ಮಾಡಿದ ಮಹಾನ್ ಪುರುಷರು ದಾಸಪ್ಪನವರು. ಜೈಲಿನಲ್ಲಿ ರಾಗಿ ಬೀಸು ವುದು, ಬಾವಿಯಿಂದ ನೀರು ಸೇದಿ ತರಕಾರಿತೋಟಕ್ಕೆ ನೀರು ಹಾಯಿಸುವುದು, ಹೀಗೆ ನಾನಾ ಕಷ್ಟ ಕಾರ್ಪಣ್ಯಕ್ಕೆ ಈಡಾದ ದೇಶಭಕ್ತರು. ರಾಜಭೋಗ ಜೀವನ ನಡೆಸಿದ ದಾಸಪ್ಪನವರು ಭೋಗಜೀವನ ತ್ಯಾಗಮಾಡಿ ಜೈಲಲ್ಲಿ ಖೈದಿಗಳ ಜೊತೆ ಹೇನು, ಕೂರೆಗಳ ಕಾಟದಿಂದ ನರಳಿ ದೇಶಕ್ಕೆ ಸ್ವಾತಂತ್ರ್ಯತಂದ ಮಹಾ ದೇಶಭಕ್ತರು "ಮೀಸೆ ಬರುವವನಿಗೆ ದೇಶ ಕಾಣದು" ಎನ್ನುವಂತೆ ಆಗತಾನೇ ಕಾಲೇಜ್ ವಿದ್ಯಾಭ್ಯಾಸದಿಂದ ಬಂದ ಶ್ರಿ ಎಂ. ಎಸ್. ಗುರುಪಾದಸ್ವಾಮಿ ಅವರು ದಾಸಪ್ಪ ನವರನ್ನು ಚುನಾವಣೆಯಲ್ಲಿ ಸೋಲಿಸಿಲೋಕ ಸಭೆಗೆ ಚುನಾಯಿತರಾದುದರಿಂದ ರಾಜ್ಯದ ಮಹಾನ್ ನಾಯಕರೆಲ್ಲರಿಗೂ ಸೋಜಿಗದ ಮಾತಾಯಿತು ಮೈಸೂರು ಲೋಕಸಭಾ ಚುನಾವಣೆ.

ಸಾಹುಕಾರ್ ಚನ್ನಯ್ಯನವರ ದ್ವೇಷಕ್ಕೊಳಗಾದ ಅದೆಷ್ಟು ಚುನಾವಣೆಗಳು ಇಂತಹ ದುರಂತಕ್ಕೊಳಗಾದವೋ ಹೇಳಲಾಗುವುದಿಲ್ಲ. ಅವರಿವರನ್ನು ಪಿತೂರಿಯಿಂದ ಸೋಲಿಸಲು ಹವಣಿಸುತ್ತಿದ್ದ ಚನ್ನಯ್ಯನವರು ನೇರವಾಗಿ ತಾವಾಗೇ ಚುನಾವಣೆ ಯಲ್ಲಿ ಮಂಡ್ಯರೈತರಿಂದ ಸೋಲಿನ ಧಾಳಾ ಧೂಳಿಗೆ ಈಡಾದರು. "ಮಾಡಿದ್ದುಣ್ಣೋ ಮಾರಾಯ" ಎಂಬ ನಾಣ್ನುಡಿಗೆ ಮುಂದೆ ಎರವಲಾಯಿತು ಚನ್ನಯ್ಯನವರ ಸೋಲು.

ಈ ಪ್ರಕರಣಾನಂತರ ಎಂ. ಪಿ. ಸಿ. ಸಿ. ಚುನಾವಣೆಗಳು ಬಂದವು. ಆ ಚುನಾವಣೆಗೂ ಸಹ ಸಾಹುಕಾರರು ಇನ್ನಿಲ್ಲದ ತಕರಾರು ಒಡ್ಡಿ "ಪ್ರಾಥಮಿಕ ಸದಸ್ಯರ ಪಟ್ಟಿಯಲ್ಲಿ ಕೆ. ಎಂ. ಪಿ., ಸೋಷಲಿಸ್ಟ್, ಕಮ್ಯೂನಿಸ್ಟ್ ಪಕ್ಷದ ಸದಸ್ಯರುಗಳನ್ನು ಸೇರಿಸಿಕೊಂಡಿದ್ದಾರೆ" ಮುಂತಾದ ಆರೋಪಗಳನ್ನು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಕೆ. ವಿ. ಶಂಕರಗೌಡರು ಮತ್ತು ಪ್ರಧಾನ ಕಾರ್ಯದರ್ಶಿ ಮೇಲೆ ಹೊರಿಸಿದರು.

ಇತರೆ ರಾಜಕೀಯ ಪಕ್ಷದ ಸದಸ್ಯರಿದ್ದರೆ ಪತ್ತೆಮಾಡಿ ಅಂತಹವರನ್ನು ಪಟ್ಟಿಯಿಂದ ತೆಗೆಯಬಹುದೆಂದು ಒಪ್ಪಿಕೊಂಡೆವು'' "ಸ್ಥಳೀಯರಿಂದ ನಿಷ್ಪಕ್ಷಪಾತವಾದ ಪರಿಷ್ಕರಣ ಆಗದೆಂದು ರಾಷ್ಟ್ರೀಯ ಕಾಂಗ್ರೆಸ್ಸಿನ ಪರವಾಗಿ ಸದಸ್ಯರೊಬ್ಬರನ್ನು ಕಳುಹಿಸಲು ಚನ್ನಯ್ಯನವರು ಆಗ್ರಹ ಪಡಿಸಿದರು. ರಾಷ್ಟ್ರೀಯ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿಗಳಲ್ಲೊಬ್ಬರಾದ ಮಾಧವನ್ ನಾಯರ್ ಅವರ ಕಾರ್ಯದರ್ಶಿ ಚಲ್ಲಪ್ಪನ್‌ಪಿಳ್ಳೈ ಎಂಬುವರನ್ನು ಕಳುಹಿಸಿ ಕೊಟ್ಟರು. ಶ್ರೀ ಚಲ್ಲಪ್ಪನ್‌ಪಿಳ್ಳೈಯವರು ಸಕ್ಕರೆ ಕಂಪನಿ ಅಧ್ಯಕ್ಷರಾಗಿದ್ದ ಎ. ಜಿ. ಬಂದೀಗೌಡರ ಜೊತೆ ರಾತ್ರಿ ಎಂಟುಘಂಟೆಗೆ ಪ್ರವಾಸಿ ಮಂದಿರಕ್ಕೆ ನನ್ನನ್ನು ಮತ್ತು ಶಂಕರಗೌಡರನ್ನು ಕರೆಸಿಕೊಂಡರು. ವಿಚಾರವಿನಿಮಯಾ ನಂತರ ಜಿಲ್ಲಾ ಕಾಂಗ್ರೆಸ್ ಸಮಿತಿ ಲೆಕ್ಕಪತ್ರಗಳನ್ನು ಪರಿಶೀಲಿಸಬೇಕಾಗಿದೆ ಎಂದು ಚಲ್ಲಪ್ಪನ್‌ಪಿಳ್ಳೈ ತಿಳಿಸಿದರು. ಮೊದಲೆ ರೊಚ್ಚಿಗೆದ್ದಿದ್ದ ನನ್ನ ಮನಸ್ಸಿನ ಮೇಲೆ ಕಾಯ್ದನೀರು ಹಾಕಿದಂತಾಯಿತು. "ಪಿಳ್ಳೈಯವರೇ ನಾವೇನು ತಮ್ಮಂತೆ ಸಂಬಳದ ತಾಪೇದಾರಿಗಳಲ್ಲ, ಮಂಡ್ಯಜಿಲ್ಲೆಯ ಒಂಬತ್ತು ಲಕ್ಷ ಜನ ಮತದಾರರಿಂದ ಚುನಾಯಿತ ರಾದ ಖಾಸಗಿ ಗಣ್ಯರು ಎಂಬುದನ್ನು ಮರೆಯಬೇಡಿ, ನಾಳೆ ಬೆಳಗ್ಗೆ 9½ ಘಂಟೆಗೆ ಆಫೀಸಿಗೆ ಬಂದು ಕಾಣಿರಿ''ಎಂದು ಮನೆಗೆ ಹೋದೆವು.

ಪ್ರಾತಃಕಾಲ ಟಿ. ಎಸ್. ಮಾದಪ್ಪಗೌಡರೊಡನೆ ಪಿಳ್ಳೈಯವರು ಕಾಂಗ್ರೆಸ್ ಕಛೇರಿಗೆ ಬಂದರು, ಸುಮಾರು 20 ಸಾವಿರ ಸದಸ್ಯರುಗಳನ್ನು ತೋರಿಸಿದ್ದ ಸದಸ್ಯರುಗಳ ರಸೀದಿ ಪುಸ್ತಕಗಳ ರಾಶಿ ಆಳೆತ್ತರಕ್ಕೆ ಜೋಡಿಸಿ ಇಟ್ಟಿತ್ತು. ಪಿಳ್ಳೈಯವರು ರಾಶಿ ನೋಡಿದ ಕೂಡಲೇ ಗಾಬರಿಗೊಂಡರು. ಮಾದಪ್ಪಗೌಡರು ''ಪಿಳ್ಳೈಯವರೇ ಇವುಗಳ ಪರಿಷ್ಕರಣ ಮುಗಿಸುವುದು ತಿಂಗಳಾನುಗಟ್ಟಲೆಯಾದರೂ ಸಾಲದು, ನೋಡಿ ಸಾಧ್ಯವಾದರೆ ಪರಿಷ್ಕರಣ ನಡೆಸಿ ನನ್ನಿಂದ ದಿನಗಟ್ಟಲೆ ಕೂರಲಾಗದು'' ಎಂದರು. ನಿಜಕ್ಕೂ ಪ್ರಾಥಮಿಕ ಸದಸ್ಯರ ಪಟ್ಟಿಯಲ್ಲಿ ಬೇರೆ ರಾಜಕೀಯ ಪಕ್ಷಗಳ ಸದಸ್ಯರನ್ನು ನೊಂದಾಯಿಸಿಕೊಂಡಿರಲಿಲ್ಲ. ಶ್ರೀರಂಗಪಟ್ಟಣದಿಂದ ಡಾ॥ ಸಿ. ಬಂದೀಗೌಡರ ವಿರುದ್ಧ ಎ. ಜಿ. ಬಂದೀಗೌಡರನ್ನು ತರಬೇಕೆಂಬ ಹಟಮಾರಿತನ ಚನ್ನಯ್ಯನವರದಾಗಿತ್ತು. ದಿನಕಳೆದಂತೆ ಸಾಹುಕಾರರ ಹಟಮಾರಿತನಕ್ಕೆ ಎ. ಜಿ. ಬಂದೀಗೌಡರು ತುಂಬಾ ಬೇಸರಗೊಂಡು, ''ಸದ್ಯ ನನಗೆ ಯಾವ ಸ್ಥಾನವು ಬೇಡಿ ಸಮಸ್ಯೆ ಬಗೆಹರಿಸಿಕೊಳ್ಳಿ'' ಎಂದರು. ''ನಮ್ಮ ಜಿಲ್ಲೆಗೆ ಜನಸಂಖ್ಯಾನುಗುಣವಾಗಿ ಎಂಟು ಎಂ.ಪಿ. ಸಿ.ಸಿ. ಸ್ಥಾನಗಳು ದೊರೆಯಬೇಕು.'' ನಾವು ಎಂಟು ಸ್ಥಾನಗಳಲ್ಲಿ ಅಧ್ಯಕ್ಷರು ಅವಕಾಶ ಮಾಡಿಕೊಟ್ಟರೆ ಎ. ಜಿ. ಬಂದೀಗೌಡರಿಗೆ ಒಂದು, ಡಾ। ಸಿ. ಬಂದೀಗೌಡರಿಗೆ ಒಂದು ಸ್ಥಾನ ಕಲ್ಪಿಸಿ ಈ ಹಾಳು ವ್ಯಾಜ್ಯ ಕೊನೆಗಾಣಿಸೋಣ' ಎಂದು ಸಲಹೆ ಮಾಡಿದೆ. ''ಹಾಗೇ ಮಾಡು. ಫೋನ್‌ನಲ್ಲಿ ಜನರಲ್ ಸೆಕ್ರೆಟರಿ ಮರಿಯಪ್ಪನವರೊಡನೆ ಮಾತನಾಡಿ ಅವರು ಒಪ್ಪಿದರೆ ಅಧ್ಯಕ್ಷರಿಗೂ ಕಾಗದ ಬರೆದು ಒಪ್ಪಿಗೆ ಪಡೆದು ಸಮಸ್ಯೆ ಬಗೆಹರಿಸಿಬಿಡು ಮಹಾರಾಯ''

ಎಂದರು. ಅಧ್ಯಕ್ಷರ ಆದೇಶದಂತೆ ನಾನು ಮರಿಯಪ್ಪನವರೊಡನೆ ದೂರವಾಣಿಯಲ್ಲಿ ಮಾತನಾಡಿದೆ. ಅವರು ಒಪ್ಪಿಗೆ ನೀಡಿ "ಅಧ್ಯಕ್ಷರಿಗೆ ಈ ಸಲಹೆಯ ಕಾಗದ ಕಳುಹಿಸಿ ಕೊಡಿರಿ" ಎಂದರು. ಅಧ್ಯಕ್ಷರಿಗೆ ಕಾಗದ ಬರೆದೆ, ಅವರಿಂದ ಎಂಟು ಸ್ಥಾನಗಳನ್ನು ಮಂಡ್ಯಕ್ಕೆ ಕೊಡಲು ಸಾಧ್ಯವೇ ಇಲ್ಲವೆಂದು ಉತ್ತರಬಂದಿತು. ಅವರು ಸಂಧಾನದ ಬಾಗಿಲನ್ನು ಪೂರ್ತಿ ಮುಚ್ಚಿದರು.

ನಮ್ಮ ಜಿಲ್ಲೆ ಎಂ. ಪಿ. ಸಿ. ಸಿ. ಚುನಾವಣೆಗೆ ಕೊಡಗಿನ ಕುಶಾಲಪ್ಪನವರು ಚುನಾವಣಾಧಿಕಾರಿಗಳು, ದಿನ ಬಿಟ್ಟು ದಿನ ಕುಶಾಲಪ್ಪನವರಲ್ಲಿಗೆ ವಿವರಣೆ ನೀಡಲು ಕೆ.ವಿ. ಶಂಕರಗೌಡರ ಕಾರಿನಲ್ಲಿ ಪ್ರಯಾಣಮಾಡಿದೆವು. ಹೀಗೆ ತಿಂಗಳುಕಾಲ ನಡೆದರೂ ಚುನಾವಣೆ ನಡೆಸಲು ಸಾಧ್ಯವೇ ಆಗಲಿಲ್ಲ. ಆ ಚುನಾವಣೆ ಬಗ್ಗೆ ನಾವು ತಲೆ ಕೆಡಿಸಿ ಕೊಳ್ಳಲಿಲ್ಲ. ಪ್ರಾಥಮಿಕ ಸದಸ್ಯರ ಪಟ್ಟಿ ಪರಿಷ್ಕರಣಕ್ಕೆ ಬಂದಿದ್ದ ಚೆಲ್ಲಪ್ಪ ಪಿಳ್ಳೆಯವರು ಜಿಲ್ಲೆಯ ಏಳು ತಾಲ್ಲೂಕು ಕಾಂಗ್ರೆಸ್ ಸಮಿತಿಗಳ ಲೆಕ್ಕ ಪರಿಷ್ಕರಿಸಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಲೆಕ್ಕ ಪತ್ರಗಳು ಸರಿಯಿವೆ ಎಂದು ಮಾಧವನ್ ನಾಯರ್‌ಗೆ ವರದಿಮಾಡಿದರು. ಇದನ್ನು ತಿಳಿದ ಅಧ್ಯಕ್ಷರಾದ ಸಾಹುಕಾರ್ ಚನ್ನಯ್ಯನವರು, ಮರಿಯಪ್ಪನವರು ಮತ್ತು ಎ. ಜಿ. ಬಂದೀಗೌಡರ ಮೇಲೆ ಹಾರಾಡಿ ಬಂದವರಿಗೆ ಸರಿಯಾಗಿ ಮಾಹಿತಿ ನೀಡಲು ನೀವು ಅಸಮರ್ಥರೆಂದು ನಮ್ಮೆದುರಿನಲ್ಲೆ ಕಟುವಾಗಿ ಟೀಕಿಸಿದರು.

ಪ್ರಾಥಮಿಕ ಸದಸ್ಯರ ಪಟ್ಟಿ ಪರಿಷ್ಕರಣ ಮಾಡಿಸದೆ ಎಂ.ಪಿ. ಸಿ.ಸಿ. ಚುನಾವಣೆ ನಡೆಸುವುದಾಗದೆಂದು ನೆಹರೂ ಅವರಲ್ಲಿ ಆಗ್ರಹಪಡಿಸಿ ಉತ್ತರ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಉಪಾಧ್ಯಾಯ ಅವರನ್ನು ಕರೆಸಿಕೊಂಡರು. ಉಪಾಧ್ಯಾಯರು ಬೆಂಗಳೂರಿಗೆ ಬಂದು ವುಡ್‌ಲ್ಯಾಂಡ್ ಹೋಟೇಲಿನಲ್ಲಿ ಇಳಿದುಕೊಂಡು ಜಿಲ್ಲಾ ಕಾಂಗ್ರೆಸ್ ಸಮಿತಿ ಸದಸ್ಯರುಗಳು ಸೇರಿದಂತೆ ಪದಾಧಿಕಾರಿಗಳನ್ನು ಕರೆಸಿಕೊಂಡರು. ನಾನೇ ಮೊದಲು ಕೊಠಡಿ ಪ್ರವೇಶಮಾಡಿ "ಉಪಾಧ್ಯಾಯರೆ ಹೇಗಿದ್ದೀರಿ. ಸುಖನಿದ್ರೆ ಮಾಡಿದಿರ" ಎಂದು ಅವರ ಆರೋಗ್ಯ ವಿಚಾರಿಸಿದೆ. ಸ್ವಲ್ಪ ಜ್ವರವಿದೆ. ಇನ್ನೆಲ್ಲಾ ಚೆನ್ನಾಗಿದ್ದೇನೆ ಎಂದರು. ಚನ್ನಯ್ಯನವರು ಮತ್ತು ಮರಿಯಪ್ಪನವರು ಅವರೊಡನಿದ್ದರು. ತಾವು ನಮ್ಮ ಕಾಂಗ್ರೆಸ್ ಭವನ ನೋಡಿಲ್ಲ. ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ನಿರ್ಮಾಣ ಮಾಡಲಾಗಿದೆ. ನಾನು ಕೇಳಿರುವಂತೆ ತಾವು ಗೋವಿಂದ ವಲ್ಲಭ ಪಂತ ರಂತಹ ದೊಡ್ಡವರೊಡನೆ ಕಾಂಗ್ರೆಸ್‌ಹೋರಾಟದ ದಿನಗಳನ್ನು ಕಳೆದ ಅಚ್ಚಹಳೇ ಕಾಂಗ್ರೆಸ್ಸಿಗರು. ಹೊಸ ಬ್ರ್ಯಾಂಡ್ ಕಾಂಗ್ರೆಸ್ ಸದಸ್ಯರಂತೆ ಬಾರ್ ಅಟ್ಯಾಚಡ್ ಹೊಟೇಲಿನಲ್ಲಿ ತಾವು ತಂಗಿರುವುದು ಸರಿಯಲ್ಲ. ಈ ಹೋಟೆಲಿನಲ್ಲಿ ನಮ್ಮ ಹಗರಣ ಬಿಚ್ಚಿ ಬೀದಿ ಪಾಲುಮಾಡಿ ಸಂಸ್ಥೆಗೆ ಅಪಕೀರ್ತಿ ತರುವುದು ಸರಿಯಲ್ಲ ಎಂಬ ಮಾತು ತಾವು ಒಪ್ಪುತ್ತೀರಿ ಎಂದು ಕಾಣುತ್ತದೆ ಎಂದೆ. ಅಹುದಹುದು ಕಾಂಗ್ರೆಸ್ ಕಛೇರಿಯಲ್ಲೆ

ಸೇರಿ ಮಾತನಾಡೋಣ ಎಂದು ಮಧ್ಯಾಹ್ನ 3 ಗಂಟೆಗೆ ನೀವೆಲ್ಲ ಬಂದರೆ ಪ್ರಕರಣ ಮುಗಿಸಿಬಿಡೋಣ ಎಂದು ತಿಳಿಸಿದರು.

ಮಧ್ಯಾಹ್ನ ಉಪಾಧ್ಯಾಯರು ಹೇಳಿದ ವೇಳೆಗೆ ಹೋದೆವು. ಆದರೆ ಪ್ರಾಥಮಿಕ ಸದಸ್ಯರ ಫಾರಂಗಳ ಪುಸ್ತಕಗಳ ರಾಶಿ ಮಂಡ್ಯದಲ್ಲೆ ಇರಬೇಕಾದ ಜಾಗದಲ್ಲೇ ಉಳಿದಿದ್ದವು. ಉಪಾಧ್ಯಾಯರು ಪ್ರಾಥಮಿಕ ಸದಸ್ಯರ ಫಾರಂಗಳಿಲ್ಲದೆ ಮಾತನಾಡುವು ದೇನಿದೆ. ಅವುಗಳನ್ನು ನಾಳೆ ಬೆಂಗಳೂರಿಗೆ ತಂದರೆ ನೋಡಿ ಪರಿಶೀಲಿಸೋಣ ಎಂದರು. ಇದೇನು ಸ್ವಾಮಿ ನೀವು ಹೇಳುವುದು. ನೀವು ಬಂದಿರುವುದು ಮಂಡ್ಯ ಜಿಲ್ಲಾ ಕಾಂಗ್ರೆಸ್ ಸಮಿತಿ ಪರಿಶೀಲನೆಗೆ. ಆಫೀಸನ್ನೆ ಇಲ್ಲಿಗೆ ಹೊತ್ತು ತರಲು ಹೇಳು ತ್ತಿದ್ದೀರಿ. ಸಾಧ್ಯವಾಗದು ಎಂದು ನಿರಾಕರಿಸಿದೆ. ಚನ್ನಯ್ಯನವರು "ನೋಡಿ ಈತನದು ಇದೇ ರೀತಿ ಒರಟಾಟ ಮೊದಲಿಂದಲೂ'' ಎಂದರೆ ''ಅಲ್ಲಾ ಸಾರ್ ನನ್ನದು ಒರಟಾಟವೋ ? ಅಥವ ಮಾಡಲು ಕೆಲಸವಿಲ್ಲದ ಕುಂಬಾರ ಮಗುವಿನ ಕುಂಡೆ ತಟ್ಟಿದ ಎನ್ನುವಂತೆ ನಿಮ್ಮದು ಒರಟಾಟವೋ'' ಎಂದೆ. ಶಂಕರಗೌಡರು ''ಬಿಡಯ್ಯ ನಾಳೆ ಫಾರಂಗಳನ್ನು ತರೋಣ'' ಎಂದು ಹೇಳಿದರು. ''ನಾಳೆ ಭೇಟಿ ಮಾಡೋಣ'' ಎಂದು ಉಪಾಧ್ಯಾಯರಿಗೆ ತಿಳಿಸಿ ಬಂದೆವು.

ಪ್ರಾತಃಕಾಲ 20 ಸಾವಿರ ಫಾರಂಗಳ ಪುಸ್ತಕಗಳನ್ನು ಶಂಕರಗೌಡರ ಕಾರಿನ ಡಿಕ್ಕಿ ಮತ್ತು ಹಿಂದಿನ ಸೀಟಿನಲ್ಲಿ ತುಂಬಿಕೊಂಡು ಹೋದೆವು. ಕಾರಿನಿಂದ ಫಾರಂಗಳನ್ನು ಮೇಲೆ ಸಾಗಿಸುವುದು ಬಹಳ ಹೊತ್ತಾಗುವುದೆಂದು ಕಾಂಗ್ರೆಸ್‌ಭವನದ ಕೆಳಗಿನ ಅಂತಸ್ತಿ ನಲ್ಲೇ ಇಳಿಸಿದೆವು. ಉಪಾಧ್ಯಾಯರು ರಾಶಿಯನ್ನು ನೋಡಿದರು. "ಇದೇನು ಅಧ್ಯಕ್ಷರೆ ಪರಿಶೀಲಿಸಲು ಒಂದೆರಡು ದಿನಗಳು ಸಾಲವು ಏನೇ ಆದರು ಎರಡು ಮೂರು ವಾರ ಗಳಾದರು ಬೇಕಾಗುವುದು. ಈ ಕೆಲಸಕ್ಕೆ ಕನ್ನಡ ಬಾರದ ನಮ್ಮನ್ನು ಕರೆಸಿಕೊಳುವುದ ರಿಂದ ಸಮಸ್ಯೆ ಶೀಘ್ರವಾಗಿ ಬಗೆಹರಿಯದು" ಎಂದು ತಮ್ಮ ನಿರಾಸಕ್ತಿಯನ್ನು ವ್ಯಕ್ತ ಪಡಿಸಿದರು. ಸಾಹುಕಾರರು ಸಮಸ್ಯೆ ದೆಹಲಿಯವರಿಂದ ಸುಲಭವಾಗಿ ಬಗೆಹರಿಯದೆಂಬ ತೀರ್ಮಾನಕ್ಕೆ ಬಂದರು. ಈ ಹಿಂದಿನ ಮಂತ್ರಿಮಂಡಲವಲ್ಲಿ ಸಚಿವರಾಗಿದ್ದ ಮಹಮ್ಮದ್ ಷರೀಫರನ್ನು ಈಫಾರಂಗಳನ್ನು ಪರಿಶೀಲಿಸಲು ಕೋರಲಾಗುವುದು, ಅವರು ಏನು ತೀರ್ಮಾನ ಕೈಗೊಳ್ಳುವರೋ ಹಾಗೆ. ಅವರಿಂದ ಕಾಗದ ಬಂದ ಮೇಲಿ ಬನ್ನಿ'' ಎಂದರು. ಆಗಬಹುದೆಂದು ಹೇಳಿ ಮಂಡ್ಯಕ್ಕೆ ಬಂದೆವು. ಮೂರನೇ ದಿನಕ್ಕೆ ಹೋದೆವು ಮಹಮ್ಮದ್ ಷರೀಫರು "ನೀವು ಆಕ್ಷೇಪಣೆ ಎತ್ತಿರುವ ಇತರ ರಾಜಕೀಯ ಪಕ್ಷಗಳ ಸದಸ್ಯರ ಸೇರ್ಪಡೆ ಆಗಿದ್ದರೆ ಯಾವ ನಂಬರ್ ಪುಸ್ತಕದಲ್ಲಿ ಎಷ್ಟನೇ ನಂಬರ್ ಕ್ರಮ ಸಂಖ್ಯೆಯಲ್ಲಿ ಎಂಬ ವಿವರದ ಆಕ್ಷೇಪಣಾ ಪತ್ರ ಕೊಡಲು ಅಧ್ಯಕ್ಷರನ್ನು ಕೇಳಿದರು. ''ಆ ರೀತಿ ಪಟ್ಟಿಮಾಡಿಲ್ಲ'' ಎಂದರು ಅಧ್ಯಕ್ಷರು. ''ಹಾಗಿದ್ದರೆ ಬರೀಕೈನಲ್ಲಿ ಮೊಳ ಹಾಕುವುದರಿಂದ ಏನೂ ಉಪಯೋಗವಿಲ್ಲ, 20 ಸಾವಿರ ಫಾರಂಗಳ ಕ್ರಮಾಸಂಖ್ಯಾನು

ಸಾರ ನೀವು ಪಟ್ಟಿ ಮಾಡಿಲ್ಲವೆ ?" ಎಂದು ನಮ್ಮನ್ನು ಕೇಳಿದರು. "ಇಲ್ಲ ಸರ್ ಫಾರಂಗಳು ಆಫೀಸಿಗೆ ತಲುಪುವಲ್ಲಿ ತಕರಾರು ಬಂದು ಈ ಫಾರಂಗಳ ರಾಶಿಯನ್ನು ಇಲ್ಲಿಂದ ಅಲ್ಲಿಗೆ, ಅಲ್ಲಿಂದಿಲ್ಲಿಗೆ ಹೀಗೆ ಸಾಗಾಣಿಕೆಯುಳ್ಳೀ ಇವೆ" ಎಂದೆ. "ಸರಿ ಸಾಹುಕಾರರೆ ಬರುತ್ತೇವೆ" ಎಂದು ಹೇಳಿ ಷರೀಫ್ ಸಾಹೇಬರು ಹೋದರು.

ಮೈಸೂರು ಪ್ರದೇಶ ಕಾಂಗ್ರೆಸ್ ಆಫೀಸಿನ ಮತ್ತು ಅಧ್ಯಕ್ಷರ ಒರಟು ಸ್ವಭಾವದ ಪೂರ್ಣಅರಿವು ಅಧ್ಯಕ್ಷರಾಗಿದ್ದ ದೇಬರ್ ಅವರಿಗಿತ್ತು. ಅವರು ಅದನ್ನು ತೀವ್ರವಾಗಿ ಗಮನಿಸಿ, ಇನ್ನು ಅವರಿವರನ್ನು ಕಳುಹಿಸಿ ಉಪಯೋಗವಿಲ್ಲ ಎಂದು ತೀರ್ಮಾನಿಸಿದರು. ಮಾಧವನ್ ನಾಯರ್ ಜೊತೆ ತಾವೇ ಸ್ವತಃ ಬೆಂಗಳೂರಿಗೆ ಬಂದರು, ದೇಬರ್ ಅವರು ನಮ್ಮನ್ನು ಭೇಟಿ ಮಾಡುವ ಮೊದಲು ಮಾಧವನ್ ನಾಯರ್ ಭೇಟಿಮಾಡಿದರು. ನಾವು ಹಿಂದೆ ಹೇಳಿದ್ದನ್ನೇ ಹೇಳಿ ಅಧ್ಯಕ್ಷರು ನಮ್ಮ ಜಿಲ್ಲೆಗೆ ಎಂಟು ಎಂ. ಪಿ. ಸಿ. ಸಿ. ಸ್ಥಾನಗಳನ್ನು ಮಂಜೂರು ಮಾಡಿದರೆ ಎ. ಜಿ. ಬಂದೀಗೌಡರಿಗೂ ಒಂದು ಸ್ಥಾನವನ್ನು ಬಿಟ್ಟುಕೊಡುವುದಾಗಿ ತಿಳಿಸಿದೆವು. ನಾಯರ್ ಅವರಿಗೆ ನಮ್ಮ ಮಾತು ಹಿಡಿಸಿತು. ಸಾಹುಕಾರರು ಈ ಸಲಹೆಗೆ ಮಣಿದಂತೆ ಕಾಣೆ, ನಾಯರ್ ಅವರು ಅಧ್ಯಕ್ಷರ ಕೊಠಡಿಯಿಂದ ಹೊರಬರುತ್ತ "ಈ ಸಮಸ್ಯೆ ನನ್ನಂತಹವನ ಕೈಲಿ ಸಾಧ್ಯವಿಲ್ಲ. ದೇಬರ್ ಅವರೇ ತೀರ್ಮಾನ ಕೈಗೊಳ್ಳುವುದು ಸೂಕ್ತ" ಎಂದು ದೇಬರ್ ಅವರಿಗೆ ಸಲಹೆ ಮಾಡಿದರು.

ಅಧ್ಯಕ್ಷ ದೇಬರ್ ಅವರು ಚನ್ನಯ್ಯನವರ ಕೊಠಡಿ ಪ್ರವೇಶಿಸಿ ನಿರ್ದಾಕ್ಷಿಣ್ಯವಾಗಿ "ನಾನು ಇಂದು ಈ ಸಮಸ್ಯೆಗೆ ಕೊನೆ ತೆರೆ ಎಳೆಯಲೇಬೇಕು. ನೀವು ನನ್ನ ತೀರ್ಮಾನಕ್ಕೆ ಒಪ್ಪಲೇ ಬೇಕು. ಇದನ್ನೇನು ದೊಡ್ಡ ಅಂತರ್‍ರಾಷ್ಟ್ರೀಯ ಸಮಸ್ಯೆಮಾಡಿ ಕುಳಿತಿದ್ದೀರಿ. ನಿಮ್ಮ ನಿಮ್ಮ ಸ್ವಂತ ದ್ವೇಷಾಸೂಯೆ ಮಾತ್ಸರ್ಯಗಳನ್ನು ತಂದು ಸಂಸ್ಥೆ ಮೇಲೆ ಹೇರಬೇಡಿ, ಇದು ದೇಶ ಮತ್ತು ಸಂಸ್ಥೆಗೆ ಒಳ್ಳೆ ಹೆಸರು ತರದು" ಎಂದು ಎಚ್ಚರಿಕೆ ನೀಡಿದರು. ಹಳೆಯದನ್ನೆ ಸಾಹುಕಾರರು ಹೇಳಿದರು. "ನೋಡಿ ಚನ್ನಯ್ಯನವರೇ ಶ್ರೀರಾಮಾಯಣದಲ್ಲಿ ಅಯೋಧ್ಯಾರಾಂ, ಸೀತಾರಾಂ, ಜಾನಕಿರಾಂ, ರಾವಣಾಂತಕರಾಂ ಹೀಗೆ ಎಷ್ಟೊಂದು ಜನ ರಾಮರು. ಕೊನೆಯಲ್ಲಿ ಉಳಿಯುವ ರಾಮ ಒಬ್ಬನೇ ಒಬ್ಬ. ಅವನು ದಶರಥನ ಮಗ ಶ್ರೀರಾಮ. ಹಾಗೆ ನೀವು ಹೇಳುವ ಪ್ರಾಥಮಿಕ ಪಟ್ಟಿಯಲ್ಲಿ ಕೆ. ಎಂ. ಪಿ. ರಾಂ, ಸೋಷಲಿಸ್ಟ್‌ರಾಂ, ಕಮ್ಯೂನಿಸ್ಟ್‌ರಾಂಗಳು ಇರಬಹುದು, ಅವರನ್ನು ಬಿಟ್ಟು ಸಕ್ರಿಯಸದಸ್ಯರ ಪಟ್ಟಿ ಪರಿಶೀಲಿಸಿ ಚುನಾವಣೆ ನಡೆಸಿ ಎಂದು ತೀರ್ಪಿತ್ತರು ದೇಬರ್ ಅವರು. ಏಳು ಸ್ಥಾನಗಳಿಗೂ ಅವಿರೋಧವಾಗಿ ನಮ್ಮ ಗುಂಪೇ ಬಂತು. ಸಾಹುಕಾರರ ಮಾತಿಗೆ ಮಣಿದು ಯಾರೂ ಸ್ಪರ್ಧೆಗೆ ಬರದೆ ಉಪಕರಿಸಿದರು.

ಈ ಮಧ್ಯೆ ದೆಹಲಿ ವರಿಷ್ಠರೆಲ್ಲರ ಗಮನ ಸೆಳೆದಿದ್ದ ಮಂಡ್ಯಜಿಲ್ಲಾ ಕಾಂಗ್ರೆಸ್

ಸಾಧನೆ ವರದಿ ಬಗ್ಗೆ ಒಂದೆರಡು ಮಾತುಗಳನ್ನು ಹೇಳ ಬಯಸುತ್ತೇನೆ. 1955ನೆಯ ಇಸವಿಯಲ್ಲಿ ರಾಜ್ಯಾದ್ಯಂತ ನಡೆಯುತ್ತಿದ್ದ ಭಾಷಾವಾರು ಪ್ರಾಂತಗಳ ಚಳುವಳಿ ಸಮೀಕ್ಷಿಸಲು ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದ ದೇಬರ್ ಅವರು ಮಂಡ್ಯಕ್ಕೆ ಮೇ ತಿಂಗಳಲ್ಲಿ ಬರಲಿದ್ದರು. ಮೈಸೂರು ವಿಲೀನ ವಿರೋಧಿ ಸಮ್ಮೇಳನದ ಬಗ್ಗೆ ವರದಿ ತಯಾರು ಮಾಡುವಾಗ ನಾನು ಮತ್ತು ನಮ್ಮ ಸರ್ವಕ್ಷೇತ್ರದಲ್ಲೂ ಹಿಂದಿದ್ದು ಬೆಂಬಲಿಸಿದ ಪಿ. ಇ. ಎಸ್. ಇಂಜಿನಿಯರಿಂಗ್ ಕಾಲೇಜ್ ರಿಜಿಸ್ಟ್ರಾರರಾಗಿದ್ದ ಶ್ರೀ ಎಲ್. ನಾರಾಯಣ ಅವರು ಸೇರಿ ಮಂಡ್ಯಜಿಲ್ಲೆಯ ಸಮಗ್ರವಾದ ವರದಿಯೊಂದನ್ನು ತಯಾರಿಸಿದೆವು. ಆ ವರದಿಯಲ್ಲಿ ಏಕ ಕಾಲದಲ್ಲೆ ಮಹಾತ್ಮಗಾಂಧೀ ಅವರ ಎಲ್ಲ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳುವ ಬದಲು ಪಾಂಚವಾರ್ಷಿಕವಾಗಿ ಯಾವುದಾದರು ಕಾರ್ಯಕ್ರಮ ಹಾಕಿಕೊಳ್ಳುವುದಾಗಿ ತಿಳಿಸಿ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಜಿಲ್ಲಾದ್ಯಂತ ಸಹಕಾರ ಸಂಘಗಳನ್ನು ಸ್ಥಾಪಿಸಿ ಜನರ ನಿತ್ಯೋಪಯೋಗಿ ವಸ್ತುಗಳನ್ನು ಬಹಿರಂಗ ಮಾರುಕಟ್ಟೆಯಲ್ಲಿ ಒದಗಿಸುವ ಯೋಜನೆಯನ್ನು ವಿಶದೀಕರಿಸಿದ್ದೆವು. ಜೊತೆಗೆ ಜಿಲ್ಲೆಯ ಜನಸಂಖ್ಯೆಗನುಗುಣವಾಗಿ ನಡೆಯುವ ಸಹಕಾರ ಸಂಘಗಳ ವಹಿವಾಟು, ಆ ವಹಿವಾಟಿನಿಂದ ಬರುವ ಆದಾಯ, ಜಿಲ್ಲೆಯ ಪ್ರತಿ ಊರಿನ ಪ್ರತಿ ಮನೆಯ ಒಬ್ಬನಸ್ನಾದರು ಸಹಕಾರ ಸಂಘದ ಸದಸ್ಯ ಮಾಡುವುದು ಮೊದಲ ವರ್ಷದ ಕಾರ್ಯಕ್ರಮ. ಎರಡನೇ ವರ್ಷ ಪ್ರತಿ ಸಂಸಾರದ ವಯಸ್ಕರಾದವರನ್ನು ತಪ್ಪದೇ ಸಹಕಾರ ಸಂಘದ ಸದಸ್ಯರನ್ನಾಗಿ ಮಾಡುವ ಯೋಜನೆ. ಹೀಗೆ ಐದು ವರ್ಷದಲ್ಲಿ ಮಂಡ್ಯಜಿಲ್ಲೆಯ ರೈತನ ಆದಾಯ ವೆಚ್ಚದ ಲೆಕ್ಕ ಹಾಗೂ ವಹಿವಾಟು ಸಹಕಾರ ಸಂಘದ ಮುಖಾಂತರವೇ ನಡೆದು ಇಂಡಿಯಾದೇಶದಲ್ಲಿ ಮಂಡ್ಯ ಸಹಕಾರ ಜಿಲ್ಲೆಯಾಗಿ ಪರಿವರ್ತಿತವಾಗುವ ಯೋಜನೆಗೆ ಮಂಡ್ಯಜಿಲ್ಲಾ ಕಾಂಗ್ರೆಸ್ ಅನುಮೋದಿಸಿದೆ ಎಂಬ ವಿವರದ ಸುಮಾರು 30 ಪುಟಗಳ ಟೈಪ್ಡ್ ಪುಸ್ತಕವನ್ನು ಜಿಲ್ಲಾ ಸಮಿತಿ ಪ್ರಧಾನ ಕಾರ್ಯದರ್ಶಿಯಾಗಿದ್ದ ನಾನು ದೇಬರ್ ಅವರು ವೇದಿಕೆಗೆ ಬಂದ ಕೂಡಲೇ ಏಕೀಕರಣ ಮತ್ತು ಜಿಲ್ಲಾ ಕಾಂಗ್ರೆಸ್ ವರದಿ ಪುಸ್ತಕಗಳನ್ನು ಅವರ ಕೈಗಿತ್ತೆ.

ಭಾಷಾವಾರು ಪ್ರಾಂತರಚನೆ ವರದಿಯನ್ನು ಹಾಗೆಯೇ ಕಡೆಗಣ್ಣಿನಿಂದ ನೋಡಿ ದೂರ ಸರಿಸಿ, ಮಂಡ್ಯಜಿಲ್ಲಾ ಕಾಂಗ್ರೆಸ್ಸಿನ ವರದಿಯಲ್ಲಿ ತಲ್ಲೀನರಾದ ದೇಬರರು ಒಂದು ಗಂಟೆಕಾಲ ನಡೆದ ಯಾವುದೇ ಕಾರ್ಯಕ್ರಮದತ್ತ ಮುಖ ತಿರುಗಿಸಲಿಲ್ಲ. ಕಾರ್ಯಕ್ರಮ ಮುಗಿದಿತ್ತಾದರು ವರದಿಯ ಹಾಳೆಗಳನ್ನು ಮಗುಚಿ ಮಗುಚಿ ನೋಡಿದ ದೇಬರರನ್ನು ಟಿ. ಮರಿಯಪ್ಪನವರು ಎಚ್ಚರಿಸಿ ಮೈಸೂರಿಗೆ ಹೊರಡೋಣ ಎಂದರು. ನೀವೇ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯೋ ಎಂದು ಕೇಳಿ ನಿಮ್ಮ ಸಹಕಾರ ಸಂಘದ ಭವನ ಎಲ್ಲಿದೆ ತೋರಿ ಎಂದರು. ವೇದಿಕೆಯಿಂದ ಎದ್ದು ಬಂದ ದೇಬರ್ ಅವರು ಸ್ವಲ್ಪ

ದೂರ ನಡೆದು ಬಂದು ಸೊಸೈಟಿ ಭವನವನ್ನು ನಿಮಿಷಕಾಲ ನೋಡಿ ಸಂತಸಪಟ್ಟು ಹಿಂದೆಯಿದ್ದ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಶಂಕರಗೌಡರನ್ನು ತಬ್ಬಿ ಭಾರತದ ಶ್ರೇಷ್ಠ ಜಿಲ್ಲಾ ಕಾಂಗ್ರೆಸ್ ನಿಮ್ಮದು ಎಂದು ಬೆನ್ನು ಚಪ್ಪರಿಸಿ ಕಾರು ಹತ್ತಿ ಮೈಸೂರಿಗೆ ಪ್ರಯಾಣ ಮಾಡಿದರು.

ದೇಬರ್ ಅವರ ಜೊತೆ ವೀರಣ್ಣಗೌಡರು, ಎ. ಜಿ. ಬಂದೀಗೌಡರು ಟಿ. ಮರಿಯಪ್ಪನವರು ಇದ್ದರು. ಸಾಹುಕಾರ್ ಚನ್ನಯ್ಯನವರು ಮಂಡ್ಯದಲ್ಲಿ ಕೆ. ವಿ. ಶಂಕರಗೌಡ ತಂಡದವರನ್ನು ಕಾಂಗ್ರೆಸ್ಸಿನಿಂದಲೇ ಉಚ್ಚಾಟಿಸಬೇಕೆಂಬ ಮಹಾ ಸಂಕಲ್ಪಯಾಗ ಕೈಗೊಂಡಿದ್ದಾರೆ. ಸಾಹುಕಾರರ ದುರದೃಷ್ಟವೋ ಏನೋ ಈ ಯುವ ತಂಡದದರಿಗೆ, ಪ್ರಶಸ್ತಿಗಳ ಮೇಲೆ ಪ್ರಶಸ್ತಿ ತಾಂಡವವಾಡುತ್ತಿದೆ. 1957ರ ಸಾರ್ವತ್ರಿಕ ಚುನಾವಣೆಗಳು ಬಂದವು. ಈ ಚುನಾವಣೆಯಲ್ಲಿ ಮಂಡ್ಯಜಿಲ್ಲೆಯಿಂದ ವಿಧಾನ ಸಭೆಗೆ ಗೆದ್ದು ಬಂದಿದ್ದ ಯಾವೊಬ್ಬ ಸದಸ್ಯನೂ ಇಲ್ಲದಂತೆ ಎಲ್ಲರನ್ನು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಚನ್ನಯ್ಯನವರು ಬದಲಿಸಿ ವರಿಷ್ಠರ ಅಂಗೀಕಾರ ಪಡೆದಿದ್ದರು. ನಾನು ಹಿಂದೆ ಹೇಳಿರುವಂತೆ ದೇಬರ್ ಅವರೇ ಸ್ವತಃ ಸಹಕಾರ ಕ್ಷೇತ್ರದಲ್ಲಿ ಇಂಡಿಯಾ ಮಂಡ್ಯದಂತಾಗಬೇಕೆಂದು ಕಾಂಗ್ರೆಸ್ ರಚನಾತ್ಮಕ ಬುಲೆಟಿನ್‌ನಲ್ಲಿ ಎರಡು ಪುಟಗಳಿಗೂ ಮೀರಿ ಲೇಖನ ಬರೆದಿದ್ದರು. ಆ ಲೇಖನ ವರಿಷ್ಠರ ಮೇಲೆ ಬೀರಿದ ಪ್ರಭಾವ ದೊಡ್ಡದಾಗಿತ್ತು. ಭಾರತದ ಎಲ್ಲ ಕಾಂಗ್ರೆಸ್ ಸಮಿತಿಗಳು ಮಂಡ್ಯಜಿಲ್ಲಾ ಕಾಂಗ್ರೆಸ್ಸಿನ ಮಾದರಿ ಅನುಕರಣೆ ಮಾಡುವಂತೆ ಆದೇಶನೀಡುವ ಮಟ್ಟಕ್ಕೆ ತಲುಪಿದ್ದ ಸನ್ನಿವೇಶ ಅಂದಿನದು.

ಸಾಹುಕಾರ್ ಚನ್ನಯ್ಯನವರು ಮಂಡ್ಯದಿಂದ ಕೆ.ವಿ. ಶಂಕರಗೌಡರನ್ನು ತಪ್ಪಿಸಲು ಮನಸ್ಸು ಮಾಡಿದರು. ತಾವು ಮಂಡ್ಯ ವಿಧಾನ ಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಗೆಲ್ಲಬೇಕೆಂಬ ಛಲಕ್ಕಿಂತಲು ಶಂಕರಗೌಡರಿಗೆ ಸ್ಥಾನವಿಲ್ಲದಂತೆ ಮಾಡಬೇಕೆಂಬ ಹಟ ಸಾಹುಕಾರರದು, ಮಂಡ್ಯ ಕ್ಷೇತ್ರದಿಂದ ನೀವು ಏನೇ ಸಾಹಸ ಮಾಡಿದರು, ಗೆಲ್ಲುವುದು ದುಸ್ಸಾಧ್ಯವಾದ ಮಾತು. ಮಂಡ್ಯ ಬಿಟ್ಟು ಬೇರೆಲ್ಲಿಯಾದರು ಸ್ಪರ್ಧಿಸಿ ಎಂದು ನೆಹರೂ ಪಂತ್ ದೇಬರ್ ಮುಂತಾದ ಮಹಾನ್ ವ್ಯಕ್ತಿಗಳು ಹೇಳಿದರು. ಅವರ ಮಾತು ಸಾಹುಕಾರರ ಕಿವಿಗೆ ಬೀಳಲಿಲ್ಲ. ಪಾಪ ವರಿಷ್ಠರು ತಾನೆ ಏನು ಮಾಡಿಯಾರು. ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಚನ್ನಯ್ಯನವರಿಗೆ ಮಂಡ್ಯ ಸ್ಥಾನವನ್ನು ಬಿಟ್ಟುಕೊಟ್ಟರು. ಕಾಂಗ್ರೆಸ್ ಕೆಲಸಕ್ಕಾಗಿ ನಾನು ಬೆಂಗಳೂರಿಗೆ ಹೋಗಿದ್ದೆ. ರೆಸಿಡೆನ್ಸಿ ಭವನದಲ್ಲಿ ಭಾರತ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿ ಲಾಲ್‌ಬಹದ್ದೂರುಶಾಸ್ತ್ರಿಗಳು ತಂಗಿದ್ದಾರೆಂದು ಗೊತ್ತಾಯಿತು. ಸ್ನೇಹಿತರಾದ ಎಂ. ಎಸ್. ರಾಮ ಸಂಜೀವೆಗೌಡರೊಡನೆ ರೆಸಿಡೆನ್ಸಿಗೆ ಹೋದೆನು. ಶಾಸ್ತ್ರಿಗಳನ್ನು ಭೇಟಿ ಮಾಡಿ ಪರಿಚಯ ಮಾಡಿಕೊಂಡೆ. "ನಿಮ್ಮ ಸಹಕಾರ ಸಂಘಗಳ ಕಾರ್ಯಗಳು ಹೇಗೆ ನಡೆಯುತ್ತಿವೆ. ಈ

ಚುನಾವಣಾ ಗಲಾಟೆಯಿಲ್ಲದಿದ್ದರೆ ನಾನೊಮ್ಮೆ ನಿಮ್ಮ ಸಹಕಾರ ಸಂಘವನ್ನು ಸಂದರ್ಶಿಸಬೇಕಿತ್ತು'' ಎಂದರು. ಖಂಡಿತವಾಗಿ ಆಹ್ವಾನಿಸಿದೆ. ''ಚುನಾವಣೆಗಳು ಮುಗಿಯಲಿ ಆಮೇಲಿನ ಯೋಜನೆ'' ಎಂದರು ಶಾಸ್ತ್ರಿಗಳು. ಒಳಗಡೆ ಇದ್ದ ನಾರಾಯಣ ಅಗರವಾಲ ಅವರನ್ನು ಕೂಗಿ ಪರಿಚಯಿಸಿದರು.

''ಮಂಡ್ಯಜಿಲ್ಲೆ ವಿಧಾನ ಸಭಾಕ್ಷೇತ್ರಗಳ ಉಮೇದುವಾರಿಕೆ ಆಯ್ಕೆ ನಿಮಗೆಲ್ಲ ಒಪ್ಪಿಗೆಯೆ'' ಎಂದು ಅಗರವಾಲ್ ಕೇಳಿದರು. ಸಮೀಪದಲ್ಲಿ ಕುಳಿತಿದ್ದ ಎಂ. ಎಸ್. ರಾಮಸಂಜೀವಪ್ಪ ''ಮಂಡ್ಯ ಕ್ಷೇತ್ರಬಿಟ್ಟು ಉಳಿದೆಲ್ಲ ಒಪ್ಪಿಗೆ'' ಎಂದರು. ಶಾಸ್ತ್ರಿಗಳು ''ದೆಹಲಿವರಿಷ್ಠರು ಎಷ್ಟು ಹೇಳಿದರೂ ಕೇಳದೆ ಮಂಡ್ಯ ಕ್ಷೇತ್ರದಿಂದಲೇ ಸ್ಪರ್ಧಿಸಬೇಕೆಂದು ಚನ್ನಯ್ಯನವರು ಹಠಹಿಡಿದರು. ಮಂಡ್ಯದಲ್ಲಿ ನಿಮ್ಮ ಹಣೇಬರಹ ತೀರ್ಮಾನ ಮಾಡಿಕೊಳ್ಳಿ ಎಂದು ಬೇಸರದಿಂದ ಅನುಮತಿಯಿತ್ತರು. ಮಂಡ್ಯ ಯುವ ತಂಡದ ಅಸಹಕಾರದಿಂದ ನೀವು ಗೆಲ್ಲುವುದು ಖಂಡಿತ ಸಾಧ್ಯವಾಗದು. ಸರಿ ನಿಮ್ಮ ತೀರ್ಮಾನದಂತೆ ಮಂಡ್ಯದಿಂದಲೇ ಸ್ಪರ್ಧಿಸಿರಿ. ಚುನಾವಣಾನಂತರ ಮಂಡ್ಯ ಯುವತಂಡದ ಮೇಲೆ ದೂರು ತರಬೇಡಿ. ಆ ದೂರನ್ನು ನಾವು ಸಂಸ್ಥೆಯ ದೃಷ್ಟಿಯಿಂದ ಪರಿಗಣಿಸಲಾರೆವು ಎಂದು ಆದೇಶವಿತ್ತಿದ್ದಾರೆ'' ಎಂದರು ಶಾಸ್ತ್ರಿಗಳು. ''ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು ಚುನಾವಣೆಯಲ್ಲಿ ಗೆಲ್ಲುವುದು ಸಂಸ್ಥೆಯ ದೃಷ್ಟಿಯಿಂದ ಬಹುಮುಖ್ಯ. ಇದೇ ವಿಚಾರದಲ್ಲಿ ನಿಮ್ಮನ್ನೆಲ್ಲ ಕಂಡು ಮಾತನಾಡಿ ಚುನಾವಣೆಯಲ್ಲಿ ಕೆಲಸ ಮಾಡಲು ಉತ್ಸಾಹ ತುಂಬಲು ಮಾಧವನ್‌ನಾಯರ್ ರಾಯಭಾರಕ್ಕೆ ಬರಲಿದ್ದಾರೆ'' ಎಂದು ಶಾಸ್ತ್ರಿಗಳು ತಿಳಿಸಿ ಬೀಳ್ಕೊಟ್ಟರು.

ಮಾಧವನ್‌ನಾಯರ್ ಸಂಧಾನಕ್ಕೆ ಬಂದರು. ಫಲಪ್ರದವಾಗಲಿಲ್ಲ. ಯುವಕರು ಮತ್ತು ರೈತರು ಏಕೀಭವಿಸಿ ಸಾಹುಕಾರ್ ಚೆನ್ನಯ್ಯನವರ ವಿರುದ್ಧ ಉಮೇದುವಾರರನ್ನು ನಿಲ್ಲಿಸಿಯೇ ಬಿಟ್ಟರು. ಸಾಹುಕಾರರ ಉಮೇದುವಾರಿಕೆಗೆ ಕೆ. ವಿ. ಶಂಕರಗೌಡರೇ ರುಜುಮಾಡಿ ಅರ್ಜಿ ಸಲ್ಲಿಸಿದರು. ಸಾಹುಕಾರರ ಚುನಾವಣಾ ಪ್ರಚಾರಕ್ಕೆ ಒಬ್ಬನೇ ಒಬ್ಬ ಯುವ ಕಾಂಗ್ರೆಸ್ ಸದಸ್ಯ ಹೋಗಲಿಲ್ಲ. ಕೆ. ವಿ. ಶಂಕರಗೌಡರನ್ನು ಸಾಹುಕಾರರು ಜೊತೆಯಲ್ಲಿ ಕರೆದುಕೊಂಡು ಹೋದರು. ಹಳ್ಳಿಗಳಲ್ಲಿ ಜನರು ಶಂಕರಗೌಡರ ಮೇಲೆ ತಿರುಗಿ ಬಿದ್ದರು. ಚನ್ನಯ್ಯನವರೊಡನೆ ದಯಮಾಡಿ ಬರಬೇಡಿ, ನಾವು ಯಾರಿಗೆ ಓಟು ಕೊಡಬೇಕೆಂಬುದು ಗೊತ್ತಿದೆ ಮುಂತಾಗಿ ಶಂಕರಗೌಡರ ಮಾತನ್ನು ಅಲ್ಲಗಳೆಯಲು ಹಳ್ಳಿ ಹಳ್ಳಿಗಳಲ್ಲಿ ಪ್ರಾರಂಭವಾಯಿತು. ಚನ್ನಯ್ಯನವರು ಹುಟ್ಟಿನಿಂದಲೇ ಕಾಂಗ್ರೆಸ್ ವಿರೋಧಿ ಬಣದಲ್ಲಿ ಬೆಳೆದು ಬಂದವರನ್ನೆಲ್ಲ ಒಂದುಗೂಡಿಸಿ ತಮ್ಮ ಚುನಾವಣಾಪ್ರಚಾರಕ್ಕೆ ಸೇರಿಸಿಕೊಂಡರು. ಶಂಕರಗೌಡರು ಹಿಂದಿನಿಂದ ಮೋಸ ಮಾಡುವರೆಂಬ ಪಿಸುಣರ ಮಾತಿಗೆ ಮಣಿದ ಸಾಹುಕಾರರು ಶಂಕರಗೌಡರನ್ನು ಚುನಾವಣಾ ಪ್ರಚಾರದಿಂದ ದೂರವಿಟ್ಟರು.

ಚುನಾವಣೆಯಲ್ಲಿ ಸಾಹುಕಾರರು ಸೋಲು ಅನುಭವಿಸಿದರು. ಸಾಹುಕಾರರ ಸೋಲು ಸಂಸ್ಥಾನದಾದ್ಯಂತ ಕಾಂಗ್ರೆಸ್ ಪಾಳ್ಯದಲ್ಲಿ ಒಂದು ರೀತಿ ನೆಮ್ಮದಿ ತಂದಿತ್ತು. ಕಾರಣ ಸಾಹುಕಾರರು ಅಧ್ಯಕ್ಷರಾದ ಮೇಲೆ 9 ಜಿಲ್ಲೆಗಳಲ್ಲು ಕಾಂಗ್ರೆಸ್ ಒಳಗುಂಪನ್ನು ಬೆಳೆಸಿದ್ದರು. ಇದರ ದುಷ್ಪರಿಣಾಮ ಅಲ್ಲಲ್ಲಿ ಪರಿಣಾಮ ಬೀರಿತ್ತು. ಚುನಾವಣಾ ನಂತರ ಚುನಾವಣಾ ವಿಚಾರಣಾ ಸಮಿತಿಯೊಂದನ್ನು ಎಸ್. ಸಿ. ನಾಗಯ್ಯರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನೇಮಕ ಮಾಡಿದರು. ಆ ಸಮಿತಿ ಮೊದಲನೇ ವಿಚಾರಣೆಗೆ ಮಂಡ್ಯ ವನ್ನೇ ಆರಿಸಿಕೊಂಡು ಬಂದರು. ಸಾಹುಕಾರರು ಕಾಂಗ್ರೆಸ್ ವಿರೋಧವಾಗಿ ಕೆಲಸ ಮಾಡಿದರೆಂದು ಹೆಸರು ಕೊಟ್ಟಿದ್ದ ಬಹುತೇಕ ಮಂದಿ ವಿಚಾರಣೆ ಎದುರಿಸಲು ಬಂದಿದ್ದರು. ನಾಗಯ್ಯರೆಡ್ಡಿಯವರು ನೋಡುತ್ತಾರೆ. ದೂರಿನ ಪಟ್ಟಿಯ ಬಹಳ ಮಂದಿಯ ಮೈ ಮೇಲೆ ಕಾಸಿನ ಅಗಲ ಖಾದಿ ಬಟ್ಟೆಯಿಲ್ಲ. ಎಲ್ಲರೂ ಸರ್ಜ್‌ಕೋಟು ಕಲಾಪತ್ ಪೇಟ ಮತ್ತು ಕಚ್ಚೆ ಪಂಚೆ ಹಾಕಿದ್ದಾರೆ. ಈ ವೇಷವನ್ನು ನೋಡಿದ ನಾಗಯ್ಯರೆಡ್ಡಿಯವರು ಮರಿಯಪ್ಪನವರನ್ನು ಕೂಗಿ "ಏಮಯ್ಯ ಈ ವಾಳ್ಳು ಎವರು" ಎಂದು ತೆಲುಗಿನಲ್ಲಿ ಕೇಳಿದರು. ಬಂದಿದ್ದವರೆಲ್ಲ "ನಾವು ಮೊದಲಿಂದ ಕಾಂಗ್ರೆಸ್ ವಿರೋಧಿಗಳು ನಾವು ಬೊಮ್ಮೇಗೌಡರ ತಕ್ಕಡಿ ಗುರ್ತಿಗೆ ಓಟು ಮಾಡಿದೊ ಮಾಡಿಸಿದೋ" ಎಂದು ಹೇಳಿಹೋದರು. ಶಂಕರಗೌಡರನ್ನು ನನ್ನನ್ನು ಮತ್ತೆ ಕೆಲವರನ್ನು ವಿಚಾರಣೆ ಮುಗಿಸಿ ಶ್ರೀರಂಗಪಟ್ಟಣದ ಕ್ಯಾಂಪಿಗೆ ಹೊರಟರು.

ನಾನು ಸೊಸೈಟಿಯಿಂದ ದೆಹಲಿಯಲ್ಲಿದ್ದ ಲಾಲ್‌ಬಹದ್ದೂರು ಶಾಸ್ತ್ರಿಗಳನ್ನು ದೂರವಾಣಿ ಮೂಲಕ ಸಂಪರ್ಕಿಸಿದೆ ಎಂ. ಪಿ. ಸಿ. ಸಿ. ಅಧ್ಯಕ್ಷರು ಚುನಾವಣಾ ವಿಚಾರಣಾ ಸಮಿತಿ ನೇಮಿಸಿ ವಿಚಾರಣೆ ಪ್ರಾರಂಭಿಸಿದ್ದಾರೆಂದು ತಿಳಿಸಿದೆ. ವಿಚಾರಣಾ ಸಮಿತಿಯ ವಿಳಾಸವನ್ನು ಕೊಟ್ಟೆ. ಪ್ರಾತಃಕಾಲ 10 ಗಂಟೆಗೆಲ್ಲ ಟೆಲಿಗ್ರಾಂ ಬಂತು. "ವಿಚಾರಣೆ ನಡೆಸಬೇಡಿ. ಈ ವಿವಾದವನ್ನು ಚುನಾವಣಾ ನಂತರ ತರಬಾರದೆಂದು ಚನ್ನಯ್ಯನವರಿಗೆ ಉಮೇದುವಾರಿಕೆ ನೀಡುವಾಗಲೇ ತೀರ್ಮಾನ ಆಗಿದೆ. ಇದರ ವಿರುದ್ಧ ದಯಮಾಡಿ ಕೆದಕುವ ಪ್ರಯಾಸಕ್ಕೆ ಹೋಗಬೇಡಿ" ಎಂದು ತಿಳಿಸಿದ ತಂತಿಯ ನಕಲನ್ನು ಸಹ ಜಿಲ್ಲಾ ಸಮಿತಿಗೆ ಕಳುಹಿಸಿ ಎ. ಐ. ಸಿ. ಸಿ ತೀರ್ಮಾನದ ವಿರುದ್ಧ ಎಂ.ಪಿ.ಸಿ.ಸಿ. ಚುನಾವಣಾ ವಿಚಾರಣಾ ಸಮಿತಿ ವಿಚಾರಣೆ ಮಾಡುವುದಾದರೆ ಯಾರೂ ಆ ಸಮಿತಿಯ ಆದೇಶಕ್ಕೆ ಮನ್ನಣೆ ಕೊಡದಂತೆ ತಿಳಿಸಲು ಆದೇಶವಿತ್ತರು.

ಈ ಪ್ರಕರಣ ಮುಗಿದ ನಂತರ ಕಾಂಗ್ರೆಸ್ ಆಫೀಸಿನಲ್ಲಿ ನಾಗಯ್ಯರೆಡ್ಡಿಯವ ರೊಡನೆ ಮಾತನಾಡುತ್ತ ನಾನು "ಸರ್ ಜೀವಮಾನಪರ್ಯಂತ ಕಾಂಗ್ರೆಸ್ಸಿಗನಾಗಿದ್ದು ಎಲ್ಲೋ ಒಂದೇ ಸೆಕೆಂಡ್ ಕಾಂಗ್ರೆಸ್ ಧೋರಣೆ ಪ್ರತಿಭಟಿಸಿ ಚುನಾವಣಾ ಬ್ಯಾಲೆಟ್ ಪೇಪರ್ ಬೇರೆ ಪೆಟ್ಟಿಗೆಗೆ ಹಾಕಿದ ನಾನು ಕಾಂಗ್ರೆಸ್ಸೋ?, ಜೀವಮಾನ ಪರ್ಯಂತ ಕಾಂಗ್ರೆಸ್ ವಿರೋಧಿಸಿ ಒಂದೇ ಒಂದು ಸೆಕೆಂಡ್ ಕಾಂಗ್ರೆಸ್ ಪೆಟ್ಟಿಗೆಗೆ ಬ್ಯಾಲೆಟ್

ಪೇಪರು ಹಾಕಿದವನು ಕಾಂಗ್ರೆಸ್ಸೋ ಎಂದು ಪ್ರಶ್ನಿಸಿದೆ. ಹುಟ್ಟುತ್ತಲೇ ಕಾಂಗ್ರೆಸ್ ವಿರೋಧಿಸಿದ ಕಟ್ಟಾಳುಗಳನ್ನು ತಂದು ಮಂಡ್ಯಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ನಾಮಾವಶೇಷ ಮಾಡಲು ಬಂದಿರುವ ನಿಮಗೆ ಮಾನ ಮರ್ಯಾದೆಯಿಲ್ಲವೆ ? ಕಾಂಗ್ರೆಸ್ ಕಾರ್ಯಕರ್ತರಾದ ನಮ್ಮನ್ನು ಸಂಸ್ಥೆಯಿಂದ ಹೊರದೂಡಲು ಬಂದಿರುವ ನೀವೇನು ಸಾಹುಕಾರರ ಮನೆಯ ಕೂಲಿ ಆಳುಗಳೇನು ? ಮುಂತಾಗಿ ಛೇಡಿಸಿ ಮಾತನಾಡಿದೆ. ನನ್ನ ಭುಜ ತಟ್ಟಿ ನಾಗಯ್ಯರೆಡ್ಡಿ ಅವರು "ಏಮಯ್ಯ ಚೇಸೇದಿ, ರಾಜಕೀಯಮು" ಎಂದು ಮುಂದೆ ಹೋದರು.



## ಅಧ್ಯಾಯ-ಎಂಟು

## ೧

ನಾನು ಕಾಂಗ್ರೆಸ್ ಕಾರ್ಯಕರ್ತನಾಗಿ ಜೈಲು ವಾಸಗಳನ್ನು ಮುಗಿಸಿ ಬಿಡುಗಡೆಯಾಗಿ ಬಿ. ಎನ್. ಗುಪ್ತರ ಜನವಾಣಿ ಮತ್ತು ಪ್ರಜಾಮತ ಪತ್ರಿಕೆಗಳ ಏಜೆಂಟ್ ಮತ್ತು ಸುದ್ದಿಗಾರನಾಗಿ ಕೆಲಸ ಮಾಡುತ್ತಿದ್ದೆ. ಶ್ರೇಷ್ಠ ನ್ಯಾಯಾಧೀಶರಾಗಿದ್ದ ದಿವಂಗತ ಹೊಂಬೇಗೌಡರು ಮಂಡ್ಯದಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿದ್ದರು. ನನ್ನ ವೃತ್ತಿ ಇಡೀ ದಿನ ಹೆಚ್ಚಿನ ಒತ್ತಡವಿಲ್ಲದ ಕೆಲಸ. ಏಕೋ ಏನೋ ಹೊಂಬೇಗೌಡರು ನನ್ನನ್ನು "ವಿಶ್ವಾಮಿತ್ರ"ಎಂದೇ ಕರೆಯುವ ವಾಡಿಕೆ. ಒಂದುದಿನ ಜೈನರ ಬೀದಿಯಲ್ಲಿದ್ದ ಪಂಡಿತ ಗುಲಾಬ್ ಸಿಂಗ್ ಎಂಬ ವೈದ್ಯರ ಮನೆಯಲ್ಲಿ ಮಾತನಾಡುತ್ತಿದ್ದೆವು. ಲೋಕಾಭಿರಾಮವಾಗಿ ಹೊಂಬೇಗೌಡರು ಏಕಯ್ಯ ವಿಶ್ವಾಮಿತ್ರ ನೀನು ಪುಸ್ತಕದ ಅಂಗಡಿ ತೆರೆದು ವ್ಯಾಪಾರ ಮಾಡಬಾರದು. ಹೇಗೂ ಪುಸ್ತಕ ಓದುವ ಗೀಳು ನಿನಗೆ, ನನ್ನ ಹಾಗೆ ಪುಸ್ತಕ ಇಟ್ಟಿರುವವರನ್ನು ಗೋಳು ಹೊಯ್ದು ಎರವಲು ಪಡೆಯುತ್ತೀಯೆ. ಅದು ತಪ್ಪಿ ನೇರ ನೀನೆ ಪುಸ್ತಕಗಳನ್ನು ಕೊಂಡು ತಂದು ನೀನೂ ಓದಿ ನನ್ನಂತಹವನಿಗೆ ಮಾರಿದರಾಯಿತು. ನೀನೇ ಓದಿದ್ದು ಒಂದು ಲಾಭ, ಪುಸ್ತಕದ ವ್ಯಾಪಾರೀ ಲಾಭ ಎರಡೂ ಗಿಟ್ಟಿಸಿದ ಹಾಗಾಗುತ್ತೆ ಎಂದು ಪ್ರೋತ್ಸಾಹಿಸಿಯೆ ಬಿಟ್ಟರು.

ಗುಲಾಬ್ ಸಿಂಗರ ಎದುರು ಮನೆ ಭರಮಯ್ಯನವರ ಅಂಗಡಿ ಖಾಲಿಯೂ ಇತ್ತು. ಹೊಂಬೇಗೌಡರು ಅವರನ್ನು ಕರೆಸಿ ಅಂಗಡಿಯನ್ನು 10 ರೂಪಾಯಿ ಬಾಡಿಗೆಗೆ ಗೊತ್ತು ಮಾಡಿ 20 ರೂಪಾಯಿ ಅಡ್ವಾನ್ಸ್ ಕೊಟ್ಟರು. ಅಂಗಡಿಯ ಬೀಗ ತೆಗೆಸಿ ಮೂಲೆ ಮುಡಕಲುಗಳನ್ನು ನೋಡಿ ಇಂದೇ ಶುದ್ಧಗೊಳಿಸಿಬಿಡು. ನಾಳೆ ಒಳ್ಳೆ ದಿನ. ಅಂಗಡಿ ಪ್ರಾರಂಭ ಮಾಡೋಣ ಎಂದರು. ಪಂಡಿತ ಗುಲಾಬ್ ಸಿಂಗರಲ್ಲಿ ಖಾಲಿ ಗಾಜಿನ ಬೀರು ಒಂದಿತ್ತು. ಅದನ್ನು ವ್ಯಾಪಾರಮಾಡಿ 75 ರೂಪಾಯಿಗಳನ್ನು ವಾರದಲ್ಲಿ ಕೊಡುವಂತೆ ತಿಳಿಸಿದರು. ಅಂಗಡಿ ಬಾಡಿಗೆಗೆ ತೆಗೆದುಕೊಂಡ ದಿನವೇ ಸಂಜೆಯೊಳಗಾಗಿ•ಅಂಗಡಿ ಚೊಕ್ಕಟ ಮಾಡಿ ಗಾಜಿನ ಬೀರುವನ್ನು ಸಾಗಿಸಿಬಿಟ್ಟೆ. ಅದಕ್ಕೆ ಜೋಡಿಸುವುದೇನನ್ನ ಎಂಬುದು ನನಗೆ ಕಷ್ಟವಾಯಿತು. ಹೊಂಬೇಗೌಡರು ಕ್ಲಬ್‌ಗೆ ಹೋಗಿದ್ದರು. ನಾನು ಹೋಗಿ ನೋಡಿದೆ. ಎದ್ದುಬಂದರು. ಏನು? ಅಂಗಡಿ ಶುದ್ಧವಾಯ್ತೆ ಎಂದರು? ಹೌದು ಎಂದೆ. ಹಳೆ ಪುಸ್ತಕಗಳಿಂದ ವ್ಯಾಪಾರ ಆರಂಭಿಸು ಎಂದು ಸಲಹೆ ಮಾಡಿದರು. ರಾತ್ರಿ ಮನೆಗೆ ಕರೆದುಕೊಂಡು ಹೋಗಿ ಗೌಡರು ಓದಿ ಮೂಲೆಗೆ ಹಾಕಿದ್ದ ಕಥಾಂಜಲಿ, ಕತೆಗಾರ, ಹೀಗೆ ಆರೇಳು ತರಹ ಹಳೇ ಮಾಸಿಕಗಳನ್ನು 50-60

ರಷ್ಟನ್ನು ಕೊಟ್ಟರು. ಪಿ. ಮಲ್ಲಯ್ಯನವರು, ಎಂ. ಬಿ. ಬೋರೇಗೌಡರು, ಎಂ.ಬಿ. ಲಿಂಗೇಗೌಡರು ಎಂ. ಬಸವಯ್ಯನವರು ಮುಂತಾದ ವ್ಯಕ್ತಿಗಳು ಅಂದಿನ ಮಂಡ್ಯದಲ್ಲಿ ಕಣ್ಣಾದವರು. ಊರಿಗೆ ಪರಿಚಿತರಾದವರು. ಅವರುಗಳಿಂದ ಹಳೆ ಮಾಸ ಪತ್ರಿಕೆಗಳು ಮತ್ತೆ ಕೆಲವು ಹಳೆ ಪುಸ್ತಕಗಳು ಸಿಕ್ಕಿದುವು. ಅವುಗಳನ್ನು ತಂದು ಬೀರುವಿನಲ್ಲಿ ಜೋಡಿಸಿದೆ. ಅವು ಸಾಧಾರಣವಾಗಿ ಅರ್ಧಬೆಲೆಗೆ ಬಿಕರಿಯಾದುವು. ಅವುಗಳನ್ನು ಕೊಂಡು ಓದುತ್ತಿದ್ದವರು ಹೆಣ್ಣು ಮಕ್ಕಳು. ಹೆಸರಿಗೆ ಒಬ್ಬ ಗಂಡಾದರು ಕೊಂಡದ್ದು ಜ್ಞಾಪಕವಿಲ್ಲ.

ಸಂಜೆಹೊತ್ತು ಪಂಡಿತ ಸಿಂಗರ ಮನೆಯಲ್ಲಿ ಕಾಲ ಕಳೆದು ಕ್ಲಬ್‌ಗೆ ಹೋಗುತ್ತಿದ್ದ ಹೊಂಬೇಗೌಡರು ನನ್ನ ಅಂಗಡಿ ಆರಂಭವಾದ ಮೇಲೆ ಅಂಗಡಿಗೆ ಬಂದು ಕೂತು, ಹೋಟೇಲಿನಿಂದ ಕಾಫಿ ತರಿಸಿ, ತಾವೂ ಕುಡಿದು ನನಗೂ ಕುಡಿಸಿ ಕ್ಲಬ್‌ಗೆ ಹೋಗುತ್ತಿದ್ದರು. ಕೆಲವು ಸಾರಿ ಹೊಂಬೇಗೌಡರು ಬರುವ ಮುನ್ನವೇ ಅವರ ಕಕ್ಷಿದಾರರು ನನ್ನ ಅಂಗಡಿ ಬಳಿ ಸೇರಿರುತ್ತಿದ್ದರು. ಕೆಲವರು ಹೊಸ ಪುಸ್ತಕಗಳನ್ನು ಕೇಳಿ ಬರುತ್ತಿದ್ದರು. ಅವರು ಕೇಳಿ ಬರುವ ಪುಸ್ತಕಗಳ ಹೆಸರನ್ನು ಗುರ್ತು ಮಾಡಿಕೊಂಡು ಬರುವ ವಾರ ಬನ್ನಿ ಎಂದು ಹೇಳಿ ಕಳುಹಿಸುವಂತೆ ಹೊಂಬೇಗೌಡರು ನನಗೆ ಸಲಹೆ ಮಾಡಿದರು. ಹೊಸಪುಸ್ತಕಗಳನ್ನು ಕೇಳಿ ಬರುತ್ತಿದ್ದವರು ಜಾತಕ, ಪಂಚಾಂಗ, ಪ್ರಶ್ನೋತ್ತರ, ಭವಿಷ್ಯ ಹೇಳುವವರ ಸಂಖ್ಯೆಯೇ ನೂರಕ್ಕೆ 90 ಮಂದಿ ಇರುತಿದ್ದರು. ಪುಸ್ತಕ ಸಿಗುವ ವಿಳಾಸಗಳನ್ನು ಕೊಡುತ್ತಿದ್ದುದರಿಂದ ಪುಸ್ತಕ ಪ್ರಪಂಚಕ್ಕೆ ಹೊಸಬನಾದ ನನಗೆ ಪುಸ್ತಕಗಳನ್ನು ಕೊಂಡು ತರುವುದು ಸುಲಭವಾಗಿತ್ತು. ಈ ತರಹದ ಪುಸ್ತಕಗಳ ಜೊತೆಗೆ ಹಲ್ಲಿಶಕುನ, ಬಾಲಗ್ರಹ, ಜ್ಯೋತಿಷ್ಯ ರತ್ನಾಕರ ಹೀಗೆ ನಾನಾ ತರಹೆವಾರಿ ಪುಸ್ತಕಗಳನ್ನು ಕೊಂಡು ತರುತ್ತಿದ್ದೆ. ಈ ಪುಸ್ತಕಗಳಿಗೆ ದೊರೆಯುತ್ತಿದ್ದ ಕಮಿಷನ್ ಎಷ್ಟು ಗೊತ್ತೆ ? ನೂರಕ್ಕೆ ನೂರು ಕೆಲವಕ್ಕೆ ನೂರಕ್ಕೆ ಐವತ್ತು ಲಾಭ ಬರುವ ವ್ಯವಹಾರದ ಪುಸ್ತಕಗಳು.

ಇವುಗಳ ಜೊತೆಗೆ ಶಾಲಾ ಮತ್ತು ಕಾಲೇಜ್ ಪಠ್ಯಪುಸ್ತಕಗಳನ್ನು ಸೇರಿಸಿದೆ. ಅವುಗಳ ಲಾಭ ನೂರಕ್ಕೆ ಹದಿನೈದು ಮಾತ್ರ, ಪಠ್ಯಪುಸ್ತಕಗಳು ಬಿಸಿ ದೋಸೆಯಂತೆ ಖರ್ಚಾಗುತ್ತಿದ್ದುವು. ನಾನು ಬೆಂಗಳೂರಿಂದ ಬಂದು ಪುಸ್ತಕಗಳ ಗಂಟನ್ನು ಬಿಚ್ಚುವುದೇ ತಡ ತಂದ ಪುಸ್ತಕಗಳು ಖರ್ಚಾಗಿ ಬಿಡುತ್ತಿದ್ದವು. ಪಠ್ಯಪುಸ್ತಕ ಪ್ರಕಾಶಕರು ಗಿರಾಕಿಗಳು ಕೇಳಿದಷ್ಟು ಸಂಖ್ಯೆಯ ಪುಸ್ತಕ ಕೊಡಲು, ಅವರ ಪುಸ್ತಕಗಳಿಗೆ ಬರೆಸಿರುವ ನೋಟ್ಸುಗಳನ್ನು ಕೊಳ್ಳಬೇಕಾಗಿತ್ತು. ಅವುಗಳ ಬೆಲೆ ಒಂದು ರೂಪಾಯಿನ ಪಠ್ಯಪುಸ್ತಕದ ನೋಟ್ಸಿಗೆ ಮೂರು ರೂಪಾಯಿ. ನೋಟ್ಸಿಗೆ ನೂರಕ್ಕೆ ಐವತ್ತು ರೂಪಾಯಿ ಸೋಡಿಯು ಸಿಗುತ್ತಿದ್ದು ಸೋಡಿ ಆಸೆಗೆ ಮಕ್ಕಳ ತಂದೆತಾಯಿಗಳಿಗೆ ನೋಟ್ಸು ಕೊಳ್ಳಲು ಉತ್ತೇಜನ ನೀಡುತ್ತಿದ್ದೆ. ನನಗೆ ಕುವೆಂಪು ಅವರ ಸಾಹಿತ್ಯದ ಗೀಳು

ಹಿಡಿದಿದ್ದ ವಿಚಾರ ಈ ಹಿಂದೆಯೆ ಹೇಳಿದ್ದೇನೆ. ಕಾವ್ಯಾಲಯದ ಚಿದಂಬರಂ ಅವರಿಂದ ಕುವೆಂಪು ಸಾಹಿತ್ಯಕೊಂಡು ತರುತ್ತಿದ್ದೆ. ಇನ್ನಿತರ ಸಾಹಿತಿಗಳ ಕೃತಿಗಳ ಬೆಲೆಗಿಂತ ಕುವೆಂಪು ಸಾಹಿತ್ಯದ ಬೆಲೆ ಬಹು ಕಮ್ಮಿ ಇರುತ್ತಿತ್ತು. ಇಂದಿಗೂ 1989 ರಲ್ಲೂ ಕುವೆಂಪು ಕೃತಿಗಳ ಬೆಲೆ ಕಮ್ಮಿ ಎಂದು ಹೇಳಬಹುದು. ವ್ಯಾಪಾರಿಗಳಿಗೆ ನೋಡಿ ಇಪ್ಪತ್ತು ರೂಪಾಯಿ ಮಾತ್ರ. ಕುವೆಂಪು ಕೃತಿಗಳನ್ನು ಒಂದೊಂದನ್ನೂ ಅದೆಷ್ಟು ಬಾರಿ ಓದಿದ್ದೇನೆ ಎಂದು ಹೇಳುವುದು ಕಷ್ಟಸಾಧ್ಯವ : ಹೊಂಬೇಗೌಡರು ಹೇಳಿದಂತೆ ಓವಿ ಸಲೀಸಾಗಿ ಮಾರಾಟಮಾಡುತ್ತಿದ್ದೆ. ಪುಸ್ತಕದ ವ್ಯಾಪಾರದಿಂದ, ನಿನ್ನ ಪತ್ರಿಕೆ ಏಜೆನ್ಸಿ ಯಿಂದ ಪರಿವಾರ ಹತ್ತೋದು ಕಷ್ಟ. ಬೇರೇನಾದರು ವ್ಯಾಪಾರಮಾಡು ಎಂದು ಸ್ನೇಹಿತರು ಸಲಹೆಮಾಡುತ್ತಿದ್ದರು.

ಪತ್ರಿಕಾ ಚಂದಾದಾರರು ಅರ್ಧಕ್ಕೆ ಅರ್ಧದಷ್ಟು ಜನ ಚಂದಾ ಕೊಡುವುದೇ ಕಷ್ಟ. ಮಂಜು, ಛಳಿ ಎನ್ನದೆ ಸೈಕಲ್ ತುಳಿದು ಹಾಳು ಪತ್ರಿಕೆ ಹಂಚುವ ಕೆಲಸ ಕಷ್ಟ ಸಾಧ್ಯವೇ ಆಗಿತ್ತು. ಕುವೆಂಪು ಸಾಹಿತ್ಯವನ್ನು ತಂದು ಮಾರಾಟಮಾಡುತ್ತಿದ್ದವನು ನಾನೊಬ್ಬನೇ ಮಂಡ್ಯಕ್ಕೆ. ಶ್ರೀಕಂಠೇಶ್ವರ ಬುಕ್ ಡಿಪೊ ಮಾಲಿಕರು ಆರ್ಯ ವೈಶ್ಯರು. ಸ್ಕೂಲ್ ಪುಸ್ತಕಗಳು ಮತ್ತು ಜ್ಯೋತಿಷಿ ಪುಸ್ತಕಗಳನ್ನು ಮಾತ್ರ ಮಾರಾಟ ಮಾಡು ತಿದ್ದರು. ನಾನು ಹುಬ್ಬಳ್ಳಿ, ಧಾರವಾಡ, ಗದಗ ಮುಂತಾದ ಕಡೆಗಳಿಂದ ಪುಸ್ತಕ ಗಳನ್ನು ತರಿಸುತ್ತಿದ್ದೆ. ಧಾರವಾಡದ ಮನೋಹರ ಗ್ರಂಥಮಾಲೆ, ಮಿಂಚಿನಬಳ್ಳಿ ಗ್ರಂಥ ಮಾಲೆಯವರಿಂದ ಗೋಕಾಕ, ದ.ರಾ. ಬೇಂದ್ರೆ ಅವರ ಪುಸ್ತಕಗಳನ್ನು ತರಿಸಿ ಮಾರಾಟ ಮಾಡುತ್ತಿದ್ದೆ.

ಕರ್ನಾಟಕ ಸಂಘ ಕಾರ್ಯಕ್ರಮಕ್ಕೆ ಬಿ.ಎಂ.ಶ್ರೀ ಬಂದರಾಯ್ತು. ಕುವೆಂಪು ಅವರ ಯಾವುದಾದರು ಒಂದು ಕೃತಿಯನ್ನು ಕುರಿತು ಮಾತನಾಡುತ್ತಿದ್ದರು. ಮಂಡ್ಯ ಕರ್ನಾಟಕ ಸಂಘವು ಇಡೀ ನಗರದ ಆಬಾಲವೃದ್ಧರಾದಿಯಾಗಿ ಎಲ್ಲರನ್ನು ಆಕರ್ಷಿಸು ವಂತಹ ಭವ್ಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿತ್ತು. ಪತ್ರಿಕಾವೃತ್ತಿ ಲಾಭದಾಯಕವಲ್ಲದಿದ್ದರು, ಪುಸ್ತಕ ವ್ಯಾಪಾರದಿಂದ ಹಣದ ಇಡಿಗಂಟು ಮಾಡ ಲಾಗದಿದ್ದರು, ಮಕ್ಕಳ ವಿದ್ಯಾಭ್ಯಾಸ, ಮದುವೆ ಮುಂಜಿ, ವಾಸಕ್ಕೊಂದು ಮನೆಯನ್ನು ಸರಸ್ವತಿಯು ಅನುಗ್ರಹಿಸಿದ್ದು ಮಕ್ಕಳು ಅದೇ ವೃತ್ತಿಯಲ್ಲಿ ಮುಂದುವರಿಯುತ್ತಿದ್ದಾ ರೆಂದು ತಿಳಿಸಲು ಹರ್ಷವಾಗುವುದು.

ಕಾಂಗ್ರೆಸ್ ಚಳುವಳಿ ನಂತರ 1941ನೆಯ ಇಸವಿ ಏಪ್ರಿಲ್ ಅಥವ ಮೇ ತಿಂಗಳು ಇಂಡಿಯಾದೇಶಾದ್ಯಂತ ಸ್ವಾತಂತ್ರ್ಯ ಚಳುವಳಿ ಸ್ಥಗಿತಗೊಂಡವು. ಇನ್ನೂ ಅನೇಕ ಮಂದಿ ಜೈಲಿನಲ್ಲಿದ್ದರು. ಸುಪ್ರಸಿದ್ಧ ಪತ್ರಿಕೋದ್ಯಮಿ ಬಿ. ಎನ್. ಗುಪ್ತ ಅವರು ಜನವಾಣಿ ದೈನಿಕ ಮತ್ತು ಪ್ರಜಾಮತ ವಾರಪತ್ರಿಕೆ ಆರಂಭಿಸಿದರು. ಪ್ರಜಾಮತ ಪತ್ರಿಕೆ ಸಹಸಂಪಾದಕರಾಗಿ ಮಾ. ನ. ಚೌಡಪ್ಪನವರು. ಜನವಾಣಿ ಪತ್ರಿಕೆ

ಸಂಪಾದಕರಾಗಿ ಕೆ. ಜೀವಣ್ಣರಾಯರು ಕಾರ್ಯ ನಿರ್ವಹಿಸುತ್ತಿದ್ದರು. ಕೋಲಾರದ ಕೆ. ಪಟ್ಟಾಭಿರಾಮನ್ ಅವರು ಕಾರ್ಯಾಲಯ ನಿರ್ವಹಣಾಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದರು. ಮಂಡ್ಯದಲ್ಲಿ ಹೊರಗಿನ ಕಾಂಗ್ರೆಸ್ಸಿಗರಿದ್ದರೆ ನಾನು ಹಿಂದೆ ಹೇಳಿರುವಂತೆ ಪಾಳ್ಯದ ಪಿ.ಸಿ. ಶ್ರೀನಿವಾಸಯ್ಯನವರ ಮನೆ ಠಿಕಾಣಿ ಸರ್ವೇಸಾಮಾನ್ಯ. ಪಿ. ಸಿ. ಶ್ರೀನಿವಾಸಯ್ಯನವರ ಮನೆಗೆ ನನ್ನನ್ನು ಹುಡುಕಿಕೊಂಡು ಕೆ. ಪಟ್ಟಾಭಿರಾಮನ್ ಮತ್ತು ಕೆ. ಜೀವಣ್ಣರಾಯರು ಬಂದರು. ಜನವಾಣಿ, ಪ್ರಜಾಮತ ಮತ್ತು ಕೊರವಂಜಿ ಮಾಸಿಕ ಪತ್ರಿಕೆಗಳ ಏಜೆಂಟು ಮತ್ತು ಸುದ್ದಿಗಾರನನ್ನಾಗಿ ನೇಮಿಸಿದರು.

ಜನವಾಣಿ, ತಾಯಿನಾಡು, ವಿಶ್ವಕರ್ನಾಟಕ, ನವಜೀವನ ಮತ್ತು ದೇಶಬಂಧು ಪತ್ರಿಕೆಗಳು ಕ್ರೌನ್ ಆಕಾರದ 4 ಪುಟಗಳಲ್ಲಿ ಸಂಜೆಪ್ರಕಟಣೆಗಳಾಗಿ ಪ್ರಕಟವಾಗುತ್ತಿದ್ದವು. ಬೆಂಗಳೂರಿನಿಂದ ರಾತ್ರಿ ರೈಲಿನಲ್ಲಿ ಈ ಪತ್ರಿಕೆಗಳು ರವಾನೆಯಾಗಿ ಬರುತ್ತಿದ್ದವು. ಈಗಿನಂತೆ ಜನಕ್ಕೆ ಪತ್ರಿಕೆಗಳು ಅಗತ್ಯವಾದ ಅಂಗವಾಗಿರಲಿಲ್ಲ. ಎಷ್ಟು ಹೊತ್ತಿಗೆ ಪತ್ರಿಕೆ ಕೊಟ್ಟರು ಜನ ಏಕೆ ನಿಧಾನ ಎಂದು ಕೇಳುವವರೇ ಇರಲಿಲ್ಲ. ನಾನೇ ಪತ್ರಿಕೆಗಳನ್ನು ಸೈಕಲ್ಲಿನಲ್ಲಿ ಮನೆಮನೆಗೆ ಹೋಗಿ ಹಂಚುತ್ತಿದ್ದೆ. ಜನವಾಣಿ ಒಂದಾಣೆ ಅಂದರೆ ಈಗಿನ ಆರು ಪೈಸೆಗಳು. ತಿಂಗಳಿಗೆ ಒಂದೂಮುಕ್ಕಾಲು ರೂಪಾಯಿ ಚಂದ. ಇಷ್ಟನ್ನು ಆಯಾ ತಿಂಗಳು ತೆರಲಾರದ ಕೆಲ ಮಂದಿ ಚಂದಾದಾರರು ಬಾಕಿ ಉಳಿಸಿಕೊಳ್ಳುತ್ತಿದ್ದರು. ಎರಡನೇ ಮಹಾಯುದ್ಧ ನಡೆಯುತ್ತಿತ್ತು. ನನ್ನ ಸೈಕಲ್ ನೋಡಿದವರು ಕೆಲವರು ಪತ್ರಿಕೆ ಕೇಳುವುದಿರಲಿ ಏನಯ್ಯ ಹಿಟ್ಲರ್ ಏನಾದನಪ್ಪ. ಯುದ್ಧ ಎಲ್ಲಿವರೆಗೆ ಬಂದಿದೆ ಮುಂತಾಗಿ ನನ್ನನ್ನು ಸರ್ವಜ್ಞನೆಂದು ಪ್ರಶ್ನಿಸುತ್ತಿದ್ದರು. ನನ್ನ ಬಾಯಿಗೆ ಬಂದಂತೆ ಯುದ್ಧವರ್ಣನೆ ಮಾಡಿ ಹೇಳುತ್ತಿದ್ದುದನ್ನು ಕೇಳಿ ಹೋಗುತ್ತಿದ್ದ ಜನರೇ ಹೆಚ್ಚು. ಹೆಚ್ಚೇನು ಒಂದಾಣೆ ಕೊಟ್ಟು ಪತ್ರಿಕೆ ಕೊಂಡವನು ದಿನಕ್ಕೆ ಒಬ್ಬನೂ ಇಲ್ಲ ಎಂದ ಮೇಲೆ ಆ ಕಾಲದಲ್ಲಿ ಪತ್ರಿಕೆಗಳನ್ನು ಪ್ರಕಟಿಸುವವರು ಅದೆಂತಹ ದುಸ್ಥಿತಿಯಲ್ಲಿದ್ದರು ಎಂಬುದು ತಮಗೆ ಅರ್ಥವಾಗುವುದು.

ಜನವಾಣಿ ಕೊಳ್ಳದ ಜನಕ್ಕೆ ಪ್ರಜಾಮತ ವಾರಪತ್ರಿಕೆ ಬೇಕಾಗುತ್ತಿತ್ತು. ಪಾಪಪೂರಿತ ಪಟ್ಟಣಗಳು ಎಂಬ ಲೇಖನ ಮಾಲೆ ಪ್ರಕಟವಾಗುತ್ತಿದ್ದು ಶ್ರೀಸಾಮಾನ್ಯರ ಗಮನವನ್ನು ಪ್ರಜಾಮತ ಸೆಳೆದಿತ್ತು. ಈ ಲೇಖನ ಮಾಲೆ ಮುಗಿಸಿದ ಮೇಲೆ ಬಂಗಾಳದಲ್ಲಿ ನಿಜವಾಗಿ ನಡೆದ ''ಬವಾಲ್ ಸನ್ಯಾಸಿ ಕೇಸ್'' ಪ್ರಾರಂಭಗೊಂಡು ಕಾಸು ಬಾಕಿ ನಿಲ್ಲಿಸದೆ ಪ್ರಜಾಮತ ಮತ್ತು ಕೊರವಂಜಿ ಪತ್ರಿಕೆಗಳ ಚಂದಾ ಹಣ ಪಾವತಿ ಮಾಡುತ್ತಿದ್ದರು. ಇವೆರಡು ಪತ್ರಿಕೆಗಳಿಗೆ ಚಂದಾದಾರರಾದ ಮನೆಯಲ್ಲಿ ವಿದ್ಯಾವಂತ ಮಹಿಳೆ ಇದ್ದಾರೆ ಎಂಬುದನ್ನು ಖಚಿತಪಡಿಸಕೊಳ್ಳಬಹುದಾಗಿತ್ತು.

ಮಂಡ್ಯ ಟೌನಿನಲ್ಲಿ ಈಗಿನ ಗಾಂಧಿ ಪಾರ್ಕ್ ಮತ್ತು ಸಿಲ್ವರ್ ಜ್ಯೂಬಿಲಿ ಪಾರ್ಕ್ ಬಿಟ್ಟು ಈಚೆಗೆ ಅಲ್ಲೊಂದು ಇಲ್ಲೊಂದು ಮನೆಗಳಿದ್ದುವು. ಗಾಂಧಿ ಪಾರ್ಕಿನಲ್ಲಿ

ಮನೆಗಳಿದ್ದು ತರಾತುರಿಯಾಗಿ ಖಾಲಿಮಾಡಿಸಿ ಉದಾ[illegible]ಮಾಡುವ ತವಕದಲ್ಲಿತ್ತು ಇಲಾಖೆ. ಸಕ್ಕರೆ ನಗರ ಬೆಳೆದಿದ್ದು ಆ ನಗರದ ಅಧಿಕಾರಿಗಳು ಮತ್ತು ಕೆಲಸಗಾರರಿಂದ ಮಂಡ್ಯವಾಗಿತ್ತು. ಜಿಲ್ಲಾ ಕಛೇರಿ ಆರಂಭವಾಗಿದ್ದರು ವಾಸಕ್ಕೆ ಮನೆಗಳಿಲ್ಲದೆ ಕಛೇರಿ ಸಿಬ್ಬಂದಿ ರೈಲಿನಲ್ಲಿ ಮೈಸೂರು ಇನ್ನಿತರ ಕಡೆಯಿಂದ ಬಂದು ಸಂಜೆ ಹೋಗುತ್ತಿದ್ದರು. ಸಂಖ್ಯೆ ನೂರಕ್ಕೆ 90ರಷ್ಟು. ಹೀಗಾಗಿ ಪತ್ರಿಕೆ ಪ್ರಸಾರ ಅಷ್ಟಾಗಿ ಬೆಳೆಯಲಿಲ್ಲವಾದರೂ ಜನವಾಣಿ 1000 ಪ್ರತಿಗಳು ಖರ್ಚಾಗುತ್ತಿದ್ದುವು.

1957ನೆಯ ದೀಪಾವಳಿ ವೇಳೆಗೆ ಹುಬ್ಬಳ್ಳಿಯಿಂದ ಪ್ರಕಟವಾಗುತ್ತಿದ್ದ ಸಂಯುಕ್ತ ಕರ್ನಾಟಕ ಪತ್ರಿಕೆ ಬೆಂಗಳೂರಿನಿಂದಲೂ ಏಕಕಾಲಕ್ಕೆ ಮುದ್ರಣಗೊಂಡು ಪ್ರಕಟವಾಗಲು ಪ್ರಾರಂಭವಾಯಿತು. ಸಂಯುಕ್ತ ಕರ್ನಾಟಕದ ಈಗಿನ ವ್ಯವಸ್ಥಾಪಕ ಸಂಪಾದಕ ಕೆ. ಶಾಮರಾವ್ ಅವರು ದೆಹಲಿ ವರದಿಗಾರರಾಗಿದ್ದರು. ಕೇಂದ್ರದ ಮಂತ್ರಿ ಮಂಡಲದಲ್ಲಿ ನಾಳೆ ಕೈಗೊಳ್ಳಬಹುದಾದ ಸುದ್ದಿಗಳನ್ನು ಇನ್ನೆಲ್ಲಾ ಪತ್ರಿಕೆಗಳಿಗಿಂತ ಮುಂಚಿತವಾಗಿ ಸಂಯುಕ್ತ ಕರ್ನಾಟಕ ಪತ್ರಿಕೆಗೆ ವರದಿ ಮಾಡುತ್ತಿದ್ದರು. ಇದರ ಫಲವಾಗಿ ರಾಜ್ಯದ ಸರ್ವ ರಾಜಕೀಯ ಪಕ್ಷಗಳ ರಾಜಕಾರಣಿಗಳು ಸಂಯುಕ್ತ ಕರ್ನಾಟಕ ಪತ್ರಿಕೆ ಓದಿ ದೆಹಲಿ ರಾಜಕೀಯ ತಿಳಿದುಕೊಳ್ಳುತ್ತಿದ್ದರು.

ದೆಹಲಿ ವರದಿಗಾರರಾಗಿದ್ದ ಕೆ. ಶಾಮರಾವ್ ಅವರು ಸಂಯುಕ್ತ ಕರ್ನಾಟಕ ಬೆಂಗಳೂರು ಮುದ್ರಣದ ಸಂಪಾದಕರಾದರು. ಸಂಪಾದಕರಾದ ಶಾಮರಾವ್ ಅವರು ಸಂಪಾದಕೀಯ ಬರೆದು ಪ್ರಕಟಿಸುವಲ್ಲೆ ತಮ್ಮ ಕರ್ತವ್ಯ ನಿರ್ವಹಣೆಯಾಯ್ತೆಂದು ಭಾವಿಸಿದವರಲ್ಲ. ಅವರ ಕಣ್ಣು ಪತ್ರಿಕೆಯ ಪ್ರಸಾರ ಸಂಖ್ಯೆಯತ್ತ ಲಕ್ಷ್ಯವಿಡುತ್ತಿತ್ತು. ಬಿಡುವಾದಾಗ ಅಥವಾ ಸಂಪಾದಕೀಯ ಬರೆಯಲು ಸುದ್ದಿ ಸಂಪಾದಕ ವರ್ಗಕ್ಕೆ ಬಿಟ್ಟು ಜಿಲ್ಲಾ ಕೇಂದ್ರಗಳನ್ನು ಭೇಟಿ ಮಾಡುತ್ತಿದ್ದರು. ಸ್ಥಳೀಯ ಏಜೆಂಟರೊಡನೆ ಸ್ಥಳದ ಪ್ರಮುಖರುಗಳನ್ನು ಭೇಟಿ ಮಾಡಿ ಸಂಯುಕ್ತ ಕರ್ನಾಟಕ ಪತ್ರಿಕೆ ಗುಣಮಟ್ಟ ಹಾಗೂ ಆಗಬೇಕಾದ ಸುಧಾರಣೆ ಕುರಿತು ಮಾತುಕತೆ ನಡೆಸಿ ಸಂಯುಕ್ತ ಕರ್ನಾಟಕ ಪತ್ರಿಕೆ ಅವರ ಸಂಸಾರದಲ್ಲೊಂದು ಎನ್ನುವಂತಹ ಮಧುರಬಾಂದವ್ಯವನ್ನು ಉಂಟುಮಾಡುತ್ತಿದ್ದರು. ಕೆ. ಶಾಮರಾವ್ ಅವರ ಈ ಒಂದು ಕಾರ್ಯಕ್ರಮದ ಫಲವಾಗಿ ಈಗ್ಗೆ 32 ವರ್ಷಗಳ ಹಿಂದೆ ಚಿಕ್ಕದಾದ ಮಂಡ್ಯದಲ್ಲಿ 1400 ಪ್ರಸಾರ ಸಂಖ್ಯೆಯನ್ನು ಮೀರಿತು. ಇನ್ನಿತರ ಪತ್ರಿಕೆಗಳ ಪ್ರಸಾರ ಸಂಖ್ಯೆಯನ್ನು ಮೆಟ್ಟಿನಿಂತಿತು ಸಂಯುಕ್ತ ಕರ್ನಾಟಕ ಪತ್ರಿಕೆಯ ಪ್ರಸಾರ.

ಸಂಯುಕ್ತ ಕರ್ನಾಟಕ ಬೆಂಗಳೂರು ಪ್ರಕಟಣೆ ಪ್ರಸಾರದ ಹೆಚ್ಚಳ ಕೆ. ಶಾಮರಾವ್ ಅವರಿಗೆ ಸಲ್ಲುವದಾಗಿದೆ. ಅಷ್ಟೇ ಅಲ್ಲ ಬೆಂಗಳೂರಿನಲ್ಲಿರುವ ರಾಜಕಾರಣಿಗಳು ಇನ್ನಿತರ ಗಣ್ಯರು ಎಲ್ಲ ಪತ್ರಿಕೆಗಳ ಬಳಗದವರಿಗೂ ಚಿರಪರಿಚಿತರಾಗಿ ಕೆ. ಶಾಮರಾವ್ ಅವರಿಗೂ ಪರಿಚಿತರಾಗಿದ್ದಾರೆ. ಆದರೆ ಗ್ರಾಮಾಂತರಗಳ

ರಾಜ್ಯದ ಜಿಲ್ಲಾ ಕೇಂದ್ರಗಳ ಪ್ರಮುಖ ವ್ಯಕ್ತಿಗಳು ಕೆ. ಶಾಮರಾವ್ ಅವರಿಗೆ ಪರಿಚಿತರಾಗಿರುವಷ್ಟು ಇನ್ನಾವುದೇ ಪತ್ರಿಕಾ ಬಳಗಕ್ಕಿಲ್ಲ ಎಂದರೆ ಹೊಗಳಿಕೆಯ ಮಾತಾಗದು.

ಆಲದಮರದಂತೆ ಸುತ್ತ ಬಿಳಲು ಬಿಟ್ಟು ಬೆಳೆದು ನಿಂತಿದ್ದ ಸಂಯುಕ್ತ ಕರ್ನಾಟಕ ಪತ್ರಿಕೆಯು ದುರದೃಷ್ಟವಶಾತ್ ರಾಜಕೀಯ ದಾಳವಾಗಿ ಕೈಯಿಂದ ಕೈಯಿಗೆ ಬದಲಾವಣೆಯಾಗುತ್ತ ಬಂದಿತು. ಸಂಯುಕ್ತ ಕರ್ನಾಟಕ ಪತ್ರಿಕೆ ಸರ್ಕಾರದ ಮುಖಪತ್ರ ಎನ್ನುವಂತಹ ಅಪಖ್ಯಾತಿಗೆ ಈಡಾಗಿ ಪ್ರಸಾರ ಸಂಖ್ಯೆ ಇಳಿಮುಖವಾಯಿತು. ಇಳಿಮುಖವಾದ ಸಂಖ್ಯೆ ಹೆಸರಿಸಲು ಬೇಸರಿಸುವಷ್ಟು ಮಟ್ಟಕ್ಕಿಳಿಯಿತು.

ಸರ್ಕಾರ ಲೋಕಶಿಕ್ಷಣ ಟ್ರಸ್ಟನ್ನು ಗುರ್ತಿಸಿ ಸಂಯುಕ್ತ ಕರ್ನಾಟಕ ಪತ್ರಿಕೆ ತನ್ನ ಹಿಂದಿನ ದಿನಗಳಂತೆ ಎದ್ದು ನಿಲ್ಲುವಂತೆ ಟ್ರಸ್ಟನ್ನು ರಚಿಸಿ ದಕ್ಷರಾದ ಟ್ರಸ್ಟಿಗಳನ್ನು ನೇಮಿಸಿ ಕೆ. ಶಾಮರಾವ್ ಅವರನ್ನು ಕಾರ್ಯದರ್ಶಿಯಾಗಿ ನೇಮಿಸಿತು.

ಕೆ. ಶಾಮರಾವ್ ಅವರ ಪತ್ರಿಕಾ ಬೇಸಾಯದ ಪೂರ್ಣ ಅನುಭವವನ್ನು ಪಡೆದು ಸಂಯುಕ್ತ ಕರ್ನಾಟಕ ಮೊದಲಿನಂತೆ ಎದ್ದು ನಿಲ್ಲಲು ಸರ್ವ ವಿಧವಾಗಿ ಶ್ರಮಿಸುತ್ತಿದೆ. ಈ ಪ್ರಯತ್ನದ ಫಲ ಹೂ ಗೊಂಚಲು ಬಿಡುತ್ತ ಪ್ರಸಾರ ಸಂಖ್ಯೆಯಲ್ಲಿ ಹೆಚ್ಚಳ ಕಾಣಲಾರಂಭಿಸಿದೆ. ಸಂಯುಕ್ತ ಕರ್ನಾಟಕವು ತನ್ನ ಹಿಂದಿನ ದಿನಗಳನ್ನು ಎದುರು ನೋಡುವಂತೆ ಕೆ. ಶಾಮರಾವ್ ಅವರು ಪ್ರಯತ್ನ ಮಾಡುತ್ತಿದ್ದಾರೆ.

ಸಂಯುಕ್ತ ಕರ್ನಾಟಕದಿಂದ ನಿವೃತ್ತನಾದ ಮೇಲೆ ಈ ಲೇಖನ ಬರೆಯುತ್ತಿದ್ದೇನೆ. ಕೆ. ಶಾಮರಾವ್ ಅವರ ಸಾಧನೆ, ಛಲ ನನ್ನ ಮನದ ಮೇಲೆ ಮಾಡಿದ ಸತ್ಪರಿಣಾಮವೇ ಈ ಲೇಖನದ ಮೂಲವಾಗಿದೆ ಎಂಬುದನ್ನು ಉಲ್ಲೇಖಿಸಲು ಸಂತೋಷವಾಗುವುದು.

ಜನವಾಣಿ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳ ಮಂಡ್ಯ ಜಿಲ್ಲಾವರದಿಗಾರನಾಗಿ ಸುಮಾರು ಐದು ದಶಕಗಳ ಕಾಲ ಸೇವೆಸಲ್ಲಿಸಿ. ಉತ್ತಮ ವರದಿಗಾರನೆಂದು ಖ್ಯಾತಿಗಳಿಸಿದ ನನಗೆ 1988ನೆಯ ವರ್ಷದ ಪತ್ರಿಕಾ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಜೈಲುವಾಸ, ಜೈಲಿನಲ್ಲಿ ಸಹಯೋಗವಿದ್ದ ಪ್ರತಿಭಾನ್ವಿತರು, ಅವರಿಂದ ದೊರೆತ ಶಿಕ್ಷಣ ಇಂದಿನ ಸ್ನಾತಕೋತ್ತರ ವಿದ್ಯಾರ್ಥಿಗಳಿಗೂ ದೊರೆಯಲಾರದಂತಹದು. ನಾನು ಮತ್ತು ನನ್ನೊಡನಿದ್ದ ಹತ್ತಾರುಮಂದಿಗೆ ದೊರೆತುದು ಜಗದೀಶ್ವರನ ಕೃಪಾದೃಷ್ಟಿಗೆ ಪರವಶರಾದವರಿಗಲ್ಲದೆ ಅನ್ಯರಿಗೆ ಸಾಧ್ಯವಾಗದು.

''ನೈತಿಕ ಪೋಷಣೆ ದ್ರವ್ಯಾರ್ಜನೆಗಿಂತ ಆತ್ಮಪರಿಪೂರ್ಣತೆಗೆ ಗುಣಾಢ್ಯರು ಹೆಚ್ಚಿನ ಗಮನಕೊಡಬೇಕು. ವ್ಯಕ್ತಿಗೇ ಆಗಲಿ, ರಾಷ್ಟ್ರಕ್ಕೇ ಆಗಲಿ ಸದ್ಗುಣವು ಹೊನ್ನಿನಿಂದಬಾರದು. ಸದ್ಗುಣದಿಂದ ಹೊನ್ನು ಇನ್ನಿತರ ಉತ್ತಮ ಫಲಗಳು ತಾವಾಗೇ ಲಭಿಸುವುವು ಎಂಬ ವಿವೇಕಾನಂದರ ವಾಣಿಯನ್ನು ವಿಶದೀಕರಿಸಿ, ಮುಖಂಡರು ತಮ್ಮ ಶೈಲಿಯಲ್ಲಿ ವಿವರಿಸುತ್ತ ''ಪರಾರ್ಥಕ್ಕಾಗಿ ಸರ್ವಸ್ವವನ್ನು ಅರ್ಪಿಸುವ ಅರ್ಪಣಾ

ಮನೋಭಾವ ತ್ಯಾಗಬುದ್ಧಿಯನ್ನು ಬೆಳಸಿಕೊಳ್ಳಬೇಕು. ಅರ್ಪಣಾ ಮನೋಭಾವ್ಯ ದಲ್ಲಿಯೇ ಜಗತ್ತಿನ ಹಿತದೊಡನೆ ತನ್ನ ಹಿತವನ್ನು ಸಾಧಿಸಿಕೊಳ್ಳುವ ಚೈತನ್ಯವನ್ನು ಬೆಳಸಿಕೊಳ್ಳಬೇಕೆಂಬ'' ಮಾತುಗಳು ಅಹೋರಾತ್ರಿ ನನ್ನ ಕಿವಿಯಲ್ಲಿ ಮಾರ್ದನಿ ಗೊಳ್ಳುತ್ತ ಹೃದಯವನ್ನು ಸಾಧನೆಯ ಹೆದ್ದಾರಿಗೆ ಕೊಂಡೊಯ್ದು ಸನ್ನಿವೇಶ ನನ್ನ ಜೀವನದ "ಅಮೃತ ಕ್ಷಣ'' ಜೈಲಿನ ಪ್ರವೇಶ. ಕಾರಣ ನನ್ನ ರಾಜಕೀಯ ಜೀವನದ ಜಂಜಾಟಕ್ಕೆ ಎಳ್ಳಷ್ಟು ಹಿನ್ನೆಲೆಯಿಲ್ಲದ ಸಂಸಾರದಲ್ಲಿ ಜನ್ಮ ತಳೆದಿದ್ದು ವಿದ್ಯೆಯ ಗಂಧ ವಿಲ್ಲದ್ದು ಈ ಎರಡು ಪ್ರಮುಖಹಿನ್ನೆಲೆಗಳು ಇಲ್ಲದ ನಾನು ರಾಜಕೀಯ ಮಹಾಸಾಗರ ಲಂಘಿಸಲು ದೈವಕೃಪೆಯಿರದಿದ್ದರೆ, ಸಾಧ್ಯವೇ ಆಗದ ಘಟನೆ.

1940ನೆಯ ಮೇ 14ನೆಯ ದಿನಾಂಕ ತೀರ್ಥಹಳ್ಳಿ ಜೈಲಿನಿಂದ ನಾನು ಮತ್ತು ತುಮಕೂರಿನ ಕೆಲವರು ಬಿಡುಗಡೆಯಾದೆವು. ಹೊರಗೆ ಬರಲಾರದ ಮನಸ್ಸಿನಿಂದ ಹೊರಬಂದೆವು. ನನ್ನ ಮಟ್ಟಿಗೆ ಹೇಳುವುದಾದರೆ ಜೈಲಿಗೆ ಏಕೆ ಹೋದೆ ಎಂದು ಕೇಳಿ ದವರಿಲ್ಲ. ಹೊರಗೆ ಬಂದ ನನ್ನನ್ನು ಬಂದೆಯಾ ಎಂದು ಅಪ್ಪಿಕೊಳ್ಳುವರಿಲ್ಲದವನು. ತೀರ್ಥಹಳ್ಳಿ ಜೈಲಿನ ಪರಿಸರ. ರಾಜಕೀಯ ಖೈದಿಗಳಿಗೆ ನೀಡುತ್ತಿರುವ ಸೌಲಭ್ಯ ಸವಲತ್ತುಗಳನ್ನು ತಿಳಿದು ವಾರ್ತಾಪತ್ರಿಕೆಗೆ ವರದಿ ಮಾಡಲು ತಾಯಿನಾಡು ಪತ್ರಿಕೆ ಸಂಪಾದಕರಾಗಿದ್ದ ಪಿ. ಬಿ. ಶ್ರೀ ನಿವಾಸನ್ ಅವರು ಆಗತಾನೆ ಪ್ರಾರಂಭಗೊಂಡಿದ್ದ ಜನವಾಣಿ ಪತ್ರಿಕೆ ಸಂಪಾದಕ ಕೆ. ಜೀವಣ್ಣರಾವ್ ಅವರು, ಅವರೊಡನೆ ದೇಶಬಂಧು ಮತ್ತು ವಿಶ್ವ ಕರ್ನಾಟಕ ಪತ್ರಿಕೆಗಳ ವರದಿಗಾರರು ನಮ್ಮ ಬಿಡುಗಡೆ ಹಿಂದಿನ ದಿನವೇ ತೀರ್ಥಹಳ್ಳಿಗೆ ಬಂದು ಬಿಡಾರ ಮಾಡಿದ್ದರು.

ಬಿಡುಗಡೆಯಾದ ನಮ್ಮನ್ನು ಪ್ರಜಾಪ್ರತಿನಿಧಿ ಸದಸ್ಯರಾಗಿದ್ದ ಕುಡುಕಿ ರಾಮಣ್ಣ ನವರು, ಇವರು ಕಡಿದಾಳು ಮಂಜಪ್ಪನವರ ಸಂಬಂಧಿ. ಸ್ಥಳೀಯ ಒಕ್ಕಲಿಗರ ಹಾಸ್ಟಲಿಗೆ ಕರೆದೊಯ್ದರು. ಜೊತೆಗೆ ಬೆಂಗಳೂರಿಂದ ಬಂದಿದ್ದ ಪತ್ರಿಕೆಯವರನ್ನು ಆಹ್ವಾನಿಸಿದರು. ಹಾಸ್ಟೆಲಿನ ಸಭೆಗೆ ಆಗುಂಬೆ ಮುಂತಾದ ಸ್ಥಳಗಳಿಂದ ದೊಡ್ಡ ಗಣ್ಯ ವ್ಯಕ್ತಿಗಳು ಆಗಮಿಸಿದ್ದರು. ಜೈಲಿನಿಂದ ಬಂದವರ ಪೈಕಿ ನನ್ನನ್ನೇ ಮಾತನಾಡಲು ಹೇಳಿದರು. ನಾನು ಸುಮಾರು ½ ಘಂಟೆ ಮಾತನಾಡಿ ನಮ್ಮ ನಾಡನ್ನು ದಾಸ್ಯದಿಂದ ಬಿಡುಗಡೆ ಮಾಡಿಸದೆ ಯಾರೂ ನಿದ್ರೆಯನ್ನು ಮಾಡಬಾರದೆಂದು ತಿಳಿಸಿ ಮಾತೃಭೂಮಿ ಹೆತ್ತ ತಾಯಿಗಿಂತ ಪವಿತ್ರಳು ಎಂದು ತಿಳಿಸಿದೆ. ಜೈಲಿನಿಂದ ಬಿಡುಗಡೆಯಾದವರಲ್ಲಿ ನಾನು ಕ್ಯಾತಸಂದ್ರದ ಕೆ. ಎಲ್. ನರಸಿಂಹಯ್ಯ, ಕುಂಡಲಗಿರಿ, ಅಮೃತೂರಿನ ಸಂಪತ್ತಯ್ಯಂಗಾರ್ ಮೂವರನ್ನು ಮದ್ದೂರಿನ ಜಿಲ್ಲಾ ಬೋರ್ಡ್ ಚುನಾವಣೆಗೆ ಪ್ರಚಾರಮಾಡಲು ಕೆ. ಜೀವಣ್ಣರಾಯರು ವೀರಣ್ಣಗೌಡರ ಹೇಳಿಕೆ ಮೇಲೆ ಮದ್ದೂರಿಗೆ ಕರೆದೊಯ್ದರು.

ದೈವಕೃಪೆಯೊ ಎನ್ನುವಂತೆ ಸಜ್ಜನರ ಸಹವಾಸದಲ್ಲಿದ್ದು ಬಿಡುಗಡೆ ಆದ ನನಗೆ

ಜನವಾಣಿ ವಿತರಣೆ ದೊರೆತು ನಾನಾ ತರಹ ಜನರ ಸಂಪರ್ಕ ಪಡೆಯಲು ಅನುಕೂಲವಾಗಿ, ಸಮಾಜದಲ್ಲಿ ಒಂದು ಅಗ್ರಸ್ಥಾನ ಪಡೆಯಲು ಕಾರಣ ನನ್ನ ಹಿಂದಿನ ಜನ್ಮದ ಸುಕೃತ ವಿಶೇಷ ಎಂಬುದನ್ನು ಕಾಣಬಹುದು.

ನಾನೊರ್ವಳುಂ,

ಜೀವರ್ಕಳೊಳ್ ನಾಂ ಕೃತಜ್ಞೆ, ಲಂಕೇಶ್ವರಗೆ
ನಿನ್ನ ಸೇವಾ ಭಾಗ್ಯಮೆನಗಾದುದಾತನಿಂ
ಪಾನೆಲ್ಲಿ, ನೀನೆಲ್ಲಿ ? ಲಂಕಾ ಅಯೋಧ್ಯಾಂತರಂ
ಲಭಿಸಿರ್ದುದೆ ನನಗೆ ನಿನ್ನ ದರ್ಶನವಾ
ದಶಗ್ರೀವ ಸಾಹಸವಿನಾ !

ಎಂದು ಶ್ರೀ ರಾಮಯಣ ದರ್ಶನಂನಲ್ಲಿ ಸೀತಾಮಾತೆಯು ತನಗೆ ಸೇವೆ ಗೈದ ತ್ರಿಜಟೆಯನ್ನು ಕುರಿತು ಹೇಳಿದ ಮಾತುಗಳಂತೆ, ಪರಂಗಿ ಜನ ಯಾರಿಗೇನು ಮಾಡಿದರೋ ಅಂತು ನನ್ನನ್ನು ಶಿವಮೊಗ್ಗ ತೀರ್ಥಹಳ್ಳಿಗಳ ಜೈಲುಗಳಲ್ಲಿದ್ದ ಸಜ್ಜನರ ಸಹವಾಸ ಪಡೆಯಲು ಮತ್ತು ಪ್ರತಿಕಾರಂಗಕ್ಕೆ ಬರಲು ಕಾರಣರಾದರು. ಪಾಲಗ್ರಹಾರವೆಲ್ಲಿ ಶಿವಮೊಗ್ಗ ತೀರ್ಥಹಳ್ಳಿಗಳಲ್ಲಿಯ ಸಂಬಂಧವೆಲ್ಲಿ. ಈ ಒಂದು ಪವಿತ್ರ ದೃಷ್ಟಿಯಿಂದ ಇಂಗ್ಲಿಷರಿಗೆ ಚಿರಋಣಿ.

ದೇಶಕ್ಕೆ ಸ್ವಾತಂತ್ರ್ಯ ಬಂತು. ಎಲ್ಲೆಲ್ಲೂ ಜನರ ಉತ್ಸಾಹ ಮೇರೆಮಿರಿ ಉಕ್ಕುತ್ತಿದೆ. ಗುಡಿಸಲ ಜನರು ಎಂದಿನಂತೆ ತಂಗಳು ತಿಂದು ಸಾಗಿದರು ಕೂಲಿಗೆ. ಅವನಿಗೇನು ಸ್ವಾತಂತ್ರ್ಯ ಹೋಗಿರಲೂ ಇಲ್ಲ. ಹೋದ ಸ್ವಾತಂತ್ರ್ಯ ಬರಲೂ ಇಲ್ಲ. ಅವನ ದಾಸ್ಯ ವಿಮೋಚನೆ ಆಯ್ತೆಂದರೆ ಅತನಿಗೆ ಸಾವು ನಿಶ್ಚಿತ. ಆತನಿಗೆ ದಿನ ನಿತ್ಯ ಕೂಲಿ ಕೊಡುವಾತನ ದಾಸ್ಯ ಅವನಿಗಿಲ್ಲದಿದ್ದರೆ ಅವನನ್ನು ಕೇಳುವವರಾರು. ಅವನೇನು ದೇಶದ ಇತಿಹಾಸ ಕುರಿತು ಪಾರ್ಕುಗಳಲ್ಲಿ ಭಾಷಣ ಮಾಡಬೇಕೆ? ಅಥವಾ ದೇಶದ ಸಮಸ್ಯೆಗಳ ಪರಿಹಾರ ಕುರಿತು ಇತಿಹಾಸ ರಚನೆ ಮಾಡಬೇಕೆ? ಏನಿಲ್ಲ. ಸಂಜೆ ಆಯ್ತು ಹೊಟ್ಟೆಗಿಷ್ಟು ಗಂಜಿ ಹಾಕಿ ತನ್ನ ಕತ್ತಲಿನ ನೆರಕೆಯಲ್ಲಿ ಮಲಗುವುದಿಲ್ಲ, ಮುದಡಿ ಕೊಳ್ಳುತ್ತಾನೆ.

ಸ್ವರಾಜ್ಯ ಬಂದ ಪ್ರಾತಃಕಾಲ ನೆರಕೆಯಿಂದ ಈಚೆ ನೋಡುತ್ತಾನೆ. ತನ್ನ ಮತ್ತು ತನ್ನ ನೆರೆಯವರ ಗುಡಿಸಲುಗಳು ದಿನವು ಇದ್ದಂತೆಯೆ ಇವೆ. ಇವುಗಳನ್ನುಳಿದು ರಸ್ತೆಗಳು ಪರ್ವತೋಪಮ ಕಟ್ಟಡಗಳು ವಿವಿಧ ಬಣ್ಣದ ವಸ್ತ್ರಗಳ ಬಾವುಟಗಳಿಂದಲೂ, ನಾನಾ ಬಣ್ಣದ ವಿದ್ಯುತ್‌ದೀಪಾಲಂಕಾರದಿಂದಲೂ ಹಗಲಿನಲ್ಲು ಉರಿಯುತ್ತಿವೆ. ಹುಟ್ಟಿನಿಂದ ಈತನಕ ಕಾಣದವೈಭವ ಆ ಕೂಲಿಆಳುಗಳಿಗೆ.ಬಿಟ್ಟಕಣ್ಣುಮಿಟಿಕಿಸದೆ ನೋಡುತ್ತಾ ಕುಳಿತಿದ್ದಾರೆ ರಸ್ತೆಯಲ್ಲಿ ಕಲ್ಲು ಚೆಚ್ಚುವ ಕಲ್ಲು ಕುಟಿಕರ ಸಂಸಾರದವರು. ರಸ್ತೆಯಲ್ಲಿ ಲಾರಿಗಳಲ್ಲಿ ಸಕ್ಕರೆ ತುಂಬಿ ಬಂದ ಶ್ರೀಮಂತರ ಲಾರಿಗಳಿಂದ ಸಕ್ಕರೆ ಹಂಚುತ್ತಿದ್ದರು. ಉಳ್ಳವರಿಗೆ ಪಾತ್ರೆಗಳಲ್ಲಿ ತುಂಬಿ ಸಕ್ಕರೆ ಕೊಟ್ಟರೆ. ರಸ್ತೆ ಕಲ್ಲು ಕುಟಿಗರಿಗೆ ಸಕ್ಕರೆ

ಕಿಂಚಿತ್ ಪಾಲು ಮಾತ್ರ. ಅವರಿಗಂತು ಸಖೇದಾಶ್ಚರ್ಯ. ಇದೇನು ತಾರಸಿ ಹಾಕಲು ಮದ್ದೂರಿಂದ ಮರಳು ತರುವ ಲಾರಿಗಳು ಇಂದು ಸಕ್ಕರೆ ತುಂಬಿ ತಂದಿವೆ ಏಕೆ ? ಎಂಬ ಶಂಕೆ ಪಾಪ ಅವರಿಗೆ. ಈ ಶ್ರೀಮಂತ ಜನರಂತೆ ಏನನ್ನೊ ಕಳೆದು ಕೊಂಡವರೂ ಅಲ್ಲ. ಕಳೆದು ಕೊಂಡಿದ್ದನ್ನು ಪಡೆದವರೂ ಅಲ್ಲ. ನಿಗರ್ವಿಗಳಾಗಿ ನಿರ್ವ್ಯಾಮೋಹಿತರಾಗಿ ತಮ್ಮ ಪಾಲಿಗೆ ಬಂದ ಚುಟುಕಿ ಸಕ್ಕರೆ ಬಾಯಿಗೆಸೆದು ಏನು ಹುಚ್ಚೊ ಏನೋ ಎಂದು ಗೊಣಗಿಕೊಂಡರು.

ಮಂಡ್ಯ ತಾಲ್ಲೂಕಿನವರು ಸ್ವಾತಂತ್ರ್ಯೋತ್ಸವಗಳ ಮೆರವಣಿಗೆ, ಸಾಮೂಹಿಕ ಊಟೋಪಚಾರಗಳನ್ನು ಹೇಳತೀರದಂತೆ ಅತ್ಯಂತ ಸಂತೋಷದಾಯಕ ಸನ್ನಿವೇಶದಲ್ಲಿ ಆಚರಿಸಿದರು. ಹಳ್ಳಿಗಳಲ್ಲಿ ಮೆರವಣಿಗೆ. ಜೈಲಿಂದ ಬಂದ ಕಾರ್ಯಕರ್ತರಿಗೆ ಶೃಂಗರಿಸ ಲಾದ ಬಂಡಿಗಳಲ್ಲಿ ಕಾರು ಜೀಪುಗಳಲ್ಲಿ ಲಾರಿಗಳಲ್ಲಿ ಮತ್ತು ಪುಷ್ಪಾಲಂಕೃತ ಮಂಟಪ ಗಳಲ್ಲಿ ನಡೆಸಿದರು. ದಿನವೂ ಎಂಟು ಹತ್ತುಹಳ್ಳಿಗಳಲ್ಲಿ ಕಾರ್ಯಕ್ರಮಗಳು. ಸ್ವಾತಂತ್ರ್ಯ ಸೇನಾನಿಗಳಿಗೆ ನಿದ್ರೆಮಾಡಲು ಬಿಡುವಿಲ್ಲದ ಮೆರವಣಿಗೆಗಳು. ಅನೇಕ ಹಳ್ಳಿಗಳಲ್ಲಿ ನಿಶಾ ರಾತ್ರೆವರೆಗೂ ಮಕ್ಕಳು ಮರಿಯೊಡನೆ ಕಾಯ್ದಿದ್ದು, ಮಾಡಿದ ಅಡಿಗೆ ಆರಿ ಹೋದ ಪರಿವೆಯೇ ಇಲ್ಲದೆ ಸ್ವಾತಂತ್ರ್ಯವೀರರ ಮೆರವಣಿಗೆ ಮಾಡಲು ಕಾಯ್ದಿರುತ್ತಿದ್ದ ಸನ್ನಿ ವೇಶ ನನಗೆ ಭಯಾನಕವಾಗಿ ಗೋಚರಿಸುತ್ತಿತ್ತು. ಯಾವ ಊರಿಗೂ ಯಾವುದೇ ಕಾರ್ಯಕ್ರಮಕ್ಕೂ ಮಂತ್ರಿಗಳನ್ನು ಕರೆದು ಊರಿನ ಸಮಸ್ಯೆ ಪರಿಹಾರಕ್ಕೆ ಮಾರ್ಗ ಮಾಡಿಕೊಳ್ಳಬೇಕೆಂಬ ಆಲೋಚನೆ ಹಳ್ಳಿಗರಿಗೇಕೆ ಹೊಳೆದಿಲ್ಲ ಎಂಬುದನ್ನು ಯೋಚಿಸಿ ನಾನಾ ಕಡೆ ಮಂತ್ರಿಗಳನ್ನು ಕರೆಯಲು ಸಲಹೆ ಮಾಡಿದೆ. ಏ ಬನ್ನಿ ಸ್ವಾಮಿ ಯಾವ ಮಂತ್ರಿ ಬಂದು ನಮ್ಮನ್ನೆಲ್ಲ ಹುರಿದುಂಬಿಸಿ "ಅರಮನೆ ಚಲೋ"ಗೆ ಕಳುಹಿಸಿದ್ದರು. ಕಳುಹಿಸಲು ಜುಮ್ಮಿಕ್ಕಿದ ನೀವೇ ನಮಗೆ ಮಂತ್ರಿಗಳು ಎನ್ನುತಿದ್ದರು.

ಕೇವಲ ಮೆರವಣಿಗೆಯಾಗಿ ಉಂಡು ಬಂದವರಲ್ಲ ನಾವು. ಗ್ರಾಮಗಳ ಪಾರ್ಟಿ ಪಕ್ಷಗಳು ಒಂದಾಗಿ ಊರಿನ ಪುರೋಭಿವೃದ್ಧಿ ಕಾರ್ಯಗಳನ್ನು ಒಂದಾಗಿ ನಡಸಿ ಎಂದು ಸಲಹೆ ಮಾಡುತ್ತಿದ್ದೆವು. ಸೋಮವಾರದ ಊರೊಟ್ಟಿನ ಕೆಲಸ ನಿರ್ವಹಿಸಲು ಕಾರ್ಯ ಕ್ರಮ ಕೊಡುತ್ತಿದ್ದೆವು, ನಾವೂ ಅಂದು ಆಯಾ ಊರಿನ ಕಾರ್ಯಕ್ರಮದಲ್ಲಿ ಭಾಗ ವಹಿಸುತ್ತಿದ್ದೆವು. ಹೆಸರಾಂತ ಗ್ರಾಮಾಂತರ ಪಾರ್ಟಿ ವೈಷಮ್ಯವೊಂದು ತಲೆತಲಾಂತರ ದಿಂದ ನಡೆದು ಬಂದು ಲಕ್ಷಾಂತರ ರೂಪಾಯಿ ಹಣ ವ್ಯಯಮಾಡಿದ್ದ ಊರು ಮಂಡ್ಯ ತಾಲ್ಲೂಕಿನ ಗಾಣದಾಳು ಗ್ರಾಮ. ಆ ಗ್ರಾಮದಲ್ಲಿ ಕಾರ್ಯಕರ್ತರಾದ ನಮ್ಮ ಸಲಹೆ ಯನ್ನು ಅಂಗೀಕರಿಸಿ ಪಾರ್ಟಿಗಳು ಒಂದಾದುವು. ತುಟಿಪಿಟಿಕ್ ಎನ್ನದೆ. ಉಭಯ ಪಾರ್ಟಿಗಳು ಒಪ್ಪಿದ ಈ ಒಂದು ಪ್ರಸಂಗ ಇಡೀ ತಾಲ್ಲೂಕಿನ ಮನೆ ಮಾತಾಗಿ ಮೆರೆ ಯಿತು. ಸೋಮವಾರದ ಕೆಲಸಕ್ಕೆ ಊರಿನ ಬೀದಿಗಳ ಚರಂಡಿ ಮಾಡುವಲ್ಲಿ ಜಾಗ ಬಿಡಿಸಲು ಸರ್ಕಾರ ತನ್ನ ಎಲ್ಲ ಕಾನೂನುಗಳನ್ನು ಪ್ರಯೋಗಿಸಿ ವಿಫಲಗೊಂಡಿತ್ತು.

ಕಾರ್ಯಕರ್ತರಾದ ನಮ್ಮ ಸಲಹೆಯಂತೆ ಮನೆ ಮುಂದೆ ಚರಂಡಿಗೆ ಜಾಗ ಬಿಟ್ಟರು. ಈ ಸೋಮವಾರದ ಕೆಲಸದಲ್ಲಿ ಊರಿನಲ್ಲಿ ಬೀದಿ ಅಗಲ ಮಾಡಲು ರೈತರು ತಮ್ಮ ಹೆಂಚಿನ ಒಪ್ಪಾರನ್ನೇ ಕೊಯ್ದು ಸಹಕರಿಸಿದ ಪ್ರಸಂಗ ಗಾಣದಾಳು ಪಕ್ಕದ ಮಡ ಚಾಕನ ಹಳ್ಳಿಯದು. ಯಾವುದೇ ಊರಿಗೆ ಹೋದರು ತಂಟೆ ತಕರಾರು ಮಾಡದೇ ರೈತರು ಬಿಟ್ಟರೆಯ್ಯ ಗಾಣದಾಳಂತ ಗ್ರಾಮದೇ ಐಕ್ಯತೆಗಾಗಿ ಸಹಕರಿಸಿದೆ, ನಮ್ಮದೇನು ಎನ್ನುತ್ತ ಹಳ್ಳಿಗಳವರು ಉದಹರಿಸುತ್ತಿದ್ದರು.

1947ನೆಯ ಸಂವತ್ಸರ ಅದೆಂತಹ ಶುಭಸಂಕೇತ ಹೊತ್ತು ತಂದಿತ್ತೋ ಏನೋ ಗ್ರಾಮಾಂತರ ಜನರು ಒಗ್ಗಟ್ಟಾಗಬೇಕು. ನಮ್ಮ ನಮ್ಮ ಸ್ವಂತ ವೈಮನಸ್ಸಿನ ವ್ಯತ್ಯಾಸಕ್ಕೆ ಊರನ್ನು ಪಾರ್ಟಿಮಾಡಬಾರದೆಂಬ ಉತ್ಸಾಹದ ಚಿಲುಮೆಗಳು ಉಕ್ಕಿ ಹಾರುತ್ತಿದ್ದವು. ಇವರ ಜೊತೆಗೆ ಹರಿಜನರು ತಮ್ಮ ಬೀದಿಗಳಿಗೂ ಕರೆದುಕೊಂಡು ಹೋಗಿ ಗೌರವಿಸು ತ್ತಿದ್ದರು.ಪಾನನಿರೋಧ ಮಾಡಲು ಕೇರಿಗೆಕೇರಿ ಜನರು ಒಪ್ಪಿದ ಪ್ರಸಂಗಗಳು ಹೇರಳ. 1947ರಲ್ಲಿ ಆಣೆಯಿಟ್ಟ ಅನೇಕ ಹಳ್ಳಿಗಳಲ್ಲಿ ಹರಿಜನರು ಪಾನನಿರೋಧವನ್ನು ಇಂದಿಗೂ ಪಾಲಿಸುತ್ತಿರುವುದು ಅಭಿನಂದನೀಯವಾದುದು. ಆದರೆ ಅನೇಕ ಹಳ್ಳಿಗಳಲ್ಲಿ ಸವರ್ಣ ಹಿಂದುಗಳ ಬೀದಿಗಳಲ್ಲಿ ಇಂದು ಬಾರ್‌ಗಳು ಆರಂಭವಾಗಿ ಅಪ್ಪ ಕಾಣದಂತೆ ಮಗ, ಮಗ ಕಾಣದಂತೆ ಅಪ್ಪ ಕುಡಿಯುವ ಕುಡಿತದ ಹಾವಳಿ ಜನರನ್ನು ಜೀವನದ ಹಳಿ ತಪ್ಪಿಸಿದೆ ಎಂದು ನೊಂದ ಮನದಿಂದ ಬರೆಯುತ್ತಿದ್ದೇನೆ.

ಕಾಂಗ್ರೆಸ್ ಮಂತ್ರಿ ಮಂಡಲವು ರಾಜ್ಯಾದ್ಯಂತ ಪ್ರವಾಸ ಕೈಗೊಂಡು ಯಾವ ಯಾವ ಹಳ್ಳಿಗೆ ಏನುಬೇಕು ಎಂಬುದನ್ನು ಗುರ್ತಿಸಿತು. ಸಾಧ್ಯವಾದ ಮಟ್ಟಿಗೆ ನಿಧಾನ ವಿಲ್ಲದಂತೆ ಮಂತ್ರಿಗಳ ಆಜ್ಞೆ ಕಾರ್ಯಗತವಾದುವು. ಮಂತ್ರಿಗಳಾದವರು ತಾವು ಮಾಡಿದ ಆಜ್ಞೆ ಬಗ್ಗೆ ಕಾರ್ಯಗತಗೊಳಿಸಲು ಉತ್ಸುಕರಾಗಿದ್ದರು. ಅಹಾರ ಕಛೇರಿ ಕಾರ್ಯ ದರ್ಶಿಗಳು ಚುರುಕಾಗಿ ಕಾರ್ಯನಿರ್ವಹಿಸುತ್ತಿದ್ದರು. ಇಲ್ಲಿ ಇನ್ನೊಂದು ಹಳೆ ಸನ್ನಿ ವೇಶದ ಬಗ್ಗೆ ನಿಮ್ಮ ಗಮನ ಸೆಳೆಯ ಬಯಸುತ್ತೇನೆ.

''ಜವಾಬ್ದಾರಿ ಸರ್ಕಾರಕ್ಕೆ ಪೂರ್ವದಲ್ಲಿ ಪತ್ರಿ ಜಿಲ್ಲೆಯಲ್ಲು ಜಿಲ್ಲಾ ಸಮ್ಮೇಳನಗಳು ಸೇರಿ, ಜಿಲ್ಲೆ ಸಮಸ್ಯೆ ಬಗ್ಗೆ ಚರ್ಚಿಸಿ ಸಲಹೆಕೊಡುತ್ತಿದ್ದವು. ಅರವಿನ್ ನಾಲಾ ಬಯಲ ಕಾಂಟ್ರಿಬ್ಯೂಷನ್ ಮತ್ತು ನೀರುಸರದಿ ಹಣವನ್ನು ಶ್ಯಾನುಭೋಗರುಗಳು ರೈತರಿಂದ ವಸೂಲಿಮಾಡಿ ರೈತರ ಖಾತೆಗೆ ಕಟ್ಟದೇ ಸ್ವಂತಕ್ಕೆ ಬಳಸಿಕೊಂಡು ಹೋಗುತ್ತಿದ್ದ ಗಂಭೀರವಾದ ಸಮಸ್ಯೆ ಎಲ್ಲೆಲ್ಲು ಚರ್ಚಿತವಾಗುತ್ತಿತ್ತು. ಈ ಬಾರಿ ಮಂತ್ರಿಮಂಡಲದ ಕೆ.ವಿ. ಅನಂತರಾಮನ್ ಅವರು ಮಂಡ್ಯಜಿಲ್ಲಾ ಸಮ್ಮೇಳನಕ್ಕೆ ಬಂದರು. ನಾನಾ ವಿಷಯ ಗಳು ಚರ್ಚಿತವಾದವು. ಕೀಲಾರದ ದೊಡ್ಡ ತಮ್ಮೇಗೌಡರು ''ಕಾಂಟ್ರಿಬ್ಯೂಷನ್ ಮತ್ತು ನೀರುಸರದಿ ತೆರಿಗೆ ಅಪಾರವಾಗಿ ಬಾಕಿ ಇದೆ'' ಎಂದು ಹೇಳುತ್ತಿರುವುದು ಸ್ವಾಮಿ ''ಕುರುಡ ಹಗ್ಗ ಹೊಸೆದಂತೆ'' ಎಂದು ಮಾತನಾಡುತ್ತ ತಿಳಿಸಿದರು.

ತಮ್ಮೇಗೌಡರ ಗಾದೆ ಮಾತು ಮಂತ್ರಿಗಳ ಗಮನವನ್ನು ತ್ರೀವವಾಗಿ ಸೆಳೆಯಿತು, "ಗೌಡರೆ ಬಿಚ್ಚಿ ಪದರ ಪದರವಾಗಿ ನೀವು ಮಾತನಾಡಿದ ವಿಚಾರ ವಿವರಿಸಿರಿ" ಎಂದರು. ತಮ್ಮೇಗೌಡರು "ರೈತರಿಂದ ಕಾಂಟ್ರಿಬ್ಯೂಷನ್ ಬಾಕಿ ಎಂದು ಒಂದು ಕಡೆ ಸಕ್ಕರೆ ಕಂಪನಿ ಹಿಡಿದು ತಾಲ್ಲೂಕು ಆಫೀಸ್ ಲೆಕ್ಕಕ್ಕೆ ಜಮಾ ಮಾಡುತ್ತಿದೆ. ಇನ್ನೊಂದು ಕಡೆಯಿಂದ ಶ್ಯಾನುಭೋಗರುಗಳು ಬಾಕಿ ಇದೆ ಎಂದು ರೈತರಿಂದ ವಸೂಲಿ ಮಾಡು ತಿದ್ದಾರೆ. ಹೀಗೆ ವಸೂಲಿ ಆದ ಹಣ ಯಾರ ಖಾತೆಗೆ ಜಮಾ ಆಗುತ್ತಿದೆ" ಎಂಬುದು "ನನ್ನಂತಹ ವಿದ್ಯಾವಂತನಿಗೂ ಅರ್ಥವಾಗದು ಶ್ಯಾನುಭೋಗರುಗಳ ಚಿತ್ರಗುಪ್ತನ ಲೆಕ್ಕ ಪರಿಶೋಧನೆಗೆ ತಾವು ಮುಂದಾಗದಿದ್ದರೆ." "ಕುರುಡನೊಬ್ಬ ವರ್ಷ ಕಾಲ ಹಗ್ಗ ಹೊಸೆದರೂ ಹಿಂದಿನಿಂದ ಕತ್ತರಿಸಿಕೊಂಡು ಹೋಗುತ್ತಿದ್ದ ಪರಿಣಾಮವಾಗಿ ಕುರುಡನಿಗೆ ವರ್ಷಾಂತ್ಯದಲ್ಲಿ ಉಳಿಯುತ್ತಿದ್ದುದು ಕೇವಲ ಮೊಳ ಹಗ್ಗ ಮಾತ್ರ". ಹಾಗೆ ತಾವು ಈ ಬಗ್ಗೆ ಕೂಡಲೇ ವಿ. ಸಿ. ಬಾಕಿಗೆ ತನಿಖಾ ವಿಭಾಗ ಆರಂಭಿಸಲು ಆಜ್ಞೆಮಾಡಿ ರೈತನಿಗೆ ಶಾಶ್ವತವಾಗಿ ಬಂದಿರುವ ಕಣ್ಣಂಬಾಡಿ ನೀರು ವರವಾಗಿ ಪರಿಣಮಿ ಸಲು ಅಜ್ಞೆಮಾಡಿರೆಂದು ಪೇಟ ತೆಗೆದು ನೆಲಕ್ಕೆ ಬಾಗಿ ನಮಸ್ಕರಿಸಿದರು.

ಸಮ್ಮೇಳನಾನಂತರ ಮಂತ್ರಿಗಳು ಸಕ್ಕರೆ ಕಂಪನಿ ಅತಿಥಿ ಗೃಹಕ್ಕೆ ತೆರಳಿ ಭೋಜನ ಸ್ವೀಕರಿಸಿ ವಿಶ್ರಾಂತರಾದರು. ಅಷ್ಟರಲ್ಲಿ ಜನವಾಣಿ ಪ್ರತಿನಿಧಿ ಆಗಿದ್ದ ನಾನು ತಾಯಿನಾಡು ಮತ್ತು ಹಿಂದೂ ಪತ್ರಿಕೆ ವರದಿಗಾರರಾಗಿದ್ದ ದಿವಂಗತ ಡಿ. ರಾಮ ಸ್ವಾಮಿಯ್ಯಂಗಾರರು ಸಕ್ಕರೆ ಕಂಪನಿ ಕೆಲಸಕ್ಕೆ ಹೋದೆವು. ತರಾತುರಿಯಿಂದ ಮಂತ್ರಿ ಗಳು ತಾಲ್ಲೂಕು ಕಛೇರಿಗೆ ಹೊರಟು ನಿಂತಿದ್ದರು. ನಮ್ಮನ್ನು ಕಂಡ ಜಿಲ್ಲಾಧಿಕಾರಿ ಸಬ್ದರ್ ಹುಸೇನ್ ಅವರು ಮಂತ್ರಿಗಳಿಗೆ ಪರಿಚಯಿಸಿದರು. ಗುಪ್ತ ಅವರ ಪತ್ರಿಕೆ ವರದಿ ಗಾರರೋ ನೀವು ನಿಮ್ಮ ಗುಪ್ತರಿಗೆ ನಮ್ಮ ಸರ್ಕಾರ ಎಂದರೆ ವಿಷ. ಬನ್ನಿ ಕಾರಿಗೆ ಎಂದು ನಮ್ಮಿಬ್ಬರನ್ನು ಕೂರಿಸಿಕೊಂಡು ಹೊರಟರು. ಮಂತ್ರಿಗಳು ಇಳಿಯುತ್ತಿದ್ದಂತೆ ತಾಲ್ಲೂಕ್ ಆಫೀಸ್ ಸಿಬ್ಬಂದಿ ಗಾಬರಿಗೊಂಡರು. ಮಂತ್ರಿಗಳು ದರಖಾಸ್ತು ಗುಮಾಸ್ತನ ಮೇಜಿಗೆ ಹೋದರು, ಡ್ರಾಯರ್ ಎಳೆದು ಕೆಲವು ಫೈಲುಗಳನ್ನು ನಿಂತೇ ಪರಾಮ ರ್ಶಿಸಿದ ಮಂತ್ರಿಗಳು ನೀನಿರುವುದು ಪಾಳು ಭೂಮಿಯನ್ನು ದರಖಾಸ್ತು ಮೂಲಕ ಹಂಚಲಿಕ್ಕಲ್ಲವೆ? ಇದಕ್ಕೇಕೆ ನಿನ್ನ ಕೊಕ್ಕೆ ಹಾಕಿದ್ದೀಯೆ? ಈ ರೈತನಿಂದ ಎಷ್ಟು ಲಂಚದ ನಿರೀಕ್ಷೆ ನಿನ್ನದು ಎಂದು ಮುಖದ ನೀರು ಇಳಿಸಿದ ಮಂತ್ರಿಗಳು ತಹಸೀಲ್ದಾರರ ಮಂಜೂರಾತಿಗೆ ಈಗಲೇ ಈ ಫೈಲುಗಳನ್ನು ಕೊಡು ಎಂದು ಆಜ್ಞಾಪಿಸಿದರು. ವಿ. ಸಿ. ಬ್ರಾಂಚ್‌ಗೆ ಮಂತ್ರಿಗಳು ಭೇಟಿಯಿತ್ತರು ಹಾಲಿ ಮಂಡ್ಯದಲ್ಲಿರುವ ನಿವೃತ್ತ ತಹ ಸೀಲ್ದಾರರಾದ ಬಿ. ಶಿವಲಿಂಗಯ್ಯನವರು ವಿ. ಸಿ. ಲೆಕ್ಕದ ತನಿಖಾ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದರು, ಅವರು ತನಿಖೆಮಾಡಿದ್ದ ಒಂದೆರಡು ಫೈಲುಗಳನ್ನು ಮಂತ್ರಿಗಳಿಗೆ ತಿಳಿಸಿ ನಾನು ತನಿಖೆ ಮಾಡಿರುವ ಫೈಲಿನ ರೀತ್ಯಾ ಈ ಶ್ಯಾನುಭೋಗ ರೈತನ ಖಾತೆಗೆ

ವಸೂಲಿ ಹಣ ಜಮಾ ಮಾಡದೇ ನಾಲ್ಕು ಸಾವಿರದಷ್ಟು ಹಣ ದುರುಪಯೋಗ ಮಾಡಿದ್ದಾನೆಂದರು. ಅಲ್ಲಿಂದ ಹೊರಟು ಪುನಃ ದರಖಾಸ್ತು ಗುಮಾಸ್ತನ ಬಳಿ ಬಂದ ಮಂತ್ರಿಗಳು ಎಲ್ಲ ಫೈಲುಗಳಿಗೂ ಮಂಜೂರಾತಿಗೆ ಶಿಫಾರ್ಸು ಮಾಡಿದ್ದೀಯೆ ? ತೋರಿಲ್ಲಿ ಎಂದು ಹೊರಟು ಬೆಂಗಳೂರಿಗೆ ಹೋಗಿ ಒಂದೇ ವಾರದಲ್ಲಿ ಪಿ. ಸಿ. ವಿಭಾಗ ತನಿಖಾ ವಿಭಾಗ ಆರಂಭಿಸಲು ಆಜ್ಞೆ ಮಾಡಿದರು. ಈ ತನಿಖಾ ವಿಭಾಗ ಆರಂಭವಾದ ಮೇಲೆ ಬಹಳ ಮಂದಿ ಶ್ಯಾನುಭೋಗರು ಡಿಸ್‌ಮಿಸ್ ಆದರು.

ಕಾಂಗ್ರೆಸ್ ಮಂತ್ರಿ ಮಂಡಲ ರೈತನ ಸಕಲ ಸಂಕಟಗಳನ್ನು ಪರಿಹಾರ ಮಾಡುತ್ತದೆ. ಇನ್ನೇನು ರಾಮರಾಜ್ಯ ಆರಂಭವಾಗುತ್ತದೆ. ಕಂದಾಯ ಕಾಣಿಕೆಗಳು ವಜಾ ಆಗುತ್ತವೆ. ನಮ್ಮೂರ ರಸ್ತೆಗಳು ಟಾರಿನಿಂದ ತಯಾರಾಗುತ್ತವೆ. ನಮ್ಮೂರಿಗೂ ನಲ್ಲಿಯಿಂದ ನೀರು ಒದಗಿಸುತ್ತಾರೆ. ಪಟ್ಟಣಗಳಂತೆ ನಮ್ಮ ಗ್ರಾಮಗಳು ವಿದ್ಯುತ್ ದೀಪಗಳಿಂದ ಬೆಳಗುತ್ತವೆ. ಬಸ್ಸಿಗೆ ಹತ್ತಲು ಮೈಲು ದೂರ ನಡೆದು ಹೋಗದಂತೆ, ನಮ್ಮೂರಿನಿಂದಲೆ ಬಸ್ಸು ಹತ್ತಿ ಪ್ರಯಾಣ ಮಾಡಬಹುದು. ನಮ್ಮ ಹುಡುಗರು ಇಂಗ್ಲೀಷ್ ಕಲಿಯಲು ದೂರದ ಮಂಡ್ಯಕ್ಕೆ ಹೋಗದಂತೆ ನಮ್ಮೂರಿನಲ್ಲೆ ಇಂಗ್ಲಿಷ್ ಸ್ಕೂಲ್ ಆಗುತ್ತದೆ. ಛಳಿ ಜ್ವರ ತಲೆನೋವಾದರೆ ಬಾಡಿಗೆ ಗಾಡಿ ಮಾಡಿಕೊಂಡು ಮಂಡ್ಯಕ್ಕೆ ಔಷಧಿಗೆ ಹೋಗುವುದು ತಪ್ಪಿ ನಮಗೆ ಸಮೀಪದಲ್ಲಿ ಆಸ್ಪತ್ರೆ ಆಗುತ್ತದೆ. ಮಂಡ್ಯದಲ್ಲಿ ಕಾಲೇಜಿಗೆ ಹೋಗುವ ನಮ್ಮ ಹೈಕ್ಳು ಇನ್ನು ಮುಂದೆ ಮಂಡ್ಯದಲ್ಲೆ ಉಚಿತ ಊಟ ವಸತಿ ಹಾಸ್ಟಲಿಗೆ ಸೇರುತ್ತಾರೆ. ಹೀಗೆ ರೈತರು ಆಶಾವಾದಿಗಳಾಗಿ ಕಾಂಗ್ರೆಸ್ ಸಂಸ್ಥೆಯ ಬೆನ್ನೆಲುಬಾಗಿ ನಿಂತರು.

### ರೈತನ ದೃಷ್ಟಿ

ಕರಿಯುರದೊ ಬಿಳಿಯುರದೊ ಯಾರದಾದರೆ ಏನು ?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !
ವಿಜಯನಗರವೊ ? ಮೊಗಲರಾಳ್ವಿಕೆಯೊ ? ಇಂಗ್ಲಿಷರೊ ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ !
ಕತ್ತಿ ಪರದೇಶಿಯಾದರೆ ಮಾತ್ರ ನೋವೆ ?
ನಮ್ಮವರೆ ಹದಹಾಕಿ ತಿವಿದರದು ಹೂವೆ ?

ಸೋಮಾರಿಗಳಿಗೆ ಸುಖಿಗಳಿಗೆ ರಸಿಕರಿಗಲ್ತೆ
ಸಾಮ್ರಾಜ್ಯವೆಂಬುದದು ಕಾಮಧೇನು ?
ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ
ಕಳ್ಳರೊಡೆಯನು ಕೃಪೆಯ ಮೂರ್ತಿಯೇನು ?

ತಿಂದುಂಡು ಮೆರೆವವರ ಮೆರವಣಿಗೆಗಾನು
ಬಾಯ್ದೆರೆದು ನೋಳ್ಪ ಬೆಪ್ಪಾಗಬೇಕೇನು ?

ಹರಕೆ ಯಾರದೊ ? ಹಬ್ಬವಾರಿಗೊ ? ಅದಾವಗಂ
ಸಾಮ್ರಾಜ್ಯಕಾಳಿಗಾನಲ್ತೆ ಕುರಿ ಕೊಲೆಗೆ ?
ಕುಯ್ಗುರಿಯನೆಂತಂತೆ ಸಾವು ಬದುಕಿನ ನಡುವೆ
ಕರುಣೆ ಗರಗಸದಿಂದೆ ಸೀಳುವರು ಬೆಲೆಗೆ.
ಸಾಕೆನಗೆ, ಸಾಕಯ್ಯ, ಸಾಮ್ರಾಜ್ಯ ಪೂಜೆ :
ಸಿಡಿಮದ್ದಿನಕ್ಷತೆಗೆ ಗುಂಡು ಚರೆ ಲಾಜೆ !

ನೇಗಿಲಿನ ಮೇಲಾಣೆ ! ಬಸವಗಳ ಮೇಲಾಣೆ !
ನೆತ್ತರಿಲ್ಲದೆ ಸುಕ್ಕಿ ಸೊರಗಿದೆನ್ನಾಣೆ !
ಸಾಮ್ರಾಜ್ಯ ಶೂರ್ಪನಖಿ ಮೋಹಿನಿಯ ರೂಪಕ್ಕೆ
ಮರುಳಾಗೆನೆಂದಿಗೂ, ಸೀತೆ ಮೇಲಾಣೆ !
ಬಡತನದ ಗೊಬ್ಬರವನನುದಿನಂ ಹೀರಿ
ಹಿಡಿಸದೋ ಸಾಮ್ರಾಜ್ಯ ಸಿರಿಯ ಕಸ್ತೂರಿ !

ಕುವೆಂಪು. ೧೪-೧೧-೧೯೩೬

ಕುವೆಂಪು ಅವರು 1936 ಅಂದರೆ 53ವರ್ಷಗಳ ಹಿಂದೆ ರಚಿಸಿದ್ದು ರೈತನ ದೃಷ್ಟಿ. "ಆತ್ಮಸಾಕ್ಷಿ ಮತ್ತು ಪ್ರಾಮಾಣಿಕತೆ ಸಾಹಿತ್ಯಕ್ಕೆ ಮೂಲಾಧಾರ. ತಾಯಿನಾಡಿನ ಪ್ರೇಮ ಮತ್ತು ಸತ್ಯಪ್ರಿಯತೆ ಜೀವಾಧಾರ. ಸತ್ಯಶೋಧನೆ ದೇಶಾಭಿಮಾನದ ಮುಖ್ಯ ಪ್ರತೀಕ. ದೇಶಾಭಿಮಾನ ಎಂದರೆ ಹಿಂದಿನದನ್ನು ಅಥವ ಇಂದಿನದನ್ನು ಆದರ್ಶಪ್ರಾಯಗೊಳಿಸುವುದು ಎಂದೇನಲ್ಲ. ಶ್ರದ್ಧಾಪೂರ್ವಕವಾಗಿ ಕೆಲಸ ಮತ್ತು ಹೋರಾಟದ ಪರ, ಉನ್ನತ ಪುರಸ್ಕಾರಗಳಿಗೆ ಅರ್ಹನಾದ ಸಾಹಿತಿ ಅಂತಹ ಸಿಲುವಿಗೆ ಯೋಗ್ಯವಾದರಿ ಆಗುತ್ತಾನೆ."

ಕವಿ ಒಬ್ಬ ಕವಿಯಷ್ಟೇ ಅಲ್ಲ. ಅದಕ್ಕಿಂತ ಹೆಚ್ಚಿನವನು. "ಈ ಮಾತುಗಳು ಕವಿಯ ಮನೋಧರ್ಮದ ಬಗ್ಗೆ ಅವರ ಪರಂಪರಾಗತ ಧೋರಣೆಯ ಸಾರವನ್ನು ಮತ್ತು ಕವಿಯ ಬಗ್ಗೆ ಓದುಗ ಮತ್ತು ಸಮಾಜಧೋರಣೆಯ ಸಾರವನ್ನು ಸರಿಯಾಗಿ ವ್ಯಕ್ತಗೊಳಿಸುತ್ತದೆ. ಸೃಜನಶೀಲ ವ್ಯಕ್ತಿಯು ಜನರ ಮನವನ್ನು ಸೂರೆಗೊಳ್ಳಬೇಕು. ಅತ್ಯಂತ ಜರೂರಾದ ಸಮಸ್ಯೆಗಳಿಗೆ ಉತ್ತರವನ್ನು ಒದಗಿಸಬೇಕು. ಜನರ ಅಪೇಕ್ಷೆಗಳನ್ನು ವ್ಯಕ್ತಗೊಳಿಸಬೇಕು ಮತ್ತು ಅವರ ಹಿತಾಸಕ್ತಿಗಳನ್ನು ಕಾಪಾಡಬೇಕು" ಎಂಬ ಕವಿ ಕುವೆಂಪು ಅಭೀಪ್ಸೆಯಂತೆ ಮೇಲಿನ ರೈತದೃಷ್ಟಿ ವ್ಯಕ್ತಗೊಂಡು ರೈತನನ್ನು ಎಚ್ಚರಿಸಿದೆ.

೨

ಎಚ್. ಸಿ. ದಾಸಪ್ಪನವರ ಆಶಯದಂತೆ 1946ನೆಯ ಇಸವಿಯಲ್ಲಿ ರೈತರ ಸಹಕಾರ ಸಂಘ ಮತ್ತು ಆರಪಿನ್ ನಾಲಾ ರೈತರ ಸಂಘ ಸ್ಥಾಪಿಸಿ, ಶ್ರೀರಂಗಪಟ್ಟಣ ಮತ್ತು ನಾಗಮಂಗಲಗಳಲ್ಲಿ ಶಾಖೆಗಳನ್ನು ಆರಂಭಿಸಿ ಕಾರ್ಯಕರ್ತರ ನೇಮಕಮಾಡ ಲಾಗಿತ್ತು. ರೈತರ ಸಹಕಾರ ಸಂಘಕ್ಕೆ ಜಿಲ್ಲಾಮಳೆ ಷೇರುಧನ ಶೇಖರಿಸುವ ಅವಕಾಶದ ಬೈಲಾ ರಚಿಸಿಕೊಳ್ಳಲಾಯಿತು. ಎರಡನೆಯ ಮಹಾಯುದ್ಧಮುಗಿದ ಬಿಸಿಯಲ್ಲಿ ಜನೋಪಯೋಗಿ ವಸ್ತುಗಳ ಅಭಾವ ಗಗನಮುಟ್ಟಿತ್ತು. ಅಭಾವದ ಹೆಸರಿನಲ್ಲಿ ಕಾಳ ಸಂತೆಕೋರರು ಜನರಿಂದ ಒಂದಕ್ಕೆ ಹತ್ತಾಗಿ ಸುಲಿಗೆಯ ಹಗಲು ದರೋಡೆ ತಾನೆ ತಾನಾಗಿ ಅವ್ಯಾಹತವಾಗಿ ನಡೆಯುತ್ತಿತ್ತು. ಈ ದುರವಸ್ಥೆಯಿಂದ ಜನರನ್ನು ಪಾರು ಮಾಡುವ ಪ್ರಯತ್ನ ಕೆ. ವಿ. ಶಂಕರಗೌಡ ಮಿತ್ರರಾದ ನಮ್ಮ ಅಭಿಲಾಶೆ ಆಗಿತ್ತು.

ಮಂತ್ರಿಮಂಡಲ ಕಾರ್ಯಾರಂಭಮಾಡಿದ ದಿನವೇ ಕೈಗಾರಿಕಾ ಸಚಿವರಾಗಿದ್ದ ಎಚ್. ಸಿ. ದಾಸಪ್ಪನವರು ಮಂಡ್ಯಕ್ಕೆ ಬಂದು ತಮ್ಮ ನೆಚ್ಚಿನ ಗೆಳೆಯನಾಗಿದ್ದ ಸುಪ್ರಸಿದ್ಧ ವಕೀಲ ಟಿ. ವಿ. ರುದ್ರಪ್ಪನವರ ಮನೆಗೆ ಭೇಟಿಯಿತ್ತು ಆರೋಗ್ಯಭಾಗ್ಯ ವಿಚಾರಿಸಿಕೊಂಡರು. ನಮ್ಮ ಗೆಳೆಯರ ಗುಂಪಿನವರನ್ನು ರುದ್ರಪ್ಪನವರ ಮನೆಗೆ ಬರಮಾಡಿಕೊಂಡರು. ಸುಮಾರು ಎರಡು ಘಂಟೆಗೂ ಹೆಚ್ಚುಕಾಲ ರೈತರ ಸಹಕಾರ ಸಂಘದ ಷೇರು ಧನಸಂಗ್ರಹದ ಬಗ್ಗೆ ವಿಚಾರಿಸಿದರು.ಮಂಡ್ಯದಲ್ಲಿ ಆಹಾರನಿಗಮ ಮತ್ತು ನಾಗರಿಕ ಪೂರೈಕೆ ಖಾತೆ ಸಹ ನಿರ್ದೇಶಕರಾಗಿ, ಮಂಡ್ಯದ ಪರಿಚಯ ಹೊಂದಿದ್ದ ಬಿ. ಟಿ. ಕೆಂಪಣ್ಣನವರನ್ನು ಮೈಸೂರು ಸಕ್ಕರೆ ಕಂಪನಿ ಅಧ್ಯಕ್ಷರಾಗಿ ನೇಮಕಮಾಡುವು ದಾಗಿಯೂ, ಸಹಕಾರ ಇಲಾಖೆಗೆ ಅಸಿಸ್ಟೆಂಟ್ ರಿಜಿಸ್ಟ್ರಾರ್ರಾಗಿ ನಾಗಮಂಗಲದ ಬೊಮ್ಮನಹಳ್ಳಿ ಎಂ. ತಮ್ಮಯ್ಯನವರನ್ನು ನೇಮಕಮಾಡಿಸುವುದಾಗಿಯೂ ತಿಳಿಸಿದರು. ಈ ಇಬ್ಬರು ಅಧಿಕಾರಿಗಳು ಕೇವಲ ವಾರದೊಳಗೆ ಬಂದು ಅಧಿಕಾರ ವಹಿಸಿಕೊಂಡರು.

ಎಂ. ತಮ್ಮಯ್ಯನವರು ಮತ್ತು ಬಿ.ಟಿ. ಕೆಂಪಣ್ಣನವರು ಅಧಿಕಾರ ವಹಿಸಿಕೊಂಡ ಎರಡನೆಯದಿನ ಕೈಗಾರಿಕಾ ಮಂತ್ರಿಗಳಾದ ಎಚ್.ಸಿ. ದಾಸಪ್ಪನವರು ಮತ್ತು ಸಹಕಾರ ಸಚಿವ ಟಿ. ಮರಿಯಪ್ಪನವರು ಸಕ್ಕರೆ ಕಂಪನಿ ಅತಿಥಿ ಗೃಹಕ್ಕೆ ಬಂದು ನಮ್ಮ ಯುವ ತಂಡದವರನ್ನು ಕರೆಸಿಕೊಂಡು ಸಹಕಾರ ಆಂದೋಳನ ಭಾರತಕ್ಕೆ ಮಾದರಿ ಎನ್ನುವಂತೆ ನಡೆಸಿ ಹಿಂದೂಸ್ಥಾನದಲ್ಲಿ ಸಹಕಾರ ಚಳುವಳಿ ಮಾದರಿ ನೋಡಲು ಬರುವ ಹೊರದೇಶ ದವರು ಆಕರ್ಷಿತರಾಗಬೇಕು. ಅಂತಹ ಒಂದು ಆಂದೋಳನಕ್ಕೆ ನೀವು ಹಗಲು ರಾತ್ರಿ ಎನ್ನದೆ ದುಡಿದು ಸರ್ಕಾರಕ್ಕೆ ಕೀರ್ತಿತನ್ನಿ ಎಂದು ಟಿ. ಮರಿಯಪ್ಪನವರು ಉತ್ಸಾಹ ವ್ಯಕ್ತಪಡಿಸಿದರು.

ಎಚ್. ಹೊನ್ನಯ್ಯನವರು, ಕೆ. ವಿ. ಶಂಕರಗೌಡರು, ಜಿ. ಎಸ್. ಬೊಮ್ಮೇ ಗೌಡರು, ಕೆ. ಸಿಂಗಾರಿಗೌಡರು ಮತ್ತು ನಾನು ಸಕ್ಕರೆ ಕಂಪನಿ ಜೀಪಿನಲ್ಲಿ ಬಂದು ಮಂಡ್ಯ ಕ್ಲಬ್ ಹತ್ತಿರ ಇಳಿದು ನಾನು ಹಿಂದೆ ಹೇಳಿರುವ ತೋಟ ಮರದ ನೆರಳಿಗೆ ಹೋಗುತ್ತಿದ್ದೆವು. ಹಿಂದಿನಿಂದ ಮೈಸೂರಿಗೆ ಹೋಗಲು ಟಿ. ಮರಿಯಪ್ಪನವರು ಬಂದರು. ಕಾರನ್ನು ನಿಲ್ಲಿಸಿದರು. ನಮ್ಮೊಡನೆ ಕಲೆತರು ಸೊಸೈಟಿ ಆರಂಭಿಸಲು ಬಾಡಿಗೆ ಮನೆ ಗೊತ್ತುಮಾಡಿದ್ದೀರ ? ಗೊತ್ತುಮಾಡಿದ್ದರೆ ನೋಡೋಣ ಬನ್ನಿ ಕಾರಿ ನಲ್ಲಿ ಕೂರಿ ಎಂದರು. ಈ ಹಿಂದೆ ಮೈಸೂರು ಸಕ್ಕರೆ ಕಂಪನಿ ಆರಂಭಿಸಿದ ಸಾತನೂರು ಕರಿಯಪ್ಪನವರ ಬಿಲ್ಡಿಂಗ್ ಖಾಲಿಯಿತ್ತು. ಈ ಬಿಲ್ಡಿಂಗ್‌ನಲ್ಲಿ ಆರಂಭವಾದ ಸಕ್ಕರೆ ಕಂಪನಿ ಶ್ರೇಯೋಭಿವೃದ್ಧಿಯಾಗಿ ರೈತರು ಮತ್ತು ಸರ್ಕಾರಕ್ಕೆ ಕಾಮಧೇನುವಾಗಿದೆ ಎಂದು ಸಕ್ಕರೆ ಕಂಪನಿ ಅಭಿವೃದ್ಧಿಗೆ ಶ್ರಮಿಸಿ ದುಡಿದ ದಿವಂಗತ ಜಿ. ಜಿ. ದಾಸೇಗೌಡರು ನಮಗೆ ಸಲಹೆ ಮಾಡಿದ್ದರು. ಅವರ ಸಲಹೆಯಂತೆ ಮನೆಯನ್ನು ಗೊತ್ತುಮಾಡಿದ್ದೆವು. ಸಚಿವರಾದ ಮರಿಯಪ್ಪನವರಿಗೆ ತೋರಿಸಿದೆವು. ಅದೃಷ್ಟದ ಬಿಲ್ಡಿಂಗ್ ಎನ್ನುವಿರಿ, ವಾರದೊಳಗಾಗಿ ವ್ಯಾಪಾರ ವಹಿವಾಟು ಆರಂಭಿಸುವಂತೆ ಅವಸರಪಡಿಸಿ, ವ್ಯಾಪಾರಕ್ಕೆ ಬೇಕಾಗುವ ಹಣಕಾಸನ್ನು ಇಲಾಖೆಯಿಂದ ಕೊಡಿಸಲಾಗುವುದು ಎಂದು ತಿಳಿಸಿದರು.

ಸೊಸೈಟಿಯ ಬಟ್ಟೆ ಶಾಖೆಗೆ ಪ್ರತ್ಯೇಕ ನೋಡಲು ಅಂದವಾಗಿರುವ ಬಿಲ್ಡಿಂಗ್ ನೋಡಿರಿ ಎಂದು ಮರಿಯಪ್ಪನವರು ನೀವುಗಳು ಬನ್ನಿ ನಾನು ನಾಲ್ಕಾರು ಬಿಲ್ಡಿಂಗು ಗಳನ್ನು ನೋಡಿ ಸಲಹೆ ಕೊಡುತ್ತೇನೆ, ಎಂದು ನಿಂತಿದ್ದ ಜಾಗದಿಂದ ಆರೇಳು ಕಟ್ಟಡದ ಪೈಕಿ ಬೆಣ್ಣೆ ಶಾಮಣ್ಣನವರ ಬಿಲ್ಡಿಂಗ್‌ನ್ನು ಮೆಚ್ಚಿ ಈ ಮಳಿಗೆಯಲ್ಲಿ ಬಟ್ಟೆ ಶಾಖೆ ಆರಂಭಿಸಿ ಬಿಡಬೇಕು ದಿನ ಕಳೆಯಬೇಡಿ, ಸಾಧ್ಯವಾದರೆ ನಾಳೆಯೆ ಆಗಲಿ ಎಂದರು. ಅವರ ಅವಸರಕ್ಕೆ ನಕ್ಕೆವು. ಟಿ. ಮರಿಯಪ್ಪನವರಿಗೆ ಸಹಕಾರ ಖಾತೆ ಜೊತೆಗೆ ಲೋಕೋಪಯೋಗಿ ಖಾತೆಯು ಸೇರಿತ್ತು. ದಿನನಿತ್ಯದಂತೆ ರಾತ್ರಿಸಭೆಯಲ್ಲಿ ಮಂಡ್ಯ ಪ್ರವಾಸ ಮಂದಿರದ ಆವರಣದಲ್ಲೇಕೆ? ಒಂದು ಭಾಗ ಉಚಿತವಾಗಿ ರೈತರ ಸೊಸೈಟಿಗೆ ನಿವೇಶನ ಕೇಳಬಾರದು ಎಂದು ಆಲೋಚಿಸಿ ನಾಳೆ ಮರಿಯಪ್ಪನವರನ್ನು ಬೆಂಗಳೂರಿ ನಲ್ಲಿ ಭೇಟಿ ಮಾಡಿ ನಮ್ಮ ಆಲೋಚನೆಯನ್ನು ಕಾರ್ಯರೂಪಕ್ಕೆ ತರಲು ಆಲೋಚಿಸಿ ದೆವು. ಎಂತಹುದೇ ಸ್ವಂತ ಕೆಲಸವಿದ್ದರು ಬಿಟ್ಟು ನಾಳೆ ಮಂತ್ರಿ ಮರಿಯಪ್ಪನವರನ್ನು ಭೇಟಿ ಮಾಡಲೇಬೇಕೆಂದು ನಿರ್ಣಯಿಸಿದೆವು. ಮನೆಗೆ ಬಂದು ವಿಚಾರಿಸಿದರೆ ನಾಳೆ ಗೌರಿಹಬ್ಬ, ವರ್ಷಕ್ಕೊಂದು ಗೌರಿ ಹಬ್ಬ ಬಿಟ್ಟುಹೋಗಬಾರದೆಂದು ಒಬ್ಬಿಬ್ಬರು ಸ್ನೇಹಿತರ ಮನೆಯವರು ನಾಳೆ ಕಾರ್ಯಕ್ರಮ ಮುಂದೂಡಲು ಸಲಹೆ ಮಾಡಿದರಂತೆ. ಯಾರೂ ಮನ್ನಣೆ ನೀಡದೇ ಬೆಂಗಳೂರಿಗೆ ಹೊರಡುವ ಕಾರ್ಯಕ್ರಮ ಹಾಕಿ ಕೊಂಡೆವು. ನನಗಾದರೋ ಮನೆಯಲ್ಲಿ ಅಡ್ಡಿ ಮಾಡುವವರು ಇರಲಿಲ್ಲ. ಪತ್ನಿ ತೌರಿನಲ್ಲಿ ಬಾಣಂತನಕ್ಕೆ ಸೇರಿದ್ದರು.

ಈ ಮೊದಲೆ ತಿಳಿಸಬೇಕಾದ ವಿಚಾರ ಕೈಬಿಟ್ಟಿದ್ದೇನೆ. ಆ ವಿಚಾರವನ್ನು ತಿಳಿಸುತ್ತೇನೆ. ದಾಸಪ್ಪನವರು ಮತ್ತು ಮರಿಯಪ್ಪನವರು ನಾನು ತಾನೆಂದು ರೈತರ ಸಹಕಾರ ಸಂಘಕ್ಕೆ ಏನೆಲ್ಲ ಸೌಲಭ್ಯ ಮಾಡಬಹುದೋ ಅವುಗಳನ್ನು ನಾಳೆ ಎಂದರೆ ಇಂದೇ ಸಹಾಯ ಒದಗಿಸಿ ಅನುಕೂಲ ಏರ್ಪಡಿಸುತ್ತಿದ್ದರು. ಈ ಹಿಂದೆಯೆ ಮಂತ್ರಿ ಮರಿಯಪ್ಪನವರು ಬಾಡಿಗೆ ಮನೆಗಳನ್ನು ನೋಡಲು ಬಂದಿದ್ದ ದಿನ ಮಂತ್ರಿ ದಾಸಪ್ಪನವರು ಸಕ್ಕರೆ ಕಂಪನಿ ಅತಿಥಿಗೃಹಕ್ಕೆ ಬಂದಿದ್ದರೆಂದು ತಿಳಿಸಿದ್ದೇನಷ್ಟೆ. ಅಂದು ದಾಸಪ್ಪನವರು ಶಂಕರಗೌಡರನ್ನು ನೀವು ಸೊಸೈಟಿ ಷೇರುಧನ ವಸೂಲಿ ಮಾಡಲು ಜಿಲ್ಲೆ ಆದ್ಯಂತ ಏತರಲ್ಲಿ ಓಡಾಡುತ್ತಿದ್ದೀರಿ ? ಎಂದು ಪ್ರಶ್ನಿಸಿದರು. ಯಾವುದರಲ್ಲಿ ಅವಕಾಶ ಸಿಕ್ಕಿದರೆ ಅದರಲ್ಲಿ ಕಷ್ಟಸಾಧ್ಯವಾಗಿಯೆ ಪ್ರಯಾಣ ಮಾಡುತ್ತೇವೆ ಎಂದು ತಿಳಿಸಿದರು. ಸಾಧಾರಣವಾಗಿ ಜಿಲ್ಲೆಯ ಓಡಾಟಕ್ಕೆ ನಮಗೆ ಅಂತಹ ತೊಂದರೆ ಏನು ಇರಲಿಲ್ಲ, ಕಾರಣ ರಾಜರತ್ನಂ ಎಂಬ ಎಕ್ಸಿಕ್ಯೂಟಿವ್ ಇಂಜಿನಿಯರ ಜೀಪಿನ ಸಹಾಯ ಒದಗುತಿತ್ತು. ಈ ರಾಜರತ್ನಂ ಅವರೇ ಇಂದು ನಾಡಿನ ಸಹಕಾರಿಗಳನ್ನು ಕೈಬೀಸಿ ಕರೆಯುತ್ತ ನಿಂತಿರುವ ಸೊಸೈಟಿ ಭವ್ಯಭವನದ ನಿರ್ಮಾಪಕರು ಸಹ.

ಸಕ್ಕರೆ ಕಂಪನಿ ಅಧ್ಯಕ್ಷರಾದ ಬಿ. ಟಿ. ಕೆಂಪಣ್ಣನವರನ್ನು ಸಚಿವ ದಾಸಪ್ಪನವರು ಕರೆದು "ಕೆಂಪಣ್ಣ ನನ್ನ ಸ್ನೇಹಿತರು ರೈತರ ಹೆಸರಿನಲ್ಲಿ ಸೊಸೈಟಿ ಮತ್ತು ನಾಲಾಬಯಲ ರೈತರ ಸಮಸ್ಯೆ ನಿವಾರಣೆಗೆ ಸಂಘವನ್ನು ಮಾಡಿ ಓಡಾಡುತ್ತಿದ್ದಾರೆ. ಇವರ ಓಡಾಟಕ್ಕೇನಾದರು ಕಂಪನಿಯಿಂದ ಸಹಾಯ ಮಾಡಲು ಸಾಧ್ಯವೇ ಎಂದು ವಿಚಾರಿಸಿದರು. ಆಗದೆ ಏನು ? ತಾವು ಹೇಳಿದರೆ ಜೀಪು ಡ್ರೈವರ್ ಪೆಟ್ರೋಲ್ ಹಾಕಿ ದಿನವೂ ಕಳುಹಿಸುವ ಅವಕಾಶ ಕಲ್ಪಿಸುತ್ತೇನೆ. ತಿಂಗಳೋ ಆರು ತಿಂಗಳಿಗೊಮ್ಮೆ ಬಿಲ್‌ನ್ನು ಸೊಸೈಟಿಯವರು ಪಾವತಿ ಮಾಡಬಹುದೆಂದರು. ಜೀಪನ್ನು ಇಂದೇ ಅಲಾಟ್ ಮಾಡಿ ಇವರ ಸುಪರ್ದಿಗೆ ನೀಡಿ ಎಂದು ತಿಳಿಸಿದರು. ನಾಳೆ 7 ಘಂಟೆಗೆ ಮಂಡ್ಯ ಕ್ಲಬ್ ಬಳಿಗೆ ಜೀಪ್ ಬರುವಂತೆ ತಿಳಿಸಿದೆವು.

ಬೆಳಗ್ಗೆ 7 ಘಂಟೆಗೆ ಸರಿಯಾಗಿ ಹೆಚ್. ಹೊನ್ನಯ್ಯನವರಿಂದ ಹಿಡಿದು ಎಲ್ಲರೂ ಸೇರಿ ಬೆಂಗಳೂರಿಗೆ ಹೊರಟೆವು. ಸುಮಾರು 2 ವರ್ಷಕ್ಕೂ ಹೆಚ್ಚೆಂದೇ ಹೇಳಿದರು ತಪ್ಪಾಗಲಾರದು. ದಿನವೂ ತಪ್ಪದೆ ಬೆಂಗಳೂರು ಯಾತ್ರೆ ಮಾಡಿ ಒಂದಲ್ಲ ಒಂದು ರಚನಾತ್ಮಕ ಕಾರ್ಯನಿರ್ವಹಿಸುತ್ತಿದ್ದೆವು. ಮಂಡ್ಯದಿಂದ ಕೇವಲ ಕಾಫಿ ಸೇವನೆಮಾಡಿ ಹೊರಡುವ ನಾವು ಹಳೆ ಅಠಾರ ಕಛೇರಿ ಬಳಿ ಸರ್ಕಾರಿ ಇನ್‌ಷ್ಯೂರೆನ್ಸ್ ಕಟ್ಟಡ ಪಕ್ಕದ ಎಂ.ಜಿ.ಐ.ಡಿ. ಕ್ಯಾಂಟೀನ್‌ನಲ್ಲಿ ತಿಂಡಿ ತಿಂದು ಕಾರ್ಯಾರಂಭ ಮಾಡುತ್ತಿದ್ದೆವು ಇಂದೂ ಸಹ ಅಲ್ಲಿ ತಿಂಡಿ ತಿಂದು ಸಚಿವರಾದ ಮರಿಯಪ್ಪನವರ ಮನೆಗೆ ಹೋದೆವು. ಮಧ್ಯಾಹ್ನ ಬರುವುದಾಗಿ ತಿಳಿಸಿದರು. ನಮಗೆ ಎಲ್ಲ ಮಂತ್ರಿಗಳ ಬಳಿಯು ಒಂದಲ್ಲ ಒಂದು ಕೆಲಸ ಏರುತ್ತಿತ್ತು ಅವರುಗಳನ್ನೆಲ್ಲ ಒಂದು ಸುತ್ತು ಹಾಕಿ ಕ್ಯಾಂಟೀನಿಗೆ ಹೋಗಿ ಮಧ್ಯಾಹ್ನದ

ತಿಂಡಿ ತಿಂದೆವು. ಸುಮಾರು ಎರಡು ವರ್ಷಗಳ ಬೆಂಗಳೂರಿನ ತಿರುಗಾಟದಲ್ಲಿ ಒಂದೇ ಒಂದು ದಿನವಾದರು ಬೆಂಗಳೂರಿನಲ್ಲಿ ಮಧ್ಯಾಹ್ನದ ಊಟ ಮಾಡಿದ ನೆನಪಿಲ್ಲ.

ನಾವು ಮಂತ್ರಿಗಳಾದ ಟಿ. ಮರಿಯಪ್ಪನವರ ಮನೆಗೆ ಹೋದೆವು ಅವರೂ ಬಂದರು. ಸದ್ಯ ಬಂದಿರಲ್ಲ ನಿಮ್ಮನ್ನು ಕರೆಸಿ ಮಾತನಾಡುವುದೇ ನಾನೇ ಮಂಡ್ಯಕ್ಕೆ ಬರುವುದೇ ಎಂಬ ಯೋಚನೆ ಮೆಲಕುಹಾಕುತ್ತ ಇದ್ದೆ. ರಿಜಿಸ್ಟ್ರಾರಾದ ಪುಟ್ಟರಂಗಪ್ಪ ನಾಳೆ ನಿಮ್ಮನ್ನುನೋಡುತ್ತಾರೆ. ಸೊಸೈಟಿಗೆ ಬೇಕಾಗುವ ಸಹಾಯಒದಗಿಸಲು ನಿಮ್ಮಿಂದ ಮನವಿಪಡೆದು ಫೈಲುಗಳನ್ನು ಸಿದ್ಧಗೊಳಿಸಲು ತಿಳಿಸಿದ್ದೇನೆ. ಅವರು ನಾಳೆಯೆ ಮಂಡ್ಯಕ್ಕೆ ಬರುತ್ತಾರೆ. ಎಲ್ಲವನ್ನು ಸಿದ್ಧಮಾಡಿ ಕೊಡಿರಿ ಎಂದರು. ದಾಸಪ್ಪನವರು ಹೇಳಿದರಲ್ಲ ಸೈಕಲ್ ರಿಪೇರಿಯಿಂದ. ಗುಂಡುಸೂಜಿಯಿಂದ ಏರೋಪ್ಲೇನ್‌ವರೆಗೆ ವ್ಯವಹರಿಸುವ ಹೊರದೇಶದ ಸೊಸೈಟಿಯಂತಹ ಸೊಸೈಟಿ ಇಂಡಿಯಕ್ಕೆ ಮಂಡ್ಯ ಸೊಸೈಟಿ ಆಗಬೇಕೆಂದು ತಿಳಿಸಿದರು. ಒಳಗಡೆಯಿಂದ ಊಟಕ್ಕೆ ತಟ್ಟೆಗಳನ್ನು ಹಾಕಿ ಶ್ರೀಮತಿ ಮರಿಯಪ್ಪನವರು ಕೂಗಿ ಊಟಕ್ಕೆ ಏಳಿ ಎಂದರು. ಇರು ಇರು ದಿನವು ಈ ಊಟ ಇದ್ದದ್ದೆ. ಇನ್ನೊಂದು ವಿಷಯ ಶಂಕರಗೌಡ್ ನಿಮ್ಮ ಪ್ರವಾಸಿ ಮಂದಿರದ ಒಂದು ಭಾಗದಲ್ಲೇಕೆ ? ನಿಮ್ಮ ಸೊಸೈಟಿಯನ್ನು ಅರಮನೆಯಂತೆ ಭವ್ಯವಾಗಿ ಕಟ್ಟಬಾರದು. ಸದ್ಯ ಆಜ್ಞಾಗ ಕೊಡುವ ಅಧಿಕಾರ ನನ್ನಲ್ಲೇ ಇದೆ ಎಂದು ಸಂತೋಷ ವ್ಯಕ್ತಪಡಿಸಿದರು "ರೋಗಿ ಬಯಸಿದ್ದು ಅದೇ ವೈದ್ಯ ಹೇಳಿದ್ದು ಅದೇ" ಎಂಬಂತೆ ನಾವು ಏನು ಕೇಳಲು ಬಂದಿದ್ದೆವೋ ಅದನ್ನೆ ಸಚಿವ ಮರಿಯಪ್ಪನವರು ಆಲೋಚಿಸಿದ್ದುದು ದೈವಯೋಗವೇ ಸರಿ ಎಂದುಕೊಂಡೆವು.

ಏಳಿ ಏಳಿ ಊಟಕ್ಕೆ ಎಂದರು, ಸಾರ್ ನಮಗೆ ಊಟ ಆಗಿದೆ ಎಂದೆವು. ಮರಿಯಪ್ಪನವರ ಪತ್ನಿಯವರು ಬನ್ನಿ ಅಪ್ಪ ಗೌರಿಹಬ್ಬ. ಒಂದೊಂದು ವಡೆ ಪಾಯಸವಾದರು ತಿನ್ನಿರಿ ಎಂದರು. ಈ ಹಬ್ಬವೂ ಗೊತ್ತಿಲ್ಲ. ನನಗೆ ಅನಾವಶ್ಯಕ ನಿಮ್ಮನ್ನು ಬಹಳ ಹೊತ್ತು ಮಾತಿನ ಮಧ್ಯೆ ವಿಳಂಬ ಮಾಡಿದೆ ಎಂದರು ಮರಿಯಪ್ಪ. ಎಲ್ಲರನ್ನು ಊಟದ ಟೇಬಲ್ ಬಳಿ ಕೂರಿಸಿಕೊಂಡರು. ನಾವು ಪಾಯಸ ಒಡೆ ಸೇವಿಸಿದೆವು. ಅವರು ಮಧ್ಯೆ ಮಧ್ಯೆ ಜ್ಞಾಪಕ ಬಂದದ್ದೆಲ್ಲ ನೆನಸಿಕೊಳ್ಳುತ್ತ ಹತ್ತು ಮಾತಿಗೊಮ್ಮೆ ಒಂದು ತುತ್ತು ಬಾಯಿಗೆ ಹಾಕುತ್ತಿದ್ದ ಮಂತ್ರಿಗಳ ಊಟ ಘಂಟೆಯಾದರು ಮುಗಿಯಲಿಲ್ಲ. ಕೊನೆಗೆ ನಾವೇ ಅವಸರಪಡಿಸಿ ಅವರು ಊಟ ಬೇಗ ಮುಗಿವಂತೆ ಮಾಡಿದೆವು.

ಬಹಳ ಅರ್ಜೆಂಟಾಗಿ ಬಂದು ಇಂಜೀನಿಯರ್‌ರಾದ ರತ್ನಂ ಅವರಿಗೆ ಪ್ರವಾಸಿ ಮಂದಿರದ ಆವರಣದಲ್ಲಿ ನಿವೇಶನ ಯಾವ ಕಡೆ ಪಡೆಯುವುದು ನಿರ್ಮಾಣಕ್ಕೆ ಎಷ್ಟು ಹಣಬೇಕು ಮುಂತಾಗಿ ಪ್ಲಾನು ಮಾಡಲು ತಿಳಿಸಿದೆವು. ಹಾಲಿಕಟ್ಟಡವಿರುವ ನಿವೇಶನವನ್ನು ಇಂಜಿನೀಯರೇ ಗೊತ್ತುಮಾಡಿದವರು. ಸೊಸೈಟಿಯು ಪೇಟೆ ಬೀದಿಯ ಎರಡು ಕಟ್ಟಡಗಳಲ್ಲಿ ಕಾರ್ಯಾರಂಭಮಾಡಿತು. ಜನರಿಗೆ ಅಗತ್ಯವಾದ ತುಟ್ಟಿ ವಸ್ತು

ಗಳನ್ನು ಒದಗಿಸುವಲ್ಲಿ ಸಾಕಷ್ಟು ಪ್ರಗತಿ ಸಾಧಿಸಿತು. ಸಂಘಕ್ಕೆ ಸರ್ಕಾರದಿಂದ ಬೇಕಾದ ಸಹಾಯ ಸವಲತ್ತುಗಳು ಮಂತ್ರಿಗಳನ್ನು ನೋಡಿ ಮನವಿ ಅರ್ಪಿಸಿ ಬಂದರಾಯ್ತು, ಸರ್ಕಾರಿ ಆಜ್ಞೆ ಸೊಸೈಟಿ ಬಾಗಿಲಿಗೆ ಎರಡು ಮೂರು ದಿನಗಳಲ್ಲಿ ಬಂದು ಸೇರುತ್ತಿತ್ತು.

ಮೈಸೂರು ಕಾಂಗ್ರೆಸನ್ನು ಕಟ್ಟಿ ಬೆಳೆಸಲು ತಮ್ಮ ಬಹುಭಾಗದ ಆಸ್ತಿಯನ್ನು ಕಳೆದುಕೊಂಡು ಕೀರ್ತಿಶೇಷರಾದ ಗಣ್ಯವ್ಯಕ್ತಿಯೊಬ್ಬರಿಗೆ ದಾಸಪ್ಪನವರ ಮೇಲೆ ಅಪಾರ ರಾಜಕೀಯದ್ವೇಷ. ದಾಸಪ್ಪನವರನ್ನು ಮಂಡ್ಯದ ಯುವಪೀಳಿಗೆಯವರಾದ ನಾವು ಸಂಪೂರ್ಣವಾಗಿ ಬೆಂಬಲಿಸುತ್ತಿದ್ದೆವು, ಈ ಕಾರಣದಿಂದ ವರಿಷ್ಟ ವ್ಯಕ್ತಿ ಯುವಕ ತಂಡವನ್ನು ರಾಜಕೀಯದಿಂದಲೇ ಹೊಡೆದಟ್ಟಬೇಕೆಂಬುದು ಅವರ ಕಾರ್ಯಯೋಜನೆ ಆಗಿತ್ತು. ಈ ಒಂದು ಬಲಿದಾನಕ್ಕೆ. ಕೆ. ವಿ. ಶಂಕರಗೌಡರು ಅವರಿಗೆ ಕೇಂದ್ರಬಿಂದು ವಾಗಿದ್ದರು.

ರೈತರ ಸೊಸೈಟಿಗೆ ಪ್ರವಾಸಿಮಂದಿರದ ಆವರಣದ ನಿವೇಶನ ಮತ್ತು ಕಟ್ಟಡ ನಿರ್ಮಾಣಕ್ಕೆ ಧನಸಹಾಯಮಾಡಲು ಸಹಕಾರ ಮಂತ್ರಿಗಳು ಆಜ್ಞೆಗೆ ಸಹಿ ಹಾಕಬೇಕು. ಅಡ್ಡನಿಂತ ವರಿಷ್ಠರು ಆ ನಿವೇಶನ ಅವರಿಗೆ ಮಂಜೂರು ಮಾಡಿ ಕಟ್ಟಡ ನಿರ್ಮಾಣ ವಾದರಾಯ್ತು, ಶತಮಾನವಾದರು ರಾಜಕೀಯದಿಂದ ಅವರನ್ನು ಏಳಿಸಲಾಗುವುದೇ ಇಲ್ಲ ಎಂಬ ಹಠತೊಟ್ಟರಂತೆ. ಭಗವಂತನದಯೆ ಮಂತ್ರಿಮಂಡಲ ಇದರ ಹಿಂದೆ ನಿಂತು ನಿವೇಶನ ಮತ್ತು ಹಣ ಮಂಜೂರು ಮಾಡಿತು. ಸಹಕಾರ ಮಂತ್ರಿಗಳಾಗಿದ್ದ ಮರಿಯಪ್ಪನವರು ಶಂಕರಗೌಡರೆ ಚಕ್ರವರ್ತಿಗಳಾದವರು ಸಹ ಬಂದು ನೋಡಬೇಕೆನ್ನು ವಷ್ಟು ಶ್ರೇಷ್ಠದರ್ಜೆಯ ಸಹಕಾರ ಸಂಘವನ್ನು ಕಟ್ಟಿ ಅದೇ ನನ್ನ ಆಶಯ ಎಂದು ಅವಕಾಶ ಸಿಕ್ಕಾಗಲೆಲ್ಲ ಹೇಳುತ್ತಲೇ ಇದ್ದರು. ಅವರ ಆಶಯದಂತೆ ನೇಪಾಳದ ದೊರೆ ಬೀರೇಂದ್ರ ಅವರು ಸೊಸೈಟಿಗೆ ಭೇಟಿಯಿತ್ತು ಮುಕ್ತ ಕಂಠದಿಂದ ಅದರ ವಹಿವಾಟವನ್ನು ಹೊಗಳಿದರು. ಅದನ್ನು ಕೇಳಿದ ಮಂತ್ರಿ ಮರಿಯಪ್ಪನವರಿಗಾದ ಸಂತೋಷ ಅಷ್ಟಿಷ್ಟಲ್ಲ, ಒಮ್ಮೆ ನಾನು ಅಖಿಲಭಾರತ ವಯಸ್ಕರ ಶಿಕ್ಷಣ ಸಮ್ಮೇಳನಕ್ಕೆ ಜಬ್ಬಲ್‌ಪುರಕ್ಕೆ ಹೈದರಾಬಾದ್ ಮೂಲಕ ಹೊರಟೆ, ಜಬ್ಬಲ್‌ಪುರಕ್ಕೆ ಹೋಗಲು ಜಿ. ಟಿ. ಎಕ್ಸ್‌ಪ್ರೆಸ್‌ಗೆ ವಾರ್ಧಾದಲ್ಲಿ ಸುಮಾರು 6 ಘಂಟೆಕಾಲ ಕಾಯಬೇಕಾಯಿತು. ವಾರ್ಧಾ ಸ್ಟೇಷನ್‌ನಲ್ಲಿ ಇಳಿದು ಲಗ್ಗೇಜ್ ರೂಂಗೆ ಸಾಮಾನು ಹಾಕಿದೆ. ಸೇವಾಗ್ರಾಮ ನೋಡಿ ಬರಲು ಹೋದೆ. ಅಲ್ಲಿಯೇ ಇದ್ದ ಶ್ರೀಮನ್ ನಾರಾಯಣ ಅಗರವಾಲರು ನನ್ನನ್ನು ಬರಮಾಡಿಕೊಂಡು ಎಲ್ಲಿಂದ ಬರುತಿದ್ದೀರಿ ಎಂದು ಕೇಳಿದರು. ಮಂಡ್ಯ ಎಂದಕೂಡಲೇ ಅಲ್ಲಿರುವ ಹೆಸರಾಂತ ಸೊಸೈಟಿ ಆಡಳಿತದಲ್ಲೇನಾದರು ನೀವಿದ್ದೀರಾ ಎಂದರು. ನಾನು ಆ ಸೊಸೈಟಿಯ (founder member) ನಾನೇ ಮೊಟ್ಟ ಮೊದಲನೆ ಷೇರು ದಾರ ಎಂದೆ. ಬಹುಭವ್ಯವಾಗಿ ಸಹಕಾರ ಚಳುವಳಿ ಬೆಳೆಸಿದ್ದೀರಿ. ನಾನು ನೇಪಾಳ ದೊರೆಜೊತೆ ನಿಮ್ಮ ಸಹಕಾರ ಸಂಘಕ್ಕೆ ಭೇಟಿ ನೀಡಿದ್ದೆ. ಆ ಭೇಟಿ

ನನ್ನ ಮನಸ್ಸಿನ ಮೇಲೆ ಉತ್ತಮ ಪರಿಣಾಮಬೀರಿದೆ ಎಂದು ತಿಳಿಸಿ ರಾಜಕೀಯ ಪ್ರಸಂಗದತ್ತ ಮಾತನಾಡುತ್ತ ವಾರ್ಧಾಕ್ಕೆ ಹೊರಟೆವು. ಎಲ್ಲಿಗೆ ಹೋಗುತ್ತಿದ್ದೀರಿ ಎಂದರು. ನಾನು ಜಬ್ಬಲ್‌ಪುರಕ್ಕೆ ವಯಸ್ಕರ ಶಿಕ್ಷಣ ಸಮ್ಮೇಳನ ಪ್ರತಿನಿಧಿಯಾಗಿ ಹೋಗುತಿದ್ದೇನೆ ಎಂದೆ. ಆಮದು ಜಿ. ಟಿ. ಎಕ್ಸ್‌ಪ್ರೆಸ್ ಬರಲು ಇನ್ನೂ ಎರಡು ಘಂಟೆ ಕಾಲವಿದೆ. ಬನ್ನಿ, ನಮ್ಮ ನಿವಾಸಕ್ಕೆ ಹೋಗೋಣ ಎಂದು ಕರೆದೊಯ್ದರು. ಊಟದ ನಂತರ ರೈಲ್ವೆ ನಿಲ್ದಾಣಕ್ಕೆ ಹೋಗಿ ರೈಲು ಹತ್ತಿದೆ. ಒಂದು ಒಳ್ಳೆ ಕೆಲಸ ಮಾಡಿದರೆ ಆ ಕೆಲಸ ಮಾಡಿದವನನ್ನು ಲೋಕ ಹೇಗೆ ಗುರ್ತಿಸುವುದು ಎಂಬುದಕ್ಕೆ ಈ ವಿಚಾರ ಪ್ರಸ್ತಾಪಿಸಿದ್ದೇನೆ.

1955ನೆಯ ಇಸವಿಯಲ್ಲಿ ಕರ್ನಾಟಕ ಏಕೀಕರಣ ವಿರೋಧಿಸಿ ಮೈಸೂರು ಕರ್ನಾಟಕದಲ್ಲಿ ವಿಲೀನವಾಗದಂತೆ ಪ್ರತ್ಯೇಕ ಪ್ರಾಂತವಾಗಿ ನಿರ್ಮಾಣ ಮಾಡಬೇಕೆಂಬ ಹೋರಾಟ ನಿಯೋಗದಲ್ಲಿ ನಾನು ಸಹ ಅನಧಿಕೃತ ಸದಸ್ಯ. ಅದಕ್ಕಿಂತ ಮೈಸೂರು ನಿಯೋಗದ ಪತ್ರಿಕಾವರದಿಗಾರನಾಗಿ ದೆಹಲಿಗೆ ಹೋಗಿದ್ದೆ. ಕಾಂಗ್ರೆಸ್ ಅಧ್ಯಕ್ಷ ರಾಗಿದ್ದ ಯು. ಎನ್. ದೇಬರ್ ಅವರನ್ನು ಕಾಣಲು ನಿಯೋಗದವರು ಹೊರಟರು. ಭಾಷಾವಾರು ಪ್ರಾಂತ ರಚನಾ ನಿಯೋಗಕ್ಕೆ ಭೇಟಿನೀಡಲು ದೇಬರ್ ನಿರಾಕರಿಸಿದರು. ಎಲ್ಲರೂ ವಾಪಸ್ಸು ಬರುವಾಗ ತಿಂಗಳ ಹಿಂದೆ ಮಂಡ್ಯದಲ್ಲಿ ನನ್ನನ್ನು ದೇಬರ್ ಅವರು ನೋಡಿದ್ದರು, ಆ ಪರಿಚಯದ ಮೇಲೆ ನನ್ನೊಬ್ಬನನ್ನೇ ವಾಪಸ್ಸು ಕರೆಸಿ what secretary that you are here ? ಎಂದರು. Yes sir that I am also of member of this S. R. C delegation ಎಂದೆ. I do not want all these which are unnecessary Things. wasting time and energy ಎಂದರು ದೇಬರ್‌ಜೀ ಅವರು.

ಮುಂದುವರಿದು How is that Societies work is going on· There is an article appeared in Congress Constructive bulletin,Article has been written by me ಎಂದು ಹೇಳಿ ಬುಲೆಟಿನ್ ತರಿಸಿಕೊಟ್ಟರು. ಒಂದು ಪೇಜಿ ಗಿಂತಲೂ ಹೆಚ್ಚಿದ್ದ ದೇಬರ್ ಅವರ ಲೇಖನದಲ್ಲಿ ಪ್ರಮುಖವಾಗಿ ಎದ್ದು ಕಂಡ ಭಾಗ ದಲ್ಲಿ If there is any district Congress Commitee working accord - ing Gandhian programme in India that is mandya district congress Committee of Mysore state" ಎಂದು ಉಲ್ಲೇಖಿಸಿದ್ದರು. ವೀರಣ್ಣ ಗೌಡರಿಂದ ಹಿಡಿದು ಎಲ್ಲ ಸದಸ್ಯರು ಆ ಲೇಖನವನ್ನು ತಿರುವಿಹಾಕಿ ಓದುತ್ತ ½ ಘಂಟೆಗೂ ಹೆಚ್ಚು ಜಂತರ್ ಮಂತರ್ ರಸ್ತೆ ಕಾಂಗ್ರೆಸ್ ಭವನದಲ್ಲಿ ನಿಂತರು. ಎ.ಜಿ. ರಾಮಚಂದ್ರರಾಯರು ನನ್ನ ಬೆನ್ನುತಟ್ಟಿ ಶಂಕರಗೌಡರೇ ನಿಮ್ಮ ಸೆಕ್ರೆಟರಿ ನಿಮಗೆ ಕೀರ್ತಿದಾಯಕ ವ್ಯಕ್ತಿ ಎಂದು ಹೊಗಳಿದರು. ನೋಡಿ ಧರ್ಮವನ್ನು ರಕ್ಷಿಸಿದರೆ ಧರ್ಮ ನಮ್ಮನ್ನು ರಕ್ಷಿಸುತ್ತದೆ

ಎನ್ನುವ ಆರ್ಯೋಕ್ತಿಯಂತೆ ಮಂಡ್ಯದ ಪ್ರಸಿದ್ಧ ಸಹಕಾರ ದೇಗುಲ. ದೆಹಲಿ ಮಹಾ ಸಾಗರದಲ್ಲು ಸೊಸೈಟಿ ನಿರ್ಮಾಪಕರನ್ನು ಗುರ್ತಿಸಿದ ಎರಡನೇ ಪ್ರಕರಣ ಇದು. ರೈತರ ಸೊಸೈಟಿಗೆ ನನ್ನ ಹಳೆ ಪುಸ್ತಕದ ಅಂಗಡಿಯಲ್ಲಿ ನಾನೇ ಮೊದಲ ಷೇರುಹಾಕಿ ಸದಸ್ಯನಾದೆ. ಸುಮಾರು 45 ವರ್ಷಗಳಿಂದ ಈ ಸಹಕಾರ ಸಂಘಕ್ಕೆ ಡೈರೆಕ್ಟರುಗಳಾಗಿ ನಿಲ್ಲಿಸಲು ಹಳ್ಳಿಗಳಿಂದ ಆಯ್ದು ವ್ಯಕ್ತಿಗಳನ್ನು ನನ್ನ ಸ್ನೇಹಿತರು ಕರೆಸಿ ನನ್ನೆದುರಿನಲ್ಲೇ ಚುನಾಯಿಸುತ್ತಿದ್ದರಾದರು, ಈಗಿನವರೆಗೂ ಯಾವ ಸ್ನೇಹಿತನು ಈ ಸಹಕಾರ ಸಂಘದ ಡೈರೆಕ್ಟರ್ ಸ್ಥಾನಕ್ಕೆ ನನ್ನನ್ನು ಸೂಚಿಸಲೂ ಇಲ್ಲ ನಾನು ಕೇಳಲೂ ಇಲ್ಲ !

1955ನೆಯ ಇಸವಿ ನವಂಬರ್ ಮೂರನೆಯ ದಿನಾಂಕ ಎಚ್. ಕೆ. ವೀರಣ್ಣ ಗೌಡರು, ಎಲ್. ಟಿ. ಕಾರ್ಲೆ, ನಾಗೇನಹಳ್ಳಿ ಶಿವನಂಜೇಗೌಡ, ಮಂತ್ರಿಗಳಾದ ಟಿ. ಚನ್ನಯ್ಯ, ಎ.ಜಿ. ರಾಮಚಂದ್ರರಾವ್, ಶಾಸಕ ಬಿ.ಎಂ ಸೀನಪ್ಪ, ಎಂ.ಕೆ. ಶಿವನಂಜಪ್ಪ, ಅನಧಿಕೃತವಾಗಿ ಇವರ ಜೊತೆ ಉಳ್ಳ ಮೈಸೂರು ವಿಲೀನವಿರೋಧಿ ನಿಯೋಗವೊಂದು ದೆಹಲಿಗೆ ಹೋಯಿತು. ಈ ನಿಯೋಗ ದೆಹಲಿಗೆ ಹೋಗುವ ಮುನ್ನ ದಿವಂಗತ ಸಾಹು ಕಾರ್ ಚನ್ನಯ್ಯನವರೊಡನೆ ಒಗ್ಗಟ್ಟಿನಿಂದ ಹೋಗುತ್ತಿದ್ದ ಕೆ. ಹನುಮಂತಯ್ಯನವರು ಏಕೀಕರಣಕ್ಕೆ ಸಹಾಯಕರಾಗಿದ್ದಾರೆ. ಅವರನ್ನು ಮುಖ್ಯಮಂತ್ರಿ ಸ್ಥಾನ ಚ್ಯುತರನ್ನಾಗಿ ಮಾಡಬೇಕೆಂದು ಸಾಹುಕಾರ್ ಚನ್ನಯ್ಯನವರು ಮುಂದೆ ಬಂದಿದ್ದಾರೆಂದು ಎಚ್. ಕೆ. ವೀರಣ್ಣಗೌಡರು ಮಂಡ್ಯ ರೈತರ ಸಹಕಾರ ಸಂಘದಲ್ಲಿ ಸೇರಿದ್ದ ಯುವಕರ ಸಭೆಯಲ್ಲಿ ತಿಳಿಸಿದರು. ಇದನ್ನು ವಿರೋಧಿಸಲು ಮಂಡ್ಯದಲ್ಲಿ ಬೃಹತ್ ಸಮ್ಮೇಳನ ನಡೆಸಲು ಸಿದ್ಧತೆಗಳಾಗಬೇಕೆಂದೂ ಕೆ. ವಿ. ಶಂಕರಗೌಡರು ಈ ಸಮ್ಮೇಳನದ ನೇತಾರರಾಗ ಬೇಕೆಂದು ವಿ. ವೆಂಕಟಪ್ಪನವರು ಮತ್ತು ಎಚ್. ಕೆ. ವೀರಣ್ಣಗೌಡರು ತಿಳಿಸಿದರು.

ಸ್ವಾತಂತ್ರ್ಯ ಪೂರ್ವದಲ್ಲೆ ಕರ್ನಾಟಕ ಏಕೀಕರಣ ವಿಚಾರ ಚರ್ಚೆಗೆ ಬಂದು ಕರ್ನಾಟಕ ಏಕೀಕರಣ ಬೆಂಬಲಿಸಬೇಕೆಂಬ ಮೈಸೂರು ಪ್ರದೇಶ ಕಾಂಗ್ರೆಸ್ 1952 ರಲ್ಲಿ ತೀರ್ಮಾನ ಕೈಗೊಂಡಿತ್ತು. ಈ ನಿರ್ಣಯದ ವಿರುದ್ಧ ಮಂಡ್ಯದ ಮಹಾತ್ಮಾ ಗಾಂಧಿ ಪಾರ್ಕಿನಲ್ಲಿ ಯುವ ಮುಂದಾಳುಗಳಾದ ಜಿ. ಮಾದೇಗೌಡರು ಮತ್ತು ಗೌಡಗೆರೆ ನಾಗಪ್ಪನವರು ವಿರೋಧಿಸಿ ನಿರಶನ ವ್ರತಕೈಗೊಂಡಿದ್ದರು. ಈ ಯುವ ಮುಖಂಡರು ಕೈಗೊಂಡ ಕಾರ್ಯಕ್ರಮಕ್ಕೆ ನಾನು ಪೂರ್ಣವಾಗಿ ಬೆಂಬಲಿಸಿ ಜನರ ಸಹಕಾರವನ್ನು ನಿಮ್ಮ ಕಾರ್ಯಕ್ಕೆ ಪೂರ್ಣಹಸ್ತ ನೀಡುವ ಭರವಸೆ ನೀಡಿದೆ. ಕೆ. ವಿ. ಶಂಕರಗೌಡರು ಕರ್ನಾಟಕ ಏಕೀಕರಣ ಆಗುವುದೋ ಇಲ್ಲವೋ ಕಂಡವರಾರು ? ಏನವಸರ ನಿಮಗೆ ನಿರಶನ ಮುಕ್ತಾಯಮಾಡಿ ಎಂದು ಹಣ್ಣಿನರಸ ಕುಡಿಸಿ ಅಂತ್ಯಗೊಳಿಸಿದರು. ಈ ಯುವ ಮುಂದಾಳುಗಳ ನಿರಶನ ನಿಂತರು ಆ ದೆಸೆಯಲ್ಲಿ ಅನೇಕ ಮಂದಿ ಪ್ರಬುದ್ಧ ರಾದವರು ತಲೆಗೆ ಹಚ್ಚಿಕೊಂಡರು. ಅವರಲ್ಲಿ ಹೆಚ್ಚಿನ ಮಂದಿ ಬ್ರಾಹ್ಮಣರು 1952 ರಿಂದಲೂ ಏಕೀಕರಣ ಪರ ಮತ್ತು ವಿರೋಧವ ಬಗ್ಗೆ ಆಗಾಗ ಸಭೆ ಸಮ್ಮೇಳನಗಳು



ಸೇರಿದಾಗ ಅನಧಿಕೃತವಾಗಿ ಚರ್ಚಿತವಾಗುತ್ತಿತ್ತು.

ಸಾಹುಕಾರ್ ಚನ್ನಯ್ಯನವರು ಹೊರದೇಶ ಪ್ರಯಾಣಕ್ಕೆ ಹೊರಟಿದ್ದರು. ಅವರ ಪ್ರಯಾಣಕ್ಕೆ ಶುಭಾಶಯ ಕೋರಲು ದಿವಂಗತ ಎಚ್. ಸಿದ್ಧರಾಮಯ್ಯನವರು ಮುನಿಸಿಪಲ್ ಹೈಸ್ಕೂಲ್ ಆವರಣದಲ್ಲಿ ಎ. ಜಿ. ಬಿಂದೀಗೌಡರ ಅಧ್ಯಕ್ಷತೆಯಲ್ಲಿ ಸಭೆ ಕರೆದಿದ್ದರು. ಆ ಸಭೆಯಲ್ಲಿ ಕಾರಣಾಕಾರಣವಿಲ್ಲದೆ ಕರ್ನಾಟಕ ಏಕೀಕರಣ ಮಾತು ಸಭೆ ಅಧ್ಯಕ್ಷರ ನಾಲಿಗೆಯಿಂದ ಜಾರಿತು. ಸಭೆಯಲ್ಲಿ ಸೇರಿದ್ದ ಯುವಕರ ಗುಂಪೊಂದು ನನ್ನ ನೇತೃತ್ವದಲ್ಲಿ ''ನಾಚಿಕೆಗೇಡು'' ಎಂದು ಧಿಕ್ಕರಿಸಿತು. ಚನ್ನಯ್ಯನವರೆದ್ದು ಆ ವಿಚಾರವೇನಿಲ್ಲ ತಾಳ್ಮೆವಹಿಸಿ ಎಂದು ಯುವಕರಿಗೆ ಹಿತೋಪದೇಶ ಮಾಡಿದರು. ಹಾಗೂ ಹೀಗೂ ಇಂಡಿಯಾದೇಶವನ್ನು ಭಾಷಾವಾರು ಪ್ರಾಂತ್ಯಗಳಾಗಿ ವಿಂಗಡಿಸುವ ಯೋಜನೆಗೆ ರಾಷ್ಟ್ರೀಯ ಕಾಂಗ್ರೆಸ್ ಅನುಮೋದನೆ ನೀಡಿತು. ಕಾರಣ ತೆಲಗು ಮಾತನಾಡುವ ಪ್ರದೇಶವನ್ನು ಮದ್ರಾಸಿನಿಂದ ಪ್ರತ್ಯೇಕಿಸಿ ''ಆಂಧ್ರಪ್ರದೇಶ'' ರಚನೆಗೆ ಪೊಟ್ಟಿ ಶ್ರೀರಾಮುಲು ಅವರು ಕೈಗೊಂಡು ಆಮರಣಾಂತ ಸತ್ಯಾಗ್ರಹ ನಡೆಸಿ ಸ್ವರ್ಗಸ್ಥರಾದರು. ಈ ಹಿನ್ನೆಲೆ ಆಧಾರದ ಮೇಲೆ ಎಲ್ಲ ಪ್ರಾಂತಗಳ ಭಾಷಾ ಜನರಿಂದಲೂ ತಮ್ಮ ತಮ್ಮ ಭಾಷಾವಾರು ಪ್ರಾಂತಗಳಾಗಬೇಕೆಂಬ ಕೂಗು ರಾಷ್ಟ್ರಾದ್ಯಂತ ಅಬ್ಬರಿಸಿತು.

ಕರ್ನಾಟಕದಲ್ಲಂತು ಇದು ಶತಮಾನಗಳ ಹಳೆಯ ಮಾತಾಗಿತ್ತು. ಸಾಹಿತಿಗಳಾದವರು ಯಾವುದೇ ಸಮಾರಂಭದಲ್ಲಿ ಸೇರಿದರು ಏಕೀಕರಣದ ಮಾತಿಲ್ಲದೆ ಅವರ ಭಾಷಣವಿಲ್ಲ. ಈ ಕೂಗು ದೊಡ್ಡದಾದ ಮೇಲೆ ಕನ್ನಡ ಮಾತನಾಡುವ ಭಾಷಾ ಪ್ರಾಂತ ರಚನೆಯಾಗಲಿ, ಆಡಳಿತ ಅನುಕೂಲಕ್ಕೆ ಇಡೀ ಹಿಂದೂಸ್ಥಾನವೇ ಕೋಟಿ ಜನ ಸಂಖ್ಯೆಗೆ ಒಂದರಂತೆ ಪ್ರಾಂತಗಳು ವಿಭಜನೆಗೊಳ್ಳಬೇಕೆಂದು ಮಂಡ್ಯದಲ್ಲಿ ಆರಂಭಿಸಿ ಆ ಹೋರಾಟದ ಹೆಸರು ''ಮೈಸೂರು ವಿಲೀನ ವಿರೋಧ'' ಸಮ್ಮೇಳನವೆಂದು ಹೆಸರಿಸಲಾಯ್ತು.

ಈ ಸಮ್ಮೇಳನವನ್ನು ಚನ್ನಪಟ್ಟಣದಲ್ಲೇಕೆ ನಡಸಬಾರದು ಎಂಬ ಸೊಲ್ಲು ಬಂತು. ಆದರೆ ಮಂಡ್ಯರೈತರು ಈ ಸಮ್ಮೇಳನವನ್ನು ಮಂಡ್ಯದಲ್ಲೇ ನಡೆಸಿ. ನಾವು ನಿಮ್ಮ ಬೆಂಬಲಕ್ಕೆ ನಿಲ್ಲುತ್ತೇವೆ ಎಂದು ಕೆ. ವಿ. ಶಂಕರಗೌಡರಲ್ಲಿ ಪಟ್ಟು ಹಿಡಿದರು. ಈ ಸಮ್ಮೇಳನಕ್ಕೆ ರಾಜ್ಯಾದ್ಯಂತ ಬೆಂಬಲ ಸಾಕಷ್ಟು ಬಂತು. ನಾನು. ಎ.ಜಿ. ರಾಮಚಂದ್ರ ರಾವ್, ಎಂ. ಕೆ. ಶಿವನಂಜಪ್ಪ ರೈಲಿನಲ್ಲಿ ಬೆಂಗಳೂರಿಂದ ಮದ್ರಾಸಿಗೆ ಹೋದೆವು. ದೆಹಲಿಗೆ ಹೋಗುವಾಗ ಎಕ್ಸ್‌ಪ್ರೆಸ್‌ಗಾಗಿ ಎರಡು ಘಂಟೆಕಾಲ ಮದ್ರಾಸಿನಲ್ಲಿ ಕಾಯಬೇಕಾಗಿತ್ತು. ಎ. ಜಿ. ರಾಮಚಂದ್ರರಾಯರು ಸಮುದ್ರತೀರಕ್ಕೆ ಹೋಗಿ ವಿಶ್ರಾಂತಿ ಪಡೆದು ಬರೋಣ ಎಂದರು. ಬೇಡಿ ಸಾರ್ ರಾಜಾಜಿ ಮನೆಗೆ ಹೋಗಿ ಹಿಂದೂಸ್ಥಾನ್ ಟೈಂಸ್ ಸಂಪಾದಕರಾದ ರಾಜಾಜಿ ಅವರ ಅಳಿಯ ದೇವದಾಸ್‌ಗಾಂಧಿ

ಅವರಿಗೆ ಫೋನ್‌ಮಾಡಿಸಿ ನಮ್ಮ ಚಳುವಳಿಗೆ ಸಹಾಯ ಕೇಳೋಣ ಎಂದೆ. ಎಂ. ಕೆ. ಶಿವ ನಂಜಪ್ಪನವರು ಬೆಂಬಲಿಸಿದರು. ರಾಜಾಜಿ ಅವರ ಮನೆಗೆ ಹೋದೆವು. ಬಾಗಿಲು ಹಾಕಿತ್ತು ಒಂಬತ್ತು ಹತ್ತು ವರ್ಷದ ಬಾಲಕಿ ಬಾಗಿಲು ತೆರೆದು ಬನ್ನಿ ಒಳಗಡೆ ಕುಳಿತು ವಿಶ್ರಮಿಸಿ ತಾತ ಬರುತ್ತಾರೆ ಎಂದು ಕನ್ನಡದಲ್ಲೇ ಮಾತಾಡಿದಳು, ನಮ್ಮ ಕನ್ನಡ ಎಲ್ಲಿ ಕಲಿತೆ ಎಂದು ಎಂ. ಕೆ. ಶಿವನಂಜಪ್ಪ ಕೇಳಿದರು. ಏಕೆ ರಾಜಾಜಿ ಅವರಿಗೆ ಕನ್ನಡ ಬರುತ್ತಲ್ಲ, ಬಹುಶಃ ತಾತನಿಂದ ಕಲಿತಿರಬೇಕು ಎಂದರು ಎ. ಜಿ. ರಾಮಚಂದ್ರ ರಾಯರು. ಒಳಗಿಂದ ರಾಜಾಜಿ ಬರುತ್ತಲೇ ಏನು ರಾಯರು ಮಂಡ್ಯಸಮ್ಮೇಳನ ಜೋರರೋ ಎಂದು ಕನ್ನಡದಲ್ಲೆ ಮಾತನಾಡುತ್ತ ಬಂದರು. ಎದ್ದು ನಿಂತು ನಮಸ್ಕರಿ ಸಿದೆವು. ದೆಹಲಿಗೆ ಮಂಡ್ಯನಿಯೋಗ ಹೋಗಿದೆ. ನೀವೇಕೆ ನಿಧಾನ ಎಂದರು. ನಾವು ದೆಹಲಿದಾರಿಯಲ್ಲಿ ಇಲ್ಲಿ ಇಳಿದಿದ್ದೆವು, ತಮ್ಮನ್ನು ನೋಡಿ ಹೋಗೋಣ ಎಂದು ಬಂದೆವೆನ್ನುತ್ತ ನಮ್ಮನ್ನು ಎ. ಜಿ. ರಾಮಚಂದ್ರರಾಯರು ಪರಿಚಯಿಸಿದರು. ಈತನು ಬಿ. ಎನ್. ಗುಪ್ತ ಅವರ ಜನವಾಣಿ ಪತ್ರಿಕೆಯಲ್ಲಿ ಕೆಲಸ ಮಾಡುತ್ತಾನೆ. ಹೆಸರು ಜವರಪ್ಪಗೌಡ ಎಂದರು. ಗುಪ್ತನೇನು ನಿಮ್ಮಪರವಾಗೇ ಇದ್ದಾನೆ, ಆತನ ಸಂಪಾದ ಕೀಯ ಓದಿಸಿ ಕೇಳಿದೆ ಎಂದರು.

ಮಂಡ್ಯ ಸಮ್ಮೇಳನದ ಕಟ್ಟಾಳು ಈತ. ನಿಮ್ಮನ್ನು ನೋಡಿ ನಮ್ಮ ಚಳುವಳಿಗೆ ಹಿಂದೂಸ್ತಾನ್ ಟೈಂಸ್‌ನಲ್ಲಿ ಪ್ರಚಾರಕ್ಕೆ ಕಾಗದ ಕೇಳೋಣ ಎಂದರು ಬಂದೆ ಎಂದರು. ಎ. ಜಿ. ರಾಮಚಂದ್ರರಾಯರು ಕಾಗದ ಏನು ಬೇಡಿ ಗುರುವಾರ ಹೋಗಿ ದೇವದಾಸ್ ಗಾಂಧಿ ಅವರನ್ನು ನೋಡಿ ನಾನು ಹೇಳಿದೆನೆಂದು ಹೇಳಿ ಎಂದರು. "ರಾಮಚಂದ್ರರಾವ್ ನೆಹರು ಏನೇ ಹೇಳಲಿ ಮಂಡ್ಯ ಸಮ್ಮೇಳನ ಸೇರಿಸುವುದನ್ನು ಮಾತ್ರ ಬಿಡಬೇಡಿ ಕರ್ನಾಟಕದಲ್ಲಿ ಗಲಾಟೆಯಿಲ್ಲ ಕರ್ನಾಟಕ ಪ್ರಾಂತ ರಚಿಸಿ ಬಿಡಿ'' ಎನ್ನುವ ಸ್ವಭಾವ ನೆಹರೂ ಅವರದು. ಪಾಪ ಆತನು ಮೃದುಸ್ವಭಾವದ ವ್ಯಕ್ತಿ, ಗಲಾಟೆ ಕಂಡರೆ ಮೈಲು ದೂರ ಹೋಗುವ ಸ್ವಭಾವದವ. ನಿಮ್ಮ ಮಂಡ್ಯ ಸಮ್ಮೇಳನದಲ್ಲಿ ತಲಾಕೋಟಿ ಜನ ಸಂಖ್ಯೆಗೆ ಒಂದೇ ಆಡಳಿತ ಪ್ರಾಂತ ರಚನೆಗೆ ಹೋರಾಟ ಕೊಡಿ. ಇಲ್ಲವಾದರೆ ಭಾರತ ವನ್ನು ಉತ್ತರ, ದಕ್ಷಿಣ, ಪಶ್ಚಿಮ ಮತ್ತು ಪೂರ್ವ ಎಂದು ನಾಲ್ಕು ಪ್ರಾಂತಗಳ ರಚನೆ ಗಾಗಿ ರಾಷ್ಟ್ರದ ಬುದ್ಧಿಜೀವಿಗಳನ್ನು ಹೋರಾಟಕ್ಕೆ ಇಳಿಸುತ್ತೇನೆ. ಇಲ್ಲವಾದರೆ ಯು.ಪಿ. ಮತ್ತು ಬಿಹಾರ್ ಜೊತೆಯಾದರೆ ದೆಹಲಿ ದೊರೆತನ ಇತರ ಪ್ರಾಂತದವರಿಗೆ ಕನಸಾಗಿ ಉಳಿದೀತು ? ಅದಿಲ್ಲದೆ ಹೋದರೆ ನಾನೆಲ್ಲಿಗೆ ಹೋದೇನು ಹುಟ್ಟಿ ಬರುತ್ತೇನೆ. ಒಂದಿಲ್ಲ ಒಂದು ದಿನ ಲೋಕಸಭೆಯಲ್ಲಿ ದಕ್ಷಿಣ ಭಾರತ ಮತ್ತು ಉತ್ತರ ಭಾರತದವರು ಕುರ್ಚಿಗಳಿಂದ ಬಡಿದಾಡುವುದನ್ನು ಈ ಯುವಕರು ಕಣ್ಣಾರ ಕಾಣುವರು ಎಂದು ಹೇಳಿ ದ್ರಾಕ್ಷಿಹಣ್ಣಿನ ರಸವಿತ್ತು ನಮ್ಮನ್ನು ಬೀಳ್ಕೊಟ್ಟರು ರಾಜಾಜಿ.

ದೆಹಲಿಗೆ ಬುಧವಾರ ತಲುಪಿದೆವು. ಎ. ಜಿ. ರಾಮಚಂದ್ರರಾಯರು ಮತ್ತು

ಟಿ. ಚನ್ನಯ್ಯನವರು ಹೈದರಬಾದ್ ಹೌಸ್‌ನಲ್ಲಿ ಇಳಿದುಕೊಂಡರು. ನಾನು ಮತ್ತು ಎಂ.ಕೆ. ಶಿವನಂಜಪ್ಪ ಅವರ ಮನೆಗೆ ಹೋದೆವು. ಬೆಳಗ್ಗೆ ಎದ್ದು ಮಂತ್ರಿ ಟಿ. ಚನ್ನಯ್ಯನವರ ಕಾರಿನಲ್ಲಿ ಹಿಂದೂಸ್ತಾನ್ ಟೈಂಸ್ ಆಫೀಸಿಗೆ ಹೋದೆವು. ದೇವದಾಸ್‌ಗಾಂಧಿ ಅವರಿಗೆ ನನ್ನ ಮತ್ತು ಟಿ. ಚನ್ನಯ್ಯನವರ ಹೆಸರು ಬರೆದು ಸಂದರ್ಶಿಸಲು ಚೀಟಿ ಕಳುಹಿಸಿದೆವು, ಮಧ್ಯಾಹ್ನ 3 ಘಂಟೆಗೆ ಬರುವಂತೆ ಹೇಳಿಕಳುಹಿಸಿದರು. ನಾನು ಪುನಃ ಅದೇ ಚೀಟಿಯಲ್ಲಿ "ರಾಜಾಜಿ ಅವರು ತಮ್ಮನ್ನು ಇಂದೇ ಸಂದರ್ಶಿಸಲು ತಿಳಿಸಿದ್ದರು. ಬಂದಿದ್ದೇವೆ. ಒಂಡೆರಡು ನಿಮಿಷಕ್ಕಿಂತ ಹೆಚ್ಚಿಗೆ ಕಾಲಾವಕಾಶ ಬೇಕಿಲ್ಲ" ಎಂದು ಬರೆದಿದ್ದೆ, ಕರೆದುಕೊಂಡುಹೋದರು. ನನ್ನನ್ನು ಚನ್ನಯ್ಯನವರು ಪರಿಚಯಿಸುತ್ತಾರೆಂದು ಕೊಂಡಿದ್ದೆ. ಆದರೆ ನಾನೇ ಚನ್ನಯ್ಯನವರು ಮೈಸೂರಿನ ಆರೋಗ್ಯಮಂತ್ರಿಗಳು ನಾನು ಜವರಪ್ಪಗೌಡ, ಗುಪ್ತ ಅವರ ಜನವಾಣಿ ಪತ್ರಿಕೆಯಲ್ಲಿ ಕೆಲಸಮಾಡುತ್ತಿದ್ದೇನೆ. ಎಂದೆ. ಗುಪ್ತ ಅವರು ಚೆನ್ನಾಗಿದ್ದಾರೆಯೇ ಎಂದು ಕೇಳಿದರು. ಅಹುದು ಎಂದು ತಿಳಿಸಿದೆ. ಸಾರ್ ನಾವು ಮಂಡ್ಯದಲ್ಲಿ ಮೈಸೂರು ಪ್ರಾಂತದ ಪ್ರತ್ಯೇಕತೆ ಉಳಿಸಿಕೊಳ್ಳಲು ಸಮ್ಮೇಳನ ಕರೆಯುತ್ತಿದ್ದೇವೆ. ಅದಕ್ಕೆ ತಮ್ಮ ಪತ್ರಿಕೆ ಪ್ರಚಾರಕ್ಕೆ ಸಹಾಯ ಕೇಳಲು ಬಂದೆವು ಎಂದೆ. ಇಂದಿನ ಪಂಚೆ ಪ್ರಕಟಣೆ ಮುಖಪುಟದಲ್ಲಿ ಪ್ರಕಟಿಸಿರಿ ಎಂದು ತಿಳಿಸಿದರು. ಇಂಗ್ಲಿಷಿನಲ್ಲಿ ಮೈಸೂರು ವಿಲೀನವಿರೋಧಿ ಮೈಸೂರು ನಾಯಕರ ದೆಹಲಿ ಆಗಮನ, ಇಂತಿಂತಹವರು ನಿಯೋಗದಲ್ಲಿದ್ದಾರೆ. ಇಂದು ಕೆ. ಸಿ. ರೆಡ್ಡಿ ಮತ್ತು ಎಂ.ವಿ. ಕೃಷ್ಣಪ್ಪ ಅವರೊಡನೆ ದೀರ್ಘಕಾಲ ಚರ್ಚಿಸಿದರೆಂದು ಸುದ್ದಿ ಬರೆದು ಕೊಟ್ಟೆ. ದಿನವೂ ಯಾರಾದರು ಎಂ. ಪಿ. ಅವರ ನಾಮಪತ್ರದಲ್ಲಿ ಸುದ್ದಿ ಕಳುಹಿಸಿಕೊಡಿರಿ, ದಿನವು ಪ್ರಕಟಿಸಲು ತಿಳಿಸಿದ್ದೇನೆಂದು ದೇವದಾಸ್‌ಗಾಂಧಿ ತಿಳಿಸಿದರು. ಬನ್ನಿ ರಾಜಘಾಟಿಗೆ ಪ್ರಾರ್ಥನೆಗೆ ಹೋಗೋಣ ಎಂದರು. ಅವಸವಸರವಾಗಿ ಹೊರಟು ಜೋರಾಗಿ ಹೆಜ್ಜೆ ಹಾಕಿ ಎಂದು ತಮ್ಮಕಾರಲ್ಲಿ ಕುಳಿತು ಮುಂದಿನ ಬಾಗಿಲು ತೆಗೆದು ಕುಳಿತುಕೊಳ್ಳಲು ಕರೆದರು. ಚನ್ನಯ್ಯನವರು ಅವರ ಕಾರಿನಲ್ಲಿ ಬರುತ್ತಾರೆಂದೆ, ಸೀದಾ ರಾಜಘಾಟಿಗೆ ಹೋದೆವು. ದೇವದಾಸ್ ಗಾಂಧಿ ಅವರ ಪಕ್ಕ ನನಗೊಂದು ಜಾಗ ಮಾಡಿಸಿಕೊಟ್ಟರು. ಪ್ರಾರ್ಥನೆಯಲ್ಲಿ ಭಾಗವಹಿಸಿದ ನಂತರ ನಮ್ಮ ನಾಯಕರೊಡನೆ ಹೋಗುತ್ತೇನೆಂದು ತಿಳಿಸಿ ದೇವದಾಸ್‌ಗಾಂಧಿ ಅವರಿಗೆ ವಂದನೆಗಳನ್ನರ್ಪಿಸಿದೆ.ನಮ್ಮ ಮುಖಂಡರು ಎದುರು ಸಾಲಿನಲ್ಲಿ ಕುಳಿತಿದ್ದರು. ಇದೇನಯ್ಯ ಜವರಾಯಿಗೌಡ ದೇವದಾಸ್ ಗಾಂಧಿ ಹಿಡಿದಿದ್ದೀಯೆ, ಗುಪ್ತ ಏನಾದರು ಕಾಗದ ಕೊಟ್ಟಿದ್ದರೆ ಎಂದು ವೀರಣ್ಣಗೌಡರು ಕೇಳಿದರು. ರಾಮಚಂದ್ರರಾಯರು ಹೇಳುತ್ತೇನೆ ಬನ್ನಿ ಎಂದು ನನ್ನನ್ನು ಅವರ ಕಾರಿನಲ್ಲಿ ಕರೆದು ಕೊಂಡು ಶಿವನಂಜಪ್ಪನವರ ಮನೆಗೆ ಬಂದು ರಾಜಾಜಿ ಭೇಟಿ ವಿಚಾರ ತಿಳಿಸಿದರು. ಏನಯ್ಯ ಜವರಾಯಿಗೌಡ ದೆಹಲಿ ಪತ್ರಿಕೆಯವರ ಕಣ್ಣಿಗೆ ನಮ್ಮನ್ನು ಕಾಣಿಸಿದ್ದೀಯ ಎಂದರು. ಹೌದು ಸಾರ್ ಸಂಚೆಹಿಂದೂಸ್ತಾನ್ ಟೈಂಸ್ ಪ್ರಕಟಣೆಯಲ್ಲಿ ಸುದ್ದಿ

ಬರುತ್ತದೆ ಎಂದೆ.

ಇದೇ ಕಾಲಕ್ಕೆ ಅಂತರ‍್ರಾಷ್ಟ್ರೀಯ ಕೃಷಿ ಉತ್ಪನ್ನ ಮೇಳ ದೆಹಲಿಯಲ್ಲಿ ಸಮಾವೇಶವಾಗಿತ್ತು. ನಾವುಗಳೆಲ್ಲ ಮೇಳಕ್ಕೆ ಹೋಗಿ ಅಡ್ಡಾಡುತ್ತಿದ್ದೆವು. ಎಲ್ಲ ದೇಶಗಳ ಸ್ಟಾಲುಗಳನ್ನು ನೋಡಿ ಬಂದೆವು. ರಾತ್ರಿ ಕೆ.ಸಿ. ರೆಡ್ಡಿಯವರ ಮನೆ ಭೋಜನ ಮೈಸೂರು ನಾಯಕರಿಗೆ. ಅನಧಿಕೃತ ಪ್ರತಿನಿಧಿಯಾದ ನನಗೆ ಆಹ್ವಾನವಿರಲಿಲ್ಲ. ಬೆಳಗ್ಗೆ ಎದ್ದರೆ ದೆಹಲಿ ಎಲ್ಲ ಪತ್ರಿಕೆಗಳಲ್ಲು ಮೈಸೂರು ವಿಲೀನ ವಿರೋಧ ಸಮ್ಮೇಳನದ ನಾಯಕರು ಎನ್ನುವುದು ತಿರುಗಮುರಗವಾಗಿ ಕರ್ನಾಟಕ ಏಕೀಕರಣ ವಿರೋಧಿ ನಾಯಕರ ಆಗಮನ ಎಂದು ದೊಡ್ಡ ಶಿರೋನಾಮೆಯ ಲೇಖನ ಪ್ರಕಟವಾಗಿತ್ತು.

ವೀರಣ್ಣಗೌಡರು ದೆಹಲಿ ಕನ್ನಾಟ್‌ಪ್ಲೇಸಿನ ಸೌತ್ ಇಂಡಿಯಾ ಹೊಟೇಲಿನಲ್ಲಿ ಪ್ರೆಸ್ ಕಾನ್‌ಫರೆನ್ಸ್ ಕರೆದಿದ್ದರು. ನನ್ನ ಪಕ್ಕ ನ್ಯಾಷನಲ್ ಹೆರಾಲ್ಡ್ ಪತ್ರಿಕೆ ಬಾತ್ಮೀದಾರ ಕುಳಿತಿದ್ದವನು ಎ. ಜಿ. ರಾಮಚಂದ್ರರಾಯರನ್ನು ಏಕೆ ನಿಮ್ಮ ಮಹಾರಾಜರನ್ನು ಕರ್ನಾಟಕ ಸಿಂಹಾಸನಾಧೀಶ್ವರ ಎಂದು ಕರೆಯುತ್ತಾರೆ. ಹಿಂದೆ ಕರೆದಿದ್ದಾರಲ್ಲ ಕಾರಣ ಏನು ? ಎಂದು ಪ್ರಶ್ನಿಸಿದ. ವೀರಣ್ಣಗೌಡರು ನಾನು ಹೇಳಿ ಪ್ರಶ್ನೆ ಕೇಳಿಸುತ್ತಿದ್ದೇನೆಂದು ಕೊಂಡು ತಲೆಹರಟೆ ಎದ್ದು ಈ ಕಡೆ ಬಾ ಎಂದರು. ಸುಮ್ಮನಿರಿ ಗೌಡರೆ ಎಂದು ಎ. ಜಿ. ರಾಮಚಂದ್ರರಾಯರು ಪ್ರಶ್ನೆಗೆ ಉತ್ತರ ನೀಡಿ ಎಂದರು. ನ್ಯಾಷನಲ್ ಹೆರಾಲ್ಡ್ ಪತ್ರಿಕಾವರದಿಗಾರನ ಪ್ರಶ್ನೆಗೆ ವೀರಣ್ಣಗೌಡರು ತಡಬಡಾಯಿಸಿ ಹೋದರು. ಮೈಸೂರಿನ ಹೆಸರು ಪುರಾಣಗಳ ಕಾಲದಿಂದ ಪ್ರಸಿದ್ಧವಾಗಿದ್ದು ಕನ್ನಡ ಭಾಷಾ ಪ್ರಾಂತವಾಗುವುದಾದರೆ ಕನ್ನಡ ಪ್ರಾಂತವಾಗಿ ಮೈಸೂರು ಪ್ರತ್ಯೇಕವಾಗಿ ಅದರ ಹೆಸರು ಉಳಿಯಬೇಕು ಅಷ್ಟೆ ಎಂದರು.

ಸಂಜೆ ಗೃಹಸಚಿವರಾದ ಗೋವಿಂದವಲ್ಲಭಪಂತರನ್ನು ಭೇಟಿಗೆ ಕರೆದರು. ಏಕೀಕರಣವಾದಿಗಳು ಮತ್ತು ನಮ್ಮ ಎರಡು ನಿಯೋಗವನ್ನು ಜೊತೆಯಲ್ಲೇ ಕರೆದಿದ್ದರು. ಏಕೀಕರಣವಾದಿಗಳು ಏನು ಹೇಳಬೇಕೊ ಹೇಳಲಿ. ತದನಂತರ ನಮ್ಮದನ್ನು ಹೇಳಿಕೊಳ್ಳುತ್ತೇವೆ ಎಂದು ತಿಳಿಸಿದೆವು. ಇವರ ಬಳಿ ಸುಮ್ಮನೆ ಮಾತನಾಡಿ ಬಾಯಿ ನೋವಾಗುವುದು. ನಾವು ಹೇಳುವ ಮಾತನ್ನು ಬರೆದುಕೊಳ್ಳುವದಿಲ್ಲ. ಇದು ತಿರುಪತಿ ತಿಮ್ಮಪ್ಪನ ಧರ್ಮದರ್ಶನವಯ್ಯ ನಡೆಯಿರಿ ಹೋಗೋಣ ಎಂದು ಹಲಕೆಲವು ವಿಚಾರಗಳನ್ನು ತಿಳಿಸಿದರು. ಆಗಲಿ ಪರಿಶೀಲಿಸುತ್ತೇವೆ ಎಂದು ಹೇಳಿ ಬೀಳ್ಕೊಟ್ಟರು.

ಪಂಡಿತ ಜವಾಹರ್‌ಲಾಲ್ ನೆಹರೂ ಅವರನ್ನು ನವಂಬರ್ 11 ರಂದು ನಮ್ಮ ನಿಯೋಗವು ಭೇಟಿಮಾಡಲು ಸಮಯ ಗೊತ್ತುಮಾಡಿದ್ದರು. ಒಳ್ಳೆ ಉದ್ದನೆಯ ಕೋಟು. ಕೋಟಿಗೆ ಗುಲಾಬಿ ಹೂ, ಎಡಗೈ ಸುತ್ತಿಕೊಂಡ ಮಲ್ಲಿಗೆ ಹಾರ, ಬಲಗೈನಲ್ಲಿ ಚಿಕ್ಕ ಬಳೆ ಬಣ್ಣದ ಕೋಲು ಹಿಡಿದು ನೆಹರೂ ತಮ್ಮ ಕಛೇರಿಗೆ ಬಂದರು. ನನ್ನನ್ನು ತೀರ ಹಿಂದೆ ಕುಳಿತುಕೊಳ್ಳಲು ಹೇಳಿ ಕೂರಿಸಿದರು. ನೆಹರೂ ಅವರ ಜೊತೆ

ಮಾತಾಡುವಾಗ ಬಹಳ ಎಚ್ಚರಿಕೆಯಿಂದಿರಬೇಕು ಮುಂತಾಗಿ ತಿಳಿಸಿ ಹಿಂದೆ ಕೂರಿಸಿದ್ದರು ನಮ್ಮ ನಿಯೋಗದ ನಾಯಕರು. ಬನ್ನಿ ವೀರಣ್ಣಗೌಡಾಜಿ ನಿಮ್ಮದೇನು ? ನಿಮ್ಮ ಮೈಸೂರು ಇದ್ದಹಾಗೆ ಇರಬೇಕು. ಹಿಗ್ಗುವುದೂ ಬೇಡ ತಗ್ಗುವುದು ಬೇಡ ಅಲ್ಲವೆ ? ನಿಮ್ಮ ಮೈಸೂರಿನ ವಿಶೇಷವೇನು ? ಎರಡುಮಾತಲ್ಲಿ ತಿಳಿಸಿ ಎಂದರು. ನಾಲ್ಕಾರು ನಿಮಿಷಗಳು ನಮ್ಮ ನಾಯಕರು ತಡಬಡಾಯಿಸುತ್ತ ಕುಳಿತರು. ಹಿಂದಿನಿಂದ ಎದ್ದ ನಾನು ಇಂಗ್ಲಿಷಿನಲ್ಲಿ ಮೈಸೂರಿನ ವಿಶೇಷ ನಾನು ಹೇಳಲೆ ಎಂದೆ. ಅಹುದು ವಿವರಿಸಿ ಎಂದರು. ರಾಜಘಾಟಿಗೆ ಹೋಗಿ ನೋಡಿ ಅಲ್ಲೊಂದು ಸುಂದರಗಿಡವನ್ನು ಮೈಸೂರಿನ ಕೈಗಾರಿಕಾ ಮಂತ್ರಿ ನೆಟ್ಟಿದ್ದಾರೆ, ಕೆಂಪುಕೋಟೆಗೆ ಹೋಗಿ ಮ್ಯೂಸಿಯಂ ಮುಖದ್ವಾರದಲ್ಲಿ ವಿಶ್ವಸಪುರದಲ್ಲಿ ಮೈಸೂರು ಅರಮನೆ ಬೆಟಾಲಿಯನ್ ಸೇವೆಯು ಕುರುಹಿದೆ. ಮ್ಯೂಸಿಯಂ ಪ್ರವೇಶ ಮಾಡತ್ತಿದ್ದಂತೆಯೆ ಬ್ರಿಟಿಷರಿಗೆ ರಣಭೈರವನಾಗಿದ್ದ ಟಿಪ್ಪುವಿನ ಉಕ್ಕಿನಕವಚ ಮೊದಲೇ ಕಾಣಸಿಗುತ್ತದೆ. ಅಲ್ಲಿಂದ ನಿಮ್ಮ ನಿವಾಸ ತೀನ್ ಮೂರ್ತಿಯಲ್ಲಿ ವಿಶ್ವಸಪುರದಲ್ಲಿ ಹೆಸರಾಂತ ಹೋರಾಟಗಾರ ವಿಜಯಿ ಮೈಸೂರು ಅರಮನೆ ಬೆಟಾಲಿಯನ್ ಮೇಜರ್ ಅರಸನ ಮೂರ್ತಿ ಇದೆ ಎಂದು ತಿಳಿಸಿದೆ. ಎದ್ದು ಬಂದ ನೆಹರು ನನ್ನ ಬೆನ್ನು ಚಪ್ಪರಿಸಿ ನಿಮ್ಮ ಮಹಾರಾಜರನ್ನು ಮರೆಯ ಬೇಡ ಯೋಗ್ಯವಾದ ಗಣ್ಯ ವ್ಯಕ್ತಿ ಎಂದು ತಮ್ಮ ಸ್ಥಾನಕ್ಕೆ ಹೋಗಿ ಕುಳಿತರು. ನಾನು ಇದ್ದಲ್ಲೇ ಇದ್ದೆ. ಇಲ್ಲಿ ಬನ್ನಿ ಎಂದು ಹತ್ತಿರಕ್ಕೆ ಕರೆದು ಮೈಸೂರು ಉಳಿದು ಕರ್ನಾಟಕ ರಚನೆ ಬಗ್ಗೆ ಎರಡು ನಕ್ಷೆಗಳನ್ನು ತಯಾರಿಸಿ ತನ್ನಿರಿ. ಮೈಸೂರಿನ ಎಂಟು ಜಿಲ್ಲೆ, ಬಳ್ಳಾರಿ, ಕೊಳ್ಳೇಗಾಲ, ದಕ್ಷಿಣ ಕನ್ನಡಜಿಲ್ಲೆ, ಕೊಡಗು ಮತ್ತು ಕೊಯಮತ್ತೂರಿನ ಕೆಲವು ಭಾಗಸೇರಿ 1 ಕೋಟಿ 20 ಲಕ್ಷ ಪ್ರಜೆಗಳ ಪ್ರಾಂತ ಮೈಸೂರು. ಹೈದರಬಾದ್ ಮತ್ತು ಬೊಂಬಾಯಿ ಪ್ರಾಂತ್ಯದ 1 ಕೋಟಿ 30 ಲಕ್ಷ ಪ್ರಜಾಸಂಖ್ಯೆ ಕರ್ನಾಟಕ ಪ್ರಾಂತ ರಚಿಸಲು ಸಾಧ್ಯ ಎಂದೆ. ಪ್ರೊ॥ ಎ. ಆರ್. ವಾಡಿಯಾ ಅವರು ವೆಲ್ಲಿಂಗ್ಟನ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಹೊಂದುತ್ತಿದ್ದಾರೆ. ಲಾಹೋರ್ ರಾಷ್ಟ್ರಕೂಟದಲ್ಲಿ ನನ್ನ ತಂದೆ ಮೋತಿಲಾಲ್ ನೆಹರು ಮಂಡಿಸಿದ ವರದಿಯಿದೆ. ಅದನ್ನು ನೋಡಿ ಎಂದರು. ಈ ಪ್ರಕರಣ ನಮ್ಮ ನಾಯಕರಿಗೆ ಪಸನ್ನಿಸಿತೋ ಟುಟಕ್ ಪಿಟಕ್ ಎನ್ನದೆ ಎದ್ದು ಒಬ್ಬರಹಿಂದೊಬ್ಬರು ಹೊರಟು ಹೊರ ಹೋದರು. ನನ್ನತ್ತ ಯಾರೂ ನೋಡಲಿಲ್ಲ. ಪಾಪ ಶಿವನಂಜಪ್ಪ ನಿಂತು ನನ್ನನ್ನು ಕರೆದುಕೊಂಡು ಮನೆಗೆ ಹೊರಟರು. ಲೀ ಪನಯ್ಯ ಇಂಗ್ಲೀಷ್ ಎಷ್ಟೊಂದು ಚೆನ್ನಾಗಿ ಮಾತನಾಡಿದೆ ಗೊತ್ತ. ಸೊಗಸಾಗಿತ್ತು. ಅದೇಕೆ ಇವರೆಲ್ಲ ಕೈಎಣ್ಣೆ ಕುಡಿದ ಮುಖಮಾಡಿಕೊಂಡು ಹೋದರು. ಬಹು ಜಂಭದ ಜನ ಇವರೆಲ್ಲ, ಎಂದು ಟೀಕಿಸಿಕೊಂಡು ಸುಮ್ಮನಾದೆವು. ಈ ಏಕೀಕರಣ ವಿರೋಧಿ ಪ್ರತಿಕ್ರಿಯೆಗಳಿಗಾಗಿ ಹೆಸರಾಂತ ಲೇಖಕರಾದ ಹಾ. ದೇ. ಜವರೇಗೌಡರ ನಿತ್ಯ ಸಚಿವ ಕೃತಿಯ ಭಾಗವನ್ನು ಮುಂದೆ ಉಲ್ಲೇಖಿಸಿದ್ದೇನೆ—

"ಸ್ವಾತಂತ್ರ್ಯಪೂರ್ವದಲ್ಲಿಯೇ ಕಾಂಗ್ರೆಸ್ಸು ಪ್ರಾಂತ ಪುನರ್ವಿಂಗಡಣಾ ನೀತಿಯನ್ನು ಒಪ್ಪಿಕೊಂಡಿತ್ತಷ್ಟೆ. ಸ್ವಾತಂತ್ರ್ಯಾನಂತರ ನೆಹರೂ ಅವರ ದೂರದೃಷ್ಟಿರಹಿತವಾದ ಅವಿವೇಕತನ ಹಾಗೂ ಬೇಮುತ್ಸದ್ದಿತನಗಳಿಂದಾಗಿ ಆ ವಿಷಯ ಗೊಟ್ಟಕ್ಕೆ ಬೀಳುತ್ತದೆ. ಭಾಷಾವಾರು ಪ್ರಾಂತರಚನೆಯಿಂದ ಭಾಷಾಂಧತೆ ಮಿಗಿಲಾಗಿ ರಾಷ್ಟ್ರ ಛಿದ್ರವಿಚ್ಛಿದ್ರವಾಗುತ್ತದೆಂಬ ನಿರಾಧಾರವಾದ ಊಹೆಯೇ ಅವರ ಅವಿವೇಕಕ್ಕೆ ಕಾರಣವಾಗುತ್ತದೆ. ಸ್ವಾತಂತ್ರ್ಯ ದೊರಕಿದ ಕೂಡಲೇ ಆಂಧ್ರದ ಪೊಟ್ಟಿಶ್ರೀರಾಮುಲು ಅವರು ಸಾಯುವ ತನಕ ಕಾಯದೆ, ಭಾಷಾ ಸಮಸ್ಯೆಯನ್ನು ಭಾಷಾವಾರು ಪ್ರಾಂತ ಸಮಸ್ಯೆಯನ್ನು ಬಗೆಹರಿಸಿದ್ದರೆ ನೆಹರೂರವರ ಬಗೆಗಿನ ಸಂಶಯ ದೂರವಾಗುತ್ತಿತ್ತು.ದಕ್ಷಿಣ ಭಾರತೀಯರ ನಿಷ್ಠೆ ದೃಢವಾಗುತ್ತಿತ್ತು. ಅವರ ಅನಿಶ್ಚಿಯತೆ ಹಾಗೂ ವಿಲಂಬನೀತಿಯಿಂದಾಗಿ ಅನೇಕ ಸಮಸ್ಯೆಗಳು ಅಪರಿಹಾರ್ಯವಾಗಿ ಭೂತಾಕಾರವಾಗಿ ನಿಲ್ಲುತ್ತವೆ. ಯಾರಿಗೂ ಅನ್ಯಾಯವಾಗದಂತೆ ಭಾಷೆಗಳ ಆಧಾರದ ಮೇಲೆ ಪ್ರಾಂತಗಳನ್ನು ವಿಂಗಡಿಸಿ, ಅವುಗಳಿಗೆ ಸ್ವಾಯತ್ತತೆಯನ್ನು ನೀಡಿ, ವಿಂಗಡಣೆ ಜಾರಿಗೆ ಬಂದನಂತರ ಗಡಿ ಸಮಸ್ಯೆಯನ್ನು ಕೆದಕಕೂಡದೆಂಬ, ಯಾವ ಕಾರಣಕ್ಕಾದರೂ ರಾಜ್ಯಗಳು ಕೇಂದ್ರದಿಂದ ಸಿಡಿದು ಹೋಗಲವಕಾಶವಿಲ್ಲವೆಂಬ ಶರತ್ತುಗಳನ್ನು ಸಂವಿಧಾನದಲ್ಲಿಯೇ ಸೇರಿಸಿದ್ದರೆ, ಈತನಕ ಆ ಸಮಸ್ಯೆಗಳು ಉಳಿದುಕೊಂಡು ಬರಬೇಕಾಗಿರಲಿಲ್ಲ. ವಿದೇಶೀಯರ ಆಳ್ವಿಕೆಯಲ್ಲಿ ಕನ್ನಡಿಗರ ನಿರಭಿಮಾನ ಜಾತೀಯತೆ ಅನೈಕ್ಯಗಳಿಂದಾಗಿ ಭೌಗೋಳಿಕ ದೃಷ್ಟಿಯಿಂದ ಕರ್ನಾಟಕಕ್ಕಾಗಿರುವಷ್ಟು ಅನ್ಯಾಯ ಭಾರತದಲ್ಲಿ ಬೇರಾವ ರಾಜ್ಯಗಳಿಗೂ ಆಗಿಲ್ಲ. ಕರ್ನಾಟಕ ಏಕೀಕರಣ ಚಳುವಳಿಯ ಕಾಲದಲ್ಲಿ ಕನ್ನಡಿಗರಲ್ಲಿಯೇ ಪರ ಮತ್ತು ವಿರೋಧ ಪಕ್ಷಗಳು ಹುಟ್ಟಿಕೊಳ್ಳುತ್ತವೆ. ವಾಸ್ತವವಾಗಿ ಅವೆರಡೂ ಜಾತೀಯ ಪಕ್ಷಗಳು. ಏಕೀಕರಣವಾದರೆ ತಮ್ಮ ಕೈ ಮಿಗಿಲಾಗಿ, ತಮ್ಮವರೇ ಸೂರ್ಯಚಂದ್ರರಿರುವ ತನಕ ಮುಖ್ಯ ಮಂತ್ರಿಗಳಾಗಿ ರಾಜ್ಯವಾಳಬಹುದೆಂಬ ಆನಂದ ಲಿಂಗಾಯತರದಾದರೆ, ಮೈಸೂರು ಪ್ರತ್ಯೇಕವಾಗುಳಿದರೆ ತಮ್ಮವರೇ ಮುಖ್ಯ ಮಂತ್ರಿಗಳಾಗಿ ಭೂಮಿ ಇರುವತನಕ ರಾಜ್ಯವಾಳಬಹುದೆಂಬ ಹಂಬಲವೂ, ಏಕೀಕರಣದ ನಂತರ ತಮ್ಮವರು ಲಿಂಗಾಯತರಿಗೆ ಅಡಿಯಾಳಾಗಿರಬೇಕಾದ ಸಂದರ್ಭವೊದಗಬಹುದೆಂಬ ಭಯವೂ ಒಕ್ಕಲಿಗರದಾಗುತ್ತದೆ. ಏಕೀಕರಣದ ನಂತರ ಮುಖ್ಯಮಂತ್ರಿಸ್ಥಾನವನ್ನಲಂಕರಿಸಿದ ಮೊದಲ ಮೂವರು ಮಹನೀಯರು ಲಿಂಗಾಯತರೆಂಬ ಸಂಗತಿಯಿಂದ ಆ ಎರಡು ಜಾತಿಗಳ ಆನಂದ ಭಯಗಳು ನಿರಾಧಾರವಾದುವಲ್ಲವೆಂಬುದು ಸಾಬೀತಾಗುತ್ತದೆ. ನಿಜಲಿಂಗಪ್ಪನವರು ಜಾತ್ಯಂಧರಲ್ಲವೆಂಬ ಕಾರಣಕ್ಕಾಗಿ ಅವರನ್ನು ಕೆಳಗಿಳಿಸಲು ಲಿಂಗಾಯತರೆ ಪ್ರಯತ್ನಿಸಿದ ಸಂದರ್ಭದಲ್ಲಿ ತುಮಕೂರಿನ ಸುಬ್ರಮಣ್ಯಂ ಅವರ ಹೆಸರು ಮುಖ್ಯಮಂತ್ರಿಸ್ಥಾನಕ್ಕೆ ಸೂಚಿತವಾದಾಗ ನಡೆದ ಘಟನೆಗಳು ಅನೇಕರಿಗೆ ನೆನಪಿರಬಹುದು. ಆಮೇಲಾದರೂ ಬಹು ಪ್ರಬಲರಾಗಿದ್ದ ಉದಾರ ದೃಷ್ಟಿಯ ನಿಜಲಿಂಗಪ್ಪನವರಿಗೆ ಒಕ್ಕಲಿಗ ಮುಖಂಡರ ಹೆಸರು ನೆನಪಿಗೆ ಬರದಿದ್ದುದು

ಆಶ್ಚರ್ಯಕರ ರಹಸ್ಯ ಸಂಗತಿಯಾಗಿದೆ. ಅದಕ್ಕೆ ಅವರು ಪರಿಸರದ ಕೂಸಾಗಿದ್ದುದೇ ಕಾರಣವಾಗಿರಬೇಕು. ರಾಜ್ಯಗಳು ಚಿಕ್ಕವಾಗಿದ್ದರೆ ಆಡಳಿತ ಸುಸೂತ್ರವಾಗಿ ನಡೆಯುತ್ತದೆ. ಅಭಿವೃದ್ಧಿ ಸಮಸಮವಾಗಿ ಶೀಘ್ರವಾಗಿ ಕೈಗೂಡತ್ತದೆಂಬ ಕಾರಣಕ್ಕಾಗಿ ದ್ವಿಕರ್ನಾಟಕವಾದವನೆತ್ತಿ ಹಿಡಿದು ಮೈಸೂರಿನ ಅಸ್ತಿತ್ವವುಳಿಯಬೇಕೆಂದು ಸಾಕಷ್ಟು ಜಾಣ್ಮೆಯನ್ನು ತೋರಿದ ಡಿ. ವಿ. ಗುಂಡಪ್ಪನವರ ವಿಚಾರಧಾರೆ ಅಂದಿನ ಪರಿಸ್ಥಿತಿಯಲ್ಲಿ ಯಾರ ಮನ್ನಣೆಯನ್ನೂ ಪಡೆಯದೆ ಅರಣ್ಯರೋದನವಾದದ್ದು ಆಶ್ಚರ್ಯವಲ್ಲ. ಅವೆರಡು ಜಾತಿಗಳ ಕಚ್ಚಾಟದಿಂದಾಗಿ ಹಲವು ಕನ್ನಡ ಪ್ರದೇಶಗಳನ್ನು ಕನ್ನಡನಾಡು ಕಳೆದುಕೊಳ್ಳ ಬೇಕಾಗುತ್ತದೆಂಬುದನ್ನು, ಅಲ್ಪಸಂಖ್ಯಾತರು ಸಾಮಾನ್ಯವಾಗಿ ಈ ಗೊಟಾಳೆಯಲ್ಲಿ ತಟಸ್ಥರಾಗಿದ್ದರೆಂಬುದನ್ನು ಮರೆಯುವಂತಿಲ್ಲ. ಲಿಂಗಾಯತರು ಮತ್ತು ಒಕ್ಕಲಿಗರು ಸ್ವಾರ್ಥಪರರಾದರೇ ಹೊರತು, ವಾಸ್ತವವಾದಿಗಳಾಗಲಿಲ್ಲವೆಂಬ ಕಠೋರ ಸತ್ಯವನ್ನು ಅವರಿಗೆ ಮನಗಾಣಿಸಿ, ಆ ಎರಡು ಜಾತಿಗಳಿಗೂ ಅದರದರ ಸ್ಥಾನವನ್ನು ತೋರಿಸಿ ಕೊಟ್ಟು, ಅವೆರಡು ಎಂದೂ ಒಂದಾಗುವುದಿಲ್ಲವೆಂಬ ಯಥಾರ್ಥತೆಯನ್ನು ಜಗತ್ತಿಗೇ ಪ್ರಕಟಪಡಿಸಿದ ಕೀರ್ತಿ ದೂರ ದೃಷ್ಟಿಯ ಮಹಾ ಚತುರ ವಾಸ್ತವವಾದಿ, ರಾಜಕಾರಣ ಪಟು ಡಿ. ದೇವರಾಜ ಅರಸರಿಗೆ ಸಲ್ಲಬೇಕು.

ಕೆಲವೇ ಕೆಲವು ಮಂದಿ ಒಕ್ಕಲಿಗರನ್ನು ಬಿಟ್ಟರೆ-ಅವರಲ್ಲಿ ಕೆಲವರು ಸಾಹಿತಿಗಳು, ಕೆಲವರು ತಟಸ್ಥರು-ಉಳಿದ ಮುಖಂಡರೆಲ್ಲ ಏಕೀಕರಣವನ್ನು ಉಗ್ರವಾಗಿ ವಿರೋಧಿ ಸುತ್ತಾರೆ. ಮಹಾಕವಿ ಮಹಾಪ್ರವಾದಿ ಕುವೆಂಪು ಅವರ ಎಚ್ಚರಿಕೆಯಿಂದಲೂ ಅವರಿಗೆ ಜ್ಞಾನೋದಯವಾಗುವುದಿಲ್ಲ. ವೀರಣ್ಣಗೌಡ, ಜವರಪ್ಪಗೌಡ ಮೊದಲಾದವರು ನೆಹರೂ, ರಾಜೇಂದ್ರ ಪ್ರಸಾದ್ ಮತ್ತು ವಲ್ಲಭಭಾಯಿ ಪಟೇಲರನ್ನು ಕಂಡು, ಮೈಸೂರನ್ನು ಹಾಗೆಯೇ ಉಳಿಸಿಕೊಡಬೇಕೆಂದು ಪ್ರಾರ್ಥಿಸುತ್ತಾರೆ. ಆ ನಾಯಕರು ಒಂದು ಸಂದರ್ಭದಲ್ಲಿ ಅವರಿಗೆ ಆಶ್ವಾಸನೆ ನೀಡಿ, ಅವರನ್ನು ಹರಿದುಂಬಿಸಿದ್ದೂ ಉಂಟು. ಅವರ ಆಶ್ವಾಸನೆಯ ಹಿಂದಿದ್ದ ರಾಜಕಾರಣ ಈ ಮುಖಂಡರಿಗೆ ಅರ್ಥ ವಾದಂತಿಲ್ಲ. 'ಕರ್ನಾಟಕದ ಏಕೀಕರಣವಾದರೆ ಮೈಸೂರು ದೇಶದಲ್ಲಿ ಅಗಾಧ ಪ್ರಮಾಣದ ಅಭಿವೃದ್ಧಿಕಾರ್ಯ ಕುಂಠಿತವಾಗಿ ಹೊಸದಾಗಿ ಸೇರಿದ ಕರ್ನಾಟಕದ ಭಾಗ ಗಳಲ್ಲಿ ವಿದ್ಯಾಭ್ಯಾಸ ರಸ್ತೆನಿರ್ಮಾಣ ಮುಂತಾದ ಅನೇಕ ಅಭಿವೃದ್ಧಿ ಕಾರ್ಯಗಳು ಹತ್ತಾರು ವರ್ಷಗಳಾದರೂ ನಡೆದು, ಅವು ಮೈಸೂರಿನ ಸಮಕ್ಕೆ ಬರಬೇಕಾದರೆ, ಮೈಸೂರಿನ ಅಭಿವೃದ್ಧಿ ಕಾರ್ಯಗಳು ಹತ್ತಾರು ವರ್ಷಗಳಾದರೂ ನಿಂತು ಹೋಗುತ್ತ' ದೆಂಬುದೇ ಏಕೀಕರಣ ವಿರೋಧಿಗಳ ಅಭಿಪ್ರಾಯ. 1956ನೆಯ ಜನವರಿ ಒಂದರಂದು ಏಕೀಕರಣವನ್ನು ವಿರೋಧಿಸುವ ಸಭೆಯೊಂದನ್ನು ಮಂಡ್ಯದಲ್ಲಿ ಸೇರಿಸಬೇಕೆಂದು ವೀರಣ್ಣಗೌಡರಾದಿ ಮುಖಂಡರು ಆಲೋಚಿಸುತ್ತಾರೆ ; ಸಭೆಯ ವ್ಯವಸ್ಥೆಯ ಜವಾಬ್ದಾರಿಯನ್ನು ಶಂಕರಗೌಡರಿಗೆ ವಹಿಸುತ್ತಾರೆ. ಸಭೆಯ ಅಧ್ಯಕ್ಷತೆಗೆ ಕೆ. ಲಕ್ಕಪ್ಪ

ಗೌಡರನ್ನು ಆರಿಸಿಕೊಳ್ಳುತ್ತಾರೆ. ಅದ್ದೂರಿಯಿಂದ ನಡೆದ ಆ ಸಭೆಯಲ್ಲಿ ಹದಿನೈದು ಸಾವಿರ ಮಂದಿ ಪ್ರತಿನಿಧಿಗಳು ಭಾಗವಹಿಸುತ್ತಾರೆ. ಹಳೆಯ ಮೈಸೂರಿಗೆ ಸತ್ಯಮಂಗಲ ಕೊಳ್ಳೇಗಾಲ, ಮಂಗಳೂರು ಮತ್ತು ಕೊಡಗು ಪ್ರಾಂತ್ಯಗಳನ್ನು ಸೇರಿಸಿಕೊಂಡು ಮೈಸೂರು ರಾಜ್ಯವಾಗಬೇಕೆಂದೂ, ಉಳಿದ ಪ್ರಾಂತಗಳು ಕರ್ನಾಟಕ ಎಂಬ ಹೆಸರಿನಿಂದ ಒಟ್ಟಾಗಿ ಬೇರೆ ಸರ್ಕಾರವನ್ನು ಸ್ಥಾಪಿಸಿಕೊಳ್ಳಬೇಕೆಂದೂ ಆ ಬೃಹತ್ಸಭೆಯಲ್ಲಿ ನಿರ್ಣಯವೊಂದು ಅಂಗೀಕಾರವಾಗುತ್ತದೆ.

ಆ ಹೊತ್ತಿಗಾಗಲೇ ಪ್ರಾಂತ ವಿಂಗಡಣಾ ಸಮಿತಿಯ ವರದಿ ಪರಿಶೀಲನೆಗಾಗಿ ಕೇಂದ್ರ ಸರ್ಕಾರದ ಮುಂದೆ ಬರುತ್ತದೆ. ಏಕೀಕೃತ ಕರ್ನಾಟಕಕ್ಕೆ ಮಾತ್ರ ಆ ವರದಿಯಲ್ಲಿ ಸರ್ವ ಪುರಸ್ಕಾರ. ಮುಖ್ಯ ಮಂತ್ರಿ ಪದವಿಯ ಮೇಲೆ ಕಣ್ಣಿಟ್ಟುಕೊಂಡಿದ್ದ ಎಸ್. ಚನ್ನಯ್ಯನವರು ಆಗಿನ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು. ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಹನುಮಂತಯ್ಯನವರು ಸನ್ನಾಹ ನಡೆಸುತ್ತಾರೆ. 'ಮೊದ ಮೊದಲು ಏಕೀಕರಣವನ್ನು ವಿರೋಧಿಸಿ ನನ್ನೊಡನೆ ಮಾತನಾಡುತ್ತಿದ್ದ ಶ್ರೀ ಚನ್ನಯ್ಯನವರು ಕೇಂದ್ರ ನಾಯಕರ ಮೆಚ್ಚಿಗೆ ಪಡೆಯಲು ಏಕೀಕರಣಕ್ಕೆ ಬೆಂಬಲ ಕೊಟ್ಟರೆ ತಮ್ಮ ಸ್ಥಾನಮಾನಗಳು ಹೆಚ್ಚುವುದೆಂಬ ಸ್ವಾರ್ಥ ದೃಷ್ಟಿಯಿಂದ ಏಕೀಕರಣಕ್ಕೆ ಬೆಂಬಲಕೊಟ್ಟರು' ಎಂದು ಹನುಮಂತಯ್ಯನವರು ನುಡಿಯುತ್ತಾರೆ. 'ಏಕೀಕರಣ ವಿರೋಧಿ ಮಹಾಸಭೆಯ ಅಧ್ಯಕ್ಷರಾಗಿದ್ದ ಶ್ರೀ ಲಕ್ಕಪ್ಪನವರೇ ಪತ್ರಿಕೆಗಳಿಗೆ ಒಂದು ಹೇಳಿಕೆಯನ್ನು ಒಂದೆರಡು ವಾರಗಳೊಳಗಾಗಿ ನೀಡಿ, ದೇಶದ ಹಿತದೃಷ್ಟಿಯಿಂದ ಕರ್ನಾಟಕ ಏಕೀಕರಣ ಆಗಲೇ ಬೇಕೆಂದೂ. ಅದನ್ನು ತಪ್ಪಿಸಲು ಮಾಡುವ ಪ್ರಯತ್ನ ಒಳ್ಳೆಯದಲ್ಲವೆಂದು ಅರ್ಥ ಬರುವ ಹೇಳಿಕೆ ಕೊಟ್ಟರು. ಹೀಗೆ ಅನೇಕ ಮಿತ್ರರು ನಡೆಸಿದ ಕುಟಿಲೋಪಾಯಗಳಿಂದ ಮೈಸೂರಿನ ಬಹು ಸಂಖ್ಯಾತರು ಕರ್ನಾಟಕ ಏಕೀಕರಣ ವಿರೋಧಿಗಳಾಗಿದ್ದಾರೆಂಬ ಅಂಶವು ಪ್ರಚಾರವಾಗಲು ಸಾಧ್ಯವಾಗಲಿಲ್ಲ. ಎಂಬ ವೀರಣ್ಣಗೌಡರ ಮಾತಿನಲ್ಲಿ ಆಗಿನ ಒಕ್ಕಲಿಗ ಮುಖಂಡರ ಮನಸ್ಸಿನ ತುಮುಲ ಅಭಿವ್ಯಕ್ತವಾಗುತ್ತದೆ. ಏಕೀಕರಣದ ಪರವಾಗಿ ಬೆಂಬಲ ನೀಡುವಲ್ಲಿ ಹನುಮಂತಯ್ಯ ಚನ್ನಯ್ಯರ ನಡುವೆ ಮೇಲಾಟ ಪ್ರಾರಂಭವಾಗುತ್ತದೆ. ಈ ಮೇಲಾಟದ ಪರಿಣಾಮವಾಗಿ ಶಂಕರಗೌಡರ ಮನಸ್ಸು ಜಿಗುಪ್ಸೆಯಿಂದ ಬೇಯುತ್ತದೆ. ನಿಜಲಿಂಗಪ್ಪನವರೆಂತೋ ಅಂತೆಯೇ ಅವರೂ ಜಾತಿವಾದಿಯಲ್ಲ. ಜಾತಿವಾದಿಗಳನ್ನು ಕಂಡರೆ ಅವರು ವ್ಯಗ್ರರಾಗುತ್ತಾರೆ, ಉಗ್ರರಾಗುತ್ತಾರೆ. ವಾಸ್ತವವಾಗಿ ಅವರು ಏಕೀಕರಣ ವಿರೋಧಿಯಲ್ಲ, ಸುಮಾರು ಒಂದು ಕೋಟಿ ಜನಸಂಖ್ಯೆಗೊಂದು ಪ್ರಾಂತ್ಯವಿರಬೇಕೆಂಬುದು ಅವರ ಖಚಿತ ಮತ. ಆಡಳಿತದ ದೃಷ್ಟಿಯಿಂದ, ಆರ್ಥಿಕಾಭಿವೃದ್ಧಿಯ ದೃಷ್ಟಿಯಿಂದ ಉತ್ತರ ಪ್ರದೇಶವೇ ಮೊದಲಾದ ದೊಡ್ಡ ಪ್ರಾಂತಗಳನ್ನು ಸಣ್ಣದಾಗಿ ವಿಭಜಿಸಬೇಕೆಂದು ಅವರು ವಾದಿಸುತ್ತಾರೆ.''

ದೆಹಲಿ ಈ ನಿಯೋಗದ ವಾರ್ತಾ ಪ್ರತಿನಿಧಿಯಾಗಿ ಕೆಲಸ ಮಾಡಿ ದಿನವೂ ದೆಹಲಿ

ಮತ್ತು ಬೆಂಗಳೂರಿನ ಪತ್ರಿಕೆಗಳಿಗೆ ಸುದ್ದಿಗಳನ್ನು ತಂತಿ ಮೂಲಕ ರವಾನಿಸುತ್ತಿದ್ದೆ. ಈ ವೆಚ್ಚವನ್ನು ನಾನೇ ಸ್ವತಃ ಭರಿಸಿದೆ. ನಿಯೋಗದವರು ಈ ಖರ್ಚುವೆಚ್ಚಕ್ಕೆ ಬಿಡಿ ಕಾಸು ಬಿಚ್ಚಲಿಲ್ಲ

ನಿಯೋಗದ ಸದಸ್ಯರಿಗೆ ದೆಹಲಿ ವಾಸ್ತವ್ಯ ಮತ್ತು ದೆಹಲಿ, ಬೆಂಗಳೂರು ಪ್ರಮಾಣ ವೆಚ್ಚಕ್ಕೆ ರೇಷ್ಮೆ ವ್ಯಾಪಾರಿಗಳ ಸಂಘದ ಕಬ್ಬನ್ ಪೇಟೆ ಅರಸಪ್ಪನವರು ಹಣ ಕೊಟ್ಟಿದ್ದಾರೆಂದು ಶಾಸಕರಾಗಿದ್ದ ಬಿ. ಎಂ. ಸೀನಪ್ಪನವರು ತಿಳಿಸಿದರು. ಅದೇಕೆ ನಿಮಗೆ ಖರ್ಚುವೆಚ್ಚಕ್ಕೆ ಹಣ ನೀಡುತ್ತಿಲ್ಲ ಕೇಳಿ ಎಂದು ತಿಳಿಸಿದರು. ನಾನು ಕೇಳಲಿಕ್ಕೆ ಹೋಗಲಿಲ್ಲ.

ನಾನು ಮಂಡ್ಯದಿಂದ ಬರುವಾಗ ನನ್ನ ಸಂಬಂಧಿಯಿಂದ ಸಾವಿರ ರೂಪಾಯಿ ಸಾಲ ಪಡೆದು ಬಂದಿದ್ದು ರೈಲ್ವೆ ಖರ್ಚು ಮತ್ತಿತರ ವಾರ್ತಾ ಖರ್ಚು ಭರಿಸಿದೆ. ಊಟೋಪಚಾರ ಮತ್ತು ವಸತಿ ಸೌಲಭ್ಯವನ್ನು ಎಂ. ಕೆ. ಶಿವನಂಜಪ್ಪನವರು ನಿರ್ವಹಿಸಿದರು.

೩

1956ರಲ್ಲಿ ಮಂಡ್ಯದಲ್ಲಿ ನಡೆದ "ಮೈಸೂರು ವಿಲೀನ ವಿರೋಧ" ಸಮ್ಮೇಳನದ ಅರ್ಥಾತ್ ಕರ್ನಾಟಕ ಏಕೀಕರಣ ಚಳುವಳಿ ನಂತರ ಬಂದ ಮಂತ್ರಿಮಂಡಲ ಮಂಡ್ಯ ರೈತರ ತೋಳು ಬಲ ಕುಗ್ಗಿಸದಿದ್ದರೆ ಮುಂದೆ ಬರುವ ಮಂತ್ರಿಮಂಡಳಿಗಳಿಗೆ ಸದಾ ತಲೆ ನೋವು ತರುತ್ತಾರೆಂದು ಕೆಲವರು ನಡೆಸಿದ ಒಳಸಂಚು ವರುಣಾ ನಾಲಾಯೋಜನೆ. ವರುಣ ನಾಲೆಗೂ ಕಬಿನಿ ಜಲಾಶಯಕ್ಕೂ ನೀರ ಸಂಬಂಧವಿಲ್ಲದಿದ್ದರು ಜನಕ್ಕೆ ಮತ್ತು ವಿಧಾನ ಸಭಾ ಸದಸ್ಯರಿಗೆ ಗೊತ್ತಾಗದಿರಲೆಂದು ಕಬಿನಿ ಜಲಾಶಯ ಬಡ್ಜೆಟ್‌ಗೆ ಒಳ ಪಡಿಸಿದರು. ಈ ವಿಚಾರ ಹೇಗೋ ಮಂಡ್ಯ ರೈತ ಮುಖಂಡರಿಗೆ ಗೊತ್ತಾಯಿತು. ಎಲ್ಲ ರಾಜಕೀಯ ಪಕ್ಷಗಳ ಮುಖಂಡರ ಸಭೆ ಕರೆಯಲಾಯಿತು. ಎಚ್. ಕೆ. ವೀರಣ್ಣ ಗೌಡರು, ಕೆ. ವಿ. ಶಂಕರಗೌಡರು. ಮುಂತಾದ ಮುಖಂಡರು ಹೋರಾಟದ ಕಣ ಕ್ಕಿಳಿದರು. ಈ ಹೋರಾಟದಿಂದ ಜಿ. ಮಾದೇಗೌಡರು ಮತ್ತು ಎಚ್. ಡಿ. ಚೌಡಯ್ಯ ನವರು ಮಂಡ್ಯ ನಾಲಾ ಬಯಲ ರೈತರಿಗೆ ಪ್ರಾತಃ ಸ್ಮರಣೀಯರಾದರು. ಮೈಸೂರು ಬೆಂಗಳೂರು ಹೆದ್ದಾರಿಗಳನ್ನು ರೈತರು ಮುಚ್ಚಿ ಯಾವುದೇ ವಾಹನ ಓಡಾಡದಂತೆ ತಡೆಗಟ್ಟಿದರು.

ಪತ್ರಕರ್ತನಾದ ನಾನು ಮತ್ತು ಇತರರು ಅವಿರತವಾಗಿ ಸುದ್ದಿಗಳನ್ನು ವಾರ್ತಾ ಪತ್ರಿಕೆಗಳಿಗೆ ದಿನವೂ ತಂತಿ ಮೂಲಕ ಕಳುಹಿಸಿ ಸಾಕಷ್ಟು ಪ್ರಚಾರ ನೀಡಿದೆವು. ಪತ್ರಿ ಕಾಲಯದವರು ಅಷ್ಟೆ ಮಿತಿ ಮೀರಿ ಈ ಚಳುವಳಿಗೆ ನೀಡಿದ ಪ್ರಚಾರ ರೈತರಿಗೆ ಮುಂದಿನ ಒಪ್ಪಂದದ ದಿನಗಳಿಗೆ ಅನುಕೂಲವಾಯಿತು. "ಬೆಂಗಳೂರು ಚಲೋ" ಚಳುವಳಿಯಲ್ಲಿ ರೈತರು ತಾವು ತಮ್ಮ ಬುತ್ತಿಯನ್ನು ತಂದಿದ್ದು ನೂರಾರು ಲಾರಿಗಳು, ಕಾರುಗಳು, ಸ್ಕೂಟರುಗಳಲ್ಲಿ ಸುಮಾರು 35 ಸಾವಿರಕ್ಕು ಹೆಚ್ಚು ರೈತರು 10 ಮೈಲುದ್ದದ ಮೆರವಣಿಗೆಯಲ್ಲಿ ಬೆಂಗಳೂರಿನ ಕಬ್ಬನ್ ಪಾರ್ಕ್ ಸೇರಿದರು. ಮುಖ್ಯ ಮಂತ್ರಿ ದೇವರಾಜ ಅರಸು ಅವರು ರೈತರನ್ನು ಭೇಟಿಮಾಡಿ ನಿಮಗೆ ನೀರಿನ ಸಮಸ್ಯೆ ಎಳ್ಳಷ್ಟು ತೊಂದರೆ ಆಗದಂತೆ ನೋಡಿಕೊಳ್ಳುವೆ ಎಂಬ ಭರವಸೆ ನೀಡಿದರು.

ಏನೇ ಆದರೂ ಎಷ್ಟೇ ಕಷ್ಟ ನಷ್ಟಗಳಾದರು ಏಕೀಕರಣ ಆಗಲು ಬಿಡಬಾರದು ಎಂಬುದು ದಿವಂಗತ ಎಚ್. ಕೆ. ವೀರಣ್ಣಗೌಡರ ಹಠ. ಅವರ ಹಟಕ್ಕೆ ತಕ್ಕ ಛಲಗಾರ ನಾಗಿ ನಾನು ನಿಂತೆ. ಜನರ ಸಂಘಟನೆ ಮಾಡಿದೆ. ನಮ್ಮ ಜೊತೆಗೆ ಮಾಜಿ ಸಚಿವ ಎನ್. ಹುಚ್ಚಮಾಸ್ತಿಗೌಡರು ಇಂದಿನ ವಿಧಾನ ಪರಿಷತ್ ಸದಸ್ಯರಾದ ಶ್ರೀ ಎ. ರಾಮಣ್ಣ ಬೆಂಬಲಕ್ಕೆ ನಿಂತರು. ಹಳೆ ಮೈಸೂರಿನ ಎಂಟು ಜಿಲ್ಲೆಗಳ ಪ್ರವಾಸ ಮಾಡಿ

ದರು. ಎಲ್ಲಾ ರಾಜಕೀಯ ಪಕ್ಷಗಳ ಪ್ರಮುಖರು ಅಧಿವೇಶನಕ್ಕೆ ಬರುವಂತೆ ಆಹ್ವಾನಿಸಿದರು. ಬೆಂಗಳೂರಿನ ಪತ್ರಿಕೆಗಳು ಸಾಕಷ್ಟು ಪ್ರಚಾರ ಕೊಡುವುದಿರಲಿ. ನಮ್ಮ ಕಾರ್ಯಕ್ರಮಗಳನ್ನು ಧಿಕ್ಕರಿಸಿ ವಿರೋಧ ಮಾಡಲು ಆರಂಭಿಸಿದುವು. ಇದಂತೂ ನನಗೆ ಸೈರಣೆಯಾಗಲಿಲ್ಲ. "ದೀನರ ಸೇವೆ ನೀನು ಮಾಡು, ನಿನ್ನ ಸೇವೆ ದೇವರು ಮಾಡುತ್ತಾನೆ" ಎನ್ನುವ ಗಾಂಧೀಜಿ ಮಾತಿನ ಭರವಸೆಯಂತೆ "ವಿಶ್ವಾಮಿತ್ರ" ಅಭಿಧಾನದಿಂದ ವಾರಪತ್ರಿಕೆ ಆರಂಭಿಸಲು ಬೆಂಗಳೂರಿಗೆ ಹೋದೆ. ಏಕೀಕರಣ ವಿರೋಧಿ ಎಂಬ ಹೆಸರು ಸಾಕಷ್ಟು ಬೆಂಗಳೂರಿನ ಮುದ್ರಣಾಲಯದವರಿಗೆ ಪರಿಚಯವಾಗಿತ್ತು. ನನ್ನ ಹೆಸರು ಯಾರೂ ಮುದ್ರಿಸಲು ಮುಂದಾಗಲಿಲ್ಲ. ನಾನೇ ಸ್ವತಃ ಪತ್ರಿಕೆಅಚ್ಚುಮಾಡಿ ಪ್ರಕಾಶಿಸಲು ಯೋಚಿಸಿದೆ. ನನ್ನ ಗದ್ದೆಯನ್ನು 15 ಸಾವಿರ ರೂಪಾಯಿಗಳಿಗೆ ಮಾರಾಟ ಮಾಡಿದೆ. ಚಿಕ್ಕದಾದ ಪ್ರೆಸ್ ಆರಂಭಿಸಿದೆ. ನನ್ನ ಪತ್ನಿ ಶ್ರೀಮತಿ ಪಾರ್ವತಮ್ಮನು ಛಲಮಾಡಿ ದ್ವೀರಿ ಕೈಗೆಟಗುವ ತನಕ ಹೋರಾಡಿ, ವಿಮುಖರಾಗಬೇಡಿ. ಜನರು ನಿಮ್ಮನ್ನು ಹೇಡಿಯೆಂದಾರು ಮುಂತಾಗಿ ಮುನ್ನುಗ್ಗಲು ಪ್ರೇರಕಳಾದಳು. ಗದ್ದೆಮಾರಾಟದ ಬಗ್ಗೆ ವಿದುರಾಡಲಿಲ್ಲ. "ವಿಶ್ವಾಮಿತ್ರ" ಎಂಬ ಹೆಸರಿನಿಂದ ವಾರಪತ್ರಿಕೆ ಮತ್ತು "ವಿಶ್ವಾಮಿತ್ರ" ಮುದ್ರಣಾಲಯ ಡಿಕ್ಲೇರ್ ಮಾಡಿ ಪತ್ರಿಕೆಯನ್ನು ಫುಲ್‌ಸ್ಕೇಪ್ 10 ಪುಟಗಳಲ್ಲಿ ಪ್ರಮುಖರ ಭಾವಚಿತ್ರಗಳೊಡನೆ ಪ್ರಕಟಿಸಿದೆ. ಬೆಲೆ ಆಗಿನ 2 ಆಣೆ ಈಗಿನ 12 ಪೈಸಯಂತೆ. ಮೊದಲ ಸಂಚಿಕೆ 15 ಸಾವಿರ ಅಚ್ಚಾಯಿತು. ಸಮ್ಮೇಳನದಂದು ಅರ್ಧ ಘಂಟೆಯೊಳಗೆ 15 ಸಾವಿರ ಪ್ರತಿ ಖರ್ಚಾಯಿತು.

ಕೆ. ವಿ ಶಂಕರಗೌಡರು "ಜನಮನ" ವಾರ ಪತ್ರಿಕೆ ಪ್ರಕಟಿಸಲು ಆರಂಭಿಸಿದರು. ಎ. ಸಿ. ಮಾದೇಗೌಡರು 'ಜನ ಜೀವನ' ಪತ್ರಿಕೆ ಆರಂಭಿಸಿದರು. ಈ ಕಡೆಯಿಂದ ಎಳ್ಳಷ್ಟು ಸಹಾಯ ಬರಲಿಲ್ಲ. ಬರುತ್ತಿದ್ದುದು ಮಂಜಿನಂತೆ ಕರಗಿತು. ಆದರು ಧೈರ್ಯಗೆಡದೆ ಪತ್ರಿಕೆ ನಡೆ ಮುಂದೆ ಸಾಗಿತು. ಸಹಸ್ರಾರು ಜನ ಬೆಂಬಲಿಸಿ ನಿಂತಿದ್ದ ಪತ್ರಿಕೆಯನ್ನು ಬರುಬರುತ್ತ ಓದುವವರು ಸಿಗಲಿಲ್ಲ. ಬೆಂಗಳೂರಿನ ಕೆಲವು ಸ್ಟಾಲುಗಳವರು ಪತ್ರಿಕೆ ಮಾರಾಟ ಮಾಡಲು ಮುದ್ರಣಾಲಯಕ್ಕೆ ಬಂದು ತೆಗೆದುಕೊಂಡು ಹೋಗುತ್ತಿದ್ದುದು ತಪ್ಪಿತು. ನಾವಾಗೇ ಹೋದರು ಬೇಡಿಯಪ್ಪ ಖರ್ಚಾಗದು ಎಂದು ಮುಖ ತಿರುಗಿಸುವ ಸ್ಥಿತಿಗೆ ಬಂದಿತು.

ಇತ್ತ ಸಂಸಾರವನ್ನು ಬೆಂಗಳೂರಿಗೆ ವರ್ಗಾಯಿಸಿದೆ. ನನ್ನ ಕನಸಿನ ರಾಜ್ಯದಲ್ಲಿ ಪ್ರಜಾಮತದಂತೆ ನನ್ನ ಪತ್ರಿಕೆ ಬೆಳೆಯುತ್ತದೆ. ದೊಡ್ಡ ಮುದ್ರಣಾಲಯ ಮಾಡಬೇಕು. ಕಾರು ಕೊಳ್ಳಬೇಕು, ಹೆಂಡತಿ ಮಕ್ಕಳೊಡನೆ ಕಾರಿನಲ್ಲಿ ಓಡಾಟ ನಡೆಸಬೇಕು ಎನ್ನುವ ಮರೀಚಿಕೆಯ ಭ್ರಮೆ. ತಿನ್ನುವ ಅನ್ನ ಕಾಲಲ್ಲಿ ಒದ್ದು ಗದ್ದೆಮಾರಾಟ ಮಾಡಿದ ತಪ್ಪಿನ ಅರಿವಾಯಿತು. ನಾನು ಧೃತಿಗೆಟ್ಟರು ಪತ್ನಿ ವಿಮುಖಳಾಗಲಿಲ್ಲ.

ನನ್ನ ಭಾವಮೈದುನ ಕೃಷ್ಣ ಗಂಡುಗಲಿಯಂತೆ ಚಿಕ್ಕವನಾದರು ಸಂಸಾರದ

ನಿರ್ವಹಣೆಗೆ ಅಡಚಣೆಯಾಗದಂತೆ ಜಾಬ್ ಕೆಲಸವನ್ನು ಪ್ರೆಸ್ಸಿಗೆ ತಂದು ಅಷ್ಟಿಷ್ಟು ಸಂಪಾದನೆ ಮಾಡುತ್ತ, ಮನೆಯಲ್ಲಿ ಮಕ್ಕಳಿಗೆಲ್ಲ ಪ್ರೆಸ್ಸಿನ ಬಿಡಿಕೆಲಸ, ಫೋಲ್ಡಿಂಗ್ ಇಂಪೋಸಿಂಗ್, ಬಾಟ್ಕಿನ್, ನಂಬರಿಂಗ್, ಪರ್ಪರೋಟಿಂಗ್, ಬೈಂಡಿಂಗ್ ಕೆಲಸದಲ್ಲಿ ತರಬೇತಿ ನೀಡಿ ಸಂಸಾರಕ್ಕೆ ಇಣಕು ನೋಟ ಹಾಕುತ್ತಿದ್ದ ದರಿದ್ರಮ್ಮನನ್ನು ವಿಮುಖ ಮಾಡಿದ. ಇದಾದ ಮೇಲೆ ಇಂದಿಗೂ ಪ್ರೆಸ್ ಉದ್ಯಮವೇ ಕಸುಬಾಗಿ ನಾವು ಉಂಡು ಬಂದವರಿಗೆ ತುತ್ತು ಅನ್ನ ಕೊಡುವ ಸ್ಥಿತಿಯಲ್ಲಿದ್ದೇವೆ.

ಜನತಾ ಸೇವೆಯೆ ಜನಾರ್ದನನ ಪೂಜೆ ಎಂದು ಗಾಂಧೀಜಿ ಹೇಳಿರುವುದು ಅಕ್ಷರಶಹ ನನ್ನ ಜೀವನದಲ್ಲಿ ನಿಜವಾಯಿತು. ಕೇಂದ್ರದಲ್ಲಿ ಪ್ರಾಂತ ಪುನರ್‌ವಿಂಗಡಣಾ ಕಮಿಷನ್ ಕೊಟ್ಟ ವರದಿಯಂತೆ ಪ್ರಾಂತಗಳ ವಿಂಗಡಣೆ ಆಗಲಿದೆ ಎಂಬ ವದಂತಿಗೆ ರಾಜಕಾರಿಣಿಗಳು ಬೆಕ್ಕಸ ಬೆರಗಾದರು. ''ವಿಶ್ವಾಮಿತ್ರ'' ನನ್ನು ಕೈಸಲ್ಲಿ ಕಂಡರೆ ಲಿಂಗಾಯಿತರು ಏನು ಮಾಡಿ ಬಿಡುವರೋ ಎಂದು ಭಯ ಭೀತರಾದರು. ''ವಿಶ್ವಾಮಿತ್ರ'' ನನ್ನು ಓದು ವುದಿರಲಿ ಮುಟ್ಟಲೂ ಹೆದರಿ ದೂರ ಸರಿದರು.

ದಿವಂಗತರುಗಳಾದ ಕೆ. ಹನುಮಂತಯ್ಯನವರು ಮತ್ತು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ಸಾಹುಕಾರ್ ಚನ್ನಯ್ಯನವರು ತಾ ಮುಂದು ನಾ ಮುಂದು ಎಂದು ಏಕೀಕರಣ ಬೆಂಬಲಕ್ಕೆ ನಿಂತರು. ಪಾಪ ಹನುಮಂತಯ್ಯನವರ ಮುಖ್ಯಮಂತ್ರಿಸ್ಥಾನವನ್ನು ಏಕೀಕರಣದನಂತರ ನಾಲ್ಕೇ ತಿಂಗಳಲ್ಲಿ ಕಿತ್ತು ಬಿಸಾಡ ಲಾಯ್ತು. ಚನ್ನಯ್ಯನವರ ಜಾಗಕ್ಕೆ ದಿವಂಗತ ಸಿ.ಜಿ. ಅಂಬಲಿಯವರೋ ನಿಜಲಿಂಗಪ್ಪ ನವರೋ. ಚುನಾಯಿತ ಮಂತ್ರಿಗಳಾದ ದಿವಂಗತ ಕೆ. ಹನುಮಂತಯ್ಯನವರು ''ವಿಶ್ವಾ ಮಿತ್ರ'' ಪತ್ರಿಕೆಯನ್ನು ಪ್ರತಿಬಂಧಿಸಬೇಕು. ಕೋಮುವಾರು ಭಾವನೆ ಪ್ರಚೋದಿಸಿದೆ ಎಂಬ ಬೆದರಿಕೆ ಹಾಕಿ ವಿಧಾನ ಸಭೆಯಲ್ಲು ಪ್ರಸ್ತಾಪಿಸಿದರು. ಈ ಬೆದರಿಕೆಗೆ ''ವಿಶ್ವಾ ಮಿತ್ರ'' ಹೆದರುವುದಿಲ್ಲ. ಕೋಮುಭಾವನೆ ಬೆಳೆಸಲು ಹನುಮಂತಯ್ಯನವರ ಮಂತ್ರಿಮಂಡಲ ಎಸಗುತ್ತಿರುವ ಪಟ್ಟಿಯನ್ನು ಮುಂದೆ ಪ್ರಕಟಿಸುವುದಾಗಿ ತಿಳಿಸಿತು. ಅದರ ಹಿಂದೆ 8 ಸಾವಿರರೂಪಾಯಿ ಚಕ್ಕು ಯಾರದೋ ಹೆಸರಿನದು ಬಂತು. ಕೋಮು ಭಾವನೆಗೆ ಅವಕಾಶ ಕೊಡಬೇಡಿ. ಹೆಚ್ಚಿನ ಸಹಾಯ ಬೇಕಾದರೆ ಮಾಡೋಣ ಎಂದು ಕಾಗದದೊಡನೆ ಬಂತು. ತಪ್ಪೋ ಸರಿಯೋ ನಾನು ಚಕ್ಕನ್ನು ಮುಖ್ಯಮಂತ್ರಿ ಅವರನ್ನೆ ಭೇಟಿ ಮಾಡಿ ವಾಪಸು ಮಾಡಿದೆ. ಚಕ್ ನನ್ನದಲ್ಲ ಎಂದರು. ಯಾರದ್ದೊ ಇಟ್ಟುಕೊಳ್ಳಿ ಎಂದು ವಾಪಸಾದೆ.

ಈ ಮಧ್ಯೆ ರಾಷ್ಟ್ರಾಧ್ಯಕ್ಷರ ಪದಕ ಮತ್ತು ಪ್ರಶಸ್ತಿಗೆ ಪೋಲೀಸ್ ಇಲಾಖೆಯ ಕೇವಲ ಲಿಂಗಾಯಿತ ಕೋಮಿನ ಅಧಿಕಾರಿಗಳ ಹೆಸರು ಶಿಫಾರಸ್ಸು ಮಾಡಲಾಯ್ತು. ಪ್ರಕಟಣೆಯು ಹೊರಬಿತ್ತು. ಇದನ್ನು ''ವಿಶ್ವಾಮಿತ್ರ'' ಪತ್ರಿಕೆಯು ಸಿದ್ಧವೀರಪ್ಪ ನವರು ಲಿಂಗಾಯಿತರಾದ್ದರಿಂದ ಕೇವಲ ಲಿಂಗಾಯಿತ ಅಧಿಕಾರಿಗಳ ಹೆಸರನ್ನು ಮಾತ್ರ

ಶಿಫಾರಸ್ಸು ಮಾಡಿದ್ದಾರೆಂದು ತಿಳಿಸಿತು. ಪುನಃ ಒಕ್ಕಲಿಗ ಮತ್ತು ಇತರ ಕೋಮಿನ ಪೋಲೀಸ್ ಅಧಿಕಾರಿಗಳ ಹೆಸರುಗಳನ್ನು ಪದಕ ಮತ್ತು ಪ್ರಶಸ್ತಿಗೆ ಶಿಫಾರಸ್ಸು ಮಾಡಿದರು.

ಸಂಸಾರದಲ್ಲಿ ಮಕ್ಕಳು ಮೊಮ್ಮಕ್ಕಳು ಮಡದಿಯೊಡಗೂಡಿ ಸಾಹಿತ್ಯಾಧ್ಯಯನ ಹಾಗೂ ಪತ್ರಿಕೆಗಳಿಗೆ ಸ್ವತಂತ್ರ ಲೇಖಖ ಹಾಗೂ ಬಾತ್ಮೀದಾರನಾಗಿ (ಫ್ರೀಲ್ಯಾನ್ಸ್ ಜರ್ನಲಿಸ್ಟ್) ಲೇಖನ ಬರೆಯುತ್ತ ಕಾಲ ತಳ್ಳುತ್ತಿದ್ದೆ. ಇದರಜೊತೆಗೆ ಮಂಡ್ಯದಲ್ಲಾದ ನಾನಾ ಸುದ್ದಿಗಳ ಪೇಪರ್‌ಕಟಿಂಗ್ಸ್ ಸಂಗ್ರಹಿಸಿದ್ದೇನೆ. ಇವೆಲ್ಲವುಗಳನ್ನು ಸಂಪಾದಿಸಿ ಒಂದು ಪುಸ್ತಕ ತರುವ ಯೋಚನೆ ಸಹ ಇದೆ.

ಮಂಡ್ಯಜಿಲ್ಲೆಯಲ್ಲಾದ ನಾನಾ ಘಟನಾವಳಿಗಳಲ್ಲಿ ನನ್ನ ಇಣಕು ನೋಟ ಕುರಿತು ದೀರ್ಘವಾದ ಜೀವನ ಹೋರಾಟದ ಬಗ್ಗೆ ಪುಸ್ತಕ ತರಲು ಸ್ನೇಹಿತರನೇಕರು ತುಂಬಾ ಒತ್ತಾಯ ತರುತ್ತಿದ್ದಾರೆ ತರಬೇಕೆಂಬ ಬಯಕೆ ಇದೆ, ಆದರೆ ಭಗವದ್ ಕೃಪೆ ಪ್ರತಿಯೊಂದಕ್ಕೂ ಬೇಕಲ್ಲ.

1988ನೆಯ ಸಾಲಿನ ಪತ್ರಿಕಾ ಅಕಾಡೆಮಿ ರಾಜ್ಯ ಪ್ರಶಸ್ತಿಗೆ ಆಯ್ಕೆಯಾಗಿ ದಿನಾಂಕ 26–2–89ನೆಯ ಭಾನುವಾರ ಪ್ರಶಸ್ತಿಸ್ವೀಕಾರ ಮಾಡಿದೆ. ಪ್ರಶಸ್ತಿಗೆ ಆಯ್ಕೆಮಾಡಿದ ಪತ್ರಿಕಾ ಅಕಡೆಮಿಯನ್ನು ಅಭಿನಂದಿಸುತ್ತೇನೆ. ಹಾಗೂ ಪಡೆದ ಬಗ್ಗೆ ನೂರಾರು ಮಂದಿ ಹಿರಿಯರು, ಸ್ನೇಹಿತರು ಸಂಘಸಂಸ್ಥೆಗಳು ಸಂದೇಶ ಕಳುಹಿಸಿ ಅಭಿನಂದಿಸಿದ್ದಾರೆ. ಅವರೆಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸಿ ಅದು ವೃತ್ತಿಗಾಗಿ ಸಂದಗೌರವವೆಂದು ವಿನಯದಿಂದ ತಿಳಿಸಿ ಅದರಲ್ಲಿ ನನ್ನ ವ್ಯಕ್ತಿತ್ವ ಗೌಣವೆಂದು ತಿಳಿಯ ಬಯಸುತ್ತೇನೆ.

ಸಂಸಾರದಲ್ಲಿ ಬೇಕು ಬೇಡಗಳನ್ನು ಪೂರೈಸುವ ಮಕ್ಕಳು, ತಂದದ್ದನ್ನು ಶುಚಿ ರುಚಿಯಾಗಿ ಉಣಬಡಿಸುವ ಸೊಸೆಯಂದಿರು. ವಯಸ್ಸಾದ ಪತ್ನಿ ಪಾರ್ವತಮ್ಮ ತಾಯಿಯಾಗಿ ನನ್ನ ಆರೋಗ್ಯದ ಬಗ್ಗೆ ಎಚ್ಚರಿಕೆಯಿಂದ ಶುಶ್ರೂಷೆ ಮಾಡುತ್ತಿದ್ದಾರೆ. ಅಂತು ನನ್ನ ಮನೆ ಮರ್ತ್ಯದಲ್ಲಿ ಕಿರು ಸ್ವರ್ಗ. ಕಿರು ಸ್ವರ್ಗದಲ್ಲಿದ್ದು, ಹೋಗಿ ಬರುವ ಸ್ನೇಹಿತರು ಮತ್ತು ಅತಿಥಿಗಳನ್ನು ಸತ್ಕರಿಸುತ್ತ ಆಧ್ಯಾತ್ಮಜೀವನ ದಾರಿಯಲ್ಲಿ ಸಾಗುತ್ತಿದ್ದೇನೆ.

1956ನೆಯ ಸಾಲಿನಲ್ಲಿ ಬಂದ ವಿಧಾನಸಭಾ ಸಾರ್ವತ್ರಿಕ ಚುನಾವಣೆಗಳಲ್ಲಿ ಜಿಲ್ಲಾದ್ಯಂತ ಸಾಹುಕಾರ್ ಚನ್ನಯ್ಯನವರ ಗುಂಪಿನ ಹುರಿಯಾಳುಗಳನ್ನು ಮಂಡ್ಯಜಿಲ್ಲೆಯ ಎಲ್ಲ ಸ್ಥಾನಗಳಿಗು ನಿಲ್ಲಿಸಲಾಯ್ತು. ಇದರ ಎದುರು ಗುಂಪಿನ ಕಾಂಗ್ರೆಸ್ಸಿಗರು ನೇರ ತಮ್ಮ ಹೆಸರಲ್ಲದಿದ್ದರು, ರೈತರು ಮತ್ತು ಯುವಜನರ ಹೆಸರಿನಲ್ಲಿ ಎದುರು ಉಮೇದುವಾರರುಗಳನ್ನು ನಿಲ್ಲಿಸಿದರು.

ಸಾಹುಕಾರರೇ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದರೂ ಈ ಹಿಂದಿನ ಏಕೈಕ ಶಾಸಕನಿಗೂ ಈ ಚುನಾವಣಾ ಸ್ಪರ್ಧೆಗೆ ಸ್ಥಾನಸಿಗಲಿಲ್ಲ. ತತ್ಪರಿಣಾಮವಾಗಿ ಕಾಂಗ್ರೆಸ್ ಉಮೇದುವಾರರಿಗೆ ಬಲವಾದ ವಿರೋಧ ಜಿಲ್ಲಾದ್ಯಂತ ಬೆಳೆಯಿತು.

ನಾಗಮಂಗಲದ ಕ್ಷೇತ್ರದಿಂದ ಟಿ. ಮರಿಯಪ್ಪನವರು ಕಾಂಗ್ರೆಸ್ ಉಮೇದು ವಾರರಾಗಿ ಸ್ಪರ್ಧಿಸಿದರು. ಕಂಬದಹಳ್ಳಿ ಶ್ರೀ ಕೆ. ಮರಿಯಪ್ಪನವರು ಸ್ವತಂತ್ರವಾಗಿ ಸ್ಪರ್ಧಿಸಿದರು. ಈ ಪೈಪೋಟಿಯಲ್ಲಿ ಶ್ರೀ ಟಿ. ಮರಿಯಪ್ಪನವರು ಜಯಶೀಲರಾದರು. ನಾಗಮಂಗಲದ ಈ ಚುನಾವಣೆಯಲ್ಲಿ ಒಕ್ಕಲಿಗ, ಕುರುಬ ಎಂಬ ಜಾತಿವಾದ ಬೇರು ಬಿಟ್ಟಿತು. ಇಂದಿಗೂ ಆ ಬೇರನ್ನು ಕೀಳಲು ಸಾಧ್ಯವಾಗಿಲ್ಲ. ಟಿ. ಮರಿಯಪ್ಪನವರ ಕೋಮಿನ ಕುರುಬರು ಸಾಕಷ್ಟು ಮತದಾರರಿದ್ದು, ಟಿ. ಮರಿಯಪ್ಪನವರಲ್ಲಿ ನಿಷ್ಠಾವಂತ ರಾದ ಇನ್ನಿತರ ಕೋಮಿನವರು ಸೇರಿ ಸಾಕಷ್ಟು ಪ್ರಬಲವಲ್ಲದಿದ್ದರು ಬಲಶಾಲಿ ಗುಂಪೊಂದು ಇಂದಿಗೂ ಇದೆ ಎಂಬುದಕ್ಕೆ ಕುರುಬ ಜನಾಂಗದ ಜಿಗರಿ ಗೌಡರು ಶಾಸಕ ರಾಗಿ ಚುನಾಯಿತರಾಗಿ ಕರ್ನಾಟಕ ಕುರಿ ಪೋಷಕರ ಸಂಘದ ಅಧ್ಯಕ್ಷರಾದುದು, ಒಕ್ಕಲಿಗ ಕುರುಬ ಜನಾಂಗದ ಜಾತಿಯ ಪೈಪೋಟಿಯಿಂದ. ಇದನ್ನು ಯಾರೂ ಅಲ್ಲ ಗಳೆಯುವಂತಿಲ್ಲ.

ಟಿ. ಮರಿಯಪ್ಪನವರಿಗೆ ಪ್ರಬಲ ಪೈಪೋಟಿ ಒಡ್ಡಿದ ಮತದಾರರು, ಮತ್ತು ಟಿ. ಎನ್. ಮಾದಪ್ಪಗೌಡರು, ಸಿಂಗಾರಿಗೌಡರು ಚುನಾವಣಾ ಪೈಪೋಟಿಗೆ ನಿಂತುದು ನನಗೆ ಮೈ ಜುಮ್ಮೆನಿಸಿತು. ಅಷ್ಟೇ ಅಲ್ಲ ಚುನಾವಣೆ ಎಂದರೆ ಮೈನಡುಕ ಹುಟ್ಟಿಸಿತು. ಇದರ ಪರಿಣಾಮವಾಗಿ ನಾನು ನಾಗಮಂಗಲದತ್ತ ಚುನಾವಣೆಗೆ ಹೋಗುವುದಿರಲಿ ಆ ದಿಕ್ಕಿಗೆ ತಲೆ ಹಾಕಿ ಮಲಗುವುದನ್ನೇ ಬಿಟ್ಟೆನು. ಸುಮಾರು ಇಪ್ಪತ್ತೈದು ವರ್ಷಗಳಿಂದ ಚುನಾವಣೆಗಳಿಂದ ದೂರ ಉಳಿದೆ.

ಎರಡನೇ ಹಂತದ ಮುಖಂಡರುಗಳು ನಾಗಮಂಗಲ ತಾಲ್ಲೂಕಿನಲ್ಲಿ ಬೆಳೆಯಲೂ ಇಲ್ಲ, ಹಿರಿಯರು ಬೆಳೆಸಲೂ ಇಲ್ಲ. ಹೀಗಾಗಿ ಚುನಾವಣೆಗಳಲ್ಲಿ ಹಣಾಹಣಿ ಹೋರಾಡುವ ಮುಖಂಡತ್ವದ ಕೊರತೆ ಇಂದಿಗೂ ಇದೆ. ಸಿಂಗಾರಿಗೌಡರು ಸಹ ಯಾವುದೇ ಚುನಾವಣಾ ಸ್ಪರ್ಧೆಗೆ ಹೋಗದೆ ಊರಿನಲ್ಲಿ ವ್ಯವಸಾಯದತ್ತ ಗಮನಹರಿಸಿ ತಮ್ಮ ಊರು ಸೇರಿದರು.

ದಿವಂಗತ ಟಿ. ಮರಿಯಪ್ಪನವರು ದೇಶದ ಸ್ವಾತಂತ್ರ್ಯಕ್ಕಾಗಿ ನಾಲ್ಕಾರುಬಾರಿ ಜೈಲುವಾಸ ಅನುಭವಿಸಿದವರು, ಸಚಿವರಾಗಿ ತಾಲ್ಲೂಕಿನ ಹಾಗೂ ಸಂಸ್ಥಾನದ ಏಳ್ಗೆಗೆ ಶ್ರಮಿಸಿದವರು. ಬಸ್‌ಗಳ ರಾಷ್ಟ್ರೀಕರಣ ಹಾಗೂ ಸಹಕಾರ ಯೋಜನೆಯಲ್ಲಿ ರಾಷ್ಟ್ರಕ್ಕೆ ಮಾದರಿಯಾದವರ ಉಮೇದುವಾರಿಕೆಯನ್ನು ಜಾತೀಯತೆ ಹೆಸರಿನಲ್ಲಿ ವಿರೋಧಿ ಸಿದುದು. ಮುಂದೆ ಟಿ. ಎನ್. ಮಾದಪ್ಪಗೌಡರು ಸ್ವಂತ ಸೋದರತ್ತೆ ಮಗ ಕೆ. ಸಿಂಗಾರಿಗೌಡರ ವಿರುದ್ಧ ಸ್ಪರ್ಧಿಗಳಾಗಿ ನಿಂತಂತಹ ಚುನಾವಣಾ ಮಹತ್ವದಲ್ಲಿ ಅಪ್ಪಿತಪ್ಪಿ ಚುನಾವಣೆಗೆ ನಿಂತರೆ ಏನು ಗತಿ ಎಂಬ ಭಯದಿಂದ ಸಾಧಾರಣ ಸಹಕಾರ ಸಂಘಗಳೇನು ಓಟು ಎನ್ನುವ ಪದವಿರುವ ಯಾವುದೇ ಜಾಗಕ್ಕೆ ನಾನು ಸ್ಪರ್ಧಿಯಾಗದೆ ದೂರ ಉಳಿದೆ. ಚುನಾವಣೆಗೆ ನಿಲ್ಲದೆ ಮೆಂಬರಾಗದವರು ಸಮಾಜದಲ್ಲಿ ಗಣ್ಯರಾಗುವ ಸೇವಾಕ್ಷೇತ್ರದಲ್ಲಿ ಶ್ರಮಿಸುತ್ತ ಬಂದೆನು

## ಅಧ್ಯಾಯ–ಒಂಭತ್ತು

### ೧

ದಿವಂಗತ ಹೊಂಬೇಗೌಡರಿಗೆ ಕುವೆಂಪು ಸಾಹಿತ್ಯ ಬಹು ಅಚ್ಚು ಮೆಚ್ಚಿನದು. ರಾಷ್ಟ್ರಕವಿಗಳು ಹೊಂಬೇಗೌಡರಿಗೆ ದೇವಸಮಾನರು, ಕವಿಗಳಲ್ಲಿ ಅಚಲಭಕ್ತಿ. ಮಂಡ್ಯ ಪುರಸಭೆಯ ಉಪಾಧ್ಯಾಕ್ಷರಾಗಿದ್ದ ದಿವಂಗತ ಎಂ. ಬಿ. ಬೋರೇಗೌಡರು, ಹೊಂಬೇಗೌಡರಿಗೆ ತುಂಬಾ ಸಮೀಪವರ್ತಿ ವ್ಯಕ್ತಿ, ಹೊಂಬೇಗೌಡರಿಗೆ ಅಚ್ಚು ಮೆಚ್ಚಿನ ಸ್ನೇಹಿತ. ಶ್ರೀ ರಾಮಾಯಣ ದರ್ಶನಂದ ಕವಿ ಕುವೆಂಪು ಅವರನ್ನು ಮಂಡ್ಯಕ್ಕೆ ಕರೆತಂದು ವೈಭವದಿಂದ ಮೆರೆಸಬೇಕೆಂಬ ಹಂಬಲ ಎಂ. ಬಿ. ಬೋರೇಗೌಡರದು.

ಕುವೆಂಪು ಕೃತಿಗಳು ಕಾವ್ಯಾಲಯ ಚಿದಂಬರಂ ಅವರಲ್ಲಿ ಮಾತ್ರ ದೊರೆಯುತ್ತಿದ್ದವು. ಕಾರಣಾಂತರದಿಂದ ನಾನು ಉದಯರವಿಗೆ ಪುಸ್ತಕಗಳನ್ನು ತರಲು ಹೋಗುತ್ತಿದ್ದು ಕವಿಗಳಿಗೆ ಸಾಧಾರಣ ಪರಿಚಿತನಾಗಿದ್ದೆ. ಎಂ. ಬಿ. ಬೋರೇಗೌಡರು ಕವಿಗಳನ್ನು ಆಹ್ವಾನಿಸಲು ನನ್ನನ್ನು ಮತ್ತು ಪಿ. ಮಲ್ಲಯ್ಯನವರನ್ನು ಕೋರಿಕೊಂಡರು. ಮಲ್ಲಯ್ಯನವರು ಒಂದೇ ಮಾತಿನಲ್ಲಿ ಎಂ. ಬಿ. ಬೋರೇಗೌಡರಿಗೆ ಕುವೆಂಪು ಇನ್ನೂ ಸ್ವಲ್ಪಕಾಲ ಎಲ್ಲಿಗೂ ಬರಲಾರರೆಂದು ತಿಳಿಸಿದರು. ನಾನು ಎಂ. ಬಿ. ಬೋರೇಗೌಡರಿಗೆ ಸಲಹೆ ಮಾಡಿ "ಕೆ. ವಿ. ಶಂಕರಗೌಡರ ರಾಜಕೀಯ ಚಟುವಟಿಕೆ ಮತ್ತು ಅವರ ಸಹಕಾರ ಸಂಘ ಸಂಘಟನೆ, ವಿದ್ಯಾರ್ಥಿನಿಲಯ ಸ್ಥಾಪನೆಗಳು ಕವಿಗಳ ಮನಸ್ಸಿನ ಮೇಲೆ ಸತ್ಪರಿಣಾಮ ಬೀರಿರಬೇಕು. ಶಂಕರಗೌಡರು ಮತ್ತು ಕರ್ನಾಟಕ ಸಂಘದ ಅಧ್ಯಕ್ಷ ಎಂ. ಮಹಾಬಲರಾಯರೊಡನೆ ಹೋಗಿ ಆಹ್ವಾನಿಸೋಣ" ಎಂದೆ.

ಆಗಬಹುದೆಂದು ನಾವು ನಾಲ್ಕೈದು ಜನರು ಕವಿಗಳನ್ನು ಆಹ್ವಾನಿಸಲು ಶಂಕರಗೌಡರ ಕಾರಿನಲ್ಲಿ ಹೊರಟೆವು. ನಾವು ಉದಯರವಿಗೆ ಹೋಗುವುದಕ್ಕು ಒಳಗಡೆಯಿಂದ ಟಿ.ಎನ್. ಮಾದಪ್ಪಗೌಡರು ಹೊರಬರುವುದಕ್ಕೂ ಸರಿಹೋಯಿತು. ಮಾದಪ್ಪಗೌಡರು ಕವಿಗಳನ್ನು ನಾಗಮಂಗಲಕ್ಕೆ ಆಹ್ವಾನಿಸಲು ಬಂದಿದ್ದು, ಮುಂದೆ ಯೋಚನೆ ಮಾಡೋಣ ಎಂದು ಕವಿಗಳು ಅವರಿಗೆ ತಿಳಿಸಿದ್ದರಂತೆ. ಮಾದಪ್ಪಗೌಡರು ಸಹ ನಮ್ಮ ಜೊತೆ ಉದಯರವಿಗೆ ಮರುಪ್ರವೇಶ ಮಾಡಿದರು. ಮಾದಪ್ಪಗೌಡರಿಗೆ ಕವಿಗಳು ತುಂಬ ಪರಿಚಿತರಾಗಿದ್ದು, ಅವರ ಬಗ್ಗೆ ಅಭಿಮಾನಿಗಳಾಗಿದ್ದುದು ನಮಗೆ ಕವಿಗಳ ಮಾತಿನಿಂದ ವ್ಯಕ್ತವಾಯಿತು.

ಮಾದಪ್ಪಗೌಡರೇ ಮಾತು ಪ್ರಾರಂಭಿಸಿ ಕವಿಗಳು ನನಗೆ ಕೊಟ್ಟ ಉತ್ತರ ಕೊಡದೇ ಮಂಡ್ಯಕ್ಕೆ ದಯಮಾಡಿಸಿದರೆ ಬಹಳ ಸಂತೋಷವಾಗುವುದು ಎಂದರು.

"ನಿಮ್ಮ ಆಹ್ವಾನವನ್ನು ನಿರಾಕರಿಸಿಲ್ಲ, ಮುಂದೆ ಯೋಚನೆ ಮಾಡೋಣ ಎಂದಿದ್ದೇನೆ", ಎಂದರು ಕವಿಗಳು. ಎಲ್ಲರೂ ಸೇರಿ ಪ್ರಯಾಸಪಟ್ಟು ಕವಿಗಳು ಮಂಡ್ಯಕ್ಕೆ ಬರಲು ಒಪ್ಪಿಸಿದೆವು. ಮಂಡ್ಯದ ದಿವ್ಯ ಸಮಾರಂಭ ಈಗಲೂ ಕವಿಗಳ ಮನಸ್ಸಿನ ಮೇಲೆ ದೊಡ್ಡ ಪರಿಣಾಮ ಬೀರಿದೆ. ಆಗಾಗ ಎಂ. ಬಿ. ಬೋರೇಗೌಡರ ಹೆಸರನ್ನು ಜ್ಞಾಪಿಸಿಕೊಳ್ಳುತ್ತಾರೆ. ಎಂ. ಬಿ. ಬೋರೇಗೌಡರು ಕವಿಗಳನ್ನು ಸ್ವಾಗತಿಸಿ ಪುಷ್ಪ ಹಾರ ಹಾಕುವ ಭಾವಚಿತ್ರ ಕವಿಗಳ ನಿವಾಸದಲ್ಲಿದೆ.

ಈ ಸಮಾರಂಭದ ಪೂರ್ಣ ವಿವರವನ್ನು ನಮ್ಮ ಜಿಲ್ಲೆಯ ಈಗಿನ ಯುವ ಪೀಳಿಗೆ ಅರಿಯದು. ಆದ್ದರಿಂದ ದೇಜಗೌ ಅವರ ರಾಷ್ಟ್ರಕವಿ ಕುವೆಂಪು ಕೃತಿಯಿಂದ ಪೂರ್ಣ ವಾಗಿ ಕೊಡಲಾಗಿದೆ—

"ಶ್ರೀರಾಮಾಯಣದರ್ಶನಂ ಈ ಯುಗದ ಮೇರು ಕೃತಿಯೆಂದು ಸಹೃದಯರು ಕೊಂಡಾಡಿದರೆ, 'ಗಾತ್ರದಲ್ಲೇನೋ ಅದು ಮಹಾಕಾವ್ಯ. ಗುಣದಲ್ಲಿಯೂ ಮಹಾ ಕಾವ್ಯವೆನ್ನುವುದು ಕಷ್ಟ' ಎಂದು ಹೊಟ್ಟೆ ಕಿಚ್ಚಿನ ಜನ ಪ್ರಲಾಪಿಸಿ ಅಪಪ್ರಚಾರ ಮಾಡುವುದುಂಟು. ಜಾತಿ, ಭಾಷೆ ಅಥವಾ ದೇಶದ ಹಿನ್ನೆಲೆಯಲ್ಲಿ ವ್ಯಕ್ತಿ ಅಥವಾ ಕೃತಿಗೆ ಬೆಲೆ ಕಟ್ಟುವ ಪಿಡುಗು ಭಾರತೀಯ ಜನಾಂಗಕ್ಕೊಂದು ಅಭಿಶಾಪವಾಗಿ ಪರಿಣಮಿಸಿರುವುದಲ್ಲದೆ, ಆ ಬರ್ಬರ ನೀತಿ ಇಪ್ಪತ್ತನೆಯ ಶತಮಾನದಲ್ಲಿಯೂ ಹೋರಾಟ ನಡೆಸಿದೆ ; ಅದು ಪರಂಪರೆಯಿಂದ ಬಂದಿರುವ ಪಿತ್ರಾರ್ಜಿತ ಸ್ವತ್ತಾಗಿದೆ. ಇದಕ್ಕೆ ಸಾಕ್ಷಿ ತುಲಸೀದಾಸನ ಜೀವನದಲ್ಲಿಯೂ ಸಮೃದ್ಧವಾಗಿ ದೊರಕುತ್ತದೆ. ದೇವ ವಾಣಿಯನ್ನು ತೊರೆದು ಜನವಾಣಿಯಲ್ಲಿ ರಾಮಮಹಿಮೆಯನ್ನು ಹಾಡಿದ್ದರಿಂದ ಕುಪಿತರಾದ ಪಂಡಿತರು ಗರ್ವಾಂಧರಾಗಿ ಹೀನೋಪಾಯದಿಂದ 'ರಾಮಚರಿತಮಾನಸ' ವನ್ನು ಅದರ ವಾಸನೆಯೂ ಉಳಿಯದಂತೆ ಹಾಳುಮಾಡಬೇಕೆಂದು ಕಟಿಬದ್ಧರಾದರಂತೆ. ತಮ್ಮ ಕಾರ್ಯಸಾಧನೆಗಾಗಿ ನಿಧುಆ ಮತ್ತು ಸಿಧುಆ ಎಂಬ ಚೋರಕಲಾಪಾರಂಗತ ರನ್ನು ಹಣದ ಆಸೆ ತೋರಿಸಿ ನಿಯಮಿಸಿದರಂತೆ. ಆದರೆ ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆಯೆ ! ಎಂಥ ವಿಘ್ನಗಳು ದಾಳಿ ಮಾಡಿದರೂ ಒಳ್ಳೆಯದು ಬದುಕುತ್ತದೆ. ಉಳಿಯುತ್ತದೆ, ಬೆಳಗುತ್ತದೆ. ಯಾರೊ ಒಬ್ಬ ಹೊಟ್ಟೆಯುರಿಗೆ ಹೇಳಿಕೊಂಡ ಮಾತು ಜನರಿಗೆ ಅರ್ಥವಾಗುತ್ತದೆ : ಆ ಮಾತಿಗೆ ಯಾರೂ ಬೆಲೆ ಕೊಡುವುದಿಲ್ಲ. ಜನ ಕರುಬಿದಷ್ಟು ಕುವೆಂಪು ಅವರ ಕೀರ್ತಿ ದಿಗಂತ ವಿಸ್ತಾರವಾಗಿ ಹಬ್ಬುತ್ತಿದೆ. ಶ್ರೀರಾಮಾಯಣದರ್ಶನದ ಕವಿಯನ್ನು ಕರೆದು ಗೌರವಿಸಬೇಕೆಂಬ, ಅವರನ್ನು ಕಣ್ತುಂಬ ನೋಡಬೇಕೆಂಬ ಹಂಬಲ ಕನ್ನಡಿಗರೆದೆಯಲ್ಲಿ ದಿನೇದಿನೇ ಪ್ರಬಲವಾಯಿತು. ಆ ಹಂಬಲ ಮೊಟ್ಟಮೊದಲು ಬಹಿರಂಗವಾಗಿ ಪ್ರಕಟವಾದದ್ದು ಮಂಡ್ಯದಲ್ಲಿ. ಸಭೆ ಸಮಾರಂಭಗಳಿಗೊಪ್ಪದಿದ್ದ ಕುವೆಂಪು ಅವರು ಮಂಡ್ಯದ ಜನಾನುರಾಗಿ ನಾಯಕರಾದ ಶ್ರೀ ಕೆ. ವಿ. ಶಂಕರಗೌಡರ ಶ್ರದ್ಧಾ ನಿಷ್ಠೆಯ ಗಾರುಡಮಂತ್ರ ರೂಪದ ಆಮಂತ್ರಣಕ್ಕೆ

ಸಮ್ಮತಿಸಿದರು. ೨೨-೧೨-೧೯೫೭ರಂದು 'ಜ'ರೊಂದಿಗೆ ಕುವೆಂಪು ಅವರು ಬೆಳಗ್ಗೆ ಹತ್ತೂವರೆ ಗಂಟೆಗೆ ಸರಿಯಾಗಿ ಮಂಡ್ಯ ತಲುಪಿದರು. ಸಕ್ಕರೆ ಕಂಪನಿಯ ಪ್ರವಾಸಿ ಮಂದಿರದಲ್ಲಿ ಮಂಡ್ಯ ಜಿಲ್ಲೆಯ ಪ್ರಮುಖರೂ ಅಧಿಕಾರ ವರ್ಗದವರೂ ಕುವೆಂಪು ಅವರನ್ನು ಹಾರ ತುರಾಯಿಗಳಲ್ಲಿ ಮುಳುಗಿಸಿ ಸ್ವಾಗತಿಸಿದರು.

ಅಂದು ಮಂಡ್ಯದ ಜನರಿಗೆ ದೊಡ್ಡದೊಂದು ಹಬ್ಬ. ಯಾರನ್ನು ಕೇಳಿದರೂ 'ಇಂದು ಮಹಾಕವಿ ಕುವೆಂಪು ನಮ್ಮೂರಿಗೆ ಬರ್ತಾರೆ'ನ್ನುವುದೇ ಜಪಮಂತ್ರವಾಗಿತ್ತು. ಮಧ್ಯಾಹ್ನದ ಹೊತ್ತಿಗೆ ಸುತ್ತಮುತ್ತಣ ಹಳ್ಳಿಯ ಜನ ಎತ್ತಿನಗಾಡಿಗಳಲ್ಲಿ ಬಂದು ನೆರೆದಿದ್ದರು. ಮನೆಯ ಕೆಲಸವನ್ನು ಬದಿಗೊತ್ತಿ, ದೈನಂದಿನ ಕಾರ್ಯಗಳನ್ನು ಮರೆತು ಕವಿಶ್ರೇಷ್ಠರನ್ನು ಆಹ್ವಾನಿಸಿ ಸ್ವಾಗತಿಸಿ, ಕಣ್ಣಾರೆ ನೋಡಿ ಕಿವಿಯಾರೆ ಕೇಳಿ ಪುಣ್ಯ ಭಾಗಿಗಳಾಗುವ ಸಲುವಾಗಿ ಆಬಾಲವೃದ್ಧರು ಕಾದಿದ್ದರು. ಅನೇಕ ದಿನಗಳ ಹಂಬಲ ಕೈಗೂಡಿದ ಸಂತೃಪ್ತಿ ಅವರ ಮುಖದ ಮೇಲೆ ತಾಂಡವವಾಡುತ್ತಿತ್ತು. ಅಧಿಕಾರಿ ಗಳಾಗಲೀ, ಪುರಪ್ರಮುಖರಾಗಲೀ, ರಾಜಕೀಯ ಧುರೀಣರಾಗಲೀ, ಕುವೆಂಪು ಅವರನ್ನು ಸಂದರ್ಶಿಸಿದ ಪ್ರತಿಯೊಬ್ಬರೂ ಭಕ್ತಿ ಗೌರವಗಳ ಭಾರದಿಂದ ಬಾಗಿದ್ದರು. ಸಂಜೆ ೬ ಗಂಟೆಗೆ ಸರಿಯಾಗಿ ಕಪ್ಪು ನಿಲುವಂಗಿಯನ್ನು ತೊಟ್ಟ ಕುವೆಂಪು ಅವರು ಜಿಲ್ಲಾಧಿಕಾರಿಗಳ ಮತ್ತು ಸಕ್ಕರೆ ಕಂಪೆನಿಯ ಜನರಲ್ ಮ್ಯಾನೇಜರ ಜೊತೆಯಲ್ಲಿ ಮುನಿಸಿಪಲ್ ಹೈಸ್ಕೂಲ್ ಬಳಿಗೆ ಆಗಮಿಸಿದರು. ಅವರು ಕಾರಿನಿಂದಿಳಿದ ಕೂಡಲೆ ಜನರ ನೂಕುನುಗ್ಗಲು ಹೆಚ್ಚಾಯಿತು. ಅವರ ದರ್ಶನಕ್ಕಾಗಿ ಸಾವಿರಾರು ಮಂದಿ ಹೊರಗೆ ಕಿಕ್ಕಿರಿದಿದ್ದರು. ಬಣ್ಣಬಣ್ಣದ ವಿದ್ಯುದ್ದೀಪಗಳಿಂದ ತಳಿರುತೋರಣ ಬಾಳೆ ಕಂಬಗಳಿಂದ ಅಲಂಕೃತವಾಗಿದ್ದ ಶಾಲಾ ಕಟ್ಟಡ ಮತ್ತು ಸಭಾಂಗಣಗಳು ಸ್ವರ್ಗೋಪ ಮವಾಗಿ ರಾರಾಜಿಸುತ್ತಿದ್ದುವು. ಅವರನ್ನು ಕಂಡಕೂಡಲೇ ಜನಸಂದಣಿಯಲ್ಲಿ ಹರ್ಷೋದ್ಗಾರ ಕರತಾಡನಗಳ ಕೋಲಾಹಲ ಭೋರ್ಗರೆಯಿತು. ಶಂಕರೇಗೌಡರೂ ಬೋರೇಗೌಡರೂ ಹಾರತುರಾಯಿಗಳನ್ನರ್ಪಿಸಿ ಶ್ರೀಯುತರನ್ನು ವಾದ್ಯವೃಂದದೊಡನೆ ಮೆರವಣಿಗೆಯಲ್ಲಿ ನಾಲ್ಕು ಸಾವಿರಕ್ಕೂ ಮಿಕ್ಕು ನೆರೆದಿದ್ದ ಸಭಾಂಗಣಕ್ಕೆ ಕರೆದೊಯ್ದರು. ಸಭೆ ಮೌನವಾಗಿ ಎದ್ದುನಿಂತು ಮಹಾಕವಿಗೆ ತನ್ನ ಭಕ್ತಿ ಗೌರವಗಳನ್ನು ಸಮರ್ಪಿಸಿತು. ಸರ್ವಾಲಂಕೃತವಾದ ವೇದಿಕೆಯ ಮುಂಗಡೆಯಿದ್ದ ಏಕಮಾತ್ರಾಸನದಲ್ಲಿ ಕುವೆಂಪು ಮಂಡಿಸಿದಾಗ ಸಭೆಯಲ್ಲೆದ್ದ ಹರ್ಷೋದ್ಗಾರ ಎಂಥ ಜಡನನ್ನೂ ಪುಲಕಗೊಳಿಸು ವಂತಿತ್ತು.

'ಆಶೀರ್ವಾದ' 'ಜಯಹೇ ಕರ್ನಾಟಕ' ಮತ್ತು 'ಬಾಗಿಲೊಳು ಕೈಮುಗಿದು' ಗೀತೆಗಳನ್ನು ಕುಮಾರಿಯೊಬ್ಬಳು ಪ್ರಾರ್ಥನೆಗಾಗಿ ಹಾಡಿದಳು. ವಿವಿಧ ಸಂಸ್ಥೆಗಳೂ, ಪುರಪ್ರಮುಖರೂ ಮತ್ತು ಸುತ್ತಮುತ್ತಣ ತಾಲ್ಲೂಕುಗಳ ಪ್ರತಿನಿಧಿಗಳೂ ಶ್ರೀಯುತರಿಗೆ ಹಾರ ತುರಾಯಿಗಳನ್ನರ್ಪಿಸಿದರು. ಆಳೆತ್ತರದ ಹಾರಗಳನ್ನು ಹಾಕಿ

ತೆಗೆಯುವುದೇ ಒಂದು ದೊಡ್ಡ ಉತ್ಸವದಂತಿತ್ತು. ಹಾರಗಳಿಂದ ಮೇಜು ತುಂಬಿ ಅವರ ಎದೆಮಟ್ಟ ಬಂದಿತು. ಬೆಂಗಳೂರು ಮೈಸೂರು ನಗರಗಳ ಹೂವಿನ ಸಂತೆಯೇ ಅಲ್ಲಿದ್ದಂತೆ ಕಾಣುತ್ತಿತ್ತು. ಹಾರ ಸಮರ್ಪಣೆ ಮುಗಿಯುವ ಹೊತ್ತಿಗೆ ಶ್ರೀಯವರು ಹೂವಿನ ರಾಶಿಯ ಹಿಂದೆ ಮರೆಯಾದರು. ಶಂಕರಗೌಡರ ಸ್ವಾಗತಭಾಷಣ ಸನ್ನಿವೇಶದ ಗಾಂಭೀರ್ಯಕ್ಕೆ ತಕ್ಕಂತಿದ್ದು, ಜನಹೃದಯವನ್ನು ಪ್ರತಿಧ್ವನಿಸುವಂತಿತ್ತು : ಸಪ್ತಮುದ್ರೆ. ಕೀರ್ತಿ ಶನಿಯ ಕಾಟಕ್ಕೆ ಸರ್ವಥಾ ಸಿಕ್ಕಬಾರದೆಂದು ಸದಾ ಜಾಗರೂಕರಾಗಿ ಜನ ಜಂಗುಳಿಯ ಅಗ್ಗದ ಸ್ತುತಿಯನ್ನು ಬಯಸದೆಯೆ ನಿಂದಾಸ್ತುತಿಗಳನ್ನು ಕಿವುಡುಗೇಳುವ ಕಾವ್ಯತಪಸ್ವಿಗಳಿವರು. ಕಾವ್ಯಾರಣ್ಯದ ನಿಸರ್ಗರಮಣೀಯತೆಯಲ್ಲಿ ಮದಿಸಿದಾನೆಯಂತೆ ಸ್ವೇಚ್ಛೆಯಾಗಿ ವಿಹರಿಸುವ ಈ ವಾಗ್ವಿದರು ಮಂಡ್ಯದ ಮಹಾಜನವೃಂದದ ವಿಶ್ವಾಸದ ಬಲೆಗೆ ಬಿದ್ದುದು ಅವರಿಗೆಷ್ಟು ವಿಸ್ಮಯವೋ ಅವರನ್ನು ಈ ಸಮಾರಂಭಕ್ಕೆ ಬರ ಲೊಪ್ಪಿಸಿದ ನಮಗೂ ಅಷ್ಟೇ ವಿಸ್ಮಯವಾಯಿತು. ಆದರೆ ಈ ದಿಗ್ಗಜವನ್ನು ಸೆರೆಹಿಡಿಯಲು ಹೋದವರ ಜಾಣ್ಮೆಗಿಂತಲೂ ಪ್ರೀತಿಯೇ ನೀತಿ.'' ಹಿಂದೊಮ್ಮೆ ವಿದ್ಯಾರ್ಥಿವೃಂದಕ್ಕೆ ಕುವೆಂಪು ಅವರು ಹೇಳಿದ್ದ ಮಾತುಗಳನ್ನು ಸಭಿಕರ ಗಮನಕ್ಕೆ ತಂದರು : "ಪ್ರಶಾಂತವಾದ ಕೊಳಕ್ಕೆ ಕಲ್ಲು ಬೀರಿದರೆ ಆ ಕಲ್ಲು ನೀರನ್ನು ಅಪ್ಪಳಿಸಿದ ಅವಧಿಯಷ್ಟಕ್ಕೆ ಪರಿಮಿತವಾಗದೆ ಒಂದು ನಿಯತಕಾಲದವರೆಗೆ ತೆರೆಗಳು ಕೊಳವನ್ನು ಆಂದೋಳನಗೈಯುವುವು. ನಾನು ಸಾರ್ವಜನಿಕ ಸಮಾರಂಭದಲ್ಲಿ ಪಾಲ್ಗೊಳ್ಳುವ ಹಿಂದೆ ಕೆಲವು ದಿನವೂ, ಮುಂದೆ ಕೆಲವು ದಿನವೂ ನನ್ನ ಮನಸ್ಸು ಉದ್ದಿಷ್ಟ ಕಾರ್ಯ ದಿಂದ ಬಿಡುಗಡೆಯಾಗಿ ಬಹಿರ್ದಿಕ್ಕನ್ನು ಹಿಡಿಯುವುದು. ಕಾವ್ಯರಚನೆಯು ಏಕಾಗ್ರತೆ ಯಿಂದ ಮಾತ್ರ ಸಾಧ್ಯ. ನನ್ನಿಂದ ನಾಡು ಹಿರಿಯದನ್ನು ನಿರೀಕ್ಷಿಸುವುದೇ ಆದರೆ ಕಿರಿದುದರಲ್ಲಿ ಅದು ಪ್ರವಹಿಸಿ ಪ್ರಯತ್ನವು ಕವಲಾಗಿ ಧ್ಯೇಯವು ಕುಬ್ಜವಾಗದಂತೆ ನೋಡಿಕೊಳ್ಳುವುದು ನಿಮ್ಮ ಕರ್ತವ್ಯ. 'ಹೊಟ್ಟೆಗಿಷ್ಟು ಹಿಟ್ಟುಕೊಡಿ, ನನ್ನ ನನಗೆ ಬಿಟ್ಟುಬಿಡಿ' ಎಂದು ಅವರು ಹೇಳಿದ ಮಾತುಗಳಂತು ಎಂದೆಂದಿಗೂ ಮರೆಯ ಲಾರದುವು. ಕೀರ್ತಿಕಾಮನೆ ಮಹದ್ವ್ಯಕ್ತಿಗಳ ಕೊಟ್ಟ ಕೊನೆಯ ದೌರ್ಬಲ್ಯ ಎಂಬ ನಾಣ್ಣುಡಿಗೆ ಶ್ರೀ ಪುಟ್ಟಪ್ಪನವರು ಹೊರತು ಎಂಬುದು ಈ ಮಾತಿನಿಂದ ಸ್ಪಷ್ಟ ವಾದುದಲ್ಲದೆ ಅವರ ಈ ಸಂಯಮ ಪೂರ್ಣವಾದ ಅಧ್ಯಾತ್ಮನಿಷ್ಠೆ ಎಷ್ಟು ಮಟ್ಟಿನ ಸಾರ್ಥಕತೆಯನ್ನು ಪಡೆಯಿತೆಂಬುದು ಅವರು ಆ ಮಾತು ಹೇಳಿದ ಕೆಲವೇ ವರ್ಷಗಳಲ್ಲಿ ಸಾಧಿಸಿದ ಗ್ರಂಥ ನಿರ್ಮಾಣದ ಗುಣ ಮತ್ತು ವಿಸ್ತಾರದಿಂದ ಸ್ಪಷ್ಟತರವಾಗದಿರದು.'' ಅವರ ದರ್ಶನ ಲಾಭ ಎಲ್ಲ ಕನ್ನಡಿಗರಿಗೂ ಆಗಾಗ್ಗೆ ಲಭಿಸುತ್ತಿರಲೆಂದು ಶ್ರೀಯುತರು ಸೂಚ್ಯವಾಗಿ ತಿಳಿಸಿದರು : "ಈ ಕಬ್ಬಿಗನ ಸಾರಸ್ವತ ಯಜ್ಞದಿಂದ ಜನಾರ್ದನ ರೂಪಿಯಾದ ಜನತೆಗೆ ಸಂತುಷ್ಟವಾದುದು ನಿಸ್ಸಂಶಯ. ಆದರೂ ಸಾಕುತಾಯಿಯ ಲಾಲನೆ ಪಾಲನೆಯಿಂದಲೇ ಮಗುವು ಸಂತೋಷಪಟ್ಟು ಹೆತ್ತತಾಯಿಯನ್ನು ದೂರ

ದಿಂದಲೇ ನೋಡಿ, ದೂರದಿಂದಲೇ ಆನಂದಿಸಲು ಇಷ್ಟಪಡುವುದಿಲ್ಲ. ಆ ಕಂದನು ತಾಯ್ತೋಳತೆಕ್ಕೆಯ ಸ್ಪರ್ಶಸುಖವನ್ನು ಸಹಜವಾಗಿ ಬಯಸುವುದು. "ಈ ಕೋಗಿಲೆಗೆ ಎಲ್ಲ ಮಾಸಗಳೂ ವಸಂತವಾಗಿರಲಿ. ಈ ಕನ್ನಡ ವಾಲ್ಮೀಕಿಯ ಕಂಠಪತ್ರದ ಉಲುಹು ಕೆಡದಿರಲಿ. ಇಂತಹ ಶುಭ ದಿನ ಶುಭ ವಾರ ಶುಭ ನಕ್ಷತ್ರಗಳು ಕನ್ನಡ ಜನತೆಗೆ, ಏಕೆ ಇಡೀ ಸಾರಸ್ವತ ಪ್ರಪಂಚಕ್ಕೆ ಸದಾ ಲಭಿಸಲಿ" ಎಂದು ಹಾರೈಸಿ ಶಂಕರಗೌಡರು ತಮ್ಮ ಸ್ವಾಗತಭಾಷಣ ಮುಗಿಸಿದರು.

ಅನಂತರ ಅನೇಕ ಮಹನೀಯರಿಂದ ಬಂದಿದ್ದ ಸಂದೇಶಗಳನ್ನು ಓದಲಾಯಿತು. " 'ಪೂರ್ಣ ಕಮ್ಮಿತಾದುದೆನಿಸಿದ' ಆ ಕವಿಶ್ರೇಷ್ಠರಿಗೆ ಅವರ ಅನೇಕ ಕೃತಿಗಳೇ ವಾಸ್ತವ ವಾದ ಸನ್ಮಾನ. ಅದನ್ನು ಮಿಕ್ಕು ಬೇರೆ ಸನ್ಮಾನ ಮಾಡುವುದೆಂದರೆ, ಸುಸ್ಥವಾದ ಕಣ್ಣುಗಳಿಗೆ ಸಾದಾ ಹರಳುಗಳ ಕನ್ನಡಕವನ್ನು ತೊಡಿಸುವಂತೆ. ಆದರೂ ತಾವು ಮಾಡು ತ್ತಿರುವ ಸನ್ಮಾನವು ಲೋಕರೂಢಿಗೆ ಅನುರೂಪವಾಗಿದ್ದು ತೀರ ಸಾಹಜಿಕವೇ ಸರಿ. ಆ ಬಗ್ಗೆ ಅವರನ್ನು ತಮ್ಮನ್ನು ಅಭಿನಂದಿಸಿ, ತಾವು ಕೈಗೊಂಡಿರುವ ಸಮಾರಂಭವು ಯಶಸ್ವಿ ಯಾಗಿ ನೇರವೇರಲೆಂದು ಹಾರೈಸುತ್ತೇನೆ'' – ಇದು ಶ್ರೀ ಮಂ. ಗೋವಿಂದ ಪೈ ಅವರ ಸಂದೇಶ. ಸಂದೇಶ ವಾಚನಾನಂತರ ಕವಿವರರ 'ದಿವ್ಯ ಸನ್ನಿಧಿಯಲ್ಲಿ ಮಂಡ್ಯದ ಮಹಾಜನರು ಪ್ರೀತಿ ಗೌರವಗಳಿಂದ' ಸನ್ಮಾನ ಪತ್ರವನ್ನರ್ಪಿಸಿದರು. ಆಪತ್ರದ ಸಾರಾಂಶವಿದು : "ತಮ್ಮ ಹೃದಯಾಭಿರಾಮ ಪಾದಸ್ಪರ್ಶದಿಂದ ಈ ಮಂಡ್ಯದ ಮೃಣ್ಮಯ ಕ್ಷೇತ್ರವಿಂದು ಚಿನ್ಮಯವಾಗಿ ಚೇತನಸ್ಪಂದಿಯಾಗಿದೆ. ಇದುವರೆಗೂ ಧಾನ್ಯ ಶ್ರೀಮಂತರಾಗಿದ್ದ ನಾವಿಂದು ತಮ್ಮನ್ನು ಹಾರೈಸಿ ಹಂಬಲಿಸಿ ಆಮಂತ್ರಿಸಿ ಸ್ವಾಗತಿಸಿ ಪೂಜಿಸಿ ಧ್ಯಾನ ಶ್ರೀಮಂತರಾಗಿದ್ದೇವೆ. ಮಹಾಪೂರವೊಂದು ಹರಿದು ಬಂದಾಗ ಅದರ ಉದಾರ ಆಲಿಂಗನಕ್ಕೀಡಾದ ಹಳ್ಳಕೊಳ್ಳ, ಕೆರೆಕಾಲುವೆಗಳೆಲ್ಲ ಆ ಮಹಾಪೂರದಲ್ಲೊಂದಾಗಿ ಒಡನೆಯೆ ಅವೆಲ್ಲ ಆ ಮಹಾಪೂರವೇ ಆಗುವಂತೆ ತಮ್ಮ ದಿವ್ಯ ಪ್ರಭಾವ ಪ್ರವಾಹದಲ್ಲಿ ಮಿಂದ ನಮ್ಮ ಮೈ ಮನಸ್ಸುಗಳೆಲ್ಲ ತಮ್ಮ ಸಾರೂಪ್ಯವನ್ನೇ ಪಡೆದಂತಿವೆ. ತಾವು ತಪೋವಲ್ಮೀಕದಿಂದ ಅವತರಿಸಿ ಅಭಿನವ ವಾಲ್ಮೀಕಿಗಳಾಗಿ ಬಂದು ಶ್ರೀ ರಾಮಾಯಣದರ್ಶನವನ್ನು ನಮಗೆ ನೀಡಿದಾಗ ನಾವು ಲವಕುಶರಾಗಿ ಉತ್ಕಂಠ ವೀಣಾ ಸನ್ನದ್ಧರಾಗಿ ಆ ನವ್ಯಗೀತಕ್ಕೆ ಒಮ್ಮೇಳವಾಗಿ ನಿಂತು ಹಾಡಿ ಹರಡಲೂ ಆ ದರ್ಶನ ಸುಧಾಪಾನದಿಂದ ಯಥಾಶಕ್ತಿಯಾಗಿ ತುಷ್ಟಿಪುಷ್ಟಿಯನ್ನು ಪಡೆಯಲೂ ಶ್ರದ್ಧಾ ಭಕ್ತಿಯಿಂದ ಸಿದ್ಧರಾಗಿದ್ದೇವೆ. ವಿನಾಶೋನ್ಮುಖ ಆಧುನಿಕ ವಿಜ್ಞಾನದ ಶಸ್ತ್ರಾಸ್ತ್ರಗಳ ಬೇಗೆಯಲ್ಲಿ ಶತಮಾನಗಳ ಸಂಸ್ಕೃತಿಯಲ್ಲಿ ಬೆಂದು ಬೂದಿಯಾದರೂ ವಿಶ್ವಮನೋಗಗನ ದಲ್ಲಿ ಅವಿನಾಶಿಯಾಗಿರುವ ತಮ್ಮ ಕವಿವರ್ಚಸ್ಸು ನಿತ್ಯನೂತನೋತ್ತಮ ಜಗತ್ತೊಂದನ್ನು ಸೃಷ್ಟಿಸಲು ಸಮರ್ಥವಾಗಿದೆ ಎಂಬುದೇ ನಮ್ಮ ಅಚಲ ವಿಶ್ವಾಸವಾಗಿದೆ. ತಾವು ತಪೋ ಲೋಕದಲ್ಲಿದ್ದು ಜನಸಾಮಾನ್ಯರ ಭೂಮಿಕೆಗಿಳಿಯದೆ ಆ ಜನಸಾಮಾನ್ಯರನ್ನು ತಮ್ಮ

ಭಾವುದೆತ್ತರಕ್ಕೆ ಎತ್ತಿಕೊಳ್ಳಲು ಆದರ್ಶಜೀವನದ ಮೂಲಕ ಕೈ ನೀಡಿ, ಕಾವ್ಯವಾಣಿಯ ಮೂಲಕ ಕರೆಯುತ್ತಿರುವ ತಮ್ಮ ದೀರ್ಘ ಜೀವನವೇ ನಮ್ಮ ಆಶೆ–ಆಕಾಂಕ್ಷೆ. ತಮ್ಮ ಆರೋಗ್ಯ ಆನಂದವೇ ನಮ್ಮ ಬಾಳಿನ ಬಯಕೆ. ಜಯತು ಜಯ ಶ್ರೀ ಕುವೆಂಪು, ಜಯತು ಜಯ ಮುಂದೆ ಬರಲಿರುವ ಪೂರ್ಣತೆಯ ಅರುಣೋದಯದ ಕೆಂಪು.'' ಒಡನೆಯೆ ಕವಿಗಳಿಗೆ ರಜತಕರಂಡ ಸಮರ್ಪಣೆಯಾಯಿತು.

ಸ್ವಾಗತಭಾಷಣ ಸನ್ಮಾನ ಪತ್ರಗಳಲ್ಲಿನ ಹೊಗಳಿಕೆಯಿಂದ ಕುವೆಂಪು ಹರ್ಷೋನ್ಮತ್ತರಾದಂತೆ ಕಾಣಲಿಲ್ಲ; ಅದಕ್ಕೆ ಪ್ರತಿಯಾಗಿ ಅವರು ಯಾವುದೋ ಒಂದು ದುರ್ಭರ ಸನ್ನಿವೇಶದಲ್ಲಿ ಸೆರೆಸಿಕ್ಕಿದ್ದಂತೆ ಅವರ ಖಿನ್ನವದನ ಸೂಚಿಸುತ್ತಿತ್ತು. ಬಿನ್ನವತ್ತಳೆಗೆ ಉತ್ತರ ನೀಡುವ ಸಲುವಾಗಿ ಸುದೀರ್ಘ ಕರತಾಡನದ ಮಧ್ಯೆ ಮೇಲೆದ್ದಾಗ ಅವರ ಮುಖದ ಮೇಲೆ ಹರ್ಷ ಚೈತನ್ಯ ತೇಜಸ್ಸುಗಳು ತಾಂಡವವಾಡುತ್ತಿದ್ದುವು. ಅವರು ಎಂದಿನಂತೆ ಸಭಿಕರ ಮನಸ್ಸನ್ನಾಕರ್ಷಿಸಲೆಂಬಂತೆ ಎರಡು ನಿಮಿಷ ಸಭೆಯ ಕಡೆಗೆ ಕಣ್ಣು ಹರಿಸಿ, ನಿಧಾನವಾಗಿ ಸೌಮ್ಯವಾಗಿ ಮಾತು ಮೊದಲುಮಾಡಿದರು : "ಹಿರಿಯರಲ್ಲಿ ಕಿರಿಯರಲ್ಲಿ, ಸಹೋದರರಲ್ಲಿ, ಮಿತ್ರರಲ್ಲಿ, ಮಾತೆಯರಲ್ಲಿ, ಸಹೋದರಿಯರಲ್ಲಿ, ಕನ್ನಡ ಪ್ರೇಮಿಗಳಲ್ಲಿ ವಿಜ್ಞಾಪನೆ'' ಎಂದು ನುಡಿದಾಗ ಸಭೆ ನೀರವವಾಯಿತು. ''ಹಗುರವನ್ನು ಕುರಿತು ಆಲಂಕಾರಿಕವಾಗಿ ಮಾತಾಡುವಾಗ ಹೂವನ್ನು ನಿದರ್ಶನವಾಗಿ ತೆಗೆದುಕೊಳ್ಳುತ್ತೇವೆ. ಆ ಹೂವು ಭಾರವಾಗಿರಬಲ್ಲುದೆಂದು ಈ ದಿನ ನನಗೆ ಅನುಭವವಾಗಿದೆ. ಹೂವು ಪ್ರಕೃತಿದತ್ತವಾದದ್ದು. ಈ ಹೂಮಾಲೆಯ ಜೊತೆಗೆ ವಿಶ್ವಾಸದ ಪ್ರೀತಿಯ ಸ್ತುತಿಯ ಮಾತುಗಳ ಹೂ ಇದಕ್ಕಿಂತ ಭಾರವಾಗಿ ನನ್ನ ನೆತ್ತಿಯನ್ನಪ್ಪಳಿಸಿವೆ. ಆದರೆ ಈ ವಿಶ್ವಾಸ, ಈ ಸ್ತುತಿ, ಈ ಉತ್ಸಾಹ. ಈ ಸ್ತೋತ್ರ, ಇವೆಲ್ಲಕ್ಕೂ ನಾನು ಅರ್ಹ ಎಂದು ತಿಳಿಯುವಷ್ಟು ಅಜ್ಞಾನಿಯನ್ನಾಗಿ ಗುರು ನನ್ನನ್ನು ಮಾಡಿಲ್ಲ ಎಂದು ಖಚಿತವಾಗಿ ಸ್ಪಷ್ಟಪಡಿಸಲಿಚ್ಛಿಸುತ್ತೇನೆ. ಈ ಹೂವಿನ ರಾಶಿಯು, ಜನಸಂದಣಿಯು, ವಿಶ್ವಾಸದ ಮಾತುಗಳ ಅರ್ಥವೇನೆಂದು ಒಳಹೊಕ್ಕು ನೋಡಿದಾಗ, ನಾವೆಲ್ಲರೂ ನಮ್ಮ ಹೃದಯಗಳಲ್ಲಿ ಅನವರತ ಸಂಸ್ಥಾಪಿತವಾಗಿರುವ ಅಜ್ಞಾನದಲ್ಲಿ ಅದೃಶ್ಯವಾಗಿರುವ 'ಶ್ರೀ'ಯ ವಿಕಾಸದೆಡೆಗೆ ಸಾಗುತ್ತಿದ್ದೇವೆಂದು ಅರ್ಥವಾಗದಿರದು. ಈ ಅರ್ಚನೆ ಉತ್ಸಾಹಗಳೆಲ್ಲ ಆ ದಿವ್ಯಚೇತನದ ಉತ್ಥಾನಕ್ಕೆ ಮಾತ್ರ, ಎಲ್ಲ ಹೃದಯದ ಬಯಕೆ ಈ ನಿಮಿತ್ತದಿಂದ, ಈ ರೂಪದಲ್ಲಿ ಅಭಿವ್ಯಕ್ತವಾಗುತ್ತವೆ. ಇಲ್ಲದಿದ್ದರೆ ವ್ಯಕ್ತಿ ವ್ಯಕ್ತಿಯನ್ನು ಪೂಜಿಸುವುದೆಂದರೇನು ? ಇದನ್ನೇ ಭ್ರಾಂತಿಯಿಂದ 'ಸ್ತುತಿ' ಎಂದು ಊಹಿಸಿಕೊಳ್ಳಬಹುದು. ನಿಜಸ್ಥಿತಿ ಏನೆಂದರೆ, ನಮ್ಮಲ್ಲಿರುವ ವಿಕಾಸಾಕಾಂಕ್ಷೆಯ, ಉದ್ಧಾರಾಸಕ್ತಿಯ ನಿದರ್ಶನವಾಗಿ ಈ ಸಮಾರಂಭ ನಡೆಯುತ್ತಿದೆ. ಎಲ್ಲೆಲ್ಲಿ ಆದರ್ಶ ಕಾಣುತ್ತದೆಯೊ ಅಲ್ಲಲ್ಲಿ ಅದಾಗಬೇಕೆಂಬ ಅಭೀಪ್ಸೆ ಇದ್ದೇ ಇರುತ್ತದೆ. ಆ ಅಭೀಪ್ಸೆಯೇ ಈ ಪೂಜೆಯ ರೂಪದಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಸ್ತುತಿಸುವವರು ಸ್ತುತಿ ಪಡೆಯುವವನು ಇಬ್ಬರೂ

ಧನ್ಯರೆ ! ಏಕೆಂದರೆ ಆ ಸ್ತುತಿಯೇ ನಿಮಿತ್ತವಾಗಿ ಸ್ತುತಿ ಪಡೆಯುವವನೂ ಮತ್ತಷ್ಟು ಮೇಲೇರಲು ಪ್ರಯತ್ನಿಸುತ್ತಾನೆ.

"ಅಂದ ಮೇಲೆ ಈಗ ನಾವು ಮಾಡುತ್ತಿರುವುದೆಲ್ಲ ಯಾವುದೋ ಒಂದು ಶಕ್ತಿಯ ಸಂಕೇತವೆಂದು ಕರೆಯಬಹುದಾಗಿದೆ. ಧ್ವಜವೆಂದರೇನು ? ವಾಸ್ತವವಾಗಿ ಅದು ಕೇವಲ ಒಂದು ಗಜದ ಬಟ್ಟೆ. ಅದು ಹತ್ತಿಯದಾಗಬಹುದು, ರೇಷ್ಮೆಯದಾಗ ಬಹುದು. ಅದರ ರಕ್ಷಣೆಗಾಗಿ ಎಷ್ಟೋ ಜನಪ್ರಾಣಾರ್ಪಣೆ ಮಾಡಲು ಸಿದ್ಧರಾಗಿದ್ದಾರೆ. ಮನೆಮಠ ಎಲ್ಲ ಅವರ ಮುಂದೆ ಕೇವಲ ತಿಲ. ಅದು ರಾಷ್ಟ್ರಶಕ್ತಿಯ ಪ್ರತೀಕ. ಅದನ್ನು ಪೂಜಿಸುವುದರಿಂದ ಆ ಸಂಕೇತವೇ ಶಕ್ತಿ ಎಂದು ಯಾರೂ ತಿಳಿಯುವುದಿಲ್ಲ. ಅರ್ಚಿತ ವಸ್ತುವೂ ಹಾಗೆಂದು ಕೊಳ್ಳುವುದಿಲ್ಲ. ನನ್ನ ಬಾಹ್ಯಾಕೃತಿ ಆ ಧ್ವಜದಂತೆ ಒಂದು ಸಂಕೇತ ಮಾತ್ರ. ನಿಮ್ಮಂತೆ ನಾನೂ ಒಬ್ಬಸಾಮಾನ್ಯ ಮನುಷ್ಯ. ನಾನೇ ಸರಸ್ವತಿಯಲ್ಲ; ಅವಳಿಗೆ ಸಲ್ಲುವ ಪೂಜೆ ಗೌರವ ಸ್ತುತಿ ನನಗೆ ಸಲ್ಲುತ್ತವೆಂದು ನಾನು ಭಾವಿಸಿಕೊಂಡರೆ ಅವಳಿಗೆ ಅಪಚಾರ ಮಾಡಿದಂತಾಗುತ್ತದೆ : ನಾನೂ ಅಪಹಾಸ್ಯಕ್ಕೀಡಾಗುತ್ತೇನೆ. ಕೀರ್ತಿ ಶನಿಯ ಹಾವಳಿ, ಅದರಿಂದೊದಗುವ ವಿಪತ್ತು ಎಷ್ಟೆಂಬುದು ನನಗೆ ಗೊತ್ತಿದೆ. ಯಶೋಲಕ್ಷ್ಮಿಯಕೃಪೆಗೆ ಪಾತ್ರನಾಗುವುದೂ ಒಂದು ಸುಯೋಗ. ಅಹಂಕಾರಕ್ಕೆ ಪೋಷಕ ಶನಿ, ಅಹಂಕಾರ ನಿರಸನಕ್ಕೆ ನಿಮಿತ್ತ ಯಶೋಲಕ್ಷ್ಮಿ. ಸ್ತುತಿಯ ವರ್ಷಕ್ಕೆ ಆತ್ಮದ ಶುಕ್ತಿ ಬಾಯ್ತೆರೆದರೆ ಉದ್ಧಾರದ ಮುತ್ತುಗಳ ಸೃಷ್ಟಿಗಾಗಿ ವಿಧಿ ಸಂಚು ಹೂಡಿದೆಯೆಂದು ನಾನು ಭಾವಿಸುತ್ತೇನೆ.

"ಆರ್ಥಿಕವಾಗಿ ರಾಜಕೀಯವಾಗಿ ಎಷ್ಟು ಮುಂದುವರಿದರೂ ಜನರ ಮನಸ್ಸು ಆಕಾಶಯಾತ್ರಿಯಾಗದಿದ್ದರೆ ಅವುಗಳಿಂದ ಪ್ರಯೋಜನವಾಗುವುದಿಲ್ಲ. ಸಾಹಿತ್ಯ ಸಂಸ್ಕೃತಿಗಳ ಸಂಪರ್ಕದಿಂದ ಜನಮನಸ್ಸು ಶ್ರೀಮಂತವಾಗಬೇಕು ; ಅವುಗಳ ಸಂಪೂಜೆ ಯಿಂದ ಜನಮನಸ್ಸು ಆಕಾಶಯಾತ್ರಿಯಾಗುತ್ತದೆ. ಸರಸ್ವತಿ ಯಾವುದೋ ವ್ಯಕ್ತಿಯನ್ನು ಕೇಂದ್ರವಾಗಿ ಆರಿಸಿಕೊಂಡು ಆವಿರ್ಭವಿಸುತ್ತಾಳೆ. ಸರಸ್ವತೀ ಶಕ್ತಿ ಗುಪ್ತಗಾಮಿನಿಯಾಗಿ ಸರ್ವ ಹೃದಯದಲ್ಲಿಯೂ ಪ್ರವಹಿಸುತ್ತಿರುತ್ತದೆ. ಇಲ್ಲದಿದ್ದರೆ ಅದು ಆವಿರ್ಭವಿಸಿದಾಗ ಯಾರೂ ಗುರುತಿಸಲಾರರು. ದೊಡ್ಡತನವನ್ನು ಗುರುತಿಸಿದಾಗಲೆ ನಾವು ದೊಡ್ಡವರಾ ಗುತ್ತೇವೆ ; ಅದನ್ನು ನೋಡಿದಾಗ ಅಸೂಯೆ ಮೂಡಿದರೆ ನಾವು ಅಧೋಗತಿ ಗಿಳಿಯುತ್ತೇವೆ.

"ಸ್ತುತಿ ಮಾತ್ರದಿಂದ ಆಂಜನೇಯ ಸಾಗರೋಲ್ಲಂಘನದಂಥ ಮಹತ್ಕಾರ್ಯವನ್ನು ಸಾಧಿಸಬಲ್ಲ ಸಮರ್ಥನಾಗುತ್ತಾನೆ. ಸಾಮಾನ್ಯವಾಗಿ ಮಾತಾಳಿಗಳು ಶಕ್ತಿಹೀನರು. ನಿಜ ವಾದ ಕೆಲಸಗಾರರು ಎಲ್ಲೋ ಮೂಲೆಯಲ್ಲಿದ್ದು ಗುರಿ ಸಾಧಿಸುತ್ತಾರೆ. ಮಹೇಂದ್ರಾ ಚಲದ ಕಪಿಸೈನ್ಯ ಮಾತಿನಲ್ಲಿ ತಲ್ಲೀನವಾಗಿದ್ದಾಗ ಆಂಜನೇಯನೊಬ್ಬನೆ ಸಾಗರವನ್ನು ತನ್ನ ಬಾಹುಗಳಿಂದ ತೂಗುವವನ ಹಾಗೆ ಮೌನಿಯಾಗಿ ಕುಳಿತಿದ್ದನಂತೆ. ಒಮ್ಮೊಮ್ಮೆ

ತನ್ನ ಶಕ್ತಿ ತನಗೇ ಗೊತ್ತಿರುವುದಿಲ್ಲ. ಆಗ ಜಾಂಬವ ಮೊದಲಾದವರು ಅವನನ್ನು ಪ್ರಾರ್ಥಿಸಿ ಸ್ತುತಿಸಿ ಪ್ರಚೋದಿಸುತ್ತಾರೆ ; ತಮ್ಮ ಶಕ್ತಿಯ ಒಪ್ಪಂಶವನ್ನು ಅವನಿಗೆ ಧಾರೆಯೆರೆಯುತ್ತಾರೆ. ಉಪ್ಪಿನ ಸತ್ಯಾಗ್ರಹ ಕಾಲದಲ್ಲಿ ಗಾಂಧೀಜಿ ನಡೆದ ೮೦ ಮೈಲಿಯ ಪಥ ಜನ ಮನೋವಾಹಿನಿಯ ಕಾಲುವೆಯಾಯಿತು. ಒಂದಲ್ಲ ಒಂದು ರೀತಿಯ ಪಾನಸಾನ್ನಿಧ್ಯದಿಂದ ನಾಲ್ವತ್ತು ಕೋಟಿ ಚೇತನಗಳು ಅವರ ಶಕ್ತಿಯನ್ನುದ್ದೀಪಿಸಿದವು. ಆ ಚೇತನಗಳ ಶಕ್ತಿ ಹರಿಯುವ ಕಾಲುವೆಯಾದರು ಗಾಂಧೀಜಿ. ಪ್ರತಿಯೊಂದು ಯುಗದಲ್ಲಿಯೂ ಈ ಕೆಲಸ ನಡೆಯುತ್ತಿದೆ. ಸಮುದ್ರಲಂಘನ ಎಂದೋ ಮುಗಿದು ಹೋದ ಕಾರ್ಯವಲ್ಲ. ಅಣುವರನ್ನು ಆಂಜನೇಯನನ್ನಾಗಿ ಮಾಡುವ ಕಾರ್ಯ ಎಂದೆಂದಿಗೂ ನಡೆಯುತ್ತದೆ. ಆಂಜನೇಯ ಗತಜೀವಿಯಲ್ಲ, ಚಿರಂಜೀವಿ. ಜನ ಮನಸ್ಸು ಅಥವಾ ಸಂಘಾತ್ಮ ಆಶಿಸಿದರೆ ದೊಡ್ಡ ದೊಡ್ಡ ಕೃತಿಗಳು ಉದ್ಭವಿಸುತ್ತವೆ. ಜನಶಕ್ತಿಯಿಂದ ಮಾತ್ರ ಮಹತ್ಕಾರ್ಯ ಸಾಧನೆಯಾಗುತ್ತದೆ. ಜನಚೇತನದಲ್ಲಿ ಶಕ್ತಿಯಿಲ್ಲದಿದ್ದರೆ ಅಂಥ ಕೃತಿಗಳು ಉದಯವಾಗುವುದಿಲ್ಲ. ಚರಿತ್ರೆ ವಿಭೂತಿಯನ್ನು ಸೃಷ್ಟಿಸುತ್ತದೆ, ವಿಭೂತಿ ಚರಿತ್ರೆಯನ್ನು ಸೃಷ್ಟಿಸುತ್ತದೆ. ಇಲ್ಲಿ ಚರಿತ್ರೆಯೆಂದರೆ ಜನಮನ.

"ಬರೆಯುವವನೂ, ಬರೆಸುವವರೂ ಸರಸ್ವತಿಯ ಎರಡು ಮುಖಗಳಿದ್ದ ಹಾಗೆ. ಸಾಹಿತ್ಯಸೃಷ್ಟಿಗೆ ಈ ಎರಡು ಶಕ್ತಿಗಳೂ ಆವಶ್ಯಕ. ಆದ್ದರಿಂದ ಜನತೆಯ ಸಂಸ್ಕೃತಿಯ ಮಟ್ಟವೂ ಮೇಲೇರಬೇಕಾಗಿದೆ. ಲೌಕಿಕವಾಗಿ ಪುಸ್ತಕ ಅಚ್ಚಾದಾಗ ಕಾವ್ಯಸೃಷ್ಟಿ ಆಯಿತೆನ್ನುತ್ತೇವೆ. ಆದರೆ ನಿಜವಾದ ಕಾವ್ಯಸೃಷ್ಟಿಯಾಗುವುದು ಸಹೃದಯರ ಮನಸ್ಸಿನಲ್ಲಿ ಮೂಡಿದಾಗ.

"ಈ ಊರು ಬರಿಯ ಸಕ್ಕರೆಗೆ ಮಾತ್ರ ಪ್ರಸಿದ್ಧಿ ಎಂದುಕೊಂಡಿದ್ದೆ. ಸಾಹಿತ್ಯ ಸಕ್ಕರೆಗೂ ಇಲ್ಲಿ ಸ್ಥಾನವಿದೆ. ನಿಮ್ಮ ವಿಶ್ವಾಸಕ್ಕೆ ಬಲಿಬಿದ್ದು ಈ ಸಮಾರಂಭಕ್ಕೊಪ್ಪಿಕೊಂಡೆ. ರಜತಕರಂಡ ಕಂಡ ಕೂಡಲೆ ಭಯವಾಯ್ತು. ನಿಮ್ಮ ವಿಶ್ವಾಸದ ಚಿಹ್ನೆಯಾದ ಈ ಕರಂಡವನ್ನು ಗೌರವಕ್ಕೂನವಾಗದಂತೆ ಸರಸ್ವತಿಯ ಅಡಿಯಾಳಾಗಿ ಸ್ವೀಕರಿಸಿದ್ದೇನೆ. ಇದು ಮತ್ತೆ ಸರಸ್ವತಿಯ ಪೂಜೆಗೆ ನಿವೇದಿತವಾಗಬೇಕೆಂದು ಆಶಿಸಿದ್ದೇನೆ. ಇಲ್ಲಿಯ ಕರ್ಣಾಟಕ ಸಂಘ ಇದನ್ನೆ ಪರ್ಯಾಯ ಪಾರಿತೋಷಕವೆಂದು ಬಗೆದು, ಪ್ರತಿವರ್ಷವೂ ಶ್ರೀರಾಮಾಯಣ ದರ್ಶನಂ ವಾಚನ ಸ್ಪರ್ಧೆಯನ್ನು ಏರ್ಪಡಿಸಲೆಂದು ವಿನಂತಿ ಮಾಡಿಕೊಳ್ಳುತ್ತೇನೆ. ನಿಮ್ಮೆಲ್ಲರ ಹೃದಯದಲ್ಲಿರುವ ಶ್ರೀ ಸರಸ್ವತಿಗೆ ಸಾಷ್ಟಾಂಗ ಪ್ರಣಾಮಗಳು."

ಶ್ರೀಯುತರು ಕೈಮುಗಿಯುತ್ತಿದ್ದಂತೆಯೇ ಕರತಾಡನ ಘೋಷವೆದ್ದು ಪ್ರಶಾಂತ ಸಾಗರವನ್ನು ಚಂಡಮಾರುತ ಕಲಕಿದಂತಾಯಿತು. ವಂದನಾರ್ಪಣೆ ರಾಷ್ಟ್ರಗೀತೆಗಳು ಮುಗಿದ ನಂತರ ಯಾರೊ ಒಬ್ಬರು 'ಭಾರತ ಮಾತಾಕಿ ಜೈ' ಎಂದರು; ಕೂಡಲೆ ಜೈಕಾರವಾಯಿತು. ತಕ್ಷಣವೆ ಕುವೆಂಪು 'ಸಿರಿಗನ್ನಡಂ ಗೆಲ್ಗೆ' ಎಂದು ಘೋಷಿಸಿದರು.

ಮತ್ತೆ ಜೈಕಾರ. ಹಿಂದಿದ್ದ ಹುಡುಗನೊಬ್ಬ ‘ಕೆ. ವಿ. ಪುಟ್ಟಪ್ಪಾಕಿ ಜೈ’ ಎಂದು ಕೂಗಿದ. ಜೈಕಾರಗಳಿಂದ ಸಭೆ ಮೊಳಗಿತು. ಬೆಲ್ಲದಚ್ಚಿಗೆ ಮುತ್ತುವ ಇರುವೆಗಳಂತೆ ಜನ ಕವಿ ದರ್ಶನಕ್ಕಾಗಿ ಮುನ್ನುಗ್ಗಿದರು. ಆ ಜನಜಂಗುಳಿಯಲ್ಲಿ ತೇಲುತ್ತ ಮುಳುಗುತ್ತ ಕುವೆಂಪು ಮುಂದೆ ಮುಂದೆ ಸಾಗಿದರು.

೨

ಆಚಾರ್ಯ ವಿನೋಬ ಅವರು ಭೂದಾನ ಚಳುವಳಿಗೆ ಮೈಸೂರಿಗೆ ಬರುವ ಮುನ್ನ ಸಮೀಪದ ಇಲವಾಲದಲ್ಲಿ ನಡೆದ ಸರ್ವೋದಯ ಸಮ್ಮೇಳನಕ್ಕೆ ಮಂಡ್ಯದಿಂದ ಮೂರು ನಾಲ್ಕು ಮಂದಿ ಹೋಗಿದ್ದೆವು. ನಮಗೆ ಜೈಲಿನಲ್ಲಿ ಹಿಂದಿ ಕಲಿಸುತ್ತಿದ್ದ ಸರ್ದಾರ್‌ವೆಂಕಟರಾಮಯ್ಯನವರ ತಮ್ಮಂದಿರಾದ ದಿವಂಗತ ಎಚ್. ವಿ. ಶ್ರೀನಿವಾಸ ಮೂರ್ತಿ ಅವರ ''ವಿನೋಬೋಂಕಿ ವಿಚಾರ್'' ಎಂಬ ಕೃತಿಯ ಕನ್ನಡ ಅನುವಾದ 'ಆಚಾರ್ಯ ವಿನೋಬ ವಿಚಾರಗಳು' ಎಂಬ ಕೃತಿಯನ್ನು ಆಚಾರ್ಯವಿನೋಬ ಅವರಿಗೆ ನಾನು ಅರ್ಪಿಸಿದೆ. ನೀವು ಅನುವಾದ ಮಾಡಿದಿರಾ? ಎಂದರು. ಇಲ್ಲ ಸುಮಾರು ವರ್ಷಕಾಲ ಜೈಲಿನಲ್ಲಿದ್ದಾಗ ಶ್ರೀನಿವಾಸಮೂರ್ತಿ ಎಂಬುವರು ಹಿಂದಿ ಕೃತಿಗಳನ್ನು ತರಿಸಿ ಕನ್ನಡದಲ್ಲಿ ವಿವರಿಸುತ್ತಿದ್ದರು'' ಎಂದು ಕನ್ನಡದಲ್ಲಿ ಹೇಳಿದೆ. ಕೊಟ್ಟಿರುವ ಕೃತಿಯಿಂದ ನೀವು ತಿಳಿದ ಒಂದು ಪ್ಯಾರಾ ನನಗೆ ಹೇಳಬಲ್ಲಿರಾ ? ಎಂದರು. ಬ್ರಹ್ಮನು ಜಗತ್‌ನ ಚರಾಚರವಸ್ತುಗಳನ್ನು ನಿರ್ಮಿಸಿ ಅವುಗಳ ಅಂದಚಂದ ತಿಳಿಯಲು ಟೀಕಾಕಾರನನ್ನೊಬ್ಬ ನನ್ನು (critic) ಸೃಷ್ಟಿಸಿದ. ಅವರಿಂದ ಸಮರ್ಪಕವಾದ ಸಮಾಧಾನದ ಒಂದೇ ಒಂದು ವಸ್ತುವನ್ನು ಮೆಚ್ಚದೇ ಹೋದ. ಅವನನ್ನು ವಧೆಮಾಡಲು ಬ್ರಹ್ಮ ಆದೇಶ ನೀಡಿದ ನಂತೆ, ಆದರೆ ಅದ್ಹೇಗೋ ಟೀಕಾಕಾರ ಇಂದು ಉಳಿದಿದ್ದು, ಯಾರಾದರೊಬ್ಬ ಅಭಿಪ್ರಾಯ ಹೇಳುವ ಮುನ್ನವೇ ಟೀಕಿಸಿಬಿಡುವ ಟೀಕಾಕಾರರ ಗುಂಪು ಬೆಳೆದು ನಿಂತಿದೆ ಎಂದು ಸುಮಾರು 3 ನಿಮಿಷಗಳಲ್ಲಿ ಹೇಳಿದೆ. ಹಿಂದಿಯನ್ನು ಕಲಿತು ಹಿಂದಿ ಕೃತಿ ಗಳನ್ನು ಓದುವ ಅಭ್ಯಾಸ ಮಾಡಿಕೋ'' ಎಂದು ತಿಳಿಸಿ ಪಯಣ ಹೊರಟರು.

ಮೈಸೂರಿಗೆ ಹೊರಟ ವಿನೋಬ ಅವರು ಮೈಸೂರಿನಲ್ಲಿ ಮಹಾಕವಿ ಕುವೆಂಪು ಅವರ ಉದಯರವಿಗೆ ಸಂದರ್ಶಿಸುವರೆಂಬ ವಿಚಾರ ಇಲವಾಲ ಕ್ಯಾಂಪಿನಲ್ಲಿ ನನಗೆ ತಿಳಿಯಲೇ ಇಲ್ಲ. ಮೈಸೂರು ಸಭೆಯಲ್ಲಿ ಸೇರಲು ನಾನು ಲಾರಿಯೊಂದರಲ್ಲಿ ಹೊರಟು ಪ್ರೀಮಿಯರ್ ಸ್ಟುಡಿಯೋಬಳಿ ಬಂದರೆ ಜನವೋ ಜನ. ರಾಷ್ಟ್ರಕವಿಗಳು ನಿಲುವಂಗಿ ತೊಟ್ಟು ವಿನೋಬರ ಬರುವಿಗಾಗಿ ಕಾದು ನಿಂತಿದ್ದರು. ಉದಯರವಿಯ ಆವರಣಕ್ಕೆ ಸಾಧಾರಣವಾದ ನನ್ನಂತಹವನಿಗೆ ಪ್ರವೇಶವೆಲ್ಲಿ. ಅಂದಿನ ಜನಭರಿತ ಸಮಾವೇಶದಲ್ಲಿ ಒಳಹೋಗಲಾಗದೆ ಹೊರಗಡೆ ಕಾಯ್ದು ನಿಂತಿದ್ದ ಜನಸಮೂಹದಲ್ಲಿ ಒಬ್ಬನಾಗಿ ನಿಂತು ಆನಂದ ಭರಿತನಾದೆ.

ಆಚಾರ್ಯ ವಿನೋಬ ಅವರ ಉದಯರವಿಯ ಸಂದರ್ಶನ ಇಂದಿನ ಬಹು ಮಂದಿಗೆ ಗೊತ್ತಿಲ್ಲವಾಗಿ ''ರಾಷ್ಟ್ರಕವಿ ಕುವೆಂಪು'' ಕೃತಿಯಿಂದ ಆಯ್ದ ಭಾಗವನ್ನು ಇಲ್ಲಿ ಕೊಡಲಾಗಿದೆ—

‘‘ಶ್ರೀರಾಮಾಯಣದರ್ಶನಂ ಪ್ರಕಟನೆಯಾದ ಸುದ್ದಿ ಶ್ರೀ ವಿನೋಬಾರವರ ಕಿವಿಗೆ ಬಿದ್ದಾಗ ಅವರು ತುಂಬ ಹರ್ಷಿಸಿದರು. ಕಾಶಿ ವಿದ್ಯಾಪೀಠದಲ್ಲಿ ಬಿಡಾರ ಹೂಡಿದ್ದ ಆಚಾರ್ಯರು 30–8–1952ರ ಸಂಜೆ ಮೈಸೂರಿನವರಾದ ಶ್ರೀ ಟಿ. ಎಸ್. ಅನಂತರಂಗಾಚಾರ್‌ರು ಜೊತೆಯಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಮಾತುಕತೆ ನಡೆಸಿದರು. ಆ ಕೂಡಲೆ ಆ ಮಹಾಕಾವ್ಯದ 'ಕವಿಕ್ರತುದರ್ಶನಂ' ಸಂಚಿಕೆಯನ್ನು ಓದಿಸಿ ಕೇಳಿದರು. ಆಧುನಿಕ ಭರತಖಂಡದಲ್ಲಿ ಅಂಥ ಮಹಾಕಾವ್ಯ ಉದ್ಭವವಾದದ್ದಕ್ಕಾಗಿ ತುಂಬ ಹರ್ಷಗೊಂಡರು. ತಮಗೆ ವಿರಾಮವಾದಾಗಲೆಲ್ಲ ಆ ಕಾವ್ಯವನ್ನು ಕೇಳಬೇಕೆಂದೂ, ಮೈಸೂರಿಗೆ ಹೋದಾಗ ಆ ಮಹಾಕವಿಯನ್ನು ಕಾಣಬೇಕೆಂದೂ ಆಶೆ ವ್ಯಕ್ತಪಡಿಸಿದರು. ಆಗಾಗ್ಗೆ ಆ ಕಾವ್ಯವನ್ನೋದಿಸಿ ಕೇಳಿ, ತಮಗೆ ತೋರಿದಂತೆ ದರ್ಶನಾತ್ಮಕವಾದ ವ್ಯಾಖ್ಯಾನ ನೀಡುತ್ತಿದ್ದರು. ಆಚಾರ್ಯರು 13-9-57ರಂದು ತಮ್ಮ ಪಾದಯಾತ್ರೆಯ ತಂಡದೊಡನೆ ಪಿರಿಯಾಪಟ್ಟಣ ತಾಲ್ಲೂಕಿನ ಆನೆಚೌಕೂರಿಗೆ ಆಗಮಿಸಿದರು. ಕುವೆಂಪು ಅವರು ಆಚಾರ್ಯರ ದರ್ಶನಕ್ಕೆಂದು ತಮ್ಮ ಸಂಸಾರದೊಡನೆ ಅದೇ ದಿನ ಬೆಳಗ್ಗೆ ಸುಮಾರು ಹತ್ತು ಗಂಟೆಯ ಹೊತ್ತಿಗೆ ಆನೆಚೌಕೂರಿಗೆ ಹೋದರು. ಆ ಊರು ಜನವಿರಳವಾದ ಅರಣ್ಯದ ನಡುವೆಯಿದೆ. ಪ್ರಕೃತಿಸೌಂದರ್ಯದ ಮಡಿಲಿನಲ್ಲಿ ನಡೆದ ಕವಿ–ಸಂತರ ಸಮ್ಮಿಲನ ಸ್ವರ್ಗೀಯವಾಗಿತ್ತು : ಎರಡು ಮಹಾಸಾಗರಗಳು ಸಂಧಿಸಿದಂತೆ, ಎರಡು ದಿವ್ಯಜ್ಯೋತಿಗಳು ಒಂದುಗೂಡಿದಂತೆ, ಎರಡು ಶುದ್ಧಜೀವಿಗಳು ಸಮಾಗಮಗೊಂಡಂತೆ ಆ ಸಮ್ಮಿಲನ ದಿವ್ಯಭವ್ಯವಾಗಿ ಕಾಣುತ್ತಿತ್ತು. ನೈರ್ಮಲ್ಯವೇ ತನುವಾದಂತೆ, ಮುಕ್ತಿಯೇ ಸಾಕಾರತೆ ಪಡೆದಂತೆ ಒಳಗಿನಿಂದ ಬಂದ ವಿನೋಬಾರವರನ್ನು ಕಂಡ ಕೂಡಲೆ ತಪಸ್ಸೇ ಮೂರ್ತಿವತ್ತಾದಂತಿದ್ದ ಕುವೆಂಪುಅವರು ಭಕ್ತಿಯೇ ಬಾಗಿದಂತೆ ತಲೆಮಣಿದು ಕೈಜೋಡಿಸಿ, ಮುಂದುವರಿದರು. ವಿನೋಬಾರವರು ರಾಮಮಂತ್ರವನ್ನು ಚ್ಚರಿಸುತ್ತ ಕುವೆಂಪು ಅವರ ಕಡೆಗೆ ಸರಸರನೆ ನಡೆದು ಕವಿಯ ಹಸ್ತಗಳನ್ನು ತಮ್ಮ ಕೈಗೆ ತೆಗೆದುಕೊಂಡು ಹಣೆಗೊತ್ತಿಕೊಂಡರು. ಮಹಾತ್ಮಗಾಂಧಿಯವರ ಆತ್ಮಶಿಷ್ಯರಾಗಿ, ತ್ಯಾಗ ತಪಸ್ಸುಗಳಿಂದ ಭಾರತೀಯರ ಹೃದಯದಲ್ಲಿ ಸದಾ ನಲಿಯುತ್ತಿರುವ ಮಹಾಸಂತರು ಮಹಾ ಕವಿಗೆ ಮಣಿವಾಗ, ಎರಡು ಕೋಟಿ ಕನ್ನಡಿಗರ ಹೃದಯದಲ್ಲಿ ಸದಾ ಮೆರೆಯುತ್ತಿರುವ ಕುವೆಂಪು ಮಹಾಕವಿಯೆಂಬ ಹೆಮ್ಮೆಯನ್ನುಳಿದು ಭಕ್ತಿಪರವಶರಾಗಿ ಮಹಾಸಂತರ ಮುಂದೆ ಶಿಶುವಿನೋಪಾದಿ ಮಣಿದಾಗ ಸಚರಾಚರ ವಸ್ತುಗಳಲ್ಲಿ ರೋಮಾಂಚವಾಗಿರಬೇಕು ; ಆ ಸಮಾಗಮ ದೃಶ್ಯವನ್ನು ನೋಡುತ್ತಿದ್ದ ಜನರಂತು ಆ ಕ್ಷಣಕಾಲ ನೆಲದ ಮೇಲಿರಲಿಲ್ಲ : ಅವರ ಧಮನಿಧಮನಿಗಳಲ್ಲಿ ವಿದ್ಯುತ್ ಸಂಚಾರವಾದಂತಾಯಿತು.

ಅನಂತರ ಇಬ್ಬರೂ ಪರಸ್ಪರ ದರ್ಶನಾಸಕ್ತರಾಗಿ ಪರಸ್ಪರಾಭಿಮುಖವಾಗಿ ಕುಳಿತರು. ಕೂಡಲೆ ಪ್ರಾರಂಭವಾದ ಭಜನೆ ವಿನೂತನವಾದ ಅಲೌಕಿಕ ವಾತಾವರಣ

ವನ್ನು ಸೃಷ್ಟಿಸಿತು. ಭಜನೆ ಮುಗಿದನಂತರ ಕವಿ–ಸಂತರ ಸಂಭಾಷಣೆ ಪ್ರಾರಂಭವಾಯಿತು. ಯಾತ್ರಾರ್ಥಿಗಳು ಮೌನಮುಗ್ಧರಾಗಿ ಆ ಸಂಭಾಷಣೆಯನ್ನು ಕೇಳುತ್ತಿದ್ದರು. ಕುವೆಂಪು ಅವರು ವಿನೋಬಾರಿಗೆ ತಮ್ಮ ಮನೆಯವರನ್ನು ಪರಿಚಯ ಮಾಡಿಕೊಟ್ಟರು. ಸಂಭಾಷಣೆ ಮುಖ್ಯವಾಗಿ ಶ್ರೀರಾಮಾಯಣ ದರ್ಶನದ ರಚನೆ ಉದ್ದೇಶಾದಿಗಳನ್ನು ಕುರಿತಿದ್ದಿತು. ಕವಿಗಳು ಮಹಾಕಾವ್ಯದಿಂದ ಕೆಲವು ಭಾಗಗಳನ್ನು ಓದಿ, ವ್ಯಾಖ್ಯಾನಮಾಡಿದರು. ಮಾತಿಗೆ ಮಾತು ಬಂದು ಈ ಯುಗ ತುಂಬ ಮಹಿಮಾಸ್ಪದವಾದದ್ದೆಂಬುದನ್ನು ಶ್ರೀ ರಾಮಕೃಷ್ಣ ಪರಮಹಂಸ ಗಾಂಧೀಜಿ ಅರವಿಂದರೇ ಮೊದಲಾದವರ ಜೀವನವನ್ನು ಉದಾಹರಿಸಿ ಕುವೆಂಪು ವಿವರಿಸಿದರು. ಐವತ್ತು–ನೂರು ವರ್ಷಗಳ ತರುವಾಯ ಹುಟ್ಟುವ ಕವಿಗೆ ಈ ಯುಗದ ಚರಿತ್ರೆ ಎಂಥ ಮಹತ್ತಾದ ವಿಷಯವನ್ನು ಒದಗಿಸಬಲ್ಲುದೆಂಬುದನ್ನು ನಿದರ್ಶನ ಪೂರ್ವಕವಾಗಿ ನಿರೂಪಿಸಿದರು. ಭರತಖಂಡ ಸಾಂಸ್ಕೃತಿಕವಾಗಿ ಆಧ್ಯಾತ್ಮಿಕವಾಗಿ ದಿನೇದಿನೇ ಅತ್ಯಂತ ಪ್ರೋಜ್ಜ್ವಲವಾಗಿ ಬೆಳೆಯುತ್ತಿರುವ ರಾಷ್ಟ್ರವೇ ಹೊರತು, ಅದೊಂದು ಜಡದೇಶವಲ್ಲವೆಂಬುದನ್ನು ಪ್ರಮಾಣಗಳ ಮೂಲಕ ಖಚಿತಪಡಿಸಿದರು. ಚುಟಕ ಪದ್ಯಗಳ ಯುಗದಲ್ಲಿ ಮಹಾಕಾವ್ಯ ಉದಯಿಸಿದುದು ನಿಜವಾಗಿಯೂ ಮಹತ್ತರವಾದ ಘಟನೆಯೆಂದೂ, ಇದರಿಂದ ಕನ್ನಡ ನಾಡು ಮಾತ್ರವಲ್ಲ, ಇಡೀ ಭರತಖಂಡವೇ ಧನ್ಯವಾಯಿತೆಂದೂ ವಿನೋಬಾ ನುಡಿದರು. ತಮ್ಮ ಇತ್ತೀಚಿನ ಕೆಲವು ಕವನಸಂಗ್ರಹಗಳನ್ನೂ ಶ್ರೀರಾಮಾಯಣದರ್ಶನಂ ಮಹಾಕಾವ್ಯವನ್ನೂ ಕವಿಗಳು ಸಂತವರೇಣ್ಯರಿಗೆ ಸಮರ್ಪಿಸಿದರು. ಅವನ್ನು ನಿವೇದಿಸುವಾಗ ಮಹಾಕಾವ್ಯದ ಪ್ರತಿಯಲ್ಲಿ ಈ ಕೆಳಗಿನ ಕವನವನ್ನೂ ಬರೆದು ಅರ್ಪಿಸಿದರು :

**ಮನುಜರೂಪವ ಧರಿಸಿ ಧರೆಗಿಳಿದು ಬಂದಿರುವ**
**ದೇವಸೂರ್ಯ ಕರುಣ**
**ಕವಿದಿರುವ ಕತ್ತಲೆಯೊಳೊಂದೆ ಸಂಚರಿಸುತಿದೆ**
**ಅಮೃತ ಚಂದ್ರಕಿರಣ ;**
**ಪಾದಯಾತ್ರೆಯೊಳಿರುವ ಶ್ರೀ ವಿನೋಬನ ಅಮರ**
**ಅಗ್ನಿಶೀತ ಚರಣ !—**
**ಇಂದು ವಾಮನನಂತೆ ಬಂದೀ ತ್ರಿವಿಕ್ರಮಗೆ**
**ಕವಿಯ ನಮನ ಆನೃಣ**

ವಿನೋಬರು ಅವನ್ನು ಹರ್ಷಾತಿಶಯದಿಂದ ಸ್ವೀಕರಿಸಿ, ತಮ್ಮ ಗೀತಾ ಪ್ರವಚನದ ಪ್ರತಿಯೊಂದನ್ನು ಅವರಿಗೆ ಕೊಟ್ಟರು. ಏನಾದರೂ ಆಶೀರ್ವಚನ ಬರೆದು ಕೊಡುವಂತೆ ಕುವೆಂಪು ಬಿನ್ನವಿಸಿಕೊಂಡರು. ಆಗ ವಿನೋಬಾ ನಗುತ್ತ "ನಾನೇನು ಆಶೀರ್ವಚನ ಬರೆಯಲಿ ? ನಾನು ಹೇಳಬಹುದಾದ್ದು, ಹೇಳಲಾರದ್ದು—ಎಲ್ಲವೂ ಶ್ರೀರಾಮಾಯಣ ದರ್ಶನದಲ್ಲಿ ಅಡಗಿದೆ. ಅಂಥ ಮಹಾಕಾವ್ಯದ ದಾರ್ಶನಿಕ ಕವಿಗೆ ಆಶೀರ್ವಚನವೆ ?"

ಎಂದು, ಮೇಲೆದ್ದು ಕುವೆಂಪು ಅವರ ಭುಜದ ಮೇಲೆ ಕೈಯಿಟ್ಟರು. ಅವರೊಡನೆಯೆ ಕುವೆಂಪು ಅವರೂ ಮೇಲೆದ್ದು, ಹೋಗಿಬರುವುದಾಗಿ ಹೇಳಿ ಕೈಮುಗಿದರು. ''ಇಷ್ಟರಲ್ಲೆ ನಾನೂ ಮೈಸೂರಿಗೆ ಬರುತ್ತೇನೆ, ಕವಿಗಳ ಊರಿಗೆ ಬರುತ್ತೇನೆ'' ಎಂದು ವಿನೋಬಾ ನುಡಿದರು. ''ಮೈಸೂರು ನಗರ ಕೃತಕೃತ್ಯವಾಯಿತು'' ಎಂದು ಕವಿಗಳು ಭಾವಪರ ವಶರಾದರು. ''ನಾನು ಕವಿಯ ಮನೆಗೆ ಬರಬಹುದೆ ? ನನ್ನನ್ನು ಕರೆಯಲಿಲ್ಲವಲ್ಲ'' ಎಂದು ಸಂತರು ನಕ್ಕರು. ಕುವೆಂಪು ಹರ್ಷಾಶ್ಚರ್ಯದಿಂದ ಅವಾಕ್ಕಾದರು. ಮರುಕ್ಷಣ ದಲ್ಲಿಯೇ ''ಭಗವತ್ಕೃಪೆ ತಾನಾಗಿಯೇ ಹರಿದುಬರುವಾಗ ಬೇಡವೆನ್ನುವವನು ಮೂರ್ಖ. ತಾವು ಬರುವುದಾದರೆ ನಾನು ಕೃತಾರ್ಥನಾಗುತ್ತೇನೆ. ದಯೆಯಿಟ್ಟು ಬನ್ನಿ, ಆಶೀರ್ವಾದವನ್ನು ತನ್ನಿ'' ಎಂದು ಕವಿಗಳು ಕೈಮುಗಿದು ಪ್ರಾರ್ಥಿಸಿದರು.

ಆಚಾರ್ಯ ವಿನೋಬಾರು ಉದಯರವಿಗೆ ಬರುತ್ತಾರೆಂಬ ಸುದ್ದಿ ಬಹುಬೇಗನೆ ಊರು ಕೇರಿಗಳಲ್ಲಿ ಹರಡಿತು. ಆ ಹೊತ್ತಿಗಾಗಲೆ ಮೈಸೂರಿನ ಕೆಲವು ರಾಜಕೀಯ ಮುಖಂಡರು ತಂತಮ್ಮ ಮನೆಗಳಿಗೆ ಸಂತರನ್ನು ಆಹ್ವಾನಿಸಿದ್ದರು. ಆಚಾರ್ಯರು ಆ ಆಹ್ವಾನಗಳನ್ನು ನಿರಾಕರಿಸಿದ್ದರು. ವಿಶ್ವವಿದ್ಯಾನಿಲಯದ ಅಧಿಕಾರಿಗಳ ಮನೆಗೆ ಹೋಗುವವರು ತಮ್ಮ ಮನೆಗೇಕೆ ಬರಬಾರದು, ಅರಮನೆಗೇಕೆ ಹೋಗಬಾರದು, ಗುರುಮನೆಗೇಕೆ ಬಿಜಯಮಾಡಿಸಬಾರದೆಂದು ಕೆಲವರು ಅವಿವೇಕಿಗಳು ಕಿಡಿಕಿಡಿ ಯಾದರು. ತಾವು ಸರ್ವಜ್ಞರೆಂದು ಸರ್ವಶಕ್ತರೆಂದು ಹುಯಿಲೆಬ್ಬಿಸುವ ರಾಜಕೀಯ ಪುಡಾರಿಗಳು ಸ್ವಾತಂತ್ರ್ಯೋತ್ತರದ ಭರತಖಂಡದಲ್ಲಿ ಕಿಕ್ಕಿರಿದಿದ್ದಾರಷ್ಟೆ. ಮಹಾ ಕವಿಯ ಮಹಿಮೆ ಮಹಾತ್ಮರಿಗಲ್ಲದೆ ಅಲ್ಪಾತ್ಮರಿಗೆಂತು ಅರಿವಾಗುತ್ತದೆ ? ವಿನೋಬಾ ರವರು ಕುವೆಂಪು ಅವರ ಮನೆಗೆ ಹೋಗದಂತೆ ತಡೆಯಲೂ ಕೆಲವು ಕುತ್ಸಿತಬುದ್ಧಿಯ ಜನ ಪ್ರಯತ್ನ ನಡೆಸಿದರು. ಆದರೆ ಅವರ ಸಣ್ಣತನ ಆಚಾರ್ಯರಿಗೆ ಗೊತ್ತಾಯಿತು : ಅಂಥ ಹೀನಪ್ರಯತ್ನಗಳಿಗೆ ಅವರು ಮಣಿಯಲಿಲ್ಲ. ೨೫-೯-೧೯೫೭ರಂದು ಮೈಸೂರು ನಗರವನ್ನು ಪ್ರವೇಶಿಸುವುದಕ್ಕೆ ಮುಂಚೆಯೇ 'ಉದಯರವಿ'ಗೆ ಹೋಗಬೇಕೆಂಬ ತಮ್ಮ ನಿರ್ಧಾರವನ್ನವರು ಬದಲಿಸಲಿಲ್ಲ.

ವಿನೋಬಾರವರು ಮೈಸೂರಿಗೆ ಬರುವುದಕ್ಕೆ ಮುಂಚೆ ಇಲವಾಲದಲ್ಲಿ ಎರಡು ಮೂರು ದಿನ ತಂಗಿದ್ದರು. ಅಲ್ಲಿ ನಡೆದ ಸರ್ವೋದಯ ಸಮ್ಮೇಳನದಲ್ಲಿ ನಾಡಿನ ಹಲವಾರು ಮುಖಂಡರು ಭಾಗವಹಿಸಿದ್ದರು. ಪ್ರಧಾನಿ ಜವಹರಲಾಲರು ಅವರ ಸಂದರ್ಶನಕ್ಕೆಂದೇ ದೆಹಲಿಯಿಂದ ಬಂದಿದ್ದರು. ೨೨-೯-೧೯೫೭ ರಂದು ಸಂಜೆ ತಮ್ಮ ಪ್ರವಚನದಲ್ಲಿ ಕುವೆಂಪು ಅವರ ವಿಷಯವನ್ನೆತ್ತಿಕೊಂಡು ಕನ್ನಡ ನಾಡಿನ ಹಿರಿಮೆಯನ್ನು ಹೊಗಳಿದರು : "ಕರ್ಣಾಟಕವನ್ನು ನಾವು ಪ್ರವೇಶಿಸುವಾಗ ಇಲ್ಲಿನ ಪರಂಪರೆಯ ನಾಲ್ಕಾರು ಚೇತನಗಳ ಸ್ಮರಣೆ ಬಂತು. ಅವರಲ್ಲಿ ಆಂಜನೇಯನೊಬ್ಬ. ಆ ಆಂಜನೇಯ ಇಂದಿಗೂ ಚಿರಂಜೀವಿಯಾಗಿ ಕರ್ಣಾಟಕದಲ್ಲಿ ಸ್ಫೂರ್ತಿ ತುಂಬುತ್ತಿದ್ದಾನೆ ಎಲ್ಲ ಪ್ರಾಂತ

ಗಳಲ್ಲಿಯೂ ಹಿಂದಿನ ಕವಿ ಋಷಿಗಳು ರಾಮಾಯಣ ಕಾವ್ಯವನ್ನು ಬರೆದಿದ್ದಾರೆ. ಆದರೆ ಅರ್ವಾಚೀನ ಭಾಷೆಯಲ್ಲಿ ರಾಮಾಯಣ ಕಾವ್ಯದ ರಚನೆ ಆಗಿರುವುದು ಕನ್ನಡದಲ್ಲಿ ಮಾತ್ರವೇ ! ಇಂದು ಮಹಾಕಾವ್ಯ ರಚಿಸುವ ಪ್ರವೃತ್ತಿ ಇಲ್ಲವೆಂದೇ ಹೇಳಬಹುದು. ಆದರೆ ನಿಮ್ಮ ಪುಟ್ಟಪ್ಪನವರು ಮಹಾಕಾವ್ಯ ರಚಿಸಿದ್ದಾರೆ. ಇದಕ್ಕಾಗಿ ನೀವು ಹೆಮ್ಮೆ ಪಡಬೇಕು. ಪುಟ್ಟಪ್ಪನವರನ್ನು ಭೇಟಿಯಾದಾಗ 'ಇದು ಸಣ್ಣಪುಟ್ಟ ಕವನಗಳ ಕಾಲ ; ಮಹಾಕಾವ್ಯ ಉದ್ಭವವಾದದ್ದೇ ಆಶ್ಚರ್ಯ' ಎಂದು ವಿನೋದವಾಗಿ ಕೇಳಿದೆ. 'ಈ ಯುಗದಲ್ಲಿ ಮಹಾಕಾವ್ಯಕ್ಕೆ ಯೋಗ್ಯವಾಗಿರುವಂಥ ಅನೇಕ ಘಟನೆಗಳು ಈ ದೇಶದಲ್ಲಿ ನಡೆದಿವೆ. ಇಂಥ ಘಟನೆಗಳು ಇನ್ನೆಲ್ಲಿಯೂ ನಡೆದಿಲ್ಲ' ಎಂದು ಕವಿವಾಣಿಯಲ್ಲಿ ನುಡಿದರು. ಅವರ ಮಾತು ನಿಜ. ಹನುಮಂತನ ಪ್ರೇರಣೆಯಿಂದ ಅವರ ರಾಮಾಯಣ ಅವತಾರ ಪಡೆಯಿತೆಂದು ಹೇಳಬಹುದಲ್ಲವೆ ? ನೀವೆಲ್ಲರು ಹನುಮಂತನ ವಾನರಸೇನೆ ಯಲ್ಲಿ ಸೇರಿರಿ. ಗ್ರಾಮಸ್ವರಾಜ್ಯದ ಕೆಲಸಕ್ಕಾಗಿ ಗ್ರಾಮದಾನದ ಆಂದೋಳನದಲ್ಲಿ ಭಾಗಿಗಳಾಗಿರಿ. ಆಗ ಪುಟ್ಟಪ್ಪನವರು ನಿಮ್ಮ ಸಾಹಸದಿಂದ ಪ್ರೇರಣೆ ಪಡೆದು ಹೊಸ ರಾಮಾಯಣ ಬರೆಯುವಂತಾಗಲಿ !"

**ಹೇವಿಳಂಬಿಯಲಿ ಆ ಕೊಡಗು ದಾರಿಯಲಿ**
**ನಡೆದು ಬಂದರು ಅಂದು ಉದಯರವಿಗಾ**
**ನರವಿಭೂತಿ ಶ್ರೀ ವಿನೋಬಾಜಿ :**

ಹಿಂದಿನ ರಾತ್ರಿ ಮಳೆಹೊಯ್ದು ಇಡೀ ಭೂಮಂಡಲವೆ ಭಗವಂತನ ಕೃಪೆಯಲ್ಲಿ ಮಿಂದಂತೆ ಭಾಸವಾಗುತ್ತಿತ್ತು ; ವಾಯುಮಂಡಲ ಶುಭ್ರವಾಗಿತ್ತು ; ಎಲ್ಲೆಲ್ಲಿಯೂ ಹಸಿರು ಪಲ್ಲವಿಸುತ್ತಿತ್ತು ; ಮರಗಿಡಗಳಲ್ಲಿ ಹಕ್ಕಿಗಳು ಆನಂದದಿಂದ ಹಾಡಿ ಹಾರಾಡು ತ್ತಿದ್ದುವು ; ಮೆಲ್ಲೆಲರು ತೀಡುತ್ತಿತ್ತು : ಅರುಣಕಿರಣ ಪ್ರಶಾಂತವಾಗಿತ್ತು. ಭಗ ವತ್ಕೃಪೆಯೇ ಮೂರ್ತಿವೆತ್ತಂತಿದ್ದ ನರಋಷಿ ತಾನಿದ್ದೆಡೆಗೆ ಬರುವನೆಂದು, ತನ್ನ ಬದುಕು ಸಾರ್ಥಕವಾಯಿತೆಂದು, ಕವಿಯ ತಪಸ್ಸಿನಿಂದ ಮತ್ತು ಗಾನಸುಧೆಯಿಂದ ಮೊದಲೇ ಪವಿತ್ರವಾಗಿದ್ದ ತಾನು ಸಂತರ ಪಾದಧೂಳಿಯಿಂದ ಪವಿತ್ರತಮವಾಗುವೆ ನೆಂದು ಉದಯರವಿ ಹರ್ಷಾಬ್ಧಿಯಲ್ಲಿ ಮುಳುಗಿತ್ತು. ಗಿಡವೆಲ್ಲ ಹೂವಾಗಿ, ಮರವೆಲ್ಲ ತಳಿರಾಗಿ, ಮಣ್ಣೆಲ್ಲ ಹಸುರಾಗಿ ಸಚರಾಚರವಸ್ತುಗಳಲ್ಲೆಲ್ಲ ಸ್ವಾಗತಾನಂದದ ಸಂಭ್ರಮ ಎದ್ದುಕಾಣುತ್ತಿತ್ತು. ಮನೆಯ ಮುಂದಣ ರಂಗವಲ್ಲಿ ವಿನೋಬಾ ಪಾದಸ್ಪರ್ಶಕ್ಕಾಗಿ ಹಾತೊರೆಯುತ್ತಿತ್ತು. ಇಡೀ ವಾತಾವರಣವೆ ಸುಗಂಧದಲ್ಲದ್ದಿದಂತೆ ಸರ್ವೇಂದ್ರಿಯ ಶಕ್ತಿಯನ್ನು ಏಕೀಭೂತಗೊಳಿಸಿತ್ತು. ವಿನೋಬಾರನ್ನು ಸ್ವಾಗತಿಸುವ ಸಲುವಾಗಿ ಕುವೆಂಪು ಅವರು ವಿನೋಬಾ ಹೆದ್ದಾರಿ ಮತ್ತು ಗೋಕುಲ ರಸ್ತೆ ಕೂಡುವೆಡೆ ಬೆಳಗಿನ ೬½ ಗಂಟೆಯಿಂದ ಕಾದು ನಿಂತರು. ದಾರಿಯ ಇಕ್ಕೆಲಗಳಲ್ಲಿ ಋಷಿದರ್ಶನ ಕಾತರರಾಗಿ ಜನಸ್ತೋಮ ಸಂದಣಿಸಿತ್ತು. ಗಾಳಿಯಲ್ಲಿ ತೇಲಿ ಬರುವಂತಿದ್ದ ಭೂದಾನ

ಯಾತ್ರಿಯನ್ನು ಕಂಡಕೂಡಲೆ 'ಸಂತ ವಿನೋಬಾ ಕೀ ಜೈ' ಎಂದು ಜನ ಘೋಷಿಸಿತು. ಮಿಂದು ಮಡಿಯುಟ್ಟು ತಿಲಕಧಾರಿಯಾಗಿ ತೇಜಃಪ್ರುಂಜ ವದನದಿಂದ ಕಂಗೊಳಿಸುತ್ತ, ಭಕ್ತಿಭಾರದಿಂದ ಬಾಗಿ ನಿಂತಿದ್ದ ಕುವೆಂಪು ಅವರನ್ನು ಕಂಡಕೂಡಲೆ ವಿನೋಬಾರವರ ಕಣ್ಣುಗಳಲ್ಲಿ ನಗು ಸೂಸಿತು. ''ಇಗೋ ಬಂದೇಬಿಟ್ಟೆ, ಮಹಾಕವಿಯ ಮನೆಗಾಗಿ'' ಎಂದು ಕುವೆಂಪು ಅವರನ್ನು ಪಕ್ಕಕ್ಕೆಳೆದುಕೊಂಡು, ಉದ್ದಕ್ಕೂ ಅವರ ಕೈಹಿಡಿದು ಕೊಂಡು ಜಿಂಕೆಯಂತೆ ಹೆಜ್ಜೆಯಿಡುತ್ತ—ಇಲ್ಲ, ಮೋಡಲಿನಂತೆ ಗಾಳಿಯಲ್ಲಿ ತೇಲುತ್ತ—ಉದಯರವಿಗೆ ಬಂದರು. ಮನೆಯ ಮುಂದಲೆಯ ತೋಟದಲ್ಲಿ ನಡೆ ನಿಧಾನ ವಾಯಿತು. ಏನನ್ನೊ ಅರಸುವವರಂತೆ ವಿನೋಬಾರವರು ಸುತ್ತಮುತ್ತಣ ಸುಂದರ ಪರಿಸರವನ್ನು ಈಕ್ಷಿಸಿದರು. ಆ ಉದ್ಯಾನವಲ್ಲಿ ಸೌಂದರ್ಯರೂಪ ಭಗವಂತನನ್ನು ದರ್ಶಿಸಿದ ಅನುಭವವಾಯಿತೊ ಏನೊ ಆನಂದ ಪುಲಕಿತರಾದರು. ಯಕ್ಷರಂತೆ ನಿಂತಿದ್ದ ಹೆಬ್ಬಾಗಿಲು ಮುಂದಣ 'ಪ್ರಾರ್ಥನಾ-ಕೃಪಾ' ವೃಕ್ಷಗಳ ನಡುವೆ ಕ್ಷಣಕಾಲ ನಿಂತು, ಸುತ್ತಲೂ ದೃಷ್ಟಿ ಹರಿಸಿ ಮನೆಯೊಳಗೆ ಪ್ರವೇಶಿಸಿದರು.

ಅವರು ಉದಯರವಿಯನ್ನು ಪ್ರವೇಶಿಸುತ್ತಿದ್ದಂತೆ ಕುವೆಂಪು ಸಾನಂದ ಗದ್ಗದ ದಿಂದ 'ನಾನು ಧನ್ಯನಾದೆ, ನನ್ನ ಮನೆ ಧನ್ಯವಾಯಿತು, ನನ್ನ ಮನೆತನ ಧನ್ಯವಾಯಿತು' ಎಂದು ನುಡಿದರು. ಮನೆಯೊಳಗಿನ ಹಜಾರದಲ್ಲಿ ಅವರು ಕುಳಿತುಕೊಳ್ಳಲು ಲೋಡಿನ ವ್ಯವಸ್ಥೆಮಾಡಿತ್ತು. ಕುವೆಂಪು ಕೃತಿಗಳನ್ನೆಲ್ಲ ಅವರ ಪಕ್ಕದಲ್ಲಿ ಜೋಡಿಸಿತ್ತು. ವಿನೋಬಾರವರು ಅವನ್ನೆಲ್ಲ ಒಂದೊಂದಾಗಿ ತೆಗೆದು ನೋಡುತ್ತ, ಆಯಾಯ ಕೃತಿಯ ಬಗ್ಗೆ ವಿಚಾರಿಸುತ್ತಿದ್ದರು. ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಹಸ್ತಪ್ರತಿ ಯನ್ನು ಕೇಳಿ ತರಿಸಿಕೊಂಡು ತಿರುವಿಹಾಕಿದರು. ಕಲಾ ತಾರಿಣಿಯರು ಕುವೆಂಪು ಅವರ ಎರಡು ಭಕ್ತಿ ಗೀತೆಗಳನ್ನು ಹಾಡಿದಾಗ ವಿನೋಬಾರವರು ಕಣ್ಮುಚ್ಚಿಕೊಂಡು ಪ್ರಾರ್ಥನಾ ಭಂಗಿಯಲ್ಲಿ ಕುಳಿತಿದ್ದರು. ಪಾದಯಾತ್ರಿಕರಿಗೆ ಪ್ರಸಾದ ವಿನಿಯೋಗವಾಗು ತಿತ್ತು. ಪ್ರಸಾದ ಸ್ವೀಕರಿಸುವಂತೆ ಕವಿಗಳು ಸಂತವರೇಣ್ಯರನ್ನು ಪ್ರಾರ್ಥಿಸಿದರು. ''ರಸನೇಂದ್ರಿಯದಿಂದ ಸ್ವೀಕರಿಸಿದ್ದು ಮಾತ್ರ ಪ್ರಸಾದವೆ ? ಶ್ರದ್ಧಾಭಕ್ತಿಯಿಂದ ಇತರೇಂದ್ರಿಯಗಳ ಮೂಲಕ ಸ್ವೀಕರಿಸಿದ್ದೂ ಪ್ರಸಾದವಾಗುತ್ತದೆ. ಶ್ರೀರಾಮಾಯಣ ದರ್ಶನದ ಹಸ್ತಪ್ರತಿಯನ್ನು ನೋಡಿದೆ. ಇದಕ್ಕಿಂತ ಮಿಗಿಲಾದ ಪ್ರಸಾದ ಯಾವುದು ? ಇದೆತಾನೆ ಸಂಗೀತ ಪ್ರಸಾದವನ್ನನುಭವಿಸಿದೆ. ಅದಿರಲಿ. ಈ ಮಹಾಕಾವ್ಯವನ್ನು ರಚಿಸಿದ ಸ್ಥಳವನ್ನು ತೋರಿಸಿ'' ಎಂದರು. ಶ್ರೀಯುವರು ಅವರ ಕೈಹಿಡಿದು ಕರೆದೊಯ್ದು ತಮ್ಮ ಅಧ್ಯಯನ ಕಕ್ಷ್ಯವನ್ನು ತೋರಿಸಿದರು. ವಿನೋಬಾರವರ ಅಪೇಕ್ಷೆಯಂತೆ ದೇವರ ಮನೆಯನ್ನು ತೋರಿಸಿದರು. ಅವರಲ್ಲಿ ಕ್ಷಣಕಾಲ ಭಕ್ತಿ ಪರವಶರಾಗಿ ಕೈಜೋಡಿಸಿ ನಿಂತುಕೊಂಡರು. ''ಇದು ನಿಜಕ್ಕೂ ಕವಿಗೃಹವೇ ಆಗಿದೆ. ನೀವು ಸಂತಕವಿಗಳು. ನಾನಿಲ್ಲಿಗೆ ಬಂದದ್ದು ಸಾರ್ಥಕವಾಯಿತು. ನಾನಿನ್ನು ಬರಲೆ ?''

ಎಂದು ವಿನೋಬಾರವರು ನಮಸ್ಕಾರಮಾಡಿ ಪಾದಯಾತ್ರೆ ಮುಂದುವರಿಸಿದರು. ಕುವೆಂಪು ಅವರು ಮನೆಯ ಗಡಿಯಲ್ಲಿ ನಿಂತು ಅವರನ್ನು ಬೀಳ್ಕೊಟ್ಟರು.

ಅದೇ ದಿನ ಸಂಜೆ ಅಠಾರಾಕಚೇರಿಯ ಮುಂದಿನ ಮೈದಾನದಲ್ಲಿ ಸೇರಿದ್ದ ಸಾರ್ವಜನಿಕ ಸಭೆಯಲ್ಲಿ ಮಾತಾಡುತ್ತ ಕುವೆಂಪು ಅವರ ಬಗೆಗೆ ಈ ರೀತಿ ಹೇಳಿದರು : "ಮೈಸೂರು ಸಂಸ್ಕೃತಿಯ ಕೇಂದ್ರವೆಂಬುದನ್ನು ನಾನು ಮೊದಲಿಂದ ಬಲ್ಲೆ. ಇದು ಕಲೆಗಳ ತವರಾಗಿದೆ. ನಾನಿಲ್ಲಿಗೆ ಬಂದಿರುವುದು ಇದು ಕೇವಲ ರಾಜಧಾನಿಯೆಂದಲ್ಲ ; ಇದು ಸಾಂಸ್ಕೃತಿಕ ಕ್ಷೇತ್ರವೆಂಬ ದೃಷ್ಟಿಯಿಂದ. ಈ ಸಾಂಸ್ಕೃತಿಕ ಸಾಮ್ರಾಜ್ಯದ ಸಾಮ್ರಾಟರು ನಿಮ್ಮ ಪುಟ್ಟಪ್ಪನವರು. ಅವರು ಆಧುನಿಕ ವಾಲ್ಮೀಕಿಗಳು, ಆದ್ದರಿಂದಲೆ ಈ ಊರನ್ನು ಪ್ರವೇಶಿಸುವ ಮೊದಲೇ ಅವರ ಮನೆಗೆ ಹೋಗಿ ಅವರ ಆಶೀರ್ವಾದ ಪಡೆದು ಬಂದಿದ್ದೇನೆ. ನನ್ನೆಲ್ಲ ಕಾರ್ಯಕ್ಕೆ ಅವರ ಬೆಂಬಲವಿದೆಯೆಂಬುದನ್ನು ಬಲ್ಲೆ ಮೈಸೂರು ಆಂಜನೇಯನ ನಾಡು. ಇಲ್ಲೆಲ್ಲ ಆಂಜನೇಯ ಶಕ್ತಿ ಸಂಚರಿಸಿ ಪುಟ್ಟಪ್ಪ ನವರಂಥ ಕವಿಗಳ ಕೈಲಿ ಎಂಥ ಕೆಲಸವನ್ನು ಮಾಡಿಸುತ್ತಿದೆಯೆಂಬುದನ್ನು ನಾನು ಬಲ್ಲೆ. ಶ್ರೀ ರಾಮಾಯಣ ದರ್ಶನಂ ಈ ಯುಗದ ಮಹಾಕಾವ್ಯವೆಂದೂ ಇದಕ್ಕೆ ಸರಿಗಟ್ಟುವ ಕಾವ್ಯ ಮತ್ತೊಂದಿಲ್ಲವೆಂದೂ, ಇದು ಜನತೆಯ ಜೀವನವನ್ನು ಉತ್ತಮಗೊಳಿಸು ವುದರಲ್ಲಿ ಸಂದೇಹವಿಲ್ಲವೆಂದೂ ಧೈರ್ಯವಾಗಿ ಹೇಳಬಲ್ಲೆ.

"ನಿಮ್ಮ ನಗರದೊಂದಿಗೆ ನಾನು ತುಂಬ ಪರಿಚಿತ. ಯಾವಾಗಲೂ ನಾನು ಇಲ್ಲಿಗೆ ಬಂದಿಲ್ಲ. ಮಾನಸಿಕ ನೇತ್ರಗಳಿಂದ ಈ ನಗರದ ದರ್ಶನ ಅನೇಕ ಬಾರಿ ಮಾಡಿ ದ್ದೇನೆ. ನಮ್ಮ ದೇಶದಲ್ಲಿ ಬಹುಶಃ ಶ್ರೀ ಪುಟ್ಟಪ್ಪನವರಿಗೆ ಸರಿಸಾಟಿಯಾಗಬಲ್ಲಂತಹ ಕವಿಗಳು ಇಲ್ಲ. ಹಿಂದೂಸ್ಥಾನದ ಯಾವ ಭಾಷೆಯಲ್ಲಾದರೂ ಸರಿಯೆ. ಅತ್ಯಂತ ವೈಜ್ಞಾನಿಕವೂ, ಆಧ್ಯಾತ್ಮಿಕವೂ ಮತ್ತು ಆಧುನಿಕವೂ ಆದ ದೃಷ್ಟಿಯಿಂದ ಅವರು ಮಹಾಕಾವ್ಯ ರಚನೆ ಮಾಡಿದ್ದಾರೆ. ಅವರು ದಾರ್ಶನಿಕರು. ಅವರ ದರ್ಶನದಲ್ಲಿ ವೈಶಿಷ್ಟ್ಯವಿದೆ. ಅವರು ರಚಿಸಿದ್ದು ನವ್ಯ ರಾಮಾಯಣ. ಈ ನಗರಕ್ಕೆ ಬಂದಕೂಡಲೇ ಅವರ ದರ್ಶನವಾದದ್ದು ಆನಂದದಾಯಕ ವಿಷಯ."

ಮೈಸೂರು ಬಿಡುವ ಹಿಂದಿನ ದಿನ ಮತ್ತೊಂದು ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತ ವಿನೋಬಾ ಅವರು ವಿದ್ಯಾಭ್ಯಾಸದ ಎಲ್ಲ ಮಟ್ಟಗಳಲ್ಲಿಯೂ ಕನ್ನಡ ಶಿಕ್ಷಣ ಮಾಧ್ಯಮವಾಗಬೇಕೆಂದೂ ಪುಟ್ಟಪ್ಪನವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿರುವುದು ಮೈಸೂರು ಜನತೆಯ ಪುಣ್ಯವೆಂದೂ ಅವರನ್ನು ಉಪ ಕುಲಪತಿಗಳನ್ನಾಗಿ ಮಾಡಿ ಮೈಸೂರು ಸರ್ಕಾರ ಧನ್ಯವಾಯಿತೆಂದೂ ತಿಳಿಸಿದರು. ೨೮-೯-೫೭ರಂದು ಬೆಳಗ್ಗೆ ವಿನೋಬಾರವರು ಮೈಸೂರು ಬಿಡುವ ಮುನ್ನ ಅವರ ಆಶೀರ್ವಾದ ಪಡೆದು, ಅವರನ್ನು ಕಳಿಸಿಬರುವ ಸಲುವಾಗಿ ಕುವೆಂಪು ಅವರು ಬೆಳಗಿನ ನಾಲ್ಕು ಗಂಟೆಯ ಹೊತ್ತಿಗೆ ಅವರ ಬಿಡಾರಕ್ಕೆ ಹೋದರು. ಆಗ ಅವರಿಗರ್ಪಿಸಿದ

'ಅಗ್ನಿಹಂಸ' ಕವನ ಸಂಗ್ರಹದ ಪ್ರತಿಯಲ್ಲಿ ಕೆಳಗಿನ ಪಂಕ್ತಿಗಳನ್ನು ಬರೆದುಕೊಟ್ಟರು.

ಹೇ ಜಗದ್ ದೀನ ಬಂಧು,
'ಮನೆಯೆ ಕ್ಷೇತ್ರವಾಯಿತಿಂದು'
'ಉದಯರವಿ'ಗೆ ನೀನು ಬಂದು :
ಕೆರೆಯೆ ಆಯ್ತು ಮಹಾ ಸಿಂಧು
ಪೂಜ್ಯ ಓ ತಪೋಧನ !
ಪಾದಯಾತ್ರೆಯಮೃತ ರೇಖೆ
ಮನೆಯ ಮೇಲೆ ಹಾಯ್ದುದಕ್ಕೆ
ನಿನಗನಂತ ವಂದನ,
ಪುನರನಂತ ವಂದನ.

"ನಿಮ್ಮಂಥ ಕವಿಗಳಿರುವಾಗ ನಾಡು ನುಡಿಗಳಿಗೆ ಭಯವಿಲ್ಲ. ನಮಸ್ಕಾರ, ಹೋಗಿ ಬರುತ್ತೇನೆ" ಎಂದು ವಿನೋಬಾ ನುಡಿದು ಕುವೆಂಪು ಅವರ ಜೋಡಿಸಿದ ಕೈಗಳನ್ನು ಹಣೆಗೊತ್ತಿಕೊಂಡರು. ಮೈಸೂರು ದೇಶದ ಪಾದಯಾತ್ರೆಯ ಕಾಲದಲ್ಲಿ ಪ್ರತಿನಿತ್ಯ ಪ್ರಾರ್ಥನಾಸಭೆಯಲ್ಲಿ ಶ್ರೀರಾಮಾಯಣದರ್ಶನವನ್ನೋದಿಸಿ. ಕೇಳಿ, ವ್ಯಾಖ್ಯಾನರೂಪದ ಪ್ರಸಾದವನ್ನು ಯಾತ್ರಿಕರಿಗೆ ನೀಡುತ್ತಿದ್ದರು. ಮಂಡ್ಯ ಜಿಲ್ಲೆಯ ಹನಕೆರೆಯಲ್ಲಿ ಬಿಡಾರ ಹೂಡಿದ್ದಾಗ ಶ್ರೀರಾಮಾಯಣ ದರ್ಶನದ ಆಧಾರದ ಮೇಲೆ ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ನಿರ್ಮಿಸಿದ್ದ ಶಬರಿಯ ಚಲನಚಿತ್ರವನ್ನು ಬಾಬಾರವರಿಗೆ ತೋರಿಸಲಾಯಿತು. ಅದನ್ನು ನೋಡಿ ಸಂತೋಷಗೊಂಡ ಬಾಬಾರವರು "ಪ್ರತಿಯೊಂದು ಹಳ್ಳಿಯಲ್ಲಿಯು ಆಗಾಗ್ಗೆ ಇಡೀ ರಾಮಾಯಣದ ಚಲನಚಿತ್ರವನ್ನು ತೋರಿಸಬೇಕು. ಶಬರಿಯ ಚಿತ್ರವೊಂದೆ ಸಾಲದು. ಇದರಿಂದ ನಮ್ಮ ಜನರಿಗೆ ರಾಮರಾಜ್ಯದ ಕಲ್ಪನೆ ತುಸುವಾದರೂ ಆದೀತು" ಎಂದರು.

ಕಾರಾಗೃಹ ವಾಸದಲ್ಲಿ ಹಿಂದಿಸಾಹಿತ್ಯದಲ್ಲಿ ಅನುಭವ ಪಡೆದಿದ್ದ ಸರ್ದಾರ್ ವೆಂಕಟರಾಮಯ್ಯನವರ ಸಹೋದರರಾದ ದಿವಂಗತ ಎಚ್. ವಿ. ಶ್ರೀನಿವಾಸಮೂರ್ತಿಗಳು ಹೆಚ್ಚಾಗಿ ಸರ್ವೋದಯ ಮತ್ತು ಗಾಂಧಿಜೀ ಅವರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಿಂದಿ ಭಾಷಾ ಕೃತಿಗಳನ್ನು ತರಿಸಿ ಕನ್ನಡ ಅನುವಾದ ಮಾಡಿ ವಿಚಾರಗಳನ್ನು ತಿಳಿಸುತ್ತಿದ್ದರು. ನನಗೆ ಬಹುವಾಗಿ ಮೆಚ್ಚಿಗೆ ಆದದ್ದು ಸಂತ ಆಚಾರ್ಯ ವಿನೋಬರವರ ಜೀವನ 'ಜೈ ಜಗತ್' ಎಂಬ ಘೋಷಣೆ. ಕುವೆಂಪು ಅವರ 'ವಿಶ್ವಮಾನವ' ತತ್ವದ ಎಲ್ಲೆಯನ್ನೂ ಮೀರಿದುದು. ಜಗತ್ತಿನ ಸಮಾಜದಲ್ಲಿ ದುಡಿವವನು ಸಮಾಜದ ಋಣದಿಂದ ಬದುಕಿ ಬಾಳುತ್ತಾನೆ. ತನ್ನ ಗಳಿಕೆಯಲ್ಲಿ ಸಮಾಜಕ್ಕೆ ಐದನೇ ಒಂದಂಶ ನೀಡಬೇಕೆಂಬ ತತ್ವಕ್ಕೆ ಮಣಿದವನು.

ಪ್ರತಿವರ್ಷವೂ ನನ್ನ ಆದಾಯದ ಒಂದಂಶವನ್ನು ಮಹಾಕವಿ ಕುವೆಂಪು ಅವರ

'ವಿಶ್ವಮಾನವ ಗೀತೆ ಮತ್ತು ಸಪ್ತಸೂತ್ರ ಪಂಚ ಮಂತ್ರಗಳು, ಸರಳ ಮದುವೆ, ಮಂತ್ರ ಮಾಂಗಲ್ಯ, ಕರೆಯುತಿದೆ ಸಮೂಲ ಕ್ರಾಂತಿ, ಹಾಗೂ ವೈಚಾರಿಕ, ವೈಜ್ಞಾನಿಕ ಕವನಗಳು ಇವುಗಳ ಜೊತೆಗೆ ಮಕ್ಕಳಿಗೆ ಬರೆದಿರುವ ಕವನಗಳನ್ನು ಅಚ್ಚು ಹಾಕಿಸಿ ಸಭೆ ಸಮಾರಂಭಗಳಲ್ಲಿ ವಿತರಣೆ ಮಾಡುತ್ತಿದ್ದು ಇಂದೂ ಈ ಕಾರ್ಯ ಮುಂದು ವರಿಯುತ್ತಿದೆ.

ಮಂಡ್ಯ ನಗರ ಸಭೆಯುವರು ಹೊಸದಾಗಿ ನಗರದ ರಸ್ತೆಗಳಿಗೆ ನಾಮಕರಣ ಮಾಡಲು ತೀರ್ಮಾನಿಸಿ ಕಾರ್ಯಕ್ರಮ ಕೈಗೊಂಡಾಗ ನನ್ನ ನಿವಾಸದ ರಸ್ತೆಗೆ ವಿನೋಬ ರಸ್ತೆ ಎಂದು ನಾಮಕರಣ ಮಾಡಿಸಿದ್ದೇನೆ. ಹೀಗೆ ಆಚಾರ್ಯ ವಿನೋಬರವರ ಭೂದಾನ ಚಳುವಳಿಯಲ್ಲಿ ನಾನು ಸಾಧಾರಣ ಸದಸ್ಯನಾಗಿ ಕೆಲಸ ಮಾಡಿದೆ.

ನಾಲಾ ಬಯಲ ರೈತರಿಗೆ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಹಂಬಲ ದಿನದಿಂದ ದಿನಕ್ಕೆ ಬೆಳೆದು ಬರುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆ ಆಳಿಕೆ, ಚಿಕ್ಕಬಳ್ಳಾಪುರದ ಬಳಿ ಮುದ್ದೇನ ಹಳ್ಳಿ ಮತ್ತು ಮಾಗಡಿ ಬಳಿ ಚನ್ನೇನ ಹಳ್ಳಿಗಳ ಶಾಲೆಗಳಿಗೆ ಬಹು ದುಬಾರಿಯಾದರೂ, ಹಣವುಳ್ಳ ರೈತರು ತಮ್ಮ ಮಕ್ಕಳನ್ನು ಸೇರಿಸುತ್ತಾರೆ. ಕಾಲೇಜ್ ವಿದ್ಯಾಭ್ಯಾಸದವರೆಗೆ ಅಲ್ಲಿ ಅವಕಾಶವಿಲ್ಲದೆ ಬಹಳ ಮಕ್ಕಳು ಪಿ. ಯು. ಸಿ. ಬಿಟ್ಟು ಬಂದು ಮುಂದೆ ಹೋಗಲಾರದೆ ಮುಗ್ಗರಿಸುತ್ತಿದ್ದರು. ಒಮ್ಮೆ ಸಾತನೂರಿನ ನಮ್ಮ ಬೀಗರಾದ ಎ. ಸಿದ್ದಯ್ಯನವರ ಮಕ್ಕಳನ್ನು ಮುದ್ದೇನ ಹಳ್ಳಿ ಶಾಲೆಗೆ ಸೇರಿಸಲು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷನಾಗಿದ್ದ ನಾನೇ ಖುದ್ದು ಡಿ.ಪಿ.ಐ. ಅವರಾಗಿದ್ದ ಸಾ. ಮಂಜಯ್ಯನವರ ಶಿಫಾರ್ಸಿನೊಡನೆ ಹೋದೆನು. ಊಹೂಂ ಜಪ್ಪಯ್ಯ ಎಂದರು ಹುಡುಗರಿಗೆ ಸೀಟುಗಳು ಸಿಗಲಿಲ್ಲ. ಬೇಜಾರಾದ ಬೀಗರು ಏಕೆ ಸಾರ್ ಸಾತನೂರಿನ ನರಸಿಂಹಸ್ವಾಮಿ ಬೆಟ್ಟದ ತಪ್ಪಲಲ್ಲಿ ಇಂತಹ ಉತ್ತಮ ಶಾಲೆ ತೆರೆಯಬಾರದು. ನಮ್ಮದು ಜಮೀನಿದೆ ಬೇಕಾದರೆ ಕೊಡುತ್ತೇನೆ. ಇತರರೂ ಕೊಡುತ್ತಾರೆಂದು ತಿಳಿಸಿದರು.

ನಾನು ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ ಮಂಡ್ಯ ಶಾಖೆಯ ಟ್ರಸ್ಟಿಗಳಲ್ಲಿ ಒಬ್ಬನಾಗಿದ್ದೆ. ಮಾಸಿಕ ಸಭೆಯಲ್ಲಿ ಉತ್ತಮ ರೀತಿ ಶಾಲೆ ತೆರೆಯಲು ಸ್ವಾಮಿಗಳಿಗೆ ತಿಳಿಸಿ ಸಲಹೆ ಮಾಡಬೇಕೆಂದು ತೀರ್ಮಾನಿಸಲಾಯ್ತು. ವಕೀಲರಾದ ಕೆ. ರಾಮೇಗೌಡರು, ನಾನು, ಉಪಾಧ್ಯಕ್ಷ ಆತ್ಮಾನಂದ, ಕಾರ್ಯಾಧ್ಯಕ್ಷ ಎಚ್. ಡಿ. ಚೌಡಯ್ಯ, ಜಿ. ಬಿ. ರಾಮಕೃಷ್ಣ, ಅಣ್ಣಯ್ಯ ಮುಂತಾದವರು ಕಾರ್ಯೋನ್ಮುಖರಾದೆವು. ಸ್ವಾಮಿಜೀ ಅವರ ಕರೆಗೆ ಮನ್ನಣೆಯಿತ್ತು ರೈತರು ಒಂದು ನೂರು ಎಕರೆ ಜಮೀನನ್ನು ದಾನ ರೂಪದಲ್ಲಿತ್ತು ಸಹಾಯಕರಾದರು. ಇಂದು ''ವಿಶ್ವಮಾನವ'' ಪ್ರೌಢಶಾಲೆ ನಡೆಯುತ್ತಿದ್ದು ನೂರು ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಇದರ ಜೊತೆಗೆ ಶ್ರೀ ಆದಿಚುಂಚನ ಗಿರಿ ವೈದ್ಯಕೀಯ ಮಹಾ ವಿದ್ಯಾಲಯ ನಿರ್ಮಾಣ ಕಾರ್ಯ ಸಹ ಅಲ್ಲಿ ನಡೆಯುತ್ತಿದೆ. ನಮ್ಮ ಬೀಗರು ಎ. ಸಿದ್ದಯ್ಯನವರ ಭೂಮಿಯಲ್ಲಿ ಆರಂಭಿಸಲು ಯೋಚಿಸಿದ ಯೋಜನೆ ''ನದಿ ಮೂಲದಂತೆ ದೊಡ್ಡ ಪಟ್ಟಣವಾಗಿ ನಿರ್ಮಾಣ ಆಗುತ್ತಿದೆ ವಿಶ್ವಮಾನವದಲ್ಲಿ. ಮಂಡ್ಯ ಜಿಲ್ಲೆಯಲ್ಲಿ ಸ್ವಾಮಿಜೀ ಅವರ ಪ್ರವಾಸ ಏರ್ಪಡಿಸಿ ಉತ್ತಮ ಶಾಲೆ ನಡೆಸಲು ತೀರ್ಮಾನ ಕೈಗೊಂಡೆವು. ಈ ಮಧ್ಯೆ ಸ್ವಾಮಿಜೀ ಅವರನ್ನು ಭೇಟಿ ಮಾಡಿ ಲೋಕಾಭಿರಾಮವಾಗಿ ಮಾತನಾಡುತ್ತ ಸಾಹಿತ್ಯ

ಕ್ಷೇತ್ರದಲ್ಲಿ ಲೋಭಿಗಳಾದವರು ಸಾಹಿತ್ಯ ರಚಿಸಿದವರ ಹೆಸರೇ ಇಲ್ಲದಂತೆ ನಾಶ ಮಾಡುತ್ತಾರೆಂದೂ, ದೇಶಹಳ್ಳಿ ಶ್ರೀಕಂಠೇಶಗೌಡರ ಹೆಸರನ್ನೇ ಆ ಕ್ಷೇತ್ರದಿಂದ ಕಿತ್ತೊಗೆಯಲಾಗಿತ್ತೆಂದು ತಿಳಿಸಿದೆ. ಈ ಮೊದಲೇ ರಾಷ್ಟ್ರಕವಿ ಕುವೆಂಪು ಅವರ ವಿಶ್ವ ಮಾನವ ಸಂದೇಶದೆಡೆ ಸ್ವಾಮಿಗಳು ಗಮನ ಹರಿಸಿ ಅಲ್ಲಲ್ಲಿ ತಮ್ಮ ಆಶೀರ್ವಚನದಲ್ಲಿ ಪ್ರಸ್ತಾಪಮಾಡಿ ಜಗತ್ತಿನ ಸರ್ವಜನಾಂಗವು ವಿಶ್ವಮಾನವ ತತ್ವ ಅಳವಡಿಸಿಕೊಳ್ಳ ಬೇಕೆಂದು ಹೇಳುತ್ತ ಬರುತ್ತಿದ್ದರು.

ಶ್ರೀ ಮಠದ ಹೆಸರಿನಲ್ಲಿ ಮಹಾಕವಿ ಕುವೆಂಪು ಅವರ ವಿಶ್ವಮಾನವ ಗೀತೆ, ಪಂಚಮಂತ್ರ ಸಪ್ತ ಸೂತ್ರಗಳನ್ನು ಅಮೃತ ಶಿಲೆಗಳಲ್ಲಿ ಕೆತ್ತಿಸಿರಿ ಎಂದು ಆದೇಶ ನೀಡಿದರು. ಅದರಂತೆ ಅಮೃತಶಿಲೆಯಲ್ಲಿ ಕೆತ್ತಿಸಲಾಯ್ತು. ಒಮ್ಮೆ ನಾನು ಮತ್ತು ಕೆ. ರಾಮೇಗೌಡರು ವಿಶ್ವಕವಿ ಕುವೆಂಪು ಅವರ ನಿವಾಸಕ್ಕೆ ಹೋಗಿ ಮಠದ ಕಾರ್ಯ ಕ್ರಮಕ್ಕೆ ಆಹ್ವಾನಿಸಿದೆವು. ಮಧ್ಯೆ ವಿಶ್ವಮಾನವ ಗೀತೆ ಅನಿಕೇತನ ಅಮೃತ ಶಿಲೆಯಲ್ಲಿ ಕೆತ್ತಿ ಸಿದ್ಧವಾಗಿದೆ. ಶ್ರೀ ಆದಿಚುಂಚನ ಗಿರಿ ಸ್ವಾಮಿಜೀ ಅವರು ಈ ಕಾರ್ಯಕ್ರಮ ಹಾಕಿಕೊಂಡು ಉತ್ತಮ ವಸತಿ ಶಾಲೆ ಆರಂಭಿಸಲು ಧನ ಸಂಗ್ರಹ ಮಾಡುತ್ತಿದ್ದಾ ರೆಂದೂ, ಮಂಡ್ಯ ಸಮೀಪ ಸಾತನೂರು ನರಸಿಂಹಸ್ವಾಮಿ ಬೆಟ್ಟದ ತಪ್ಪಲಲ್ಲಿ ಆರಂಭಿಸಲು ಆಲೋಚಿಸಲಾಗಿದೆ ಎಂದು ತಿಳಿಸಿದೆವು. ಆ ಕೇಂದ್ರಕ್ಕೆ "ವಿಶ್ವಮಾನವ" ಎಂದು ನಾಮಕರಣ ಮಾಡಿದ್ದೇನೆಂದು ಸ್ವಾಮೀಜಿಗೆ ತಿಳಿಸಿರಿ. ಆ ಹೆಸರಿನಿಂದ ಆ ಕೇಂದ್ರ ಪ್ರಖ್ಯಾತವಾಗಲಿ ಎಂದು ಹರಸಿದರು.

ಮೈಸೂರಿನಲ್ಲಿ ಶ್ರೀ ಆದಿಚುಂಚನ ಗಿರಿ ಶಿಕ್ಷಣ ಟ್ರಸ್ಟಿಗೆ ಅಬಲಾಶ್ರಮ ಸ್ಥಾಪಿಸಲು ಕುವೆಂಪು ನಗರದಲ್ಲಿ ಮೈಸೂರು ಅಭಿವೃದ್ಧಿ ಪ್ರಾಧಿಕಾರದವರು ಒಂಭತ್ತು ಎಕರೆ ಜಮೀನು ನೀಡಿದ್ದರು. ಈ ಜಮೀನಿನಲ್ಲಿ ಅಬಲಾಶ್ರಮ ಸ್ಥಾಪಿಸಲು ಸ್ವಾಮಿ ಗಳು ಮೈಸೂರು ನಗರದಲ್ಲಿ ತಿಂಗಳು ಕಾಲ ವಾಸ್ತವ್ಯ ಮಾಡಿ ನಾನಾ ಸಭೆಗಳನ್ನು ನಡೆಸಿ ಉದಾರಿಗಳಿಂದ ಧನ ಸಂಗ್ರಹ ಮಾಡಿದರು. ಈ ಸಭೆಗಳಲ್ಲಿ ಮಾಡಿದ ಸ್ವಾಮಿಜೀ ಅವರ ಆಶೀರ್ವಚನಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ತರಲು ವ್ಯವಸ್ಥೆ ಮಾಡಲಾಗಿತ್ತು. ಆಶೀರ್ವಚನ ಕೃತಿ ಸಂಗ್ರಹದ ಒಳ ಪುಟಗಳನ್ನು ಓದಿ ನೋಡಿದ ಕುವೆಂಪು ಅವರು ಆ ಕೃತಿಗೆ "ಸೇವೆಯೇ ಪೂಜೆ" ಎಂಬ ಹೆಸರನ್ನು ಹೆಸರಿಸಿದರು.

ಕುವೆಂಪು ಅವರ ಜನ್ಮವರ್ಧಂತಿಯಾದ "ವಿಶ್ವಮಾನವ" ದಿನದಂದು ಅಮೃತ ಶಿಲಾ ಫಲಕ "ವಿಶ್ವಮಾನವ" ಗೀತೆ ಮತ್ತು ಸ್ವಾಮೀಜಿ ಅವರ "ಸೇವೆಯೇ ಪೂಜೆ" ಕೃತಿ ಬಿಡುಗಡೆ ಕಾರ್ಯಕ್ರಮಗಳನ್ನು ಉದಯ ರವಿಯಲ್ಲಿ ನೆರವೇರಿಸಿ ಆಶೀರ್ವದಿಸಿದರು.

"ಶ್ರೀ ಆದಿಚುಂಚನ ಗಿರಿ ಮಠದಂತೆ ದೇಶದ ಇನ್ನಿತರ ಮಠ ಮಾನ್ಯರು "ವಿಶ್ವಮಾನವ" ತತ್ವವನ್ನು ಅನುಷ್ಠಾನಕ್ಕೆ ತಂದು ಶ್ರೀ ಆದಿಚುಂಚನ ಗಿರಿ ಸ್ವಾಮಿ

ಗಳಂತೆ ಶ್ರೇಷ್ಠ ಆಚಾರ್ಯ ಪುರುಷರಾಗಿ ಮತೀಯ ವರ್ಗಗಳ ತವರುಗಳಾದ ಮಠಾಧೀಶರು ಹೊರ ಬಂದು ವೈಚಾರಿಕತೆ. ವೈಜ್ಞಾನಿಕತೆ ಮೂಲಕ ಶ್ರೀ ಸಾಮಾನ್ಯರಿಗೆ ಜ್ಞಾನ ಪ್ರಸಾರ, ಅವರ ದಿನನಿತ್ಯದ ನೋವುಗಳನ್ನು ಪರಿಹಾರ ಮಾಡದಿದ್ದರೆ, ಆಧ್ಯಾತ್ಮಿಕ. ರಾಜಕೀಯದ ಈ ಕಾಲದಲ್ಲಿ ಮಠಗಳು ಹಿಂದಿನಂತೆಯೆ ಮುಂದುವರಿಯಲು ಜನರು ಬಿಡಲಾರರು'' ಎಂದು ಕವಿಗಳು ಮಾತನಾಡುತ್ತ ತಿಳಿಸಿದರು.

ಮಂಡ್ಯದ ಸಮೀಪ ಮಹಾಕವಿ ಕುವೆಂಪು ಅವರಿಂದ ನಾಮಕರಣ ಹೊಂದಿದ ವಿಶ್ವಮಾನವದಲ್ಲಿ ವಿದ್ಯಾರ್ಥಿಗಳ ವಸತಿ ನಿಲಯ ನಿರ್ಮಾಣ ಹಂತದಲ್ಲಿದ್ದು ಹಣದ ಕೊರತೆಯಾಯಿತು. ಹದಿನೈದು ಸಾವಿರ ಅದಕ್ಕೀತ ಹೆಚ್ಚಿಗೆ ಧನಸಹಾಯ ಮಾಡ ಬಲ್ಲ ವ್ಯಕ್ತಿಗಳ ಸಭೆಯನ್ನು ಶ್ರೀ ಆದಿಚುಂಚನಗಿರಿ ಶ್ರೀಗಳಾದ ಜಗದ್ಗುರು ಶ್ರೀ ಬಾಲ ಗಂಗಾಧರನಾಥ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸೇರಿಸಿದೆ. ಸ್ವಾಗತ ಮಾಡಿದ ನಾನು ಇಲ್ಲಿ ಸೇರಿರುವ ವ್ಯಕ್ತಿಗಳು ತಮ್ಮ ತಮ್ಮ ಹೆಸರಿನಲ್ಲಿ 'ವಿಶ್ವಮಾನವ'ದಲ್ಲಿ ಹದಿನೈದು ಸಾವಿರದಲ್ಲಿ ಒಂದೊಂದು ಕೊಠಡಿ ನಿರ್ಮಾಣ ಮಾಡಬಲ್ಲವರೆಂದು ತಿಳಿಸಿದೆ. ಸಭೆಯಲ್ಲಿ ದ್ದವರೊಬ್ಬರು ''ಅದ್ಯಾರಪ್ಪ ಅಂತಹ ಘಟ್ಟಿ ಕುಳ ಇಲ್ಲಿದ್ದಾರೆ, ಎಂದರು, ಕೂಡಲೇ ಉತ್ತರಿಸಿದ ನಾನು ''ನಾನಿದ್ದೇನೆ ನಾನು ಒಂದು ಕೊಠಡಿಯನ್ನು ಸಮಾಜದ ಋಣ ಪರಿಹಾರಕ್ಕೆ ನಿರ್ಮಾಣ ಮಾಡುತ್ತೇನೆ'' ಎಂದೆ.''ಹಾಗಾದರೆ ಸ್ವಾಮಿಗಳ ಪಾದಮುಟ್ಟಿ ನಮಸ್ಕರಿಸಿ ವಿಭೂತಿ ಧಾರಣೆ ಮಾಡಿಸಿಕೊಳ್ಳಿ'' ಎಂದರು. ನಾನು ಸಿದ್ಧನಾಗಿ ನಮಸ್ಕಾರ ಮಾಡಲು ಹೋದೆ. ನನ್ನ ಹಣಕಾಸಿನ ಸ್ಥಿತಿಗತಿ ಅರಿತಿದ್ದ ಸ್ವಾಮಿಗಳು ''ಬೇಡಿ ಇರಿ, ಮನೆಯಲ್ಲಿ ಮಕ್ಕಳೊಡನೆ ಆಲೋಚನೆ ಮಾಡಿ ತೀರ್ಮಾನ ಕೈಗೊಳ್ಳಿ'' ಎಂದು ಅಗ್ರಹಪಡಿಸಿದರು. ''ವಿಭೂತಿ ಇಡಿ''ಎಂದು ನಮಸ್ಕರಿಸಿ ''ಕೊಠಡಿ ನಿರ್ಮಾಣ ಮಾಡುತ್ತೇನೆ'' ಎಂದು ವಚನವಿತ್ತೆ.

ಅಂದಿನ ರಾತ್ರಿ ಸ್ವಾಮೀಜಿ ಅವರಿಗೆ ನನ್ನ ಮನೆಯಲ್ಲೆ ಭೋಜನ ವ್ಯವಸ್ಥೆಯಿತ್ತು. ಸ್ವಾಮಿಜೀ ಅವರು ಮನೆಗೆ ಬರುವ ಮುನ್ನ ವ್ಯವಸ್ಥೆ ನೋಡಲು ಮನೆಗೆ ಬಂದೆ. ನನ್ನ ಮಕ್ಕಳು ಮತ್ತು ಪತ್ನಿ ಅವರುಗಳನ್ನು ಕೂರಿಸಿಕೊಂಡು ಸಭೆಯಲ್ಲಿ ನಡೆದ ವಿಚಾರ ತಿಳಿಸಿದೆ. ''ಹಣ ತರುತ್ತೀರೆಲ್ಲಿ? ಎಂದು ಪ್ರಶ್ನಿಸಿದರು. ''ಇಲ್ಲಿವರೆಗೆ ಮದುವೆ ಮುಂಜಿ ಕಾರ್ಯಗಳಿಗೆ ಸಾಲ ಮಾಡಲಿಲ್ಲವೆ ? ಈಗಲೂ ಹಾಗೆ ಮಾಡಬೇಕು'' ಎಂದೆ. ಆಲೋಚಿಸಿ ಎಂದರು. ನಾನು ಮಂಡ್ಯಕ್ಕೆ ಬಂದುದು 1940ರಲ್ಲಿ ಎಂದು ಕಾಣುತ್ತೆ. ಅಂದು ನಾನೊಬ್ಬನೇ ಬಂದೆ. ಆಗಿನ ಚುನಾವಣೆಗಳಲ್ಲಿ ನನ್ನನ್ನು ವಿರೋಧಿಸಿ ಮಾತ ನಾಡುತ್ತಿದ್ದ ಎದುರು ಪಕ್ಷದವರು ನನ್ನನ್ನು ಕುರಿತು ''ಅಗ್ರಾರದ ಹರಕಲು ಜುಬ್ಬ, ನಾಗಮಂಗಲದ ರಾಗಿ ಹಿಟ್ಟು'' ಎಂದು ದೊಡ್ಡ ದೊಡ್ಡ ಸಭೆಗಳಲ್ಲಿಯೆ ಜರಿದು ಮಾತ ನಾಡುತ್ತಿದ್ದರು. ಅವರು ಹೇಳುತ್ತಿದ್ದ ರೀತಿ ಮಂಡ್ಯದಲ್ಲಿ ಬಾಳಿ ಬದುಕುತ್ತ ಎಂಟು ಮದುವೆಗಳನ್ನು ಮಾಡಿದ್ದೇನೆ. ಒಂದು ಮನೆಯನ್ನು ಸಾಲವಿಲ್ಲದೆ ಕಟ್ಟಿದ್ದೇನೆ. ಬರಿ

ಕೈಲಿ ಅಗ್ರಾರದಿಂದ ಬಂದ ನಾನೇನು ಕಳ್ಳತನದಿಂದಲಾಗಲಿ, ದರೋಡೆಯಿಂದಲಾಗಲಿ ಮಾಡಿದ ಕೆಲಸವಲ್ಲ. ಮಂಡ್ಯ ನಗರ ಮತ್ತು ಸುತ್ತಲ ಹಳ್ಳಿಗಳ ಮಕ್ಕಳಿಗೆ ಪುಸ್ತಕ ಸ್ಲೇಟು ಮುಂತಾದ ಸ್ಕೂಲ್ ಸಾಮಾನುಗಳನ್ನು ಮಾರಾಟ ಮಾಡಿದೆ. ಆ ಮಾರಾಟ ದಿಂದ ಬಂದ ಆದಾಯವೇ ನಾನು ಹೇಳಿದ ಮನೆ, ಮದುವೆ ಮಾಡಿಸಿತು. ಅಷ್ಟೇ ಅಲ್ಲ ಎಲ್ಲ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿದೆ. ಆದ್ದರಿಂದ ವಿನೋಬ ಅವರು ಹೇಳು ವಂತೆ ನಿಮ್ಮ ನಾಲ್ವರ ಜೊತೆಗೆ ಐದನೇ ಪಾಲು ಸಮಾಜ ಅದರ ಋಣ ಪರಿಹಾರಕ್ಕೆ ಸಾಲ ಮಾಡಿ ಹದಿನೈದು ಸಾವಿರ ಕೊಡುತ್ತೇನೆ ಎಂದು ತಿಳಿಸಿದೆ. ಎಲ್ಲರೂ ಒಪ್ಪಿದರು ಸಾಲ ಮಾಡಿ ನಾಳೆ ಎಂದರೆ ಹಾಳೆಂದು ಅಂದೇ ಸ್ವಾಮಿಜೀ ಅವರಿಗೆ ಪಾವತಿ ಮಾಡಿದೆ. ಇದರ ಪರಿಣಾಮವಾಗಿ ದುಡ್ಡಿದ್ದ ಇನ್ನು ಹತ್ತಾರು ಜನರು ಕೊಠಡಿಗಳನ್ನು ನಿರ್ಮಾಣ ಮಾಡಲು ಮುಂದಾಗಿ ಧನಸಹಾಯ ಮಾಡಿದರು. ಇಂದು ವಿಶ್ವಮಾನವದಲ್ಲಿ 100 ಮಂದಿ ವಿದ್ಯಾರ್ಥಿಗಳಿಗ ವಸತಿ ಆಗಿದೆ.

ಭಗವದ್ ಕೃಪೆ ಯಾವಾಗ ಹೇಗೆ ಯಾವ ರೂಪದಲ್ಲಿ ಬರುತ್ತದೆಂದು ಮೊದಲೇ ಯಾರು ಭವಿಷ್ಯ ನುಡಿಯಲಾರರು. "ದೇವಕೇತುವಿನಂತೆ ಅದು ಸದಾ ಮನುಷ್ಯನ ಬೆನ್ನ ಹಿಂದೆಯೆ ಚಲಿಸುತ್ತದೆ'' ಎನ್ನುವ ಹಿರಿಯರ ವಾಣಿಯಂತೆ ಸರ್ಕಾರದವರು ಹೇಮಾವತಿ ನಾಲಾಕ್ಕೆ ಜಮೀನು ಸ್ವಾಧೀನ ಮಾಡಿಕೊಳ್ಳುವ ಜಾಹಿರಾತನ್ನು ಪತ್ರಿಕೆ ಗಳಿಗೆ ಬಿಡುಗಡೆ ಮಾಡಿದರು. ನಾನು ಸಂಯುಕ್ತ ಕರ್ನಾಟಕ ಪತ್ರಿಕೆ ವಿತರಣೆಗಾರ ನಾಗಿದ್ದೆ. ಕಮ್ಮಿ ದರದಲ್ಲಿ ಸಂಯುಕ್ತ ಕರ್ನಾಟಕ ಒಪ್ಪಿತು. ಜಾಹಿರಾತು ಪ್ರಕಟ ಗೊಂಡು ಕೇವಲ ಆರು ತಿಂಗಳಲ್ಲೆ ಸಾಲ ತೀರಿ ಮೇಲೆ ಒಂದೆರಡು ಸಾವಿರ ಹಣ ಮಿಕ್ಕಿ ಸಂತೋಷವಾಯಿತು.

ಶ್ರೀ ಆದಿಚುಂಚನಗಿರಿ ಮಠಾಧೀಶರಾಗಿ ಪಟ್ಟಾಭಿಷಿಕ್ತರಾದ ಜಗದ್ಗುರು ಶ್ರೀ ಬಾಲಗಂಗಾಧರನಾಥಸ್ವಾಮಿಗಳು, ಕೈಲಾಸವಾಸಿಗಳಾದ ಸ್ವಾಮಿ ಶ್ರೀ ಚಂದ್ರಶೇಖರ ನಾಥ ಸ್ವಾಮಿಗಳ ನಂತರ ಶ್ರೀ ಮಠದ ವತಿಯಿಂದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ ಸಂಸ್ಥೆಯನ್ನು ರಿಜಿಸ್ಟರ್ ಮಾಡಿಸಿ 70ಕ್ಕೂ ಹೆಚ್ಚು ವಿದ್ಯಾಸಂಸ್ಥೆಗಳನ್ನು ರಾಜ್ಯಾದ್ಯಂತ ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿನಿಲಯಗಳ ಮೂಲಕ ಶಿಕ್ಷಣ ನೀಡಲು ಪ್ರಾರಂಭಿಸಿದರು.

ಸರ್ಕಾರದವರು ರಾಜ್ಯದ ಕೆಲವು ಜಿಲ್ಲೆಗಳಿಗೆ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಅವಕಾಶ ನೀಡುತ್ತಿದ್ದುದನ್ನು ಶ್ರೀಗಳವರು ಗಮನಿಸಿ ಶ್ರೀ ಆದಿ ಚುಂಚನಗಿರಿ ಮಠಕ್ಕು ವೈದ್ಯಕೀಯ ಕಾಲೇಜು ಕೇಳಲು ಆಲೋಚಿಸಿದರು. ಕಾಲೇಜನ್ನು ಗ್ರಾಮಾಂತರ ಮಧ್ಯ ಪ್ರಾರಂಭಿಸಲು ಬೆಳ್ಳೂರಿನ ಬಳಿ (ಈಗ ಶ್ರೀ ಬಾಲಗಂಗಾಧರ ನಾಥ ನಗರ) ಅಂದರೆ ಮೈಸೂರು, ಬೆಂಗಳೂರು, ಹಾಸನ, ತುಮಕೂರು ಮತ್ತು ಮಂಡ್ಯ ಈ ಕೇಂದ್ರಗಳಿಗೆ 50 ಮೈಲಿ ದೂರದ ಹಳ್ಳಿಯಾದ ಜವರನ ಹಳ್ಳಿ

ಯಲ್ಲಿ ಪ್ರಾರಂಭಿಸಿ, ಕಾಲೇಜಿನ ನೆರವಿನಿಂದ 1000 ಹಾಸಿಗೆಗಳ ಆಸ್ಪತ್ರೆ ನಿರ್ಮಾಣ ಮಾಡುವುದೆಂದು ಶ್ರೀ ಮಠದ ಹೆಸರಿಗೆ ವೈದ್ಯಕೀಯ ಕಾಲೇಜ್ ಕೊಡಲು ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಸರ್ಕಾರ ಮನವಿಯನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿತು. ನಾನು ಇದೇ ಸಮಯಕ್ಕೆ ಮೈಸೂರಿನಲ್ಲಿ ಕವಿಪುಂಗವರಾದ ಕುವೆಂಪು ಅವರ ದರ್ಶನಾರ್ಥಿಯಾಗಿ ಹೋಗಿದ್ದು ಶ್ರೀ ಆದಿಚುಂಚನಗಿರಿ ಮಠವು ಗ್ರಾಮಾಂತರಗಳ ಜನರ ವೈದ್ಯಕೀಯ ಸೌಲಭ್ಯಕ್ಕೆ ವೈದ್ಯಕೀಯ ಕಾಲೇಜ್ ಕೇಳಿದ ಹಿನ್ನೆಲೆಯನ್ನು ಕವಿಗಳಿಗೆ ವಿವರಿಸಿದೆ. ಸರ್ಕಾರ ತಿರಸ್ಕಾರ ಮಾಡಿದ ಬಗ್ಗೆ ಪತ್ರಿಕೆಗೆ ಹೇಳಿಕೆ ನೀಡಿ ಸರ್ಕಾರದವರು ಪ್ರಾರಂಭಿಸುವ ಎಲ್ಲ ಕಾಲೇಜುಗಳು ಪಟ್ಟಣದಲ್ಲಿ ಪ್ರಾರಂಭಗೊಂಡು, ಹಳ್ಳಿಗರು ವಂಚಿತರಾಗುತ್ತಿದ್ದಾರೆ. ಶ್ರೀ ಆದಿಚುಂಚನಗಿರಿ ಮಠದವರು ಪ್ರಾರಂಭಿಸಲು ಯೋಚಿಸಿರುವ ಗ್ರಾಮಾಂತರ ಪ್ರದೇಶಕ್ಕೆ ವೈದ್ಯಕೀಯ ಕಾಲೇಜ್ ನೀಡುವುದು ಅಗತ್ಯ" ಎಂದು ಮಹಾಕವಿಗಳು ತಿಳಿಸಿದರು. ಮಹಾಕವಿಗಳ ಹೇಳಿಕೆ ಪತ್ರಿಕೆಗಳಲ್ಲಿ ಪ್ರಕಟಗೊಂಡ ಮೇಲೆ ಸರ್ಕಾರವು ಪುನರಾಲೋಚನೆ ಮಾಡಿ ಶ್ರೀ ಮಠದ ಹೆಸರಿಗೆ ವೈದ್ಯಕೀಯ ಕಾಲೇಜ್ ಪ್ರಾರಂಭಿಸಲು ಅನುಮತಿ ನೀಡಿತು.

ಕಾಲೇಜಿನ ಪ್ರಸ್ತಾಪ ಮಾಡುವ ಮುನ್ನವೇ 1000 ಹಾಸಿಗೆಗಳ ಆಸ್ಪತ್ರೆ ನಿರ್ಮಾಣ ಮಾಡಲು ಆಲೋಚಿಸಿ ಶ್ರೀಗಳವರು ಎರಡು ಬಾರಿ ಹೊರದೇಶಗಳ ಪ್ರವಾಸ ಕೈಗೊಂಡು ಅಲ್ಲಿನ ಭಾರತೀಯರಿಂದ ಆಸ್ಪತ್ರೆ ನಿರ್ಮಾಣಕ್ಕೆ ಸಹಾಯ ಸಹಕಾರ ಕೋರಿ ಬಂದಿದ್ದರು. ಕಾಲೇಜಿಗೆ ಅನುಮತಿ ದೊರೆತಮೇಲೆ 3ನೆಯ ಬಾರಿ ಹೊರದೇಶದ ಪ್ರವಾಸವನ್ನು ಶ್ರೀಗಳವರು ಕೈಗೊಂಡರು. ಮಂಡ್ಯ ಜಿಲ್ಲಾ ರೈತ ಮತ್ತು ರೈತ ಕಾರ್ಮಿಕ ಸಂಘವು, ಜಿಲ್ಲೆಯ ಅಗ್ರನಾಯಕ ಶ್ರೀ ಜಿ. ಮಾದೇಗೌಡರ ಅಧ್ಯಕ್ಷತೆಯಲ್ಲಿ ಸಮಾರಂಭವನ್ನು ಏರ್ಪಡಿಸಿ ಪ್ರವಾಸಕ್ಕೆ ಯಶಸ್ಸು ಕೋರಿ ಬೀಳ್ಕೊಟ್ಟಿತು. ಸ್ವಾಮಿಜೀ ಅವರು ತಮ್ಮ ಪ್ರವಾಸಾನಂತರ ವಾಪಸ್ಸು ಬಂದಾಗಲು ಅವರನ್ನು ಸಚಿವ ಎಚ್. ಡಿ. ದೇವೇಗೌಡರ ಅಧ್ಯಕ್ಷತೆಯಲ್ಲಿ ಸಮಾರಂಭವನ್ನು ಏರ್ಪಡಿಸಿ ರೈತ ಸಂಘವು ಮಂಡ್ಯ ಜಿಲ್ಲಾ ಜನತೆ ಪರವಾಗಿ ಸ್ವಾಗತಿಸಿ ಸನ್ಮಾನಪತ್ರ ಅರ್ಪಿಸಿ ಸ್ವಾಮಿಜೀ ಅವರ ಶೈಕ್ಷಣಿಕ ಕಾರ್ಯಕ್ರಮಕ್ಕೆ ಪೂರ್ಣ ಬೆಂಬಲ ಸೂಚಿಸಿತು. ಸಮಾರಂಭ ಸಭೆ ಸಮಾವೇಶ ಮುನ್ನ ನಗರದ ಮುಖ್ಯ ದಾರಿಯಲ್ಲಿ ಸ್ವಾಮಿಜೀ ಅವರನ್ನು ಆನೆಯ ಅಂಬಾರಿ ಮೆರವಣಿಗೆಯಲ್ಲಿ ಸಭೆಗೆ ಕರೆತರಲಾಯ್ತು.

ರೈತ ಬಂಧು ಇಂಡವಾಳು ದಿವಂಗತ ಎಚ್. ಹೊನ್ನಯ್ಯನವರ ಸುಪುತ್ರ ಖ್ಯಾತಿವಂತ ಸಕ್ಕರೆ ಕಂಪನಿ ಅಧ್ಯಕ್ಷರಾಗಿದ್ದ ಶ್ರೀ ಎಚ್. ಹೊನ್ನಪ್ಪ ಗೆಳೆಯರೊಡಗೂಡಿ ರೈತರ ಹೆಸರಿನಲ್ಲಿ ಸಕ್ಕರೆ ಕಂಪನಿ ವತಿಯಿಂದ ಇಪ್ಪತ್ತು ಲಕ್ಷ ರೂಗಳ ವಂತಿಕೆಯನ್ನು ಆಸ್ಪತ್ರೆ ನಿರ್ಮಾಣಕ್ಕೆ ನೀಡಿ ಶ್ರೀಗಳ ಕಾರ್ಯ ಯೋಜನೆಯನ್ನು ಬೆಂಬಲಿಸಿದರು.

ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠಾಧೀಶರಾದ ಜಗದ್ಗುರು ಶ್ರೀ

ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮಿಗಳಿಗೆ ದಿನಾಂಕ 12-7-1986ರಂದು ಮಂಡ್ಯ ಜಿಲ್ಲಾ ರೈತ ಸಂಘ ಮತ್ತು ಜಿಲ್ಲಾ ನಾಗರಿಕರ ಪರವಾಗಿ ಅರ್ಪಿಸಿದ ಸನ್ಮಾನ ಪತ್ರದ ಪೂರ್ಣ ಪಾಠವನ್ನು ಇಲ್ಲಿ ಕೊಡುತ್ತಿದ್ದೇನೆ. ಇದೆಲ್ಲ ನಡೆದುದು ನನ್ನ ಅಧ್ಯಕ್ಷತೆಯಲ್ಲಾದ ಕಾರಣ ಅದರ ಉಲ್ಲೇಖ ಅಪ್ರಸ್ತುತವಾಗುವುದಿಲ್ಲವೆಂಬ ನಂಬಿಕೆ ನನಗಿದೆ.

ಪೂಜನೀಯ ಗುರುವರ್ಯರೇ,

ತಾವು ಮೂರನೆಯ ಬಾರಿ ವಿದೇಶ ಪ್ರವಾಸ ಕೈಗೊಂಡು ಭಾರತೀಯ ಆಧ್ಯಾತ್ಮಿಕ ಸಾಂಸ್ಕೃತಿಕ ಸಂದೇಶವನ್ನು ಬಿತ್ತರಿಸಿ ಭಾರತದ ಕೀರ್ತಿ ಗೌರವಗಳನ್ನು ಬೆಳಗಿಸಿದ್ದೀರಿ. ವಿದೇಶಯಾತ್ರೆ ಮುಗಿಸಿಕೊಂಡು ಮಂಡ್ಯಕ್ಕೆ ಬಿಜಯಂಗೈಯುತ್ತಿರುವ ಈ ಶುಭ ಸಮಯದಲ್ಲಿ ಮಂಡ್ಯ ಜಿಲ್ಲಾ ನಾಗರೀಕ ಸ್ವಾಗತ ಸಮಿತಿಯು ಏರ್ಪಡಿಸಿರುವ ಸನ್ಮಾನ ಸಮಾರಂಭದ ಆಹ್ವಾನವನ್ನು ಅಂಗೀಕರಿಸಿ ಸನ್ಮಾನ ಸ್ವೀಕರಿಸುತ್ತಿರುವ ತಮ್ಮನ್ನು ಭಕ್ತಿ ಗೌರವ ಪುರಸ್ಸರವಾಗಿ ಸ್ವಾಗತಿಸಿ ಅಭಿನಂದಿಸುತ್ತೇವೆ.

ಈ ಸಮಾರಂಭದ ಅಧ್ಯಕ್ಷತೆ ವಹಿಸಲು ದಯಮಾಡಿಸಿರುವ ಲೋಕೋಪಯೋಗಿ ಸಚಿವರಾದ ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾದ ಮಾನ್ಯ ಶ್ರೀ ಎಚ್. ಟಿ. ಕೃಷ್ಣಪ್ಪನವರು ಮತ್ತು ರಾಜ್ಯದ ಹಿರಿಯರೂ, ಶೈಕ್ಷಣಿಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಂಡ್ಯ ಜಿಲ್ಲೆಯ ನಿರ್ಮಾಪಕರೂ, ನಿತ್ಯ ಸಚಿವರೂ ಆದ ಮಾನ್ಯ ಶ್ರೀ ಕೆ. ವಿ. ಶಂಕರಗೌಡರು ಇವರುಗಳನ್ನು ಸಹ ಸ್ವಾಗತಿಸಿ ವಂದಿಸುತ್ತೇವೆ.

ಪ್ರಿಯ ಗುರುವರ್ಯರೇ,

ಭಾರತೀಯ ಸಮಾಜದಲ್ಲಿ ಮನೆಗಳಿಗಿಂತ ಮಠಗಳ ಸಂಖ್ಯೆಯೇ ಹೆಚ್ಚು ಎಂದರೆ ಉತ್ಪ್ರೇಕ್ಷೆಯಾಗಬಹುದೇ ಹೊರತು ತಪ್ಪಾಗುವುದಿಲ್ಲ. ಭಾರತೀಯರು ತಮ್ಮ ಬದುಕಿನಲ್ಲಿ ಆಮುಷ್ಮಿಕ, ಆಧ್ಯಾತ್ಮಿಕ ಪ್ರವೃತ್ತಿಗೆ ಕೊಟ್ಟಿರುವ ಪ್ರಾಧಾನ್ಯಕ್ಕೆ ಇದು ಸಂಕೇತವಷ್ಟೆ. ಆದರೆ ಈ ಮಠೀಯವಾದ ಮಠಗಳು ಶತಶತಮಾನಗಳಿಂದ ಏನು ಮಾಡುತ್ತಾ ಬಂದಿವೆ ಎಂದು ನವಪೀಳಿಗೆ ಕೇಳುವ ಕಾಲ ಸನ್ನಿಹಿತವಾಗಿದೆ ಎಂಬುದನ್ನು ತಾವು ಅರಿತಿದ್ದೀರಿ.

ಈ ಹಿನ್ನೆಲೆಯಲ್ಲಿ ಆಲೋಚಿಸಿರುವ ತಾವು ತಮ್ಮ ಪ್ರವಾಸಗಳಲ್ಲಿ ಜನತೆಗೆ ನೀಡುವ ಆದರ್ಶಪೂರ್ಣ ಆಶೀರ್ವಚನಗಳಲ್ಲಿ "ನಾವಿಂದು ನೂತನ ಯುಗವೊಂದರಲ್ಲಿದ್ದೇವೆ. ಇದು ವಿಜ್ಞಾನಯುಗ, ಸರ್ವೋದಯ ಯುಗ, ಈ ನವಮನ್ವಂತರದ ಅವಶ್ಯಕತೆ ಮತ್ತು ಸವಾಲುಗಳಿಗೆ ಕಣ್ಣು, ಕಿವಿ, ಮನಸ್ಸುಗಳನ್ನು ತೆರೆಯದೆ ಯಾರೂ ಉಳಿಯುವುದು ಸಾಧ್ಯವಿಲ್ಲ. ನಿಂತ ನೀರಿಗೆ ಸ್ಥಾನವಿಲ್ಲ, ಅದು ಹರಿಯುತ್ತಿರಬೇಕು. ನಾವು ಪರಂಪರಾಗತವಾದ ಆಧ್ಯಾತ್ಮದ ಜೊತೆಗೆ, ಮಾನವೀಯ, ವೈಜ್ಞಾನಿಕ ದೃಷ್ಟಿಯನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಅಳವಡಿಸಿಕೊಂಡು ತಮ್ಮ ಅಸ್ತಿತ್ವವನ್ನು ಮತ್ತು

ವ್ಯಕ್ತಿತ್ವವನ್ನು ಸಮರ್ಥಿಸಿಕೊಳ್ಳಬೇಕು ಮತ್ತು ಜನಹಿತ ಸಾಧನೆಯಲ್ಲಿ ತೊಡಗಬೇಕು'' ಎಂದು ಉದ್‌ಘೋಷಿಸುತ್ತೀರಿ ಮಾತ್ರವಲ್ಲದೆ ಅದನ್ನು ಅನುಷ್ಠಾನಕ್ಕೆ ತಂದು ಶ್ರೀ ಆದಿಚುಂಚನಗಿರಿ ಗುರುಪೀಠಕ್ಕೆ ಹೊಸ ತಿರುವು ನೀಡಿ ವಿಶ್ವವಿಖ್ಯಾತರಾಗಿದ್ದೀರಿ.

ಕರ್ನಾಟಕದ ಅತ್ಯಂತ ಪ್ರಸಿದ್ಧವೂ ಪೂಜ್ಯವೂ ಆದ ಮಠಗಳಲ್ಲಿ ಒಂದಾಗಿರುವ ಶ್ರೀ ಆದಿಚುಂಚನಗಿರಿ ಮಠವು ತಮ್ಮ ನೇತೃತ್ವದಲ್ಲಿ ಹೊಸ ಯುಗದ ಸವಾಲುಗಳನ್ನು ಧೀರಭಂಗಿಯಿಂದ ಎದುರಿಸಲು ಹೊರಟಿರುವುದು ಸಮಾಜಕ್ಕೆ, ಅದರಲ್ಲೂ ತರುಣ ಜನಾಂಗಕ್ಕೆ ಅಪಾರ ಸಂತೋಷವನ್ನುಂಟುಮಾಡಿದೆ ಎಂಬುದನ್ನು ಉಲ್ಲೇಖಿಸಲು ಹೆಮ್ಮೆಯಾಗುತ್ತದೆ.

ಜಗದ್ಗುರುಗಳೇ,

ಅರಳುವ ಹೂವಿನಲ್ಲಿ ಹಣ್ಣು ಅಡಗಿರುವಂತೆ, ತಮ್ಮ ಜನ್ಮಧಾರಣೆಯಲ್ಲೇ 'ವಿಶ್ವಮಾನವತ್ವ' ಕೂಡಿಬಂದಿತ್ತೆಂಬುದರ ಸಂಕೇತವಾಗಿ, ಅಭಿನವ ವಾಲ್ಮೀಕಿಋಷಿ ಎಂದು ಖ್ಯಾತನಾಮರಾಗಿರುವ ಮಹಾಕವಿ ಕುವೆಂಪು ಅವರ 'ವಿಶ್ವಮಾನವ' ಅಮರ ಸಂದೇಶದ ಪಂಚಮಂತ್ರ ಸಪ್ತಸೂತ್ರಗಳನ್ನು ಅಮೃತಶಿಲಾ ಫಲಕದಲ್ಲಿ ಕೆತ್ತಿಸಿ ಆಚಂದ್ರಾರ್ಕವಾಗಿ ಉಳಿಯುವಂತೆ ಮಂಡ್ಯ ಸಮೀಪದ 'ವಿಶ್ವಮಾನವ' ದಲ್ಲಿ ಪ್ರತಿಷ್ಠಾಪಿಸಿ ಜನತೆಗೆ ಮಾರ್ಗದರ್ಶನ ಮಾಡಿದ್ದೀರಿ. ಈ ಒಂದು ಸ್ತುತ್ಯಕಾರ್ಯ ವಿಶ್ವವೇ ಮಣಿವಂತೆ ಮಾಡಿದೆ ಎಂಬುದನ್ನು ಸಂತೋಷಪೂರ್ವಕವಾಗಿ ವ್ಯಕ್ತಪಡಿಸುತ್ತೇವೆ.

ಸ್ವಾಮೀಜೀ ಅವರೇ,

ವಾರ್ತಾಪತ್ರಿಕೆಗಳಲ್ಲಿ ಹಾಗೂ ಸಂದರ್ಶನಕ್ಕೆ ಬಂದವರಿಂದ ತಮ್ಮ ತೇಜೋನ್ವಿತ ವ್ಯಕ್ತಿತ್ವ ಹಾಗೂ ಮಹಾಕಾರ್ಯಕ್ಷೇತ್ರದ ವಿವರಗಳನ್ನು ಕೇಳಿ ತಿಳಿದ ಮಹಾಕವಿ ಕುವೆಂಪು ಅವರು ತಮ್ಮ ನಿವಾಸ ''ಉದಯರವಿ''ಗೆ ತಮ್ಮನ್ನು ತುಂಬುಹೃದಯದಿಂದ ಸ್ವಾಗತಿಸಿ ಫಲಪುಷ್ಪಗಳನ್ನರ್ಪಿಸಿ ಗೌರವಿಸಿ ''ಎಲ್ಲಾ ಮಠಗಳು ಗರಿಗೆದರಿ ಎದ್ದುನಿಂತು ಶ್ರೀ ಆದಿಚುಂಚನಗಿರಿ ಮಠದಂತೆ ವಿಶ್ವಮಾನವ ತತ್ವವನ್ನು ಅಳವಡಿಸಿಕೊಂಡು ಪೂಜನೀಯ ಗುರುಗಳಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳಂತಾಗಬೇಕು'' ಎಂದು ತಿಳಿಸಿ ತಮ್ಮ 'ಸೇವೆಯೇ ಪೂಜೆ' ಎಂಬ ಉಪನ್ಯಾಸ ಕೃತಿಯನ್ನು ಮತ್ತು ವಿಶ್ವಮಾನವ ಸಂದೇಶದ ಅಮೃತ ಶಿಲಾಫಲಕವನ್ನು ಉದ್ಘಾಟಿಸಿ ಅಪಾರವಾದ ಸಂತೋಷ ವ್ಯಕ್ತಪಡಿಸಿ ಸರ್ವಮಠಗಳಿಗೂ ಕಿರೀಟಪ್ರಾಯವಾಗುವಂತೆ ನೀಡಿದ ಅಮೃತ ಸಂದೇಶ ಇಂದಿಗೂ ನಮ್ಮೆಲ್ಲರ ಕಿವಿಯಲ್ಲಿ ಪ್ರತಿಧ್ವನಿಸುತ್ತಿದೆ.

ತಮ್ಮ ವ್ಯಕ್ತಿತ್ವ ಪ್ರತಿಭಾನ್ವಿತವಾದುದು. ಪ್ರಾಜ್ಞತೆಯಿಂದ ಕೂಡಿದ್ದು. ವೈಜ್ಞಾನಿಕ ದೃಷ್ಟಿ ಸಮನ್ವಿತವಾದದ್ದು ಮತ್ತು ಪ್ರಗತಿಪರ ಮನೋಭಾವದಿಂದ ಶೋಭಿತವಾದದ್ದು. ತಾವು ಶ್ರೀ ಆದಿಚುಂಚನಗಿರಿ ಮಠಕ್ಕೆ ಅಧ್ಯಕ್ಷರಾದ ಬಳಿಕ. ಆ ಕ್ಷೇತ್ರವೊಂದು ನೀರವ ಮಂಗಳ ಕ್ರಾಂತಿಯ ಕೇಂದ್ರವಾಗಿ ಪರಿಣಮಿಸಿದೆ. ಆ ಗಿರಿಯ

ಹೆಬ್ಬಂಡೆಗಳು ಈಗ ಜೀವತಳೆದು ಉಸಿರಾಡುತ್ತಿವೆ. ತಮ್ಮ ವೈಚಾರಿಕ, ವೈಜ್ಞಾನಿಕ ಮನೋಭಾವಗಳು ಯುಗವಾಣಿಯ ಸಮರ್ಥ ಅನುರಣನವಾಗಿ ಹೊಸ ದಿಕ್ಕಿನತ್ತ ಎಲ್ಲರನ್ನೂ ಕೈಬೀಸಿ ಕರೆಯುತ್ತಿವೆ. ಜನತೆಯನ್ನು ಮಾತ್ರವಲ್ಲ, ಉಳಿದ ಮಠಾಧೀಶರನ್ನೂ ಅಲುಗಿಸಿ ಜಡತೆಯಿಂದೆಬ್ಬಿಸುವ ತೂರ್ಯಧ್ವನಿ ತಮ್ಮ ಶುಭಾಶೀರ್ವಚನಗಳಲ್ಲಿ ಹೊರಹೊಮ್ಮುತ್ತಿದೆ.

ಮಹಿಮಾನ್ವಿತ ಸ್ವಾಮೀಜಿ ಅವರೇ,

ತಮ್ಮ ಜನ್ಮ ವೃತ್ತಾಂತದ ಬಗ್ಗೆ ಒಂದೆರಡು ಮಾತುಗಳಲ್ಲಿ ಸಾಂಪ್ರದಾಯಿಕವಾಗಿ ಪರಿಚಯಿಸುವುದು ಸಮಯೋಚಿತವೆಂದು ಬಗೆದು ತಮ್ಮ ಅಪ್ಪಣೆ ಕೋರುತ್ತೇವೆ. ಬೆಂಗಳೂರು ಮೈಸೂರು ಹೆದ್ದಾರಿಯಲ್ಲಿರುವ ಬಿಡದಿ ಸಮೀಪದ ಬಾನಂದೂರು ಎಲ್ಲಾ ಹಳ್ಳಿಗಳಂತೆ, ಹಳ್ಳಿಯಾದರೂ ತಮ್ಮಂತಹ ಮಹಿಮಾನ್ವಿತ ತ್ಯಾಗಮೂರ್ತಿಗೆ ಜನ್ಮ ನೀಡಿದ ಆ ಹಳ್ಳಿ ಇಂದು ನಮ್ಮೆಲ್ಲರ ಪುಣ್ಯಧಾಮವಾಗಿದೆ. ಬಾನಂದೂರಿನ ಹೆಸರು ಇಂದು ತಮ್ಮಿಂದಾಗಿ ವಿಶ್ವವಿಖ್ಯಾತವೂ ಆಗಿದೆ.

ತಮ್ಮ ಜನ್ಮದಾತರು ಇನ್ನಿತರ ಲೌಕಿಕವಾದಿಗಳಂತೆ, ತಮ್ಮನ್ನು ವಿದ್ಯಾವಂತರನ್ನಾಗಿ ಮಾಡಿ, ಭವಸಾಗರದಲ್ಲಿ ಸಾಂಸಾರಿಕ ದೋಣಿಯಲ್ಲಿ ತೇಲಿಬಿಡಲು ಮಾಡಿದ್ದ, ಸಿದ್ಧತೆ ವಿರುದ್ಧ ದೈವೇಚ್ಛೆ ತಮ್ಮನ್ನು ಜಗದ ಧರ್ಮಗುರುವಾಗಿ ನಿಯೋಜಿಸಿತು. ಭಗವತ್ಕೃಪೆ ಯಾವಾಗ ಹೇಗೆ ಯಾವ ರೂಪದಲ್ಲಿ ಬರುತ್ತದೆಂಬುದನ್ನು ಯಾರೂ ಮೊದಲೇ ನುಡಿಯಲಾರರು. ದೇವಕೇತುವಿನಂತೆ ಅದು ಸದಾ ಮನುಷ್ಯನ ಬೆನ್ನು ಹಿಂದೆಯೇ ಚಲಿಸುತ್ತದೆ. ಮನುಷ್ಯ ಮಾತ್ರ ಅದನ್ನು ಗಮನಿಸದೆಯೇ ಮುಂದೆ ಮುಂದೆ ನುಗ್ಗುತ್ತಾನೆ. ಆದರೆ ಅಂತಿಮವಾಗಿ ಆ ಭಗವತ್ಸಂಕಲ್ಪವೇ ಗೆಲ್ಲುತ್ತದೆ ಎಂಬ ಸತ್ಯಕ್ಕೆ ತಮ್ಮ ದಿವ್ಯ ಜೀವನವೇ ಸಾಕ್ಷಿಯಾಗಿದೆ.

ಕಾವ್ಯರ್ಷಿ ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಶ್ರೀರಾಮನ ಜೀವನಕ್ಕೆ ಅನ್ವಯಿಸುವಂತೆ ಮೂಡಿರುವ ಈ ಸಾಲುಗಳು ತಮ್ಮ ಜೀವನದ ಪವಾಡವನ್ನು ಸಂಕೇತಿಸಬಲ್ಲುವು.

ನೀಡದೊಳ್ ಬಳೆದು, ಕಾಡಿನಲಿ ಹಾರಾಡಿದಾ ಗರುಡಶಿಶು,
ಗರಿಬಲಿತ ಮೇಲಲ್ಪ ದೇಶಂಗಳಂ ಚರಿಸಿ ತಣಿವುದೆ ?
ವಿಯದ್ ವಿಸ್ತೀರ್ಣಮಂ ಬಯಸಿ
ಕೈಗೊಳ್ವುದಾಕಾಶ ಪರ್ಯಟನಮಂ.
ಕಿರುಮೀನ್ಗೆ ಕೆರೆಕೊಳಂ ಪೊಳೆ ಸಾಲ್ಗುಮಾ ತಿಮಿಂಗಿಲೇಳ್ಕುಂ
ಜಲಕ್ರೀಡೆಗಾ ರುಂದ್ರಸಾಗರ ಸಲಿಲವಿಸ್ತಾರ.

ತಮ್ಮ ಆದರ್ಶ ತ್ಯಾಗಮಯ ಜೀವನದ ಪ್ರಭಾವವನ್ನು ಕೇವಲ ನಮ್ಮ ನಾಡು, ರಾಷ್ಟ್ರಗಳಿಗೇ ಅಲ್ಲದೆ ವಿಶ್ವಕ್ಕೇ ವಿಸ್ತರಿಸಿದ ದೈವ ಕೃಪೆ ನಮ್ಮಂತಹ ಭಕ್ತಕೋಟಿಯ

ಪುಣ್ಯವೆಂದು ನಿವೇದಿಸಿಕೊಳ್ಳಲಿಚ್ಛಿಸುತ್ತೇವೆ. ಗುರು ಪೀಠದ ಅಧ್ಯಕ್ಷರಾದ ಕೇವಲ ಒಂದು ದಶಕದಲ್ಲಿ ತಾವು ಕೈಗೊಂಡು ಸಾಧಿಸಿದ ಮಹತ್ಕಾರ್ಯಗಳು ಭಗವಂತನ ಇಚ್ಛಾಫಲವೇ ಹೊರತು ಅನ್ಯಥಾ ಅಲ್ಲ ಎಂಬುದನ್ನು ಸರ್ವರೂ ಒಪ್ಪುವ ಅಂಶ ವಾಗಿದೆ. ಕುಗ್ರಾಮವೊಂದರಲ್ಲಿ ಜನ್ಮತಾಳಿದ ತಮಗೆ ಅಲ್ಲಿನ ಜನರ ಬವಣೆಗಳ ಎಲ್ಲಾ ಮಗ್ಗಲುಗಳ ಅರಿವು ಸ್ವಾಭಾವಿಕವಾಗಿ ಅನುಭವ ವೇದ್ಯವಾಗಿದೆ. ಇಂದು ಹಳ್ಳಿಗಳು ಜಾತೀಯ, ಮತೀಯ ವಹೌಧ್ಯಗಳ ಕೂಪದಲ್ಲಿ ಮುಳುಗಿದ್ದು ಅವೈಚಾರಿಕ, ಅವೈಜ್ಞಾನಿಕ ಪೂರ್ವಗ್ರಹಗಳಿಂದ ಪೀಡಿತವಾಗಿವೆ. ಇಂತಹ ಜನರನ್ನು ಎಚ್ಚರಿಸಿ ಸಾಂಸ್ಕೃತಿಕ, ಅಧ್ಯಾತ್ಮಿಕ ಮುಂತಾದ ಎಲ್ಲಾ ರೀತಿಯ ಅನುಭವದ ಹಂತಗಳಲ್ಲಿ ಸಂಚರಿಸುತ್ತಿರುವ ತಾವು, ಅಧ್ಯಾತ್ಮಿಕತೆಯನ್ನು ವಿಜ್ಞಾನದ ಒರೆಗಲ್ಲಿಗೆ ಹಚ್ಚಿ ವೈಚಾರಿಕವಾಗಿ ವ್ಯವಹರಿಸಲು ಕೊಟ್ಟರೆ ಫಲಪ್ರದವಾಗುತ್ತಿದೆ ಎಂಬುದನ್ನು ತಿಳಿಸಲು ಹರ್ಷವಾಗುತ್ತದೆ.

ಘನತೆವೆತ್ತ ಸ್ವಾಮೀಜಿಯವರೇ,

ತಾವು ಆದಿಚುಂಚನಗಿರಿ ಪೀಠಾಧ್ಯಕ್ಷರಾದ ಮೇಲೆ ಆ ಗಿರಿಯ ಶಿಖರಾಗ್ರದಲ್ಲಿ ನಿಂತು, ಗಿರಿಯ ಕೆಳಗಿನ ಕಂದರಗಳಲ್ಲಿ ಸಾಗುವ ಜನಸಾಮಾನ್ಯರ ಬಾಳಿನಲ್ಲಿ ಬೀಸುವ ಬಿರು ಗಾಳಿ, ಕವಿದ ಮಂಜು, ಮುಬ್ಬುಗತ್ತಲು, ಕುರುಡು ಅಲೆದಾಟಗಳನ್ನು ವೀಕ್ಷಿಸಿದ ತಾವು ಅವುಗಳ ಪರಿಹಾರಕ್ಕೆ ಸಂಕಲ್ಪಿಸಿ ಸ್ವಾಮಿ ವಿವೇಕಾನಂದರು ಹೇಳಿರುವಂತೆ "ಮಂದಿರ ಮತ್ತು ಪ್ರತಿಮೆಗಳಲ್ಲಿ ಇರುವ ಭಗವಂತನನ್ನು ಹೊರಗೆಳೆದು 'ಯತ್ರ ಜೀವಂ ತತ್ರ ಶಿವಂ' ಮಂತ್ರದಿಂದ 'ವಿರಾಟದ' ಪೂಜೆಗೆ ಅನುವಾದಿರಿ. ಪ್ರಾಚೀನ ಸಂನ್ಯಾಸಿಗಳಂತೆ ಗಿರಿಗುಹೆ ಕುಟೀರಗಳಲ್ಲಿ ಕುಳಿತು ಕೇವಲ ಆತ್ಮ ಸಾಕ್ಷಾತ್ಕಾರಕ್ಕೆ ಶ್ರಮಿಸ ಬಾರದೆಂದು, ಸಮಾಜಸೇವಾ ವ್ರತ ಕೈಗೊಂಡು ತಾವು ಜಗದ ಕರ್ಮಕ್ಷೇತ್ರದಲ್ಲಿ ನಾನಾ ಸಮಸ್ಯೆಗಳಿಗೆ ಎದೆಗೊಟ್ಟು ನಿಂತು ಮಾನವರನ್ನು ಸತ್ಕಾರ್ಯ ಪ್ರವೃತ್ತರನ್ನಾಗಿಸು ತ್ತಿದ್ದೀರಿ.

ವಯಸ್ಸಿನಲ್ಲಿ ತಾರುಣ್ಯವಿರುವಂತೆಯೇ ಆಲೋಚನೆಯಲ್ಲೂ ಇರುತ್ತದೆ. ಯುವ ಕರು ನಿರ್ಣಯ, ವಿವೇಚನೆಗಳಿಂದ ಹೆಚ್ಚಾಗಿ ನವಸೃಷ್ಟಿಗೆ ಸಮರ್ಥರು. ಸಲಹೆ ಮಂತ್ರಣಗಳಿಗಿಂತ ಕಾರ್ಯಸಾಧನೆಗೆ ಯೋಗ್ಯರು ಮತ್ತು ಸುಸ್ಥಿತ ವ್ಯವಹಾರಕ್ಕಿಂತ ಮಿಗಿಲಾಗಿ ಹೊಸ ಆಲೋಚನೆಗಳನ್ನು ತೊಡಗಿಸುವುದಕ್ಕೆ ತಕ್ಕವರು. ಮುತ್ಸದ್ದಿತನಕ್ಕೆ ಹಿರಿಯ ವಯಸ್ಸು ಮೇಲ್ಮೈಯಾಗುವಂತೆ ನೈತಿಕ ವಿಷಯಗಳಿಗೆ ಕಿರಿಯವರು ದ್ರಷ್ಟಾ ರರೂ, ಹಿರಿಯರು ಕನಸಿಗರೂ ಆಗಿರುತ್ತಾರೆಂದು ವಿಮರ್ಶಿಸುತ್ತಾ, ಯಹೂದ್ಯ ಧರ್ಮಭೋಧಕನೊಬ್ಬ ಕಿರಿಯರು ಹಿರಿಯರಿಗಿಂತಲೂ ಭಗವಂತನಿಗೆ ಹೆಚ್ಚು ಸಮೀಪ ದವರೆಂದು" ಅರ್ಥೈಸುತ್ತಾ, "ಕನಸಿಗಿಂತಲೂ ದರ್ಶನದಲ್ಲಿ ಹೆಚ್ಚಿನ ದೈವಸಾಕ್ಷಾ ತ್ಕಾರವಿದೆ" ಎಂದು ಹೇಳಿರುವ ನುಡಿಗಳಿಗೆ ತಮ್ಮ ಜೀವನ ದೃಷ್ಟಾಂತವಾಗಿದೆ.

ಯಾವುದೇ ನಾಡಿನ ಸರ್ವತೋಮುಖವಾದ ಏಳಿಗೆ ಶಿಕ್ಷಣ ಕ್ರಾಂತಿಯಿಂದಲೇ ಸಾಧಿತವಾಗಬೇಕೆಂಬ ತಮ್ಮ ನಿಲುವಿನಂತೆ, ಶಿಕ್ಷಣ ಪ್ರಸಾರಕ್ಕೆ ಪ್ರಪ್ರಥಮ ಸ್ಥಾನ ನೀಡಿದ್ದೀರಿ. ತತ್ಪರಿಣಾಮವಾಗಿ ಇಂಜನಿಯರಿಂಗ್ ಕಾಲೇಜ್. ಈಚೆಗೆ ವೈದ್ಯಕೀಯ ಕಾಲೇಜ್ ಜೊತೆಗೆ ವೃತ್ತಿಪರ ಶಿಕ್ಷಣ ಸಂಸ್ಥೆಗಳೇ ಅಲ್ಲದೆ ಶಿಕ್ಷಣ ಕಾಲೇಜು ಮತ್ತು ಶಾಲೆಗಳನ್ನು ಶಿಕ್ಷಣಾರ್ಥಿಗಳಿಗೆ ಉಚಿತ ಪ್ರಸಾದ ನಿಲಯಗಳನ್ನು ತೆರೆದಿದ್ದೀರಿ. ವಿದ್ಯಾರ್ಥಿಗಳಿಗೆ ಲೌಕಿಕ ಶಿಕ್ಷಣದ ಜೊತೆ ಜೊತೆಯಾಗಿ 'ಹಿಂದೆ ಗುರು ಮುಂದೆ ಗುರಿ' ಎಂಬ ಕವಿವಾಣಿಯಂತೆ ಆಧ್ಯಾತ್ಮಿಕ ಮಾರ್ಗದರ್ಶನವನ್ನು ನೀಡಿ ಶೀಲವಂತರನ್ನಾಗಿ ಮಾಡಿ ಬೆಳೆಸುತ್ತಿರುವ ವಿಚಾರ ನಮ್ಮೆಲ್ಲರಿಗೂ ಸಂತೋಷವನ್ನುಂಟುಮಾಡಿದೆ, ಮಂಡ್ಯದ ಬಳಿ ತಾವು ಸ್ಥಾಪಿಸಲು ಕೈಗೊಂಡಿರುವ ವೈದ್ಯಕೀಯ ಮಹಾವಿದ್ಯಾಲಯ ನಿರ್ಮಾಣಕ್ಕೆ ನಮ್ಮ ಶಕ್ತಿಮೀರಿ ಸಹಾಯ ಮಾಡುತ್ತೇವೆಂಬ ಭರವಸೆಯನ್ನು ನೀಡುತ್ತೇವೆ. ತಮ್ಮ ಆಶೀರ್ವಾದ ನಮಗೆ ಎಂದೆಂದಿಗೂ ಬೆಂಗಾವಲಾಗಿರಲೆಂದು ಪ್ರಾರ್ಥಿಸಿ, ಇಂದಿನ ಸಮಾರಂಭಕ್ಕೆ ಆಗಮಿಸಿ ನಮ್ಮ ಸನ್ಮಾನ ಸ್ವೀಕರಿಸಿ ಹರಸಿದ ತಮ್ಮನ್ನು ಜಿಲ್ಲೆಯ ಜನತೆಯ ಪರವಾಗಿ ಮತ್ತೊಮ್ಮೆ ಹಾರ್ದಿಕವಾಗಿ ವಂದಿಸುತ್ತೇವೆ.

## ಅಧ್ಯಾಯ–ಹತ್ತು

೧

1982ನೆಯ ಇಸವಿಯ ಏಪ್ರಿಲ್‌ನಲ್ಲಿ ಶಂಕರಗೌಡರು ಕಣ್ಣಿನ ತೊಂದರೆಯಿಂದ ಶಸ್ತ್ರಚಿಕಿತ್ಸೆಗೆ ಬೆಂಗಳೂರಿನ ಮಿಂಟೋ ಆಸ್ಪತ್ರೆ ಸೇರಿದರು. ಅವರು ಆಸ್ಪತ್ರೆ ಸೇರಿದ ನಾಲ್ಕೈದು ದಿನಗಳಲ್ಲೆ ಕನ್ನಡ ಭಾಷಾ ಪ್ರಾಧಾನ್ಯದ ಬಗ್ಗೆ ಕರ್ನಾಟಕದಾದ್ಯಂತ ಚಳುವಳಿ ಪ್ರಾರಂಭವಾಯಿತು. ಇಂತಹ ಚಳುವಳಿಗಳಲ್ಲಿ ಮಂಡ್ಯ ಹಿಂದೆ ಬೀಳುವಂತಿಲ್ಲ, ಯಾವುದೇ ಚಳುವಳಿಯಲ್ಲಿ ಭಾಗವಹಿಸುವಾಗಲು ಶಂಕರಗೌಡರು ಪರವಾಗಿರಲಿ ವಿರೋಧವಾಗಿರಲಿ ಅವರನ್ನು ಚಳುವಳಿಯ ಅವಿಭಾಜ್ಯ ಅಂಗವಾಗಿಯೆ ಪರಿಗಣಿಸಿ ಪ್ರಾರಂಭಿಸುವುದು ಮೊದಲಿಂದ ನಡೆದು ಬಂದ ಪರಿಪಾಠ ನನಗೆ. ಆಸ್ಪತ್ರೆಗೆ ಹೋಗಿ ಶಂಕರಗೌಡರನ್ನು ನೋಡಿ ಗೋಕಾಕ್ ಚಳುವಳಿ ವಿಚಾರ ಪ್ರಸ್ತಾಪ ಮಾಡಿದೆ. ಎಲ್ಲಿಲ್ಲದಿದ್ದರು ಮಂಡ್ಯದಲ್ಲಂತು ಈ ಚಳುವಳಿ ಅತ್ಯುಗ್ರವಾಗಿ ನಡೆಯಬೇಕು. ಮಂಡ್ಯದ ಮಣ್ಣಿನ ಮಕ್ಕಳು ಚಳುವಳಿ ಜಯಗಳಿಸುವಲ್ಲಿ ಸರ್ವಥಾ ಸಮರ್ಥರು ಎಂದು ಗೌಡರು ತಿಳಿಸಿದರು.

ಪೌರವಾಣಿ ಸಂಪಾದಕರಾಗಿದ್ದ ದಿವಂಗತ ಜಿ. ಗುಂಡಣ್ಣ ಅವರ ವಿಚಾರ ಒಂದೆರಡು ಮಾತುಗಳಲ್ಲಿ ಹೇಳುತ್ತೇನೆ. ಮಂಡ್ಯದಲ್ಲಿ ನಡೆಯುವ ಚಳುವಳಿಗಳ ಮುಂಚೂಣಿಯಲ್ಲಿ ನಿಂತು ಚಳುವಳಿಗೆ ಅಂಕುರಾರ್ಪಣ ಮಾಡುವುದು ದಿವಂಗತ ಗುಂಡಣ್ಣನ ಸ್ವಭಾವ. ಬೆಂಗಳೂರಿನಿಂದ ಬಂದ ನಾನು ಗುಂಡಣ್ಣನನ್ನು ಕಂಡು ಗುಂಡಣ್ಣ ನಾಳೆ ಬೆಳಗ್ಗೆ ಕೆ. ವಿ. ಶಂಕರಗೌಡರ ಅಧ್ಯಕ್ಷತೆಯಲ್ಲಿ ಗೋಕಾಕ್ ಚಳುವಳಿಗೆ ಪಾರ್ಕಿನಲ್ಲಿ ನನ್ನ ಮತ್ತು ನಿನ್ನ ಹೆಸರಿನಲ್ಲಿ ಬಹಿರಂಗ ಸಭೆ ಕರೆಯೋಣ ಎಂದೆ. ಅದನ್ನೆ ನಾನು ಸಹ ನಿರೀಕ್ಷಿಸಿ ಕುಳಿತಿದ್ದೆ ಎಂದರು. ನಮ್ಮ ಪ್ರೆಸ್‌ನಲ್ಲಿ ನೋಟೀಸ್‌ಗಳನ್ನು ಅಚ್ಚು ಹಾಕಿಸಿ ಪತ್ರಿಕೆಗಳ ಹಂಚಿಕೆಯಲ್ಲಿ ನೋಟೀಸ್‌ಗಳನ್ನು ಹಂಚುವ ವ್ಯವಸ್ಥೆ ಮಾಡಿದೆ. ಆಟೋರಿಕ್ಷವನ್ನು ಬಾಡಿಗೆಗೆ ಗೊತ್ತು ಮಾಡಿ ಧ್ವನಿವರ್ಧಕದ ಮೂಲಕ ಪ್ರಚಾರ ಮಾಡಲಾಯ್ತು. ಕೆ. ವಿ. ಶಂಕರಗೌಡರು ಬರಲಾಗಲಿಲ್ಲ. ಪ್ರೊ. ಎಚ್. ಎಲ್. ಕೇಶವಮೂರ್ತಿ ಅಧ್ಯಕ್ಷತೆಯಲ್ಲಿ ಸಭೆ ನಡೆಸಲಾಯ್ತು. ಶಾಲಾ ಕಾಲೇಜ್‌ಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ಹಾಗೂ ನಾಗರೀಕರಿಂದ ಬಹಿರಂಗಸಭೆ ಸಾಂಗವಾಗಿ ನೆರವೇರಿತು. ಎಸ್. ಡಿ. ಜಯರಾಂ ಹಾಲಿ ಶಾಸಕರು ಮಂಡ್ಯದಿಂದ ಅವರು ಮತ್ತು ಕೆ. ಬೆಟ್ಟಶೆಟ್ಟರು ಉಪವಾಸ ಸತ್ಯಾಗ್ರಹ ಪರ್ಣಕುಟಿ ನಿರ್ಮಾಣ ಮಾಡುವ ಕಾರ್ಯವಹಿಸಿ ಹಳ್ಳಿ ಹಳ್ಳಿಗಳಲ್ಲೂ ಈ ಚಳುವಳಿ ಪ್ರಾರಂಭವಾಗಬೇಕು. ನಮ್ಮ ಭಾಷೆ ನಮ್ಮ ಹೃದಯ

ದಷ್ಟೆ ಮುಖ್ಯ ಮುಂತಾಗಿ ನಾನಾ ಮುಖಂಡರು ಮಾತನಾಡಿ ಚಳುವಳಿ ಬೆಂಬಲಿಸಿದರು.

ಕಾರ್ಯಕ್ರಮ ಗೊತ್ತು ಮಾಡಿದಂತೆ ಪ್ರಾತಃಕಾಲ ಸಿಲ್ವರ್ ಜೂಬಿಲಿ ಪಾರ್ಕಿನ ಸತ್ಯಾಗ್ರಹ ಪರ್ಣಕುಟಿಯಲ್ಲಿ ಪಿ. ಎಸ್. ಜವರಪ್ಪಗೌಡರು, ಎಂ. ಸಿ. ಅಣ್ಣಯ್ಯನವರು, ಕೆ. ಸಿ. ಚನ್ನಯ್ಯ, ಶ್ರೀಪಾದು, ಜಿ. ಗುಂಡಣ್ಣ, ಜಿ. ವಿ. ವೀರಪ್ಪ, ಎಂ, ಕೆಂಪಯ್ಯ, ಕೆ. ಬೆಟ್ಟಶೆಟ್ಟಿ, ಕಾಲೇಜು ಮತ್ತು ಹೈಸ್ಕೂಲ್‌ಗಳ ವಿದ್ಯಾರ್ಥಿಗಳ ಸಹಸ್ರ ಸಂಖ್ಯೆ ಸಮೂಹ ಚಳುವಳಿಯಲ್ಲಿ ಪಾಲ್ಗೊಂಡಿತ್ತು. ಎಚ್. ಚಿಕ್ಕಲಿಂಗೇಗೌಡ, ಜಿ. ಮಾದೇಗೌಡ, ಎಚ್. ಡಿ. ಚೌಡಯ್ಯ, ಗೌಡಗೆರೆ ನಾಗಪ್ಪ, ಮುಂತಾದವರು ಪಾಲ್ಗೊಂಡರು. ಪ್ರಥಮ ದಿನದ ಸರದಿ ಉಪವಾಸಕ್ಕೆ ಕುಳಿತರು. ಸಂಜೆಗೆ ಆಸ್ಪತ್ರೆಯಿಂದ ಬಂದು ಕೆ. ವಿ. ಶಂಕರಗೌಡರು ಸತ್ಯಾಗ್ರಹಿಗಳಿಗೆ ಹಣ್ಣಿನ ರಸ ಕುಡಿಸಿ ಸತ್ಯಾಗ್ರಹಿಗಳ ಮಾತೃಭಾಷಾ ಪ್ರೇಮದ ಬಗ್ಗೆ ಪ್ರಶಂಸಿಸಿ ನಾಲ್ಕಾರು ಮಾತುಗಳನ್ನಾಡಿ ಅಭಿನಂದಿಸಿದರು.

ಗೋಕಾಕ್ ಚಳುವಳಿ ಉಗ್ರ ರೂಪ ತಾಳಿತು. ಮೈಸೂರು ಬೆಂಗಳೂರಿಂದ ಬಸ್‌ಗಳ ಓಡಾಟ ನಿಂತು ಜನರು ಮಕ್ಕಳು ಮರಿಗಳ ಮದುವೆ ಮುಂಜಿಗಳನ್ನು ನೆರವೇರಿಸಲು ತೊಂದರೆಯಾಯಿತು. ಮೈಸೂರಿನಲ್ಲಿ ಲ್ಯಾನ್ಸ್‌ಡೌನ್ ಬಿಲ್ಡಿಂಗ್ ಸತ್ಯಾಗ್ರಹ ಶಿಬಿರಕ್ಕೆ ಮಹಾ ಕವಿ ಕುವೆಂಪು ಅವರು ಭೇಟಿಯಿತ್ತು "ಕರ್ನಾಟಕ ಸರ್ಕಾರದವರು 'ಗೋಕಾಕ್ ವರದಿ' ಯನ್ನು ಅಂಗೀಕರಿಸಿ ಕನ್ನಡವನ್ನು ರಾಜ್ಯದ ಪ್ರಥಮ ಭಾಷೆಯಾಗಿ ಘೋಷಣೆ ಮಾಡಬೇಕು. ಇಲ್ಲವಾದರೆ ಮದ್ರಾಸಿನರೀತ್ಯ 'ದ್ರಾವಿಡ ಮುನ್ನೇತ್ರಕಜಗಂ' ರಾಜಕೀಯ ಪಕ್ಷ ಮಾಡಿಕೊಂಡು ಸರ್ಕಾರವನ್ನೇ ಬದಲಿಸಿದಂತೆ ಕನ್ನಡ ಭಾಷಾ ಸಂಸ್ಥೆಯನ್ನೇ ರಾಜಕೀಯ ಪಕ್ಷಮಾಡಿಕೊಂಡು ಕರ್ನಾಟಕದಲ್ಲೂ ಸರ್ಕಾರ ಉರುಳಿಸಲು ಯೋಚನೆ ಮಾಡಬೇಕಾದೀತು'' ಎಂದು ಸತ್ಯಾಗ್ರಹಿಗಳನ್ನು ಆಶೀರ್ವದಿಸಿದರು. ಕರ್ನಾಟಕದ ಉದ್ದಗಲಕ್ಕೆ ನಡೆದ ಗೋಕಾಕ್ ವರದಿ ಚಳುವಳಿ ಉಗ್ರರೂಪ ತಳೆದ ಮೇಲೆ ಸರ್ಕಾರ ರಾಜ್ಯದ ಪ್ರಥಮ ಭಾಷೆಯನ್ನಾಗಿ ಕನ್ನಡವನ್ನು ಮಾಡಲು ಒಪ್ಪಿತು.

ಕರ್ನಾಟಕ ವಿಧಾನ ಸಭಾ ಚುನಾವಣೆ 1983 ರಲ್ಲಿ ನಡೆಯುವುದಾಗಿದೆ. ಕರ್ನಾಟಕದಲ್ಲಿ ಲೋಕದಳವನ್ನು ಬಲಪಡಿಸಿ ರೈತರ ಸಮಸ್ಯೆಗಳನ್ನು ಬಗೆಹರಿಸಲು ವ್ಯವಸ್ಥಿತವಾಗಿ ಪಕ್ಷವನ್ನು ಕರ್ನಾಟಕದಲ್ಲಿ ರಚನೆ ಮಾಡಬೇಕು. ಪಕ್ಷ ಬಲವಾಗಲು ಶ್ರೀ ಕೆ. ವಿ. ಶಂಕರಗೌಡರಂತಹ ರಾಜಕಾರಣಿ ಅಗತ್ಯವೆಂದು ಚರಣಸಿಂಗರು ಬೆಂಗಳೂರಿನ ದೂರವಾಣಿ ಮೂಲಕ ಕರ್ನಾಟಕ ಲೋಕದಳ ಅಧ್ಯಕ್ಷ ಶ್ರೀ ನರಸಿಂಹಯ್ಯನವರಿಗೆ ಮಾತನಾಡಿ ನಾಳಿನಾಡಿದ್ದರಲ್ಲಿ ನಿಮ್ಮಲ್ಲಿ ಲೋಕದಳ ಪುನರ್‌ರಚನೆ ಮಾಡಿ ಶ್ರೀ ಕೆ. ವಿ. ಶಂಕರಗೌಡರನ್ನು ಅಧ್ಯಕ್ಷರನ್ನಾಗಿ ನೇಮಿಸಿ, ನೀವು (ನರಸಿಂಹಯ್ಯನವರು) ಕಾರ್ಯಾಧ್ಯಕ್ಷರಾಗಿ ಎಂದು ಹೇಳಿ ಇನ್ನೂ ಕೆಲವು ಸಣ್ಣಪುಟ್ಟ ಬದಲಾವಣೆ ಮಾಡಲು

ಸಲಹೆಯಿತ್ತರು.

ಅದರಂತೆ ನರಸಿಂಹಯ್ಯನವರು ಲೋಕದಳ ಸಭೆಯನ್ನು ಕರೆದು ಕೆ. ವಿ. ಶಂಕರಗೌಡರು ಸ್ನೇಹಿತರೊಡನೆ ಸಭೆಗೆ ಬರಲು ಚೌಧುರಿ ಚರಣಸಿಂಗರು ಹೇಳಿದ, ವಿಚಾರಗಳ ವಿವರಗಳನ್ನು ತಿಳಿಸಿದರು. ನಾನು ಪ್ರೊ. ಎಚ್. ಎಲ್. ಕೇಶವಮೂರ್ತಿ, ಜೆ. ಈರೇಗೌಡರು, ಬಿ. ಜಯಪ್ರಕಾಶಗೌಡರು ಮುಂತಾದವರು ಬೆಂಗಳೂರಿಗೆ ಲೋಕದಳ ಸಭೆಗೆ ಹೊರಟೆವು. ಡ್ರೈವರ್ ಶ್ರೀ ರಾಮಕೃಷ್ಣ ಹೆಗಡೆ ಅವರ ಮನೆ ರಸ್ತೆಗೆ ಬಂದಿದ್ದ. ನಾನು ಶಂಕರಗೌಡರಿಗೆ ಹೆಗಡೆ ಅವರ ಮನೆ ತೋರಿದೆ. ನಾವಿನ್ನು ಬೆಳಗಿನ ತಿಂಡಿ ತಿಂದಿರಲಿಲ್ಲ. ಹೆಗಡೆಯವರ ಮನೆಯಲ್ಲೆ ತಿಂಡಿತಿಂದು ಹೋಗೋಣ ಎಂದ ಶಂಕರಗೌಡರು ಕಾರನ್ನು ಹೆಗಡೆಯವರ ಮನೆಗೆ ತಿರುಗಿಸಲು ಹೇಳಿದರು.

ಬಾಗಿಲಲ್ಲೆ ಇದ್ದ ಶ್ರೀಮತಿ ಶಕುಂತಳಾ ಹೆಗಡೆ ಅವರು 'ಶಂಕರಗೌಡರನ್ನು ಕಂಡ ವರೆ ಬನ್ನಿ ಬನ್ನಿ ಬಹುದಿನಗಳಾಗಿತ್ತು ನೋಡಿ ಎಂದು ಸ್ವಾಗತಿಸಿದರು. ಅಂದು ಯಾವುದೋ ಅಂತರರಾಷ್ಟ್ರೀಯ ಕ್ರಿಕೆಟ್ ಟೂರ್ನಿ ನಡೆಯುತ್ತಿತ್ತು. ಹೆಗಡೆ ಅವರು ಇದ್ದಾರೆಯೆ ? ಎಂದು ಪ್ರಶ್ನಿಸಿದ ಶಂಕರಗೌಡರು ''ಏನಾವರು ತಿಂಡಿ ಕೊಡುತ್ತೀರಾ'' ಎಂದು ಕೇಳಿದರು. ತಿಂಡಿ ಮತ್ತು ಕಾಫಿ ಸೇವನಾ ನಂತರ ಶಕುಂತಲ ಅವರು "ಹೆಗಡೆ ಅವರು ಮಹಡಿಯಲ್ಲಿ ಕುಳಿತು ಕ್ರಿಕೆಟ್ ನೋಡುತ್ತಿದ್ದಾರೆ'' ಎಂದರು. ಶಂಕರಗೌಡರು ಕೆಳಗಿನಿಂದಲೇ ಕೂಗಿದರು. ಹೆಗಡೆ ಅವರು ನಮ್ಮ ಜೊತೆ ಕುಳಿತು ''ಏನು ಸಮಾಚಾರ, ಎಲ್ಲಿಗೆ ಹೊತ್ತಿಗೆ ಮುಂಚೆ ಹೊರಟಿರಿ'' ಎಂದು ಕೇಳಿದರು. ''ಲೋಕದಳ ಮೀಟಿಂಗಿಗೆ ಹೋಗುತ್ತಿದ್ದೇವೆ'' ಎಂದು ತಿಳಿಸಿದರು. "ಏನ್ರೀ ಅಪ್ಪಾ, ಅದೂ ಚೌಧುರಿ ಚರಣಸಿಂಗ್ ಪಾರ್ಟಿಗೆ ಖಂಡಿತ ಬೇಡಿ. ಬನ್ನಿ ಜನತಾದಲ್ಲಿರೋಣ ಎಂದು ಆಗ್ರಹಪಡಿಸಿದ ಹೆಗಡೆ ಅವರು ಲೋಕವಳದ ಸಭೆಗೆ ಹೋಗದ ಹಾಗೆ ಶಂಕರ ಗೌಡರನ್ನು ತಡೆದೇ ಬಿಟ್ಟರು. ''ಈ ಸಾರಿ ಚುನಾವಣೆಯಲ್ಲಿ ಜನತಾ ಪಕ್ಷದಿಂದ ನಿಂತುಬಿಡಿ.'' ಎಂದು ಆಹ್ವಾನವನ್ನು ಇತ್ತರು. ''ಸರಿಯಪ್ಪ ಬಂದ ದಾರಿಗೆ ಸುಂಕವಿಲ್ಲ ಹೊತ್ತಾಯಿತು ಹೊರಡುತ್ತೇವೆ'' ಎಂದು ಹೇಳಿ ಮಂಡ್ಯಕ್ಕೆ ವಾಪಸ್ಸು ಬಂದೆವು. ರಾಜಕೀಯ ಪಕ್ಷಗಳು ವಿಧಾನ ಸಭಾ ಚುನಾವಣೆಗೆ ಉಮೇದುವಾರಿಕೆ ಕರೆದುವು. ಕೆ. ವಿ. ಶಂಕರಗೌಡರು ಕೆರೆಗೋಡು ಕ್ಷೇತ್ರಕ್ಕೆ ಉಮೇದು ಮನವಿ ಸಲ್ಲಿಸಿದರು. ಶಂಕರಗೌಡರಿಗೆ ಉಮೇದುವಾರಿಕೆ ಕೊಡಲು ಹೆಗಡೆ ಅವರು ನಿರಾಕರಿಸಲೂ ಇಲ್ಲ. ಕೊಡಲೂ ಇಲ್ಲ. ಶಂಕರಗೌಡರ ಉಮೇದುವಾರಿಕೆಗೆ ಸಿ. ಗೋವಿಂದ ಗೌಡರ ಕಾರಿನಲ್ಲಿ ವಾರಕಾಲ ಯಾತ್ರೆ ಮಾಡಿದೆ. ಊಹುಂ ಶಂಕರಗೌಡರಿಗೆ ಸ್ಥಾನಸಿಗುವುದು ಕನಸೋ ಎನ್ನುವಂತಾಯಿತು. ಜೀದಗಾಲು ತಮ್ಮಣ್ಣನನ್ನು ನಿಲ್ಲಿಸಲು ದೇವೇಗೌಡರು ಪ್ರಯತ್ನಿಸುತ್ತಿದ್ದಾರೆಂದೂ ಅವರು ತಪ್ಪಿದರೆ ಕಲ್ಮಂಟಿದೊಡ್ಡಿ

ಎಚ್. ಚಿಕ್ಕಲಿಂಗೇಗೌಡರಿಗೆ ಸ್ಥಾನ ಕಾಯ್ದಿಟ್ಟಿದೆ ಎಂದು ಹೇಳಲಾಗುತ್ತಿತ್ತು.

ರಾಮಕೃಷ್ಣಹೆಗಡೆ ಅವರು ಶಂಕರಗೌಡರ ಸೀಟಿನ ಬಗ್ಗೆ ಎಳ್ಳಷ್ಟು ಆಸಕ್ತಿ ತೋರಲಿಲ್ಲ. ನಾನು ಸ್ನೇಹಿತರಾದ ಸಿ, ಗೋವಿಂದ ಗೌಡರ ಕಾರಿನಲ್ಲಿ ಬೆಂಗಳೂರಿಗೆ ಹೋಗಿ ಬಾದ್ರಿಶಾಮಣ್ಣನವರೊಡನೆ ಡಿ. ಬಿ. ಚಂದ್ರೇಗೌಡರ ಮನೆಗೆ ಹೋಗಿ ನಜೀರ್ ಸಾಪೇಬರನ್ನು ಭೇಟಿ ಮಾಡಿ ಶಂಕರಗೌಡರ ಸೀಟಿನ ಬಗ್ಗೆ ನಡೆದಿರುವ ಹಗರಣ ವಿವರಿಸಿದೆವು. ಡಿ. ಬಿ. ಚಂದ್ರೇಗೌಡರು ಮತ್ತು ನಜೀರ್‌ಸಾಹೇಬರಿಬ್ಬರೂ ಪ್ರತ್ಯೇಕವಾಗಿ ಕುಳಿತು ಮಾತನಾಡಿ ಮಂಡ್ಯ ಕ್ಷೇತ್ರದಿಂದ ಕ್ರಾಂತಿರಂಗ ಸ್ಥಾನವನ್ನು ಕೊಡುವುವಾಗಿ ಭರವಸೆಯಿತ್ತರು. ನಾನು ಮಂಡ್ಯಕ್ಕೆ ಬಂದು ಬೆಂಗಳೂರಿನಲ್ಲಿ ನಡೆದ ವಿಚಾರವನ್ನು ಶಂಕರಗೌಡರು ಮತ್ತು ಸ್ನೇಹಿತರಲ್ಲಿ ತಿಳಿಸಿದೆ. ಈ ಒಂದು ಪ್ರಕರಣ ಕಾರಣವಾಗಿ ನನ್ನ ಮೇಲೆ ಸಂಶಯದ ಭೂತವನ್ನೇ ಕೆಲವರು ಹುಟ್ಟಿಹಾಕಿದರು.' ನಾನು ಎಚ್.ಡಿ. ಚೌಡಯ್ಯನವರನ್ನು ಒಳಹೊಕ್ಕು ನಡೆಸಿರುವ ಕುತಂತ್ರವೆಂದು ನಾನಾ ರೀತಿ ಮಾತನಾಡಿಕೊಳ್ಳಲಾರಂಭಿಸಿದ್ದರು. ನನ್ನ ಮೇಲಿನ ಈ ಕುತೂಹಲ ಕಾರಿಯಾದ ಅಂಶವನ್ನು ಶಂಕರಗೌಡರಿಗೆ ಹೇಳಿದರೋ ಇಲ್ಲವೊ ಗೊತ್ತಿಲ್ಲ. ಕೆರಗೋಡು ಕ್ಷೇತ್ರದಿಂದಲೇ ಶಂಕರಗೌಡರು ಸ್ಪರ್ಧಿಸಬೇಕೆಂದು ಕೆಲವು ಮಂದಿ ಸ್ನೇಹಿತರು, ಗ್ರಾಮಾಂತರ ಮುಖಂಡರು ಮತ್ತು ಕಾಲೇಜ್ ಅಧ್ಯಾಪಕವರ್ಗದವರು ಸಲಹೆ ಮಾಡಿದರು.

ಸ್ಥಾನಗಳ ಹಂಚಿಕೆ ಮಾಡಲು ಶಂಕರಗೌಡರು ಮತ್ತು ಎಚ್. ಚಿಕ್ಕಲಿಂಗೇಗೌಡರೊಡನೆ ಬೆಂಗಳೂರಿಗೆ ಬರಲು ಆಹ್ವಾನ ಜನತಾ ಆಫೀಸಿನಿಂದ ಬಂತು. ಈ ಇಬ್ಬರ ಜೊತೆ ನಾನು ಹೊರಟೆ. ಸೀದಾ ದೇವೇಗೌಡರ ಮನೆಗೆ ಹೋದೆವು. ದೇವೇಗೌಡರು ಕೆ. ವಿ. ಶಂಕರಗೌಡರನ್ನು ಕುರಿತು ಏನು ಗುರು ? ಕೆರಗೋಡಿನಿಂದ ಸ್ಪರ್ಧಿಸುತ್ತೀರಾ ? " ಎಚ್. ಡಿ. ಚೌಡಯ್ಯನವರು 'ಪ್ರಬಲ ಸ್ಪರ್ಧಿ ಎಂದು ಹೇಳುತ್ತಿದ್ದಾರೆ. ಆಲೋಚನೆ ಮಾಡಿ ನಿಮಗಂತು ಸ್ಥಾನ ಕಾಯ್ದಿರಿಸಲಾಗಿದೆ" ಎಂದರು.

ಮೂರು ನಾಲ್ಕು ದಿನಗಳಲ್ಲಿ ಹೆಸರುಗಳನ್ನು ಪ್ರಕಟಿಸಲಾಗುವುದೆಂದು ದೇವೇಗೌಡರು ತಿಳಿಸಿದರು. ಅವರಿಂದ ಬೀಳ್ಕೊಂಡು ಬಂದೆವು. ಗೋಕಾಕ್ ಚಳುವಳಿ ಕಾರ್ಯಕ್ರಮಕ್ಕೆ ಬೆಳಗ್ಗೆಯೇ ಧಾರವಾಡಕ್ಕೆ ಶಂಕರಗೌಡರು ಮತ್ತು ಗೆಳೆಯರಾದ ನಾವು ಹೊರಡುವವರಿದ್ದೆವು. ನಾವು ಧಾರವಾಡಕ್ಕೆ ಹೊರಡುವ ಸಮಯಕ್ಕೆ ಮುನ್ನವೆ ಕೆ. ವಿ. ಶಂಕರಗೌಡರಿಗೆ ಮತ್ತು ಎಚ್. ಡಿ. ಚೌಡಯ್ಯನವರಿಗೆ ಆತ್ಮೀಯರಾದ ಗ್ರಾಮಾಂತರ ಮುಖಂಡರು ಹೆಚ್ಚು ಕಮ್ಮಿ ಎಲ್ಲರು ಎಚ್. ಡಿ. ಚೌಡಯ್ಯನವರೊಡನೆ ಕೆ. ವಿ. ಶಂಕರಗೌಡರ ಮನೆಗೆ ಬಂದರು. ಬಂದ ಮುಖಂಡರುಗಳಿಗೆ ನಮಸ್ಕರಿಸಿದ ಶಂಕರಗೌಡರು ಧಾರವಾಡಕ್ಕೆ ಹೋಗ್ತಾ ಇದ್ದೇನೆ. ಮಾತನಾಡಲು ಬಿಡುವಿಲ್ಲ ಎಂದು

ತಿಳಿಸಿ ಪ್ರಯಾಣದ ಸಿದ್ಧತೆ ಕಡೆ ಗಮನ ಹರಿಸಿದರು. ಎಚ್. ಡಿ. ಚೌಡಯ್ಯ ನವರು ಶಂಕರಗೌಡರನ್ನು ಕುರಿತು ತುರ್ತಾಗಿ ಹೊರಟಿದ್ದೀರಿ. ಒಂದು ಐದು ನಿಮಿಷ ಬಿಡುವು ಮಾಡಿಕೊಳ್ಳಿ ಮಾತನಾಡೋಣ ಎಂದರು. 5 ನಿಮಿಷದಲ್ಲಿ ಮಾತು ಮುಗಿ ಯಲು ಸಾಧ್ಯವೇ ಧಾರವಾಡದಿಂದ ಬರುತ್ತೇನೆ. ಮಾತನಾಡೋಣ ಎಂದರು. ನಾನು ಎಂದಿನ ಸದರದಂತೆ ಬನ್ನಿ ಒಳಗೆ ಚೌಡಯ್ಯನವರೇ ಎಂದು ರೂಂಗೆ ಕರೆದೆನಾದರು ಶಂಕರಗೌಡರು ಮಾತಿಗೆ ಕೂರಲೇ ಇಲ್ಲ. ಈ ಒಂದು ಪ್ರಕರಣದಿಂದಲೂ ಸಹ ನಾನು ಎಚ್. ಡಿ. ಚೌಡಯ್ಯನವರೊಡನೆ ಸರೀಕಾಗಿ ತಮ್ಮನ್ನು ಕೆರಗೋಡು ಕ್ಷೇತ್ರದಿಂದ ಅಲುಗಿಸಲು ನಡೆಸುತ್ತಿರುವ ರಾಜಕೀಯ ಪಿತೂರಿ ಎಂದು ಊಹಾಪೋಹದ ಪ್ರಪಂಚವನ್ನು ಕೆಲವರು ಸೃಷ್ಟಿ ಮಾಡಿಕೊಂಡರು.

ಕೆರಗೋಡು ಕ್ಷೇತ್ರದಿಂದ ಶಂಕರಗೌಡರು ಸ್ಪರ್ಧಿಸಲು ಜನತಾ ಪಕ್ಷ ಪ್ರಕಟಿಸಿತು. ಶಂಕರಗೌಡರು ಉಮೇದುವಾರಿಕೆ ಅರ್ಜಿ ಸಲ್ಲಿಸಿದರು. ಶಂಕರಗೌಡರು ತಾವು ಸ್ಪರ್ಧಿ ಸುವ ಚುನಾವಣೆಗಳಲ್ಲಿ ತಮ್ಮ ಮನೆ ದೇವರು ಆಲಕೆರೆ ಈಶ್ವರ ದೇವಾಲಯಕ್ಕೆ ಪ್ರಾತಃಕಾಲ ಹೋಗುವ ಕಾರ್ಯಕ್ರಮ ಹಾಕಿಕೊಂಡಿದ್ದರು. ನಾನು ಹೊರಗಡೆ ಪೋರ್ಟಿಕೋನಲ್ಲಿ ಕೆಲವರೊಡನೆ ಚುನಾವಣಾ ಪ್ರಚಾರ ಕುರಿತು ಮಾತನಾಡುತ್ತಿದ್ದೆ. ಒಳಗಡೆ ಶಂಕರಗೌಡರೊಡನೆ "ಜವರಪ್ಪಗೌಡರು ಹಳ್ಳಿಗಳಿಗೆ ಬಂದರೆ ರೈತರು ಓಟು ಕೊಡುವುದಿಲ್ಲವೆಂದು ತಿಳಿಸಿದ್ದಾರೆ. ಈ ಚುನಾವಣೆಯಲ್ಲಿ ಅವರನ್ನು ಹೊರಗಿಡಿರಿ ಎಂದು ಸಲಹೆ ಮಾಡಿದರಂತೆ. ಶಂಕರಗೌಡರು ಓಗೆ "ನೀವು ನೇರವಾಗಿ ಜವರಪ್ಪ ಗೌಡರಿಗೆ" ತಿಳಿಸಬೇಡಿ ಎಂದು ಹೇಳಿದರಂತೆ. ಈ ವಿಚಾರ ಒಳಗಡೆಯಿದ್ದ ನನ್ನ ಹಿತೈಷಿ ಯೊಬ್ಬರು ವಿವರವಾಗಿ ತಿಳಿಸಿದರು. ಎಲ್ಲರೂ ಹೋದ ಮೇಲೆ ನಾನು ಸ್ನೇಹಿತ ಸಿ. ಗೋವಿಂದಗೌಡರು ಉಳಿದಿದ್ದೆವು. ಶಂಕರಗೌಡರು ಒಳಗಡೆಯಿಂದ ಬಂದವರೆ "ಜವರಪ್ಪಗೌಡ ನಾಳೆ ನಿನ್ನ ಕಾರ್ಯಕ್ರಮವೇನು ?" ಎಂದು ಕೇಳಿದರು. "ಸಾರ್ ನಾನು ಹಲ್ಲುಗಳನ್ನು ಕೀಳಿಸಿದ್ದು ಆರೋಗ್ಯ ನೆಟ್ಟಗಿಲ್ಲ. ನಾನು ಟೌನ್‌ನಲ್ಲೇ ಇದ್ದು ಕೈಲಾದಷ್ಟು ಪ್ರಚಾರ ನಡೆಸುತ್ತೇನೆ" ಎಂದೆ. "ಸರಿ ಹಾಗೆ ಮಾಡು ಆರೋಗ್ಯ ನೋಡಿಕೋ" ಎಂದರು. ಈ ಬಗ್ಗೆ ಈ ದಿನದವರೆಗೆ ನಾನು ಶಂಕರಗೌಡರನ್ನು ಕೇಳಿಲ್ಲ ಅವರು ಹೇಳಿಲ್ಲ. ಚುನಾವಣಾ ಪ್ರಚಾರಕ್ಕಂತು ಶಂಕರಗೌಡರು ಕರೆಯಲಿಲ್ಲ. ಕೊನೇ ದಿನ ಕೆ. ಬೆಟ್ಟಸೆಟ್ಟರು ಬಂದು ಬಿ. ಹೊಸೂರು ಕಾಲೋನಿ ಸ್ಯಾನಿಟೋರಿಯಂಗೆ ಗೌಡರು ಕರೆಯುತ್ತಾರೆಂದು ಹೇಳಿ ಕರೆದುಕೊಂಡು ಹೋದರು. ಸ್ಯಾನಿಟೋರಿಯಂ ಅಜುಬಾಜುಗಳಲ್ಲಿದ್ದ ಮತದಾರರುಗಳನ್ನು ನೋಡಿ ಮನವಿ ಮಾಡಿ ಬಂದೆವು.

ಸುಮಾರು 48 ವರ್ಷಗಳ ಸ್ನೇಹ ಶಂಕರಗೌಡರೊಡನೆ. ಎಚ್. ಡಿ. ಚೌಡ ಯ್ಯನವರೊಡನೆ ಸ್ನೇಹ 35 ವರ್ಷಕ್ಕಿಂತ ಹೆಚ್ಚಿನದು. ಈ ಹೊತ್ತಿನವರೆಗೂ ನಾನು ಎಚ್. ಡಿ. ಚೌಡಯ್ಯನವರೊಡನೆ ಶಂಕರಗೌಡರ ಬಗ್ಗೆ ಅವರ ಬೆನ್ನ ಹಿಂದೆ

ಯಾವುದೇ ರೀತಿಯ ಅಹಿತವಾದದ್ದನ್ನು ಕುರಿತು ಚರ್ಚಿಸಿಲ್ಲ. ಆದರೂ ಸ್ನೇಹದಲ್ಲಿ ನೇರವಾಗಿರಲು ಅಕ್ಕಪಕ್ಕದ ಜನ ಬಿಡರು ಎಂಬ ಒಂದು ನಿದರ್ಶನಕ್ಕಾಗಿಯೇ ಈ ಭಾಗವನ್ನು ಬರೆದಿದ್ದೇನ

"ಸಿಹಿಗೆಂತು ರುಚಿಯಿಹುದೋ !
ಕಹಿಗುಮಂತೆಯೆ ಬೇರೆ ರುಚಿಯಿರದೆ ?"

ತರುಣ ಸ್ನೇಹಿತರಾದ ಎಚ್. ಡಿ. ಚೌಡಯ್ಯನವರು ಕೆ. ವಿ. ಶಂಕರ ಗೌಡರ ಗುಂಪಿಗೆ ಬಂದ ಮೇಲೆ ಶಂಕರಗೌಡರು ಕೈಗೊಂಡ ಕಾರ್ಯಗಳು ತೀವ್ರಗತಿ ಕಂಡವು. ಹಿಡಿದ ಕೆಲಸ ಛಲದಿಂದ ಸಾಧನೆ ಮಾಡುವಲ್ಲಿ ಶಂಕರಗೌಡರಿ ಗಿಂತ ಒಂದು ಕೈ ಮೇಲಾದವರು. ಇವರ ಜೊತೆ ಮತ್ತೆ ಕೆಲವು ಯುವಕರು ನಮ್ಮ ಗುಂಪಿಗೆ ಬಂದರು. ಬರುತ್ತಲೇ ಯಾವುದಾದರು ಕಮಿಟಿಗಳಿಗೆ ಸದಸ್ಯ ರಾಗುವ ಆಸೆ ಹೊತ್ತು ಬಂದವರು, ಬಂದ ಹಾಗೆ ವಾಪಸ್ಸಾದರು. ಆದರೆ ಚೌಡಯ್ಯ ನವರು ಯಾವುದಾದರು ರಾಜಕೀಯದಲ್ಲಿ ಸ್ಥಾನ ಮಾನ ಗಿಟ್ಟಿಸಬೇಕೆಂಬ ಗೀಳನ್ನು ದೂರವಿಟ್ಟು ಬಂದಿದ್ದವರು. ಈ ಮಾತನ್ನು ಹೇಳುವಾಗ ನನಗೆ ಹೃದಯ ತುಂಬಿ ಬರು ತ್ತದೆ. ಕೊಟ್ಟ ಕೆಲಸವನ್ನು ತ್ರಿಕರಣಪೂರ್ವಕವಾಗಿ ನಿರ್ವಹಿಸುತ್ತಿದ್ದರು ಚೌಡಯ್ಯ ನವರು. ಚೌಡಯ್ಯನವರ ಕಾರ್ಯತತ್ಪರತೆಯನ್ನು ಹುಡುಕಿ ಸ್ಥಾನಮಾನಗಳು ಅವ ರಲ್ಲಿಗೆ ಹೋದುವು ಎಂದರೆ ಉತ್ಪ್ರೇಕ್ಷೆ ಮಾತಾಗದು. ನಾನು ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಮಂಡಳಿ ಅಧ್ಯಕ್ಷನಾಗಿದ್ದೆ. ಒಂದು ದಿನ ವಿಧಾನಸೌಧದಲ್ಲಿ ಅಭಿವೃದ್ಧಿ ಇಲಾಖಾ ಮುಖ್ಯರಾದ ಜಿ. ವಿ. ಕೆ. ರಾವ್ ಅವರು "ನಿಮ್ಮ ಎಚ್. ಡಿ. ಚೌಡಯ್ಯನವರ ಹೆಸರನ್ನು ಕೃಷಿ ವಿಶ್ವವಿದ್ಯಾನಿಲಯದ ಬೋರ್ಡ್ ಆಫ್ ರೀಜೆಂಟ್‌ರಾಗಿ ಶಿಫಾರ್ಸು ಮಾಡಿದ್ದೇನೆ. ನನ್ನ ಶಿಫಾರ್ಸು ಯೋಗ್ಯತಾ ಪೂರ್ಣವಾದದ್ದಲ್ಲವೆ ?" ಎಂದರು. "ಅಹುದು ಸಾರ್ ಒಳ್ಳೆ ದಕ್ಷತೆ ಗಂಡನ್ನು ಶಿಫಾರ್ಸು ಮಾಡಿದ್ದೀರಿ" ಎಂದು ಸಂತೋಷ ವ್ಯಕ್ತಪಡಿಸಿದೆ.

ಕೆ. ವಿ. ಶಂಕರಗೌಡರೊಡನೆ ಸರಿಸಮನಾಗಿ ನಿಂತು ಯಾವುದೇ ಸಮಸ್ಯೆಯನ್ನು ನಿರ್ವಹಣೆ ಮಾಡಬಲ್ಲ ಚೈತನ್ಯ ಶ್ರೀ ಚೌಡಯ್ಯನವರಿಗಿದೆ. ಈಗಲೂ ಉಳಿಸಿಕೊಂಡಿ ದ್ದಾರೆ. ಶುದ್ಧ ಹಸ್ತರೂ ದಕ್ಷರೂ ಆದ ನಿರ್ದಾಕ್ಷಿಣ್ಯವಂತರೂ ಆದ ಚೌಡಯ್ಯನವರು ಶಂಕರಗೌಡರೊಡನೆ ಹಿತವಾಗಿರುವುದು ಕೆಲವೇ ಕೆಲವು ಮಂದಿ ರಾಜಕಾರಿಣಿಗಳಿಗೆ ಆಗುತ್ತಿರಲಿಲ್ಲ.

ಶಂಕರಗೌಡರು ಕಟ್ಟಿ ಬೆಳಸಿದ್ದ ನಾನಾ ಸಂಸ್ಥೆಗಳ ಪ್ರಗತಿಗೆ ಆಗಬೇಕಾದ ಕೆಲಸ ಕಾರ್ಯಗಳು ಹಾಗೂ ಜನರಿಗೆ ಅಗಬೇಕಾದ ಸರ್ಕಾರಿ ವಲಯದ ಕೆಲಸಕಾರ್ಯಗಳನ್ನು ಶಂಕರಗೌಡರ ಸ್ಥಾನದಲ್ಲಿ ನಿಂತು ಚೌಡಯ್ಯನವರು ನಿರ್ವಹಿಸುತ್ತ ಬಂದರು. ಚೌಡ ಯ್ಯನವರ ಈ ಕಾರ್ಯನಿರ್ವಹಣೆ ಶಂಕರಗೌಡರಿಗೂ ವಿಶ್ರಾಂತಿ ನೀಡಿತು, ನಾನು

ಎಂದೂ ಯಾವುದೇ ಸ್ಥಾನಮಾನಕ್ಕು ಶಂಕರಗೌಡರಲ್ಲಿ ದುಂಬಾಲು ಬಿದ್ದವನಲ್ಲ. ಆದರೆ ನನ್ನ ಗ್ರಹಮಾನವೋ ಏನೋ ಪಿ. ಇ. ಎಸ್. ಸಂಸ್ಥೆ ಕಾರ್ಯಕಾರಿ ಮಂಡಲಿ ಸದಸ್ಯತನಕ್ಕೆ ಸೇರಿಸಿಕೊಳ್ಳಿ ಎಂದು ಕೇಳಿಕೊಂಡೆ. ಈ ಸ್ಥಾನವೇ ಇಂದೂ ಕೂಡ ಶಂಕರಗೌಡರಲ್ಲಿ ನನ್ನ ಬಗ್ಗೆ ಅಸಮಾಧಾನಕ್ಕೆ ಎಡೆಮಾಡಿ ಬಿರುಕು ಬಿಡಿಸಿದೆ.

ಶಂಕರಗೌಡರು ಕಾಲೇಜಿನ ಹಗರಣದಲ್ಲಿ ತಮ್ಮ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಇತ್ತಿದ್ದರು. ನಾನು ಉಪಾಧ್ಯಕ್ಷನಾಗಿದ್ದೆ. ಚೌಡಯ್ಯನವರು ಮತ್ತು ಶಂಕರಗೌಡರು ಕೆರಗೋಡು ಕ್ಷೇತ್ರ ಚುನಾವಣೆಯಲ್ಲಿ ಹಣಾಹಣಿ ಹೋರಾಡಿ ಚೌಡಯ್ಯನವರು ಗೆದ್ದಿದ್ದರು. "ಶಂಕರಗೌಡರು ಸುಮ್ಮನಿದ್ದರೂ, ಇತರರು ಜವರಪ್ಪಗೌಡ ಮಸಲತ್ತು ಮಾಡಿ ಚುನಾವಣೆಗೆ ಎದುರಾಗಿಸಿದ ಎಂದು ನನ್ನ ವಿರುದ್ಧ ಕೋಪದ ದಾವಾನಲದ ನಾಲಿಗೆ ಚಾಚಿ ನೋಡುತ್ತಿದ್ದರು.

ಈ ಚುನಾವಣಾ ನಂತರ ಶ್ರೀ ಎಚ್. ಡಿ. ಚೌಡಯ್ಯನವರ ಮಗ ಚಿ॥ ರಾ॥ ಕುಮಾರನ ಮದುವೆ ನಿಶ್ಚಿತವಾಗುತ್ತಿದೆ ಎಂದು ಗೊತ್ತಾಯಿತು. ನಾನು ಕುವೆಂಪು ಅವರ ಮಂತ್ರ ಮಾಂಗಲ್ಯದಿಂದ ಸರಳ ಮದುವೆ ನೆರವೇರಿಸುವ ಕಾರ್ಯಕ್ರಮ ಹಾಕಿಕೊಂಡು, ಸಾಧ್ಯವಾದ ಮಟ್ಟಿಗೆ ಅಲ್ಲೊಂದು ಇಲ್ಲೊಂದು ಸರಳ ಮದುವೆ ಮಾಡಿಸುತ್ತಿದ್ದೆ. ಈ ಸರಳ ಮದುವೆಗಳು ದುಂದುಭಿ ಬಾರಿಸಿ ಅವ್ಯಾಹತವಾಗಿ ನಡೆಯಲು ಜನಾನುರಾಗಿಗಳಾದವರ ಮಕ್ಕಳ ಮದುವೆ ಸರಳವಾಗಿ ನಡೆಸಿ ಜನರ ಮನಸ್ಸನ್ನಾಕರ್ಷಿಸಬೇಕೆಂಬ ಹಂಬಲ ನನ್ನದು, ಚೌಡಯ್ಯನವರ ಕುಮಾರನನ್ನು ಸರಳ ಮದುವೆಗೆ ಒಪ್ಪಿಸಿದೆ, ಅವರ ತಂದೆಯನ್ನು ನೋಡಿ ಮಾತನಾಡಬೇಕೆಂಬುದು ನನ್ನ ಮನದ ಆಸೆ. ಚುನಾವಣಾ ಬಿಸಿಯ ಬೇಗುದಿ ಚೌಡಯ್ಯನವರಲ್ಲಿರಬಹುದು.

ಚಿ॥ ರಾ॥ ಕುಮಾರನು ಅವರ ತಂದೆ ಚೌಡಯ್ಯನವರಿಗೆ ಸರಳ ಮದುವೆ ವಿಚಾರ ತಿಳಿಸಿದ್ದ. ನಾನು ಸಹ ಚೌಡಯ್ಯನವರಿಗೆ ದೂರವಾಣಿ ಮೂಲಕ ಸರಳ ಮದುವೆ ವಿಚಾರ ಪ್ರಸ್ತಾಪಮಾಡಿ ತಾವು ಒಪ್ಪಿದರೆ ನಿಮ್ಮ ಮನೆಗೆ ಬಂದು ಮಾತನಾಡುತ್ತೇನೆ ಎಂದೆ. "ಆಗಬಹುದು ಬನ್ನಿ" ಎಂದು ಆಹ್ವಾನಿಸಿದರು. "ನಿಮ್ಮಂತಹ ದೊಡ್ಡವರು ಸರಳ ಮದುವೆಗಳನ್ನು ಮಾಡಲು ಮುಂದಾದರೆ ಮಂಡ್ಯ ನಾಲಾ ಬಯಲು ರೈತರು ಮದುವೆ ದುಂದುವೆಚ್ಚದಿಂದ ಪಾರಾಗಲು ಸಹಾಯ ಮಾಡಿದಂತಾಗುವುದು" ಎಂದು ತಿಳಿಸಿದ ಮೇಲೆ ಮದುವೆ ಮಾಡುವ ವಿಧಿ ವಿಧಾನಗಳನ್ನು ಚರ್ಚಿಸಿದೆವು. ಈ ಮಾತು ಮುಗಿದ ಮೇಲೆ ಚೌಡಯ್ಯನವರು "ನಾಳಿನ ಪಿ. ಇ. ಎಸ್. ಕಾರ್ಯಕಾರಿ ಮಂಡಲಿ ಸಭೆಯಲ್ಲಿ ಶಂಕರಗೌಡರು ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆಯಿತ್ತಿದ್ದಾರೆ ನೀವು ಮತ್ತು ಪಿ. ಮಲ್ಲಯ್ಯನವರನ್ನು ಬಿಟ್ಟು ಎಲ್ಲಾ ಸದಸ್ಯರು ಒಂದಾಗಿ ರಾಜೀನಾಮೆ ಅಂಗೀಕಾರ ಮಾಡಲಿದ್ದೇವೆ" ಎಂದರು. ನನ್ನೊಬ್ಬನದೇನು ನಾನೂ ಒಪ್ಪಿಗೆ ನೀಡುತ್ತೇನೆಂದು ತಿಳಿಸಿದೆ. ಮಾತನಾಡಿದಂತೆ ಸಭೆಯಲ್ಲಿ ಶಂಕರಗೌಡರ ರಾಜೀನಾಮೆ

ಅಂಗೀಕಾರವೂ ಆಯಿತು.

ಈ ಪ್ರಕರಣಾನಂತರ ಚೌಡಯ್ಯನವರು ಮತ್ತು ಶಂಕರಗೌಡರ ಭಿನ್ನಾಭಿಪ್ರಾಯದ ಬಿರುಕು ದೊಡ್ಡದಾಗುತ್ತ ಬಂತು. ರಾಜೀನಾಮೆ ಅಂಗೀಕಾರಾನಂತರ ಶಂಕರಗೌಡರು ನನ್ನೊಡನೆ ಯಾವುದೇ ವ್ಯವಹಾರ ಬಂದ್ ಮಾಡಿದರು. ನಾನು ಅಷ್ಟಾಗಿ ಹಚ್ಚಿಕೊಳ್ಳಲಿಲ್ಲ. ಬಿಡುವಿದೆ ಎಂದು ಕೆಲಸವಿದ್ದೋ ಇಲ್ಲದೆಯೋ ಹೋಗಿ ಶಂಕರಗೌಡರೊಡನೆ ಕಾಲಹರಣ ಮಾಡಿದ ವ್ಯಕ್ತಿ ನಾನಲ್ಲ. ಆಗಾಗ ಸಾರ್ವಜನಿಕವಾದ ಕೆಲವು ಸಮಸ್ಯೆಗಳು ಬಂದಾಗ ಶಂಕರಗೌಡರ ಸಲಹೆ ನೆರವಿಗೆ ಪ್ರಾತಃಕಾಲ ಗಾಳಿಸೇವನಾನಂತರ ಮನೆಗೆ ಹೋದರೆ ಸರಿ, "ಇದೇನಯ್ಯ ಈ ಛಳಿಯಲ್ಲಿ, ಹುಡುಗರಾ ಟೀ ತನ್ನಿ ಹಿಂದಿಡಿದು ಮಾತನಾಡೋಣ ಹೋಗಿಬಾ" ಎಂದು ಒಂದೆರಡು ದಿನ ನನ್ನ ಮೇಲಿನ ಆಕ್ರೋಶಕ್ಕೆ ಮುಸುಕು ಹಾಕಿ ಕಳುಹಿಸಿದರು.

ಇತ್ತೀಚೆಗೆ ಶ್ರೀ ಆದಿಚುಂಚನಗಿರಿ ವೈದ್ಯಕೀಯ ಮಹಾವಿದ್ಯಾಲಯ ವಿದ್ಯಾರ್ಥಿಗಳ ಮುಷ್ಕರ ಬಂತು. ಸ್ವಾಮಿಜೀ ಅವರು ಶಂಕರಗೌಡರೊಡನೆ ಕಲೆತು ಮುಷ್ಕರ ಬಗೆಹರಿಸಲು ತಿಳಿಸಿದರು. ಈ ಸಮಸ್ಯೆ ಪರಿಹಾರಕ್ಕೆ ಅವರಲ್ಲಿಗೆ ಹೋದೆ. ಅಂದೂ ನನ್ನನ್ನು ತಪ್ಪಿಹಾಕಲು ಪ್ರಯತ್ನಿಸಿದರು. ಅದಾಗದು ಈ ಸಮಸ್ಯೆ ನೀವು ಕೈಗೆ ಎತ್ತಿಕೊಂಡು ಬಗೆಹರಿಸಿ ಎಂದೆ. "ನನ್ನನ್ನು ಯಾರು ಕೇಳಿದರು. ನನಗು ಇದಕ್ಕು ಏನು ಸಂಬಂಧ ಎಂದು ಗದರಿಸಿದರು. ನಾನು ನಿಧಾನವಾಗಿ ಹೇಳಿದೆ. ಚೆನ್ನಾಗಿ ನಡೆವ ಸಂಸ್ಥೆಗಳಿಗೆ ನಿಮ್ಮ ನೆರವು ಅನಗತ್ಯ. ಕೆಟ್ಟಾಗ ನಿಮ್ಮ ನೆರವು ಅತ್ಯಗತ್ಯ. ಯಾವುದೇ ಅಧಿಕಾರವಿಲ್ಲದ ಭೀಷ್ಮ ಹಸ್ತಿನಾಪುರದ ಮೇಲ್ಮೆ ಕಾಪಾಡಿದಂತೆ ಮಂಡ್ಯಕ್ಕೆ ಭೀಷ್ಮರಾಗಿ ಉಳಿದಿರುವ ನೀವು ಈ ಸಮಸ್ಯೆ ಬಗೆಹರಿಸುವುದು ನಿಮ್ಮ ವೈಯ್ಯಕ್ತಿಕವಾದ ಜವಾಬ್ದಾರಿ" ಎಂದೆ. ಸಮಸ್ಯೆಯನ್ನು ಕೈಗೆತ್ತಿಕೊಂಡ ಗೌಡರು ಸಮಸ್ಯೆ ಬಗೆಹರಿಸಿದರು.

ಅಂತು ಶಂಕರಗೌಡರು ರಾಜಕಾರಣವನ್ನು ರಾಜಕಾರಣಕ್ಕೆ ಬಿಟ್ಟು ರಚನಾತ್ಮಕ ಕಾರ್ಯಗಳಲ್ಲಿ ಚೌಡಯ್ಯನವರ ಶ್ರದ್ಧೆ ಕಾರ್ಯತತ್ಪರತೆಯನ್ನು ಮೊದಲಿಂದ ಅರಿತವರು. ಶಂಕರಗೌಡರ ಜೊತೆಗೆ ಚೌಡಯ್ಯನವರ ಉತ್ಸಾಹ ಸಲಹೆ ಸಹಾಯ ಅಗತ್ಯವೆಂಬುದನ್ನು ಮೊದಲಿಂದ ಅರಿತಿದ್ದವರು. ರಾಜಕೀಯವಾಗಿ ಶಂಕರಗೌಡರೇ ಬೇರೆ ಪಕ್ಷ ಚೌಡಯ್ಯನವರೇ ಬೇರೆ ಪಕ್ಷವಾಗಿದ್ದು ಅವರವರ ರಾಜಕೀಯ ಸಿದ್ಧಾಂತಗಳ ಮೇಲೆ ನಿಂತು ಕೆಲಸ ಮಾಡಬೇಕಾದುದು ಅನಿವಾರ್ಯವಾದ ವಿಚಾರ. ಜನತಾ ಶಿಕ್ಷಣ ಸಂಸ್ಥೆ ಬೆಳೆದು ವಟವೃಕ್ಷದಂತೆ ನಿಂತಿದೆ. ಅದರ ಬಿಳಲುಗಳು ಭೂಮಿಗೆ ಇಳಿದು ಆಳದ ಭೂಕ್ಷಾರ ಹೀರಿ ಮರಕ್ಕೆ ರಕ್ಷಣೆ ಕೊಡುವುದು ಹೇಗೆ ಅಗತ್ಯವೋ ವಿಚಾರ ಪೂರಿತರಾದ ವ್ಯಕ್ತಿಗಳ ಸಹಾಯ ಶಂಕರಗೌಡರಿಗೆ ಅಗತ್ಯವೆಂದು ಕಾಣಿಸಿದೆ ಎನಿಸುತ್ತದೆ.

ಜನತಾ ಶಿಕ್ಷಣ ಸಂಸ್ಥೆಯನ್ನು ಇಂದು ಟ್ರಸ್ಟನ್ನಾಗಿ ಪರಿವರ್ತಿಸಲಾಗಿದೆ. ಚುನಾವಣೆ ಬಿರುಗಾಳಿಯಿಂದ ಎದ್ದ ಧೂಳನ್ನು ಈರ್ವರು ಒದರಿ, ಜನತಾ ಶಿಕ್ಷಣ

ಟ್ರಸ್ಟ್‌ನ್ನು ಒಗ್ಗಟ್ಟಿನಿಂದ ರಚಿಸಿಕೊಂಡು, ಮುಂದೆ ಎಂದೆಂದಿಗೂ ಟ್ರಸ್ಟಿಗೆ ತಲೆ ನೋವು ಬಾರದ ರೀತ್ಯ ವ್ಯವಸ್ಥೆ ಮಾಡಿಕೊಂಡು ಶಂಕರಗೌಡರು ಮತ್ತು ಚೌಡಯ್ಯ ನವರು ಏಕಮನಸ್ಸಿನಿಂದ ಏಕೀಭವಿಸಿ ಹೋಗುತ್ತಿರುವುದು ಟ್ರಸ್ಟ್ ದೃಷ್ಟಿ ಒಂದೇ ಅಲ್ಲ ಸಾರ್ವಜನಿಕವಾದ ಸಮಗ್ರ ಕೆಲಸ ಕಾರ್ಯಕ್ಕೆ ತುಂಬುಸಹಕಾರಿಯಾಗಿದ್ದು ಮಂಡ್ಯದ ಅಭಿವೃದ್ಧಿಕಾರ್ಯಕ್ಕೆ ಇಂಬುಕೊಟ್ಟಂತಾಗಿದೆ ಎಂದು ತಿಳಿಸಲು ಹರ್ಷ ವಾಗುವುದು.

ಈ ಮೊದಲೆ ಹೇಳಬೇಕಾದ ಒಂದು ವಿಚಾರ ಅಂತ್ಯದಲ್ಲಿ ಬಂದಿದೆ ಎಚ್. ಡಿ. ಚೌಡಯ್ಯನವರು ಹೃದಯಾಘಾತದಿಂದ ಬೆಂಗಳೂರಿನ ಜಯದೇವ ಹೃದ್ರೋಗ ವಿಭಾಗದಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ಇದೇ ಸಮಯಕ್ಕೆ ಜನತಾ ಶಿಕ್ಷಣ ಸಂಸ್ಥೆಯ ಚುನಾವಣೆ ಸಹ ನಡೆಯಲಿತ್ತು, ನಾನು ಆ ಬಗ್ಗೆ ಎಳ್ಳಷ್ಟು ತಲೆ ಬಿಸಿಮಾಡಿ ಕೊಂಡಿರಲಿಲ್ಲ. ಚೌಡಯ್ಯನವರನ್ನು ಎರಡು ಮೂರು ಬಾರಿ ಭೇಟಿ ಮಾಡಿ ಆರೋಗ್ಯ ವಿಚಾರಿಸಿಕೊಂಡಿದ್ದೆ. ಚೌಡಯ್ಯನವರು ಸಹ ಜನತಾ ಶಿಕ್ಷಣ ಸಂಸ್ಥೆ ಪದಾಧಿಕಾರಿಗಳ ಚುನಾವಣೆ ಬಗ್ಗೆ ವಿಚಾರ ಮಾಡಲಿಲ್ಲ. ಬಹುಶಃ ಅವರ ಆರೋಗ್ಯ ದೃಷ್ಟಿಯಿಂದಲೋ ಅಥವಾ ನಾನು ಚುನಾವಣೆ ಬಗ್ಗೆ ನಿರಾಸಕ್ತ ಎಂಬ ದೃಷ್ಟಿ ಯಿಂದಲೋ 'ಚ' ಕಾರ ಎತ್ತಲಿಲ್ಲ.

ಜನತಾ ಶಿಕ್ಷಣ ಸಂಸ್ಥೆ ಸಭೆ ದಿನಾಂಕ ಸಮೀಪಿಸುತ್ತಿದೆ. ಲೋಕಸಭಾ ಚುನಾವಣೆ ಗಿಂತಲೂ ಬಿರುಸಾದ ಪ್ರಚಾರ ಅಬ್ಬರ ಆರಂಭವಾಯಿತು. ಶಂಕರಗೌಡರ ರಾಜಕೀಯ ವನ್ನು ಟೀಕಿಸಿ ಮಾತನಾಡುತ್ತಿದ್ದ ಗುಂಪಿನವರ ಸಂಖ್ಯೆಯೆ ಪ್ರಚಾರದಲ್ಲಿ ಜಾಸ್ತಿ ಯಾಗಿತ್ತು. ಅಷ್ಟೇ ಅಲ್ಲ ಶಂಕರಗೌಡರನ್ನು ಗೆಲ್ಲಿಸಿದವನು ನಾನೆಂಬ ಬಿರುದು ಬಾವಲಿ ಹಾಕಿಕೊಳ್ಳಬೇಕೆಂಬುವವರು ಇವರಲ್ಲಿದ್ದು ನನ್ನ ಮನೆ ಬಾಗಿಲು ಹೊಸಲು ಎಂದೂ ಕಾಣದ ತುಳಿತಕ್ಕೆ ಒಳಗಾಯಿತು. ಶಂಕರಗೌಡರನ್ನು ಅಧ್ಯಕ್ಷರನ್ನಾಗಿ ಮಾಡಲು ಏನ್ರಪ್ಪ ಇಷ್ಟೊಂದು ಪೇಚಾಡುತ್ತಿದ್ದೀರಿ ಎಂದೆ. ನಿಮಗೆ ಗೊತ್ತಿಲ್ಲ ಗೌಡರೆ ಶಂಕರಗೌಡರ ತೀರ ಸಂಬಂಧಿಯೊಬ್ಬರು ಹಣದ ಥೈಲಿಯನ್ನೆ ಶಂಕರಗೌಡರನ್ನು ಸೋಲಿಸಲು ಪಣವಾಗಿಟ್ಟಿದ್ದಾರೆ ಮುಂತಾಗಿ ಹೇಳುತ್ತಿದ್ದರು. ನನಗಂತು ಈ ಜನರ ಓಡಾಟದಿಂದ ತಲೆ ತಗ್ಗಿಸುವಂತಾಯಿತು. ಪಿ. ಮಲ್ಲಯ್ಯನವರು ಸ್ಪರ್ಧಿಗಳೆಂದು ಅವರಿಂದ ಏನೊಂದು ಕೆಲಸ ಆಗದೆಂದು, ಅವರ ಮೇಲೆ ಇಲ್ಲದ ಸಲ್ಲದ ಆಕ್ಷೇಪಣೆ ಮಾಡಿದರು ಕೆಲವರು. ನಾನು ಅವರಿಗೆ ಬುದ್ಧಿಹೇಳಿ ಪಿ. ಮಲ್ಲಯ್ಯನವರು ಸ್ಪರ್ಧಿ ಗಳಾಗರೆಂದು ತಿಳಿಸಿದೆ. ಸಭೆಗೆ ನಾನು ಹಾಜರಾದೆ. ಉಪಾಧ್ಯಕ್ಷನಾದ್ದರಿಂದ ನಾನು ಮತ್ತು ಮಾಜಿ ಅಧ್ಯಕ್ಷರಾದ ಕೆ. ವಿ. ಶಂಕರಗೌಡರು ಸಭಾಧ್ಯಕ್ಷರಾದ ಪಿ. ಮಲ್ಲಯ್ಯನವರ ಸಾಲಿನಲ್ಲಿ ಕುಳಿತಿದ್ದೆವು. ಪಿ. ಮಲ್ಲಯ್ಯನವರ ಹೆಸರನ್ನು ಅಧ್ಯಕ್ಷ ತೆಗೆ ಸೂಚಿಸಿ, ಅನುಮೋದಿಸಿದರು. ಮಲ್ಲಯ್ಯನವರ ಪಕ್ಕದಲ್ಲೇ ಇದ್ದ ನಾನು, ಸಾರ್

ವಾಪಸ್ಸು ತೆಗೆದುಕೊಳ್ಳಿ ಎಂದು ಎರಡು ಮೂರು ಬಾರಿ ಒತ್ತಾಯ ಮಾಡಿದೆ. ಸಭೆಯಿಂದ ಪಿ. ಮಲ್ಲಯ್ಯನವರು ವಾಪಸ್ಸು ಪಡೆಯಬಾರದೆಂಬ ಒತ್ತಾಯ ಬಂದಿತು. ಪಿ. ಮಲ್ಲಯ್ಯನವರು ಸ್ಪರ್ಧಿಸುವುದಾಗಿ ಸ್ಪಷ್ಟಪಡಿಸಿದರು.

ಮತದಾರರು ಮತನೀಡಿದರು. ಜನತಾ ಶಿಕ್ಷಣಸಂಸ್ಥೆ ಸಂಬಂಧಕ್ಕೆ ಹೋದಲಾಗಾಯ್ತು ಅಲ್ಲಿನ ವಿದ್ಯಮಾನಗಳನ್ನು ನೋಡುತ್ತಾ ಬಂದ ನನಗೆ ಶಂರಗೌಡರ ಕೈನಲ್ಲಿ ಅಧಿಕಾರ ಸೂತ್ರ ಇರುವುದು ಅಗತ್ಯ ಎಂಬುದು ನನ್ನ ಖಚಿತಾಭಿಪ್ರಾಯವಾಗಿತ್ತು. ಅದರಂತೆ ನಾನು ಕೆ. ವಿ. ಶಂಕರಗೌಡರಿಗೆ ಮತವಿತ್ತೆ. ಮತದಾನ ನಡೆದು ಹೊರಬರುತ್ತಿದ್ದಂತೆಯೆ ಶಂಕರಗೌಡರ ಪರ ಓಡಾಡಿದ ಕೆಲವರು ನನ್ನತ್ತ ಬೆರಳು ಮಾಡಿ ನನಗೆ ಕೇಳುವಂತೆಯೆ "ಪಿ. ಮಲ್ಲಯ್ಯನವರಿಗೆ ಹಮ್ಮಲಿಕ್ಕಿ ಕ್ಯಾನ್‌ವಾಸ್ ಮಾಡಿದವರು ಬರುತ್ತಿದ್ದಾರೆ" ಎಂದು ಹೇಳುತ್ತಿದ್ದರು. ನನ್ನ ಜೊತೆ ಇವರು ಇಲ್ಲ, ಅವರು ಇಲ್ಲ. ನಾನೊಬ್ಬನೆ ಒಬ್ಬಂಟಿಗನಾಗಿ ಬರುತಿದ್ದವನು ದುರಭಿಮಾನಿಗಳ ಮಾತಿಗೆ ಸೊಪ್ಪು ಹಾಕದೆ ಪಿ. ಮಲ್ಲಯ್ಯನವರು ಮತ್ತು ಅವರನ್ನು ಬೆಂಬಲಿಸಿದವರು ಬರುವ ತನಕ ಕಾಯ್ದಿದ್ದು ಅವರ ಜೊತೆ ಹೆಗಲಿಗೆ ಕೈ ಹಾಕಿ ಹೊರಟು ಅವರ ಕಾರಿನಲ್ಲೆ ನನ್ನ ಮನೆಗೆ ಬಂದೆ. ಚುನಾವಣೆನಂತರ ಮಾತನಾಡಿದ ನಾನು ಹಾಲಿ ಇರುವ ಸದಸ್ಯರಲ್ಲಿ $\frac{1}{3}$ ಭಾಗ ಹಳಬರು $\frac{2}{3}$ ಭಾಗ ತರುಣರು ಸೇರಿದ ಕಾರ್ಯಕಾರಿ ಮಂಡಲಿ ರಚಿಸಲು ಚುನಾಯಿತ ಅಧ್ಯಕ್ಷರಿಗೆ ಹೇಳಿದೆ.

ಅಂದು ಶಂಕರಗೌಡರನ್ನು ಚುನಾಯಿಸಲು ಓಡಾಡಿದವರಲ್ಲ ಒಬ್ಬಿಬ್ಬರು ಬಿಟ್ಟು ಶಂಕರಗೌಡರ ರಾಜಕೀಯ ಜೀವನದ ಕೊಲೆಗಾಗಿ ಸಾಲಾಗಿ ನಿಂತಿದ್ದಾರೆಂಬುದು ಆಶ್ಚರ್ಯಕರ ಸಂಗತಿ.

"ನಿಂದಾಸ್ತುತಿಗಳೆಲ್ಲ ಸಮಯವರ್ತಿಗಳಲ್ತೆ."



೨

ಕೃಷ್ಣರಾಜ ಸಾಗರ ನಿರ್ಮಾಣಾನಂತರ 1931ನೆಯ ಇಸವಿಯಲ್ಲಿ ಬೇಸಾಯಕ್ಕಾಗಿ ಅರವಿನ್‌ನಾಲಾ ರೈತರ ಜಮೀನಿಗೆ ನೀರನ್ನು ಸರಕಾರ ಹರಿಯಬಿಟ್ಟಿತು. ರೈತರ ಜಮೀನಿಗೆ ನೀರು ಕೊಡಲು ಸರ್ಕಾರದವರು ಕೆಲವು ಷರತ್ತುಗಳನ್ನು ವಿಧಿ ನಿಯಮಗಳನ್ನು ವಿಧಿಸಿದರು.

ನಾಲಾಬಯಲು ಜಮೀನನ್ನು ಮೂರು ಗುಂಪುಗಳಾಗಿ ವಿಭಾಗಿಸಿ (ಬ್ಲಾಕ್ ಸಿಸ್ಟಂ) ಅಂದರೆ ಒಂದು ನಿಗದಿಯಾದ ಪ್ರದೇಶದ ಜಮೀನಿನಲ್ಲಿ ಅಥವ ಒಂದು ನಾಲೆ ಹಾಗೂ ಸೀಳು ನಾಲೆ ಕೆಳಗಿರುವ ಜಮೀನುಗಳಲ್ಲಿ ಒಂದು ವರ್ಷ ಕಬ್ಬು, ಒಂದು ವರ್ಷ ಬತ್ತ, ಮೂರನೇ ವರ್ಷ ಖುಷ್ಕಿ ಬೆಳೆ ಮಾಡಬೇಕೆಂದು ದಿವಂಗತ ವಿಶ್ವೇಶ್ವರಯ್ಯನವರು ತಿಳಿಸಿದ್ದರು.

ಕೃಷ್ಣರಾಜ ಸಾಗರ ನಿರ್ಮಾಣ ಮಾಡಿರುವ ಖರ್ಚಿಗೆ ರೈತರು ಕಾಂಟ್ರಿಬ್ಯೂಷನ್ ಹಣವನ್ನು ಒಂದೇ ಸಾರಿ ಪಾವತಿ ಮಾಡಬೇಕು ಇಲ್ಲವಾದರೆ ಶೇಕಡಾ ಆರುಕಾಲು ರೂಪಾಯಿ ಬಡ್ಡಿಯಂತೆ ಕೊಡಬೇಕೆಂದು ಸರ್ಕಾರದವರು ಹುಕುಂ ಹೊರಡಿಸಿದರು.

ಈ ಹುಕುಂ ಮತ್ತು ಬ್ಲಾಕ್‌ಸಿಸ್ಟಂ ಷರತ್ತುಗಳಿಂದ ರೈತರಿಗೆ ಅಪಾರ ತೊಂದರೆ ಆಗುವುದೆಂದು ಇಂಡವಾಳಿನ ಎಚ್. ಹೊನ್ನಯ್ಯನವರು. ಹೊಸಗಾವಹಳ್ಳಿ ಎಚ್. ಕೆ. ಪುಟ್ಟಣ್ಣಗೌಡರು. ಮದ್ದೂರಿನಲ್ಲಿದ್ದ ಎಚ್. ಕೆ. ವೀರಣ್ಣಗೌಡರ ಸಹಯೋಗದೊಡನೆ ರೈತರ ಪರವಾಗಿ "ಅರವಿನ್‌ನಾಲಾ ರೈತ ಸಂಘ" ಸ್ಥಾಪಿಸಿಕೊಂಡು ಸರ್ಕಾರದೊಡನೆ ದೊಡ್ಡ ಹೋರಾಟ ನಡೆಸಿದರು. ಗಾಂಧೀಜೀ ಅವರು ಉಪ್ಪಿನ ಸತ್ಯಾಗ್ರಹಕ್ಕೆ ನಡೆಸಿದ ದಂಡೀಕಾಲು ನಡಿಗೆ ಮೆರವಣಿಗೆಯಂತಹ ಹತ್ತು ಸಾವಿರ ರೈತರ ಬೃಹತ್ ಕಾಲು ನಡಿಗೆ ಮೆರವಣಿಗೆಯಲ್ಲಿ ಬೆಂಗಳೂರಿಗೆ ಹೋಗಿ ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್ ಮತ್ತವರ ಕೌನ್ಸಿಲ್ ಸಚಿವರುಗಳನ್ನು ಭೇಟಿ ಮಾಡಿದರು.

''ಸರ್ಕಾರದವರು ಈಗತಾನೆ ನಾಲಾಬಯಲ ರೈತರ ಜಮೀನಿಗೆ ನೀರು ಕೊಟ್ಟಿದ್ದೀರಿ. ಜಮೀನು ಆಬಾದಾಗಿ ಉತ್ಪತ್ತಿ ಬರಲು ಐದು ವರ್ಷಗಳಾದರು ಬೇಕು. ಅಲ್ಲಿಯವರೆಗೆ ಕಾಂಟ್ರಿಬ್ಯೂಷನ್ ಹಣ ಕೇಳಬಾರದು, ಕೆ. ಆರ್ ಸಾಗರ ಕಟ್ಟಲು ಖರ್ಚುಮಾಡಿರುವ ಹಣಕ್ಕೆ ಬಡ್ಡಿಹಾಕಬಾರದು, ಬ್ಲಾಕ್‌ಸಿಸ್ಟಂ ವಜಾಮಾಡಬೇಕು" ಎಂಬಂಶಗಳ ಮನವಿಯನ್ನು ದಿವಾನರಿಗೆ ರೈತರ ಪರವಾಗಿ ಅರ್ಪಿಸಲಾಯ್ತು. ರೈತರ ಅಹವಾಲನ್ನು ಸ್ವೀಕರಿಸಿದ ದಿವಾನರು ಬ್ಲಾಕ್‌ಸಿಸ್ಟಂ ವಜಾಮಾಡುವುದಾಗಿಯೂ ಕಾಂಟ್ರಿಬ್ಯೂಷನ್ ಹಣವನ್ನು ಹತ್ತು ವರ್ಷಗಳ ಸಮುಕಂತುಗಳಲ್ಲಿ ಬಡ್ಡಿಯಿಲ್ಲದೆ

ಸಂದಾಯ ಮಾಡತಕ್ಕದ್ದೆಂದು ಹುಕುಂ ಹೊರಡಿಸಿ ರೈತರ ಅಹವಾಲಿಗೆ ಮಾನ್ಯತೆ ನೀಡಿದರು.

1939ನೆಯ ಇಸವಿ ಡಿಶಂಬರ್‌ನಲ್ಲಿ ಹೊಸದಾಗಿ ಮಂಡ್ಯಜಿಲ್ಲೆ ನಿರ್ಮಾಣ ವಾಯಿತು. ಸ್ಥಳೀಯ ಮುಖಂಡರುಗಳೆಂದರೆ, ಕಾಳನಾಯಕನ ಕೆಂಪೇಗೌಡರು, ಎಂ. ಎಲ್ ಲಿಂಗಣ್ಣನವರು, ಎಚ್. ಹೊನ್ನಯ್ಯ, ಜಿ. ದೇವೇಗೌಡರು, ಎಂ. ಬಸವಯ್ಯ ನವರು, ಬ್ರಾಹ್ಮಣರಲ್ಲಿ ಆನಂದಾಳ್ವಾರ್, ಸಿಂಗ್ರಾಚಾರ್, ಎಂ. ವಿ. ಅನಂತರಾಮ ಭಟ್ಟರು ಮುಖಂಡರುಗಳ ಜೊತೆಗೆ ನ್ಯಾಯಶಾಸ್ತ್ರ ಪಾರಂಗತರಾಗಿ ಬಂದ ಕೆರಗೋಡಿನ ಕೆ. ಚಿಕ್ಕಲಿಂಗಯ್ಯನವರು ಸಾರ್ವಜನಿಕ ಕಾರ್ಯಕಲಾಪಗಳಲ್ಲಿ ಆಸಕ್ತರಾಗಿದ್ದರು.

ಸಕ್ಕರೆ ಕಾರ್ಖಾನೆಗೂ ರೈತರಿಗೂ ಆಗಾಗ ಉಂಟಾಗುತ್ತಿದ್ದ ಕಬ್ಬಿನ ಬೆಲೆ, ಕಂಪನಿಗೆ ಕಬ್ಬು ಒದಗಿಸುವಲ್ಲಿ ಆಗಿದ್ದ ಅಸೌಕರ್ಯ ಹೀಗೆ ಸಮಸ್ಯೆಗಳನ್ನು ಬಗೆಹರಿಸಲು ಗುಂಪಿನ ಮೇಲೆ ಗುಂಪು ಮಾಡಿಕೊಂಡು ಕಬ್ಬಿನ ಬೆಳೆಗಾರರ ಸಂಘ ಹೆಸರಿನಲ್ಲಿ ಸ್ಥಾಪಿಸುವುದು. ಏನೊಂದು ಕಾರ್ಯಕ್ರಮವನ್ನು ಕೈಗೊಳ್ಳದೆ ಸಂಘ ಸ್ಥಗಿತ ಗೊಳ್ಳುವುದು ಹೀಗೆ ರೈತರು ಕಂಗಾಲಾಗಿ ದಾರಿಕಾಣದ ಕುರುಡರಂತೆ ಸಮಸ್ಯೆಗಳ ಜೊತೆ ಸಾಗುತ್ತಿದ್ದರು.

ನಾನು ಈ ಹಿಂದೆ ತಿಳಿಸಿರುವಂತೆ ರೈತರ ಸಮಸ್ಯೆಗೆ ಪರಿಹಾರ ಕಾಣಲು 'ರೈತರ ಸಹಕಾರ ಸಂಘ', 'ರೈತರ ಸಂಘ' ನಿರ್ಮಾಣ ಮಾಡಲು ಕಾರ್ಯಕ್ರಮ ಕೈಗೊಳ್ಳ ಲಾಯ್ತು. ಈ ಎರಡು ಕಾರ್ಯಕ್ರಮಗಳ ಮುಂಚೂಣಿಯಲ್ಲಿ ಕೆ. ವಿ. ಶಂಕರ ಗೌಡರು ಸಹಕಾರ ಹಸ್ತ ನೀಡಿದರು.

1945ನೆಯ ಇಸವಿಯಲ್ಲಿ ಕಾಂಗ್ರೆಸ್ ಪ್ರಮುಖರ ನೇತೃತ್ವದಲ್ಲಿ "ಆರವಿನ್ ನಾಲಾ ರೈತ ಸಂಘ'' ಅಸ್ತಿತ್ವಕ್ಕೆ ಬಂದಿತು. ಇಂಡವಾಳು ಹೆಚ್. ಹೊನ್ನಯ್ಯನವರು ಅಧ್ಯಕ್ಷರಾದರು. ಯುವಕ ಗೌಡಗೆರೆ ನಾಗಪ್ಪ ಕಾರ್ಯದರ್ಶಿ ಆಗಿ ರೈತರ ಹಲವು ಸಮಸ್ಯೆಗಳನ್ನು ಕೈಗೆ ಎತ್ತಿಕೊಂಡರು. ಅವುಗಳ ನಿವಾರಣೆಗೆ ಸರ್ಕಾರದೊಡನೆ ಪತ್ರ ವ್ಯವಹಾರ ನಡೆಯುತ್ತಲೇ 1947ರಲ್ಲಿ ಜವಾಬ್ದಾರಿ ಸರ್ಕಾರವೂ ಬಂತು. ರೈತರ ಸಮಸ್ಯೆ ಬಗ್ಗೆ ಪರಿಹಾರಕ್ಕೆ ಕೈಗಾರಿಕಾ ಸಚಿವರಾಗಿ ಬಂದ ಎಚ್. ಸಿ. ದಾಸಪ್ಪನವರು ಉತ್ಸುಕರಾಗಿ ಮುಂದಾದರು. ಸಕ್ಕರೆ ಕಾರ್ಖಾನೆ ಮತ್ತು ರೈತರ ಮಧ್ಯೆ ಸಂಧಾನ ಮಾಡಿ, ಕಂಪನಿಗೆ ಕಬ್ಬು ತರುವ ಗಾಡಿಗಳ ಎತ್ತುಗಳಿಗೆ ನೆರಳು ಮಾಡುವುದು. ಗಾಡಿ ಆಳಿಗೆ ವಿಶ್ರಾಂತಿಭವನ ನಿರ್ಮಾಣ ಮಾಡುವುದು. ಅವರ ಉಪಹಾರ ಮತ್ತು ಭೋಜನಕ್ಕೆ ಕ್ಯಾಂಟೀನ್ ಮಾಡುವುದು, ರೈತರ ಸಂಘ ಮತ್ತು ಕಂಪನಿ ಕೆಲಸಗಾರರ ಸಂಘಗಳು ತಮ್ಮ ದಿನಚರಿವ್ಯವಹಾರ ನಡೆಸಲು ಸಂಘಗಳ ಕಛೇರಿಭವನ ನಿರ್ಮಾಣ ಮಾಡುವುದು, ಇಷ್ಟನ್ನು ಸಚಿವರ ಮಧ್ಯಸ್ತಿಕೆಯನಂತರ ಛೇರ್ಮನ್‌ರಾಗಿದ್ದ ಬಿ. ಟಿ. ಕೆಂಪಣ್ಣನವರು ವರ್ಷಕ್ಕೆ ಮುಂಚೆ ಮುಗಿಸಿ ರೈತರಿಗೆ ಸಹಾಯ ಮಾಡಿದರು.

1952ನೆಯ ಸಾಲಿನಲ್ಲಿ ಕನ್ನಂಬಾಡಿ ಬಾಗಿ ರೈತರ ಗದ್ದೆಗಳಲ್ಲಿ ಬೆಳೆದು ನಿಂತಿದ್ದ ಕಬ್ಬಿನ ಬೆಳೆಯಿಂದ ರೈತರಿಗೆ ಅಪಾರ ನಷ್ಟವಾಯಿತು. ಜಿಲ್ಲಾಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆ. ವಿ. ಶಂಕರಗೌಡರು ಮತ್ತು ಪ್ರಧಾನ ಕಾರ್ಯದರ್ಶಿಯಾದ ನಾನು ರೈತರ ಸಂಘದ ಸಹಕಾರದೊಡನೆ ರೈತರಿಗೆ ಅಲ್ಪ ಸಲ್ಪ ಸಹಾಯ ತೋರಿಸಿ ಉಪಕರಿಸಿದೆವು. ದಿವಂಗತ ಎ. ಜಿ. ಬಂದೀಗೌಡರು ಛೇರ್ಮನ್ ಆಗಿದ್ದು ಸಹಕರಿಸಿದರು.

ಕಾಂಗ್ರೆಸ್ ಮುಖ್ಯಮಂತ್ರಿಗಳಾಗಿದ್ದ ಡಿ. ದೇವರಾಜ ಅರಸು ಅವರು ಕ್ರಾಂತಿ ರಂಗ ರಚಿಸಿಕೊಂಡು ರೈತರ ಬಗ್ಗೆ ಅಪಾರ ಅನುಕಂಪ, ವ್ಯಕ್ತಪಡಿಸಿ ರೈತರ ಸಮಸ್ಯೆಗೆ ಮುಖ್ಯಮಂತ್ರಿ ಗುಂಡೂರಾವ್ ಮಂತ್ರಿಮಂಡಲದೊಡನೆ ಹೋರಾಟ ನಡೆಸುತ್ತಿದ್ದರು, ಯುವಕರಾದ ಕೆ. ಟಿ. ಶಿವಲಿಂಗಯ್ಯ ಎಂ. ಎಸ್. ಆತ್ಮಾನಂದ, ಮತ್ತು ಜಿ. ಎಸ್. ಬಸವರಾಜ್ ಮುಂತಾದ ಉತ್ಸಾಹಶಾಲಿ ಪ್ರಮುಖರು ಮಂಡ್ಯ ರೈತ ಸಭಾಂಗಣದಲ್ಲಿ ಎಚ್. ಡಿ. ಚೌಡಯ್ಯನವರ ಅಧ್ಯಕ್ಷತೆಯಲ್ಲಿ ರೈತರ ಸಭೆ ಕರೆದರು. "ಮಂಡ್ಯಜಿಲ್ಲಾ ರೈತ ಮತ್ತು ರೈತ ಕಾರ್ಮಿಕ ಸಂಘ" ಎಂಬ ಹೆಸರಿನ ಸಂಘ ಸ್ಥಾಪಿಸಿ ರಿಜಿಸ್ಟರು ಮಾಡಿಸಲು ತೀರ್ಮಾನಿಸಲಾಯ್ತು.

ಪತ್ರಿಕಾ ವರದಿಗಾರನಾಗಿ ಹೋಗಿದ್ದ ನನ್ನನ್ನು ಅಧ್ಯಕ್ಷನನ್ನಾಗಿಯೂ ಎಚ್. ಡಿ. ಚೌಡಯ್ಯನವರು ಕಾರ್ಯಾಧ್ಯಕ್ಷರು. ಕೆ. ರಾಮೇಗೌಡರು, ಎಚ್. ಡಿ. ಹೋರೇ ಗೌಡರು ಉಪಾಧ್ಯಕ್ಷರು, ಕಾರ್ಯದರ್ಶಿಗಳಾಗಿ ಕೆ. ಟಿ. ಲಿಂಗಯ್ಯ, ಎಂ. ಎಸ್. ಆತ್ಮಾನಂದ ಮತ್ತು ಜಿ. ಎಸ್. ಬಸವರಾಜ್ ಅವರುಗಳನ್ನು ಸಭೆ ಚುನಾಯಿಸಿತು.

ಸಕ್ಕರೆ ಕಂಪನಿಗೆ ರೈತರು ಒದಗಿಸುವ ಕಬ್ಬಿಗೆ ಟನ್ ಒಂದಕ್ಕೆ 300 ರೂಪಾಯಿ ಬೆಲೆ ಕೊಡಬೇಕೆಂದು ಬತ್ತಕ್ಕೆ ರಾಗಿಗೆ ಬೆಲೆಯನ್ನು ಹೆಚ್ಚಿಸಲು ಸರ್ಕಾರಕ್ಕೆ ಒತ್ತಾಯ ಮಾಡಲಾಯ್ತಲ್ಲದೆ. ರೈತನು ಬೆಳೆವ ಬೇಸಾಯ ಬೆಳೆಗಳಿಗೆ ಬೆಲೆ ನಿಗದಿಮಾಡಲು ಸ್ವತಃ ಬೇಸಾಯ ನಡೆಸುವ ರೈತನನ್ನೇ ನೇಮಕಮಾಡಲು ಒತ್ತಾಯಮಾಡುವ ನಿರ್ಣಯ ಮಾಡಲಾಯ್ತು.

ಡಿ. ದೇವರಾಜ ಅರಸು ಅವರು ಕ್ರಾಂತಿರಂಗದಾಶ್ರಯದಲ್ಲಿ ಕರ್ನಾಟಕದ ಎಲ್ಲಾ ಭಾಗಗಳಿಂದಲೂ ಕಾಲು ನಡಿಗೆಯಲ್ಲಿ ರೈತರ ಜಾಥಾ ಬೆಂಗಳೂರಿಗೆ ಬರಲು ಕರೆಯಿತ್ತರು. ಮಂಡ್ಯ ಜಿಲ್ಲಾ ರೈತರ ಸಂಘವು ಜಿಲ್ಲೆಯಿಂದ ಹಾಯ್ದು ಹೋಗುವ ರೈತ ಜಾಥಾಗಳಿಗೆ ಊಟೋಪಚಾರ ಹಾಗೂ ತಂಗು ದಾಣಗಳ ವ್ಯವಸ್ಥೆಯನ್ನು ಸುವ್ಯವಸ್ಥಿತಗೊಳಿಸಿತು.

ರೈತರ ಜಾಥಾ ಪರಿಣಾಮವಾಗಿ ಮುಖ್ಯಮಂತ್ರಿ ಗುಂಡೂರಾಯರು ರಾಜ್ಯದ ರೈತ ಸಂಘದ ಪ್ರತಿನಿಧಿಗಳನ್ನು ವಿಧಾನಸೌಧಕ್ಕೆ ಮಾತುಕತೆಗೆ ಕರೆದರು. ಆದರೆ ರಾಜ್ಯ ರೈತಸಂಘದವರು ಮಂಡ್ಯ, ಕೋಲಾರ, ಚಿಕ್ಕಮಗಳೂರು ಜಿಲ್ಲಾ ರೈತ ಸಂಘದವರುಗಳನ್ನು ತಮ್ಮ ಮಾತುಕತೆಗೆ ಸೇರಿಸಲು ನಿರಾಕರಿಸಿದರು. ಕಾರಣ ನಮಗೆ ಗೊತ್ತಾಗಲಿಲ್ಲ.

ಈ ಮೂರು ಜಿಲ್ಲಾ ರೈತ ಸಂಘದವರು ಗಳಿಗೇ ಮುಖ್ಯ ಮಂತ್ರಿಗಳು ಪ್ರತ್ಯೇಕ ಸಭೆ ನಡೆಸಿದರು ಮಂಡ್ಯದಿಂದ ಎಚ್. ಡಿ. ಚೌಡಯ್ಯನವರು. ಕೆ. ರಾಮೇಗೌಡರು, ಎಂ. ಎಸ್. ಆತ್ಮಾನಂದ, ನಾನು ನಿಯೋಗದಲ್ಲಿದ್ದೆವು.

ಮೂರು ಜಿಲ್ಲಾ ರೈತ ಸಂಘಗಳ ಸಭೆಯಲ್ಲಿ ಮಾತನಾಡಲು ನನಗೆ ಅವಕಾಶ ವಿತ್ತು ರೈತರ ಸಮಸ್ಯೆಗಳ ಪರಿಹಾರಕ್ಕೆ ವಾದಮಂಡಿಸಲು ತಿಳಿಸಿದರು. ವಾದ ಮಂಡಿ ಸುತ್ತ ರೈತರು ಮತ್ತು ರೈತೇತರ ವರ್ಗಕ್ಕೆ ಸರ್ಕಾರ ತೆರಿಗೆ ವಿಧಿಸುವುದರಲ್ಲಿ ದ್ವಿಮುಖ ನೀತಿ ಅನುಸರಿಸುತ್ತಿರುವುದರಿಂದ ದೇಶದ ಅಡಿಪಾಯದಂತಿರುವ ರೈತನ ಜೀವನ ಅಲುಗಿದರೆ ದೇಶದ ಅಡಿಪಾಯ ಕುಸಿದೀತು. ನೀರಾವರಿಗಾಗಿ ನಿರ್ಮಿಸುವ ಕೆರೆ ಕಟ್ಟೆಗಳು, ದೊಡ್ಡ ಜಲಾಶಯಗಳ ನಿರ್ಮಾಣಕಾರ್ಯಕ್ಕೆ ರೈತರಿಂದ ಕಾಂಟ್ರಿಬ್ಯೂಷನ್ ಕಡ್ಡಾಯ ಮಾಡುತ್ತೀರಿ. ನೀರು ಒದಗಿಸಿದ ಮೇಲೆ ನೀರು ಸರದಿ ವಿಧಿಸುತ್ತೀರಿ, ಅದರ ಮೇಲೆ ಆದಾಯ ಬಂದರೆ ಆದಾಯ ತೆರಿಗೆ, ರೈತನು ಬೆಳೆವ ಉತ್ಪನ್ನಗಳ ಮೇಲೆ ಮಾರಾಟ ತೆರಿಗೆ ಹೀಗೆ ರೈತನು ನಾನಾ ತೆರಿಗೆಗಳ ಶೋಷಣೆಗೆ ಒಳಗಾಗಿ ತತ್ತರಿಸಿ ಹೋಗಿದ್ದಾನೆ.

ಭೂ ಅಂತರ್ಜಲ ಬಳಸಿ ಬೇಸಾಯ ಮಾಡುವ ರೈತನಿಗೆ ದುಬಾರಿ ವಿದ್ಯುತ್ ದರ ವಿಧಿಸುತ್ತೀರಿ, ಡೆನ್ಮಾರ್ಕ್ ಅಂತಹ ಚಿಕ್ಕ ದೇಶದಲ್ಲಿ ಅಂತರ್ಜಲದಿಂದ ಬೇಸಾಯ ಬೆಳೆ ತರುವ ರೈತನಿಗೆ ವಿದ್ಯುತ್ ಮುಫತ್ತಾಗಿ ಒದಗಿಸಿ ಇಂತಿಷ್ಟೆಂದು ಸಹಾಯಧನವನ್ನು ನೀಡುತ್ತಾರೆ.

ಉದಾಹರಣೆಗೆ ಮೆಡಿಕಲ್ ವಿದ್ಯಾರ್ಥಿ ಕಾಲೇಜ್ ಸೇರಿ ವ್ಯಾಸಂಗ ಮಾಡಲು ಕಾಲೇಜ್ ಕಟ್ಟಿದ ಬಗ್ಗೆ ಆತನಿಗೆ ಕಾಂಟ್ರಿಬ್ಯೂಷನ್ ವಿಧಿಸುವುದಿಲ್ಲ. ಆತನು ಉತ್ತೀರ್ಣ ನಾಗಿ ಒಂದು ವೃತ್ತಿ ಆರಂಭಿಸಿದರೆ ವೃತ್ತಿತೆರಿಗೆ ಹಾಕುತ್ತೀರಿ. ತದನಂತರ ಆದಾಯ ತೆರಿಗೆ ವಿಧಿಸುತ್ತೀರಲ್ಲವೆ ? ರೈತನಿಗೇಕೆ ಕಾಂಟ್ರಿಬ್ಯೂಷನ್ ಪದ್ಧತಿ. ಅದನ್ನು ರದ್ದು ಮಾಡಿ ವಿದ್ಯುತ್ತನ್ನು ಉಚಿತವಾಗಿ ಬಳಸಿ ಅಂತರ್ಜಲದಿಂದ ಬೇಸಾಯ ಬೆಳೆ ಅಧಿಕ ತರುವಂತೆ ಪ್ರೋತ್ಸಾಹ ನೀಡಿ'' ಎಂದು ತಿಳಿಸಿದೆ.

ಮುಖ್ಯಮಂತ್ರಿಗಳು ಕಾಂಟ್ರಿಬ್ಯೂಷನ್ ಮತ್ತು ಅಂತರ್ಜಲ ವಿದ್ಯುತ್ ದರ ಗಳನ್ನು ರದ್ದು ಮಾಡುವುದು ಸೂಕ್ತ ಎಂಬ ಪೂರ್ಣ ಮನಸ್ಸನ್ನು ಬಿಚ್ಚಿ ಸಭೆಗೆ ತಿಳಿಸಿ ದರು. ಸಭೆ ಬರಖಾಸ್ತಾದ ಮೇಲೆ ಹೆಚ್ಚುವರಿ ಚೀಫ್‌ಸೆಕ್ರೆಟರಿ ಅನಂತ ಕೃಷ್ಣ ಅವರು ಚೀಫ್ ಸೆಕ್ರೆಟರಿ ನರಸಿಂಹರಾವ್ ಅವರಲ್ಲಿಗೆ ನನ್ನನ್ನು ಕರೆದೊಯ್ದರು. ವಿದ್ಯುತ್ ದರ ಉಚಿತಮಾಡಿದರೆ, ಕೈಗಾರಿಕೆಗಳವರು ಸಹ ಒತ್ತಾಯ ಮಾಡಬಹುದು. ಒಂದು ರಾಷ್ಟ್ರ ಕೇವಲ ಬೇಸಾಯ ಒಂದರಿಂದಲೇ ಬದುಕಲಾರದು. ಜೊತೆ ಜೊತೆಗೆ ಕೈಗಾರಿಕೆ ಗಳು ಮುಂದೆ ಬರಬೇಕು. ಆದರು ಹೆಚ್ಚಿನ ಆದ್ಯತೆ ಬೇಸಾಯಗಾರನಿಗೆ ನೀಡುವುದು ಸರಿ. ಅದ್ದರಿಂದ 5 ಮತ್ತು 10 ಅಶ್ವಶಕ್ತಿ ನೀರಾವರಿ ಪಂಪುಗಳಿಗೆ ಅತಿ ಕಡಿಮೆ

ವಿದ್ಯುತ್‌ದರ ವಿಧಿಸಲು ನಿಮ್ಮ ಸಲಹೆ ಏನು ಎಂದು ನನ್ನನ್ನು ಚೀಫ್ ಸೆಕ್ರೆಟರಿ ಒತ್ತಾಯ ಮಾಡಿ ಕೇಳಿದರು. ರೈತ ಎಷ್ಟು ಬೇಕಾದರು ನೀರು ಬಳಸಲು ವಿದ್ಯುತ್ ಬಳಸಲಿ ತಲಾ 50 ರೂ 60 ರೂ ಸಂತೆ ವಿದ್ಯುತ್‌ದರ ನಿಗದಿ ಮಾಡೋಣ ನಿಮ್ಮ ಸಹಕಾರವು ಇರಲಿ'' ಎಂದು ಹೇಳಿ ಬೀಳ್ಕೊಟ್ಟರು.

ರೈತರ ಚಳುವಳಿಗೆ ಇನ್ನಿತರ ವಾರ್ತಾ ಪತ್ರಿಕೆಗಳಂತೆ ಪ್ರಚಾರ ನೀಡುತ್ತ ಬಂದ ''ಕನ್ನಡ ಪ್ರಭ'' ಪತ್ರಿಕೆ ಸಂಪಾದಕ ಖಾದ್ರಿಶಾಮಣ್ಣ ಅವರು ದಿನಾಂಕ 10-10-80 ರಂದು ಬರೆದ ''ಭುಗಿಲೆದ್ದ ಹಳ್ಳಿಗಾಡು'' ಎಂಬ ಅಗ್ರಲೇಖನವನ್ನು ರಾಜ್ಯದ ನಾನಾ ರೈತ ಸಂಘಗಳು ಲಕ್ಷಗಟ್ಟಲೆ ಅಚ್ಚು ಮಾಡಿ ರೈತರಲ್ಲಿ ಹಂಚಿ ರೈತರಲ್ಲಿ ಹೊಸ ಚೈತನ್ಯ ಮೂಡಿಸಿದರು. ಅದರ ಪಾಠ ಹೀಗಿದೆ—

ಕರ್ನಾಟಕದ ಹಳ್ಳಿಗಾಡು ಭುಗಿಲೆದ್ದಿದೆ. ನೇಗಿಲಯೋಗಿಗಳು, ಮಣ್ಣಿನ ಮಕ್ಕಳು ಹೋರಾಟದ ಹಾದಿಯಲ್ಲಿ, ಅನ್ಯಾಯಗಳನ್ನು ನುಂಗಿ ನುಂಗಿ ಬಸವಳಿದವರು. ಸುಲಿಗೆಯ ಚಕ್ರಕ್ಕೆ ಸಿಕ್ಕಿ ನುಚ್ಚುನೂರಾದವರು. ಸರಕಾರದ ನಿಸ್ಸೀಮ ನಿರ್ಲಕ್ಷ್ಯ. ಪಟ್ಟಣಗಳಿಂದ ಸೂರೆ, ಹಳ್ಳಿಗಳನ್ನು ಹಾಳುಗೆಡವಿ ದೊಡ್ಡ ದೊಡ್ಡ ನಗರಗಳು ಸೊಕ್ಕಿವೆ. ಹಣದ ಹೊಳೆ ಪೇಟೆಗೆ. ಪಟ್ಟಣಕ್ಕೆ ಪ್ರತಿಭೆಯ ಪಲಾಯನ ಬೇರೆ. ಹಿಂಡಿ ಹಿಪ್ಪೆಯಾದವರು ಮಾತ್ರ ಹಳ್ಳಿಗಳಲ್ಲಿ.

ಎಷ್ಟು ದಿನ ನೋಯಬೇಕು ಈ ಜನ ? ಅದಕ್ಕೇನು ಎಣೆಯೇ ಇಲ್ಲವೇ ? ಕಾಲಾನುಕಾಲಕ್ಕೆ ಕ್ರಿಮಿಯೂ ಹೊರಳುವುದಂತೆ. ಹಳ್ಳಿಯಲ್ಲಿರುವವರು ಹೇಳಿ ಕೇಳಿ ಮನುಷ್ಯರು. ಅವರ ಸಹನೆಯೂ ಈಗ ಬರಿದು. ತಾಳ್ಮೆಗೆ ಬೆಲೆಯಿಲ್ಲ. ತೋಳ್ಬಲಕ್ಕೆ ಈಗ ಬೆಲೆ. ಗುಣಕ್ಕೆ ಗೌರವವಿಲ್ಲ ಹಣಕ್ಕೆ ಮನ್ನಣೆ. ಇಂಥ ವಿಷಮ ಪರಿಸ್ಥಿತಿಯಲ್ಲಿ ತೊಳಲುತ್ತಿದ್ದಾನೆ ನಮ್ಮ ರೈತ. ಅಂತಲೇ ಕೆರಳಿ ನಿಂತಿದ್ದಾನೆ, ಕನಲಿ ಕೆಂಡವಾಗಿದ್ದಾನೆ.

ರೈತರ ಸತ್ಯಾಗ್ರಹ ನೂರಕ್ಕೆ ನೂರರಷ್ಟು ಸತ್ಯದ ಆಗ್ರಹ. ಬುದ್ಧಿ ಇರುವ ಯಾವ ಮನುಷ್ಯನೂ ಇಲ್ಲ ಎನ್ನಲಾರ. ಆದರೆ ಸರಕಾರಗಳು ಮಾತ್ರ ಕುರುಡು, ಕಿವುಡು ನಿರ್ಜೀವ, ಅಧಿಕಾರಶಾಹಿ ರೈತಕೋಟಿಯ ಎದೆಯ ಮೇಲೆ ಬೂಟುಗಾಲಿಟ್ಟಿರುವ ಪೆಡಂಭೂತ. ಶೋಷಣೆಗೆ ಇವರೇ ಪುರೋಹಿತರು. ತುಳಿಯಲು ಇವರು ಸದಾ ಮುಂದು. ಎತ್ತಲು ಕೈಗಳಿಲ್ಲ ಇವರಿಗೆ. ಜೋರುಜಬರ್ದಸ್ತಿ ಎಷ್ಟು ದಿನ ಸಹಿಸಿ ಯಾರು, ಮಣ್ಣಿನ ಮಕ್ಕಳು ?

ಅಧಿಕಾರಿಗಳು, ಪ್ರತಿನಿಧಿಗಳು, ರಾಜ್ಯಕರ್ತರು, ಮೈಮರೆತಿದ್ದಾರೆ. ತಮ್ಮ ಒಡೆಯನ ಚಿಂತೆ ಇವರಿಗೆ ಇಲ್ಲವೇ ಇಲ್ಲ. ಚುನಾವಣೆಯಲ್ಲಿ ಮಾತ್ರ ಬಂದು ಹಲ್ಲು ಕಿರಿಯುತ್ತಾರೆ. ಬಗೆಬಗೆಯ ಬಣ್ಣದ ಮಾತು, ಅನಂತರ ಬರಿಯ ದರ್ಪ, ದಬ್ಬಾಳಿಕೆ. ಇದು ಇಂದಿನ ರುದ್ರ ಚಿತ್ರ.

ದೇಶದಲ್ಲಿ ಧಾರಣೆಯ ದರೋಡೆ. ಬೆಳೆಯುವವನಿಗೆ ಭಾರಿ ಟೋಪಿ, ಬಳಸು

ವವಸಿಗೆ ಮಂಕುಬೂದಿ, ದಳ್ಳಾಳಿಯದೇ ರಾಜ್ಯ. ಪ್ರಜೆಗಳೆಲ್ಲ ಪೇದೆಗಳು. ಎಷ್ಟು ದಿನ ನಡೆದೀತು ಈ ಚಮತ್ಕಾರ ? ಅವರ ಕರಾಮತ್ತು ಈಗ ಬಟ್ಟಬಯಲು.

ರೈತ ಕಬ್ಬು ಬೆಳೆಯುತ್ತಾನೆ, ಹತ್ತಿ ಬೆಳೆಯುತ್ತಾನೆ, ಶೇಂಗಾ, ತಂಬಾಕು ಎಲ್ಲವನ್ನೂ ಹುಟ್ಟು ಹಾಕುತ್ತಾನೆ. ಭತ್ತ, ರಾಗಿ, ಗೋಧಿ, ಜೋಳ ಎಲ್ಲವೂ ಇವ ನಿಂದಲೇ ಸೃಷ್ಟಿ. ಬೆಳೆಯುವವನಿಗೆ ಲಾಭದಾಯಕ ಬೆಲೆ ಸಿಗುತ್ತಿದೆಯೇ? ಸುಗ್ಗಿಯಲ್ಲಿ ಆರಕ್ಕೆ ಮೂರಾಗಿ ಕೊಳ್ಳುತ್ತಾರೆ, ಹಬ್ಬದ ಹಂಗಾಮಿನಲ್ಲಿ ಅದನ್ನು ತುಟ್ಟಿಯಾಗಿ ರೈತನಿಗೇ ಮಾರುತ್ತಾರೆ. ಇಂದಿನ ಸರ್ಕಾರಕ್ಕೆ, ಸಮಾಜಕ್ಕೆ ಕಣ್ಣಿದೆಯೇ ? ಯಾವ ನ್ಯಾಯ ಇದು ? ಛೀ, ಛೀ ಇದು ಪರಮ ಅನ್ಯಾಯ, ಆದರೂ ಸಹಿಸಿಕೊಳ್ಳಬೇಕಂತೆ.

ಹತ್ತು ಎಕರೆ ಭೂಮಿ ಸರ್ಕಾರದ ವಶ. ಪರಿಹಾರ ಹದಿನೇಳು ಗುಂಟೆಗೆ ಮಾತ್ರ. ತಾಲ್ಲೂಕು ಕಚೇರಿಗೆ ಎಡತಾಕಿ ಎಡತಾಕಿ ರೈತ ಎತ್ತಿನ ಮನಿಯ ಕಾಲು ಸವದು ಹೋದವು. ಪರಿಹಾರ ಕಾಣಲಿಲ್ಲ. ಹೆಂಡರು ಮಕ್ಕಳೊಡನೆ ಉಪವಾಸ ಮಲಗಿದ. ಆಗ ಆಡಳಿತದ ಕಣ್ಣು ತೆರೆಯುತ್ತದೆ. ಹೇಗಿದ್ದರೂ ಮನೆಯಲ್ಲಿ ಉಪವಾಸ, ನ್ಯಾಯ ಕ್ಕಾಗಿ ಬಯಲಲ್ಲಿ ಉಪವಾಸ. ಈ ಹಟ ಎಲ್ಲ ರೈತರಲ್ಲೂ ಮೂಡಿ ಬರುತ್ತಿದೆ. ಇವಕ್ಕೆ ಅಕ್ಷರ ಕಲಿಯಬೇಕಿಲ್ಲ. ಓದು ಬರಹ ಯಾವುದೂ ಬೇಡ. ನೋಯುವ ನೋವನ್ನು ಪ್ರಾಣಿಗಳೇ ಅರಿಯುತ್ತವೆ. ಇನ್ನು ಮನುಷ್ಯ ಅರಿಯಲಾರನೇ ? ಇಂಥ ದುರಂತಕ್ಕೆ ದೂಡಿದ್ದೇವೆ ಬೇಸಾಯಗಾರ ಬಳಗವನ್ನು.

ಅಣೆಕಟ್ಟು ಕಟ್ಟಿದರು, ಕಾಲುವೆ ಅಗೆದರು, ನೀರು ಹಾಯಿಸಿದರು. ಬಂದವರಿಗೆ ಬಂತು ಬಾರದವರಿಗೆ ಬರಲೇ ಇಲ್ಲ. ಅಭಿವೃದ್ಧಿಯ ತೆರಿಗೆಯ ಜಬರ್ದಸ್ತು ನೋಟೀಸು ಎಲ್ಲರಿಗೂ ತಪ್ಪದೇಬಂತು !

ಅಣೆಕಟ್ಟು ಕಟ್ಟಿದ್ದು ಯಾರ ಹಣದಿಂದ ? ಬೊಕ್ಕಸದಲ್ಲಿರುವ ರೊಕ್ಕ ಯಾರಪ್ಪನ ಮನೆಯದು ? ಬಡವ ತೆರುವ ತೆರಿಗೆ, ಅವನು ಹರಿಸುವ ಬೆವರಿನಿಂದ ಬಂದದ್ದಲ್ಲವೇ ? ತೆರಿಗೆಯನ್ನೂ ತೆರಬೇಕು. ಅದರ ಮೇಲಿನ ಅಭಿವೃದ್ಧಿ ತೆರಿಗೆ ಯಂತೆ. ಇದೆಲ್ಲ ಅಧಿಕಾರ ಶಾಹಿ ಅಜ್ಞರ ಮೇಲೆ ನಡೆಸುತ್ತಿರುವ ಹೇಯ ದೌರ್ಜನ್ಯ. ಅತ್ಯಾಚಾರ ಇದು.

ಭಾರಿ ಯೋಜನೆಗಳಿಗೆ ಅಪಾರ ಹಣ ವೆಚ್ಚ. ಕಾಲು ಪಾಲು ಸರಿಯಾಗಿ ವೆಚ್ಚ; ಉಳಿದುದು ಅಪವ್ಯಯ. ಗುತ್ತಿಗೆದಾರ–ಎಂಜನೀಯರ್–ರಾಜಕಾರಣಿ ಮೂವರು ಸೇರಿ ನುಂಗುತ್ತಾರೆ. ಅದರ ಮೇಲೂ ಬಡ ರೈತ ಅಭಿವೃದ್ಧಿ ತೆರಿಗೆ ತೆರಲೇಬೇಕು. ಎಂಥ ಘೋರ ಅತ್ಯಾಚಾರ ಇದು ?

ಹಾಗೆಂದು ಹೇಳಿದರೆ ಲಾಠಿ ಬೀಸುವಿರಾ ? ಗೋಲಿ ಹಾರಿಸುವಿರಾ ? ಅದಕ್ಕೆ ಹಣ ತೆತ್ತವರೂ ರೈತರೇ ಅಲ್ಲವೆ ? ಇಲ್ಲಿಯವರೆಗೆ ಕೇಳುವ ನಾಲಿಗೆ ಇರಲಿಲ್ಲ. ಈಗ ಅದು ಬಂದಿದೆ. ರೈತನೇ ಈ ದೇಶದ ಒಡೆಯ. ಮಂತ್ರಿ ಮಹೋದಯರಿಂದ ಹಿಡಿದು

ಎಲ್ಲರೂ ಅವನ ಆಳುಗಳು. ಆಳು ಒಡೆಯನ ಸೇವೆ ಮಾಡತಕ್ಕದ್ದು. ಇಲ್ಲದಿದ್ದರೆ ಯಜಮಾನ ಸೇವಕರನ್ನು ಬದಲಿಸಿಯಾನು ? ಇದೇ ಕನ್ನಡ ನಾಡಿನ ಉದ್ದಗಲಕ್ಕೂ ಹಬ್ಬಿರುವ ಹೋರಾಟದ ಹುನ್ನಾರು.

ರೈತರಿಗೆ ಸಾಲ ವಸೂಲಿಗೆ ತಗಾದೆ. ಕೊಡದಿದ್ದರೆ ಹೊಲ, ಮನೆ ಜಫ್ತಿ. ಹಾಗಾದರೆ ಉದ್ಯಮ ಪತಿಗಳಿಗೆ ಕೊಟ್ಟಿರುವ ಸಾಲವನ್ನು ಏಕೆ ವಸೂಲಿ ಮಾಡುತ್ತಿಲ್ಲ? ಸಾವಿರದ ಎಂಟುನೂರು ಕೋಟಿ ರೂಪಾಯಿ ಇಂಥ ಸಾಲವನ್ನು ರದ್ದುಪಡಿಸುವರಂತೆ. ರೈತರ ಸಾಲವನ್ನೇಕೆ ರದ್ದು ಪಡಿಸಬಾರದು. ? ಮಣ್ಣಿನ ಮಗ ನಿರ್ಭಾಗ್ಯ ಬೋರೇ ಗೌಡ. ಉಣಲು ಅನ್ನವಿಲ್ಲ, ಉಡಲು ಬಟ್ಟೆಯಿಲ್ಲ, ಮುರುಕು ಮಂಟಪವೇ ಮನೆ. ಮಕ್ಕಳಿಗೆ ಓದು ಬರಹ ಸೊನ್ನೆ. ಔಷಧಿ-ಉಪಚಾರ ಕನಸು. ಆದರೂ ಸಾಲ ತೀರಿಸಲೇ ಬೇಕಂತೆ. ಒಬ್ಬೊಬ್ಬರಿಗೆ ಒಂದೊಂದು ನ್ಯಾಯ. ಬಲ್ಲಿದರಿಗೇ ಒಂದು. ಬಡವರಿಗೇ ಮತ್ತೊಂದು. ಇದು ಇಂದಿನ ಅಂಥ ದರಬಾರು. ಇದರ ವಿರುದ್ಧವೇ ರೈತ ಸಿಡಿದೆದ್ದಿರುವುದು.

ಸಕ್ಕರೆ ಕಿಲೋಗ್ರಾಂಗೆ 12 ರೂಪಾಯಿ. ರೈತ ಬೆಳೆಯುವ ಕಬ್ಬಿನ ಬೆಲೆ ಇದ್ದಲ್ಲೇ ಇರುತ್ತದೆ. ಬೆಳೆಗಾರನಿಗೆ ಟನ್ನಿಗೆ 300 ರೂಪಾಯಿ ಏಕೆ ಕೊಡುವುದಿಲ್ಲ ? ಇಂದಿನದು ರೈತರ ಸರಕಾರವೇ ? ಪ್ರಜೆಗಳ ಸರಕಾರವೇ ? ಹಾಗಾದರೆ ರೈತರಿಗೆ ಒಳ್ಳೆ ಬೆಲೆ ಕೊಡಿ. ಕಾರ್ಖಾನೆಯವರನ್ನು ಬಗ್ಗುಬಡಿಯಿರಿ. ಏನೂ ತಪ್ಪಿಲ್ಲ, ಮಾಡುವ ಎದೆಗಾರಿಕೆ ಇದೆಯೆ ? ರೈತ ಚಳುವಳಿ ಎಸೆದಿರುವ ಸವಾಲು ಇದು.

ನರಗುಂದ-ನವಿಲಗುಂದ ಆಯಿತು. ಸವದತ್ತಿ-ರಾಮದುರ್ಗಗಳೂ ಸೇರಿದವು. ಬೆಳಗಾವಿ ಜಿಲ್ಲೆ, ಧಾರವಾಡ ಜಿಲ್ಲೆ, ಈಗ ಶಿವಮೊಗ್ಗ ಜಿಲ್ಲೆ. ಮುಂದೆ ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ, ಮಂಡ್ಯ, ಮೈಸೂರು ಹಿಂದೆ ಬೀಳಲಿಕ್ಕಿಲ್ಲ. ಹತ್ತೊಂಬತ್ತು ಜಿಲ್ಲೆಗಳ ರೈತರೂ ಎಚ್ಚೆತ್ತಿದ್ದಾರೆ. ಸನ್ನದ್ಧರಾಗಿದ್ದಾರೆ. ಸಂಘಟಿತರಾಗಿದ್ದಾರೆ. ನ್ಯಾಯಕ್ಕಾಗಿ ತಗಾದೆ ಹೂಡಿದ್ದಾರೆ. ಇನ್ನು ಅವರು ಬೇಡುವುದಿಲ್ಲ. ತಮಗೆ ಬೇಕಾದುದನ್ನು ಪಡೆದೇ ತೀರುತ್ತಾರೆ.

ಪಟ್ಟಣಿಗರು, ಬುದ್ಧಿಜೀವಿಗಳು ಅರಿತುಕೊಳ್ಳಬೇಕು. ಅರ್ಥಮಾಡಿಕೊಳ್ಳಬೇಕು. ನಮಗೆ ಅನ್ನ ಕೊಡುವ ತಂದೆ ಈ ರೈತ. ನಮ್ಮ ಭೋಗಭಾಗ್ಯಗಳಿಗೆಲ್ಲ ಈತನ ಪರಮ ತ್ಯಾಗವೇ ಬುನಾದಿ. ನಮ್ಮ ಭವ್ಯ ಭವನಗಳು, ಭಾರಿ ಸೌಧಗಳು ಈತನ ಅಸ್ಥಿ ಪಂಜರದ ಮೇಲೆ ನಿಂತಿವೆ. ಈ ಕಹಿ ಸತ್ಯವನ್ನು ಮರೆಯದಿರೋಣ. ಇಷ್ಟು ದಿನ ಸೂರೆಗೊಂಡಿದ್ದಾಯಿತು. ಇನ್ನು ಮೇಲೆ ಈ ಆಟ ನಡೆಯದು. ಶತಮಾನಗಳ ಸುಲಿಗೆಯ ಸಾಲವನ್ನು ತೀರಿಸುವ ಕಾಲ ಹತ್ತಿರ ಬಂದಿದೆ. ನಮ್ಮ ಭದ್ರತೆ ನಡಗುತ್ತಿದೆ. ಬಡವನ ಒಡಲಿನ ಬಡಬಾನಲ ದಳ್ಳುರಿ ಆದೀತು. ಕ್ರಾಂತಿಯ ಕಿಚ್ಚಾದೀತು. ಇತಿಹಾಸ ಸಾರುವ ಚಿರ ಸತ್ಯ ಇದು. ಅದಕ್ಕೆ ಸಾಕ್ಷಿಯಾಗಿ ನಡೆದುಕೊಳ್ಳೋಣ.

"ಸೀಜರನಿಗೆ ಸಲ್ಲಬೇಕಾದುದನ್ನು ಸಲ್ಲಿಸಿಯೇ ತೀರೋಣ."

ಈ ಲೇಖನವು ಸಮಗ್ರ ಭಾರತದ ರೈತಾಪಿ ಜನರ ಸಮಸ್ಯೆ ಪರಿಹಾರ ಸೂಚಕವಾಗಿದೆ. ಇದಕ್ಕಿಂತ ಉತ್ತಮ ಲೇಖನ ತರುವುದು ಸಾಮಾನ್ಯರಿಂದ ಅಸಾಧ್ಯವೆಂದು ಭಾವಿಸಿ ನಮ್ಮ ಸಂಘದಿಂದ 2ನೆಯ ಬಾರಿ ಪ್ರಕಟಿಸಿ ರೈತಾಪಿ ಜನರಲ್ಲಿ ಹಂಚಿಕೆ ಮಾಡಿದೆವು.

ಈ ಪ್ರಕರಣಾನಂತರ ಜಿಲ್ಲಾ ರೈತ ಸಂಘವನ್ನು ರಾಜ್ಯ ರೈತ ಸಂಘದ ಜೊತೆ ವಿಲೀನಗೊಳಿಸುವ ಸಲುವಾಗಿ ಜಿಲ್ಲಾರೈತ ಸಂಘದ ಸಭೆ ಕರೆಯಲಾಗಿತ್ತು. ರಾಜ್ಯ ರೈತ ಸಂಘದ ಶ್ರೀ ಎಚ್. ಶ್ರೀನಿವಾಸ್ ಅವರು ಸಹ ವೇದಿಕೆಯಲ್ಲಿದ್ದರು. ವಿನಾಕಾರಣ ಕೆಲವರು ಬಂದು ವೇದಿಕೆಯಲ್ಲಿದ್ದ ನನ್ನನ್ನು ಹೊರ ದಬ್ಬಲು ಮಾಡಿದ ಪ್ರಯತ್ನವನ್ನು ತಪ್ಪಿಸಿ ಎಚ್. ಡಿ. ಚೌಡಯ್ಯನವರು ರಕ್ಷಣೆಯಿತ್ತರು. ಈ ಗಲಾಟೆ ಮಧ್ಯದಲ್ಲಿ ನಾನು ಜಿಲ್ಲಾ ರೈತ ಸಂಘ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದೆನಲ್ಲದೆ ಅಂದೇ ಜಿಲ್ಲಾ ರೈತ ಸಂಘವನ್ನು ರದ್ದುಗೊಳಿಸಿದೆ.

ಬಹುಶಃ ರೈತನ ಸಮಸ್ಯೆ ಭೂಗ್ರಹದ ಜೊತೆಯಲ್ಲೇ ಹುಟ್ಟಿ ಬಂದಿದೆಯೋ ಏನೋ ? ಯಾರೂ ಆತನ ಸಮಸ್ಯೆಗೆ ಪೂರ್ಣ ಪರಿಹಾರ ಕಾಣಿಸಲೇ ಇಲ್ಲ. ಆತನು ಹುಟ್ಟಿನಿಂದ ಸಾವಿನವರೆಗೂ ಹೋರಾಡುತ್ತಲೇ ಬದುಕನ್ನು ಸವೆಸುವ ಜೀವ ಎನಿಸುತ್ತದೆ. ಜಪಾನಿನಲ್ಲಿ ರೈತನ ಬೆಳೆಗಳ ಬೆಲೆಯನ್ನು ಗ್ರಾಹಕರು ಅಂಗೀಕರಿಸಿ ಜೊತೆ ಜೊತೆ ಹೋಗುವ ಸಂಗತಿ ಹೇಳುತ್ತಾರಾದರು. ಅದರ ಅನುಕರಣೆ ಮೂಲಕ ನಮ್ಮ ರೈತರ ಜೀವನ ಹಸನುಮಾಡಬಾರದೇಕೆ ?



೩

ಕನ್ನಡ ನಾಡಿನ ಅರಣ್ಯ, ಗಣಿ, ಭೂವಿಜ್ಞಾನ ಖಾತೆಗಳ
ಮಾನ್ಯ ಸಚಿವರಾದ
ಶ್ರೀಯುತ ಜಿ. ಮಾದೇಗೌಡ ಬಿ. ಎ. ಬಿ. ಎಲ್,
ಮತ್ತು ಇವರ ಧರ್ಮ ಪತ್ನಿ
ಶ್ರೀಮತಿ ಪದ್ಮ ಇವರುಗಳಿಗೆ
ಮಂಡ್ಯ ಜಿಲ್ಲಾ ರೈತ-ರೈತ ಕಾರ್ಮಿಕರ ಸಂಘವು
ಶಾಸಕರೂ, ರೈತನಾಯಕರೂ ಆದ
ಶ್ರೀಯುತ ಎಚ್. ಡಿ. ಚೌಡಯ್ಯ ಬಿ. ಎಸ್ ಸ್ಸಿ (ಅಗ್ರಿ)
ಇವರ ಅಧ್ಯಕ್ಷತೆಯಲ್ಲಿ
ಅನನ್ಯ ಪ್ರೀತಿ ವಿಶ್ವಾಸಗಳಿಂದ ಸಮರ್ಪಿಸಿದ
ಸನ್ಮಾನ ಪತ್ರ

ಇಂದು ನಮಗೆ ಸಂಭ್ರಮದ ದಿನ. ನಮ್ಮೆಲ್ಲರ ಆತ್ಮೀಯರಾದ ತಾವು ಕನ್ನಡ ನಾಡಿನ ಸಚಿವ ಸಂಪುಟದ ಸದಸ್ಯರಾದ ಈ ಶುಭ ಸಮಯದಲ್ಲಿ ತಮ್ಮನ್ನು ತಮ್ಮ ಧರ್ಮ ಪತ್ನಿ ಶ್ರೀಮತಿ ಪದ್ಮಮ್ಮನವರು ಸಮೇತ ಸ್ವಾಗತಿಸಲು ನಮಗೆ ಅಮಿತಾನಂದ ವಾಗಿದೆ. ಹೃದಯ ತುಂಬಿದ ಆನಂದದಿಂದ ತಮಗೆ ಸುಸ್ವಾಗತ ಬಯಸುತ್ತೇವೆ.

ನಮ್ಮ ಜಿಲ್ಲೆಯ ಮದ್ದೂರು ತಾಲ್ಲೂಕು ಗುರುದೇವರ ಹಳ್ಳಿಯ ಗಣ್ಯ ರೈತ ಕುಟುಂಬದಲ್ಲಿ ಜನಿಸಿದ ತಾವು ತಮ್ಮ ವಿದ್ಯಾರ್ಥಿ ದೆಸೆಯಿಂದಲೂ ರೈತ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದೀರಿ. ತಮ್ಮ ಹುಟ್ಟೂರಿನ ಹೆಸರಿಗನು ಗುಣವಾಗಿ ಗ್ರಾಮೀಣ ಜನತೆಯ ಸೇವೆಯಲ್ಲಿ ತೊಡಗಿದ್ದು ಯುವಕ ಸ್ವಯಂಸೇವಕರಿಗೆ ಗುರುವಾಗಿಯೂ, ಈ ಸೇವೆಯ ಫಲವನ್ನುಂಡು ಪ್ರಗತಿಯ ಬೆಳಕನ್ನು ಕಂಡ ರೈತಾಪಿ ಜನರಿಗೆ ದೈವವಾಗಿಯೂ ಶೋಭಿಸಿದ್ದೀರಿ. ತಮ್ಮಂತಹ ಸೇವಾತತ್ಪರರಿಗೆ ಜನ್ಮವಿತ್ತ ಕೀರ್ತಿಶೇಷರಾದ ಶ್ರೀ ಪುಟ್ಟೇಗೌಡರು ಮತ್ತು ಶ್ರೀಮತಿ ಕಾಳಮ್ಮನವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ತಮ್ಮ ಸಮಾಜಸೇವಾ ಕಾರ್ಯದಲ್ಲಿನ ಯಶಸ್ಸು, ಬಹುಪಾಲು ತಮ್ಮ ಧರ್ಮ ಪತ್ನಿಯವರ ಸಹಕಾರ ಮತ್ತು ಪ್ರಸನ್ನತೆಯ ನೆರವಿನಿಂದ ಒದಗಿ ಬಂದಿದೆ ಎಂದು ಹೇಳಿದರೆ ಅದು ಉತ್ಪ್ರೇಕ್ಷೆಯ ಮಾತುಗಳಲ್ಲ. ಸತ್ಕುಲಪ್ರಸೂತರೂ, ಸತಿಭಕ್ತಿ ಪರಾಯಣೆಯೂ ಆದ ಶ್ರೀಮತಿ ಪದ್ಮಮ್ಮನವರು ಈ ಸಂತಸದ ಸಮಾರಂಭದಲ್ಲಿ

ಪಾಲ್ಗೊಂಡಿರುವುದು ನಮಗೆ ಅಮಿತಾನಂದವನ್ನುಂಟುಮಾಡಿದೆ. ಮಂಡ್ಯ ಜಿಲ್ಲೆ ರೈತ-ರೈತ ಕಾರ್ಮಿಕರ ಸಂಘದ ಪರವಾಗಿ ಶ್ರೀ ಮಾದೇಗೌಡ ದಂಪತಿಗಳಿಗೆ ಆದರದ ಸ್ವಾಗತ ಕೋರುತ್ತೇವೆ.

ತಾವು ವಿದ್ಯಾರ್ಥಿದೆಸೆಯಿಂದಲೇ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದಿಟ್ಟತನದಿಂದ ಹೋರಾಡಿ ಕಾರಾಗೃಹ ವಾಸವನ್ನೂ ಅನುಭವಿಸಿದಿರಿ. ರಾಷ್ಟ್ರೀಯ ಆಂದೋಳನದಲ್ಲಿ ಸಕ್ರಿಯ ಪಾತ್ರ ವಹಿಸಿಯೂ ವಿದ್ಯಾರ್ಜನೆಯನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಬಂದ ತಮ್ಮ ಪ್ರತಿಭೆ ನಿಜಕ್ಕೂ ಅಪ್ರತಿಮವಾದುದು. ಜಿಲ್ಲೆಯಲ್ಲಿ ಶ್ರೀಯುತ ಶಂಕರ ಗೌಡರ ನೇತೃತ್ವದಲ್ಲಿ ಸಂಘಟಿತವಾದ ರಚನಾತ್ಮಕ ಕಾರ್ಯಕರ್ತರ ತಂಡದಲ್ಲಿ ಪ್ರಮುಖರಾಗಿ ಸಹಕಾರ, ಶಿಕ್ಷಣ, ಗ್ರಾಮಾಭಿವೃದ್ಧಿ ಮುಂತಾದ ಕಾರ್ಯಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿ ಕೆಲಸಮಾಡಿದ್ದೀರಿ. ಸ್ವಪ್ರಯತ್ನದಿಂದ, ಏಕಾಂಗಿಯಾಗಿ ಸಣ್ಣಗ್ರಾಮವಾಗಿದ್ದ ಕಾಳಮುದ್ದನ ದೊಡ್ಡಿಯಲ್ಲಿ ಶಾಲೆ, ಕಾಲೇಜು ವಿದ್ಯಾರ್ಥಿನಿಲಯ ಮತ್ತು ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಿರುವುದು ತಮ್ಮ ಕರ್ತೃತ್ವ ಶಕ್ತಿಗೆ ನಿದರ್ಶನವಾಗಿದೆ. ರಾಷ್ಟ್ರಾದ್ಯಂತ ರೈತರು ಮತ್ತು ರೈತ ಕಾರ್ಮಿಕರು ಎಚ್ಚೆತ್ತು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಚೈತನ್ಯಮಯಿಗಳಾಗುತ್ತಿರುವ ಈ ಪರ್ವಕಾಲದಲ್ಲಿ, ರೈತನ ಮಗನಾಗಿ ಹುಟ್ಟಿ, ರೈತನಾಗಿ ದುಡಿದು ರೈತನ ಬವಣೆ, ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿ ತಿಳಿದಿರುವ ತಾವು ಮಂತ್ರಿಗಳಾಗಿರುವುದು ರೈತಾಪಿಜನರ ಭಾಗ್ಯೋದಯವೆಂದು ಹೇಳಲು ಸಂತಸವಾಗಿದೆ.

ದೇಶಾಭಿಮಾನಿಗಳೂ, ದೀನದಲಿತರ ಬಗ್ಗೆ ಅನುಕಂಪ ಉಳ್ಳವರೂ ಆದ ತಾವು ವಿದ್ಯಾರ್ಥಿದೆಸೆಯಿಂದಲೂ ರಾಜಕೀಯ ಪ್ರಜ್ಞೆ ಬೆಳಸಿಕೊಂಡು ಕಾಂಗ್ರೆಸ್ ಸಂಸ್ಥೆಯ ನಿಷ್ಠಾವಂತ ಸದಸ್ಯರಾಗಿ, ಆ ಸಂಸ್ಥೆಯ ವಿವಿಧ ಮಟ್ಟಗಳ ಸಮಿತಿಗಳಲ್ಲಿ ಪದಾಧಿಕಾರಿಗಳಾಗಿ ಸೇವೆಸಲ್ಲಿಸಿದ್ದೀರಿ. ಕಳೆದ ಎರಡು ದಶಕಗಳಿಂದಲೂ ವಿಧಾನಸಭೆಯ ಸದಸ್ಯರಾಗಿ ಚುನಾಯಿಸಲ್ಪಡುತ್ತಿರುವುದು ತಮ್ಮ ಅಪಾರ ಜನಪ್ರಿಯತೆಯ ಸಂಕೇತವಾಗಿದೆ. ಮಂಡ್ಯ ಸಕ್ಕರೆ ಕಾರ್ಖಾನೆಯು ನಿರಂತರ ನಷ್ಟಕ್ಕೊಳಪಟ್ಟು ಹೀನ ಸ್ಥಿತಿಗೆ ಬಂದಾಗ, ತಾವು ಅದರ ಅಧ್ಯಕ್ಷರಾಗಿ ನೇಮಕಗೊಂಡು ಕಾರ್ಖಾನೆಯ ಯಂತ್ರಗಳನ್ನು ನವೀಕರಿಸುವ ಮೂಲಕ ಮತ್ತು ಕಾರ್ಮಿಕ ಮತ್ತು ಆಡಳಿತವರ್ಗದಲ್ಲಿ ಸಮರಸ ಭಾವನೆಯನ್ನು ಮೂಡಿಸುವ ಮೂಲಕ, ಉತ್ಪನ್ನವನ್ನು ಹೆಚ್ಚಿಸಿ ಕಾರ್ಖಾನೆಯು ಪ್ರಗತಿ ಪಥದಲ್ಲಿ ಮುಂದುವರಿಯುವಂತೆ ಮಾಡಿದಿರಿ. ಕಬ್ಬು ಬೆಳೆಗಾರರಿಗೂ ಕಾರ್ಮಿಕ ವರ್ಗದವರಿಗೂ ಸೌಲಭ್ಯ ಕಲ್ಪಿಸುವ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಂಡಿರಿ. ಬಿ. ಹೊಸೂರು ಕಾಲೋನಿಯಲ್ಲಿ ಮಹಾತ್ಮಾಗಾಂಧಿಯವರ ಜನ್ಮ ಶತಮಾನೋತ್ಸವದ ಸ್ಮಾರಕವಾಗಿ, ಕ್ಷಯರೋಗ ನಿವಾರಣಾ ಚಿಕಿತ್ಸಾಲಯದ ಸ್ಥಾಪನೆಯಾಗಿರುವುದು ತಮ್ಮ ಔದಾರ್ಯ, ಅನುಕಂಪಭಾವನೆಗಳ ಪ್ರತೀಕವಾಗಿದೆ.

ಸೀತಾನ್ವೇಷಣೆಗಾಗಿ ಹೊರಟುನಿಂತ ಹನುಮಂತನಿಗೆ ಕಪಿಕುಲವು ತಮ್ಮೆಲ್ಲರ ಶಕ್ತಿಯನ್ನು ಧಾರೆ ಎರದುಕೊಡಲಾಗಿ ಭೀಮಕಾಯನಾದ ಹನುಮನು, ಸಹಸ್ರ ಯೋಜನ ಸಮುದ್ರ ಲಂಘನ ಮಾಡಿ ಸೀತಾಮಾತೆಯನ್ನು ಕಾಣಲು ಸಾಧ್ಯವಾಯಿತೆಂದು ಪುರಾಣಗಳಲ್ಲಿ ಉಲ್ಲೇಖಿಸಿದೆ. ಅಂತೆಯೇ ಈ ಜಿಲ್ಲೆಯ ಹತ್ತು ಲಕ್ಷಕ್ಕೂ ಮಿಕ್ಕಿರುವ ರೈತ-ರೈತ ಕಾರ್ಮಿಕ ಕುಲದವರು ತಮ್ಮೆಲ್ಲ ತಪೋಬಲವನ್ನು ಈ ಶುಭ ಸಂದರ್ಭದಲ್ಲಿ ತುಂಬುಹೃದಯದಿಂದ ಧಾರೆ ಎರೆದು ತಮಗೆ ಬೆಂಬಲರಾಗಿ ನಿಲ್ಲಲು ಸಂಕಲ್ಪಿಸಿದ್ದೇವೆ. ನೇಗಿಲಯೋಗಿಗಳಾದ ನಮ್ಮ ಈ ತಪೋಬಲವನ್ನು ಸ್ವೀಕರಿಸಿ, ರೈತ-ರೈತಕಾರ್ಮಿಕ ಸಮಸ್ಯೆಗಳೆಂಬ ವಾರಿಧಿಯ ಲಂಘನ ಮಾಡಿ ಅವುಗಳ ಪರಿಹಾರಾನ್ವೇಷಣೆ ಮಾಡಿದ ಕೀರ್ತಿ ತಮ್ಮದಾಗ.ವಂತೆ ಜಗನ್ನಿಯಾಮಕನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ. ತಾವು ಇತ್ತೀಚೆಗೆ ಸಾಧಿಸಿರುವ ಮಹತ್ವಪೂರ್ಣ, ಐತಿಹಾಸಿಕ ಸರ್ವಜನ ಸಂತುಷ್ಟ ಕಾರ್ಯವೆಂದರೆ, ಜಿಲ್ಲೆಯ ಅನ್ನದಾತ, ಬೆಂಗಾಡನ್ನು ಬಂಗಾರ ಮಾಡಿದ ಭಾಗ್ಯದಾತ ಸರ್ ಎಂ. ವಿಶ್ವೇಶ್ವರಯ್ಯನವರ ಪೂರ್ಣಾಕಾರದ ಪ್ರತಿಮೆಯನ್ನು ಮಂಡ್ಯ ಜಿಲ್ಲಾ ಕಛೇರಿಯ ಮುಂದೆ ಪ್ರತಿಷ್ಠಾಪಿಸುವ ಕಾರ್ಯ ಕೈಕೊಂಡಿರುವುದಾಗಿದೆ. ಈ ಮಹತ್ಕಾರ್ಯ ಸಾಧನೆಯಿಂದ ತಮ್ಮ ಹೆಸರು ಜಿಲ್ಲೆಯ ಜನತೆಯ ಹೃದಯದಲ್ಲಿ ಅವಿಚ್ಛಿನ್ನವಾಗಿ ನೆಲಸುವುದರಲ್ಲಿ ಸಂದೇಹವಿಲ್ಲ.

ತಮ್ಮ ಭೇಟಿಯ ಈ ಸುಸಮಯವನ್ನು ಉಪಯೋಗಿಸಿಕೊಂಡು, ನಾವು ಈಗಾಗಲೆ 26-12-80ರಂದು ಮಾನ್ಯ ಮುಖ್ಯಮಂತ್ರಿಯವರಲ್ಲಿ ಚರ್ಚಿಸಿ ಸಲ್ಲಿಸಿರುವ ರೈತರ ಸಮಸ್ಯೆಗಳ ತಗಾದೆ ಪಟ್ಟಿಯಲ್ಲಿನ ಈ ಕೆಳಕಂಡ ಅವಶ್ಯಕವಾದ ಸಮಸ್ಯೆಗಳನ್ನು ತಮ್ಮ ಅವಗಾಹನೆಗೆ ಮಂಡಿಸಲೂ ಆ ಬಗ್ಗೆ ಸೂಕ್ತ ಪರಿಹಾರ ದೊರಕಿಸಿ ಕೊಡಬೇಕೆಂತಲೂ ವಿನಯದಿಂದ ಪ್ರಾರ್ಥಿಸುತ್ತೇವೆ.

1. ಮಂಡ್ಯದಲ್ಲಿನ ಮೈಸೂರು ಸಕ್ಕರೆ ಕಾರ್ಖಾನೆ ಮತ್ತು ಕಾಳಮುದ್ದನ ದೊಡ್ಡಿಯ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗಳನ್ನು ಸಹಕಾರಿ ಕ್ಷೇತ್ರದಲ್ಲಿನ ಕಾರ್ಖಾನೆಗಳಾಗಿ ಪರಿವರ್ತಿಸಲು ಅವಕಾಶ ಕಲ್ಪಿಸಿಕೊಡಬೇಕೆಂದು ಪ್ರಾರ್ಥಿಸುತ್ತೇವೆ.

2. ವ್ಯವಸಾಯೋತ್ಪನ್ನಗಳ ಬೆಲೆ ನಿಗದಿ ಸಮಿತಿಯಲ್ಲಿ ರೈತ ಪ್ರತಿನಿಧಿಗಳಿರುವಂತೆ ಏರ್ಪಡಿಸಲೂ, ಬೇಸಾಯ ಉತ್ಪನ್ನಗಳ ಬೆಲೆಗಳನ್ನು ಹೆಚ್ಚಿಸಲೂ ಅತ್ಯಂತ ತುರ್ತಾಗಿ ತಮ್ಮ ವರ್ಚಸ್ಸನ್ನು ಬೀರಬೇಕೆಂದು ಬೇಡುತ್ತೇವೆ.

3. ವಿಶ್ವೇಶ್ವರಯ್ಯ ನಾಲಾ ವ್ಯವಸಾಯ ಪ್ರಯೋಗ ಕ್ಷೇತ್ರದಲ್ಲಿ ದಿವಂಗತ ಶ್ರೀ ಕೆ. ಹನುಮಂತಯ್ಯ ಸ್ಮಾರಕ ವ್ಯವಸಾಯ ಕಾಲೇಜನ್ನು ಈ ವರ್ಷದಿಂದಲೇ ಪ್ರಾರಂಭಿಸಲು ನೆರವಾಗಬೇಕೆಂದು ಬೇಡುತ್ತೇವೆ.

4. ರಾಜ್ಯ ಸರ್ಕಾರವು ಇತ್ತೀಚೆಗೆ ಪ್ರಕಟಿಸಿರುವ ನೀರು ತೆರಿಗೆ ಆಜ್ಞೆಯು ರೈತರಲ್ಲಿ ದಿಗ್ಭ್ರಮೆಯನ್ನುಂಟು ಮಾಡಿರುವುದರಿಂದ ಇದನ್ನು ಕೂಡಲೆ ಒಂತೆಗೆದು

ಕೊಂಡು ನೀರು ತೆರಿಗೆಯನ್ನು ಪೂರ್ಣ ರದ್ದುಗೊಳಿಸುವಂತೆ ಸರ್ಕಾರದಲ್ಲಿ ಒತ್ತಾಯ ತರಲು ಬೇಡುತ್ತೇವೆ.

5. ವಿಶ್ವೇಶ್ವರಯ್ಯ ನಾಲಾ ಆಧುನೀಕರಣ ಯೋಜನೆ ಕೈಕೊಂಡಿದ್ದು, ಕೆಲಸ ಸ್ಥಗಿತಗೊಂಡಿರುವ ಕಾರಣ ಸದರಿಯೋಜನೆಯ ಯಶಸ್ವೀ ಕಾರ್ಯಾಚರಣೆಗಾಗಿ ಲೋಕೋಪಯೋಗಿ ಇಲಾಖೆಯ ಒಂದು ಪ್ರತ್ಯೇಕ ವಿಭಾಗ ಮತ್ತು ಉಪವಿಭಾಗ ಗಳನ್ನು ತೆರೆದು ಕೆಲಸ ಶೀಘ್ರಗತಿಯಲ್ಲಿ ಮುಂದುವರಿಯಲು ಏರ್ಪಡಿಸಬೇಕೆಂದು ಬೇಡುತ್ತೇವೆ.

6. ಹೇಮಾವತಿ ಯೋಜನೆಯಿಂದ ಮಂಡ್ಯ ಜಿಲ್ಲೆಯ ಕೆ. ಆರ್. ಪೇಟೆ, ನಾಗ ಮಂಗಲ, ಪಾಂಡವಪುರ ಹಾಗೂ ಮಂಡ್ಯ ತಾಲ್ಲೂಕಿನ ಬೆಂಗಾಡು ಪ್ರದೇಶಕ್ಕೆ ನೀರನ್ನು ಒದಗಿಸಲು ಈ ಹಿಂದೆಯೇ ಸರ್ಕಾರದ ಮಂಜೂರಾತಿ ದೊರೆಕಿದ್ದು, ಶಾಸನ ಸಭೆಯಲ್ಲಿ ಸಹ ಯೋಜನೆಯನ್ನು 1983ರ ಅಂತ್ಯದೊಳಗಾಗಿ ಪೂರ್ಣಗೊಳಿಸುವುದಾಗಿ ಸರ್ಕಾರದ ಪತಿಯಿಂದ ಆಶ್ವಾಸನೆ ನೀಡಲಾಗಿದೆ. ಸದರಿ ಆಶ್ವಾಸನೆಯಂತೆ ಈ ಪ್ರದೇಶದಲ್ಲಿ ಕಾಮ ಗಾರಿ ಇಲಾಖೆಯ ಒಂದು ವಿಭಾಗ ಮತ್ತು ನಾಲ್ಕು ಉಪವಿಭಾಗಗಳ ಕಾರ್ಯಾಲಯ ಗಳನ್ನು ತೆರೆಯಲಾಗಿದ್ದು ಸರ್ವೆ ಕಾರ್ಯವು ಮುಗಿಯುತ್ತ ಬಂದಿದೆ. ಆ ಕಾರಣ ಈ ಕಾಮಗಾರಿಗಾಗಿ ಸಾಕಷ್ಟು ಹಣವನ್ನು ಒದಗಿಸಿ ನಾಲಾ ಕೆಲಸವನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸಲು ತಮ್ಮ ಪ್ರಭಾವ ಬೀರಬೇಕೆಂದು ಬೇಡುತ್ತೇವೆ. ಮಳೆ, ಬೆಳೆ ಇಲದೆ ಕಷ್ಟಕ್ಕೆ ಗುರಿಯಾಗಿರುವ ಈ ಪ್ರದೇಶದ ಸಹಸ್ರಾರು ಜನರ ಜೀವನಾಧಾರಕ್ಕೆ ಅವಕಾಶ ಕಲ್ಪಿಸಿದಂತೆಯೂ ಆಗುತ್ತದೆಂಬುದು ತಮಗೆ ತಿಳಿದ ವಿಷಯವಾಗಿದೆ.

7. ಕಬ್ಬಿನ ಮೇಲಿನ ಖರೀದಿ ತೆರಿಗೆಯನ್ನು ಅಲಾಯಿದ ಇಟ್ಟಿದ್ದು ಈ ಮೊದಲು ಇದ್ದಂತೆ ಕಬ್ಬು ಬೆಳೆವ ಪ್ರದೇಶದಲ್ಲಿ ರಸ್ತೆ ನಿರ್ಮಾಣ, ದುರಸ್ತಿ ಮತ್ತು ಸಾಮಾಜಿಕ ಕಾರ್ಯಗಳಿಗೆ ಬಳಸಲು ಏರ್ಪಡಿಸಿ ಪ್ರತ್ಯೇಕ ಕಾಮಗಾರಿಗಳ ಷುಗರ್‌ಕೇನ್ ಸೆಸ್‌ಡಿವಿಷನ್ ಸ್ಥಾಪಿಸಲು ಸಹಾಯಕರಾಗಲು ಕೋರುತ್ತೇವೆ.

8. ನಮ್ಮ ಜಿಲ್ಲೆಯಲ್ಲಿ ಕಬ್ಬು ಪ್ರಮುಖಬೆಳೆ. ಜಿಲ್ಲೆಯಲ್ಲಿ ಮೂರು ಸಕ್ಕರೆ ಕಾರ್ಖಾನೆಗಳು, ಐದು ಖಂಡಸಾರಿಗಳು ಇದ್ದಾಗ್ಯು, ಜಿಲ್ಲೆಯ ಆರ್ಥಿಕ ಮುನ್ನಡೆಯಲ್ಲಿ ಗ್ರಾಮಕೈಗಾರಿಕೆಗಳಾದ ಕಬ್ಬಿನ ಗಾಣಗಳ ಪಾತ್ರ ಮಹತ್ತರವಾದುದು. ಕಬ್ಬಿನ ಗಾಣ ಗಳನ್ನು ಹೊಂದಿರುವ ಕೆಲವು ರೈತರು ಕಳೆದ ಕೆಲವು ವರ್ಷಗಳಿಂದ ಅನುಭವಿಸುತ್ತಿರುವ ಬವಣೆ ತಮಗೆ ಆಮೂಲಾಗ್ರವಾಗಿ ತಿಳಿದೇ ಇದೆ. ಆದಾಗ್ಯೂ ಈ ಸಂದರ್ಭದಲ್ಲಿ ಆ ಬಗ್ಗೆ ತಮ್ಮ ಗಮನ ಸೆಳೆಯುತ್ತ ಸದರಿ ಗಾಣಗಳ ಲೈಸೆನ್ಸ್‌ಗಳನ್ನು ರಿನ್ಯೂ ಮಾಡಿ ಸುವಲ್ಲಿ ಮತ್ತು ಹೊಸ ಗಾಣಗಳಿಗೆ ಲೈಸೆನ್ಸ್ ಪಡೆಯುವಲ್ಲಿ ಸರ್ಕಾರದ ಇತ್ತೀಚಿನ ಕಾನೂನು ಕ್ರಮಗಳು ಕಿರಕುಳವಾಗಿ ಪರಿಣಮಿಸಿವೆ. ಅನಕ್ಷರಸ್ಥ ರೈತನು ಲೆಕ್ಕ ಪತ್ರ ಗಳನ್ನು ಮಾರಾಟ ತೆರಿಗೆ ಇಲಾಖೆಗೆ ಒದಗಿಸಬೇಕೆಂಬ ನಿಯಮವು ಅಸಾಧ್ಯವೂ,

ಅಸಾಧುವಾದುದೂ ಆಗಿರುತ್ತದೆ. ಸ್ವಂತ ಕಬ್ಬನ್ನು ಅರೆಯುವ ರೈತನಿಗೆ ಗಾಣಗಳ ಲೈಸೆನ್ಸ್ ಪಡೆಯುವಲ್ಲಿ ಲೆಕ್ಕಪತ್ರಗಳನ್ನಿಡುವ ಯಾವುದೇ ನಿರ್ಬಂಧಗಳಿಲ್ಲದೆ ಮುಕ್ತವಾಗಿ ಕಬ್ಬು ಅರೆದು ಬೆಲ್ಲ ಮಾಡುವ ಸೌಲಭ್ಯ ಕಲ್ಪಿಸಲು ಏರ್ಪಡಿಸಬೇಕೆಂದು ಬೇಡುತ್ತೇವೆ.

ತಮ್ಮ ಆತ್ಮೀಯರೂ, ತಮ್ಮೆಲ್ಲ ಕಾರ್ಯಗಳಲ್ಲೂ ತಮಗೆ ಬೆಂಬಲವಾಗಿ ನಿಂತು ಜಿಲ್ಲೆಯ ರೈತ-ರೈತಕಾರ್ಮಿಕರ ಸರ್ವತೋಮುಖ ಪ್ರಗತಿಗೂ, ಜಿಲ್ಲೆಯ ಸಹಕಾರ ಕ್ಷೇತ್ರದ ಅದ್ವಿತೀಯ ಸ್ವಚ್ಛ ಬೆಳವಣಿಗೆಗೂ ಕಾರಣಪುರುಷರಾದ ಶ್ರೀಮಾನ್ ಎಚ್.ಡಿ. ಚೌಡಯ್ಯನವರು ಈ ಸಮಾರಂಭದ ಅಧ್ಯಕ್ಷತೆ ವಹಿಸಿರುವುದು ಸರ್ವ ಸಮಂಜಸ ಮತ್ತು ಸಂತೋಷದಾಯಕ ವಿಷಯವಾಗಿದೆ.

ನಮ್ಮ ಜಿಲ್ಲೆಯಲ್ಲಿನ ಅತ್ಯವಸರವಾಗಿ ಪರಿಹಾರವಾಗಬೇಕಾದ ರೈತರ ಸಮಸ್ಯೆಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಬಗೆಹರಿಸಿಕೊಡುವಿರೆಂಬ ಆಶಯದಿಂದಿರುವ ನಮಗೆ ನಿರಾಶೆ ಮಾಡಲಾರಿರಿ ಎಂದು ಭಾವಿಸಿ ಭರವಸೆ ನೀಡಬೇಕೆಂದು ಪ್ರಾರ್ಥಿಸುತ್ತೇವೆ.

ನಮ್ಮ ಆಹ್ವಾನವನ್ನು ಮನ್ನಿಸಿ ಈ ಸಮಾರಂಭದಲ್ಲಿ ಭಾಗವಹಿಸಿ ನಮ್ಮೆಲ್ಲರಿಗೂ ಅಮಿತಾನಂದವನ್ನುಂಟುಮಾಡಿರುವ ತಮಗೆ ಕೃತಜ್ಞತೆಗಳನ್ನರ್ಪಿಸುತ್ತ ತಮಗೂ. ತಮ್ಮ ಕುಟುಂಬ ವರ್ಗದವರಿಗೂ ದಯಾಮಯನಾದ ಭಗವಂತನು ಆಯುರಾರೋಗ್ಯ ಶ್ರೇಯಸ್ಸುಗಳನ್ನು ದಯಪಾಲಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.



ದಿನಾಂಕ 10.4.1971 ರಂದು ಉಪರಾಷ್ಟ್ರಪತಿ ಜಿ. ಎಸ್. ಪಾಠಕ್‌ರವರು 'ನೆಹರೂ ಸಾಕ್ಷರತಾ ಪ್ರಶಸ್ತಿ' ಯನ್ನು ಪ್ರದಾನ ಮಾಡಿದ ಸಂದರ್ಭದಲ್ಲಿ ಭಾರತೀಯ ವಯಸ್ಕರ ಶಿಕ್ಷಣ ಸಂಘದ ಉಪಾಧ್ಯಕ್ಷನೂ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷನೂ ಆದ ನಾನು ಮಾಡಿದ ಇಂಗ್ಲಿಷ್ ಭಾಷಣದ ಕನ್ನಡಾನುವಾದ.

ಭಾರತದ ಉಪರಾಷ್ಟ್ರಪತಿಗಳಾದ ಗೌರವಾನ್ವಿತ ಶ್ರೀ ಜಿ. ಎಸ್. ಪಾಠಕ್‌ರವರೆ, ಭಾರತೀಯ ವಯಸ್ಕರ ಶಿಕ್ಷಣ ಸಂಘದ ಅಧ್ಯಕ್ಷರು ಹಾಗೂ ಸದಸ್ಯರುಗಳೆ, ಮಹಿಳೆಯರೆ ಮತ್ತು ಮಹನೀಯರೆ,

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಪರವಾಗಿ 1970 ರ ನೆಹರು ಸಾಕ್ಷರತಾ ಪ್ರಶಸ್ತಿಯನ್ನು ಸ್ವೀಕರಿಸುವ ಅಪೂರ್ವ ಸುಯೋಗ ಮತ್ತು ಅಸಾಧಾರಣ ಗೌರವ ನನ್ನ ಪಾಲಿನದಾಗಿದೆ. ಇದೊಂದು ಸ್ಮರಣೀಯ ಸಂದರ್ಭ. ಭಾರತದ ಅಸಂಖ್ಯಾತ ಜನಸ್ತೋಮದ ನಿರಕ್ಷರತೆಯ ಬಗ್ಗೆ ಅತೀವ ವ್ಯಾಕುಲತೆಯನ್ನು ವ್ಯಕ್ತಪಡಿಸುತ್ತಿದ್ದ ಭಾರತದ ಹೆಮ್ಮೆಯ ಪುತ್ರ ಪಂಡಿತ್ ಜವಹರ್‌ಲಾಲ್ ನೆಹರೂರವರ ಹೆಸರಿನಲ್ಲಿ ಈ ಪ್ರಶಸ್ತಿ ಪ್ರದಾನ ಮಾಡುತ್ತಿರುವುದು ಸಮಂಜಸವೇ ಆಗಿದೆ. ನಮ್ಮ ದೇಶದಲ್ಲಿನ ಶ್ರೀಸಾಮಾನ್ಯರಿಗೆ ಶಿಕ್ಷಣ ಒದಗಿಸಿಕೊಡುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡ ವಿವಿಧ ಸಂಘ ಸಂಸ್ಥೆಗಳಿಗೆ ಅವರೊಂದು ಸ್ಫೂರ್ತಿಯ ಆಕರವಾಗಿದ್ದರು. ಈ ಸಂದರ್ಭದಲ್ಲಿ ಆ ಹಿರಿಯ ಚೇತನವನ್ನು ಅತ್ಯಂತ ಪೂಜ್ಯಭಾವನೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಈ ಶತಮಾನದ ಪ್ರಾರಂಭದಲ್ಲಿಯೇ ನಮ್ಮ ರಾಜ್ಯದಲ್ಲಿ ಶಿಲ್ಪಿ, ರಾಜ್ಯತಂತ್ರಜ್ಞ ಡಾ॥ ಎಂ. ವಿಶ್ವೇಶ್ವರಯ್ಯನವರು ವಯಸ್ಕರ ಅಕ್ಷರ ಪ್ರಚಾರಕಾರ್ಯ ಪ್ರಾರಂಭಿಸಿ, ಈ ಕಾರ್ಯಕ್ಷೇತ್ರದಲ್ಲಿ ನಮಗೆ ಮಾರ್ಗದರ್ಶಕರಾಗಿದ್ದಾರೆ. ಜನಸಾಮಾನ್ಯರ ಶಿಕ್ಷಣ ಪ್ರಥಮ ಪ್ರಾಶಸ್ತ್ಯ ಪಡೆದಿರಬೇಕೆಂಬುದನ್ನು ಡಾ॥ ವಿಶ್ವೇಶ್ವರಯ್ಯನವರು ಮನಗಂಡಿದ್ದರು. ಅದರಿಂದಾಗಿ ಅವರು ರಾಜ್ಯದಲ್ಲಿ ವಯಸ್ಕರಿಗಾಗಿ ರಾತ್ರಿಶಾಲೆಗಳನ್ನು ಇವುಗಳಿಗೆ ಪೂರಕವಾಗಿ ಸಂಚಾರಿ ಪುಸ್ತಕ ಭಂಡಾರಗಳನ್ನು ಪ್ರಾರಂಭಿಸಿದರು. ಅದೃಷ್ಟವಶಾತ್ ಅವರ ಈ ಪ್ರಯತ್ನಗಳು ಸತ್ವಶಾಲಿಯಾಗಿ ಬೆಳೆದು ಬಂದು, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಹೆಮ್ಮೆ ಪಡುವಂತಹ ಸೇವಾದಾಖಲೆಯನ್ನು ಪಡೆದಿರುತ್ತದೆ. ಡಾ॥ ವಿಶ್ವೇಶ್ವರಯ್ಯನವರು ಮೈಸೂರು ಹಾಗೂ ರಾಷ್ಟ್ರಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡು ಕೃತಜ್ಞತೆ

ಗಳನ್ನರ್ಪಿಸ ಬಯಸುತ್ತೇನೆ.

ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆಯು ಅಕ್ಷರ ಪ್ರಚಾರ ಮತ್ತು ವಯಸ್ಕರ ಶಿಕ್ಷಣ ರಂಗಗಳಲ್ಲಿ ಹಲವಾರು ಪ್ರಯೋಗಗಳನ್ನು ಸಂಶೋಧನೆಗಳನ್ನು ನಡೆಸಿದೆ. ಮುಂದುವರಿದು ಶಿಕ್ಷಣಕ್ಕೆ ಅನುಕೂಲವಾಗುವಂತೆ ವಿಶೇಷ ಕೇಂದ್ರಗಳನ್ನು ಸ್ಥಾಪಿಸಿದೆ. ನಮ್ಮ ವಿದ್ಯಾಪೀಠಗಳು ಗ್ರಾಮೀಣ ಯುವಕರ ತರಪೇತಿ ಕಾರ್ಯಕ್ರಮದಲ್ಲಿ ಪರಿಣಾಮ ಕಾರಿ ಸಂಸ್ಥೆಗಳಾಗಿವೆ. ಗ್ರಾಮೀಣ ಯುವಕರಿಗೆ ಸಮಗ್ರ ಸೇವಾಕಾರ್ಯವಲ್ಲಿ ಮುಂದಾಳತ್ವವಹಿಸಲು ಬೇಕಾಗುವ ಅವಶ್ಯಕ ಶಿಕ್ಷಣ ಒದಗಿಸಲಾಗುವುದು. ಈವರೆಗೆ ಶಿಕ್ಷಣ ಪಡೆದಿರುವ 3500 ಮಂದಿ ಗ್ರಾಮೀಣ ಯುವಕರು, ಗ್ರಾಮಗಳಲ್ಲಿಯೇ ನೆಲಸಿ ರಾಜ್ಯದ ವಿವಿಧ ಭಾಗಗಳಲ್ಲಿ ವಯಸ್ಕರ ಶಿಕ್ಷಕರಂತೆ ಕೆಲಸ ಮಾಡುತ್ತಿದ್ದಾರೆಂದು ತಿಳಿಸಲು ನನಗೆ ಸಂತಸವೆನಿಸಿದೆ.

ಕೆಲವುಕಾಲ ನಮ್ಮ ರಾಜ್ಯದ ಗೌರವಾನ್ವಿತ ರಾಜ್ಯಪಾಲರಾಗಿದ್ದು, ನಮ್ಮ ಸಂಸ್ಥೆಯು ನಡೆಸುತ್ತಿರುವ ಹಲವಾರು ಕೇಂದ್ರಗಳನ್ನು ಸಂದರ್ಶಿಸಿ ಪ್ರೋತ್ಸಾಹಿಸಿರುವ ತಮ್ಮ ಅಮೃತಹಸ್ತದಿಂದ ಈ ಪ್ರಶಸ್ತಿಯನ್ನು ಪಡೆಯಲು ನನಗೆ ಹೆಮ್ಮೆ ಎನಿಸಿದೆ. ನಮ್ಮ ಸಂಸ್ಥೆಗೆ ವಿಶಿಷ್ಟ ಗೌರವ ಸಂದಿದೆ.

ಅನಕ್ಷರತೆ ಮತ್ತು ಆರ್ಥಿಕ ಅಭಿವೃದ್ಧಿ ಒಟ್ಟಿಗೆ ಇರಲು ಸಾಧ್ಯವಿಲ್ಲ ಎಂಬುದು ನೆಲೆಗೊಂಡಿರುವ ಸತ್ಯವಾಕ್ಯ. ಸ್ವಾತಂತ್ರ್ಯಾನಂತರ ಅಕ್ಷರ ಪ್ರಚಾರ ಕಾರ್ಯಕ್ರಮಗಳು ನಮ್ಮ ದೇಶದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿವೆ. ಪ್ರಜಾಪ್ರಭುತ್ವ ಪದ್ಧತಿಯ ಯಶಸ್ಸಿಗೆ ಅರಿವುಳ್ಳ ನಾಗರಿಕ ಅತ್ಯವಶ್ಯಕ ಎಂಬುದನ್ನು ಪುನಃ ಪುನಃ ಹೇಳಬೇಕಾ ದ್ದಿಲ್ಲ. ಜೀವನದ ನಾಲ್ಕು ಮುಖ್ಯ ಅವಶ್ಯಕತೆಗಳಲ್ಲಿ ಅಂದರೆ ಆಹಾರ, ಅರಿವೆ, ವಸತಿ ಮತ್ತು ಶಿಕ್ಷಣ–ಇವುಗಳ ಪೈಕಿ ಜನಕಲ್ಯಾಣ ರಾಷ್ಟ್ರದಲ್ಲಿ ನನ್ನ ನಮ್ರ ಅಭಿಪ್ರಾಯದಂತೆ ಕೊನೆಯದು ಅಂದರೆ ಶಿಕ್ಷಣ ಹೃದಯವಿದ್ದಂತೆ ಹೃದಯವು ಅಸ್ವಸ್ಥವಾದರೆ ದೇಹದ ಯಾವ ಭಾಗವೂ ಸರಿಯಾಗಿ ಕೆಲಸ ಮಾಡುವುದಿಲ್ಲ. ಅಂತೆಯೇ ಎಷ್ಟೇ ಸೌಲಭ್ಯಗಳಿದ್ದರೂ ಶಿಕ್ಷಣ ತಿಳಿವು ಇಲ್ಲದ ನಾಗರಿಕ ನಿರ್ಜೀವಿ ಯಾದಂತೆಯೆ. ಅದೂ ಅಲ್ಲದೆ ಶಿಕ್ಷಿತ ಜನತೆಯಿಲ್ಲದೆ ಕುಟುಂಬ ಕಲ್ಯಾಣ, ಹಸಿರು ಕ್ರಾಂತಿ ಮುಂತಾದ ಅಭಿವೃದ್ಧಿ ಕಾರ್ಯಗಳು ಯಶಸ್ವಿಯಾಗುವುದು ದುಸ್ಸಾಧ್ಯ. ನಮ್ಮಲ್ಲಿನ ಪ್ರಜಾಪ್ರಭುತ್ವ ಪದ್ಧತಿಯು ಈಗಿರುವಂತೆ–ಒಂದು–ಬಫೆಊಟ ವ್ಯವಸ್ಥೆ ಇದ್ದಂತೆ. ಮುನ್ನುಗ್ಗುವ ಛಾತಿ ಉಳ್ಳವರು ತಮಗೆ ಬೇಕಾದ್ದನ್ನು, ಬೇಕಾದಷ್ಟು ಪಡೆಯುವರು. ಸಂಕೋಚ ಪ್ರಕೃತಿಯವರು ಹಿಂದೆ ಬೀಳುವರು, ಕೆಲವೊಮ್ಮೆ ಉಪ ವಾಸವೂ ಇರಬೇಕಾಗುವುದು. ನಮ್ಮ ದೇಶದ ಅನಕ್ಷರಸ್ಥ ಜನ ಈ ಸಂಕೋಚ ಪ್ರಕೃತಿಯವರಾಗಿದ್ದು ಸದಾ ಪರಿತಪಿಸುವವರಾಗಿದ್ದಾರೆ. ನಮಗೆ ತಿಳಿದಿರುವಂತೆ ಅಭಿವೃದ್ಧಿಹೊಂದಿದ ರಾಷ್ಟ್ರಗಳು ಅಕ್ಷರ ಪ್ರಚಾರ ಕಾರ್ಯಕ್ರಮಗಳಿಗೆ ಅತ್ಯಂತ ಹೆಚ್ಚಿನ

ಪ್ರಾಮುಖ್ಯತೆಯನ್ನು ನೀಡಿವೆ. ಆದ್ದರಿಂದಲೇ ಅಲ್ಲಿನ ಸಾಧನೆಗಳು ಗಣನೀಯವಾದುದಾಗಿವೆ. ಭಾರತದಲ್ಲಿ ಅನಕ್ಷರತೆಯ ನಿರ್ಮೂಲನಕ್ಕೆ ಸಾರ್ವತ್ರಿಕ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲಾಗುತ್ತಿದೆ. ವಯಸ್ಕರ ಶಿಕ್ಷಣ ಮತ್ತು ಅಕ್ಷರ ಪ್ರಚಾರ ಕಾರ್ಯಕ್ರಮಗಳಿಗೆ ಹೊಸ ಆಯಾಮವನ್ನು ಕಲ್ಪಿಸಿಕೊಟ್ಟಿರುವ, ಕೇಂದ್ರ ವಿದ್ಯಾಸಚಿವ ಡಾ|| ವಿ. ಕೆ. ಆರ್. ವಿ. ರಾವ್‌ರವರು ರಾಷ್ಟ್ರಮಟ್ಟದಲ್ಲಿ ವಯಸ್ಕರ ಶಿಕ್ಷಣ ಮಂಡಳಿಯನ್ನು ಸ್ಥಾಪಿಸಿರುವುದು ಒಂದು ಸಾಹಸ ಪ್ರಯತ್ನವೇ ಸರಿ. ಆದರೆ ಸರ್ಕಾರಿ ಪ್ರಯತ್ನವೊಂದೇ ಸಮಸ್ಯೆ ಪರಿಹಾರಕ್ಕೆ ಸಾಕಾಗಲಾರದು.

ಕರ್ನಾಟಕ ರಾಜ್ಯದಲ್ಲಿ ವಯಸ್ಕರ ಶಿಕ್ಷಣ ಸಮಿತಿಯು ಅಧಿಕಾರಿ ಮತ್ತು ಖಾಸಗಿ ಕಾರ್ಯಕರ್ತರ ಮಧುರ ಸಮ್ಮಿಲನವಾಗಿದ್ದು ಅವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಈ ಕಾರ್ಯ ಚಟುವಟಿಕೆಯಲ್ಲಿ ಭಾಗಿಗಳಾಗುವಂತೆ ಮಾಡಲಾಗಿದೆ. ನಾನು ಮೊದಲು ಉಲ್ಲೇಖಿಸಿದ ವಿದ್ಯಾಪೀಠ ಯೋಜನೆ ಗಮನಾರ್ಹ ಪ್ರಗತಿ ಸಾಧಿಸಿದ್ದು ನಾವು ಹೆಮ್ಮೆ ಪಡುವಂತಾಗಿದೆ. 1970ರಲ್ಲಿ ಭುವನೇಶ್ವರದಲ್ಲಿ ಸಮಾವೇಶಗೊಂಡಿದ್ದ ರಾಷ್ಟ್ರೀಯ ವಯಸ್ಕರ ಶಿಕ್ಷಣ ಸಮ್ಮೇಳನ ಮತ್ತು ಇತ್ತೀಚೆಗೆ ಹೈಫಿಯಲ್ಲಿ ಸಮಾವೇಶಗೊಂಡಿದ್ದ ಅಂತರರಾಷ್ಟ್ರೀಯ ವಿಚಾರಗೋಷ್ಠಿ ಅನುಕ್ರಮವಾಗಿ ಈ ವಿದ್ಯಾಪೀಠ ಯೋಜನೆಯನ್ನು ರಾಷ್ಟ್ರದ ಇತರೆ ರಾಜ್ಯಗಳಲ್ಲಿ, ಮತ್ತು ವಿಶ್ವದ ಅಭಿವೃದ್ಧಿ ಶೀಲ ಇತರ ರಾಷ್ಟ್ರಗಳಲ್ಲಿ ಅನುಷ್ಠಾನಕ್ಕೆ ತರಲು ಶಿಫಾರ್ಸು ಮಾಡುವ ನಿರ್ಣಯಗಳನ್ನು ಅಂಗೀಕರಿಸಿವೆ. ನಮ್ಮ ಸಮಿತಿಯು ವಿದ್ಯಾಪೀಠಗಳಲ್ಲಿನ ಪ್ರಗತಿಯಿಂದ ಪ್ರೋತ್ಸಾಹಗೊಂಡು ರಾಜ್ಯದಲ್ಲಿ ಈ ಕಾರ್ಯಕ್ರಮವನ್ನು ವಿಸ್ತರಿಸಲು ಆಲೋಚಿಸುತ್ತಿರಲಾಗಿದೆ. ಸಮಿತಿಯ ಮತ್ತೊಂದು ಮುಖ್ಯಕೊಡುಗೆ ಎಂದರೆ ಅದರ ಅಭಿವೃದ್ಧಿಗೊಂಡ ಪ್ರಕಾಶನ ವಿಭಾಗ. ಈ ವಿಭಾಗವು ಅತ್ಯಂತ ಜನಪ್ರಿಯವಾಗಿದ್ದು ನೂತನ ಅಕ್ಷರಸ್ಥರಿಗೆ ಸರಿಹೊಂದುವ ಹಾಗೂ ಇತರೆ ಸಾರ್ವಜನಿಕ ಓದುಗರ ಅಭಿರುಚಿಗೆ ತಕ್ಕಂತಹ ವಿಷಯಗಳಿಂದ ಕೂಡಿದ ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ. ಸಮಿತಿಯವರೇ ರಾಜ್ಯಾದ್ಯಂತ ನಡೆಸುತ್ತಿರುವ 2600 ಗ್ರಾಮ ಪುಸ್ತಕ ಭಂಡಾರಗಳ ಮೂಲಕ ಓದುಗರಿಗೆ ಈ ಪುಸ್ತಕಗಳು ದೊರಕುವಂತೆ ಮಾಡಲಾಗಿದೆ. ಹಲವಾರು ದಾನಿಗಳು ಪ್ರಕಟಣೆಗಳನ್ನು ಹೊರತರಲು ಉದಾರವಾಗಿ ನೆರವಾಗಿದ್ದಾರೆ.

ಕಳೆದ ಮೂರು ದಶಕಗಳಿಂದಲೂ ರಾಜ್ಯ ಸರ್ಕಾರಗಳು ಸಮಿತಿಯನ್ನು ಪೂರ್ಣ ವಿಶ್ವಾಸಕ್ಕೆ ತೆಗೆದುಕೊಂಡು–ಕಾರ್ಯಚಟುವಟಿಕೆಗಳನ್ನು ಬಲಯುತಗೊಳಿಸಲು ನೆರವಾಗಿವೆ. ಹಾಲಿ ಕೇಂದ್ರ ರೈಲ್ವೆಸಚಿವರಾಗಿರುವ ಮಾನ್ಯ ಶ್ರೀ ಕೆ. ಹನುಮಂತಯ್ಯನವರು, ರಾಜ್ಯದ ಮುಖ್ಯ ಮಂತ್ರಿಯಾಗಿದ್ದಾಗ ಅಕ್ಷರಪ್ರಚಾರ ಕಾರ್ಯಕ್ಕೆ ಪ್ರೋತ್ಸಾಹ ಕೊಟ್ಟಿರುವುದೇ ಅಲ್ಲದೆ 'ಮಹಾಭಾರತ'ದಂತಹ ಕೃತಿಯ ಜನಪ್ರಿಯ ಸಂಚಿಕೆಯು ಹೊರಬರಲು ವಿಶೇಷ ನೆರವು ನೀಡಿದ್ದಾರೆ. ಶ್ರೀ ಹನುಮಂತಯ್ಯನವರ ಔದಾರ್ಯದಿಂದಾಗಿ

ಇಂದು ಪ್ರತಿಯೊಂದು ಅಕ್ಷರಸ್ಥ ಕುಟುಂಬವೂ ಈ ಪ್ರಕಟಣೆಯನ್ನು ಅಮೂಲ್ಯ ವಸ್ತುವೆಂದು ಪರಿಗಣಿಸಿ ಪಡೆದುಕೊಂಡಿದೆ. ಶ್ರೀ ಹನುಮಂತಯ್ಯನವರು ಸಮಿತಿಯ ಕಾರ್ಯಚಟುವಟಿಕೆಗಳನ್ನು ಸದಾ ಪ್ರೋತ್ಸಾಹಿಸಿದ್ದಾರೆ. ಪ್ರಕಟಣಾ ವಿಭಾಗಕ್ಕೆ ವಿಶೇಷ ರೀತಿಯ ಪ್ರೋತ್ಸಾಹ ದೊರಕಿಬಂದಿದೆ. ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರೂ ಅವರ ಸರ್ಕಾರವೂ ಹೆಚ್ಚಿನ ಧನಸಹಾಯ ನೀಡುವುದರ ಮೂಲಕ ಸಮಿತಿಯ ಕಾರ್ಯಚಟುವಟಿಕೆಗಳನ್ನು ಪ್ರೋತ್ಸಾಹಿಸಿದ್ದಾರೆ. ಶಿಕ್ಷಣ ಸಚಿವ ಶ್ರೀ ಕೆ. ವಿ. ಶಂಕರಗೌಡರು ಓರ್ವ ಅಪರೂಪದ ಶಿಕ್ಷಣವೇತ್ತರು. ಅವರು ನಮ್ಮ ಸಮಿತಿಯ ಕೆಲಸ ಕಾರ್ಯಗಳ ಬಗ್ಗೆ ಅತೀವ ಆಸಕ್ತಿ ಹೊಂದಿದ್ದು ಪ್ರೋತ್ಸಾಹಿಸಿದ್ದಾರೆ. ಅವರ ಅಧಿಕಾರಾವಧಿಯಲ್ಲಿ ಸಮಿತಿಯು ಉನ್ನತ ಮಟ್ಟಕ್ಕೆ ಬೆಳೆಯುವಂತಾಯಿತು. ರಾಜ್ಯದಲ್ಲಿ ಕಾನೂನುಬದ್ಧ ವಯಸ್ಕರ ಶಿಕ್ಷಣ ಮಂಡಳಿಯನ್ನು ರಚಿಸುವ ಬಗ್ಗೆ ಕರಡು ಮಸೂದೆಯನ್ನು ತಯಾರಿಸಲಾಗಿದ್ದು ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ. ಮುಂದಿನ ಮಂತ್ರಿಗಳು ಇದು ಕಾರ್ಯಗತವಾಗುವಂತೆ ಗಮನಿಸುವರೆಂದು ನಂಬಿದ್ದೇನೆ. ಸಮಿತಿಯ ಸಿಬ್ಬಂದಿ ವರ್ಗಕ್ಕೆ ತ್ರಿವಿಧ ಸೌಲಭ್ಯಗಳು ಅನ್ವಯಿಸುವಂತೆ ಮಾಡಿ ಕೆಲಸಗಾರರಿಗೆ ಸೇವಾ ಭದ್ರತೆ ಒದಗಿಬರಲು ಶ್ರೀ ಶಂಕರಗೌಡರು ಕಾರಣರಾಗಿದ್ದಾರೆ.

ನೆಹರು ಸಾಕ್ಷರತಾ ಪ್ರಶಸ್ತಿ ಸ್ವೀಕಾರದ ಸವಿನೆನಪಿನಲ್ಲಿ ಸಮಿತಿಯು ಒಂದು ಸಂಸ್ಮರಣ ಸೌಧವನ್ನು ನಿರ್ಮಿಸಲು ತೀರ್ಮಾನಿಸಿದೆ. ದಿವಂಗತ ನೆಹರೂರವರ ಹೆಸರಿನಲ್ಲಿ ನಿರ್ಮಿಸಲಾಗುವ ಈ ಕಟ್ಟಡದ ನಿರ್ಮಾಣ ವೆಚ್ಚ ಒಂದೂವರೆ ಲಕ್ಷರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಸಂದರ್ಭದಲ್ಲಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಈ ಕಾರ್ಯಕ್ಕಾಗಿ ಉದಾರ ಧನಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಉಪರಾಷ್ಟ್ರಪತಿಗಳು ಈ ಕೊಡುಗೆಗಳು ದೊರಕೊಳ್ಳುವಂತೆ ಸಹಾಯ ಮಾಡಬೇಕಾಗಿ ಅತ್ಯಂತ ವಿನಮ್ರನಾಗಿ ಬೇಡಿಕೊಳ್ಳುತ್ತೇನೆ. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊಫೆಸರ್ ದೇ. ಜವರೇಗೌಡರು ವಯಸ್ಕರ ಶಿಕ್ಷಣವು ತಮ್ಮ ವಿಶ್ವವಿದ್ಯಾನಿಲಯದ ಒಂದು ಅಂಗವೋ ಎನ್ನುವಂತೆ ಸಕಾಲಿಕ ಸಹಕಾರ ಸಹಾಯ ಮಾಡುತ್ತ ಸಮಿತಿಯ ಅಭಿವಂದನೆಗೆ ಪಾತ್ರರಾಗಿದ್ದಾರೆಂದು ತಿಳಿಸಲು ಸಂತೋಷವಾಗುವುದು.

ಅಖಿಲಭಾರತ ವಯಸ್ಕರ ಶಿಕ್ಷಣ ಸಮಿತಿಯವರು ಈ ವರ್ಷದ ನೆಹರು ಸಾಕ್ಷರತಾ ಪ್ರಶಸ್ತಿಯನ್ನು ನಮಗೆ ಕೊಡಮಾಡಿರುವ ಬಗ್ಗೆ ಅವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ. ದೇಶದಲ್ಲಿ ವಯಸ್ಕರ ಶಿಕ್ಷಣ ಮತ್ತು ಅಕ್ಷರ ಪ್ರಚಾರ ಕಾರ್ಯಗಳ ಮುನ್ನಡೆಗಾಗಿ ಈ ಸಂಸ್ಥೆಯು ಪ್ರಾಮಾಣಿಕ ಸೇವೆಯನ್ನು ಮಾಡುತ್ತ ಬಂದಿದೆ. ಸಂಸ್ಥೆಯ ಅಧ್ಯಕ್ಷರಾದ ಡಾ॥ ಎಂ. ಎಸ್. ಮೆಹತಾ, ಪ್ರಧಾನ ಕಾರ್ಯದರ್ಶಿ ಎಸ್. ಸಿ. ದತ್ತ ಮತ್ತು ಇತರೆ ಸದಸ್ಯರು ದೇಶದಲ್ಲಿ ವಯಸ್ಕರ ಶಿಕ್ಷಣ ಕಾರ್ಯ ಚಟುವಟಿಕೆಗಳ ಮಾರ್ಗದರ್ಶಕರಾಗಿ

ದುಡಿಯುತ್ತಿದ್ದಾರೆ.

ಈ ಸಂದರ್ಭದಲ್ಲಿ ನಮ್ಮ ಸಮಿತಿಯ ಮಾಜಿ ಅಧ್ಯಕ್ಷರುಗಳ, ಖಾಸಗಿ ಸದಸ್ಯರ ಮತ್ತು ನಿಷ್ಕಾಮಪಂತ ಕಾರ್ಯಕರ್ತರ ಅಪಾರ ಸೇವೆಯನ್ನು ಸ್ಮರಿಸುತ್ತ ಆ ಸೇವಾ ಫಲದಿಂದ ಈ ಗೌರವ ಸಂದಿರುವ ಬಗ್ಗೆ ಅವರಿಗೆಲ್ಲ ವಂದನೆ ಸಲ್ಲಿಸುತ್ತೇನೆ. ಇನ್ನೂ ಹೆಚ್ಚು ಉತ್ಸಾಹದಿಂದ ಮುಂಬರುವ ದಿನಗಳಲ್ಲಿ ಕೆಲಸ ಮಾಡೋಣ.

ಜೈ ಹಿಂದ್

ದಿನಾಂಕ 25-10-75ರಿಂದ 27-10-75ರವರೆಗೆ ಜಬ್ಬಲ್‌ಪುರದಲ್ಲಿ ಸಮಾವೇಶಗೊಂಡಿದ್ದ 28ನೆಯ ಅಖಿಲಭಾರತ ವಯಸ್ಕರ ಶಿಕ್ಷಣ ಸಮ್ಮೇಳನದಲ್ಲಿ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಮಾಜಿಅಧ್ಯಕ್ಷನೂ, ಭಾರತೀಯ ವಯಸ್ಕರ ಶಿಕ್ಷಣ ಸಂಘದ ಉಪಾಧ್ಯಕ್ಷನೂ ಆದ ನಾನು ಮಾಡಿದ ಇಂಗ್ಲಿಷ್ ಭಾಷಣದ ಕನ್ನಡಾನುವಾದ.

ಗೌರವಾನ್ವಿತ ಅಧ್ಯಕ್ಷರೆ, ಮಾನ್ಯ ಪ್ರತಿನಿಧಿಗಳೇ, ಮಹಿಳೆಯರೇ ಮತ್ತು ಮಹನೀಯರೇ,

ಹಲವಾರು ಅಡಚಣೆಗಳನ್ನು ಲೆಕ್ಕಿಸದೆ ಭಾರತೀಯ ವಯಸ್ಕರ ಶಿಕ್ಷಣ ಸಂಘದವರು ಪ್ರತಿವರ್ಷವೂ ಇಂತಹ ಸಮ್ಮೇಳನಗಳನ್ನು ವಿಚಾರಗೋಷ್ಠಿಗಳನ್ನು ನಡೆಸುತ್ತಿರುವ ಬಗ್ಗೆ ಸಂಘದ ಪದಾಧಿಕಾರಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಪ್ರತಿವರ್ಷವೂ ನಾವೆಲ್ಲರೂ ಸಮಾವೇಶಗೊಂಡು, ನಿರಕ್ಷರತೆಯ ಅಪಾಯಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಿ ಹಲವಾರು ಉಪಯುಕ್ತ ನಿರ್ಣಯಗಳನ್ನು ಅಂಗೀಕರಿಸುತ್ತಿರುವುದೇನೋ ನಿಜ. ಆದರೆ ಈ ಉಪಯುಕ್ತ ನಿರ್ಣಯಗಳು ವಿವಿಧ ಹಂತಗಳಲ್ಲಿ ಎಷ್ಟರ ಮಟ್ಟಿಗೆ ಕಾರ್ಯಗತವಾಗಿವೆ ಎಂಬ ಬಗ್ಗೆ ಯಾವುದೇ ಮೌಲ್ಯೀಕರಣ ನಡೆದಿರುವುದಿಲ್ಲ.

ಸೊಂಪಾಗಿ ಬೆಳೆದ ಹೊಲದಲ್ಲಿ ಬೆಳೆದ ಅನಪೇಕ್ಷಿತ ಕಳೆಯಂತೆ ಅನಕ್ಷರಸ್ಥರ ಸಂಖ್ಯೆ ದಿನೇ ದಿನೇ ಬೆಳೆಯುತ್ತಲೇ ಇದೆ. ವಿಪರೀತವಾಗಿ ಬೆಳೆದ ಕಳೆಯು ಮುಖ್ಯ ಬೆಳೆಯನ್ನೇ ನಾಶಗೊಳಿಸುವಂತೆ ಪ್ರಜಾಪ್ರಭುತ್ವ ಪದ್ಧತಿಯಲ್ಲಿ, ರಾಷ್ಟ್ರದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯ ದಾರಿಯಲ್ಲಿ ಈ ಅನಕ್ಷರಸ್ಥರು ಒಂದು ದೊಡ್ಡ ಅಡಚಣೆಯಾಗಿದ್ದಾರೆ. ಅಕ್ಷರ ಪ್ರಚಾರ ಕಾರ್ಯವನ್ನು ತೀವ್ರಗೊಳಿಸಬೇಕು. ಸರ್ಕಾರಗಳು 15 ರಿಂದ 25 ವಯಸ್ಸಿನೊಳಗಿನ ಎಲ್ಲ ಅನಕ್ಷರಸ್ಥರು ಒಂದು ನಿರ್ದಿಷ್ಟ ಅವಧಿಯಲ್ಲಿ ಅಕ್ಷರಸ್ಥರಾಗಬೇಕೆಂಬ ಹಾಗೂ ಪ್ರತಿಯೊಬ್ಬ ಅಕ್ಷರಸ್ಥನೂ ಅಕ್ಷರ ಪ್ರಚಾರ ಕಾರ್ಯದಲ್ಲಿ ತನ್ನನ್ನು ತಾನೇ ತೊಡಗಿಸಿಕೊಳ್ಳಬೇಕೆಂಬ ಬಗ್ಗೆ ಕಾನೂನು ರಚಿಸುವತ್ತ ಯೋಚಿಸಬೇಕಾಗಿದೆ.

ಸ್ವಾತಂತ್ರ್ಯಾನಂತರ ನಮ್ಮ ರಾಷ್ಟ್ರವು ಹಲವಾರು ಕ್ಷೇತ್ರಗಳಲ್ಲಿ ಯೋಜಿತ

ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಮುಂದುವರಿಯುತ್ತಿದೆ. ಆದರೆ ನಮ್ಮೆಲ್ಲರಿಗೂ ತಿಳಿದಿರುವಂತೆ ದೇಶದಲ್ಲಿನ ಎಲ್ಲ ಜನರೂ ಈ ಕಾರ್ಯಕ್ರಮಗಳಲ್ಲಿ ವೈಯಕ್ತಿಕವಾಗಿ ತೊಡಗಿಸಿಕೊಂಡು ಭಾಗವಹಿಸಿದ್ದಲ್ಲಿ ಪ್ರಗತಿಯ ವೇಗವು ಇನ್ನೂ ಗಮನೀಯ ವಾಗಿರುತ್ತಿದ್ದಿತು. ಎಲ್ಲರೂ ಅಕ್ಷರಸ್ಥರಾಗಿಲ್ಲದೆ ಈ ಕಾರ್ಯಕ್ರಮಗಳ ಉಪಯುಕ್ತತೆ, ಮತ್ತು ಪರಿಣಾಮಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವಾಗಿದೆ. ಯಾರ ಉದ್ಧಾರಕ್ಕಾಗಿ ಈ ಯೋಜನೆಗಳು ರೂಪಿತವಾಗಿವೆಯೊ ಅವರಲ್ಲಿ ಬಹುತೇಕ ಜನ, ಇವುಗಳನ್ನು ಪೂರ್ಣವಾಗಿ ಮತ್ತು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ಕೆಲವು ಸಂದರ್ಭ ಗಳಲ್ಲಿ ತಪ್ಪುಗ್ರಹಿಕೆಗೆ ಕಾರಣವಾಗುವಂತೆ ತಪ್ಪು ಅರ್ಥ ಕಲ್ಪಿಸುವ, ತಪ್ಪಾಗಿ ನಿರೂಪಿಸುವ ಸಂದರ್ಭ ಇದೆ. ಒಬ್ಬ ವಿದೇಶೀ ಪ್ರವಾಸಿಗನ ಸ್ವಾರಸ್ಯಕರ ಪ್ರಸಂಗ ಒಂದು ನೆನಪಿಗೆ ಬರುತ್ತಿದೆ. ಅದನ್ನು ತಮ್ಮೊಡನೆ ಹಂಚಿಕೊಳ್ಳಲು ಬಯಸಿದ್ದೇನೆ.

ಪ್ರವಾಸಿಗನಾಗಿ ಈ ದೇಶಕ್ಕೆ ಬಂದಿದ್ದ ವಿದೇಶೀಯನೊಬ್ಬ ಹುಣ್ಣಿಮೆ ಬೆಳದಿಂಗಳ ರಾತ್ರಿಯಲ್ಲಿ ತಾಜಮಹಲನ್ನು ವೀಕ್ಷಿಸಿ ಪುಳಕಗೊಂಡ. ಸುಂದರ ಕಟ್ಟಡದ ವಾಸ್ತು ಶಿಲ್ಪಕಲೆಯ ಬಗ್ಗೆ ಮೋಹಿತಗೊಂಡು ಅಲ್ಲಿಯೇ ಬಳಿಯಲ್ಲಿದ್ದವನೊಬ್ಬನನ್ನು ಇದನ್ನು ನಿರ್ಮಿಸಿದ ಶಿಲ್ಪಿ ಯಾರು ಎಂದು ಪ್ರಶ್ನಿಸಿದ–ಅದಕ್ಕುತ್ತರವಾಗಿ ಆತನು 'ಮಾಲುಂ ನಹೀ ಸಾಬ್' ಎಂದ. ಮುಗ್ಧತೆಯ ಉತ್ತರ ನನಗೆ ತಿಳಿಯದೆಂದು ಆಗಿದ್ದರು ಈ ಪ್ರವಾಸಿ ಅದನ್ನೇ ಶಿಲ್ಪಿಯ ಹೆಸರಿರಬಹುದೆಂದು ತಿಳಿದು ತನ್ನ ದಿನಚರಿಯಲ್ಲಿ ಭಾರತೀಯ ಖ್ಯಾತಿವೆತ್ತ ವಾಸ್ತುಶಿಲ್ಪಿಯ ಹೆಸರು 'ಮಾಲುಂ ನಹೀ ಸಾಬ್' ಎಂದು ಬರೆದುಕೊಂಡ. ಪ್ರವಾಸದ ಕಾಲದಲ್ಲಿ ಪ್ರಖ್ಯಾತ ಅಜಂತ ಎಲ್ಲೋರಾಗುಹಾಂತರ ದೇವಾಲಯಗಳಿಗೂ ಭೇಟಿಕೊಟ್ಟ. ಅಲ್ಲಿನ ಕೆತ್ತನೆ ಕೆಲಸವನ್ನು ಕಂಡು ಆನಂದ ಪರವಶ ನಾಗಿ ಅಲ್ಲಿಯೇ ಇದ್ದ ಭಾರತೀಯನೊಬ್ಬನನ್ನು ಇದನ್ನೆಲ್ಲ ಕೆತ್ತಿದವನಾರು ಎಂದ ಇವನ ಉತ್ತರವೂ 'ಮಾಲುಂ ನಹೀ ಸಾಬ್' ಎಂದೇ ಆಗಿತ್ತು. ಪ್ರವಾಸಿಗ ತಾಜ್ ಮಹಲ್ ನಿರ್ಮಿಸಿದ ಶಿಲ್ಪಿಯೆ ಇದನ್ನು ಕೆತ್ತಿರಬೇಕೆಂದು ತೀರ್ಮಾನಿಸಿದ ಅಂತೆಯೇ ತನ್ನ ದಿನಚರಿಯಲ್ಲಿ ಗುರ್ತಿಸಿಕೊಂಡ. ಅಲ್ಲಿಂದ ಮುಂಬಯಿ ನಗರಕ್ಕೆ ಬಂದಾಗ 'ಗೇಟ್‌ವೇ ಆಫ್ ಇಂಡಿಯಾ' ಬೃಹತ್ ನಿರ್ಮಾಣವನ್ನು ಕಂಡ—ಇದನ್ನು ನಿರ್ಮಿಸಿ ದವನಾರೆಂದು ತಿಳಿಯ ಬಯಸಿದ. ಅದೇ 'ಮಾಲುಂ ನಹೀ ಸಾಬ್'. ಪ್ರವಾಸಿಗನಿಗೆ ಯಾವುದೇ ಅನುಮಾನಕ್ಕೆಡೆ ಇಲ್ಲದೆ, ಮಾಲುಂನಹೀ ಸಾಬ್ ಎಂಬುವನೊಬ್ಬ ಮಹಾನ್ ಶಿಲ್ಪಿ ಎಂಬುದು ಮನವರಿಕೆಯಾಗಿಬಿಟ್ಟಿತು. ತನ್ನ ಭಾರತ ವಾಸ್ತವ್ಯದಲ್ಲಿ ಆತನನ್ನು ಭೇಟಿಯಾಗಬೇಕೆಂದೇ ತೀರ್ಮಾನಿಸಿಬಿಟ್ಟ. ನಗರದಲ್ಲಿ ಮುಂದೆ ನಡೆದಿದ್ದಾಗ ಒಂದು ಭಾರಿ ಜನಸಮೂಹದಿಂದ ಕೂಡಿದ ಶವಯಾತ್ರೆಯನ್ನು ಗಮನಿಸಿದ. ಅಂತಿಮಯಾತ್ರೆ ಯಲ್ಲಿ ಭಾಗವಹಿಸಿದ್ದವರ ಸಮೂಹವನ್ನು ಕಂಡು ಈತನೊಬ್ಬ ಮಹಾನ್ ವ್ಯಕ್ತಿಯೇ ಇರಬೇಕೆಂದು ತಿಳಿದು ಅಲ್ಲಿಯೇ ಇದ್ದವನೊಬ್ಬನನ್ನು ಗತಿಸಿದ ಈ ಮಹಾ ವ್ಯಕ್ತಿ

ಯಾರೆಂದು ಕೇಳಿದ— ಮತ್ತೊಮ್ಮೆ ಅದೇ ಉತ್ತರ 'ಮಾಲುಂ ನಹೀ ಸಾಬ್' ಖ್ಯಾತ ಶಿಲ್ಪಿ 'ಮಾಲುಂ ನಹೀ ಸಾಬ್' ಎಂಬುವರು ಮರಣಹೊಂದಿರುತ್ತಾರೆಂಬ ತೀರ್ಮಾನಕ್ಕೆ ಬಂದ ಪ್ರವಾಸಿಗ, ಶವಯಾತ್ರೆ ಮೆರವಣಿಗೆ ಮಧ್ಯೆಹೋಗಿ ಟೋಪ್ಪಿಗೆ ತೆಗೆದು, ಅಂತಿಮ ನಮನಗಳನ್ನು ಸಲ್ಲಿಸಿದ—ಅಷ್ಟೇ ಅಲ್ಲ ತನ್ನ ದೇಶದ ಅಧ್ಯಕ್ಷನಿಗೆ ಭಾರತದಲ್ಲಿ ಒಬ್ಬ ಖ್ಯಾತ ಶಿಲ್ಪಿಯ ಅಂತಿಮಯಾತ್ರೆಯಲ್ಲಿ ತಮ್ಮ ದೇಶದ ಪರವಾಗಿ ಪಾಲ್ಗೊಂಡಿರುವುದಾಗಿ ತಂತಿ ಸಂದೇಶ ಕಳುಹಿಸಿಯೇ ಬಿಟ್ಟ.

ನಮ್ಮ ಅನಕ್ಷರಸ್ಥ ಸೋದರರು ನಮ್ಮ ರಾಷ್ಟ್ರದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಹೀಗೆಯೇ.

ಮಿತ್ರರೆ, ನಮ್ಮ ನೆಚ್ಚಿನ ಪ್ರಧಾನಿಯವರು ಮಹಾತ್ಮಾಗಾಂಧಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಆಧರಿಸಿ ಬಡಜನರ, ದಲಿತರ ಉದ್ಧಾರಕ್ಕಾಗಿ ಇಪ್ಪತ್ತು ಅಂಶಗಳ ಕಾರ್ಯಕ್ರಮವನ್ನು ಘೋಷಿಸಿದ್ದಾರೆ—ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯಲ್ಲಿ ತಾಯಿಗೊಂದು ವಿಶಿಷ್ಟ ಸ್ಥಾನವಿದೆ. ನಮ್ಮ ಪ್ರೀತಿಯ ದೇಶವನ್ನು ತಾಯಿನಾಡು ಎಂದೇ ಕರೆಯುತ್ತೇವೆ. ನಮ್ಮ ಭಾಷೆಯನ್ನು ತಾಯಿ ಭಾಷೆ ಎಂದು ಕರೆಯುತ್ತೇವೆ. ಶ್ರೀಮತಿ ಇಂದಿರಾಗಾಂಧಿಯವರನ್ನು ಭಾರತೀಯರೆಲ್ಲರೂ ತಾಯಿ ಎಂಬ ಪೂಜ್ಯ ಭಾವನೆಯಿಂದ ಕಾಣುತ್ತಿದ್ದಾರೆ. ಅಂತೆಯೇ ತಮ್ಮ ಮಕ್ಕಳೆಲ್ಲರೂ ಆರೋಗ್ಯದಿಂದ ತಿಳುವಳಿಕೆಯುಳ್ಳವರಾಗಿ ಬೆಳೆಯಬೇಕೆಂಬುದು ತಾಯಿಯ ಆಶಯವಾಗಿದೆ. ಈ ಸಮ್ಮೇಳನದ ಅಧ್ಯಕ್ಷರು ನಾಲ್ಕು ಅಥವಾ ಐದು ಸದಸ್ಯರ ಒಂದು ನಿಯೋಗವನ್ನು ಕರೆದುಕೊಂಡು ಪ್ರಧಾನಮಂತ್ರಿಗಳು ಮತ್ತು ಶಿಕ್ಷಣ ಸಚಿವರನ್ನು ಕಂಡು ಅನಕ್ಷರತೆಯ ನಿರ್ಮೂಲವನ್ನು 21ನೆಯ ಕಾರ್ಯಕ್ರಮವಾಗಿ ಸೇರಿಸಿಕೊಳ್ಳುವಂತೆ ಪ್ರಾರ್ಥಿಸಿಕೊಳ್ಳಬೇಕು—ನಮ್ಮ ನೆಚ್ಚಿನ ಪ್ರಧಾನಿಯವರು ಇದನ್ನು ಒಪ್ಪಿಕೊಳ್ಳುತ್ತಾರೆಂಬ ಪೂರ್ಣ ವಿಶ್ವಾಸ ನನಗಿದೆ.

ಈ ಸಮ್ಮೇಳನದಲ್ಲಿ ನಾನು ಕರ್ನಾಟಕ ರಾಜ್ಯ ಮತ್ತು ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿಯನ್ನು ಪ್ರತಿನಿಧಿಸುತ್ತಿದ್ದೇನೆ. ವಯಸ್ಕರ ಶಿಕ್ಷಣರಂಗದಲ್ಲಿ ಮೊದಲಿನ ಸ್ಥಾನದಲ್ಲಿರುವ ಈ ಸಂಸ್ಥೆಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ—ಮೈಸೂರು ನಗರದ ಕೆಲವು ವಿದ್ಯಾರ್ಥಿಗಳು ಮತ್ತು ದೇಶಾಭಿಮಾನಿ ವ್ಯಕ್ತಿಗಳಿಂದ ಪ್ರಾರಂಭಗೊಂಡ ಈ ಸಂಸ್ಥೆಯು ಇಂದು ಒಂದು ಹಿರಿಯ ಸಮಾಜ ಸೇವಾ ಸಂಸ್ಥೆಯಾಗಿ ಬೆಳೆದು ಅಕ್ಷರಪ್ರಚಾರ ಮತ್ತು ಸಮಾಜ ಶಿಕ್ಷಣಕಾರ್ಯದಲ್ಲಿ ತೊಡಗಿದೆ. ಪ್ರಸ್ತುತ ಈ ಸಂಸ್ಥೆಯ ಒಬ್ಬ ಉತ್ಸಾಹಿಯುವಕರಾದ ಶ್ರೀ ಕರಿಯಪ್ಪಗೌಡರ ಅಧ್ಯಕ್ಷತೆಯಲ್ಲಿ ಕೆಲಸಮಾಡುತ್ತಿದೆ—ಇವರು ತಮ್ಮ ಶಾಸನ ಸಭಾಸ್ಥಾನವನ್ನು ಇಂದಿನ ಮುಖ್ಯಮಂತ್ರಿ ಶ್ರೀ ದೇವರಾಜ ಅರಸರಿಗೆ ಅನುವುಮಾಡಿಕೊಡಲು ರಾಜಿನಾಮೆ ಇತ್ತು ತ್ಯಜಿಸಿದವರು. ಶ್ರೀ ಸಿ. ಹನುಮೇಗೌಡರು ಪ್ರಧಾನಕಾರ್ಯದರ್ಶಿಯಾಗಿ ಇವರಿಗೆ

ದಕ್ಷ ಸಹಾಯಕರಾಗಿದ್ದಾರೆ — ಇವರಿಬ್ಬರ ಪ್ರಯತ್ನದಿಂದಾಗಿ ರಾಜ್ಯದಾದ್ಯಂತ 'ಪ್ರತಿಯೊಬ್ಬರು ಇನ್ನೊಬ್ಬರನ್ನು ಅಕ್ಷರಸ್ಥರನ್ನಾಗಿ ಮಾಡಿ' ಎಂಬ ಯೋಜನೆ ಕಾರ್ಯ ರೂಪಕ್ಕೆ ಬಂದಿದೆ. ಹೆಚ್ಚು ಕಡಿಮೆ ಎಲ್ಲ ಪ್ರೌಢಶಾಲೆಗಳೂ ಈ ಯೋಜನೆಯಲ್ಲಿ ಭಾಗಿಗಳಾಗಿದ್ದು ಬಹುತೇಕ ವಿದ್ಯಾರ್ಥಿಗಳು ಈ ಕೆಲಸಮಾಡುತ್ತಿದ್ದಾರೆ. ಈ ಚಳುವಳಿ ಒಳ್ಳೆ ಫಲ ನೀಡುತ್ತಿದೆ. ಈ ಯೋಜನೆಯನ್ನು ಇತರೇ ರಾಜ್ಯಗಳೂ ಕೈಕೊಳ್ಳುವಂತಾಗಲೆಂದು ಆಶಿಸಿ, ಕೇಂದ್ರಸರ್ಕಾರವು ಬೃಹತ್ ರೀತಿಯಲ್ಲಿ ಆರ್ಥಿಕ ನೆರವು ಒದಗಿಸಬೇಕೆಂದು ಕೋರುತ್ತೇನೆ. 'ಜನತಾ ಮನೆ' ಯೋಜನೆಯು ವಿಸ್ತೃತ ರೀತಿಯಲ್ಲಿ ಬೆಳೆದು ಬರುತ್ತಿದೆ. ಲಕ್ಷಾಂತರ ಭಾರತೀಯರಿಗೆ ವಸತಿ ಸೌಕರ್ಯವನ್ನು ಕಲ್ಪಿಸಿಕೊಡಲಾಗುತ್ತಿದೆ. ಈ ಸಂದರ್ಭದಲ್ಲಿ ನನ್ನ ನಮ್ರ ಸಲಹೆಯೆಂದರೆ ಈ ಸೌಲಭ್ಯ ಪಡೆಯುವ ಪ್ರತಿಯೊಬ್ಬರೂ ಅಕ್ಷರಸ್ಥರಾಗಬೇಕೆಂದು ಒತ್ತಾಯಪಡಿಸಬೇಕೆಂಬು ದಾಗಿದೆ. ಇದು ಸಹಜವಾಗಿಯೂ ಅಕ್ಷರಪ್ರಚಾರಕ್ಕೆ ಉತ್ತೇಜನ ಕೊಡುತ್ತದೆ. ಸಾಮೂಹಿಕ ಅಕ್ಷರಪ್ರಚಾರ ಕಾರ್ಯಕ್ರಮ ನಮ್ಮ ದೇಶದಲ್ಲಿ ಜರೂರು ಆವಶ್ಯಕತೆ ಆಗಿದೆ. ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಇರುವಂತೆ ಅನಕ್ಷರತೆಯ ಅಪಾಯದ ಬಗ್ಗೆ ವಿಸ್ತೃತ ಪ್ರಚಾರಕಾರ್ಯ ನಡೆಯಬೇಕು. ಚಿತ್ರ ನಿರ್ಮಾಪಕರು ತಮ್ಮ ಚಿತ್ರ ಗಳಲ್ಲಿ ಅಕ್ಷರ ಜ್ಞಾನ ಮತ್ತು ಅದರ ಪ್ರಯೋಜನಗಳನ್ನು ಪರಿಚಯ ಮಾಡಿಕೊಡು ವಂತೆ ವಿನಂತಿಸಿಕೊಳ್ಳಬೇಕು. ಕರ್ನಾಟಕದ ಮಾಜಿ ಶಿಕ್ಷಣ ಸಚಿವರಾದ ಶ್ರೀ ಕೆ. ವಿ. ಶಂಕರಗೌಡರು ತಾವು ನಿರ್ಮಿಸಿದ 'ಕೂಡಿಬಾಳೋಣ' ಎಂಬ ಚಲನಚಿತ್ರದಲ್ಲಿ ಗ್ರಾಮೀಣ ಜೀವನದ ಪುನಶ್ಚೈತನ್ಯ ಕ್ರಮಗಳಲ್ಲಿ ಅಕ್ಷರಪ್ರಚಾರ ಕಾರ್ಯಕ್ಕೆ ಪ್ರಾಮುಖ್ಯತೆ ನೀಡಿದ್ದಾರೆ.

ದಿನಾಂಕ 10-4-71 ರಂದು ಗೌರವಾನ್ವಿತ ಉಪರಾಷ್ಟ್ರಪತಿಗಳ ಹಸ್ತದಿಂದ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಪರವಾಗಿ ಅಂದಿನ ಅದರ ಅಧ್ಯಕ್ಷನಾಗಿ ನೆಹರು ಸಾಕ್ಷರತಾ ಪ್ರಶಸ್ತಿಯನ್ನು ಸ್ವೀಕರಿಸುವ ಅಪರೂಪದ ಗೌರವ ಪಡೆದಿದ್ದೆ. ಆ ಸಂದರ್ಭದಲ್ಲಿ ಪ್ರಶಸ್ತಿಯೊಡನೆ ಗಣನೀಯ ಪ್ರಮಾಣದ ನಿಧಿಯನ್ನು ನೀಡಿ, ಪ್ರಶಸ್ತಿ ವಿಜೇತರು ಆ ಮಹಾನ್ ನಾಯಕನ ಹೆಸರು ಚಿರವಾಗಿ ಉಳಿಯಲು ಯಾವುದಾದರೂ ನೆನಪಿನಲ್ಲಿರಬಹುದಾದ ಕಾರ್ಯವನ್ನು ಕೈಕೊಳ್ಳಲು ನೆರವಾಗಬೇಕೆಂದು ಸೂಚಿಸಿದ್ದೆ. ಆ ಸಂದರ್ಭದಲ್ಲಿ ನಾನು ಹೇಳಿದ್ದಂತೆ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಪಂಪಾ ವಿದ್ಯಾಪೀಠದಲ್ಲಿ ನೆಹರೂರವರ ಹೆಸರಿನಲ್ಲಿ 1.5 ಲಕ್ಷ ಅಂದಾಜಿನ ಒಂದು ಸ್ಮಾರಕ ಭವನವನ್ನು ನಿರ್ಮಿಸಿದೆ. ಈ ಕಟ್ಟಡವನ್ನು ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ರೈಲ್ವೆ ಸಚಿವರಾಗಿದ್ದ ಶ್ರೀ ಕೆ. ಹನುಮಂತಯ್ಯನವರು ಪ್ರಾರಂಭೋತ್ಸವ ನೆರವೇರಿಸಿ ಆಗ ಕೊಟ್ಟಿದ್ದಾರೆ. ಈ ಕಟ್ಟಡವನ್ನು ಗ್ರಾಮೀಣ ಯುವಕರಿಗೆ ಶಿಕ್ಷಣ ನೀಡಲು ಬಳಸಲಾಗುತ್ತಿದೆ ಎಂದು ಹೇಳಲು ಹರ್ಷಿಸುತ್ತೇನೆ.

ವಯಸ್ಕರ ಶಿಕ್ಷಣ ತಜ್ಞರುಗಳನ್ನು ಮುಂದುವರಿದ ರಾಷ್ಟ್ರಗಳಿಗೆ ಮುಖ್ಯವಾಗಿ ರಷ್ಯಾದೇಶಕ್ಕೆ ನಿಯೋಗ ಕಳುಹಿಸಿ ಈ ಕ್ಷೇತ್ರದಲ್ಲಿ ಅಲ್ಲಿ ನಡೆದಿರುವ ಸಾಧನೆಯನ್ನು ಕಣ್ಣಾರೆಕಂಡು ನಮ್ಮಲ್ಲಿಯೂ ಅವುಗಳನ್ನು ಕಾರ್ಯಗತಗೊಳಿಸುವಂತಾಗಲು ನೆರವಾಗ ಬೇಕೆಂದು ಕೋರುತ್ತೇನೆ.

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೆಲಸಮಾಡುತ್ತಿದೆ. ಆ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಡಿ. ಕರಿಯಪ್ಪ ಗೌಡರು ಮತ್ತು ಕಾರ್ಯದರ್ಶಿಗಳಾದ ಶ್ರೀ ಸಿ. ಹನುಮೇಗೌಡರು ಈ ಸಮ್ಮೇಳನವಲ್ಲಿ ಪಾಲ್ಗೊಂಡಿದ್ದಾರೆ ಅವರು ಈ ಬಗ್ಗೆ ಹೆಚ್ಚಿನ ಮಾಹಿತಿ ನೀಡುವರೆಂದು ಆಶಿಸಿದ್ದೇನೆ.

ಇನ್ನೂ ಹೆಚ್ಚುಕಾಲ ನಿಮ್ಮ ಮುಂದೆ ನಿಲ್ಲಲು ಬಯಸದೆ ಸಮಗ್ರ ರಾಷ್ಟ್ರ ವ್ಯಾಪೀ ಅಕ್ಷರ ಪ್ರಚಾರ ಕಾರ್ಯಕ್ರಮದ ಬಗ್ಗೆ ಹೆಚ್ಚು ಪ್ರಾಧಾನ್ಯತೆ ಇರಬೇಕೆಂದು ಹೇಳಿ ತಜ್ಞರು, ಶೀಘ್ರಫಲಿತಾಂಶ ಕೊಡುವಂತಹ ಕಾರ್ಯಕ್ರಮಗಳನ್ನು ರೂಪಿಸಿ ಕೊಡಬೇಕೆಂದು ಪ್ರಾರ್ಥಿಸಿ ಈ ಕಾರ್ಯಕ್ರಮಗಳ ಜಾರಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅವಶ್ಯಕ ಧನಸಹಾಯವನ್ನು ಒದಗಿಸಬೇಕೆಂದು ಕೋರುತ್ತೇನೆ. ಪ್ರತಿ ರಾಜ್ಯದಲ್ಲಿಯೂ ವಯಸ್ಕರ ಶಿಕ್ಷಣಕ್ಕಾಗಿಯೇ ಒಂದು ಪ್ರತ್ಯೇಕ ಇಲಾಖೆಯಿರಬೇಕು.

ಈ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಅಧ್ಯಕ್ಷರಿಗೂ ಸಾವಧಾನದಿಂದ ಆಲಿಸಿದ ಸಭಿಕರಿಗೂ ನನ್ನ ವಂದನೆಗಳು.

ಜೈಹಿಂದ್

## ಅಧ್ಯಾಯ–ಹನ್ನೊಂದು

೧

1940ನೆಯ ಇಸವಿ ಕೊನೆಯ ಹಂತದಿದಂದ 1942ರ ಆಗಸ್ಟ್‌ವರೆಗೆ ಸ್ವಾತಂತ್ರ್ಯ ಚಳುವಳಿ ಸಾಮಾನ್ಯ ರೂಪದಲ್ಲಿತ್ತು. ಮಹಾತ್ಮಗಾಂಧೀ ಅವರು ತಮ್ಮ ಹರಿಜನ ಪತ್ರಿಕೆಯಲ್ಲಿ ಲೇಖನ ಬರೆದು ಕಾಂಗ್ರೆಸ್ ಕಾರ್ಯಕರ್ತರು ರಚನಾತ್ಮಕ ಕಾರ್ಯಗಳಲ್ಲಿ ತೊಡಗಲು ಕರೆಯಿತ್ತು, ರಚನಾತ್ಮಕ ಕಾರ್ಯಗಳ ಸಹಯೋಗದೊಡನೆ ಶ್ರೀಸಾಮಾನ್ಯರು ಕಾಂಗ್ರೆಸ್ ಸಮೀಪವರ್ತಿಗಳಾಗುವಂತೆ ದುಡಿಯಬೇಕೆಂಬ ಸಲಹೆ ಇತ್ತರು. ಆಗತಾನೆ ಹೊಸದಾಗಿ ರಚಿತವಾಗಿದ್ದ ಮಂಡ್ಯ ಜಿಲ್ಲಾ ಬೋರ್ಡಿನವರು ಮೈಸೂರು ಸಂಸ್ಥಾನಕ್ಕೆ ಮೊದಲಿಗರಾಗಿ ವಯಸ್ಕರ ಅಕ್ಷರ ಪ್ರಚಾರಕ್ಕೆ ಇಪ್ಪತ್ತು ಸಾವಿರ ರೂಪಾಯಿಗಳ ದೇಣಿಗೆ ನೀಡಿ, ಮಂಡ್ಯ ಜಿಲ್ಲೆಯಲ್ಲಿ ಸಾಕ್ಷರತಾ ಪ್ರಚಾರ ತೀವ್ರ ಗೊಳಿಸುವಂತೆ ಸಲಹೆ ಮಾಡಿದರು. ಜಿಲ್ಲಾ ಬೋರ್ಡಿನ ಸಲಹೆಯನ್ನು ಅಂಗೀಕರಿಸಿದ, ಸಂಸ್ಥಾನ ಅಕ್ಷರ ಪ್ರಚಾರ ಸಮಿತಿಯವರು ಮಂಡ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮಂಡ್ಯ ಜಿಲ್ಲಾ ಅಕ್ಷರ ಪ್ರಚಾರ ಸಮಿತಿ ರಚಿಸಿ ಡಿ.ಇ.ಓ. ಅವರನ್ನೇ ಕಾರ್ಯದರ್ಶಿ ಯಾಗಿ ನೇಮಕಮಾಡಿದರು. ಇದರ ಜೊತೆಗೆ ಹತ್ತಾರು ಮಂದಿ ಅಕ್ಷರ ಪ್ರಚಾರದಲ್ಲಿ ಆಸಕ್ತರಾದವರನ್ನು ಸದಸ್ಯರನ್ನಾಗಿ ಆಯ್ಕೆಮಾಡಿತು. ಮಂಡ್ಯ ಜಿಲ್ಲೆ ಅಕ್ಷರ ಪ್ರಚಾರಕ್ಕೆ ಮಾಹೆಯಾನ 50 ರೂ ತಲುಬಿನಂತೆ ನನ್ನನ್ನು ಜಿಲ್ಲಾ ವ್ಯವಸ್ಥಾಪಕನನ್ನಾಗಿ ನೇಮಿಸಿ, ತಾಲ್ಲೂಕಿಗೆ ಮೂರು ನಾಲ್ಕು ಮಂದಿಯಂತೆ ತರಗತಿಗಳಿಗೆ ಒಬ್ಬ ಮೇಲ್ವಿಚಾರಕರಾಗಿ ಸುಮಾರು ಇಪ್ಪತ್ತು ಮಂದಿಯನ್ನು ನೇಮಿಸಿ ವಯಸ್ಕರ ರಾತ್ರಿ ತರಗತಿಗಳನ್ನು ಪ್ರಾರಂಭಿಸಿ ಸಾಕ್ಷರತಾ ಆಂದೋಳನ ನಡೆಸಲಾಯಿತು. 1941 ರಿಂದ 1942ನೆಯ ಆಗಸ್ಟ್ ಚಳುವಳಿವರೆಗೆ ಮಂಡ್ಯ ಜಿಲ್ಲೆ ಸುಮಾರು 28 ಸಾವಿರ ಜನರನ್ನು ಸಾಕ್ಷರ ರನ್ನಾಗಿ ಮಾಡಿ ಸಂಸ್ಥಾನಕ್ಕೆ ಮೊದಲ ಸ್ಥಾನ ಗಳಿಸಿತು. ಅಕ್ಷರ ಪ್ರಚಾರ ಕಾರ್ಯ ಕರ್ತರು ಜಿಲ್ಲಾದ್ಯಂತ ಯಾವುದೇ ಮೋಟಾರು ಬಸ್ಸಿನಲ್ಲಿ ಓಡಾಡಲು ಅನುಕೂಲವಾಗು ವಂತೆ ಜಿಲ್ಲಾಧಿಕಾರಿಗಳು ಬಸ್ ಮಾಲೀಕರುಗಳ ಸಭೆ ಕರೆದು ಉಚಿತ ಪಾಸ್ ಕೊಡಿಸಿ ಉಪಕರಿಸಿದ್ದರು.

ಮಾರನೆಯ ವರುಷವು ಸಹ ಮಂಡ್ಯ ಜಿಲ್ಲಾ ಬೋರ್ಡಿನವರು ಉದಾರವಾದ ಅನುದಾನ ನೀಡಿ ಉಪಕರಿಸಿದರು. ಗ್ರಾಮಾಭಿವೃದ್ಧಿ ಯೋಜನೆ ಜಾರಿಯಲ್ಲಿತ್ತು. ಎಚ್. ಬಿ. ಗುಂಡಪ್ಪಗೌಡರು ಆ ಖಾತೆಯ ಸಚಿವರಾಗಿದ್ದರು. ಗ್ರಾಮಾಭಿವೃದ್ಧಿ ಯೋಜನೆಗೆ ಸಾಕ್ಷರತಾ ಪ್ರಚಾರ ಕಾರ್ಯವನ್ನು ಸಹ ಅಧಿಕಾರಿಗಳು ಅಳವಡಿಸಿಕೊಂಡಿ

ದ್ದರು. ಎರಡನೇ ಮಹಾಯುದ್ಧದ ಬೇಗೆಯಿಂದ ಜನರಿಗೆ ಸಾಕಷ್ಟು ಆಹಾರ ಧಾನ್ಯ ಸಿಗದೆ ಪರದಾಡುವುದಾಗಿತ್ತು. ಅಧಿಕವಾಗಿ ಬೆಳೆಯಿರಿ ಬೆಳೆ ಯೋಜನೆ ಪ್ರಚಾರ ಹೀಗೆ ಅಲ್ಲಲ್ಲಿ ಗುಂಪುಗಳ ಗ್ರಾಮಗಳ ಮಧ್ಯೆ ಜನರ ಸಭೆಯನ್ನು ಗ್ರಾಮಾಭಿವೃದ್ಧಿ ಯೋಜನೆ ಗ್ರಾಮ ಸುಧಾರಕರು ಎಂಬ ನಾಮಾಂಕಿತ ಕಾರ್ಯಕರ್ತರುಸೇರಿಸುತ್ತಿದ್ದರು. ಇಂತಹ ಸಭೆಗಳಿಗೆ ಜಿಲ್ಲಾ ಬೋರ್ಡ್ ಅಧ್ಯಕ್ಷರು ಜಿಲ್ಲಾಧಿಕಾರಿಗಳು ಇದ್ದೇ ಇರಬೇಕೆಂಬ ಸರ್ಕಾರಿ ಆದೇಶವಿತ್ತು. ಹೀಗಾಗಿ ನಾನು ಮಂಡ್ಯ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ಕೆರೆಗೋಡಿನ ದಿವಂಗತ ಕೆ. ಚಿಕ್ಕಲಿಂಗಯ್ಯನವರ ಜೊತೆ ಕಾರಿನಲ್ಲಿ ಸ್ಥಳಾವಕಾಶವಿರು ತ್ತಿದ್ದು ಓಡಾಡುತ್ತಿದ್ದೆ. ಮಾತುಗಾರಿಕೆಯೆ ಬಂಡವಾಳವಾಗಿ ಹೊಂದಿದ್ದ ನಾನೇ ಗ್ರಾಮಾಂತರ ಸಭೆಗಳಲ್ಲಿ ಪ್ರಮುಖ ಭಾಷಣಕಾರನಾಗಿ ಸಮಗ್ರ ಗ್ರಾಮಾಭಿವೃದ್ಧಿ ಯೋಜನೆ ಕುರಿತು ಮಾತನಾಡುತ್ತಿದ್ದೆ.

ಕಾಂಗ್ರೆಸ್ ಚಳುವಳಿಗಾರನಾಗಿ ಮೈಸೂರು ಮತ್ತು ಮಂಡ್ಯ ಜಿಲ್ಲೆಯ ಬಹುತೇಕ ಹಳ್ಳಿಗಳ ಜನರಿಗೆ ನಾನು ಪರಿಚಿತನಾಗಿದ್ದೆ. ಈಗ ಪತ್ರಿಕಾ ಅಕಾಡೆಮಿ ಅಧ್ಯಕ್ಷರಾಗಿರುವ ಜಿ. ನಾರಾಯಣ ಅವರು 'ಅಕ್ಷರವ ನೀವ್ ಕಲಿಯಿರಿ' ಎಂಬ ಪುಟ್ಟ ಕೃತಿಯನ್ನು ಗೋವಿನ ಹಾಡಿನ ರೂಪದಲ್ಲಿ ರಚಿಸಿದ್ದರು. ಗ್ರಾಮಾಭಿವೃದ್ಧಿ ಸಭೆಗಳನ್ನು ಜಿ. ನಾರಾಯಣ ಅವರ 'ಅಕ್ಷರವ ನೀವ್ ಕಲಿಯಿರಿ' ಹಾಡಿನಿಂದಲೇ ಸಭೆ ಪ್ರಾರಂಭ ಮಾಡುತ್ತಿದ್ದುದು. ಮದ್ದೂರಿನ ಸಮೀಪದ ಕೊಪ್ಪ ಸಭೆಗೆ ಹೋಗಿದ್ದ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ಕೆ. ಚಿಕ್ಕಲಿಂಗಯ್ಯನವರು ಮತ್ತು ನಾನೂ ಸಹ ಕೊಪ್ಪ ಮದ್ದೂರು ರಸ್ತೆಯಲ್ಲಿ ರಸ್ತೆಗೆ ಹೊಂದಿದಂತಿರುವ ದೇಶಹಳ್ಳಿಗೆ ಹೋಗಿ ಜಿ. ನಾರಾಯಣ ಅವರನ್ನು ಕಂಡು ಪರಿಚಯಮಾಡಲು ಹೋದೆವು. ಜಿ. ನಾರಾಯಣ ಅವರು ನನಗಾಗಲೇ ಕಾಂಗ್ರೆಸ್ಸ್ ಸಂಬಂಧದಲ್ಲಿ ಪರಿಚಿತರಾಗಿದ್ದರು.

ಜಿ. ನಾರಾಯಣ ಅವರು ಆಗ ತಾನೆ ಹೊಸದಾಗಿ ಕಟ್ಟಿದ್ದ ಮನೆಯಲ್ಲಿ ಸುಮಾರು 30 ಮಂದಿ ವಯಸ್ಕರಿಗೆ ಅಕ್ಷರಾಭ್ಯಾಸ ಮಾಡಿಸುತ್ತಿದ್ದರು. ನಮ್ಮನ್ನು ನೋಡಿದ ಅವರು ಬನ್ನಿ ಬನ್ನಿ ಎಂದು ಗೋಡೆ ಪಕ್ಕಜೋಡಿಸಿದ್ದ ಅವರೆಕಾಳು ಮೂಡೆ ತೋರಿಸಿ ಕುಳಿತುಕೊಳ್ಳುವಂತೆ ಹೇಳಿ ಪಾಠದತ್ತ ತಲ್ಲೀನರಾದರು. ಅರ್ಧ ಮುಕ್ಕಾಲು ಗಂಟೆನಂತರ ಅವರ ಅಣ್ಣಂದಿರು ತಮ್ಮ ಹೇಗಲ ಮನೆಯಿಂದ ಬಂದು ಊಟಕ್ಕೆ ಏಳುವಂತೆ ತಿಳಿಸಿದರು. ಜಿ. ನಾರಾಯಣರ ಸ್ಥಿತಪ್ರಜ್ಞತ್ವ ಚಿಕ್ಕಲಿಂಗಯ್ಯ ನವರನ್ನು ವಿಸ್ಮಿತರನ್ನಾಗಿ ಮಾಡಿತು. ಜಿ. ನಾರಾಯಣ ಹೆಚ್ಚು ಮಾತನಾಡಲಿಲ್ಲ. ಜಿಲ್ಲೆಯಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ತರಗತಿಗಳನ್ನು ತೆರೆಯುವಂತೆ ಸಲಹೆ ಮಾಡಿದರು.

ಗ್ರಾಮಾಭಿವೃದ್ಧಿ ಸಭೆಗಳಲ್ಲಿ ಭಾಷಣ ಮಾಡಲು ಜಿ. ನಾರಕಿಯಣ ಅವರನ್ನು ಅಧ್ಯಕ್ಷರು ಆಹ್ವಾನಿಸಿದರು. ಸಾಧ್ಯವಿಲ್ಲ, ಮೊದಲು ನಮ್ಮೂರು ಸಾಕ್ಷರತಾ ಬೀಡಾ

ಗಲಿ, ಅನಂತರ ಪಕ್ಕದ ಊರಿನ ಕತೆ ಎಂದು ತಿಳಿಸಿದರು. ಅವರಿಂದ ಬೀಳ್ಕೊಂಡು ಮಂಡ್ಯಕ್ಕೆ ಹೊರಟೆವು. ಅಧ್ಯಕ್ಷರು ನನ್ನನ್ನು ರಾಜ ಎಂದೇ ಸಂಬೋಧನೆ ಮಾಡುತ್ತಿದ್ದರು.

"ಏನು ರಾಜ ನಾರಾಯಣರಲ್ಲಿ ಅದೆಂಥ ತನ್ಮಯತೆ. ನಮ್ಮನ್ನು ಮಾಟಿ ಮೇಲೆ ಕೂರಿಸಿ ಪಾತದತ್ತ ಗಮನ ಹರಿಸಿದರೆ ಹೊರತು ನಮ್ಮೊಡನೆ ಮಾತಿಗೆ ಸೇರಲೇ ಇಲ್ಲ. ನಾವಾಗಿದ್ದರೆ ಯಾರಾದರೂ ನಮ್ಮಂತೆ ಹೊಸಬರು ಬಂದಿದ್ದರೆ—ಹೋಗ್ರಯ್ಯ ನಾಳೆ ಬನ್ನಿ" ಎಂದು ಕಳುಹಿಸಿ ಕೆಲಸಕ್ಕೆ ಜಾರದ ಕಾಡು ಹರಟೆಯಲ್ಲಿ ತಲ್ಲೀನರಾಗು ತ್ತಿದ್ದೆವು. ಆದರೆ ಹುಡುಗ ಜಿ. ನಾರಾಯಣರಲ್ಲಿ ಅದೇನು ಏಕಾಗ್ರತೆ ಅದೇನು ಶಿಸ್ತು ನಿಯಮ ಮುಂತಾಗಿ ಮಾತನಾಡಿದ ಕೆ. ಚಿಕ್ಕಲಿಂಗಯ್ಯನವರು ನನಗೆ ಊಟ ಮಾಡುವ ಮನಸ್ಸಿರಲಿಲ್ಲ, ಆದರು ಆತನ ಶಿಸ್ತು ನಿಯಮಗಳಿಗೆ ಮಾರುಹೋದ ನಾನು ಮಾರುತ್ತರ ನೀಡದೆ ಊಟಕ್ಕೆ ಕುಳಿತೆ ಎಂದು ಜಿ. ನಾರಾಯಣ ಅವರ ಬಗ್ಗೆ ತುಂಬಾ ಒಳ್ಳೆ ಮಾತುಗಳನ್ನಾಡಿದರು.

ಅದೆಲ್ಲಿ ಈ ಕಾರ್ಯಕ್ಕೆ ಇವರನ್ನು ಪತ್ತೆಮಾಡಿದೆ ? ಎಂದು ಪ್ರಶ್ನಿಸಿದರು. ಇದೇನು ? ನೀವು ತಪ್ಪು ತಿಳಿದು ಕೊಂಡಿದ್ದೀರಿ. ನನಗಿಂತ ನಾರಾಯಣರೇ ಈ ಕಾರ್ಯಕ್ಕೆ ಮೊದಲಿಗರಾಗಿ ನಡುಕಟ್ಟಿ ನಿಂತವರು, ಗಾಂಧಿವಾದಿ ಅವರು, ಈ ಮುಂತಾಗಿ ತಿಳಿಸಿದೆ. ಇಷ್ಟರಲ್ಲೇ ಕ್ವಿಟ್ ಇಂಡಿಯಾ ಚಳುವಳಿ ಬಂದಿತು.

1942ನೆಯ ಇಸವಿ "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಚಳುವಳಿ ನಂತರ 1943ನೆಯ ಅಂತ್ಯಕ್ಕೆ ಬಿಡುಗಡೆ ಹೊಂದಿದೆ. ಪುನಃ ಜನವಾಣಿ, ಪ್ರಜಾಮತ, ಕೊರವಂಜಿ ಪತ್ರಿಕೆಗಳನ್ನು ಅರಕೆರೆ ಎ. ಸಿ. ಸುಬ್ಬಣ್ಣನವರಿಂದ ವಶಕ್ಕೆ ತೆಗೆದುಕೊಂಡು ನಡೆಸುತ್ತ ಹೋದೆ. ಜೊತೆಗೆ ವಯಸ್ಕರ ಶಿಕ್ಷಣ ಕಾರ್ಯದಲ್ಲಿ ಪೂರ್ಣವಾಗಿ ತೊಡ ಗಿಸಿಕೊಳ್ಳಲಾಗಲಿಲ್ಲ. ಸಮಿತಿಯವರು ನನ್ನನ್ನು ಹಾಸನ ಜಿಲ್ಲೆಗೆ ವರ್ಗಾಯಿಸಿದರು. ಜಿಲ್ಲಾ ವ್ಯವಸ್ಥಾಪಕತನಕ್ಕೆ ನಾನು ರಾಜೀನಾಮೆಯನ್ನು 1946ನೆಯ ಇಸವಿಯಲ್ಲಿ ಸಮಿತಿಗೆ ಸಲ್ಲಿಸಿದೆ. ಕಾರಣ ನಾನು ಮಂಡ್ಯದಲ್ಲಿ ರಾಜಕೀಯವಾಗಿ ಶಂಕರಗೌಡರು ಮಿತ್ರರೊಡನೆ ಒಬ್ಬನಾಗಿ ಓಡಾಟ ಮಾಡುತ್ತಿದ್ದೆ. ಅಲ್ಲದೆ ಸಹಕಾರ ಚಳುವಳಿ ಕೈಗೊಂಡು ಜಿಲ್ಲೆಯ ಏಳು ತಾಲ್ಲೂಕುಗಳಲ್ಲು ಸಹಕಾರ ಸಂಘಗಳನ್ನು ಸ್ಥಾಪಿಸಿ ಯುದ್ಧಾನಂತರ ಬಂದ ವಸ್ತುಗಳ ತುಟ್ಟಿಯಿಂದಾದ ಕಳ್ಳಪೇಟೆ ವಹಿವಾಟು ತಪ್ಪಿಸಲು ಕಾರ್ಯಕ್ರಮ ಹಾಕಿಕೊಂಡು 1946ನೆಯ ಅಂತ್ಯದಲ್ಲಿ ಮಂಡ್ಯದಲ್ಲಿ ರೈತರ ಸಹಕಾರ ಸಂಘ ಸ್ಥಾಪಿಸಿ, ನಾಗಮಂಗಲ ಮತ್ತು ಶ್ರೀರಂಗಪಟ್ಟಣದಲ್ಲಿ ಶಾಖೆಗಳನ್ನು ತೆರೆದಿದ್ದೆವು. ಹೀಗಾಗಿ ನಾನು ಹಾಸನಕ್ಕೆ ಹೋಗಲಾಗದೆ ಮಂಡ್ಯದಲ್ಲೆ ಉಳಿದೆ.

೨

1970 ರಲ್ಲಿ ವಿಧಾನ ಪರಿಷತ್ತಿಗೆ ದ್ವೈವಾರ್ಷಿಕ ಚುನಾವಣೆಗಳು ನಡೆದುವು. ಪರಿಷತ್ತಿನ ಕೆಲವು ನಾಮಕರಣಸ್ಥಾನಗಳು ಖಾಲಿ ಆಗಿದ್ದುವು. ಈ ನಾಮಕರಣ ಸ್ಥಾನಗಳ ಪೈಕಿ ಸ್ಥಾನ ಒಂದಕ್ಕೆ ನನ್ನನ್ನು ನಾಮಕರಣ ಮಾಡಲು ಜಿಲ್ಲೆಯ ಪ್ರತಿಷ್ಠಿತ ವ್ಯಕ್ತಿಗಳು ಕೆಲವರು ಮುಖ್ಯಮಂತ್ರಿ ಶ್ರೀ ವಿರೇಂದ್ರಪಾಟೀಲರನ್ನು ಕಂಡು ಒತ್ತಾಯ ಮಾಡಿದ್ದರು. ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿ ಸ್ಥಾನ ಖಾಲಿಮಾಡಿ, ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದಾಗ ಹಿರಿಯರೂ ತುಂಬಾ ಅನುಭವಿಗಳೂ ಆದ ಶ್ರೀ ಕೆ. ವಿ. ಶಂಕರಗೌಡರನ್ನು ನಾಮಕರಣ ಮಾಡುತ್ತಾರೆಂದು ಭಾವಿಸಿಕೊಂಡಿದ್ದರು. ತದ್ವಿರುದ್ಧವಾಗಿ ಲಿಂಗಾಯಿತ ಕೋಮಿನತ್ತ ಒಲಿದ ಶ್ರೀ ನಿಜಲಿಂಗಪ್ಪನವರ ಬಗ್ಗೆ ಜಿಲ್ಲೆಯ ಒಕ್ಕಲಿಗರ ಮುಖಂಡರಲ್ಲಿ ಅಸಮಾಧಾನದ ಭುಗಿಲು ಎದ್ದು ಹೊಗೆ ಯಾಡುತ್ತಿತ್ತು.

ಕರ್ನಾಟಕ ಏಕೀಕರಣಕ್ಕೆ ಲಿಂಗಾಯಿತರ ಒತ್ತಾಯ ಕೇವಲ ಭಾಷಾಸಮಸ್ಯೆಯಲ್ಲ. ಮುಖ್ಯವಾಗಿ ಬೃಹತ್‌ಕರ್ನಾಟಕದ ರಾಜಕೀಯ ಕೀಲಿ ಕೈಹಿಡಿವ ಸಂಕುಚಿತ ಮನೋಭಾವ ಇದರ ಹಿಂದೆ ಇದೆ ಎಂಬುದನ್ನು ಅಖಿಲ ಭಾರತ ಪ್ರಮುಖರಿಗೆ ಆಂತರ್ಯವಾಗಿ ತಿಳಿಸಲಾಗಿತ್ತು. ಕರ್ನಾಟಕ ಏಕೀಕರಣ ವಿರೋಧಿಸಿ ನಾನು ಪ್ರಕಟಿಸು ತ್ತಿದ್ದ "ವಿಶ್ವಾಮಿತ್ರ" ಪತ್ರಿಕೆಯಲ್ಲಿ ಸವಿಸ್ತಾರವಾಗಿ ಪ್ರಸ್ತಾಪಿಸಿದ್ದೆ. ಕರ್ನಾಟಕ ಏಕೀಕರಣಕ್ಕೆ ಶ್ರೀ ಕೆ. ಹನುಮಂತಯನವರು ಸಾಹುಕಾರ್ ಚನ್ನಯ್ಯನವರು ನಡುಕಟ್ಟಿ ಡೋಲು ಹೊಡೆಯುತ್ತಿದ್ದರು. ಏಕೀಕರಣಕ್ಕೆ ಇವರ ವಿಶಾಲ ಹೃದಯ ಶ್ರೀಮಂತಿಕೆ ಯನ್ನಿತ್ತು ಕನ್ನಡಮ್ಮನ ಸೇವಾ ಪೂಜೆಗೆ ನಾ ಮುಂದು ತಾ ಮುಂದು ಎಂದು ಪರಾಕು ಹೇಳುತ್ತಾ ನಿಂತಿದ್ದರು. ಈ ಬಗ್ಗೆ "ವಿಶ್ವಾಮಿತ್ರ" ಪತ್ರಿಕೆ ಸಂಪಾದಕನಾದ ನಾನು ಕೆಳಕಂಡಂತೆ "ಶ್ರೀ ಹನುಮಂತಯ್ಯನವರ ಮರಳು ಬುತ್ತಿ ನಿಜಲಿಂಗಪ್ಪನವರ ಸಗಣಿ ಬುತ್ತಿ"ಗಳು ತುಂಗಭದ್ರಾ ತೀರದಲ್ಲಿ ಅದಲು ಬದಲಾಗುವುದನ್ನು ನಿರೀಕ್ಷಿಸಿ: ಎಂದು ಲೇಖನ ಬರೆದಿದ್ದೆ. ಅದರಂತೆ ಏಕೀಕರಣ ತರುಣದಲ್ಲೇ ಶ್ರೀ ಕೆ. ಹನು ಮಂತಯ್ಯನವರ ಮುಖ್ಯಮಂತ್ರಿ ಬುತ್ತಿ ತುಂಗಭದ್ರಾನದಿ ಪಾಲಾಯಿತು. ಈ ಪ್ರಕರಣವಾಗುತ್ತಿದ್ದಂತೆ ಶ್ರೀ ನಿಜಲಿಂಗಪ್ಪನವರು ನಿಯೋಜಿತರಾದಾಗ ಶ್ರೀ ಕೆ. ವಿ. ಶಂಕರಗೌಡರನ್ನು ಮುಖ್ಯಮಂತ್ರಿ ಸ್ಥಾನಕ್ಕೆ ನಾಮಕರಣಮಾಡಿದ್ದರೆ, ಏಕೀಕರಣ ಯೋಜನೆ ತಿಳಿನೀರಿನಂತಾಗಿ ಎಲ್ಲರೂ ಸರ್ವಸಮಾನರಾಗಿ ಬಾಳಲು ಅಸಮಾಧಾನವಿಲ್ಲದ ವಾತಾವರಣ ಸೃಷ್ಟಿ ಮಾಡಬಹುದಿತ್ತು.

ಈ ಒಂದು ಹಿನ್ನೆಲೆಯಲ್ಲಿ ಶ್ರೀ ವೀರೇಂದ್ರ ಪಾಟೀಲರು ನನ್ನ ಹೆಸರನ್ನು ವಿಧಾನ ಪರಿಷತ್ತಿಗೆ ನಾಮಕರಣ ಮಾಡಲು ರಾಜ್ಯಪಾಲರಿಗೆ ಶಿಫಾರಸ್ಸು ಮಾಡಿದ್ದರು. ರಾತ್ರೋ ರಾತ್ರಿ ನನ್ನ ಭಾವಚಿತ್ರಕ್ಕಾಗಿ ಪ್ರಜಾವಾಣಿಯವರು ದೂರವಾಣಿ ಮೂಲಕ ಮಾತನಾಡಿ ಸ್ನೇಹಿತ ಶ್ರೀ ಸಾಂಬಶಿವನ್ ಮೂಲಕ ತರಿಸಿಕೊಂಡರು.

ಪ್ರಾತಃಕಾಲದ ಪ್ರಜಾವಾಣಿ ಪತ್ರಿಕೆಯಲ್ಲಿ ನನ್ನ ಭಾವಚಿತ್ರ ಸಹಿತ "ವಿಧಾನ ಪರಿಷತ್ತಿಗೆ ಜವರಪ್ಪಗೌಡರ ನಾಮಕರಣಕ್ಕೆ ಮುಖ್ಯಮಂತ್ರಿ ಶಿಫಾರ್ಸು ಮಾಡಲಾಗಿದೆ." ಎಂದು ಪ್ರಕಟಿಸಿತು. ಅಂದೇ ಮಂಡ್ಯದಲ್ಲಿ ರಾಜಕೀಯ ಸಮ್ಮೇಳನ ಸೇರಿತ್ತು; ಸಹಸ್ರಾರು ಜನ ಅಭಿನಂದಿಸಿದರು. ಹಿಂದುಳಿದ ಪಂಗಡದ ವ್ಯಕ್ತಿಯೊಬ್ಬರು ಮಾಡಿದ ಒಕ್ಕಲಿಗ ಕೋಮಿನವರು ಪರಿಷತ್ತಿನಲ್ಲಿ ಬಹು ಸಂಖ್ಯಾತರಿದ್ದಾರೆಂಬ ದೂರಿನಿಂದಾಗಿ ನನ್ನ ನಾಮಕರಣ ಸ್ಥಗಿತಗೊಂಡಿತು.

ಈ ಪ್ರಕರಣಾನಂತರ ಜಪಾನಿಗೆ ಎಕ್ಸ್‌ಪೋ 70ಕ್ಕೆ ಹೋಗುತ್ತಿದ್ದ ಮುಖ್ಯಮಂತ್ರಿ ಶ್ರೀ ವೀರೇಂದ್ರಪಾಟೀಲರು, ರಾಜ್ಯವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷಸ್ಥಾನಕ್ಕೆ ನಾಮಕರಣ ಮಾಡಲು ವಿದ್ಯಾಮಂತ್ರಿಗಳಾಗಿದ್ದ ಶ್ರೀ ಕೆ. ವಿ. ಶಂಕರಗೌಡರ ಶಿಫಾರ್ಸಿಗೆ ಒಪ್ಪಿಗೆ ನೀಡಿದರು. ಇಷ್ಟರಲ್ಲಿ ವಯಸ್ಕರ ಶಿಕ್ಷಣ ಸಮಿತಿ ಕೆಲಸಕಾರ್ಯಗಳಿಗೂ ನನಗೂ ನೇರ ಸಂಬಂಧ ತಪ್ಪಿಹೋಗಿತ್ತು. ಆದರು ನನ್ನ ಜೊತೆ ಸಹಪಾಠಿಗಳಾಗಿ ಕೆಲಸಮಾಡುತ್ತಿದ್ದವರ ಸಂಬಂಧವಿತ್ತು. ಸಮಿತಿ ಕೆಲಸಕಾರ್ಯ ಕಲಾಪಗಳನ್ನು ಅವರಿಂದ ತಿಳಿದುಕೊಳ್ಳುತ್ತಿದ್ದೆ. ಕಾರ್ಯಕರ್ತರ ಸಂಬಳ ಸಾರಿಗೆಗೆ ಮಾತ್ರ ಸಾಕಾಗುವಷ್ಟು ಸರ್ಕಾರ ಅನುದಾನ ನೀಡುತ್ತಿದ್ದುದು,ಕಾರ್ಯಕ್ರಮಕ್ಕೆ ಒಂದು ನಯಾಪೈಸೆಯೂ ಇಲ್ಲದಂತಾಗಿ ಕೆಲಸಗಾರರು ವೃಥಾ ಕಾಲಹರಣ ಮಾಡುವ ದಿಸೆಯಲ್ಲಿದ್ದರು.

ನಾನು ವಿದ್ಯಾಮಂತ್ರಿಗಳಾದ ಕೆ. ವಿ. ಶಂಕರಗೌಡರೊಡನೆ ಈ ವಿದ್ಯಮಾನವನ್ನು ವರದಿಮಾಡಿದೆ. ಹಣಕಾಸಿನ ಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಿ ಹದಗೆಟ್ಟಿರುವ ಪರಿಸ್ಥಿತಿ ಬಗ್ಗೆ ಮಾತನಾಡಿ ಸಮಿತಿಗೆ 50 ಲಕ್ಷವಾದರು ಕೊಡುವಂತೆ ಒತ್ತಾಯ ಮಾಡಲು ತಿಳಿಸಿದರು.

ಅರ್ಥಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆ ಅವರನ್ನು ಭೇಟಿ ಮಾಡಿ ಸರ್ಕಾರ ಅನುದಾನ ಹೆಚ್ಚಿಸದೆ ಅಲ್ಲಿ ಹೋಗಿ ಕೆಲಸ ಮಾಡುವುದೇನಿದೆ ಎಂದು ತಿಳಿಸಿದೆ. 35 ಲಕ್ಷ ರೂಗಳಿಗೆ ವಿದ್ಯಾಮಂತ್ರಿಗಳು ಶಿಫಾರ್ಸು ಮಾಡುವಂತೆ ತಿಳಿಸಿದರು. ಅಂತ್ಯದಲ್ಲಿ ಹಳೆ 17 ಲಕ್ಷ ಜೊತೆಗೆ 15 ಲಕ್ಷ ರೂಪಾಯಿ ಹೊಸದಾಗಿ ಕೊಡುವ ಆಜ್ಞೆ ನಂತರ ನಾನು ಅಧ್ಯಕ್ಷನಾಗಿ 1970ನೆಯ ಜೂನ್ ಮೊದಲವಾರ ದಿವಂಗತ ಎಂ. ಮಲ್ಲಿಕಾರ್ಜುನಸ್ವಾಮಿ ಅವರಿಂದ ಅಧಿಕಾರ ವಹಿಸಿಕೊಂಡೆ.

ನಮ್ಮ ಜಿಲ್ಲಾಧಿಕಾರಿಗಳಾಗಿದ್ದ ದಿವಂಗತ ಕೆ. ಲಕ್ಷ್ಮಣರಾವ್ ಅವರು ಸಮಾಜ ಕಲ್ಯಾಣ ಇಲಾಖೆ ಕಮೀಷನರ್ ಆಗಿ ವರ್ಗವಾಗಿ ಹೋಗಿದ್ದರು. ಒಂದುದಿನ ಆಕಸ್ಮಿಕ

ವಾಗಿ ವಿದ್ಯಾಮಂತ್ರಿಗಳಾದ ಕೆ. ವಿ. ಶಂಕರಗೌಡರ ಕೊಠಡಿಯಲ್ಲಿ ಮಾತುಕತೆಗೆ ಸಿಕ್ಕಿದರು. ಅವರೊಡನೆ ಹಣಕಾಸಿನ ಮುಗ್ಗಟ್ಟು ವಿವರಿಸಿದೆ. ವಯಸ್ಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅವರ ಖಾತೆಯಲ್ಲಿದ್ದ 10 ಲಕ್ಷ ರೂಪಾಯಿಗಳನ್ನು ಬಳಸಲು ದೊರಕಿಸಿದರು. ಇದರಿಂದಾಗಿ ಸಮಿತಿ ಆರ್ಥಿಕವಾಗಿ ತುಂಬಾ ಚೇತರಿಸಿಕೊಂಡಿತು. ಗ್ರಾಮಾಂತರಗಳಲ್ಲಿ ಸಮಿತಿಯವರು ಪ್ರಾರಂಭಿಸಿದ್ದ ಸಹಸ್ರಾರು ಗ್ರಂಥ ಭಂಡಾರಗಳು ಮೂಲೆಪಾಲಾಗಿ ಹೋಗಿದ್ದುವು. ಕಲಿತವರು ಪುನಃ ನಿರಕ್ಷರತೆಗೆ ಜಾರದಂತೆ ಸಾಕ್ಷರತೆ ಕಾಪಾಡಿಕೊಂಡು ಹೋಗಲು ಗ್ರಂಥ ಭಂಡಾರಗಳೇ ಬಹಳ ಪ್ರಮುಖ ಸಾಧನವಾಗಿದ್ದುವು.

ಸಾಕ್ಷರತಾ ತರಗತಿಗಳ ಜೊತೆ ಜೊತೆ ಗ್ರಂಥ ಭಂಡಾರಗಳ ಪುನಶ್ಚೇತನಕ್ಕೆ ನಾನು ಹೆಚ್ಚಿನ ಆದ್ಯತೆ ಕೊಟ್ಟೆ. ರಾತ್ರಿ ಯಾವುದೇ ಊರಲ್ಲಿ ತಂಗಿದರೆ ಆ ಊರಿನಲ್ಲಿ ಪಾದಯಾತ್ರೆ ಮಾಡಿ ಪುಸ್ತಕಗಳನ್ನು ಸಂಗ್ರಹಿಸಿ ಅಲ್ಲಿನ ಪುಸ್ತಕ ಭಂಡಾರಕ್ಕೆ ಕೊಡಲಾಗುತ್ತಿತ್ತು ಮತ್ತು ನಾನು ಉಚಿತವಾಗಿ ಭಾಷಣ ಮಾಡುತ್ತಿದ್ದುದು ಅಪರೂಪವೆಂದೇ ಹೇಳಬಹುದು. ಪ್ರತಿಸಭೆಯಲ್ಲು ಆಯಾ ಊರಿನ ಗ್ರಂಥ ಭಂಡಾರಕ್ಕೆ ಗ್ರಂಥ ಶೇಖರಣೆ ಮಾಡಲು ಮೇಜಿನ ಮೇಲೆ ಟವಲ್ ಹಾಕಿ ನಿಮ್ಮ ಕೈಲಿದ್ದಷ್ಟು ಹಣಹಾಕಿ ನಿಮ್ಮೂರಿನ ಭಂಡಾರಕ್ಕೆ ಹೊಸ ಪುಸ್ತಕ ಕೊಡಿಸಿಕೊಳ್ಳಿ ಎಂದು ಹೇಳುತ್ತಿದ್ದೆ, ಸಾಮಾನ್ಯವಾಗಿ 50 ರೂಗಿಂತ ಕಮ್ಮಿಯಿಲ್ಲದೆ, ಸಾವಿರ ರೂವರೆಗೂ ಹಣ ಸೇರುತ್ತಿತ್ತು. ಸ್ಥಳೀಯವಾಗಿ ಗಣ್ಯರ ಸಮಿತಿಮಾಡಿ ಅವರಿಗೆ ಚಂದಾಹಣಕೊಟ್ಟು ಗ್ರಂಥ ಭಂಡಾರಕ್ಕೆ ಗ್ರಂಥಗಳನ್ನು ಕೊಳ್ಳಲು ಹೇಳುತ್ತಿದ್ದೆ. ಸುಮಾರು 2600 ಗ್ರಂಥ ಭಂಡಾರಗಳು ಕೆಲಸ ಮಾಡಲು ಆರಂಭಿಸಿದುವು.

ಹೊಸದಾಗಿ ಕೆಮ್ಮಣ್ಣುಗುಂಡಿ, ಚನ್ನರಾಯಪಟ್ಟಣ ಮತ್ತು ತೊಗರಿಘಟ್ಟಗಳಲ್ಲಿ ಕ್ಷೇತ್ರೀಯ ಪುಸ್ತಕ ಭಂಡಾರಗಳನ್ನು ಪ್ರಾರಂಭಿಸಲಾಯ್ತು.

ಸಮಿತಿಯ ಕಾರ್ಯಕ್ರಮಗಳಲ್ಲಿ ವಿದ್ಯಾಪೀಠಗಳ ಯೋಜನೆಗಳು ಡೆನ್ಮಾರ್ಕಿನ ರೀತ್ಯ ನಡೆದು ರಾಷ್ಟ್ರದ ಶಿಕ್ಷಣ ಇಲಾಖೆಗಳವರ ತಂಡವನ್ನು ದೆಹಲಿ ವಯಸ್ಕರ ಶಿಕ್ಷಣ ಮಂಡಲಿ ಕರೆತಂದು ಪರಿಚಯಿಸಿತು. ಗುಜರಾತಿನ ವಿದ್ಯಾಮಂತ್ರಿಗಳು ಸ್ವತಃ ತಾವೇ ಖುದ್ದಾಗಿ ಬಂದು ಕೆಲವು ವಿದ್ಯಾಪೀಠಗಳ ಡೈರಿ, ಕೋಳಿ ಸಾಕಣೆ, ಬೆತ್ತದ ಕೆಲಸ, ಮರ ಗೆಲಸ, ಕುಲುಮೆ ಕೆಲಸ ಇವುಗಳ ಉತ್ಪಾದನೆಗಳನ್ನು ಕಂಡರು. ಸಹಕಾರ ಸಂಘದ ಮೂಲಕ ನಡೆದ ಮಾರಾಟ ವ್ಯವಸ್ಥೆಗಳು ಅವರ ಗಮನವನ್ನು ತೀವ್ರವಾಗಿ ಸೆಳೆದುವು.

ಮದ್ದೂರು ತಾಲ್ಲೂಕಿನ ಶಿವಾರಗುಡ್ಡ, ಬೆಂಗಳೂರಿನ ಬಳಿಯ ಕೆಂಗೇರಿ. ನಂಜನಗೂಡಿನ ವಿದ್ಯಾಪೀಠ ಮತ್ತು ಹಂಪೆ ಬಳಿಯ ಪಂಪಾ ವಿದ್ಯಾಪೀಠಗಳ ತೆಂಗು ಮತ್ತು ಹಣ್ಣಿನ ಬೇಸಾಯ ತುಂಬಾ ಲಾಭದಾಯಕವಾಗಿ ಕೆಲಸ ಮಾಡುತ್ತಿದ್ದುವು. ವಿದ್ಯಾ

ಪೀಠಗಳ ಕಾರ್ಯಕ್ಕಿಂತ ಹೆಚ್ಚಾಗಿ ಗ್ರಾಮಾಂತರಗಳ ಪುಸ್ತಕ ಭಂಡಾರಗಳು, ವಯಸ್ಕರ ಸಾಕ್ಷರತಾ ತರಗತಿಗಳ ಪ್ರಗತಿದಾಯಕ ಸುದ್ದಿಗಳು ದಿನವೂ ದಿನಪತ್ರಿಕೆಗಳಲ್ಲಿ ತಪ್ಪದೆ ವರದಿಯಾಗುತ್ತಿದ್ದು ದೇಶದ ಹಿರಿಯರು ಹಾಗೂ ಶಿಕ್ಷಣ ತಜ್ಞರು ವಯಸ್ಕರ ಶಿಕ್ಷಣದತ್ತ ತೀವ್ರಗಮನಹರಿಸಿದರು.

ಇಂದಿನ ವಿಧಾನ ಪರಿಷತ್ ಅಧ್ಯಕ್ಷರಾದ ಡಿ. ಮಂಜುನಾಥ್, ಪಶುಸಂಗೋಪನಾ ರಾಜ್ಯ ಸಚಿವರಾಗಿದ್ದ ಜಿ. ಬಿ, ಶಂಕರರಾವ್, ಸಹಕಾರ ರಾಜ್ಯ ಸಚಿವರಾಗಿದ್ದ ದಿ॥ ಬಿ. ಎಲ್. ಗೌಡ ಮತ್ತು ರೇಷ್ಮೆ ರಾಜ್ಯಸಚಿವ ದಿ॥ ಜಿ, ತಮ್ಮಣ್ಣ ಅವರುಗಳು ವರ್ಷದಲ್ಲಿ ಹೆಚ್ಚು ಕಾಲ ನನ್ನೊಡನಿದ್ದು ವಯಸ್ಕರ ಶಿಕ್ಷಣಕ್ಕೆ ಹೆಚ್ಚಿನ ಇಂಬುಕೊಟ್ಟವರು.

ಸಚಿವರುಗಳಾದ, ಕೆ. ವಿ. ಶಂಕರಗೌಡರು, ಕೆ. ಲಕ್ಕಪ್ಪನವರು, ಬಿ. ನಾಡಗೌಡ, ಎಚ್. ಎಂ. ಚನ್ನಬಸಪ್ಪ ಮತ್ತು ಎ. ಆರ್. ಬದರೀನಾರಾಯಣ ಅವರುಗಳು ಸಮಿತಿಯು ಕರೆಗೆ ನಕಾರ ಹೇಳದೆ ಸಮಾರಂಭಗಳಲ್ಲಿ ಭಾಗವಹಿಸಿ ನಾನಾ ಕಾರ್ಯಕ್ರಮ ಗಳನ್ನು ಆಗುಮಾಡಿಸಿ ಸಾಕ್ಷರತಾ ಪ್ರಚಾರದಲ್ಲಿ ತಮ್ಮ ಸೇವೆ ಸಲ್ಲಿಸಿದರು.

ರಾಜ್ಯಪಾಲರಾಗಿದ್ದ ಶ್ರೀ ಧರ್ಮವೀರರು ಕೆಂಗೇರಿ ವಿದ್ಯಾಪೀಠದಲ್ಲಿ ಪಶುಸಂಗೋಪನಾ ಕಾರ್ಯ ಮತ್ತು ನಾಗಮಂಗಲದಲ್ಲಿ "ಅಕ್ಷರ ಸೇನೆ" ಉದ್ಘಾಟನಾ ಕಾರ್ಯಕ್ರಮಗಳನ್ನು ನಡೆಸಿಕೊಟ್ಟು ಸಮಿತಿಯ ಕಾರ್ಯಕ್ರಮವನ್ನು ಮನಸಾರ ಮೆಚ್ಚಿ ಪ್ರಶಂಸಿಸಿದರು.

ರಾಜ್ಯಪಾಲರಾಗಿದ್ದ ದಿವಂಗತ ಮೋಹನಲಾಲ್ ಸುಖಾಡಿಯಾ ಅವರು ಕೃಷ್ಣರಾಜೇಂದ್ರ ವಿಶ್ರಾಂತಿಧಾಮ (ಕೆಮ್ಮಣ್ಣುಗುಂಡಿ) ದಲ್ಲಿ ಅಲ್ಲಿನ ಕ್ಷೇತ್ರೀಯ ಪುಸ್ತಕ ಭಂಡಾರ ಮತ್ತು ಮಧುಗಿರಿ ಸಮೀಪದ ತೋಗರಿ ಘಟ್ಟ ಕ್ಷೇತ್ರೀಯ ಪುಸ್ತಕ ಭಂಡಾರ ಪ್ರಾರಂಭೋತ್ಸವ ಹಾಗೂ ಮಂಡ್ಯದಲ್ಲಿ ವಿದ್ಯಾಸಚಿವ ಶ್ರೀ ಕೆ. ವಿ. ಶಂಕರಗೌಡರ ಅಧ್ಯಕ್ಷತೆಯಲ್ಲಿ ವಿದ್ಯಾಪೀಠದಲ್ಲಿ ವಿಜೇತರಾದ ವಿದ್ಯಾರ್ಥಿಗಳ ಘಟಿಕೋತ್ಸವ ನೆರವೇರಿಸಿ ಸಮಿತಿ ಕಾರ್ಯಕ್ಕೆ ನೆರವಾದರು.

ರಾಜ್ಯ ತೋಟಗಾರಿಕೆ ಇಲಾಖೆಯ ನಿರ್ದೇಶಕರಾಗಿದ್ದ ಡಾ. ಎಂ. ಎಚ್. ಮರೀಗೌಡರು, ಟೌನ್‌ಪ್ಲಾನಿಂಗ್ ಡೈರೆಕ್ಟರಾಗಿದ್ದ ಡಾ॥ ಕೆ. ಎಸ್. ರಾಮೇಗೌಡರು ಸಮಿತಿ ಕಾರ್ಯಕ್ರಮಗಳಲ್ಲಿ ಅಪಾರ ನೆರವಾದರಲ್ಲದೆ, ಏಸಿಗದಲೆ ವಿದ್ಯಾಪೀಠದಲ್ಲಿ ಹಣ್ಣಿನ ತೋಟ ಯೋಜನೆಗೆ ಕೀಲಿ ಕಲ್ಲು ಹಾಕಿದರು.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಡಾ॥ ದೇ.ಜ.ಗೌ. ಅವರು ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿದ್ದ ಜಿ. ನಾರಾಯಣ ಅವರು ಸಮಿತಿಯ ಎಲ್ಲ ಕಾರ್ಯ ಗಳಲ್ಲೂ ನೆರವಿತ್ತು. ಸಾಕ್ಷರತಾ ಯೋಜನೆ ಪ್ರಚಲಿತಗೊಳ್ಳಲು ಸಂಪೂರ್ಣವಾಗಿ ನೆರವಾದರು.

ಡಾ॥ ಶಿವರಾಮಕಾರಂತರು, ಅ. ನ. ಕೃಷ್ಣರಾಯರು, ವಿದ್ಯಾಖಾತೆ ಕಮಿಷನರ್ ಆಗಿದ್ದ ಕೆ. ಆರ್. ರಾಮಚಂದ್ರ, ಡಿ.ಪಿ.ಐ. ಗಳಾಗಿದ್ದ ಎಸ್. ಮಂಚಯ್ಯನವರು, ಸಕ್ಕರೆ ಕಂಪನಿ ಅಧ್ಯಕ್ಷರಾಗಿದ್ದ ಜಿ. ಮಾದೇಗೌಡರು ಮುಂತಾದವರು ಆರ್ಥಿಕ ಸಹಾಯವಿತ್ತು ಸಹಕರಿಸಿದರು.

ಪುಸ್ತಕ ಪ್ರಪಂಚ ಪ್ರಕಟಣೆಯಲ್ಲಿ ಡಾ॥ ಹಾ.ಮಾ. ನಾಯಕರು, ಸಂಪಾದಕೀಯ ಮಂಡಳಿಯನ್ನೇ ತಮ್ಮ ಕನ್ನಡ ಅಧ್ಯಯನ ಸಂಸ್ಥೆ ಸಭಾ ಭವನಕ್ಕೆ ಕರೆಸಿಕೊಂಡು ಉಪಾಹಾರವಿತ್ತು, ಚರ್ಚಿಸಿ ಉತ್ತಮ ಲೇಖನಗಳು ಪುಸ್ತಕ ಪ್ರಪಂಚದಲ್ಲಿ ಪ್ರಕಟಗೊಂಡು ಜನಪ್ರಿಯವಾಗಲು ಶ್ರಮಿಸಿ ಉಪಕರಿಸಿದರು.

ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗೆ "ನೆಹರು ಸಾಕ್ಷರತಾ ಪ್ರಶಸ್ತಿ" 1970ಕ್ಕೆ ನಾನು ಅಧ್ಯಕ್ಷನಾಗಿ ಹೋದ ತರುಣದಲ್ಲೇ ದೊರಕಿತು. ಈ ಪ್ರಶಸ್ತಿಯನ್ನು ದೆಹಲಿಯಲ್ಲಿ 1971 ನೆಯ ಏಪ್ರಿಲ್ 10 ರಂದು ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಉಪರಾಷ್ಟ್ರಪತಿಗಳಾಗಿದ್ದ ಹಾಗೂ ಮೈಸೂರಿನ ರಾಜ್ಯಪಾಲರಾಗಿದ್ದ ಜಿ. ಎಸ್. ಪಾಠಕ್ ಅವರು ಪ್ರಶಸ್ತಿಯಿತ್ತು ಗೌರವಿಸಿದರು.

ದೆಹಲಿಯಲ್ಲಿ ಸಂಜೆ ಮತ್ತು ಪ್ರಾತಃಕಾಲದ ಎಲ್ಲ ದಿನ ಪತ್ರಿಕೆಗಳು ನನ್ನ ಭಾಷಣವನ್ನೊಳಗೊಂಡಂತೆ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಕಾರ್ಯಕಲಾಪ ಹೊಗಳಿ ವರದಿಮಾಡಿದ್ದವು. ಇದಾದ ವರುಷಕ್ಕೆ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅಚ್ಚುಕಟ್ಟದ ಕೆಲಸಕ್ಕೆ ರಾಜ್ಯ ಪ್ರಶಸ್ತಿ ದೊರೆತು ವಿದ್ಯಾ ಸಚಿವರಾಗಿದ್ದ ಎ. ಆರ್. ಬದರೀನಾರಾಯಣ ಅವರು ಪ್ರಶಸ್ತಿ ಪ್ರದಾನ ಮಾಡಿದರು.

ಜಬ್ಬಲ್‌ಪುರದಲ್ಲಿ ಸೇರಿದ್ದ ರಾಷ್ಟ್ರೀಯ ವಯಸ್ಕರಶಿಕ್ಷಣ ಸಮ್ಮೇಳನದಲ್ಲಿ ನಾನು ಭಾಷಣ ಮಾಡಿದೆ.



೩

1978ರಲ್ಲಿ ವರುಣ ನಾಲೆಯ ಸಮಸ್ಯೆ ಮೊಗದೋರಿದಾಗ, ರಾಜಕೀಯ ಸನ್ಯಾಸವನ್ನು ಪಡೆದು, ಪಕ್ಷಾತೀತರಾಗಿ, ಗಾಂಧಿ ಕುವೆಂಪು ಅವರ ಹೆಸರಿನಲ್ಲಿ ಸಾಹಿತ್ಯೋಪಾಸನೆಯನ್ನು ಕೈಗೊಂಡಿದ್ದ ಗೌಡರನ್ನು ಆಡಳಿತ ವಿರೋಧ ಪಕ್ಷಗಳ ಸದಸ್ಯರೆಲ್ಲರೂ ಆಶ್ರಯಿಸುತ್ತಾರೆ. ಕೃಷ್ಣರಾಜ ಸಾಗರದಲ್ಲಿ ಈಗಾಗಲೇ ನೀರಿನ ಬರ ತಲೆದೋರುತ್ತಿದೆ. ತಮಿಳುನಾಡಿನ ಜಲ ವಿವಾದವಂತು ಇದ್ದದ್ದೇ. ಮೇಲಾಗಿ ಹಾರಂಗಿ ಹೇಮಾವತಿ ಯೋಜನೆಗಳು ಕಾರ್ಯಗತವಾದ ನಂತರ ಕೃಷ್ಣರಾಜಸಾಗರಕ್ಕೆ ಬರುವ ನೀರಿನ ಪ್ರಮಾಣ ಬಹುಮಟ್ಟಿಗೆ ಕಡಮೆಯಾಗುತ್ತದೆ. ಹೀಗಿರುವಾಗ ವರುಣ ನಾಲೆಯೂ ನಿರ್ಮಾಣವಾದರೆ ಮಂಡ್ಯದ ಕಡೆಯ ಎಲ್ಲ ರೈತರಿಗೂ ತೊಂದರೆಯಾಗುತ್ತದೆ. ದೂರದ ಗದ್ದೆಗಳಿಗೆ ನೀರು ಬರುವುದಿಲ್ಲ. ಹತ್ತಿರದ ಗದ್ದೆಗಳಿಗೆ ಸಾಲುವುದಿಲ್ಲ. ನಮ್ಮನ್ನೆಲ್ಲ ಸದೆಬಡಿಯಬೇಕೆಂಬುದು ಸರ್ಕಾರದ ಇಚ್ಛೆಯಾಗಿರುವಂತಿದೆ. ಅದೊಂದು ರಾಜಕೀಯ ಸಮಸ್ಯೆಯಾಗಿ ಪರಿಣಮಿಸಿದೆ. ಮಂಡ್ಯದ ರೈತರನ್ನು ತುಳಿಯಬೇಕೆಂಬುದು ಸರ್ಕಾರದ ನೇತಾರರ ಸಂಕಲ್ಪವಾಗಿದೆ. ನೀವೀಗ ನಿರ್ಲಿಪ್ತರಂತಿದ್ದರೆ ನಮ್ಮನ್ನು ಕಾಯುವವರಾರು ?' ಎಂದು ಗೌಡರಿಗೆ ಮೊರೆಯಿಡುತ್ತಾರೆ. ಗೌಡರ ಹಿತೈಷಿಯೊಬ್ಬ 'ನಿಮಗೆ ಸಂಕಟ ಬಂದಾಗ ಗೌಡರು ಬೇಕು. ಅವರು ಕಷ್ಟದಲ್ಲಿದ್ದಾಗ ನೀವು ದೂರವಿರಬೇಕು. ಇದೆಂಥ ನ್ಯಾಯ ?' ಎಂದು ಮಾಕರಿಸುತ್ತಾನೆ. 'ಕೊಂಕು ಮಾತಿಗೆ ಇದು ಸಮಯವಲ್ಲ. ನನ್ನ ಜನ ಯಾವಾಗಲೂ ಒಳ್ಳೆಯವರೇ. ಅವರೆಂದೂ ನನ್ನ ಕೈಬಿಡಲಿಲ್ಲ. ನೀನು ಸುಮ್ಮನಿರು' ಎಂದವನ ಮೇಲೆ ಗೌಡರು ರೇಗುತ್ತಾರೆ. ಗೌಡರ ಅಧ್ಯಕ್ಷತೆಯಲ್ಲಿ 'ವರುಣನಾಲಾ ಪ್ರತಿಭಟನಾ ಸಮಿತಿ' ರಚನೆಯಾಗುತ್ತದೆ. ಜಿ. ಮಾದೇಗೌಡರು ಆ ಸಮಿತಿಯ ಕಾರ್ಯದರ್ಶಿಯಾಗುತ್ತಾರೆ.

ಸಮಿತಿ ಸರ್ಕಾರದೊಡನೆ ಮನವಿ, ಸಂದರ್ಶನ, ಪತ್ರವ್ಯವಹಾರ ಹಾಗೂ ಬಾಯಿ ಬೆದರಿಕೆಗಳ ಮೂಲಕ ಸಂಧಾನ ನಡೆಸಿ. ಸೋತು ಹೋದಾಗ, ಗತ್ಯಂತರವಿಲ್ಲದೆ ನಿರ್ದಿಷ್ಟ ದಿನವಂದು ಮುಷ್ಕರಕ್ಕೆ ಕರೆಕೊಡುತ್ತದೆ. ಮಂಡ್ಯದಲ್ಲೇನು ಸಂಪು ನಡೆದರೂ ಅದರಲ್ಲೊಂದು ವೈಶಿಷ್ಟ್ಯವಿರುವುದರಿಂದ ದೇಶದ ದೃಷ್ಟಿಯೆಲ್ಲ ಆ ಕಡೆಗೆ ತಿರುಗುತ್ತದೆ. ಮುಷ್ಕರದ ದಿನ ಅಂಗಡಿ ಮುಂಗಟ್ಟುಗಳೆಲ್ಲ ಬಂದಾಗುತ್ತವೆ ; ಸಕಲಕ್ರಿಯೆಗಳೂ ನಿಂತು ನಗರಜೀವನ ಸ್ತಬ್ಧವಾಗುತ್ತದೆ. ಗ್ರಾಮಗಳಿಗೆಲ್ಲ ಚಲನೆ ಬಂದಂತೆ, ಹಳ್ಳಿಗರು ಮಂಡ್ಯದಲ್ಲಿ ನೆರೆಯುತ್ತಾರೆ. ಇತಿಹಾಸವೇ ಕಂಡರಿಯದ ರೀತಿಯಲ್ಲಿ ಮೆರವಣಿಗೆ ಅತ್ಯದ್ಭುತವಾಗಿ ನಡೆಯುತ್ತದೆ. ಮೆರವಣಿಗೆಯಲ್ಲಿ ಭಾಗವಹಿಸಿದ ಸಮವಸ್ತ್ರಧಾರಿಗಳ

ಉತ್ಸಾಹದ ಘೋಷಣೆಗಳು ನಭವನ್ನಿರಿಯುತ್ತಿದ್ದುವು. ಸಮವಸ್ತ್ರವೆಂದರೆ ಲುಂಗಿ ಕಚ್ಚೆಗಳಲ್ಲ, ಕೋಟು ಸೂಟುಗಳಲ್ಲ ; ಚಡ್ಡಿ ಬನಿಯನ್ನುಗಳು. ಅಂದು ನಡೆದ ಮೆರೆವಣಿಗೆ ಚಡ್ಡಿ ಮೆರೆವಣಿಗೆಯೆಂದೇ ಸುಪ್ರಸಿದ್ಧವಾಗಿದೆ. ಚಡ್ಡಿ ಧರಿಸಿದ ಶಂಕರ ಗೌಡರು ಮೆರೆವಣಿಗೆಯ ಅಗ್ರಭಾಗದಲ್ಲಿದ್ದರು. ಹಿಂಸಾಕೃತ್ಯಗಳಿಗವಕಾಶವಾಗದಂತೆ, ಎಚ್ಚರಿಕೆಯಿಂದಿರಲು ಜಿಲ್ಲಾಧಿಕಾರಿಗಳೇ ಮೆರೆವಣಿಗೆಯೊಡನೆ ನಡೆಯುತ್ತಾರೆ. ಆ ಮೆರೆವಣಿಗೆಯ ವರದಿ ಕಣ್ಣಿಗೆ ಬಿದ್ದ ಕೂಡಲೇ ಸರ್ಕಾರದ ಆಸನ ಕಂಪಿಸುವಂತಾಗು ತ್ತದೆ.

ಅಂದಿನಿಂದ ಸರ್ಕಾರದ ವಾಹನಗಳಿಗೆ ಮಂಡ್ಯದಲ್ಲಿ ಪ್ರವೇಶಾವಕಾಶ ತಪ್ಪಿ ಹೋಗುತ್ತದೆ. ಆ ಊರಿಗೆ ಬರುವುದಿರಲಿ, ಅದರ ಮೂಲಕ ಬೇರೆ ಊರುಗಳಿಗೆ ಹೋಗಲೂ ಮಂತ್ರಿಗಳು ಹೆದರಿದರು. ಮೈಸೂರು ಮಡಿಕೇರಿ ನೀಲಗಿರಿಗಳ ಕಡೆ ಹೋಗುವವರು ಮಂಡ್ಯವನ್ನು ತಪ್ಪಿಸಿ, ಸುತ್ತುಬಳಸಿನ ದಾರಿ ಹಿಡಿಯುತ್ತಾರೆ. ಆ ದಾರಿಗಳಲ್ಲಿ ಪ್ರಯಾಣ ಮಾಡುವಾಗಲೂ ಎದೆಯ ಮೇಲೆ ಕೈಯಿಟ್ಟುಕೊಂಡಿರುತ್ತಾರೆ ; ಗುಂಪು ಕಂಡಕೂಡಲೇ ಅವರ ಆಸನ ರೇಚಕಕ್ರಾಂತಿಗೀಡಾಗುತ್ತದೆ. ಅಂಥ ಅಪಾಯ ಕಾರೀ ಸಂದರ್ಭದಲ್ಲೊಮ್ಮೆ ಮುಖ್ಯಮಂತ್ರಿ ದೇವರಾಜ ಅರಸು ಮಂಡ್ಯದ ಮಾರ್ಗ ವಾಗಿ ಮೈಸೂರಿಗೆ ಹೋಗಲು ಬರುತ್ತಾರೆ. ಜನಕ್ಕೆ ಆ ಸುದ್ದಿ ಹೇಗೋ ಗೊತ್ತಾಗಿ ರಾಜಮಾರ್ಗದಲ್ಲಿ ಗುಂಪುಗೂಡುತ್ತಾರೆ. ಪೋಲೀಸು ಪಡೆ ಸಹ ಆ ಗುಂಪು ಚದರಿಸಲು ಪ್ರಯತ್ನಿಸಿ ವಿಫಲಗೊಳ್ಳುತ್ತದೆ. ಕೊನೆಗೆ ಮುಖ್ಯಮಂತ್ರಿಗಳು ಪೋಲೀಸರಿಂದ ಸುತ್ತುವರಿದ ಮುಸ್ಲಿಮರೊಬ್ಬರ ಮನೆಯಲ್ಲಿ ಆಸರೆ ಪಡೆಯುತ್ತಾರೆ. ಅಲ್ಲಿಗೂ ಗುಂಪು ದಾಳಿ ಮಾಡುತ್ತದೆ. ಆ ಸುದ್ದಿ ತಿಳಿದ ಶಂಕರಗೌಡರು ಮಿಂಚಿನ ವೇಗದಲ್ಲಿ ಗಲಭೆಯ ಕೇಂದ್ರಕ್ಕೆ ಧಾವಿಸುತ್ತಾರೆ. 'ಮುಖ್ಯಮಂತ್ರಿಗೆ ಧಿಕ್ಕಾರ ! ಮಾಜಿ ಮಂತ್ರಿಗೆ ಜಯ ಕಾರ !' ಗಳು ಮೊಳಗುತ್ತವೆ. ಮುಖ್ಯಮಂತ್ರಿಗಳ ಎದೆ ಪದರುಗುಟ್ಟುತ್ತದೆ ; ಅವರ ಮನಸ್ಸು ಉಬ್ಬೆಗದ ಮೊನೆಯಲ್ಲಿ ಚಡಪಡಿಸುತ್ತದೆ. ಕೋಳಿ ಮರಿಗಳ ಮೇಲೆ ಗಿಡಗ ಹಾಯ್ದಂತೆ ಶಂಕರಗೌಡರು ಗುಂಪಿನ ಮೇಲೆ ಬಿದ್ದು, ರೇಗಾಡುತ್ತಾರೆ ; ಘೋಷಣೆ ಗಳನ್ನು ತಡೆಯುತ್ತಾರೆ. ಜನ ದಾರಿ ಬಿಡದಿದ್ದಾಗ ಜನರ ಭುಜಗಳ ಮೇಲೆ ರಪರಪನೆ ಬಡಿಯುತ್ತಾರೆ. 'ನಾನಿರುವಾಗ ಮುಖ್ಯಮಂತ್ರಿಗಳ ಕೂದಲೂ ಕೊಂಕಲಾರದು. ನನ್ನನ್ನು ಕೊಂದ ನಂತರ ನೀವು ಮುಖ್ಯಮಂತ್ರಿಗಳನ್ನು ಬಲಿ ತೆಗೆದುಕೊಳ್ಳಬಹುದು' ಎಂದು ಸಾರುತ್ತ ಅವರು ಮನೆಯೊಳಗೆ ಪ್ರವೇಶಿಸುತ್ತಾರೆ. ಜನಸಂದಣಿ ಬಹುಬೇಗ ಕರಗಿಹೋಗುತ್ತದೆ. ಮುಖ್ಯಮಂತ್ರಿಗಳು ಮೈಸೂರಿನ ಕಡೆಗೆ ಮುಖವಾಗುತ್ತಾರೆ.

ಸರ್ಕಾರ ಶಂಕರಗೌಡರೇ ಮೊದಲಾದ ಮಂಡ್ಯದ ಕೆಲವು ಪ್ರಮುಖರನ್ನು ಸೇರಿಸಿ ಕೊಂಡು ಪರಿಶೀಲನಾ ಸಮಿತಿಯೊಂದನ್ನು ನೇಮಿಸುತ್ತದೆ. ಆ ಸಮಿತಿ ತಂತ್ರಜ್ಞರು ತಯಾರಿಸಿದ್ದ ವರದಿಯನ್ನು ಆಮೂಲಾಗ್ರವಾಗಿ ಪರಿಶೀಲಿಸುತ್ತದೆ. ಮುಖ್ಯಮಂತ್ರಿ

ಗಳು ಶಂಕರಗೌಡರನ್ನು ಪ್ರತ್ಯೇಕವಾಗಿ ಕರೆಸಿಕೊಂಡು ವಿಚಾರವಿನಿಮಯ ನಡಸುತ್ತಾರೆ. ವಿಶ್ವೇಶ್ವರಯ್ಯನಾಲಾ ಕೆಳಗಿನ ಅಚ್ಚುಕಟ್ಟುದಾರರ ಹಕ್ಕುಗಳಿಗೆ ಭಂಗ ಬರದಂತೆ, ಈಗವರಿಗೆ ಒದಗಿಸುತ್ತಿರುವ ನೀರಿನ ಪ್ರಮಾಣದಲ್ಲಿ ಮುಂದೆಯೂ ಖೋತಾ ಬೀಳ ದಂತೆ ಸರ್ಕಾರಿ ಆಜ್ಞೆ ಹೊರಡಿಸುವುದಾಗಿ ಮುಖ್ಯಮಂತ್ರಿಗಳು ಅವರಿಗೆ ವಚನ ನೀಡುತ್ತಾರೆ. ಇಂಗು ಆವಿ ಸೋರುಗಳ ಮೂಲಕ ಪೋಲಾಗುತ್ತಿದ್ದ ನೀರನ್ನು ರಕ್ಷಿಸುವ ಬಗ್ಗೆ, ಕಾಲುವೆಗಳ ದುರಸ್ತಿಯ ಬಗ್ಗೆ ಶಂಕರಗೌಡರು ಮಾಡಿದ ಸಲಹೆ ಗಳನ್ನೆಲ್ಲ ಮುಖ್ಯಮಂತ್ರಿಗಳು ಒಪ್ಪಿಕೊಳ್ಳುತ್ತಾರೆ. ತಮ್ಮ ಶರತ್ತುಗಳನ್ನೊಳಗೊಂಡಂತೆ ಸರ್ಕಾರ ಆಜ್ಞೆ ಹೊರಡಿಸುವುದಾದರೆ ವರುಣ ನಾಲೆಯ ನಿರ್ಮಾಣಕ್ಕೆ ತಾವು ಒಪ್ಪಿಗೆ ನೀಡುವುದಾಗಿ ಗೌಡರು ತಮ್ಮ ನಿಲವನ್ನು ಸ್ಪಷ್ಟಪಡಿಸುತ್ತಾರೆ.

ಸಮಗ್ರ ರೈತವರ್ಗದ ಬಂಧುವಾದ ಗೌಡರಲ್ಲಿ ಸಂಕೋಚ ಪ್ರವೃತ್ತಿಗೆಡೆಯೇ ಇಲ್ಲ; ಈಗಾಗಲೇ ಕೃಷ್ಣರಾಜ ಸಾಗರದ ಪ್ರಯೋಜನವನ್ನು ಪಡೆಯುತ್ತಿರುವ ರೈತರಿಗೆ ಅನಾನುಕೂಲವಾಗದಂತೆ ಇತರರೂ ಅದರ ಪ್ರಯೋಜನ ಪಡೆಯುವುದಾದರೆ ನಾಡಿನ ಹಿತದೃಷ್ಟಿಯಿಂದ ಅದು ಸ್ವಾಗತಾರ್ಹವೆಂಬ ಗೌಡರ ನಿಲವು ಎಲ್ಲ ಕಾಲಕ್ಕೂ ಸರಿಯಾದದ್ದೇ. ಅವರು ವರುಣ ನಾಲೆ ಚಳವಳಿಯ ಕೇಂದ್ರಶಕ್ತಿಯಾಗಿದ್ದರು ನಿಜ. ಪೂರ್ವಾಪರಗಳ ವಿಮರ್ಶೆಯನಂತರ, ಸಾಧಕ ಬಾಧಕಗಳ ಪರಿಶೀಲನೆಯ ತರುವಾಯ ಎರಡೂ ಕಡೆಯವರ ಕಲ್ಯಾಣದ ದೃಷ್ಟಿಯಿಂದ ಪೂರ್ವಾಗ್ರಹಪೂರ್ವಕವಾದ ಛಲವನ್ನು ತೊರೆದು, ಬದಲಾವಣೆ ಹೊಂದಿದ ಪರಿಸ್ಥಿತಿಯಲ್ಲಿ ಹಿಂದಿನ ನಿಲವನ್ನು ಮಾರ್ಪಾಡು ಮಾಡಿಕೊಳ್ಳುವುದು ತಪ್ಪಲ್ಲ. ಅದು ಸಜ್ಜನರ ಲಕ್ಷಣ. ಯಾವುದೇ ವ್ಯಾಜ್ಯವನ್ನಾಗಲಿ ಸಂಧಾನ ಸಹಕಾರಗಳ ಮೂಲಕ ಬಗೆಹರಿಸಿಕೊಳ್ಳುವುದು. ಸುಸಂಸ್ಕೃತ ಮಾರ್ಗ, ಅದೇ ಗಾಂಧಿಮಾರ್ಗ.

ಹಾಲಿ ವಿ. ಸಿ. ನಾಲಾಬಯಲಿಗೆ ಸಾಕಷ್ಟು ನೀರು ಒದಗಿಸಿ ತದನಂತರ ಹೊಸ ನಾಲಾ ಬಯಲಾದ ವರುಣಾ ನಾಲೆಗೆ ನೀರು ಒದಗಿಸುವ ಹಾಗೂ ನಾಲಾ ದುರಸ್ತಿ ಮುಂತಾದುವನ್ನೊಳಗೊಂಡ ಒಪ್ಪಂದ ಏರ್ಪಾಟಾಯಿತು.

## ಅಧ್ಯಾಯ–ಹನ್ನೆರಡು

### ೧

ನನ್ನ ಬಾಳಿನ ಪುಟಗಳ ಆರಂಭದಲ್ಲಿಯೇ ನನ್ನಲ್ಲಿ ಯಾವ ನಿಗದಿತ ದಾಖಲೆಗಳೂ ಇಲ್ಲವೆಂದು ತಿಳಿಸಿದ್ದೇನೆ. ಕೇವಲ ನೆನಪನ್ನೆ ಅವಲಂಬಿಸಿ ಇಲ್ಲಿಯವರೆಗೆ ಕೆಲವು ಸಂಗತಿಗಳನ್ನು ಹೇಳಿಕೊಂಡು ಬಂದಿದ್ದೇನೆ. ಅವುಗಳಲ್ಲಿಯೂ ಒಂದು ನಿಗದಿತ ವರ್ಗೀಕರಣವನ್ನು ಯಾರೂ ನಿರೀಕ್ಷಿಸಲಾಗದು. ಇದ್ದುದರಲ್ಲಿ ಒಂದು ಕಾಲಯೋಜಿತ ರೀತಿಯಲ್ಲಿ ನೆನಪಿಗೆ ಬಂದದ್ದನ್ನು ಹೇಳುತ್ತಾ ಹೋಗಿದ್ದೇನೆ. ಹಳ್ಳಿಯಲ್ಲಿ ಹುಟ್ಟಿ ಬಂದವನಾಗಿ ಅಲ್ಲಿನ ಪರಿಸರ ನನ್ನ ಜೀವನದ ಮೇಲೆ ಬೀರಿದ ಪ್ರಭಾವ, ಸ್ವಾತಂತ್ರ್ಯ ಹೋರಾಟಗಾರನಾಗಿ ನಾನು ಕಂಡ ಆ ಹೋರಾಟದ ನೆನಪುಗಳನ್ನು ಸ್ವಲ್ಪ ಮಟ್ಟಿಗಾದರೂ ದಾಖಲಿಸುವುದು ಈ ನನ್ನ ಆತ್ಮಕತೆಯ ಉದ್ದೇಶ. ಅದನ್ನು ನಿರ್ವಂಚನೆಯಿಂದ ಮಾಡಿದ್ದೇನೆ ಅನ್ನಿಸುತ್ತದೆ. ನನ್ನ ವೈಯಕ್ತಿಕ ಜೀವನವನ್ನು ಮುಂದು ಮಾಡದೆ ನಾನೂ ಸೇರಿದಂತೆ ನಡೆದುದನ್ನು ಯಥಾವತ್ತಾಗಿ ನಿರೂಪಿಸಲು ಯತ್ನಿಸಿದ್ದೇನೆ. ಇಲ್ಲಿಯವರೆಗೆ ಹೇಳಿಕೊಂಡಿರುವ ಕತೆಯಲ್ಲೂ ಬಿಟ್ಟು ಹೋಗಿರುವುದೆಷ್ಟೋ ಹೇಳಲಾಗುವುದಿಲ್ಲ. ನಾನು ಕಂಡದ್ದು ಉಂಡದ್ದು ಅನುಭವಿಸಿದ ಸ್ಮೃತಿ ಸಿಂದೆಗಳನ್ನೆಲ್ಲ ಇಲ್ಲಿ ಹೇಳಲಾಗುವುದಿಲ್ಲ, ಹೇಳುವುದೂ ಅಲ್ಲ. ಮಾನ್ಯ ಓದುಗರು ಈ ಅರೆ ಕೊರೆಗಳನ್ನೆಲ್ಲ ಮನ್ನಿಸುವರಾಗಿ ನಂಬುತ್ತೇನೆ.

ಶ್ರೀ ಶಂಕರಗೌಡ ಶಿಕ್ಷಣ ಕಾಲೇಜ್ ಕಟ್ಟಡದ ಉದ್ಘಾಟನೆ ಮಾಡಲು ಮಹಾಕವಿ ಕುವೆಂಪು ಅವರನ್ನು ಆಹ್ವಾನಿಸಲು ಜನತಾ ಶಿಕ್ಷಣ ಸಮಿತಿ ಅಧ್ಯಕ್ಷರೂ ಕವಿಗಳ ಸಹಪಾಠಿಗಳೂ ಆದ ಪಿ. ಮಲ್ಲಯ್ಯನವರೊಡನೆ ನಾನು ಹೋಗಿದ್ದು ಕವಿಗಳಿಗೆ ಆಹ್ವಾನವಿತ್ತೆವು. ಸಮಾರಂಭಕ್ಕೆ ಬರಲು ಸಮ್ಮತಿಸಿದರು. ಕಾರ್ಯಕ್ರಮ ಸಂಜೆ 5 ಘಂಟೆಗೆ ಗೊತ್ತು ಮಾಡಲಾಯ್ತು.

ಕುವೆಂಪು ಅವರ ಸಂಜೆ ಉಪಾಹಾರದ ಏರ್ಪಾಟಿನ ವಿಷಯ ಮಾತನಾಡುವುದನ್ನು ಮರೆತೆವಲ್ಲ ಎಂದು ಶ್ರೀ ಪಿ. ಮಲ್ಲಯ್ಯನವರು ಮಂಡ್ಯಕ್ಕೆ ಬಂದಾಗ ಜ್ಞಾಪಿಸಿಕೊಂಡರು. ನಾಳೆ ನಾನು ಹೋಗಿ ಉಪಾಹಾರದ ಕಾರ್ಯಕ್ರಮ ಗೊತ್ತು ಮಾಡಿಕೊಂಡು ಬರುವುದಾಗಿ ತಿಳಿಸಿದೆ. ನಾನು ಮೈಸೂರಿಗೆ ಹೋಗಿ ಕುವೆಂಪು ಅವರನ್ನು ನಮ್ಮ ಮನೆಗೆ ಉಪಾಹಾರಕ್ಕೆ ಆಹ್ವಾನಿಸಿ ಬರುತ್ತೇನೆಂದು ನನ್ನ ಪತ್ನಿ ಪಾರ್ವತಮ್ಮನವರಿಗೆ ತಿಳಿಸಿದೆ. ಅವರೂ ಸಹ ನನ್ನ ಜೊತೆ ಕವಿಗಳನ್ನು ನೋಡಲು ಬಂದರು. ಮಂಡ್ಯದ ಕಾರ್ಯಕ್ರಮದಂದು ಸಂಜೆ 4 ಘಂಟೆ ಉಪಾಹಾರಕ್ಕೆ ನಮ್ಮ ಮನೆಗೆ

ಆಹ್ವಾನಿಸಲು ಬಂದಿದ್ದೇವೆ ಎಂದೆ. ನಿನ್ನೆ ನೀವು, ಮಲ್ಲಯ್ಯನವರು ಗೊತ್ತು ಮಾಡಿದ್ದ ಕಾರ್ಯಕ್ರಮದಲ್ಲಿ ಉಪಾಹಾರದ ಕಾರ್ಯಕ್ರಮವು ಸೇರಿಕೊಂಡಿತ್ತಲ್ಲವೆ ! ಎಂದರು ಕವಿಗಳು. ಕಾರ್ಯಕ್ರಮಕ್ಕೆ ತಾವು ಬಂದಮೇಲೆ ಉಪಾಹಾರದ ಏರ್ಪಾಟು ಸಹ ಸೇರಿರುತ್ತದೆ. ಈ ಒಂದು ಸುಸಮಯವನ್ನು ಬಳಸಿಕೊಂಡು ನಮ್ಮ ಮನೆಗೆ ಆಹ್ವಾನಿಸಲು ಬಂದೆವು. ದಯಮಾಡಿ ಅಂದು ನನ್ನ ನಿವಾಸ ಗುರುಕೃಪ ಪಾವನ ಗೊಳಿಸಿ ಎಂದು ಕೇಳಿಕೊಂಡೆವು. ನೀವು ಹೇಳುವುದೇನು ? ನಾನು ಹೋಗದಿರುವ ಮನೆಗಳು ಅಪಾವನ ಎನ್ನುವಿರಾ ? ಎಂದು ಪ್ರಶ್ನೆ ಹಾಕಿದರು. ತಮ್ಮ ಮನವೇ ನನಗೆ ಗೊತ್ತಿಲ್ಲ. ನನ್ನ ಮನದ ಅಭೀಪ್ಸೆ ತಿಳಿಸಿವೆ, ಎಂದೆ.

"ನಿಮ್ಮ ಆಹ್ವಾನ ತಿರಸ್ಕರಿಸಲಾರೆ. ತುಂಬಾ ಜನಸೇರಿ ದೊಂಬಿ ಉಪಾಹಾರ ಕೂಟವಾಗಬಾರದು ನಾಲ್ಕೈದು ಜನಗಳಿದ್ದರೆ ಸಾಕು" ಎಂದರು ಕವಿಗಳು. ನಾವು ಮಾತನಾಡುವಾಗ ಮಹಾತಾಯಿ ಹೇಮಾವತಿಯವರು ಇದ್ದರು. "ನೋಡಿ ಜವರಪ್ಪ ಗೌಡರೇ ನಿಮ್ಮ ಕವಿಗಳಿಗೆ ಅದೇಕೋ ಏನೋ ಜನರ ಗುಂಪು ಎಂದರೆ ಆಗದು. ನಿಮ್ಮ ಕವಿಗಳು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾಗ ನಾನು ಇವರು ಬೆಂಗಳೂರಿನಿಂದ ಕಾರಿನಲ್ಲಿ ಬರುತ್ತಿದ್ದೆವು. ಚನ್ನಪಟ್ಟಣದ ಈಚೆ ಊರ ಬಳಿ ಕಾರು ಸ್ವಲ್ಪ ತೊಂದರೆ ಕೊಟ್ಟಿತು. ಡ್ರೈವರ್ ಕಾರು ನಿಲ್ಲಿಸಿ ಬಾನೆಟ್ ತೆಗೆದು ಏನು ತೊಂದರೆ ಯಾಗಿದೆ ನೋಡುತ್ತಿದ್ದ. ದಾರಿಯಲ್ಲಿ ಹೋಗುತ್ತಿದ್ದ ಜನ ಕಾರಿನಲ್ಲಿದ್ದ ಕವಿಗಳನ್ನು ಕಂಡರು. ಸುತ್ತಮುತ್ತ ಇದ್ದವರುಗಳನ್ನೂ ಕೂಗಿ ಕುವೆಂಪು ಕಾರಲ್ಲಿದ್ದಾರೆ ನೋಡ ಬನ್ನಿ ಎಂದರು. ಕವಿಗಳಿಗೆ ಏನಾಯಿತೋ ಏನೋ ಕಾರಿಂದ ಇಳಿದು ಬಳಿಯಿದ್ದ ಬಯಲು ತೆಂಗಿನ ತೋಟಕ್ಕೆ ಹೋದರು. ಜನ ನೋಡದೆ ಬಿಟ್ಟಾರಯೆ. ಬಯಲಲ್ಲಿ ಚೆನ್ನಾಗಿ ಕಾಣುತ್ತಿದ್ದ ಕವಿಗಳನ್ನು ನೋಡಿ ಆನಂದಿತರಾಗಿ ಹೋದರು. ಇವರ ಸಹ ವಾಸ ಹೀಗಿದೆ. ನಿಮ್ಮ ಎಚ್ಚರಿಕೆಗಾಗಿ ಈ ಪ್ರಕರಣ ಜ್ಞಾಪಿಸಿಕೊಂಡೆ. ನಾಲ್ಕೈದು ಜನರ ಮೇಲೆ ಸೇರಿಸಬೇಡಿ ಎಂದರು ಮಹಾತಾಯಿಯವರು.

ಮಹಾತಾಯಿಯವರೊಡನೆ ನನ್ನ ಪತ್ನಿಯವರಾದ ಪಾರ್ವತಮ್ಮನವರು ಒಳಕ್ಕೆ ಹೋದರು. ನಾಲ್ಕೈದು ನಿಮಿಷ ಮಾತನಾಡಿ ಬಂದರು. ಹೊರಟು ಮನೆಗೆ ಬರುವಾಗ ಅದೇನು ? ಒಳಗೆ ಹೋಗಿ ತಾಯಿ ಬಳಿ ಮಾತನಾಡಿ ಬಂದದ್ದು ಎಂದು ಕೇಳಿದೆ. "ಅದೆಲ್ಲ ನಿಮಗೇಕ್ರಿ ?" ಗಂಡಸಿಗೇಕೆ ? ಗೌರಿ ದುಃಖ" ಎಂದ ಹಾಗೆ ಎಂದರು. ಬಹುಶಃ ಕವಿಗಳಿಗೆ ಏನು ತಿಂಡಿ ಮಾಡಬೇಕೆಂಬ ಬಗ್ಗೆ ಸೂಚನೆಯಿರಬೇಕು ಎಂದು ಕೊಂಡು ಆ ವಿಚಾರದ ಬಗ್ಗೆ ಒತ್ತಾಯ ಮಾಡಲಿಲ್ಲ.

ಡಾ: ದೇ. ಜವರೇಗೌಡರು, ಕೆ. ಟಿ. ವೀರಪ್ಪನವರು, ಪಿ. ಮಲ್ಲಯ್ಯನವರು, ಎ. ಸಿ. ಮಾದೇಗೌಡರು, ಪ್ರೊ. ಎಸ್. ರಾಮೇಗೌಡರು, ಟೌನ್‌ಪ್ಲಾನಿಂಗ್ ಡೈರಕ್ಟರ್ ಡಾ: ಕೆ.ಎಸ್. ರಾಮೇಗೌಡರು ಇಷ್ಟು ಮಂದಿಗೆ ಮಾತ್ರ ಕವಿಗಳೊಡನೆ ಉಪಾಹಾರಕ್ಕೆ

ಆಹ್ವಾನಿಸಿದ್ದೆ. ಅದು ಹೇಗೋ ? ಆದ್ಯಾರ ಮೂಲಕವೋ ಜನರಿಂದ ಜನರಿಗೆ ತಲುಪಿ ನನ್ನ ನಿವಾಸದ ರಸ್ತೆ ಏನೋ ಒರಸ್ತೆಯುದ್ದಕ್ಕೂ ಇಕ್ಕೆಲದಲ್ಲೂ ವಿದ್ಯಾರ್ಥಿಗಳು, ಹೆಂಗಸರು ಗಂಡಸರಾದಿಯಾಗಿ ಮಕ್ಕಳು ಸೇರಿ ಸಹಸ್ರ ಸಂಖ್ಯೆಯಲ್ಲಿ 3 ಘಂಟೆಗೆ ಸೇರ ಲಾರಂಭಿಸಿದ್ದಾರೆ. ಕವಿಗಳು ಏನೆಂದಾರೊ ಎನ್ನುವ ಅಂಜಿಕೆ. ದಾರಿಯಲ್ಲಿ ಸೇರುವ ಜನಕ್ಕೆ ನನ್ನದೇನು ಜವಾಬ್ದಾರಿ ಎಂದು ಮನೆಗೆ ಬರುತ್ತೇನೆ. ಕಾಂಪೌಂಡು, ಒಳಗೆ ಹಿಂದುಗಡೆ ಸುಮಾರೆಂದರೂ 300 ಜನರಷ್ಟು ಕವಿಗಳ ಬರವಿಗಾಗಿ ಕಾಯುತ್ತಿ ದ್ದಾರೆ. ಜನರಿಗೆ ನನ್ನ ವೇದನೆ ಹೇಳಿಕೊಂಡೆ. ಏನು ಸ್ವಾಮಿ ನಾವು ಕವಿಗಳನ್ನು ನೋಡಿ ನಮಸ್ಕರಿಸಿ ಆಶೀರ್ವಾದ ಪಡೆದರೆ ನಿಮಗಾಗಲಿ ಕವಿಗಾಗಲಿ ಆಗುವ ನಷ್ಟ ವೇನು ? ಎಂದರು. ನಾನು ನಿರುತ್ತರನಾದೆ.

ನಾಲ್ಕು ಘಂಟೆಗೆ ಸರಿಯಾಗಿ ಕವಿಗಳು ನನ್ನ ನಿವಾಸ ಗುರುಕೃಪಕ್ಕೆ ದಯ ಮಾಡಿಸಿದರು. ಹೆಬ್ಬಾಗಿಲಿನಲ್ಲಿದ್ದ ಡಾ: ಕೆ. ಎಸ್. ರಾಮೇಗೌಡರು ಕವಿಗಳಿಗೆ ಹಸ್ತ ಲಾಘವವನ್ನಿತ್ತು ಸ್ವಾಗತಿಸಿದರು, ಅಷ್ಟರಲ್ಲಿ ಮನೆ ಹಿಂದೆ ಇದ್ದ ನಾನು ಬಂದೆ. ಸರ್ ಡಾ: ಕೆ. ಎಸ್. ರಾಮೇಗೌಡರ ಪರಿಚಯವಾಗಿರಬೇಕು ಎಂದೆ. ಆಹುದು ಆಯ್ತು, ಸೆಂಟ್ರಲ್‌ಕಾಲೇಜಿನಲ್ಲಿದ್ದಾಗ, ಇವರು ವಿಶ್ವನಾಥಯ್ಯ ಸೇರಿ ಹಳೆ ಜಟಕಾದಲ್ಲಿ ಕೆಡವಿದ ಪ್ರಸಂಗ ಜ್ಞಾಪಿಸಿದರು ಎಂದು ನಗುತ್ತಾ ಹೇಳಿದರು. ಸರ್ ಅದಕ್ಕಿಂತ ಮುಖ್ಯವಾಗಿ ರಾಮೇಗೌಡರು ತಮ್ಮ ನೆಚ್ಚಿನ ಸ್ನೇಹಿತ ದಿವಂಗತ ಎಂ. ತಮ್ಮಯ್ಯನವರ ಹಿರಿಯ ಅಳಿಯಂದಿರು ಎಂದೆ. ಎರಡು ಹೆಜ್ಜೆ ಹಿಂದೆ ಹೋಗಿ ಕೈ ಹಿಡಿದು ಒಳಕ್ಕೆ ಕರೆದು ಕೊಂಡು ಬಂದು ತಮ್ಮ ಜೊತೆ ಕೂರಿಸಿಕೊಂಡು. 1964ನೆಯ ಇಸವಿಯಲ್ಲಿ ರಾಮೇಗೌಡರ ಗಂಡು ಮಕ್ಕಳಿಬ್ಬರು ನೀರಿನ ಪ್ರವಾಹದಲ್ಲಿ ಕೊಚ್ಚಿ ಹೋಗಿ ಮರಣ ಕ್ಕೀಡಾದ ಪ್ರಸಂಗ ನೆನೆದ ಕವಿಗಳು ತಮ್ಮ ಸಂತಾಪ ವ್ಯಕ್ತಪಡಿಸಿ ತಮ್ಮಯ್ಯನಂತು ಆ ಮೊಮ್ಮಕ್ಕಳ ಸಾವಿನಿಂದ ಜರ್ಜರಿತನಾಗಿ ಬಂದಿದ್ದ. ನಾನು ಕಷ್ಟ ಮನುಷ್ಯನಿ ಗಲ್ಲದೇ ಮರಕ್ಕೆ ಬಂದೀತೆ ಬಂದದ್ದನ್ನು ಅನುಭವಿಸಬೇಕು. ಅದನ್ನು ಎದುರಿಸುವುದು ಮಾನವರಾದ ತಮ್ಮ ಕೈಲಿಲ್ಲ ಎಂದು ಸಮಾಧಾನ ಮಾಡಿ ಕಳುಹಿಸಿದೆ'' ಎಂದು ತಿಳಿಸಿ ತಮ್ಮಯ್ಯನವರ ಸ್ನೇಹ ಹೇಗಿತ್ತು ಎಂಬುದನ್ನು ಕವಿಗಳು ವ್ಯಕ್ತಪಡಿಸಿದರು.

ನನ್ನ ಶ್ರೀಮತಿಯವರು ಕವಿಗಳೊಡನೆ ಮಕ್ಕಳು ಮೊಮ್ಮಕ್ಕಳ ಭಾವಚಿತ್ರ ತೆಗೆಸಿಕೊಳ್ಳುವ ಅವಕಾಶ ಕೊಡಬೇಕು ಎಂದು ಕೇಳಿಕೊಂಡರು. ಗಲಾಟೆ ನೋಡಿದ ಕವಿಗಳು ಅಜ್ಜಿ ಇಂದು ಭಾವಚಿತ್ರಕ್ಕೆ ಅವಕಾಶವಾಗದು. ನಾಳೆ ಮೈಸೂರಿಗೆ ಬನ್ನಿ ಅಜ್ಜಿಯೂ ಸೇರಿದಂತೆ ನಿಮ್ಮ ಜೊತೆ ಭಾವಚಿತ್ರ ತೆಗೆಸಿಕೊಳ್ಳುವಿರಂತೆ ಎಂದು ಹೊರಡುವಾಗ ನನ್ನ ಶ್ರೀಮತಿ ಅವರಿಗೆ ತಿಳಿಸಿದರು.

ಇದಾದ ಪ್ರಾತಃಕಾಲ ಮಗ ಮೊಮ್ಮಗನೊಡನೆ ಉದಯ ರವಿಗೆ ಹೋದೆವು. ಸಂಸ್ಕೃತ ಭಾಷೆ ಬಗ್ಗೆ ಹಂಪನಾ, ಶಿವರುದ್ರಪ್ಪ, ಶಿವಪ್ಪನವರು ಸೇರಿ ಚರ್ಚಿಸುತ್ತಿದ್ದಾರೆ.

ಜೊತೆಗೆ ಕವಿಗಳ Burst ಪ್ರತಿಮೆ ಮಾಡಲು ಶಿಲ್ಪಿಯೊಬ್ಬರನ್ನು ಕರ್ನಾಟಕ ವಿಶ್ವವಿದ್ಯಾಲಯದವರು ಕಳುಹಿಸಿದ್ದಾರೆ. ಈ ಮಧ್ಯೆ ನಾಪ್ತ. ಇಷ್ಟಾದರೂ ಕವಿಗಳು ತಾಳ್ಮೆಯಿಂದ ಮಹಾತಾಯಿ ಹೇಮಾವತಮ್ಮನವರನ್ನು ಕರೆಸಿ ಅವರೂ ಸೇರಿದಂತೆ ನನ್ನ ಮಗ, ಮೊಮ್ಮಗನೊಡನೆ ಭಾವಚಿತ್ರ ತೆಗೆಸಲು ಅವಕಾಶ ಕೊಟ್ಟರು.

ಶ್ರೀ ಆದಿಚುಂಚನಾಗಿರಿ ಸಂಸ್ಥಾನಕ್ಕೆ ಪ್ರಥಮ ಗುರುಗಳಾಗಿ ಬಂದ ಸ್ವಾಮಿ ಭಕ್ತನಾಥಜೀ ಅವರ ಪೂರ್ವಾಶ್ರಮ ಸಂನ್ಯಾಸದಲ್ಲೀ ನನ್ನ ಎಳೆತನದಲ್ಲೀ ಅವರ ಸಾಮೀಪ್ಯ ದೊರೆತು ಆಧ್ಯಾತ್ಮಜೀವನ ಹಾಗೂ ಸಾಮಾಜಿಕ ಸುಧಾರಣೆ, ಜಾತಿಬೇಧಗಳ ವಿರುದ್ಧ ಹೋರಾಟ ಇವು ಮೈಗೂಡಿದ್ದುದು.

ಇವರ ನಂತರ ಬಂದ ಕುವೆಂಪು ಅವರ ಸಹಪಾಠಿ ಸ್ವಾಮಿ ಶ್ರೀ ಚಂದ್ರಶೇಖರನಾಥಜೀ ಅವರ ಸಂಪರ್ಕವೂ ಜೊತೆಜೊತೆಯಾಗಿ ಬೆಳೆಯುತ್ತ ಬಂದು ಕುವೆಂಪು ಸಾಹಿತ್ಯದ ಬೆಳಕು ನನ್ನ ಮೇಲೆ ತೀವ್ರ ಪರಿಣಾಮ ಬೀರಿತು. ಕುವೆಂಪು ಶ್ರೀರಾಮಾಯಣ ದರ್ಶನಂ ಸ್ವಾಮಿಜೀ ಅವರಿಗೆ ಬಹುಪ್ರಿಯವಾದ ಆದರ್ಶವಾದ ಮೇರುಕೃತಿಯಾಗಿತ್ತು. ಶ್ರೀಮಠಕ್ಕೆ ಹೋದರೆ ಅನೇಕಬಾರಿ ನನ್ನನ್ನು ವಾರಕಾಲ ವಾಸ್ತವ್ಯ ಮಾಡಿಸುತ್ತಿದ್ದ ಸ್ವಾಮಿಗಳು ದಿನವೂ ನಾಲ್ಕಾರು ಘಂಟೆಕಾಲ ಶ್ರೀ ರಾಮಾಯಣ ದರ್ಶನಂ ಓದಿ ಅರ್ಥೈಸುತ್ತಿದ್ದರು. ಅವರು ಮತೀಯಮೌಢ್ಯಗಳ ನಿವಾರಣೆ ಪುರೋಹಿತಶಾಹಿಯ ವಿರುದ್ಧ ಕುವೆಂಪು ಅವರಂತೆಯೆ ಸಿಡಿದೆದ್ದವರು. ಪುರೋಹಿತರಿಲ್ಲದೆ ನನ್ನ ಮದುವೆಯನ್ನು ಮಾಡಿದವರು, ನಮ್ಮ ಸುತ್ತಮುತ್ತಲ ನಾಲ್ಕಾರು ಹಳ್ಳಿಗಳಲ್ಲಿ ಸ್ವಾಮಿಜೀ ಅವರೇ ಬಂದು ಮದುವೆಮಾಡಿ 3 ದಿನ ನಡೆಯುತ್ತಿದ್ದ ಮದುವೆ ಒಂದೇ ದಿನದಲ್ಲಿ ನಡೆಯುವಂತೆ ಶ್ರೀ ಭಕ್ತನಾಥ ಸ್ವಾಮೀಜಿಯವರು ಹಾಕಿದ್ದ ನಿಯಮವನ್ನು ಎಲ್ಲರೂ ಪರಿಪಾಲಿಸುವಂತೆ ಮಾಡಿದರು. ಹೀಗೆ ಕುವೆಂಪು ಅವರ ಸಾಹಿತ್ಯದಲ್ಲಿ ಸ್ವಾಮಿ ವಿವೇಕಾನಂದ ಮತ್ತು ಪರಮಹಂಸರ ಜೀವನ ಸಾಧನೆಯ ಹಾದಿಯನ್ನು ಮಾರ್ಗ ಸೂಚಿಯಾಗಿ ಪಡೆದೆ.

ರಾಜಕೀಯ ಜೀವನದಲ್ಲಿ ಹಾಸುಹೊಕ್ಕಾಗಿ ಬಂದವರು ತಗಡೂರು ರಾಮಚಂದ್ರರಾಯರು. ಅಸ್ಪೃಶ್ಯತೆ ಮತ್ತು ಮತಪರಿವರ್ತನೆಗೆ ಶ್ರಮಿಸಿದ ಹಾದಿ ಹಿಡಿದೆ. ಎಂ. ಎಸ್. ಜೋಯಿಸರು, ಟಿ. ಎಸ್. ಸುಬ್ಬಣ್ಣ, ಎ. ರಾಮಣ್ಣ, ಯು. ಕೆಂಚಪ್ಪ ಇವರುಗಳ ಜೊತೆಜೊತೆಯಾಗಿ ಶ್ರಮಿಸಿದ ದಿನಗಳು ಅವರ ಮಾರ್ಗದರ್ಶನ, ಕಾರಾಗೃಹದಲ್ಲಿ ಕಳೆದ ಹೆಚ್ಚಿನದಿನಗಳು. ಎಚ್. ಸಿ. ದಾಸಪ್ಪನವರು ಗಾಂಧೀಜಿ ಜೀವನ ಸಾಧನೆಗಳ ಹಾಗೂ ರಾಜಕಾರಣದಲ್ಲಿ ನಡೆವ ಹಾದಿ ಬಗ್ಗೆ ನೀಡಿದ ನಿರ್ದೇಶನ ನನಗೆ ಭಾವಿ ಜೀವನದಲ್ಲಿ ಸಾರ್ಥಕವಾಯಿತು.

ರಾಜಕೀಯ ಒತ್ತಡದಿಂದ ಹೊರಬಂದು ಗ್ರಂಥ ವ್ಯಾಪಾರಕ್ಕೆ ಇಳಿದ ನನಗೆ ಮಹಾಕವಿ ಕುವೆಂಪು ಅವರ ಸಾನ್ನಿಧ್ಯ ಸಾಮೀಪ್ಯ ದೊರೆತಂತಾಗಿ ದಿನವಿತ್ತರ

ವಿಳ್ಳೆ, ಅವೈಚಾರಿಕ, ಅವೈಜ್ಞಾನಿಕವಾದಗಳ ವಿರುದ್ಧ ಹಾಗೂ ವಿಶ್ವಮಾನವ ತತ್ತ್ವದ ಅನುಷ್ಠಾನಕ್ಕೆ ವಿಪುಲ ಪ್ರಯತ್ನ ಮಾಡುತ್ತಾ ಇಂದಿಗೂ ಹೋರಾಡುತ್ತಿದ್ದೇನೆ.

ಕಾರಾಗೃಹ ಬಂಧನಾನಂತರ ಮುಕ್ತವಾತಾವರಣದಲ್ಲಿ ಗೆಳೆಯರಾದ ಕೆ. ವಿ. ಶಂಕರಗೌಡ, ಜಿ. ಎಸ್. ಬೊಮ್ಮೇಗೌಡ, ಎಂ. ಕೆ. ಶಿವನಂಜಪ್ಪ ತರುಣ ಮಿತ್ರರಾದ ಜಿ. ಮಾದೇಗೌಡ, ಎಚ್. ಡಿ. ಚೌಡಯ್ಯ, ಗೌಡಗೆರೆ ನಾಗಪ್ಪ ಇವರುಗಳೊಡನೆ ಶಿಕ್ಷಣಕ್ಷೇತ್ರ ಮತ್ತು ಸಹಕಾರಿಕ್ಷೇತ್ರದಲ್ಲಿ ಅವರಲ್ಲೊಬ್ಬನಾಗಿ ನಿಂತು ಹೆಗಲಿಗೆ ಹೆಗಲು ಕೊಟ್ಟು ಶ್ರಮಿಸಿ ಸೇವೆಸಲ್ಲಿಸಿದ್ದೇನೆ.

ಕಂ|| ಶಿಂಗ್ರೀಗೌಡರು ( ಕೆ. ವಿ. ಶಂಕರಗೌಡರ ಮಾವಂದಿರು) ನನ್ನ ಜೀವನದಲ್ಲಿ ಬಹು ಪ್ರಮುಖ ಪ್ರಾತಃಸ್ಮರಣೀಯರು ನನ್ನ ವ್ಯಾಪಾರವಹಿವಾಟಿನಲ್ಲಿ ಆರ್ಥಿಕವಾಗಿ ಸಹಾಯವನ್ನು ಕೈವಿಹಾರಿ ನೀಡಿ ದೇವರ ಸಮಾನರಾಗಿದ್ದಾರೆ. ಅವರಿಂದ ನನ್ನ ಸಂಸಾರದ ಆರ್ಥಿಕ ಭದ್ರತೆಗೆ ಬುನಾದಿ ಆಯಿತು.

ಕಳೆದ 12 ವರ್ಷದ ಹಿಂದೆ ಪಟ್ಟಾಭಿಷಕ್ತರಾದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಕೈಗೊಂಡ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟಿನಲ್ಲಿ ಸದಸ್ಯನಾಗಿ ಪೂರ್ಣಕಾಲವನ್ನು ಟ್ರಸ್ಟಿಗಾಗಿ ವಿನಿಯೋಗಿಸುತ್ತ ಬಂದಿದ್ದೇನೆ. ಅಡ್ವೋಕೇಟ್ ಕೆ. ರಾಮೇಗೌಡ, ಎಂ. ಎಸ್. ಆತ್ಮಾನಂದ, ಜಿ. ಬಿ. ರಾಮಕೃಷ್ಣ, ಎಚ್. ಡಿ. ಚೌಡಯ್ಯ ಮುಂತಾದವರೊಡನೆ ಸೇರಿಕೊಂಡು ಸ್ವಾಮಿಗಳ ಪ್ರವಾಸ ಏರ್ಪಡಿಸಿ ಧನ ಸಂಗ್ರಹಿಸಿದೆ. 100 ವಿದ್ಯಾರ್ಥಿಗಳಿಗೆ ವಸತಿ ಏರ್ಪಡಿಸಿ ಮಹಾಕವಿ ಕುವೆಂಪು ಅವರಿಂದ ನಾಮನಿರ್ದೇಶನವಾದ ವಿಶ್ವಮಾನವದಲ್ಲಿ ಶಾಲೆ ಪ್ರಾರಂಭಿಸ ಲಾಗಿದೆ. ಇಂದೂ ಪೂರ್ಣಕಾಲ ಸ್ವಾಮಿಜೀ ಅವರೊಡನೆ ಶ್ರಮಿಸುತ್ತಿದ್ದೇನೆ.

ಪತ್ರಿಕೋದ್ಯಮದಲ್ಲಿ ಕೀರ್ತಿಶೇಷರಾದ ಬಿ. ಎನ್. ಗುಪ್ತರು ಮತ್ತು ಕೆ. ಶಾಮರಾವ್ ಅವರುಗಳು ಸಾಕಷ್ಟು ತಮ್ಮ ಅನುಭವಗಳ ಮೂಲಕ ಪತ್ರಿಕಾ ವೃತ್ತಿಯಲ್ಲಿ ಹೆಜ್ಜೆಯಿಡುವಂತೆ ಮಾಡಿದರು. 26-12-89ರಂದು ಇವರುಗಳ ಸವಿನೆನಪೋ ಎನ್ನುವಂತೆ ಪತ್ರಿಕಾ ಅಕಾಡೆಮಿ ಪ್ರಶಸ್ತಿ ಬಂದುದು ಹೆಚ್ಚಿನದಾಗಿದೆ.

"ವಿಶ್ವಾಮಿತ್ರ" ವಾರ ಪತ್ರಿಕೆ ಮಾಡಲು ಹೊರಟು 5 ಎಕರೆ ತರೀ ಜಮೀನು ಕಳೆದುಹೋಯಿತು. ಸಂಸಾರವನ್ನು ಮಂಡ್ಯದಿಂದ ಬೆಂಗಳೂರಿಗೆ ಬದಲಿಸಿದೆ. ಕರ್ನಾಟಕ ಏಕೀಕರಣ ಆಗೇ ಆಗುತ್ತೆ ಎಂದರಿತ ಜನರು "ವಿಶ್ವಾಮಿತ್ರ" ಬಗ್ಗೆ ಔದಾಸೀನ್ಯ ತೋರುತ್ತ ಬಂದರು. ಬೆಂಗಳೂರಿನ ನ್ಯೂಸ್ ಪೇಪರ್ ಸ್ಟಾಲುಗಳಲ್ಲಿ ನೂರಾರು ಸಂಚಿಕೆ ಖರ್ಜಾಗುತ್ತಿದ್ದು ಕೇವಲ ಒಂದೇ ಒಂದು ಸಂಚಿಕೆ ಕೂಡ ಖರ್ಚಾಗದ ದಿನ ಗಳಿಗೆ ಬಂತು. ಪತ್ರಿಕೆ ಅವಸಾನ ಇಂತಾದ ಮೇಲೆ ಮನಸ್ಸಿನ ಮೇಲೆ ದುಷ್ಪರಿಣಾಮ ವಾಗಿ ಮನೋರೋಗ ಹಿಡಿದು ಕರುಳಿನ ಹುಣ್ಣಾಗಿ ಆಸ್ಪತ್ರೆಗೆ ಚಿಕಿತ್ಸೆಗಾಗಿ ದಾಖಲಾದೆ.

"ವಿಶ್ವಾಮಿತ್ರ"ನ ಅವಸಾನ ಇಂತಾದರೆ ಮನೆಗೆ ದವಸ ಧಾನ್ಯ ಯಥೇಚ್ಛವಾಗಿ ಬರುತ್ತಿದ್ದ ಜಮೀನು ಕಳೆದುಹೋದಮೇಲೆ ಸಂಸಾರಕ್ಕೆ ಪ್ರತಿಯೊಂದನ್ನು ಕೊಳ್ಳು ವಂತಾಗಿ ಆರ್ಥಿಕ ಹೊರೆ ಹೆಚ್ಚಾಯಿತು. ನನ್ನ ಪತ್ನಿ ಶ್ರೀಮತಿ ಪಾರ್ವತಮ್ಮನು ನನಗೆ ಧೈರ್ಯ ತುಂಬಿ ಕಷ್ಟ ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತದೆಯೇ. ನೀವೇನು ಯಾರಿಗೂ ಅನ್ಯಾಯಮಾಡಿಲ್ಲ, ಮೋಸಮಾಡಿಲ್ಲ. ದೇಶದ ಕೆಲಸಕ್ಕೆ ಎಂದು ಗದ್ದೆ ಮಾರಿ ಪತ್ರಿಕೆ ನಡೆಸಿದಿರಿ. ಜನರ ಪ್ರೀತಿ ವಿಶ್ವಾಸಗಳಿರುವ ತನಕ ನಡೆಯಿತು. ಜನಕ್ಕೆ ಬೇಕಿಲ್ಲದ್ದು ನಿಮ್ಮೊಬ್ಬರಿಗೇನು ಬೇಕು. ಪತ್ರಿಕೆ ನಡೆಸಿದ್ದರಿಂದ ನಮ್ಮ ಸಂಸಾರದ ಪ್ರತಿಯೊಬ್ಬರು ಮುದ್ರಣಾಲಯದ ಒಂದಲ್ಲ ಒಂದು ಕೆಲಸವನ್ನು ಕಲಿತಂತಾಗಿದೆ. ಎಲ್ಲರೂ ಮುದ್ರಣಾಲಯದ ಕೆಲಸ ಕಲಿಯಲು ತರಬೇತಿ ಪಡೆಯಲು ಆಗುತ್ತಿದ್ದ ಖರ್ಚೆಷ್ಟು. ಮೈಮುರಿದು ಎಲ್ಲರೂ ಮುದ್ರಣ ಕೆಲಸಮಾಡಿ ಸಂಪಾದಿಸಿ ಅದೇ ಜಮೀನನ್ನು ಸಂಪಾದನೆ ಮಾಡೋಣ ಎಂದು ಧೈರ್ಯ ತುಂಬಿದರು. ಪತ್ನಿಯ ಧೈರ್ಯೋತ್ಸಾಹದಿಂದ ಕಾಯಿಲೆಯಿಂದ ಚೇತರಿಸಿಕೊಂಡೆ. ಕೊನೆಗೂ ಪತ್ನಿ ಪಾರ್ವತಮ್ಮನ ಆಶಯದಂತೆ ಮುದ್ರಣಾಲಯದ ಕೆಲಸಮಾಡಿ ಕಳೆದುಹೋದ ಜಮೀನಿಗಿಂತ ಹೆಚ್ಚಾಗಿಯೇ ಜಮೀನು ಸಂಪಾದನೆ ಮಾಡಲಾಯ್ತು.

ನನಗೆ ಮತ್ತು ಪತ್ನಿ ಪಾರ್ವತಮ್ಮನಿಗೂ ಇಳಿವಯಸ್ಸು. ವಯಸ್ಸಾದವರಿಗೆ ತಾನೆ ರೋಗ ರುಜಿನಗಳು ಬೆನ್ನುಹತ್ತುವುದು, ತನ್ನ ಆರೋಗ್ಯ ಕಾಪಾಡಿಕೊಳ್ಳು ವುದಕ್ಕಿಂತ ಪತ್ನಿ ಪಾರ್ವತಮ್ಮನು ನನ್ನ ಆಹಾರ ಪಾನೀಯ ನೀಡಿ ಬಹು ಎಚ್ಚರಿಕೆ ಯಿಂದ "ಭೋಜ್ಯೇಷು ಮಾತಾ" ಎಂಬ ಉಪನಿಷತ್ ವಾಕ್ಯದಂತೆ ಮಾತೃರೂಪದಲ್ಲಿ ನನ್ನನ್ನು ರಕ್ಷಿಸಿಕೊಂಡು ಬರುತ್ತಿದ್ದಾರೆಂಬುದು ಉಲ್ಲೇಖಾರ್ಹವಾದುದು.

ನನ್ನ ಮೂರನೆಯ ಭಾವಮೈದುನ ಕೃಷ್ಣ, ನನ್ನ ಸಂಸಾರ ಆರ್ಥಿಕ ದಿಗ್ಬಂಧನಕ್ಕೊಳಗಾಗಿದ್ದಾಗ 14 ವರ್ಷದವನು. 7ನೆಯ ತರಗತಿ ಉತ್ತೀರ್ಣನಾಗಿ ಶ್ರೀ ಆದಿಚುಂಚನಗಿರಿಗೆ ಓದು ಮುಂದುವರಿಸಲು ಹೋಗುವುದಾಗಿ ಹಠ ಹಿಡಿದ. ಅವನಿಲ್ಲದೆ ಸಂಸಾರ ಸಾಗುವುದು ಕಷ್ಟವಾಗಿತ್ತು. ಮಕ್ಕಳೆಲ್ಲರೂ ಚಿಕ್ಕವರಿದ್ದು ಶಾಲೆಗೆ ಹೋಗು ತ್ತಿದ್ದರು. ಅವರೆಲ್ಲರನ್ನು ಸಲಹುವ ಜವಾಬ್ದಾರಿ ಅವನ ಅಕ್ಕನದು. ತಮ್ಮನನ್ನು ಕೂರಿಸಿಕೊಂಡು ಅಕ್ಕನು ಚಿಕ್ಕ ಮಕ್ಕಳು, ಕಾಯಿಲೆ ಷಾವಂದಿರು ಮತ್ತು ನನ್ನನ್ನು ಬಿಟ್ಟು ಹೋಗುತ್ತೀಯ ಎಂದು ಕಣ್ಣೀರು ಸುರಿಸಿದಳು. ಅಕ್ಕನ ಪರಿಸ್ಥಿತಿಯನ್ನು ಚಿಕ್ಕವನಾದರೂ ಅರಿತುಕೊಂಡು ವಿದ್ಯಾಭ್ಯಾಸ ಕೈಬಿಟ್ಟು ನಮ್ಮಲ್ಲೆ ಉಳಿದನು. ಎಲ್ಲ ಮಕ್ಕಳು ವಿದ್ಯಾವಂತರಾಗಿ ಬುದ್ಧಿವಂತರಾಗಿ ಮದುವೆ ಮುಂಜಿ ಆದ ಮೇಲೆ ಕೃಷ್ಣನು ಸಂಸಾರವೊಂದಿಗನಾಗಿ ಬೇರೆ ಹೋಗಿ ಹೋಟೆಲ್ ಉದ್ಯಮ ಹಿಡಿದು ಮೂರು ಗಂಡು ಮಕ್ಕಳು ಪತ್ನಿಯೊಡನೆ ಸುಖವಾಗಿದ್ದಾನೆ. ಆತನ ನೆರವು ನನ್ನ ಸಂಸಾರದ ಪ್ರತಿ ಯೊಬ್ಬರಿಗೂ ಎಂದೆಂದಿಗೂ ಉಳಿಯಬೇಕಾದ ನೆನಪು.

ನನಗೆ ಮೊದಲೇ ಹೆಣ್ಣುಮಗುವಾದ ವಿಚಾರ ತಿಳಿಸಿದ್ದೇನೆ. ನನ್ನ ಸಂಸಾರದಲ್ಲಿ ಉಂಟಾದ ನಾನಾ ತೊಂದರೆಗಳನ್ನು ವಿವರಿಸಿದ್ದೇನೆ. ಇದನ್ನು ಸುದರಾಯಿಸುವಲ್ಲಿ ಹಿರಿಯ ಮಗಳು ಜಯಲಕ್ಷ್ಮಿ ಮತ್ತು ಎರಡನೆಯ ಮಗಳು ಪದ್ಮ ತಮ್ಮ 7–8ನೆಯ ವಯಸ್ಸಿನಲ್ಲೆ ಸಂಸಾರದ ಕೆಲ ಭಾರ ಹೊತ್ತು ನಿರ್ವಹಿಸಿದರು. ತಮ್ಮಂದಿರು ಮತ್ತು ತಂಗಿಯರನ್ನು ಸುದರಾಯಿಸಿ ಶಾಲೆಗೆ ಕಳುಹಿಸುವುದು, ತಾಯಿಗೆ ಅಡಿಗೆ ಕಾರ್ಯದಲ್ಲಿ ನೆರವಾಗುವುದು, ಶಾಲೆಯಿಂದ ಬಂದ ಮೇಲೆ ತಮ್ಮ, ತಂಗಿಯರಿಗೆ ಪಾಠ ಪ್ರವಚನ ಹೇಳಿಕೊಡುವುದು ಹೀಗೆ ನಾನಾ ಜವಾಬ್ದಾರಿ ಕಾರ್ಯಗಳನ್ನು ವಹಿಸಿಕೊಂಡು ನಡೆಸಿದರು ಸಂಸಾರವನ್ನು. ಜಯಲಕ್ಷ್ಮಿಯಂತು ಈ ಜವಾಬ್ದಾರಿ ಜೊತೆ ನನ್ನ ವ್ಯಾಪಾರ ದಲ್ಲೂ ದಿನವೂ ಕೆಲವು ಘಂಟೆ ಕಾಲ ಕುಳಿತು ವ್ಯಾಪಾರ ವಹಿವಾಟು ನಡೆಸಿದವಳು.

ಇವರಿಬ್ಬರೂ ಇಂಜಿನಿಯರುಗಳನ್ನು ಮದುವೆಯಾಗಿ ಮೈಸೂರಿನಲ್ಲಿದ್ದಾರೆ. ಜಯಲಕ್ಷ್ಮಿಗೆ ಇಬ್ಬರು ಗಂಡು ಇಬ್ಬರು ಹೆಣ್ಣುಮಕ್ಕಳು. ಪದ್ಮಳಿಗೆ ನಾಲ್ಕು ಮಂದಿಯೂ ಹೆಣ್ಣುಮಕ್ಕಳಿದ್ದು ಹೆಣ್ಣಾದರೇನು ? ಗಂಡಾದರೇನು ? ಎಂದು ಸಂತೋಷದಿಂದ ಬಾಳು ಸಾಗಿಸುತ್ತ ಇದ್ದಾಳೆ.

ಇವರಿಬ್ಬರ ಹಿಂದೆ ಬಂದವನು ನನ್ನ ಹಿರಿಯ ಮಗ ಪಿ. ಜೆ. ಚೈತನ್ಯಕುಮಾರ್. ಈ ಮಗ ಶಾಂತಮೂರ್ತಿ, ಜೀವನದಲ್ಲಿ ತಾಳ್ಮೆ ಉಳ್ಳವನು, ಸುಮಾರು ಆತನ 29 ನೆಯ ವಯಸ್ಸಿನಲ್ಲೇ ವ್ಯಾಪಾರ ವಹಿವಾಟುವಹಿಸಿಕೊಂಡು ಸಂಸಾರದ ಹೊರೆ ಹೊತ್ತು ಸಂಸಾರನಾವೆಯ ನಾವಿಕನಾಗಿ ಸಾಗುತ್ತಿದ್ದಾನೆ. ಪತ್ರಿಕೋದ್ಯಮದಿಂದ ವಿಶ್ರಾಂತನಾದ ನನ್ನ ವೃತ್ತಿಯ ದಾರಿಯಲ್ಲಿ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಮಂಡ್ಯ ವರದಿಗಾರನಾಗಿ ತನ್ನಿತರ ಕಾರ್ಯಗಳ ಜೊತೆ ಕೆಲಸ ಮಾಡುತ್ತಿದ್ದಾನೆ. ಅಕ್ಕತಂಗಿಯರು ಮತ್ತು ತಮ್ಮಂದಿರುಗಳು ಯಾವುದಕ್ಕೂ ನೊಂದುಕೊಳ್ಳದ ರೀತಿ-ಅವರ ಮನಸ್ಸು ಅರಿತು ನಡೆದುಕೊಳ್ಳುವುದರ ಜೊತೆಗೆ ಮಕ್ಕಳೆಲ್ಲರನ್ನು ಮಮತೆಯಿಂದ ನೋಡಿಕೊಳ್ಳುತ್ತ ಅವರ ಪ್ರೀತಿ ಪಾತ್ರನಾಗಿದ್ದಾನೆ. ತಂದೆ ತಾಯಿಗಳು ದೈವ ಸ್ವರೂಪರೆಂದು ತಿಳಿದು ನಮ್ಮ ಮಾತೆಂದರೆ ವೇದ ವಾಕ್ಯವೆನ್ನುವಂತೆ ನಡೆದುಕೊಳ್ಳುವ ಈ ಮಗನಿಗೆ ಒಂದು ಗಂಡು ಒಂದು ಹೆಣ್ಣು ಮಗುವಿದೆ.

ನನ್ನ ಹಿರಿಯಸೊಸೆ ಚಿ॥ ಸೌ॥ ಉಷಾ ವಿದ್ಯಾವಂತೆ, ವಿದ್ಯಾವಂತರ ಸಂಸಾರ ದಿಂದ ಬಂದವಳು. ಸೊಗಸಾದ ಶುಚಿ, ರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಮಾಡುತ್ತ ಅಡಿಗೆಯ ಕಾರ್ಯವನ್ನು ನಿರ್ವಹಿಸುತ್ತ ಬಂದು ಹೋಗುವ ಬಂಧು ಬಾಂಧವರು ಅತಿಥಿಗಳ ಬಗ್ಗೆ ಅತ್ತೆ ಶ್ರೀಮತಿ ಪಾರ್ವತಮ್ಮನಂತೆಯೇ ನಡೆದು ಕೊಳ್ಳುತ್ತ ಇದ್ದಾಳೆ. ನನ್ನ ಸಂಸಾರದ ನಡೆನುಡಿ ಅವರು ಹೊಗಳುವ ಮಟ್ಟದಲ್ಲಿ ಸಂಸಾರ ನಡೆಸಿಕೊಂಡು ಹೋಗುವ ಸೊಸೆ ಹೊಗಳಿಕೆಗೆ ಅರ್ಹಳಾದವಳು.

ನಾನು ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷನಾಗಿದ್ದಾಗ ದೀಪಾವಳಿ ಹಬ್ಬದ ಕಾರ್ಯಕ್ರಮಕ್ಕೆ ನಾನು ಮತ್ತು ರೇಷ್ಮೆ ಸಚಿವರಾಗಿದ್ದ ಕುಣಿಗಲಿನ ದಿವಂಗತ ತಮ್ಮಣ್ಣನವರು ಧಾರವಾಡಕ್ಕೆ ಹೋದೆವು. ಅಂದಿನ ಸಭೆಯಲ್ಲಿ ನಾನು ಭಾಷಣ ಮಾಡುತ್ತ ಎದುರಾದ ಸಮಸ್ಯೆಗಳ ಪರಿಹಾರಕ್ಕೆ ಕುವೆಂಪು ಅವರ ಕವನಗಳು ಮತ್ತು 'ಶ್ರೀ ರಾಮಾಯಣ ದರ್ಶನಂ' ಇಂದ ಉದಾಹರಿಸುತ್ತ ಹೋದೆ. ಸಭೆಯಲ್ಲಿದ್ದ ಕೆಲವರಿಗೆ ಕುವೆಂಪು ಸಾಹಿತ್ಯದ ಬಳಕೆ ಸಹಿಸಲಾರದೆ ಕುದಿಯುತ್ತಿದ್ದರೆಂದು ಕಾಣುತ್ತದೆ. ಸಾಕು ಸ್ವಾಮಿ ನಿಮ್ಮ ಭಾಷಣ, ಮಂತ್ರಿಗಳು ಮಾತನಾಡಲಿ ಎಂದರು. ಕಾರ್ಯಕ್ರಮ ಮುಗಿಸಿಕೊಂಡು ಸಮೀಪದ ಗರಗ ಎಂಬ ಗ್ರಾಮಕ್ಕೆ ಹೋದೆವು. ರೇಷ್ಮೆ ಉತ್ಪಾದನೆ ಬಗ್ಗೆ ಸಭೆಯೊಂದು ಸೇರಲಿತ್ತು. ಆ ಮುನ್ನ ಕೆಲವರು ನನ್ನನ್ನು ಕುರಿತು "ಏನು ಸ್ವಾಮಿ, ನೀವು ಮಾತೆತ್ತಿದರೆ ನಿಮ್ಮ ಮಹಾಕವಿ ಕುವೆಂಪು ಸಾಹಿತ್ಯ ಉದಾಹರಿಸಿದಿರಿ. ಅವರು ನೋಡಿದರೆ ಮಾಧ್ವಸಿದ್ಧಾಂತ ಉಡುಪಿಸ್ವಾಮಿ ಅವರಿಗೆ ಅರ್ಥವಾಗದಿದ್ದರೆ ನಮ್ಮ ಮನೆ ನಾಯಿ ಕೇಳಿ ತಿಳಿದುಕೊಳ್ಳಲಿ ಎಂದು" ಕಾಗದ ಬರೆಯಬಹುದೆ ? ಎಂದರು.

ಅದು ಮಾಧ್ವಸಿದ್ಧಾಂತದ ಬಗ್ಗೆ ದೊಡ್ಡ ಜಿಜ್ಞಾಸೆ ಉಂಟಾಗಿ ಪರ ವಿರೋಧ ವಾದಗಳು ನಡೆಯುತ್ತಿದ್ದ ಕಾಲ. "ತಾವು ಕವಿಗಳನ್ನು ತಪ್ಪಾಗಿ ಅರ್ಥೈಸಿಕೊಂಡಿದ್ದೀರಿ. ವಿಶ್ವಮಾನವರು, ದಾರ್ಶನಿಕರು ಆದ ಕವಿ ಕವಿಪುಂಗವರು, ಕೆಟ್ಟದ್ದನ್ನು ಆಡುವವರಲ್ಲ. ಅಷ್ಟೇ ಅಲ್ಲ ನಾವು ನೀವು ಸರ್ವರ ಕೆಟ್ಟದ್ದನ್ನು ಆಡಬಾರದು, ಕೆಟ್ಟದ್ದನ್ನು ಕೇಳ ಬಾರದು ಎಂಬ ಸಿದ್ಧಾಂತ ಅವರದು. ಹೀಗಿದ್ದು ತಾವು ಕವಿಗಳ ವಿರುದ್ಧ ಇಲ್ಲದ ಆರೋಪ ಹೊರಿಸುವುದು ಸರಿಯಲ್ಲ ಎಂದು ವಾದ ಮಾಡಿದೆ. ಏನೇ ವಾದ ಮಾಡಿದರು ವಾದಕ್ಕೆ ಪ್ರತಿವಾದ ಹಾಕುತ್ತ ಸಭೆ ದೊಡ್ಡದಾಗಿ ಸೇರಿಯೆ ಬಿಟ್ಟಿತು.

ಕವಿಗಳು ದ್ವೈತವೋ ಅದ್ವೈತವೋ ವೇದೋಪನಿಷತ್ತುಗಳಲ್ಲಿ ಅವರು ಕಾಣುವ ಮತೀಯ ಮೌಢ್ಯಗಳಿಂದ ಜನ ಜೀವನ ಹಾಳು ಮಾಡುವ ಅವೈಚಾರಿಕತೆ, ಅವೈಜ್ಞಾನಿಕತೆ ಮನೋಭಾವಗಳನ್ನು ಯಾವ ದಯಾ ದಾಕ್ಷಿಣ್ಯಗಳಿಲ್ಲದೆ ಖಂಡಿಸುವ ಮನೋಭಾವ ಅವರದು. ಹಾಗೆಯೇ ಮಾಧ್ವಸಿದ್ಧಾಂತದಲ್ಲು ತಾವು ಕಂಡಿರಬಹುದಾದ ಮತೀಯ ಮೌಢ್ಯಗಳನ್ನು ತಿರಸ್ಕರಿಸಲು ಹೇಳಿದ್ದಾರೆ ಎಂದು ವಾದಿಸಿದೆ.

ಏತಿ ಎಂದರೆ ಪ್ರೇತಿ ಮನೋಭಾವದಿಂದಲೇ ವಾದ ಮಾಡುತ್ತಿದ್ದವರನ್ನು "ಸ್ವಾಮಿ ಭಕ್ತವಿಜಯ ಎಂಬ ಬೃಹತ್ ಸಂತರ ಕಥೆಗಳನ್ನು ಹೆಣೆದು ಪ್ರಕಟಿಸಿರುವವರು ಶೂದ್ರರೋ ಬ್ರಾಹ್ಮಣರೋ" ಎಂದು ನೇರ ಪ್ರಶ್ನೆ ಹಾಕಿದೆ. ಬ್ರಾಹ್ಮಣರವನು ಎಂದರು. "ನೋಡಿದಿರಾ ? ನಾನು ಹೇಳುವ ಭಕ್ತವಿಜಯದಲ್ಲಿ ಸಂತ ಜ್ಞಾನದೇವನು ಕೋಣನಿಂದ ವೇದ ಹೇಳಿಸಿದ ವಿಚಾರ ನಿಮಗೆಲ್ಲ ಗೊತ್ತಿದೆ. ನೀವು ಕೇಳಿರುವುದೇ ಅಲ್ಲ ಸಿನಿಮಾದಲ್ಲಿ ನೋಡಿದ್ದೀರಿ. ಆಹಾ ಅದೇನು ಸೊಗಸಾಗಿ ವೇದ

ಪತಣ ಮಾಡುತ್ತೈ ನೋಡಿ. ನಮ್ಮಲ್ಲಿ ಸ್ವಲ್ಪ ಬುದ್ಧಿ ಮಾಂದ್ಯದವರನ್ನು ಎಲ್ಲಿಯೋ ಎಮ್ಮೆ ಹಾಲು ಕುಡಿದಿದ್ದಾನೆ ಎನ್ನುತ್ತೇವೆ. ತೇಟ್ ಎಮ್ಮೆ ಹಾಲನ್ನೆ ಕುಡಿದ ಕೋಣ ವೇದಪೇಳಿದ್ದರೆ ನಾಯಿ ಎಂತಹ ಎಚ್ಚರಿಕೆ ಪ್ರಾಣಿ. ಪರಕ್ ಎಂದರೆ ಎಚ್ಚರಗೊಳ್ಳುವ ನಾಯಿ ಕೋಣನಿಗಿಂತ ಚುರುಕಾದುದು. ಕೋಣ ವೇದ ಹೇಳಿದ್ದರೆ ನಾಯಿ ಮಾಧ್ವಸಿದ್ಧಾಂತ ಹೇಳಲಾರದೆ ಎಂಬ ಭ್ರಮೆಯಿಂದ ಮಹಾಕವಿ ಸಾಹಿತ್ಯ ತಿಳಿದಿರುವ ನನ್ನಂತಹವರು ಹೇಳಿರುವ ಮಾತೋ ಅಥವ ಬರೆದಿರುವ ಕಾಗದವೋ ಇರಬೇಕು ಎಂದೆ ಎಲ್ಲರೂ ಬಾಯಿಮುಚ್ಚಿದರು.

ಆ ಸಭೆಯಲ್ಲು ನಾನು ಘಸನಿಮಹಮದ್ ಒಡೆದು ಚೂರು ಚೂರು ಮಾಡಿದ. ದೇವಾಲಯ ಉಳಿಸಿಕೊಳ್ಳಲು ಬ್ರಾಹ್ಮಣರು ಧ್ರಾಂ ಧ್ರೂಂ ಧ್ರೀತ್ ಮಂತ್ರ ಹಾಕಿದರು ಆದದ್ದೇನು ದೇವಾಲಯ ಉಳಿಯಿತೆ ಮಂತ್ರದಿಂದ ಮಾವಿನಕಾಯಿ ಬಿದ್ದೀತೆ ಮುಂತಾಗಿ ವೈಜ್ಞಾನಿಕ ವಿಚಾರ ಪ್ರಸ್ತಾಪ ಮಾಡಿದೆ.



ಶ್ರೀ ರಾಮಕೃಷ್ಣ ಹೆಗಡೆಯವರ ಜನತಾ ಸರ್ಕಾರ ವೆಂಕಟಸ್ವಾಮಿ ಆಯೋಗವನ್ನು ರಚಿಸಿತು. ದೇವರಾಜ ಅರಸರು ನೇಮಿಸಿದ ಹಾವನೂರು ಆಯೋಗ ವೀರಶೈವರನ್ನು ಮುಂದುವರಿದವರ ಗುಂಪಿಗೆ ಸೇರಿಸಿತ್ತಷ್ಟೆ. ಅದೇ ರೀತಿ ಒಕ್ಕಲಿಗರನ್ನು ಮುಂದುವರಿದವರ ಗುಂಪಿಗೆ ಸೇರಿಸುವುದರ ಬಗ್ಗೆ ವೆಂಕಟಸ್ವಾಮಿ ಆಯೋಗದ ಆರಂಭದಲ್ಲಿಯೇ ಗುಮಾನಿ ಇತ್ತು. ಆಯೋಗದಲ್ಲಿ ಯಾವ ಒಕ್ಕಲಿಗ ಸದಸ್ಯರೂ ಇರಲಿಲ್ಲ. ಅಲ್ಲದೆ ವೆಂಕಟಸ್ವಾಮಿ ಅವರು ಒಕ್ಕಲಿಗರ ಬಗ್ಗೆ ಪೂರ್ವಾಗ್ರಹಪೀಡಿತರು ಎಂಬುದು ಅವರ ಮಾತುಗಳಿಂದ ತಿಳಿಯುತ್ತಿತ್ತು. ನಿರೀಕ್ಷಿಸಿದ್ದಂತೆಯೇ ವೆಂಕಟಸ್ವಾಮಿ ಆಯೋಗ ಒಕ್ಕಲಿಗರನ್ನು ಮುಂದುವರಿದವರ ಪಟ್ಟಿಗೆ ಸೇರಿಸಿತ್ತು. ಇದರಿಂದ ನೊಂದ ಒಕ್ಕಲಿಗರು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಆದರೆ ರಾಮಕೃಷ್ಣ ಹೆಗಡೆಯವರ ಧೋರಣೆಯ ಬಗ್ಗೆ ಒಕ್ಕಲಿಗ ಜನಾಂಗದಲ್ಲಿ ಅಸಹನೆಯ ಕಿಡಿ ಹಾರಿತು. ಒಕ್ಕಲಿಗರು ಎಂದೂ ಇಷ್ಟರ ಮಟ್ಟಿಗೆ ಒಗ್ಗಟ್ಟಿನಿಂದ ವರ್ತಿಸಿರಲಿಲ್ಲ. ರಾಮಕೃಷ್ಣ ಹೆಗಡೆಯವರು ಈ ಒಗ್ಗಟ್ಟನ್ನು ಕಂಡು ಬೆಚ್ಚಿ ಬಿದ್ದರು. ಇದನ್ನು ಮುಂದುವರಿಯ ಬಿಟ್ಟರೆ ಒಕ್ಕಲಿಗರೆಲ್ಲ ಒಂದಾಗಿ ಬಿಡುವ ಅಪಾಯವರಿತ ಹೆಗಡೆ ಕೂಡಲೇ ವೆಂಕಟಸ್ವಾಮಿ ಆಯೋಗವನ್ನು ತಿರಸ್ಕರಿಸುವ ನಾಟಕ ಆಡತೊಡಗಿದರು. ಒಕ್ಕಲಿಗರಿಗೆ ಈ ವರದಿಯಿಂದ ಆಗಬಹುದಾಗಿದ್ದ ಅನ್ಯಾಯದ ಬಗ್ಗೆ ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಸಮಸ್ತ ಒಕ್ಕಲಿಗ ಜನಾಂಗದ ಪರವಾಗಿ ಸಲ್ಲಿಸಿದ ಮನವಿಯೊಂದನ್ನು ಇಲ್ಲಿ ಕೊಡುತ್ತಿದ್ದೇನೆ. ಚಳುವಳಿಯ ಸ್ವರೂಪ ಮತ್ತು ವ್ಯಾಪ್ತಿಯ ಬಗ್ಗೆ ಪತ್ರಿಕೆಗಳೇ ವರದಿ ಮಾಡಿರುವುದರಿಂದ ಅದರ ವಿವರ ಇಲ್ಲಿ ಅನವಶ್ಯಕ ಎಂದು ಭಾವಿಸುತ್ತೇನೆ.

ವೆಂಕಟಸ್ವಾಮಿ ಆಯೋಗದ ವರದಿಯನ್ನು ವಿರೋಧಿಸಿ ಒಕ್ಕಲಿಗರು ನೀಡಿದ ಮನವಿ :

ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗ್ಗಡೆಯವರಿಗೆ,

ಕರ್ನಾಟಕ ರಾಜ್ಯದಲ್ಲಿ ವೆಂಕಟಸ್ವಾಮಿ ಆಯೋಗದ ವರದಿಯ ಪ್ರತಿಭಟನಾ ಕೇಂದ್ರ ಸಮಿತಿಯ ಅಧ್ಯಕ್ಷನಾಗಿ ಆಯೋಗದ ವರದಿಯಲ್ಲಿ ಕೈಬಿಟ್ಟಿರುವ 35 ಜಾತಿಗಳ ಸುಮಾರು 2 ಕೋಟಿ ಜನಾಂಗದವರ ಪರವಾಗಿ, ಈ ಮನವಿಯನ್ನು ಸಲ್ಲಿಸುತ್ತಿದ್ದೇನೆ.

ಮಾಜಿ ಮುಖ್ಯ ಮಂತ್ರಿ ದೇವರಾಜ ಅರಸು ನೇಮಿಸಿದ್ದ ಹಾವನೂರು ವರದಿಯನ್ನು ಪ್ರಶ್ನಿಸಿ ಸುಪ್ರೀಂಕೋರ್ಟಿನಲ್ಲಿ ರಿಟ್ ಅರ್ಜಿಯು ವಾದಕ್ಕೆ ಬಂದಾಗ ಅಂದಿನ ಮುಖ್ಯ ಮಂತ್ರಿ ಶ್ರೀ ಗುಂಡೂರಾವ್ ಅವರ ಸರ್ಕಾರದ ಪರವಾಗಿ ಸುಪ್ರೀಂ ಕೋರ್ಟ್‌ಗೆ ರಾಜ್ಯ ಸರ್ಕಾರವು ಹಾವನೂರು ವರದಿಯನ್ನು ಪುನರ್ ಪರಿಶೀಲಿಸಿ

ಯಾವ ಕೋಮಿಗಾದರೂ ಅನ್ಯಾಯವಾಗಿದ್ದರೆ ಅದನ್ನು ಸರಿಪಡಿಸುವ ಭರವಸೆ ಕೊಟ್ಟಿತ್ತು. ಆದ್ದರಿಂದ ಹಾವನೂರು ವರದಿಯಿಂದ ಅನ್ಯಾಯವಾಗಿರುವ ಮತ್ತು ಅನ್ಯಾಯವಾಗಿರಬಹುದಾದ ಜಾತಿ ಮತ್ತು ಜನಾಂಗದವರಿಗೆ ನ್ಯಾಯ ದೊರಕಿಸುವ ಉದ್ದೇಶದಿಂದ ಎರಡನೇ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಲಾಯಿತು. ಈ ಆಯೋಗದ ಉದ್ದೇಶವಾದರೂ ತುಂಬಾ ಸೀಮಿತವಾಗಿತ್ತು. ಈ ಹಿನ್ನೆಲೆಯಲ್ಲಿ ಆಯೋಗದ ವರದಿಯು ನ್ಯಾಯಾಲಯಕ್ಕೆ ಕೊಟ್ಟ ಭರವಸೆಯನ್ನು ಪಾಲಿಸಿದೆಯೇ ಎಂಬುದು ಮುಖ್ಯವಾಗಿ ಗಮನಿಸಬೇಕಾದ ವಿಷಯ. ದುರದೃಷ್ಟವಶಾತ್ ಆಯೋಗದ ವರದಿಯು ತುಂಬಾ ದೋಷ ಪೂರಿತವಾದದ್ದು ಅನ್ಯಾಯದ ಮಾರ್ಗ ಸೂಚಿಯಂತಿದೆ. ಈ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕೆಂಬುದೇ ನಮ್ಮೆಲ್ಲರ ಕೋರಿಕೆ. ವರದಿಯಲ್ಲಿರುವ ಲೋಪದೋಷಗಳು ವಿಪರೀತ. ಪುಟದಿಂದ ಪುಟಕ್ಕೆ ಅಂಕಿ ಅಂಶಗಳಲ್ಲಿ ತಾಳೆಯಿಲ್ಲ, ಅದರಲ್ಲಿ ಸಮಂಜಸತೆಯಿಲ್ಲ. ಅವುಗಳಲ್ಲಿನ ಕೆಲವು ನ್ಯಾಯಬಾಹಿರವಾದ, ಅವೈಜ್ಞಾನಿಕವಾದ ಮತ್ತು ಅಪ್ರಾಕೃತವಾದ ಅಂಶಗಳನ್ನು ಉದಾಹರಿಸಬಯಸುತ್ತೇನೆ.

ಆಯೋಗದ ವರದಿಯ ವಿಷಯವಾಗಿ ದಿನಾಂಕ 19–3–86ರ ಪತ್ರಿಕಾ ವರದಿಗಳನ್ನು ಓದಿ ಆಶ್ಚರ್ಯಚಕಿತರಾಗಿ, ಭಯಭ್ರಾಂತರಾಗಿ ಭವಿಷ್ಯವೇ ಶೂನ್ಯವಾದಂತೆ ಹಿಂದುಳಿದ ವರ್ಗದವರು ಭಾವಿಸಿದ್ದರು. ಅನ್ಯಾಯವಾಗಿರುವ ಕೋಮುಗಳ ಪರವಾಗಿ ತಮಗೆ ದಿನಾಂಕ : 29–3–86ರ ಹಿಂದೆಯೇ ಒಕ್ಕಲಿಗರ ಸಂಘದಿಂದ ಪತ್ರ ಬರೆದು ಹಿಂದುಳಿದ ಕೋಮಿನವರ ಆಶಾಭಂಗವನ್ನು ಅಲ್ಲದೆ ಜನರ ಉದ್ರಿಕ್ತ ಭಾವನೆಗಳನ್ನೂ ಪೂರ್ವಭಾವಿಯಾಗಿಯೇ ತಮಗೆ ತಿಳಿಸಿದ್ದೇನೆ. ತಾವು ದಿನಾಂಕ : 23–4–86ರಂದು ನನ್ನ ಪತ್ರಕ್ಕೆ ಉತ್ತರ ಬರೆದು ವಿಷಯವನ್ನು ತೀವ್ರವಾಗಿ ಪರಿಶೀಲಿಸುವುದಾಗಿ ಭರವಸೆ ಕೊಟ್ಟಿದ್ದೀರಿ.

ಪ್ರಸ್ತುತ ಚಳುವಳಿಯು ಎರಡನೆಯ ಹಿಂದುಳಿದ ಆಯೋಗದ ತಪ್ಪು ಮತ್ತು ಅನ್ಯಾಯದ ವಿರುದ್ಧವೇ ಹೊರತು ಇನ್ನಾರ ಮೇಲೂ ಅಲ್ಲ. ಈಗಾಗಲೇ ಈ ವಿಷಯವು ಸರ್ಕಾರದ ಗಮನವನ್ನು ಸೆಳೆದಿದ್ದು ವರದಿಯು ತಿರಸ್ಕಾರಕ್ಕೆ ಯೋಗ್ಯವೆಂದು ಸರ್ಕಾರಕ್ಕೆ ಮನದಟ್ಟಾಗಿರಬೇಕು. ಅಂಗೈ ಹುಣ್ಣಿಗೆ ಕನ್ನಡಿ ಬೇಕೆ ?

ಈ ದಿನದ ಚರ್ಚೆಯಿಂದಲೇ ತಾವು ವರದಿಯ ಲೋಪದೋಷಗಳನ್ನು ಗ್ರಹಿಸಿ ಕೂಡಲೇ ಅಂದರೆ ಈ ದಿನವೇ ತಾವು ವರದಿಯನ್ನು ತಿರಸ್ಕರಿಸುವುದಾಗಿ ನಮಗೆ ಭರವಸೆ ಕೊಡುವಿರೆಂದು ಆಶಿಸುತ್ತೇನೆ. ವೆಂಕಟಸ್ವಾಮಿ ಆಯೋಗದ ವರದಿಯ ವಿಷಯವಾಗಿ ಅದರಲ್ಲಿರುವ ಅವೈಜ್ಞಾನಿಕತೆಯನ್ನು ಮತ್ತು ಗೊಂದಲ ಸ್ಥಿತಿಯನ್ನು ಸಂಕ್ಷಿಪ್ತವಾಗಿ ತಮ್ಮ ಗಮನಕ್ಕೆ ತರಲು ಇಚ್ಛಿಸುತ್ತೇನೆ. ದಿನಾಂಕ : 8–9–86 ರಂದು ಬರೆದ ನನ್ನ ಪತ್ರದಲ್ಲಿಯೂ ಕೆಲವು ಅಂಶಗಳನ್ನು ಆಗಲೇ ತಿಳಿಸಿರುತ್ತೇನೆ.

ಆಯೋಗದ ವರದಿಯನ್ನು ಅವಲೋಕಿಸಿದಾಗ ಈ ವರದಿಯನ್ನು ಬರೆದವರು

ಬಿಡಿಸಿಕೊಳ್ಳಲಾಗದ ಸಂದರ್ಭದಲ್ಲಿ ಯಾವುದೋ ಉದ್ದೇಶದಿಂದ ಬರೆದಂತೆ ಕಾಣುತ್ತದೆ. ಇಂತಹ ವರದಿಯು ಸರ್ಕಾರವನ್ನು ಪೇಚಿಗೆ ಸಿಕ್ಕಿಸಿದೆ. ಈ ಗೊಂದಲವನ್ನು ಪರಿಹರಿಸುವುದು ತಮ್ಮ ಸರ್ಕಾರದ ಜವಾಬ್ದಾರಿ. ಇಡೀ ರಾಜ್ಯದ ಜನತೆಯ ಪ್ರತಿನಿಧಿಗಳಾಗಿರುವ ತಾವು ಇದನ್ನು ಸರಿಪಡಿಸುವಿರೆಂಬ ಭರವಸೆ ನಮಗಿದೆ.

ವೆಂಕಟಸ್ವಾಮಿ ಆಯೋಗದ ವರದಿಗೆ ಅರ್ಧಕ್ಕೂ ಮೇಲ್ಪಟ್ಟ ಆಯೋಗದ ಸದಸ್ಯರು ವಿರೋಧವನ್ನು ಮತ್ತು ಅಸಮ್ಮತಿಯನ್ನು ಸೂಚಿಸಿದ್ದಾರೆ. ಅಧ್ಯಕ್ಷರು ಮತ್ತು ಸದಸ್ಯರು ಒಬ್ಬರ ಮೇಲೊಬ್ಬರು ಆರೋಪ ಪ್ರತ್ಯಾರೋಪಗಳನ್ನು ಮಾಡಿದ್ದಾರೆ. ಇದು ಒಮ್ಮತದ ವರದಿಯಂತೂ ಅಲ್ಲ, ಬಹುಮತದ ವರದಿಯೂ ಅಲ್ಲ. ಆದ್ದರಿಂದ ಇದು ಅಧಿಕೃತ ವರದಿಯಾಗಲಾರದು. ಅಲ್ಲದೆ ಇದೊಂದು ಪೂರ್ವಗ್ರಹ ಪೀಡಿತ ವರದಿ. ಆಯೋಗದ ಸದಸ್ಯರನ್ನು ನೇಮಿಸುವುದರಲ್ಲಿಯೇ ಒಂದು ರೀತಿಯ ಅಸಮಂಜಸತೆ ಇದೆ. ಅದರಲ್ಲಿ ಕೆಲವರು ಪಂಡಿತರೂ ಅಲ್ಲ, ವಿಷಯ ಪರಿಜ್ಞಾನ ಉಳ್ಳವರೂ ಅಲ್ಲ.

ಹಾವನೂರು ವರದಿಯಲ್ಲಿ ಬಿಟ್ಟು ಹೋಗಿರುವ ಜಾತಿಗಳಲ್ಲಿ ಇರುವ ಹಿಂದುಳಿದವರನ್ನು ಗುರುತಿಸುವುದು ಎರಡನೆಯ ಆಯೋಗದ ಮುಖ್ಯ ಉದ್ದೇಶವಾಗಿತ್ತು. ಈ ಆಯೋಗವು ಹಿಂದುಳಿದವರನ್ನು ಗುರುತಿಸುವ ಬದಲು ಮುಂದುವರಿದವರನ್ನು ತಪ್ಪಾಗಿ ಗುರುತಿಸುವ ಪ್ರಯತ್ನ ಮಾಡಿದೆ. ಹಿಂದಿನ ವರದಿಯ ಪಟ್ಟಿಯನ್ನು ಪುನರ್ ವಿಮರ್ಶಿಸುವ ಬದಲು ಬೇರೆಯೇ ಆದ ಹಿಂದುಳಿದವರ ಪಟ್ಟಿಯನ್ನು ತಯಾರಿಸಲಾಗಿದೆ.

ಹಾವನೂರು ಆಯೋಗದ ವರದಿಯಲ್ಲಿ ವರ್ಗವನ್ನು (ಕ್ಲಾಸ್) ಆಧಾರ ಮಾಡಿಕೊಳ್ಳಲಾಗಿತ್ತು. ಆದರೆ ಎರಡನೇ ಆಯೋಗದ ವರದಿಯಲ್ಲಿ ಜಾತಿಗಳಿಗೆ (ಕ್ಯಾಸ್ಟ್) ಆದ್ಯತೆ ಕೊಟ್ಟಿದೆ. ಆದ್ದರಿಂದ ಈ ವರದಿಯು ಜಾತಿವಾದಕ್ಕೆ ಪುಷ್ಟೀಕರಣ ಕೊಟ್ಟಂತಾಗಿದೆ. ಹಾವನೂರು ವರದಿಯನ್ನು ಆಧಾರವಾಗಿಟ್ಟುಕೊಂಡು ಅದರಲ್ಲಿನ ನ್ಯೂನ್ಯತೆಗಳನ್ನು ಸರಿಪಡಿಸಬೇಕಾಗಿತ್ತೇ ವಿನಹ ತನಗೆ ಇಲ್ಲದ ಅಧಿಕಾರ ವ್ಯಾಪ್ತಿಯನ್ನು ಆಯೋಗವು ಭಾವಿಸಿಕೊಂಡು ತಪ್ಪು ಮಾಡಿದೆ.

ಸಂವಿಧಾನದ ವಿಧಿ 15 (4) ಮತ್ತು 16 (4)ರ ಪ್ರಕಾರ ಹಿಂದುಳಿದಿರುವಿಕೆಯನ್ನು "ಸಾಮಾಜಿಕ" ಮತ್ತು "ಶೈಕ್ಷಣಿಕ" ಆಧಾರಗಳ ಮೇಲೆ ನಿಗದಿಪಡಿಸಬೇಕಾಗಿತ್ತು. ಆದರೆ ಅದನ್ನು ಉಪೇಕ್ಷಿಸಿ ಪ್ರಶ್ನಾವಳಿಯಲ್ಲಿ ಮತ್ತು ಗಣತಿ ಪಟ್ಟಿಯಲ್ಲಿ (ಎನ್ಯೂಮರೇಷನ್ ಫಾರಂ) ಬಹುಪಾಲು ಪ್ರಶ್ನೆಗಳು "ಆರ್ಥಿಕ" ಅಂಶಗಳ ಮೇಲೆ ಆಧಾರಿತವಾಗಿವೆ. ಆದ್ದರಿಂದ ಎರಡನೆಯ ಆಯೋಗವು "ಆರ್ಥಿಕ"ವಾಗಿ ಮುಂದುವರಿದವರನ್ನು ಗುರುತಿಸುವ ವಿಫಲ ಪ್ರಯತ್ನ ಮಾಡಲು ಹೊರಟಂತೆ ಕಾಣಿಸುತ್ತದೆ. ಇದು ಕಾನೂನು ಬಾಹಿರ ಮತ್ತು ಸಂವಿಧಾನ ಬಾಹಿರವಾಗಿದೆ.

ಎರಡನೆಯ ಆಯೋಗವು ತಯಾರಿಸಿದ ಪ್ರಶ್ನಾವಳಿಯು ಮತ್ತು ಗಣತಿ

ಪಟ್ಟಿಯು ನ್ಯೂನ್ಯತೆಯಿಂದ ಕೂಡಿದೆ, ಆಯೋಗವು ಅಳವಡಿಸಿರುವ 17 ಮೌಲ್ಯಗಳು (ಇಂಡಿಕೇಟರ್‌ಗಳು) ಪ್ರಶ್ನಾರ್ಹವಾಗಿದ್ದು ಅಸಮರ್ಪಕವಾಗಿವೆ. ಜನಸಾಮಾನ್ಯರ ಸ್ಥಿತಿಗತಿಗಳನ್ನು ಸಹ ಗಮನಿಸದಿರುವುದು ಆಯೋಗದ ವಿಫಲತೆಯನ್ನು ಮತ್ತು ಅಸಮರ್ಥತೆಯನ್ನು ತೋರಿಸುತ್ತದೆ. ಉದಾಹರಣೆ : ಹಳ್ಳಿಯಲ್ಲಿ 5 ಎಕರೆ ಖುಷ್ಕಿ ಜಮೀನು ಇರುವವನು ಒಬ್ಬ ನಾಲ್ಕನೆಯ ದರ್ಜೆಯ ನೌಕರನಿಗಿಂತ ಕೀಳು ಮಟ್ಟದಲ್ಲಿ ರುತ್ತಾನೆ. ಆತನಿಗೆ ಜಮೀನಿನಿಂದ ಬರುವ ಉತ್ಪತ್ತಿ ಅವನ ಕುಟುಂಬದ ಪೋಷಣೆಗೂ ಸಾಕಾಗುವುದಿಲ್ಲ. ಅವನನ್ನು ಮುಂದುವರಿದವನೆಂದರೆ ಇದೆಂಥ ಕುರುಡು ತೀರ್ಮಾನ. ಇದಕ್ಕಿಂತಲೂ ಬೇರೆ ಉದಾಹರಣೆ ಬೇಕೆ ? ಇದೇ ರೀತಿ ಕೂಲಿಕಾರ, ಪೂಜಾರಿ, ಬೀದಿ ವ್ಯಾಪಾರಿ, ಸಣ್ಣ ಹಿಡುವಳಿದಾರ ಇತ್ಯಾದಿಯಾಗಿ ಪದಗಳ ಬಳಕೆ ಪ್ರಶ್ನಾವಳಿಯಲ್ಲಿ ಉದಾಹರಿಸಿದ್ದರೂ ಸಹ ಈಗ ವಂಚಿತರಾಗಿರುವ ಕೋಮಿನಲ್ಲಿರುವವರಿಗೆ ಯಾವ ಪರಿಹಾರವನ್ನೂ ಸೂಚಿಸದೆ ಅವರ ಹೆಸರನ್ನು ಮಾತ್ರ ಹೇಳಿ ಅವರಿಗೆ ಅನ್ಯಾಯ ಮಾಡಿದಂತಾಗಿದೆ.

17 ಮೌಲ್ಯಗಳನ್ನು (ಇಂಡಿಕೇಟರ್) ಎಲ್ಲಾ ಜಾತಿಗಳಿಗೂ ಸಮಾನವಾಗಿ ಅನ್ವಯಿಸಿಲ್ಲ. ಸಮಭಾವನೆಯಿಂದ ಅಂಕಿ ಅಂಶಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಮುಂದುವರಿದವರಿಗೂ ಮತ್ತು ಹಿಂದುಳಿದವರಿಗೂ ಅಳವಡಿಸಿರುವ ಅಳತೆಗೋಲಿನಲ್ಲಿಯೇ ದೋಷವಿದೆ. ಉದಾಹರಣೆ : 400 ಉಪಜಾತಿಗಳ ಜನಗಣತಿ ತೆಗೆದುಕೊಂಡಿದ್ದರೂ, 65 ಮುಖ್ಯಜಾತಿಗಳಿಗೆ ಮಾತ್ರ ಎಸ್.ಎಸ್.ಎಲ್.ಸಿ ವಿದ್ಯಾರ್ಹತೆಯನ್ನು ಪರಿಗಣಿಸಿದ್ದಾರೆ. ಉಪಪಂಗಡಗಳನ್ನು ಕೈ ಬಿಟ್ಟಿದ್ದಾರೆ. ಆದರೆ ಒಕ್ಕಲಿಗರಲ್ಲಿ ಬಂಟರನ್ನು ಮಾತ್ರ ಬೇರೆ ಮಾಡಿದ್ದಾರೆ.

ಎಸ್. ಎಸ್. ಎಲ್‌ಸಿ. ಯಲ್ಲಿ ವಿದ್ಯಾರ್ಥಿಗಳ ಜಾತಿವಾರು ಅಂಕಿಗಳು ಸಂಬಂಧಪಟ್ಟ ಸರ್ಕಾರಿ ಇಲಾಖೆಯಲ್ಲಿಯೇ ಇಲ್ಲ. ಹೀಗಿರುವಲ್ಲಿ ಅವುಗಳನ್ನು ಇಲಾಖೆಗಳಿಂದ ತರಿಸಿಕೊಂಡು ತಯಾರಿಸಿವೆ ಎನ್ನಲಾಗಿರುವ ಪಟ್ಟಿಗಳು ಅನುಮಾನಾಸ್ಪದ ಮತ್ತು ಪ್ರಶ್ನಾರ್ಥಕವಾಗಿವೆ. ಇವುಗಳಿಗೆ ಆಧಾರವಿಲ್ಲ ಮತ್ತು ಸಮಾನತೆಯ ಚೌಕಟ್ಟಿಲ್ಲ. ಒಂದೊಂದು ಜಾತಿಗೆ ಒಂದೊಂದು ರೀತಿಯ ಅಂಕಿ ಅಂಶಗಳನ್ನು ಸೃಷ್ಟಿಸಲಾಗಿದೆ. ಮೇಲ್ನೋಟಕ್ಕೆ ಇವು ಚೆನ್ನಾಗಿ ಗೋಚರಿಸುತ್ತಿದ್ದರೂ ಅವಾಸ್ತವಿಕವಾಗಿವೆ. ಮೊದಲೇ ತೀರ್ಮಾನ ಮಾಡಿಕೊಂಡು ಆ ತೀರ್ಮಾನಕ್ಕೆ ತಕ್ಕಂತೆ ಅದಕ್ಕೆ ಸರಿಹೋಲುವ ಅಂಕಿ ಅಂಶಗಳನ್ನು ಬದಲಾಯಿಸಿ ಅಳವಡಿಸಿಕೊಂಡಿದ್ದಾರೆ. (ಉದಾ : ಸಂಪುಟ 1 ಪುಟ 307-325, ಚಲುವರಾಜು ಅವರ ಅಸಮ್ಮತಿ ಪತ್ರ)

ಜನಗಣತಿಯು 1941ರಿಂದೀಚೆಗೆ ಜಾತಿವಾರು ಆಧಾರದ ಮೇಲೆ ನಡದೇ ಇಲ್ಲ. ವರದಿಯಲ್ಲಿರುವ ಜಾತಿವಾರು ಸಂಖ್ಯೆಯಲ್ಲಿ ತಪ್ಪಿದೆ ಮತ್ತು ಲೋಪದೋಷಗಳಿಂದ ಕೂಡಿದೆ. ಒಂದು ಜಾತಿಯ ಜನಸಂಖ್ಯೆಯನ್ನು ಕಮ್ಮಿ ಮಾಡಿದ್ದರೆ ಆ ಜಾತಿಯ

ಸೂಚ್ಯಂಕಗಳು ರಾಜ್ಯದ ಸರಾಸರಿಗಿಂತಹೆಚ್ಚಾಗುವ ಸಾಧ್ಯತೆಯುಂಟು. ಹೀಗಾಗಿ ಆ ಜಾತಿಗೆ 'ಬಿ' ಪಾಯಿಂಟಿಗೆ ಬದಲು 'ಎಫ್' ಪಾಯಿಂಟು ಬಂದು ಆ ಜಾತಿಯನ್ನು ಮುಂದುವರಿದಿದ್ದೆಂದು ಪರಿಗಣಿಸಲಾಗಿದೆ. ಉದಾ : (1) ಸಾತಾನಿ ಕೋಮು ಹಾವನೂರು ವರದಿಯಲ್ಲಿ 60,000 ಎಂದಿದೆ, ಎರಡನೆಯ ಆಯೋಗದ ವರದಿಯಲ್ಲಿ 20,000 ಎಂದು ತೋರಿಸಲಾಗಿದೆ. ಆದರೆ ಅವರ ಸಂಖ್ಯೆ ಒಂದು ಲಕ್ಷ. (2) ಒಕ್ಕಲಿಗರು 52 ಲಕ್ಷ ಇದ್ದವರನ್ನು 42 ಲಕ್ಷ ಎಂದು ವರದಿಯಲ್ಲಿ ತೋರಿಸಲಾಗಿದೆ. (3) ಹಾವನೂರು ವರದಿಯಲ್ಲಿ 6 ಲಕ್ಷ ಇರುವ ಬಲಜಿಗರನ್ನು 4 ಲಕ್ಷ ಎಂದು ತೋರಿಸಿದೆ.

ಎರಡನೆಯ ಆಯೋಗದ ರಚನೆಯಾಗಿದ್ದು ದಿನಾಂಕ : 8–4–83. ಪ್ರಶ್ನಾವಳಿಯನ್ನು ಬಿಡುಗಡೆ ಮಾಡಿದ್ದು 10-11-83. ಪ್ರಶ್ನಾವಳಿಯನ್ನು ಭರ್ತಿಮಾಡಿ ಕೊಡಲು ಕಡೆದಿನ 15–12–83. ಒಕ್ಕಲಿಗರ ಸಂಘ ಮತ್ತು ಇತರ ಸಂಘಗಳನ್ನು ಸಾಕ್ಷಿಗೆ ಕರೆದದ್ದು ಜುಲೈ 1984. ಮನೆ ಮನೆಗೂ ಹೋಗಿ ಅಂಕಿ ಅಂಶಗಳನ್ನು ಸಂಗ್ರಹಿಸಲು ಸಂದರ್ಶಕರನ್ನು 1984 ರಲ್ಲೇ ಕಳುಹಿಸಲಾಗಿತ್ತು. (ಸಂಪುಟ 3 ಪುಟ 1) ಆದರೆ ಸುಪ್ರೀಂ ಕೋರ್ಟ್‌ನ ತೀರ್ಮಾನದಂತೆ ಮಾರ್ಗಸೂಚಿ ಬಂದದ್ದು ದಿನಾಂಕ : 8–5–1985 (ಪುಟ 88 ಸಂಪುಟ 1). ಆದ್ದರಿಂದ ವರದಿಯಲ್ಲಿ ಸುಪ್ರೀಂ ಕೋರ್ಟಿನ ಆದೇಶವನ್ನು ಪಾಲಿಸಲಾಗಿದೆ ಎಂದು ಹೇಳಿರುವುದು ನಿಜವಲ್ಲ.

ಜಾತಿವಾರು ಅಂಕಿ ಅಂಶಗಳು ಊಹೆಯಿಂದ ಆಗಿದೆ ಎಂಬುದಕ್ಕೆ ಹಲವು ನಿದರ್ಶನಗಳಿವೆ. ಇದರಿಂದ ಎಲ್ಲಾ ಜನಾಂಗಕ್ಕೆ ಅನ್ಯಾಯವಾಗಿದೆ. ಅಂಕಿ ಅಂಶಗಳನ್ನು ಕಲೆ ಹಾಕುವುದರಲ್ಲಿ ನಡೆದಿರುವ ಲೋಪಗಳು ಅನೇಕ. ಉದಾಹರಣೆ : ಸಂಪುಟ 1 ಪುಟ 213ರಲ್ಲಿ ಪಾರ್ಸಿಗಳ ಬಗ್ಗೆ ಆಯೋಗದವರೇ ಒಪ್ಪಿಕೊಂಡಿರುವಂತೆ ಎಲ್ಲಾ ರಂಗದಲ್ಲೂ ಅವರು ಮುಂದುವರಿದಿದ್ದರೂ ಸಮೀಕ್ಷೆಯ ಪ್ರಕಾರ 12 ಹಿಂದುಳಿದ ಅಂಕಗಳನ್ನು ಅವರು ಪಡೆದು ಅತೀ ಹಿಂದುಳಿದವರಂತೆ ಸೂಚ್ಯಂಕ ತೋರಿಸಿದೆ. ಆದಾಗ್ಯೂ ಆಯೋಗವು ಅನುಭವಜ್ಞಾನದಿಂದ ಅವರನ್ನು ಮುಂದುವರಿದವರೆಂದೇ ತೀರ್ಮಾನಿಸಿದ್ದಾರೆ. ಇದೇ ವಿಧಾನವನ್ನು ಉಳಿದ ಜಾತಿಯವರಿಗೆ ಅನುಸರಿಸದಿರುವುದು ಆಶ್ಚರ್ಯಕರ.

ಹಳ್ಳಿಯಲ್ಲಿರುವ ಬಹುಪಾಲು ಜನರು ಅವನು ಯಾವ ಜಾತಿಯವನೇ ಆಗಲಿ, ಹಿಂದುಳಿದಿರುವುದು ಎಲ್ಲರಿಗೂ ತಿಳಿದ ವಿಷಯ. ಅದಕ್ಕೆ ಪಂಡಿತರ ಅನುಭವ ವ್ಯಾಖ್ಯಾನ ಅನಾವಶ್ಯ.ಕ ಈ ವಿಷಯವನ್ನು ಗಮನಿಸದೇ ಅನುಮಾನಾಸ್ಪದವಾದ ಅಂಕಿ ಅಂಶಗಳ ಆಧಾರದ ಮೇಲೆ ಶಿಫಾರಸ್ಸುಗಳನ್ನು ತಯಾರಿಸಿದಂತಿದೆ. ಉದಾಹರಣೆ : (ಸಂಪುಟ 3 ಪುಟ 193) 9 ಸೂಚ್ಯಂಕ ಪಡೆದ ಗಾಣಿಗರು

ಮುಂದುವರಿದವರಂತೆಯೂ ಅದೇ 9 ಸೂಚ್ಯಂಕ ಪಡೆದ ಗೋಣಿಗರು ಹಿಂದುಳಿದವರಂತೆಯೂ ತೀರ್ಮಾನಿಸಿರುವುದು ವಿರೋಧಾಭಾಸ. ಹಾಗೆಯೇ ಬ್ರಾಹ್ಮಣರಿಗೆ 5 ಸೂಚ್ಯಂಕ, ಬಂಟರಿಗೆ 6, ಬಲಜಿಗರಿಗೆ 7, ಒಕ್ಕಲಿಗರಿಗೆ 3 — ಇವೆಲ್ಲ ಹಾಸ್ಯಾಸ್ಪದ ದಾಖಲೆಗಳಂತಿವೆ. 3 ಸೂಚ್ಯಂಕ ಪಡೆದ ಒಕ್ಕಲಿಗರು 5 ಸೂಚ್ಯಂಕ ಪಡೆದ ಬ್ರಾಹ್ಮಣರಿಗಿಂತಲೂ ಮುಂದುವರಿದವರಂತೆ ತೋರಿಸಿದರೆ ಇದು ವಾಸ್ತವಿಕತೆಗೆ ದೂರವಾದ ಮಾತು. ಆದ್ದರಿಂದ ಈ ವರದಿಯು ಒಪ್ಪುವುದಕ್ಕೆ ಅನರ್ಹವಾಗಿದೆ. ಅಲ್ಲದೆ ಹಿಂದುಳಿದ ಜಾತಿವಾರು ವರ್ಗೀಕರಣವನ್ನು 'ಎ' ಮತ್ತು 'ಬಿ' ವರ್ಗ ಎಂದು ವಿಂಗಡಿಸಿರುವುದು ಸುಪ್ರೀಂಕೋರ್ಟ್‌ನ ತೀರ್ಮಾನಕ್ಕೆ ವಿರುದ್ಧವಾಗಿದೆ.

ಈಗಾಗಲೇ ಕರ್ನಾಟಕ ರಾಜ್ಯಾದ್ಯಂತ ಬೃಹತ್ ಚಳುವಳಿ ಬಿರುಸಿನಿಂದ ನಡೆಯುತ್ತಿದೆ. ಶಾಂತಿಯುತವಾಗಿ ಪ್ರತಿಭಟನೆ ನಡೆಸಬೇಕೆಂದು ನಾವೆಲ್ಲರೂ ಮನವಿ ಸಲ್ಲಿಸಿದರೂ ಸಹಾ ಪ್ರತಿಭಟನೆಯು ತೀವ್ರ ರೂಪವನ್ನು ತಾಳುತ್ತಿದೆ. ಆದ್ದರಿಂದ ಸರ್ಕಾರವು ಸಾರ್ವಜನಿಕ ಪ್ರತಿಭಟನೆಯಿಂದ ಮತ್ತು ಸಾರ್ವಜನಿಕರ ಹೇಳಿಕೆಗಳಿಂದ ವರದಿಯು ತಿರಸ್ಕೃತವಾಗಿದೆಯೆಂಬ ಅಭಿಪ್ರಾಯವನ್ನು ಗ್ರಹಿಸಬೇಕಾಗಿದೆ.

ಇದು ಒಂದು ಕೋಮಿನ ಚಳುವಳಿಯಲ್ಲ, ಹಿಂದುಳಿದ ಬಡವರ ಕೂಗು. 35 ಕೋಮಿನವರು ಒಂದುಗೂಡಿ ಬಂದಿದ್ದೇವೆ. ಯಾವ ರಾಜಕೀಯವೂ ಇದರಲ್ಲಿಲ್ಲ. ಹಿಂದುಳಿದವರು ತಮ್ಮ ಸವಲತ್ತುಗಳನ್ನು ಉಳಿಸಿಕೊಳ್ಳಲು ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ರೀತಿಯು ಚಳವಳಿಯ ರೂಪವನ್ನು ತಾಳಿದೆ.

ಮೇಲ್ಕಂಡ ಕಾರಣಗಳಿಂದಾಗಿ, ಅಲ್ಲದೆ ವರದಿಯು ಇನ್ನೂ ಅನೇಕ ಲೋಪದೋಷಗಳನ್ನು ಹೊಂದಿರುವುದರಿಂದ ವರದಿಯು ಅವೈಜ್ಞಾನಿಕ, ಪೂರ್ವಗ್ರಹ ಪೀಡಿತ ಮತ್ತು ಸಂವಿಧಾನ ಬಾಹಿರ. ರಾಜ್ಯದ ಹಿಂದುಳಿದ ಜನತೆಯ ಹಿತದೃಷ್ಟಿಯಿಂದ ತಾವು ವೆಂಕಟಸ್ವಾಮಿ ಆಯೋಗದ ವರದಿಯನ್ನು ಕೈಬಿಡಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇನೆ ಮತ್ತು ಹಾವನೂರು ಆಯೋಗ ವರದಿಯನ್ನು ಪುನರ್ ಪರಿಶೀಲಿಸಿ ಅದರಲ್ಲಿ ಅನ್ಯಾಯವಾಗಿರುವ ಪಂಗಡಗಳಿಗೂ, ಅಲ್ಲದೆ ಬಿ.ಎಸ್.ಜಿ. ವರ್ಗದಲ್ಲಿರುವ ವೀರಶೈವ, ಬ್ರಾಹ್ಮಣ ಮುಂತಾದ ಕೋಮಿನ ಬಡವರಿಗೂ ನ್ಯಾಯ ದೊರಕಿಸಬೇಕೆಂದು ಪ್ರಾರ್ಥನೆ.

ತಾವು ಸಮಾಧಾನದಿಂದ ವರದಿಯನ್ನು ಅವಲೋಕಿಸಿ ಮೇಲ್ಕಂಡ ನ್ಯೂನ್ಯತೆಗಳನ್ನು ಮನಗಂಡು ಸಿಡಿದೆದ್ದಿರುವ ಜನರನ್ನು ಶಾಂತಗೊಳಿಸಲು ಪ್ರಸ್ತುತ ವೆಂಕಟಸ್ವಾಮಿ ಆಯೋಗದ ವರದಿಯನ್ನು ಸಂಪೂರ್ಣವಾಗಿ ಕೈಬಿಡಬೇಕು, ಅದನ್ನು ತಕ್ಷಣವೇ ತಿರಸ್ಕರಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ನಾನು ಶ್ರೀ ಕೆ. ವಿ. ಶಂಕರಗೌಡರೊಡನೆ ಅತಿ ಸ್ನೇಹದಿಂದಿದ್ದು ಸಲಿಗೆಯಿಂದ ನಡೆದುಕೊಳ್ಳುವ ಪ್ರವೃತ್ತಿ ನನ್ನದು. ಈ ವಾತಾವರಣವನ್ನು ಕಂಡು ನಾನು ಶಂಕರಗೌಡರಿಂದ ನಾನಾ ರೀತಿ ಸಹಾಯಗಳನ್ನು ಪಡೆದು ಬಾಳ್ವೆ ನಡೆಸುತ್ತೇನೆ ಎಂಬ ಅಭಿಪ್ರಾಯವುಳ್ಳವರು ಕೆಲವರಿದ್ದಾರೆ. ಈ ಮಾತನ್ನು ಒಂದಿಬ್ಬರು ಎದುರಿಗೆ ಹೇಳಿದ ವರಿದ್ದಾರೆ. ಅದರಲ್ಲು ದೊಡ್ಡ ಸ್ಥಾನದಲ್ಲಿದ್ದವರೊಬ್ಬರು ವಿನಾಕಾರಣ ನನ್ನನ್ನು ಕುರಿತು ನೀವು ಶಂಕರಗೌಡರನ್ನು ಎಕ್ಸ್‌ಪ್ಲಾಯಿಟ್ ಮಾಡುವ ವ್ಯಕ್ತಿ ಎಂದು ನಿಂದಿಸಿದರು. ಸರ್ ತಾವು ದಯಮಾಡಿ ನಿಮ್ಮಲ್ಲಿ ದೂರವಾಣಿಯಿದೆ ನೀವು ನನ್ನ ಮೇಲೆ ಹೊರಿಸುತ್ತಿರುವ ಆಕ್ಷೇಪಣೆ ನಿಜವೆ ? ಎಂದು ಅವರನ್ನೆ ಕೇಳಿ ತಿಳಿದು ಮಾತನಾಡಿರಿ ದುಡುಕುತನದ ಮಾತು ಒಳ್ಳೆಯದಲ್ಲವೆಂದರೂ ನನ್ನ ಮೇಲೆ ಕಿಡಿಕಾರಿ ಲೋಕದಲ್ಲಿ ಶಂಕರಗೌಡರಿಗೆ ತಾವೊಬ್ಬರೇ ಸ್ನೇಹಿತರು ಎನ್ನುವಂತೆ ಕೂಗಾಡಿದರು.

ಇಂತಹ ಪ್ರಸಂಗಗಳನ್ನು ಎತ್ತಿ ಹಿಡಿದು ನೈಜ ಪರಿಸ್ಥಿತಿ ವಿವರಿಸಲು ಸಿಕ್ಕಿದ ಈ ಅವಕಾಶವನ್ನು ಬಳಸಿಕೊಳ್ಳುತ್ತಿದ್ದೇನೆ. ನನಗೆ ಶಂಕರಗೌಡರೊಡನೆ ಸಖ್ಯ ಸುಮಾರು 45 ವರ್ಷಗಳಿಗಿಂತ ಸ್ವಲ್ಪಹೆಚ್ಚೆಂದರೂ ತಪ್ಪಾಗಲಾರದು. ನಾನು ಅವರು ಸ್ನೇಹಿತರಾದ ಮೇಲೆ ನಮ್ಮ ಜೇಬುಗಳು ಒಬ್ಬರಿಗೊಬ್ಬರಿಗೆ ಸದಾ ತೆರೆದಿರುತ್ತಿದ್ದವು. ಶಂಕರಗೌಡರ ಜೇಬಿನಲ್ಲಿ ಲಕ್ಷವಿದ್ದರೂ ಬಂದ ದಿನವೇ ಖಾಲಿಯಾಗುವುದು ಇಂದೂ ಸಹ ವಾಡಿಕೆ. ಅಷ್ಟು ದೊಡ್ಡ ಮೊತ್ತದ ಹಣ ಇಂದಿಗೂ ನನ್ನ ಜೇಬಿಗೆ ಬಂದಿಲ್ಲ. ಬರುವ ಅವಕಾಶ ಆ ಹಣಕ್ಕು ಇಲ್ಲ. ಗಳಿಸಿದ ರೂಪಾಯಿನಲ್ಲಿ ¾ ಉಳಿಸಿಕೊಂಡು ಸದಾ ಜೇಬು ಬರಿದಾಗ ದಂತೆ ನೋಡಿಕೊಳ್ಳುವುದನ್ನು ಇಂದಿಗೂ ನನ್ನ ಸ್ವಭಾವದಲ್ಲಿ ಬೆಳೆಸಿಕೊಂಡಿದ್ದೇನೆ. ಹೀಗೆ ಶಂಕರಗೌಡರ ಜೇಬು ಖಾಲಿ ಆದಾಗಲೆಲ್ಲ ಅಷ್ಟೊ ಇಷ್ಟೋ ನನ್ನ ಜೇಬು ತೆರೆದಿ ರುತ್ತಿತ್ತು. ಇದೇ ರೀತಿ ನಮ್ಮ ಸ್ನೇಹದಲ್ಲಿ ಅವರಾದರು ಕೊಡಬಹುದು. ನಾನಾದರು ಕೊಡಬಹುದು. ಕೊಟ್ಟೆರಲ್ಲ ಎಂದು ಮರುಪಾವತಿ ಅತ್ತ ತಲೆ ಹಾಕಿದವರಲ್ಲ. ಶಂಕರ ಗೌಡರೊಡನೆ ಸ್ನೇಹಿತರಾಗಿ ನನ್ನಂತೆಯೆ ನಡೆದುಕೊಳ್ಳುವ ಸ್ನೇಹಿತರು ಬಹುಮಂದಿ ಇರಬಹುದು ನನ್ನನ್ನು ಬಿಟ್ಟರೆ ಬೇರಾರು ನನ್ನಂತಹ ಸ್ನೇಹಿತರಿಲ್ಲ ಎಂಬ ಜಂಬವು ನನ್ನಲ್ಲಿಲ್ಲ.

ಜನತಾ ಶಿಕ್ಷಣ ಸಂಸ್ಥೆ ಪ್ರಾರಂಭಿಸಿದ ಲಾಗಾಯ್ತು ನಾನು ಶಂಕರಗೌಡರ ಒಡನಾಡಿ ಆಗಿದ್ದೇನೆ. ಕೆಲವು ವರ್ಷಗಳು ಕಾರ್ಯಕಾರಿ ಮಂಡಲಿ ಸದಸ್ಯ ಹಾಗೂ ಉಪಾಧ್ಯಕ್ಷ ನಾಗಿಯೂ ಇದ್ದವನು. ಈ ಸಂಸ್ಥೆಯ ಸಿಬ್ಬಂದಿವರ್ಗ ಸಾವಿರ ಜನರಿರಬಹುದು. ನನ್ನ

ಊರಿನಲ್ಲಿರುವ ತಮ್ಮನ ಮಗ ಎಸ್. ಎಸ್. ಎಲ್. ಸಿ. ಪಾಸು ಮಾಡಿದ. ಆತನಿಗೆ ಪಿ.ಇ.ಎಸ್ ಸಂಸ್ಥೆಯಲ್ಲಿ ಕೇವಲ ಅಟೆಂಡರ್ ಕೆಲಸವಾದರು ಕೊಡಿಸಿ ಎಂದು ನನ್ನ ತಮ್ಮ ಊರಿಂದ ಹುಡುಗನನ್ನು ಕಳುಹಿಸಿ ಕೊಟ್ಟ. ಆತನು ಇಲ್ಲಿಗೆ ಬಂದು 15 ವರ್ಷಗಳು ಕಳಿದಿವೆ. ಆದರು ಆತನಿಗೆ ಕಾಲೇಜಿನಲ್ಲಿ ಯಾವುದೇ ವರ್ಗದ ಕೆಲಸ ಕೊಡಿಸಲು ಸಾಧ್ಯ ವಾಗಲಿಲ್ಲ. ಕಾರಣ ಕೆಲಸ ಹುಡುಕಿ ಬರುವವರಿಗೆ ನಾನೇ ಶಂಕರಗೌಡರಿಗೆ ಶಿಫಾರ್ಸು ಮಾಡುತ್ತಿದ್ದೆ. ನನ್ನ 3 ನೆಯ ಮಗನಿಗೆ ವೈದ್ಯಕೀಯ ವಿದ್ಯಾಭ್ಯಾಸಕ್ಕೆ ಸರ್ಕಾರಿ ಸೀಟು ದೊರಕಿತ್ತು. ಆದರು ವೈದ್ಯಕೀಯಕ್ಕೆ ಕಳುಹಿಸಿ ವಿದ್ಯಾಭ್ಯಾಸ ಮಾಡಿಸುವುದು ನನಗೆ ಆರ್ಥಿಕವಾಗಿ ತೊಂದರೆಯಾಗಿತ್ತು. ಆತನನ್ನು ನಮ್ಮ ಪಿ.ಇ.ಎಸ್. ಇಂಜಿನಿಯ ರಿಂಗ್ ಕಾಲೇಜಿಗೆ ಮುಫತ್ತಾಗಿ ಸೇರಿಸಲು ಆಗಲಿಲ್ಲ. ಪರಿಣಾಮವಾಗಿ ವೈದ್ಯಕೀಯ ಕಾಲೇಜಿಗೆ ಸೇರಿಸಿದೆ. ಆತನು ಓದಿ ಉತ್ತಮ ವೈದ್ಯನಾಗಿ ಮಂಡ್ಯದಲ್ಲಿ ಸ್ವಂತವಾಗಿ ಪ್ರಾಕ್ಟೀಸ್ ಮಾಡುತ್ತಿದ್ದಾನೆ.

ಪಿ. ಇ. ಎಸ್, ಕಾಲೇಜಿನಲ್ಲಿ ಮೊದಲಿಂದ ಕೆಲಸಕ್ಕಿದ್ದ ವ್ಯಕ್ತಿಯೊಬ್ಬನಿಗೆ ನನ್ನ ಮೂರನೆಯ ಮಗಳನ್ನು ಮದುವೆ ಮಾಡಿ ಅಳಿಯನನ್ನಾಗಿ ಪಡೆದೆ. ಇಷ್ಟು ಬಿಟ್ಟರೆ ಪಿ. ಇ. ಎಸ್. ಕಾಲೇಜಿನಲ್ಲಿ ನನ್ನ ಮಕ್ಕಳಿಗೆ ಮುಫತ್ತಾಗಿ ಸೀಟು ದೊರಕಿಸಿಕೊಳ್ಳ ಲಾಗಲಿ, ಕಾಲೇಜಿನ ಸಿಬ್ಬಂದಿ ವರ್ಗದ ಕೆಲಸವನ್ನಾಗಲಿ, ಆರ್ಥಿಕವಾಗಿ ಹಣವನ್ನಾಗಲಿ ಶಂಕರಗೌಡರಿಂದ (exploitation) ಶೋಷಣೆ ಮಾಡಿದ ಏಕೈಕ ಪ್ರಸಂಗವಾಗಲಿ ಇಲ್ಲ.

ಶಂಕರಗೌಡರು ಹೊಸ ಮನೆ ಕಟ್ಟಿದರು. ಆ ಮನೆಗೆ ಬೇಕಾದ ಊಟದ ಮೇಜು ಮತ್ತು ಕುರ್ಚಿಗಳನ್ನು (Dining Table and chair) ತಯಾರು ಮಾಡಿಸಿ ನನ್ನ ಹೆಸರು ಹೇಳಿದರೆ ತಾಪತ್ರೆ ಮನುಷ್ಯನಿಗೇಕೆ ಈ ತಾಪತ್ರೆ ಎಂದು ನೊಂದು ಕೊಂಡಾರೆಂದು ಬೇರೆಯವರ ಹೆಸರು ಹೇಳಿ ಅವರ ಹೊಸ ಮನೆಗೆ ಕೊಟ್ಟೆ. ಬಲಗೈ ಮಾಡಿದ್ದನ್ನ ಎಡಗೈ ಕಾಣದಂತೆ ನಾನಾಗಲಿ ಅವರಾಗಲಿ ನಡೆಸಿಕೊಂಡಿದ್ದೇವೆ.

1968ನೆಯ ಇಸವಿ ಜೂನ್ 18ರಂದು ಬೆಂಗಳೂರಿಂದ ಮುಂದಕ್ಕೆ ಕಾರಿನಲ್ಲಿ ಬರು ವಾಗ ಆದ ರಸ್ತೆ ಅಪಘಾತದಿಂದ ನನ್ನ ತಲೆ, ಕೈ ಮತ್ತು ತೊಡೆಗೆ ಚೇತರಿಸಿಕೊಳ್ಳ ಲಾಗದಂತಹ ನೋವಾದುವು. [ಸುಮಾರು ತಿಂಗಳಕಾಲ ದಿನವೂ ತಪ್ಪದೆ ಬಂದು ಡಾಕ್ಟರುಗಳನ್ನು ಭೇಟಿ ಮಾಡಿ ಚಿಕಿತ್ಸೆ ಕೊಡಿಸುವುದರಲ್ಲಿ ಶಂಕರಗೌಡರು ಪ್ರಮುಖ ಪಾತ್ರವಹಿಸಿದರು. ಶಂಕರಗೌಡರು ಈ ಅಪಘಾತದಲ್ಲಿ ಪ್ರವೇಶ ಮಾಡದೇ ಹೋಗಿ ದ್ದರೆ, ನನ್ನನ್ನು ಆಸ್ಪತ್ರೆಗೆ ಚಿಕಿತ್ಸೆಗೆ ಸೇರಿಸಿದಂದೇ ಅಕಾಲ ಮೃತ್ಯುವಶನಾಗುತ್ತಿದ್ದೆ. ಇಂದಿಗೂ ನನ್ನ ಸಂಸಾರದಲ್ಲಿ ಈ ಪ್ರಕರಣವನ್ನು ನೆನೆದು ಶಂಕರಗೌಡರನ್ನು ಕೊಂಡಾಡುತ್ತಾರೆ.

ಚೌಧುರಿ ಚರಣಸಿಂಗ್ ಅವರ ಬಗ್ಗೆ ಶ್ರೀ ಹೆಗಡೆ ಅವರಿಗೆ ಅಪಾರವಾದ ದ್ವೇಷ. ಏನಾದರೂ ಲೋಕದಳ ಬೆಳೆಸಲು ಸಹಾಯಕರಾಗದಂತೆ ತಿಳಿಸಿ, ಜನತಾ ಪಕ್ಷ ಸೇರಲು

ಒತ್ತಾಯಿಸಿದರು. ಹೋದ ದಾರಿಗೆ ಸುಂಕವಿಲ್ಲವೆಂದು ಶೋಕಿಸಲಾದ ಬಗ್ಗೆ ಯಾರಿಗೂ ಏನೂ ಹೇಳದೆ ವಾಪಸ್ಸು ಮಂಡ್ಯಕ್ಕೆ ಬಂದೆವು. ನಾನು ಮತ್ತು ಸ್ನೇಹಿತರಾದ ಸಿ. ಗೋವಿಂದಗೌಡರು ದಿನವೂ ಅವರ ಕಾರಿನಲ್ಲಿ ಶಂಕರಗೌಡರಿಗೆ ಕೆರಗೋಡು ಕ್ಷೇತ್ರದ ಸೀಟಿಗಾಗಿ ಬೆಂಗಳೂರು ಯಾತ್ರೆ ನಡೆಸಿದೆವು. ಸಿ. ಗೋವಿಂದಗೌಡರು ಬೇಗಾವರೂ, ಏನಾದರು ಮಾಡಿ ಶಂಕರಗೌಡರಿಗೆ ಕೆರಗೋಡು ಕ್ಷೇತ್ರಕ್ಕೇ ಸೀಟು ತರಬೇಕೆಂಬ ಹಠ ಹಿಡಿದರು.

ಶ್ರೀ ಹೆಗಡೆಯವರು ಬೆಂಗಳೂರು ದೆಹಲಿ ಓಡಾಟದಲ್ಲಿ ನಮಗೆ ಸಿಗುವುದೇ ಕಷ್ಟವಾಯಿತು. ಶಂಕರಗೌಡರಿಗೆ ಕೆರಗೋಡು ಕ್ಷೇತ್ರಕ್ಕೆ ಸೀಟು ಸಿಗುವ ಆಸೆ ದೂರ ಉಳಿಯುತ್ತ ಬಂದಿತು. ಚಂದಗಾಲಿನ ತಮ್ಮಣ್ಣ ಅಥವಾ ಕಲ್ಮಂಟಿದೊಡ್ಡಿ ಎಚ್. ಚಿಕ್ಕಲಿಂಗೇಗೌಡರಿಗೆ ಜನತಾ ಸೀಟನ್ನು ಕೊಡುವ ವದಂತಿ ಮಂಡ್ಯದಲ್ಲಿ ಹರಡಿತು.

ಶಂಕರಗೌಡರಿಗೆ ಸೀಟು ದಕ್ಕಿಸಿಕೊಳ್ಳಬೇಕೆಂಬ ಹಠದಿಂದ ನಾವು ಪುನಃ ಪುನಃ ಪ್ರಯತ್ನ ಮಾಡಲು ದಿನವೂ ಬೆಂಗಳೂರು ಪ್ರವಾಸ ನಡೆಸಿದೆವು. ಹಗಡೆ ಅವರು ಶಂಕರಗೌಡರ ಸೀಟಿನ ಬಗ್ಗೆ ಶ್ರೀ ದೇವೇಗೌಡರನ್ನು ಕಾಣುವುದು ಸೂಕ್ತವೆಂದು ತಮ್ಮ ಕೈ ಎತ್ತಿ ಬಿಟ್ಟರು.

ಕ್ರಾಂತಿರಂಗ ಮತ್ತು ಜನತಾಪಕ್ಷಗಳ ಸೀಟುಗಳ ಹಂಚಿಕೆ ಹಗರಣ ಇನ್ನೂ ನಡೆಯುತ್ತಲೇಯಿತ್ತು. ನಾವು ಖಾದ್ರಿಶಾಮಣ್ಣನವರನ್ನು ನೋಡಿ ಶಂಕರಗೌಡರ ಸೀಟಿನ ಬಗ್ಗೆ ನಡೆಯುತ್ತಿರುವ ಎಡಬಿಡಂಗಿತನ ವಿವರಿಸಿದೆವು. ಖಾದ್ರಿ ಅವರೊಡನೆ ನಾವು ನೇರ ಡಿ. ಬಿ. ಚಂದ್ರೇಗೌಡರ ಮನೆಗೆ ಹೋದೆವು. ನಜೀರ್ ಸಾಹೇಬರು ಇದ್ದರು. ಎಲ್ಲರೂ ಕಲೆತು ಮಾತನಾಡಿ ಶಂಕರಗೌಡರಿಗೆ ಕೆರಗೋಡು ಕ್ಷೇತ್ರದಿಂದ ಸ್ಥಾನ ಕೊಡದಿದ್ದರೆ ಮಂಡ್ಯ ಕಸಬಾ ಕ್ಷೇತ್ರದ ಕ್ರಾಂತಿರಂಗದ ಸ್ಥಾನ ಶಂಕರಗೌಡರಿಗೆ ಕೊಡಲು ನಿಶ್ಚಯಿಸಿದರು.

ಕೆರಗೋಡು ಕ್ಷೇತ್ರದಲ್ಲಿ ಕಾಂಗ್ರೆಸ ಎಚ್. ಡಿ. ಚೌಡಯ್ಯನವರ ವಿರುದ್ಧ ಪ್ರಬಲ ಪೈಪೋಟಿಗೆ ಸರಿ ಸಮಾನಾದ ವ್ಯಕ್ತಿ ಬೇಕೆಂದು, ಜನತಾಪಕ್ಷ ತಡಕಾಡಿ ಆ ಸ್ಥಾನಕ್ಕೆ ಶಂಕರಗೌಡರನ್ನೇ ದೇವೇಗೌಡರು ಆಯ್ಕೆ ಮಾಡಿದರು. ಮಂಡ್ಯ ಕಸಬಾ ಕ್ರಾಂತಿ ರಂಗದ ಸ್ಥಾನ ಇಂಡವಾಳು ಎಚ್. ಹೊನ್ನಪ್ಪನಿಗೆ ದಕ್ಕಿದರು ಅವರಿಂದ ಕೈ ಜಾರಿ ಬಿ. ದೊಡ್ಡಬೋರೇ ಗೌಡರು ಅಭ್ಯರ್ಥಿಯಾಗಿ ಗೆದ್ದರು. ಶಂಕರಗೌಡರೇ ಇಲ್ಲಿ ಸೋತರು. ಅದಕ್ಕೇ ಹೇಳುವುದು "ಮಹದೇವ ಕೊಟ್ಟರೆ ಮನೆ ತುಂಬ, ಮೂದೇವಿ ಕೊಟ್ಟರೆ ಮೂಲೆ ತುಂಬ'' ಎನ್ನುವ ಗಾದೆಯಂತೆ ಕಣ್ಣೆಮುಚ್ಚಾಲೆ ಚುನಾವಣೆಯಲ್ಲಿ ನಡೆದೇ ಹೋಯಿತು. ಆದರು ಶಂಕರಗೌಡರಿಗೆ ಕಸಬಾ ಕ್ಷೇತ್ರವೇ ದೊರೆತಿದ್ದರೆ ? ಎನ್ನುವ ಯಕ್ಷ ಪ್ರಶ್ನೆ ಉಳಿದೇ ಇದೆ.

ನಾನು ನನ್ನ ಎಳವೆಯಿಂದಲೂ ಶ್ರೀ ಕುವೆಂಪು ಅವರ ಸಾಹಿತ್ಯದಿಂದ ಸ್ಫೂರ್ತಿ

ಪಡೆದವನು. ಶ್ರೀಸಾಮಾನ್ಯನ ಉದ್ಧಾರದ ಬಗ್ಗೆ ಈ ಕವಿವರ್ಯರು ತೋರಿದ ಕಳಕಳಿಯನ್ನು ನಾನು ಮತ್ತಾವ ಕವಿಯಲ್ಲೂ ಕಂಡಿಲ್ಲ. ಮುಂದೆ ಅವರ ನಿಕಟ ಪರಿಚಯವಾಗಿ ಅವರೊಂದಿಗಿನ ಮಾತು ಕತೆಯಲ್ಲಿ ಪಡೆದದ್ದೆ ಎಷ್ಟೋ ಜನ್ಮಗಳಿಗಾಗುತ್ತದೆ. ಕುವೆಂಪು ಅವರೇ ಶ್ರೀ ಸಾಮಾನ್ಯನೆ ಭಗವನ್ ಮಾನ್ಯಂ ಎಂದಿದ್ದಾರೆ. ನಾನು ಸಮಸ್ಯೆಗಳು ಎದುರಾದಾಗ ಶ್ರೀಕುವೆಂಪು ಅವರಲ್ಲಿ ಹೋಗುತ್ತೇನೆ. ಅವುಗಳಿಗೆ ಪರಿಹಾರ ದೊರಕುತ್ತದೆ. ನಾನು ಅತ್ಯಂತ ಚಿಕ್ಕವನಾಗಿದ್ದಾಗ ನನ್ನನ್ನು ಕವಿ ಹೇಗೆ ಆಕರ್ಷಿಸಿದರೋ ಇಂದಿಗೂ ಹಾಗೆಯೇ. ಈ ವರ್ಷ ಅವರಿಗೆ ಪಂಪ ಪ್ರಶಸ್ತಿ ಸಂದಿದೆ, ನೋಬೆಲ್ ಬಹುಮಾನ ಸಂದ ಸುದ್ದಿಯನ್ನು ಕೇಳುತ್ತೇನೆ ಎಂಬ ನಂಬಿಕೆ ನನ್ನದು. ಆ ಮಹಾ ಋಷಿ ಕವಿಯ ವಾಣಿಯೊಂದರ ಮೂಲಕ ನನ್ನ ಈ ಬಾಳಿನ ಪುಟಗಳನ್ನು ಇಲ್ಲಿಗೆ ನಿಲ್ಲಿಸುತ್ತಿದ್ದೇನೆ.

### ದಂಪತಿಗಳ ಪ್ರಾರ್ಥನೆ

ಕರುಣ ಕೃಪಾಸಾಗರ, ಹೇ ಗುರುದೇವ,
ಬಾಳಿಸಿ ನಮ್ಮಿಬ್ಬರನೂ ನೀ ಬಲ್ಲಂದದಲಿ
ಕರೆದುಕೊ ನಿನ್ನರಲಡಿಗೆ :

ಒಲವಿನ ವರವನು ನೀಡೆಮಗೆ :
ಅಗಲಿಕೆ ಎಂದೂ ಬೇಡೆಮಗೆ :

ಕಷ್ಟವೊ, ನಷ್ಟವೊ, ಬಡವೋ, ಸಿರಿಯೋ,
ಗಂಜಿಯೊ ನೀರೋ ಸಾಕೆಮಗೆ :
ಪ್ರೇಮ ಕೃಪಾಬಲ ಬೇಕೆಮಗೆ !

(ಕುವೆಂಪು ಕದರಡಿಕೆಯಿಂದ)

# ಗೆಳೆಯ ಜವರಪ್ಪಗೌಡ

ಗೆಳೆತನಕೆ ಸಮನಹ ಸಂಪತ್ತು ಇಹುದೇನು ?
ಗೆಳೆತನದ ಮಾಧುರ್ಯ ಮೀರುವ ಮಧುವುಂಟೆ ?
ಗೆಳೆತನದ ಸೊಬಗನೇ ಮೀರುವ ಸೊಬಗುಂಟೆ ?
ಗೆಳೆತನದ ಸೌಜನ್ಯ ಸಮವಹ ಸೌಜನ್ಯವುಂಟೆ ?
ಗೆಳೆತನದ ತ್ಯಾಗಕ್ಕೆ ಈ ಜಗದಿ ಎಣೆಯುಂಟೆ ?
ಗೆಳೆತನದ ಮುಕುಟಮಣಿಗಿಷ್ಟು ಬೆಲೆ, ಎನಲುಂಟೆ ?
ಗೆಳೆತನದ ತೇಜಸ್ಸಿಗಾವುದು ಸಾಟಿ ಭಾವಿಸಲು ?
ಗೆಳೆತನದ ಬಳಗದೊಳು ಜವರಪ್ಪಗೌಡ ಬಲು
ಸುಳಿಗೊಂಡ ಬಾಳ್ಪೊಲು, ಕಳಿತ ಹಣ್ಣಿನಪೊಲು !
ಬಳಿಗೋಡಿಬಂದ ನಿಜ ಗೆಳೆಯಂಗೆ ಊರುಗೋಲು !
ಕಳಕಳಿಯ ಮನದುಂಬಿ ಆಳುಪವರ ಎದೆದುಂಬಿ
ಸುಳಿಗಾಳಿಯುಂದದಲಿ ಮನಕೆ ತಂಪನೆ ತುಂಬಿ
ಹೊಳೆವನಿವ ಜವರಪ್ಪ ; ಶಂಕರನ ಎದೆದುಂಬಿ,
ಬೆಳೆಸಿದನು ವಯಸ್ಕರ ಶಿಕ್ಷಣದ ತೇರುತುಂಬಿ !

ಹೆಜ್ಜಿಗೆ ಲಿಂಗಣ್ಣ

# ಸೇವೆಯೇ ಪೂಜೆ

ನಾಡಿಗೆ ಬಹುಮುಖ ಸೇವೆಯನ್ನು ಸಲ್ಲಿಸಿರುವ ಶ್ರೀ ಪಿ. ಎನ್. ಜವರಪ್ಪ ಗೌಡರನ್ನು ಅಭಿನಂದನ ಗ್ರಂಥ ಸಮರ್ಪಣ ಪೂರ್ವಕವಾಗಿ ಗೌರವಿಸುವ ಕಾರ್ಯ ಶ್ಲಾಘನೀಯವಾದುದು. ಸ್ವಾತಂತ್ರ್ಯ ಸಂಗ್ರಾಮ, ಪತ್ರಿಕೋದ್ಯಮ, ವಯಸ್ಕರ ಶಿಕ್ಷಣ, ಸಾರ್ವಜನಿಕ ಸೇವಾ ಕ್ಷೇತಗಳಲ್ಲಿ ಅಚ್ಚಳಿಯದೆ ನಿಚ್ಚಳವಾಗಿ ಉಳಿದಿರುವ ಇವರ ಹೆಜ್ಜೆಯ ಗುರುತುಗಳನ್ನಿಂದೂ ಕಾಣಬಹುದು. ಹೊಲ ಮನೆಗಳನ್ನು ಮಾರಿಯೋ, ಸಾಲ ಮಾಡಿಯೋ ಮಕ್ಕಳ ಮದುವೆ ಮಾಡಿ ಕಷ್ಟಪರಂಪರೆಗೆ ಗುರಿಯಾಗಿ ನರಳುತ್ತಿದ್ದವರನ್ನು ಕಂಡು ಮರುಗಿ ಇವರು ಸರಳ ವಿವಾಹ ಪದ್ಧತಿಗೆ ಒತ್ತು ಕೊಟ್ಟರು. ಇವರು ವಿಶ್ವಮಾನವ ತತ್ತ್ವವಾದಿಗಳು. ಸಮಾಜ ಸುಧಾರಣೆಯ ಕಡೆಗಿರುವ ಇವರ ಒಲವು ಅಭಿನಂದನೀಯ.

ಇವರಿಗೆ ನಮ್ಮ ಶ್ರೀ ಕ್ಷೇತ್ರದ ಮೇಲೆ ಬಹಳ ಅಭಿಮಾನವಿದೆ. ನಮ್ಮ ನಿಕಟವರ್ತಿಗಳಲ್ಲಿ ಇವರೂ ಒಬ್ಬರು. ನಮ್ಮ ಪ್ರವಾಸಗಳಲ್ಲಿ ಪಾಲ್ಗೊಂಡು ಶ್ರೀ ಕ್ಷೇತ್ರಕ್ಕೆ ಉತ್ತಮ ಸೇವೆಯನ್ನು ಸಲ್ಲಿಸಿದ್ದಾರೆ. ಕ್ಲಿಷ್ಟ ಸಮಸ್ಯೆಗಳ ಸಂದರ್ಭದಲ್ಲಿ ಪರಿಶೀಲನೆಗೆ ನಮ್ಮೊಡನೆ ಸಹಕರಿಸಿದ್ದಾರೆ. ರಾಷ್ಟ್ರಕವಿ ಕುವೆಂಪು ಮತ್ತು ನಮ್ಮ ಸಂಪರ್ಕ ಹಾಗೂ ವಿಚಾರ ವಿನಿಮಯಕ್ಕೆ ಕಾರಣರಾಗಿದ್ದಾರೆ. ಇವರು ನಮ್ಮ ಬಗ್ಗೆ 'ಸೇವೆಯೇ ಪೂಜೆ' ಎಂಬ ಪುಸ್ತಿಕೆಯೊಂದನ್ನು ಬೆಳಕಿಗೆ ತಂದಿದ್ದಾರೆ. ವಯೋವೃದ್ಧರಾದರೂ ತರುಣರಂತೆ ಇಂದೂ ಸೇವಾ ಕ್ಷೇತ್ರದಲ್ಲಿ ಮುನ್ನಡೆಯುತ್ತಿದ್ದಾರೆ. ಭಗವಂತನ ಕೃಪೆಯಿಂದ ಚಿರಕಾಲ ಇವರ ಸೇವೆಯು ನಾಡಿಗೆ ದೊರೆಯುವಂತಾಗಲಿ ಹಾಗೂ ಆಯುರಾರೋಗ್ಯಾದಿಗಳು ಇವರಿಗೆ ಲಭಿಸಲೆಂದು ತುಂಬುಹೃದಯದಿಂದ ಹಾರೈಸುತ್ತೇವೆ.

ಮಂಗಳಾಶೀರ್ವಾದಗಳು

**ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**

# ಸರಳ ಜೀವಿ

1989ನೆಯ ಜನವರಿ ತಿಂಗಳ ಎರಡನೆಯ ವಾರದಲ್ಲಿ ಮಾನ್ಯ ಶ್ರೀ ಪಿ. ಎನ್. ಜವರಪ್ಪಗೌಡರವರನ್ನು ಸನ್ಮಾನಿಸುವ ಸಂದರ್ಭದಲ್ಲಿ ಅವರಿಗೆ ಅಭಿನಂದನಾ ಗ್ರಂಥ ವೊಂದನ್ನು ಅರ್ಪಿಸಲು ತಾವು ತೀರ್ಮಾನ ಮಾಡಿರುವುದು ತುಂಬಾ ಸಂತೋಷದ ವಿಷಯ. ಶ್ರೀ ಜವರಪ್ಪಗೌಡರವರು ನನಗೆ ಬಹಳ ವರ್ಷಗಳಿಂದ ಗೊತ್ತು. ಅವರು ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುತ್ತಾರೆ. ಶ್ರೀಯುತರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಮುಖ ಪಾತ್ರ ವಹಿಸಿ ಮಂಡ್ಯ ಜಿಲ್ಲೆಗೆ ಕೀರ್ತಿಯನ್ನು ತಂದಿರುತ್ತಾರೆ. ನಾನು ಕಂಡಂತೆ ಶ್ರೀ ಜವರಪ್ಪಗೌಡರವರು ಬಹಳ ಸರಳ ಜೀವಿ. ಅವರು ಸಮಾಜದ ಕೆಲಸ-ಕಾರ್ಯಗಳಲ್ಲಿ ಸಕ್ರಿಯ ಪಾತ್ರ ವಹಿಸಿರುತ್ತಾರೆ. ಅವರಿಗೆ ದೇವರು ಇನ್ನೂ ಹೆಚ್ಚಿನ ಆಯುಷ್ಯ ಕೊಟ್ಟು ಸಮಾಜ ಸೇವೆ ಮಾಡಲು ಅವಕಾಶ ದೊರಕುವಂತೆ ಮಾಡಲೆಂದು ನಾನು ಭಗವಂತನಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಗೌರವಗಳೊಂದಿಗೆ,

ಡಿ. ಮಂಜುನಾಥ್



ಆ ಮುನ್ನವೂ, ಆ ಮೇಲೆಯೂ ಅವರನ್ನು ಅನೇಕ ಸಲ ಕಂಡಿದ್ದೇನೆ. ಅವರ ಆತ್ಮೀಯತೆಯ ಸುಖವನ್ನು ಉಂಡಿದ್ದೇನೆ. ಅವರೊಬ್ಬ ಸಾತ್ವಿಕ ಸಮಾಜ ಸೇವಾ ಧಾರಿಗಳು—ಎಂದುಕೊಂಡಿದ್ದೇನೆ. ಸಾರ್ವಜನಿಕ ಜೀವನ ಸಹ್ಯವಾಗುವುದು ಇಂಥವರಿಂದ ; ಮಾನವೀಯ ಸಂಬಂಧಗಳು ಮಧುರವಾಗುವುದು ಇಂಥವರಿಂದ ; ನಮ್ಮ ನಾಡು ನುಡಿಗಳ ಬಗ್ಗೆ ನಮ್ಮ ಆಸೆ ಚಿಗುರುವುದು ಇಂಥವರಿಂದ. ಅವರಿಗೆ ಆಯುಷ್ಯ ಹೆಚ್ಚಲಿ, ಹುಮ್ಮಸ್ಸು ಹೆಚ್ಚಲಿ, ಕ್ರಿಯಾಶಕ್ತಿ ಹೆಚ್ಚಲಿ ! ಅವರಿಂದ ಇನ್ನೂ ಅನೇಕ ಒಳ್ಳೆಯ ಕಾರ್ಯಗಳಾಗಲಿ.

ಸಿದ್ಧಯ್ಯ ಪುರಾಣಿಕ



# ಅನುಕಂಪಶೀಲ

'ಕರುಣಾಗೃಹ'—ಅಂಗವಿಕಲ ಮಕ್ಕಳ ವಸತಿಗೃಹ. ಇಲ್ಲಿಗೆ ಒಂದು ದಿನ ಅನಿರೀಕ್ಷಿತವಾಗಿ ಶ್ರೀ ಜವರಪ್ಪಗೌಡರು ಆಗಮಿಸಿದರು. ಸಂಸ್ಥೆಯಲ್ಲೆಲ್ಲ ಸುತ್ತಾಡಿದರು. ಮಕ್ಕಳು ಮಾಡಿರುವ ಹೂದೋಟ, ತರಕಾರಿ ಕೈ ತೋಟ ನೋಡಿದರು. ಮಕ್ಕಳ ಅಚ್ಚುಕಟ್ಟುತನ, ಆವರಣದ ಸ್ವಚ್ಛತೆ ಗಮನಿಸಿದರು. ಮಕ್ಕಳೊಂದಿಗೆ ಆತ್ಮೀಯವಾಗಿ ಮಾತನಾಡಿದರು. ಎಲ್ಲವನ್ನು ನೋಡಿ—ಕೇಳಿ ಸಂತೋಷಪಟ್ಟರು. ಇದೊಂದು 'ಮಾನವ ದೇಗುಲ'ವೆಂದು ಉದ್ಗಾರತೆಗೆದರು. ಆಮೇಲೆ ಸಂಸ್ಥೆಯ ಚಟುವಟಿಕೆಗಳ ಸಹಾಯಾರ್ಥ ತಮ್ಮ ಮೊಮ್ಮಗುವಿನ ಹೆಸರಿನಲ್ಲಿ ಧನಸಹಾಯ ಮಾಡಿದರು. ತಮ್ಮೊಡನಿದ್ದ ಇತರ ಸ್ನೇಹಿತರಿಂದಲೂ ಸಹಾಯ ದೊರೆಕಿಸಿಕೊಟ್ಟರು. ಕೆಲಸದ ಮಹತ್ವವನ್ನು ಅರಿತು ಅದನ್ನು ಮೆಚ್ಚುವ ಹಾಗೂ ನೊಂದವರ ಬಗ್ಗೆ ಅನುಕಂಪ ತೋರುವ ಹೃದಯ ಜವರಪ್ಪಗೌಡರದು.

**ಸುರೇಂದ್ರ ಕೌಲಗಿ**

# ಗಣ್ಯವ್ಯಕ್ತಿ

ಶ್ರೀ ಪಿ. ಎಸ್. ಜವರಪ್ಪಗೌಡರು ಒಬ್ಬ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು. ಭಾರತದ ಸ್ವಾತಂತ್ರ್ಯಕ್ಕೋಸ್ಕರ ತಮ್ಮ ಜೀವನದ ಹಂಗನ್ನು ತೊರೆದು ಹೋರಾಟಮಾಡಿ, ಅನೇಕ ವರ್ಷಗಳ ಕಾಲ ಸೆರೆಮನೆವಾಸ ಅನುಭವಿಸಿದ್ದಾರೆ. ಶ್ರೀಯುತರು ಬಹುಮುಖ ಪ್ರತಿಭೆ ಉಳ್ಳವರಾಗಿದ್ದು, ಶಿಕ್ಷಣ ರಂಗದಲ್ಲಿ, ಸಾಹಿತ್ಯ ಕ್ಷೇತ್ರ, ಸಾಂಸ್ಕೃತಿಕ ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಅಪಾರವಾಗಿ ಶ್ರಮಿಸಿದ್ದಾರೆ. ಅಲ್ಲದೆ ಇವರು ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ದುಡಿದಿದ್ದಾರೆ. ಇವರು 'ವಿಶ್ವಾಮಿತ್ರ' ಎಂಬ ಪತ್ರಿಕೆಯನ್ನು ನಡೆಸಿ, ಪತ್ರಿಕೋದ್ಯಮದಲ್ಲೂ ತಮ್ಮ ಸಾಹಸವನ್ನು ಪ್ರದರ್ಶಿಸಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ ಇವರು ಪ್ರಮುಖ ವ್ಯಕ್ತಿಗಳಾಗಿದ್ದಾರೆ. ಅನೇಕ ಕ್ಷೇತ್ರದಲ್ಲಿ ಹೆಸರುಗಳಿಸಿ, ಎಲ್ಲರ ಮನದಲ್ಲೂ ಅಚ್ಚಳಿಯದೆ ಉಳಿದಿದ್ದಾರೆ. ಇಂತಹ ಒಬ್ಬ ಗಣ್ಯ ವ್ಯಕ್ತಿಯನ್ನು ಅಭಿನಂದಿಸುತ್ತಿರುವುದು ಸ್ತುತ್ಯಾರ್ಹವಾದ ಸಂಗತಿ.

ಹೆಚ್. ಡಿ. ದೇವೇಗೌಡ



# ಜನಸೇವಕ

ಶ್ರೀ ಜವರಪ್ಪಗೌಡರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಕಾಲದಿಂದಲೂ ನನಗೆ ಪರಿಚಿತರು. ಅವರು ಸಾಹಿತ್ಯ ಪ್ರೇಮಿ ಪತ್ರಕರ್ತರಾಗಿಯೂ ಕೂಡಾ ಜನರ ಸೇವೆ ಸಲ್ಲಿಸುತ್ತಾರೆ. ಅವರ ಲೇಖನಿಯು ಹರಿತವಾದುದು. ಅವರ ಬುದ್ಧಿಯೂ ಹರಿತವಾದುದು. ಅವರು ಸಲ್ಲಿಸಿರುವ ಸೇವೆಯನ್ನು ಸ್ಮರಿಸಿ ಅವರನ್ನು ಸನ್ಮಾನಿಸಲು ಏರ್ಪಾಡು ನಡೆಸಿರುವುದು ಉಚಿತವಾದುದು. ಶ್ರೀ ಜವರಪ್ಪಗೌಡರು ನನಗಿಂತ ವಯಸ್ಸಿನಲ್ಲಿ ಬಹಳ ಕಿರಿಯವರು. ಅವರು ವಿಶ್ರಾಂತ ಜೀವನ ನಡೆಸುತ್ತಿದ್ದಾರೆಂದು ಬರೆದಿದ್ದೀರಿ. ಸ್ವಾತಂತ್ರ್ಯ ಹೋರಾಟಗಾರರಾಗಿದ್ದವರು ಈ ದೇಶದಲ್ಲಿ ನಡೆಯುತಕ್ಕ ಅನ್ಯಾಯ ಅಕ್ರಮಗಳ, ಭ್ರಷ್ಟಾಚಾರಗಳನ್ನು ಸಹಿಸಿಕೊಂಡು ಸುಮ್ಮನಿರುವುದು ಯುಕ್ತವಲ್ಲ. ನನಗೆ ಈಗ 80 ವರ್ಷ ತುಂಬಿದ್ದು 81ನೇಯ ವಯಸ್ಸಿಗೆ ಕಾಲಿಟ್ಟಿದ್ದೇನೆ. ಈಚೆಗೆ ಒಂದು ವರ್ಷದಿಂದ ನನ್ನ ಆರೋಗ್ಯ ದಿನೇ ದಿನೇ ನಶಿಸುತ್ತಾ ಇದೆ. ಹೊಟ್ಟೆಯ ಹುಣ್ಣು ನನಗೆ ಬಹಳ ತೊಂದರೆ ಕೊಡುತ್ತಿದೆ. ಆದರೂ ಕೂಡಾ ಈ ದೇಶದಲ್ಲಿ ರಾಜಕಾರಣ ಮತ್ತು ಆಡಳಿತದ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯ ನೋಡಿ ನನ್ನ ರಕ್ತ ಕುದಿಯುತ್ತಿದೆ. ನನ್ನ ಆರೋಗ್ಯ ಸರಿ ಇದ್ದಿದ್ದರೆ ಈ ರಾಜ್ಯದಲ್ಲೆಲ್ಲಾ ಸಂಚರಿಸಿ ಜನರನ್ನು ಎಚ್ಚರಗೊಳಿಸುತ್ತಿದ್ದೆ. ದುರದೃಷ್ಟವಶಾತ್ ನನಗೆ ಹತ್ತು ಮೈಲಿ ದೂರ ಕಾರಿನಲ್ಲಿ ಪ್ರಯಾಣ ಮಾಡುವ ಚೈತನ್ಯವೂ ಕೂಡಾ ಇಲ್ಲವಾಗಿದೆ. ಜವರಪ್ಪಗೌಡರು ದೀರ್ಘಕಾಲ ಬಾಳಿ ಹೆಚ್ಚಿನ ಜನಸೇವೆ ಮಾಡುವಂತಾಗಲಿ ಎಂದು ಹಾರೈಸುತ್ತೇನೆ.



ಕಡಿದಾಳ್ ಮಂಜಪ್ಪ

# ರಚನಾತ್ಮಕ ಕಾರ್ಯಪಟು

ಕುಗ್ರಾಮವೊಂದರ ಬಡ ರೈತ ಕುಟುಂಬದಲ್ಲಿ ಜನಿಸಿ 'ಬಡತನ ತರಂಗಿಣಿಯಲ್ಲಿಯೇ ತನ್ನ ವಿದ್ಯಾರ್ಜನೆಯನ್ನು ನಿಲ್ಲಿಸಿದ 'ಓರ್ವ ವ್ಯಕ್ತಿಯನ್ನು ಸತ್ಸಂಗ. ಸತತ ಪರಿಶ್ರಮ, ನಿರಂತರ ಅಧ್ಯಯನ, ಧ್ಯೇಯಾತ್ಮಕ ಕ್ರಿಯಾಶೀಲತೆ, ಯಾವ ಮಟ್ಟಕ್ಕೆ 'ಬೆಳಸಬಲ್ಲವು' ಎಂಬುದಕ್ಕೆ ನನ್ನ ಸನ್ಮಿತ್ರರಾದ ಶ್ರೀ ಪಿ. ಎಸ್. ಜವರಪ್ಪಗೌಡರೇ ಒಂದು ಜ್ವಲಂತ ನಿದರ್ಶನವಾಗಿದ್ದಾರೆ.

ಈ ಮೇಲೆ ತಿಳಿಸಿದ ವಿಷಯಗಳು ಇವರಿಗೆ ಸಂಪ್ರಾಪ್ತವಾದದ್ದು — ಚಿಕ್ಕ ವಯಸ್ಸಿನಲ್ಲಿಯೇ ತುರಂಗವಾಸವನ್ನು ಅನುಭವಿಸಬೇಕಾಗಿ ಬಂದದ್ದರಿಂದ. ತುರಂಗವಾಸದಲ್ಲಿದ್ದಾಗ ಕರ್ನಾಟಕರಾಜ್ಯದ ಧೀಮಂತವ್ಯಕ್ತಿಗಳ, ರಾಷ್ಟ್ರಪ್ರೇಮಿಗಳ ಸಹವಾಸ ಇವರಿಗ ದೊರೆತುದರಿಂದ ಅವರ ವ್ಯಕ್ತಿತ್ವ ವಿಕಸನಕ್ಕೆ ವಿಶೇಷ ಅವಕಾಶ ಸಿಕ್ಕಿತು. ಸಿಕ್ಕ ಅವಕಾಶವನ್ನು ಅನ್ವೇಷಣಾಪ್ರಿಯರಾದ ಶ್ರೀ ಪಿ.ಎಸ್. ಜವರಪ್ಪಗೌಡರು ಸಾರ್ಥಕವಾಗಿ ಬಳಸಿಕೊಂಡರು. ತಾರುಣ್ಯವನ್ನು ಕಳೆದು ಯೌವನ ಸ್ಥಿತಿಗೇರುವ ಮುಂಚೆಯೇ ರಾಷ್ಟ್ರಪ್ರೇಮ, ಸಾಮಾಜಿಕ ಪ್ರಜ್ಞೆ, ಸಾಹಿತ್ಯಿಕ ಪ್ರಬುದ್ಧತೆ ಇವರಲ್ಲಿ ಮೈಗೂಡಿದವು.

ಅನೇಕಬಾರಿ ತುರಂಗವಾಸವನ್ನು ಅನುಭವಿಸಿದ ಶ್ರೀಮಾನ್ ಜವರಪ್ಪಗೌಡರ ಹೆಸರು ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿಯುವ ಪ್ರಸಂಗವಾಗಿ ಪರಿಣಮಿಸಿದೆ.

ಶಾಲೆಯಲ್ಲಿ ಕಲಿಯಲಾರದ್ದನ್ನು ತುರಂಗವಾಸ ಇವರಿಗೆ ದೊರಕಿಸಿಕೊಟ್ಟಿತು. ಸ್ವಾತಂತ್ರ್ಯಾನಂತರ ಆ ಅನುಭವವನ್ನು ತಮ್ಮ ಮೂಲಬಂಡವಾಳವನ್ನಾಗಿ ಮಾಡಿಕೊಂಡು ದುಡಿಯಲಾರಂಭಿಸಿದರು.

1946ರಲ್ಲಿ ನಾನು ಅಂದಿನ ಜಿಲ್ಲಾ ಬೋರ್ಡ್ ಚುನಾವಣೆಗೆ ಶ್ರೀ ಜಿ. ಎಸ್. ಬೊಮ್ಮೇಗೌಡರ ಜೊತೆ ನಿಂತಿದ್ದಾಗ ಶ್ರೀಮಾನ್ ಜವರಪ್ಪಗೌಡರ ಪರಿಚಯ ಅಷ್ಟಾಗಿ ಆಗಿರಲಿಲ್ಲ. ಅವರನ್ನು ನನಗೆ ಪರಿಚಯ ಮಾಡಿಕೊಟ್ಟವರು ನನ್ನ ಸನ್ಮಿತ್ರರಾದ ಹಾಗೂ ತುರಂಗವಾಸವನ್ನು ಅನುಭವಿಸುತ್ತಿದ್ದರೂ ಅಂದಿನ ಕಾಂಗ್ರೆಸ್‌ನಲ್ಲಿ ವಿಶೇಷ ಗೌರವವನ್ನಿಟ್ಟುಕೊಂಡಿದ್ದಂತಹ ಶ್ರೀ ಹೆಚ್. ಎಸ್. ಸುಬ್ಬೇಗೌಡರು. ಶ್ರೀಮಾನ್ ಜವರಪ್ಪಗೌಡರ ನಿಕಟ ಪರಿಚಯವಾದುದು 1946ರ ಅಂತ್ಯ ಹಾಗೂ 1947ರ ಆದಿಭಾಗದಲ್ಲಿ. ನಾನು ರೈತಸಂಘವನ್ನು ಸ್ಥಾಪಿಸಿ ಬೆಳೆಸಬೇಕೆಂಬ ಸಂಕಲ್ಪವನ್ನು ತೊಟ್ಟಾಗ ಎಂದು ಜ್ಞಾಪಕವಿದೆ. ಪ್ರಥಮ ಭೇಟಿಯಲ್ಲಿಯೇ ಅವರ ವಾಕ್ ಚತುರತೆ ಮತ್ತು ವಿಷಯ ಪ್ರತಿಪಾದನೆ, ನಿಷ್ಕೃಷ್ಟತೆಯ ಅರಿವು ನನಗೆ ಉಂಟಾಯಿತು. ಈರ್ವರ ಮನೋ

ಧರ್ಮವೂ ರಚನಾತ್ಮಕ ಸೇವಾ ಕಾರ್ಯವಾಗಿದ್ದುದರಿಂದ ಅವರಿಂದ ನಾನು, ನನ್ನಿಂದ ಅವರು ಆಕರ್ಷಿಸಲ್ಪಟ್ಟೆವು.

ತದನಂತರ ನನ್ನ ರಾಜಕೀಯ ಹೋರಾಟದಲ್ಲಿ ಅವರು ನನ್ನ ಬಲಭುಜವಾಗಿ ನಿಂತದ್ದನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತೇನೆ. ರಾಜಕೀಯ ಚದುರಂಗದಾಟ ನನಗೆ ಅಂದಾಗಲಿ, ಇಂದಾಗಲಿ ಪರಿಚಯವಾಗಿಲ್ಲ. ಆದರಿಂದಾಗಿ ನನ್ನ ಸಕ್ರಿಯರಾಜಕೀಯ ಜೀವನ ಉಜ್ವಲವಾಗದಿದ್ದರೂ ಸೇವಾರಾಜಕೀಯ ಪ್ರಜ್ವಲಿಸುವಂತೆ ಮಾಡಿದವರು ಶ್ರೀಮಾನ್ ಜವರಪ್ಪಗೌಡರು. ರಾಜಕೀಯ ಚದುರಂಗದಾಟವನ್ನು ತುರಂಗವಾಸದಲ್ಲಿ ದ್ದಾಗಲೇ ಜವರಪ್ಪಗೌಡರು ಕರಗತಮಾಡಿಕೊಂಡಿದ್ದರು. ನಾನು ಪ್ರಚಾರ ಪ್ರಿಯನಲ್ಲ. ಈ ನನ್ನ ನೈಜ ನಡವಳಿಕೆಯನ್ನರಿತ ಶ್ರೀ ಜವರಪ್ಪಗೌಡರು ನನ್ನ ಪರವಾಗಿ ನನ್ನ ವ್ಯಕ್ತಿತ್ವವನ್ನು ಎತ್ತಿ ತೋರಿಸುವ ಮತ್ತು ಜನಸಾಮಾನ್ಯರಿಗೆ ತಲುಪಿಸುವ ಕರ್ತವ್ಯ ವನ್ನು ಅತ್ಯಂತ ತೃಪ್ತಿಕರವಾಗಿ ನಿರ್ವಹಿಸಿದರು. 8 ವರ್ಷಗಳ ಕಾಲ ನಾನು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಶ್ರೀ ಜವರಪ್ಪಗೌಡರು ಕಾರ್ಯದರ್ಶಿಯಾಗಿ ನಿರ್ವಹಿಸಿದ ಪಾತ್ರ ಚಿರಸ್ಮರಣೀಯವಾದುದು ; ಸದಾ ನನ್ನ ನೆನಪಿನಲ್ಲಿ ಉಳಿಯತಕ್ಕಂಥದು. ನನ್ನ, ಅವರ ಪ್ರಥಮಭೇಟಿಯಾದಾಗ ಅವರು ವಯಸ್ಕರ ಶಿಕ್ಷಣ ಸಮಿತಿಯ ಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದರು. ವಯಸ್ಕರಿಗೆ ಶಿಕ್ಷಣ ಕೊಡುವ ಸಂಸ್ಥೆಗಳಿಗೆ ಸ್ಲೇಟು, ಬಳಪ, ಸೀಮೆಎಣ್ಣೆ ವಗೈರೆ ಸಾಮಾಗ್ರಿಗಳನ್ನು ಒದಗಿಸಿಕೊಡುವ ಸೇವಕರಾಗಿದ್ದರು. ತದನಂತರ ಅದರಿಂದ ವಿಮುಕ್ತಿಗೊಂಡು ಅವರ ಬೆಂಬಲದಿಂದ ಮತ್ತು ಇನ್ನಿತರ ಗಣ್ಯವ್ಯಕ್ತಿಗಳ ನಿರಂತರ ಪ್ರೋತ್ಸಾಹ ಮತ್ತು ಸಹಕಾರದಿಂದ ಸಂಸ್ಥಾಪಿತವಾಗಿದ್ದ ರೈತರ ವ್ಯವಸಾಯೋತ್ಪನ್ನ ಮತ್ತು ಮಾರಾಟ ಸಹಕಾರಸಂಘದ ಪ್ರಥಮ ಮ್ಯಾನೇಜರ್ ಆಗಿ ನೇಮಕಗೊಂಡರು. ಧೀರ್ಘಕಾಲ ಅಲ್ಲಿ ಅವರನ್ನು ನೌಕರರಾಗಿ ಮಾಡುವುದು ಉಚಿತವಲ್ಲವೆಂದು ಭಾವಿಸಿ ಅವರೇ ಹೇಳಿದ ಮತ್ತೊರ್ವ ವ್ಯಕ್ತಿಗೆ ಆ ಜವಾಬ್ದಾರಿಯನ್ನು ವಹಿಸಿ, ಇವರು ಸ್ವತಂತ್ರವಾಗಿ ಬಾಳ್ವೆ ನಡೆಸುವಂತಹ ಒಂದು ಸದವಕಾಶ ದೊರಕಿ ಬಂತು. ಆ ಕಾಲದಲ್ಲಿ ಬಟ್ಟೆಗೆ ತೀವ್ರ ಬರಗಾಲ. ಪಡಿತರ ಪದ್ಧತಿ ಜಾರಿಯಲ್ಲಿತ್ತು. ಅದನ್ನು ಕಾರ್ಯರೂಪಕ್ಕಿಳಿಸುವುದಕ್ಕಾಗಿ ಜಿಲ್ಲಾಮಟ್ಟದಲ್ಲಿ ಕೆಲವು ಆಯ್ದ ವ್ಯಕ್ತಿಗಳನ್ನು ಸರ್ಕಾರದ ನಾಗರೀಕ ಸರಬರಾಜು ಇಲಾಖೆ ನೇಮಿಸು ವುದಿತ್ತು. ಆಗ ನನ್ನ ಇನ್ನೊರ್ವ ಪ್ರಿಯಮಿತ್ರರಾಗಿದ್ದ ದಿವಂಗತ ಶ್ರೀ ಶಿವನಂಜಪ್ಪ ನವರ ಜೊತೆಯಲ್ಲಿಯೇ ಶ್ರೀಮಾನ್ ಜವರಪ್ಪಗೌಡರಿಗೂ ಕೂಡ ಸಗಟುಬಟ್ಟೆ ಮಾರಾಟದ 'ಏಜನ್ಸಿಯನ್ನು ಕೊಡಿಸುವುದರಲ್ಲಿ ನಾನು ಯಶಸ್ವಿಯಾದೆ. 'ಏಜೆನ್ಸಿ ಯೇನೋ ಸಿಕ್ಕಿತು. ಆದರೆ, ಇಬ್ಬರಲ್ಲಿಯೂ ಹಣಕೊಟ್ಟು ಬಟ್ಟೆ ತರುವಷ್ಟು ಆರ್ಥಿಕ ಶಕ್ತಿ ಇರಲಿಲ್ಲ. ಆ ಕೊರತೆಯನ್ನು ನೀಗಿದ ಪುಣ್ಯ ನನ್ನ ಮಾವಂದಿರಾದ ದಿವಂಗತ ಸಿಂಗ್ರಿಗೌಡರಿಗೆ ಸೇರಬೇಕಾದ್ದು. 40–50 ಸಾವಿರ ರೂಪಾಯಿಗಳನ್ನು ಒಂದೇ

ಕಂತಿನಲ್ಲಿ ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ ನೀಡಿದರು. ಸಕಾಲದಲ್ಲಿ ನಮ್ಮ ಮಾವಂದಿರ ಹಣವನ್ನು ಜವರಪ್ಪಗೌಡರು ವಾಪಸ್ಸು ಕೂಡ ಮಾಡಿದರು. ಈ ವ್ಯವಹಾರದಲ್ಲಿ ಜವರಪ್ಪಗೌಡರು ಅಲ್ಪಸ್ವಲ್ಪ ಹಣವನ್ನು ಕೂಡಿಹಾಕಿದರು. ಅನಂತರ ಅವರ ಸಾಹಸಪ್ರಿಯತೆಗನುಗುಣವಾಗಿ ಬದುಕಿನ ಅನ್ವೇಷಣಾಕಾರ್ಯಕವನ್ನು ಕೈಗೊಂಡು ಕ್ರಮಕ್ರಮೇಣ ಪುಸ್ತಕವ್ಯಾಪಾರ, ಕಾಗದ ವ್ಯಾಪಾರ ವಗೈರೆಗಳ ಜೊತೆಗೆ ಮುದ್ರಣಾಲಯ ಒಂದನ್ನೂ ಸ್ಥಾಪಿಸುವಂತಾಯಿತು.

ಗೆಜ್ಜಲಗೆರೆ ಗ್ರಾಮದಲ್ಲಿ ಸನ್ಮಾನ್ಯ ಕಡಿದಾಳ್ ಮಂಜಪ್ಪನವರ ಸಹಾಯದಿಂದ ಸ್ವಲ್ಪ ಜಮೀನನ್ನು ದರಖಾಸ್ತಿನ ಮೂಲಕ ಅವರಿಗೆ ದೊರೆಯುವಂತೆ ಮಾಡುವುದರಲ್ಲಿ ನಾನು ಸಫಲನಾದೆ. ಅದೇ ಜಮೀನನ್ನು ಶ್ರೀ ಜವರಪ್ಪಗೌಡರು ಹೆಚ್ಚು ಲಾಭವನ್ನು ಬಯಸದೆ ಮಿತಿ ಪ್ರಮಾಣದ ಲಾಭ ಪಡೆದು ನನ್ನ ಸೋದರಮಾವಂದಿರ ಸುಪುತ್ರ ದಿವಂಗತ ಜುಂಜೇಗೌಡರ ತಮ್ಮೇಗೌಡರಿಗೆ ಮಾರುವಂತೆ ಮಾಡಿದೆ. ಇದರಿಂದ ಅವರಿಗೆ ಮತ್ತಷ್ಟು ಲಾಭ ಕೂಡಿ ಬಂತು. ಅವರು ವಾಕ್‌ಚತುರರು ಮಾತ್ರವಲ್ಲದೆ ಕಾರ್ಯಪಟುವೂ ಆದುದರಿಂದ ತಮ್ಮ ವ್ಯಾಪಾರದಲ್ಲಿ ನಿಷ್ಣಾತರಾದರು ಮಾತ್ರವಲ್ಲದೆ ಮಕ್ಕಳನ್ನೂ ನಿಷ್ಣಾತರಾಗುವಂತೆ ಮಾಡಿದರು. ಸುದೈವವೋ ಎಂಬಂತೆ ಸನ್ಮಿತ್ರ ಜವರಪ್ಪಗೌಡರ ವ್ಯಕ್ತಿತ್ವಕ್ಕೆ ಅನುರೂಪವಾದ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರ ರೂಪದಲ್ಲಿ ದೊರಕಿ ಬಂದರು. ಆ ತಾಯಿ ಇಲ್ಲದಿದ್ದರೆ ಜವರಪ್ಪಗೌಡರ ಬಾಳು ಇಷ್ಟೊಂದು ಸುಗಮವಾಗಿ ಸಾಗುತ್ತಿರಲಿಲ್ಲವೆಂಬುದೇ ನನ್ನ ಖಚಿತ ಭಾವನೆ. ಸತಿಪತಿಗಳಿಬ್ಬರೂ ಅತ್ಯಂತ ಸಾಮರಸ್ಯಪೂರ್ಣವಾದ ದಾಂಪತ್ಯ ಜೀವನವನ್ನು ನಡೆಸಿಕೊಂಡು ಬಂದಿದ್ದಾರೆ. ಶ್ರೀಮತಿ ಪಾರ್ವತಮ್ಮನವರನ್ನು "ಅನ್ನಪೂರ್ಣೇಶ್ವರಿ" ಎಂಬ ಹೆಸರಿನಿಂದ ಕರೆದರೂ ಅತಿಶಯೋಕ್ತಿಯಾಗಲಾರದು. ಅವರ ಅತಿಥಿಸತ್ಕಾರದ ವೈಖರಿ, ವೈವಿಧ್ಯತೆ ಮನಮಿಡಿಸುವಂಥಾದು. ಸದಾ ನಗುಮೊಗದ ಆ ತಾಯಿ ಎಂದೂ ಮುಖ ಸಿಂಡರಿಸಿಕೊಂಡದ್ದನ್ನು ನಾನು ನೋಡಿಲ್ಲ. ಮಂದಹಾಸ ಆ ದುಂಡು ಮುಖದಲ್ಲಿ ಸದಾ ಮಿನುಗುತ್ತಿರುತ್ತದೆ. ಆ ಮಂದಹಾಸವೇ ಸನ್ಮಾನ್ಯ ಜವರಪ್ಪಗೌಡರ ಚೇತನಕ್ಕೆ ಪ್ರಾಣವಸ್ತುವಾಗಿದೆ ಎಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಹೇಳಿಕೊಳ್ಳುವಂಥಹ ವಿದ್ಯಾವಂತೆಯಲ್ಲದಿದ್ದರೂ ಇಂದಿನ ಕಾಲದ ದೊಡ್ಡ ವಿದ್ವಾಂಸರನ್ನೂ ಮೀರಿಸುವಷ್ಟು ಜಾಗೃತಪ್ರಜ್ಞೆ ಆ ತಾಯಿಯಲ್ಲಿದೆ. ಅವರ ಸಹವಾಸ, ಸಾಮೀಪ್ಯ, ಸಾನ್ನಿಧ್ಯ, ಸಮಯೋಚಿತ ಸಲಹೆಗಳಿಂದ ಅಡ್ಡದಾರಿ ಹಿಡಿಯಬಹುದಾಗಿದ್ದ ಜವರಪ್ಪಗೌಡರ ಬದುಕು ನೇರದಾರಿಯನ್ನು ಹಿಡಿಯುವಂತಾಗಿದೆ.

ಹೀಗೆ ಹತ್ತು ಹಲವಾರು ಪ್ರಭಾವಗಳಿಂದ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡ ಸನ್ಮಿತ್ರ ಜವರಪ್ಪಗೌಡರು ಸರ್ವರ ಶ್ರೇಯಸ್ಸನ್ನು ಕೋರುವವರಾಗಿ ಬೆಳೆದು ಬಂದಿದ್ದಾರೆ. ಅವರಿಗೆ ಆಗಿರುವ ಒಂದೇ ಒಂದು ಅನ್ಯಾಯವೆಂದರೆ ಸರ್ಕಾರ ಅವರ

ವ್ಯಕ್ತಿತ್ವವನ್ನು ಸಕಾಲದಲ್ಲಿ ಗುರುತಿಸದೇ ಹೋದರು. ಅನೇಕ ಬಾರಿ ಇವರಂಗ ವಾಸವನ್ನು ಅನುಭವಿಸಿದ ಇನ್ನು ಯಾರೇ ಆಗಿದ್ದರೂ ವಿಧಾನಸಭೆಸದಸ್ಯರೋ. ವಿಧಾನಪರಿಷತ್ ಸದಸ್ಯರೋ, ಲೋಕಸಭಾಸದಸ್ಯರೋ, ರಾಜ್ಯಸಭಾಸದಸ್ಯರೋ ಆಗುತ್ತಿದ್ದರು. ಆದರೆ ಅತ್ತಕಡೆ ಶ್ರೀ ಜವರಪ್ಪಗೌಡರು ಗಮನ ಹರಿಸಲಿಲ್ಲ. ಮತ್ತೊಬ್ಬರ ಮನೆಯ ಬಾಗಿಲಿಗೆ ಹೋಗಿ ಬೇಡುವ ಕಾರ್ಯಕ್ಕೆ ಮನಸ್ಸುಮಾಡಲಿಲ್ಲ. ಹೀಗಾಗಿ ಅವರು ತಮ್ಮ ಜೀವನದ ಉದ್ದಕ್ಕೂ ರಚನಾತ್ಮಕ ಕಾರ್ಯಕರ್ತರಾಗಿಯೇ ಉಳಿದುಕೊಂಡು ಬಂದಿದ್ದಾರೆ. ಈ ವಿಷಯ ಕುರಿತು ಅನೇಕ ವೇಳೆ ನಾನು ಚಿಂತಿಸಿದ್ದೇನೆ. ಆದರೂ, ನನ್ನ ಚಿಂತನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಹೀಗಿರುವಾಗ, ನಾನು 1967–71ರ ಅವಧಿಯಲ್ಲಿ ಶಿಕ್ಷಣ ಸಚಿವನಾದದ್ದು ಒಂದು ಆಕಸ್ಮಿಕ ಘಟನೆ. ವಯಸ್ಕರ ಶಿಕ್ಷಣ ವಿಭಾಗ ನನ್ನ ಅಧೀನದಲ್ಲಿಯೇ ಇದ್ದುದರಿಂದ ಆ ಕ್ಷೇತ್ರದಲ್ಲಿ ಆಗಲೇ ದುಡಿದಿದ್ದ ಸನ್ಮಿತ್ರ ಜವರಪ್ಪಗೌಡರನ್ನು ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿ, ಕೇವಲ 500–00 ರೂಪಾಯಿಗಳ ಸಂಭಾವನೆಯನ್ನು ನಿಗದಿಪಡಿಸಿದೆ. ಆ ಸಮಿತಿಯ ಅಧ್ಯಕ್ಷರಾಗಿ ಶ್ರೀಮಾನ್ ಜವರಪ್ಪಗೌಡರು ಅತ್ಯುತ್ತಮ ಸೇವೆ ಸಲ್ಲಿಸಿ ನಾಡಿನಲ್ಲಿಯೇ "ಪ್ರಬುದ್ಧ ವಯಸ್ಕರ ಶಿಕ್ಷಣತಜ್ಞ" ಎಂಬ ಬಿರುದಿಗೆ ಪಾತ್ರರಾದರು ; ಪ್ರಶಸ್ತಿಯೂ ದೊರಕಿತು. ಸಾಧಾರಣವಾಗಿ ಗ್ರಂಥಾಲಯಗಳ ಅವಶ್ಯಕತೆ ಮತ್ತು ಉಪಯುಕ್ತತೆ ಬುದ್ಧಿಜೀವಿಗಳೆನಿಸಿಕೊಂಡವರಿಗೂ ಅನೇಕ ಬಾರಿ ಹೊಳೆಯುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಜವರಪ್ಪಗೌಡರು ಸರ್ಕಾರದ ನೆರವನ್ನು ಪಡೆಯದೆಯೇ ಸಾರ್ವಜನಿಕ ದಾನಿಗಳ ನೆರವಿನಿಂದ ಕರ್ನಾಟಕದ ಅನೇಕಾನೇಕ ಗ್ರಾಮಾಂತರ ಪ್ರದೇಶಗಳಲ್ಲಿ ಕಿರುಗ್ರಂಥಾಲಯಗಳನ್ನು ಸ್ಥಾಪಿಸುವುದರ ಮೂಲಕ ವಯಸ್ಕರಶಿಕ್ಷಣ ಸಮಿತಿಗೆ ಒಂದು ವಿಶಿಷ್ಟ ಮೆರಗು ಬರುವಂತೆ ಮಾಡಿದರು. ಅವರ ಮಾತಿನ ಮೋಡಿಗೆ ಮರುಳಾಗಿ ಅನೇಕ ಜನ ದಾನಿಗಳು ಸ್ವಯಂ ಪ್ರೇರಿತವಾಗಿ ಮುಂದೆ ಬಂದು ಹಳ್ಳಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಿದರು.

ಜವರಪ್ಪಗೌಡರನ್ನು ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿದಾಗ ರಾಜ್ಯಪಾಲರಿಗೆ 'ಯಾವ ವಿದ್ಯಾಹರ್ತೆಯೂ ಇಲ್ಲದ ಒಬ್ಬ ಅನಾಮಧೇಯ ವ್ಯಕ್ತಿಯನ್ನು ಶಿಕ್ಷಣಸಚಿವರು ನೇಮಿಸಿದ್ದಾರೆ ಎಂಬ ಅನಾಮಧೇಯ ಪತ್ರವೊಂದನ್ನು ಬರೆದದ್ದುಂಟು. ಆ ಸಂದರ್ಭದಲ್ಲಿ ಸನ್ಮಿತ್ರ ಜವರಪ್ಪಗೌಡರು ಆಗಿನ ರಾಜ್ಯಪಾಲರಾಗಿದ್ದ ಗೌರವಾನ್ವಿತ ಶ್ರೀ ಧರ್ಮವೀರರವರು ದಂಗುಬಡಿಯುವಂತೆ ಆಂಗ್ಲಭಾಷೆಯಲ್ಲಿಯೇ ಅವರೊಡನೆ ಸಮಾಲೋಚನೆ ನಡೆಸಿ, ಅನಾಮಧೇಯ ಪತ್ರ ಹೊಟ್ಟೆಕಿಚ್ಚಿನಿಂದ ಬರೆದದ್ದಾಗಿದೆ ಎಂಬ ಅಂಶವನ್ನು ರಾಜ್ಯಪಾಲರು ಅರ್ಥಮಾಡಿಕೊಳ್ಳುವಂತೆ ಮಾಡಿದ ವಿಶೇಷ ಸಂದರ್ಭ ರೋಮಾಂಚಕಾರಿಯಾದುದು.

ಶ್ರೀ ಜವರಪ್ಪಗೌಡರ ಅಭಿರುಚಿ ಅನೇಕ ಮುಖವಾದುದು. ಸಾಹಿತ್ಯಾಭಿರುಚಿ

ಇದೆ, ಕಲಾಭಿಮಾನವಿದೆ, ಆಧ್ಯಾತ್ಮಿಕ ಒಲವಿದೆ. ಪ್ರಾಚೀನ ಮತ್ತು ಸಮಕಾಲೀನ ವೈಜ್ಞಾನಿಕ ತತ್ವಾದರ್ಶಗಳನ್ನು ಸಮನ್ವಯಗೊಳಿಸಿ ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ಪ್ರತಿಪಾದಿಸುವ ಶಕ್ತಿಯನ್ನು ವಾಗ್ದೇವಿ ಅವರಿಗೆ ಕರುಣಿಸಿದ್ದಾಳೆ. ಇದೇ ಅವರ ಮೂಲ ಬಂಡವಾಳ.

'ಊರಿದ್ದಕಡೆ ಹೊಲಗೇರಿ' ಎಂಬಂತೆ ಕೆಲವು ಕುತ್ಸಿತಮತಿಗಳು ಕೆ. ವಿ. ಶಂಕರ ಗೌಡರು ಕೇವಲ ಮೂರುಕುಟುಂಬಗಳಿಗೆ ಮಾತ್ರ ಇದ್ದಾರೆ. ಆ ಕುಟುಂಬಗಳಲ್ಲಿ ಜವರಪ್ಪಗೌಡರ ಕುಟುಂಬವೂ ಒಂದು : ಜವರಪ್ಪಗೌಡರ ಸಹವಾಸದಿಂದ ಶಂಕರ ಗೌಡರು ತಮ್ಮ ಹೆಸರನ್ನು ಕೆಡಿಸಿಕೊಂಡಿದ್ದಾರೆ ಎಂದು ಗುಲ್ಲೆಬ್ಬಿಸಿದ್ದು ಉಂಟು. ಅದನ್ನು ನಂಬಿದವರೂ ಇದ್ದರು. ಆದರೆ ಯಾವುದೂ ಚಿರಸ್ಥಾಯಿಯಾಗಿ ಉಳಿಯುವಂತಹ ವಿಷಯವಲ್ಲ. ಯಾವ ಜನ ಜವರಪ್ಪಗೌಡರಿಂದ ಶಂಕರಗೌಡರು ಕೆಟ್ಟರೆಂದು ಹೇಳುತ್ತಿದ್ದರೋ ಅದೇ ಜನ ಇಂದು ಶಂಕರಗೌಡರು ಜವರಪ್ಪಗೌಡರನ್ನು ಮರೆತು ನಡೆದಿದ್ದಾರೆ ಎಂದು ಹೇಳುತ್ತಿರುವುದು ವಿಪರ್ಯಾಸವೇ ಸರಿ. ಅದಕ್ಕಾಗಿ ನಾನು ತಲೆಕೆಡಿಸಿಕೊಂಡಿಲ್ಲ. ಶ್ರೀ ಜವರಪ್ಪಗೌಡರು ತಮ್ಮ ಮಾನಸಿಕ ಸಮತೋಲನವನ್ನು ಕಳೆದುಕೊಂಡಿಲ್ಲವೆಂದೇ ನನ್ನ ಭಾವನೆ.

ಹೀಗೆ ಹಲವಾರು ಕ್ಷೇತ್ರಗಳಲ್ಲಿ ಶ್ರೀ ಜವರಪ್ಪಗೌಡರು ಕೆಲಸ ಮಾಡಿ ಹೆಸರಾಗಿದ್ದಾರೆ. ಶ್ರೀಯುತರು ಪತ್ರಿಕೋದ್ಯಮಿಯೂ ಆಗಿದ್ದರು ಎಂದು ನಾನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತಿದ್ದೇನೆ. ಕೇವಲ ವಾರ್ತಾವಾಹಕರಾಗಿರದೆ ವಾರ್ತೆ ಗಳನ್ನು ಸೃಜಿಸುವ ಚತುರರೂ ಆಗಿದ್ದರು—ಪತ್ರಿಕೋದ್ಯಮಿ ಜವರಪ್ಪಗೌಡರು, ಹೆಸರಾಂತ ಪತ್ರಿಕೋದ್ಯಮಿ ದಿ. ಬಿ. ಎನ್. ಗುಪ್ತ ಅವರೇ ಇವರಿಗೆ ಗುರು. ಅವರ ಕೈಕೆಳಗೆ ತೊಡಗಿದ ಇವರು ಇಂದಿಗೂ ಪತ್ರಿಕಾ ಪ್ರಪಂಚದಲ್ಲಿ ತಮ್ಮದೇ ಆದ ವಿಶಿಷ್ಟ ಪಾತ್ರವನ್ನು ವಹಿಸುತ್ತಿದ್ದಾರೆ.

ಹೀಗೆ ಅವರ ಸಾಧನೆ-ಸಿದ್ಧಿಗಳನ್ನೆಲ್ಲ ಒಕ್ಕಣಿಸುತ್ತಾ ಹೋದರೆ ಅದೊಂದು ದೊಡ್ಡ ಗ್ರಂಥವೇ ಆಗಬಹುದು. ಅದನ್ನು ಒಂದು ಜೀವನ ಚರಿತ್ರೆಯ ರೂಪದಲ್ಲಿ ಯಾರಾದರೂ ರಚಿಸುವುದಾದರೆ ವಿಪುಲ ಸಾಮಗ್ರಿಗಳು ದೊರಕುತ್ತವೆ. ಈ ಪುಟ್ಟ ಲೇಖನದಲ್ಲಿ ಅವುಗಳನ್ನೆಲ್ಲವನ್ನೂ ಅಳವಡಿಸಲು ಸಾಧ್ಯವಿಲ್ಲ,

ಒಟ್ಟಾರೆ ಹೇಳುವುದಾದರೆ, ಅವರು ಸಾರ್ಥಕ ಬದುಕನ್ನು ನಡೆಸಿ ಜನಪ್ರಿಯ ರಾಗಿದ್ದಾರೆ. ಎಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ. ನನಗಂತೂ ಅವರು ಇಂದಿಗೂ ಸ್ಫೂರ್ತಿಯ ಚಿಲುಮೆಯಾಗಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಂತಹವರು ಇನ್ನೂ ದೀರ್ಘಕಾಲ ನಮ್ಮೊಡನಿದ್ದು ನಮ್ಮೆಲ್ಲ ಕಾರ್ಯಸಿದ್ಧಿಗೆ ನೆರವಾಗಲೆಂದು ಹಾರೈಸಿ, ಈ ಪುಟ್ಟ ಲೇಖನವನ್ನು ಮುಕ್ತಾಯಗೊಳಿಸುತ್ತಿದ್ದೇನೆ,

**ಕೆ. ವಿ. ಶಂಕರಗೌಡ**

# ವಿಶ್ವಾಮಿತ್ರ ಸಾಹಸಿ

1928ರಲ್ಲಿ ನಮ್ಮೂರು ಗುರುದೇವರಹಳ್ಳಿಯ ಕೂಲಿಮಠದಲ್ಲಿ ನನ್ನ ಓದು ಆರಂಭವಾಯಿತು. ನನ್ನ ಅಣ್ಣನವರಿಗೆ ನನ್ನನ್ನು ಹೆಚ್ಚು ಓದಿಸಬೇಕೆಂಬ ಆಸೆ. ಅಣ್ಣ ಓದಲು ಬರೆಯಲು ಬಲ್ಲವರು, ಊರಪಟೇಲರು. ಅವರ ತಾಲ್ಲೂಕುಮಟ್ಟದ ವ್ಯವಹಾರ ಗಳಿಗೆ ಅದು ಸಾಕಾಗುತ್ತಿತ್ತು. ತಾಲ್ಲೂಕು ಕಛೇರಿಗೆ ಸರ್ಕಾರಿ ಕೆಲಸಗಳಿಗೆ ಹೋಗುತ್ತಿದ್ದ ಅವರು ಅಲ್ಲಿನ ಮುಖ್ಯಸ್ಥ ಅಮಲದಾರರನ್ನು ಅವರ ಅಧಿಕಾರ ದರ್ಪಗಳನ್ನು ಕಂಡು ತಮ್ಮನೂ ಇಂತಹ ಒಬ್ಬ ಅಧಿಕಾರಿಯಾಗಲೆಂದು ಆಸೆಪಟ್ಟಿದ್ದರೆ ಆಶ್ಚರ್ಯವೇನಿಲ್ಲ. ಅಗ ನಮ್ಮ ದೇಶದ ಹಳ್ಳಿಗಳ ಅನೇಕರ ಆಸೆಯೂ ಅಂತಹದೆ ಆಗಿತ್ತು. ಈ ಎಲ್ಲ ಕಾರಣಗಳೂ ಸೇರಿ ಅಣ್ಣನವರಲ್ಲಿ ನನ್ನನ್ನು ಹೆಚ್ಚು ಓದಿಸುವ ಆಸೆಯನ್ನು ಮೂಡಿಸಿರಬೇಕು.

ಆಗಿನ ಕಾಲದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳೇ ಅಪ ರೂಪ. ದೊಡ್ಡ ದೊಡ್ಡ ಊರುಗಳಲ್ಲಿಯೇ ಪ್ರಾಥಮಿಕ ಶಾಲೆಗಳಿರಲಿಲ್ಲ. ಮಿಡಲ್ ಸ್ಕೂಲುಗಳಂತೂ ಕೇಳುವಂತೆಯೇ ಇಲ್ಲ. ಆಗಿನ ಕಾಲದಲ್ಲಿ ತಾಲ್ಲೂಕು ಕೇಂದ್ರಗಳಲ್ಲಿ ಸಹ ಮಿಡಲ್ ಸ್ಕೂಲುಗಳಿರಲಿಲ್ಲ. ನಾನು ಮಿಡಲ್ ಸ್ಕೂಲಿಗೆ ಸೇರುವ ಕಾಲಕ್ಕೆ ಮಳವಳ್ಳಿ, ಮದ್ದೂರು ಮತ್ತು ಮಂಡ್ಯ ನಗರಗಳಲ್ಲಿ ಮಾತ್ರ ಮಿಡಲ್ ಸ್ಕೂಲುಗಳಿದ್ದುವು. ಮದ್ದೂರು, ಮಳವಳ್ಳಿಗಳಲ್ಲಿ ಊಟ ವಸತಿಯ ಅನುಕೂಲವಿರಲಿಲ್ಲ.

ಮಂಡ್ಯಕ್ಕೆ ಅಂಟಿದಂತೆಯೇ ಹೊಸಹಳ್ಳಿ ಗ್ರಾಮ. ಅದು ನಮ್ಮ ತಾಯಿಯ ತವರು ನನ್ನ ಅಜ್ಜಿಯ ಮನೆ. ಮಕ್ಕಳಿಗೆ ಸಾಮಾನ್ಯವಾಗಿ ಅಜ್ಜಿಯ ಮನೆ ಅಂದರೆ ಬಹಳ ಇಷ್ಟ. ಅಣ್ಣ ನನ್ನನ್ನು ಮಂಡ್ಯದ ಮಿಡಲ್ ಸ್ಕೂಲಿಗೆ ಸೇರಿಸಲು ತೀರ್ಮಾನಿಸಿ ದರು. ಆಗ ಬಸ್ಸೇ ಕಾರೇ ನಾವಿಬ್ಬರೂ ಮದ್ದೂರಿಗೆ ನಡೆದು ಬಂದು ಅಲ್ಲಿಂದ ಮಂಡ್ಯಕ್ಕೆ ಬಂದೆವು. ನಾನು ಮಂಡ್ಯ ಮಿಡಲ್ ಸ್ಕೂಲಿನ ವಿದ್ಯಾರ್ಥಿಯಾದೆ. ಪ್ರತಿ ದಿನವೂ ಅಜ್ಜಿಯ ಮನೆ ಹೊಸಹಳ್ಳಿಯಿಂದ ಬಂದು ಶಾಲೆ ಮುಗಿದ ಮೇಲೆ ಸಂಜೆ ಹಿಂತಿರುಗುತ್ತಿದ್ದೆವು.

ಮಂಡ್ಯನಗರ ಆಗ ಬಹಳ ಚಿಕ್ಕದು. ಹಳೇ ಊರೇ ಪ್ರಮುಖ. ಜೈನರ ಬೀದಿ ಯಲ್ಲಿ ಒಂದು ಪುಸ್ತಕದ ಅಂಗಡಿಯಿತ್ತು. ಪುಸ್ತಕ ಸೀಸದ ಕಡ್ಡಿ ಇತ್ಯಾದಿ ಇತ್ಯಾದಿ ವಿದ್ಯಾರ್ಥಿಗಳಿಗೆ ಬೇಕಾಗುವ ವಸ್ತು ವಿಶೇಷಗಳನ್ನು ಕೊಳ್ಳಲು ನಾವು ಆ ಅಂಗಡಿಗೆ ಹೋಗುತ್ತಿದ್ದೆವು. ಆಂಗಡಿಯ ಮಾಲೀಕರು ಬೇರೆ ಅಂಗಡಿಗಳ ಮಾಲೀಕರಿಗಿಂತ ಭಿನ್ನ ವಾಗಿರುವುದು ನಮಗೆ ಗೋಚರಿಸುತ್ತಿತ್ತು. ಅವರ ಖಾದಿ ಉಡುಪು, ಗಾಂಧಿಟೋಪಿಗಳ

ಆಕರ್ಷಣೆಗಿಂತ ಅವರ ಮಾತುಗಾರಿಕೆ ನಮ್ಮನ್ನು ಆಕರ್ಷಿಸುತ್ತಿತ್ತು. ಸಾಮಾನ್ಯವಾಗಿ ವ್ಯಾಪಾರಿಗಳು ತಮ್ಮ ಸಾಮಾನುಗಳನ್ನು ತಲೆಗೆ ಕಟ್ಟಿ ಆಚೆಗೆ ಕಳಿಸುವುದು ಪದ್ಧತಿ. ಆದರೆ ಈ ವ್ಯಕ್ತಿ ನಮ್ಮ ಊರು ಕೇರಿ ವಿಚಾರಿಸಿ ಕಡೆಗೆ ಯಾರ ಮಗ ಯಾರ ಮೊಮ್ಮಗ ಎಂಬುದನ್ನೂ ವಿಚಾರಿಸಿ ಪ್ರೀತಿ ವಿಶ್ವಾಸಗಳಿಂದ ಮಾತನಾಡಿಸುತ್ತಿದ್ದರು. ಅವರೆ ಶ್ರೀ ಪಿ. ಎನ್. ಜವರಪ್ಪಗೌಡರು. ನಾನು ಮೊದಲು ಅವರನ್ನು ಕಂಡದ್ದು ಹೀಗೆ.

ನಾನು ಮಿಡಲ್ ಸ್ಕೂಲ್ ಮುಗಿಸುವ ಹೊತ್ತಿಗೆ ಶಿವಪುರದ ಧ್ವಜ ಸತ್ಯಾಗ್ರಹ ಮುಗಿದಿತ್ತು. ಚಂಗಲರಾಯ ರೆಡ್ಡಿ, ಕೆ. ಹನುಮಂತಯ್ಯ, ಸಾಹುಕಾರ ಚನ್ನಯ್ಯ, ಟಿ. ಮರಿಯಪ್ಪ ಇವರೆಲ್ಲ ಮಂಡ್ಯಕ್ಕೆ ಬಂದು ಕಾಂಗ್ರೆಸ್ ಪ್ರಚಾರ ಭಾಷಣ ಮಾಡುತ್ತಿದ್ದರು. ನಾವು ಹುಡುಗರು ಇವರನ್ನೆಲ್ಲ ಅತ್ಯಂತ ಕುತೂಹಲದಿಂದ ಹೆಮ್ಮೆಯಿಂದ ನೋಡುತ್ತಿದ್ದೆವು. ನಮ್ಮ ದೃಷ್ಟಿಯಲ್ಲಿ ಅವರೆಲ್ಲ ಮಹಾವ್ಯಕ್ತಿಗಳು. ಶ್ರೀಮಾನ್ ಜವರಪ್ಪಗೌಡರು ಈ ನಾಯಕರೊಂದಿಗೆ ಇರುತ್ತಿದ್ದರು.

ಜವರಪ್ಪಗೌಡರ ಪುಸ್ತಕದ ಅಂಗಡಿಯ ಮುಂದೆ ಎಚ್. ಎಸ್. ಸುಬ್ಬೇಗೌಡರ ಮಿಲಿಟ್ರಿ ಹೋಟೆಲೊಂದಿತ್ತು. ಆಗ ಕಾಂಗ್ರೆಸ್ ಮುಖಂಡರು ಕುಳಿತು ಚರ್ಚಿಸಲು ಅವರ ಊಟತಿಂಡಿಗಳಿಗೆ ಪ್ರವಾಸಿಮಂದಿರ ಇತ್ಯಾದಿ ಸರ್ಕಾರಿ ಅರೆಸರ್ಕಾರಿ ಸ್ಥಳಗಳು ದೊರೆಯುತ್ತಿರಲಿಲ್ಲ. ಈ ಕಾರಣದಿಂದಾಗಿ ಕಾಂಗ್ರೆಸ್ ಪರವಾಗಿದ್ದವರ ಮನೆ ಅಂಗಡಿ ಹೋಟೆಲು ಇವುಗಳೇ ಅವರ ಕಛೇರಿಗಳೂ ಆಗಿರುತ್ತಿದ್ದವು. ಮಂಡ್ಯಕ್ಕೆ ಬರುತ್ತಿದ್ದ ಬ್ರಾಹ್ಮಣೇತರ ನಾಯಕರೆಲ್ಲ ಸುಬ್ಬೇಗೌಡರ ಮಿಲಿಟ್ರಿ ಹೋಟೆಲಿನಲ್ಲಿಯೇ ಸೇರುತ್ತಿದ್ದರು. ಶ್ರೀ ಸುಬ್ಬೇಗೌಡರೂ ಸಹ ಕಾಂಗ್ರೆಸ್ ಕಾರ್ಯಕರ್ತರಾಗಿದ್ದರು. ಹೀಗೆ ಸೇರುತ್ತಿದ್ದ ಸಭೆಗಳಲ್ಲಿಯೂ ಜವರಪ್ಪಗೌಡರು ಪ್ರಧಾನ ಪಾತ್ರ ವಹಿಸುತ್ತಿದ್ದರು. ಈ ಎಲ್ಲರಿಗೂ ಅಭ್ಯಾಗತ ಸುಬ್ಬೇಗೌಡರೆ.

ಒಂದು ಸಾರಿ ಜಿಲ್ಲಾಬೋರ್ಡಿಗೆ ಎಂದು ನೆನಪು, ಮಂಡ್ಯದಿಂದ ಹುರಿಯಾಳುಗಳನ್ನು ಆರಿಸಲು ಕಾಂಗ್ರೆಸ್‌ಮುಖಂಡರು ಇಲ್ಲಿ ಸಭೆ ಸೇರಿದ್ದರು. ಸಿದ್ಧರಾಮು ಜವರಪ್ಪಗೌಡರು, ಕೆ. ಪಿ. ಚನ್ನಯ್ಯ ಮುಂತಾದವರೆಲ್ಲ ಆ ಸಭೆಯಲ್ಲಿದ್ದರು. ಆಗತಾನೆ ಕೆ. ವಿ. ಶಂಕರಗೌಡರು ತಮ್ಮ ವಕೀಲಿ ಶಿಕ್ಷಣ ಮುಗಿಸಿ ಮಂಡ್ಯದಲ್ಲಿ ಪ್ರಸಿದ್ಧ ವಕೀಲರಾಗಿದ್ದ ಎಚ್. ಹೊಂಬೇಗೌಡರ ಕಚೇರಿಯಲ್ಲಿ ಕಿರಿಯ ವಕೀಲರಾಗಿದ್ದರು. ಈ ಹೊತ್ತಿಗಾಗಲೆ ಶಂಕರಗೌಡರಿಗೂ ಜವರಪ್ಪಗೌಡರಿಗೂ ಗೆಳೆತನವಿತ್ತೆಂದು ಕಾಣುತ್ತದೆ. ಬಹುಶಃ ಈ ಹಿನ್ನೆಲೆಯಲ್ಲಿ ಜವರಪ್ಪಗೌಡರು, ಕೆ. ವಿ. ಶಂಕರಗೌಡರು ಮತ್ತು ಶ್ರೀ ಜಿ. ಎಸ್. ಬೊಮ್ಮೇಗೌಡರನ್ನೂ ಹುರಿಯಾಳುಗಳನ್ನಾಗಿ ಆರಿಸುವಂತೆ ನಾಯಕರುಗಳಿಗೆ ಸಕಾರಣವಾಗಿ ಸೂಚಿಸಿದರು. ಅವರೇ ಹುರಿಯಾಳಾದರೂ ಚುನಾವಣೆಯಲ್ಲಿ ಗೆದ್ದರು. ಹೀಗೆ ಆಗ ನಡೆದ ಈ ಚುನಾವಣೆಗಳನ್ನು ಏಕಾಗಿ ಹೇಳುತ್ತಿದ್ದೇನೆಂದರೆ, ಆಗಿನ ಕಾಲದಲ್ಲಿ ಕಾಂಗ್ರೆಸ್ ಪರವಾದ ಕರಪತ್ರಗಳನ್ನು ಮುದ್ರಿಸುವವರು, ಹಂಚು

ವವರು, ಸಿಗುತ್ತಿರಲಿಲ್ಲ. ಆಗ ನಮ್ಮನ್ನು ಮಂಗಲ ಎಂಬ ಊರಿನಲ್ಲಿ ಪ್ರಚಾರಕ್ಕಾಗಿ ಕರೆದುಕೊಂಡು ಹೋದರು. ಆಗ ಜವರಪ್ಪಗೌಡರು ಜನವಾಣಿ ಪತ್ರಿಕೆಯ ಮಂಡ್ಯದ ಪ್ರತಿನಿಧಿಯಾಗಿದ್ದರು. ಅದು ಮಂಡ್ಯದಲ್ಲಿ ಎಷ್ಟು ಪ್ರಸಿದ್ಧಿಯಾಗಿತ್ತೆಂದರೆ ಅವರನ್ನು ಜನವಾಣಿ ಜವರಪ್ಪಗೌಡರೆಂದೇ ಜನ ಕರೆಯುತ್ತಿದ್ದರು: ಹೀಗೆ ಒಂದು ರೀತಿಯಲ್ಲಿ ರಾಜಕೀಯದೊಳಗೆ ನಮ್ಮನ್ನೆಲ್ಲ ಎಳೆದುಕೊಂಡು ಹೋದವರೇ ಜವರಪ್ಪಗೌಡರು.

ಜವರಪ್ಪಗೌಡರು ನಮ್ಮನ್ನು ಬಹಳವಾಗಿ ಆಕರ್ಷಿಸಿದ್ದು ಅವರ ಭಾಷಣಗಳಿಂದ. ಅವರು ಒಳ್ಳೆಯ ಮಾತುಗಾರರು. ಆಗ ಎರಡು ಮೂರು ಬಾರಿ ಈಗಿನ ಸಿಲ್ವರ್ ಜೂಬಿಲಿ ಪಾರ್ಕ್ ಸ್ಥಳಗಳಲ್ಲಿ ಕಾಂಗ್ರೆಸ್ ನಾಯಕರುಗಳ ಭಾಷಣಗಳಾದುವು. ಆಮೇಲೆ ಅಸೆಂಬ್ಲಿ ಇತ್ಯಾದಿಗಳಿಗೆ ನಡೆಯುತ್ತಿದ್ದ ಚುನಾವಣೆಗೆ ಇವರ ಭಾಷಣಗಳು ಸ್ಫೂರ್ತಿಯುತವಾಗಿರುತ್ತಿದ್ದವು. ಚುನಾವಣಾ ಸಭೆಗಳಿಗೆ ಇವರು ಲಾವಣಿಯವರನ್ನು ಕರೆದು ತರುತ್ತಿದ್ದರು ಲಾವಣಿಗಳ ಉದಾಹರಣೆಯೊಂದಿಗೆ ಜವರಪ್ಪಗೌಡರ ಭಾಷಣ ಜನರನ್ನು ಆಕರ್ಷಿಸುತ್ತಿತ್ತು.

ಮಿಡಲ್‌ಸ್ಕೂಲು ಮುಗಿಸಿ ಹೈಸ್ಕೂಲಿಗೆ ಬರುವ ಹೊತ್ತಿಗೆ ಕ್ವಿಟ್ ಇಂಡಿಯಾ ಚಳುವಳಿ ಆರಂಭವಾಗಿತ್ತು. ಅದರಲ್ಲಿ ಇವರೇ ಮುಖಂಡರು. ಇಲ್ಲಿಂದ ಮುಂದೆ ಸ್ವಾತಂತ್ರ್ಯಚಳುವಳಿ ಅತ್ಯಂತ ಪ್ರಖರವಾಗಿ ಬೆಳೆಯುತ್ತ ನಡೆಯಿತು. 1947ರಲ್ಲಿ ಭಾರತ ಸ್ವತಂತ್ರವಾದರೂ ಮೈಸೂರು ಸ್ವತಂತ್ರ ಆಗುವ ಸೂಚನೆಗಳಿರಲಿಲ್ಲ. ಆಗ ಮೈಸೂರು ಚಲೋ ಚಳುವಳಿ ಆರಂಭವಾಯಿತು. ಇವುಗಳನ್ನೆಲ್ಲಾ ಮುಂದೆ ನಿಂತು ಸಂಘಟಿಸಿದವರು ಶ್ರೀಮಾನ್ ಜವರಪ್ಪಗೌಡರು. ಅವರು ಆಗ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದರು. ಕಾಗದ ಪುಸ್ತಕ ವಗೈರೆಗೆ ಅವರ ಅಂಗಡಿಗೆ ಹೋದಾಗಲೆಲ್ಲ "ಕಾಂಗ್ರೆಸ್‌ಗೆ ಜೈ ಅನ್ನಬೇಕು ಸತ್ಯಾಗ್ರಹ ಮಾಡಿ ಶಾಲೆಗಳನ್ನು ಬಿಟ್ಟು ಬನ್ನಿ" ಎಂದೆಲ್ಲ ಹುರಿದುಂಬಿಸುತ್ತಿದ್ದರು. ನಾವು ಈ ರಾಷ್ಟ್ರೀಯ ಆಂದೋಲನದಲ್ಲಿ ಪಾಲುಗೊಳ್ಳಲು ಶ್ರೀಮಾನ್ ಜವರಪ್ಪಗೌಡರು ಕಾರಣರು.

ಜವರಪ್ಪಗೌಡರು ಒಳ್ಳೆಯ ಪತ್ರಿಕಾ ಪ್ರತಿನಿಧಿಯಾಗಿದ್ದರು ಸಂಘಟನಾಚತುರರು ಒಳ್ಳೆಯ ಮಾತುಗಾರರು. ವಿಚಾರಗಳನ್ನು ನಾನಾ ಕಡೆಗಳಿಂದ ಸಂಗ್ರಹಿಸಿ ಅವರು ಕೊಡುತ್ತಿದ್ದ ರೀತಿ ಅದ್ಭುತವಾದುದು. 1956ರಲ್ಲಿ ನಡೆದ ಕರ್ನಾಟಕ ಏಕೀಕರಣ ವಿರೋಧಿ ಚಳುವಳಿ ಮಂಡ್ಯ ಜಿಲ್ಲೆಯ ಇತಿಹಾಸದಲ್ಲಿಯೇ ಅದ್ಭುತವೂ ಅಪೂರ್ವವೂ ಅದುದು.ಆಗ ನಾಯಕರು ಏನು ಅನುಮಾನಪಟ್ಟರು ಅದು ಇಂದು ನಾವೆಷ್ಟೇ ಉದಾರವಾಗಿ ಯೋಚಿಸಿದರೂ ಸತ್ಯವೇ ಆಗಿ ಪರಿಣಮಿಸಿದ್ದು ಈ ದೇಶದ ದುರಂತವೇ ಸರಿ. ಮುಂದೆ ವರುಣಾನಾಲಾ ಚಳುವಳಿ ಸುಮಾರು ನಲವತ್ತೈದು ದಿನ ನಡೆಯಿತು. ವೆಂಕಟಸ್ವಾಮಿ ಆಯೋಗದ ವಿರುದ್ಧದ ಚಳುವಳಿಯಲ್ಲಿ ಸುಮಾರು ಒಂದು ಲಕ್ಷ ಜನ ಬೆಂಗಳೂರಿಗೆ ಹೋದ ದೃಶ್ಯ ಅಪೂರ್ವವಾದುದು, ಈ ಎಲ್ಲ ಚಳುವಳಿಗಳ ಸಂಘಟನೆಯಲ್ಲಿ

ಜವರಪ್ಪಗೌಡರು ಹಗಲು ರಾತ್ರಿ ದುಡಿದಿದ್ದಾರೆ. ಎಂತಹ ಹೇಡಿಗೂ ಧೈರ್ಯ ಬರುವಂತೆ ಜನರನ್ನು ಹುರಿದುಂಬಿಸಿದ್ದಾರೆ. ಕರ್ನಾಟಕ ಏಕೀಕರಣ ವಿರೋಧಿ ಚಳುವಳಿಯಲ್ಲಿ ಜವರಪ್ಪಗೌಡರು ಮತ್ತು ಅವರ ವಿಶ್ವಾಮಿತ್ರ ಪತ್ರಿಕೆಯದು ಪ್ರಧಾನ ಪಾತ್ರ. ಒಟ್ಟಿನಲ್ಲಿ ಮಂಡ್ಯ ಜಿಲ್ಲೆಯ ಯಾವುದೇ ಹೋರಾಟ ಚಳುವಳಿ ಜವರಪ್ಪಗೌಡರಿಲ್ಲದೆ ನಡೆದಿಲ್ಲ.

ಮಂಡ್ಯಜಿಲ್ಲೆಯ ಯಾವುದೇ ಸಾಮಾಜಿಕ ಕಾರ್ಯಗಳಲ್ಲಿ ಜವರಪ್ಪಗೌಡರಿಗೆ ಪ್ರಧಾನ ಪಾತ್ರ. ಒಂದು ಕಾಲಕ್ಕೆ ಮಂಡ್ಯದ ಮದುವೆಗಳೆಂದರೆ ಯಾರಾದರೂ ಬಾಯಿ ಮೇಲೆ ಬೆರಳಿಡುವ ಕಾಲವಿತ್ತು. ಸಾಲಮಾಡಿಯಾದರೂ ಅದ್ದೂರಿಯ ಮದುವೆ ಮಾಡುವುದೇ ಘನತೆಯ ಲಕ್ಷಣವಾಗಿತ್ತು ಶ್ರೀಮಾನ್ ಜವರಪ್ಪಗೌಡರು ಶ್ರೀ ಕುವೆಂಪು ರೂಪಿಸಿದ ಮಂತ್ರ ಮಾಂಗಲ್ಯ ಸರಳ ಮದುವೆಯನ್ನು ಮಂಡ್ಯದಲ್ಲಿ ಜಾರಿಗೆ ತಂದರು. ಮೊದಮೊದಲು ಜನ ಈ ಸರಳ ಮದುವೆ ಮತ್ತು ಜವರಪ್ಪಗೌಡರನ್ನು ತಮಾಷೆ ಮಾಡಿದ್ದೂ ಉಂಟು. ಜವರಪ್ಪಗೌಡರು ಯಾವುದಕ್ಕೂ ಎದೆಗುಂದದೆ ಪ್ರಚಾರ ಮಾಡುತ್ತಾ ತಾವೇ ನಿಂತು ಮದುವೆ ಮಾಡಿಸುತ್ತ ಬಂದರು. ಇಂದು ಮಂಡ್ಯದಲ್ಲಿ ಸರಳ ಮದುವೆಗಳು ಘನತೆಯ ಲಕ್ಷಣವಾಗುತ್ತಿವೆ, ಈ ಪರಿವರ್ತನೆಗೆ ಬಹುಮಟ್ಟಿಗೆ ಜವರಪ್ಪಗೌಡರು ಕಾರಣ.

ರಚನಾತ್ಮಕ ಕೆಲಸಗಳೆಂದರೆ ಜವರಪ್ಪಗೌಡರು ತಮ್ಮ ತನುಮನಗಳನ್ನು ಅರ್ಪಿಸಿದವರು. ಹಣ ತಮ್ಮ ಜೇಬಿನಲ್ಲಿದ್ದರೆ ದಾನದ ಬಗ್ಗೆಯೂ ಅವರು ಹಿಂದೆ ಮುಂದೆ ನೋಡುವವರಲ್ಲ. ಮಂಡ್ಯದಲ್ಲಿ ಶ್ರೀ ಶಂಕರಗೌಡರು ಆರಂಭಿಸಿದ ರೈತರ ಸಹಕಾರ ಸಂಘ, ಜನತಾಶಿಕ್ಷಣ ಸಂಸ್ಥೆ ಮುಂತಾದವುಗಳಲ್ಲಿ ಜವರಪ್ಪಗೌಡರು ಶಂಕರಗೌಡರೊಂದಿಗೆ ನಿಂತು ದುಡಿದಿದ್ದಾರೆ. ಈ ಸಂಸ್ಥೆಗಳ ಬಗೆಗಿನ ಅವರ ಹೋರಾಟ ಓಡಾಟ ಅವಿಸ್ಮರಣೀಯವಾದುದು. ಹಾಗೆಯೇ ಶ್ರೀ ಆದಿ ಚುಂಚುನಗಿರಿಯ ಎಲ್ಲ ಕೆಲಸಗಳಲ್ಲಿಯೂ ಇವರು ನೆರವಾಗಿದ್ದಾರೆ. ಈ ಇಳಿವಯಸ್ಸಿನಲ್ಲಿಯೂ ಸಹ ಅವರು ಬಹು ಪಾಲನ್ನು ಹೀಗೆ ಸಾರ್ವಜನಿಕ ಕಾರ್ಯಗಳಿಗಾಗಿ ಓಡಾಡುವುದರಲ್ಲಿ ಮೀಸಲಿಟ್ಟಿದ್ದಾರೆ. ಯಾರು ಯಾವುದೇ ಕೆಲಸ ಇವರಿಂದ ಕೋರಲಿ ಅದು ಉಪಯುಕ್ತವಾದುದೆನಿಸಿದರೆ ಶ್ರೀ ಜವರಪ್ಪಗೌಡರು ತಮ್ಮ ಕೈಲಾದಷ್ಟು ಮಾಡಿಯೇ ತೀರುತ್ತಾರೆ. ಈ ಹಿನ್ನೆಲೆಯಲ್ಲಿ ಅವರನ್ನು ಜನೋಪಕಾರಿ ಎಂದೇ ಮಂಡ್ಯದ ಜನ ಗುರುತಿಸುತ್ತಾರೆ.

ಮಂಡ್ಯಜಿಲ್ಲೆಯ ರಾಜಕೀಯದಲ್ಲಿ ಶ್ರೀ ಜವರಪ್ಪಗೌಡರನ್ನು ಮಹಾಭಾರತದ ವಿದುರನಿಗೆ ಹೋಲಿಸಬಹುದೆನ್ನಿಸುತ್ತದೆ. ಯಾವುದೇ ಅಧಿಕಾರದ ಆಸೆಯಿಲ್ಲದೆ ಅದಕ್ಕಾಗಿ ಪ್ರಯತ್ನಿಸದೆ ವಿದುರನು ಪಾಂಡವರು ಮತ್ತು ಕೌರವರ ಜಗಳ ತಪ್ಪಿಸಲು ನಿಸ್ವಾರ್ಥ ಪ್ರಯತ್ನ ಮಾಡಿದವನು. ಮಂಡ್ಯ ಜಿಲ್ಲೆಯ ರಾಜಕೀಯ ಮುಖಂಡರಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ ಜವರಪ್ಪಗೌಡರು ಅವರನ್ನೆಲ್ಲ ಒಂದೆಡೆ ಸೇರಿಸಿ ವಿದುರ

ನಂತೆ ನೀತಿ ಹೇಳಿ ಆ ವಿರಸವನ್ನು ನಿವಾರಿಸುವ ಕೆಲಸ ಮಾಡಿದವರು. ಜಿಲ್ಲೆಗೆ ಸಂಬಂಧಿಸಿದ ಯಾವುದೇ ಕೆಲಸದಲ್ಲಿ ಯಾರನ್ನೂ ಬಿಡದೆ ಒಂದೆಡೆ ಸೇರಿಸಿ ಆ ಕೆಲಸ ಕೆಡದಂತೆ ನೋಡಿಕೊಂಡಿದ್ದಾರೆ. ಸ್ವಾತಂತ್ರ್ಯಾನಂತರವೂ ಮಂಡ್ಯಜಿಲ್ಲೆಯ ರಾಜಕೀಯ ಜೀವನದ ಅನೇಕ ವಿಷಮ ಸಂದರ್ಭಗಳಲ್ಲಿ ಶ್ರೀಮಾನ್ ಜವರಪ್ಪಗೌಡರು ಆ ವಿಷಮತೆ ನಿವಾರಿಸಲು ನಾಯಕರಲ್ಲಿ ಐಕ್ಯತೆ ಮೂಡಲು ಕಾರಣರಾಗಿದ್ದಾರೆ. ವಯಸ್ಕರ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಅದಕ್ಕೆ ರಾಷ್ಟ್ರೀಯ ಮನ್ನಣೆ ದೊರಕಿಸಿಕೊಟ್ಟವರು. ರೈತ ಸಂಘದ ಸಂಘಟನೆಯಲ್ಲಿ ಜವರಪ್ಪಗೌಡರದು ಮಹತ್ತರ ಪಾತ್ರ. ಇವರನ್ನು ಮಂಡ್ಯ ಜಿಲ್ಲೆಯ ಕಾಮರಾಜ ನಾಡಾರ ಎಂದು ಕರೆದರೆ ಯಾರೂ ಗೊಣಗಲಾರರೆಂದು ತಿಳಿಯುತ್ತೇನೆ.

ಜವರಪ್ಪಗೌಡರದು ಒಟ್ಟು ಕುಟುಂಬ. ದೊಡ್ಡವರ ಮನೆಮಾತು ಚಂದ ಬಡವರ ಮನೆ ಊಟ ಚಂದ ಎಂಬುದು ಗಾದೆಯ ಮಾತು. ಜವರಪ್ಪಗೌಡರ ಮನೆಯಲ್ಲಿ ಮಾತು ಊಟ ಎರಡೂ ಚಂದ. ಸಾಮಾನ್ಯವಾಗಿ ಮಂಡ್ಯಕ್ಕೆ ಬರುವ ರಾಜಕೀಯನಾಯಕರು, ಸಾಹಿತಿಗಳು, ಅಧಿಕಾರಿಗಳು ಇವರೆಲ್ಲರಿಗೂ ಯಾವಾಗ ಅಂದರೆ ಆವಾಗ ಗೌಡರ ಮನೆಯಲ್ಲಿ ಆತಿಥ್ಯ ಸಿದ್ಧ. ಮನೆಗೆ ಬಂದವರನ್ನು ಯಾವುದೇ ಸಮಯದಲ್ಲೂ ಏನೂ ಇಲ್ಲದೆ ಕಳಿಸುವುದು ಇವರ ಜಾಯಮಾನಕ್ಕೆ ಬಂದ ವಿಷಯವೇ ಅಲ್ಲ. ಇದಕ್ಕೆ ಶ್ರೀಮತಿ ಜವರಪ್ಪಗೌಡರು ಅವರ ಹೆಣ್ಣುಮಕ್ಕಳು ಸೊಸೆಯರೂ ಕಾರಣರು.

ಮಂಡ್ಯ ಜಿಲ್ಲೆಯ ಪ್ರತಿಯೊಂದು ಕ್ಷೇತ್ರದಲ್ಲಿಯೂ ಪಾಲುಗೊಂಡವರು ಶ್ರೀಮಾನ್ ಜವರಪ್ಪಗೌಡರು. ಮಂಡ್ಯಜಿಲ್ಲೆಗೆ ಯಾವುದೇ ಕ್ಷೇತ್ರದಲ್ಲಿ ಅನ್ಯಾಯವಾದರೂ ಅದನ್ನು ಪ್ರತಿಭಟಿಸುವವರಲ್ಲಿ ಜವರಪ್ಪಗೌಡರು ಮೊದಲಿಗರಾಗಿರುತ್ತಾರೆ. ಹಳ್ಳಿಗಳ ಬಗ್ಗೆ ಹಳ್ಳಿಗಾಡಿನ ಜನರ ಬಗ್ಗೆ ಜವರಪ್ಪಗೌಡರು ತುಂಬು ಅಭಿಮಾನಿ. ಹಳ್ಳಿಗರಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳನ್ನು ಬಗೆಹರಿಸುವುದರಲ್ಲಿ ಜವರಪ್ಪಗೌಡರು ಯಾವಾಗಲೂ ಸಿದ್ಧ.

ಯಾವುದೇ ಸ್ಥಾನಮಾನವನ್ನು ಜವರಪ್ಪಗೌಡರು ಅಪೇಕ್ಷಿಸಿದವರಲ್ಲ. ಆಸೆಪಟ್ಟು ಅವಕಾಶ ಮಾಡಿಕೊಂಡಿದ್ದರೆ ರಾಜಕೀಯದಲ್ಲಿ ಯಾವುದಾದರೂ ಅಧಿಕಾರ ಸ್ಥಾನ ಗಳಿಸುವುದೇನೂ ಕಷ್ಟದ ಕೆಲಸವಾಗಿರಲಿಲ್ಲ, ಆದರೆ ಜವರಪ್ಪಗೌಡರು ರಚನಾತ್ಮಕ ಕೆಲಸಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಅದರಲ್ಲಿಯೇ ಸಂತೋಷವನ್ನು ಕಂಡವರು. ಜವರಪ್ಪಗೌಡರು ಸಾಹಿತ್ಯ ಪ್ರೇಮಿಗಳು. ಅವರ ಓದು ನಿರಂತರವಾದುದು. ನಾನು ಈ ಲೇಖನ ಬರೆಯುವ ಹೊತ್ತಿಗೆ ಶ್ರೀ ಗೌಡರಿಗೆ ರಾಜ್ಯ ಪತ್ರಿಕಾ ಅಕಾಡಮಿಯ ಪ್ರಶಸ್ತಿ ಕೂಡ ದೊರೆತಿರುವುದು ಅವರ ಪತ್ರಿಕಾ ರಂಗದ ಸೇವೆಗೊಂದು ಪ್ರತಿಫಲ ದೊರೆತಂತಾಗಿದೆ. ನನಗೆ ಅನ್ನಿಸಿದ ಮಟ್ಟಿಗೆ ಶ್ರೀ ಜವರಪ್ಪಗೌಡರದೊಂದು ವಿಶ್ವಾಮಿತ್ರ ಸಾಹಸ. ಅವರು ನಮ್ಮೊಂದಿಗೆ ನೂರ್ಕಾಲ ಇರಲಿ ಎಂದು ಹಾರೈಸುತ್ತೇನೆ.

**ಜಿ. ಮಾದೇಗೌಡ**

# ಸ್ನೇಹಜೀವಿ

"ನಮ್ಮ ಬದುಕು ಒಂದು ಪ್ರಯೋಗ ಶಾಲೆ, ಸೇವೆಯು ಸತ್ಯಶೋಧನೆಯೇ ಮಾನವನ ಪ್ರಥಮ ಗುರಿ'' ಎಂಬ ಮಹಾತ್ಮ ಗಾಂಧೀಜಿಯವರ ಸಂದೇಶ ನಮ್ಮಲ್ಲಿ ಎಷ್ಟು ಜನರ ಬದುಕನ್ನು ಸಮೀಪಿಸಿ ನಿಲ್ಲುತ್ತದೆ?; ''ಮಾನವ ಜನ್ಮ ಬಹು ದೊಡ್ಡದು: ಪುರುಷಾರ್ಥವೇ ಅದರ ಯಶಸ್ಸು. ಮನುಜ ಜನ್ಮವೇ ಒಂದು ಅಪರೂಪ'' ಎಂದು ದಾಸೋಕ್ತಿಯಿದೆ. ಇದನ್ನು ನಾವು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡು ನಮ್ಮ ಜೀವನದ ಮಜಲಿಗೆ ಅಳವಡಿಸಿಕೊಂಡಿದ್ದೇವೆಯೇ? ''ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ'' ''ಪರೋಪಕಾರಾರ್ಥಂ ಇದಂ ಶರೀರಂ'' ಎಂಬ ಆರ್ಯ ವಾಣಿಗಳಿಗನುಗುಣವಾಗಿ ನಾವು ನಮ್ಮ ಜೀವನವನ್ನು ಒಂದು ಸೇವಾಕ್ಷೇತ್ರವನ್ನಾಗಿಸಿ ಕೊಂಡು, ದೀನ–ದಲಿತರ ಕಷ್ಟಕಾರ್ಪಣ್ಯಗಳಿಗೆ, ಅವರ ದುಃಖ ದುಗುಡಗಳಿಗೆ ಸಹಜ ವಾಗಿ ಸ್ಪಂದಿಸುತ್ತಿದ್ದೇವೆಯೇ ? ಮನುಷ್ಯನಾಗಿ ಹುಟ್ಟುವುದೇ ಒಂದು ಅದೃಷ್ಟವೆಂದು ಭಾವಿಸಿ, ಬಾಳನ್ನು ಸುಖದ ಸುಪ್ಪತ್ತಿಗೆಯಾಗಿಸಿಕೊಂಡು ಸದಾ ಸ್ವಾರ್ಥಸಾಧನೆಗೆ ಹೋರಾಡುತ್ತಿರುವ ಈ ವಿಚಿತ್ರ ಜನಪ್ರವಾಹದಲ್ಲಿ ; ಮಹಾಕವಿ ಕುವೆಂಪು ಅವರು ಶ್ರೀ ರಾಮಾಯಣ ದರ್ಶನದಲ್ಲಿ ತಿಳಿಸಿರುವಂತೆ ''ಪರರಿಗಾಗಿ ನಾನು, ಜನಸೇವೆಯೇ ಜನಾರ್ದನ ಸೇವೆ'' ಎಂದು ತಿಳಿದು ನಿಸ್ವಾರ್ಥ ತ್ಯಾಗ, ದಯೆ, ಪ್ರೀತಿ-ಪ್ರೇಮಗಳ ಹಾದಿಯಲ್ಲಿ ಬದುಕಿನ ನಿಜವಾದ ಪುರುಷಾರ್ಥ ಸಾಧಿಸುವ ಸ್ಥಿತಪ್ರಜ್ಞರನ್ನು ನೋಡು ವುದೇ ಅಪರೂಪ. ಇಂತಹ ಅಪರೂಪ ವ್ಯಕ್ತಿಗಳಲ್ಲಿ ಸರಳತನದ ಸ್ನೇಹಜೀವಿಯಾಗಿ ನಮ್ಮ ಮುಂದೆ ನಿಲ್ಲುವಂಥವರು ಶ್ರೀಮಾನ್ ಪಿ.ಎಸ್. ಜವರಪ್ಪಗೌಡರು. ಹಿರಿಯರೂ, ಚಿರಪರಿಚಿತರೂ, ಸರಳರೂ ಆಗಿರುವ ಶ್ರೀ ಜವರಪ್ಪಗೌಡರಿಗೆ ಅಭಿನಂದನಾ ಗ್ರಂಥ ವನ್ನು ಅರ್ಪಿಸಿ, ಅವರನ್ನು ಸನ್ಮಾನಿಸುತ್ತಿರುವ ವಿಷಯ ತಿಳಿದು ನನಗೆ ಅಪಾರ ಸಂತೋಷವಾಗಿದೆ. ಶ್ರೀಯುತರ ಬಗ್ಗೆ ನನಗೆ ತಿಳಿದಿರುವ ಕೆಲವು ವಿಚಾರಗಳನ್ನು ಸಹೃದಯರ ಮುಂದಿಡಲು ನನಗೂ ಹೆಮ್ಮೆ ಎನಿಸುತ್ತದೆ.

ರೈತರ ಮಕ್ಕಳು ಕೇವಲ ಮಣ್ಣಿನ ಮಕ್ಕಳಲ್ಲ : ಅವರು ಪ್ರಕೃತಿ ಪುರುಷರೂ ಹೌದು. ಅವರ ಬಾಳು ಒಂದು ಸಾರ್ಥಕ ಹೋರಾಟ. ಇದರ ಫಲವಾಗಿ ಆಗಾಗ್ಗೆ ಕ್ರಾಂತಿಯ ಕಹಳೆ ಮೊಳಗತೊಡಗುತ್ತದೆ. ಇಂತಹ ಕ್ರಾಂತಿ ಕಹಳೆಯನ್ನೂದುವ ಒಕ್ಕಲು ಮಕ್ಕಳ–ಕರ್ಮಯೋಗಿಗಳ ಸಂಖ್ಯೆ ನಮ್ಮಲ್ಲಿ ಸಾಕಷ್ಟಿದೆ. ಶ್ರೀ ಪಿ. ಎಸ್. ಜವರಪ್ಪಗೌಡರನ್ನು ಹತ್ತಿರದಿಂದ ಬಲ್ಲ ನನಗೆ, ಅವರೊಬ್ಬ ಆದರ್ಶ ಸಮಾಜಸೇವಕ ರೆಂದೂ, ನಿಸ್ವಾರ್ಥ ಕಾರ್ಯಕರ್ತರೆಂದೂ ತಿಳಿಸುವಲ್ಲಿ ಸಂತೋಷವಾಗುತ್ತದೆ.

ಕರ್ಮಯೋಗಿಗಳ ಮುಂಚೂಣಿಯಲ್ಲಿರುವ ಜವರಪ್ಪಗೌಡರು ಮಣ್ಣಲ್ಲಿಯೇ ಅರಳಿದ, ಪರಿಮಳಯುಕ್ತವಾದ ಒಂದು ಸುಂದರ ಕುಸುಮ. ಕರ್ನಾಟಕದ ಸಿರಿಕಣಜಗಳಲ್ಲೊಂದಾದ ಮಂಡ್ಯ ಜಿಲ್ಲೆಯ ಹಿಂದುಳಿದ ನಾಗಮಂಗಲ ತಾಲ್ಲೋಕಿನ ಪಾಲಅಗ್ರಹಾರ ಗ್ರಾಮದ ಶ್ರೀ ಗೌಡರು ಚಿಕ್ಕಂದಿನಲ್ಲಿಯೇ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು, ಜಿಲ್ಲೆಯ ರಣಧೀರರಪಡೆಯ ನಾಯಕರಲ್ಲೊಬ್ಬರಾಗಿ, ಎಲ್ಲರ ತನುಮನದಲ್ಲಿ ಸ್ವಾತಂತ್ರ್ಯದ ದೇಶಪ್ರೇಮದ ಹಾಗೂ ತ್ಯಾಗ-ಬಲಿದಾನದ ಶಕ್ತಿ ಸಂಚಾರ ಮಾಡಿಸಿ, ಸ್ವಾತಂತ್ರ್ಯದ ಜಯಗೀತೆ ಹಾಡಿಸಿದರು. ನೇತಾರ ಮಹಾತ್ಮ ಗಾಂಧೀಜಿಯವರ ಕರೆಯ ಮೇರೆಗೆ ಬ್ರಿಟಿಷರ ಎದುರು ಹೋರಾಡಿ ಕಾರಾಗೃಹ ವಾಸವನ್ನು ಅನುಭವಿಸಿದರು. ಹೀಗೆ ಗೌಡರು ಜನ್ಮಭೂಮಿಯ ಸೇವೆ ಮಾಡಿ ಸ್ವಾತಂತ್ರ್ಯ ಚಳುವಳಿಗಾರರಿಗೆ ಆದರ್ಶ ಪುರುಷರಾಗಿ, ಹುಟ್ಟಿದ ನಾಡಿಗೆ ಒಳ್ಳೆಯ ಹೆಸರು ತಂದುಕೊಟ್ಟರು.

ಮಾನ್ಯ ಗೌಡರದು ಸೃಜನಶೀಲವಾದ ಮನಸ್ಸು, ಜನಜೀವನದ ಆಗು-ಹೋಗುಗಳಿಗೆ ಸ್ಪಂದಿಸುವಚೇತನ. ''ರವಿ ಕಾಣದುದನ್ನು ಕವಿ ಕಾಣುವ''ಎಂಬ ಮಾತು ಗೌಡರ ಸ್ವಭಾವಕ್ಕೂ ಒಪ್ಪುವಂತಹದ್ದು. ಸಾಮಾನ್ಯ ಜನಜೀವನದಲ್ಲಿ, ಬದುಕಿನ ಅಂಧಕಾರದ ಒಳಪದರಗಳಲ್ಲಿ ಕೈಯಾಡಿಸಿ, ಸಿಕ್ಕಿದ್ದನ್ನು ಎಳೆಎಳೆಯಾಗಿ ಬಿಡಿಸಿ,ವಿಷಯದ ಹೂಮಾಲೆ ಹೆಣೆಯುವ ಕುಶಲ ಕೈಚಳಕ ಅವರದು. ಆದ್ದರಿಂದಲೇ ಅವರು ಪತ್ರಿಕೋದ್ಯಮದಂತಹ ಕ್ಲಿಷ್ಟ ಹಾಗೂ ಜವಾಬ್ದಾರಿಯುತವಾದ ಕೆಲಸಕ್ಕೆ ಕೈಹಾಕಿದರು. ಅನೇಕ ವರ್ಷಗಳ ಕಾಲ ಅವರು ''ವಿಶ್ವಾಮಿತ್ರ'' ಎಂಬ ಒಂದು ಯಶಸ್ವಿ ಪತ್ರಿಕೆಯನ್ನು ನಡೆಸಿ, ವಿಶ್ವಾಮಿತ್ರಸಾಹಸ ಮಾಡಿದರು. ಆದರೆ ಅವರ ಆ ಸಾಹಸ ಇಂದ್ರಪದವಿಗಾಗಿ ನಡೆಯದೆ, ಪಟ್ಟಭದ್ರಹಿತಾಸಕ್ತಿಗಳ, ಸಮಾಜದ್ರೋಹಿಗಳ, ಕುತಂತ್ರಿಗಳ, ಸಮಯಸಾಧಕರ ಕಪಟಗಳ ಮತ್ತು ಸ್ವಾರ್ಥ ಸಾಧಕರ ಮಾರ್ಮಿಕ, ಕರಾಳ ಬದುಕಿನ ಮೇಲೆ ಕ್ಷ-ಕಿರಣ ಹರಿಸಿ, ಅದರ ಗುಟ್ಟನ್ನು ಬಯಲು ಮಾಡುವ ನಿಸ್ವಾರ್ಥ ಪತ್ರಿಕೋದ್ಯಮಿಯೊಬ್ಬನ ಮಹಾ ಸಾಹಸವಾಗಿತ್ತು. ಆದ್ದರಿಂದಲೇ ಗೌಡರು ಜನಪ್ರಿಯರಾದ, ಒಬ್ಬ ಸೂಕ್ಷ್ಮಮತಿಯ ಪತ್ರಕರ್ತರಾಗಿ ಹುಟ್ಟಿದ ನಾಡಿಗೆ ಸೇವೆ ಸಲ್ಲಿಸಿದರು.

ಭಾರತ ಬಡತನಕ್ಕೆ ಹೇಗೋ ಹಾಗೆಯೇ ನಿರಕ್ಷರತೆಗೂ ಹೆಸರು ವಾಸಿಯಾದ ದೇಶ. ಕರ್ನಾಟಕಕ್ಕೂ ಅದೇ ಬಳುವಳಿ, ನಮ್ಮಲ್ಲಿ ಸರಸ್ವತಿಯ ಕೃಪೆಗೆ ಪಾತ್ರರಾಗಿ ಅಕ್ಷರದ ಸಿರಿಯುಂಡವರು ಲೆಕ್ಕಕ್ಕೆ ಮಾತ್ರ. ನಿರಕ್ಷರಕುಕ್ಷಿಗಳ ಸಾಲು ಹನುಮಂತನ ಬಾಲದಂತೆ ಅನಂತವಾಗಿ ಬೆಳೆಯುತ್ತಿರುವ ಕಾಲದಲ್ಲಿ ; ಜನತೆ ಅಕ್ಷರ ಬರದ ದವಡೆಯಲ್ಲಿ ಸಿಕ್ಕಿಬಿದ್ದಾಗ, ಶ್ರೀ ಜವರಪ್ಪಗೌಡರು, ಕರ್ನಾಟಕ ರಾಜ್ಯ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಮತ್ತು ಅಖಿಲ ಭಾರತ ವಯಸ್ಕರಶಿಕ್ಷಣ ಮಂಡಳಿಯ ಉಪಾಧ್ಯಕ್ಷರಾಗಿ ನೇಮಕಗೊಂಡಿದ್ದು, ಬಹುಶಃ ಭಾರತದ ಸಾಕ್ಷರತಾಯೋಜನೆಗೆ ಒಂದು ಹೊಸ ಆಯಾಮ ಬಂದಂತಾಯಿತು. ಇವರ ಕಾರ್ಯಚತುರತೆಯಿಂದಾಗಿ,

ಇವರ ದಕ್ಷ ಆಡಳಿತದಿಂದಾಗಿ, 1971ರಲ್ಲಿ ರಾಷ್ಟ್ರಮಟ್ಟದ ನೆಹರು ಸಾಕ್ಷರತಾಪ್ರಶಸ್ತಿ ಸಮಿತಿಗೆ ದೊರೆಯುವಂತಾಗಿ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಸಾಕ್ಷರತಾ ಯೋಜನೆಯಲ್ಲಿ ರಾಷ್ಟ್ರಮಟ್ಟದಲ್ಲಿ ತನ್ನ ಕೀರ್ತಿಪತಾಕೆಯನ್ನು ಹೆಗ್ಗಳಿಕೆಯಿಂದ ಏರಿಸುವಂತಾಯಿತು. ಇದರ ನೇತಾರ ಮತ್ತು ಶಿಕ್ಷಣ ತಜ್ಞ ಶ್ರೀ ಜವರಪ್ಪಗೌಡರು. ಸಮಾಜದ ಒಂದು ಆರೋಗ್ಯಕರವ್ಯವಸ್ಥೆಗೆ. ಜನಕಲ್ಯಾಣ ಕಾರ್ಯಗಳಿಗೆ ಒಳ್ಳೆಯ ಚಳುವಳಿ ಒಂದು ಸಾಧನವೆಂಬುದು ಶ್ರೀ ಜವರಪ್ಪಗೌಡರಿಗೆ ಚೆನ್ನಾಗಿಯೇ ಮನವರಿಕೆಯಾಗಿದ್ದ ಸತ್ಯ. ರಾಷ್ಟ್ರಪಿತ ಮಹಾತ್ಮ ಗಾಂಧಿ ಅವರ ಬ್ರಿಟಿಷರ ವಿರುದ್ಧ 'ಅಸಹಕಾರ ಚಳುವಳಿ' ಮತ್ತು ಅವರ 'ಸತ್ಯಾಗ್ರಹ' ಚಳುವಳಿಗಳಿಂದ ಸ್ಫೂರ್ತಿಗೊಂಡಿದ್ದ ಗೌಡರು ಮಂಡ್ಯ ಜಿಲ್ಲೆಯಲ್ಲಿ ನಡೆದ ಹಲವಾರು ಪ್ರಮುಖ ಚಳುವಳಿಗಳ ಮುಖಂಡರಾಗಿ, ರೈತ ಸಂಘಟನಾ ಚಾಲಕರಾಗಿ ಅವರು ಸರ್ವರೀತಿಯ ಪ್ರಗತಿಗೆ ನೀಡಿದ ಮಾರ್ಗದರ್ಶನ, ಮಾಡಿದ ಸೇವೆ ಚಿರಸ್ಮರಣೀಯವಾದುದ್ದು. ಗೌಡರ ಹೋರಾಟ ಆಧುನಿಕತೆಯ, ನವ ನಾಗರೀಕತೆಯ ಹೋರಾಟವಾಗಿದ್ದು, ಜಿಲ್ಲೆಯ ಹಿರಿಯ ಮತ್ತು ಕಿರಿಯರಿಗೆಲ್ಲ ದಾರಿ ದೀಪವಾಯಿತು.

"ಆಡು ಮುಟ್ಟದ ಸೊಪ್ಪಿಲ್ಲ" ಎಂಬ ಗಾದೆಯಂತೆ ಸಮಾಜದ ವಿವಿಧ ಮಜಲುಗಳಲ್ಲಿ ನಿರಂತರವಾಗಿ ದುಡಿದ ಗೌಡರು ಮಂಡ್ಯ ಜಿಲ್ಲೆಯ ಸಿಹಿ ಪರಿಸರದಲ್ಲಿ "ಜೇನು ತುಪ್ಪ"ವಾಗಿ ಎಲ್ಲರ ಎದೆ ಮನಗಳಲ್ಲಿ ಚಿರವಾಗಿ ಉಳಿದಿದ್ದಾರೆ. "ಜನರು ನನಗೇನು ಮಾಡಿದ್ದಾರೆ ಎಂಬುದಕ್ಕಿಂತ, ನಾನು ಜನರಿಗೇನು ಮಾಡಿದ್ದೇನೆ" ಎಂದು ತಿಳಿದುಕೊಳ್ಳುವ ಪ್ರಕೃತಿ ಮಾನ್ಯ ಗೌಡರವರದು. "ದೊಡ್ಡವರ ಬದುಕು ಧರ್ಮದಲ್ಲಿ" ಎಂಬುದು ಒಂದು ವೇದವಾಣಿ. ಧಾರ್ಮಿಕ ಶ್ರದ್ಧೆ, ದೇವರಲ್ಲಿ ನಂಬಿಕೆ ಮತ್ತು ಭಕ್ತಿ, ಧರ್ಮ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಆಸಕ್ತಿ, ಅವುಗಳ ಆಚರಣೆಯಿಂದಾಗಿ ಮನುಷ್ಯನ ವರ್ತನೆ, ಮನಸ್ಸು ಹಾಗೂ ಬುದ್ಧಿಗಳು ಸಂಸ್ಕರಣ ಹೊಂದುತ್ತವೆ. ಗುರುಗಳಲ್ಲಿ ಸಮರ್ಪಣಭಾವ, ಗುರು ಪೀಠಕ್ಕೆ ಅನನ್ಯನಮನ, ಸತ್ಕಾರ್ಯಗಳಲ್ಲಿ ನಿಷ್ಠೆಗಳಿಂದಾಗಿ ಮಾನವ ಚೇತನ ಪುನೀತವಾಗಿ ಕವಿ ಋಷಿ ಕುವೆಂಪು ಅವರ "ಓ ನನ್ನ ಚೇತನ ; ಆಗು ನೀ ಅನಿಕೇತನ"ದಂತೆ ಒಂದು ದಿವ್ಯವೂ ಭವ್ಯವೂ ಆದ ಉತ್ಥಾನಕ್ಕೇರುತ್ತದೆ. ಪುರಂದರದಾಸರ "ಧರ್ಮಕಾರ್ಯಕ್ಕಿಂತ ಮಿಗಿಲುಂಟೇ" ಎಂಬ ಪದದಂತೆ, ಮನುಷ್ಯ ದೇವರ ಸದ್ಗುರುವಿನ ಸಾಮೀಪ್ಯದಲ್ಲಿರುತ್ತಾನೆ.

ಮಾನ್ಯ ಜವರಪ್ಪಗೌಡರು ಆಸ್ತಿಕ ಮಹಾಶಯರೂ, ಧರ್ಮಧಾರಿಗಳೂ, ಒಳ್ಳೆಯ ಧಾರ್ಮಿಕ ಸಂಪ್ರದಾಯದ ಸುಸಂಸ್ಕೃತ ವ್ಯಕ್ತಿಗಳೂ ಆದವರು. ಅವರಿಗೆ ದೇವರಲ್ಲಿ, ದೇವತಾ ಕಾರ್ಯಗಳಲ್ಲಿ ಅಪಾರ ಆಸಕ್ತಿ. ಶ್ರೀ ಆದಿಚುಂಚನಗಿರಿ ಮಠದಲ್ಲಿ ಆ ಶ್ರೀಪೀಠದಲ್ಲಿ ಮಾನ್ಯರಿಗೆ ಅನನ್ಯಭಕ್ತಿ. ಶ್ರೀ ಗುರುಗಳ ಪ್ರವಾಸ ಕಾಲದಲ್ಲಿ ಸಚೇತಕರಾಗಿ ಮಹಾಸ್ವಾಮಿಗಳೊಡನೆ ಸಂಚರಿಸಿ ಪತ್ತುಲಕ್ಷಕ್ಕೂ ಹೆಚ್ಚಿನ ನಿಧಿ

ಸಂಗ್ರಹಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವರು. ಮುತ್ತತ್ತಿಯ ಶ್ರೀ ಆಂಜನೇಯ ಸ್ವಾಮಿ ದೇವಾಲಯದ ಜೀರ್ಣೋದ್ಧಾರ ಸತ್ಕಾರ್ಯದಲ್ಲಿ ಅವರ ಪಾತ್ರ ನನಗಂತೂ ಚಿರಸ್ಮರಣೀಯವಾಗಿದೆ. ನನ್ನೊಡನೆ ಅವರು ಹಗಲಿಗೆ ಹೆಗಲು ಕೊಟ್ಟು ನಿಂತು, ಸ್ವಾಮಿಯ ಪುಣ್ಯ ಕೆಲಸ ಮಾಡುವಲ್ಲಿ ತಲ್ಲೀನರಾಗಿ ಹೋಗಿದ್ದರು. ಅತಿಥಿ ಸತ್ಕಾರ್ಯದಲ್ಲಿ ಅವರ ಹಾಗೂ ಅವರ ಶ್ರೀಮತಿಯವರ ಹೃದಯ ಸ್ನೇಹ ತುಂಬಿ ಮಿಡಿಯುತ್ತದೆ. ಅವರ ಮನೆಯೊಂದು ಧರ್ಮಛತ್ರವಿದ್ದಂತೆ. ಹಣ್ಣು ತುಂಬಿದ ವೃಕ್ಷಕ್ಕೆ ಹಾರಿ ಬರುವ ಪಕ್ಷಿಗಳಂತೆ ಒಳ್ಳೆಯ ಸ್ನೇಹಿತರು ಅವರಿದ್ದಲ್ಲಿಗೆ ಸಾಲುಸಾಲಾಗಿ ಬಂದು ಬಿಡುತ್ತಾರೆ. ಅವರದು ಕಬೀರನ ಅತಿಥಿ ಪ್ರೀತಿ. ಶಬರಿಯ ಅವರ-ಭಕ್ತಿ.

ಸಂಸ್ಕೃತಿ-ಧರ್ಮಗಳಿದ್ದೆಡೆ ಸಾಹಿತ್ಯಚಿಂತನೆ ದೀಪದಲ್ಲಿನ ಕಾಂತಿಯಂತೆ ಹಿಂಬಾಲಿಸುತ್ತದೆ. ಶ್ರೀ ಜವರಪ್ಪಗೌಡರು ಒಳ್ಳೆಯ ಮಾತುಗಾರರು, ಹಾಸ್ಯ ಪ್ರವೃತ್ತಿಯವರು ಹಾಗೂ ಸಾಹಿತ್ಯ ಮತ್ತು ಸಂಸ್ಕೃತಿ ಪ್ರಿಯರೂ ಆಗಿದ್ದು, ರಾಷ್ಟ್ರ ಕವಿ ಕುವೆಂಪು ಅವರ ಕಟ್ಟಾ ಅಭಿಮಾನಿಗಳಲ್ಲಿ ಒಬ್ಬರಾಗಿದ್ದಾರೆ. ಕುವೆಂಪು ಅವರ ಸಾಹಿತ್ಯ ಭಂಡಾರವನ್ನು ಆರೋಗ್ಯ ದೃಷ್ಟಿಯಿಂದ ಸಹೃದಯತೆಯಿಂದ ವೀಕ್ಷಿಸಿ, ಅದರ ಪ್ರಯೋಜನವನ್ನು ಸರಿಯಾಗಿ ಪಡೆದಿರುವವರಲ್ಲಿ ಮಾನ್ಯ ಗೌಡರೂ ಒಬ್ಬರು. ಕುವೆಂಪು ಅವರ ಸಾಹಿತ್ಯಾತ್ಮಕವಾದ, ಚಿಂತನೆಗಳನ್ನು ಜೀರ್ಣಿಸಿಕೊಂಡು ಅವರ ಹೆಜ್ಜೆಯ ಗುರುತು ಹಿಡಿದು, ಅವರತ್ತ ನಡೆದ ಶ್ರೀ ಜವರಪ್ಪಗೌಡರು ಒಬ್ಬ ಒಳ್ಳೆಯ ಸಾಹಿತಿಯ-ಕವಿಯ ಸಹಚರ್ಯೆಯನ್ನು ಪಡೆದಿದ್ದಾರೆ. ಹೀಗಾಗಿ ಕುವೆಂಪು ಅವರ 'ವಿಶ್ವಮಾನವ' ತತ್ವಗಳನ್ನು ಜೀರ್ಣಿಸಿಕೊಂಡು, ಅದರ ಅನುಷ್ಠಾನಕ್ಕೆ ಸೂಕ್ತವ್ಯವಸ್ಥೆ ನಡೆಸಿದ್ದಾರೆ. ಈ ವಿಶ್ವಮಾನವ ತತ್ವಗಳು ಜಗತ್ತಿನ ಹಲವಾರು ಭಾಷೆಗಳಲ್ಲಿ ತರ್ಜುಮೆಯಾಗಲು, ಗೌಡರು ತಮ್ಮದೇ ರೀತಿಯಲ್ಲಿ ಕಾರ್ಯಯೋಜನೆಯನ್ನು ಹಾಕಿ ಕೊಟ್ಟಿದ್ದಾರೆ. ಕುವೆಂಪು ಅವರ ತತ್ವಗಳು ಹೆಚ್ಚು ಕ್ರಾಂತಿಕಾರಕ ಸ್ವರೂಪದವುಗಳು. ಅವುಗಳ ಅನ್ವಯ ಜನಸಾಮಾನ್ಯರ ನಿತ್ಯ ಪ್ರಗತಿಗೆ ಸಹಾಯ ಮಾಡಬಲ್ಲವು. ಸಮಾಜದ ಜಡ್ಡುಕಟ್ಟಿದ ಮೂಢನಂಬಿಕೆಗಳನ್ನು ಬುಡಸಹಿತ ಕಿತ್ತುಹಾಕಿ, ವೈಜ್ಞಾನಿಕ ಹಾಗೂ ವೈಚಾರಿಕತೆಯ ಹೊಂಬಿಸಲನ್ನು ಜನಜೀವನದ ಮೇಲೆ ಚೆಲ್ಲಲು, ಈ ವಿಶ್ವಮಾನವ ತತ್ವಗಳು ಈಗಂತೂ ಮೂಲಮಂತ್ರಗಳಾಗಿವೆ. ಇವುಗಳಿಂದ ಆಕರ್ಷಿತರಾದ ಗೌಡರು ತಮ್ಮ ಮಕ್ಕಳ ವಿವಾಹವನ್ನು "ಮಂತ್ರಮಾಂಗಲ್ಯ" ರೀತ್ಯಾ ಆಚರಿಸಿ ಬೇರೆಯವರೂ ಆಚರಿಸುವಂತೆ ಮಾಡಿ "ಮದುವೆ ಯಾರಿಗೂ ಹೊರೆಯಾಗದಿರಲಿ" ಎಂಬ ಕವಿ ಸಂದೇಶದ ಕ್ರಾಂತಿಯ ಕಿಡಿ ಹೊತ್ತಿಸಿದರು. ಸರಳಮದುವೆಯ ಆಧುನಿಕ ಸಂಪ್ರದಾಯವೊಂದಕ್ಕೆ ಬುನಾದಿ ಹಾಕಿದ ಗೌಡರು ವರಕವಿ ಕುವೆಂಪು ಅವರ ದಿವ್ಯವಾಣಿಯ ಪ್ರಚಾರಕ್ಕೆ ಕಂಕಣತೊಟ್ಟು ನಿಂತಿದ್ದಾರೆ. ಜಿಲ್ಲೆಯಲ್ಲಿ ಈ ವಿನೂತನ, ವೈಜ್ಞಾನಿಕ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಶ್ರೀ ಜವರಪ್ಪಗೌಡರ ಪಾತ್ರ ಪ್ರಮುಖ

ವಾಗಿದೆ. ಮಂಡ್ಯದ ಬಳಿ 'ವಿಶ್ವಮಾನವ' ನಿರ್ಮಾಣ ಮಾಡುವಲ್ಲಿ ಶ್ರೀ ಗೌಡರು ಮತ್ತು ಶ್ರೀ ಕೆ. ರಾಮೇಗೌಡರು ವಹಿಸಿದ ಪಾತ್ರ ಬಹು ದೊಡ್ಡದು.

ಸದಾ ಸಮಾಜದ ತುಡಿತಕ್ಕೆ ಸ್ಪಂದಿಸುತ್ತ ರಾಜಕೀಯವಾಗಿ ಸಾಮಾಜಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಬದುಕಿ ವಿಕಾಸವಾಗಿರುವ ಶ್ರೀಯುತರ ಬಾಳ್ವೆಯು ನವಪೀಳಿಗೆ ನಿಜವಾಗಿಯೂ ಆದರ್ಶವಾಗಿರುವುದರಲ್ಲಿ ಎಳ್ಳಷ್ಟು ಅನುಮಾನವಿಲ್ಲ. ಇಂತಹ ಆದರ್ಶ ಪುರುಷೋತ್ತಮರಿಗೆ ಭಗವಂತನು ಆಯುರಾರೋಗ್ಯಗಳನ್ನು ದಯ ಪಾಲಿಸಿ, ಇವರ ಸೇವೆ ಕರ್ನಾಟಕದ ಕುಲಬಾಂಧವರಿಗೆ, ರಾಷ್ಟ್ರದ ತರುಣ ಪೀಳಿಗೆಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ದೊರೆಯುವಂತಾಗಲಿ ಎಂದು ಪ್ರಾರ್ಥಿಸುತ್ತೇನೆ. "ಜೈ ಭಾರತಜನನಿಯ ತನುಜಾತೆ ; ಜಯಹೇ ಕರ್ನಾಟಕ ಮಾತೆ" ಎಂಬ ಮಹಾಕವಿ ಕುವೆಂಪು ಅವರ ವಾಣಿಯಂತೆ ಗೌಡರ ದಾರ್ಶನಿಕಬದುಕು ಮತ್ತು ಅವರ ಚಿಂತನೆಗಳು ಕರ್ನಾಟಕವ್ಯಾಪಿಯಾಗಿ, ಭಾರತವ್ಯಾಪಿಯಾಗಿ ಪ್ರಸರಿಸಲೆಂಬುದೇ ನನ್ನ ಅಭಿಲಾಷೆ ಯಾಗಿದೆ.

ಬಿ. ಎಲ್. ಲಕ್ಕೇಗೌಡ

# ಅಪೂರ್ವ ವ್ಯಕ್ತಿ

ಶ್ರೀ ಪಿ. ಎನ್. ಜವರಪ್ಪಗೌಡರು ಮಂಡ್ಯ ಜಿಲ್ಲೆಯ ಅಪೂರ್ವ ವ್ಯಕ್ತಿ. ನಾನು ವಿದ್ಯಾರ್ಥಿಯಾಗಿದ್ದ ಕಾಲದಿಂದಲೇ ಅವರು ನಮ್ಮ ಹಳ್ಳಿಗಳ ಕಡೆ ಸುಳಿದಾಡುತ್ತಿದ್ದರು. ಸ್ವಾತಂತ್ರ್ಯಚಳುವಳಿಯ ಹಲವು ಕಾರ್ಯಕ್ರಮಗಳಲ್ಲಿ ಈಚಲಮರ ಕಡಿಯುವುದೂ ಒಂದಾಗಿತ್ತು. ನಮ್ಮ ತಂದೆಯವರು ಸೇಂದಿ ಬಾಬು ಮಾಡುತ್ತಿದ್ದರು. ಇದರ ಮೇಲೆ ಗೌಡರು ಮತ್ತು ಪರಿವಾರದವರ ಕಣ್ಣಿತ್ತು. ಮರಗಳನ್ನು ಕಡಿಯುವುದು, ಅಂಗಡಿಗಳಿಗೆ ಹೋಗಿ ಗಡಿಗೆ ಬಾನಿಗಳನ್ನು ಒಡೆದು ಹಾಕುವುದು, ತಿತ್ತಿ ಹರಿಯುವುದು– ಇಂತಹ ಕೆಲಸಗಳು ನಡೆಯುತ್ತಿದ್ದವು. ಎಷ್ಟು ಮರ ಕಡಿಯಲು ತಾನೇ ಅವರಿಂದ ಸಾಧ್ಯವಾದೀತು ? ಒಂದೆರಡು ಕಡಿದು ಸುಸ್ತಾಗಿ ಸುಮ್ಮನಾಗುತ್ತಿದ್ದರು. ಅಂತೂ ಸಾಂಕೇತಿಕವಾಗಿ ಆಚರಿಸುತ್ತಿದ್ದ ಈ ಕಾರ್ಯಕ್ರಮಗಳು ಹಳ್ಳಿಗಳ ಜನರಲ್ಲಿ ಒಂದು ಹೊಸ ಆಲೋಚನೆಯನ್ನೇ ಉಂಟುಮಾಡಿದುವು ; ಸ್ವಾತಂತ್ರ್ಯ ಅಂದರೆ ಏನು ? ಅದಕ್ಕಾಗಿ ಹೋರಾಟ ಏಕೆ ? ಇವೆಲ್ಲ ಅವರ ಮನಸ್ಸಿನಲ್ಲಿ ಎದ್ದ ಪ್ರಶ್ನೆಗಳು.

ಸುಮಾರು 50 ವರ್ಷಗಳ ಹಿಂದೆ ಜವರಪ್ಪಗೌಡರು ಹೇಗಿದ್ದರೊ ಈಗಲೂ ಹಾಗೆಯೇ ಇದ್ದಾರೆ. ಬೆಳೆದೂ ಇಲ್ಲ, ಇಳಿದೂ ಇಲ್ಲ. ದೈಹಿಕವಾಗಿ ಅಷ್ಟೇ ಅಲ್ಲ; ಬೇರೆಲ್ಲ ರೀತಿಗಳಲ್ಲೂ ಸಮತೂಕವಾಗಿದ್ದಾರೆ. ಅವರ ಉಡುಪಿನಲ್ಲಾಗಲೀ ಮುಖಚರ್ಯೆಯಲ್ಲಾಗಲೀ, ಮಾತುಕತೆಯಲ್ಲಾಗಲೀ, ರೀತಿ–ನೀತಿಗಳಲ್ಲಾಗಲೀ ಏನೂ ಬದಲಾವಣೆಯಾದಂತೆ ಕಾಣುವುದಿಲ್ಲ. ಅಧಿಕಾರಕ್ಕೆ ಆಸೆ ಪಡದೆ ಇದ್ದುದರಲ್ಲೇ ತೃಪ್ತಿಪಟ್ಟುಕೊಂಡು ವಿನಯಶೀಲರಾಗಿ ಇರುವುದೇ ಅವರ ದೊಡ್ಡ ಗುಣ.

ಇತ್ತೀಚಿನವರೆಗೆ, ಅವರ ಮನೆಗೆ ಹೋಗಿ ಒಂದು ಸಲ ಊಟಮಾಡುವವರೆಗೆ, ಜವರಪ್ಪಗೌಡರು ಅಡ್ಡಾಡಿಕೊಂಡು ಕಾಲ ಕಳೆಯುವ ಬ್ರಹ್ಮಚಾರಿ ಎಂದುಕೊಂಡಿದ್ದೆ. ಆದರೆ ಮನೆಯಲ್ಲಿನೋಡಿದರೆ ಹೆಂಗಸರು ಮಕ್ಕಳು ತುಂಬಿದ್ದಾರೆ. ಆಗ ಗೊತ್ತಾಯಿತು, ಗೌಡರು ಸಂಸಾರಸ್ಥ ಎಂದು, ಗೌಡರಿಗೆ ತಕ್ಕ ಮಡದಿ. ಬಂದವರಿಗೆಲ್ಲಾ ಅವರ ಆತಿಥ್ಯ ತಪ್ಪದೆ ನಡೆಯುತ್ತದೆ. ಗೌಡರಿಗೆ ಸ್ನೇಹಿತರು ಬಹುಮಂದಿ. ಅವರಿಗೆಲ್ಲ ಊಟೋಪಚಾರ ನಡೆಸುವುದು ಕಷ್ಟವಾದ ಕೆಲಸ. ಅದನ್ನು ಸಂತೋಷವಾಗಿ ಮಾಡುತ್ತಾರೆ ಅವರ ನಗುಮುಖದ ಮಡದಿ. ಗೌಡರ ಅರ್ಧಭಾಗ ಅಲ್ಲ, ಮುಕ್ಕಾಲು ಭಾಗವೇ ಆ ಮಡದಿ ಎಂದು ಹೇಳಬಹುದು.

ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಅವರು ಅಪಾರ ಸೇವೆ ಸಲ್ಲಿಸಿದರು. ನನ್ನ 'ನನ್ನೂರು' ಅವರಿಗೆ ಬಹು ಪ್ರಿಯವಾದ ಗ್ರಂಥ. ಅದರ ಬಗ್ಗೆ ಮಾತಾಡದೇ ಅವರು ಇರುತ್ತಿರಲಿಲ್ಲ. ಅದರಲ್ಲಿ ಬರುವ ಅನೇಕ ತಮಾಷೆ ಪ್ರಸಂಗಗಳನ್ನು

ಗೌಡರು ತಮ್ಮ ಭಾಷಣದಲ್ಲಿ ಪ್ರಸ್ತಾಪಿಸುತ್ತಿದ್ದರು. ಇಂತಹ ಗ್ರಂಥ ಜನಸಾಮಾನ್ಯರಿಗೆಲ್ಲ ದೊರೆಯಬೇಕೆಂದು ಗೌಡರು 10,000 ಪ್ರತಿಗಳನ್ನು ಮುದ್ರಿಸಿ ರಾಜ್ಯದ ಎಲ್ಲಾ ಪುಸ್ತಕಭಂಡಾರಗಳಿಗೂ ಒದಗಿಸಿದರು. ಕನ್ನಡ ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡಿದ್ದಾರೆ ಗೌಡರು. ಅನೇಕ ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಂಡು ಸ್ವಾರಸ್ಯವಾಗಿ ಹೇಳಬಲ್ಲರು. ಆರಾಧನೆ ಅವರಲ್ಲಿ ಇಲ್ಲವೇ ಇಲ್ಲ. ದೇವರ ಆರಾಧನೆಯಾಗಿರಲಿ ಅಥವಾ ವ್ಯಕ್ತಿಯ ಆರಾಧನೆಯಾಗಿರಲಿ, ಅವರಿಗೆ ಒಪ್ಪುವುದಿಲ್ಲ. ಟೀಕೆ ಮಾಡುವಾಗ ಹಿಂದು ಮುಂದು ನೋಡದೆ ಮಾಡಿಬಿಡುತ್ತಾರೆ.

ಗೌಡರು ಒಳ್ಳೆಯ ವಾಚಾಳಿ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಸಭೆಗಳಲ್ಲಿ ಮಾತಾಡುವುದಕ್ಕಿಂತ ಹೆಚ್ಚಾಗಿ ಸ್ನೇಹಿತರೊಡನೆ ಮಾತಾಡುವಾಗ ಅವರ ಮಾತಿನ ಸೊಗಸನ್ನು ನೋಡಬೇಕು. ಅನೇಕ ಹಿಂದಿನ ಪ್ರಸಂಗಗಳನ್ನೇ ಆಗಲಿ, ಇಂದಿನ ರಾಜಕೀಯ, ಸಾಮಾಜಿಕ ಅಥವಾ ಸಾಹಿತ್ಯಿಕ ವಿಷಯಗಳನ್ನೇ ಆಗಲಿ, ಗೌಡರು ತಮ್ಮದೇ ಆದ ಶೈಲಿಯಲ್ಲಿ ಹೇಳುತ್ತ ಕೇಳುಗರನ್ನು ತಮ್ಮ ಮಾತಿನ ಮೋಡಿಯಲ್ಲಿ ಸೆರೆಹಿಡಿದು ಬಿಡುತ್ತಾರೆ; ನಕ್ಕು ನಗಿಸುತ್ತಾರೆ. ಹಳ್ಳಿಯ ನುಡಿಗಟ್ಟುಗಳು, ಗಾದೆಗಳು ಅವರ ಮಾತಿನಲ್ಲಿ ಹರಿದುಬರುತ್ತವೆ. ಅನೇಕ ಸ್ವಾರಸ್ಯಕರ ಪ್ರಸಂಗಗಳು ಮರುಕಳಿಸುತ್ತವೆ. ಇದೆಲ್ಲವನ್ನೂ ನೀವು ಪುಸ್ತಕರೂಪದಲ್ಲಿ ತನ್ನಿ ಎಂದು ನಾನು ಒಂದೆರಡು ಸಲ ಗೌಡರಿಗೆ ಸಲಹೆ ಮಾಡಿದೆ. ಆದರೆ ಗೌಡರು ಮಾತಿನಲ್ಲಿ ನಿಸ್ಸೀಮರೇ ಹೊರತು ಕುಳಿತು ಮೈಬಗ್ಗಿಸಿ ಬರೆಯುವ ವ್ಯಕ್ತಿಯಲ್ಲ. ಹೀಗಾಗಿ ಅವರ ಮಾತೆಲ್ಲಾ ಗಾಳಿಯಲ್ಲಿ ತೂರಿಹೋಗಿಬಿಟ್ಟಿವೆ. ನಾನೊಂದು ಸಲ ಅವರಿಗೆ ಹೇಳಿದೆ: "ಜವರಪ್ಪಗೌಡರೇ, ನೀವೊಂದು ಕೆಲಸ ಮಾಡಿ. ನಾನು ಒಂದು ಟೇಪ್‌ರೆಕಾರ್ಡರ್ ಕೊಂಡುಕೊಡ್ತೀನಿ. ಸಾಕಷ್ಟು ಕ್ಯಾಸೆಟ್ ಕೊಡ್ತೀನಿ. ಟೇಪ್‌ರಿಕಾರ್ಡರನ್ನು ಯಾವಾಗಲೂ ಕುತ್ತಿಗೆಗೆ ಹಾಕಿಕೊಂಡು ಮಾತಾಡ್ತಾ ಇರಿ. ನಿದ್ದೆಯಲ್ಲೂ ತೆಗೆಯಬೇಡಿ. ಏಕೆಂದರೆ ಆಗಲೂ ನಿಮಗೆ ಮಾತಾಡುವ ಸ್ವಭಾವ. ಕ್ಯಾಸೆಟ್‌ಗಳು ಮುಗಿದ ಮೇಲೆ ಮತ್ತೆ ಕೊಡ್ತೀನಿ. ಅವನ್ನೆಲ್ಲಾ ನನ್ನ ಕಡೆಗೆ ಕೊಡಿ. ಅದರಲ್ಲಿರೋದನ್ನೆಲ್ಲಾ ಒಬ್ಬರ ಕೈಲಿ ಬರೆಸಿ, ಸಂಪಾದಿಸಿ ನಿಮ್ಮ ಹೆಸರಿನಲ್ಲಿ ಪ್ರಕಟಿಸುತ್ತೇನೆ" ಎಂದು. ಗೌಡರು ನನ್ನ ಮಾತು ಕೇಳಲಿಲ್ಲ. ಕೇಳಿದ್ದರೆ ಅವರ ಇಡೀ ಬಾಳು–ಬದುಕು, ಮಾತು-ಕತೆ, ಹಾಸ್ಯ-ವಿನೋದ, ಗ್ರಾಮೀಣ ಭಾಷೆಯ ಸೊಗಡು–ಸೊಗಸು ಇವೆಲ್ಲ ಮುಂದಿನ ಪೀಳಿಗೆಗೆ ಅತ್ಯುತ್ತಮವಾದ ಕೊಡುಗೆಯಾಗುತ್ತಿದ್ದುವು. ಹಾಗೆ ಮಾಡದೆ ಗೌಡರು ತಮ್ಮ ಸಾರಸ್ವತ ಬಾಳನ್ನು ವ್ಯರ್ಥಮಾಡಿಕೊಂಡರೆಂದು ನನಗೆ ಅನ್ನಿಸುತ್ತದೆ.

ಇಂತಹ ಅಪೂರ್ವ ವ್ಯಕ್ತಿಯ ಸನ್ಮಾನ ಈಗ ಆಗುತ್ತಿರುವುದು ಹರ್ಷದ ಸಂಗತಿ.

ಎಚ್. ಎಲ್. ನಾಗೇಗೌಡ

# ಕಷ್ಟ ನಿಷ್ಠುರ ಕಂಡವರು

ಶ್ರೀಮಾನ್ ಪಿ. ಎಸ್. ಜವರಪ್ಪಗೌಡರು ರೈತಕುಟುಂಬದಲ್ಲಿ ಹುಟ್ಟಿಬೆಳೆದು ಬಂದವರು. ಭಾರತದೇಶದ ಸ್ವಾತಂತ್ರ್ಯಸಂಗ್ರಾಮದಲ್ಲಿ ಹೋರಾಡಿ, ಜೈಲುವಾಸವನ್ನು ಅನುಭವಿಸಿದವರು. ಜೀವನದಲ್ಲಿ ಕಷ್ಟನಿಷ್ಠುರಗಳನ್ನು ಕಂಡವರು. ಸದಾ ಖಾದಿವಸ್ತ್ರ ಧಾರಿಗಳು. ಅವರ ಜೀವನ ಆಡಂಬರವಿಲ್ಲದ ಕುಟುಂಬ ಜೀವನ, ಸರಳ ಸ್ವಭಾವಿ, ವಿಚಾರಕುಶಲರು, ಕಾರ್ಯಾಸಕ್ತರು, ಕಾರ್ಯಚತುರರು, ಕಾರ್ಯಸಾಧಕರು, ಸದಾ ಸಾಧನಚಿಂತಕರು, ಅವರ ಕಾರ್ಯಕ್ಷೇತ್ರ ವಿಶಾಲವಾದುದು. ರಾಜಕೀಯ, ಸಾಮಾಜಿಕ, ಸಹಕಾರಿ, ಪತ್ರಿಕೋದ್ಯಮ, ಶಿಕ್ಷಣಕ್ಷೇತ್ರ ಮುಂತಾಗಿ ಸಾರ್ವಜನಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಅವರು ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಮಂಡ್ಯದಲ್ಲಿ ಜನತಾಶಿಕ್ಷಣ ಸಂಸ್ಥೆಯಲ್ಲಿ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಶಂಕರಗೌಡ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ ಕಟ್ಟಡದ ಶಂಕುಸ್ಥಾಪನೆಗೆ ರಾಷ್ಟ್ರಕವಿ ಕುವೆಂಪುರವರನ್ನು ಕಂಡು ಕರೆದುಕೊಂಡು ಬಂದು ಅವ ರಿಂದ ಶಂಕುಸ್ಥಾಪನೆ ನೆರವೇರಿಸಲು ತುಂಬಾ ನೆರವು ನೀಡಿದ್ದಾರೆ. ಶ್ರೀ ಗೌಡರು, ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠದ ಪರ. ಭಕ್ತರು, ಸೇವಾಸಕ್ತರು ಶ್ರೀಮಠದ ಶಿಕ್ಷಣಕ್ಷೇತ್ರದ ಏಳಿಗೆಯಲ್ಲಿ ಅವರ ಕಾರ್ಯಚಟುವಟಿಕೆ ತೀವ್ರ. ಮಂಡ್ಯದಲ್ಲಿ ಕೊಮ್ಮೇರಹಳ್ಳಿ ಹತ್ತಿರವಿರುವ ಶ್ರೀಮಠದ ಶಿಕ್ಷಣಕ್ಷೇತ್ರಕ್ಕೆ ಶ್ರೀ ಕುವೆಂಪುರವರನ್ನು ಕಂಡು ಅವರ ಅನುಮತಿಯಿಂದ, ಆ ಕ್ಷೇತ್ರಕ್ಕೆ "ವಿಶ್ವಮಾನವ" ಕ್ಷೇತ್ರ ಎಂದು ಹೆಸರಿಸಲು ತುಂಬಾ ನೆರವಾಗಿದ್ದಾರೆ. ಶ್ರೀಮಠದ ಯಾವುದೇ ಕ್ಷೇತ್ರದಲ್ಲಿ ಯಾವುದೇ ಸಮಸ್ಯೆಗಳು ಸಂಭವಿಸಿದರೂ ಅವರು ಆ ಸಮಸ್ಯಾ ಪರಿಹಾರಕ್ಕೆ ತುಂಬಾ ನೆರವು ನೀಡುತ್ತಾರೆ. ನಮ್ಮ ಜನರು ಮದುವೆಗಳಲ್ಲಿ ಮಾಡುತ್ತಿರುವ ದುಂದುವೆಚ್ಚ, ಆಡಂಬರ, ಮೂಢನಂಬಿಕೆಗಳನ್ನು ತೊಲಗಿಸಿ, ಶ್ರೀ ಕುವೆಂಪು ಅವರು ಹಾಕಿಕೊಟ್ಟಿರುವ, ನೀತಿಯುಕ್ತವಾಗಿ, ನಿರ್ಮಲಪ್ರೇಮದಿಂದ ತರುಣಿ ತರುಣರು ಸತಿಪತಿಯರಾಗಿ, ಬಾಳುವಂತೆ ಮದುವೆ ಮಾಡುವ ಸರಳರೀತಿ, ನೀತಿಗಳನ್ನೊಳಗೊಂಡ "ಮಂತ್ರ ಮಾಂಗಲ್ಯ" ವಿವಾಹ ವಿಧಾನ ಜೀವನವಿಧಾನವನ್ನು ಅವರು ತಮ್ಮ ಮಕ್ಕಳ ಮದುವೆ ಗಳಲ್ಲಿ ಆಚರಿಸುತ್ತಾರೆ. ಇತರರಿಗೂ ಬೋಧಿಸುವುದಲ್ಲದೆ ಅವರುಗಳು ಹಾಗೆ ಆಚರಿ ಸಲು ನೆರವಾಗುತ್ತಿದ್ದಾರೆ. ಹೀಗೆ ಶ್ರೀಮಾನ್ ಪಿ. ಎಸ್. ಜವರಪ್ಪಗೌಡರು ತಮ್ಮ ಜೀವಮಾನಕಾಲವನ್ನು ಹೆಚ್ಚಾಗಿ ಜನಸೇವೆಗಾಗಿ ಸಲ್ಲಿಸುತ್ತಿದ್ದಾರೆ : ಅವರಿಗೆ ಭಗ ವಂತನು ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲಿ ಎಂಬುದು ನಮ್ಮೆಲ್ಲರ ಆಸೆ.

**ಪಿ. ಮಲ್ಲಯ್ಯ**

# ಅಭಿನವ ಅರ್ಧನಾರೀಶ್ವರ

ಶ್ರೀ ಪಿ. ಎನ್. ಜವರಪ್ಪಗೌಡರು ಪತ್ರಕರ್ತರಾಗಿ ಪ್ರಸಿದ್ಧರೋ ಅಥವಾ ರಾಜಕಾರಿಣಿಯಾಗಿ ಪ್ರಸಿದ್ಧರೋ ಎಂದರೆ ಅರ್ಧನಾರೀಶ್ವರನನ್ನು ಗಂಡಸೇ ಹೆಂಗಸೇ ಎಂದು ಪ್ರಶ್ನಿಸಿದಂತಾಗುವುದು. ಮಂಡ್ಯದ ಅಭಿನವ ಅರ್ಧನಾರೀಶ್ವರ ಪಿ. ಎನ್. ಜವರಪ್ಪಗೌಡರನ್ನು ಪತ್ರಿಕೋದ್ಯಮಿಯಾಗಿ ಬೆಳೆಯಲು ರಾಜಕಾರಣವನ್ನು ಬಳಸಿಕೊಂಡರೋ, ರಾಜಕಾರಿಣಿಯಾಗಿ ಮೇಲೇರಲು ಪತ್ರಿಕೋದ್ಯಮ ಬಳಸಿಕೊಂಡರೋ ಎಂಬುದು ನಿಗೂಢವಾದ ಸಮಸ್ಯೆ.

ಹುಟ್ಟಿನಿಂದ ಒಕ್ಕಣ್ಣನಾದರೂ ಜವರಪ್ಪಗೌಡರ ಜೀವನ ದೃಷ್ಟಿ ಕುರುಡಾದುದಲ್ಲ. ಬದಲು ಬಹು ದೂರಗಾಮಿ. ಹಾಗೆಯೇ ವಿಶಾಲವಾದುದು. ಅವರ ಅಂತರ್ಮುಖಿ ದೃಷ್ಟಿ ಯಾವನ ಹೃದಯದಲ್ಲಿ ಏನಿದೆ ಎಂಬುದನ್ನು ಗುರ್ತಿಸಬಲ್ಲ ವಿವೇಚನಾಪೂರ್ಣದ ದೃಷ್ಟಿ ಅವರದು.

ಲೋಯರ್ ಸೆಕೆಂಡರಿ ಎಂಟರೆನ್ಸ್ ಪಾಸು ಮಾಡಲಾಗದೆ ಹೋದ ಈ ಹಳ್ಳಿಹೈದ ಜವರಪ್ಪ. ಸ್ವಾತಂತ್ರ್ಯ ಹೋರಾಟದ ಎಲ್ಲ ಮಜಲುಗಳಲ್ಲಿ ನಾಲ್ಕಾರು ಸಾರಿ ಸೆರೆಮನೆ ಅನುಭವಿಸಿದವ. ಈ ಸೆರೆವಾಸಗಳಲ್ಲಿ ಐದುವರ್ಷಕ್ಕೆ ಕಮ್ಮಿಯಿಲ್ಲದೆ ಅವಧಿ ಅನುಭವಿಸಿದವ. ಅಲ್ಲಿ ದೊರೆತ ಲೋಕಾನುಭವ ಸಾಗರದಷ್ಟಂತೆ.

ಅನೇಕ ಮಹನೀಯರುಗಳಿಂದ ಶ್ರೇಷ್ಠ ಕಾರ್ಯಕ್ರಮಗಳನ್ನು ಗ್ರಂಥಗಳನ್ನು ಸೃಷ್ಟಿಸಲು ಕಾರಣವಾದುದು ಜೈಲುವಾಸ, ಈ ಸಂದರ್ಭಗಳು ಸಾಮಾನ್ಯರಲ್ಲಿ ಸಾಮಾನ್ಯರಿಂದ ಅನೇಕ ಜನರುಗಳನ್ನು ಮಹಾನಾಯಕರುಗಳನ್ನಾಗಿ ವಾಗ್ಮಿಗಳನ್ನಾಗಿ ಪರಿವರ್ತಿಸಿತು ಎಂಬುದಕ್ಕೆ ನಾಗಮಂಗಲದ ಮೂಲೆ ಕುಗ್ರಾಮದ ಹಳ್ಳಿ ಹೈದ ಜವರಪ್ಪನಿಗಿಂತ ಬೇರೆ ವ್ಯಕ್ತಿ ಸಾಕ್ಷಿಯಾಗಲಾರ.

ತಾನು ಸೇರಿ ಓದುತ್ತಿದ್ದ ಕೂಲಿಮಠದ ತರಗತಿಗಳಿಗಿಂತ ಶ್ರೀ ರಾಮಮಂದಿರದ ಪುಸ್ತಕಭಂಡಾರದಿಂದ ಕಲಿತದ್ದೇ ಹೆಚ್ಚು. ಶ್ರೀ ಆದಿಚುಂಚನಗಿರಿಯ ಮೊದಲ ಸ್ವಾಮಿಗಳಾದ ಪೂರ್ವಾಶ್ರಮ ಸನ್ಯಾಸಿ ಜೀವನದಲ್ಲಿದ್ದ ಶ್ರೀ ಭಕ್ತನಾಥಸ್ವಾಮಿಗಳು ಆಗ ಗ್ರಾಮಾಂತರಗಳಲ್ಲಿ ಶ್ರೀ ರಾಮಮಂದಿರಗಳನ್ನು ಸ್ಥಾಪಿಸಿ ಆ ಮಂದಿರಗಳಲ್ಲಿ ಪುಸ್ತಕ ಭಂಡಾರ ಸ್ಥಾಪಿಸಿ ಆಧ್ಯಾತ್ಮಿಕ ಮತ್ತಿತರ ಶ್ರೇಷ್ಠ ಕೃತಿಗಳಿಂದ ಗ್ರಾಮಾಂತರ ಜನರಿಗೆ ಉಪನ್ಯಾಸಗಳನ್ನು ನಡೆಸುತ್ತಿದ್ದರು. ಈ ಒಂದು ಪ್ರಕರಣ ಸುಭದ್ರೆ ಹೊಟ್ಟೆಯಲ್ಲಿದ್ದ ಅಭಿಮನ್ಯು, ಮಾವ ಕೃಷ್ಣನು ತಂಗಿ ಸುಭದ್ರೆಗೆ ಭವಿಷ್ಯತ್ ಕುರುಕ್ಷೇತ್ರ ಯುದ್ಧದ ವಿವರಣೆ ನೀಡಿದುದನ್ನು ಕೇಳಿಸಿಕೊಂಡಂತೆ. ಸ್ವಾಮಿ ಭಕ್ತನಾಥರು ವ್ಯವಸ್ಥೆ ಮಾಡಿದ

ಸಾಹಿತ್ಯ ಸಾಧನಗಳು ಬರಡು ಜೀವನದ ಜವರಪ್ಪಗೌಡರಿಗೆ ಪ್ರಮುಖ ಹೇತುವಾಗಿ ಜೀವನರಂಗದ ಅತಿ ಎತ್ತರದ ಏಣಿ ಏರಿ ನಿಂತು ಸುತ್ತಲ ಪರಿಸರ ವೀಕ್ಷಿಸಲು ಸುಲಭವಾದ ಸಾಧನವಾಯಿತು ಅಭಿಮನ್ಯುವಿನಂತೆ.

ಇಲ್ಲಿದ್ದ ವಿವೇಕಾನಂದಾದಿ ಶ್ರೀ ರಾಮಕೃಷ್ಣರ ಸಾಹಿತ್ಯವನ್ನು ಸ್ವಾಮಿಗಳಿಂದ ಪ್ರೇರಿತರಾಗಿ ಓದಲು ಆರಂಭಿಸಿದ ಜವರಪ್ಪಗೌಡರಿಗೆ ಅವರ ಸುಪ್ತಚೇತನದಲ್ಲಿದ್ದ ರಾಷ್ಟ್ರಧರ್ಮ, ದೈವಭಕ್ತಿ, ಸಮಾಜ ಕರ್ತವ್ಯಗಳ ಪರಿಕಲ್ಪನೆ ಅರ್ಥವಾಗುವುದು ಕಷ್ಟವಾದಾಗ ಜವರಪ್ಪನ ನೆರವಿಗೆ ಬಂದುದು ಕಾವ್ಯಋಷಿ ಕುವೆಂಪು ಅವರ ಸಾಹಿತ್ಯ ಎನ್ನುತ್ತಾರೆ.

ಇದರಿಂದ ಉತ್ತೇಜಿತರಾದ ಪಿ. ಎಸ್. ಜವರಪ್ಪಗೌಡರು ಮುಂದಿನ ತಮ್ಮ ಸ್ವಾತಂತ್ರ್ಯಹೋರಾಟ ರಂಗವೇದಿಕೆಗಳ ಭಾಷಣಗಳಲ್ಲಿ ನಿರರ್ಗಳವಾಗಿ ಕುವೆಂಪು ಅವರ ಸಾಹಿತ್ಯ ತಂದುಕೊಟ್ಟ ಹೆಗ್ಗಳಿಕೆ. ಅವರ ಗುರುಗಳಿಂದ ಅನುಗ್ರಹಿತನಾದುದ್ದು ಎಂದು ಮತ್ತೆ ಮತ್ತೆ ಗುರುಸ್ಮರಣೆ ಜವರಪ್ಪನದು. ಕುವೆಂಪು ಸಾಹಿತ್ಯದ ಅಗ್ರಪಂಕ್ತಿ ಕವನಗಳಾದ ಕಲ್ಕಿ, ಪಾಂಚಜನ್ಯ. ಹಾಳೂರು. ಸತ್ಯಾಗ್ರಹಿ, ಮಹಾತ್ಮಗಾಂಧಿ ಸಭ್ಯತಾದೇವತೆ ಸರ್ಕಾರದ ದಬ್ಬಾಳಿಕೆ ಮೇಲೆ ಅಗ್ನಿಸ್ಫೋಟಗೊಂಡವು. ಜನರು ಹುಚ್ಚೆದ್ದು ತಾನು ನಾನೆಂದು ಜೈಲಿಗೆ ಜನರ ನೂಕು ನುಗ್ಗಲಾಯ್ತು. ಅಷ್ಟೇ ಅಲ್ಲ ಕುವೆಂಪು ಸಾಹಿತ್ಯದಿಂದ ಜನರನ್ನು ಪ್ರೇರೇಪಿಸುವಂತದು ರಾಜದ್ರೋಹವೆಂದು ತಕ್ಸೀರು ಹೂಡಿ ಜೈಲುವಾಸಕ್ಕೆ ನೂಕಿದ ಪ್ರಕರಣಗಳಿಗೆ ಮಹಾ ಸಾಹಿತ್ಯ ಕುವೆಂಪು ಅವರದು.

ಶಿವಪುರ ಧ್ವಜ ಸತ್ಯಾಗ್ರಹ, ಮೈಸೂರು ಟೌನ್‌ಹಾಲ್ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹಗಳಲ್ಲಿ ಭಾಗವಹಿಸಿ ಜೈಲು ಅನುಭವಿಸಿದ ಜವರಪ್ಪನಿಗೆ ಜೈಲೆಂಬ ಹೆಸರೇ ಮರೆತುಹೋಗಿ ತಮ್ಮ ತಲೆಮಾರವರ ಪಿತ್ರಾರ್ಜಿತ ಮನೆಗೆ ಹೋದಂತಾಗುತ್ತಿತ್ತು ಜೈಲು ಎನ್ನುತ್ತಾರೆ.

1940ರ ಮಧ್ಯಭಾಗದಲ್ಲಿ ಬಿ. ಎಸ್. ಗುಪ್ತ ಅವರು ಪ್ರಾರಂಭಿಸಿದ ಬ್ರಾಹ್ಮಣೇತರ ಮಂಡ್ಯ ಜನವಾಣಿ ಪತ್ರಿಕೆ ಏಜಂಟರಾಗಿ ಮತ್ತು ಬಾತ್ಮಿದಾರರಾಗಿ ನೇಮಕವಾದರು. ನಲವತ್ತರ ದಶಕದ ಜನವಾಣಿ ಆಗಲಿ, ಎಪ್ಪತ್ತರ ದಶಕದ ಸಂಯುಕ್ತ ಕರ್ನಾಟಕವಾಗಲಿ ಜವರಪ್ಪಗೌಡರ ಏಜನ್ಸಿ ಎಂದರೆ ಅದು ಸಹಸ್ರ ಸಂಖ್ಯೆ ಮೀರಿದ ಪ್ರಸಾದವಿರಲೇಬೇಕು. ಪತ್ರಿಕೆಗಳಿಗೆ ಸುದ್ದಿ ಕ್ರೋಢಿಸುವುದರ ಜೊತೆಗೆ ರೂಢಿಕರಿಸುವ ನಿತ್ಯ ವಿನೂತನ ಮಾರ್ಗದಿಂದ ಪತ್ರಿಕೆ ಓದುಗರ ಮನವನ್ನು ಸೆರೆ ಹಿಡಿಯುವ ಮಾರ್ಗದಲ್ಲಿ ನಿಸ್ಸೀಮರಾದರು. ಪತ್ರಿಕೋದ್ಯಮಿ ವೃತ್ತಿ ಮಂಡ್ಯ ರಾಜಕೀಯ ಕ್ಷೇತ್ರಕ್ಕೆ ಮಹತ್ತರ ಕೊಡುಗೆ ಆಯಿತಂತೆ, ಪತ್ರಿಕೋದ್ಯಮದಲ್ಲಿ ಈ ಸಹಸ್ರಗಳ ಬಂಪರ್ ಪ್ರಸರಣ ಗುಟ್ಟು ಎಂದರೆ ಜವರಪ್ಪಗೌಡರ ರಾಜಕೀಯ ನಾಯಕರುಗಳಾದ ಶ್ರೀ ಕೆ. ವಿ. ಶಂಕರಗೌಡರು, ಬಿ. ಎಸ್. ಬೊಮ್ಮೇಗೌಡರು,

ಎಚ್. ಕೆ. ವೀರಣ್ಣಗೌಡರು, ಎ. ಜಿ. ಬಂದೀಗೌಡರು. ಮಳವಳ್ಳಿ ಕೆ. ವಿ. ವೀರಪ್ಪನವರು. ಎಂ. ಕೆ. ಶಿವನಂಜಪ್ಪ, ಎಚ್. ಸಿದ್ಧರಾಮಯ್ಯ. ಎಚ್. ಡಿ. ಚೌಡಯ್ಯ, ಜಿ ಮಾದೇಗೌಡರು, ಗೌಡಗೆರೆ ನಾಗಪ್ಪ ಮುಂತಾದ ಆಪ್ತೇಷ್ಟರ ವಿಚಾರ ದಿನವೂ ಸುದ್ದಿ ಸಂಗ್ರಹದಲ್ಲಿ ಇರಲೇಬೇಕು. ಅದಿಲ್ಲದಿದ್ದರೆ ತಮ್ಮ ಆಪ್ತೇಷ್ಟರ ಮನೆಯ ಹಸುವು ಜೀವಾಪಾಯವಿಲ್ಲದೆ ಹೆರಿಗೆಯಿಂದ ಪಾರಾಯಿತು ಎಂಬ ಸುದ್ದಿಯಾದರೂ ಪತ್ರಿಕೆ ಮುಖಪುಟದಲ್ಲಿ ಇರಲೇಬೇಕಿತ್ತು. ಪಿ.ಎಸ್.ಜೆ. ಅವರು ಆಪ್ತೇಷ್ಟರಲ್ಲದವರನ್ನು ಕುರಿತು ಎಂದೂ ಯಾವಾಗಲೂ ಅವರ ಮನನೋಯಿಸುವ ಸುದ್ದಿ ಪ್ರಸಾರ ಮಾಡಿದವರಲ್ಲ. ತನ್ನ ಆಪ್ತೇಷ್ಟವರ್ಗವನ್ನು ಮೆಟ್ಟಿಲಿಂದ ಮೆಟ್ಟಿಲಿಗೆ ಏರಿಸುತ್ತಾ ಮಂಡ್ಯ ರಾಜಕೀಯದ ಮಹಾ ಭೀಷ್ಮನಂತೆ "ಕಿಂಗ್ ಮೇಕರ್" ಜವರಪ್ಪ ಎನ್ನುವ ಮಟ್ಟಕ್ಕೆ ಬಂತು ಅವರ ಹೆಸರು.

ಪತ್ರಿಕಾ ಮಾಲೀಕರು ಸಂಪಾದಕೀಯ ವರ್ಗ ಇವರೆಲ್ಲರು ವರದಿಗಾರರು ಹಾಗೂ ಪತ್ರಿಕಾ ವಿತರಣಗಾರರ ಅವಲಂಬಿಗಳು ಎಂಬುದು ಜವರಪ್ಪಗೌಡರ ಘೋಷಣೆ.

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಒಂದು ವರ್ಷ ಆರು ತಿಂಗಳು ಜೈಲುವಾಸ ಅನುಭವಿಸಿ ಬಿಡುಗಡೆಯಾದ ಮೇಲೆ ಮಂಡ್ಯ ರೈಲ್ವೆ ಸ್ಟೇಷನ್ ರಸ್ತೆಯಲ್ಲಿ ಜೀವನ ಸಾಹಿತ್ಯ ಪುಸ್ತಕಾಲಯ ಎಂಬ ಹೆಸರಿನಿಂದ ಪುಸ್ತಕ ವ್ಯಾಪಾರ ಆರಂಭಿಸಿದರು. ವ್ಯಾಪಾರವನ್ನು ನೋಡಲು ಬೆಳೆದ ಮಕ್ಕಳಿಲ್ಲದೆ ಗೌಡರಿಗೆ ಬಂದ ಅಲ್ಸರ್ ಖಾಯಿಲೆ ವ್ಯಾಪಾರದಲ್ಲಿ ನಷ್ಟವನ್ನು ತಂದಿತು.

1954ರ ಅಂತ್ಯದಲ್ಲಿ ಕರ್ನಾಟಕ ಏಕೀಕರಣ ಹೆಸರಲ್ಲಿ ಮೈಸೂರು ವಿಲೀನವಾಗದೇ ಪ್ರತ್ಯೇಕ ಕನ್ನಡ ಪ್ರಾಂತವಾಗಬೇಕು. ಭಾರತದೇಶ ಭಾಷಾವಾರು ಪ್ರಾಂತಗಳಾಗಿ ರಚನೆಯಾಗುವ ಕಾಲಕ್ಕೆ ಕೋಟಿಜನಸಂಖ್ಯೆಯ ಆಡಳಿತ ಪ್ರಾಂತವಾಗಬೇಕೆಂದು ಹೋರಾಟಕ್ಕೆ ಆಗಿನ ತರುಣರಾಗಿದ್ದ ಜಿ ಮಾದೇಗೌಡರು ಮತ್ತು ಗೌಡಗೆರೆ ನಾಗಪ್ಪನವರು ಕೇಂದ್ರ ಸರ್ಕಾರವನ್ನು ಆಗ್ರಹಪಡಿಸಿ ಮಂಡ್ಯ ಮಹಾತ್ಮಗಾಂಧಿ ಉದ್ಯಾನದಲ್ಲಿ ಉಪವಾಸ ಸತ್ಯಾಗ್ರಹ ಮಾಡಿ ಈ ಚಳುವಳಿಗೆ ನಾಂದಿ ಪೂಜೆ ಮಾಡಿದರು. ಇಂತಹ ಚಳುವಳಿಗಳ ಮುಂಚೂಣಿದಾರ ಜವರಪ್ಪ ಇರಲೇಬೇಕಲ್ಲ ನಾಂದಿ ಪೂಜೆಯ ಪುರೋಹಿತರಾಗಿ. ಈ ಚಳುವಳಿಯನ್ನು ಜವರಪ್ಪಗೌಡರು ಇನ್ನಿತರ ಗಣ್ಯ ಸ್ನೇಹಿತರುಗಳೊಡನೆ ಕೈಗೆತ್ತಿಕೊಂಡರು.

ಈ ಸಮಸ್ಯೆ ವಿರುದ್ಧ ಸಮರ ಸಾರಿದ ಜವರಪ್ಪಗೌಡರಿಗೆ ಕರ್ನಾಟಕ ಏಕೀಕರಣ ಪರವಾದ ಬೆಂಗಳೂರಿನ ಪತ್ರಿಕೆಗಳು ಅಷ್ಟಾಗಿ ಬೆಂಬಲ ನೀಡದೆಹೋದವು. ತತ್ಫಲವಾಗಿ ಗೌಡರು ತಮ್ಮದೇ ಆದ ಸಚಿತ್ರ ವಾರ ಪತ್ರಿಕೆಯನ್ನು "ವಿಶ್ವಾಮಿತ್ರ" ಎಂಬ ಹೆಸರಿನಿಂದ ಬೆಂಗಳೂರಲ್ಲಿ ಆರಂಭಿಸಿದರು. ಕ್ರೌನ್ ಫೋಲಿಯೋ 16 ಪುಟಗಳು 'ವಿಶ್ವಾಮಿತ್ರ'ದ ಬೆಲೆ ಕೇವಲ ಎರಡಾಣೆ ಮಾತ್ರ. ಒಳ್ಳೆಯ ಜಾಹಿರಾತನ್ನು ಪಡೆಯು

24

ತ್ತಿದ್ದ ಈ ಪತ್ರಿಕೆ ಆರ್ಥಿಕವಾಗಿ ಉತ್ತಮ ಸ್ಥಿತಿಯನ್ನು ಹೊಂದಿತ್ತು. ಮೈಸೂರು ಪ್ರತ್ಯೇಕ ಕನ್ನಡಭಾಷಾಪ್ರಾಂತವಾಗಿ ಉಳಿಯಬೇಕೆಂಬ ವಾದಕ್ಕೆ ಸರ್ ಎಂ. ಮಿರ್ಜಾ, ಸರ್ ಎಂ. ವಿಶ್ವೇಶ್ವರಯ್ಯನವರು. ರಾಜಾಜಿ ಮುಂತಾದ ಗಣ್ಯರ ಬೆಂಬಲ ದೊರಕಿತ್ತು. 'ವಿಶ್ವಾಮಿತ್ರ' ಪತ್ರಿಕೆ ನಡೆಸಲು 1955ರಲ್ಲಿ ಸಂಸಾರವನ್ನೇ ಬೆಂಗಳೂರಿಗೆ ವರ್ಗಾಯಿಸಿದ್ದರು. ಏಕೀಕರಣ ವಿರೋಧವೇ ಏಕೈಕ ಸೂತ್ರವಾಗಿದ್ದ "ವಿಶ್ವಾಮಿತ್ರ"ನಿಗೆ ಕರ್ನಾಟಕ ಏಕೀಕರಣ ತನ್ನ ಗುರಿಗೆ ಭಂಗವಾದ ಮೇಲೆ ವಿಶ್ವಾಮಿತ್ರ ಪ್ರಕಟಣೆ ನಿಂತು ಹೋಯಿತು. ಈ ಪತ್ರಿಕೆ 10 ಸಾವಿರ ಪ್ರಸಾರದೊಡನೆ ಪ್ರಕಟಣೆ ಆರಂಭವಾಗಿ, ಪ್ರಸಾರ ಬೆಳೆದು 15 ಸಾವಿರದವರೆಗೆ ಹೆಚ್ಚಿತು. ಈ ಉದ್ಯಮ ಗೌಡರ 5 ಎಕರೆ ತರೀ ಜಮೀನನ್ನು ನುಂಗಿ ನೀರು ಕುಡಿಯಿತಂತೆ.

ಧೈರ್ಯವೇ ಜವರಪ್ಪಗೌಡರ ಬಂಡವಾಳ, ನಷ್ಟಕ್ಕೆ ಹೆದರದೇ ದೇಶದ ಕೆಲಸ ನಿಸ್ವಾರ್ಥದಿಂದ ನಿರ್ವಹಿಸಿದ್ದೇನೆ. ನನ್ನ ಕೆಲಸಕ್ಕೆ ದೇವರು ಬರುತ್ತಾನೆ ಎಂಬುದು ಗೌಡರ ನಂಬಿಕೆ. ಅವರು ಹೇಳಿದಂತೆ 'ವಿಶ್ವಾಮಿತ್ರ' ಪತ್ರಿಕೆ ಅಚ್ಚುಕೊಟದಿಂದ ಮುದ್ರಣ ಕಲೆಯನ್ನು ತಾವು ಮತ್ತು ಮನೆಯ ಮಕ್ಕಳಾದಿಯಾಗಿ ಎಲ್ಲರೂಒಂದಲ್ಲ ಒಂದು ಅಭ್ಯಾಸ ಮಾಡಿದ್ದು, ಮುಂದೆ ಈ ಉದ್ಯಮವೇ ಗೌಡರನ್ನು ಮೇಲೇರಿಸಿತು.

1957ಕ್ಕೆ ಮಂಡ್ಯಕ್ಕೆ ಸಂಸಾರ ಸಮೇತ ಬಂದ ಜವರಪ್ಪಗೌಡರು ಮುದ್ರಣಾಲಯ ಜೊತೆ ಪುಸ್ತಕ ವ್ಯಾಪಾರ ಆರಂಭಿಸಿದರು. ಜೊತೆಗೆ ಕರ್ನಾಟಕ ರಾಜಕೀಯದಲ್ಲಿ ಮೇಲೇರತೊಡಗಿದ ಕೆ. ವಿ. ಶಂಕರಗೌಡರ ಆಪ್ತ ರಾಜಕೀಯ ಸಮಾಲೋಚಕರಲ್ಲೊಬ್ಬರು ಆದರು. ಇದರಿಂದ ಜವರಪ್ಪಗೌಡರನ್ನು ಕೆಲವು ವಿರೋಧಿ ರಾಜಕಾರಣಿಗಳು ಶಂಕರಗೌಡರ 'ಶಕುನಿ' ಎಂದು ಹೇಳುತ್ತಿದ್ದರಾದರೂ, ಅವರೆದುರಿಗೆ ತುಟಿ ಎರಡು ಮಾಡಿದವರಲ್ಲ. ಆದರು ಇದಾವುದಕ್ಕೂ ಜಗ್ಗದವರು ಜವರಪ್ಪಗೌಡರು. ಒಬ್ಬರನ್ನೊಬ್ಬರು ದ್ವೇಷಿಸುವುದರಿಂದ ಹಗೆತನಹೆಚ್ಚುತ್ತದೆಯೆ ಹೊರತು ಅದರಿಂದ ಏನೂ ಸಾಧಿತವಾಗದು ಎಂಬ ನೀತಿ ಜವರಪ್ಪಗೌಡರದಾಗಿತ್ತು. ಯಾರನ್ನೂ ಮಾತನಾಡಿಸಲೇಬಾರದು ಎನ್ನುವ ಮಟ್ಟಕ್ಕೆ ಹೋಗಿ ದ್ವೇಷ ಮಾಡದ ಜವರಪ್ಪಗೌಡರು ಎಲ್ಲರೊಳಗೊಬ್ಬರಾಗಿ ಅಜಾತಶತ್ರುವಾಗಿದ್ದರು.

ವೈಚಾರಿಕತೆ, ವೈಜ್ಞಾನಿಕತೆಗಳ ಹರಿಕಾರರಾದ ಕುವೆಂಪು ಅವರು ಸಾಹಿತ್ಯ ಸಾರಸ್ವತಲೋಕದ ಆರಾಧ್ಯದೇವತೆ ಎಂಬ ಭಕ್ತಿ ಗೌರವ ಅವರಲ್ಲಿ. ಹಳೇಕಂದಾಚಾರದ ಸಂಪ್ರದಾಯಕ್ಕೆ ಶರಣಾದ ಶ್ರೀ ಆದಿಚುಂಚನಗಿರಿ ಪೀಠಕ್ಕೆ ಮತ್ತು ಗುರುಗಳಲ್ಲು ಅತ್ಯಾದರದ ಪ್ರೀತಿ.

ಕುವೆಂಪು ಅವರ ಸಾಹಿತ್ಯದಿಂದ ರಾಜಕೀಯವಾಗಿ ಬೆಳೆದ ಜನರಲ್ಲಿ ಜಾಗೃತಿ ಮೂಡಿಸಿದ ಜವರಪ್ಪಗೌಡರು ಪ್ರತಿಪಾದಿಸುತ್ತಿದ್ದ ಕರ್ನಾಟಕ ಏಕೀಕರಣವನ್ನು ವಿರೋಧಿಸಲೆಂದೇ 'ವಿಶ್ವಾಮಿತ್ರ' ವಾರಪತ್ರಿಕೆ ಪ್ರಾರಂಭಿಸಿ ನಡೆಸಿದ ಹೋರಾಟ

ಕುವೆಂಪು ಅವರ ವಿರುದ್ಧ ಹೋರಾಟ ವಿಪರ್ಯಾಸವಲ್ಲವೆ ಎನ್ನುವವರಿದ್ದಾರೆ.

ಕರ್ನಾಟಕ ಏಕೀಕರಣದಿಂದ ಕರ್ನಾಟಕದಲ್ಲಿ ಲಿಂಗಾಯಿತರ ಕೈ ಮೇಲಾಗದಂತೆ ಏಕೀಕರಣ ವಿರೋಧಿಗಳಾಗಿದ್ದ ಉತ್ತರಕರ್ನಾಟಕದ ಕೆಲವು ಬ್ರಾಹ್ಮಣರು ಇಂಗ್ಲೀಷ್ ಪತ್ರಿಕೋದ್ಯಮಿಗಳಿಂದ ಲೇಖನ ಬರೆಸಿ ಪ್ರಕಟಿಸುತ್ತಿದ್ದರು. ಅಲ್ಲಿನ ಬ್ರಾಹ್ಮಣ ಜನರಿಗೆ ಲಿಂಗಾಯಿತರೆಂದರೆ ಏನೋ ಭೀತಿ.

ವಿಧಾನಸಭೆ, ವಿಧಾನಪರಿಷತ್‌ಗಳ ಸಭೆಗಳಿಗೇಕೆ ಸದಸ್ಯರಾಗಲು ಪ್ರಯತ್ನ ಮಾಡಲಿಲ್ಲ ಎಂಬ ಪ್ರಶ್ನೆಗೆ ಜವರಪ್ಪಗೌಡರು. ಈ ಪ್ರಶ್ನೆಗೆ "ಒಡವೆ ವಸ್ತು ವಿಕೊಲ್ಲ ಮುರ್ವ ಇಲ್ಲದ ಒಲ್ಲ" ಎಂಬ ನಾಣ್ನುಡಿಯಂತಹುದಲ್ಲ. ನನಗೂ ಆಹ್ವಾನ ಬಂದಿತ್ತು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕೋಶಾಧ್ಯಕ್ಷರಾಗಿದ್ದ ಜಮುನಾಲಾಲ್ ಬಜಾಜ್ ಹೆಸರು ವಿಶ್ವವಿಖ್ಯಾತವಾದುದು ದಾನಿಗಳ ಶ್ರೇಣಿಯಲ್ಲಿ, ಕಾರಣ ಆಚಾರ್ಯ ವಿನೋಬ ಅವರ ಪವನಾರ ಆಶ್ರಮ. ಗಾಂಧೀಜಿ ಅವರ ಸೇವಾಗ್ರಾಮಗಳಿಗಾಗಿ ಐದಾರು ಸಾವಿರ ಎಕರೆ ಜಮೀನು ದಾನ ಮಾಡಿದರು. ಈ ಮಹಾದಾನಿಗೆ ಬ್ರಿಟಿಷ್ ಸರ್ಕಾರ ನೈಟ್‌ಹುಡ್ ಬಿರುದು ದಯಪಾಲಿಸಿತು. ಜಮುನಾಲಾಲ್ ಬಜಾಜ್ ಅವರು ಉತ್ತರಿಸಿ ಅಂತ್ಯದವರೆಗೆ ಪಾಲಿಸಿಕೊಂಡು ಬರುವುದು ಬಹುತ್ರಾಸವಾದುದಾಗಿ ತಾವು ನೀಡುವ ಬಿರುದನ್ನು ನಾನು ಧರಿಸಲಾರೆ ಎಂದರಂತೆ. ಕಾರಣ ಬಿರುದು ಬಾವಲಿ ಗಳನ್ನು ಹೊತ್ತವ ರಾತ್ರಿ ನಿದ್ರೆಯಲ್ಲೂ ಜಾಗರೂಕನಾಗಿ ಎಚ್ಚರ ವಹಿಸಬೇಕು.

ನನಗೂ ಸಹ ವಿಧಾನಸಭೆಯಿಂದ ವಿಧಾನಪರಿಷತ್ತಿಗೆ ಸದಸ್ಯನಾಗಲು ಅವಕಾಶ ಕಲ್ಪಿಸಿ ಡಿಪಾಜಿಟ್ ಹಣ ಸಹ ಕೊಟ್ಟರು. ಶಿವಪುರ ಅಧಿವೇಶನ ನಡೆಸಲು ಜಮೀನು ಮತ್ತು ವಸತಿ ಬಿಟ್ಟುಕೊಟ್ಟ ಶಿವಪುರ ಪಿ. ತಿರುಮಲೇಗೌಡರಿಗೆ ಅಸಾಧ್ಯ ತೊಂದರೆ ಯಿತ್ತರಲ್ಲದೆ ಅವರು ನಡೆಸುತ್ತಿದ್ದ ಹೆಂಡದ ಬಾಬಿನಿಂದ ಅಪಾರ ನಷ್ಟವನ್ನುಂಟು ಮಾಡಿದ್ದು ಆರ್ಥಿಕವಾಗಿ ತೊಂದರೆ ಅನುಭವಿಸಿದ ಪಿ. ತಿರುಮಲೇಗೌಡರಿಗೆ ಆ ಸ್ಥಾನ ವನ್ನು ಕೊಡುವಂತೆ ಶಿಫಾರಸು ಮಾಡಿ ಪಿ. ತಿರುಮಲೇಗೌಡರ ತ್ಯಾಗಕ್ಕೆ ಒಂದು ಮೆರಗು ನೀಡುವ ಭಾಗ್ಯ ನನಗೆ ಬಂದಿದ್ದುದು ಮಹಾಭಾಗ್ಯ ಎಂದುಕೊಂಡಿದ್ದೇನೆ.

ಕರಡಹಳ್ಳಿ ಕೆ. ಎಂ. ಕೃಷ್ಣಪ್ಪಗೌಡರು ಕಾಂಗ್ರೆಸ್ಸಿನ ಒಳಗುಂಪಿನ ನಾಯಕ ಸಾಹುಕಾರ್ ಚನ್ನಯ್ಯನವರ ಗುಂಪಿನಲ್ಲಿದ್ದರು.

ಅವರ ಮಗ ಕೆ. ಸಿಂಗಾರೀಗೌಡರು ನಮ್ಮ ಯುವ ಗುಂಪಿನಲ್ಲಿದ್ದು ರಚನಾತ್ಮಕ ಕೆಲಸಕ್ಕೆ ಸಹಾಯಕರಾಗಿದ್ದರು. ದಿವಂಗತ ಟಿ. ಸುಬ್ರಮಣ್ಯಂ ಮತ್ತು ಹನುಮಂತಯ್ಯ ನವರು ನನ್ನನ್ನು ನಾಗಮಂಗಲದಿಂದ ವಿಧಾನಸಭೆಗೆ ನಿಲ್ಲಲು ಪ್ರೋತ್ಸಾಹಿಸಿದರು. ನಾನು ಒಪ್ಪಲಿಲ್ಲ. ನನ್ನ ಸ್ನೇಹಿತ ಸಿಂಗಾರಿಗೌಡರಿಗೆ ಸ್ಥಾನ ದೊರಕಿಸಿಕೊಡಲು ಹೇಳಿಕೊಂಡೆ. ಆದರೂ ನನಗೆ ಒತ್ತಾಯ ಮಾಡಲಾರಂಭಿಸಿದರು. ಹಾಳು ರಾಜಕೀಯ ದಲ್ಲಿ ಮಾವ ಭಾವಂದಿರಾದ ಮಾದಪ್ಪಗೌಡರು ಮತ್ತು ಸಿಂಗಾರಿಗೌಡರೇ ಚುನಾವಣೆಗೆ

ಎದುರಾದರು. ನಾನು ಯಾರನ್ನಾದರೂ ಏನನ್ನಾದರು ಎದುರಿಸಿ ನಿಲ್ಲಬಲ್ಲೆನಾದರು ಸ್ನೇಹಿತರನ್ನು ಎದುರು ಹಾಕಿಕೊಳ್ಳುವಾಗ ಸ್ವತಃ ನನ್ನ ಕೊರಳನ್ನೇ ಕೊಯ್ದುಕೊಳ್ಳುವಷ್ಟು ಅಧೀನನಾಗುತ್ತೇನೆಂದು ಹೇಳಿ ಕೃಷ್ಣಪ್ಪಗೌಡರಲ್ಲಿ ಕರೆದುಕೊಂಡು ಹೋಗಿ ಸಿಂಗಾರಿಗೌಡರಿಗೆ ಸ್ಥಾನ ಕೊಡಿಸುವಲ್ಲಿ ಯಶಸ್ವಿಯಾದೆ. ಬಜಾಜ್ ಹೇಳಿದಂತೆ ಮಾಜಿ ಆದಮೇಲೆ ಸವಲತ್ತುಗಳು ಕಮ್ಮಿಯಾಗಿ ಹಿಂದಲ್ಲ ಮೆರದ. ಈಗ ನೋಡು ಒಣ ಮರಕ್ಕೆ ಗಿಣಿ ಕಾಯ್ದುಂತಿದ್ದಾನೆ ಎನ್ನಿಸಿಕೊಳ್ಳುವುದಕ್ಕಿಂತ ಸಾದಾಸಾಚಾ ಮನುಷ್ಯನಂತೆ ಬಾಳುವ ಆಶೆ ನನ್ನದು.

ಹೀಗೆ ನಾನು ಸ್ನೇಹಿತನಿಗಾಗಿ ತ್ಯಾಗ ಮಾಡಿದುದು ಸರಿ ಎನ್ನುವಿರೋ ಅಥವಾ ಏನಾದರಾಗಲೀ ಸದಸ್ಯನಾಗಬೇಕಿತ್ತು ಎನ್ನುವಿರೋ ಎಂದು ಜವರಪ್ಪಗೌಡರು ನನಗೆ ಮರುಪ್ರಶ್ನೆ ಹಾಕಿದರು. ನಾನು ನಿರುತ್ತರನಾದೆ. ಜವರಪ್ಪಗೌಡರು ದೀರ್ಘಕಾಲ ಬಾಳಿ ಬೆಳೆಯಲು ಭಗವಂತನು ಅನುಗ್ರಹಿಸಲಿ.

ನಾ. ಸೂರ್ಯನಾರಾಯಣರಾವ್



# ಮಾತಿನ ಮೋಡಿಕಾರ

ಶ್ರೀ ಪಿ. ಎನ್. ಜವರಪ್ಪಗೌಡರನ್ನು ನಾನು ಮೊದಲು ಕಂಡದ್ದು 1970ರಲ್ಲಿ. ನಾಗಮಂಗಲದಲ್ಲಿ ನಡೆದ ಮೂರನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಸಂದರ್ಭದಲ್ಲಿ, ಬಿಳಿಯ ಶುಭ್ರವಾದ ಪಂಚೆ, ಅಷ್ಟೇ ಬಿಳಿಯ ಖಾದಿ ಜುಬ್ಬ, ಹೆಗಲ ಮೇಲೊಂದು ಚಿಕ್ಕದಾಗಿ ತಿದ್ದಿ ತೀಡಿ ಮಡಿಚಿದ ವಸ್ತ್ರ, ಮುಖವನ್ನಲಂಕರಿಸಿದ್ದ ಕನ್ನಡಕ—ಇವುಗಳಿಂದ ಮೇಲ್ನೋಟಕ್ಕೇ ಒಂದು ಬಗೆಯ ಅಭಿಪ್ರಾಯವನ್ನು ಎಂತಹವರಲ್ಲಿಯೂ ಮೂಡಿಸಬಲ್ಲ ಆಕರ್ಷಣೆ, ಹೊಸ ಪರಿಚಯವಾದರೂ ಎಷ್ಟೋ ವರ್ಷಗಳ ಪರಿಚಯವೆಂಬಂತೆ ಹತ್ತಿರವಾಗಿಸಿಕೊಳ್ಳುವ ಅವರ ಮಾತುಗಾರಿಕೆ, ಅವರಿಗೇ ವಿಶಿಷ್ಟವಾದ ಒಂದು ವರ ಅನಿಸಿತು. ಅಡೆತಡೆಯಿಲ್ಲದ ಅವರ ಮಾತು, ನಿದರ್ಶನಗಳ ಮಾಲೆಯನ್ನೇ ಪೋಣಿಸುತ್ತ ಎಂತಹ ಮಾತಿನಮಲ್ಲರನ್ನೂ ಮೂಕರಾಗಿಸುವ ಅವರ ಮಾತಿನ ಮೋಡಿ ತೀರ ಅಪರೂಪದ್ದೆನಿಸಿತು. ಅದು ಈಗ ಎಷ್ಟರ ಮಟ್ಟಿಗೆ ನನ್ನ ಅನುಭವಕ್ಕೆ ಬಂದಿದೆಯೆಂದರೆ ; ಎಲ್ಲಿಯಾದರೂ ನಿರರ್ಗಳವಾದ ಮಾತು ಕೇಳಿ ಬರುತ್ತಿದ್ದು, ಜನರ ಗುಂಪು ಸೇರಿದ್ದು, ನಗುವಿನ ಅಲೆ ಕೇಳಿಬರುತ್ತಿದ್ದರೆ—ಅಲ್ಲಿ ಜವರಪ್ಪಗೌಡರು ಇರಬಹುದೆಂದು ಯಾರಾದರೂ ಸುಲಭವಾಗಿ ಊಹಿಸಿಬಿಡಬಹುದು.

ಶ್ರೀ ಜವರಪ್ಪಗೌಡರ ಮಾತನ್ನು ಅಲ್ಲಿಂದ ಇಲ್ಲಿಯವರೆವಿಗೂ ಹಲವು ಸಂದರ್ಭಗಳಲ್ಲಿ ಕೇಳಿದ್ದೇನೆ. ಅವರಿಗೆ ಮಾತಾಡಲು ಸಭೆ ಸಮಾರಂಭಗಳೇ ಆಗಬೇಕೆಂದೇನೂ ಇಲ್ಲ. ಅವರು ನಿಂತಲ್ಲಿ ಕುಳಿತಲ್ಲಿ ಒಂದು ಮಜಬೂತಾದ ಭಾಷಣ ಆಗಿಯೇ ಬಿಡುತ್ತದೆ. ಅದಕ್ಕೆ ಜನರ ಗುಂಪು ಇಷ್ಟೇ ಇರಬೇಕೆಂದೇನೂ ಇಲ್ಲ. ವಿಷಯವೂ ಇಂತಹದೇ ಎಂದೇನೂ ಇಲ್ಲ. ಯಾವುದೋ ಒಂದರಿಂದ ಆರಂಭವಾಗಿ, ಇಹಪರಗಳ ವಿಷಯವೆಲ್ಲವನ್ನು ಆವರಿಸಿಬಿಡುತ್ತದೆ ಹಾಗೆಯೇ ಗಡಿಯ ಬಂಧವೂ ಅದಕ್ಕಿರುವುದಿಲ್ಲ. ಮಂಡ್ಯದ ಅಥವಾ ನಾಗಮಂಗಲದ ಯಾವುದೋ ಮೂಲೆಯ ಒಬ್ಬ ಬಡರೈತನಿಂದ ಅದು ಆರಂಭವಾಗಿ ಅಮೆರಿಕಾದ ಶ್ರೀಮಂತ ರೈತನವರೆಗೆ ವ್ಯಾಪಿಸಬಹುದು. ಹಾಗೆಯೇ ಭಾರತದ ಒಬ್ಬ ಪುಢಾರಿರಾಜಕಾರಣಿಯಿಂದ ಮೊದಲುಗೊಂಡು ಚರ್ಚಿಲ್‌ವರೆಗೆ ವ್ಯಾಪಿಸಬಹುದು. ಅವರು ಮಾತಿಗೆ ಆರಂಭಿಸಿದರೆ ವಿಷಯದ ಪ್ರದೇಶದ ಎಲ್ಲೆಯನ್ನು ದಾಟಿದಂತೆಯೇ, ಭಾಷೆಯ ಗಡಿಯನ್ನೂ ದಾಟುವುದು ಸಾಮಾನ್ಯ. ಕನ್ನಡ, ಇಂಗ್ಲಿಷ್, ಹಿಂದಿ ಇವುಗಳ ರಸಾಯನ ಅದಾಗಿರುತ್ತದೆ.

ಯಾವುದೋ ಸಮಾರಂಭದಲ್ಲಿ ಪಾಲ್ಗೊಳ್ಳಲು, ಅವರು ದೆಹಲಿಗೆ ಹೋಗಿದ್ದಾಗ ಒಮ್ಮೆ ಹೀಗಾಯಿತಂತೆ : ಅವರು ಎದ್ದು ಮಾತನಾಡಿ ಕುಳಿತ ಮೇಲೆ, ಪಕ್ಕದಲ್ಲಿದ್ದವ



ರೊಬ್ಬರು ಇವರನ್ನು ಕೇಳಿದರಂತೆ :

ಆತ : ಏನು, ನೀವು ರಾಜ್ಯಶಾಸ್ತ್ರ ಪದವೀಧರರೆ ?

ಇವರು : ಇಲ್ಲ, ಇನ್ನೂ ಕೆಳಗೆ

ಆತ : ಹಾಗಾದರೆ ಎಲ್. ಎಲ್. ಬಿ. ಓದಿರಬೇಕು ?

ಇವರು : ಇಲ್ಲ...ಇಲ್ಲ, ಇನ್ನೂ ಕೆಳಗೆ

ಆತ : ಸಾಹಿತ್ಯದ ಪದವೀಧರರಿರಬೇಕು ?

ಇವರು : ಇಲ್ಲ ಬಿಡಿ, ಇನ್ನೂ ಕೆಳಗೆ

ಆತ : ಇಂಟರ್ ಮೀಡಿಯೇಟ್ ಆದರೂ ಆಗಿರಬೇಕು ತಾನೆ ? ಮುಂದಿನ ಪ್ರಶ್ನೆ ತೋರದೆ ಕೇಳಿದರಂತೆ. ಆ ವ್ಯಕ್ತಿ ಇವರ ಭಾಷಣದ ವೈಖರಿಯನ್ನು, ವಿಷಯದ ವ್ಯಾಪ್ತಿಯನ್ನು, ಭಾಷೆಯ ಮೋಡಿಯನ್ನು ಕಂಡು—ಕೇಳಿ ಬೆರಗಾಗಿ, ಸಾಧ್ಯವಾದ ಎಲ್ಲ ಪ್ರಶ್ನೆಗಳನ್ನು ಎಡೆಬಿಡದೆ ಕೇಳಿರಬೇಕು. ಇವರೂ ಅಷ್ಟೇ ತಾಳ್ಮೆಯಿಂದ, ಗಂಭೀರವಾಗಿ ಒಂದೊಂದಕ್ಕೂ ಉತ್ತರಿಸುತ್ತ ಕೊನೆಗೆ 'ನಾನು ಎಲ್. ಎಸ್.' ಎಂದರಂತೆ. ಬಹುಶಃ ಆ ವ್ಯಕ್ತಿಗೆ ಗಾಬರಿಯಾಗಿರಬೇಕು. ಅವರ ಮಾತುಗಾರಿಕೆಯನ್ನು ಗಮನಿಸಿದ ಯಾರಿಗೂ ಹಾಗೆನ್ನಿಸುವುದು ಸಹಜ.

ಎಂತಹದೇ ವಿಷಯವನ್ನು ಅತ್ಯಂತ ಸ್ವಾರಸ್ಯವಾಗಿ ಬಣ್ಣಿಸಿ ಹೇಳುವ ಕಲೆಗಾರಿಕೆ ಜವರಪ್ಪಗೌಡರಿಗೆ ಸಿದ್ಧಿಸಿದೆ. ಅವರ ಜೊತೆಯಲ್ಲಿದ್ದಾಗ ಗಂಟೆಗಳು ನಿಮಿಷಗಳಾಗಿ ಬಿಡುತ್ತವೆ. ಅವರು ತಮ್ಮ ಮಾತಿನ ಬಣ್ಣದ ಕುದುರೆಯ ಮೇಲೆ ಜೊತೆಯವರನ್ನೂ ಕೂರಿಸಿಕೊಂಡು ವಿಶ್ವಪರ್ಯಟನೆ ಮಾಡಿಸಿ ಬಿಡುತ್ತಾರೆ. ಅವರಿಗೆ ಯಾವ ಒಂದು ವಿಷಯವೂ, ಯಾವ ಒಬ್ಬ ವ್ಯಕ್ತಿಯೂ, ಯಾವ ಒಂದು ಧರ್ಮ ಜಾತಿ ಅಥವಾ ಭಾಷೆಯೂ ಬೇರೆಯಾದುದಲ್ಲ–ದೂರವಾದುದಲ್ಲ. ಹಲವು ವಿಚಾರಗಳಲ್ಲಿ ಅವರೊಂದು ನಡೆದಾಡುವ ವಿಶ್ವಕೋಶ.

ಅಂದರೆ, ಜವರಪ್ಪಗೌಡರು ಬರಿಯ ಮಾತುಗಾರರೆಂದಲ್ಲ ಅಥವಾ ಮಾತೇ ಅವರ ಬಂಡವಾಳವೆಂದೂ ಅಲ್ಲ. ಅವರೊಬ್ಬ ರಾಜಕಾರಣಿ, ಸ್ವಾತಂತ್ರ್ಯ ಹೋರಾಟಗಾರ, ಪ್ರತ್ರಿಕೋದ್ಯಮಿ, ಸಮಾಜ ಸುಧಾರಕ, ಸಾಹಿತ್ಯ ಪ್ರಿಯ, ಸ್ನೇಹ ಪ್ರಿಯ, ಉದಾರಿ, ತತ್ವನಿಷ್ಠ ವಿಚಾರವಾದಿ, ಅತಿಥಿಸತ್ಕಾರಕ್ಕೆ ಹೆಸರಾದ ವ್ಯಕ್ತಿ . ಇತ್ಯಾದಿ ಇತ್ಯಾದಿ. ಏಕೆಂದರೆ ಪ್ರಪಂಚದ ಯಾವ ಒಂದು ವಿಷಯವನ್ನೂ ಅವರು ಕಡೆಗಣಿಸಿದವರಲ್ಲ. ವಿಷಯ ಸಂಗ್ರಹ ಅವರಿಗೆ ಪ್ರಿಯವಾದ ಹವ್ಯಾಸ. ಅಪಾರವಾದ ಜ್ಞಾಪಕಶಕ್ತಿ ಅವರದ್ದು. ಏನೇ ಸಿಕ್ಕಿದರೂ ಓದಿ ಅರಗಿಸಿಕೊಂಡು ತಮ್ಮದಾಗಿಸಿಕೊಳ್ಳುವ ಶಕ್ತಿ ಅವರಿಗಿದೆ. ಹಾಗೆ ತಮ್ಮದಾಗಿಸಿಕೊಂಡದ್ದನ್ನು ಇತರರಿಗೂ ಹಂಚಿ, ಜ್ಞಾನದಾಸೋಹ ಮಾಡುವುದು ಬಹು ಪ್ರಿಯವಾದ ವಿಚಾರ ಅವರಿಗೆ. ಅವರ ಸಂಪರ್ಕ ಪಡೆದ ಯಾರಿಗಾದರೂ ಈ ಅನ್ನದಾಸೋಹ ಮತ್ತು ಜ್ಞಾನದಾಸೋಹದ

ಪರಿಚಯ ಆಗಿಯೇ ಇರುತ್ತದೆ. ಈ ಸಮಾಜ, ಈ ದೇಶದ ಬಗೆಗೆ ಹೆಚ್ಚು ಕಾಳಜಿಯನ್ನು ಹೊಂದಿದವರು. ಅವರ ಪ್ರತಿಯೊಂದು ಮಾತಿನಲ್ಲಿಯೂ ಈ ಅಂಶ ಕಂಡುಬರುತ್ತದೆ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಾಗ ಅವರು ಮಾಡಿದ ಕಾರ್ಯಗಳು ಈ ಅಂಶವನ್ನು ವ್ಯಕ್ತಪಡಿಸುವುದಷ್ಟೇ ಅಲ್ಲದೆ, ಅವರೊಬ್ಬ ದಕ್ಷ ಆಡಳಿತಗಾರರೆಂಬುದನ್ನು ದೃಢಪಡಿಸುತ್ತದೆ. ಪತ್ರಿಕೋದ್ಯಮಿಯಾಗಿ ಅವರು ನಿರ್ವಹಿಸಿದ ಕಾರ್ಯಗಳು ಯಾರೂ ಮರೆಯುವಂತಹುವಲ್ಲ. ರಾಷ್ಟ್ರಮಟ್ಟದ ರಾಜಕಾರಣಿಗಳ ನಿಕಟ ಸಂಪರ್ಕ ಹೊಂದಿದ್ದ ಅವರು ರಾಷ್ಟ್ರದ—ರಾಜ್ಯದ ಸಮಸ್ಯೆಗಳನ್ನು ಕುರಿತ ಚರ್ಚೆಯಲ್ಲಿ ಅವರೊಂದಿಗೆ ಪಾಲ್ಗೊಳ್ಳುವಷ್ಟು ವ್ಯಕ್ತಿತ್ವವನ್ನು ಬೆಳೆಸಿಕೊಂಡವರು.

ನಾನು ಕಂಡಹಾಗೆ ಶ್ರೀ ಜವರಪ್ಪಗೌಡರ ಕ್ಷೇತ್ರ ಒಂದೆರಡಲ್ಲ. ಕೆಲವರಿಗೆ ಅವರ ವ್ಯಕ್ತಿತ್ವ ದ್ವಂದ್ವದಂತೆ ಅನ್ನಿಸಬಹುದು. ಕಾರಣ, ಅವರು ಕುವೆಂಪು ಅವರ ವೈಚಾರಿಕವಿಚಾರಗಳ ಆರಾಧಕರು. ಅಷ್ಟೇ ಅಲ್ಲ, ಅವರ ಈ ವಿಚಾರಧಾರೆಯನ್ನು ಹಲವು ರೂಪದಲ್ಲಿ, ಹಲವು ರೀತಿಯಲ್ಲಿ ಸಾಮಾನ್ಯ ಜನರಿಗೆ ತಲುಪಿಸುವ ಕಾರ್ಯವನ್ನು ಸ್ವತಃ ಕೈಗೊಂಡವರು. ಅಷ್ಟೇ ಅಲ್ಲ, ಅವನ್ನು ಸಾಧ್ಯವಾದಷ್ಟು ತಮ್ಮ ಬದುಕಿನಲ್ಲಿ ಅನುಷ್ಠಾನಕ್ಕೆ ತಂದವರು. ದೇವರು, ಧರ್ಮ, ಜಾತಿ, ಮೂಢನಂಬಿಕೆ, ಅನಗತ್ಯವಾದ ಅನಾವಶ್ಯಕವಾದ ಖರ್ಚು ಇತ್ಯಾದಿಗಳ ಬಗ್ಗೆ ಶ್ರೀ ಕುವೆಂಪು ಅವರು ಹೇಳಿದ ವಿಚಾರಗಳನ್ನು ಶ್ರೀಸಾಮಾನ್ಯನಿಗೆ ತಲುಪಿಸುವ ಕೆಲಸವನ್ನು ಅವರು ಶ್ರದ್ಧೆಯಿಂದ ಮಾಡುತ್ತ ಬಂದಿದ್ದಾರೆ. ಅದಕ್ಕಾಗಿ ತಮ್ಮ ಕೈಯಿಂದ ಹಣ ಹಾಕಿ ಕೈ ಸುಟ್ಟುಕೊಂಡರೂ ಅದನ್ನು ಲೆಕ್ಕಿಸದೆ ಮುಂದುವರಿಸಿದ್ದಾರೆ. ಕುವೆಂಪು ಅವರು ರೂಪಿಸಿದ 'ಮಂತ್ರ-ಮಾಂಗಲ್ಯ'ವನ್ನು ತಮ್ಮ ಮನೆಯಲ್ಲಿಯೇ ತಮ್ಮ ಮಕ್ಕಳಿಗೆ ಅನುಸರಿಸುವುದರಲ್ಲಿ, ತಾನೊಬ್ಬ ಬರಿಯ ಮಾತಿನಮಲ್ಲ ಮಾತ್ರ ಅಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಮೂಢನಂಬಿಕೆಯ ಅಥವಾ ಹಳೆಯ ಬೂಸ ಸಂಪ್ರದಾಯಗಳ ವಿರುದ್ಧ, ಶ್ರೀ ಕುವೆಂಪು ಅವರ ವಿಚಾರಗಳನ್ನು ಬೆರೆಸಿ ಸಮಾಜದ ಕಣ್ತೆರೆಸುವ ಕಾರ್ಯವನ್ನು ಮಾಡುತ್ತ ಬಂದಿರುವ ಜವರಪ್ಪಗೌಡರು, ಶ್ರೀ ಆದಿಚುಂಚನಗಿರಿ ಮಠದ ನಿಕಟ ಸಂಪರ್ಕವನ್ನುಹೊಂದಿದ್ದಾರೆ. ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಪರಮಭಕ್ತರೂ ಹೌದು. ಇದು ಯಾರಿಗಾದರೂ ಅನಿಸಬಹುದು-ಜವರಪ್ಪಗೌಡರಿಗೆ ಅದೂ ಬೇಕು, ಇದೂ ಬೇಕು ಎಂದು. ಆದರೆ ಇದು ಸಾಮಾನ್ಯ ತಿಳುವಳಿಕೆ ಅದಿಷ್ಟು ಅಷ್ಟೇ. ಜವರಪ್ಪಗೌಡರು ಸಮನ್ವಯ ದೃಷ್ಟಿಯುಳ್ಳವರು. ಯಾವುದೇ ವಿಚಾರವನ್ನು ಸಮಕಾಲೀನ ದೃಷ್ಟಿಯಿಂದ ವಿಚಾರಮಾಡಿ ಅರ್ಥೈಸಬಲ್ಲ ಶಕ್ತರು. ಹಳೆಯ ತಲೆಮಾರಿನವರಾದರೂ ಅಪ್ಪ ಹಾಕಿದ ಆಲದಮರ ಎಂದು ನೇಣು ಹಾಕಿಕೊಳ್ಳಲು ಇಚ್ಛಿಸುವ ಸ್ವಭಾವದವರಲ್ಲ. ಸಂಪ್ರದಾಯದ ಸಂಕೋಲೆಯನ್ನು ಕಿತ್ತೊಗೆದು ಆಧುನಿಕ ಬದುಕಿಗೆ

ಆಶಿಸಿದವರು. ಆದರ ಹೊರತು ಸಮಾಜದ ಮುನ್ನಡೆ, ಶ್ರೀ ಸಾಮಾನ್ಯನ ಮುನ್ನಡೆ ಸಾಧ್ಯವಿಲ್ಲ ಎಂಬುದನ್ನು ಕುವೆಂಪು ಅವರಂತಹವರ ವಿಚಾರವಾದಗಳಿಂದ ಅರಿತವರು, ಮತ್ತು ಅದನ್ನು ಅನುಸರಿಸಿ ಉಳಿದವರಿಗೂ ಮಾರ್ಗದರ್ಶಿಯಾದವರು.

ಮಠಗಳು, ಅದರ ಅಧಿಪತಿಗಳು ಒಂದು ಕಾಲಕ್ಕೆ ಕೇವಲ ಸಂಕುಚಿತ ಧರ್ಮದ ಹಾಗೂ ಸಂಕುಚಿತ ಜಾತಿ ಮತಗಳ ಕೇಂದ್ರವಾಗಿದ್ದದ್ದು ನಿಜ. ಆದರೆ ಇಂದು ಹಾಗಿಲ್ಲ. ಅವುಗಳ ಕಾರ್ಯಕ್ಷೇತ್ರ ವ್ಯಾಪಿಸಿದೆ. ಧ್ಯೇಯೋದ್ದೇಶಗಳು ಬೇರೆಯಾಗಿವೆ. ಕೇವಲ ಧರ್ಮದ ಪಠಣವನ್ನು ಬಿಟ್ಟು ಹೊರಬಂದು, ಸಮಾಜದ ರಾಷ್ಟ್ರದ ಸರ್ವತೋಮುಖವಾದ ಅಭಿವೃದ್ಧಿಗೆ ದುಡಿಯುವ ಕೇಂದ್ರಗಳಾಗಿವೆ. ಶಿಕ್ಷಣಕ್ಷೇತ್ರದಲ್ಲಿ ಇಂದು ಅವುಗಳು ವಹಿಸುತ್ತಿರುವ ಪಾತ್ರ ಗಣನೀಯವಾದದ್ದು. ಸಮಾಜ ಸುಧಾರಣೆಯತ್ತಲೂ ಅವು ಕಾಲಿರಿಸಿವೆ. ಈ ಹಿನ್ನೆಲೆಯಲ್ಲಿ ಶ್ರೀ ಜವರಪ್ಪಗೌಡರು ಕುವೆಂಪು ಹಾಗೂ ಸ್ವಾಮೀಜಿ ಅವರುಗಳ ಸಂಪರ್ಕವನ್ನು ನಿಕಟವಾಗಿ ಇಟ್ಟುಕೊಂಡು ಬಂದವರು. ಆ ಕಾರಣಕ್ಕಾಗಿಯೇ ಜವರಪ್ಪಗೌಡರು ಈ ಇಬ್ಬರು ಮಹಾನ್ ವ್ಯಕ್ತಿಗಳನ್ನು ಒಟ್ಟುಗೂಡಿಸಿ, ವಿಚಾರ ವಿನಿಮಯಕ್ಕೆ ಅವಕಾಶವಾಗುವಂತೆ ಸಂದರ್ಭ ಕಲ್ಪಿಸಿದ ಘಟನೆ ನನಗೆ ನೆನಪಿದೆ. ಶ್ರೀ ಕುವೆಂಪು ಅವರ ಕಾರ್ಯಕ್ಷೇತ್ರ ಬೇರೆ. ಶ್ರೀ ಸ್ವಾಮೀಜಿ ಅವರ ಕಾರ್ಯಕ್ಷೇತ್ರ ಬೇರೆ. ಆದರೆ ಶ್ರೀ ಗೌಡರು ಅವರಿಬ್ಬರ ವಿಚಾರಧಾರೆಯನ್ನು ಸಮನ್ವಯಗೊಳಿಸಿ ಫಲಪ್ರದವಾದ ರೀತಿಯಲ್ಲಿ ಅದು ಪರಿಣಮಿಸುವಂತೆ ಕಾರ್ಯ ನಿರ್ವಹಿಸಿ ಯಶಸ್ವಿಯಾದವರು. ಕೆಲವೊಂದು ವಿಚಾರಗಳು ಕೆಲವರ ಬಾಯಿಂದ ಬಂದಾಗಲೇ ಅವು ಹೆಚ್ಚು ಪರಿಣಾಮ ಬೀರುವುದು ಎಂಬುದನ್ನು ಚೆನ್ನಾಗಿ ಮನಗಂಡವರು ಜವರಪ್ಪಗೌಡರು. ಆ ಒಂದು ತಂತ್ರವನ್ನು ಅವರು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ.

ಅತ್ಯಂತ ಸರಸ, ಸರಳ ಜೀವಿಯಾದ ಗೌಡರು ಎಲ್ಲಿ ಹೋದರೂ ಎಂತಹ ಸಂದರ್ಭದಲ್ಲಿಯೂ ಸ್ನೇಹವನ್ನು ಸಂಪಾದಿಸಿಕೊಳ್ಳಬಲ್ಲ ಶಕ್ತರು. ದೇಶದ ಉದ್ದಗಲಕ್ಕೂ ಸುತ್ತಾಡಿರುವ ಅವರಿಗೆ ಎದುರಾದ ಯಾವೊಂದು ಸಮಸ್ಯೆಯೂ ಸಮಸ್ಯೆಯಾಗಿ ನಿಂತದ್ದಲ್ಲ. ಕ್ಷಣಾರ್ಧದಲ್ಲಿ ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವ ಯುಕ್ತಿ ಅವರಿಗೆ ದೈವದತ್ತವಾಗಿ ಬಂದಗುಣ. ಆದರೆ ಅದರಲ್ಲಿ ವಂಚನೆ ಇರುವುದಿಲ್ಲ. ಆತ್ಮೀಯವಾದ ಸ್ನೇಹದ ಮಾತುಗಾರಿಕೆ ಇರುತ್ತದೆ. ಎಲ್ಲರೂ ಒಂದೇ ಎಂಬ ವಿಶಾಲವಾದ ಮನೋಭಾವವಿರುತ್ತದೆ. ಯಾವುದೋ ಶಕ್ತಿ ಯಾರನ್ನೂ ಎಂದಿಗೂ ಎಲ್ಲಿಯೂ ಕೈಬಿಡುವುದಿಲ್ಲ ಎಂಬ ಅಚಲವಾದ ಆತ್ಮವಿಶ್ವಾಸ, ನಂಬಿಕೆ ಇರುತ್ತದೆ.

ಶ್ರೀ ಗೌಡರದ್ದು ಆಡಂಬರವಿಲ್ಲದ ಸರಳ ವ್ಯಕ್ತಿತ್ವ. ಯಾರನ್ನಾದರೂ ಆತ್ಮೀಯವಾಗಿ ಕಾಣುವ, ಮಾತನಾಡಿಸುವ ಸರಳ ಸ್ವಭಾವ. ಅವರ ಮನೆಯೊಂದು ಚಿಕ್ಕ ಅನ್ನಛತ್ರವೆಂದೇ ಹೇಳಬೇಕು. ಯಾರಾದರೂ ಸರಿ, ಮನೆಗೆ ಹೋಗುತ್ತಿದ್ದಂತೆಯೇ.....

ಊಟದ ಹೊತ್ತೋ, ತಿಂಡಿಯ ಹೊತ್ತೋ ಆಗಿ, ಊರ ಹೊರಗಿನವರಾದರಂತೂ ಸರಿಯೇ ಬಿಡಿ, ಅತ್ಯಂತ ವಿಶ್ವಾಸದಿಂದ "ಹೇಗೂ ಬಂದಿರಿ, ಸ್ವಲ್ಪ ಮುಂಚಿತವಾಗಿ ಬರಬಾರದಿತ್ತೇ. ಈಗ ನೋಡಿ ಹೊತ್ತಿನಸಾರು ಊಟ ಮಾಡಬೇಕು'' ಎಂದು ಹೇಳಿ ಊಟಕ್ಕೆ ಎಬ್ಬಿಸಿಯೇ ಬಿಡುತ್ತಾರೆ. ಕೂಡಲೇ ''ಮಗಾ, ನೋಡು ಬಂದಿದ್ದಾರೆ'' ಎಂದು ಕುಳಿತಲ್ಲಿಂದಲೇ ಕೂಗುತ್ತ ಬಂದವರ ಹೆಸರು ಹೇಳುತ್ತಾರೆ ಅಷ್ಟೇ. ಆಗಲೇ ಒಳಗಡೆ ಸಿದ್ಧತೆ ಆರಂಭವಾಗುತ್ತದೆ. ಹೋದವರ್‍ಯಾರಿಗೂ ಆಗ ಬೇರೆಯವರ ಮನೆಯಲ್ಲಿ ಊಟ ಮಾಡುತ್ತಿದ್ದೇನೆ ಎಂದೆನಿಸುವುದೇ ಇಲ್ಲ ಅಂತಹ ಆತ್ಮೀಯವಾದ ಮಾತುಕತೆಯ ನಡುವೆ ಊಟದ ಕಾರ್ಯಕ್ರಮ ನಡೆಯುತ್ತಿರುತ್ತದೆ.

ಕಲ್ಲನ್ನೂ ಕೂಡ ಮಾತನಾಡಿಸಿ ಕರಗುವಂತೆ ಮಾಡಬಲ್ಲ ಗೌಡರು, ಯಾವ ಕಾರ್ಯವನ್ನಾದರೂ ಸುಲಭವಾಗಿ ಸಾಧಿಸಬಲ್ಲ ಚತುರರು. ವಿಚಾರವನ್ನು ಬಿತ್ತಿ ಕಣ್ತೆರೆಸಬಲ್ಲ ಮೋಡಿಕಾರರು. ಅಂತಹ ಆತ್ಮವಿಶ್ವಾಸ ಅವರದ್ದು. ಆದರೆ ಅವರು ಎಂದೂ ಅಂತಹದ್ದನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡವರಲ್ಲ. ಅವರಿಂದ ಹಲವರಿಗೆ ಉಪಯೋಗವಾಗುತ್ತದೆ ಎಂದು ಕಂಡಾಗ ಅದಕ್ಕಾಗಿ ಶ್ರಮಿಸಬಲ್ಲ ದೃಢ ಮನಸ್ಕರು.

ಕತೆ ಕಟ್ಟುವ ಕಲೆ ಮತ್ತು ಹೇಳುವ ಕಲೆ ಗೌಡರಿಗೆ ಸಿದ್ಧಿಸಿದ್ದು. ಅವರು ಸ್ವಲ್ಪ ಬರವಣಿಗೆಯನ್ನು ರೂಢಿಸಿಕೊಂಡಿದ್ದಿದ್ದರೆ ಅವರೊಬ್ಬ ಒಳ್ಳೆಯ ಬರಹಗಾರರಾಗಿ ಖ್ಯಾತಿಗಳಿಸುತ್ತಿದ್ದರು ಎಂದು ಹಲವರಿಗೆ ಅನ್ನಿಸುವಂತೆ ನನಗೂ ಹಲವು ಬಾರಿ ಅನ್ನಿಸಿದೆ. ಏಕೆಂದರೆ ಅವರ ಅನುಭವ ಅಷ್ಟೊಂದು ದೊಡ್ಡದು. ಅದು ಮುಗಿಯದ ಕಣಜ. ಅದರಲ್ಲಿ ರಾಜಕೀಯವಾದ, ಧಾರ್ಮಿಕವಾದ, ಸಾಮಾಜಿಕ ವಾದ, ಆರ್ಥಿಕವಾದ ವಿವಿಧ ವಿಷಯಗಳ ಮುತ್ತುರತ್ನಗಳು ಕಿಕ್ಕಿರಿದು ತುಂಬಿವೆ. ಮತ್ತೆ ಅವನ್ನು ಸ್ವಾರಸ್ಯವಾಗಿ ಪೋಣಿಸಿ ಹೇಳುವ ಕಲಾತ್ಮಕ ಶೈಲಿ ಅವರಿಗೆ ದೈವದತ್ತವಾಗಿಯೇ ಬಂದಿದೆ. ಹಾಗಾಗಿ ಅವರು ಸೇರಿದೆಡೆ ಅವರ ಮಾತಿಗಾಗಿ ಜನ ಸುತ್ತುವರಿಯುತ್ತಾರೆ. ಅವು ಆ ಕ್ಷಣಕ್ಕೆ ನಮ್ಮನ್ನು ನಗುವಂತೆ ಮಾಡಬಹುದು, ಆದರೆ ಅದರ ಹಿಂದೆ ಅಡಗಿರುವ ವಿಚಾರ ನಮ್ಮನ್ನು ಅನಂತರ ಆಲೋಚನೆಗೆ ತೊಡಗಿಸುತ್ತದೆ. ಇದು ಅವರ ಮಾತುಗಳ ವೈಶಿಷ್ಟ್ಯ. ಹೀಗೆಂದ ಮಾತ್ರಕ್ಕೆ ಶ್ರೀ ಗೌಡರು ನೂರಕ್ಕೆ ನೂರರಷ್ಟು ಪರಿಶುದ್ಧರೆಂದು ನನ್ನ ಅಭಿಪ್ರಾಯವಲ್ಲ. ಅವರಲ್ಲಿಯೂ ಕೆಲವು ನ್ಯೂನ್ಯತೆಗಳು ಇರಬಹುದು. ಆದರೆ ಅವು ನನ್ನ ಗಮನಕ್ಕೆ ಬಂದಿಲ್ಲ. ಗಾಂಧಿ, ನೆಹರುಗಳಂತಹವರಲ್ಲಿಯೇ ಇಂತಹ ನ್ಯೂನ್ಯತೆಗಳನ್ನು ಹುಡುಕುವ ಜನಕ್ಕೆ ಗೌಡರಲ್ಲಿ ಹುಡುಕುವುದು ಕಷ್ಟವೇನೂ ಅಲ್ಲ. ಮಾನವ ಸಹಜವಾದ ದೌರ್ಬಲ್ಯಗಳು ಅವರಲ್ಲಿಯೂ ಇರಬಹುದು ಇಲ್ಲದೆಯೂ ಇರಬಹುದು. ಆದರೆ ಅವೆಲ್ಲವನ್ನೂ ಮೀರಿದ ಕೆಲವೊಂದು ಮಾನವೀಯ ಗುಣಗಳು ಅವರಲ್ಲಿ ಎದ್ದು ಕಾಣುತ್ತವೆ. ಒಬ್ಬ ಮನುಷ್ಯನಾಗಿ ಆತ ಏನೆಲ್ಲ ಒಳ್ಳೆಯ ಗುಣಗಳನ್ನು ಗಳಿಸಿಕೊಂಡಿದ್ದಾನೆ ಎಂದು ಆಲೋಚಿಸುವಾಗ ಶ್ರೀ

ಗೌಡರು ಅದರಲ್ಲಿ ಉತ್ತೀರ್ಣರಾಗುತ್ತಾರೆ.

ಶ್ರೀ ಜವರಪ್ಪಗೌಡರ ಮತ್ತು ನನ್ನ ಮಧ್ಯದ ವಯಸ್ಸಿನ ಅಂತರ ಬಹಳ ದೊಡ್ಡದು. ಆದರೆ ಯಾರೊಂದಿಗೂ ಅಂತಹುದನ್ನು ಲೆಕ್ಕಿಸುವ ಸ್ವಭಾವ ಅವರದ್ದಲ್ಲ. ಅಂದಿನಿಂದ ಇಂದಿನವರೆವಿಗೂ ಅವರು ನನ್ನಲ್ಲಿ ಪ್ರೀತಿ-ವಿಶ್ವಾಸಗಳ ಮಳೆಗರೆದಿದ್ದಾರೆ. ಸ್ನೇಹಿತನಂತೆ ನಡೆಸಿಕೊಂಡಿದ್ದಾರೆ. ಹತ್ತಿರದ ಬಂಧುವಿನಂತೆ ನೋಡಿಕೊಂಡಿದ್ದಾರೆ. ಬಹುಶಃ ಯಾವುದೇ ವ್ಯಕ್ತಿಯಿಂದ ಇದಕ್ಕಿಂತ ಹೆಚ್ಚು ನಿರೀಕ್ಷಿಸುವುದು ದುರಾಸೆ ಯೆನಿಸೀತು. ಅವರು ಶತಾಯುವಾಗಿ ಇನ್ನೂ ಹತ್ತಾರು ವರ್ಷಗಳ ಕಾಲ ಸುಖದ, ಶಾಂತಿಯ, ನೆಮ್ಮದಿಯ ಬದುಕಿನೊಂದಿಗೆ ನಮ್ಮಗಳ ನಡುವೆ ಇರುವಂತಾಗಲಿ ಎಂದು ಈ ಸಂದರ್ಭದಲ್ಲಿ ಆಶಿಸುತ್ತೇನೆ.

ಡಾ. ಡಿ. ಕೆ. ರಾಜೇಂದ್ರ

## ಕರ್ನಾಟಕದ ಇತಿಹಾಸ

ಶ್ರೀ ಜವರಪ್ಪಗೌಡರ ಪರಿಚಯವನ್ನು ಪ್ರಸ್ತಾಪಿಸುವುದೆಂದರೆ ಅದು ಮೈಸೂರು ರಾಜ್ಯದ, ಅರ್ಥಾತ್ ಕರ್ನಾಟಕ ರಾಜ್ಯದ ರಾಜಕೀಯದ ಸೂಕ್ಷ್ಮ ಇತಿಹಾಸವೆಂದೇ ಹೇಳಬಹುದು. ಈ ರಾಜ್ಯದ ರಾಜಕೀಯಇತಿಹಾಸವಲ್ಲಿ ಶ್ರೀ ಜವರಪ್ಪಗೌಡರು ಹಾಸುಹೊಕ್ಕಾಗಿ ಬೆಳೆದವರು. ಹಾಗಿರುವುದರಿಂವಲೇ ನಾನು ಮೇಲ್ಕಂಡ ಮಾತನ್ನು ಹೇಳುತ್ತಿದ್ದೇನೆ. ಮೈಸೂರುರಾಜ್ಯದ ರಾಜಕೀಯ ಚಟುವಟಿಕೆ ಸ್ವಾತಂತ್ರ್ಯದ ಮೊವಲ ಹೆಜ್ಜೆ ಪ್ರಾರಂಭವಾದುದು 1937ರಲ್ಲಿ. ಮುಂಬಯಿ ನಗರದ ಮೇಯರ್ ಹಾಗೂ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ವೀರ ನಾರೀ ಮನ್‌ರವರು ಮೈಸೂರು ರಾಜ್ಯದ ಸ್ಥಳೀಯ ಸಂಸ್ಥೆಗಳ ಸಮ್ಮೇಳನವನ್ನು ಉದ್ಘಾಟಿಸಲು 1937ನೆಯ ಅಕ್ಟೋಬರ್‌ತಿಂಗಳಲ್ಲಿ ಬೆಂಗಳೂರಿಗೆ ಆಗಮಿಸಿದರು. ಅಲ್ಲಿಯವರೆಗೆ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್‌ನ ಚಟುವಟಿಕೆಗಳು ಅಷ್ಟೊಂದು ಬಲಿಷ್ಠವಾಗಿರಲಿಲ್ಲ. ಹೆಸರಿಗೆ ಮಾತ್ರ ಕಾಂಗ್ರೆಸ್ ಇತ್ತೆಂದು ಹೇಳಬಹುದು. ಜನಬೆಂಬಲವುಳ್ಳ ಎಲ್ಲ ರಾಜಕೀಯ ಮುಖಂಡರುಗಳು ಕಾಂಗ್ರೆಸ್‌ನ ವಿರೋಧ ಪಕ್ಷವಾದ ಪ್ರಜಾಸಂಯುಕ್ತ ಪಕ್ಷದಲ್ಲಿದ್ದರು. ಆ ಪಕ್ಷ ಅಂದು ರಾಜ್ಯದ ಪ್ರಮುಖ ರಾಜಕೀಯ ಪಕ್ಷವಾಗಿತ್ತು. ನಾರೀಮನ್‌ರವರನ್ನು ಕರೆಸುವುದರಲ್ಲಿ ಇವರ ಪಾತ್ರವೂ ಇತ್ತು. ಇದೇ ಸಂದರ್ಭದಲ್ಲಿ ನಾರೀಮನ್‌ರವರು ಬೆಂಗಳೂರಿನ ಬಸಪ್ಪ ಪಾರ್ಕಿನಲ್ಲಿ ಮಾಡಿದ ಭಾಷಣ ರಾಜದ್ರೋಹದ್ದೆಂದು ಭಾವಿಸಿ, ಅವರ ಮೇಲೆ ಪ್ರತಿಬಂಧಕಾಜ್ಞೆ ಜಾರಿ ಮಾಡಿದ್ದು, ಈ ಮುಖಂಡರನ್ನು ಕೆರಳಿಸಿತು. ಅದು ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷ ಪುನರ್ಘಮಾನಕ್ಕೆ ಬರಲು ನಾಂದಿಯಾಯಿತೆಂದೇ ಹೇಳಬಹುದು.

1937ನೆಯ ಅಕ್ಟೋಬರ್ ತಿಂಗಳಲ್ಲಿ ಅಂದಿನ ಪ್ರಜಾಪ್ರತಿನಿಧಿ ಸಭೆ ಮೈಸೂರಿನಲ್ಲಿ ಸೇರುವುದಿತ್ತು. ಆ ಸಮಯದಲ್ಲಿ ಪ್ರಮುಖ ರಾಜಕೀಯ ಪಕ್ಷವಾದ ಪ್ರಜಾಸಂಯುಕ್ತ ಪಕ್ಷದವರು ಮೈಸೂರಿನ ಯಾಲಕ್ಕಪ್ಪಾಚಾರ್ಯರ ಛತ್ರದಲ್ಲಿ ಸಮಾವೇಶಗೊಂಡು ಕಾಂಗ್ರೆಸ್ ಪಕ್ಷ ಸೇರಬೇಕೆಂಬ ಚರಿತ್ರಾರ್ಹವಾದ ನಿರ್ಣಯವನ್ನು ತೆಗೆದುಕೊಂಡರು. ಅದು ಮೈಸೂರು ರಾಜಕೀಯದ ಒಂದು ಮೈಲುಗಲ್ಲು. ಈ ಪಕ್ಷ ಕಾಂಗ್ರೆಸ್ಸಿಗೆ ಸೇರಿದ್ದರಿಂದ ಪ್ರಜಾಪ್ರತಿನಿಧಿ ಸಭೆಯಲ್ಲಿ ಕಾಂಗ್ರೆಸ್ ಒಂದು ಪ್ರಮುಖ ರಾಜಕೀಯ ಪಕ್ಷವಾಯಿತು. ಇದು ಅಂದಿನ ದಿವಾನರಾದ ಸರ್ ಎಂ. ಮಿರ್ಜಾ ಇಸ್ಮಾಯಿಲ್‌ರವರನ್ನು ಉದ್ರೇಕಗೊಳಿಸಿತು. ಅವರ ಉದ್ರೇಕದ ಕಾವು ಕಾಂಗ್ರೆಸ್ಸಿನವರಿಗೆ ತಟ್ಟಿ ರಾಜ್ಯದಲ್ಲಿ ಕಾಂಗ್ರೆಸ್ ಪ್ರಚಾರ ಬಲಗೊಂಡಿತು. ಆ ಸಮಯದಲ್ಲಿ ಶ್ರೀ

ಪಿ. ಎನ್. ಜವರಪ್ಪಗೌಡರು ಮತ್ತು ನಾನು ಕಾಂಗ್ರೆಸನ್ನು ಸೇರಿದೆವು.

1938 ಮೈಸೂರು ಕಾಂಗ್ರೆಸ್‌ನ ಇತಿಹಾಸದಲ್ಲಿ ಮತ್ತೊಂದು ಅಧ್ಯಾಯ. ಹರಿಪುರದಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಹೋದಂತೆ ಮೈಸೂರಿನ ಕಾಂಗ್ರೆಸ್ ನಾಯಕರು ರಾಜ್ಯದಲ್ಲಿ ಕಾಂಗ್ರೆಸ್ ಅಧಿವೇಶನವನ್ನು ನಡೆಸಬೇಕೆಂಬ ನಿರ್ಧಾರಕ್ಕೆ ಬಂದರು. ಹಿಂದಿರುಗಿ ಬಂದು ಸಮ್ಮೇಳನ ನಡೆಸುವ ವ್ಯವಸ್ಥೆ ಪ್ರಾರಂಭವಾಯಿತು. ಎಲ್ಲಿ ನಡೆಸುವುದು ? ಏನು ? ಎಂಬಿತ್ಯಾದಿ ವಿಷಯಗಳು ಚರ್ಚೆಗೆ ಬಂದಾಗ ಆ ಸಮ್ಮೇಳನವನ್ನು ವಿಭಜಿತ ಮೈಸೂರುಜಿಲ್ಲೆಯ ಮದ್ದೂರುತಾಲ್ಲೂಕಿನ ಶಿವಪುರದಲ್ಲಿ ನಡೆಸಲು ನಿರ್ಧಾರವಾಯಿತು. ಸಾಹುಕಾರ ಚನ್ನಯ್ಯನವರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿಯ ರಚನೆಯೂ ಆಯಿತು. ಮದ್ದೂರಿನವರೇ ಆದ ಶ್ರೀ ಎಚ್. ಕೆ. ವೀರಣ್ಣಗೌಡರು ಕಾರ್ಯದರ್ಶಿಯಾಗಿ ಈ ಜವಾಬ್ದಾರಿಯನ್ನು ವಹಿಸಿಕೊಂಡರು. ಈ ಅಧಿವೇಶನ ನಡೆಸುವ ಬಗ್ಗೆ ಸರ್ಕಾರ ತುಂಬಾ ಅಡ್ಡಿ ಅಡಚಣೆಗಳನ್ನು ಉಂಟುಮಾಡಿದರೂ ; ಶಿವಪುರದ ತಿರುಮಲೇಗೌಡರು ತಮ್ಮ ಜಮೀನನ್ನು ಅಧಿವೇಶನವನ್ನು ನಡೆಸಲು ಬಿಟ್ಟುಕೊಟ್ಟರು. ಆ ಕಾಲದಲ್ಲಿ ಶ್ರೀ ಜವರಪ್ಪಗೌಡರು, ನಾನು ಪ್ರತಿನಿಧಿಗಳಾಗಿ, ಸ್ವಯಂ ಸೇವಕರಾಗಿ ಭಾಗವಹಿಸಿದೆವು. ಅಂದಿನಿಂದ ನಮ್ಮ ಸ್ನೇಹ ರಾಜಕೀಯ ಸ್ನೇಹವಾಗಿ ಬೆಳೆದು ಬಂದಿತು.

ಶಿವಪುರದ ಸತ್ಯಾಗ್ರಹ ಚರಿತ್ರಾರ್ಹವಾದುದು, ಅಲ್ಲಿಂದ ರಾಜ್ಯದಲ್ಲಿ ಧ್ವಜ ಸತ್ಯಾಗ್ರಹ ಆರಂಭವಾಯಿತು. ಅವರಲ್ಲಿ ಜವರಪ್ಪಗೌಡರ ಪಾತ್ರ ಪ್ರಮುಖವಾದುದು. 1938ರಲ್ಲಿ ಶ್ರೀ ಜವರಪ್ಪಗೌಡರು ಉಜ್ವಲ ದೇಶಾಭಿಮಾನಿ ಹಾಗೂ ಪ್ರಚಂಡ ಭಾಷಣಕಾರರಾಗಿ ಜಿಲ್ಲೆಯಲ್ಲಿ ತಮ್ಮದೇ ಆದ ರೀತಿಯಲ್ಲಿ ಮೆರೆದರು. ಬಂಧಿಸಲ್ಪಟ್ಟ ರಾಜಕೀಯ ಬಂದಿಗಳು ಮೇ ತಿಂಗಳಲ್ಲಿ ಬಿಡುಗಡೆ ಹೊಂದಿದರು. ಸರ್ದಾರ ಪಟೇಲರು ಆಚಾರ್ಯ ಕೃಪಲಾನಿಯವರು ರಾಜ್ಯಕ್ಕೆ ಬಂದು ಒಂದು ರೀತಿಯ ಒಪ್ಪಂದವನ್ನು ಮಾಡಿದ್ದರು. ಆದರೆ ಕೆಲಕಾಲ ಚಟುವಟಿಕೆಗಳು ಸ್ಥಗಿತವಾದಾಗ ನಾವು ಮೈಸೂರು ನಗರದಲ್ಲಿ ಅಶೋಕ ರಸ್ತೆಯ ಚೌಕದಲ್ಲಿ ಆಗತಾನೆ ಕಟ್ಟಿಸಲ್ಪಟ್ಟಿದ್ದ ಹೊಸ ಪೋಲೀಸ್ ಸ್ಟೇಷನ್ನಿಗೆ 'ಹ್ಯಾಮಿಲ್ಟನ್ ಕಟ್ಟಡ' ಎಂದು ಹೆಸರಿಡಲಾಗಿತ್ತು. ಆಂಗ್ಲರೊಬ್ಬರ ಹೆಸರು ನಮ್ಮ ಕಟ್ಟಡಕ್ಕೆ ಇಡುವುದು ಸರಿಯಲ್ಲ ಎಂದು ಸತ್ಯಾಗ್ರಹವನ್ನು ಪ್ರಾರಂಭಿಸಿದೆವು. ಸತ್ಯಾಗ್ರಹವೆಂದರೆ ಬೆಳಿಗ್ಗೆ ಸುಬ್ಬರಾಯನ ಕೆರೆಯಿಂದ ದೊಡ್ಡ ಮೆರವಣಿಗೆ ಹೊರಡುವುದು. ಸತ್ಯಾಗ್ರಹಿಗಳಲ್ಲಿ ಇಬ್ಬರು ಅಥವಾ ಮೂರು ಮಂದಿ ಮಣ್ಣಿನ ಮಡಿಕೆಯೊಂದರಲ್ಲಿ ಸುಣ್ಣದ ನೀರನ್ನು ತುಂಬಿಸಿ, ಅವರಲ್ಲೊಂದು ಪೊರಕೆ ಹಾಕಿ ಹಿಡಿದುಕೊಂಡು ಹೋಗುವುದು. ಕಟ್ಟಡದ ಹತ್ತಿರ ಹೋದಾಗ ಪೋಲೀಸರು ತಡೆಯುವುದು, ಸತ್ಯಾಗ್ರಹಿಗಳು ನಾವು ಅಳಿಸುವೇ ಅಳಿಸುತ್ತೇವೆ ಎಂದು ಮುಂದು ಮುಂದೆ ಹೋಗುವುದು. ಆಗ ಪೋಲೀಸರು ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡುವುದಾಗಿತ್ತು. ಇದರಲ್ಲಿ ಶ್ರೀ

ಜವರಪ್ಪಗೌಡರು ಬಂಧಿತರಾಗಿ ಶಿಕ್ಷೆಗೊಳಪಟ್ಟು ಮೈಸೂರು ಮತ್ತು ತೀರ್ಥಹಳ್ಳಿ ಜೈಲಿನಲ್ಲಿ ಖೈದಿಯಾಗಿದ್ದರು. ಹೀಗೆ ಅವರ ಸತ್ಯಾಗ್ರಹ ಚಟುವಟಿಕೆಗಳು ಮುಂದು ವರೆಯಿತು. ಅನಂತರ ಪ್ರತಿಬಂಧಕಾಜ್ಞೆ ಉಲ್ಲಂಘನೆ. 1942ರ ಬ್ರಿಟಿಷರೇ ಭಾರತ ಬಿಟ್ಟು ಹೊರಡಿ ಎಂಬ ಚಳುವಳಿ. 1947ರ ಅರಮನೆ ಚಲೋ ಚಳವಳಿ ಇವುಗಳಲ್ಲೂ ಅವರು ಭಾಗವಹಿಸಿ, ಜೈಲುವಾಸವನ್ನು ಅನುಭವಿಸಿದ್ದರು. ಜೈಲು ಗಳಲ್ಲಿ ಶ್ರೀ ಜವರಪ್ಪಗೌಡರ ಅಣಕಗಳು ಸತ್ಯಾಗ್ರಹಿಗಳ ಮನಸ್ಸನ್ನು ಸಂತೋಷ ಪಡಿಸುತ್ತಿದ್ದವು. ಸ್ವಾತಂತ್ರ್ಯ ಬಂದ ನಂತರ ಜವರಪ್ಪಗೌಡರು ಯಾವುದೇ ಅಧಿಕಾರದ ಅಮಲಿಗೆ ಗಂಟು ಬೀಳದೇ, ಕಲೆ, ಸಾಹಿತ್ಯ ಪತ್ರಿಕೋದ್ಯಮದಲ್ಲಿ ಭಾಗಿಗಳಾದರು. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಶ್ರೀ ಬಿ. ಎನ್. ಗುಪ್ತರವರ ಸಂಪಾದಕತ್ವದ 'ಜನವಾಣಿ' ಪತ್ರಿಕೆ ರಾಜ್ಯದ ಪ್ರಮುಖ ದಿನಪತ್ರಿಕೆಗಳಲ್ಲೊಂದಾಗಿತ್ತು. ಆ ಪತ್ರಿಕೆಯ ಮಂಡ್ಯ ಪ್ರತಿನಿಧಿಯಾಗಿ ಶ್ರೀ ಜವರಪ್ಪಗೌಡರು ಮತ್ತು ಮೈಸೂರು ಜಿಲ್ಲೆಯ ಪ್ರತಿ ನಿಧಿಯಾಗಿ ನಾನು, ಪತ್ರಿಕಾರಂಗವನ್ನು ಪ್ರವೇಶಿಸಿದೆವು. ಇಲ್ಲಿಂದ ನಮ್ಮ ಪತ್ರಿಕಾ ವ್ಯವಸಾಯ ಮುಂದೆ ಸಾಗಿತು.

ನಾನು ಮೊದಲೇ ಹೇಳಿದಂತೆ ಶ್ರೀ ಜವರಪ್ಪಗೌಡರು ಯಾವುದೇ ಸ್ಥಾನ ಪಡೆಯದೇ ಹೋದರೂ ರಾಜ್ಯ ಅಕ್ಷರಪ್ರಚಾರ ಸಮಿತಿಯ ಅಧ್ಯಕ್ಷರಾಗಿ, ರಾಜ್ಯದಲ್ಲಿ ನಿರಕ್ಷರತೆ ಹೋಗಲಾಡಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದು, ಆ ಕಾಲದಲ್ಲಿ ಗ್ರಾಮಾಂತರ ಪ್ರದೇಶಗಳಿಗ ಹೋದಾಗ ಅವರು ಮಾಡುತ್ತಿದ್ದ ಭಾಷಣ ಗ್ರಾಮಸ್ಥರಲ್ಲಿ ಹೊಸ ಚೈತನ್ಯವನ್ನುಂಟು ಮಾಡುತ್ತಿತ್ತು. ಅವರು ಯಶಸ್ವೀ ಅಧ್ಯಕ್ಷರಾಗಿ ಕಾರ್ಯ ನಿರ್ವ ಹಿಸಿದರು. ಶ್ರೀ ಜವರಪ್ಪಗೌಡರು 1955 ರಲ್ಲಿ ಮೈಸೂರು ವಿಲೀನ ವಿರೋಧ ಚಳುವಳಿಯ ಪ್ರಮುಖ ಸೂತ್ರಧಾರಿಗಳಾಗಿ ಕೆಲಸ ಮಾಡಿದ್ದಲ್ಲದೆ ಮಂಡ್ಯಜಿಲ್ಲೆಯ ದೊಡ್ಡ ಸಮ್ಮೇಳನವನ್ನು ಮಾಡುವ ಜವಾಬ್ದಾರಿಯನ್ನು ಹೊತ್ತಿದ್ದರು. ಮಂಡ್ಯ ಜಿಲ್ಲೆಯ ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹಾಸು ಹೊಕ್ಕಾಗಿ ದುಡಿದು, ಇಂದೂ ದುಡಿಯುತ್ತ, ಎಲ್ಲರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ ರುವ ಶ್ರೀ ಜವರಪ್ಪಗೌಡರನ್ನು ಮಂಡ್ಯದ ಜನತೆ ಸನ್ಮಾನಿಸಿ ಅಭಿನಂದನಾ ಗ್ರಂಥ ಸಮರ್ಪಿಸುವುದು ಅತ್ಯಂತ ಸೂಕ್ತವಾದುದು ಮತ್ತು ಸಮಯೋಚಿತವಾದುದು. ಆ ರೀತಿ ಮಾಡಿದ ವ್ಯವಸ್ಥಾಪಕರನ್ನು ಸಂತೋಷದಿಂದ ಅಭಿನಂದಿಸುತ್ತ, ಶ್ರೀ ಜವರಪ್ಪ ಗೌಡರ ಸೇವೆ ಜಿಲ್ಲೆಗೆ ಮತ್ತು ರಾಜ್ಯಕ್ಕೆ ಹೆಚ್ಚು ಕಾಲ ಸಲ್ಲುವಂತಾಗಲಿ, ಅವರ ಶತಮಾನೋತ್ಸವ ಸಮಾರಂಭದ ಅಭಿನಂದನಾಗ್ರಂಥಕ್ಕೆ ಲೇಖನ ಬರೆಯುವ ಸುಯೋಗ ನನಗೂ ಲಭಿಸಲೆಂದು ಆಶಿಸುತ್ತೇನೆ.

ಎ. ರಾಮಣ್ಣ

# ಮಹಾಸಾಹಸಿ

ಸುಮಾರು 40 ವರ್ಷಗಳ ಹಿಂದಿನ ಮಾತು. ಮದ್ದೂರಿನಲ್ಲಿ ಎಚ್. ಕೆ. ವೀರಣ್ಣಗೌಡರು ವಾಸವಾಗಿದ್ದ ತೋಟದ ಮನೆಗೆ ಶ್ರೀ ಹಿ. ಎನ್. ಜವರಪ್ಪಗೌಡರು ತಿಂಗಳಿನಲ್ಲಿ ಎರಡು ಮೂರು ಸಲ ಬಂದುಹೋಗುತ್ತಿದ್ದರು. ನಾನೂ ಆಗಾಗ ಅಲ್ಲಿಗೆ ಹೋಗುತ್ತಿದ್ದೆ. ಬಹುಶಃ ಅವರ ನನ್ನ ಪರಿಚಯ ಅಲ್ಲಿಂದಲೇ ಪ್ರಾರಂಭ ವಾಗಿರಬೇಕು.

ಹಳ್ಳಿಯಿಂದ ಬರುವ ಬಡವಿದ್ಯಾರ್ಥಿಗಳಿಗೆ ಮದ್ದೂರಿನಲ್ಲಿ ಒಂದು ವಿದ್ಯಾರ್ಥಿ ನಿಲಯ ಆರಂಭಿಸಬೇಕೆಂದು ಯಾರೋ ಇವರ ತಲೆಗೆ ಬಿತ್ತಿದರೆಂದು ಕಾಣುತ್ತದೆ. ಕೆಲಸ ಶುರು ಮಾಡಿಯೇ ಬಿಟ್ಟರು, ವಿದ್ಯಾರ್ಥಿನಿಲಯ ಪ್ರಾರಂಭವಾಗುವ ಹಿಂದಿನ ದಿನ ಕೈಲಿ ಒಂದು ತಪ್ಪಲೆ, ತಲೆಯ ಮೇಲೆ ಒಂದು ಚಿಕ್ಕಹಂಡೆ ಹೊತ್ತುಕೊಂಡು ನೆಟ್‌ಬನೀನು ನಿಕ್ಕರ್ ಹಾಕಿಕೊಂಡು ಮದ್ದೂರು ಮಧ್ಯದಲ್ಲಿ ಹರಿದುಹೋಗುವ ಕಾಲುವೆ ಬಳಿ ಪ್ರತ್ಯಕ್ಷವಾದರು. ಪಕ್ಕದ ದಾರಿಯಲ್ಲಿ ಹೋಗುತ್ತಿದ್ದ ನನ್ನನ್ನು ಕರೆದು ವಿದ್ಯಾರ್ಥಿನಿಲಯ ಆರಂಭಿಸುತ್ತಿರುವ ವಿಷಯವನ್ನು ನನಗೆ ಹೇಳಿ ತಂದಿದ್ದ ಪಾತ್ರೆಗಳ ಉಜ್ಜುವ ಕೆಲಸವನ್ನು ನನಗೂ ಸ್ವಲ್ಪ ಹಚ್ಚಿದರು. ತಪ್ಪಲೆಯನ್ನು ಉಜ್ಜಿತೊಳೆದಾಯಿತು. ಹಂಡೆ ತುಂಬ ಹಳೆಯದು. ಉಜ್ಜಿ ಎಷ್ಟು ದಿನವಾಗಿತ್ತೋ ತಿಳಿಯದು. ಎಲ್ಲಿ ಮುಟ್ಟಿದರೂ ಕೈಯೆಲ್ಲಾ ಮಸಿ ಆಗುತ್ತಿತ್ತು. ಸೌದೆ ಉರಿ ತಾಗಿ ತಾಗಿ ಹೊಗೆಯಿಂದ ಹಂಡೆಯ ತಳಭಾಗದಲ್ಲಿ ಕಿಟ್ಟಕಟ್ಟಿಕೊಂಡಿತ್ತು. ನಡುಕಾಲುವೆಯಲ್ಲಿ ಹಂಡೆಯನ್ನು ತಲೆಕೆಳಗಾಗಿ ಇಟ್ಟು ತೆಂಗಿನನಾರಿನಿಂದ ಒಂದು ಪಕ್ಕದಲ್ಲಿ ಅವರು, ಇನ್ನೊಂದು ಪಕ್ಕದಲ್ಲಿ ನಾನು ಉಜ್ಜಿ ಉಜ್ಜಿ ಸುಸ್ತಾದೆವು. ಎಷ್ಟು ಉಜ್ಜಿದರೂ ಹಂಡೆಯ ತಳಭಾಗದಲ್ಲಿ ಅಂಟಿಕೊಂಡಿದ್ದ ಕಿಟ್ಟ ಕರಗಲಿಲ್ಲ. ಮುಂದೆ ಏನು ಮಾಡಬೇಕೆಂಬುದು ಹೊಳೆಯಲಿಲ್ಲ. ಆಗ ನಾನು ಮೆಲ್ಲಗೆ "ಹಂಡೆಯಲ್ಲಿ ನಾವು ಅಡಿಗೆ ಮಾಡುವುದಿಲ್ಲ ; ನೀರು ತುಂಬಿಸಿಡುತ್ತೇವೆ. ಬರೀ ನೀರು ತುಂಬಿಡುವುದರಿಂದ ಹಂಡೆಯ ಒಳಗಡೆ ಚೊಕ್ಕಟವಾಗಿದ್ದರೆ ಸಾಕು ಹಂಡೆಯ ಮೇಲುಗಡೆ ಹೇಗಿದ್ದರೆ ತಾನು ಏನು, ಹಾಗೇ ತೊಳೆದರೆ ಸಾಕು" ಎಂದೆ. ಉಜ್ಜಿ ಸುಸ್ತಾಗಿದ್ದ ಅವರಿಗೆ ನನ್ನ ಮಾತು ತುಂಬ ಆಪ್ಯಾಯಮಾನವಾಗಿ ತೋರಿತೆಂದು ಕಾಣುತ್ತದೆ. ''ಅದೂ ಸರಿಯೆ'' ಎಂದು ತೊಳೆದ ತಪ್ಪಲೆ ಹಂಡೆ ಎರಡನ್ನೂ ಹೊತ್ತುಕೊಂಡು ಅಲ್ಲಿಂದ ಊರೊಳಕ್ಕೆ ಹೊರಟರು. ''ವಿದ್ಯಾರ್ಥಿನಿಲಯ ನಡೆಸಿದ ಹಾಗೆಯೇ ಇದೆ'' ಎಂದು ಗೊಣಗುತ್ತ ನಾನು ದೇಶಹಳ್ಳಿ ದಾರಿ ಹಿಡಿದೆ. ಆ ವಿದ್ಯಾರ್ಥಿನಿಲಯ ಪ್ರಾರಂಭವಾಯಿತೊ,

ಇಲ್ಲವೊ, ಪ್ರಾರಂಭವಾಗಿದ್ದರೆ ಎಷ್ಟು ದಿನ ನಡೆಯಿತು ಇದು ಯಾವುದೂ ಈವತ್ತಿನವರೆಗೆ ಅವರು ನನಗೆ ಹೇಳಲಿಲ್ಲ, ನಾನೂ ಅವರನ್ನು ಕೇಳಲಿಲ್ಲ.

ಶ್ರೀ ಪಿ. ಎಸ್. ಜವರಪ್ಪಗೌಡರು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಪಾಲಗ್ರಹಾರದವರು. ಉಡುಪಿ ಬ್ರಾಹ್ಮಣರು, ನಾಗಮಂಗಲ ತಾಲ್ಲೂಕಿನ ಒಕ್ಕಲಿಗರು ಪ್ರಪಂಚದಲ್ಲಿ ಎಲ್ಲಿ ಬೇಕಾದರೂ ಹೋಗಿ ಬದುಕಬಲ್ಲರು ಎಂಬ ನಾಡಿಕೆಯು ಮಾತೊಂದಿದೆ. ಜವರಪ್ಪಗೌಡರದು ಅಂಥ ಸಾಹಸದ ಬದುಕು. ಬಡತನದಲ್ಲಿ ಬೆಳೆದು ಬಂದ ಗೌಡರು ಸ್ವಸಾಮರ್ಥ್ಯದಿಂದ ಮೇಲಕ್ಕೆ ಬಂದವರು. ಪದವೀಧರರಲ್ಲ ದಿದ್ದರು ಪದವೀಧರರನ್ನು ಮೀರಿಸುವ ಜ್ಞಾನ. ರಾಷ್ಟ್ರಾಭಿಮಾನ. ಬುದ್ಧಿವಂತಿಕೆ. ಧೈರ್ಯ, ವಾಕ್ಚಾತುರ್ಯ, ಸಂಘಟನಾ ಶಕ್ತಿ ಇವು ಅವರಲ್ಲಿ ಕೇಂದ್ರೀಕೃತವಾಗಿವೆ.

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಹಾಗೂ ಮೈಸೂರಿನ ಜವಾಬ್ದಾರಿ ಸರ್ಕಾರದ ಹೋರಾಟ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲುವಾಸವನ್ನು ಅನುಭವಿಸಿದರು. ಜನಪದ ಚಳುವಳಿಗಳಲ್ಲಿ ಮಂಡ್ಯಜಿಲ್ಲೆ ಎತ್ತಿದ ಕೈ. ಅರ್ವಿನ್‌ನಾಲಾ ರೈತರ ಚಳುವಳಿಯಲ್ಲಿ. ವರುಣಾನಾಲೆ ಚಳುವಳಿಯಲ್ಲಿ, ವೆಂಕಟಸ್ವಾಮಿ ಆಯೋಗ ವರದಿ ವಿರುದ್ಧ ಚಳುವಳಿಯಲ್ಲಿ ಜವರಪ್ಪಗೌಡರ ಪಾತ್ರ ಅದ್ವಿತೀಯವಾದುದು. ಕರ್ನಾಟಕ ಏಕೀಕರಣ ವಿರುದ್ಧ ಚಳುವಳಿ ಸಂದರ್ಭದಲ್ಲಿ ಭಾರತದ ನಾಯಕರಾದ ಪಂಡಿತ್ ನೆಹರೂ, ವಲ್ಲಭಭಾಯ್ ಪಟೇಲ್. ರಾಜೇಂದ್ರ ಪ್ರಸಾದ್ ಮುಂತಾದವರಲ್ಲಿ ನಿಯೋಗ ಹೋಗಿ ಅವರೊಡನೆ ತರ್ಕಬದ್ಧವಾಗಿ ವಾದಿಸಿದರು.

ಪತ್ರಿಕೋದ್ಯಮ ಅವರಿಗೆ ಪ್ರಿಯವಾದ ಕ್ಷೇತ್ರ. ಮೊದಲಿನಿಂದಲೂ ಅವರಿಗೆ ಬರವಣಿಗೆ ಎಂದರೆ ತುಂಬ ಇಷ್ಟ, ಜನರ ಸಮಸ್ಯೆಗಳನ್ನು ಕುರಿತು ಪತ್ರಿಕೆಗಳಿಗೆ ಹೇಳಿಕೆ ಕೊಡುವುದು, ವರದಿ ಕಳುಹಿಸುವುದು, ಲೇಖನಗಳನ್ನು ಬರೆಯುವುದು ಹೀಗೆ ಪತ್ರಿಕಾ ಕ್ಷೇತ್ರಕ್ಕೆ ಕಾಲಿಟ್ಟ ಜವರಪ್ಪಗೌಡರು "ವಿಶ್ವಾಮಿತ್ರ" ಎಂಬ ವಾರ ಪತ್ರಿಕೆಯ ಸಂಪಾದಕರಾಗಿ ಕೆಲ ವರ್ಷ ಅದನ್ನು ಚೆನ್ನಾಗಿ ನಡೆಸಿಕೊಂಡು ಬಂದರು. ಈಗಲು ಕೆಲವು ಪತ್ರಿಕೆಗಳಿಗೆ ವರದಿ ಕಳುಹಿಸಿಕೊಡುವುದನ್ನು ಬಿಟ್ಟಿಲ್ಲ.

ಹಳ್ಳಿಯ ಜನ ಅಕ್ಷರಸ್ಥರಾಗದೆ, ವಿದ್ಯಾವಂತರಾಗದೆ, ಬುದ್ಧಿವಂತರಾಗದೆ, ಚೆನ್ನಾಗಿ ಬದುಕಲಾರರು ಎಂಬುದು ಜವರಪ್ಪಗೌಡರ ನಂಬಿಕೆ. ಅದಕ್ಕಾಗಿ ವಯಸ್ಕರ ಶಿಕ್ಷಣ ಕಾರ್ಯದಲ್ಲಿ ಕೆಲವು ಕಾಲ ತಮ್ಮನ್ನು ತೊಡಗಿಸಿಕೊಂಡರು. ಮೊದಲು ಜಿಲ್ಲಾ ಮಟ್ಟದಲ್ಲಿ ಕೆಲಸ ಮಾಡಿ ಕಡೆಯಲ್ಲಿ ರಾಜ್ಯಮಟ್ಟದ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರಾಗಿ ಎಲ್ಲರು ಮೆಚ್ಚುವಂತೆ ಕಾರ್ಯ ನಿರ್ವಹಿಸಿದರು.

ಸಾಹಿತ್ಯ ಸಂಸ್ಕೃತಿ, ಕಲೆ ಇವುಗಳಲ್ಲಿ ಜವರಪ್ಪಗೌಡರಿಗೆ ತುಂಬ ಆಸಕ್ತಿ. ಕವಿ, ಸಾಹಿತಿಗಳನ್ನು ಕಂಡರೂ ಅಷ್ಟೇ ಪ್ರೇಮ. ಕುವೆಂಪು ಇವರಿಗೆ ಮನೆ ದೇವರಿದ್ದಂತೆ. ಅನೇಕ ಸಾಮಾಜಿಕ ಕಾರ್ಯಗಳಲ್ಲಿ ಕುವೆಂಪು ವಾಣಿಯೆ ಇವರಿಗೆ ಸ್ಫೂರ್ತಿ. ಕುವೆಂಪುರವರ

"ರಾಮಾಯಣ ದರ್ಶನಂ"ದಲ್ಲಿಯ ಎಷ್ಟೋ ಪದ್ಯಗಳು ಇವರಿಗೆ ಕಂಠಪಾಠವಾಗಿವೆ. ನಾಟಕ, ಸಂಗೀತ, ಜಾನಪದ ಕಲೆಗಳ ಬಗ್ಗೆಯೂ ಇವರಿಗೆ ವಿಶೇಷ ಅಭಿಮಾನ. ಜವರಪ್ಪಗೌಡರ ಭಾಷಣವೆಂದರೆ ಸಭಿಕರಿಗೆ ರಸದೌತಣವಿದ್ದಂತೆ. ಕಥೆ, ಉಪಕಥೆಗಳಿಲ್ಲದೆ ಅವರ ಭಾಷಣ ಮುಕ್ತಾಯವಾಗುವುದಿಲ್ಲ.

ಮಂಡ್ಯದ ಜನರಿಗೆ ಜವರಪ್ಪಗೌಡರನ್ನು ಕಂಡರೆ ತುಂಬ ಇಷ್ಟ. ಎಲ್ಲದಕ್ಕೂ ಜವರಪ್ಪಗೌಡರು ಬೇಕು. ಆದರೆ ಜವರಪ್ಪಗೌಡರು ಮುಂದೆ ಬಂದಿರುವುದನ್ನು ಕೆಲವರು ಸಹಿಸುವುದಿಲ್ಲ. ಇದರ ಕಾರಣ ಕೇಳಿದರೆ ಯಾರೂ ಹೇಳುವುದಿಲ್ಲ.

ಜಿ. ನಾರಾಯಣ

# ಹಳೆಯ ಸ್ನೇಹಿತರು

ನಾನು ಶ್ರೀ ಜವರಪ್ಪಗೌಡರು, ಹಳೆಯ ಸ್ನೇಹಿತರು, ಮತ್ತು ಹಳೆಯ ಕಾಂಗ್ರೆಸ್ ಸಂಸ್ಥೆಯಲ್ಲಿ ಕೆಲಸ ಮಾಡಿ. ಇದುವರೆಗೂ ಕಾಂಗ್ರೆಸ್ ಸಂಸ್ಥೆಯಲ್ಲಿದ್ದು ಕೈಲಾದಷ್ಟು ಸೇವೆಸಲ್ಲಿಸುತ್ತಿರುವವರು. ಶ್ರೀ ಪಿ. ಎನ್. ಜವರಪ್ಪಗೌಡರು, ಮಂಡ್ಯ ಜಿಲ್ಲೆ ಪ್ರಾರಂಭವಾಗುವುದಕ್ಕೂ ಮೊದಲಿನಿಂದಲೂ, ಕಾಂಗ್ರೆಸ್‌ನಲ್ಲಿದ್ದು ಸ್ವರಾಜ್ಯ ಸ್ಥಾಪನೆಗಾಗಿ, ಹೋರಾಡಿದವರು. ನಾನು ಮತ್ತು ಶ್ರೀ ಜವರಪ್ಪಗೌಡರು 1938ನೇ ಇಸ್ವಿ ಏಪ್ರಿಲ್ ಮಾಹೆ 2ನೆಯ ವಾರದಲ್ಲಿ ಅಂದರೆ 12 ಮತ್ತು 13ನೆಯ ತಾರೀಖು ಏಪ್ರಿಲ್ ಮಾಹೆಯಲ್ಲಿ ನಡೆದ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿದ್ದೆವು. 1938ರಲ್ಲು ಮಂಡ್ಯಜಿಲ್ಲೆ ಪ್ರಾರಂಭವಾದಲಾಗಾಯ್ತು, ನಾಗಮಂಗಲ ತಾಲ್ಲೂಕಿನ ಹಿರಿಯ ನಾಯಕರ ಜೊತೆಯಲ್ಲಿದ್ದು. ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ನಡೆಯುತ್ತಿದ್ದ ಸಭೆ ಸಮಾರಂಭಗಳಲ್ಲಿ ಸಕ್ರಿಯ ಪಾತ್ರವಹಿಸುತ್ತಿದ್ದರು. 1942ನೇ "ಭಾರತ ಬಿಟ್ಟು ತೊಲಗಿ" (ಕ್ವಿಟ್ ಇಂಡಿಯಾ) ಚಳುವಳಿಯಲ್ಲೂ ವಿದ್ಯಾರ್ಥಿಗಳ ಜೊತೆಗೆ, ಮುಖಂಡ ರೊಳಗೆ ಒಬ್ಬರಾಗಿ ಇವರು ಕೂಡ ಭಾಗವಹಿಸಿ, ಜೈಲುವಾಸ ಅನುಭವಿಸಿದರು, ಮತ್ತೆ 1947ರಲ್ಲು ಇಡೀ ಭರತಖಂಡದ ಜನರು ಗಾಂಧೀಜಿಯವರ ಆದೇಶದಂತೆ ಒಟ್ಟಾಗಿ, ಸ್ವರಾಜ್ಯ ಸ್ಥಾಪನೆಗೆ ಹೋರಾಡಿದ ಮುಖಂಡರಲ್ಲಿ ಶ್ರೀ ಪಿ. ಎನ್. ಜವರಪ್ಪ ಗೌಡರು ಒಬ್ಬರಾಗಿದ್ದು ಕಾರಾಗೃಹವಾಸ ಕೂಡ ಅನುಭವಿಸಿದರು. 1947ರಲ್ಲಿ ಸ್ವರಾಜ್ಯ ಬಂದ ಮೇಲೆ, ಹಳೆ ಮೈಸೂರು ಸಂಸ್ಥಾನದ ರಾಜ್ಯಾಂಗರಚನಾ ಸಮಿತಿ ರಚಿಸಿದಾಗ ಮಂಡ್ಯ ಜಿಲ್ಲೆಯಲ್ಲಿ ಪ್ರತಿ ತಾಲ್ಲೂಕಿಗೆ ಒಬ್ಬರಂತೆ, 25 ರೂಪಾಯಿ ಕಂದಾಯ ಕೊಡುವವರಿಂದ ಓಟುಪಡೆದು ಸದಸ್ಯರನ್ನು ಚುನಾಯಿಸುವಾಗ ಶ್ರೀ ಪಿ. ಎನ್. ಜವರಪ್ಪಗೌಡರು, ಕಾಂಗ್ರೆಸ್ ಪರವಾಗಿ ಕಾಂಗ್ರೆಸ್ ಉಮೇದುವಾರರು ಗೆಲ್ಲಲು ಶ್ರಮವಹಿಸಿದರು. 1950ರಲ್ಲಿ ವಿಶಾಲ ಕರ್ನಾಟಕ ರಾಜ್ಯ ಸ್ಥಾಪನೆ ಯಾದಾಗಿನಿಂದ, ಜಿಲ್ಲೆ ಮತ್ತು ರಾಜ್ಯದಲ್ಲಿ ನಡೆಯುತ್ತಿದ್ದ, ಕಾಂಗ್ರೆಸ್ ಸಭೆ ಮತ್ತು ಸಮಾರಂಭಗಳಲ್ಲಿ ಸಕ್ರಿಯಪಾತ್ರವಹಿಸಿ ಕೆಲಸ ಮಾಡಿದ್ದಾರೆ.ಇವರು ಪತ್ರಿಕಾ ಸಂಪಾದಕ ರಾಗಿ "ವಿಶ್ವಾಮಿತ್ರ" ಎಂಬ ಪತ್ರಿಕೆ ನಡೆಸುತ್ತಿದ್ದರು, ಜಿಲ್ಲೆಯಲ್ಲಿ ಆಗಬೇಕಾದ ಒಳ್ಳೆಯ ಕೆಲಸಕಾರ್ಯ ನಡೆಯಲು ಸಂಬಂಧಪಟ್ಟ, ಶಾಸಕರಿಗೂ ಮತ್ತು ಮಂತ್ರಿ ಗಳಿಗೂ ಒತ್ತಾಯಮಾಡಿ ಉತ್ತಮಕಾರ್ಯಗಳು ನಡೆಯಲು ಸಹಕರಿಸುತ್ತಿದ್ದರು. ಒಂದು ಸಾರಿ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ, ನಿಷ್ಠೆಯಿಂದ ಸೇವೆ ಮಾಡಿ ಖ್ಯಾತಿಪಡೆದರು. ಬೇರೆ ಇನ್ನಾವ ದೊಡ್ಡ ಅಧಿಕಾರಕ್ಕಾಗಿ ಎಂದೂ ಆಸೆಪಡಲಿಲ್ಲ.

ತುಂಬಾ ಸರಳ ಜೀವಿಗಳಾಗಿ, ಬಡವರಲ್ಲಿ ಅನುಕಂಪ, ಅಧಿಕಾರಿಗಳಲ್ಲಿ ವಿಶ್ವಾಸದಿಂದ ವರ್ತಿಸಿದ ಆಡಂಬರವಿಲ್ಲದ ವ್ಯಕ್ತಿತ್ವ ಶ್ರೀಮಾನ್, ಪಿ. ಎಸ್. ಜವರಪ್ಪಗೌಡರದು. ಶ್ರೀ ಪಿ. ಎಸ್. ಜವರಪ್ಪಗೌಡರ ವಿಷಯವನ್ನು ನಾನು ಬೇರೆಯವರಿಂದ ತಿಳಿದುಬರೆದು ದಲ್ಲ. 1938, 1942, 1947 ಈ ವರ್ಷಗಳಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ವ್ಯಕ್ತಿಗಳಲ್ಲಿ ಜವರಪ್ಪಗೌಡರ ಜೊತೆ ನಾನೊಬ್ಬ ವ್ಯಕ್ತಿ. 1942ರಲ್ಲಿ ಕಾಲೇಜು ವ್ಯಾಸಂಗ ಮಾಡುವಾಗ ನಾನು ಮೈಸೂರಿನಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಶ್ರೀ ಲೇಟ್ ಎಂ. ವಿ. ಕೃಷ್ಣಪ್ಪನವರ ಮುಖಂಡತ್ವದಲ್ಲಿ (ವಿದ್ಯಾರ್ಥಿಮುಖಂಡ) ಭಾಗ ವಹಿಸಿದ್ದವನು, ಶ್ರೀ ಪಿ. ಎಸ್. ಜವರಪ್ಪಗೌಡರು ಕೂಡ, ಆಯಾಯ ವರ್ಷಗಳಲ್ಲಿ ನಡೆದ ಸತ್ಯಾಗ್ರಹದಲ್ಲಿ ನಮ್ಮ ಜೊತೆ ಭಾಗವಹಿಸಿದ್ದ ಮುಖಂಡರು. ಈ ಮಹ ನೀಯರಿಗೆ ಒಂದು ಅಭಿನಂದನಾ ಗ್ರಂಥ ಬರೆದು ಅವರ ಸವಿನೆನಪು ಸದಾ ಎಲ್ಲಾ ದೇಶ ಭಕ್ತರ ಮತ್ತು ಇತರರ ಮನಸ್ಸಿನಲ್ಲಿ ಉಳಿಯುವಂತೆ ಮಾಡಲು ಪ್ರಯತ್ನಿಸಿದ ಎಲ್ಲ ಮಹನೀಯರುಗಳಿಗೆ ನಾನು ಅಭಿನಂದನೆ ಸಲ್ಲಿಸುತ್ತೇನೆ. ದಯಾಮಯನಾದ ಭಗವಂತನು ಶ್ರೀ ಪಿ. ಎಸ್. ಜವರಪ್ಪಗೌಡರಿಗೆ, ಸರ್ವರೀತಿಯಲ್ಲಿ ಮಂಗಳ ಉಂಟು ಮಾಡಿ, ಅವರು ಇನ್ನು ಅವರ ಜೀವಿತ ಕಾಲದಲ್ಲಿ ಜನತೆಗೆ ಸೇವೆಸಲ್ಲಿಸುವ ಶಕ್ತಿ, ಆಯುಷ್ಯ, ಆರೋಗ್ಯ, ಸಂಪತ್ತು ಕೊಡಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

**ಎಚ್. ಕೆ. ರಾಮಚಂದ್ರಯ್ಯ**



# ಅದಮ್ಯ ಚೇತನ

ನಾಗಮಂಗಲ ತಾಲ್ಲೂಕಿನ ಪಾಲಗ್ರಹಾರ ಗ್ರಾಮದ ಜವರಪ್ಪಗೌಡರು ಮುಖಾಮುಖಿ ಆದುದು ನನಗೆ ಆ ಗ್ರಾಮದಲ್ಲೇ. ಅದೊಂದು ಮರುಚುನಾವಣೆಯ ಸಂದರ್ಭ. ದೇಶಬಂಧು ಎಂ. ಶಂಕರಲಿಂಗೇಗೌಡರು ಮೊದಲನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಮೈಸೂರುವಿಧಾನಸಭೆಗೆ ಆರಿಸಿ ಬಂದಿದ್ದರು. ಸ್ವಲ್ಪ ಕಾಲಾನಂತರ ಅಸ್ವಾಸ್ಥ್ಯದಿಂದ ತೀರಿಕೊಂಡರು. ಪಕ್ಷೇತರರಾಗಿ ಗೆದ್ದಿದ್ದ ಶಂಕರಲಿಂಗೇಗೌಡರ ಸ್ಥಾನಕ್ಕೆ ಮತ್ತೆ ಚುನಾವಣೆ ನಡೆಯಿತು.

ನಾನು ಪ್ರಜಾಸಮಾಜವಾದೀ ಪಕ್ಷದ ಉಮೇದುವಾರರಾದ ಜೆ. ತಿಮ್ಮೇಗೌಡರ ಪರ ಪ್ರಚಾರಕ್ಕೆ ಹೋಗಿದ್ದೆ. ಜವರಪ್ಪಗೌಡರು ಕಾಂಗ್ರೆಸ್ ಅಭ್ಯರ್ಥಿಯ ಪರ ಪ್ರಚಾರಕ್ಕೆ ಬಂದಿದ್ದರು. ಪಾಲಗ್ರಹಾರದಲ್ಲಿ ಜವರಪ್ಪಗೌಡರ ಭಾಷಣವನ್ನು ಕೇಳಿದ್ದೆ. ಅವರು ತಮ್ಮ ಭಾಷಣದಲ್ಲಿ ಉಳಿದ ವಿಷಯಗಳ ಜೊತೆಗೆ ಹೇಳಿದರು : ''ಬೆಂಗಳೂರಿನಿಂದ ಇಬ್ಬರು ಬಾಡಿಗೆ ಭಾಷಣಕಾರರು ಬಂದಿದ್ದಾರೆ. ಮಾತಾಡ್ತಾರೆ... ಮಾತಾಡ್ತಾರೆ...ಖಂಡಗ ಖಂಡಗ ಸುಳ್ಳು ಹೇಳ್ತಾರೆ.'' —ಎಂದು ಹೇಳಿದಾಗ ನನಗೆ ನಿಜವಾಗಿಯೂ ಬಲು ಮೋಜೆನಿಸಿತು.

ರಾಜಕೀಯ ವಿರೋಧಿಗಳಾಗಿದ್ದರೂ ಜವರಪ್ಪಗೌಡರ ವಿಷಯದಲ್ಲಿ ಆತ್ಮೀಯತೆ ಉಂಟಾಯಿತು. ಅನಂತರ ಒಂದು ಕರ್ನಾಟಕ ಆಗುವುದನ್ನು ಅವರು ವಿರೋಧಿಸಿದರು. ನಾವೆಲ್ಲ ಏಕತಂತ್ರಕರ್ನಾಟಕವೇ ಬೇಕೆಂದವರು. ಅಭಿಪ್ರಾಯ ಬೇರೆ ಬೇರೆ ಆದರೂ ಪರಸ್ಪರ ಗೌರವಕ್ಕೆ ಕಡಿಮೆ ಇರಲಿಲ್ಲ. ಅನಂತರ ಕೆಲವು ವರ್ಷಗಳ ಬಳಿಕ ನಾನು 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ಇದ್ದಾಗ ಜವರಪ್ಪಗೌಡರ ಸ್ನೇಹ--ಸಂಪರ್ಕ ಹೆಚ್ಚಿತು.

ಜವರಪ್ಪ ಗೌಡರು ಇದ್ದುದನ್ನು ಇದ್ದಂತೆ ಹೇಳುವ ಖಂಡಿತವಾದಿ. ಸುತ್ತಿ ಬಳಸಿ ಮಾತಾಡುವುದು ಅವರಿಗೆ ಗೊತ್ತೇ ಇಲ್ಲ. ಯಾರೊಡನೆ ಬೇಕಾಗಿದ್ದರೂ ಕಡ್ಡಿ ತುಂಡು ಮಾಡಿದಂತೆ ಮಾತಾಡುವ ಸ್ವಭಾವ. ಆಗ ಪ್ರಧಾನಮಂತ್ರಿ ಆಗಿದ್ದ ಜವಾಹರಲಾಲ ನೆಹರೂ ಅವರೊಂದಿಗೆ ಕರ್ನಾಟಕದ ವಿರೋಧಿ ನಿಯೋಗದ ಸದಸ್ಯರಾಗಿ ಜವರಪ್ಪ ಗೌಡರು ಆಡಿದ ಮಾತುಗಳನ್ನು ಅವರ ಬಾಯಿಂದಲೇ ಕೇಳಬೇಕು.

ಜವರಪ್ಪ ಗೌಡರಿಗೆ ಪತ್ರಿಕಾ ವೃತ್ತಿ ಎಂದರೆ ಬಹಳ ಮಮತೆ. ಮಂಡ್ಯದಲ್ಲಿ ಹಲವಾರು ಪತ್ರಿಕೆಗಳ ಪ್ರತಿನಿಧಿಯಾಗಿ ಬಹು ಕಾಲದಿಂದ ಕೆಲಸ ಮಾಡಿದವರು. ಈಗ ಅವರ ಇಳಿವಯಸ್ಸಿನಲ್ಲಿ ಅವರ ಸೇವೆಯನ್ನು ಗಮನಿಸಿ ಮಂಡ್ಯದ ಸ್ನೇಹಿತರು

ಅಭಿನಂದನೆಯ ಏರ್ಪಾಟು ಮಾಡಿದ್ದಾರೆ. ಜವರಪ್ಪಗೌಡರ ಅಭಿಮಾನಿಗಳು ಎಲ್ಲರೂ ಸಹಕರಿಸಿ ಈ ಒಳ್ಳೆಯ ಕೆಲಸದಲ್ಲಿ ಭಾಗಿಗಳಾಗಿದ್ದಾರೆ.

ಮಾನ್ಯ ಜವರಪ್ಪಗೌಡರು ವಯಸ್ಸು ಕಳೆದಂತೆ ಬಹಳ ಮಾಗಿದ ವ್ಯಕ್ತಿತ್ವ ಪಡೆದಿದ್ದಾರೆ. ಈ ಲೋಕದಲ್ಲಿ ಹಲವು ಬಗೆಯ ಜನ. ಹಲವಾರು ಅಭಿರುಚಿಗಳು. "ಲೋಕೋ ಭಿನ್ನರುಚಿಃ" ಈ ವಾಸ್ತವವನ್ನು ಚೆನ್ನಾಗಿ ಅರಿತವರು ಜವರಪ್ಪ ಗೌಡರು.

ಹಲವು ಹೋರಾಟಗಳ ಕಲಿ, ಧೀರ ಸತ್ಯಾಗ್ರಹಿ, ದೇಶಕ್ಕಾಗಿ ದುಡಿದ ಸ್ವಾತಂತ್ರ್ಯ ವೀರ. ಜವರಪ್ಪಗೌಡರ ಶರೀರಕ್ಕೆ ವಯಸ್ಸಾಗಿದೆ : ಅವರ ಚೇತನಕ್ಕೆ ಮುಪ್ಪು ಅಡರಿಲ್ಲ. ದಿಟಕ್ಕೂ ಅವರದು ಅದಮ್ಯ ಚೇತನ.

**ಖಾದ್ರಿ ಶಾಮಣ್ಣ**



# ವಿರಳ ಸಂಗಮ

ಕೆಲವರು ಒಳ್ಳೆಯ ಮಾತುಗಾರರಾಗಿರುತ್ತಾರೆ ; ಆದರೆ ಕಾರ್ಯ ಸಾಮರ್ಥ್ಯ ಅವರಿಗಿರುವುದಿಲ್ಲ. ಇನ್ನು ಕೆಲವರು ಕೃತಿದಕ್ಷರಾಗಿರುತ್ತಾರೆ ; ಆದರೆ ಮಾತಿನ ಶಕ್ತಿ ಅವರಿಗಿರುವುದಿಲ್ಲ, ಅಥವಾ ಮಾತಿನಲ್ಲಿ ಅವರಿಗೆ ಅಷ್ಟಾಗಿ ನಂಬಿಕೆಯಿರುವುದಿಲ್ಲ. ಶ್ರೀ ಪಿ. ಎನ್. ಜವರಪ್ಪಗೌಡರ ವೈಶಿಷ್ಟವೆಂದರೆ, ಅವರು ವಾಕ್ಪಟುವೂ ಹೌದು, ಕಾರ್ಯ ಕ್ಷಮರೂ ಹೌದು ಎಂಬುದು. ಇದು ವಿರಳ ಸಂಗಮ.

ಶ್ರೀ ಜವರಪ್ಪಗೌಡರು ನಿರರ್ಗಳವಾಗಿ, ಮನ ಮುಟ್ಟುವಂತೆ ಮಾತನಾಡ ಬಲ್ಲರು ; ಅವರ ಮಾತುಗಾರಿಕೆಗೆ ಹಾಸ್ಯಪ್ರಜ್ಞೆಯ ಮೆರುಗು ಕೂಡ ಉಂಟು. ಅಂತೆಯೆ, ಉದ್ದೇಶಿಸಿದ ಕೆಲಸವನ್ನು ಪಟ್ಟು ಹಿಡಿದು, ಬೆನ್ನುಹತ್ತಿ ಸಾಧಿಸುವ ಜಿಗುಟು ಸ್ವಭಾವ ಅವರದು. ಇದು ಕಿರಿಯರ ಪಾಲಿಗೆ ಅನುಸರಣ ಯೋಗ್ಯವಾದ ಗುಣ. ಇದರ ಹಿಂದಿರತಕ್ಕದ್ದು ವ್ಯಾಪಕವಾದ ಜೀವನಾನುಭವ ಮತ್ತು ಪುಸ್ತಕ ವ್ಯಾಸಂಗ ಎಂಬುದನ್ನು ಮರೆಯಬಾರದು. ಬದುಕಿನಿಂದ ಮತ್ತು ಓದಿನಿಂದ ಕಲಿ ತದ್ದನ್ನು ಶ್ರೀ ಜವರಪ್ಪಗೌಡರು ಸಾರ್ಥಕ ಪಡಿಸಿಕೊಂಡಿದ್ದಾರೆ. ಅವರ ವ್ಯವಹಾರ ಕೌಶಲ ಸಾಮಾನ್ಯವಲ್ಲ.

ಗೌಡರ ನಿಕಟ ಸಂಪರ್ಕ ನನಗಿಲ್ಲ : ಸ್ಥೂಲ ಪರಿಚಯವಷ್ಟೆ ಇರತಕ್ಕದ್ದು. ಅಂದ ಹಾಗೆ, ಗೌಡರು ಸ್ಥೂಲಕಾಯರಲ್ಲ : ತಮ್ಮ ಆರೋಗ್ಯದ ಬಗ್ಗೆ ಅವರಿಗೆ ಬಹಳ ಕಾಳಜಿ ! ಅವರು 28–1–1983ರಂದು ನನಗೆ ಬರೆದ ಪತ್ರವೊಂದರ ಭಾಗವನ್ನು ಇಲ್ಲಿ ಎತ್ತಿ ಕೊಡಬಯಸುತ್ತೇನೆ. (ಅಂದು 'ಸಂಯುಕ್ತ ಕರ್ನಾಟಕ'ದಲ್ಲಿ ನನ್ನ ಸಾಹಿತ್ಯ ಸಾಧನೆಯನ್ನು ಕುರಿತು ಲೇಖನವೊಂದು ಪ್ರಕಟವಾಗಿದ್ದುದು ಇದರ ಹಿನ್ನೆಲೆ) :

"ನನಗೆ ಖಾಯಿಲೆ ಏನೂ ಇಲ್ಲ. ಮುಂದಿನ ವರ್ಷಕ್ಕೆ ಖಾಯಿಲೆ ಬಾರದಂತೆ ತಡೆಯಲು ವಿಶ್ರಾಂತಿಗಾಗಿ ಚಿಕಿತ್ಸೆ[ಬೆಂಗಳೂರಿನ ಪ್ರಕೃತಿ ಚಿಕಿತ್ಸಾ ಕೇಂದ್ರದಲ್ಲಿ]: ಇಂದು ಪ್ರಾರ್ಥನಾನಂತರ ಸಿ.ಪಿ.ಕೆ. ಅವರ ಕುವೆಂಪು ಕಾವ್ಯಮೀಮಾಂಸೆ' ಓದುತ್ತಾ ಇದ್ದ ಹಾಗೆ ಬಂತು 'ಸಂಯುಕ್ತ ಕರ್ನಾಟಕ'. ಕನ್ನಡ ಸಾಹಿತ್ಯ 'ಗಾಂಡೀವಿ' ಸಿ.ಪಿ.ಕೆ. ಅವರ ಮಹತ್ಸಾಧನಾ ಸುದ್ದಿಯನ್ನು ಹೊತ್ತು ತಂದ ವಾರ್ತಾ ಪತ್ರಿಕೆಗೆ ಮನದಲ್ಲಿ ಮಣಿದೆ. ಈ ಲೇಖನ ಓದುತ್ತಾ ಓದುತ್ತಾ ಮೈತುಂಬಿ ಮನ ಉಬ್ಬಿತು.

ನಿಮ್ಮನ್ನು ಬಹಳ ದಿನಗಳಿಂದ ಬಲ್ಲ ನನಗೆ ನಿಮ್ಮ ಗಾಂಡೀವಿತನದ ಅರಿ ವಿಲ್ಲದೆ ಹೋಗಿದ್ದಕ್ಕಾಗಿ ಮನ ಕರಗಿತು. ಮನದಲ್ಲೇ ನಾಚಿದೆ—"

ಗೌಡರ ಗುಣಗ್ರಾಹಿ ಬುದ್ಧಿ, ಸುಹೃದಯತೆ ಇಲ್ಲಿ ಸುವ್ಯಕ್ತವಾಗಿದೆ. ಅದಕ್ಕೆ ನನ್ನ ನಮನ.

ಶ್ರೀ ಜವರಪ್ಪಗೌಡರು ರಾಜ್ಯ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಾಗ, ಉತ್ತಮವಾದ ಹಲವು ಕೆಲಸಗಳನ್ನು ಮಾಡಿದರೆಂದು ಕೇಳಿದ್ದೇನೆ. ಹುಟ್ಟಿನಿಂದಲೇ ದಟ್ಟವಾದ ಜಾನಪದಪ್ರಜ್ಞೆಯನ್ನು ಮೈಗೂಡಿಸಿಕೊಂಡ ಗೌಡರ ಯಶಸ್ಸಿಗೆ ಅದು ಪ್ರಶಸ್ತವಾದ ಸ್ಥಾನವಾಗಿತ್ತು.

ಗೌಡರು ಅತಿಥಿ ಸತ್ಕಾರ ಪ್ರಿಯರು. ಅವರ ಮನೆಯಲ್ಲಿ ಒಂದೆರಡು ಸಲ ನಾನು ಊಟಮಾಡಿ ತಣಿದದ್ದುಂಟು. ಮನೆಯ ಗೋಡೆಯ ಮೇಲೆ ದಾನ ಧರ್ಮ ಸಂಬಂಧವಾದ ಕೆಲವು ಸೂಕ್ತಿಗಳಿದ್ದಂತೆ ನೆನಪು.

ವಯೋವೃದ್ಧರೂ ಜ್ಞಾನವೃದ್ಧರೂ ಸಮಾಜಸೇವಾ ತತ್ಪರರೂ ಆದ ಶ್ರೀ ಜವರಪ್ಪಗೌಡರು ಆರೋಗ್ಯಶಾಲಿ ಶತಾಯುಷಿಯಾಗಲೆಂದು ಹಾರೈಸೋಣ. ಅಂಥ ಹಿರಿಯರ ಪರಂಪರೆ ಬೆಳೆಯಲಿ.

ಸಿ. ಪಿ. ಕೆ.

# ಮೋಡಿಮಾತಿನ ಜಾದೂಗಾರ

ನಾನು ಹುಟ್ಟಿದ್ದು ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲ್ಲೂಕು ಹಂಪಸಂದ್ರ ಗ್ರಾಮದಲ್ಲಿ ; ನನ್ನ ಪೂರ್ವಜರು ಚಿಕ್ಕಮಗಳೂರು ಜಿಲ್ಲೆ ಮತ್ತಾವರ ಎಂಬ ಹಳ್ಳಿಯವರು : ಆದರೆ ನಾನು ಬೆಳೆದದ್ದು ಮಂಡ್ಯದಲ್ಲಿದ್ದ ನನ್ನ ತಾಯಿಯ ತಂಗಿಯ ಮನೆಯಲ್ಲಿ. 1946ರಿಂದ 1951ರ ವರೆಗೆ ಐದೂವರೆ ವರ್ಷ ನನ್ನ ಚಿಕ್ಕಮ್ಮ-ಚಿಕ್ಕಪ್ಪನವರ ಆಶ್ರಯದಲ್ಲಿ ಓದಿದೆ. ಪ್ರಾಥಮಿಕ ನಾಲ್ಕನೆಯ ತರಗತಿಗೆ 1946ರಲ್ಲಿ ಮಂಡ್ಯದ ಸಕ್ಕರೆ ಕಾರ್ಖಾನೆಯ ಶಾಲೆಗೆ ಸೇರಿದೆ. ಆ ವರ್ಷ ದೇಶದ ಸ್ವಾತಂತ್ರ್ಯಕ್ಕಾಗಿ ತೀವ್ರತರ ಸ್ವರೂಪದ ಚಳವಳಿ ಆ ಸೇತು ಹಿಮಾಚಲ ವ್ಯಾಪಕವಾಗಿ ನಡೆದಿತ್ತು. ಎಲ್ಲೆಲ್ಲೂ ಅದರ ಕಾವು. ಮಂಡ್ಯಕ್ಕೂ ಆ ಬಿಸಿ ತಟ್ಟಿತು. ಮಂಡ್ಯ ನಗರದ ನಟ್ಟ ನಡುವೆ ರೈಲ್ವೆ ಹಳಿ ಹಾದುಹೋಗಿ ಇಡೀ ಊರನ್ನು ಎರಡು ಹೋಳು ಮಾಡಿದೆ. ರೈಲ್ವೆ ಸ್ಟೇಷನ್ನಿಗೆ ನೂರಿಪ್ಪತ್ತು ಅಡಿ ದೂರದಲ್ಲಿ ನಮ್ಮ ಚಿಕ್ಕಮ್ಮನ ಮನೆಯಿದೆ. ರೈಲ್ವೆ ಹಳಿಯ ಉದ್ದಕ್ಕೂ ಒಂದು ಬದಿಗೆ ಎರಡು ದೊಡ್ಡ ಉದ್ಯಾನವನಗಳಿವೆ. ಆ ಪಾರ್ಕುಗಳಲ್ಲಿ ಯಾವಾಗಲೂ ರಾಷ್ಟ್ರ-ರಾಜ್ಯ-ಹಾಗೂ ಸ್ಥಳೀಯ ನಾಯಕರ ಉಪನ್ಯಾಸಗಳು ನಡೆಯುತ್ತಿದ್ದುವು. ಸಾಹುಕಾರ್ ಚನ್ನಯ್ಯ, ಕೆ. ಸಿ. ರೆಡ್ಡಿ, ಕೆಂಗಲ್ ಹನುಮಂತಯ್ಯ, ಎಚ್. ಕೆ. ವೀರಣ್ಣಗೌಡ, ಕೆ. ವಿ. ಶಂಕರ ಗೌಡ, ಪಿ. ಎನ್. ಜವರಪ್ಪಗೌಡ ಮುಂತಾದ ಮಹನೀಯರುಗಳು ಮಾಡಿದ ಅಮೋಘ ಭಾಷಣಗಳು, ಜನಸಮೂಹದ ದೀರ್ಘಕರತಾಡನ, ಒಗ್ಗೊರಲಿನ ಜೈಕಾರ—ಇವೆಲ್ಲ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತೆ ಹಸಿರಾಗಿದೆ. ಸರೋವರದಲ್ಲಿ ತೇಲಿ ಬರುವ ತಾವರೆಯಂತೆ, ಹಂಸದಂತೆ ಆ ಚಿತ್ರಗಳು ನೆನೆದೊಡನೆ ಸ್ಮೃತಿಪಟಲದಲ್ಲಿ ಹಾದು ಹೋಗುತ್ತವೆ.

ಬೇಗ ಭಾರತಕ್ಕೆ ಬಿಡುಗಡೆ ಸಿಗಬೇಕು, ಬ್ರಿಟಿಷರು ಭಾರತ ಬಿಟ್ಟು ತೊಲಗ ಬೇಕು ; ಈ ನಾಡು ನಮ್ಮದು, ನಾವೇ ಆಳಬೇಕೆ ಹೊರತು ಹೊರಗಿನವರಲ್ಲ—ಇದು ಬಿಡುಗಡೆಯ ಮಂತ್ರ. ಮಹಾತ್ಮ ಗಾಂಧೀಜಿಯವರು ಈ ದೇಶಕ್ಕೆ ಗುಲಾಮಗಿರಿ ಯನ್ನು ತಪ್ಪಿಸಲು ಟೊಂಕಕಟ್ಟಿ ಹೊರಟಿದ್ದಾರೆ ; ನಾವೆಲ್ಲ ಅವರ ಹಿಂದೆ ಹೆಜ್ಜೆಹಾಕಿ ಹೊರಡಬೇಕು : ಲಾಟಿ ಏಟಿಗೆ ಹಿಂಜೆಗೆಯಬಾರದು, ಗುಂಡಿನೇಟಿಗೆ ಅಂಜಬಾರದು, ಸೆರೆಮನೆಗೆ ಹೋಗಲೂ ಸಿದ್ಧರಾಗಬೇಕು—ಇದು ಅಂದಿನ ಭಾಷಣಕಾರರೆಲ್ಲರ ಮಾತುಗಳ ಸಾರಾಂಶವಾಗಿತ್ತು, ಅಥವಾ ಅಂದು ನನಗೆ ಅರ್ಥವಾದದ್ದು ಅಷ್ಟು ಮಾತ್ರ. ಈ ಬಗೆಯ ಉದ್ದೇಶದ ಹಲವಾರು ಕಾರ್ಯಕ್ರಮಗಳಿಗೆ ಹಾಜರಾಗಿದ್ದೆ. ಸಂಜೆಯ

ಹೊತ್ತು ಹೆಚ್ಚಾಗಿ ಸಭೆ ನಡೆಯುತ್ತಿದ್ದರೂ ಒಮ್ಮೊಮ್ಮೆ ಬೆಳಗ್ಗೆ–ಮಧ್ಯಾಹ್ನ ಕೂಡ ಏರ್ಪಾಟಾಗುತ್ತಿತ್ತು. ಭಾರತಮಾತಾಕೀ ಜೈ. ಮಹಾತ್ಮ ಗಾಂಧೀಕಿ ಜೈ ಎಂದು ಕೈಯೆತ್ತಿ ಕಂಠಬಿರಿಯುವಂತೆ ಕೂಗಿ ಕುಣಿಯುವ ಅವಕಾಶಕ್ಕಾಗಿ ಜೀವ ಹಾತೊರೆಯುತ್ತಿತ್ತು. ರಘುಂಡಾ ಊಂಚಾ ರಹೇ ಹಮಾರ ಎಂಬ ಹಾಡನ್ನು ಹಾಡುವುದೆಂದರೆ ಮೈಮನಗಳ ಸುಳಿಯಲ್ಲಿ ಚೈತನ್ಯ ಹರಿಯುತ್ತಿತ್ತು.

ಮಂಡ್ಯದ ಎರಡು ಉದ್ಯಾನವನಗಳಲ್ಲಿ ಆಗುತ್ತಿದ್ದ ಸಭೆಗಳಲ್ಲಿ ಪಿ. ಎನ್. ಜವರಪ್ಪಗೌಡರ ಭಾಷಣ ರಸಭರಿತವಾಗಿರುತ್ತಿತ್ತು. ತರುಣರು ಯುವಕರಾಗಿದ್ದರು. ಅವರ ಉಪನ್ಯಾಸವನ್ನು ಜನರು ಇಷ್ಟಪಡುತ್ತಿದ್ದರು. ಗೌರವಿಸುತ್ತಿದ್ದರು. ಹಳ್ಳಿಯವರಿಗೂ, ನನ್ನಂಥ ಚಿಕ್ಕ ಹುಡುಗನಿಗೂ ಅವರ ಮಾತುಗಳು ತಿಳಿಯುತ್ತಿದ್ದುವು. ಮೈಕಿನ ಮುಂದೆ ಬಂದರೆ, ಅವರು ಎದ್ದರೆ–ಕೂತರೆ ಚಪ್ಪಾಳೆ. ಅವರ ಉಪನ್ಯಾಸದ ನಡುವೆ ಹತ್ತು ಸಲವಾದರೂ ಕರತಾಡನವಾಗುತ್ತಿತ್ತು. ಏನೋ ಹೇಳಿ ಸಮೂಹದಲ್ಲಿ ನಗುವಿನ ಅಲೆಗಳನ್ನು ಹೊಮ್ಮಿಸುತ್ತಿದ್ದರು. ಜನಭಾಷೆಯಲ್ಲಿ, ಮಂಡ್ಯ ವ್ಯಾವಹಾರಿಕ ನುಡಿಗಟ್ಟುಗಳಿಂದ ಅವರು ಮಾತನಾಡುವಾಗ ಸಭೆಯ ಪ್ರತಿಕ್ರಿಯೆ ನೋಡುವಂತಹುದಾಗಿತ್ತು. ಎಲ್ಲರ ಕಣ್ಣು ಅವರತ್ತ, ಎಲ್ಲರ ಕಿವಿ ಅವರ ತುಟಿಗಳತ್ತ. ಆಂಗಿಕ ಅಭಿನಯ ವಿನ್ಯಾಸ ಹೇಳುವ ವಿಚಾರದ ಭಾವಲಹರಿಗೆ ಪುಷ್ಟಿಯಾಗುವಂತೆ ಚಲನೆಗೊಂಡು ಮಾತು ಹುಸಿ ಹೋಗದೆ ಪರಿಣಾಮಕಾರಿಯಾಗಿ ಗುರಿಮುಟ್ಟುತ್ತಿತ್ತು. ಸಭೆಯಲ್ಲಿ ಜವರಪ್ಪ ಗೌಡರು ಒಬ್ಬರು ಇದ್ದರೂ ಹತ್ತು ಜನರು ಇದ್ದಂತೆ. ಅವರು ಇದ್ದಕಡೆ ತಮಾಷೆ, ವಿನೋದಲಹರಿ. ಹುಡುಗ ಮುದುಕರೆನ್ನದೆ ಸಲುಗೆಯಿಂದ ಗೇಲಿಮಾಡುತ್ತಾರೆ. ಅದರಲ್ಲಿ ಕಾಪಟ್ಯವಿಲ್ಲ. ಇನ್ನೊಬ್ಬರಿಗೆ ಚುಚ್ಚಿ ನೋಯಿಸುವ ಕುಟಿಲತೆಯಿಲ್ಲ. ತಿಳಿಯಾದ, ನಿರ್ಮಲವಾದ ಶುದ್ಧ ಹಾಸ್ಯ : ಯಾರೂ ಮುಖ ಸಿಂಡರಿಸಿಕೊಳ್ಳದೆ ಎಲ್ಲರು ಕೂಡಿ ನಗುವ ರೀತಿ. ದೇಸಿಯ ಬಳಕೆಯಿಂದ ಅವರ ಭಾಷೆಗೆ ಬಣ್ಣ ಬರುತ್ತಿತ್ತು, ಕಳೆಯೇರುತ್ತಿತ್ತು. ಹೀಗಾಗಿ ಹಲವು ಭಾಷಣಕಾರರ ನಡುವೆಯೂ ಅವರು ಒಡೆದು ಕಾಣುತ್ತಿದ್ದರು, ಎದ್ದು ನಿಲ್ಲುತ್ತಿದ್ದರು.

ಜವರಪ್ಪಗೌಡರು ಮತ್ತು ಇತರ ಹಲವಾರು ಜನ ಗಣ್ಯರು, ದೇಶಭಕ್ತರು ಮಂಡ್ಯದ ಜನತೆಯಲ್ಲಿ ಬಿಡುಗಡೆಯ ಬೆಳಕು ಬಿತ್ತಿದರು. ಅವರೆಲ್ಲರ ಭಾಷಣ ನಡೆಯುವಾಗ ಮೂರುನಾಲ್ಕುಬಾರಿ ಪೋಲೀಸರು ಬಂದು 'ಲಾಠಿ ಚಾರ್ಜು' ಮಾಡಿದರು, ಸಭೆ ಚದರಿಸಿದರು. ಎರಡುಸಲ ನಮ್ಮನ್ನು ಲಾರಿಗಳಲ್ಲಿ ತುಂಬಿ ಮಂಡ್ಯದಿಂದ ಊರಾಚೆಗೆ ಕರೆದೊಯ್ದು ಗದರಿಸಿ ಇಳಿಸಿ ಹೋದರು. ಒಮ್ಮೆ ಕಲ್ಲಹಳ್ಳಿಯ ಬಳಿಯೂ, ಇನ್ನೊಮ್ಮೆ ಸಕ್ಕರೆ ಕಾರ್ಖಾನೆಯ ಆಚೆ ಮದ್ದೂರು ರಸ್ತೆಯಲ್ಲೂ ಇಳಿಸಿ ಬೆದರಿಸಿ ಹೋದರು. ಕೈಗೆ ಸಿಕ್ಕ ದೊಡ್ಡವರನ್ನು ಜೈಲಿಗೂ ಎಳೆದೊಯ್ದರು. ಆದರೆ ಹುಡುಗರಾದ ನಾವು ಕೈಗೆ–ಕಾಲಿಗೆ ಸಿಕ್ಕಿ ತೊಡರಿಕೊಂಡರೂ ನಮ್ಮನ್ನು ಬಂದೀಖಾನೆಗೆ

ಸೇರಿಸಲಿಲ್ಲ. ನಾವೆಲ್ಲಾ ಚಿಳ್ಳೆಪಿಳ್ಳೆಗಳೆಂದು ಪೋಲೀಸರಿಗೆ ತಾತ್ಸಾರವೂ ಕನಿಕರವೂ ಇತ್ತು. ಅಂತೂ ಬಾಲಕರೆಂದು ಉಪೇಕ್ಷಿಸುತ್ತಾರಲ್ಲಾ ಎಂದು ನಮಗೆಲ್ಲಾ ತುಂಬ ನಿರಾಶೆಯಾಗಿತ್ತು. ಅದೇನೆ ಇರಲಿ. ಜನನಾಯಕರ ಮಾತುಗಳನ್ನಾಲಿಸಿ ನಮಗೆ ಸ್ಫೂರ್ತಿಯಿತ್ತು, ಉತ್ಸಾಹವೂ ಇತ್ತು, ದಾರಿಯೊಂದು ತೆರೆದಂತೆ ಕೈಬೀಸಿ ಕರೆದಂತೆ ಭಾಸವಾಗುತ್ತಿತ್ತು ; ಆದರೆ ಅದಕ್ಕೆ ತಕ್ಕ ವಯಸ್ಸು ಸಾಲದಾಗಿ ಏನೋ ಭಾಗ್ಯದಿಂದ ವಂಚಿತರಾದ ಅನಾಥಪ್ರಜ್ಞೆ ಕಾಡುತ್ತಿತ್ತು.

ಪಿ. ಎಸ್. ಜವರಪ್ಪಗೌಡರು ನೆಲದ ಮಗ, ಜನಕ್ಕೆ ತೀರ ಹತ್ತಿರವಾದವರು. ಕಳೆದ ನಲವತ್ತು ವರ್ಷಗಳಿಂದ ಅವರನ್ನು ನೋಡುತ್ತ ಬಂದಿದ್ದೇನೆ. ಅವರ ಹುರುಪು ಬತ್ತದ ತೊರೆ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಅವರು ಮಾಡಿದ ಸೇವೆ ಕಾರ್ಯಬಾಹುಳ್ಯ ಇಂದಿಗೂ ಸ್ಮರಣೀಯವಾದುದು. ಬದುಕಿನಲ್ಲಿ ಅವರೂ ಏರಿಳಿತಗಳನ್ನು ಕಂಡಿದ್ದಾರೆ. ಆದರೂ ಕಷ್ಟಸುಖಗಳನ್ನು ಜೀರ್ಣಿಸಿಕೊಂಡು ಅವರು ಬಾಳುತ್ತಿರುವ ರೀತಿ ಪ್ರಶಂಸನೀಯವಾದುದು. 'ಸ್ಥಿತಪ್ರಜ್ಞ' ಎಂಬ ಹೆಸರಿಗೆ ಸದೃಶ ವಾದುದು. ಜನರೊಡನೆ ಮಿಳಿತವಾಗಿ, ನೋವು ನಲಿವುಗಳಿಗೆ ಸ್ಪಂದಿಸುತ್ತ ಎಲ್ಲರ ಪ್ರೀತಿ ವಿಶ್ವಾಸಗಳನ್ನು ಸೂರೆಗೊಂಡಿರುವ ಜವರಪ್ಪಗೌಡರು ಮಂಡ್ಯದ ಇತಿಹಾಸದಲ್ಲಿ ಒಂದು ಮಾಸದ ಹಸಿರು ನೆನಪು. ಜನರ ನೆನಪಿನ ಉಗ್ರಾಣದಲ್ಲಿ ಅವರ ಹೆಸರು ಚಿರಕಾಲ ಉಳಿಯುತ್ತದೆಂಬುದು ನನ್ನ ಖಚಿತವಾದ ಪ್ರಾಂಜಲವಾದ ಅಭಿಪ್ರಾಯ.

ಆತ್ಮೀಯರಾದ ಪಿ. ಎಸ್. ಜವರಪ್ಪಗೌಡರಿಗೆ ಎಲ್ಲ ಶುಭವನ್ನೂ ಹಾರೈಸು ತ್ತೇನೆ.

**ಡಾ. ಹಂಪನಾಗರಾಜಯ್ಯ**

# ಅಭಿನವ ವಿಶ್ವಾಮಿತ್ರ

ಮಂಡ್ಯದ ಶ್ರೀ ಪಿ. ಎಸ್. ಜವರಪ್ಪಗೌಡರು ನ್ಯಾಯ ಪರರು. ಕಷ್ಟ ಸಹಿಷ್ಣು ಗಳು. 1947 ಕ್ಕೆ ಮುಂಚೆ ಸ್ವಾತಂತ್ರ್ಯ ಚಳುವಳಿಯಲ್ಲು ಸಕ್ರಿಯವಾಗಿ ಭಾಗ ವಹಿಸಿ ಕೆಲವು ಸಾರಿ ಸೆರೆಮನೆವಾಸ ಅನುಭವಿಸಿದ ವೀರಾಗ್ರಣಿ. ಹಾಗೆಯೇ ವಿದ್ಯಾಭಿಮಾನಿ. ನಿರಕ್ಷರತೆಯು ಮೂಲೋತ್ಪಾಟನೆಯಾಗಬೇಕೆಂಬ ಮಹತ್ವದ ಗುರಿ ಹೊಂದಿದ ಇವರು ರಾಜ್ಯ ವಯಸ್ಕರಶಿಕ್ಷಣ ಸಮಿತಿ ಅಧ್ಯಕ್ಷರಾಗಿದ್ದಾಗ ಅಹರ್ನಿಶಿದುಡಿದ ಮಹತ್ವಾ ಕಾಂಕ್ಷಿ.

ಪತ್ರಿಕಾರಂಗದಲ್ಲಂತೂ ನಿರ್ಭಯ ನಿರ್ದಾಕ್ಷಿಣ್ಯಗಳಿಂದ ಕೆಲಸ ಮಾಡಿ, ಸತ್ಯವನ್ನು ಮರೆ ಮಾಚಲು ಬಿಡದೆ ವಾಸ್ತವಾಂಶಗಳನ್ನು ಬೆಳಕಿಗೆ ತಂದ ಧೀಮಂತ ಕಾರ್ಯನಿರತ ಪತ್ರಕರ್ತರಾದ ಶ್ರೀ ಜವರಪ್ಪಗೌಡರು ಜಿಲ್ಲೆಯ ಎಲ್ಲ ಸಾರ್ವಜನಿಕ ಚಟುವಟಿಕೆಗಳಲ್ಲು ಎಡೆಬಿಡದೆ ಭಾಗವಹಿಸಿದ್ದು, ಅವರ ಹೆಸರು ಮನೆ ಮಾತಾಗಿದೆಯೆಂದರೆ ಉತ್ಪ್ರೇಕ್ಷೆ ಏನಿಲ್ಲ.

ಸುಮಾರು 35 ವರ್ಷದಿಂದ ಶ್ರೀ ಗೌಡರನ್ನು ಹತ್ತಿರದಿಂದ, ದೂರದಿಂದ, ಹಾಗೂ ಅವರ ಸಹಚರರ ಮೂಲಕ ಬಲ್ಲ ನಾನು ಸಹ ವಾಚಾಮಗೋಚರವಾಗಿ ವರ್ಣಿ ಸುವ ವ್ಯಕ್ತಿ. ನನ್ನ ದೃಷ್ಟಿಯಲ್ಲಿ ಶ್ರೀ ಗೌಡರ ವ್ಯಕ್ತಿತ್ವಜಾತ್ಯಾತೀತ ಹಾಗೂ ಪಕ್ಷಾತೀತ ವೆಂದು ಸ್ಪಷ್ಟವಾಗಿದೆ. ಅವರಲ್ಲಿ ವಿಶ್ವಾಮಿತ್ರನ ಹಠ, ನೊಂದವರಲ್ಲಿ ಅನುಕಂಪ ತೋರಿ ನೆರವಾಗುವ ಕರ್ಣನ ದಯಾದಾನಶೀಲ ಗುಣಗಳು ಮೈಗೂಡಿ ಅವರು ನಡೆದು ಬಂದ ದಾರಿ ಎಷ್ಟೇ ದುರ್ಗಮವಾಗಿದ್ದರೂ, ಭೀಮಸಾಹಸದಿಂದ ವಿಕ್ರಮ ಸಾಧಿಸಿ ದ್ದಾರೆ. ಒಂದು ರೀತಿ ಅಭಿನವ ವಿಶ್ವಾಮಿತ್ರರೆ ಆಗಿದ್ದಾರೆ.

ಕಲೆ ಸಂಸ್ಕೃತಿ ಸಾಹಿತ್ಯ ಹಾಗೂ ಧರ್ಮಪರಾಯಣತೆಯಲ್ಲಿ ಅಗ್ರಜರಂತಿರುವ ಶ್ರೀ ಜವರಪ್ಪಗೌಡರನ್ನು 1989 ರ ಮಧ್ಯ ಭಾಗದಲ್ಲಿ ಸನ್ಮಾನಿಸಿ ಅಭಿನಂದನ ಗ್ರಂಥ ಅರ್ಪಿಸುವ ನಿಮ್ಮ ಸಮಿತಿಯ ಕ್ರಮ ಶ್ಲಾಘನೀಯ.

ಶ್ರೀ ಜವರಪ್ಪಗೌಡರಿಗೆ ಶುಭವಾಗಲಿ, ಸಶಕ್ತ ಹಾಗೂ ಆರೋಗ್ಯ ಭರಿತ ಶತಾಯುಷ್ಮಂತರಾಗಿ ಬಾಳಿ ಮತ್ತಷ್ಟು ನಾಡು ನುಡಿಗಳ ಸೇವೆ ಮಾಡುವಂತೆ ಅನು ಗ್ರಹಿಸ ಬೇಕೆಂದು ಸೃಷ್ಟಿ ಸ್ಥಿತಿ ಲಯಕಾರಕ ಭಗವಂತನನ್ನು ತ್ರಿಕರಣಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

**ಹ. ಲ. ಶ್ರೀಕಂಠಮೂರ್ತಿ**

# ಜನೋಪಕಾರಿ

ನಮ್ಮ ಯಜಮಾನರಾದಿಯಾಗಿ ಜವರಪ್ಪಗೌಡರ ಎಲ್ಲ ಸ್ನೇಹಿತರು ಜವರಪ್ಪ ಗೌಡರನ್ನು ಜನೋಪಕಾರಿ ಎಂದೇ ಸಂಬೋಧಿಸುತ್ತಿದ್ದರು. ಈ ಸ್ನೇಹಿತರುಗಳು ದಿನವೂ ಬೆಳಗ್ಗೆದ್ದು ಬೆಂಗಳೂರಿಗೆ ಹೋಗಿ ಸಂಜೆ ವಾಪಸ್ಸಾಗಿ, ರಾತ್ರಿ ಊಟೋಪಚಾರ ಮುಗಿಸಿ ಮತ್ತೆ ಮಾತುಕತೆ ನಡೆಸಿ 11½ಯೋ 12 ಘಂಟೆಗೋ ಮನೆ ಸೇರುತ್ತಿದ್ದರು. ಶ್ರೀ **ಕೆ. ವಿ.** ಶಂಕರಗೌಡರೇ ಈ ಗುಂಪಿನ ಪ್ರಶ್ನಾತೀತನಾಯಕರು. ಈ ಗುಂಪಿನಲ್ಲಿ ಎಲ್ಲ ಶಾಸಕರು ಜಿಲ್ಲಾಬೋರ್ಡ್ ಅಧ್ಯಕ್ಷರು ಉಪಾಧ್ಯಕ್ಷರುಗಳು ಇದ್ದರು. "ನಿಮ್ಮ ಜನೋಪಕಾರಿಗಳು ಯಾವುದರಲ್ಲಿ ಮೆಂಬರ್ ಆಗಿದ್ದಾರೆ" ಎಂದು ನಮ್ಮ ಯಜಮಾನ ರನ್ನು ಒಮ್ಮೆ ವಿಚಾರಿಸಿದೆ. ಯಾವುದಕ್ಕೂ ಮೆಂಬರಾಗಿಲ್ಲ ಜಿಲ್ಲಾ ಕಾಂಗ್ರೆಸ್ಸಿನ ಮಹಾ ಕಾರ್ಯದರ್ಶಿ. ಮಂಡ್ಯಜಿಲ್ಲೆಗೆ ಆಗಬೇಕಾದ ಕೆಲಸ ಕಾರ್ಯಗಳ ರೂಪು ರೇಷೆಗಳನ್ನು ಆಲೋಚನೆ ಮಾಡಿ, ಎಲ್ಲರ ಮುಂದಿಟ್ಟು ಅವುಗಳನ್ನು ಕಾರ್ಯಗತಗೊಳಿಸಲು ದಿನವೂ ಬೆಂಗಳೂರಿನ ಯಾತ್ರೆ ನಡೆಸುವುದಾಗಿದೆ. ಯೋಚಿತ ಯೋಜನೆಗಳನ್ನು ಬೆಂಗಳೂರಿಗೆ ಒಗ್ಗಟ್ಟಾಗಿ ಹೋಗಿ ಕಾರ್ಯಗತ ಮಾಡಿಕೊಂಡು ಬರುವುದು. ವಾಪಸ್ಸು ಬರುವಾಗ ಹೊಸ ಆಲೋಚನೆಗಳು ಮೂಡಿ ಅವುಗಳ ಕಾರ್ಯಗತಕ್ಕೆ ಮಂಡ್ಯಕ್ಕೆ ಬಂದು ಊಟೋಪಚಾರದ ನಂತರ ಮಂಡ್ಯ ಜಿಲ್ಲಾಕಛೇರಿ ಮುಂದಿನ ರಸ್ತೆಯಲ್ಲಿ ಈ ಕಾರ್ಯ ಕ್ರಮಗಳನ್ನು ಕಾರ್ಯರೂಪಕ್ಕೆ ತರಲು ಯಾವ ಯಾವ ವ್ಯಕ್ತಿಗಳನ್ನು ಭೇಟಿ ಮಾಡಬೇಕು, ಮುಂತಾದ ಯೋಚನೆ ಮಾಡಿ ಪ್ರಾತಃಕಾಲ ಎದ್ದು ಬೆಂಗಳೂರಿಗೆ ಹೊರಡುವುದು, ಹೀಗೆ ನಾಲ್ಕಾರುವರ್ಷಗಳು ದಿನವೂ ಬಿಡುವಿಲ್ಲದೆ ಬೆಂಗಳೂರು ದರ್ಶನ ಇವರಿಗ ತಪ್ಪಲಿಲ್ಲ. ಶ್ರೀ ಶಂಕರಗೌಡರ ಮಾವ ದಿ॥ ತಿಂಗ್ರಿಗೌಡರು ಬಹು ದೊಡ್ಡ ಉದಾರಿಗಳು. ಅಳಿಯಂದಿರಿಗೆ ಹೊಸದೊಂದು ಮಾರಿಸ್ ಮೈನರ್ ಕಾರು ಕೊಟ್ಟಿದ್ದರು. ಇಂದು ಮಂಡ್ಯದಲ್ಲಿ ಎದ್ದು ಕಾಣುವ ಭವ್ಯ ಶಿಕ್ಷಣಸಂಸ್ಥೆಗಳು, ಸಹಕಾರ ಸಂಘಗಳ ನಿರ್ಮಾಣದಲ್ಲಿ ಆ ಕಾರಿನ ಸೇವೆ ಎಲೆಮರೆ ಕಾಯಿಯಂತಹದು.

ಜನೋಪಕಾರಿ ಜವರಪ್ಪಗೌಡರು ಯಾವ ಪದವೀಧರರೆಂದು ಏಕೊ ಏನೋ ಕೇಳಿದೆ. ಯಾವುದೇ ಪದವೀಧರನಲ್ಲ. ವಿದ್ಯೆ ನೈವೇದ್ಯ ಮಾಡಿದ. ಲೋಯರ್ ಸೆಕೆಂಡರಿ ಅನುತ್ತೀರ್ಣ ಪದವೀಧರ ಎಂದರು. ಆದರೂ ನೋಡು, ಆತನು ಬಹು ದಿನಗಳು ಸ್ವರಾಜ್ಯಹೋರಾಟದಲ್ಲಿ ಜೈಲುಗಳಲ್ಲಿದ್ದು ರಾಜ್ಯಮಟ್ಟದ ಅಗ್ರನಾಯಕರ ಒಡನಾಟ, ಜೈಲಿನಲ್ಲಿ, ಅದೂ ವರ್ಷಾನುಗಟ್ಟಲೆ ಅವರೆಲ್ಲರ ಸಂಗಾತಿಯಾಗಿದ್ದು. ಜನೋಪಕಾರಿಗೆ ಲೋಕಾನುಭವಜಾಸ್ತಿ. ಗಾಂಧೀಜಿ ಅವರ ರಚನಾತ್ಮಕಕಾರ್ಯಗಳನ್ನು

ಕಾರ್ಯಗತಗೊಳಿಸಲು, ಅನುಸರಿಸಬೇಕಾದ ಮಾರ್ಗಗಳ ಅನುಭವ ಜವರಪ್ಪಗೌಡರಿಗೆ. ಅವನ ಅನುಭವದ ಮೂಸೆಯಲ್ಲಿರುವ ಯೋಜನೆಗಳು ಕಾರ್ಯರೂಪಕ್ಕೆ ತರುವಷ್ಟರಲ್ಲಿ ಶಂಕರಗೌಡರ ಜೇಬು ಬರಿದು ಆಗುವ ತನಕ ಜನೋಪಕಾರಿ ಬಿಡಲಾರ. ಹಾಗಂದರೆ ? ಎಂದೆ. ಒಮ್ಮೆ ಶಂಕರನಿಗೂ ಜನೋಪಕಾರಿ ಮೇಲೆ ಕೋಪ ಬಂತು. ಗಾಂಧಿಜಯಂತಿ ಯನ್ನು ಜಿಲ್ಲಾಕಾಂಗ್ರೆಸ್ ವತಿಯಿಂದ ಶಂಕರಗೌಡರು ಹೊಸದಾಗಿ ಅಧ್ಯಕ್ಷರಾದಾಗ ಆಚರಿಸಲಾಯಿತು.

ಕಾರ್ಯದರ್ಶಿಯಾಗಿದ್ದ ಜವರಪ್ಪಗೌಡರ ಯೋಜನೆಯಂತೆ ಶಾಲಾ ಕಾಲೇಜು ಮಕ್ಕಳನ್ನು, ಗಾಂಧಿಜಯಂತಿ ಅಂಗವಾಗಿ ನಾನಾ ಮನರಂಜನಾ ಕಾರ್ಯಕ್ರಮಗಳ ಮೂಲಕ ಆಕರ್ಷಿಸಲಾಯಿತು. ಮೂರು ನಾಲ್ಕು ಸಾವಿರ ಲಾಡು ಮಾಡಲಾಯಿತು. ಸಾಲದಾಯಿತು. ಮಿಠಾಯಿ ಅಂಗಡಿಗಳು ಮತ್ತು ಹೋಟೆಲುಗಳಲ್ಲಿದ್ದ ಲಾಡುಗಳನ್ನು ಕೊಂಡು ತಂದು ಮಕ್ಕಳೆಲ್ಲರಿಗೂ ಇಲ್ಲ ಎಂಬಂತೆ ಹಂಚಿದ್ದಾಯ್ತು. ಈ ಮೊದಲೇ ಶಂಕರನ ಜೇಬು ಖಾಲಿ ಆಗಿತ್ತು. ಇಷ್ಟು ಹೊತ್ತಿಗೆ ಮಧ್ಯಾಹ್ನದ ಬಿಸಿಲೇರಿತ್ತು. ಅಧ್ಯಕ್ಷರಿಗೆ ಲಾಡಿನ ಬಿಲ್ ತೋರಿದರು ಜವರಪ್ಪಗೌಡರು, ಸಾಕ್ಷಾತ್ ಶಂಕರನಿಗೆ ಬರುವಷ್ಟು ಕೋಪ ಬಂತು ಶಂಕರಗೌಡರಿಗೆ. ''ಏನಯ್ಯ ನನ್ನನ್ನು ಏನು ಮಾಡ ಬೇಕೆಂದಿದ್ದೀಯೋ ? ಎಂದು ರೇಗಾಡಿದರು. ನಿಮ್ಮನ್ನು ಹರಕಲು ಜುಬ್ಬದಲ್ಲಿ ಗುಡಿಸಲು ವಾಸಮಾಡುವವರೆಗೂ ಇದೇ ಕಾರ್ಯ ಮುಂದುವರಿಸುತ್ತೇನೆ ಎಂದು ವಿಚಲಿತನಾಗದೆ ಶಾಂತವಾಗಿ ಶಂಕರಗೌಡರಿಗೆ ತಿಳಿಸಿದರು. ನಮ್ಮೆಲ್ಲರಿಗೂ ನಗುವೋ ನಗು, ನಮ್ಮ ಜೊತೆ ಶಂಕರಗೌಡರೂ ನಕ್ಕು ಏನಯ್ಯ ನನ್ನ ಕೋಪಕ್ಕೆ ನಿನ್ನ ಬಳಿ ಬೆಲೆ ಇಲ್ಲವೋ ಎಂದರು. ನಿಮ್ಮ ಕೋಪಕ್ಕೆ ಬೆಲೆ ಕೊಡುತ್ತ ಹೋದರೆ ದಿನವೂ ನಿಮ್ಮ ಜೊತೆಯಿರುವುದಾದರೂ ಹೇಗೆ ? ನೀವು ತೋರುವ ಕೋಪವನ್ನು ಪ್ರೀತಿ ಪುರಸ್ಸರವಾಗಿ ಆಶೀರ್ವಾದಗಳ ರೂಪದಲ್ಲಿ ಸ್ವೀಕರಿಸುತ್ತೇನೆ ಎಂದರು. ಅಂತು ಎಲ್ಲರೂ ಸೇರಿ ಲಾಡು ಬಿಲ್ ಪಾವತಿ ಮಾಡಿದೆವು. ಈ ವಿಚಾರವನ್ನು ಸಂಜೆ ಮನೆಯಲ್ಲಿ ಸೇರಿದಾಗ ಶಂಕರಗೌಡರ ಕೋಪದ ಬಗ್ಗೆ ಇಬ್ಬರೂ ಸೇರಿ ಚರ್ಚಿಸುವಾಗ ಕೇಳಿಸಿ ಕೊಂಡ ಪ್ರಸಂಗವಿದು.

ಬೆಂಗಳೂರು ಯಾತ್ರೆಯಿಂದ ಬಂದ ನಂತರ ಎಲ್ಲರನ್ನು ಅವರವರ ಮನೆಗೆ ಬಿಟ್ಟು ಮತ್ತೊಮ್ಮೆ ಜವರಪ್ಪಗೌಡರು ನಮ್ಮ ಯಜಮಾನರು ಮರು ಸಭೆ ಸೇರುವ ವಾಡಿಕೆ ದಿನಚರಿಯದು.

ಶ್ರೀ ಕೆ. ಹನುಮಂತಯ್ಯನವರು ಮುಖ್ಯಮಂತ್ರಿಯಾದ ಮೇಲೆ ದಿವಂಗತ ಜೆ. ದೇವೇಗೌಡರನ್ನು ಸ್ಥಳೀಯಸಂಸ್ಥೆ ವತಿಯಿಂದ ಮೇಲ್ಮನೆ ಸದಸ್ಯರನ್ನಾಗಿ ಕಾಂಗ್ರೆಸ್‌ನಿಂದ ಆರಿಸಲಾಯಿತು. ಸಾಹುಕಾರ್ ಚನ್ನಯ್ಯನವರ ಮತ್ತು ಕೆ. ಹನುಮಂತಯ್ಯನವರ ಗುಂಪಿಗೆ ಹಣಾ ಹಣಿ. ಒಳಗುದಿಯಲ್ಲಿ ಕೋಲ್ಡ್‌ವಾರ್

ನಡೆಯುತ್ತಿತ್ತು. ಹನುಮಂತಯ್ಯನವರು ಅಧಿಕಾರದಿಂದ ಇಳಿದ ಮೇಲೆ ಜೆ. ದೇವೇಗೌಡರು ಶ್ರೀ ಶಂಕರಗೌಡರ ವಿರುದ್ಧ ದಿ॥ ಚನ್ನಯ್ಯನವರ ಗುಂಪಿನಿಂದ ಮೈಸೂರು ಪ್ರಾದೇಶಿಕ ಕಾಂಗ್ರೆಸ್ ಸಮಿತಿಗೆ ಸ್ಪರ್ಧಿಸಿದರು. ಈ ಚುನಾವಣೆಯಲ್ಲಿ ಶಂಕರಗೌಡರೇ ಗೆದ್ದರಾದರೂ, ಯಾವುದೊ ಊರಿನ ಮತದಾರರ ಪಟ್ಟಿಯನ್ನು ನಮ್ಮ ಯಜಮಾನರು ಕೈಬಿಟ್ಟಿದ್ದರಂತೆ. ಶ್ರೀ ಶಂಕರಗೌಡರು ಹುಚ್ಚಾಬಟ್ಟೆ ರೇಗಾಡಿ ಬಿಟ್ಟರಂತೆ. ಈ ವಿಚಾರವನ್ನು ರಾತ್ರಿ ಮಿನಿ ಸಭೆಯಲ್ಲಿ ಜವರಪ್ಪಗೌಡರು ಮತ್ತು ನಮ್ಮ ಯಜಮಾನರು ಸೇರಿ ಚರ್ಚಿಸಿ ನಾಳೆಯಿಂದ ಯಾರೂ ಶಂಕರಗೌಡರ ಮನೆಗೆ ಹೋಗಬಾರದೆಂದು ತೀರ್ಮಾನ ಕೈಗೊಂಡರು. ಸರಿ ಬೆಳಗಿನ ಗಾಳಿಸೇವನೆಗಾಗಿ ಬೊಮ್ಮೇಗೌಡರು, ಜವರಪ್ಪಗೌಡರು ಬಂದು ನಮ್ಮ ಯಜಮಾನರೊಡನೆ ಒಡಗೂಡಿ ಮೂವರು ಹೋಗುತ್ತಿದ್ದುದು ವಾಡಿಕೆ. ಅಂದೇಕೋ ದಿನದಂತೆ ಸ್ನೇಹಿತರಿಬ್ಬರೂ ಬರಲಿಲ್ಲ. ಒಬ್ಬರೇ ಹೋದನಂತರ ಸ್ವಲ್ಪ ನಿಧಾನವಾಗಿ ಬಂದು ಕೂಗಿದರು. ಇಲ್ಲಣ್ಣಾ ಕಾಯ್ದರು ನೀವು ಬರಲಿಲ್ಲ ಒಬ್ಬರೇ ಹೋದರು ಎಂದೆ. ರಾತ್ರಿ ಮಿನಿಸಭೆ ತೀರ್ಮಾನ ಬೊಮ್ಮೇಗೌಡರಿಗೆ ಜವರಪ್ಪಗೌಡರು ತಿಳಿಸಿದ್ದು ಮೊಗುಂ ಆಗಿ ದಿನದಂತೆ ಪ್ರಾತಃಕಾಲ ಇವರೀರ್ವರು ಶಂಕರಗೌಡರ ಮನೆಗೆ ಹೋದರು ಅಷ್ಟರಲ್ಲಾಗಲೇ ನಮ್ಮ ಯಜಮಾನರು ಶಂಕರಗೌಡರೊಡನೆ ಕಾಫಿ ಸೇವನೆ ಮಾಡುತ್ತಿದ್ದರಂತೆ. ಗೌಡರ ಮನೆಗೆ ಹೋದ ಇಬ್ಬರೂ ಸ್ನೇಹಿತರನ್ನು ನಮ್ಮ ಯಜಮಾನರೆ ಸ್ವಾಗತಿಸಿ, ಇಂದೇಕೆ ನೀವು ಬರುವುದು ನಿಧಾನವಾಯ್ತು. ಇದರಿಂದಾಗಿ ನಾನೊಬ್ಬನೇ ಬಂದೆ ಎಂದು ತಿಳಿಸಿದರಂತೆ. ಸರಿಯಪ್ಪ ಶಂಕರಗೌಡರ ಮನೆ ಭೇಟಿ ಬಹಿಷ್ಕರಿಸಿರುವ ತೀರ್ಮಾನ ರಾತ್ರಿ ಮೀಟಿಂಗ್‌ನಲ್ಲಿ ತೀರ್ಮಾನಿಸಲಾಗಿತ್ತಲ್ಲ, ಅದಕ್ಕೆ ನಾವು ಬೇರೆ ಕಡೆ ಹೋದೆವು ಎಂದು ಬೊಮ್ಮೇಗೌಡರು ತಿಳಿಸಿದಾಗ ಎಲ್ಲರೂ ಗೊಳ್ಳೆಂದು ನಕ್ಕರಂತೆ, ಈ ವಿಚಾರವನ್ನು ಈ ಪ್ರಸಂಗದಲ್ಲೇಕೆ ಉಲ್ಲೇಖಿಸುತ್ತ ಇದ್ದೇನೆಂದರೆ, ಅಂದು ಸ್ನೇಹಿತರುಗಳು ಏನೇ ಅಸಮಾಧಾನ ಬಂದರೂ ಮರುಕ್ಷಣ ಸುಧಾರಿಸಿ, ಎಲ್ಲರೂ ಒಂದಾಗಿ ದುಡಿದ ದುಡಿಮೆಯ ಫಲ ಮಂಡ್ಯನಗರದ ಏಳ್ಗೆಯಲ್ಲಿ ಸಾರ್ಥಕವಾಯ್ತು.

ಇಂದು ನೋಡಿ ಒಬ್ಬೊಬ್ಬ ಮುಖಂಡ ಒಂದೊಂದು ಕಡೆ ಮುಖ ಮಾಡಿಕೊಂಡು ಒಬ್ಬನು ಮಾಡುವುದು ಮತ್ತೊಬ್ಬರಿಗೆ ಗೊತ್ತಾಗಬಾರದೆಂಬಂತೆ ಏನೇ ಮಾಡಿದರೂ ದುಡಿಮೆಗೆ ಬೆಲೆಯಿಲ್ಲ. ಊರಿಗೆ ಮೂರುಕಾಸಿನ ಕೆಲಸವಾಗಿಲ್ಲ. ಮಂಡ್ಯವೆಂದರೆ ಮೈಸೂರು ಸರ್ಕಾರ ಎನ್ನುವ ಮಾತು ಗಾಳಿಗೆ ತೂರಿಹೋಗಿದೆ.

ಇಂದು ಶ್ರೀ ಆದಿಚುಂಚನಗಿರಿ ವೈದ್ಯಕೀಯ ಮಹಾವಿದ್ಯಾಲಯವನ್ನು ಪೂಜನೀಯ ಶ್ರೀಗಳು ಪ್ರಾರಂಭಿಸಿ ಮೂರುವರ್ಷಗಳೇ ಕಳೆದವು. ಕಾಲೇಜಿನ ನಿರ್ಮಾಣ ಕಾರ್ಯಕ್ಕೆ ಜಿಲ್ಲೆಯ ರಾಜಕೀಯ ಧುರೀಣರು ಎನ್ನಬೇಕೊ ಬೇರೆ ಹೆಸರು ಹೇಳಬೇಕೊ ಅರ್ಥವಾಗುತ್ತಿಲ್ಲ. ಮೂರು ವರ್ಷದಿಂದ ಕೇವಲ ಅರ್ಧಅಡಿ ಜಾಗ ದೊರಕಿಸಲು ಈ

ಪ್ರಭಾವಿಗಳಿಂದ ಸಾಧ್ಯವಾಗಲಿಲ್ಲ. ಎಂಬುದನ್ನು ತುಂಬಾ ನೊಂದಮನದಿಂದ ಹೇಳ ಬೇಕಾಗಿದೆ ಎಂದು ತಮ್ಮ ಆತಂಕ ವ್ಯಕ್ತಪಡಿಸಿದರು ಜವರಪ್ಪಗೌಡರು ಮಾತಿನ ಮಧ್ಯೆ.

ಮೈಸೂರಿನಲ್ಲಿ ಶಿವರಾತ್ರೀಶ್ವರ ವೈದ್ಯಕೀಯ ಕಾಲೇಜು ಜುಂಜನಗಿರಿ ವೈದ್ಯಕೀಯ ಕಾಲೇಜಿಗೆ ಕೇವಲ ವರ್ಷ ಒಬ್ಬಂದು, ಆದಾಗಲೇ ಸರ್ವಸಿದ್ಧತೆಯಿಂದ ಗರಿಕೆದರಿ ನಿಂತಿದೆ. ಅಲ್ಲಿನ ರಾಜಕಾರಣಿ ಪ್ರಮುಖರ ನಿಸ್ವಾರ್ಥ ಸೇವಾಮನೋಭಾವ ಹಾಗೂ ಶ್ರದ್ಧಾಭಕ್ತಿಫಲವೆಂದು ಪ್ರಶಂಸಿಸಿದರು ಗೌಡರು.

1969ನೆಯ ಇಸವಿ ಸೆಪ್ಟಂಬರಿನಲ್ಲಿ ಎರಡನೆಯ ತಾರೀಕು ನನ್ನ ಯಜಮಾನರು ಹೃದಯಾಘಾತದಿಂದ ಅಗಲಿದರು. ಇದು ನನ್ನ ಜೀವನಕ್ಕೆ ದೊಡ್ಡ ಆಘಾತವನ್ನುಂಟು ಮಾಡಿತು. ಈ ಆಘಾತದಿಂದ ಚೇತರಿಸಿಕೊಳ್ಳುವುದು ಹೇಳಲಾರದಷ್ಟು ಕಷ್ಟವಾಯಿತು. ಯಜಮಾನರ ಆಪ್ತ ಸ್ನೇಹಿತರುಗಳು ಅತೀವವಾದ ನೋವನ್ನು ಅನುಭವಿಸಿದರು.

ಇದಾದ ತರುಣದಲ್ಲೇ ಶ್ರೀ ಜವರಪ್ಪಗೌಡರು ಕಾರಿನ ಅಪಘಾತದಲ್ಲಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ಗೌಡರಿಗೆ ಕೈ ಕಾಲು ಮತ್ತು ತಲೆಗೆ ಬಲವಾದ ಪೆಟ್ಟು ಬಿದ್ದಿದ್ದು ಅವರ ಮುಖ ಪೂರ್ತಿ ಬ್ಯಾಂಡೇಜ್ ಮಾಡಲಾಗಿತ್ತು. ನೋಡಿದವರಿಗೆ ಭಯಾನಕವಾಗಿತ್ತು. ನೋಡಿ ಬಂದವರು ಜವರಪ್ಪ ಗೌಡರು ಚೇತರಿಸಿ ಉಳಿದುಬರುವುದು ಕಷ್ಟವೆಂದು ತಿಳಿಸಿದರು. ಒಂದು ವೇಳೆ ಉಳಿದು ಬಂದರು ಅನ್ಯರ ಆಶ್ರಯ ಪಡೆಯುವಂತಾಗಬಹುದು ಎಂದುಹೇಳಿದರು.

ಅಯ್ಯೋ ಪಾರ್ವತಕ್ಕನಿಗೂ ನನ್ನ ವೈಧವ್ಯದ ಗತಿ ದೊರಕಿತಲ್ಲ, ತುಂಬ ಮಕ್ಕಳು. ಅನುಕೂಲಸ್ಥರೂ ಅಲ್ಲ. ಕೈಗೆ ಬಂದ ಮಕ್ಕಳಿದ್ದು ನಿನ್ನ ನೆರವಿಗೆ ನಾನಿದ್ದೇನೆ ಎನ್ನುವ ಮಗನಿಲ್ಲದ ಸಂಸಾರ. ಯಜಮಾನರು ದೆಹಲಿಯಿಂದ ಬಂದರೆ ದೆಹಲಿಗೆ ಹೋಗುವುದ ರಲ್ಲಿ ಒಂದಾಗಿ ಜೊತೆಯಿರುತ್ತಿದ್ದ ಜನೋಪಕಾರಿಗಳನ್ನು ನೋಡಿ ಪಾರ್ವತಕ್ಕನನ್ನು ಸಂತೈಸಿ ಬರಬೇಕೆಂದು ಆಸ್ಪತ್ರೆಗೆ ಹೋಗಿ ಗೌಡರನ್ನು ನೋಡಿ ಪಾರ್ವತಕ್ಕನತ್ತ ತಿರುಗಿದೆ. ಎಂದೂ ನಗುಮುಖದಿಂದ ಇರುತ್ತಿದ್ದ ಅಕ್ಕನ ಸುಕ್ಕುಮುಖ ಕಂಡ ನನಗಂತೂ ಕಣ್ಣಿನಲ್ಲಿ ಧಾರಾಕಾರ ಕಣ್ಣೀರು ಸುರಿಯಲಾರಂಭಿಸಿತು. ಗೌಡರ ಮಂಚದ ಬಳಿಯಿಂದ ಎದ್ದು ಬಂದ ಪಾರ್ವತಕ್ಕ ವಾರ್ಡಿನ ಹೊರಗೆ ಕರೆದುಕೊಂಡು ಮರೆಯಲ್ಲಿ ಕುಳಿತು ಗೋಳೋ ಎಂದು ಬಿಕ್ಕಳಿಸಿ ಅಳಲಾರಂಭಿಸಿದರು. ಅವರನ್ನು ಸಂತೈಸಲು ನನಗೆ ಮಾತುಗಳೇ ಹೊರಡದಾದವು. ಇಲ್ಲ ಏಳಕ್ಕೆ ಅವರಿಗೆ ಏನೂ ಆಗುವುದಿಲ್ಲ ದೇವರು ಒಳ್ಳೆಯದು ಮಾಡುತ್ತಾನೆ ಧೈರ್ಯತಾಳಬೇಕು. ಕಷ್ಟಸುಖ ಗಳು ದ್ವಂದ್ವವಾದುವು ಎಂದು ಸಂತೈಸಿದೆ.

ಅದೇ ಸಮಯಕ್ಕೆ ಕಡಿದಾಳರು ಗೌಡರನ್ನು ನೋಡಲು ಬಂದರು. ಪಾರ್ವತಕ್ಕ ಮುಖತೊಳೆದು ಬಂದರು. ಏನಮ್ಮ ಅಪಘಾತ ಹೇಗಾಯಿತು ಮುಂತಾದ ವಿವರ ಗಳನ್ನು ಕೇಳಿ ತಿಳಿದುಕೊಂಡರು. ನಿಮ್ಮ ತಿಂಡಿ ತೀರ್ಥಗಳಿಗೆ ಏನು ಸೌಕರ್ಯ ಮಾಡಿ

ಕೊಂಡಿದ್ದೀರಿ ಎಂದು ವಿಚಾರಿಸುವಲ್ಲಿ. ಮಂಪರು ನಿದ್ರೆಯಲ್ಲಿದ್ದ ಗೌಡರು ಎಚ್ಚರಗೊಂಡರು. ಮಾತನಾಡುತ್ತಿರುವವರು ಯಾರು ? ಎಂದು ಕೇಳಿದರು. ನಾನು ಕಡಿದಾಳು ಮಂಜಪ್ಪನವರು ಎಂದು ತಿಳಿಸಿದೆ. ಇದೇನು ಸಾರ್ ನನಗಾಗಿ ಮರುಕ ಪಡುತ್ತಿದ್ದೀರಿ ನನ್ನ ಡಿಕ್ಕಿಯಿಂದ ಸಂಭವಿಸಿದ ಅಪಘಾತದಿಂದ ಕಾರಿಗೆ ಹೇಳಲಾರದ ಜಖಂ ಆಗಿದೆಯಂತೆ ಆ ವಾಹನಕ್ಕಾಗಿ ಮರುಕಪಡಿ. ಇವೆಲ್ಲಾ ದೇವರಾಟ ಸಾರ್ ಆಗುವುದೆಲ್ಲ ಒಳ್ಳೆಯದಕ್ಕೆ ಎಂದು ನೋವಿನಲ್ಲಿ ಕೃತಕ ನಗೆ ನಕ್ಕರು. ಪಾಪಮ್ಮ ಈ ಕರಡಿ ಕಾಟ ಹೇಗೆ ಸಹಿಸಿಕೊಳ್ಳುತ್ತೀಯಮ್ಮ ದೇವರು ಒಳ್ಳೆಯದು ಮಾಡುತ್ತಾನೆ ಜವರಪ್ಪಗೌಡರೇ ವಿಶ್ರಾಂತಿಯಿಂದಿರಿ. ಎಲ್ಲವೂ ಸರಿ ಹೋಗುತ್ತದೆ ಎಂದು ಬೀಳ್ಕೊಟ್ಟರು.

ಇನ್ನೇನು ಶಂಕರಗೌಡರು ಬರುವ ಹೊತ್ತಾಯಿತು ಎಂದು ಪಾರ್ವತಕ್ಕ ತಿಳಿಸುತ್ತ ಇರುವಾಗಲೇ ಸುಶೀಲಕ್ಕ ಮತ್ತು ಗೌಡರು ಹೆಗಲಿಗೆ ಕಾಫಿಫ್ಲಾಸ್ಕ್ ನೊಡನೆ ಪ್ರವೇಶ ಮಾಡಿದರು. ನನ್ನನ್ನು ನೋಡಿ ಏನು ಲೀಲಮ್ಮ ಹುಷಾರಾಗಿದ್ದೀಯ ಎಂದು ಕೇಳಿ ಈತನ ಸಂಸಾರ ನಿರ್ವಹಣೆಗೆ ಜನರಲ್ಲಿ ಕೈ ಒಡ್ಡುವ ಕಾಲವನ್ನು ದೇವರು ದೂರಮಾಡಿದ. ಇಂದು ವೈದ್ಯರು ನನಗೆ ದೂರವಾಣಿ ಮೂಲಕ ತಿಳಿಸಿದರು. ಯಾವುದೇ ಅಪಾಯವಿಲ್ಲದೆ ಜವರಪ್ಪಗೌಡ ಪಾರಾಗಿದ್ದಾನೆ. ದೇವರು ದೊಡ್ಡವನು. ನನಗಂತೂ ಮಕ್ಕಳೊಂದಿಗನ ಬಾಳ ಬಗ್ಗೆ ಬೆಳಗು ಸಂಜೆ ಕಾಯುವುದಾಯಿತು ಎಂದು ತಿಳಿಸಿ ಎದ್ದು ಕೂರಿಸಿ ಕಾಫಿ ಕೊಟ್ಟರು.

ಪಾರ್ವತಕ್ಕನ ಮಾಂಗಲ್ಯಬಲದಿಂದ, ದಿನವೂ ಸಂಜೆ ಬೆಳಗು ಇವರ ಸೋದರತ್ತೆ ಅಳಿಯಂದಿರು ಹೆಣ್ಣುಮಕ್ಕಳು ತಮ್ಮಯ್ಯನವರು ಬಹು ಎಚ್ಚರಿಕೆಯಿಂದ ಗೌಡರನ್ನು ನೋಡಿಕೊಳ್ಳುತ್ತಿದ್ದರು. ಇವರುಗಳ ಸಹಕಾರ, ವಿದ್ಯಾಸಚಿವರಾಗಿದ್ದ ಶಂಕರಗೌಡರ ಬೆಂಬಲದಿಂದ ವೈದ್ಯರುಗಳು ಒಬ್ಬರಮೇಲೊಬ್ಬರಂತೆ ಉಸ್ತುವಾರಿಯಿಂದ ಗೌಡರನ್ನು ನೋಡಿ ತಕ್ಕ ಚಿಕಿತ್ಸೆ ನೀಡಿದರು. ಸತಿ ಸಾವಿತ್ರಿ ಸತ್ಯವಾನನನ್ನು ಮೃತ್ಯುವಿನಿಂದ ಪಾರುಮಾಡಿ ಕರೆತಂದಂತೆ ಜನೋಪಕಾರಿಗಳನ್ನು ಪಾರ್ವತಕ್ಕ ಮನೆಗೆ ಕರೆತಂದರು. ಗೌಡರು ಮನೆಗೆ ಬಂದ ದಿನ ನೂರಾರು ಜನ ಹಿತೈಷಿಗಳು ಬದುಕಿಬಂದ ಗೌಡರನ್ನು ಉಳಿಸಿದ ದೇವರಿಗೆ ತುಂಬು ಹೃದಯದಿಂದ ಪ್ರಾರ್ಥನೆ ಸಲ್ಲಿಸಿದರು. ಅಂದು ಅಕ್ಕನ ಮುಖದಲ್ಲಿ ನಗು ಅರಳಿ ಹಿಂದಿನಂತೆ ನಕ್ಕು ನಗಿಸುತ್ತ ಸ್ವಾಗತಿಸಿ ಬೀಳ್ಕೊಟ್ಟ ದೃಶ್ಯ ಇಂದೂ ನನ್ನ ಕಣ್ಣಿಗೆ ಕಟ್ಟಿದಂತಿದೆ.

ವಿಧಾನಸಭೆಗೆ ಚುನಾಯಿತನಾದ ಮಗನು ಸದಸ್ಯನಾದ ಗೌರವವನ್ನು ಕಾಪಾಡಿ ಕೊಂಡು ಸಹ ಸದಸ್ಯರಿಂದ ಪ್ರಶಂಸೆ ಪಡೆದ. ಈ ಬಗ್ಗೆ ಶ್ರೀ ಜವರಪ್ಪಗೌಡರು ನಾನಾ ರೀತಿಯಲ್ಲಿ ಸ್ನೇಹಿತನ ಮಗನೆಂಬ ಅಭಿಮಾನ ಮರೆಯದೆ ಚಿ. ರಾ. ಆತ್ಮಾನಂದನ ರಾಜಕೀಯ ಜೀವನದಲ್ಲಿ ಪಾತ್ರವಹಿಸಿದರು. ಶ್ರೀ ಜವರಪ್ಪಗೌಡರು ರಾಜ್ಯದ ರಾಜ

ಕ್ಷೇತ್ರದಲ್ಲಿ ಉಂಟಾಗುತ್ತಿದ್ದ ಸಮಸ್ಯೆಗಳ ಬಗ್ಗೆ ಪತ್ರಿಕಾಸಂದರ್ಶನ ಮತ್ತು ಹೇಳಿಕೆಗಳನ್ನು ನೀಡುವ ಸಂಪ್ರದಾಯಗಳ ತರಬೇತಿ ನೀಡುತ್ತಿದ್ದರು. ವಿಧಾನಸಭೆಯ ಸದಸ್ಯನಾದ ಮೇಲೆ ಯಾವುದಾದರೂ ಶಾಶ್ವತವಾದ ಕೆಲಸಮಾಡಿ ಸದಸ್ಯತನದ ಹೆಗ್ಗುರುತು ಉಳಿವಂತೆ ಶ್ರಮಿಸಲು ಮಾರ್ಗದರ್ಶಿಯಾಗಿ ಔಷಧಶಾಲೆ ಸ್ಥಾಪನೆಮಾಡುವಂತೆ ಪ್ರೇರೇಪಿಸಿದರು ಶ್ರೀ ಜವರಪ್ಪಗೌಡರು. ಈ ಮುನ್ನ ಹೇಳಬೇಕಾಗಿದ್ದ ವಿಚಾರ 1969ರಲ್ಲಿ ಮೇಲ್ಮನೆ ದ್ವೈವಾರ್ಷಿಕ ಚುನಾವಣೆಗಳು ಸಮೀಪಿಸುತ್ತಿದ್ದವು. ಆ ಚುನಾವಣೆಗೆ ಶ್ರೀ ಜವರಪ್ಪಗೌಡರಿಗೆ ಕಾಂಗ್ರೆಸ್ ಪಕ್ಷದಿಂದ ಅವಕಾಶ ಕೇಳಲು ಅವರ ಎಲ್ಲ ಸ್ನೇಹಿತರುಗಳು ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರಲ್ಲಿ ಹೋಗಿದ್ದರು. ಶ್ರೀ ಶಂಕರಗೌಡರು ವಿದ್ಯಾಮಂತ್ರಿಗಳಾಗಿದ್ದುದಲ್ಲದೆ ಪ್ರಭಾವಿವ್ಯಕ್ತಿಗಳೂ ಸಚ್ಚಾರಿತ್ರವಂತರೂ ಆದಂತವರು. ಅವರ ಬೆಂಬಲದಿಂದ ಶ್ರೀ ಜವರಪ್ಪಗೌಡರು ಮೇಲ್ಮನೆಗೆ ಸದಸ್ಯರಾಗಿರುತ್ತಾರೆಂಬ ನಂಬಿಕೆ ನನ್ನಲ್ಲಿತ್ತು. ಇದಾದ ಮೂರನೇ ದಿನ ಪ್ರಾತಃಕಾಲ 8 ಗಂಟೆಗೆ ಶ್ರೀ ಜವರಪ್ಪಗೌಡರು ಮತ್ತು ಶ್ರೀ ದಿ. ಜಿ. ಎಸ್. ಬೊಮ್ಮೇಗೌಡರಿಗೆ ಮನೆಗೆ ಬಂದಾಗ ಪರಿಷತ್ ಸದಸ್ಯತನ ನನ್ನ ಬೆನ್ನು ಹತ್ತಿದ್ದು ಗೊತ್ತಾಗಿ ಏನಣ್ಣಾ ಹೀಗೆ ಹೇಳ್ತೀರಿ ? ಎಂದೆ. "ಇಲ್ಲ ಶಂಕರಗೌಡರು ಬೆಂಗಳೂರಲ್ಲಿ ಕಾಯ್ತಾ ಇದಾರೆ ನಿಮ್ಮನ್ನು ಸದಸ್ಯರಾಗಲು ಒಪ್ಪಿಸಿ ಕೂಡಲೇ ತಿಳಿಸಲು ಕೇಳಿದ್ದಾರೆ. ದೆಹಲಿಗೆ ಪಟ್ಟಿ ಕಳುಹಿಸಲು ಇಂದೇ ಕೊನೆಯ ದಿನವೆಂದು ತಿಳಿಸಿದರು.

ಸಂಸಾರದಲ್ಲಿ ಯಾರನ್ನು ಕೇಳದೆ ಏಕಾಏಕಿ ತಿಳಿಸುವುದು ಸರಿಯಲ್ಲವೆಂದು ವಿಚಾರ ಮಾಡಲು ಅವಕಾಶಕೊಡಲು ಕೇಳಿದೆ. ಇಲ್ಲ ಸಾಧ್ಯವಾಗದು. ಕೂಡಲೇ ತಿಳಿಸದಿದ್ದರೆ ನನಗಾಗಲೀ ನಿಮಗಾಗಲೀ ಆ ಸ್ಥಾನ ಸಿಗಲಾರದು. ರಣಹದ್ದುಗಳಂತೆ ಕಾಯುತ್ತಿರುವ ಜನರಿದ್ದಾರೆ ಎಂದು ಶ್ರೀ ಜವರಪ್ಪಗೌಡರು ತಿಳಿಸಿದರು. ಇಷ್ಟು ವೇಳೆಗೆ ಕೆಲವರನ್ನು ವಿಚಾರಿಸಿದೆನಾದರೂ ನಕಾರ ಹೇಳಿದವರೇ ಹೆಚ್ಚು. ದಿ. ಬೊಮ್ಮೇಗೌಡರು ಮತ್ತು ಜವರಪ್ಪಗೌಡರು ವೇಳೆಯಾಯ್ತು ನಾವೂ ಸಹ ನಿಮ್ಮ ಸಂಸಾರದವರೇ ನಾವೇನು ಅನ್ಯರಲ್ಲ ಎಂದು ತಿಳಿಸಿ ನಮ್ಮ ಮನೆ ದೂರವಾಣಿಯಲ್ಲೇ ಸಚಿವ ಶಂಕರಗೌಡರಿಗೆ ಶ್ರೀಮತಿ ಲೀಲಮ್ಮನವರು ಒಪ್ಪಿದ್ದಾರೆಂದು ತಿಳಿಸಿಯೇ ಬಿಟ್ಟರು.

ವಿಧಾನ ಪರಿಷತ್ತಿಗೆ ಚುನಾಯಿತಳಾದೆ. ಅದೇ ಕಾಲಕ್ಕೆ ಶ್ರೀ ಜವರಪ್ಪಗೌಡರು ಕರ್ನಾಟಕ ರಾಜ್ಯ ವಯಸ್ಕರ ಮಂಡಲಿ ಅಧ್ಯಕ್ಷರಾದರು. ವಯಸ್ಕರ ಶಿಕ್ಷಣ ಸಮಿತಿಯಿಂದ ನಡೆಯುತ್ತಿದ್ದ ಮಹಿಳಾ ಗೋಷ್ಠಿಗಳು ಸಭೆಗಳಿಗೆ ಮುಖ್ಯ ಅತಿಥಿಯಾಗಿ ಅಧ್ಯಕ್ಷೆಯಾಗಿ ಭಾಗವಹಿಸಲು ಹತ್ತಾರು ಕಡೆಗಳಲ್ಲಿ ಅವಕಾಶ ಕಲ್ಪಿಸಿಕೊಟ್ಟರಲ್ಲದೆ ಒಬ್ಬಂಟಿಯಾಗಿ ಹೆಂಗಸು ಹೋಗಬಾರದೆಂದು ಗೌಡರ ಪತ್ನಿ ಪಾರ್ವತಕ್ಕನು ನನ್ನ ಜೊತೆ ಭಾಗವಹಿಸುತ್ತಿದ್ದರು. ಈ ಸಮಾರಂಭಗಳಲ್ಲಿ ಭಾವಹಿಸಿದ ನನಗೆ ಭಾರತದಲ್ಲಿ

ಮಹಿಳೆಯರ ಸುಧಾರಣೆಗಳಿಗೆ ಸಮಾಜದಿಂದ ಅತ್ಯವಶ್ಯಕವಾಗಿ ಆಗಬೇಕಾದ ಸಹಕಾರ ಸಹಾಯಗಳನ್ನು ಕುರಿತಂತೆ ಮೇಲ್ಮನೆಯಲ್ಲಿ ಪ್ರಸ್ತಾಪಿಸಲು ಸೂಕ್ತಮಾರ್ಗ ದರ್ಶನವಾಯಿತು.

ಅಂತರರಾಷ್ಟ್ರೀಯ ಮಹಿಳಾವರ್ಷದ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತ ನಾಡಿದಾಗ ನಾನಿತ್ತ ನಾನಾ ಸಲಹೆಗಳು ರಾಜಕೀಯ ಮುತ್ಸದ್ದಿಗಳ ತೀವ್ರ ಗಮನ ಸೆಳೆದವು. ಅಷ್ಟೇ ಅಲ್ಲ ಹತ್ತಾರು ಮಂದಿ ಪ್ರತಿಷ್ಠಿತ ಮಹಿಳೆಯರು ಕಾಗದ ಬರೆದು ಪ್ರಶಂಸೆ ವ್ಯಕ್ತಪಡಿಸಿದರು.

ಶ್ರೀ ಜವರಪ್ಪಗೌಡರ ಭಾಷಣವೆಂದರೆ ಬಹು ಸ್ವಾರಸ್ಯಪೂರ್ಣವಾದುದು. ನಕ್ಕು ನಗಿಸುತ್ತ ಗಂಟೆಗಳಕಾಲ ಧಾರಾಕಾರವಾಗಿ ಸಾಗುತ್ತಿದ್ದ ಭಾಷಣಧಾರೆಯಲ್ಲಿ ಸುಮಾರು ಸನ್ನಿವೇಶಕ್ಕೆ ಹೊಂದಿಕೆಯಾಗಿರುವ ಅದೆಷ್ಟು ಸಣ್ಣ ಕತೆಗಳು. ಮಧುಗಿರಿ ಯಲ್ಲಿ ಸೇರಿದ್ದ ಸಭೆಯೊಂದರಲ್ಲಿ ಜವರಪ್ಪಗೌಡರು ಭಾಷಣ ಮುಗಿಸುತ್ತಿದ್ದಂತೆ ಸ್ತ್ರೀಯರೇ ಹೆಚ್ಚಿದ್ದ ಸಭೆಯಲ್ಲಿ ಜವರಪ್ಪಗೌಡರು ಭಾಷಣ ಮುಂದುವರಿಸುವಂತೆ ದೊಡ್ಡ ಕೋಲಾಹಲ ಉಂಟಾದ ಸನ್ನಿವೇಶ ಇಂದಿಗೂ ನನ್ನ ಮನದಾಳದಲ್ಲಿ ಉಳಿದಿದೆ. ವಯಸ್ಕರಿಗೇಕೆ ಶಿಕ್ಷಣ ಎಂಬ ಬಗ್ಗೆ ಅವರು ಹೇಳಿದ ಕತೆಗಳನ್ನೇ ನೆನೆಸಿಕೊಂಡು ಬರೆದು ಪ್ರಕಟಿಸಲು ನಾನೇ ಅಲ್ಲ ಅವರ ಭಾಷಣ ಕೇಳಿದ ಅನೇಕ ಮಂದಿ ಶಿಕ್ಷಣ ತಜ್ಞರು ಒತ್ತಾಯಿಸಿದ್ದಾರೆ. ಏಕೋ ಏನೋ ಗೌಡರು ಅತ್ತ ಮನಸ್ಸು ಮಾಡಲಿಲ್ಲ. ಈ ಅಭಿನಂದನಾ ಸನ್ಮಾನದ ಸವಿನೆನಪಿಗಾದರೂ ಅವರ ಜ್ಞಾನಭಂಡಾರದಲ್ಲಿ ತುಂಬಿ ರುವ ಕತೆಗಳ ಕೃತಿ ಹೊರಬರಲೆಂದು ಹಾರೈಸುತ್ತೇನೆ.

ಗೌಡರು ತಮ್ಮ ಮಗನ ಮದುವೆ ನಡೆಸಲು ನಮ್ಮ ಸಂಬಂಧದ ಮಗಳನ್ನು ಗೊತ್ತು ಮಾಡಲು ನಮ್ಮ ಮನೆಯಲ್ಲಿ ಮೂರು ಘಂಟೆಗಳಷ್ಟು ದೀರ್ಘಕಾಲ ಇರುವುದು ಬಹಳ ವರ್ಷಗಳ ನಂತರ ಸಂಭವಿಸಿತು. ಒಂದಿಬ್ಬರು ಗೌಡರನ್ನು ವಿಚಾರಿಸಿ ಮನೆಗೆ ಬಂದವರು ಹಿಂದು ಮುಂದು ಏನು ಹೇಳಲೇ ಇಲ್ಲ. ಏನು ಸ್ವಾಮಿ ನೀವು ಶ್ರೀ ಚೌಡಯ್ಯನವರಂತೆ ಜನತಾ ಶಿಕ್ಷಣ ಸಂಸ್ಥೆ ಟ್ರಸ್ಟ್ ಮಾಡಲು ಶ್ರೀ ಕೆ. ವಿ. ಶಂಕರಗೌಡರ ಜೊತೆ ಹೊಂದಾಣಿಕೆ ಮಾಡಿಕೊಂಡಿರಾ ಹೇಗೆ ? ಎಂದು ಪ್ರಶ್ನಿಸಿ ಇದೇನು ಶಂಕರ ಗೌಡರ ಅಪ್ಪನ ಸ್ವತ್ತೇನು ಎಂದು ಕೇಳಿದರು. ಜವರಪ್ಪಗೌಡರು ರೇಗಾಡಿದ ದಿನವನ್ನೇ ಕಾಣದಿದ್ದ ನನಗೆ ಅವರು ಆಡಿದ ಮಾತುಗಳಿಂದ ಭ್ರಾಂತಳಾಗಿ ಹೋದೆ. ಏನ್ರಿ ವಿವೇಕವೇನಾದರೂ ಇದೆಯೊ ಇಲ್ಲವೊ. ಟ್ರಸ್ಟ್‌ಮಾಡುವುದರಿಂದ ಆಗುವ ತೊಂದರೆ ಏನು ಬಂತು. ನೀವೇಹೇಳುವಂತೆ ಪಿ. ಇ. ಎಸ್. ಸಂಸ್ಥೆ ಶಂಕರಗೌಡರ ಅಪ್ಪನ ಸ್ವತ್ತೇ ಎಂದು ಕೇಳುವ ನಿಮ್ಮಪ್ಪನ ಅಥವಾ ನಮ್ಮಪ್ಪನ ಸ್ವತ್ತೂ ಅಲ್ಲ. ನಿಮ್ಮಲ್ಲಿ ಒಂದು ನೆನಪು ಮಾತ್ರ ಇರಲಿ. ಮಹತ್ಕಾರ್ಯ ಎಸಗಿದವರ ಬಗ್ಗೆ ಕೃತಜ್ಞತೆಯಿರಲಿ. ಕೃತಘ್ನ ರಾಗಬೇಡಿ. ಎಂದು ಕಠಿಣವಾಗಿ ಹೇಳಿದ ಜವರಪ್ಪಗೌಡರು ನಿಮ್ಮಿಂದ ಪಿ. ಇ. ಎಸ್.

ಸಂಸ್ಥೆ ಬೆಳೆದಿದೆ ಎಂಬ ತಪ್ಪುಕಲ್ಪನೆ ನನ್ನಿಂದ ನಿಮ್ಮಿಂದ ದೂರವಿಡಿ. ನಾವಿಲ್ಲದಿದ್ದರೂ ಆ ಸಂಸ್ಥೆ ಇಂದಿನಂತೆಯೇ ಬೆಳೆಯುತ್ತಿತ್ತು. ಆದರೆ ಶ್ರೀ ಕೆ. ವಿ. ಶಂಕರಗೌಡರು ಇಲ್ಲದಿದ್ದರೆ ಸಂಸ್ಥೆ ಹೇಳ ಹೆಸರಿಲ್ಲದೆ ಹೋಗುತ್ತಿತ್ತು ಎಂಬುದು ಸದಾ ನಮ್ಮ ಮನಸ್ಸಿನಲ್ಲಿರಲಿ. ನಮ್ಮ ಮಕ್ಕಳು ಮೊಮ್ಮಕ್ಕಳಿಗೂ ಹೇಳಿ ಹೋಗೋಣ ಎಂದವರು ಶ್ರೀ ಚೌಡಯ್ಯನವರ ಬಗ್ಗೆ ಎತ್ತಿದ ಆಕ್ಷೇಪಣೆ ಬಗ್ಗೆ ಬಿದ್ದವನು ಏಳಲೇಬಾರದೇನು, ಯಾವುದೊ ಒಂದು ಘಳಿಗೆಯಲ್ಲಿ ಉಂಟಾದ ಕಹಿಪ್ರಸಂಗವನ್ನೇ ಮುಂದುವರಿಸಿ ಕೊಂಡು ಹೋಗುವುದು ಬುದ್ಧಿವಂತರ ಲಕ್ಷಣವಲ್ಲ. ಆತಂಕ ನಿವಾರಿಸಿಕೊಂಡು ಮುಂದೆ ಹೋಗಬೇಕು. ಶಂಕರಗೌಡರ ಸಹಕಾರ ಸಹಾಯ ಬೆಳೆದುನಿಂತ ಶಿಕ್ಷಣ ಸಂಸ್ಥೆಗೆ ಅಗತ್ಯ. ಈ ಸಂಸ್ಥೆ ಇನ್ನೂ ಬೆಳೆಯ ಬೇಕಾಗಿದೆ. ಈ ಬೆಳವಣಿಗೆಗೆ ಶಂಕರಗೌಡರೂ ನೀರೆರೆದು ಪೋಷಿಸಬೇಕಾಗಿದೆ. ಈ ಒಂದು ವಿಶಾಲ ದೃಷ್ಟಿ ಶ್ರೀ ಚೌಡಯ್ಯನವರದಾಗಿರಬೇಕು. ಪೊರತು ಚೌಡಯ್ಯನವರು ನಿಸ್ವಾರ್ಥ ಸೇವಾಪರರು ಎಂಬುದನ್ನು ಮೊದಲಿನಿಂದ ನನಗಿಂತ ಹೆಚ್ಚು ಹೆಚ್ಚಾಗಿ ಗುರ್ತಿಸಿದ ನೀವು ಉತ್ತಮರ ಬಗ್ಗೆ ಇಲ್ಲದ ಕಪ್ಪು ಚುಕ್ಕಿ ಕೂರಿಸಲು ಹೋಗಬಾರದೆಂದು ತಿಳಿಸಿದರು. ಆಗಲಿ ಸ್ವಾಮಿ ಬರುತ್ತೇವೆಂದು ಹೇಳಿ ಆ ಸ್ನೇಹಿತರಿಬ್ಬರೂ ಮರಳಿದರು.

ಈ ಪ್ರಕರಣಾ ನಂತರ ಗೌಡರು ಘಂಟೆಗಳ ಕಾಲ ಉಳಿದಿದ್ದು ಲೋಕಾಭಿರಾಮ ವಾಗಿ ಮಾತನಾಡುತ್ತ ಇಂದು ದೇಶದ ಯುವಪೀಳಿಗೆಯಲ್ಲಿ ಶಂಕರಗೌಡರು ಮಹಾ ಏನು ಮಾಡಿದ್ದಾರೆ ಎನ್ನುವುದಿರಲಿ ಗಾಂಧಿಮಹಾತ್ಮ ಏನು ಮಾಡಿದ ಎನ್ನುವ ಜನರಿದ್ದಾರೆ. ನೋಡಿ 40 ವರ್ಷಗಳ ಹಿಂದಿನ ದಿನಗಳನ್ನು ತಿರುಗಿ ನೋಡಿ ವೀಕ್ಷಿಸಿ ದ್ದೇನೆ. ಬೆಳಗಾದರೆ ಸ್ನೇಹಿತರುಗಳನ್ನು ಒಂದೆಡೆ ಸೇರಿಸಿ ಜನೋಪಯೋಗಿ ಕಾರ್ಯ ಗಳನ್ನು ನೆರವೇರಿಸುತ್ತ ಬಂದೆವು. ನಾನಾ ಸಂಸ್ಥೆಗಳ ಭವ್ಯ ಕಟ್ಟಡಗಳು ಎದ್ದು ನಿಂತಿವೆ. ಎಂದೆಂದಿಗೂ ಜನ ಹೇಳದಿದ್ದರೂ ನಿರ್ಜೀವ ಕಲ್ಲುಗಳು ದುಡಿದವರ ದುಡಿಮೆಯ ಸ್ಮರಣೆಯನ್ನಂತು ಮಾಡುತ್ತವೆ. ಬೆಳಗ್ಗೆದ್ದರೆ ಯಾವುದಾದರು ಒಳ್ಳೆ ಕೆಲಸ ಜನೋಪಯೋಗಿ ಕಾರ್ಯಕ್ರಮ ಹೆಣೆಯಲು ವೇಳೆ ಸಾಲದಾಗುತಿತ್ತು ಇನ್ನು ಕೆಟ್ಟದನ್ನು ಯೋಚಿಸಲು ವೇಳೆ ಎಲ್ಲಿ ಬರಬೇಕು.

ಯಾವುದಾದರೂ ಸರ್ಕಾರಿ ನೇಮಕಾತಿ ಸಮಿತಿಗೆ ಸದಸ್ಯರಾಗಲಿ, ಶಾಸಕರಾಗಲಿ, ಯಾವುದೇ ಕೆಲಸ ಮಾಡಲು ನಿಮ್ಮದು ನನ್ನದೇ, ನನ್ನದು ನನ್ನದೇ ಎಂಬ ಸಮಾಜವಾದ ತಳಹದಿಯ ಮೇಲೆ ಜನಸೇವೆ ಸಾಗುತ್ತಿರುವುದನ್ನು ಕಂಡಾಗ ದೇವರೇ ಜೀವನದಲ್ಲಿ ಸಾಕಷ್ಟು ಎಲ್ಲವನ್ನು ನೋಡಿ ಆಯಿತು ಎನ್ನುವಂತಾಗುತ್ತದೆ. ನೇಮಕಾತಿ ಸಮಿತಿಗಳ ಸದಸ್ಯರ ಲಂಚಗುಳಿತನದಿಂದಾಗಿ ಯಾವುದೇ ನೇಮಕಾತಿ ಅತೃಪ್ತಿಯಿಂದ ಪ್ರಕಟ ಗೊಳ್ಳುವ ಅದರ ರದ್ದಾಗುವ ದುರಂತಮಯ ಸನ್ನಿವೇಶ ಸೃಷ್ಟಿಯಾಗಿದೆ.

ಶ್ರೀ ಶಂಕರಗೌಡರ ಬಳಗದ ಕೆಲವು ಸ್ನೇಹಿತರು ಗತಿಸಿದ್ದಾರೆ, ಉಳಿದಿರುವ

ಸ್ನೇಹಿತರು ಅನೀತಿ ಮಾರ್ಗವನ್ನು ಅರಿತವರಲ್ಲ. ಶಂಕರಗೌಡರ ಸ್ಥಿತಿ ಯೋಚಿಸಿದಾಗ ಹರಿಶ್ಚಂದ್ರ ಹೆಂಡತಿ ಮಾರಾಟಕ್ಕಿಟ್ಟಂತೆ ಕಟ್ಟಿದ ಮನೆಯ ಮಾರಾಟಕ್ಕೆ ಕರೆ ನೀಡಿದರು. ಇಂತಹ ಸಚ್ಚಾರಿತ್ರ ವ್ಯಕ್ತಿಗಳ ಬಗ್ಗೆ ಜನರಲ್ಲಿ ಅನುಕಂಪ ಸಹಾನುಭೂತಿಯಿರಬೇಕಾದುದು. ಸಭ್ಯತೆ ಲಕ್ಷಣ. ಶಂಕರಗೌಡರು ಮತ್ತವರ ಸ್ನೇಹಿತರು ತಪ್ಪೇ ಮಾಡಿಲ್ಲ ಎಂಬ ವಾದವು ಸರಿಯಿಲ್ಲ. ಮೌಲಾನ ಅಜಾದ್ ಅವರು ಬಹಿರಂಗ ಸಭೆಯಲ್ಲಿ ಚುಟುಕ್ಕು ನೀಡುತ್ತಿದ್ದರು ಎನ್ನುವ ತಪ್ಪಿದ್ದಂತೆ. ಎಳ್ಳಷ್ಟು ತಪ್ಪು ಮಾಡದ ವ್ಯಕ್ತಿಗೆ ಮರ್ತ್ಯದಲ್ಲೇನು ಕೆಲಸ. ಅವನ ಹುಟ್ಟು ಸಾವೂ ಕಾಣದ ಸ್ವರ್ಗದಲ್ಲಿ ಮುಂತಾಗಿ ವೇದಾಂತಿಕ ಅಂಶಗಳನ್ನು ಪ್ರಸ್ತಾಪಿಸಿದರು.

ಶಂಕರಗೌಡರು ಸ್ಥಾಪಿಸಿದ ಪಿ. ಇ. ಎಸ್. ಸಂಸ್ಥೆಯು ಇಂಜಿನಿಯರಿಂಗ್ ಕಾಲೇಜಿನಿಂದ ಶಿಕ್ಷಣಕ್ಷೇತ್ರದಲ್ಲಿ ಹಿಂದುಳಿದ ಮಂಡ್ಯ ಜಿಲ್ಲೆಯಲ್ಲೇ ನೂರಾರು ಜನ ಇಂಜಿನಿಯರುಗಳು ಓದಿ ಹೊರ ದೇಶದಲ್ಲಿ ಖ್ಯಾತಿವಂತರಾಗಿದ್ದಾರೆ. ಸರ್ಕಾರಿ ನೌಕರಿಯಲ್ಲಿ ಉತ್ತಮ ಸೇವೆ ಸಲ್ಲಿಸುತ್ತ ಸಂಸ್ಥೆಗೆ ಒಳ್ಳೆ ಹೆಸರು ತಂದಿದ್ದಾರೆ. ಆ ಸಂಸ್ಥೆಗೂ ಪ್ರಾರಂಭದ ದಿನಗಳಲ್ಲಿ ಶ್ರೀ ಆದಿಚುಂಚನಗಿರಿಯ ವೈದ್ಯಕೀಯ ಮಹಾವಿದ್ಯಾಲಯಕ್ಕೆ ಬಂದ ಗತಿಯೇ ಒದಗಿತ್ತು. ಸುದೈವಾಯಿತು ಎದ್ದುನಿಂತು ಯಾವ ಚಂಡಮಾರುತಕ್ಕೂ ಬಗ್ಗದ ಮರವಾಗಿ ಬೆಳೆದು ನಿಂತಿದೆ.

ಶ್ರೀ ಆದಿ ಚುಂಚನಗಿರಿ ವೈದ್ಯಕೀಯ ಮಹಾವಿದ್ಯಾಲಯದ ಅನಾಸಕ್ತ ವಿದ್ಯಾರ್ಥಿಗಳು ಮುಷ್ಕರ ನಡೆಸುವಂತೆ ಸ್ಥಳೀಯರೇ ಕೆಲವು ಕುಹಕಿಗಳನ್ನು ಎತ್ತಿಕಟ್ಟಿ ಆಡಿದ ಆಟಗಳು ತುಂಬಾ ಅವಹೇಳನಕಾರಿಯಾದುದು. ಈ ಮುಷ್ಕರ ನಿವಾರಿಸಲು ನಿಮ್ಮ ಮೈದುನ ನಗರ ಸಭಾ ಅಧ್ಯಕ್ಷ ಶ್ರೀ ಎಂ.ಕೆ. ರಾಮು ಲಿಂಗೇಗೌಡರ ಮಗ, ಶ್ರೀ ಎಂ. ಎಸ್. ಆತ್ಮಾನಂದರ ಅವಿರತ ಸೇವೆ ತುಂಬಾ ಸ್ಮರಣೀಯವಾದುದು ಎಂದು ತಿಳಿಸಿದರು.

ಇನ್ನು ಸರಳ ಮದುವೆ ವಿಚಾರ. ಜವರಪ್ಪಗೌಡರ ಹೆಸರು ಜಿಲ್ಲೆಯ ಮನೆ ಮನೆ ಮಾತಾಗಿದೆ. ಅವರು ಪ್ರಕಟಿಸುತ್ತಿರುವ ಮಹಾಕವಿ ಕುವೆಂಪು ಅವರ ಮಂತ್ರ ಮಾಂಗಲ್ಯ ಕೃತಿ ಮನೆ ಮನೆಯಲ್ಲಿದ್ದು ಇಂದು ಜಿಲ್ಲೆಯಲ್ಲಿ ಸಂಪ್ರದಾಯದ ಮದುವೆಗಳು ಅಪರೂಪವಾಗುತ್ತಿವೆ. ಸರಳಮದುವೆ ಬಗ್ಗೆ ಜನರಲ್ಲಿರುವ ಆತಂಕ ನಿವಾರಿಸಲು ಮುಂದಾಳುಗಳ ಮಕ್ಕಳನ್ನು ಸರಳಮದುವೆಗೆ ಪ್ರೇರೇಪಿಸಿ ಆ ಮೂಲಕ ಜನರ ಮನಸ್ಸನ್ನು ಹಸನು ಮಾಡುವಲ್ಲಿ ಶ್ರೀ ಜವರಪ್ಪಗೌಡರು ಶಾಸಕರುಗಳಾದ ಶ್ರೀ ಎಚ್. ಡಿ. ಚೌಡಯ್ಯನವರು ತಮ್ಮ ಹೆಣ್ಣು, ಗಂಡು ಮಕ್ಕಳ ಮದುವೆಯನ್ನು ಸರಳವಾಗಿ ನಡೆಸಿ ಅಧಿಕ ಸಂಖ್ಯೆಯಲ್ಲಿ ಜನರನ್ನು ಸೇರಿಸಿ ಜನರ ಮನಸ್ಸನ್ನು ಸರಳ ಮದುವೆಗೆ ಅಣಿಗೊಳಿಸಿದರು. ನನ್ನ ಮೂರನೆಯ ಮಗ ಡಾಕ್ಟರ್ ಸತ್ಯನ ಸರಳ ಮದುವೆಗೆ ನನ್ನ ಮಕ್ಕಳಿಗೆ ಹೇಳಿ ನಾಲ್ಕಾರು ಸಾವಿರ ಜನರನ್ನು ಕಳಿಹಾಕಿ ತಾವೇ ನಿಂತು ಮಾಂಗಲ್ಯ

ಧಾರಣೆಮಾಡಿದರು. ಇಂದು ಮದುವೆಯ ದುಂದುವೆಚ್ಚದಿಂದ ತತ್ತರಿಸುತ್ತಿದ್ದ ಜನರನ್ನು ಸಾಲ ಸೋಲಗಳಿಂದ ಮುಕ್ತರನ್ನಾಗಿಸಿ ಜನೋಪಕಾರಿ ಹೆಸರನ್ನು ಸಾರ್ಥಕ ಗೊಳಿಸಿಕೊಂಡಿದ್ದಾರೆ ಶ್ರೀ ಜವರಪ್ಪಗೌಡರು.

ಜನೋಪಕಾರಿ ಜವರಪ್ಪಗೌಡರು ಮತ್ತು ಪತ್ನಿ ಪಾರ್ವತಮ್ಮ ಅಕ್ಕನ ಬಾಳು ಹಸನಾಗಿ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳೊಡನೆ ಸೂರ್‍ಯಾಲ ಬಾಳಲು ಭಗವಂತನ ಆಶೀರ್ವಾದವಿರಲಿ ಎಂದು ಹಾರೈಸುತ್ತೇನೆ.

ಲೀಲಮ್ಮ ಶಿವನಂಜಪ್ಪ



# ಬಹುಮುಖ ವ್ಯಕ್ತಿತ್ವ

ಸ್ವಾತಂತ್ರ್ಯಚಳುವಳಿಯನ್ನು ದೇಶೀಯ ರಾಜ್ಯಗಳಿಗೆ, ಅಂದರೆ ರಾಜ ಮಹಾ ರಾಜರುಗಳು ಆಳುತ್ತಿದ್ದ ಸಂಸ್ಥಾನಗಳಿಗೆ, ವಿಸ್ತರಿಸಿದ್ದು 1937 ರಿಂದ. ಅದಕ್ಕೆ ಮೊದಲು ಗಾಂಧೀಜಿಯವರು ಚಳುವಳಿಯನ್ನು ಬ್ರಿಟಿಷರ ಆಡಳಿತಪ್ರಾಂತಗಳಾದ ಬೊಂಬಾಯಿ, ಮದ್ರಾಸು ಇತ್ಯಾದಿ ಪ್ರಾಂತಗಳಿಗೆ ಮಾತ್ರ ಸೀಮಿತಗೊಳಿಸಿದ್ದರು. 1937ರಲ್ಲಿ ಬೊಂಬಾಯಿನಿಂದ ಪ್ರಸಿದ್ಧ ರಾಜಕೀಯ ಮುಖಂಡ ನಾರಿಮನ್ ಅವರು ಮೈಸೂರು ನಗರಕ್ಕೆ ಭೇಟಿಕೊಟ್ಟಾಗ ಸ್ವಾತಂತ್ರ್ಯ ಚಳುವಳಿ ಮೈಸೂರುರಾಜ್ಯಕ್ಕೆ ವಿಸ್ತರಿಸಲ್ಪಟ್ಟಿತು. ಆ ವರ್ಷವೇ ಮೈಸೂರು ಪ್ರದೇಶ ಕಾಂಗ್ರೆಸ್ ಸ್ಥಾಪನೆಯಾಗಿ ರಾಜ್ಯದಾದ್ಯಂತ ಚಳುವಳಿಗಳು ಪ್ರಾರಂಭವಾದುವು. ವಿದ್ಯಾರ್ಥಿಗಳು ಬಹುಸಂಖ್ಯೆ ಯಲ್ಲಿ ಭಾಗವಹಿಸಿ ಚಳುವಳಿಯು ತೀವ್ರವಾಗಿ ಹರಡುವಂತೆ ಮಾಡಿದರು. ಆ ಸಂದರ್ಭ ದಲ್ಲಿ ಮೈಸೂರು ನಗರದಲ್ಲಿ ವಿದೇಶೀವಸ್ತ್ರಗಳ ದಹನ, ವಿದೇಶೀನಾಮಾಂಕಿತ ಕಟ್ಟಡಗಳ ಮುಂದೆ ಸತ್ಯಾಗ್ರಹ ಈ ಮೂಲಕ ಯುವಕರು ಚಳುವಳಿಯನ್ನು ಕೈಗೆತ್ತಿ ಕೊಂಡರು. ಮೈಸೂರಿನ ಅಶೋಕ ರಸ್ತೆಯೂ, ಇರ್ವಿನ್ ರಸ್ತೆಯೂ ಸೇರುವ ಚೌಕ ದಲ್ಲಿ ಹೊಸದಾಗಿ ನಿರ್ಮಿಸಿದ್ದ ಪೋಲೀಸ್ ಇಲಾಖೆಯ ಕಟ್ಟಡಕ್ಕೆ ಅಂದಿನ ಐ. ಜಿ. ಪಿ. ಯಾಗಿದ್ದ ಹ್ಯಾಮಿಲ್ಟನ್ ಅವರ ಹೆಸರನ್ನಿಡಲಾಗಿತ್ತು. ಕಾಂಗ್ರೆಸ್‌ನವರು ಈ ಹೆಸರನ್ನು ಬದಲಾಯಿಸಬೇಕೆಂದು ಹ್ಯಾಮಿಲ್ಟನ್ ಭವನದ ಮುಂದೆ ಸತ್ಯಾಗ್ರಹವನ್ನು ಪ್ರಾರಂಭಿಸಿ ದರು. ಪ್ರತಿ ದಿನವೂ ಒಬ್ಬೊಬ್ಬ ಮುಖಂಡರು—ಎಚ್. ಸಿ. ದಾಸಪ್ಪ, ಪಾಲಹಳ್ಳಿ ಸೀತಾರಾಮಯ್ಯ, ತಗಡೂರು ರಾಮಚಂದ್ರರಾವ್—ಮುಂತಾದವರು ಭಾಷಣ ಮಾಡುತ್ತಿದ್ದರು. ಒಂದು ದಿನ ಸಭೆಯನ್ನುದ್ದೇಶಿಸಿ "ನಾಗಮಂಗಲದ ಜವರಪ್ಪಗೌಡ ಭಾಷಣ ಮಾಡುತ್ತಾನೆ ಎಂದು ಪ್ರಕಟಿಸಿದರು. ಅಷ್ಟರಲ್ಲಾಗಲೇ ಈ ಹುಡುಗ ತನ್ನ ವಾಕ್ ಚಾತುರ್ಯದಿಂದ ಸಾರ್ವಜನಿಕರ ಗಮನವನ್ನು ಸೆಳೆದಿದ್ದ. ಎನ್. ಭದ್ರಯ್ಯ ನವರು ಸ್ಥಾಪಿಸಿದ್ದ ಗ್ರಾಮಸೇವಾ ವಿದ್ಯಾರ್ಥಿನಿಲಯದಲ್ಲಿದ್ದು, ವಿದ್ಯಾರ್ಥಿ ಚಳುವಳಿ ಯಲ್ಲಿ ಪಾಲ್ಗೊಂಡು ಖಾದಿ ಧರಿಸುತ್ತಿದ್ದ, ನಾವು ಮೂರು ನಾಲ್ಕು ವಿದ್ಯಾರ್ಥಿಗಳು (ಆಗ ನಾನು ಹೈಸ್ಕೂಲು ಎರಡನೆ ತರಗತಿಯಲ್ಲಿದ್ದೆ) ಜವರಪ್ಪಗೌಡನ ಭಾಷಣ ಕೇಳಲು ಹೋದೆವು.

ಆ ಸಭೆ ಏರ್ಪಾಡಾದದ್ದು ಬೆಳಗಿನ 10-00 ಘಂಟೆಯಲ್ಲಿ. ಎದುರು ಬಿಸಿಲನ್ನು ಲೆಕ್ಕಿಸದೆ ಸಾವಿರಾರು ಜನರು ಕಿಕ್ಕಿರಿದು ನಿಂತು ಈ ಹುಡುಗನ ಭಾಷಣವನ್ನು ಕೇಳು ತ್ತಿದ್ದರು. ನಮಗಿಂತ ಐದಾರು ವರ್ಷ ದೊಡ್ಡವನಿದ್ದರೂ ಆಕಾರದಲ್ಲಿ ವಾಮನ

ಮೂರ್ತಿಯಂತಿದ್ದು ಸಭೆಯನ್ನು ಧೈರ್ಯವಾಗಿ ಎದುರಿಸಿ, ಸರ್ಕಾರವನ್ನು ಕಟುವಾಗಿ ಟೀಕಿಸಿ, ಎದುರು ಕಟ್ಟಡಕ್ಕೆ ಹ್ಯಾಮಿಲ್ಟನ್ ಹೆಸರು ಇಟ್ಟಿರುವುದು ರಾಜ್ಯಕ್ಕೆ ಅಪಮಾನವೆಂದೂ, ಆ ನಾಮಫಲಕವನ್ನು ಕೀಳುವವರೆಗೂ ಸತ್ಯಾಗ್ರಹ ನಿಲ್ಲಕೂಡ ದೆಂದೂ ಬಹಳ ಸ್ಫೂರ್ತಿಯಿಂದ ಭಾಷಣ ಮಾಡಿದ್ದು ಇನ್ನೂ ನೆನಪಿನಲ್ಲಿದೆ.

ಹಳ್ಳಿಯ ಹುಡುಗ, ಅಷ್ಟೇನೂ ಓದಿದವನಲ್ಲ. ಇಂತಹವನು ಪ್ರಭಾವಯುತ ಭಾಷಣ ಮಾಡುತ್ತಿರುವುದು ಆಶ್ಚರ್ಯದಾಯಕವೆಂದು ನಾವು ಮಾತನಾಡಿಕೊಂಡು ಹಿಂದಿರುಗಿದೆವು. ಇವನು ಮುಂದೆ ಒಳ್ಳೆಯ ವಾಗ್ಮಿಯಾಗಬಹುದೆಂದೂ ಭಾವಿಸಿದೆವು. ಈ ಪಾಪುನಮೂರ್ತಿಯೇ ಮುಂದೆ ಮಂಡ್ಯ ಜಿಲ್ಲೆಯಲ್ಲೂ. ಕರ್ನಾಟಕ ರಾಜ್ಯದಲ್ಲೂ ಪಾದರಸದಂತೆ ಚಳುವಳಿಗಳಲ್ಲಿ ಭಾಗವಹಿಸಿ ಹೆಸರು ಪಡೆದ ಪಿ. ಎಸ್. ಜವರಪ್ಪ ಗೌಡರು. ಇವರು ನನಗೆ ಸಂಬಂಧಿಯೂ ಆದರು, ಮುಂದೆ 1948 ರಲ್ಲಿ ನನ್ನ ಮದುವೆಯಾದ ಮೇಲೆ.

ಜವರಪ್ಪಗೌಡರು ಹುಟ್ಟಿದ್ದು ನಾಗಮಂಗಲ ತಾಲ್ಲೂಕು ಪಾಲಅಗ್ರಹಾರದಲ್ಲಿ. ತಂದೆ ನರಸೇಗೌಡರು ಬಹಳ ದೈವಭಕ್ತರೂ, ಗುರುಭಕ್ತರೂ ಆಗಿದ್ದ, ಆದಿ ಚುಂಚನ ಗಿರಿಯ ಹಿಂದಿನ ಪಿಠಾಧೀಶರಾಗಿದ್ದ ಶ್ರೀ ಭಕ್ತನಾಥರು ಮತ್ತು ಶ್ರೀ ಚಂದ್ರಶೇಖರ ನಾಥರುಗಳಿಗೆ ಪ್ರೀತಿ ಪಾತ್ರರಾಗಿದ್ದವರು; ಇವರನ್ನು ನಾನು ನೋಡಿದ್ದೆ. ಅಂತಹವರ ಮಗನಾದಮೇಲೆ ಜವರಪ್ಪಗೌಡರೂ ಭಕ್ತರಾಗಲೇಬೇಕಿತ್ತು. ಹಾಗೆ ಆಗಿದ್ದಾರೆ. ಇವರ ಮಂಡ್ಯದ ಮನೆಯ ಗುದ್ದಲಿ ಪೂಜೆ. ಗೃಹಪ್ರವೇಶ ನಡೆದಿದ್ದು ಗುರುಗಳ ಸಮ್ಮುಖ ದಲ್ಲಿ. ಅದ ರಿಂದಲೇ ಆ ಮನೆಗೆ "ಗುರುಕೃಪ" ಎಂದೇ ಹೆಸರಿಟ್ಟಿದ್ದಾರೆ. ಇವರು ಮೊದಲಿನಿಂದಲೂ ಆದಿ ಚುಂಚನಗಿರಿಯ ಜಗದ್ಗುರುಗಳನ್ನು ತುಂಬಾ ಗೌರವದಿಂದ ಕಂಡಿದ್ದಾರೆ. ಈಗಿನ ಪೀಠಾಧೀಶರಾದ ಶ್ರೀ ಬಾಲಗಂಗಾಧರನಾಥರಲ್ಲೂ ಇವರಿಗೆ ಅಪಾರ ಭಕ್ತಿ. ಶ್ರೀಮಠದ ಶ್ರೇಯೋಭಿವೃದ್ಧಿಗೂ, ಅವರ ಆಶ್ರಯದಲ್ಲಿ ಸ್ಥಾಪಿತ ವಾಗಿರುವ ವಿದ್ಯಾಸಂಸ್ಥೆಗಳಿಗೂ ಜವರಪ್ಪಗೌಡರು ಅಪಾರ ಸೇವೆಸಲ್ಲಿಸಿ ಜನಾನುರಾಗಿ ಗಳಾಗಿದ್ದಾರೆ. ಇವರ ಗುರುಕೃಪದಲ್ಲಿ ಪ್ರದರ್ಶಿತವಾಗಿರುವ ಪ್ರದರ್ಶಿತವಾಗದೆ ಪೆಟ್ಟಿಗೆಗಳಲ್ಲಿರುವ ಭಾವಚಿತ್ರಗಳನ್ನು ನೋಡಿದವರಿಗೆ ಜವರಪ್ಪಗೌಡರ ಬಹುಮುಖ ವ್ಯಕ್ತಿತ್ವ ಗೋಚರವಾಗದಿರದು.

1937ರಲ್ಲಿ ದೂರದಿಂದ ನೋಡಿದ್ದ ಜವರಪ್ಪಗೌಡರನ್ನು ಆಮೇಲೆ ಕಂಡದ್ದು ನನ್ನ ಮದುವೆಯಾದ ಮೇಲೆ. 1948ರಲ್ಲಿ ನಮ್ಮ ಮಾವನವರಾದ ಎಂ. ತಮ್ಮಯ್ಯ ನವರು (ಜವರಪ್ಪಗೌಡರ ಪತ್ನಿ ಕಡೆಯ ಸಂಬಂಧಿ) ಚಿತ್ರದುರ್ಗದಿಂದ ಮಂಡ್ಯಕ್ಕೆ ಸಹಕಾರ ಇಲಾಖೆಯ ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಗಿ ವರ್ಗವಾಗಿದ್ದರು. ಹೊಸದಾಗಿ ಮದುವೆ ಯಾದ ನಾನು ಮಾವನವರ ಮನೆಗೆ ಆಗಾಗ್ಗೆ ಬಂದಾಗ ಜವರಪ್ಪಗೌಡರನ್ನು ಬಹಳ ಹತ್ತಿರದಿಂದ ನೋಡುವ ಅವಕಾಶ ಸಿಕ್ಕಿತು ; ಅಂದರೆ 40 ವರ್ಷ ಅವರನ್ನು ನೋಡಿ.

ಒಡನಾಡಿದ್ದೇನೆ. ಆಗ ಇವರು ಮಂಡ್ಯದಲ್ಲಿ ಬಾಡಿಗೆ ಮನೆಯಲ್ಲಿದ್ದರು. ಯಾರೋ ಹೇಳುತ್ತಿದ್ದಂತೆ ಇವರ ಅಲೆಮಾರಿ ಜೀವನ (ರಾಜಕೀಯ ಅಲೆಮಾರಿತನ) ಮುಗಿದು ಸಂಸಾರಸ್ಥರಾಗಿದ್ದರು ! ವ್ಯಾಪಾರಕ್ಕಾಗಿ ಪೇಟೆಬೀದಿಯಲ್ಲಿ ಪುಸ್ತಕದ ಅಂಗಡಿ ಇಟ್ಟು ಇವರ ತಮ್ಮ ಗೋವಿಂದಪ್ಪನೊಡನೆ ಜೀವನವನ್ನು ನಡೆಸುತ್ತ, ರಾಜಕೀಯದಲ್ಲೂ ಸಕ್ರಿಯಪಾತ್ರವಹಿಸಿದರು. ಇದು ಎಲ್ಲರಿಗೂ ತಿಳಿದಿರುವ ವಿಷಯ, ಶ್ರೀಮಾನ್ ಕೆ. ವಿ. ಶಂಕರಗೌಡರು, ಕೆ. ಸಿಂಗಾರಿಗೌಡರು, ಹೆಚ್. ಕೆ. ವೀರಣ್ಣಗೌಡರು ಮುಂತಾದವರೊಡನೆ ಸ್ವಾತಂತ್ರ್ಯಕ್ಕೆ ಮುಂಚೆಯೂ, ಆಮೇಲೂ ಕಾಂಗ್ರೆಸ್ ಕೆಲಸವನ್ನು ಕೈಗೆತ್ತಿಕೊಂಡು ಉತ್ಸಾಹದಿಂದ ನೆರವೇರಿಸಿದ ಕೀರ್ತಿ ಜವರಪ್ಪಗೌಡರದು. ಇವರಿಗೆ ಇಂಗ್ಲೀಷ್ ಕಲಿಯಲು ರಾಜಕೀಯವು ಸದವಕಾಶ ಕೊಟ್ಟಿತು. ಉತ್ತರ ಇಂಡಿಯಾದಿಂದ ಬರುತ್ತಿದ್ದ ಮುಖಂಡರೊಡನೆ ಇವರು ಮಾತನಾಡುವ ಸಲುವಾಗಿ ಇಂಗ್ಲಿಷ್ ಮತ್ತು ಹಿಂದಿಯನ್ನು ಕಲಿತು ಚೆನ್ನಾಗಿ ಸಂಭಾಷಣೆ ನಡೆಸಲು ಅನುಭವ ಪಡೆದರು. ಬಹಿರಂಗವಾಗಿ ಈ ಭಾಷೆಗಳನ್ನು ಇವರು ಬಳಸದೆ ಇದ್ದರೂ ಇವರ ಅನುಭವಗಳನ್ನು ವಿವರಿಸುವಾಗ ಇವರಿಗಿದ್ದ ಇತರೆ ಭಾಷಾಜ್ಞಾನ ನಮಗೆ ಚೆನ್ನಾಗಿ ಅರ್ಥವಾಗುತ್ತದೆ. ಒಮ್ಮೆ ಯು. ಎನ್. ಢೇಬರ್ ಅವರು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಮಂಡ್ಯ ಜಿಲ್ಲೆಯ ಕಾಂಗ್ರೆಸ್ ಹಗರಣವನ್ನು ಪರಿಹರಿಸಲು (ಸಾಹುಕಾರ್ ಎಸ್. ಚನ್ನಯ್ಯ ಮತ್ತು ಕೆ. ವಿ. ಶಂಕರಗೌಡರ ನಡುವೆ ಇದ್ದ ವಿರಸ) ಬಂದಿದ್ದರು. ಆಗ ಅವರೊಡನೆ ಮಾತನಾಡಲು ಕೆಲವರು ಹಿಂಜರಿದಾಗ ನೆರೆತಲೆಯ (ಚಿಕ್ಕ ವಯಸ್ಸಿನಲ್ಲೇ ತಲೆ ನೆರೆತಿತ್ತು) ಜವರಪ್ಪಗೌಡರನ್ನು ಕರೆದು ವಿಷಯವನ್ನು ವಿವರಿಸಲು ಕೇಳಿದರಂತೆ. ಜವರಪ್ಪಗೌಡರು ನಿರರ್ಗಳವಾಗಿ ಇಂಗ್ಲೀಷ್‌ನಲ್ಲಿ ತಮ್ಮ ವಾದವನ್ನು ಮಂಡಿಸಿ ಎಸ್. ಚನ್ನಯ್ಯನವರ ದೂರಿನಲ್ಲಿ ಯಾವ ಸತ್ಯಾಂಶವೂ ಇಲ್ಲವೆಂದು ಅವರನ್ನು ಒಪ್ಪಿಸಿದರಂತೆ. ಇಂತಹ ವ್ಯಕ್ತಿತ್ವದ ಜವರಪ್ಪಗೌಡರು ಜನಾನುರಾಗಿಗಳಾದದ್ದು ಆಶ್ಚರ್ಯವೇನಲ್ಲ. ಆದರೆ ಇವರು ಒಮ್ಮೆಯಾದರೂ ತಾಲ್ಲೋಕು ಮಟ್ಟದ ಚುನಾವಣೆಗೂ ನಿಲ್ಲಲಿಲ್ಲ. ಒಮ್ಮೆ ಮಂಡ್ಯ ಪುರಸಭೆಯ ಸದಸ್ಯರಾಗಿ ಚುನಾಯಿತರಾದರೆ ಹೊರತು ಶಾಸಕರಾಗಲು ಚುನಾವಣೆಗೆ ಸ್ಪರ್ಧಿಸಲಿಲ್ಲ. ಹಣದ ಅಭಾವವೋ ಇವರ ಮನೋಭಾವವೋ ಕಾಣೆ. ಒಮ್ಮೆ ನಾನು ಪ್ರಶ್ನೆ ಮಾಡಿದಾಗ ತೇಲು ಉತ್ತರ ಕೊಟ್ಟರು. ಇವರ ಸಂಸಾರ ತಾಪತ್ರಯದಲ್ಲಿ ಚುನಾವಣೆಯ ಭಾರಿ ವೆಚ್ಚವನ್ನು ಹೊರಲು ಸಾಧ್ಯವಾಗುವುದಿಲ್ಲವೆಂದೇ ಈ ತೀರ್ಮಾನಕ್ಕೆ ಬಂದರೆಂದು ನನ್ನ ಭಾವನೆ.

ಇವರು 1956ರಲ್ಲಿ ಭಾಷಾವಾರು ಪ್ರಾಂತ ರಚನೆಯ ವಿಷಯವಾಗಿ ತಲೆಯನ್ನು ಬಿಸಿಮಾಡಿಕೊಂಡರೆಂದೇ ಹೇಳಬೇಕು. ಮುಖಂಡರನ್ನು ಹುರಿದುಂಬಿಸಿ, ಹಿಂದಿನ ಮೈಸೂರು ರಾಜ್ಯವು ಪ್ರತ್ಯೇಕವಾಗೇ ಉಳಿಯಬೇಕೆಂದು ಉಗ್ರ ಚಳುವಳಿಯನ್ನು ಪ್ರಾರಂಭಿಸಿದರು. ಇದರ ಸಲುವಾಗಿ "ವಿಶ್ವಾಮಿತ್ರ" ಎಂಬ ಪತ್ರಿಕೆಯನ್ನು ಹೊರಡಿಸಿ

ಪತ್ರಿಕೋದ್ಯಮಕ್ಕೆ ದುಮುಕಿದರು. ಮಂಡ್ಯದಲ್ಲಿ ಇದರ ಪ್ರಚಾರ ಸರಿಯಾಗಿರದೆ ಬೆಂಗಳೂರಿಗೆ ಸಂಸಾರಸಮೇತ ವಲಸೆಬಂದು ಚಾಮರಾಜಪೇಟೆಯಲ್ಲಿ ನಿಂತರು. ಬೆಂಗಳೂರಿನ ಜೀವನ ಕಷ್ಟಕರವಾಗಿ, ಇವರು ಹಸುಗಳನ್ನು ಸಾಕಿ, ಹಾಲು ಮಾರಿ ದಿನ ನಿತ್ಯದ ಜೀವನ ಸಾಗಿಸಬೇಕಾಯಿತು. ಪತ್ರಿಕೆಯಿಂದ ನಷ್ಟವನ್ನನುಭವಿಸಿ ಮರಳಿ ಮಂಡ್ಯಕ್ಕೆ ಬಂದು ಹೊಸ ಜೀವನವನ್ನು ಪ್ರಾರಂಭಿಸಿದರು.

ಭಾಷಾವಾರು ಪ್ರಾಂತರಚನೆಗೆ ಉಗ್ರ ಚಳುವಳಿ ಪ್ರಾರಂಭವಾಯಿತು. ಆದರೆ ಇದೆಲ್ಲ ಬಹು ಸಂಖ್ಯೆಯಲ್ಲಿರುವ ಒಕ್ಕಲಿಗರು ತಮ್ಮ ಆಡಳಿತವನ್ನು ಉಳಿಸಿಕೊಳ್ಳಲು ಹೂಡಿರುವ ಚಳುವಳಿಯೆಂದು, ಉಳಿದ ಕೋಮಿನವರೂ, ಕನ್ನಡ ಸಾಹಿತಿಗಳೂ ತೀವ್ರ ವಿರೋಧಮಾಡಿದರು. ಎಚ್. ಕೆ. ವೀರಣ್ಣಗೌಡರ ಮುಖಂಡತ್ವದಲ್ಲಿ ಒಂದು ನಿಯೋಗವು ಬೊಂಬಾಯಿಯಲ್ಲಿ ದೇವದಾಸ್ ಗಾಂಧಿಯವರನ್ನೂ (ಗಾಂಧೀಜಿಯ ಹಿರಿಯ ಮಗ, ಟೈಂಸ್ ಆಫ್ ಇಂಡಿಯಾ ಸಂಪಾದಕರು), ದೆಹಲಿಯಲ್ಲಿ ಪಂಡಿತ್ ನೆಹರು ಮುಂತಾದ ಮುಖಂಡರನ್ನೂ ಕಂಡು ಹಿಂದಿನ ಮೈಸೂರುರಾಜ್ಯವನ್ನು ಬದಲಾಯಿಸದೆ ಉಳಿಸಬೇಕೆಂದೂ, ಉಳಿದ ಕನ್ನಡ ಪ್ರದೇಶಗಳನ್ನೆಲ್ಲ ಸೇರಿಸಿ ಮತ್ತೊಂದು ಕನ್ನಡರಾಜ್ಯ (ಕರ್ನಾಟಕ)ವನ್ನು ಸ್ಥಾಪಿಸಬಹುದೆಂದೂ, ಅಂಕಿ ಸಂಖ್ಯೆಗಳ ಆಧಾರದಿಂದ ವಾದಿಸಿ ಮನವೊಲಿಸಲು ಪ್ರಯತ್ನಿಸಿದರು.

ಜವರಪ್ಪಗೌಡರೂ ಈ ನಿಯೋಗದಲ್ಲಿ ಒಬ್ಬರಿದ್ದು ತಮ್ಮ ವಾಕ್ಚಾತುರ್ಯ ವನ್ನೆಲ್ಲ ಉಪಯೋಗಿಸಿದ್ದನ್ನು ಅವರ ಬಾಯಿಂದಲೇ ಕೇಳಿದರೆ ಮೈ ಪುಳಕಿತವಾಗು ತ್ತದೆ. ಇದಾದ ಮೇಲೆ ಮಂಡ್ಯದಲ್ಲಿ ಕಾಂತರಾಜಪುರದ ಕೆ. ಲಕ್ಕಪ್ಪನವರನ್ನು ಅಧ್ಯಕ್ಷ ರನ್ನಾಗಿ ಮಾಡಿ ಬೃಹತ್ ಮೆರವಣಿಗೆಯನ್ನು ನಡೆಸಿ ಪ್ರತಿಭಟನೆಯನ್ನು ಪ್ರದರ್ಶಿಸಿ ದ್ದಲ್ಲದೆ, ಠರಾವುಗಳನ್ನು ಮಾಡಿ ದೆಹಲಿಗೆ ಕಳುಹಿಸಿದರು.

ಇಷ್ಟೆಲ್ಲ ನಡೆದರೂ ಮುಖ್ಯಮಂತ್ರಿ ಕೆ. ಹನುಮಂತಯ್ಯನವರೂ, ಸಾಹುಕಾರ್ ಎಸ್. ಚನ್ನಯ್ಯನವರೂ ಒಬ್ಬರಮೇಲೊಬ್ಬರು ಪೈಪೋಟಿ ಮಾಡಿ ಕರ್ನಾಟಕ ಪ್ರಾಂತ ವಾಗಲೇಬೇಕೆಂದು ಘೋಷಿಸಿದರು. ಸುವರ್ಣಾಕ್ಷರವಲ್ಲಿ ತನ್ನ ಹೆಸರು ಬರೆಯಲ್ಪಡು ತ್ತದೆಂದು ಹನುಮಂತಯ್ಯನವರು ಮತ್ತು ತಾನು ಕರ್ನಾಟಕದ ಮುಖ್ಯಮಂತ್ರಿಯಾಗ ಬಹುದೆಂದು ಭಾವಿಸಿದ ಎಸ್. ಚನ್ನಯ್ಯನವರು ಕೊನೆಗೆ ಒಕ್ಕಲಿಗರ ಬೆಂಬಲವನ್ನೇ ಕಳೆದುಕೊಂಡರು. ಆದರೆ ಕರ್ನಾಟಕವನ್ನು ವಿರೋಧಿಸಿದವರೇ (ಅಂದರೆ ವೀರಣ್ಣಗೌಡ ಮೊದಲಾದವರೇ) ಮುಂದೆ ತಮ್ಮ ಹೋರಾಟವನ್ನೆಲ್ಲ ಮರೆತು ವಿಶಾಲ ಕರ್ನಾಟಕದ ಏಳ್ಗೆಗಾಗಿ ದುಡಿಯಲು ತೀರ್ಮಾನಿಸಿದರು. ಇವರಲ್ಲಿ ಮುಖ್ಯರಾದವರು ಕೆಲವರು ಮಂತ್ರಿಗಳೂ ಆದರು. ಅವರಾರೆಂದರೆ ಎಚ್. ಕೆ. ವೀರಣ್ಣಗೌಡ, ವಿ. ವೆಂಕಟಪ್ಪ, ಎಂ. ವಿ. ಕೃಷ್ಣಪ್ಪ, ಕೆ. ಪುಟ್ಟಸ್ವಾಮಿ, ಕೆ. ವಿ. ಶಂಕರಗೌಡ, ಎಸ್. ಹುಚ್ಚಮಾಸ್ತಿಗೌಡ ಮುಂತಾದವರು.

ಕೆ. ವಿ. ಶಂಕರಗೌಡರು ಶಿಕ್ಷಣ ಸಚಿವರಾಗಿದ್ದಾಗ, ಪಿ. ಎಸ್. ಜವರಪ್ಪಗೌಡರ ಸೇವೆ ಮತ್ತು ಉತ್ಸಾಹವನ್ನು ಉಪಯೋಗಿಸಿಕೊಳ್ಳುವ ಸಲುವಾಗಿ, ಇವರನ್ನು ಕರ್ನಾಟಕ ರಾಜ್ಯ ವಯಸ್ಕರಶಿಕ್ಷಣ ಸಂಸ್ಥೆಯ ಅಧ್ಯಕ್ಷರನ್ನಾಗಿ ನೇಮಿಸಿದರು. ಈ ಸಂಸ್ಥೆಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಜವರಪ್ಪಗೌಡರು ವಿದ್ಯಾಪೀಠಗಳ ಕೆಲಸಗಳನ್ನು ವಿಸ್ತರಿಸಿದ್ದಲ್ಲದೆ, ಅವು ವಯಸ್ಕರಿಗೆ ಶಿಕ್ಷಣವನ್ನೊದಗಿಸುವಲ್ಲಿ ಯಶಸ್ವಿಯಾಗುವಂತೆ ಮಾರ್ಗದರ್ಶನ ನೀಡಿದರು. ಅವರೊಡನೆ ನಾನು (ಆಗ ನಗರ ಯೋಜನಾ ಇಲಾಖೆಯ ನಿರ್ದೇಶಕನಾಗಿದ್ದೆ) ಕೆಲವು ವಿದ್ಯಾಪೀಠಗಳಿಗೆ—ಶಿವಾರಗುಡ್ಡ, ಕೆಂಗೇರಿ, ಪನಿಗದಲೆ, ಕಾತ್ರಾಳೆ ಮತ್ತು ಹಂಪೆ ವಿದ್ಯಾಪೀಠಗಳಿಗೆ—ಭೇಟಿಯಿತ್ತು ಅಲ್ಲಿನ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಜವರಪ್ಪಗೌಡರ ಕಾರ್ಯವಿಧಾನವನ್ನೂ,ಜನಪ್ರಿಯತೆಯನ್ನೂ ನೋಡುವ ಅವಕಾಶ ಪಡೆದೆ. ಇವರು ಅಧ್ಯಕ್ಷರಾಗಿದ್ದಾಗ 1971ರಲ್ಲಿ ರಾಷ್ಟ್ರಮಟ್ಟದ ನೆಹರೂ ಸಾಕ್ಷರತಾ ಪ್ರಶಸ್ತಿ ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿಗೆ ದೊರೆಯಿತು. ಆ ಪುರಸ್ಕಾರ ವನ್ನು ದೆಹಲಿಯಲ್ಲಿ ರಾಷ್ಟ್ರದ ಉಪಾಧ್ಯಕ್ಷರಾಗಿದ್ದ ಪಾಠಕ್ ಅವರ ಹಸ್ತದಿಂದ ಜವರಪ್ಪಗೌಡರು ಸ್ವೀಕರಿಸುವ ಸೌಭಾಗ್ಯ ಒದಗಿತು. 1972ರಲ್ಲಿ ಸಂಸ್ಥೆಯ ಶಿಕ್ಷಣ ಪ್ರಕಟಣೆ ವಿಭಾಗಕ್ಕೆ ರಾಜ್ಯ ಮಟ್ಟದ ಪ್ರಶಸ್ತಿಯನ್ನು ದೊರಕಿಸಿಕೊಟ್ಟು ಸಂಸ್ಥೆಯ ಕೀರ್ತಿಯನ್ನು ಹೆಚ್ಚಿಸಿದರು. ಇದಲ್ಲದೆ ಮಂಡ್ಯದ ಜನತಾ ವಿದ್ಯಾಸಂಸ್ಥೆಯ (ಪಿ.ಇ.ಎಸ್.) ಉಪಾಧ್ಯಕ್ಷರೂ ಆಗಿದ್ದು ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚು ಸೇವೆ ಸಲ್ಲಿಸಿದ್ದಾರೆ.

ಜವರಪ್ಪಗೌಡರು ಒಳ್ಳೆಯ ಭಾಷಣಕಾರರಲ್ಲದೆ ಉಪಕಥೆಗಳ ಮೂಲಕ ಜನರಲ್ಲಿ ಸಾಕ್ಷರತೆಯ ಉಪಯುಕ್ತತೆಯನ್ನು, ಗ್ರಾಮಾಭಿವೃದ್ಧಿಯ ಆವಶ್ಯಕತೆಯನ್ನೂ ಮನ ಮುಟ್ಟುವಂತೆ ವಿವರಿಸಿ ಒಂದು ಹೊಸ ಪ್ರಯೋಗವನ್ನೇ ಮಾಡಿದರು. ಇವರು ಮಹಾಕವಿ ಕುವೆಂಪುರವರ ಸಂಪರ್ಕವನ್ನು ಹೊಂದಿ ಅವರ ಅಚ್ಚುಮೆಚ್ಚಿನವರಾದರು. ಕುವೆಂಪು ಅವರು ಪ್ರಾರಂಭಿಸಿದ "ವಿಶ್ವಮಾನವ" ನೀತಿಯನ್ನೂ "ಮಂತ್ರಮಾಂಗಲ್ಯ" ವೆಂಬ ಸರಳವಿವಾಹ ಪದ್ಧತಿಯನ್ನೂ ಪ್ರಚಾರಮಾಡಿದ ಕೀರ್ತಿ ಇವರದು. ಇವರ ಮಕ್ಕಳ ಮದುವೆಗಳನ್ನು ಮಂತ್ರಮಾಂಗಲ್ಯ ರೀತಿಯಲ್ಲಿ ಸರಳವಾಗಿ ನೆರವೇರಿಸಿ, "ಮಂತ್ರಮಾಂಗಲ್ಯ" ಪುಸ್ತಕವನ್ನು ಮುದ್ರಿಸಿ ಹಂಚಿ, ಅದನ್ನು ಹೆಚ್ಚು ಹೆಚ್ಚು ಜನರು ಅನುಸರಿಸುವಂತೆ ಮಾರ್ಗದರ್ಶನ ಮಾಡುತ್ತ ಬಂದಿದ್ದಾರೆ. ಒಮ್ಮೆ ಇವ ರೊಡನೆ ನಮ್ಮ ವಿದ್ಯಾಗುರು ಕುವೆಂಪುರವರನ್ನು "ಉದಯರವಿ"ಯಲ್ಲಿ ಭೇಟಿ ಮಾಡಿ ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶವನ್ನು ನನಗೂ ನನ್ನ ಪತ್ನಿಗೂ ಒದಗಿಸಿದರು. ವಿಶ್ವಕವಿಗೆ ನನ್ನ ನಮನವನ್ನು ಸಲ್ಲಿಸಲು ಇದೊಳ್ಳೆಯ ಅವಕಾಶ ವಾಗಿತ್ತು.

ನಾನು ಒಕ್ಕಲಿಗರ ಸಂಘದ ಅಧ್ಯಕ್ಷನಾಗಿದ್ದಾಗ 1986ರಲ್ಲಿ ವೆಂಕಟಸ್ವಾಮಿ ಆಯೋಗದ ವರದಿ ಹೊರಬಿದ್ದ ಮೇಲೆ ಹಿಂದುಳಿದಕೋಮುಗಳ ಪರವಾಗಿ

ಪ್ರತಿಭಟನಾ ಚಳುವಳಿಯ ಮುಖಂಡತ್ವವನ್ನು ವಹಿಸುವ ಕೆಲಸವು ನನ್ನ ಪಾಲಿಗೆ ಬಂದಿತ್ತು. 35 ಕೋಮುಗಳ ಪ್ರತಿನಿಧಿಗಳ ಸಭೆಗೆ ಜವರಪ್ಪಗೌಡರೂ ಸದಸ್ಯರಾಗಿದ್ದು ನಮಗೆಲ್ಲ ಸೂಕ್ತ ಸಲಹೆಗಳನ್ನು ನೀಡಿ ನಮ್ಮ ಚಳುವಳಿಯು ಯಶಸ್ವಿಯಾಗಲೂ, ಆ ವರದಿಯನ್ನು ರಾಜ್ಯಸರ್ಕಾರವು ತಿರಸ್ಕರಿಸಲೂ ಸಹಾಯವಮಾಡಿದ್ದನ್ನು ನಾನು ಮರೆಯುವಂತಿಲ್ಲ. ಹಿಂದುಳಿದ ಕೋಮುಗಳಿಗೆ ವಿದ್ಯಾಕ್ಷೇತ್ರದಲ್ಲೂ, ಸರ್ಕಾರಿ ಸೇವೆ ಯಲ್ಲೂ ನ್ಯಾಯವಾಗಿ ದೊರೆಯಬೇಕಿದ್ದ ಮೀಸಲುಪದ್ಧತಿಯನ್ನು ದೊರಕಿಸಿಕೊಟ್ಟು ಸಮಾಜಕ್ಕೆ ಕಿಂಚಿತ್ ಸೇವೆ ಸಲ್ಲಿಸುವಲ್ಲಿ ಅನೇಕ ವ್ಯಕ್ತಿಗಳ ಜತೆ ಜವರಪ್ಪಗೌಡರೂ ಬೆಂಬಲವನ್ನಿತ್ತು ನನಗೂ ಒಕ್ಕಲಿಗಜನಾಂಗಕ್ಕೂ ಕೀರ್ತಿ ತಂದರು. ಮಂಡ್ಯದ ಜನತೆಯ ಸಹಕಾರ ಇದರಲ್ಲಿ ಅಪಾರವಾಗಿತ್ತು. ಅದನ್ನು ಸ್ಮರಿಸುವುದು ನನ್ನ ಕರ್ತವ್ಯ.

ಇನ್ನು ಜವರಪ್ಪಗೌಡರ ವೈಯಕ್ತಿಕ ವಿಷಯವಾಗಿ ಎರಡು ಮಾತು. ನಾನು ಮಂಡ್ಯದಲ್ಲಿ ನೋಡಿದಾಗಿನಿಂದಲೂ ಅವರು ಜಠರವ್ಯಾಧಿಯಿಂದ ತೊಂದರೆಪಡುತ್ತಿರು ವುದನ್ನು ತಿಳಿದಿದ್ದೇನೆ. ಅವರು ಆಹಾರದಲ್ಲಿ ಬಹಳ ಎಚ್ಚರಿಕೆಯಿಂದಿದ್ದು, ಖಾರ, ಮಸಾಲೆ ಮುಂತಾದುವುಗಳನ್ನು ವರ್ಜಿಸಿ, ಮಿತಾಹಾರದಿಂದಲೇ ಶರೀರಪೋಷಣ ಮಾಡಿಕೊಂಡು ಬಂದಿದ್ದಾರೆ. ಒಂದೆರಡು ಬಾರಿ ಚಿಕಿತ್ಸೆಗಾಗಿ ಆಸ್ಪತ್ರೆಯಲ್ಲಿದ್ದಾಗಲೂ ಅವರು ಚಟುವಟಿಕೆಗಳನ್ನು ನಿಲ್ಲಿಸುತ್ತಿರಲಿಲ್ಲ. ಇದರ ಜೊತೆಗೆ ಪ್ರಯಾಣ, ವಿವಿಧ ಕಾರ್ಯಕ್ರಮಗಳು, ಪತ್ರಿಕಾವರದಿಗಳ ತಯಾರಿಕೆ—ಹೀಗೆ ಹತ್ತಾರು ವಿಷಯಗಳಲ್ಲಿ ಕೈಯಾಡಿಸಿ ಶರೀರ ಸ್ವಾಸ್ಥ್ಯದ ಕಡೆ ಗಮನಹರಿಸಲು ಸಾಧ್ಯವಾಗುತ್ತಿರಲಿಲ್ಲ. ಇವರ ಬಳಿಗೆ ಸಹಾಯಕ್ಕಾಗಿ ಬಂದವರಿಗೆಲ್ಲಾ ಕೈಲಾದ ಸಹಾಯಮಾಡಿದ್ದರಲ್ಲದೆ, ಅತಿಥಿ ಸತ್ಕಾರದ ಹೊಣೆಯನ್ನು ಹೊರುವರು. ಇವರ ಮನೆಯಲ್ಲಿ ಆದಷ್ಟು ಸತ್ಕಾರಗಳೂ ಭೋಜನಕೂಟಗಳೂ ಅದೆಷ್ಟು ನಡೆದಿವೆಯೋ ಲೆಕ್ಕವಿಲ್ಲ. ರಾಷ್ಟ್ರಕವಿ ಕುವೆಂಪು ಮೊದಲ್ಗೊಂಡು ಹಳ್ಳಿಯ ನೆಂಟರಿಷ್ಟರವರೆಗೂ ಔತಣಗಳನ್ನೇರ್ಪಡಿಸಿ ಅನೇಕ ವೇಳೆ ಬೆಂಗಳೂರಿನಿಂದ ನಮ್ಮನ್ನೂ ಆಹ್ವಾನಿಸಿದ್ದಾರೆ. ಇವರ ಮನೆಯಲ್ಲಿ ಎಲ್ಲರೂ ಇವರೊಡನೆ ಸಹಕರಿಸಿ ಇವರ ಸಾರ್ವಜನಿಕ ಸೇವೆಗೆ ಒತ್ತಾಸೆ ನೀಡಿದ್ದಾರೆ. ಇವರ ಪತ್ನಿ ಪಾರ್ವತಮ್ಮನಂತೂ ನೆಂಟರಿಷ್ಟರು ಬಂದರೆ ಅದೇನು ಹರ್ಷದಿಂದ ಅಡಿಗೆ ಮಾಡಿ ಬಡಿಸುವರೋ ಅದನ್ನು ಅನುಭವಿಸಿದವರಿಗೇ ಅವರ ಧಾರಾಳತನ, ಔದಾರ್ಯ ಮತ್ತು ಮಮತೆ ಅರಿವಾಗುವುದು. ಇವರದು "ದೊಡ್ಡ ಕೈ" ಎಂದೇ ನನ್ನ ಭಾವನೆ, ಏಕೆಂದರೆ ಇವರು ಬಡಿಸುವಾಗ ಒತ್ತಾಯಿಸಿ ಹೆಚ್ಚಾಗಿಯೇ ಬಡಿಸಿ ಅತಿಥಿಗಳನ್ನು ಸಂತೋಷದಿಂದ ಆತಿಥ್ಯ ಸ್ವೀಕರಿಸುವಂತೆ ಮಾಡುತ್ತಾರೆ. ಇವರ ಮಕ್ಕಳು ಸೊಸೆಯರೂ ಇವರಂತೆಯೇ ಎಲ್ಲರ ಪ್ರೀತಿಗೂ ಪಾತ್ರರಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು.

ಜವರಪ್ಪಗೌಡರು ತಮ್ಮ ಹೆಣ್ಣು ಮಕ್ಕಳಿಗೆ ಮದುವೆ ಮಾಡುವಾಗ ಸಾಧ್ಯ ವಾದಷ್ಟು ಹತ್ತಿರದವರನ್ನೇ ಹುಡುಕುತ್ತಿದ್ದರು. ಆದರೆ ನಮ್ಮೆಲ್ಲರ ಸಲಹೆಯಂತೆ

ಈಚೆಗೆ ದೂರದ ಸಂಬಂಧವನ್ನು ಬೆಳೆಸಿದ್ದಾರೆ. ಇವರು ಸೊಸೆಯರನ್ನು ಆರಿಸುವಲ್ಲಿ ಅನುಸರಿಸುತ್ತಿದ್ದ ಕ್ರಮ ಅವರದೇ ರೀತಿಯಾಗಿರುತ್ತಿತ್ತು. ಬಂಧು ಗಳೊಡನೆ ವಿರಸ ಬರುವಂತಹ ಪರಿಸ್ಥಿತಿಯಲ್ಲೂ ತಮ್ಮ ಹಾಸ್ಯ ಚಟಾಕಿಯನ್ನು ಹಾರಿಸಿ ಬಿಗಿ ವಾತಾವರಣವನ್ನು ತಿಳಿಮಾಡಿ ಸಮಸ್ಯೆಯನ್ನು ಪರಿಹರಿಸುವ ಪರಿಪಾಠ ಮೆಚ್ಚತಕ್ಕದೆ. ಬಂಧು ಬಳಗದವರ ಮತ್ತು ಸ್ನೇಹಿತರ ಕಷ್ಟ ಸುಖಗಳಲ್ಲಿ ಭಾಗಿಯಾಗುವ ಇವರ ನಡವಳಿಕೆ ನನಗೆ ಮೆಚ್ಚಿಗೆಯಾಗಿದೆ. ನಮ್ಮೂರಲ್ಲಿ ನಡೆವ ಎಲ್ಲಾ ಶುಭ, ಅಶುಭ ಕಾರ್ಯಗಳಿಗೂ ಇವರು ಸಂಸಾರ ಸಮೇತ ಬಂದು ನಮಗೆ ಶುಭಕಾರ್ಯದಲ್ಲಿ ಶುಭ ಹಾರೈಕೆಯನ್ನೂ ದುಃಖ ಪರಿಸ್ಥಿತಿಯಲ್ಲಿ ಸಾಂತ್ವನವನ್ನೂ ನೀಡಿ ನಮಗೆಲ್ಲ ಬಹಳ ಹತ್ತಿರವಾಗಿದ್ದಾರೆ.

ಇವರು ಒಮ್ಮೆ ಬೆಂಗಳೂರಿನ ಎಲೆಕ್ಟ್ರಿಕ್ ಫ್ಯಾಕ್ಟರಿ ಹತ್ತಿರ ಕಾರು ಅಪಘಾತಕ್ಕೆ ಸಿಕ್ಕಿ ಕೈ ಮೂಳೆ ಮುರಿದು ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಲ್ಪಟ್ಟಿದ್ದರು. ತಮ್ಮ ನೋವನ್ನು ಸಹಿಸಿಕೊಂಡು, ಇವರೊಡನಿದ್ದವರೊಬ್ಬರು ಮೂರ್ಛೆ ಹೋಗಿದ್ದುದರಿಂದ ಅವರಿಗೇನಾಗುವುದೋ ಎಂದು ಭಾವಿಸಿ, ಇವರು ಟೆಲಿಫೋನ್ ಮೂಲಕ ಆಗ ಸಚಿವರಾಗಿದ್ದ ಕೆ. ವಿ. ಶಂಕರಗೌಡರನ್ನು ಸಂಪರ್ಕಿಸಿ ತಜ್ಞ ವೈದ್ಯರನ್ನು ಕರೆಸಿ ಎಲ್ಲರ ಶುಶ್ರೂಷೆಗೂ ಏರ್ಪಡಿಸಿದರು. ಇದು ಅವರ ಮನೋಸ್ಥೈರ್ಯಕ್ಕೂ, ಹೃದಯ ವಂತಿಕೆಗೂ ಒಳ್ಳೆಯ ಉದಾಹರಣೆ. ಆಸ್ಪತ್ರೆಯಿಂದ ಬಿಡುಗಡೆಯಾದ ಮೇಲೆ ಶುಶ್ರೂಷೆ ಮಾಡಿದ ವೈದ್ಯರಿಗೂ, ಒತ್ತೈಷಿಗಳಿಗೂ ಬೆಂಗಳೂರಿನಲ್ಲೇ ಒಂದು ಔತಣ ಕೂಟವನ್ನು ಏರ್ಪಡಿಸಿ ತಮ್ಮ ಕೃತಜ್ಞತೆಯನ್ನು ಆ ಮೂಲಕ ವ್ಯಕ್ತಪಡಿಸಿದರು. ಹೀಗೆ ಜವರಪ್ಪಗೌಡರು ತಮ್ಮ ವ್ಯಕ್ತಿತ್ವವನ್ನು ಪ್ರಕಟಪಡಿಸಿ ಮಾರ್ಗದರ್ಶನ ನೀಡಿದರೆಂದೇ ಹೇಳಬೇಕು.

ಜವರಪ್ಪಗೌಡರು ಜನಗಳನ್ನು ನಂಬಿ ಪಶ್ಚಾತ್ತಾಪ ಪಟ್ಟಿರುವ ಅನೇಕ ಉದಾಹರಣೆಗಳಿವೆ. ಕೆಲವರು ಇವರನ್ನು ಮೆಟ್ಟಲನ್ನಾಗಿ ಉಪಯೋಗಿಸಿಕೊಂಡು ಮೇಲಕ್ಕೇರಿದ ಮೇಲೆ ಏಣಿಯನ್ನು ಒದೆದಂತೆ ದೂರ ಮಾಡಿದರೂ, ಇವರು ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಂಡಿಲ್ಲ. ಇವರು ಸಲ್ಲಿಸಿರುವ ಸೇವೆ ಮತ್ತು ಹೊಂದಿರುವ ಸಂಪರ್ಕವನ್ನು ನೆನೆಸಿದರೆ ಇವರೊಬ್ಬ ಮಂತ್ರಿಯೇ ಆಗಬಹುದಿತ್ತೇನೊ, ಆದರೆ ಇವರು ಶಾಸಕರಾಗಲೂ ಮುಂದೆ ಬರಲಿಲ್ಲ. ಇಂತಹ ಸರಳ ವ್ಯಕ್ತಿ ಅಪರೂಪ. ಇವರ ಇನ್ನೊಂದು ಬದಲಾಯಿಸಬಹುದಾದ ಗುಣವೆಂದರೆ, ಕ್ಲುಪ್ತ ವೇಳೆಯನ್ನು ಅನುಸರಿಸದಿರುವುದು ಮತ್ತು ಕೆಲವು ವಿಷಯಗಳನ್ನು ಲಘುವಾಗಿ ಪರಿಗಣಿಸುವುದು. ಕೆಲವೊಮ್ಮೆ ತಪ್ಪಿಸಬಹುದಾಗಿದ್ದ ಸಂದಿಗ್ಧ ಪರಿಸ್ಥಿತಿಗೆ ಇವರು ತಮ್ಮನ್ನು ತಾವೇ ಈಡುಮಾಡಿಕೊಂಡು ಟೀಕೆಗೆ ಗುರಿಯಾಗಿದ್ದೂ ಉಂಟು. ಆದರೆ ಇವರು ತಮ್ಮ ತಪ್ಪನ್ನು ಅರಿತ ಮೇಲೆ ಪಶ್ಚಾತ್ತಾಪಪಟ್ಟು ಕ್ಷಮೆಕೋರುವ ದೊಡ್ಡ ಗುಣವನ್ನು

ಬೆಳೆಸಿಕೊಂಡಿದ್ದಾರೆ. ಇದೇ ಅವರ ವ್ಯಕ್ತಿತ್ವಕ್ಕೆ ಮೆರುಗನ್ನು ಕೊಟ್ಟಿದೆ.

ಹಿಂದೆ ಮಂಡ್ಯದಲ್ಲಿ ಐವರು ಮುಖಂಡರಿಗೆ ಪಂಚಪಾಂಡವರೆಂದು ಅಡ್ಡ ಹೆಸರಿಟ್ಟಿದ್ದರು. ಇದು ಹೇಗೆ ಆಯಿತೋ ನನಗೆ ತಿಳಿಯದು. 1953 ರಲ್ಲಿ ಮಂಡ್ಯದಲ್ಲಿ ಇವರ ಮಿತ್ರವೃಂದವು ಪ್ರದರ್ಶಿಸಿದ ಕುರುಕ್ಷೇತ್ರ ನಾಟಕದಿಂದ ಈ ಹೆಸರು ಬಂತೋ ಅಥವಾ ಈ ಐವರೂ ರಾಜಕೀಯದಲ್ಲಿ ಗಳಸ್ಯ ಕಂಠಸ್ಯ ಎಂಬ ರೀತಿಯಲ್ಲಿ ಇದ್ದುದರಿಂದಲೋ ಏನೋ ಆ ಹೆಸರು ಬಂತು. ಅವರಾರೆಂದರೆ, ಕೆ. ವಿ. ಶಂಕರಗೌಡರು, ದಿ. ಎಂ. ಕೆ. ಶಿವನಂಜಪ್ಪನವರು, ಕೆ. ಸಿಂಗಾರಿಗೌಡರು, ದಿ. ಜಿ. ಎಸ್. ಬೊಮ್ಮೇಗೌಡರು ಮತ್ತು ನಮ್ಮ ಪಿ. ಎನ್. ಜವರಪ್ಪಗೌಡರು ; ಈ ಆಧುನಿಕ ಪಾಂಡವರು ಎರಡು ದಶಕಗಳ ಕಾಲ ಮಂಡ್ಯದ ಆಗುಹೋಗುಗಳನ್ನು ನಿಯಂತ್ರಿಸಿದರೆಂದೇ ಹೇಳಬೇಕು. ಮಂಡ್ಯ ಜಿಲ್ಲೆ ಇವರಿಗೆ ಕೃತಜ್ಞವಾಗಿದೆಯೆಂದು ನನ್ನ ಅನಿಸಿಕೆ.

ಜವರಪ್ಪಗೌಡರು ಓದುವ ಮತ್ತು ಬರೆಯುವ ಅಭ್ಯಾಸವನ್ನು ಚೆನ್ನಾಗಿ ರೂಢಿಸಿಕೊಂಡಿದ್ದಾರೆ. ಇವರ ಜ್ಞಾನ ಅಪಾರವಾಗಿದ್ದು ಅವರು ಪುರಾಣ ಪುಣ್ಯ ಕಥೆಗಳಿಂದ ಮೊದಲ್ಗೊಂಡು ಆಧುನಿಕ ವಿಜ್ಞಾನದ ವಿಷಯವಾಗಿಯೂ ನಿರರ್ಗಳವಾಗಿ ಮಾತನಾಡುವ ಕಲೆಯನ್ನು ಹೊಂದಿದ್ದಾರೆ. ಇದೆಲ್ಲ ಅವರ ಹುಟ್ಟುಗುಣವಾಗಿದ್ದು ಅದನ್ನು ಇನ್ನೂ ಹೆಚ್ಚು ಆರ್ಜಿಸಿ ಅಭಿವೃದ್ಧಿಪಡಿಸಿಕೊಂಡಿದ್ದಾರೆ. ಅವರು ತುಂಬು ಜೀವನವನ್ನು ನಡೆಸಿ 73 ವಸಂತಗಳನ್ನು ನೋಡಿದ ಜ್ಞಾನವೃದ್ಧರೂ ವಯೋವೃದ್ಧರೂ ಆಗಿದ್ದಾರೆ. ಅವರ ಬಹುಮುಖ ವ್ಯಕ್ತಿತ್ವದ ತುಣುಕು ನೋಟವೇ ಈ ಲೇಖನದ ಉದ್ದೇಶ.

ಡಾ. ಕೆ. ಎಸ್. ರಾಮೇಗೌಡ

# ನಿಷ್ಠಾವಂತ ಕಾರ್ಯಕರ್ತ

ನಾನು ಶ್ರೀ ಜವರಪ್ಪಗೌಡರನ್ನು ಭೇಟಿಯಾದದ್ದು ಸುಮಾರು 1937_38 ರಲ್ಲಿ. ನಾನು ನಾಗಮಂಗಲ ತಾಲ್ಲೂಕಿನಲ್ಲಿ ಕಾಂಗ್ರೆಸ್ ಪ್ರಚಾರ ಕಾರ್ಯಕ್ಕಾಗಿ ಹೋಗಿದ್ದೆ. ನರಸೇಗೌಡರು ನನ್ನ ಕಾರ್ಯಕ್ರಮವನ್ನು ಆ ತಾಲ್ಲೂಕಿನಲ್ಲಿ ಏರ್ಪಡಿಸಿದ್ದರು. ಅವರ ಜೊತೆಯಲ್ಲಿ ಜವರಪ್ಪಗೌಡರನ್ನು ಮೊದಲನೇಬಾರಿಗೆ ಭೇಟಿಯಾದೆ. ನನ್ನ ಕಾರ್ಯಕ್ರಮ ಗಳನ್ನು ಸಂಘಟಿಸುವುದರಲ್ಲಿ ಅವರು ತೋರಿದ ಸಂಘಟನಾಶಕ್ತಿಯನ್ನು ನೋಡಿ ಮೆಚ್ಚಿದೆ, ನಮ್ಮ ಸಭೆಗಳಿಗೆ ಅಡ್ಡಿಪಡಿಸುವ ಶಕ್ತಿಗಳ ವಿರುದ್ಧ ಚಾಕಚಕ್ಯತೆಯಿಂದ ನಡೆದುಕೊಂಡು ಅವರನ್ನು ಒಲಿಸಿಕೊಳ್ಳುವ ಸಾಮರ್ಥ್ಯ ಕಂಡು ಬೆರಗಾದೆ, ಆನಂತರ ಶಿವಪುರ ಸತ್ಯಾಗ್ರಹದಲ್ಲಿ ಇವರು ಮತ್ತು ಇವರ ಸ್ನೇಹಿತರ ಪಾಲು ಬಹಳ ದೊಡ್ಡದು, ಕಸಗುಡಿಸುವ ಕೆಲಸದಿಂದ ಯಾವ ಕೆಲಸಕ್ಕಾದರೂ ಈ ಗುಂಪು ಸಿದ್ಧವಿತ್ತು. ಈ ಯುವ ಕರ ತಂಡದ ಕೈ ಶಿವಪುರದ ಧ್ವಜ ಸತ್ಯಾಗ್ರಹದಲ್ಲಿ ಎಲ್ಲೆಲ್ಲೂ ಎದ್ದು ಕಾಣುತ್ತಿತ್ತು. ಆ ಎಲ್ಲ ಕಾರ್ಯಗಳಲ್ಲಿ ನಿಷ್ಠೆ, ಪ್ರಧಾನವಾಗಿ ಎದ್ದುಕಾಣುತ್ತಿತ್ತು. ನಾನು 1939 ಇಸವಿಯಲ್ಲಿ ಶಿವಮೊಗ್ಗ ಜೈಲಿನಲ್ಲಿದ್ದೆ. ಶಿವಮೊಗ್ಗ ಜೈಲಿನಲ್ಲಿ ಎರಡು ಪ್ರತ್ಯೇಕ ಬ್ಯಾರಕ್‌ಗಳು ಇದ್ದುವು, ನಾನೊಬ್ಬನೇ ರಾಜಕೀಯ ಖೈದಿ, ಒಂಟಿಯಾಗಿ ಒಂದುಕಡೆ ಬ್ಯಾರಕ್ಕಿನಲ್ಲಿ ನಾನು ಇದ್ದೆ. ಆಗ ಜವರಪ್ಪಗೌಡರು ಶಿವಮೊಗ್ಗ ಜೈಲಿಗೆ ಬಂದು ಸೇರಿ ದರು. ಅನಂತರ ನಾನು ಮತ್ತು ಅವರು ಕೆಲವು ದಿನಗಳು ಕಳೆದೆವು. ತರುವಾಯ ಎಚ್. ಸಿ. ದಾಸಪ್ಪ, ಎಸ್. ರಂಗರಾಮಯ್ಯ, ಕೆ. ಟಿ. ಭಾಷ್ಯಂ ಮೊದಲಾದವರು ಅಲ್ಲಿಗೆ ಬಂದು ಸೇರಿದರು. ಜೈಲಿನಲ್ಲಿ ನಾನು ಮತ್ತು ಭಾಷ್ಯಂ ಅಡಿಗೆ ಮಾಡುತ್ತಿದ್ದೆವು. ನನ್ನ ಸಹಾಯಕ ಜವರಪ್ಪಗೌಡರು, ಅಡಿಗೆ ಮನೆ ಕೆಲಸವನ್ನು ಅಚ್ಚುಕಟ್ಟಾಗಿ ಮಾಡು ತ್ತಿದ್ದರು. ಅಕ್ಕಿಯಲ್ಲಿ ಒಂದು ಕಲ್ಲೂ ಇರಬಾರದು. ತರಕಾರಿಯಲ್ಲಿ ಒಂದು ಚೂರು ಕಸ ಇರತಕ್ಕದ್ದಲ್ಲ. ಪಾತ್ರೆಗಳೆಲ್ಲ ಶುಭ್ರವಾಗಿರಬೇಕು. ಅಡಿಗೆ ಮನೆಯಲ್ಲಿ ಒಂದು ಚೂರು ಕಸ, ಕಡ್ಡಿ, ಬೂದಿ ಇರದಂತೆ ನೋಡಿಕೊಳ್ಳುತ್ತಿದ್ದರು. ಭಾಷ್ಯಂ ಅವರು ಎಷ್ಟೋಸಾರಿ ನನ್ನ ಮನೆಯ ಅಡಿಗೆ ಮನೆ ಇಷ್ಟುಚೆನ್ನಾಗಿದ್ದಿದ್ದರೆ ಎಷ್ಟು ಆನಂದ ಪಡುತ್ತಿದ್ದೆ, ಎಂದು ಹೇಳಿದರಲ್ಲದೆ ಇದಕ್ಕೆಲ್ಲಾ ಜವರಪ್ಪನ ಕಾರ್ಯನಿಷ್ಠೆ ಕಾರಣ, ಎಂದು ಜವರಪ್ಪಗೌಡರನ್ನು ಬಾಯಿ ತುಂಬಾ ಹೊಗಳಿದ್ದುಂಟು. ಆ ಜೈಲಿನಲ್ಲಿ ಮಾಯಣ್ಣ ಎಂಬ ವಾರ್ಡರ್ ಇದ್ದನು. ಆತನಿಗೆ ಓದು ಬರಹ ಬರುತ್ತಿರಲಿಲ್ಲ. ಅಷ್ಟಾಗಿ ತಿಳಿದವನೂ ಅಲ್ಲ, ಅವನು ಜೈಲಿನಲ್ಲಿ ಗಂಟೆ ಬಾರಿಸುತ್ತಿದ್ದ, ಒಂದು ದಿನ ಜವರಪ್ಪ ಗೌಡರು ಅವನ ಬಳಿ ಹೋಗಿ ನೀನು ಹದಿಮೂರು ಗಂಟೆ ಬಾರಿಸಿರುವೆ–ಇದರಿಂದ

ನಮಗೆ ತೊಂದರೆಯಾಯಿತು. ನಾಳೆ ಸೂಪರಿಂಟೆಂಡೆಂಟರಿಗೆ ದೂರು ಕೊಡುತ್ತೇನೆ. ನಿನಗೆ ಶಿಕ್ಷೆ ಮಾಡಿಸುತ್ತೇನೆ ಎಂದು ಹೇಳಿದರು. ಮಾಯಣ್ಣನು ಹೆದರಿ ಈಗ ಏನು ಮಾಡಬೇಕು, ನನ್ನನ್ನು ಕ್ಷಮಿಸಿ, ಎಂದು ಕೇಳಿದನು, ಅದಕ್ಕೆ ಗೌಡರು "ಅದನ್ನು ಸರಿಪಡಿಸು" ಎಂದು ಗುಡುಗಿದರು, ಹೇಗೆ ಸರಿಪಡಿಸುವುದು ? ಎಂದು ಮಾಯಣ್ಣ ಕೇಳಿದನು, ನಿನ್ನ ಪೇಟ ತೆಗೆದು "ಜಾಗಟೆಯನ್ನು ಚೆನ್ನಾಗಿ ಒರಸಿ ಮತ್ತೊಮ್ಮೆ ಹನ್ನೆರಡು ಗಂಟೆ ಹೊಡಿ" ಎಂದು ಗೌಡರ ಹುಕುಂ ಆಯಿತು. ಅನಂತರ ಮಾಯಣ್ಣನು ಗೌಡರು ಹೇಳಿದಂತೆ ಮಾಡಿ ಮತ್ತೊಮ್ಮೆ ಹನ್ನೆರಡುಗಂಟೆ ಬಾರಿಸಿದನು. ಇದನ್ನೆಲ್ಲ ನೋಡುತ್ತ ಹತ್ತಿರದಲ್ಲಿ ಕುಳಿತಿದ್ದ ನಾನು ದಾಸಪ್ಪ ಮೊದಲಾದವರಲ್ಲಿ ಈ ವಿಷಯ ವನ್ನು ತಿಳಿಸಿದಾಗ ಎಲ್ಲರೂ ನಗುವಿನ ಕಡಲಲ್ಲಿ ಬಿದ್ದು ಹೊರಳಾಡಿದರು. ಇದು ಗೌಡರ ಹಾಸ್ಯ ಪ್ರವೃತ್ತಿಗೆ ಒಂದು ನಿದರ್ಶನ.

ಶ್ರೀ ಗೌಡರು ಪತ್ರಿಕಾರಂಗದಲ್ಲಿ ವಿಶಿಷ್ಟಸೇವೆ ಸಲ್ಲಿಸಿದ್ದಾರೆ, ಮಂಡ್ಯ ಜಿಲ್ಲೆಯಲ್ಲಿ ಎಲ್ಲ ಸಾಮಾಜಿಕ ಸುಧಾರಣೆಗಳ ಮುಂಚೂಣಿಯಲ್ಲಿದ್ದು ಕೆಲಸಮಾಡಿರುತ್ತಾರೆ-ಕಾಂಗ್ರೆಸ್ಸಿನ ಎಲ್ಲ ಚಳುವಳಿಗಳಲ್ಲೂ ಭಾಗವಹಿಸಿ ಕಷ್ಟ, ನಿಷ್ಠುರ, ಜೈಲುವಾಸಗಳನ್ನು ಅನುಭವಿಸಿದ್ದಾರೆ. ಗೌಡರ ಇಳಿಯ ವಯಸ್ಸಿನಲ್ಲಿ ಮಂಡ್ಯಜಿಲ್ಲೆಯವರು ಅವರನ್ನು ಗೌರವಿಸಲು ತೀರ್ಮಾನಿಸಿರುವುದು ಅಭಿನಂದನೀಯ. ಇಂಥ ನಿಷ್ಠಾವಂತ ಕೆಲಸಗಾರ ರನ್ನು ಹುಡುಕಿ ಗೌರವಿಸುವುದು ನಿಜವಾಗಿಯೂ ನಮ್ಮ ದೇಶದಲ್ಲಿ ಸದ್ಯ ಆಗಲೇ ಬೇಕಾಗಿರುವ ಕೆಲಸ. ಇಂತಹ ಕಾರ್ಯದಲ್ಲಿ ಪಾಲ್ಗೊಳ್ಳುವ ಹಿರಿಗೆಯಲ್ಲಿ ಜವರಪ್ಪ ಗೌಡರ ಕಾರ್ಯತತ್ಪರತೆಯು "ಬೆಳಕು ಚೆಲ್ಲಲಿ" ಎಂದು ಹಾರೈಸುತ್ತೇನೆ.

**ಎಂ. ಎನ್. ಜೋಯಿಸ್**



# ಕನ್ನಡದ ಬೀರಬಲ್

ಲೋಕಕಲ್ಯಾಣಕರವಾದ ಮತ್ತು ತಮಗೆ ನಿಲುಕುವ ಎಲ್ಲಕ್ಷೇತ್ರಗಳಲ್ಲೂ ಶ್ರೀಮಾನ್ ಜವರಪ್ಪಗೌಡರು ಕಾರ್ಯನಿರತರಾಗಿದ್ದರು : ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಖಾದಿವಸ್ತ್ರವನ್ನುಟ್ಟು, ಅವರೆ ಖಾದಿಟೋಪಿಯನ್ನು ಧರಿಸದೆ : ಭಾಷಣ ಬಿಗಿಯುವ ವೇದಿಕೆಗಳಿಂದಲ್ಲ ; ಕರ್ಮದ ಫಲ ವ್ಯಕ್ತಗೊಳ್ಳುವ ರೂಪದಲ್ಲಿ. ಹಾಸ್ಯ ಅವರ ವ್ಯಕ್ತಿತ್ವದ ಒಂದುಗುಣ. ಅದು ರೂಪುಗೊಂಡಿರುವುದು ಅವರ ಆಳವಾದ ಜೀವನಾನುಭವದಿಂದ, ಪುಸ್ತಕ ಭಂಡಾರದಿಂದ ಹೊಮ್ಮಿದ ಪಾಂಡಿತ್ಯದಿಂದಲ್ಲ. ಅವರಲ್ಲಿ ಯಾವ ವಿಚಾರದಲ್ಲಾದರೂ ಸಂಭಾಷಣೆಗೆ ತೊಡಗಿದರೆ ಗಂಭೀರವಾದ ಮುಖಭಾವವನ್ನು ತಾಳುವುದೇ ಕಷ್ಟಕರವಾಗಿತ್ತು. ಅವರ ಗೃಹದಲ್ಲೇನಾದರೂ ವಿಷಯ ವಿಚಾರ ವಿನಿಮಯವಾಗುತ್ತಿದ್ದರೆ ಒಳಗಿನಿಂದ ಕಾಫಿತಿಂಡಿ ಬಂದುಬಿಡುತ್ತಿತ್ತು. ಅದು ಕಣ್ಣು ಮುಂದಿದ್ದರೂ ಸೇವನೆ ಮಾಡುವ ಹೊತ್ತಿಗೆ ತಣ್ಣಗಾಗಿಬಿಡುತ್ತಿತ್ತು. ವಯಸ್ಕರ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಉತ್ತರದೇಶದ ಕೆಲವೆಡೆ ಹೋದಾಗ ಇವರ ಸಂಭಾಷಣೆ ಕೇಳಿ ಇವರು ಬೀರಬಲ್ಲರೇನು ? ದಕ್ಷಿಣಪ್ರಾಂತ್ಯಗಳಿಗೆ ಭೇಟಿ ಕೊಟ್ಟು ಸಂಭಾಷಣೆಯಲ್ಲಿ ನಿರತರಾದಾಗ ಇವರೇನು ತೆನಾಲಿರಾಮಕೃಷ್ಣರೇ ಎನ್ನುತ್ತಿದ್ದರಂತೆ.

ಅವರು ಬಸ್ನೂರು ಬಡಾವಣೆಯ ಒಂದು ಸಣ್ಣ ಬಾಡಿಗೆ ಮನೆಯಲ್ಲಿದ್ದಾಗ ಒಂದೆರಡು ಹಸುಗಳನ್ನಿಟ್ಟುಕೊಂಡಿದ್ದರು. ಅವುಗಳಿಗೆ ಮೈಯುಜ್ಜುತ್ತಿದ್ದರು. ಆಗ ಸ್ವರಾಜ್ಯ ಬಂದಿತ್ತೊ ಇಲ್ಲವೊ ಗೊತ್ತಿಲ್ಲ. ಇದೇನು ಎಂದೆ ? ಏನು, ಕೃಷ್ಣನ ಕೆಲಸ ಮಾಡುತ್ತಿದ್ದೇನೆ ; ಗೀತೋಪದೇಶವನ್ನು ಮಾಡಬೇಕಾಗಿದೆ. ನನಗೆ ಗೋಪಮ್ಮ ಕುಡಿಸಿದ ಸಾಲವನ್ನು ತೀರಿಸಬೇಕಾಗಿದೆ ಎಂದರು. ದೇಶದ ಸ್ವಾತಂತ್ರ್ಯಗಳಿಸುವ ನಿಷ್ಕಾಮಕರ್ಮಗಳ ಫಲವನ್ನು ರಾಜಕೀಯವ್ಯಕ್ತಿಯಾಗಿ ದುರ್ಲಾಭ ಪಡೆಯಲಿಲ್ಲ. ಇದೇಕೆ ಈ ಗರೀಬ ಪಟ್ಟ ? ಅದಕ್ಕೇನೆ ಬಿಳಿ ಟೊಪ್ಪಿಗೆ ಹಾಕಲಿಲ್ಲ; ದೇವರು ಅವನಾಗಿ ಕರುಣಿಸುತ್ತಿರುವುದು ನಿಮಗೆ ಕಾಣುತ್ತಿಲ್ಲವೆ ಎಂದರು.

ನಾನು ಪ್ರಥಮತಃ ಬರೆದ "ಊರ್ಮಿಳಾದರ್ಶನ" ಎಂಬ ಕೃತಿಯನ್ನು ಸುಮ್ಮನೆ ಅವರ ಮನೆಗೆ ತೆಗೆದುಕೊಂಡು ಹೋದೆ. ಅದರ ಹಸ್ತಪ್ರತಿ ಸುಮಾರು ಐನೂರು ಪುಟ ಮೀರಿತ್ತು. ಇದೇನು ಕಾದಂಬರಿಯೆ ಎಂದರು, ಇಲ್ಲ ಸ್ವಾಮಿ ; ರವೀಂದ್ರನಾಥಟಾಗೂರರು ಟೀಕಿಸಿರುವ ರಾಮಾಯಣದ ಊರ್ಮಿಳೆ ಎಂದೆ, ಹಾಗಾದರೆ ನಾನು ಸ್ವಲ್ಪ ನೋಡಿಕೊಡುತ್ತೇನೆ. ಆದರೆ ಕೃತಿಚೌರ್ಯಮಾಡುವುದಿಲ್ಲ ಧೈರ್ಯವಾಗಿರಿ ಎಂದರು. ಮೂರುನಾಲ್ಕು ದಿನಗಳನ್ನು ಬಿಟ್ಟು ಅವರನ್ನು ಭೇಟಿ

ಮಾಡಿದೆ "ನನಗೂ ಆಶ್ಚರ್ಯವೆ ಆಯಿತು. ಶ್ರೀ ಹಾ. ಮಾ. ನಾಯಕರಿಗೂ ಆಶ್ಚರ್ಯವಾಯಿತು. ಕೃತಿಯನ್ನು ಅರ್ಧಮಟ್ಟಕ್ಕೆ ಸಂಕ್ಷಿಪ್ತಮಾಡಿ ಅದನ್ನು ಪ್ರಕಟಿಸ ಬೇಕೆಂದು ಕರ್ನಾಟಕ ಸಹಕಾರ ಪ್ರಕಾಶನ ಮಂದಿರ ಬೆಂಗಳೂರಿಗೆ ಕೊಟ್ಟುಬಂದೆವು" ಎಂದರು. ನನಗೆ ದಿಗ್ಭ್ರಮೆ. ಅವರ ವಾಕ್‌ಸಹಾಯದ ಭಂಡಾರ ಯಾವಾಗಲೂ ಬರಿದಾಗುವುದೇ ಇಲ್ಲ.

ಅವರು ಸನ್ಮಾನ್ಯ ಕುವೆಂಪುರವರಲ್ಲಿ ಬಹಳ ಸಲಿಗೆಯಿಂದ ಸಂಭಾಷಣೆ ಮಾಡುವವರು ; ಅದರಲ್ಲೂ ಹಾಸ್ಯಪ್ರಧಾನವಾಗಿ ಪ್ರಾಯಶಃ ಇವರೊಬ್ಬರೇ. ಕುವೆಂಪು ದತ್ತಿ ಸಂಸ್ಥೆಯಿಂದ ಪ್ರಕಟವಾದ ಕೃತಿಗಳನ್ನು ತೆಗೆಸಿಕೊಂಡು ಶ್ರೀ ದೇ. ಜವರೇಗೌಡರು ಮಂಡ್ಯಕ್ಕೆ ಬಂದರು. ಸರ್ವರಿಗೂ ಆತಿಥ್ಯವನ್ನು ನೀಡುವ ಕುವೆಂಪು ರವರ ಭಕ್ತರಾದ ಜವರಪ್ಪಗೌಡರ ಮನೆಗೆ ಬಂದರು. ಅವರ ಪುಸ್ತಕಗಳ ಸಮೇತ ನನ್ನ ಮನೆಗೂ ಬಂದರು. ಜವರದ್ವಯಗಳು ಬಂದದ್ದು ನನಗೆ ಆಶ್ಚರ್ಯ ಮತ್ತು ಸಂತೋಷಗಳೆರಡೂ ಉಕ್ಕಿದುವು. ವಿಚಾರ ತಿಳಿಸಿದರು. ಜವರಪ್ಪಗೌಡರು ಸುಭಾಷ್ ನಗರದಿಂದ ವಿದ್ಯಾನಗರಕ್ಕೆ ಬರುವ ಮಧ್ಯೆ ಕುವೆಂಪುರವರ ಸ್ನೇಹಿತರು, ಪರಿಚಯಸ್ಥರೂ ಸಾಹಿತಿಗಳೂ ಇದ್ದರಲ್ಲ. ಅಲ್ಲೆಲ್ಲ ಎಷ್ಟು ಮೌಲ್ಯದ ಕೃತಿಗಳನ್ನು ಮಾರಾಟ ಮಾಡಿದಿರಿ ಎಂದೆ. ಎಲ್ಲೂ ಯಾರಿಗೂ ಇಲ್ಲವೆಂದರು. ನೀದಾ ಇಲ್ಲಿಗೆ ಬಂದಿರಾ ಎಂದೆ. ಹೌದೆಂದರು. ನೀವು ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ ಕುವೆಂಪುರವರ ಗೆಳೆಯರಲ್ಲವೆ ? ಅಲ್ಲ. ಅವರನ್ನು ತಿಳಿದುಕೊಂಡಿದ್ದೆ. ಅವರು ಆಂಗ್ಲಸಾಹಿತಿಯಾಗುವ ಬದಲು ಕನ್ನಡ ಸಾಹಿತಿಯಾಗೆಂದು ಡಾ॥ ಕಸಿನ್‌ರವರು ಹೇಳಿದಾಗ. ಆಮೇಲೆ ಕುವೆಂಪುರವರು 1928ರಲ್ಲಿ ಮೈಸೂರು ಯುವರಾಜ ಕಾಲೇಜಿಗೆ ಉಪನ್ಯಾಸಕ ರಾಗಿದ್ದಾಗ ನಾನು ಅವರ ಶಿಷ್ಯನಾಗಿದ್ದೆ ಎಂದೆ. ಅಂದಮೇಲೆ ಪರಿಚಯಸ್ಥರು, ಸ್ನೇಹಿತರು, ಹಿತೈಷಿಗಳು ಗೌರವಿಸುವುದಕ್ಕಿಂತ ಶಿಷ್ಯನಕೊಡುಗೆ ಹಿರಿದಲ್ಲವೆ ಎಂದರು ಗೌಡರು ಹೌದೆಂದೆ. ಕೃತಿಗಳನ್ನು ತಂದಿದ್ದ ಸಹಾಯಕನಿಗೆ ಎಲ್ಲಾ ಕೃತಿಗಳ ಒಂದು ಗಂಟನ್ನು ತಯಾರುಮಾಡಿ ಬಿಲ್ಲು ಕೊಡಯ್ಯ ಎಂದರು. ಆಯಿತು 160ರೂ. ಗಳನ್ನು ಕೊಟ್ಟೆ. ಈ ಶುಭ ಪ್ರಾರಂಭಕ್ಕೋಸ್ಕರವಾಗಿಯೇ ಕೊಡುಗೈಯಾದ ಸಿದ್ದೇಗೌಡರ ಹತ್ತಿರ ಮೊದಲೇ ಬಂದಿದ್ದೇವೆಂದು ನಗುತ್ತ ಹೇಳಿದರು. ಪರಿಚಯಸ್ಥರಾದ ಪಕ್ಕದ ಮನೆಯಲ್ಲಿದ್ದ ಶ್ರೀನಿವಾಸ ಶೆಟ್ಟರ ಮನೆಗೆ ಹೋಗಿ ಅಲ್ಲೂ ವಿಜಯಿಗಳಾದರು. ಕರ್ಮಕೌಶಲಿಯೂ ಗುಣಗ್ರಾಹಿಯೂ ಆದವರಿಗೆ ಜಯವು ಹಿಂಬಾಲಿಸುತ್ತದೆ ಅಲ್ಲವೆ ?

ಮತ್ತೊಂದಾವರ್ತಿ ಮನೆಗೆ ಬಂದು ಕುವೆಂಪುರವರ "ಮಂತ್ರಮಾಂಗಲ್ಯ" ಎಂಬ ೨೦ ಪುಸ್ತಕಗಳನ್ನು ಕೊಟ್ಟು ನಿಮ್ಮನ್ನು ಭೇಟಿಮಾಡುವವರಿಗೆ ತಿಳಿವಳಿಕೆ ಹೇಳಿ ಈ ಪುಸ್ತಕಗಳನ್ನು ಕೊಡಿರೆಂದರು. ಅವರ ಪಕ್ಕದಮನೆಯ ದಿ॥ ಸುಬ್ಬೇಗೌಡರು ತಮ್ಮ ಮಗನ ಮದುವೆಯನ್ನು "ಮಂತ್ರಮಾಂಗಲ್ಯ" ಪ್ರಕಾರ ಆಚರಿಸಿದ್ದನ್ನೂ ನೋಡಿ

ಪ್ರಭಾವಿತನಾಗಿದ್ದೆ. ಅವರೇ ತಮ್ಮ ಮಗನನ್ನು ಮದುವೆ ಮಾಡಿದಾಗ "ಮಂತ್ರ ಮಾಂಗಲ್ಯ"ವನ್ನು ಆಚರಿಸಿದರು. ನಾನು ಹೇಳಿದ್ದನ್ನು ಮಾಡಿ, ನಾನು ಮಾಡುವಂತೆ ಮಾಡಬೇಡಿ ಎಂದು ಹೇಳುವ ವ್ಯಕ್ತಿಯಲ್ಲ. "ಹೌದು ಗೌಡರೆ ಬಡಬಗ್ಗರ ಸರಳವಿವಾಹ, ಅದರಲ್ಲೂ ಪುರೋಹಿತರೇ ಇಲ್ಲದ್ದನ್ನು ಆಚರಿಸುವುದು ಒಳ್ಳೆಯದು. ಸಾಲಮಾಡಿ ಪೈಪೋಟಿ ಮನೆ ಕಟ್ಟುವುದು, ಸಾಲಮಾಡಿ ಸ್ಪರ್ಧಾತ್ಮಕ ಮದುವೆ ಮಾಡುವುದರಿಂದ ಅನೇಕ ಮನೆಗಳು ಹಾಳಾಗುತ್ತಿವೆ. ಆದರೆ ಶ್ರೀಮಂತರೂ ಈ ಸರಳ ಮದುವೆಯನ್ನು ಆಚರಿಸಲು ಪ್ರಾರಂಭಮಾಡಿದ್ದಾರೆ. ಇದರಿಂದ ಸಮಾಜಕ್ಕೆ ಅನ್ಯಾಯವಾಗುತ್ತಿದೆ. ಶ್ರೀಮಂತರ ದುಂದುಮದುವೆ ಸಮಾಜಕ್ಕೆ ಹಣವನ್ನು ಹಂಚುವ ಒಂದು ಪರೋಕ್ಷ ಮಾರ್ಗ. ಪೂರ್ವದಲ್ಲಿ ರಾಜರು ಯಾಗಮಾಡಿ ಭೂರಿದಕ್ಷಿಣೆಯನ್ನು ಕೊಡುತ್ತಿದ್ದುದು ಈ ದೃಷ್ಟಿಯಿಂದಲೇ ಎಂದೆ." ಹೌದು. ಅಂತಹವರಿಗೆ ಇಂದಿನ ಟೋಪಿ ಸರಕಾರ ಸಂದಿಗುಂದಿಯಲ್ಲೆಲ್ಲಾ ಹೆಂಡದಂಗಡಿಯನ್ನು ತೆಗೆದಿಲ್ಲವೆ ? ಮಾರ್ವಾಡಿ ಗಿರವಿ ಅಂಗಡಿಗಳಿಲ್ಲವೆ ? ಎಂದರು" "ಹೌದೆಂದೆ" ಗೌಡರ ಮನೆಗೆ ಹೋಗಿ ನನ್ನ ರಾಮಾಯಣದ "ಸ್ತ್ರೀಪಾತ್ರಗಳ" ಮತ್ತು "ಹಿರೋಷಿಮಾ" ಕೃತಿಗಳನ್ನು ಕೊಟ್ಟೆ. ಇನ್ನೊಂದೊಂದು ಪ್ರತಿಗಳನ್ನು ಕೂಡಲೆ ಕಳಿಸಿಕೊಡಿ ಎಂದರು. ಆತಿಥ್ಯ ಸ್ವೀಕರಿಸಿ ಹೊರಬಿದ್ದೆ. ಮಾರನೆ ದಿವಸ ಕೃತಿಗಳನ್ನು ಕಳಿಸಿಕೊಟ್ಟೆ. ನಾಲ್ಕಾರುದಿನಗಳನ್ನು ಬಿಟ್ಟು ಫೋನು ಮಾಡಿದರು. ಹೋದೆ "ನಾನೇನೊ ತಿಳಿದುಕೊಂಡಿದ್ದೆ ನಿಮ್ಮ ಸಾಹಿತ್ಯಾಭಿರುಚಿ ಮತ್ತು ರಚನಾಶಕ್ತಿಯನ್ನು. ಕುವೆಂಪುರವರಿಗೆ ನಿಮ್ಮ ಕೃತಿಗಳನ್ನು ಕೊಟ್ಟೆ." ಅವರು ರಾಮಾಯಣದ ವಿಚಾರವಾಗಿ ಬೇಕಾದಷ್ಟು ಬಂದಿವೆ, ಬರುತ್ತಲೂ ಇವೆ, ಇನ್ನೂ ಬರುವವಿವೆ. ಅದರ ಅಗತ್ಯವಿಲ್ಲ. "ಹಿರೋಷೀಮಾ"ದಂಥ ಸೃಜನಾತ್ಮಕ ಕೃತಿಗಳಲ್ಲಿ ತೊಡಗುವುದು ಉತ್ತಮ ಎಂದರು ಎಂದು ತಿಳಿಸಿ, ಒಂದು ದಿವಸ ತಮ್ಮ ಸಂಗಡಬನ್ನಿ ಅವರನ್ನು ಭೇಟಿ ಮಾಡೋಣವೆಂದರು" "ಅವರ ದರ್ಶನವನ್ನು ಮಾಡುವ ಯೋಗ್ಯತೆಯನ್ನು ನಾನಿನ್ನೂ ಪಡೆದಿಲ್ಲವೆಂದೆ" ಅವರ ಸೇವಾವಾಹಿನಿ ಅನಂತವಾದದ್ದು.

ಪ್ರತಿವರ್ಷ ನವಂಬರ್ ೧ನೆಯ ದಿನಾಂಕ ಕರ್ನಾಟಕ ಏಕೀಕರಣ ದಿನೋತ್ಸವವನ್ನು ನಡೆಸುವುದು ರೂಢಿಗೆ ಬಂದಿದೆಯಲ್ಲ. ಅಂದು ಜಿಲ್ಲಾಗಣ್ಯವ್ಯಕ್ತಿಗಳನ್ನು ಗೌರವಿಸಿ ಶಾಲು ಹೊದಿಸುವುದೂ ಒಂದು ಆಚಾರವಾಗಿದೆ. ನಾಲ್ಕೈದು ವರ್ಷಗಳ ಕೆಳಗೆ ಜಿಲ್ಲಾಧಿಕಾರಿಗಳು ಗೌಡರ ಮನೆಗೆ ಹೋಗಿ ಜಿಲ್ಲಾ ಗಣ್ಯವ್ಯಕ್ತಿಗಳ ಒಂದು ಪಟ್ಟಿಯನ್ನು ಕೊಡಿರೆಂದು ಕೇಳಿದರಂತೆ. ಆಗ ನನ್ನ ಹೆಸರನ್ನೂ ಸೇರಿಸಿದ ಒಂದು ಪಟ್ಟಿಯನ್ನು ತಕ್ಷಣವೇ ಕೊಟ್ಟರಂತೆ. ಆ ಕಾರ್ಯಾಚರಣೆಯ ದಿನ ಮೊಟ್ಟಮೊದಲು ನನ್ನನ್ನು ಕೂಗಿದರು. "ಪ್ರೇಕ್ಷಕರು, ಅವರಾರು, ಅವರು ಎದ್ದುನಿಂತು ಮುಂದೆಬಂದು ಶಾಲು ಹೊದಿಸಿಕೊಳ್ಳಲಿ ಎಂದು ಕೂಗಿದರು." ಗೌಡರು ನನ್ನ ಕೈಹಿಡಿದು ಕರೆದು ಮುಂದೆ ನಿಲ್ಲಿಸಿದರು. ನನಗೇನೊ ಆಶ್ಚರ್ಯ, ಸಂತೋಷಗಳಾದವು. ಒಂದೆರಡು ತಿಂಗಳಾದ

ಮೇಲೆ ನಾನು ನನ್ನ ಸ್ವಂತಕೆಲಸದ ಸಂಬಂಧವಾಗಿ ಜಿಲ್ಲಾಧಿಕಾರಿಗಳನ್ನು ನೋಡುವ ಅವಶ್ಯಕತೆ ಬಂತು ; ಹೋಗಿ ನೋಡಿದೆ. ಆದರದಿಂದ ವಿಚಾರಿಸಿದರು. "ನೀವು ಗಾಂಧೀಜಿಯವರ ಸಬರಮತಿ ಆಶ್ರಮದಲ್ಲಿ–ಅದರಲ್ಲೂ ಅವರು ಆಶ್ರಮಬಿಟ್ಟು ಎರಡು ವರ್ಷಕಾಲ ಪ್ರವಾಸ ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿ ಇದ್ದಾಗ–ಮೂರು ವರ್ಷಗಳಕಾಲ ಅವರ ಹತ್ತಿರ ಇದ್ದಿರಂತೆ,ಅದೊಂದು ಮಂಡ್ಯಜಿಲ್ಲೆಯವರಿಗೆ ಹೆಮ್ಮೆಯ ವಿಷಯ" ಎಂದರು. ನಿಮಗೆ ಹೇಗೆ ಗೊತ್ತೆಂದು ಕೇಳಿದಾಗ ಗೌಡರ ಹೆಸರು ಹೊರಬಿತ್ತು. ಪ್ರತಿಫಲಾಪೇಕ್ಷೆಯಿಲ್ಲದೆ ಸೇವೆಮಾಡುವವರು ಎಂದು ಹೇಳಿ ಹೊರಬಿದ್ದೆ.

ನನ್ನ ಮನೆಗೆ ಒಂದಾವರ್ತಿ ಬಂದಿದ್ದರು. ನಾವು ಒಂದು ನಾಯಿಯನ್ನು ಸಾಕುತ್ತಿದ್ದೆವು. ಅದು ಬಹುಲಕ್ಷಣವಾಗಿತ್ತು ಬಂದ ವಿಷಯ ಮಾತಾಡಿ ಹೋಗುವಾಗ ಸ್ವಲ್ಪಹೊತ್ತು ಆ ಕುನ್ನಿಯನ್ನೇ ನೋಡಿ ಹೋದರು, ಅದನ್ನು ಅಪೇಕ್ಷಿಸಲಿಲ್ಲ. ಆದರೆ ಅದರ ಮೇಲಿನ ಮಮತೆಯನ್ನು ವ್ಯಕ್ತಪಡಿಸಿದ್ದರು. ಸಾಯಂಕಾಲದ ಹೊತ್ತಿಗೆ ಅದನ್ನೇ ನನ್ನ ಮಗನ ಕೈಲಿಕೊಟ್ಟು ಕಳಿಸಿ ಅವರಿಗೆ ಕಾಣಿಕೆಯನ್ನು ಅರ್ಪಿಸಿದೆ. ಮಗನಿಗೆ ಹಾಲು ಕುಡಿಸಿ ಕಳಿಸಿದರು.

ಸೀತಾಸುತ

# ಚಳುವಳಿಗಾರ

ಶ್ರೀ ಪಿ. ಎನ್. ಜವರಪ್ಪಗೌಡರು ಹುಟ್ಟುಚಳುವಳಿಗಾರರು. ಚಿಕ್ಕಹುಡುಗನಾಗಿದ್ದಾಗ ವಿದ್ಯಾರ್ಥಿದೆಸೆಯಲ್ಲಿಯೇ ಹುಟ್ಟೂರಿನ ಪಳ್ಳಿಯಿಂದ ಆರಂಭವಾದ ಇವರ ಚಳುವಳಿಯು ದಿಲ್ಲಿಯುವರೆಗೆ ಮುಟ್ಟಿತೆನ್ನುವುದು ಒಂದು ಸೋಜಿಗವಾದರೂ ಕಟುಸತ್ಯ. ಸ್ವಾತಂತ್ರ್ಯಹೋರಾಟದ ಇವರ ಚಳುವಳಿಯು ಶಾಲೆಯಲ್ಲಿ, ಹಳ್ಳಿಹಳ್ಳಿಗಳಲ್ಲಿ ಆಡುತ್ತಿದ್ದ ನಾಟಕಗಳಲ್ಲಿ, ಜಾತ್ರೆ ಸಂತೆಗಳಲ್ಲಿ ಪ್ರಾರಂಭವಾಗಿ ನಂತರ ತಾಲ್ಲೂಕು, ಜಿಲ್ಲಾ, ನಗರಮಟ್ಟದಲ್ಲಿ ಹೆಸರಾಯಿತು. 1936 ರಲ್ಲಿ 'ವಂದೇ ಮಾತರಂ' ಗೀತೆಯನ್ನು ಅರ್ಥಪೂರ್ಣವಾಗಿ ವಿವರಿಸಿ ಹಳ್ಳಿಗರ ಮನಮುಟ್ಟುವಂತೆ ಭಾಷಣ ಮಾಡುತ್ತಿದ್ದ ಇವರ ಮಾತುಗಳನ್ನು ನೆರೆಯ ಪಾಂಡವಪುರ ತಾಲ್ಲೂಕಿನ ಹಳ್ಳಿಗಳಲ್ಲಿ ಹಿರಿಯರು ಪ್ರಶಂಸಿಸುತ್ತಿದ್ದುದನ್ನು ಕೇಳಿರುವವರಲ್ಲಿ ನಾನೂ ಒಬ್ಬ. 1937 ನೆಯ ಇಸವಿಯಲ್ಲಿ 'ಜನಜಾಗೃತಿ' ಸಮಿತಿಯನ್ನು ಪ್ರಾರಂಭಿಸಿದರು. ಬೀದಿಬೀದಿಗಳಲ್ಲಿ ಪ್ರತಿದಿನ ಸಭೆ ಸೇರಿಸಿ ದೇಶೀಯ ಉಡುಪುಗಳನ್ನೇ ತೊಡಬೇಕೆಂದು ಭಾಷಣಮಾಡಿ ವಿದೇಶಿ ಬಟ್ಟೆಗಳನ್ನು ತೊಡಬಾರದೆಂದು ಹೇಳಿ ವಿದೇಶಿ ಬಟ್ಟೆಗಳನ್ನು ಬೆಂಕಿಯಲ್ಲಿ ಹಾಕಿ ಉರಿಸುತ್ತಿದ್ದರು.

ದಿನಾಂಕ 8-4-1938 ರಲ್ಲಿ ನಡೆದ ಚರಿತ್ರಾರ್ಹವಾದ ಶಿವಪುರ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗವಹಿಸಿ ಬದುಕಿ ಉಳಿದಿರುವ ಕೆಲವೇ ಮಂದಿ ಸತ್ಯಾಗ್ರಹಿಗಳಲ್ಲಿ ಗೌಡರೂ ಒಬ್ಬರು. ರೈತರಚಳುವಳಿ, ಗೋಕಾಕ್ ಮತ್ತು ವೆಂಕಟಸ್ವಾಮಿ ವರದಿ ವಿರುದ್ಧ ನಡೆದ ಚಳುವಳಿ, 1-1-1956 ರಲ್ಲಿ ಮಂಡ್ಯದಲ್ಲಿ ನಡೆದ ಕರ್ನಾಟಕ ಏಕೀಕರಣ ವಿರೋಧದ ಬೃಹತ್ ಚಳುವಳಿ, ವರುಣಾ ನಾಲಾ ಚಳುವಳಿ ಮತ್ತಿತರ ಹಲವಾರು ಚಳುವಳಿಗಳ ಮುಂಚೂಣಿಯಲ್ಲಿ ಶ್ರೀ ಜವರಪ್ಪಗೌಡರ ಪಾತ್ರ ತುಂಬಾ ಹಿರಿದು.

ರಾಜಕಾರಣಿ ಬೇಸಾಯಗಾರರಾಗಿದ್ದ ಶ್ರೀ ಗೌಡರು 'ವಿಶ್ವಾಮಿತ್ರ' ಎಂಬ ಹೆಸರಿನ ವಾರಪತ್ರಿಕೆಯನ್ನು ಪ್ರಕಟಿಸುವ ಮೂಲಕ ಪತ್ರಿಕಾರಂಗಕ್ಕೆ ಕಾಲಿಟ್ಟರು. ತನ್ನ ಪ್ರಜಲಿತ ಲೇಖನ ರಾಜಕೀಯ ಸುದ್ದಿಗಳಿಗೆ ರಾಜ್ಯಮಟ್ಟದಲ್ಲಿ ಹೆಸರಾಗಿದ್ದ ಪತ್ರಿಕೆಯು 1956 ರಲ್ಲಿ ಮಂಡ್ಯದಲ್ಲಿ ನಡೆದ ಸಮ್ಮೇಳನದ ವಿವರಗಳನ್ನು ಕುತೂಹಲಕಾರಿ ವಿಷಯಗಳನ್ನು ಪ್ರಕಟಿಸಿ ರಾಜ್ಯಾದ್ಯಂತ ನೆರೆದಿದ್ದ ಸುಮಾರು 30 ಸಾವಿರ ಮಂದಿಯ ಪ್ರಶಂಸನೆಗೆ ಪಾತ್ರವಾಯಿತು. ಪತ್ರಿಕೆಯನ್ನು ಇನ್ನೂ ಉತ್ತಮ ಸ್ಥಿತಿಯಲ್ಲಿ ಹೆಚ್ಚಿನಮಟ್ಟಕ್ಕೆ ಏರಿಸಬೇಕೆಂಬ ಆಸೆಯನ್ನಿಟ್ಟುಕೊಂಡು ಬೆಂಗಳೂರಿಗೆ ವಲಸೆ ಹೋದರು ಸ್ಥಳಾಂತರಿಸಿದರು. ಆರ್ಥಿಕ ಮುಗ್ಗಟ್ಟಿನಿಂದ ಪತ್ರಿಕೆಯು

ಪ್ರಕಟಣೆಯು ಅನಿವಾರ್ಯವಾಗಿ ನಿಂತುಹೋದುದರಿಂದ ಬರಿಗೈಯಲ್ಲಿ ಮಂಡ್ಯಕ್ಕೆ ವಾಪಸ್ ಆಗಬೇಕಾಯಿತು. ಮಂಡ್ಯಕ್ಕೆ ಬಂದನಂತರ ರಾಜ್ಯಮಟ್ಟದ ಪತ್ರಿಕೆಗೆ ಬಾತ್ಮೀದಾರರಾಗಿ. ರಾಷ್ಟ್ರಮಟ್ಟದ ಪತ್ರಿಕೆಗಳ ಪ್ರತಿನಿಧಿಯಾಗಿ ಮತ್ತು ವಿದ್ಯಾರ್ಥಿಗಳಿಗೆ ಬೇಕಾದ ಪುಸ್ತಕ ಸಾಮಗ್ರಿಗಳ ಮಾರಾಟವನ್ನು ಮುಂದುವರೆಸಿದರು. ಕಾಗದದ ಅಭಾವದಿಂದ ವಿದ್ಯಾರ್ಥಿಗಳಿಗೆ ಬರೆಯಲು ಸಾಕಷ್ಟು ಪುಸ್ತಕಗಳು ದೊರೆಯದಿದ್ದಾಗ ತಮ್ಮ ಮುದ್ರಣಾಲಯದಲ್ಲಿಯೇ 'ರೈಟರ್' ನಾಮಾಂಕಿತ ಬರೆಯುವ ಪುಸ್ತಕಗಳನ್ನು ತಯಾರಿಸಿ ಒದಗಿಸಿದರು. ರೈತರಿಗೆ ಬೇಕಾಗುವ ಎಲ್ಲ ನಮೂನೆ ಫಾರಂಗಳನ್ನು ಮುದ್ರಿಸಿ ಒದಗಿಸಿದರು.

ಯಾವುದೇ ಕೆಲಸವಾಗಲೀ, ಯಾವುದೇ ರಂಗವಾಗಲೀ, ಶ್ರೀ ಜವರಪ್ಪಗೌಡರದು ಸಹಾಯಕ ಹಸ್ತ. ಮದುವೆಯವ್ಯವಹಾರ, ಚುನಾವಣೆ, ಶಾಲಾಕಾಲೇಜುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅನುಕೂಲ, ರಾಜಕಾರಣಿಗಳ ಮತ್ತಿತರರ ವಿರಸವನ್ನು ಕೊನೆಗಾಣಿಸುವುದರಲ್ಲಿ ಇವರ ಚಾಣಾಕ್ಷತನ, ಸಂದರ್ಭೋಚಿತವಾದ ಆಪ್ಯಾಯಮಾನವಾದ ಇವರ ಮಾತುಗಳು ಎಂತಹ ಕಠಿಣ ಮನಸ್ಸಿನವರನ್ನೂ ಕರಗಿಸುತ್ತವೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎನ್ನುವ ನಾಣ್ಣುಡಿಯಂತೆ, ವ್ಯಕ್ತಿಯನ್ನು ನೋಡಿದರೆ ಆಕರ್ಷಣೆ ಇಲ್ಲದಿದ್ದರೂ ಇವರ ಮಾತು-ಕೆಲಸವು ಸರ್ವರಿಂದಲೂ ಮೆಚ್ಚಿ ಜನೋಪಯೋಗಿ ಜವರಪ್ಪಗೌಡರೆಂದು ಹೆಸರಾಗಿದ್ದಾರೆ.

ಆದಿಚುಂಚನಗಿರಿ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಪರಮ ಶಿಷ್ಯರಲ್ಲೊಬ್ಬರಾಗಿ ರಾಷ್ಟ್ರಕವಿ ಕುವೆಂಪು ಅವರ ನಿಕಟವರ್ತಿಗಳಾಗಿರುವ ಗೌಡರು ಕುವೆಂಪು ಅವರ 'ಮಂತ್ರಮಾಂಗಲ್ಯ' ಪ್ರಚಾರ ಆಂದೋಳನವನ್ನುಕೈಗೊಂಡು ಜಿಲ್ಲೆಯಲ್ಲಿ ಸಾವಿರಾರು ಸರಳವಿವಾಹವನ್ನು ತಾವೇ ಸ್ವತಃ ನಿಂತು ಮಾಡಿಸುತ್ತಿರುವುದು ಇವರ ಉಪಕಾರಿ ಮನೋಭಾವವನ್ನು ಎತ್ತಿ ತೋರಿಸುತ್ತದೆ.

ವೈಯಕ್ತಿಕ ಜೀವನ ವಿಷಯದಲ್ಲಿ ಬರೆಯಲು ನನಗೆ ಮನಸ್ಸಿಲ್ಲದಿದ್ದರೂ ಶ್ರೀಮತಿ ಪಾರ್ವತಮ್ಮ ಜವರಪ್ಪಗೌಡರ ವಿಷಯದಲ್ಲಿ ಒಂದು ಮಾತನ್ನು ಬರೆಯದಿದ್ದಲ್ಲಿ ಕರ್ತವ್ಯ ಲೋಪವಾಗುತ್ತದೆ. ನನಗೆ ತಿಳಿದಮಟ್ಟಿಗೆ ಶ್ರೀಮತಿ ಪಾರ್ವತಮ್ಮ ಓರ್ವ ಅಪೂರ್ವದ ಹೆಂಗಸೆಂದರೆ ತಪ್ಪಾಗಲಾರದು. ಯಾರೇ ಮನೆಗೆ ಹೋದರೂ ಚಿಕ್ಕವರು ದೊಡ್ಡವರೆನ್ನದೆ ಯಾವಾಗಲೂ ನಗುಮೊಗದಿಂದ ಸ್ವಾಗತಿಸಿ ಹಣ್ಣು, ಕಾಫಿ-ತಿಂಡಿ ಊಟವನ್ನು ಕೊಡದೆ ಹಿಂದಿರುಗಿಸುವ ವ್ಯಕ್ತಿಯಲ್ಲ. ಒಳೆಯ ಮಾತನಾಡಿ, ಕ್ಷೇಮಸಮಾಚಾರವನ್ನು ವಿಚಾರಿಸಿ ಕಳುಹಿಸುವುದು ಇವರ ದಿನಚರಿ. ಇವರ ಪೂರ್ಣ ಸಹಕಾರವಿಲ್ಲದಿದ್ದಲ್ಲಿ ಮನೆ, ಮಕ್ಕಳು, ತಮ್ಮ ಪತಿಯ ಖ್ಯಾತಿ ಇಷ್ಟರ ಮಟ್ಟಿಗೆ ಬರುತ್ತಿರಲಿಲ್ಲವೆಂದು ನನ್ನ ಅನಿಸಿಕೆ. ಈ ದಂಪತಿಗಳಿಗೆ ದೇವರು ಆರೋಗ್ಯಭಾಗ್ಯವನ್ನು ನೀಡಲೆಂದು ಪ್ರಾರ್ಥನೆ.

**ಕೆ. ಎನ್. ನರಸಿಂಹಗೌಡ**



# ಮರೆಯಲಾಗದ ವ್ಯಕ್ತಿತ್ವ

ನಾನು 1947ರಲ್ಲಿ ಮಂಡ್ಯಕ್ಕೆ ಮಳವಳ್ಳಿ ಕ್ಷೇತ್ರದಿಂದ ಮಂಡ್ಯ ಜಿಲ್ಲಾ ಬೋರ್ಡ್ ಸದಸ್ಯನಾಗಿ ಮತ್ತು ವಕೀಲನಾಗಿ ಬಂದ ದಿನದಿಂದಲೂ ಶ್ರೀ ಪಿ. ಎಸ್. ಜವರಪ್ಪ ಗೌಡರ ಪರಿಚಯ ಪ್ರಾರಂಭವಾಗಿ ಅಲ್ಲಿಂದ ಇಲ್ಲಿಯವರೆಗೂ ಮರೆಯಲಾರದ ಅಚ್ಚು ಮೆಚ್ಚಿನ ಆಪ್ತರಾಗಿದ್ದೇವೆ.

ಶ್ರೀಯುತ ಪಿ. ಎಸ್. ಜವರಪ್ಪಗೌಡರ ಬಹುಮುಖ ವ್ಯಕ್ತಿತ್ವ, ಸ್ನೇಹಪರತೆ, ವಿನೋದಪ್ರಿಯತೆ, ವಾಕ್‌ಚಾತುರ್ಯ, ಸೌಜನ್ಯಶೀಲತೆ, ಸಾಹಿತ್ಯದಲ್ಲಿ ಅಭಿರುಚಿ, ಆಶುಕವಿತೆ, ವಿಶಾಲ ಮನೋಭಾವನೆ, ಮುಂತಾದ ಸದ್ಗುಣ ಸಂಪನ್ನ ಸಂಪದ್ಭರಿತ ಸಮೂಹ ನನ್ನನ್ನು ವಿಶೇಷವಾಗಿ ಆಕರ್ಷಣೆ ಮಾಡಿತು.

ನಾನು ಮಂಡ್ಯ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿದ್ದಾಗ ಮತ್ತು ದಾನ ಶೀಲ ಕರ್ಣ ಎಂಬ ನಾಟಕದಲ್ಲಿ ಸನ್ಮಾನ್ಯ ಶ್ರೀ ಕೆ. ವಿ. ಶಂಕರಗೌಡರ ನೇತೃತ್ವದಲ್ಲಿ ದುರ್ಯೋಧನನ ಪಾತ್ರವನ್ನು ಅಭಿನಯಿಸಿದಾಗಲಂತು ಶ್ರೀ ಜವರಪ್ಪಗೌಡರ ನಿಕಟ ಸಂಪರ್ಕ ವಿಶೇಷವಾಗಿ ಬೆಳೆಯಿತು.

ಸಾರ್ವಜನಿಕ ಚರ್ಚಾಸ್ಪರ್ಧೆಗಳು, ಆಶುಭಾಷಣ ಸ್ಪರ್ಧೆಗಳು ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆದಾಗಲೆಲ್ಲಾ ಪ್ರಧಾನ ಸೂಚಕರಾಗಿ ಅಥವಾ ಪ್ರಧಾನ ವಿರೋಧಿ ಯಾಗಿ ಭಾಗವಹಿಸುತ್ತಿದ್ದೆವು. ತಮ್ಮ ವಾದ ವಿವಾದಗಳನ್ನು ಒಬ್ಬರಿಗಿಂತ ಮತ್ತೊ ಬ್ಬರು ಚೆನ್ನಾಗಿ ವಾದಮಾಡಿ ಸಭಿಕರು ಯಾವವರ ಮತಕೊಡಬೇಕೆಂಬ ಸಂದಿಗ್ಧ ಪರಿಸ್ಥಿತಿಗೆ ಸಿಲುಕಿ ಪೇಚಾಡುತ್ತಿದ್ದರು.

ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಂಡ್ಯ ಕರ್ನಾಟಕ ಸಂಘ ಅನೇಕ ಸಲ ಪ್ರತಿವಾರವೂ ನಡೆಸುತ್ತಿತ್ತು. ಕರ್ನಾಟಕ ಸಂಘವು ನಗರದ ನಾಗರಿಕರನ್ನು ಅಧಿಕ ಸಂಖ್ಯೆಯಲ್ಲಿ ಆಕರ್ಷಿಸುವ ಮಹೋನ್ನತ ಕಾರ್ಯಕ್ರಮಗಳನ್ನು 'ಏರ್ಪಡಿಸುತ್ತಿತ್ತು' ಕರ್ನಾಟಕ ಸಂಘದ ಕಾರ್ಯಕ್ರಮಗಳಿಗೆ ಸಭಿಕರ ನೂಕು ನುಗ್ಗಲು ಹೇಳತೀರದಾಗಿರು ತ್ತಿತ್ತು. ನಾವಿಬ್ಬರೂ ಪ್ರಧಾನವಾಗಿ ಭಾಗವಹಿಸುತ್ತಿದ್ದ ಕಾರ್ಯಕ್ರಮದಲ್ಲಿ ಪ್ರೇಕ್ಷಕರ ಸಂಖ್ಯೆ ಅಧಿಕವಾಗಿರುತ್ತಿತ್ತು.

ಚರ್ಚಾಸ್ಪರ್ಧೆಗಳಲ್ಲಿ ಭಾಗವಹಿಸಿ ಶ್ರೀ ಪಿ. ಎಸ್. ಜವರಪ್ಪಗೌಡರೊಡನೆ ವಾದ ಪ್ರತಿವಾದ ಮಾಡಿದ ಅನುಭವವೇ ನನ್ನ ರಾಜಕೀಯ ಕ್ಷೇತ್ರಕ್ಕೆ ಮತ್ತು ವಕೀಲ ವೃತ್ತಿಗೆ ಬುನಾದಿ ಆಯಿತೆಂಬುದು ನನ್ನ ಅಚಲ ನಂಬಿಕೆ.

ಒಮ್ಮೆ ಕರ್ನಾಟಕ ಸಂಘದಲ್ಲಿ ಆಶುಭಾಷಣ ಸ್ಪರ್ಧೆ ಏರ್ಪಡಿಸಿದೆ. ಅಂದಿನ

ಸ್ಪರ್ಧಾಸಭೆಗೆ ಡಾ. ದೇ. ಜವರೇಗೌಡರು ಅಧ್ಯಕ್ಷತೆ ವಹಿಸಲು ಆಹ್ವಾನಿಸಿದ್ದೆ. ಡಾ. ದೇ. ಜವರೇಗೌಡರು ಮಾನಸಗಂಗೋತ್ರಿಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು. ಈ ಸ್ಪರ್ಧೆಗೆ ದಿವಂಗತ ಎಂ. ವಿ. ರಾಮಚಂದ್ರ ಶೆಟ್ಟಿ, ಡಾ. ಸಿ. ಬಂದೀಗೌಡರು, ವಕೀಲರಾದ ದಿವಂಗತ ಎಂ. ಮಹಾಬಲರಾವ್, ದಿವಂಗತ ಕೆ. ಗುಂಡಣ್ಣ ನಾನು ಮತ್ತು ಪಿ. ಎಸ್. ಜವರಪ್ಪಗೌಡರು ಸ್ಪರ್ಧೆಯಲ್ಲಿ ಭಾಗ ವಹಿಸುವವರಾಗಿದ್ದೆವು. ಶ್ರೀ ಪಿ. ಎಸ್. ಜವರಪ್ಪಗೌಡರ ವಿಷಯ ಎಲ್ಲ ಉದ್ಯಮ ಕ್ಕಿಂತ ಪತ್ರಿಕೋದ್ಯಮವೇ ಶ್ರೇಷ್ಠ ಎಂಬುದು.

ಶ್ರೀ ಪಿ. ಎಸ್. ಜವರಪ್ಪಗೌಡರು ಯಾವುದೋ ಪೂರ್ವ ಯೋಜಿತ ಕಾರ್ಯ ಕ್ರಮಕ್ಕೆ ಬೆಂಗಳೂರಿಗೆ ಹೋಗಿ ಸಮಯಕ್ಕೆಬರುವುದಾಗಿ ತಿಳಿಸಿಹೋಗಿದ್ದರು. ಸಮಯ ಆಗಲೇ ಸಮೀಪಿಸುತ್ತಿತ್ತು. ಕರ್ನಾಟಕ ಸಂಘದ ಕಾಯಕ್ರಮ ರಾತ್ರಿ 8½ ಗಂಟೆಗೆ ಮುಕ್ತಾಯವಾಗುತ್ತಿತ್ತು.

ಸಮಯ 7½ ಗಂಟೆ ಆಗುತ್ತಿದೆ. ಡಾ. ಸಿ. ಬಂದೀಗೌಡರು ಎಲ್ಲ ವೃತ್ತಿಗಿಂತ ವೈದ್ಯ ವೃತ್ತಿಯೇ ಶ್ರೇಷ್ಠ ಎಂಬ ಬಗ್ಗೆ ಮಾತನಾಡಿ ಕುಳಿತರು. ಜವರಪ್ಪಗೌಡರು ಸಮಯಕ್ಕೆ ಬರಲಿಲ್ಲವಾದ್ದರಿಂದ ಶ್ರೀ ಎಚ್ ಎಸ್. ಸುಬ್ಬೇಗೌಡರು ಪತ್ರಿಕೋದ್ಯಮ ಕುರಿತು ಮಾತನಾಡಿದರು. ಇನ್ನುಳಿದ ವಿಷಯ ವರ್ತಕತನ ಕುರಿತದ್ದು.

ಜವರಪ್ಪಗೌಡರ ಭಾಷಣ ಎಂದರೆ ಸಭಿಕರು ಮಂತ್ರ ಮುಗ್ಧರಾಗಿ ಆಲಿಸು ತ್ತಿದ್ದರು. ತಲೆಯಲ್ಲಿ ಅದೆಷ್ಟು ಸಣ್ಣಪುಟ್ಟ ಕಥೆಗಳು ತುಂಬಿವೆಯೋ ಹೇಳತೀರದು. ಆಯಾ ಸಮಯಕ್ಕೆ ಹೊಂದುವ ಸಣ್ಣಕಥೆಗಳನ್ನು ಭಾಷಣದುದ್ದಕ್ಕೂ ಹಾಸ್ಯಪೂರಿತ ವಾಗಿಸುತ್ತ ನಕ್ಕುನಗಿಸುತ್ತ ಪ್ರೇಕ್ಷಕರನ್ನು ಕರೆದೊಯ್ಯುತ್ತಿದ್ದ ಮಾಂತ್ರಿಕತನ ನಮಗ್ಯಾರಿಗೂ ಇಂದಿಗೂ ಲಭ್ಯವೇ ಆಗಲಿಲ್ಲ. ಜವರಪ್ಪಗೌಡರು ಬರಲಿಲ್ಲವೆಂಬ ತವಕ ಸಭಿಕರಿಗೆ, ಕಾರ್ಯಕ್ರಮ 8½ ಗಂಟೆಗೆ ಮುಗಿಸಬೇಕೆಂಬ ತವಕ ಸಂಘದವರಿಗೆ. ಜವರಪ್ಪ ಗೌಡರು 8 ಘಂಟೆ ಸಮಯವಾದರೂ ಬರಲಿಲ್ಲವಾಗಿ ವರ್ತಕತನಕ್ಕೆ ನಿಯೋಜಿತರಾಗಿದ್ದ ಶ್ರೀ ಎಂ. ವಿ. ರಾಮಚಂದ್ರ ಶೆಟ್ಟರು ವರ್ತಕತನ ಕುರಿತು ಮಾತನಾಡುವರೆಂದು ಸಭೆಗೆ ತಿಳಿಸಲಾಯಿತು.

ಕಾರ್ಯಕ್ರಮ ಕೇಳಿದ ಸಭಿಕರು 'ಬ್ಲ್ಯಾಕ್‌ಮಾರ್ಕೆಟ್' ಎಂದು ನಿಮಿಷಬಿಡುವಿಲ್ಲ ದಂತೆ ಕೂಗುತ್ತ ಶೆಟ್ಟರನ್ನು ಅಧೀರರನ್ನಾಗಿ ಮಾಡಿದರು. ಅಧ್ಯಕ್ಷರಾದ ಡಾ. ದೇ. ಜವರೇಗೌಡರು ಸಭಿಕರನ್ನು ಪ್ರಾರ್ಥಿಸಿ ವರ್ತಕತನದ ವಾದ ಬಿಟ್ಟು ಕಾರ್ಯಕ್ರಮ ಮುಗಿಸಿಬಿಡುತ್ತೇವೆ. ತಾವು ಶಾಂತ ಚಿತ್ತರಾಗಿ ವರ್ತಕತನದ ಬಗ್ಗೆ ತಿಳಿಯುವುದು ನಿಮ್ಮ ಹಿತದೃಷ್ಟಿಯಿಂದ ಮುಖ್ಯ ಎಂದರು. ದಿವಂಗತ ರಾಮಶೆಟ್ಟರು ಅಧೀರತೆಯಿಂದ ನನ್ನಿಂದ ಮಾತನಾಡಲು ಸಾಧ್ಯವೇ ಇಲ್ಲ ಎಂದರು. ಬೇರೆ ಯಾರಾದರೂ ವರ್ತಕತನ ಕುರಿತು ಮಾತನಾಡಲು ಇಚ್ಛೆಯುಳ್ಳವರು ದಯಮಾಡಿ ವೇದಿಕೆಗೆ ಬನ್ನಿರಿ ಎಂದು

ಅಧ್ಯಕ್ಷರು ಘೋಷಿಸಿದರು. ಯಾರೊಬ್ಬರೂ ಮುಂದೆ ಬರಲಿಲ್ಲ. ನಾನೇ ಮಾತನಾಡುವುದೆಂದು ಮೇಲೆದ್ದೆ. ಜವರಪ್ಪಗೌಡರು ಬಾಗಿಲಲ್ಲಿ ಕಂಡರು. ಸಭಿಕರೇ ಹುಚ್ಚೆದ್ದು ಕೂಗಿದರು. ಜವರಪ್ಪಗೌಡರು ವರ್ತಕತನ ಕುರಿತು ಮಾತನಾಡಲಿ ಕಾರ್ಯಕ್ರಮ 9 ಗಂಟೆ ಆದರೂ ಚಿಂತೆಯಿಲ್ಲ ಎಂದು ಹೇಳಿದರು.

ಜವರಪ್ಪಗೌಡರು ವೇದಿಕೆ ಬಳಿ ಬಂದು ಕೂರುವ ಮೊದಲೇ ಡಾ. ದೇ ಜವರೇಗೌಡರು ಶ್ರೀ ಪಿ. ಎನ್ ಜವರಪ್ಪಗೌಡರು ಸಮಯಕ್ಕೆ ಸರಿಯಾಗಿ ಬಾರದೇ ಹೋದ ಪ್ರಯುಕ್ತ ಅವರ ವಿಷಯವಾದ ಪತ್ರಿಕೋದ್ಯಮ ಕುರಿತು ಬೇರೆಯವರು ಮಾತನಾಡಿರುತ್ತಾರೆ. ಈಗ ಗೌಡರು ವರ್ತಕತನ ಕುರಿತು ಮಾತನಾಡುವರು ಎಂದು ಪ್ರಕಟಿಸಿದರು. ಪ್ರೇಕ್ಷಕರು ಶೆಟ್ಟರಿಗೆ ಕೂಗಿದಂತೆ ಜವರಪ್ಪಗೌಡರಿಗೂ ಬ್ಲ್ಯಾಕ್‌ಮಾರ್ಕೆಟ್ ಎಂದು ಕೂಗಿದರು. ನಿಮಿಷ ಮೌನ ತಾಳಿದ ಗೌಡರು ಜಗತ್ತಿನಲ್ಲಿ ವಾಣಿಜ್ಯವೇ ಮಹತ್ತರ ವೃತ್ತಿ, ಬ್ಲ್ಯಾಕ್‌ಮಾರ್ಕೆಟ್ ಪದದ ಅರ್ಥ ತಿಳಿಯದೆ ನೀವು ಸುಮ್ಮನೆಕೂಗಿದರೇನಾದೀತು. ಬ್ಲ್ಯಾಕ್‌ಮಾರ್ಕೆಟ್ ಹೋದಿತೇ. ಬ್ಲ್ಯಾಕ್‌ಮಾರ್ಕೆಟ್ ಹೋಯಿತೋ ನಿಮ್ಮ ನಮ್ಮ ಜೀವನ ಬರಿದು ಎಂದು ತಮ್ಮ ವಾದವನ್ನು ಮುಂದುವರಿಸುತ್ತ ಎಲ್ಲ ಉದ್ಯಮಕ್ಕಿಂತ ಪತ್ರಿಕೋದ್ಯಮ ಶ್ರೇಷ್ಠ ಎಂದು ಮಾತನಾಡಲು ಒಪ್ಪಿ ತಪ್ಪು ಮಾಡಿಕೊಂಡಿದ್ದೆ. ವಿಶ್ವದಲ್ಲಿ ಲಾಯಕ್ಕಲ್ಲದ ಉದ್ಯಮ ಪತ್ರಿಕೋದ್ಯಮ. ಯಾರಾದರೂ ಬೇರೆಯವರು ಆ ಉದ್ಯಮ ಕುರಿತು ಮಾತನಾಡಿದನಂತರ ಹೋಗೋಣವೆಂದು ತಲೆ ತಪ್ಪಿಸಿಕೊಂಡಿದ್ದೆ ಎಂದು ಪ್ರೇಕ್ಷಕರ ಮೇಲೆ ಸಂಶಯದ ಭೂತ ಕೂರಿಸಿದರು.

ಸರ್ಕಾರದವರು ಸೇತುವೆ, ಕೆರೆ, ಕಟ್ಟೆ, ಬಾವಿಗಳನ್ನು ನಿರ್ಮಾಣಮಾಡಲು ಟೆಂಡರು ಕರೆಯುತ್ತಾರೆ. ಅದನ್ನು ನೀವು ಬ್ಲ್ಯಾಕ್‌ಮಾರ್ಕೆಟ್ ಎಂದು ಕರೆಯುತ್ತೀರೇನು? ಪತ್ರಿಕೋದ್ಯಮಿಗಳ ಕುಚೇಷ್ಟೆಪದ ಬ್ಲ್ಯಾಕ್‌ಮಾರ್ಕೆಟ್. ಡಾ. ಸಿ. ಬಂದೀಗೌಡರು ವೈದ್ಯವೃತ್ತಿ ಎಂದು ಮಾತನಾಡಿದ್ದಾರೆ. ವರ್ತಕನಾದ ನಾನಿಲ್ಲದ ಅವರ ವೃತ್ತಿ ಬರಡು, ಜನೋಪಯೋಗಿ ಔಷಧಿಗಳನ್ನು ದೇಶ ವಿದೇಶಗಳಿಂದ ಆಯಾತ ಮಾಡಿ ತರಿಸಿ ಕೊಡದಿದ್ದರೆ ರೋಗಿಗಳಾದ ಜನರ ಗತಿ ಏನಾಗಬೇಕು. ನೋಡಿ ಇಲ್ಲಿ ಇರುವುದು. ನೀವು ಕೂಗುವ ಬ್ಲ್ಯಾಕ್‌ಮಾರ್ಕೆಟ್‌ಗೆ ಸೂಕ್ತ ಉತ್ತರ. ಯಾರೊ ಒಬ್ಬ ರೋಗಿ ನ್ಯೂಮೋನಿಯಾ ಕಾಯಿಲೆಗೆ ತುತ್ತಾಗಿರುತ್ತಾನೆ. ಆತನಿಗೆ ತುರ್ತಾಗಿ ಇಂಜೆಕ್ಷನ್ ಬೇಕು. ಅಂತಹ ತುರ್ತು ಸಮಯದಲ್ಲಿ ನನ್ನಲ್ಲಿರೊ ಒಂದೇ ಒಂದು ಟ್ಯೂಬಿನ ಬೆಲೆ ಹೆಚ್ಚಿಸಿ ತುರ್ತಾದವರಿಗೆ ಕೊಡೋಣ ಎಂದು ಇಟ್ಟುಕೊಂಡಿರುತ್ತೇನೆ'. ಮನುಷ್ಯ ಹಣ ಸಂಪಾದನೆ ಮಾಡುತ್ತಾನೆಯೆ ಹೊರತು ಹಣ ಮನುಷ್ಯನನ್ನು ಸಂಪಾದನೆ ಮಾಡದು. ತುರ್ತಾದವನಿಗೆ ಔಷಧಿ ಅಗತ್ಯವೆಂದು ಹೆಚ್ಚಿನ ಬೆಲೆಗೆ ಮಾರಾಟ ಮಾಡುವ ಜೀವರಕ್ಷಣ ವರ್ತಕನನ್ನು ಬ್ಲ್ಯಾಕ್‌ಮಾರ್ಕೆಟ್ ಎಂದು ಕೂಗಿ ನಿಮ್ಮನ್ನು ನೀವೆ ಅವಹೇಳನಕ್ಕೆ ಗುರಿಮಾಡಿ ಕೊಳ್ಳಬೇಡಿ.

ಹಣ ಬಂತು ಮುಚ್ಚಿಟ್ಟುಕೊಳ್ಳುವುದಿಲ್ಲ. ಪುನಃ ತುರ್ತಾಗಿ ನೂರಾರು ಟ್ಯೂಬ್‌ಗಳನ್ನು ತರಿಸಿ ತುರ್ತಾಗಿ ಬೇಕಾದವರಿಗೆ, ಮುಂದೆ ಕಾಯಿಲೆ ಬಂದರೆ ಇರಲಿ ಎನ್ನುವ ಜನರಿಗೆ ಹೀಗೆ ಎಲ್ಲರಿಗೂ ಮಾರಾಟ ಮಾಡುತ್ತೇವೆ. ವರ್ತಕನಿಲ್ಲದ ರಾಜ್ಯ ಸ್ಮಶಾನಕ್ಕೆ ಸಮಾನ. ಯಾವುದೇ ವೃತ್ತಿಯನ್ನಾದರೂ ದೂಷಣೆ ಮಾಡಿ ವರ್ತಕನನ್ನು ಮಾತ್ರ ದೂಷಣೆಗೆ ಗುರಿಮಾಡಬೇಡಿ ಮುಂತಾಗಿ ವಾದಮಾಡಿ ಪ್ರೇಕ್ಷಕರಿಂದ ಮತ ಪಡೆದ ಘಟನೆ ನೆನ್ನೆ ಮೊನ್ನೆ ನಡೆದ ಪ್ರಸಂಗದಂತೆ ನನ್ನ ಮನಸ್ಸಿನ ಮೇಲೆ ಇನ್ನೂ ಹಚ್ಚ ಹಸಿರಾಗಿ ಉಳಿದಿದೆ.

''ಇಂದಿನ ಚರ್ಚಾಸ್ಪರ್ಧೆಯಲ್ಲಿ ಮಾತನಾಡಿದ ಮಹನೀಯರು ನಿರರ್ಗಳವಾಗಿ ಮಾತನಾಡಿ ನನ್ನ ಮತ್ತು ತಮ್ಮೆಲ್ಲರ ಮನದಾಳದಲ್ಲಿ ನೆಲೆಮಾಡಿದ್ದಾರೆ. ಇವರ ವಾಕ್ಶಕ್ತಿ ಹಿಂದೆ ಇಲ್ಲಿ ಸೇರಿರುವ ಜನಚೇತನ ಶಕ್ತಿ ಇದೆ. ವಾಕ್ಶಕ್ತಿ ಮಹಿಮೆಯಿಂದ ಬೋಧನಾ ಸಾಮರ್ಥ್ಯವನ್ನು ಪಡೆಯಬಹುದು. ಇದಕ್ಕೆ ಸಾಕ್ಷಿಯಾಗಿ ಇಲ್ಲಿ ಸೇರಿರುವ ಚೇತನಶಕ್ತಿಯೂ ಕಾರಣಗಳಲ್ಲೊಂದು ಎಂದು ಡಾ. ದೇ. ಜವರೇಗೌಡರು ತಮ್ಮ ಅಧ್ಯಕ್ಷಭಾಷಣದಲ್ಲಿ ಮಾತಾಡುವವರ ಶಕ್ತಿಗಿಂತ ಕುಳಿತು ಕೇಳುವವರ ಶ್ರದ್ಧಾಪೂರ್ವಕ ಆಸಕ್ತಿ ಮುಖ್ಯವಾದುದು'' ಎಂದರು.

ಸಮಾರಂಭದ ಕೊನೆಯಲ್ಲಿ ಮಾತನಾಡಿದ ಶ್ರೀ ಟಿ. ಎನ್. ಜವರಪ್ಪಗೌಡರ ಹೆಸರು ಕೇಳಿದ್ದುಂಟು. ಅವರನ್ನು ನೋಡಿದ್ದು ಇದೇ ಮೊದಲು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವ ಮಾತು ಅವರಿಗೆ ಸಲ್ಲಬೇಕು. ವಿಷಯಕ್ಕೆ ಸಂಬಂಧಪಟ್ಟ ವಿಚಾರಗಳಷ್ಟನ್ನೇ ತಲೆಯಲ್ಲಿ ಪಟ್ಟಿಮಾಡಿ ಮಾತನಾಡಿದ್ದಾರೆ. ಅವರ ಮಾತಿನಲ್ಲಿ ನಿರರ್ಥಕವಾದ ವಾಕ್ಯ ಒಂದಾದರೂ ಇಲ್ಲದಂತೆ ನೋಡಿಕೊಂಡಿದ್ದಾರೆ. ನಾನು ಮೊದಲು ಹೇಳಿದಂತೆ ಗೌಡರು ವಾಕ್ಶಕ್ತಿಯಿಂದ ಬೋಧನಾಸಾಮರ್ಥ್ಯ ಪಡೆದಿದ್ದಾರೆ. ಈ ಸಾಮರ್ಥ್ಯದ ಹಿಂದೆ ಜನ ಚೇತನ ಶಕ್ತಿಯ ಮಹತ್ವವಿದೆ.

ಶ್ರೀ ಜವರಪ್ಪಗೌಡರ ಉದ್ಯೋಗವೇ ಪತ್ರಿಕಾವೃತ್ತಿ. ಆ ವಿಷಯ ಪ್ರಭಾವಯುತವಾಗಿ ಮಾತನಾಡಲು ತಲೆಯಲ್ಲಿ ವಿಷಯ ಸಂಗ್ರಹಣೆ ನಡೆಸಿದ್ದವರು. ಬೇರೆ ವಿಷಯ ಕುರಿತು ಮಾತನಾಡಬೇಕೆಂದ ಕೂಡಲೇ ಪತ್ರಿಕೋದ್ಯಮಕ್ಕೆ ಸಂಗ್ರಹಿಸಿದ್ದ ವಿಚಾರಗಳನ್ನು ನಿಮಿಷದಲ್ಲಿ ತಮ್ಮ ತಲೆಯಿಂದ ಖಾಲಿ ಮಾಡಿ, ವರ್ತಕತನದ ವೃತ್ತಿ ಕುರಿತು ಮಾತನಾಡಿ ನಾವು ನೀವು ವಿಶ್ವದ ಬದುಕು ವಾಣಿಜ್ಯವೃತ್ತಿಯಿಂದಲೇ ಸಾಧ್ಯವೆಂದು, ತಮ್ಮ ಮಾತಿನ ಮೋಡಿಯಿಂದ ಗೆದ್ದಿದ್ದಾರೆ ಎಂದು ಜವರಪ್ಪಗೌಡರ ಬಗ್ಗೆ ಡಾ. ದೇ. ಜವರೇಗೌಡರು ಪ್ರಶಂಸಿಸಿ ಮಾತನಾಡಿದರು.

ಶ್ರೀ ಜವರಪ್ಪಗೌಡರ ಜೊತೆಯಲ್ಲಿ ವಿಷಯಗಳನ್ನು ಮಂಡಿಸಿ ಮಾತನಾಡಿದವರೆಲ್ಲರು ಹೊಗಳಿಕೆಗೆ ಪಾತ್ರರಾದವರು, ನಿಮ್ಮ ಕರ್ನಾಟಕ ಸಂಘದವರನ್ನು ಮಹಾರಾಜ ಕಾಲೇಜಿನ ಅಧ್ಯಾಪಕ ವರ್ಗದವರೊಡನೆ ಚರ್ಚಾಸ್ಪರ್ಧೆಗೆ ಆಹ್ವಾನಿಸಬಯಸುತ್ತೇನೆಂದು

ವಂದಿಸಿದರು.

ನನ್ನ ಮತ್ತು ಶ್ರೀ ಪಿ. ಎಸ್. ಜವರಪ್ಪಗೌಡರ ಇಳಿವಯಸ್ಸಿನಲ್ಲು ಸಹ ನಮ್ಮ ಗೆಳೆತನ ಹಚ್ಚ ಹಸಿರಾಗಿದೆ. ಭಗವಂತನು ನಮ್ಮೀರ್ವರ ಜೀವಮಾನ ಪರ್ಯಂತ ಚಿರವಾಗಿರುವಂತೆ ಆಶೀರ್ವದಿಸಲಿ.

ಶ್ರೀ ಪಿ.ಎಸ್. ಜವರಪ್ಪಗೌಡರು ಮತ್ತು ಸಂಸಾರದವರಿಗೆ ಆಯುರಾರೋಗ್ಯ ಭಾಗ್ಯವಿತ್ತು, ಗೌಡರು ಶತಾಯುಷಿಯಾಗಿ ದೇಶ ಮತ್ತು ಸಮಾಜಕ್ಕೆ ಸೇವೆ ಸಲ್ಲಿಸುವ ಸಾಮರ್ಥ್ಯ ಕೊಡಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಬೊ. ಪು. ನಾಗರಾಜಮೂರ್ತಿ



# ವ್ಯಕ್ತಿಯಲ್ಲ ಶಕ್ತಿ

ನನ್ನ 85ನೆಯ ವಯಸ್ಸಿನ ಜೀವಿತದಲ್ಲಿ ನನಗೆ ಆತ್ಮೀಯರಾಗಿ ಉಳಿದಿರುವ ನಿಕಟವರ್ತಿ ಸ್ನೇಹಿತರಲ್ಲಿ ಶ್ರೀ ಪಿ. ಎಸ್. ಜವರಪ್ಪಗೌಡರು ಅತಿ ಆತ್ಮೀಯ ಗೆಳೆಯರು. ಈ ನೆಚ್ಚಿನ ಗೆಳೆಯನಿಗೆ ಅಭಿನಂದನ ಗ್ರಂಥ ಅರ್ಪಿಸಲು ಲೇಖನ ಕೇಳಿ ನಮ್ಮಿಬ್ಬರ ಸ್ನೇಹಿತರಾದ ಶ್ರೀ ಕೆ. ವಿ. ಶಂಕರಗೌಡರು ಪ್ರಧಾನ ಸಂಪಾದಕರಾಗಿ ಕಾಗದ ಬರೆದಿದ್ದಾರೆ. ಲೇಖನ ಕೊಡಲು ದಿನಾಂಕವನ್ನು ಗೊತ್ತುಮಾಡಿದ್ದಾರೆ. ಇಲ್ಲೊಂದು ಮಾತು ಸೇರಿಸಲೇಬೇಕು. ಶೈಕ್ಷಣಿಕ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿ ಸಲ್ಲಿಸುತ್ತಿರುವ ಅಖಿಲ ಭಾರತದಲ್ಲೆ ಖ್ಯಾತಿವೆತ್ತ ಶ್ರೀ ಕೆ ವಿ. ಶಂಕರಗೌಡರು ಅಭಿನಂದನ ಗ್ರಂಥಕ್ಕೆ ಪ್ರಧಾನ ಸಂಪಾದಕರಾಗಿರುವುದು ಕಿರೀಟಪ್ರಾಯವಲ್ಲವೆ ? ಯೋಚಿಸಿ ನೋಡಿ ! ನಾನೇ ಲೇಖನ ಬರೆಯುವುದಾಗಿದ್ದರೆ ಪುಟಗಟ್ಟಲೆ ಜವರಪ್ಪಗೌಡರ ಸಾರ್ವಜನಿಕ ಜೀವನದ ನಾನಾ ಮುಖಗಳನ್ನು ಚಿತ್ರಿಸಿ ಕಳುಹಿಸುತ್ತಿದ್ದೆ.

ನಾನೇ ಲೇಖನಿ ಹಿಡಿದು ಬರೆಯಲು ಅಶಕ್ತನಾಗಿದ್ದು, ಅನ್ಯರ ಆಶ್ರಯ ಪಡೆಯುವಂತಾಗಿದ್ದೇನೆ. ಆದ್ದರಿಂದ ಬರೆದುಕೊಳ್ಳುವವನು ಕಾಲಕ್ಕೆ ಸರಿಯಾಗಿ ಬಾರ. ನನ್ನಂತೆ ವಯಸ್ಸಾದವರ ಕಥೆ ಬರೆಯುವುದು ಈ ತಾಳ್ಮೆಯಿಲ್ಲದ ಹುಡುಗರಿಗೆ ಕಷ್ಟ. ನಾನು ಹೇಳುವುದರಲ್ಲಿ ಸ್ವಲ್ಪ ಹಿಂದುಮುಂದಾದರೆ ಇದೇನು ಸಾರ್ ನಿಮಗೆ ಕಲಮಲವಾಗಿದೆ ಎಂದು ಮುಖದ ಮೇಲೆ ಹೊಡೆದಂತೆ ಹೇಳಿಬಿಡುತ್ತಾರೆ. ಆದ್ದರಿಂದ ನನ್ನ ಲೇಖನ ನಿಮಗೆ ಬರುವುದು ತಡವಾದರೂ ಕ್ಷಮಿಸಿ, ಗೆಳೆಯ ಜವರಪ್ಪ ಗೌಡನ ಅಭಿನಂದನ ಗ್ರಂಥದಲ್ಲಿ ನನ್ನದು ಕಾಣಿಕೆ ಅಗತ್ಯ. ಅಗತ್ಯವೇನು, ಅತ್ಯಗತ್ಯ ಎಂದು ಭಾವಿಸಿ ಈ ಲೇಖನವನ್ನು ಸೇರಿಸಿ ನನ್ನ ನುಡಿ ನಮನ ನಿಮ್ಮ ಮೂಲಕ ಗೆಳೆಯ ನನ್ನು ಸೇರಲಿ ಎಂದು ನಮ್ರತೆ ಮನವಿ.

ದಿನಾಂಕ 28–12–1988ರಂದು ನಮಗೆ ನಿಮಗೆ ಚಿರಪರಿಚಿತರಾದ ಮಹಾನ್ ಕರ್ಮಯೋಗಿ ತಗಡೂರು ರಾಮಚಂದ್ರರಾಯರು ಸ್ವರ್ಗವಾಸಿಗಳಾದರು, ದಿನಾಂಕ 29–12–88ರಂದು ಪಿ. ಎಸ್. ಜವರಪ್ಪಗೌಡರು ಸಹ ನಮ್ಮ ಆರಾಧ್ಯ ಮೂರ್ತಿಯ ಅಂತ್ಯದರ್ಶನ ಪಡೆದು ಶ್ರದ್ಧಾಂಜಲಿ ಅರ್ಪಿಸಲು ಬಂದಿದ್ದರು. 1936 ಮತ್ತು 1937ನೆಯ ಇಸವಿಯಲ್ಲಿ ತಗಡೂರು ರಾಮಚಂದ್ರರಾಯರೊಡನೆ ನಾವು ನಡೆಸಿದ ಸಾಮಾಜಿಕ ಸುಧಾರಣೆ ಹೋರಾಟದ ಕಹಿ ಅನುಭವಗಳನ್ನು ಮೆಲಕು ಹಾಕುತ್ತ ಸಾರ್ವಜನಿಕ ವಿದ್ಯಾರ್ಥಿನಿಲಯಕ್ಕೆ ಬಂದು ವಿಶ್ರಮಿಸಿದೆವು.

ವಿಶ್ವಪ್ರೇಮಿ ಲೋಕಬಂಧು ಮಹಾತ್ಮ ಗಾಂಧಿ ಅವರ ಗೆಳೆಯ ಮಹಾದೇವ

ಭಾಯ್ ಪೂನಾ, ಆಗಾಖಾನ್ ಅರಮನೆಯಲ್ಲಿ ನಿಧನರಾದರು. ಮಹದೇವ ಭಾಯ್ ನಿಧನ ಕುರಿತು ಗಾಂಧೀಜಿ "ನನ್ನ ಜೀವಿತದಲ್ಲಿ ಕಷ್ಟಸಾಧ್ಯದಿಂದ ಕೇವಲ ಒಬ್ಬನೇ ಒಬ್ಬ ಸ್ನೇಹಿತನನ್ನು ಗಳಿಸಿದ್ದೆ. ಆ ಸ್ನೇಹಿತ ಇಂದು ಅಸ್ತಂಗತನಾಗಿ ಒಬ್ಬಂಟಿಗನನ್ನಾಗಿ ಮಾಡಿದ" ಎಂದರು. ಗಾಂಧೀಜಿ ಗಳಿಸಿದ್ದು ವಿಶ್ವಪ್ರೇಮವನ್ನು ಅಂತಹ ವಿಶ್ವ ಪ್ರೇಮಿಗೆ ಇದ್ದ ಸ್ನೇಹಿತ ಒಬ್ಬನೇ ಎಂದರೆ ಗಾಂಧೀಜಿ ಅವರ ಒಳ ಹೊರಗು ಮಗ್ಗಲುಗಳನ್ನು ಅರಿತಿದ್ದವನು ಒಬ್ಬ ತನ್ನ ಜೀವಿತದಲ್ಲಿ ಒಬ್ಬ ಸ್ನೇಹಿತನನ್ನು ಗಳಿಸುವುದು ಕಷ್ಟ ಎಂಬುದನ್ನು ತೋರಿಸುತ್ತಾರೆ ಅಲ್ಲವೆ ಗೌಡ ಎಂದು ನಾನು ನೀನು ಸಹ ಉತ್ತಮರಾದ ತ್ಯಾಗಿಗಳಾದ ಸ್ನೇಹಿತರುಗಳ ಪಡೆಯನ್ನು ಪಡೆದಿದ್ದೀಯಲ್ಲ ಅದು ನನಗೆ ಅಪಾರ ವಿಶ್ವಾಸ ಮೂಡಿಸಿದೆ. ನಿನಗೆ ನಾನು ಅಸಾಮಾನ್ಯವಾದ ಗೆಳೆಯನಲ್ಲವೆ ? ಶ್ರೀ ಕೆ. ವಿ. ಶಂಕರಗೌಡರು ಶ್ರೀ ಜಿ. ಮಾದೇಗೌಡರಂ ಮುಂತಾದ ನಮ್ಮ ಸ್ನೇಹಿತರು ಅಸಾಮಾನ್ಯರಲ್ಲವೆ ? ಎಂದು ಬೆನ್ನು ಚಪ್ಪರಿಸಿದೆ.

1936ನೆಯ ಇಸವಿಯ ಆರಂಭದ ದಿನಗಳಲ್ಲಿ ತಗಡೂರು ರಾಮಚಂದ್ರರಾಯರು ಹರಿಜನೋದ್ಧಾರ, ಅಸ್ಪೃಶ್ಯತಾ ನಿವಾರಣೆ, ಹರಿಜನ ದೇವಾಲಯ ಪ್ರವೇಶ, ಪಾನ ನಿರೋಧ ಮತ್ತು ಕ್ರಿಶ್ಚಿಯನ್ ಜಾತಿಗೆ ಹಿಂದೂಗಳನ್ನು ಮತಾಂತರಗೊಳಿಸುವುದಕ್ಕೆ ವಿರೋಧ ನಡೆಸುತ್ತಿದ್ದ ಕಾಲ. ರಾಮಚಂದ್ರರಾಯರ ಜೊತೆಗೆ ಎಂ. ಎಸ್. ಜೋಯಿಸರು, ಶೇಷಾದ್ರಿ ಇವರಿಬ್ಬರೂ ಅವರ ಜೊತೆಗೆ, ಕಾಂಗ್ರೆಸ್ ಸದಸ್ಯರಾಗಿದ್ದವರೆಲ್ಲ ನಗರದ ಪ್ರತಿಷ್ಠಿತ ವಕೀಲರು. ಬಹುತೇಕ ಮಂದಿ ಭಾನುವಾರದ ದೇಶ ಭಕ್ತರು. ತಗಡೂರರ ಜೊತೆ ನಾನು, ರಾಜಶೇಖರ, ಎಕ್ಸೈಜ್ ಕಮೀಷನರ್ ಆಗಿ ನಿವೃತ್ತರಾದ ಆದಿರಾಜಯ್ಯ ಅಪ್ಪಿ ತಪ್ಪಿ, ಹಳ್ಳದಕೇರಿ ಚಿಕ್ಕಣ್ಣನವರ ಮಗ ಶಂಭು ಇಷ್ಟುಮಂದಿ ರಾಯರ ಕೆಲಸಕ್ಕೆ ಸಂಪೂರ್ಣ ಕುಮ್ಮಕ್ಕುದಾರರಾಗಿದ್ದೆವು.

ಫೆಬ್ರುವರಿ ಕೊನೆಯ ವಾರದಲ್ಲಿ ಶ್ರೀ ಪಿ. ಎಸ್. ಜವರಪ್ಪಗೌಡರು ಎಂ. ಎಸ್. ಜೋಯಿಸರ ಮನೆ ಹುಡುಕುತ್ತ ಬಂದಾಗ. ಆಕಸ್ಮಿಕ ಯಾರೋ ನಮ್ಮ ಜಾಗೃತಿ ಸಂಘದ ಆಫೀಸ್ ತೋರಿಸಿದ್ದು ನಮ್ಮಲ್ಲಿಗೆ ಬಂದರು. ಅವರ ಊರು ಕೇರಿ ಬಂದ ಉದ್ದೇಶ ಕೇಳಿ ತಿಳಿದುಕೊಂಡೆವು. ರಾಮಚಂದ್ರರಾಯರು ಮತ್ತು ಎಂ. ಎಸ್. ಜೋಯಿಸರು ಗೌಡರ ಊರ ಬಳಿ ಜಾತ್ರೆಗೆ ಹೋಗಿದ್ದರೆಂದು ಗಾಂಧಿ ಕೆಲಸ ಮಾಡಲು ಇವರನ್ನು ಮೈಸೂರಿಗೆ ಬರಹೇಳಿದರಂಬ ವಿಚಾರ ತಿಳಿಸಿದರು.

ಶ್ರೀ ಜವರಪ್ಪಗೌಡರನ್ನು ಆಗ ನೋಡಿದ್ದರೆ ನೀವೂ ಸಹ ಸಾಕ್ರಟೀಸ್ ಅವತಾರ ಎನ್ನುತ್ತಿದ್ದಿರೇನೋ. ಗೆಡ್ಡೆ ಮೂಗು, ಸಿಡುಬು ಕಲೆಯ ಕಪ್ಪು ಬಣ್ಣದ ಮುಖ, ಗಿಡ್ಡನೆ ದೇಹ ಇದೆಲ್ಲ ನೋಡಿದ ನಾನು ಇವನೆಂತ ಗೌಡ. ಜವರಪ್ಪ ಎಂದು ಕರೆದರೆ ಸಾಲದೆ ಎಂದುಕೊಂಡೆ. ಆದಿರಾಜಯ್ಯ, ರಾಜಶೇಖರ್ ಅವರುಗಳು ಜವರಪ್ಪ ಎನ್ನುವ ಹೆಸರು ಉದ್ದವೇ ಆಯ್ತು, ಏನಯ್ಯ ಸಾಕ್ರೆಟೀಸ್ ಎನ್ನುತ್ತೇವೆ. ಬೇಜಾರು

ಮಾಡಿಕೋಬೇಡ ಎಂದು ಗೇಲಿ ಮಾಡಿದರು. ಈತನು ಬಂದ ದಿನವೇ ಬೊಂಬಾಯಿ ನಿಂದ ಕಾಂಗ್ರೆಸ್ ಮುಖಂಡರು ಬಂದಿದ್ದರು. ಮರಿಮಲ್ಲಪ್ಪ ಹೈಸ್ಕೂಲ್ ಮುಂದಿನ ಮೈದಾನದಲ್ಲಿ ಪರದೇಶಿ ಬಟ್ಟೆಸುಡುವ ಸಂಜೆ ಕಾರ್ಯಕ್ರಮವಿತ್ತು.

ಗೌಡನಿಗೂ ಒಂದು ಜಾಗಟೆ ಬೆರಳಿಗೆ ತಗಲು ಹಾಕಿದೊ ; ನಮ್ಮ ಜೊತೆ ಬಾ ಸರ್ಕಲ್‌ಗಳಲ್ಲಿ ಜಾಗಟೆ ಬಡಿದು ಜನರನ್ನು ಕಾರ್ಯಕ್ರಮಕ್ಕೆ ಸೇರಿಸಬೇಕು ಎಂದು ತಿಳಿಸಿದೆವು. ಬಹು ಖುಷಿಯಾಗಿಯೇ ನಮ್ಮೊಡನಾಡಿ ಬಂದ ಗೌಡ. ನಾವು ನಾಲ್ಕು ಜನರು ಕೂಗುವಷ್ಟು ಜೋರಾಗಿ ಒಬ್ಬನೇ ಜಾಗಟೆ ಬಡಿದು ಕೂಗುಹಾಕಿದ. ಕೂಗಿಗೆ ಅಂಗಡಿ ಮುಂಗಟ್ಟಿನವರು ಈಚೆಗೆ ಬಂದು ಕಾರ್ಯಕ್ರಮ ತಿಳಿದುಕೊಂಡರು. ಆಯಾ ಸರ್ಕಲ್‌ನಲ್ಲಿ ಕಾರ್ಯಕ್ರಮ ಪ್ರಚಾರನಂತರ ಸ್ಥಳೀಯ ಹೋಟೆಲಿನವರು ನಮಗೆ ತಿಂಡಿ ತೀರ್ಥ ನೀಡುತ್ತಿದ್ದಂತೆ ತಿಂಡಿ ತಿಂದು ಮುಂದಿನ ಸರ್ಕಲ್‌ಗೆ ಹೊರಟೆವು.

ಜವರಪ್ಪನ ಬಾಹ್ಯ ವ್ಯಕ್ತಿತ್ವಕ್ಕು, ಆತನಲ್ಲಿದ್ದ ಜ್ಞಾನಸಂಪತ್ತಿಗೂ ಅಗಾಧ ವ್ಯತ್ಯಾಸ. ಆತನ ಬಗ್ಗೆ ಕುಚೇಷ್ಟೆಯಿಂದ ನಡೆದುಕೊಂಡ ಬಗ್ಗೆ ಅಪಾರ ನಾಚಿಕೆ ಪಟ್ಟೆವು. ನಮ್ಮೊಡನೆ ಮಾತನಾಡುತ್ತಾ ಗಾಂಧೀಜಿ ವಿಚಾರ ಅವರನ್ನು ಕುರಿತು ಮಹಾನ್ ಕವಿ ಕುವೆಂಪು ರಚಿಸಿರುವ 'ಸಭ್ಯತಾ ದೇವತೆ' ಕವನವನ್ನು ಕೇಳಿ ಮೂಕ ವಿಸ್ಮಿತರಾದೆವು. ಈ ಪ್ರಕರಣಾನಂತರ ಹಳ್ಳಿಹೈದ ಜವರಪ್ಪ ನಮ್ಮೆಲ್ಲರಿಗೂ ಜವರಪ್ಪ ಗೌಡರಾದರೇ ಅಲ್ಲ ಮಹಾನ್ ಗೌಡರೇ ಆದರು.

## ಸಭ್ಯತಾ ದೇವತೆ*

ಮನುಜರಲಿ ದೇವತ್ವದಾಕಾಂಕ್ಷೆಯಳಿದಿಲ್ಲ ;
ಉಳಿದಿಹುದು : ದಿನದಿನಕೆ ಬೆಳೆಯುತಿದೆ : ಎಂಬುದಕೆ
ಸಾಕ್ಷಿಯಿದು : ದಶದಶ ಸಹಸ್ರಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ, ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ !
ಇವನು ಕಲ್ಲನು ರೊಟ್ಟಿಮಾಡಿಲ್ಲ ; ಹುಲ್ಲಿನಲಿ
ನಿಶಿತಾಸ್ತ್ರವನು ಮಂತ್ರದಿಂ ರಚಿಸಿ ದಾನವನ
ಕೊಂದಿಲ್ಲ ; ಅರ್ಧನರ ಅರ್ಧಮೃಗ ರೂಪದಲಿ
ಕಂಭವನ್ನೊಡೆದು ಗುಡುಗುಡಿಸಿ ಮೂಡಿದನಿಲ್ಲ.
ದಶಶಿರನ ಕೊಂದಿಲ್ಲ ; ಚಕ್ರಧರನೂ ಅಲ್ಲ.

---

* ಹರಿಜನೋದ್ಧಾರಕಾರ್ಯಕ್ಕಾಗಿ ಗಾಂಧೀಜಿ ಮೈಸೂರಿಗೆ ಬಂದಾಗ ರಚಿಸಿದ್ದು.

ಅದ್ಭುತ ಪವಾಡಗಳ, ಅಘಟಿತ ವಿಚಿತ್ರಗಳ
ಗೋಜಿಗಿವನೆಂದಿಗೂ ಹೋಗುವಾತನೆ ಅಲ್ಲ !
ಮತ್ತಾವ ದೇವತ್ವದೀಕ್ಷಣೆಗೆ ನೆರೆದಿಹರ್
ಇನಿತು ಮನುವಂಶಜರ್ ? ನೋಡಲೆಂದೆಂಬೆಯೇನ್ ?
ಆನೆಯಂಬಾರಿಗಳ ರಾಜಶ್ರೀಸಿರಿಯಿಲ್ಲ ;
ಇವನು ಸುಂದರನಲ್ಲ ; ಯುವಕನಂತೂ ಅಲ್ಲ ;
ಮುದುಕನಾಗಿಹನು ; ಹಲ್ಲುಗಳುದುರಿ ಬಾಯಿ ಬರಿ
ಬೋಳಾಗಿಹುದು. ಇವಗೆ ಚೆಂದುಟಿಯ ಚೆಲುವಿಲ್ಲ ;
ಕಮಲಾಕ್ಷನಿವನಲ್ಲ. ಮತ್ತೇಕೆ ? ಮೃದುಮಧುರ
ವಾಗ್ವಿಲಾಸಕೆ ಸೋತು ಎಂಬೆಯೇನ್ ? ಅದು ಸುಳ್ಳು !
ಇವನ ದನಿ ದೂರಕ್ಕೆ ಕೇಳಿಸದು ; ಮಾತಿನಲಿ
ರಸಿಕತೆಯ ಬೆಡಗು ಬಿಂಕಗಳಿಲ್ಲ ; ಓಜಸ್ಸು
ವಿನ್ಯಾಸ ವೈಖರಿಗಳಿನಿತಿಲ್ಲ ; ವಿಷಯವೋ
ಬೀದಿಗುಡಿಸುವ ಜಾಡಮಾಲಿಗಳ ಕುರಿತದ್ದು !
ಹಿಮಗಿರಿಯ ಭವ್ಯ ಸೌಂದರ್ಯವನ್, ಗಗನವನೆ
ಚುಂಬಿಪ ತುಷಾರಮಯ ಗಿರಿಶಿರ ತರಂಗಗಳ
ರಮಣೀಯ ಕಮನೀಯ ಭೀಷ್ಮ ಸಂಮೋಹವನ್
ಕುರಿತಿವನು ನುಡಿವನಲ್ಲ. ಅಥವಾ ಸಾಗರದ
ಸುಂದರ ಸುನೀಲ ಸಲಿಲದ ನೃತ್ಯ ಮಹಿಮೆಯನ್
ಮಾತಿನಲಿ ತೋರಲೆಳಸುವ ವಾಗ್ಮಿಯಿವನಲ್ಲ.
ಚೈತ್ರ ವೈಶಾಖಾದಿ ಮಾಸಗಳ, ಪುಷ್ಪಗಳ,
ಪಕ್ಷಿಗಳ, ತರುಲತಾ ಗುಲ್ಮಗಳ, ವರ್ಷಗಳ
ಕುರಿತು ಮಂಜುಳ ಶೈಲಿಯಲಿ ವರ್ಣಿಸುವ ಸರಸ
ಕಾವ್ಯರ್ಷಿಯಿವನಲ್ಲ. ಇವನು ಹೇಳುವ ವಿಷಯ,
ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ
ಸರಳ ಸಾಧಾರಣದ ಬಡಪೊಚ್ಚ ಪಾಡಿನದು !
ಆದರೂ ದರ್ಶನಕೆ ಮುತ್ತಿಹರು ಮಾನವರು,
ಜೇನುಹಲ್ಲೆಗೆ ಜೇನುಹುಳು ಕವಿಯುವಂದದಲಿ,
ಐಸಿರಿ ಪವಾಡ ವಾಗ್ಮಿತೆಗಳನು ಲೆಕ್ಕಿಸದೆ,
ಪ್ರೇಮ ಸತ್ಯಾಹಿಂಸೆ ಸಮತೆಗಳನಾಚರಿಸಿ,
ಬೋಧಿಸುವ ಸಾಧಿಸುವ, ಜನರನೆಚ್ಚರಗೊಳಿಪ

ಸರಳ ಜೀವನದ ದೇವತ್ವದಾರಾಧನೆಗೆ !
ವೈಚಿತ್ರ್ಯವನೆ ದೇವರೆಂದೆಂಬುವಾ ಕಾಲ
ಒಂದಿತ್ತು. ಮತ್ಸ್ಯಕೂರ್ಮಾದಿ ನರಸಿಂಹರನು
ಭಯ ಭಕ್ತಿಯಿಂ ಪೂಜಿಸುವ ಕಾಲವೊಂದಿತ್ತು.
ರಾಜದರ್ಪದಲಿ, ಅಧಿಕಾರದಲಿ, ಕ್ರೌರ್ಯದಲಿ,
ಶಕ್ತಿ ಬಲ ಯುಕ್ತಿ ಸಿರಿ ಮೇಣ್ ಅಹಂಕಾರದಲಿ
ದೇವತ್ವವನು ಕಾಣುವಾ ಕಾಲವೊಂದಿತ್ತು.
ಆ ಅನಾಗರಿಕ ಮಾನವ ದೇವಭಾವಗಳ್
ಇಂದು ದೂರಾಗುತಿವೆ. ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯ ಭೋಗ ತ್ಯಾಗದಮಲ ವೈರಾಗಿಗಳ್,
ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳೆ,
ಮಾನವರ ಪೂಜೆಗೌರವಗಳನು ಕೈಕೊಳ್ವ
ದೇವತೆಗಳಾಗುವಾ ಕಾಲವೈತಂದಿಹುದು.
ಋಜುದೃಷ್ಟಿ ದೊರೆಕೊಳಲ್ ಮೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು ! ಧನ್ಯ, ಕಲಿಯುಗ, ಧನ್ಯ !

ತಗಡೂರರು ಸೇರಿದಂತೆ ನಮ್ಮ ಪ್ರವಾಸದಲ್ಲಿ ಬಸ್‌ನಲ್ಲಿ ನಮ್ಮ ಮಧ್ಯೆ ಕೂರಿಸಿಕೊಂಡು ಅವರ ಮಾತುಗಳನ್ನು ಕೇಳುತ್ತ ಹೋದಂತೆ ನಾವು ನಿಂತಲ್ಲೇ ನಿಂತಿದ್ದೇವೋ ಎನ್ನಿಸುತ್ತಿತ್ತು. ಹರಿಜನರ ದೇವಾಲಯ ಪ್ರವೇಶ ಕುರಿತು ಕುವೆಂಪು ಅವರ 'ಜಲಗಾರ' ನಾಟಕವನ್ನು ನಾಟಕೀಯವಾಗಿ ತಾವೇ ಅಭಿನಯಿಸಿದರು. ಜಲಗಾರನ ಮಾತುಗಳನ್ನು ಗೌಡರು ಉಚ್ಚರಿಸುತ್ತಿದ್ದರೆ ಜನ ಬಿಟ್ಟಬಾಯಿ ಬಿಟ್ಟಹಾಗೆ ಕೇಳುತ್ತಿದ್ದರು. ನಂಜನಗೂಡಿನ ದೊಡ್ಡಮೈದಾನ. ಚಿಕ್ಕ ಜಾತ್ರೆಗೆ ಜನ ಅಧಿಕವಾಗಿ ಸೇರಿದ್ದರು. ಪೂಜಾರಿಗಳಿಂದ ಜಲಗಾರನಿಗೆ ಆದ ಅಘಾತ, ನೊಂದ ಜಲಗಾರ ಆಡಿದ ಮಾತುಗಳನ್ನು ಕೇಳಿದ ಜನಸ್ತೋಮ ಪೂಜಾರಿಗೆ ಧಿಕ್ಕಾರ ಹಾಕಿತು. ಸಭೆಯಲ್ಲಿ ಕುಳಿತಿದ್ದ ಜನ ಎದ್ದು ನಿಂತರು. ಯಾರೇನು ಮಾಡುತ್ತಾರೆ ನಮ್ಮೆಲ್ಲರ ಹೆಣ ಉರುಳಿಸಿದರು ಸರಿ "ಗಾಂಧಿಜಿ ಕೀ ಜೈ" ಎಂದು ಜಯಘೋಷ ಮಾಡಿತು.

ಉದ್ರೇಕಪೂರಿತ ಜನರನ್ನು ಗೌಡರೇ ಸಂತೈಸಿ ಮಾತನಾಡುತ್ತ "ಬಂಧುಗಳೇ" ಈ ಪಂಡಿತೋತ್ತಮರ ದೇವಾಲಯವನ್ನು ಹರಿಜನರೊಡನೆ ಶೂದ್ರರಾದ ನಾವೆಲ್ಲ ಬಹಿಸ್ಕರಿಸೋಣ. ಶೂದ್ರಾತಿ ಶೂದ್ರರಾದ ನಾವು ಬೆಳೆದು ತಂದ ಹಣ್ಣು ಹಂಪಲಕ್ಕೆ ಸೂತಕವಿಲ್ಲ. ಅಮೇಧ್ಯ ಸೇರಿದ ಗೊಬ್ಬರ ಹಾಕಿ ಬೆಳೆದ ದವಸಧಾನ್ಯಕ್ಕೆ ಸೂತಕವಿಲ್ಲ.

ಮೇಯಬಾರದ ಮೇವು ತಿಂದು ಬಚ್ಚಲು ನೀರು ಕುಡಿದು ಬದುಕುವ ನಮ್ಮ ಹಸುವಿನ ಹಾಲಿಗೆ ಸೂತಕವಿಲ್ಲ. ನಮ್ಮ ಹಸುವಿನ ಹಾಲಿನಿಂದಾದ ಬೆಣ್ಣೆ ತುಪ್ಪಕ್ಕೆ ಸೂತಕವಿಲ್ಲ. ಮಳೆ, ಬಿಸಿಲು, ಗಾಳಿ, ಲೆಕ್ಕಿಸದೆ ಹಗಲು ರಾತ್ರಿ ಎನ್ನದೆ ದುಡಿದು ನಾವು ದೇವರ ಹೆಸರಿನಲ್ಲಿ ಈ ಸೋಮಾರಿ ಪೂಜಾರಿಗಳ ಮತ್ತು ಪುರೋಹಿತರ ಬಾಯಿಗೆ ಹಾಕಿ ಅವರ ಬೊಜ್ಜು ಬೆಳೆಸಿ ಸೋಮಾರಿ ಜನಾಂಗವನ್ನು ಸೃಷ್ಟಿಸಿ ಮಹಾಪಾತಕಕ್ಕೆ ಈಡಾಗಿದ್ದೇವೆ. ಅರ್ಚಕರ ಜೀವನಾಧಾರ ಪದಾರ್ಥಗಳಿಗೆ ತೀರ್ಥದ ಪ್ರೋಕ್ಷಣೆ ಮಾಡಿ ಶುದ್ಧಗೊಳಿಸುವ ಹೆಸರಿನಲ್ಲಿ ನಾವು ಕೊಡುವ ಎಲ್ಲವನ್ನು ತಿಂದು ತೇಗಿ ಬೊಜ್ಜು ಬೆಳೆಸುವ ಈ ಮೂರ್ಖರಿಗೆ ಬುದ್ಧಿ ಕಲಿಸೋಣ.

ಪಂಡಿತೋತ್ತಮರ ನಂಜುಂಡೇಶ್ವರನ ದೇವಾಲಯಕ್ಕೆ ನಾವಾಗೇ ಬಹಿಷ್ಕಾರ ಹಾಕೋಣ. ನಂಜುಂಡೇಶ್ವರನ ಗುಡಿ ನಿರ್ಮಾಣ ಮಾಡಿದ ಒಡ್ಡನನ್ನು ಕರೆಯಿರಿ. ಪಕ್ಕದ ತೋಪಿನಲ್ಲಿ ಗುಂಡುಕಲ್ಲು ಸ್ಥಾಪಿಸೋಣ. ಗುಂಡುಕಲ್ಲೇಶ್ವರನೆಂದು ಹೆಸರಿಟ್ಟು ಪೂಜೆ ಮಾಡೋಣ. ಅವನಿಗೆ ದೇವಾಲಯ ಬೇಡ. ಬಯಲಲ್ಲಿ ನೀರಿ ಒಂದೆರಡು ದಿನಗಳು ಪೂಜಾದಿ ಅಭಿಷೇಕ ಮಾಡೋಣ. ನಾವಿಲ್ಲದ ನಂಜುಂಡೇಶ್ವರನ ದೇವಾಲಯದ ಪೂಜಾರರು ಹೊಟ್ಟೆಗಿಲ್ಲದೆ ತಳಮಳಗೊಳ್ಳುವರು.

ತಗಡೂರರಿಗೆ ಜವರಪ್ಪಗೌಡರ ಸಲಹೆ ವಿನೂತನವಾಗಿದ್ದು "ಯಾವ ಪಂಡಿತ ಪೂಜಾರಿಗಳಿಗೂ ಇದರಿಂದ ತೊಂದರೆ ಆಗದು. ನಮ್ಮ ದೇವರನ್ನು ಬಯಲಿನಲ್ಲಿ ಸ್ಥಾಪಿಸಿ ಪೂಜೆ ಸಲ್ಲಿಸಿ ಸಾರ್ಥಕಪಡಿಸಿಕೊಳ್ಳೋಣ. ನಮ್ಮ ಬಯಲು ಗುಂಡುಕಲ್ಲೇಶ್ವರನ ದೇವಾಲಯಕ್ಕೆ ಈ ದೇವಾಲಯದ ಪೂಜಾರರು ಮತ್ತು ಪುರೋಹಿತರು ಅಸ್ಪೃಶ್ಯರೆಂದು ಸಾರೋಣ" ಎಂದರು.

ಶ್ರೀ ಜವರಪ್ಪಗೌಡರಷ್ಟು ಪ್ರಭಾವಶಾಲಿ ಭಾಷಣ ಮಾಡುವುದು ನಮ್ಮಿಂದಾಗಲಿಲ್ಲ. ಕೇವಲ ವರ್ಷದಲ್ಲಿ ನಮಗೆ ಪ್ರಮುಖನಾಗಿ ಕಾರ್ಯಕ್ರಮಗಳನ್ನು ರೂಪಿಸುವಂತಾದರು. ಅವರ ಕಾರ್ಯಕ್ರಮಕ್ಕೆ ಕಿಮಕ್ ಎನ್ನದೇ ಅವರ ಹಿಂದೆ ಹೊರಟು ನಿಲ್ಲುತ್ತಿದ್ದೆವು. ಒಮ್ಮೆ ದಸರ ಮೆರವಣಿಗೆಗೆ ವಿದ್ಯುತ್ ಇಲ್ಲದಂತೆ ಮಾಡಲು ಹೋಗಿ ಮಹಾದುರ್ಘಟನೆಗೆ ನಾವುಗಳು ಈಡಾದೆವು. ಕತ್ತಲಿನಲ್ಲಿ ನನ್ನನ್ನು ಹಾವು ಕಚ್ಚಿತು. ಚಿಕಿತ್ಸೆಗಾಗಿ ಶ್ರೀರಾಮಕೃಷ್ಣಾಶ್ರಮಕ್ಕೆ ನನ್ನನ್ನು ಹೊತ್ತು ಓಡಿದರು ಜವರಪ್ಪಗೌಡರು. ಸ್ವಾಮೀಜೀ ಈತನಿಲ್ಲದೆ ನಾವಿರಲಾರೆವು ಮಹಾತ್ಮಾಗಿ. ದೇಶವೇ ಈತನ ಮನೆ. ಈತನನ್ನು ರಕ್ಷಿಸಿ ನಮ್ಮನ್ನು ಕಾಪಾಡಬೇಕೆಂದು ಬಿಕ್ಕಿ ಬಿಕ್ಕಿ ಅಳುತ್ತ ಸ್ವಾಮೀಜೀ ಅವರ ಪಾದದಲ್ಲಿ ಬಿದ್ದು ಹೊರಳಾಡಿದ ದೃಶ್ಯವು ಇಂದೂ ನನಗೆ ಹಸಿರಾಗೇ ಉಳಿದಿದೆ.

ನಮ್ಮ ಗುಂಪಿನ ನಾನಾ ಆಗು ಹೋಗುಗಳಿಗೆ ಜವರಪ್ಪಗೌಡರನ್ನು ಹೊಣೆಗಾರರನ್ನಾಗಿ ಮಾಡಿಕೊಂಡು ಅವರಿಗೆ ಪೋಲೀಸರು ಕೊಡುತ್ತಿದ್ದ ಚಿತ್ರಹಿಂಸೆ

ಪೇಳಬೇಕಿರಬಾಗಿತ್ತು. ಪಾರಗಟ್ಟಲೆ ಜವರಪ್ಪಗೌಡರನ್ನು ನಮ್ಮ ಕಣ್ಣುತಪ್ಪಿಸಿ ಕರೆದು ಕೊಂಡು ಹೋಗಿ ಸಾನಾಂತರಪದ ಓಂಸೆ ಕೊಡುತ್ತಿದ್ದರು. ಇಷ್ಟೆಲ್ಲವನ್ನು ಅವರ ವಜ್ರಕಾಯದ ಗಿಡ್ಡುದೇಪ ತಾಳಿ ಬಾಳಿದೆ ಬಾಳುತ್ತಿದೆ.

ಜವರಪ್ಪಗೌಡರು ನಮಗೆ ವ್ಯಕ್ತಿ ಆಗಿರದೆ ಒಂದು ಶಕ್ತಿ ಆಗಿದ್ದರು. ತಮಗೆ ಬರುತ್ತಿದ್ದ ಪರುಕು ಮುರುಕು ಇಂಗ್ಲೀಷಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ನಾಯಕ ರೊಡನೆ ಗಂಟೆಗಟ್ಟಲೆ ವ್ಯವಹರಿಸುತ್ತಿದ್ದ ಜಾಣ್ಮೆಗೆ ಇಲ್ಲಿನ ಕಾಂಗ್ರೆಸ್ ಮುಖಂಡರು ತಲೆದೂಗುತ್ತಿದ್ದರು. ಒಮ್ಮೆ ಟಿ. ನರಸೀಪುರ ತಾಲ್ಲೂಕಿನಲ್ಲಿ ನಡೆದ ಚುನಾವಣೆಯಲ್ಲಿ ಹರಿಜನರು ಕಾಂಗ್ರೆಸ್ ವಿರೋಧಿ ಉಮೇದುವಾರನಿಂದ ಹಣಪಡೆದು ಮತ ನೀಡಿದರೆಂದು ಗೌಡರಿಗೆ ಗೊತ್ತಾಯಿತು. ಅದೇ ವೇಳೆಗೆ ಹರಿಜನೋದ್ಧಾರ ಕಾರ್ಯಕ್ಕೆ ಸೇವಾಗ್ರಾಮದಿಂದ ಪ್ರೊಫೆಸರ್ ಠಕ್ಕರ್ ಬಾಬಾ. ಮೈಸೂರಿಗೆ ಬಂದರು ಕಾಂಗ್ರೆಸ್ ಕಛೇರಿಯಲ್ಲಿ ಕಾರ್ಯಕರ್ತರನ್ನು ಸಾಹುಕಾರ್ ಚನ್ನಯ್ಯನವರು ಬಾಬಾ ಅವರಿಗೆ ಪರಿಚಯಿಸುತ್ತ ಜವರಪ್ಪಗೌಡರಲ್ಲಿಗೆ ಬಂದರು. ಜವರಪ್ಪಗೌಡರನ್ನು ಪರಿಚಯಿಸಿದ ಚನ್ನಯ್ಯನವರು ಪಕ್ಕದ ಮಂಡ್ಯಜಿಲ್ಲೆ ಕಾರ್ಯಕರ್ತರು ಎಂದು ಪರಿಚಯಿಸಿದರು. 1939ನೆಯ ಇಸವಿ ಬಹುಶಃ ವರ್ಷಾಂತ್ಯದಲ್ಲಿ ಮೈಸೂರಿಂದ ಪ್ರತ್ಯೇಕವಾಗಿ ಮಂಡ್ಯ ಜಿಲ್ಲೆ ರಚನೆಗೊಂಡಿತ್ತು.

ಶ್ರೀ ಜವರಪ್ಪಗೌಡರು ನಮ್ಮ ಗುಂಪಿನವರು. ಟಿ. ನರಸೀಪುರ ತಾಲ್ಲೂಕಿನಲ್ಲಿ ನಡೆದ ಜಿಲ್ಲಾಬೋರ್ಡು ಅಥವಾ ಪ್ರಜಾಪ್ರತಿನಿಧಿ ಸಭೆ ಚುನಾವಣೆಯಲ್ಲಿ ಕೆಲಸ ಮಾಡಿ ದ್ದೆವು. ಕಾಂಗ್ರೆಸ್ ಉಮೇದುವಾರರ ಸೋಲಾಗಿತ್ತು. ಕಾರಣ ಹರಿಜನ ಮತದಾರರಿಗೆ ಹಣ, ಹೆಂಡ ಆಮಿಷ ಒಡ್ಡಿ ಕಾಂಗ್ರೆಸ್ ವಿರೋಧಿ ಉಮೇದುವಾರ ಗೆದ್ದಿದ್ದರು. ಈ ಒಂದು ಪ್ರಕರಣ ಶ್ರೀ ಜವರಪ್ಪಗೌಡರಿಗೆ ಸಹಿಸಲಾಗಿರಲಿಲ್ಲ. ಕಾರಣ ತಗಡೂರರೊಡನೆ ಬೆಳೆಗ್ಗಿದ್ದರೆ ಹರಿಜನೋದ್ಧಾರ ಕಾರ್ಯನಿರತ ಜವರಪ್ಪಗೌಡ ಹರಿಜನರ ಉದ್ಧಾರದ ಮಾತೆಂದರೆ ಸಿಡಿದು ಬೀಳುತ್ತಿದ್ದರು. ಗೌಡರು ಈ ಪ್ರಕರಣವನ್ನು ಮನದಲ್ಲಿ ಮೆಲುಕು ಹಾಕುವ ಕಾಲಕ್ಕೆ ಠಕ್ಕರ್ ಬಾಬ ಅವರು ಬಂದರು.

ಸಾಹುಕಾರರು ಜವರಪ್ಪಗೌಡರನ್ನು ಬಾಬಾ ಅವರಿಗೆ ಪರಿಚಯಿಸುತ್ತಿದ್ದಂತೆಯೇ ತಮ್ಮ ಮನಸ್ಸಿನಲ್ಲಿದ್ದ ವಿಚಾರವನ್ನು ಮುಚ್ಚು ಮರೆಯಿಲ್ಲದೆ ಇಂಗ್ಲೀಷ್‌ನಲ್ಲಿ Babuji I have no belief in Harijan Upliftment Programme of Gandhiji. ಎಂದರು ಜವರಪ್ಪಗೌಡರು. ಬಾಬಾ ಅವರು ಮುಂದಿನ ಕಾರ್ಯ ಕರ್ತರನ್ನು ತಲೆ ಎತ್ತಿ ನೋಡಲೇ ಇಲ್ಲ. ಜವರಪ್ಪಗೌಡರನ್ನು ಹೆಗಲಿಗೆ ಕೈ ಹಾಕಿ ಕಮಾನ್ ಮೈ ಯಂಗ್ ಫ್ರೆಂಡ್'' ಎಂದು ವೇದಿಕೆಗೆ ಕರೆದೊಯ್ದು ಏಕೆ ಹರಿಜನೋದ್ಧಾರ ಕಾರ್ಯಕ್ರಮ ವಿರೋಧಿಸುತ್ತೀರಿ ? ಎಂದು ವಿವರ ಕೇಳಿ ತಿಳಿದು ಕೊಳ್ಳಲು ಇಷ್ಟಪಟ್ಟರಲ್ಲದೆ ನಾಳೆ ನೀವು ಹೇಳುವ ಹಳ್ಳಿಗಳಿಗೆ ಹೋಗಿ ಹರಿಜನರ

ಮನವೊಲಿಸಿಕೊಳ್ಳೋಣ ಎಂದರು.

ಹರಿಜನರು, ಕುಡಿತ ಮತ್ತು ಹಣದ ಆಮಿಷಕ್ಕೆ ಒಳಗಾಗಿ ಕಾಂಗ್ರೆಸ್ ವಿರೋಧಿಗಳಿಗೆ ಮತವಿತ್ತು ಕಾಂಗ್ರೆಸ್ ಸೋಲಪ್ಪಿತು ಎಂದು ವಿವರಿಸಿದ ಗೌಡರು, ದಿನಬೆಳಗಾದರೆ ನಮ್ಮ ಮುಖಂಡ ತಗಡೂರು ರಾಮಚಂದ್ರರಾಯರು ಹರಿಜನರ ಉದ್ಧಾರಕ್ಕೆ ದುಡಿಯುತ್ತಾರೆ. ನಮ್ಮಿಂದ ದುಡಿಸುತ್ತಾರೆ ಎಂದರು. ನೊಂದ ಮನದಿಂದ ಕಣ್ಣೀರಿಟ್ಟ ಗೌಡನ ಮುಖಭಾವ ನೋಡಿದ ಬಾಬಾ ಅವರು ಸಾಹುಕಾರರ ಮನೆ ಊಟದಲ್ಲಿ ಜವರಪ್ಪಗೌಡರನ್ನು ಹುಡುಕಿ ಜೊತೆಗೆ ಊಟ ಮಾಡಿಸಿ ನಾಳೆ ಕಾರ್ಯಕ್ರಮ ಸಿದ್ಧಪಡಿಸಲು ಹೇಳಿದರು.

ಸಾಹುಕಾರ ಚನ್ನಯ್ಯನವರು ಕಾಂಗ್ರೆಸ್ ಸೇರಿದ ಮೇಲೆ ಜವಹರಲಾಲ್ ನೆಹರೂ ಇಂದ ರಾಜ್ಯಕ್ಕೆ ಬರುವ ಯಾವುದೇ ಕಾಂಗ್ರೆಸ್ ಧುರೀಣ ವ್ಯಕ್ತಿ ಮೈಸೂರಿಗೆ ಬರುತ್ತಾರೆಂದರೆ ಅವರಿಗೆ ಚನ್ನಯ್ಯನವರ ಮನೆ ಭೋಜನ. ಮೈಸೂರು ಕಾಂಗ್ರೆಸ್ ಬೆಳೆವಣಿಗೆಯಲ್ಲಿ ಸಾಹುಕಾರರು ಗಳಿಸಿದ್ದ ಹಣ ಸಂಪೂರ್ಣವಾಗಿ ಕರಗಿತು. ಕಾಂಗ್ರೆಸ್ ತಲೆ ಎತ್ತಿನಿಂತಿತು. ಇಂತಹ ಮಹಾನುಭಾವನ ಸ್ಮಾರಕವೊಂದಕ್ಕೆ ಮಂಡ್ಯದ ಸ್ನೇಹಿತ ರನ್ನು ಜವರಪ್ಪಗೌಡರು ಸಂಘಟಿಸುವರೆಂಬ ಆಶಯ ಹೊಂದಿದ್ದೇನೆ. ಮಧ್ಯದಲ್ಲಿ ಸಾಹುಕಾರ ಚನ್ನಯ್ಯನವರ ವಿಚಾರ ಅಡ್ಡಬಂತು. ಕ್ಷಮಿಸಿರಿ.

ತಗಡೂರು ರಾಮಚಂದ್ರರಾಯರು, ಶೇಷಾದ್ರಿ, ಟಿ. ಶ್ರೀನಿವಾಸಯ್ಯಂಗಾರ್ಯರು ಜವರಪ್ಪಗೌಡ ಮತ್ತು ನಮ್ಮ ಸಲಹೆ ಪಡೆದು ಸೋಸಲೆ ಮತ್ತು ಸೋಮನಾಥಪುರ ಕಗ್ಗಲೀಪುರ, ಬನ್ನೂರು ಬಳಿ ಮತ್ತೆ ಕೆಲವು ಹಳ್ಳಿಗಳಲ್ಲಿ ಹರಿಜನರನ್ನು ಬಾಬಾ ಅವರು ಸಂದರ್ಶಿಸುವರೆಂದು ವಿಚಾರ ತಿಳಿಸಿ ಜನಕೂಡುವ ವ್ಯವಸ್ಥೆಮಾಡಿದೆವು.

ಅಲ್ಲಿನ ಜನರಿಗೆ ತಗಡೂರರಷ್ಟೇ ಪರಿಚಿತರಾಗಿದ್ದರು ಜವರಪ್ಪಗೌಡರು. ಸ್ಥಳೀಯ ಹರಿಜನರೆದುರಿನಲ್ಲಿ ಬಾಬಾ ಅವರಿಗೆ ಮತದಾನದಲ್ಲಿ ಮಾಡಿದ ಅನ್ಯಾಯ ವಿವರಿಸಿದರು. ಠಕ್ಕರ್ ಬಾಬಾ ಅವರು ಮಾತನಾಡಿ ಹರಿಜನರು ಶೋಷಣೆಗೆ ಒಳಗಾಗದೆ, ಕಾಂಗ್ರೆಸ್ ಸಂಸ್ಥೆಗೆ ಪೂರ್ಣ ಬೆಂಬಲ ನೀಡಲು ಜನರಿಗೆ ಆದೇಶ ನೀಡಿದರು.

ಸೋಸಲೆಯಲ್ಲೋ ಅಥವಾ ಸೋಮನಾಥಪುರದಲ್ಲೋ ಜವರಪ್ಪಗೌಡರು ಮಹಾನ್ ಕವಿ ಕುವೆಂಪು ಅವರ ಜಲಗಾರ ನಾಟಕದ ಕೆಲವು ಸಾಲುಗಳನ್ನು ಬಿತ್ತರಿಸಿ ದರು. ಸಭೆಯಲ್ಲಿದ್ದ ಜನರು ಗೌಡರ ಮಾತುಗಳಿಗೆ ಸ್ಪಂದಿಸಿ ಕಾತುರತೆ ವ್ಯಕ್ತಪಡಿಸಿದರು. ಕನ್ನಡ ಅರ್ಥವಾಗದ ಠಕ್ಕರ್ ಬಾಬಾ ಅವರು ಜವರಪ್ಪಗೌಡರನ್ನು "Young friend could you explain in English where I can also understand the matter and enjoy with public ಎಂದು ಹೇಳಿದರು.

'Sir as you know that I am a failed graduate of 6th or 7th standard class. But I am a Rank graduate in kannada, which is my mother tongue'' ಎಂದು ಸೇರಿಸಿ ಹೇಳಿದ ಮಾತುಗಳನ್ನು ಕೇಳಿದ ಬಾಬಾ ಅವರು ಓರಿ ಓಗ್ಗಿದರೇ ಅಲ್ಲ, ಎದ್ದು ತಬ್ಬಿ ಜವರಪ್ಪಗೌಡರೆ ನೀವೊಂದು ಶಕ್ತಿ ಎಂಬ ಮಾತನ್ನು ಹೇಳಿದರು.

ಪಕ್ಕದಲ್ಲಿದ್ದ ಪ್ರಜಾಪ್ರತಿನಿಧಿ ಸಭಾಸದಸ್ಯರಾದ ಶ್ರೀ ಟಿ. ಶ್ರೀನಿವಾಸಯ್ಯಂಗಾರ್ ಅವರನ್ನು ಜಲಗಾರನ ಕೆಲವು ಮಾತುಗಳನ್ನು ಇಂಗ್ಲೀಷ್‌ನಲ್ಲಿ ಹೇಳುವಂತೆ ಕೇಳಿದರು. ಶ್ರೀನಿವಾಸಯ್ಯಂಗಾರ್ಯರು ಇಂಗ್ಲೀಷ್‌ನಲ್ಲಿ ಹೇಳಿದರಾದರು, ಕವಿಯ ಭಾವನೆಯನ್ನು ಸಾಹಿತ್ಯರೂಪದಲ್ಲಿ ಇಂಗ್ಲೀಷ್‌ನಲ್ಲಿ ಹೇಳುವುದು ಸಾಮಾನ್ಯರಿಂದಾಗದ ಕೆಲಸ ಎಂದರು. ಇಂಗ್ಲೀಷ್‌ನಲ್ಲೆ ಆಗಲಿ ಕನ್ನಡದಲ್ಲೇ ಆಗಲಿ ಪದವೀಧರರಾದವರೆಲ್ಲ ಸಾಹಿತಿಗಳಲ್ಲ ಎಂದು ತಿಳಿಸಿದರು.

ಕಾರಿನಲ್ಲಿ ಹೋಗುತ್ತ ಜವರಪ್ಪಗೌಡರನ್ನು ನಿನ್ನ ಇಂಗ್ಲೀಷ್‌ನಲ್ಲೇ ಸಾಧಾರಣ ವಾಗಿಯಾದರೂ ವಿವರಿಸು ನಾನು ಸರಿ ಅರ್ಥಮಾಡಿಕೊಳ್ಳಬಲ್ಲೆ ಎಂದು ತಿಳಿಸಿದರು. ಜವರಪ್ಪಗೌಡರು ಮೈಸೂರು ತಲುಪುವವರೆಗೂ ಜಲಗಾರನನ್ನು ಇಂಗ್ಲೀಷ್‌ನಲ್ಲಿ ಹೇಳುತ್ತಲೇ ಬಂದರು. ಬಾಬಾ ಕೇಳುತ್ತಲೇ ಬಂದರು.

ಸಂಜೆ ಮರೆಯದೆ ಜಲಗಾರ ನಾಟಕವನ್ನು ತರಿಸಿ ಜೊತೆಗಿರಿಸಿಕೊಂಡರು ಬಾಬಾ. ತಗಡೂರು ರಾಮಚಂದ್ರರಾಯರನ್ನು ಸಮೀಪ ಕರೆದು ಜವರಪ್ಪಗೌಡನ ಹೆಗಲಿಗೆ ಕೈ ಹಾಕಿ ನಿಮಿಷವೂ ಈತನನ್ನು ಬಿಡಬೇಡಿ. ಈತನಿದ್ದರೆ ನಿಮಗೆ ನೂರುಜನವಿದ್ದಂತೆ ಎಂದು ವಿದಾಯ ಹೇಳಿ ಹೊರಡುತ್ತಾ Young friend Jalgara ''Do your best in the field of Harijan Upliftment ಎಂದು ಕೂಗಿ ಹೇಳಿ ಹೊರಟರು ಬಾಬ.

ಬಾಬಾ ವಿಚಾರ ನಾನು ಏತಕ್ಕೆ ಪ್ರಸ್ತಾಪಿಸುತ್ತೇನೆಂದರೆ, ಜವರಪ್ಪಗೌಡರು ಇದ್ದೆಡೆ ಎಂತಹ ಧಡೂತಿ ವ್ಯಕ್ತಿಯಾಗಬಹುದು, ಅವರನ್ನು ತನ್ನತ್ತ ಆಕರ್ಷಿಸುವ ಗುಣ ಆತನ ಹುಟ್ಟಿನಿಂದಲೇ ಬಂದುದಿರಬೇಕು. ಗಾಂಧೀಜಿಯವರ ಅತಿ ಸಮೀಪವರ್ತಿ ಬಾಬ ಅವರನ್ನು ಆಕರ್ಷಿಸಿದರು. ಬಾಬ ಅವರು ಜವರಪ್ಪಗೌಡನ ಹೆಸರನ್ನು ಜ್ಞಾಪಕದಲ್ಲಿಟ್ಟು ಕೊಳ್ಳುವಂತೆ ಮಾಡಿದರು.

ಜವರಪ್ಪಗೌಡರನ್ನು ಇತ್ತೀಚೆಗೆ ನನಗಿಂತಲೂ ಸಮೀಪವಾಗಿ ಬಲ್ಲ ನಿಮಗೆ ನಾನು ಪುಟಗಟ್ಟಲೆ ಹೇಳಿದುದು ಅತಿಯಾದರೆ ಕ್ಷಮಿಸಿರಿ.

ನನ್ನನ್ನು ಮರೆಯದೆ ಜವರಪ್ಪಗೌಡನ ಸಮೀಪವರ್ತಿ ಸುಬ್ಬಣ್ಣನಿದ್ದಾನೆಂದು ನೆನಸಿ ಕಾಗದ ಬರೆದು ನಾನು ನನ್ನ ಸ್ನೇಹಿತನ ಬಗ್ಗೆ ಎರಡು ಮಾತು ಹೇಳಲು ಅವಕಾಶ

ಕಲ್ಪಿಸಿದ ಸನ್ಮಾನ್ಯ ಕೆ. ಪಿ. ಶಂಕರಗೌಡರಿಗೆ ನನ್ನ ನಮನಗಳು.

ಶ್ರೀ ಪಿ. ಎನ್. ಜವರಪ್ಪಗೌಡರು ಮತ್ತು ಸಂಸಾರದವರಿಗೆ ದಯಾಮಯನು ಸನ್ಮಂಗಳವನ್ನೀಯಲೆಂದು ಹಾರೈಸುತ್ತೇನೆ.

ಸಮಾರಂಭಕ್ಕೆ ಬರಲಾರೆ, ಸ್ನೇಹಿತ ಜವರಪ್ಪಗೌಡರಿಗಿಂತ 13 ವರ್ಷ ದೊಡ್ಡವನು. ನನ್ನ ಆಶೀರ್ವಾದ ಮಂಗಳಕರವಾದದ್ದು. ಸಮಾರಂಭ ನಡೆದ ಮೇಲೆ ಜವರಪ್ಪಗೌಡ ಮತ್ತು ಶ್ರೀಮತಿ ಪಾರ್ವತಮ್ಮ ಜವರಪ್ಪಗೌಡರು ನನ್ನಲ್ಲಿಗೆ ಬಂದು ಆಶೀರ್ವಾದ ಪಡೆವರೆಂದು ಆಶಿಸುತ್ತೇನೆ.

ಟಿ. ಎಸ್. ಸುಬ್ಬಣ್ಣ



# ಮೇರುಪುರುಷ

ನಮ್ಮ ಜವರಪ್ಪಗೌಡರು ನಾನೂ 1937 ರಿಂದಲೂ ಆತ್ಮೀಯ ಸ್ನೇಹಿತರು. ನನಗೆ ಶ್ರೀಯುತರ ಬಗ್ಗೆ ಬರೆಯಲು, ಬರೆಸಲು ಬಹಳ ಹೆಮ್ಮೆ ಸಂತೋಷ. ನನ್ನ ಅನಾರೋಗ್ಯದ ಕಾರಣ ಇತ್ತೀಚೆಗೆ ಅವರ ಸನಿಹ ನನಗೆ ಕಡಿಮೆಯಾಗಿದೆ. ಇದೊಂದು ಪುಟ್ಟ ಅಭಿನಂದನ ಲೇಖನ ನನಗೆ ದೊಡ್ಡಹೆಮ್ಮೆಯ ಅವಕಾಶ ಕಲ್ಪಿಸಿದೆ.

ಹೆಚ್ಚು ಕಡಿಮೆ ನಾನು ಈ ಊರಿಗೆ ಬಂದ ದಿನದಿಂದಲೇ ಪಾಲಗ್ರಹಾರದ ಜವರಪ್ಪಗೌಡರ ಪರಿಚಯವಾಯಿತು. ಪರಿಚಯ ಸ್ನೇಹವಾಗಿ ಚಿಗುರಿ ಗಿಡವಾಗಿ ಮರವಾಗಿ ಹೆಮ್ಮರವಾಯಿತು. ಅವರಲ್ಲಿರುವ ಸರಳತೆ ಸೌಜನ್ಯ ಯಾರನ್ನಾದರೂ ಕೂಡಲೇ ಹತ್ತಿರದವರನ್ನಾಗಿ ಮಾಡಿಕೊಳ್ಳುವ ಆತ್ಮೀಯಭಾವ ನನ್ನನ್ನು ಆಕರ್ಷಿಸಿದವು. ಅವರೂ ನನ್ನನ್ನು ಕಂಡು ಅಷ್ಟೇ ಆಕರ್ಷಿತರಾದರೆಂಬುದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತೇನೆ.

ನಾನು ಕಂಡಂತೆ ಜವರಪ್ಪಗೌಡರು ಸ್ನೇಹಪರರು ಅಪ್ಪಟ ಸಮಾಜಸೇವಕ. ಸ್ವಾರ್ಥಚಿಂತನೆ ಮಾಡಿದವರಲ್ಲ. ಉತ್ತಮ ವಾಗ್ಮಿ, ಒಬ್ಬ ಸಮಾಜಸೇವಕನಿಗಿರ ಬೇಕಾದ ಎಲ್ಲ ಗುಣಗಳೂ ಇವರಲ್ಲಿ ಮೇಳವಿಸಿವೆ. ನಾನು ಅವರೊಂದಿಗೆ ಅವರು ನನ್ನೊಂದಿಗೆ ಚರ್ಚಿಸದ ವಿಷಯವಿಲ್ಲ. ಭಾಗವಹಿಸದ ಸಮಾರಂಭಗಳಿಲ್ಲ. ಒಂದೇ ವೇದಿಕೆಯ ಮೇಲೆ ನಾವಿಬ್ಬರೂ ಅನೇಕ ಬಾರಿ ಭಾಷಣ ಮಾಡಿದ್ದೇವೆ. ನಮ್ಮಿಬ್ಬರದು ಆತ್ಮೀಯ ಜೋಡಿ.

ಇವರೊಬ್ಬ ಸಂಘಟನಾಚತುರ, ಶ್ರೀಯುತರು ಕಾಂಗ್ರೆಸ್ ಪಕ್ಷದ ಸಂಘಟನೆ ಯಲ್ಲಿ ತೋರಿದ ಅಪಾರಶ್ರಮ, ಸಾಧನೆ ಮಾದರಿಯಾದುದು. ಸಂಘಟನೆಯ ವಿಷಯದಲ್ಲಿ ದೇಶಕ್ಕೆ ಮಾದರಿಯಾಗಿದ್ದಾರೆ. ಇದು ಖಂಡಿತ ಉತ್ಪ್ರೇಕ್ಷೆಯಲ್ಲ. ಕಾರಣ ಸುಮಾರು 25–30 ವರ್ಷಗಳು ನಾವಿಬ್ಬರೂ ಒಟ್ಟಾಗಿ ಕಾಂಗ್ರೆಸ್ ಪಕ್ಷಕ್ಕಾಗಿ ದುಡಿದವರು. ಅತ್ಯಂತ ಹತ್ತಿರದಿಂದ ಇವರನ್ನು ಅರಿತಿರುವ ನಾನು ಈ ಮಾತನ್ನು ಹೇಳಲು ಸಾಧ್ಯವಾಗಿದೆ.

ಹಾಗೆ ನೋಡಿದರೆ ಇವರು ಪದವೀಧರರಲ್ಲ. ಆದರೆ ಯಾವ ಪದವೀಧರರಿಗೂ ಕಡಿಮೆ ಇಲ್ಲ. ಇವರು ಜೀವನದಿಂದ, ಅನುಭವದಿಂದ ದೊಡ್ಡ ವಿದ್ಯಾವಂತರಾದರು. ಸಭೆ ಸಮಾರಂಭಗಳಲ್ಲಿ ಅತ್ಯಂತ ಸರಳ ಶೈಲಿಯಲ್ಲಿ ವಿಷಯನಿರೂಪಣೆ ಮಾಡುತ್ತಿದ್ದ ಇವರ ಶೈಲಿ ಅತ್ಯಾಕರ್ಷಕ, ನಾಗಮಂಗಲದಲ್ಲಿ, ಏಕೆ ಮಂಡ್ಯಜಿಲ್ಲೆಯಲ್ಲಿ ನಡೆಯುವ

ಯಾವುದೇ ಸಭೆ ಸಮಾರಂಭಗಳಲ್ಲಿ ಜವರಪ್ಪಗೌಡರು ಇಲ್ಲವೆಂದಾದರೆ ಆ ಸಭೆ ಅಪೂರ್ಣವೆನಿಸುತ್ತಿತ್ತು.

ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ತಮ್ಮ ಅಪೂರ್ವ ಸೇವೆ ಸಲ್ಲಿಸಿದವರು, ಕಷ್ಟನಷ್ಟಗಳನ್ನೆದುರಿಸಿದವರು.

ಇನ್ನು ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ವಿದ್ಯಾಕ್ಷೇತ್ರಕ್ಕೆ ಸಲ್ಲಿಸಿದ ಇವರ ಸೇವೆ ಶಾಶ್ವತಫಲ ಕೊಡುವಂತಹವು. ಶ್ರೀ ಗೌಡರು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿದ್ದಾಗ ನಾನು ಇವರೊಂದಿಗೆ ಕರ್ನಾಟಕದಾದ್ಯಂತ ಸಂಚಾರ ಮಾಡಿದ್ದೇನೆ. ತಮ್ಮ ಅನುಭವವನ್ನು ಈ ಕ್ಷೇತ್ರಕ್ಕೆ ಧಾರೆಯೆರೆದು ಬೆಳೆಸಿದರು. ತಾವೂ ಬೆಳೆದು ಇನ್ನೊಬ್ಬರನ್ನೂ ಬೆಳೆಸುವುದು ಗೌಡರ ಜಾಯಮಾನ.

ಪತ್ರಿಕಾವೃತ್ತಿಯಿಂದಲೇ ಇವರ ಜೀವನ ಆರಂಭವಾಯಿತೆಂದು ಕಾಣಿಸುತ್ತದೆ. ಪ್ರಸಿದ್ಧ ಸಾಹಿತಿಗಳ ಸಹವಾಸ ಇವರಿಗೆ ಅಚ್ಚು ಮೆಚ್ಚು. ಕೆ. ವಿ. ಪುಟ್ಟಪ್ಪನವರಂತಹ ಉದ್ದಾಮ ಕವಿಗಳ, ಸಾಹಿತಿಗಳ ಸ್ನೇಹ ಇವರಿಗೆ ತುಂಬಾ ಇಷ್ಟ.

ಮಂಡ್ಯಜಿಲ್ಲೆಯ ಪ್ರಸಿದ್ಧ ರಾಜಕಾರಣಿಗಳು ಹೆಚ್ಚಾಗಿ ಇವರ ಗರಡಿಯಲ್ಲಿ ಬೆಳೆದುಬಂದವರು. ಇವರ ರಾಜಕೀಯ ಚಿಂತನೆ ನಿಸ್ವಾರ್ಥ ಸಮಾಜಸೇವಾ ಮನೋಭಾವ ವಿಶಾಲಮನೋಭಾವನೆ ಒಬ್ಬ ಶ್ರೇಷ್ಠ ದರ್ಜೆಯ ರಾಜಕಾರಣಿಗೆ ಇರಬೇಕಾದ ಗುಣಗಳೆಂದೇ ನನ್ನ ನಂಬಿಕೆ. ಬಹುಶಃ ಇವರೊಬ್ಬ ಎಂ.ಎಲ್.ಎ., ಎಂ.ಎಲ್.ಸಿ., ಅಥವಾ ಎಂ.ಪಿ. ಯಾಗಿದ್ದರೆ ಇನ್ನಷ್ಟು ಎತ್ತರಕ್ಕೆ ಬೆಳೆಯುವ ಸಾಧ್ಯತೆ ಇತ್ತು. ಇವರ ರಾಜಕೀಯ ಚಿಂತನಧಾರೆ ಇಡೀ ರಾಷ್ಟ್ರಕ್ಕೆ ವ್ಯಾಪಿಸುತ್ತಿತ್ತು. ಇದಕ್ಕಾಗಿ ಅವರೇನೂ ಚಿಂತಿಸಿದವರಲ್ಲ.

ಹೀಗೆ ಬರೆಯುತ್ತ ಹೋದರೆ ಮುಗಿಸಲು ಸಾಧ್ಯವಾಗದಷ್ಟು ವಿಚಾರಗಳಿವೆ. ಇಂತಹ ಮೇರುಪುರುಷನಿಗೆ ಈ ರೀತಿ ಗೌರವ ಸಲ್ಲುತ್ತಿರುವುದು ನನಗಂತೂ ಬಹಳ ಸಂತೋಷ ತಂದಿದೆ. ಮಹಾದೈವಭಕ್ತರಾದ ಇವರಿಗೆ ಭಗವಂತ, ಪೂರ್ಣಾಯುಸ್ಸು ಪೂರ್ಣಾರೋಗ್ಯ ಕೊಡಲಿ, ಹೆಚ್ಚು ಹೆಚ್ಚು ಜನರಿಗೆ ಹೆಚ್ಚುಕಾಲ ಇವರ ಜೀವನಾನುಭವ ದೊರೆಯುವಂತಾಗಲಿ ಎಂದು ಪೂರ್ಣ ಹೃದಯದಿಂದ ಆಶಿಸುತ್ತೇನೆ.

ಎಂ. ಆರ್. ಎಸ್. ಶಾಸ್ತ್ರೀ



# ಹಾಲುಂಡ ತೌರು !

ಪಿ. ಎಸ್. ಜವರಪ್ಪಗೌಡರು ನಾಗಮಂಗಲ ತಾಲ್ಲೂಕಿನ ಪ್ರತಿಭಾವಂತ ಪುತ್ರರಲ್ಲಿ ಒಬ್ಬರು. ಪಾಲಗ್ರಹಾರದ ಜವರಪ್ಪಗೌಡರೆಂದೇ ತಾಲ್ಲೂಕಿನ ಜನ ಅವರನ್ನು ಗುರುತಿಸುತ್ತಾರೆ. ಈ ಊರು ಒಂದು ಬೆಟ್ಟದ ಹಳ್ಳಿ. ಆಲತಿಗಿರಿ ಬೆಟ್ಟದಕೋಟೆಯ ಗಿರಿಶ್ರೇಣಿ ಈ ಊರನ್ನು ತನ್ನ ಮಡಿಲಿನಲ್ಲಿ ಇಟ್ಟುಕೊಂಡಿದೆ. ಒಮ್ಮೆ ಈ ಊರಿಗೆ ಹೋಗಿಬರುವ ಸೌಭಾಗ್ಯ ನನ್ನ ಪಾಲಿಗೆ ಬಂದಿತ್ತು. ಗೌಡರ ಮಗಳ ಮದುವೆ. ಕುಲಪತಿ ಜವರೇಗೌಡರೂ ನಾನೂ ಮಿತ್ರರಾದ ಹ. ಕ. ರಾಜೇಗೌಡರೂ ಈ ಮದುವೆಗೆ ಹೋಗಿದ್ದೆವು. ಊರ ಹೊರಗಿನ ಹಿಪ್ಪೆಯತೋಪಿನಲ್ಲಿ ಊಟದ ವ್ಯವಸ್ಥೆ. ಸಹಸ್ರಾರು ಜನ ಅಲ್ಲಿ ಸಾಲುಸಾಲಾಗಿ ಕುಳಿತು ಮದುವೆಯ ಊಟದ ಸವಿನೋಡುತ್ತಿದ್ದ ದೃಶ್ಯ ಇನ್ನೂ ನನ್ನ ಕಣ್ಣಿಗೆ ಕಟ್ಟಿದೆ. ಆ ಜನ ಜಾತ್ರೆಯನ್ನು ನೋಡಿದರೆ ಯಾರಾದರೂ ದಿಗ್ಭ್ರಮೆಗೊಳ್ಳಬೇಕು. ಜನಾನುರಾಗಿ ಜವರಪ್ಪಗೌಡರು ಅತಿಥಿ ಸತ್ಕಾರಕ್ಕೆ ಹೆಸರಾದವರು. ಅವರ ಜನಪ್ರಿಯತೆಯ ದ್ಯೋತಕವಾಗಿ ಅಲ್ಲಿ ಅಷ್ಟೊಂದು ಅಧಿಕ ಸಂಖ್ಯೆಯ ಜನ ನೆರೆದಿದ್ದರು. ಮಂಡ್ಯ ನಗರದಲ್ಲಿ ನೆಲಸಿರುವ ಅವರು ತಮ್ಮ ಮನೆಯ ಮದುವೆಯನ್ನು ಅಲ್ಲಿಯೇ ನಡೆಸಬಹುದಿತ್ತು. ಆದರೆ ಪತ್ತೆಂಟು ಹಳ್ಳಿಗಳಿಂದ ಮಂಡ್ಯಕ್ಕೆ ಜನ ಹೇಗೆ ಬರಬೇಕು. ಅದು ಅವರ ತೌರೂರು ಹುಟ್ಟಿಬೆಳೆದ ನೆಲೆ. ತನ್ನ ಜನಕ್ಕಾಗಿ ಮದುವೆಯನ್ನು ತಮ್ಮ ಹಳ್ಳಿಗೇ ಅವರು ಕೊಂಡೊಯ್ದಿದ್ದರು. ಅದು ಶ್ರೀ ಜವರಪ್ಪಗೌಡರು ಶ್ರೀ ಸಮಾನ್ಯನಲ್ಲಿ ಇಟ್ಟ ಪ್ರೀತಿ ಗೌರವವನ್ನು ಸೂಚಿಸುತ್ತದೆ.

ಜವರಪ್ಪಗೌಡರು ಯಾವ ಚುನಾವಣೆಯಲ್ಲಿಯೂ ಭಾಗವಹಿಸಿದವರಲ್ಲ. ಆದರೆ ಚುನಾವಣೆಗಳಲ್ಲಿ ತಮ್ಮ ಮಿತ್ರರಿಗೆ ಶಿಷ್ಯರಿಗೆ ನೆರವಾದವರು. ಅವರ ಚುನಾವಣೆಯ ಭಾಷಣಗಳನ್ನು ನಾನು ಚಿಕ್ಕವನಾಗಿದ್ದಾಗಿನಿಂದಲೂ ಕೇಳಿದ್ದೇನೆ. ಜವರಪ್ಪಗೌಡರ ಭಾಷಣವೆಂದರೆ ಸಹಸ್ರಾರು ಜನ ಸೇರುತ್ತಿದ್ದರು. ಆ ಮಾತಿನ ವೈಖರಿ, ವಿಡಂಬನೆ, ವಿಚಾರಧಾರೆ ಎದುರಾಳಿಗಳಿಗೆ ಎಸೆಯುತ್ತಿದ್ದ ಸವಾಲುಗಳನ್ನು ಕೇಳುವುದೇ ಒಂದು ಮೋಜು. ನಮ್ಮೂರಿನ ಜನ ಬೆಳ್ಳೂರುಸಂತೆಯಲ್ಲಿ ಜವರಪ್ಪಗೌಡರು ಮಾಡಿದ ಭಾಷಣವನ್ನು ಮೂರು ನಾಲ್ಕುದಿನ ಮೆಲುಕು ಹಾಕುತ್ತಿದ್ದರು ; ನೆನೆನೆನೆದು ಖುಷಿ ಪಡುತ್ತಿದ್ದರು.

ನಮ್ಮ ಸ್ವಾತಂತ್ರ್ಯಹೋರಾಟಗಾರರಲ್ಲಿ ಜವರಪ್ಪಗೌಡರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಗಾಂಧಿವಾದಿಯಾದ ಇವರು ಸ್ವಾತಂತ್ರ್ಯಾನಂತರದ ದಿನಗಳಲ್ಲಿ ದೇಶ

ಹಿತಕಾರ್ಯಗಳಲ್ಲಿ ಅಪಾರವಾಗಿ ದುಡಿದವರು. ರಾಷ್ಟ್ರದ ಉನ್ನತ ನಾಯಕರೆಲ್ಲ ಅವರಿಗೆ ಗೊತ್ತು. ಚತುರರಾದ ಇವರು ತಮ್ಮ ಮಾತಿನ ಮೋಡಿಯಿಂದ ಯಾರನ್ನಾದರೂ ಗೆದ್ದುಕೊಳ್ಳಬಲ್ಲ ಶಕ್ತರು. ರಾಜ್ಯದ, ರಾಷ್ಟ್ರದ ನಾಯಕರುಗಳು ಜವರಪ್ಪಗೌಡರಂಥ ಅಪರೂಪದ ವ್ಯಕ್ತಿಯನ್ನು ಮರೆಯುವುದುಂಟೆ !

ಜವರಪ್ಪಗೌಡರು ರಾಜಕೀಯಕ್ಕಿಂತ ಸಾಹಿತ್ಯವನ್ನು ಹೆಚ್ಚಾಗಿ ಹಚ್ಚಿಕೊಂಡರು. ಕುವೆಂಪುಸಾಹಿತ್ಯ ಅವರಿಗೆ ಕರತಲಾಮಲಕ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ಯಾವ ಭಾಗವನ್ನಾದರೂ ಅವರು ಉಲ್ಲೇಖಿಸಬಲ್ಲರು, ಸ್ವಾರಸ್ಯವಾಗಿ ಚರ್ಚಿಸಬಲ್ಲರು. ವ್ಯಾಖ್ಯಾನಿಸಬಲ್ಲರು. ಅಂತೆಯೇ ಇತರರ ಕೃತಿಗಳನ್ನೂ ಚೆನ್ನಾಗಿ ಅಭ್ಯಾಸಮಾಡಿರುವ ಅವರು ಸಾಹಿತ್ಯಾರಾಧಕರು ಮಾತ್ರ ಅಲ್ಲ, ಒಳ್ಳೆಯ ಲೇಖಕರೂ ಹೌದು. ಪತ್ರಿಕೋದ್ಯಮಿಯಾಗಿ ಕಳೆದ ಐದುವರಕಗಳಿಂದ ದುಡಿಯುತ್ತಿರುವ ಅವರು 'ವಿಶ್ವಮಿತ್ರ' ಪತ್ರಿಕೆಯನ್ನು ಸಂಪಾದಿಸುತ್ತಿದ್ದಾಗ ಅತ್ಯಂತ ಕುತೂಹಲದಿಂದ ಆ ಪತ್ರಿಕೆಯನ್ನು ನಾವೆಲ್ಲ ಓದುತ್ತಿದ್ದೆವು. ವಿಷಯ ಸಂಗ್ರಹ, ಟಿಪ್ಪಣಿಗಳನ್ನು ಕೊಡುತ್ತಿದ್ದ ರೀತಿ ; ಶೀರ್ಷಿಕೆಗಳ ಮೋಜು, ಮೊನಚಾದ ಬರವಣಿಗೆ ಎಲ್ಲರನ್ನೂ ಆಕರ್ಷಿಸುತ್ತಿದ್ದವು. ಆ ಪತ್ರಿಕೆಯ ಪ್ರಕಟಣೆಯನ್ನು ಜವರಪ್ಪಗೌಡರು ನಿಲ್ಲಿಸಬಾರದಿತ್ತು ಎಂದು ನಾಲ್ಕು ಮಂದಿ ಮಿತ್ರರು ಕಲೆತಾಗ ಮಾತಾಡಿಕೊಳ್ಳುತ್ತೇವೆ.

ಜವರಪ್ಪಗೌಡರು ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಕೆಲವರ್ಷ ಕೆಲಸ ಮಾಡಿದರು. ಅವರಂಥ ಅನುಭವಿಗಳು ಆ ಸ್ಥಾನಕ್ಕೆ ಬಂದದ್ದು ಆ ಹುದ್ದೆಗೆ ದೊರೆತ ದೊಡ್ಡಗೌರವ. ನಾಡನ್ನೆಲ್ಲ ಸುತ್ತಿ, ಸಾಕ್ಷರತೆಯ ಬಗ್ಗೆ ಜನಜಾಗ್ರತೆ ಉಂಟು ಮಾಡಿದ್ದಲ್ಲದೆ ಪ್ರಕಟಣೆಗಳಿಗೆ ವಿಶೇಷ ಮಹತ್ವವನ್ನು ಕೊಟ್ಟರು. ಆಗ ಕಾರ್ಯದರ್ಶಿಯವರಾದ ಮುನಿಸ್ವಾಮಿಯವರು ಒಂದು ಹಸ್ತಪ್ರತಿಯನ್ನು ನೋಡಿಕೊಡಲು ನನಗೆ ಕೊಟ್ಟಿದ್ದರು. ಅದನ್ನು ಪರಿಶೀಲಿಸಿಕೊಡಲು ಕೆಲಸ ಕಾರ್ಯದ ಒತ್ತಡದಿಂದ ಆಗಿರಲಿಲ್ಲ. ಒಮ್ಮೆ ಅವರೂ ಅಧ್ಯಕ್ಷರಾಗಿದ್ದ ಜವರಪ್ಪಗೌಡರೂ ನನ್ನ ಕಛೇರಿಗೆ ಬಂದಿದ್ದರು. ಬೇರೆ ಬೇರೆ ವಿಷಯಗಳನ್ನು ಚರ್ಚಿಸಿ ಹೊರಡುವಾಗ ಶ್ರೀ ಮುನಿಸ್ವಾಮಿಯವರು ಹಸ್ತಪ್ರತಿಯ ಪರಿಶೀಲನೆ ತಡವಾದ್ದಕ್ಕೆ ಆಕ್ಷೇಪಿಸಿದರು. ಅವರ ಮಾತು ನನ್ನನ್ನೂ ಕೆರಳಿಸಿತು. ನಾನೂ ಕಟುವಾಗಿಯೇ ಮಾತಾಡಬೇಕಾಯಿತು. ಮಧ್ಯ ಪ್ರವೇಶಿಸಿದ ಜವರಪ್ಪಗೌಡರು ಇಬ್ಬರನ್ನೂ ಸಮಾಧಾನ ಮಾಡಿ ರಾಜಿಮಾಡಿಸಿದರು. ಮತ್ತೆ ಕಛೇರಿಗೆ ಹಿಂದಿರುಗಿದ ಮೇಲೆಯೂ ನನಗೆ ಸಮಾಧಾನ ಹೇಳಿ ಆ ಘಟನೆಯನ್ನು ಮರೆತುಬಿಡುವಂತೆ ತಿಳಿಸಿದರು. ಜವರಪ್ಪಗೌಡರ ಮಧ್ಯಸ್ಥಿಕೆಯಿಂದ ಶ್ರೀ ಮುನಿಸ್ವಾಮಿಯವರ ಹಾಗೂ ನನ್ನ ಸ್ನೇಹ ಯಥಾಸ್ಥಿತಿ ಮುಂದುವರಿಯಿತು.

ಜವರಪ್ಪಗೌಡರು ಅಧ್ಯಕ್ಷರಾಗಿದ್ದಾಗ ಪುಸ್ತಕಪ್ರಪಂಚದ ಸಂಪಾದಕ ಮಂಡಲಿಯ ಸದಸ್ಯರಲ್ಲಿ ನಾನೂ ಒಬ್ಬ. ಹಾ. ಹಾ. ಮಾ. ನಾಯಕರು ಪ್ರಧಾನ

ಸಂಪಾದಕರು. ಪುಸ್ತಕಪ್ರಪಂಚದ ಸಂಚಿಕೆಗಳಲ್ಲಿ ಮುದ್ರಣದೋಷ ಸಂಬಂಧಪಟ್ಟ ಅಧಿಕಾರಿಗಳ ಉಪೇಕ್ಷೆಯಿಂದ ಹೆಚ್ಚಾಗಿಯೇ ಉಳಿದು ಹೋಗುತ್ತಿತ್ತು. ಎರಡು ಮೂರು ಬಾರಿ ಪ್ರಾ. ನಾಯಕರು ಉಪಸಂಪಾದಕರನ್ನು ಎಚ್ಚರಿಸಿದ್ದರು. ಅಧ್ಯಕ್ಷರ ಗಮನಕ್ಕೂ ತಂದಿದ್ದರು. ಅಧ್ಯಕ್ಷರು ಕಾರ್ಯಗೌರವಗಳ ನಡುವೆ ಇದಕ್ಕೆ ಹೆಚ್ಚು ಗಮನಕೊಡಲು ಆಗುತ್ತಿರಲಿಲ್ಲ. ತಪ್ಪುಗಳು ಕಡಮೆಯಾಗಲಿಲ್ಲ. ಪ್ರಾ. ನಾಯಕರು ಪ್ರಧಾನ ಸಂಪಾದಕತ್ವಕ್ಕೆ ರಾಜಿನಾಮೆ ನೀಡಿದರು. ಅವರ ಜೊತೆಯಲ್ಲಿ ಸಂಪಾದಕ ಮಂಡಳಿಯ ಸದಸ್ಯನಾದ ನಾನೂ ರಾಜಿನಾಮೆ ನೀಡಿದೆ. ಜವರಪ್ಪಗೌಡರು ನಮ್ಮಿಬ್ಬರ ಮನವೊಲಿಸಲು ತುಂಬ ಪ್ರಯತ್ನಿಸಿದರು. ನಾವು ಒಪ್ಪಲಿಲ್ಲ. ಈ ಘಟನೆಯಿಂದ ಅವರ ಮತ್ತು ನಮ್ಮ ನಡುವಿನ ಸಂಬಂಧ, ಪ್ರೀತಿ, ವಿಶ್ವಾಸಕ್ಕೆ ಕಿಂಚಿತ್ತೂ ಧಕ್ಕೆ ಬರಲಿಲ್ಲ.

ಜವರಪ್ಪಗೌಡರು ಸ್ವಾರಸ್ಯವಾಗಿ ಮಾತನಾಡಿ ಎಂಥವರನ್ನೂ ರಂಜಿಸಬಲ್ಲರು ಎಂಬುದನ್ನು ಅವರ ಚುನಾವಣೆಯ ಭಾಷಣಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿದ್ದೇನೆ. ವಿದ್ವಾಂಸರ ಸಭೆಗಳಲ್ಲೂ ಅವರ ಭಾಷಣಗಳು ಜನಪ್ರಿಯವಾಗಿವೆ. ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದ ಗದ್ಯಾನುವಾದ 'ವಚನ ಚಂದ್ರಿಕೆ'ಯ ಒಂದು ಆವೃತ್ತಿ ಯನ್ನು ಮೈಸೂರಿನ ಸುರುಚಿ ಪ್ರಕಾಶನದವರು ಹೊರತಂದಿದ್ದರು ಅದರ ಬಿಡುಗಡೆಯ ಸಮಾರಂಭ ಮೈಸೂರಿನ ದಾಸಪ್ರಕಾಶ ಹೋಟೆಲಿನಲ್ಲಿ ನಡೆಯಿತು. ಜವರಪ್ಪಗೌಡರು ಮುಖ್ಯಅತಿಥಿಯಾಗಿ ಗ್ರಂಥವನ್ನು ಬಿಡುಗಡೆ ಮಾಡಿದರು. ನಗರದ ಗಣ್ಯ ಸಾಹಿತಿಗಳೆಲ್ಲ ಇದ್ದರು. ರಾಮಾಯಣವನ್ನು ಕುರಿತು ತುಂಬ ಉದ್ಬೋಧಕವಾಗಿ ಅಂದು ಅವರು ಮಾತಾಡಿದ್ದನ್ನು ನಾವಿನ್ನೂ ಮರೆತಿಲ್ಲ.

ಜವರಪ್ಪಗೌಡರನ್ನು ಕಾಣುವುದು ಅವರೊಡನೆ ಕೆಲಕಾಲ ಕುಳಿತು ಮಾತಾಡುವುದು ಒಂದು ರಸದೌತಣ. ಅವರದು ಒಂದು ರೀತಿಯಲ್ಲಿ oneway traffic. ಮಾತಿಗೆ ಆರಂಭಿಸಿದರೇದರೆ ನಿಲ್ಲಿಸುವುದೆಲ್ಲಿ ಬಂತು ! ಕುವೆಂಪು ಅವರ ಭೇಟಿ, ದೆಹಲಿಗೆ ನಿಯೋಗ ಹೋಗಿ ನೆಹರು ಅವರನ್ನು ಭೇಟಿಮಾಡಿ ತಮ್ಮ ಜಾಣತನದ ಮಾತುಗಳಿಂದ ಅವರನ್ನು ಬೆರಗುಗೊಳಿಸಿದ್ದು, ಚುಂಚನಗಿರಿಯ ಸ್ವಾಮಿಗಳ ವ್ಯಕ್ತಿತ್ವ ವಿಶ್ಲೇಷಣೆ, ಮಂಡ್ಯದ ರಾಜಕೀಯ, ಮೆಡಿಕಲ್ ಕಾಲೇಜು ವಿದ್ಯಾರ್ಥಿಗಳ ಮುಷ್ಕರ ಮುಂತಾದ ವಿಷಯಗಳನ್ನು ಎತ್ತಿಕೊಂಡು ಎಲ್ಲೆಲ್ಲೋ ನಮ್ಮನ್ನು ಸುತ್ತಾಡಿಸಿ, ನಗಿಸಿ ನಲಿಸಿ ಕೈಬಿಡುವ ಚತುರ ಸಂಭಾಷಣಕಾರರು ಅವರು. ಅವರ ನೆನಪಿನ ಶಕ್ತಿ ಅಸದೃಶವಾದುದು. ಅವರು ಹೇಳುವ ಕತೆಗಳು ಅಪಾರ. ಒಮ್ಮೆ ಹೇಳಿದ ಕತೆಯನ್ನು ಇನ್ನೊಮ್ಮೆ ಹೇಳುವುದಿಲ್ಲ. ಅವರ ನೆನಪಿನ ಕಣಜದಲ್ಲಿ ಇಂಥ ಕತೆಗಳು ಅದೆಷ್ಟೋ. ಅರಸುಗಳನ್ನು 'ಬುದ್ಧಿ' ಎಂದು ಏಕೆ ಕರೆಯುತ್ತೇವೆ ಎಂಬುದಕ್ಕೆ ಕತೆಯೊಂದಿದೆ ಅವರಲ್ಲಿ. ಅದನ್ನು ಕೇಳಿ ನಾವು ಆನಂದಿಸಿದ್ದುಂಟು, ಅವರ ಹಾಸ್ಯಪ್ರಜ್ಞೆಗೆ ತಲೆದೂಗಿದು ದುಂಟು. ಇಂಥ ಜಾಣಮಾತುಗಾರರನ್ನು ನಾನು ಇನ್ನೆಲ್ಲಿಯೂ ಕಂಡಿಲ್ಲ ; ಕೇಳಿಲ್ಲ.

ಜವರಪ್ಪಗೌಡರದು ಬಹುದೊಡ್ಡ ಕುಟುಂಬ. ಅವರಿಗೆ ಎಷ್ಟು ಮಂದಿ ಹೆಣ್ಣು ಮಕ್ಕಳು, ಎಷ್ಟುಮಂದಿ ಗಂಡುಮಕ್ಕಳೋ ನನಗೆ ಖಚಿತವಾಗಿ ಗೊತ್ತಿಲ್ಲ. ಅವರ ಮನೆಮಾತ್ರ ಮಕ್ಕಳಿಂದ ಮೊಮ್ಮಕ್ಕಳಿಂದ ಸದಾ ಗಿಜಿಗಿಜಿ ಎನ್ನುತ್ತಿರುತ್ತದೆ. ಇವರ ನಡುವೆ ನಮ್ಮಂಥ ಅನಿರೀಕ್ಷಿತಅತಿಥಿಗಳು ಹೋದರೆ ಕೂಡಲೇ ಒಳಗೆ ಕರೆಹೋಗುತ್ತದೆ. ''ಮಗಾ ಜೀಶಂಪ ಬಂದಿದ್ದಾರೆ, ರಾಜೇಗೌಡರು ಬಂದಿದ್ದಾರೆ ಒಂದು ಆಮ್ಲೆಟ್ ಮಾಡಿರೊ !'' ಆಯಿತು : ನಾವು ಎಷ್ಟೇ ಕೆಲಸವಿದ್ದರೂ ಅವರ ಆತಿಥ್ಯವನ್ನು ಸ್ವೀಕರಿಸಿಯೇ ಹೋಗಬೇಕು. ಅವರ ಔದಾರ್ಯವನ್ನು ಕಂಡ ನಾವು ಮಂಡ್ಯಕ್ಕೆ ಹೋಗುವ ಮುನ್ನ ತಿಳಿಸಿಯೇ ಹೋಗುತ್ತೇವೆ. ಶ್ರೀಮತಿ ಜವರಪ್ಪಗೌಡರ ಕೈಯ ಸಾರಿನ ರುಚಿಯನ್ನು ಬಲ್ಲವರೇ ಬಲ್ಲರು ! ಅವರ ಮನೆಯಲ್ಲಿ ನಾವು ಮಾಡಿದ ಕೋಳಿಊಟಗಳಿಗೆ ಲೆಕ್ಕವೇ ಇಲ್ಲ, ಶ್ರೀಮತಿ ಜವರಪ್ಪಗೌಡರು, ಅವರ ಸೊಸೆ ನಗುನಗುತ್ತ ನಮ್ಮನ್ನು ಸತ್ಕರಿಸುತ್ತಾರೆ. ಇದರಿಂದಾಗಿ ಜವರಪ್ಪಗೌಡರ ಮನೆಯೆಂದರೆ ನನಗೆ ತೌರುಮನೆಯಿದ್ದಂತೆ : ನನ್ನ ಮಿತ್ರರಿಗೂ ಸಹ. ಇಂಥ ಹಾಲುಂಡ ತೌರನ್ನು ಹೇಗೆ ಮರೆಯಲಿ !

ಹಾಲುಂಡ ತವರಿಗೆ ಏನೆಂದು ಹಾಡಲಿ
ಹೊಳೆದಂಡೆಲಿರುವ ಕರಕೀಯ ಕುಡಿಯಂಗೆ
ಹಬ್ಬಲಿ ಅವರ ರಸಬಳ್ಳಿ

**ಡಾ. ಜೀ. ಶಂ ಪರಮಶಿವಯ್ಯ**

# ಸ್ವಾತಂತ್ರ್ಯ ಹೋರಾಟಗಾರ

ನಾಗಮಂಗಲ ತಾಲ್ಲೂಕು ಪಾಲಗ್ರಹಾರದ ನರಸಿಂಹೇಗೌಡರ ಮಗ ಜವರಪ್ಪ ಗೌಡರು ನಾನು ಕಂಡಂತೆ 1938ರಲ್ಲಿ ಮೈಸೂರು ಕಾಂಗ್ರೆಸ್ ಪ್ರಥಮಾಧಿವೇಶನವು ಶಿವಪುರದಲ್ಲಿ ಜರುಗಿದಾಗ ಸ್ವಯಂ ಸೇವಕರಾಗಿ ಕೆಲಸ ನಿರ್ವಹಿಸಿದರು. ಮೈಸೂರಿನಲ್ಲಿ ಹೊಸದಾಗಿ ಕಟ್ಟಿಸಿದ ಪೋಲೀಸ್ ಕಛೇರಿಗೆ "ಹ್ಯಾಮಿಲ್ಟನ್ ಬಿಲ್ಡಿಂಗ್" ಎಂದು ಹೆಸರಿಟ್ಟುದಕ್ಕೆ ಪ್ರತಿಭಟಿಸಿ ಚಳುವಳಿ ನಡೆಸಿದಾಗ ಪೆಟ್ಟುತಿಂದು ತುರಂಗವಾಸವನ್ನು ಸಹ ಅನುಭವಿಸಿದರು. 1939 ರಲ್ಲಿ ಮೈಸೂರಿನ ಟೌನ್‌ಹಾಲ್ ಮೈದಾನದಲ್ಲಿ ಭಾಷಣ ಮಾಡಕೂಡದೆಂದು 144ನೆಯ ಸೆಕ್ಷನ್ ಜಾರಿ ಮಾಡಿದ್ದರು. ಅದರ ವಿರೋಧ ಮಾಡಿದುದಕ್ಕೆ ಪುನಃ ಸೆರೆವಾಸ ಅನುಭವಿಸಬೇಕಾಯಿತು. ಗೌಡರು ಜೈಲಿನಲ್ಲೂ ಸುಮ್ಮ ನಿರಲಿಲ್ಲ. ಸುಧಾರಣೆಗಾಗಿ ಹೋರಾಡಿದ ಪ್ರಯುಕ್ತ ಅವರನ್ನು ಬೇರೆ ಬೇರೆ ಜೈಲು ಗಳಿಗೆ ವರ್ಗ ಮಾಡಿದರು. 1940ರಲ್ಲಿ ಆಗಿನ ಸರ್ಕಾರ ಡಿಸ್ಟ್ರಿಕ್ಟ್‌ಬೋರ್ಡು ಚುನಾವಣೆ ನಡೆಸಲು ಏರ್ಪಾಡು ಮಾಡಿದ್ದರು. ಮದ್ದೂರುತಾಲ್ಲೂಕಿನಲ್ಲಿ ಶ್ರೀ ಎಸ್. ಸಿ ಮಲ್ಲಯ್ಯನವರ ವಿರೋಧವಾಗಿ ಕಾಂಗ್ರೆಸ್ಸಿನಿಂದ ಕುದರುಗುಂಡಿ ಮರಿಯಪ್ಪನವರನ್ನು ನಿಲ್ಲಿಸಿದ್ದರು. ಜವರಪ್ಪಗೌಡರು ಕಾಂಗ್ರೆಸ್ಸಿನ ಪ್ರಚಾರಕಾರ್ಯ ಮಾಡುತ್ತಿದ್ದಾಗ ಒಂದು ದಿವಸ ಅವರ ನೇತೃತ್ವದ ತಂಡ ಸೋಮನಹಳ್ಳಿಗೆ ಹೋಗಿದ್ದಿತು. ಅಲ್ಲಿ ಪ್ರಚಾರ ಮಾಡುತ್ತ ಶ್ರೀಮಲ್ಲಯ್ಯನವರ ಅಣ್ಣ ಕೆಂಚೇಗೌಡರ ಮನೆ ಮುಂದೆ ಬಂದಾಗ ತಂಡದವರನ್ನೆಲ್ಲ ಹೊಡೆದು ಚಾವಟಿ ಪರಿನು ಹಾಕಿದರು. ಜವರಪ್ಪಗೌಡರು ಹೆದರದೆ ಅಲ್ಲಿಯೇ ಕುಳಿತು ಸತ್ಯಾಗ್ರಹ ಮಾಡಿದರು. ಎಲ್ಲರ ಶ್ರಮದಿಂದ ಕಾಂಗ್ರೆಸ್ ಜಯಗಳಿಸಿತಾದರೂ ಮೆಂಬರುತನ ಉಳಿಯಲಿಲ್ಲ. ಕಾರಣ ಮತ ಎಣಿಕೆಯಾಗಿ ಪ್ರಕಟಿಸುವುದರಲ್ಲಿ ನಮ್ಮ ಮೇಲಿರು ನಿಧನರಾದ ಪ್ರಯುಕ್ತ ಮಲ್ಲಯ್ಯನವರೇ ಮೆಂಬರಾದರು. 1942 ಮಹಾತ್ಮಗಾಂಧಿಯವರ ಕ್ವಿಟ್‌ಇಂಡಿಯ ಚಳುವಳಿಯಲ್ಲಿ ಅನೇಕ ತರಹ ಅಂದರೆ ಭೂಗತ. ಪ್ರಚಾರ, ವಗೈರೆ ಭಾಗವಹಿಸಿ ಜೈಲು ಅನುಭವಿಸಿ ದರು. ಅಂದಿನಿಂದಲೂ ಸಕ್ರಿಯ ರಾಜಕೀಯಸದಸ್ಯರಾಗಿ ಕಾರ್ಯಕಾರಿ ಸಮಿತಿ, ಜಿಲ್ಲಾ ಸಮಿತಿ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದರು. 1947ರಲ್ಲಿ ಜವಾಬ್ದಾರಿ ಸರ್ಕಾರದ ಪರವಾಗಿ ನಡೆದ ಪ್ಯಾಲೇಸ್ ಸತ್ಯಾಗ್ರಹದಲ್ಲೂ ಭಾಗವಹಿಸಿದ್ದರು. ಜೈಲೂ ಅನುಭವಿಸಿದರು. ಸ್ವಾತಂತ್ರ್ಯ ನಂತರ ಅವರ ಜೀವನಾವಶ್ಯಕತೆಗೆ ಗಮನಕೊಡುತ್ತ ಅನೇಕ ಸಂಘಸಂಸ್ಥೆ ಕಟ್ಟುವ ಕಡೆಗೂ ಗಮನ ಕೊಡುತ್ತಿದ್ದರು. ಶ್ರೀಯುತರ ಸ್ವಾತಂತ್ರ್ಯಪೂರ್ವ ಜೀವನ ಮಾತ್ರ ನಾನು ಕಂಡಂತೆ ವಿವರಿಸಿರುತ್ತೇನೆ. ಶ್ರೀಯುತರಿಗೆ ದೇವರು ಆಯುರಾರೋಗ್ಯವನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

**ಕೆ. ಸಿ. ಚನ್ನಯ್ಯ**

## ಪ್ರಾಮಾಣಿಕ ಪತ್ರಕರ್ತ

ಮಂಡ್ಯಜಿಲ್ಲೆಯ ಪತ್ರಿಕೋದ್ಯಮದಲ್ಲಿ ಪಿ. ಎಸ್. ಜವರಪ್ಪಗೌಡರದು ಬಹು ದೊಡ್ಡ ಹೆಸರು. ಬಹುಮುಖ ವ್ಯಕ್ತಿತ್ವದ ಜವರಪ್ಪಗೌಡರು ಪತ್ರಕರ್ತರಾಗಿ ಸುಮಾರು ನಲವತ್ತೆಂಟು ವರ್ಷಗಳಷ್ಟು ದೀರ್ಘಕಾಲ ಸಮಾಜದ ಎಲ್ಲಾಸ್ತರಗಳ ನೋವು ನಲಿವು ಗಳೊಂದಿಗೆ, ಕುಂದು ಕೊರತೆಗಳೊಂದಿಗೆ ಸ್ಪಂದಿಸುತ್ತ ದೀನರ, ದುರ್ಬಲರ, ಅಸ ಹಾಯಕರ ಏಳಿಗೆಗಾಗಿ ನಿರಂತರ ಹೋರಾಟ ನಡೆಸಿದರು. ನಿಷ್ಠಾವಂತ ಪತ್ರಕರ್ತ ನೊಬ್ಬನ ಹೊಣೆಯನ್ನರಿತಿದ್ದ ಶ್ರೀಯುತರು ಯಾವುದೇ ಆಸೆ, ಆಮಿಷಗಳಿಗೆ ಬಲಿ ಯಾಗದೆ ಪತ್ರಿಕಾಧರ್ಮಕ್ಕೆ ಚ್ಯುತಿ ತಾರದಂತೆ ತಮ್ಮ ಕರ್ತವ್ಯವನ್ನು ನಿಷ್ಠೆ ಮತ್ತು ಶ್ರದ್ಧೆಯಿಂದ ಪಾಲಿಸಿಕೊಂಡು ಬಂದವರು. ದೇಶಕ್ಕೆ ಸ್ವಾತಂತ್ರ್ಯತಂದುಕೊಡುವಲ್ಲಿ ಪತ್ರಿಕೆಗಳ ಪಾತ್ರ ಎಷ್ಟು ಮಹತ್ವಪೂರ್ಣ ಅಂತೆಯೇ ಪತ್ರಕರ್ತನೊಬ್ಬನ ಹೊಣೆಗಾ ರಿಕೆಯೂ ಸಹ ಅಷ್ಟೇ ಮಹತ್ವದ್ದೆಂಬುದನ್ನು ಅರಿತಿದ್ದ ಅವರಿಂದ ಅಂದಿನ ದಿನಗಳಲ್ಲಿ ಬಂದ ಸೃಜನಾತ್ಮಕ ಲೇಖನಗಳು ಹೋರಾಟದ ಮುಂಚೂಣಿಯಲ್ಲಿದ್ದವರಿಗೆ ಚೇತೋ ಹಾರಿಗಳಾಗಿದ್ದವು ಮತ್ತು ಸ್ಫೂರ್ತಿದಾಯಕಗಳಾಗಿ ಸಹ ಇದ್ದು ಸ್ವತಃ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಇವರು ಸಾರ್ಥಕ ಸೇವೆ ಸಲ್ಲಿಸಿದವರು.

ಬೆಂಗಳೂರಿನಿಂದ ಪ್ರಕಟಗೊಳ್ಳುತ್ತಿದ್ದ 'ವಿಶ್ವಾಮಿತ್ರ' ಎಂಬ ಸಚಿತ್ರ ವಾರ ಪತ್ರಿಕೆಯೊಂದರ ಸಂಪಾದಕರಾಗಿ ಸಹ ಸೇವೆ ಸಲ್ಲಿಸಿ ಅಪಾರ ಅನುಭವಗಳಿಸಿಕೊಂಡ ಇವರು ಆ ಉದ್ಯಮದ ಲಾಭ, ನಷ್ಟವನ್ನು ಸರಿಪಡಿಸುವಲ್ಲಿ ಸುಮಾರು ಐದು ಎಕರೆಗಳಷ್ಟು ಜಮೀನನ್ನು ಸಹ ಕಳೆದುಕೊಳ್ಳಬೇಕಾಯಿತು. ತಾನು ಕಳೆದುಕೊಂಡ ಬಗ್ಗೆ ವಿಚಲಿತ ರಾಗದೆ ತಾವು ಹೊಂದಿದ್ದ ಧ್ಯೇಯಾದರ್ಶಗಳಿಗಾಗಿ ಸತತ ಪರಿಶ್ರಮದಿಂದ ದುಡಿಯುತ್ತ ಬಂದರು.

1940ರಲ್ಲಿ ಜನವಾಣಿ ಮತ್ತು ಪ್ರಜಾಮತ ಪತ್ರಿಕೆಗಳ ಮೂಲಕ ಪತ್ರಿಕೋ ದ್ಯಮದೊಳಕ್ಕೆ ಕಾಲಿರಿಸಿದ ಜವರಪ್ಪಗೌಡರು 1988ರ ಫೆಬ್ರವರಿ ತಿಂಗಳಿನಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆಯಿಂದ ವಿಶ್ರಾಂತಿ ಪಡೆದರು. ಪತ್ರಿಕೆಯೊಂದರಲ್ಲಿ ಪ್ರಕಟಗೊಳ್ಳಬಹುದಾದ ಸುದ್ದಿಯೊಂದರ ಪ್ರಭಾವ ಹಾಗೂ ಪರಿಣಾಮಗಳ ಬಗ್ಗೆ ಸೂಕ್ಷ್ಮಮತಿಯಾಗಿದ್ದ ಜವರಪ್ಪಗೌಡರು ಬಹು ಎಚ್ಚರಿಕೆಯಿಂದ ಸತ್ಯಾಸತ್ಯತೆಗಳನ್ನು ವಿಚಾರಮಾಡಿ. ವಿಮರ್ಶಿಸಿ ಸುದ್ದಿ ಬರೆಯುತ್ತಿದ್ದರು. ಅವರ ಜೀವಿತ ಪತ್ರಿಕೋದ್ಯಮ ಅವಧಿಯಲ್ಲಿಯೇ ಹೇಳಬೇಕೆಂದರೆ ಯಾವುದೇ ಪತ್ರಿಕೆಯಲ್ಲಿ ಸಹ 'ಆಕ್ಷೇಪಾರ್ಹ' ಎಂದು ಹೇಳುವ ಒಂದೇ ಒಂದು ಲೇಖನ ಅಥವಾ ಸುದ್ದಿ ಬರೆದವರಲ್ಲ, ದುಷ್ಟ

ಅಧಿಕಾರಿಗಳು, ಭ್ರಷ್ಟರಾಜಕಾರಣಿಗಳಿಗೆ 'ಸಿಂಹಸ್ವಪ್ನ'ವಾಗಿದ್ದ ಜವರಪ್ಪಗೌಡರು ಸಭ್ಯ ಬದುಕಿನ ರೀತಿ ನೀತಿಗಳನ್ನು ಹೇಳಿಕೊಟ್ಟವರು.

ಜಿಲ್ಲೆಯಲ್ಲಿ ಪತ್ರಿಕೋದ್ಯಮವನ್ನು ಶ್ರೀಮಂತವನ್ನಾಗಿಸುವಲ್ಲಿ ಶ್ರೀಯುತರ ಸೇವೆ ಅನುಪಮವಾದುದು. ಸಮಾಜದಲ್ಲಿನ ವ್ಯವಸ್ಥೆಯ ಏರು, ಪೇರುಗಳ ಅನಿವಾರ್ಯತೆಗೆ ನಿರ್ಲಿಪ್ತರಾಗುಳಿಯದ ಅವರು ಕಾಯಾ, ವಾಚಾ, ಮನಸಾ ಸದೃಢ, ಆರೋಗ್ಯಕರ ಸಮಾಜ ನಿರ್ಮಾಣಕ್ಕಾಗಿ ಇಂದಿಗೂ ತಹತಹಿಸುವ ಜವರಪ್ಪಗೌಡರು ಸಾಮಾಜಿಕ ಕಳಕಳಿಗಳೊಂದಿಗೆ ನೇರವಾಗಿ ಸ್ಪಂದಿಸುವ ವ್ಯಕ್ತಿ. ನಿಷ್ಠೆ, ಪ್ರಾಮಾಣಿಕತೆ, ಸರಳ ಮತ್ತು ಸ್ವಚ್ಛ ಬದುಕಿನ ಜವರಪ್ಪಗೌಡರ ಜೀವನ ಯಾವಕಾಲಕ್ಕೂ ಅನುಕರಣೀಯ. ಶ್ರೀಯುತರಿಗೆ ಸಲ್ಲುತ್ತಿರುವ ಈ ಗೌರವ ಜಿಲ್ಲೆಯ ಪತ್ರಿಕೋದ್ಯಮಕ್ಕೆ ಸಂದ ಗೌರವವೂ ಹೌದು.

ಶ್ರೀಕಾಂತ

# ಮಹಾಚೇತನ

ಆತ್ಮೀಯ ಜವರಪ್ಪಗೌಡರ ಬಗ್ಗೆ ಬರೆಯಹೊರಟಾಗ ಪುಟಗಳೇನು ಪುಸ್ತಕಗಳನ್ನು ಬರೆದರೂ ಕೊರತೆಯನ್ನು ನೀಗಲು ಸಾಧ್ಯವಿಲ್ಲವೇನೋ ಎನಿಸುತ್ತವೆ. ಸೌಜನ್ಯಮೂರ್ತಿ ಶ್ರೀ ಜವರಪ್ಪಗೌಡರು ತಮ್ಮ ಅಧಿಕಾರಾವಧಿಯಲ್ಲಿ "ರಾಜ್ಯ ವಯಸ್ಕರ ಶಿಕ್ಷಣ ಸಮಿತಿ"ಯನ್ನು ಉತ್ತುಂಗಕ್ಕೇರಿಸಿದರೆಂದರೆ ಅತಿಶಯೋಕ್ತಿಯಾಗಲಾರದು. ಶ್ರೀಯುತರು ವಯಸ್ಕರ ಶಿಕ್ಷಣ ಸಮಿತಿಯನ್ನು ವಿಶ್ವವಿದ್ಯಾನಿಲಯವನ್ನಾಗಿ ಪರಿವರ್ತಿಸಬೇಕೆಂಬ ದೃಢ ನಿಲುವನ್ನು ಹೊಂದಿ ಅಂತೆಯೇ ಸರ್ಕಾರವನ್ನು ಈ ದಿಸೆಯಲ್ಲಿ ಕಾರ್ಯ ನಿರ್ವಹಿಸುವಂತೆ ಆಗ್ರಹಿಸಿದರು. ಇದು ಅವರ ಆಸೆಗಳೆಲ್ಲದುದರಲ್ಲಿ ಹಿರಿಯಾಸೆಯಾಗಿತ್ತು ಕೂಡ.

ತಮ್ಮ ಆಸೆಯ ಈಡೇರಿಕೆಗಾಗಿ ಪಣತೊಟ್ಟ ಶ್ರೀ ಜವರಪ್ಪಗೌಡರು ಸಮಿತಿಯ ಹುಟ್ಟು–ಬೆಳವಣಿಗೆ–ಏಳ್ಗೆ–ಉದ್ದೇಶ– ಎಲ್ಲವನ್ನೂ ಏಕೀಕರಿಸಿ ಸರ್ಕಾರದ ಮುಂದೆ ಮಂಡಿಸಿದರು. ಇದಕ್ಕೆ ಪುಟವಿಟ್ಟಂತೆ ಅಂದಿನ ಘನತೆವೆತ್ತ ಸರ್ಕಾರ ಇವರ ಮಹದಾಸೆಯನ್ನು ಪುಷ್ಟೀಕರಿಸಿ ವಯಸ್ಕರಶಿಕ್ಷಣ ಸಮಿತಿಯನ್ನು ಒಂದು ಶಾಸನಬದ್ಧ ಸಂಸ್ಥೆ [Statutory Body]ಯನ್ನಾಗಿ ಮಾಡುವುದಾಗಿ ಯೋಚಿಸುತ್ತಿದೆಯೆಂದು ಸಾರಿತು.

ದಿನದಿನಕ್ಕೂ ಬದಲಾಗುತ್ತಿದ್ದ ಕಾರ್ಯಕಲಾಪಗಳನ್ನು ಬಹು ಧೈರ್ಯ ಹಾಗೂ ಸ್ಥೈರ್ಯದಿಂದ ಎದುರಿಸಿದ ಶ್ರೀಯುತರು ಅಧಿಕಾರಿಗಳಲ್ಲಿ ಮಾತ್ರವಲ್ಲದೆ ಸರ್ವರಲ್ಲಿಯೂ ಸೌಜನ್ಯದಿಂದ ವರ್ತಿಸಿ ಸಮಿತಿಯ ಶ್ರೇಯೋಭಿವೃದ್ಧಿಗೆ ಕಾರಣ-ಕರ್ತ-ಎಲ್ಲವೂ ಆದರು.

ಇನ್ನೊಂದು ದಿಟವಾದ ಮಾತು ; ಅವರ ಜಾತೀಯತೆ, ಸ್ನೇಹ, ಸಂಬಂಧ, ಆತ್ಮೀಯತೆ_ಎಲ್ಲವೂ ಅವರ ಅಧ್ಯಕ್ಷಗಿರಿಯಿಂದ ದೂರ ಉಳಿದಿದ್ದು, ಇವಾವುದಕ್ಕೂ ಬಾಗದೆ ಪೂರ್ಣಕಾಲದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಮಹಾಚೇತನ ಶ್ರೀ ಜವರಪ್ಪಗೌಡರು.

ಶ್ರೀಯುತರು ಸಮಿತಿಯ ಅಧ್ಯಕ್ಷಗಿರಿಯನ್ನು ಅಧಿಕಾರದ ಸ್ಥಾನವೆಂದು ಭಾವಿಸದೆ ಸೇವೆಯ ಒಂದು ಅವಕಾಶವೆಂದು ತಿಳಿದು ತಮ್ಮ ಅಧಿಕಾರಾವಧಿಯಲ್ಲಿ ಕರ್ತವ್ಯಗಳನ್ನು ಸ್ವಚ್ಛತೆಯಿಂದ ನಿರ್ವಹಿಸಿದರೆಂದರೆ ತಪ್ಪಾಗಲಾರದು. ಅವರ ಸರಳವೇಷ–ನಡತೆ–ರೀತಿನೀತಿಗಳು–ಕಾರ್ಯದಕ್ಷತೆಯನ್ನು ಹೆಚ್ಚಿಸಿದವು. ಅವರ ವ್ಯವಹಾರಜ್ಞಾನ

ಉನ್ನತ ಅಧಿಕಾರಿಯನ್ನು ಕೂಡ ಸಾಧಿಸುವಂತಿತ್ತು.

ನೌಕರರಲ್ಲಿ, ಅಧಿಕಾರಿಗಳಲ್ಲಿದ್ದ ಪ್ರತಿಭೆಗೆ ತಕ್ಕ ಪುರಸ್ಕಾರ ನೀಡುತ್ತಿದ್ದ ಶ್ರೀಯುತರು ವಿದ್ಯಾಪೀಠಗಳ ಸ್ಥಿತಿಯನ್ನು ಸುಸ್ಥಿತಿಗೊಳಿಸುವಲ್ಲಿ ಯಶಸ್ವಿಯಾದರು.

ಕಾರ್ಯಕರ್ತರಲ್ಲಿ ಕಾರ್ಯಕರ್ತರಾಗಿ ಕೈಜೋಡಿಸಿ ಸಮಿತಿಯ ಏಳ್ಗೆಗಾಗಿ ದುಡಿದ ಮಹಾಶಯರುಗಳಲ್ಲಿ ಶ್ರೀ ಜವರಪ್ಪಗೌಡರು ಮೊದಲಿಗರೆನ್ನಬಹುದು.

**ಸಿಂಧುವಳ್ಳಿ ಸುಬ್ರಹ್ಮಣ್ಯಂ**



# ಬಯಸದೆ ಬಂದ ಆಸ್ತಿ

ಶ್ರೀ ಟಿ. ಎನ್. ಜವರಪ್ಪಗೌಡರನ್ನು ಬೇಡಿ ಬಯಸಿರಲಿಲ್ಲ. ನನ್ನ ಸ್ನೇಹ ವರ್ತುಲದಲ್ಲಿ ಬರಬಹುದಾದ ವ್ಯಕ್ತಿಯೆಂದೂ ನಾನು ಅವರನ್ನು ಎಣಿಸಿರಲಿಲ್ಲ. ಆದರೆ ಆಕಸ್ಮಾತ್ತಾಗಿ ಅವರೊಡನೆ ಬಂದ ಸಂಪರ್ಕ ಸ್ನೇಹದಲ್ಲಿ ಪರಿವರ್ತನೆಗೊಂಡಾಗ ಅವರೊಬ್ಬ ಸ್ಪೃಹಣೀಯ ವ್ಯಕ್ತಿ ಎಂಬುದನ್ನು ಕಂಡುಕೊಂಡೆ.ಅಂಥವರ ಸ್ನೇಹ ಗಳಿಸುವದೆಂದರೆ ಒಂದು ದೊಡ್ಡ ಅಮೂಲ್ಯ ಆಸ್ತಿಯನ್ನೇ ಗಳಿಸಿದಂತೆ ಎಂದು ಅಂದುಕೊಂಡೆ.

ನಾನು ಬೆಂಗಳೂರಿನಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯ ಸುದ್ದಿಸಂಪಾದಕನಾಗಿ ೧೯೫೯ರಲ್ಲಿ ಕಾರ್ಯನಿರ್ವಹಣೆ ಆರಂಭಿಸಿದಾಗ ಮೊದಲ ಬಾರಿಗೆ ಶ್ರೀ ಜವರಪ್ಪಗೌಡರ ಸಂಪರ್ಕ ಬಂತು. ಅವರು ನಮ್ಮ ಪತ್ರಿಕೆಗೆ ಮಂಡ್ಯದ ಸುದ್ದಿಗಾರರೂ ಹೌದು ; ಏಜೆಂಟರು ಹೌದು. ಮೊದಲ ಸಮಯದಲ್ಲೇ ಅವರು ತಮ್ಮ ನಿರರ್ಗಳ ಮತ್ತು ಮಾಹಿತಿಪೂರ್ಣ ಮಾತುಗಳಿಂದ ನನ್ನ ಮೇಲೆ ಪ್ರಭಾವ ಬೀರಿದರು. ಆದರೆ ನಾನು ಅದಕ್ಕೆ ಸುಲಭವಲ್ಲಿ ಬಲಿಯಾಗಲಿಲ್ಲ. ಸುದ್ದಿಸಂಪಾದಕನ ಸಂದೇಹದೃಷ್ಟಿಯಿಂದಲೇ ನಾನು ಅವರನ್ನು ಪರೀಕ್ಷಿಸತೊಡಗಿದೆ. ಕ್ರಮೇಣ ಅವರ ವೈವಿಧ್ಯಪೂರ್ಣ ವ್ಯಕ್ತಿತ್ವದ ಪರಿಚಯ ನನಗಾಗತೊಡಗಿತು. ವಯಸ್ಸಿನಲ್ಲಿ ನನಗಿಂತ ಹಿರಿಯರೇ ಆದ ಅವರೊಡನೆ ನಾನು ತೀರ ಹತ್ತಿರದ ಸಂಪರ್ಕಕ್ಕೆ ಸರಿಯುವ ಅವರ ಪರಿಚಯ ಮಾಡಿಕೊಂಡೆ.

ಶ್ರೀ ಜವರಪ್ಪಗೌಡರಿಗೆ ಸಂಯುಕ್ತ ಕರ್ನಾಟಕ ಪತ್ರಿಕೆಯ ಬಗ್ಗೆ ಅಭಿಮಾನ ಬಹಳ. ಮೊಹರೆಯವರೆಂದರೆ ಅಪಾರ ಗೌರವ. ಹಿಂದೊಮ್ಮೆ ಮಂಡ್ಯದಲ್ಲೋ, ಮೈಸೂರಲ್ಲೋ ಸಂಘಟಿಸಿದ ಪತ್ರಿಕಾವರದಿಗಾರರ ಶಿಬಿರವೊಂದರಲ್ಲಿ ಮಾಡಿದ ಭಾಷಣವನ್ನು ಅವರು ಯಾವಾಗಲೂ ಸ್ಮರಿಸಿಕೊಳ್ಳುತ್ತಾರೆ. ಎಂಥ ಆಕ್ಷೇಪಾರ್ಹ ಅಥವಾ ಮಾನಹಾನಿ ಸುದ್ದಿಗಳನ್ನೂ ಎಳ್ಳಷ್ಟೂ ಆರೋಪಕ್ಕೊಳಗಾಗದೆ ವರದಿಮಾಡುವ ತಂತ್ರವನ್ನು ಮೊಹರೆಯವರು ಅಂದು ಹೇಳಿದರಂತೆ.

ಅಂತೂ ಸಂಯುಕ್ತಕರ್ನಾಟಕದ ಬೆಂಗಳೂರು ಆವೃತ್ತಿ ಪ್ರಾರಂಭವಾದಾಗ ಜವರಪ್ಪಗೌಡರು ಅದನ್ನು ಅತ್ಯಂತ ಆತ್ಮೀಯತೆಯಿಂದ ಕಂಡರು. ಅದನ್ನು ಎತ್ತಿ ಕಟ್ಟುವ ಕೆಲಸಕ್ಕೆ ಟೊಂಕ ಕಟ್ಟಿದರು. ಪ್ರಾರಂಭಕ್ಕೇ ಅವರು ಮಂಡ್ಯಜಿಲ್ಲೆಯಲ್ಲಿ ಸಂಯುಕ್ತಕರ್ನಾಟಕದ ಪ್ರಸಾರಕ್ಕೆ ಪ್ರಥಮಸ್ಥಾನ ಗಳಿಸಿಕೊಟ್ಟರು. ಮತ್ತು ಅದು ತಮ್ಮ ಕೈಯಲ್ಲಿ ಇರುವವರೆಗೂ ಆ ಸ್ಥಾನವನ್ನು ಅವರು ಕಾಪಾಡಿಕೊಂಡು ಬಂದರು. ಬೇರೆ ಯಾವ ಸ್ಪರ್ಧಾತ್ಮಕಪತ್ರಿಕೆಗೂ ಸಂಯುಕ್ತಕರ್ನಾಟಕವನ್ನು ಹಿಂದೆ ಹಾಕಲು ಅವಕಾಶ ನೀಡಲಿಲ್ಲ. ಶ್ರೀ ಜವರಪ್ಪಗೌಡರು ತಮ್ಮ ಜನಸಂಪರ್ಕ ಮತ್ತು ಪ್ರಭಾವ

ಗಳನ್ನು ಪಣಕ್ಕೆ ಹಚ್ಚಿಯೇ ಈ ಸಾಹಸವನ್ನು ಆಗ ಮಾಡಿದರೆಂದು ಹೇಳಿದರೆ ಅತಿಶಯೋಕ್ತಿ ಅಲ್ಲ,

ಅವರು ಪತ್ರಿಕೆಯ ಏಜಂಟರು ಮಾತ್ರ ಆಗಿರಲಿಲ್ಲ, ವರದಿಗಾರರೂ ಆಗಿದ್ದರು. ಈ ಎರಡೂ ಪಾತ್ರಗಳನ್ನು ಅವರು ಅತ್ಯಂತ ಸಮತೋಲದಿಂದ ನಡೆಸಿಕೊಂಡು ಹೋಗುತ್ತಿದ್ದರು. ಅವರು ಜಿಲ್ಲೆಯ ರಾಜಕೀಯಮುಖಂಡರೊಡನೆ ಮತ್ತು ಕಾರ್ಯಕರ್ತರೊಡನೆ ಲೀಲಾಜಾಲವಾಗಿ ಓಡಾಡುತ್ತಿದ್ದರು. ಆದರೂ ಅವರ ವರದಿಗಳಲ್ಲಿ ವಸ್ತುನಿಷ್ಠ ಮತ್ತು ನಿಷ್ಪಕ್ಷಪಾತತನ ಸ್ಪಷ್ಟವಾಗಿರುತ್ತಿತ್ತು. ನನ್ನೊಡನೆ ಮಾತಾಡುವಾಗಲೆಲ್ಲ ಜಿಲ್ಲೆಯ ರಾಜಕೀಯ ಹಾಗೂ ಸಾಮಾನ್ಯಸ್ಥಿತಿಗತಿಯ ಚಿತ್ರವನ್ನು ಒಳ್ಳೆ ಯಥಾರ್ಥ ರೀತಿಯಲ್ಲಿ ನೀಡುತ್ತಿದ್ದರು. ರಾಜಕೀಯ ಬೆಳವಣಿಗೆಗಳ ಭವಿಷ್ಯವನ್ನು ಅವರು ಒಳ್ಳೆ ತರ್ಕಬದ್ಧವಾಗಿ ವಿವರಿಸುತ್ತಿದ್ದರು. ನಂತರದ ಘಟನೆಗಳು ಅವರ ವಿಶ್ಲೇಷಣೆಯಂತೆಯೇ ನಡೆದುದನ್ನು ನಾನು ಅನೇಕ ಸಲ ಗಮನಿಸಿ ಆಶ್ಚರ್ಯಪಟ್ಟಿದ್ದೇನೆ. ಇದರಿಂದಾಗಿ ಅವರು ಸಂಯುಕ್ತಕರ್ನಾಟಕಕ್ಕೆ ಕೇವಲ ಸುದ್ದಿಗಾರರಾಗಲಿ ಏಜಂಟರಾಗಲಿ ಆಗಿರದೆ ಒಬ್ಬ ಸಂಪಾದಕೀಯ ಸಲಹೆಗಾರರೂ ಆಗಿದ್ದರು.

ಇಷ್ಟೆಲ್ಲ ಸಂಪರ್ಕ ಸಲಿಗೆಗಳಿದ್ದರೂ ಅವರು ಅದನ್ನು ಸ್ವಾರ್ಥಕ್ಕಾಗಿ ಎಂದೂ ಬಳಸಿಕೊಳ್ಳಲಿಲ್ಲ. ಯಾವಾಗಲೂ ತಮ್ಮಿಂದ ಪರರಿಗೆ ಯಾವ ರೀತಿ ಉಪಕಾರ ಆದೀತೆಂಬ ಬಗ್ಗೆಯೇ ಅವರ ವಿಚಾರವಿರುತ್ತದೆಯೇ ಹೊರತು ಪರರ ಪ್ರಯೋಜನವನ್ನು ತಾನು ಹೇಗೆ ಪಡೆಯಬೇಕೆಂಬತ್ತ ಅವರ ಲಕ್ಷ್ಯ ಹೊರಳುವದೇ ಇಲ್ಲ. ಜವರಪ್ಪಗೌಡರು ಸರಸ ಮಾತುಗಾರರೂ ಹೌದು, ಸರಳ ಹೃದಯರೂ ಹೌದು. ಹಿಡಿದ ಕೆಲಸವನ್ನು ಪಟ್ಟು ಹಿಡಿದು ಮಾಡಿ ಮುಗಿಸುವ ಹಟವಾದಿಯೂ ಹೌದು, ಮುಂದಿಟ್ಟ ಹೆಜ್ಜೆಯನ್ನು ಹಿಂದಿಡದ ದಿಟ್ಟಕಾರ್ಯಕರ್ತರೂ ಹೌದು, ಇಂಥವರೆ ಸಮಾಜದ ನಿಜವಾದ ಚೈತನ್ಯ ಶಕ್ತಿ.

ಶ್ರೀಮಾನ್ ಜವರಪ್ಪಗೌಡರು ಸುದೀರ್ಘವಾದ ಆಯುಸ್ಸು ಆರೋಗ್ಯಗಳನ್ನು ಹೊಂದಲಿ. ಅವರಿಂದ ಸಮಾಜ ಮತ್ತು ಸಮಾಜದಿಂದ ಅವರು ಸಮೃದ್ಧಿ ನೆಮ್ಮದಿಗಳನ್ನು ಪಡೆಯುವಂತಾಗಲಿ.

ಸುರೇಂದ್ರ ದಾನಿ



# ಕರ್ಮಯೋಗಿ

ವಿದ್ಯಾತಜ್ಞ ರಾಜಕಾರಣಿ ಕೆ. ವಿ. ಶಂಕರಗೌಡರು ಬೆಂಗಳೂರಿನಲ್ಲಿದ್ದ ಕರ್ನಾಟಕ ಸಹಕಾರೀ ಪ್ರಕಾಶನಮಂದಿರದ ಅಧ್ಯಕ್ಷರಾಗಿದ್ದರು. ಅದರ ಕಾರ್ಯಕಾರೀ ಸಮಿತಿಯಲ್ಲಿ ಪ್ರಮುಖರಾಗಿದ್ದವರು ಜಿ. ಎಸ್. ಬೊಮ್ಮೇಗೌಡರು. ಟಿ. ಎನ್. ಜವರಪ್ಪಗೌಡರು ಮತ್ತು ಪಿ. ಎಸ್. ಭಟ್ಟರು. ಸಿದ್ಧವ್ವನಹಳ್ಳಿ ನಿಜಲಿಂಗಪ್ಪನವರ ಮುಖ್ಯಮಂತ್ರಿತ್ವದಲ್ಲಿ ರೂಪುಗೊಂಡ ಸಚಿವ ಸಂಪುಟವನ್ನು ಶಂಕರಗೌಡರು ಸೇರಿದರು. ಸಚಿವರಾದ ಮೇಲೆ ಸಹಕಾರೀ ಪ್ರಕಾಶನ ಮಂದಿರದ ಅಧ್ಯಕ್ಷಸ್ಥಾನವನ್ನು ಬಿಟ್ಟುಕೊಟ್ಟರು.

ನಿರ್ದೇಶಕ ಸ್ಥಾನದಲ್ಲಿ ಪಿ. ಎಸ್. ಭಟ್ಟರಿದ್ದರು. "ನಿರಂಜನ ನೀವು ಅಧ್ಯಕ್ಷರಾಗಿ" ಎಂದರು ಶಂಕರಗೌಡರು. ನಾನು ಒಪ್ಪಲಿಲ್ಲ. "ಈ ಸ್ಥಾನ ಮಂಡ್ಯಕ್ಕೆ ಮೀಸಲು" ಎಂದೆ. ಜವರಪ್ಪಗೌಡರು ಪತ್ರಿಕೋದ್ಯೋಗಿ. ಯಾವ ಕಾರ್ಯಕ್ಷೇತ್ರ ಅವರನ್ನು ಕರೆಯುತ್ತಿತ್ತೊ ? ಮುಖದಿಂದ ಮುಖಕ್ಕೆ ದೃಷ್ಟಿಹರಿಸಿದೆ. "ಅಧ್ಯಕ್ಷ ಸ್ಥಾನಕ್ಕೆ ಬೊಮ್ಮೇಗೌಡರನ್ನು ಸೂಚಿಸುತ್ತೇನೆ" ಎಂದೆ. ಶಂಕರಗೌಡರು, "ಆಗಲಿ ನೀವು ಸಂಪಾದಕರಾಗಿ" ಎಂದರು. ನಾನು ಒಪ್ಪಿದೆ.

ಇಬ್ಬರು ಮಾನ್ಯ ಮಿತ್ರರು ಬರೆದಿರುವ ಪತ್ರದಲ್ಲಿ ಹೀಗಿದೆ :

"ಮಂಡ್ಯಜಿಲ್ಲೆಯ ಸ್ವಾತಂತ್ರ್ಯಸಂಗ್ರಾಮ, ಪತ್ರಿಕೋದ್ಯಮ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ನಿಸ್ವಾರ್ಥಸೇವೆ ಸಲ್ಲಿಸಿದ ಹಿರಿಯರಲ್ಲಿ ಶ್ರೀ ಟಿ.ಎನ್. ಜವರಪ್ಪಗೌಡರದು ಪ್ರಧಾನವಾಗಿ ಕಾಣುವ ಹೆಸರು. ಭಾರತೀಯ ಸ್ವಾತಂತ್ರ್ಯಸಂಗ್ರಾಮದಲ್ಲಿ ಅನೇಕ ವರ್ಷಗಳಕಾಲ ಜೈಲುವಾಸ ಅನುಭವಿಸಿದವರು ಯಾವುದೇ ಪ್ರಮುಖ ಸಾರ್ವಜನಿಕ ಕೆಲಸಗಳಲ್ಲಿ ಶ್ರೀ ಗೌಡರದು ಸಕ್ರಿಯ ಪಾತ್ರ... ಒಳ್ಳೆಯ ಮಾತುಗಾರರು, ಸಾಹಿತ್ಯ ಸಂಸ್ಕೃತಿ ಪ್ರಿಯರು ..."

ಇಂಥ ಹಿರಿಯ ವ್ಯಕ್ತಿ 1970ರಲ್ಲಿ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಮಂಡಳಿಯ ಅಧ್ಯಕ್ಷರಾದರು. ಮೈಸೂರಿನಲ್ಲಿ ಇವರ ಕೇಂದ್ರ ಕಾರ್ಯಾಲಯ.

ಓದು ಕಲಿಯುವವರಿಗೂ ಓದು ಬಲ್ಲವರಿಗೂ ಶ್ರೇಷ್ಠ ಪುಸ್ತಕಗಳು ಬೇಕು. ಹೆಚ್ಚುಕಡಮೆ ಜವರಪ್ಪಗೌಡರು ಪುಸ್ತಕದ ಅಂಗಡಿಗಳಿಗೆ ಹೋಗದ ದಿನವಿಲ್ಲ. ದೃಷ್ಟಿಗೆ ಬಿದ್ದ ಪುಸ್ತಕಗಳನ್ನು ಅವರು ಪರೀಕ್ಷಿಸಬೇಕು. ಒಳ್ಳೆಯ ಪುಸ್ತಕಗಳಿದ್ದರೆ ಅಂಗಡಿಕಾರ ಶಿಕ್ಷಣ ಮಂಡಳಿಗೆ ತುಸು ಕಡಮೆ ಬೆಲೆಗೆ ಅವನ್ನು ಕೊಡಬೇಕು.

1971ರ ಯುಗಾದಿಯಂದು 'ನಾನು ಪುಸ್ತಕ ವ್ಯಾಪಾರಿ'ಯಾದೆ. ಹಿಂದಿನ ವಾರ ಬೆಂಗಳೂರಿನಲ್ಲಿ ಭೇಟಿಯಾದಾಗ, "ಯುಗಾದಿಯ ದಿನ ಮೈಸೂರಿಗೆ ಬರುತ್ತೇನೆ.

ವಿಶ್ವವಿದ್ಯಾನಿಲಯದ ಸೆನೆಟ್ ಸಭೆ ಇದೆ'' ಎಂದೆ.

ಜವರಪ್ಪಗೌಡರೆಂದರು :

''ನಾನು ನಾಳೆ ಅಲ್ಲಿರುತ್ತೇನೆ. ಡಾ. ಅನುಪಮಾರ 'ತಾಯಿ–ಮಗು' ಐದು ನೂರು ಪ್ರತಿ ಬೇಕು. ಆದಷ್ಟು ಸೋಡಿ ಬಿಡಿ.''

ಆ ಆವೃತ್ತಿ ಮೂರನೆಯದು. ನಾನು ಪ್ರಕಟಿಸಿದ್ದು. ಕಾರಿನ ಹಿಂದಿನ ಸೀಟು ತುಂಬ ಐನೂರು ತಾಯಿ–ಮಗು ಪೇರಿಸಿ, ಮಾರನೆಯ ದಿನ ಮೈಸೂರು ತಲಪಿದೆ. ಕಚೇರಿಯಲ್ಲಿ ಅನೇಕರು ಅವರ ದಾರಿ ನೋಡುತ್ತಿದ್ದರು.

''ಸಭೆ ಮುಗಿಸಿ ಬೆಂಗಳೂರಿಗೆ ವಾಪಸಾಗುವಾಗ ಬರ್ತೇನೆ'' ಎಂದು ಹೇಳಿ, ತುತ್ತು ಊಟ ಮುಗಿಸಿ, ಕ್ರಾಫರ್ಡ್‌ಹಾಲ್‌ಗೆ ಹೋದೆ. ಬದುಕು ತಮಾಷೆಯಾಗಿರುತ್ತದೆ. ಅದು ಬಜೆಟ್ ಅಧಿವೇಶನ. ನನ್ನ ಭಾಷಣ ಮುಗಿಸಿ ಕುಳಿತೆ.

ಇನ್ನು ಸ್ವಲ್ಪಹೊತ್ತಿನಲ್ಲಿ ಮೈಸೂರು ಮೆಡಿಕಲ್ ಕಾಲೇಜಿಗೆ ಹೋಗಬೇಕು. ಅಲ್ಲಿನ ಕನ್ನಡಸಂಘದ ಆಶ್ರಯದಲ್ಲಿ ಒಂದು ಭಾಷಣದ ಕಾರ್ಯಕ್ರಮವಿತ್ತು. ಅಲ್ಲಿಗೆ ಹೊರಡುವುದಕ್ಕೆ ಮುನ್ನ ಮುಖಕ್ಕೆ ನೀರು ಹನಿಸೋಣ ಎಂದು ಏಳಲು ಸಿದ್ಧನಾದೆ. ಎಷ್ಟು ತಮಾಷೆ ಬದುಕು ! ಎಡಗೈಗೂ ಎಡಗಾಲಿಗೂ ಏನೋ ಆಗಿತ್ತು. ಅತ್ತ ಬಂದ ಸೆನೆಟ್ ಸದಸ್ಯ ಡಾ. ತಿಮ್ಮೇಗೌಡರನ್ನು ಹತ್ತಿರಕ್ಕೆ ಕರೆದು ಕಷ್ಟ ತಿಳಿಸಿದೆ. ಅವರು ಆಸ್ಪತ್ರೆಯಿಂದ ಆಂಬ್ಯುಲೆನ್ಸ್ ಕರೆಸಿದರು. ಆಸ್ಪತ್ರೆಯಲ್ಲಿ ಒಂದು ಮಂಚದ ಮೇಲೆ ಮುಂದೆ ಶಯನ. ನನಗೆ ಲಕ್ವ ಹೊಡೆದಿತ್ತು. ಎಡಗೈ ಎಡಗಾಲು ಚಲನೆ ಕಳೆದು ಕೊಂಡಿದ್ದುವು. ಅರ್ಧ ಎಚ್ಚರ, ಅರ್ಧ ನಿದ್ದೆ.

ಜವರಪ್ಪಗೌಡರಿಗೆ ಸುದ್ದಿ ತಲುಪಿರಬೇಕು. ಅವರು ಕೃಷ್ಣಮೂರ್ತಿಪುರದಲ್ಲಿದ್ದ ಕಚೇರಿಯಿಂದ ಹೊರಟು ಆಸ್ಪತ್ರೆಗೆ ಬಂದರು. 'ತಾಯಿ–ಮಗು' ಪುಸ್ತಕದ ಐನೂರು ಪ್ರತಿಗಳಿಗೋಸ್ಕರ ಸಂದಾಯವಾಗಬೇಕಾದ ಹಣಕ್ಕೆ ಚೆಕ್ ತಂದಿದ್ದರು.

ಆ ಪುಸ್ತಕದ ಬೆಲೆ ಕೇವಲ ಐದುರೂಪಾಯಿ. ಆ ದಿನ ಜವರಪ್ಪಗೌಡರು ಸೋಡಿ ಸ್ವೀಕರಿಸದೆಯೇ ಪಣ ಸಂದಾಯ ಮಾಡಿದರು. ಅನುಪಮಾ ಆ ಚೆಕ್ ಪಡೆದರು.

ಆತಂಕದ ಎರಡುಮೂರು ದಿನಗಳು. ಮೂರನೆಯ ದಿನ ರಾಮಕೃಷ್ಣಹೆಗಡೆಯವರೂ ಶಂಕರಗೌಡರೂ ಬೊಮ್ಮೇಗೌಡರ ಜತೆ ಜವರಪ್ಪಗೌಡರೂ ಬಂದರು. ಎಷ್ಟೊಂದು ಸ್ನೇಹಜೀವಿಗಳ ಜತೆಗಾರ ಕರ್ಮಯೋಗಿ ಜವರಪ್ಪಗೌಡರು !

ನಿರಂಜನ



# ಅಸಾಧಾರಣ ಸಾಧನೆ

ಶ್ರೀಮಾನ್ ಪಿ. ಎನ್. ಜವರಪ್ಪಗೌಡರು ತಮ್ಮ ಪರಿಶ್ರಮ, ದುಡಿಮೆ, ನಿಸ್ವಾರ್ಥ ಸೇವೆಯಿಂದ ಒಬ್ಬ ಸಾಧಾರಣ ವ್ಯಕ್ತಿ ಅಸಾಧಾರಣ ಸಾಧನೆಯನ್ನು ಮಾಡ ಬಹುದೆಂಬುದಕ್ಕೆ ಸಾಕ್ಷಿಯಾಗಿದ್ದಾರೆ. ಅವರಿಗೆ ಕಾಲೇಜಿನ ಶಿಕ್ಷಣ ದೊರಕದಿದ್ದರೂ ಸ್ವಾತಂತ್ರ್ಯ ಹೋರಾಟದಲ್ಲಿ ಹಿರಿಯ ಕಾಂಗ್ರೆಸ್ ನಾಯಕರ ಜೊತೆಯಲ್ಲಿ ಶಿವಮೊಗ್ಗ ಜೈಲಿನಲ್ಲಿ ಇದ್ದು, ವಿದ್ಯಾಭ್ಯಾಸಕ್ಕಿಂತಲೂ ಹೆಚ್ಚಿನ ಅನುಭವ, ತ್ಯಾಗಮನೋಭಾವ, ದೇಶಪ್ರೇಮ, ಅವಿಶ್ರಾಂತ ದುಡಿಮೆ ಮೊದಲಾದವುಗಳನ್ನು ಮೈಗೂಡಿಸಿ ಕೊಂಡರು ಎಂದರೆ ಅತಿಶಯೋಕ್ತಿಯಾಗಲಾರದು. ನನ್ನ ಹಿರಿಯ ಸಹೋದರ ದಿವಂಗತ ಪಿ. ವೆಂಕಟಗಿರಿಯಪ್ಪನವರು ಸ್ವಾತಂತ್ರ್ಯಹೋರಾಟದಲ್ಲಿ ಮಡಿದ ನಂತರ ನನ್ನನ್ನು ಕಾಂಗ್ರೆಸ್ಸಿಗೆ ಸೇರಿಸಲು ಪ್ರಯತ್ನಿಸಿದರು. ನಮ್ಮ ಅಣ್ಣನವರ ಸಂಸಾರದ ಜವಾಬ್ದಾರಿ ತುಂಬಾ ಹಿರಿದಾದ್ದರಿಂದ, ನಾನು ಕಾಂಗ್ರೆಸ್ಸಿಗೆ ಸೇರಲು ಹಿಂದು ಮುಂದು ನೋಡು ತ್ತಿದ್ದ ಕಾಲದಲ್ಲಿ ನನಗೆ ಪ್ರೋತ್ಸಾಹಿಸಿ, ಸ್ಫೂರ್ತಿಯನ್ನು ಕೊಟ್ಟು ಕಾಂಗ್ರೆಸ್ಸು ಸೇರು ವಂತೆ ಮಾಡಿದ್ದು ನನ್ನ ಮಿತ್ರ ಜವರಪ್ಪಗೌಡರು. ನನ್ನನ್ನು ತಾಲ್ಲೋಕು ಕಾಂಗ್ರೆಸ್ಸು ಅಧ್ಯಕ್ಷನಾಗಿ, ಜಿಲ್ಲಾ ಕಾಂಗ್ರೆಸ್ಸು ಸದಸ್ಯನಾಗಿ ನನ್ನ ಅಲ್ಪ ಸೇವೆ ಸಲ್ಲಿಸಲು ಕಾರಣ ಕರ್ತರಾದರು. ಇದೇ ಅಲ್ಲದೇ ವರುಣಾನಾಲೆ ಇನ್ನೂ ಮುಂತಾದ ಹೋರಾಟಗಳಲ್ಲಿ ಭಾಗವಹಿಸಲು ಸ್ಫೂರ್ತಿ ನನಗೆ ಬಂದಿದ್ದು ಮಾನ್ಯ ಶ್ರೀ ಜವರಪ್ಪಗೌಡರ ಮುಂದಾಳತ್ವ, ತಮ್ಮೊಡನೆ ಇತರರನ್ನು ಕರೆದೊಯ್ಯುವ ರೀತಿ ನೀತಿಗಳೇ ಕಾರಣ ಗಳಾಗಿದ್ದವು. ಇವರು ಬೆಂಗಳೂರಿನಲ್ಲಿ ವಿಶ್ವಾಮಿತ್ರ ಎಂಬ ಪತ್ರಿಕೆಯನ್ನು ನಡೆಸು ತ್ತಿದ್ದಾಗ ಅವರನ್ನು ಭೇಟಿಯಾದಾಗ, ಎಂತಹ ಬಡತನದಲ್ಲೂ ಎದ್ದು ಕಾಣುತ್ತಿದ್ದ ಅವರ ಧೈರ್ಯಸ್ಥೈರ್ಯಗಳೂ ಇಂದೂ ನನ್ನ ಕಣ್ಣುಮುಂದೆ ಹಚ್ಚ ಹಸುರಾಗಿದೆ. ಅವರು ಹಿರಿಯ ಕಾಂಗ್ರೆಸ್ ಸ್ನೇಹಿತರ ಜೊತೆ ನಡೆದುಕೊಳ್ಳುವ ರೀತಿ, ಅವರ ಚಾಕಚಕ್ಯತೆಗಳನ್ನು ನೋಡಿ ಬೆರಗಾಗುತ್ತಿದ್ದೆ.

ಕಾಂಗ್ರೆಸ್ ಸಂಸ್ಥೆಯಲ್ಲಿ ಸದಸ್ಯತ್ವದ ಬಗ್ಗೆ ಭಿನ್ನಾಭಿಪ್ರಾಯ ಬಂದು ಶ್ರೀ ಮಾಧವನ್‌ನಾಯರ್ ಎಂಬುವರನ್ನು ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯವರು ಮಂಡ್ಯ ಜಿಲ್ಲೆಯ ಕಾಂಗ್ರೆಸ್ ಸದಸ್ಯತ್ವದ ಬಗ್ಗೆ ಇರುವ ವಿವಾದದ ಸತ್ಯಾಂಶಗಳನ್ನು ತಿಳಿಯಲು ನೇಮಕ ಮಾಡಿದರು. ಆಗ ಮಾನ್ಯ ಜವರಪ್ಪಗೌಡರು ಬಹಳ ಜಾಣತನ ದಿಂದ ಎಲ್ಲರ ಮೆಚ್ಚಿಗೆ ಪಡೆಯ ತಕ್ಕ ಸತ್ಕಾರ್ಯಕಾರ್ಯವನ್ನು ಮಾಡಿದಾಗ, ಶ್ರೀ ಮಾಧವನ್‌ನಾಯರ್‌ರವರಿಗೂ ಬಹಳ ತೃಪ್ತಿಯಾಯಿತು. ಹಾಗೆಯೇ ಮಂಡ್ಯ

ಜಿಲ್ಲೆಯವರಲ್ಲಿ ಸುಪ್ತವಾಗಿರುವ ಪ್ರತಿಭೆಗಳಿಗೆ ಪ್ರೋತ್ಸಾಹ ಕೊಟ್ಟು ಅನೇಕರು ನಾಯಕರು, ಮುಖಂಡರು ಆಗಲು ಕಾರಣ ಕರ್ತರಾದರು.

ನಾನು ಶ್ರೀಮತಿ ಜವರಪ್ಪಗೌಡರ ಬಗ್ಗೆ ಬರೆಯದೇ ಹೋದರೆ ಕರ್ತವ್ಯ ಲೋಪವಾಗುತ್ತದೆಂದು ಭಾವಿಸುತ್ತೇನೆ. ಶ್ರೀಮತಿ ಜವರಪ್ಪಗೌಡರು ಬಡತನದಲ್ಲಿ ಪಟ್ಟಿರುವ ಕಷ್ಟನಷ್ಟಗಳು ಸ್ವಲ್ಪವಲ್ಲ. ಅವರ ಮನೆಗೆ ಬರುವ ಅತಿಥಿಗಳಿಗೆ ಉದಾರವಾಗಿ ಉಪಚಾರ ಮಾಡುವುದನ್ನು ಕಂಡು ನಾನು ಅವರ ಮನೆಗೆ ಹೋದಾಗಲೆಲ್ಲ ಅವರನ್ನು "ಅನ್ನಪೂರ್ಣಮ್ಮ" ಎಂಬ ಹೆಸರಿನಿಂದ ಕರೆಯುತ್ತಿದ್ದೆ.

ಆದಿ ಚುಂಚನಗಿರಿ ಮಠಕ್ಕೆ ಮಂಡ್ಯ ನಗರದಲ್ಲಿ ಕಟ್ಟಿರುವ ಕಟ್ಟಡದ ಸೈಟನ್ನು ದೊರಕಿಸಿ ಕೊಡುವುದರಲ್ಲಿ ಮಾನ್ಯ ಪಿ. ಎನ್. ಜವರಪ್ಪಗೌಡರ ಪ್ರಯತ್ನ ಅಲ್ಪಸ್ವಲ್ಪವಲ್ಲ. 1948ರಲ್ಲಿ ನಾನು ಮಂಡ್ಯನಗರ ಸಭೆಯ ಉಪಾಧ್ಯಕ್ಷನಾಗಿದ್ದಾಗ, ಆ ಸೈಟು ಕೈತಪ್ಪಿ ಹೋಗುವ ಸಂದರ್ಭ ಬಂದಾಗ, ಮಾನ್ಯ ಜವರಪ್ಪಗೌಡರಿಗೆ ಸೂಚನೆ ಕೊಟ್ಟು, ಆಗ ಆದಿ ಚುಂಚನಗಿರಿ ಮಠದ ಚಿಕ್ಕಸ್ವಾಮಿಗಳಾಗಿದ್ದ ಶ್ರೀ ಶ್ರೀ ಶ್ರೀ ಚಂದ್ರಶೇಖರ ನಾಥಜೀ ಸ್ವಾಮಿಯವರನ್ನು ಕರೆಯಿಸಿ ಆ ಸೈಟು ಮಠಕ್ಕೆ ಸೇರುವಂತೆ ಮಾಡಿದವರು ಶ್ರೀ ಜವರಪ್ಪಗೌಡರು. ಇವತ್ತಿಗೂ ನೂರಾರು ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಗಳಿಗೆ ಅನುಕೂಲವಾಗಿದ್ದು ವಿದ್ಯಾರ್ಜನೆಗೆ ಅನುಕೂಲವಾಗಿದೆ. ಇದಕ್ಕಾಗಿ ಶ್ರೀ ಜವರಪ್ಪಗೌಡರು ನನ್ನನ್ನು ಆದಿಚುಂಚನಗಿರಿ ಮಠಕ್ಕೆ ಕರೆದುಕೊಂಡು ಹೋಗಿ ಆಶೀರ್ವಾದ ಕೊಡಿಸಿದರು.

ಇವರು ವಯಸ್ಕರಶಿಕ್ಷಣ ಸಮಿತಿ ಅಧ್ಯಕ್ಷರಾಗಿದ್ದು ಮಾಡಿದ ಅಪಾರ ಸೇವೆಯಿಂದ ಇಡೀ ಕರ್ನಾಟಕಕ್ಕೆ ಮಾತ್ರವಲ್ಲ ಅಖಿಲ ಭಾರತ ಮಟ್ಟದಲ್ಲೂ ಕೀರ್ತಿ ಬರುವಂತಾಯಿತು. ಇವರ ಬಗ್ಗೆ ನನ್ನ ಮಂಡ್ಯದ ಸ್ನೇಹಿತರು, ನಾಯಕರು ಹೆಚ್ಚಿಗೆ ತಿಳಿದಿದ್ದು ನನಗಿಂತಲೂ ಹೆಚ್ಚಾಗಿ ಬರೆದಿದ್ದಾರೆಂದು ಭಾವಿಸುತ್ತೇನೆ.

ಎಂತಹ ಸಂದರ್ಭದಲ್ಲೂ ಬಹಳ ತಾಳ್ಮೆಯಿಂದ, ಜಾಣತನದಿಂದ ಬಹಳ ಕಷ್ಟ ಕಾಲದಲ್ಲೂ ಕೆಲಸವನ್ನು ನಿಭಾಯಿಸುತ್ತ ಬಹಳ ಸ್ನೇಹಪರರಾಗಿ ವಿರೋಧಪಕ್ಷದ ನಾಯಕರಿಂದಲೂ ಮನ್ನಣೆಪಡೆದು ಕೀರ್ತಿಶಾಲಿಯಾಗಿರುವ ಮಾನ್ಯ ಶ್ರೀ ಜವರಪ್ಪ ಗೌಡರಿಗೆ ಮತ್ತು ಅವರ ಕುಟುಂಬವರ್ಗದವರಿಗೆ ದಯಾಮಯನಾದ ಭಗವಂತನು ಆಯುರಾರೋಗ್ಯ ಐಶ್ವರ್ಯಗಳನ್ನು ದಯಪಾಲಿಸಲಿ ಎಂದು ಈ ಸಂದರ್ಭದಲ್ಲಿ ಹಾರೈಸುತ್ತೇನೆ.

ಪಿ. ಶ್ರೀನಿವಾಸಯ್ಯ



# ಸ್ಫೂರ್ತಿಯ ಚಿಲುಮೆ

"ಆಡು ಮುಟ್ಟದ ಸೊಪ್ಪಿಲ್ಲ" ಎಂಬ ನನ್ನ ಹಳ್ಳಿಯ ಗಾದೆ ಮತ್ತು ಜವರಪ್ಪ ಗೌಡರ ಬಾಳಿನಲ್ಲಿ ಬಹಳಷ್ಟು ಹೊಂದಿಕೊಳ್ಳುತ್ತದೆ. ಮನುಷ್ಯ ಸಾಮಾನ್ಯವಾಗಿ ಈ ಸಮಾಜ ಮತ್ತು ಜನರು ನನಗೆ ಏನು ಮಾಡಿದ್ದಾರೆ ಎಂದು ಕೇಳುತ್ತಾನೆಯೇ ಹೊರತು ನಾನು ಈ ಸಮಾಜ ಮತ್ತು ಜನಕ್ಕೆ ಏನು ಮಾಡಿದ್ದೇನೆ? ಎಂಬುದನ್ನು ಪ್ರಶ್ನಿಸಿಕೊಳ್ಳುವುದಿಲ್ಲ. ಈ ಕೊನೆಯ ಪದ ಜವರಪ್ಪಗೌಡರಿಗೆ ಅನ್ವಯಿಸುತ್ತದೆ. ತಾನು ನಂಜುಂಡು ಬಹಳ ಕಷ್ಟಗಳನ್ನು ಅನುಭವಿಸಿದರೂ ಬೇರೆಯವರ ಬದುಕಿಗೆ ಅವರ ಅಸಹಾಯಕತೆಗೆ ಆಧಾರವಾಗುವ ವ್ಯಕ್ತಿತ್ವ ಇವರದು.

ನಮ್ಮಿಬ್ಬರದು ಬಹಳ ಹತ್ತಿರದ ಹಳ್ಳಿಗಳಾದರೂ ನನ್ನ ಅವರ ಪರಿಚಯ ನಾನು ಮಂಡ್ಯಕ್ಕೆ ಬಂದ ನಂತರದ ಗೆಳೆತನ. ಪಾಲಗ್ರಹಾರದ ತಂದೆ ನರಸೇಗೌಡರು ತಾಯಿ ಪಕ್ಕದ ಕೆಂಚೇಗೌಡನ ಕೊಪ್ಪಲು ಗ್ರಾಮದ ದಾಸೇಗೌಡರ ಮಗಳು ತಿಮ್ಮಮ್ಮನವರ ಮಗನಾಗಿ ಹುಟ್ಟಿ ಊರಿನಲ್ಲಿ ಪ್ರಾಥಮಿಕಶಿಕ್ಷಣದವರೆಗೂ ವಿದ್ಯಾಭ್ಯಾಸ ಮುಗಿಸಿ ನಂತರ 15ನೆಯ ವಯಸ್ಸಿನವರೆಗೆ ನಾಗಮಂಗಲದಲ್ಲಿ ಬಹುಶಃ ಆಗಿನ 6ನೆಯ ಇಯತ್ತೆವರೆಗೆ ಓದಿದ್ದ ನೆನಪು. ಆಗಲೇ ಕಾಂಗ್ರೆಸ್ ಸಂಸ್ಥೆಯ ಗೆಳೆತನ ಮತ್ತು ಸಂಘಟನೆಗೆ ತೊಡಗಿಸಿಕೊಂಡಿದ್ದು, ಎಲ್ಲಿ ಮಗ ದಾರಿ ಬಿಟ್ಟು ಹೋಗುವನೋ ಎಂದು ತಿಳಿದ ತಂದೆ ಆಡುಕಾಯುವ ಕೆಲಸಕ್ಕೆ ನಿಯೋಜಿಸಿದ್ದರು. ಅಲ್ಲಿಯ ಆಡು ಗಳಿಗೆಲ್ಲ ಒಂದೊಂದು ಹೆಸರಿಟ್ಟು ತಾನು ಮತ್ತು ಸ್ನೇಹಿತರು ಊರು ಸುತ್ತ ಗಿಡ ನೆಡುವ ಕಾರ್ಯಕ್ರಮ ಹಾಕಿಕೊಳ್ಳುವುದು ಸಂಜೆ ಬರುವಾಗ ಆಡುಗಳಿಗೆ ಹೆಸರುಹಿಡಿದು ಕೂಗಿದರೆ ಬರುವಂತೆ ಬುದ್ಧಿ ಕಲಿಸಿ ಸೈಯೆನಿಸಿಕೊಂಡ ವ್ಯಕ್ತಿತ್ವ. ಮುಂದೆ ಊಟಿಗೆ ತೆರಳಿದ ಈತ ಅಂದಿನ ಆಂಗ್ಲರ ಜೊತೆ ಸೇರಿ ಸಿನಿಮಾ ಮಂದಿರವೊಂದರಲ್ಲಿ ದುಡಿದ ಅನುಭವ ಮತ್ತು ಅಲ್ಲಿದ್ದ ಐದು ವರ್ಷಗಳಲ್ಲಿ ಆಂಗ್ಲಭಾಷೆ ಮತ್ತು ತಮಿಳು ಭಾಷೆ ಗಳೆರಡರಲ್ಲೂ ಸಂಪೂರ್ಣ ಹಿಡಿತಗಳಿಸಿದರು, ಮುಂದೆ ಬೆಂಗಳೂರಿಗೆ ವಲಸೆ ಬಂದು ಹಾಸನದ ಕರೀಗೌಡರ ಬಳಿ ಇನ್ಸೂರೆನ್ಸ್ ಕಂಪನಿಗೆ ಸೇರಿ ನಂತರ ಅಲ್ಲಿಯೂ ಬಿಟ್ಟು ಮಂಡ್ಯಕ್ಕೆ ಬಂದ ಜವರಪ್ಪಗೌಡರು, ಶ್ರೀ ಸಿದ್ಧರಾಮು ಮತ್ತು ಸುಬ್ಬೇಗೌಡರ ಜೊತೆ ಸೇರಿದರು. ಇವರಿಬ್ಬರು ಆ ಕಾಲದ ಸ್ವಾತಂತ್ರ್ಯಚಳುವಳಿಯಲ್ಲಿ ತಮ್ಮನ್ನು ತಾವೇ ಸಮರ್ಪಿಸಿಕೊಂಡು ದುಡಿಯುತ್ತಿದ್ದ ಸಂದರ್ಭವು ಸಾಹಸಿ ಜವರಪ್ಪಗೌಡರನ್ನು ಇವರಿಬ್ಬರ ಸಹವಾಸಕ್ಕೆ ಆಕರ್ಷಿಸಿತೆಂದರೆ ತಪ್ಪಲ್ಲ.

1983ರಲ್ಲಿ ಮೈಸೂರಿನಲ್ಲಿ ನಡೆದ ಹ್ಯಾಮಿಲ್ಟನ್ ಸತ್ಯಾಗ್ರಹದಲ್ಲಿ ಭಾಗವಹಿಸಿ

ಬಂಧಿತರಾಗಿ ಸುಮಾರು 13 ತಿಂಗಳ ಜೈಲುವಾಸ ಅನುಭವಿಸಿದರು. ಅಲ್ಲಿಯೂ ಜವರಪ್ಪಗೌಡರ ಗಲಾಟೆ ತಡೆಯದೆ ಹಾಸನಕ್ಕೆ ಬದಲಾವಣೆ. ಅವಧಿ ಪೂರೈಸಿದ ನಂತರ ಬಿಡುಗಡೆಯಾಗಿ ಮಂಡ್ಯಕ್ಕೆ ಬಂದು ಆ ಕಾಲದ ಜನಪ್ರಿಯ 'ಜನವಾಣಿ' ಪತ್ರಿಕೆಯ ಏಜೆಂಟರಾಗಿ ಕೆಲಸಮಾಡುತ್ತಿದ್ದ ಜವರಪ್ಪಗೌಡರು ಮಂಡ್ಯ ಜಿಲ್ಲೆಯ ಜನರಲ್ಲಿ ಜಾಗೃತಿ ಮೂಡಿಸುವಂತೆ ವರ್ತಿಸುತ್ತಿದ್ದರು. 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಮತ್ತೆ ಜೈಲು ಸೇರಿ 9 ತಿಂಗಳು 26 ದಿವಸಗಳ ಕಾಲ ಸೆರೆಮನೆಗೆ ತೆರಳಿ ಬೆಂಗಳೂರು, ಶ್ರೀರಂಗಪಟ್ಟಣಗಳಲ್ಲಿ ಇದ್ದರು. ಈ ಮಧ್ಯೆ ಜಿಲ್ಲಾ ವಯಸ್ಕರಶಿಕ್ಷಣ ಸಮಿತಿಯ ಸಂಚಾಲಕರಾಗಿ ಕೆಲಸ ಮಾಡುತ್ತಿದ್ದು ಹಾಸನಕ್ಕೆ ವರ್ಗಾವಣೆಯಾಯಿತು, ಕೂಡಲೇ ಕೆಲಸಕ್ಕೆ ರಾಜಿನಾಮೆ ನೀಡಿದರು. 1947ರಲ್ಲಿ ಮೈಸೂರು ಜೈಲುವಾಸ. ಈ ಸಂದರ್ಭದಲ್ಲಿ ಶಿವಮೊಗ್ಗ ಮತ್ತು ತೀರ್ಥಹಳ್ಳಿಯಲ್ಲಿಯೂ ಸಹ ತುರಂಗವಾಸ ಅನುಭವಿಸಿದರು. ಈ ರೀತಿ ಜವರಪ್ಪಗೌಡರ ಬದುಕು ಒಂದು ರೀತಿಯಲ್ಲಿ ಸಾಹಸಪ್ರವೃತ್ತಿಯಿಂದ ಕೂಡಿರುತ್ತಿತ್ತು ಮತ್ತು ಈ ದೇಶವನ್ನು ಬ್ರಿಟಿಷರ ದಾಸ್ಯಸಂಕೋಲೆಯಿಂದ ಬಿಡಿಸಿ ಮುಕ್ತವಾಗಿಸಬೇಕೆಂದು ಅವರ ಮನಸ್ಸು ತಹತಹಿಸುತ್ತಿತ್ತು.

ಮೂಲತಃ ಬೇಸಾಯಗಾರ ಕುಟುಂಬದಿಂದ ಬಂದ ಜವರಪ್ಪಗೌಡರ ತಂದೆ ಗಣ್ಯವ್ಯಕ್ತಿಯಾಗಿದ್ದ ನರಸೇಗೌಡರು ಗ್ರಾಮದ ಯಜಮಾನರೂ, ಧರ್ಮ ಶ್ರದ್ಧೆಯುಳ್ಳವರೂ ಆಗಿದ್ದರು. ಸಾರ್ವಜನಿಕ ಕೆಲಸಗಳೆಂದರೆ ತಮ್ಮನ್ನು ತಾವೇ ಸಮರ್ಪಿಸಿಕೊಳ್ಳುತ್ತಿದ್ದ ತಂದೆಯ ಗುಣಗಳು ಮಗನಲ್ಲಿಯೂ ಕಂಡದ್ದು ಅಪರೂಪ ಏನಲ್ಲ.

ಶಿವಳ್ಳಿಯ ಹತ್ತಿರದ ಗದ್ದೆಯನ್ನು ಮಾರಿದ ಈ ಭೂಪತಿ, ಹೆಂಡತಿ ಕತ್ತಿನ ಚೈನನ್ನೂ ಬಿಡದೆ ಮಾರಿ 'ವಿಶ್ವಾಮಿತ್ರ' ಪತ್ರಿಕೆಯನ್ನು ಹೊರ ತಂದರು. ಅಷ್ಟೇ ಅಲ್ಲ, ಪತ್ರಿಕೋದ್ಯಮದಲ್ಲಿ ಹೊಸ ಆಯಾಮವನ್ನೇ ಸೃಷ್ಟಿಸಿ ಅಂದಿನ ಯಾವುದೇ ಲೋಪ ದೋಷವೆಸಗಿದವರ ಜಂಘಾಬಲವನ್ನೇ ಅಲ್ಲಾಡಿಸುತ್ತಿದ್ದ ರೀತಿ, ಅವರ ಮೊನಚು ಬರವಣಿಗೆ, ಚುಚ್ಚುಮಾತು ಎಲ್ಲರ ಪ್ರಶಂಸೆಗೆ ಪಾತ್ರವಾದದ್ದು ವಿಶೇಷ. ಇಂದಿಗೂ ಆ ಪತ್ರಿಕೆಯ ಗುಣಮಟ್ಟ ಈಗ ನಡೆದಂತೆ ನನ್ನ ಮನಸ್ಸಿನಲ್ಲಿ ಉಳಿದಿದೆ. ಅಷ್ಟೇ ಅಲ್ಲ, ಅಂದು ನಡೆದ ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಅಗ್ರಮಾನ್ಯ ಪಾತ್ರ ವಹಿಸಿದ್ದು ಜವರಪ್ಪಗೌಡರ ಕ್ರಿಯಾಶೀಲತೆಗೆ ಸಾಕ್ಷಿ. ಅದೇ ರೀತಿ ಪತ್ರಿಕೆಯು ವಿಶ್ವಾಮಿತ್ರಪಾತ್ರವನ್ನೇ ಮಾಡಿತು. ಅಂದು ಎಲ್ಲರ ಕೈಯಲ್ಲಿಯೂ ರಾರಾಜಿಸಿ, ಕಣ್ಣು ಹೊರಳಿಸುವಂತೆ ಮಾಡಿತು.

ನಾಡಿನ ಪ್ರಮುಖ ವ್ಯಕ್ತಿಗಳ ಭಾವಚಿತ್ರಗಳನ್ನು ಮಾಡಿಸಿ ಮುದ್ರಿಸುತ್ತಿದ್ದರು. ಮತ್ತೆ ಪತ್ರಿಕೆಯಲ್ಲಿಯೂ ಭಾವಚಿತ್ರಗಳಿಗೆ ಬಹಳ ಪ್ರಾಮುಖ್ಯತೆ ಕೊಟ್ಟಿದ್ದರು. ಯಾರಾದರೂ ಪ್ರಮುಖ ವ್ಯಕ್ತಿಗಳ ಚಿತ್ರ ಎಲ್ಲಿಯೂ ಸಿಗದಿದ್ದರೆ, ಜವರಪ್ಪಗೌಡರ ಮನೆಯ ಚಿತ್ರಭಂಡಾರದಲ್ಲಿ ಸಿಕ್ಕೇ ಸಿಗುತ್ತದೆ ಎಂಬ ನಂಬಿಕೆ,

"ನೇಯ್ಗೆಯುವರ ಬೆನ್ನು ಬೆತ್ತಲು" ಎಂಬುದು ಜವರಪ್ಪಗೌಡರಿಗೂ ಅನ್ವಯವಾಗುತ್ತದೆ. ಇಷ್ಟೆಲ್ಲ ಸಾಹಸ ಮಾಡಿದರೂ, ಉನ್ನತ ನಾಯಕರ ಸಹವಾಸವಿದ್ದರೂ ಆರ್ಥಿಕ ಪರಿಸ್ಥಿತಿ ಹದಗೆಟ್ಟಿತ್ತು. ಜೀವನೋಪಾಯಕ್ಕಾಗಿ ಮನೆಯಲ್ಲಿ ಹಸು ಕಟ್ಟಿ, ಹಾಲನ್ನು ಮಾರಿ ಅದರಿಂದ ಜೀವನ ಸಾಗಿಸುತ್ತಿದ್ದ ಸಂಸಾರದ ಸ್ಥಿತಿಗತಿಗಳನ್ನು ನೋಡಿದರೆ. ಜವರಪ್ಪಗೌಡರ ವ್ಯವಹಾರ ಮತ್ತು ಸಂಪರ್ಕ ಮಾಧ್ಯಮದಲ್ಲಿ ಉತ್ತಮ ಜೀವನ ಸಾಗಿಸುವುದು ಕಷ್ಟಕರವಾಗಿರಲಿಲ್ಲ. ಕೆಟ್ಟ ಮಾರ್ಗದ ಸಂಪಾದನೆಗೆ, ಅವರೆಂದೂ ಆಸೆಪಟ್ಟವರಲ್ಲ. ಅದೇ ರೀತಿ ಮುದ್ರಣಾಲಯ ಮತ್ತು ಹಳೆಯ ಪುಸ್ತಕಗಳನ್ನು ಕೊಂಡು ತಂದು ಮಾರುವ ಅಭ್ಯಾಸಗಳನ್ನು ಇಟ್ಟುಕೊಂಡಿದ್ದರು.

ಒಂದು ನೆನಪು ನನ್ನ ಮನಸ್ಸಿನಲ್ಲಿದೆ, ಅದೆಷ್ಟು ಸರಿಯೋ ತಪ್ಪೋ ನಾ ಕಾಣೆ. ಸ್ವಾತಂತ್ರ್ಯಚಳುವಳಿಯಿಂದಲೂ ಸಂಪರ್ಕವಿದ್ದ ಕೆಂಗಲ್ ಹನುಮಂತಯ್ಯನವರ ಮತ್ತು ಜವರಪ್ಪಗೌಡರ ಪರಿಚಯ ಬಹಳ ಚೆನ್ನಾಗಿತ್ತು. ಅವರು ಮುಖ್ಯಮಂತ್ರಿಗಳಾಗಿದ್ದ ಕಾಲ. ಪತ್ರಿಕೋದ್ಯಮಿ ಜವರಪ್ಪಗೌಡರು ಹನುಮಂತಯ್ಯನವರ ರೂಮಿಗೆ ಆಗಿಂದಾಗ್ಗೆ ಹೋಗುವ ವಾಡಿಕೆ. ಒಮ್ಮೆ ಮಾತುಕತೆಯ ಮಧ್ಯದಲ್ಲಿ ಪ್ರಭಾವಿ ಪತ್ರಿಕೋದ್ಯಮಿಗೆ ಸಹಾಯ ಮಾಡಿದಂತೂ ಆಗಿ ಅದರಿಂದ ತನ್ನನ್ನು ಟೀಕೆಯಿಂದಲೂ ಮುಕ್ತರನ್ನಾಗಿಸುವಂತೆಯೂ ಮತ್ತು ಗೌಡರ ಕಷ್ಟಕ್ಕೆ ಸಹಾಯ ಮಾಡಿದಂತೆಯೂ ಆಗಲೆಂದು ಸುಮಾರು 5000 ರೂಪಾಯಿಗಳ ಚೆಕ್ಕನ್ನು ಜವರಪ್ಪಗೌಡರಿಗೆ ನೀಡಲು ಬಂದಾಗ ಅವರ ಮುಖಕ್ಕೆ ವಾಪಸ್ಸು ಬಿಸಾಡಿ 'ಯಾರ ಹಂಗಿನಲ್ಲಿಯೂ, ಬಾಳಲು ನಾನಿಲ್ಲಿ ಬಂದಿಲ್ಲ' ಎಂಬುದನ್ನು ಹನುಮಂತಯ್ಯನಂತಹವರಿಗೆ ತೋರಿಸಿಕೊಟ್ಟ ವ್ಯಕ್ತಿತ್ವಗೆಳೆಯ ಜವರಪ್ಪಗೌಡರದು.

ತ್ರಿವಳಿಗಳಂತಿದ್ದ ಕೆ.ವಿ. ಶಂಕರಗೌಡರು ಮತ್ತು ದಿವಂಗತ ಜಿ.ಎಸ್. ಬೊಮ್ಮೇಗೌಡರು ಬಹಳ ಕಾಲ ಜವರಪ್ಪಗೌಡರನ್ನು ಬೆಂಗಳೂರಿನಲ್ಲಿ ಬಿಡದೆ ಮಂಡ್ಯಕ್ಕೆ ಕರೆತಂದರು. ಇಲ್ಲಿ ಮತ್ತೆ ಅಂಗಡಿ ಮತ್ತು ಪ್ರೆಸ್ ಪ್ರಾರಂಭ ಮಾಡಿದರು. ಅಂದಿನ ಎಲ್ಲ ಚಟುವಟಿಕೆಗಳಿಗೆ ಕೇಂದ್ರಸ್ಥಾನ ಜವರಪ್ಪಗೌಡರ ಅಂಗಡಿ, ಮಂಡ್ಯದ ಯಾವ ಪ್ರಮುಖರನ್ನು ಯಾರಾದರೂ ನೋಡಬೇಕೆಂದಲ್ಲಿ ಎಲ್ಲಿಯೂ ಸಿಗದಿದ್ದರೆ, ಜವರಪ್ಪಗೌಡರ ಅಂಗಡಿಯಲ್ಲಿ ಸಿಕ್ಕೇ ಸಿಗುತ್ತಿದ್ದರು. ಕಾರಣ ಎಲ್ಲ ಕಾರ್ಯಕ್ರಮಗಳನ್ನೂ ರೂಪಿಸುವುದು, ಏನನ್ನು ಹೇಗೆ ಮಾಡಬೇಕು ಎಂಬುದನ್ನು ಹಲವು ಸ್ನೇಹಿತರು ಕುಳಿತು ಸಮಾಲೋಚನೆ ನಡೆಸಿ ತೀರ್ಮಾನ ಕೈಗೊಳ್ಳುತ್ತಿದ್ದ ಒಂದು ರೀತಿಯ ಚಿಂತಕರ ಸಭೆ ಅದಾಗಿತ್ತು. ಚುನಾವಣೆಗಳೆಂದರೆ ಹೇಗೆ ಮಾಡಬೇಕು, ಯಾರನ್ನು ಭೇಟಿಯಾಗಬೇಕು ಎಂಬುದರಿಂದ ಹಿಡಿದು, ಎಲ್ಲ ಉಸ್ತುವಾರಿಗಳನ್ನು ಜವರಪ್ಪಗೌಡರು ತಾನೇ ನಿಂತಿದ್ದೇನೆ ಎಂಬುವಷ್ಟರ ಮಟ್ಟಿಗೆ ಬಹಳ ಅಚ್ಚುಕಟ್ಟಾಗಿ ಮಾಡುತ್ತಿದ್ದ ಕಲೆ ಅವರಿಗೆ ಕರಗತವಾಗಿತ್ತು. ಹಗಲು ರಾತ್ರಿ ಸ್ಫೂರ್ತಿಯ ಚಿಲುಮೆಯಾಗು

ತ್ತಿದ್ದರು. ವಿರೋಧಿಗಳ ತಂತ್ರಕ್ಕೆ ಪ್ರತಿತಂತ್ರ ರೂಪಿಸುವದು ಚುನಾವಣೆಗಳಲ್ಲಿ ಜವರಪ್ಪಗೌಡರ ಹೆಗ್ಗಳಿಕೆಯಾಗಿತ್ತು.

ಜವರಪ್ಪಗೌಡ ಎಂದರೆ ಆತ ಸುಳ್ಳನ್ನೇ ಹೇಳ್ತಾನೆ ಅನ್ನೋದನ್ನ ನಾನಿಲ್ಲಿ ಪ್ರಸ್ತಾಪ ಮಾಡದಿದ್ದರೆ ಸ್ನೇಹಿತನ ಮೇಲಿನ ವ್ಯಾಮೋಹ ಎಂದಾಗುತ್ತದೆ. ಸುಳ್ಳಿನಲ್ಲಿ ಎರಡು ಬಗೆ. ಒಂದು ಸ್ವಾರ್ಥಸಾಧಕ ಸುಳ್ಳು ಮತ್ತೊಂದು ಪರೋಪಕಾರಾರ್ಥ ಸುಳ್ಳು. ಈ ಎರಡನೆ ಬಗೆಯ ಸುಳ್ಳನ್ನು ಜವರಪ್ಪಗೌಡರು ಹೇಳುತ್ತಿದ್ದುದು ಸರಿ. ಎಂದಿಗೂ ತನ್ನ ಸ್ವಾರ್ಥ ಸಾಧಿಸಿಕೊಳ್ಳದೇ ಈ ಜಿಲ್ಲೆಯ ಸಮಾಜದ, ಸರ್ವತೋಮುಖ ಅಭಿವೃದ್ಧಿಗಾಗಿ ತವಕಪಡುತ್ತಿದ್ದ ಅವರ ಮನಸ್ಸು ಜನಜಾಗೃತಿ ಮೂಡಿಸುವಲ್ಲಿ ಸಂಘಟನೆಯಲ್ಲಿ ಚೈತನ್ಯ ತುಂಬುವಾಗ "ದೊಡ್ಡವರ ಬದುಕು ಧರ್ಮದಲಿ" ಎಂಬಂತೆ ಒಮ್ಮೊಮ್ಮೆ ಬೇಕಾದ ವ್ಯಕ್ತಿಯ ಬಗ್ಗೆ ಹುರಿದುಂಬಿಸಿ ಮಾತನಾಡುತ್ತಿದ್ದರು. ನಿಮ್ಮ ಧೈರ್ಯ–ಸ್ಥೈರ್ಯದ ಬಗ್ಗೆ ಕೊಂಡಾಡಿದರೆಂದು ಹೇಳಿ, ಒಬ್ಬ ವ್ಯಕ್ತಿಯಲ್ಲಿ ಮುದುಡಿ ಕೊಂಡಿದ್ದ ಚೈತನ್ಯಕ್ಕೆ ಕ್ರಿಯಾಶೀಲತೆಯನ್ನು ತುಂಬಿ, ಕಾರ್ಯೋನ್ಮುಖವಾಗುವಂತೆ ಮಾಡುತ್ತಿದ್ದುದು, ಜೊತೆಗೆ ಪತ್ರಿಕೆಗಳಲ್ಲಿ ಪ್ರಮುಖ ಸುದ್ದಿಯಾಗುವಂತೆ ಮಾಡಿದ, ಸರ್ಕಾರದ ಕಣ್ಣು ತೆರೆಸುವಂತೆ ಮಾಡುತ್ತಿದ್ದುದು ಜವರಪ್ಪಗೌಡರ ವ್ಯಕ್ತಿತ್ವ. ಅದೇ ರೀತಿ ತಾವು ಏನನ್ನಾದರೂ ಹೇಳಬೇಕಾದರೆ ಮೊದಲು ಅದನ್ನು ತಾವೇ ಮಾಡಿ ತೋರಿಸುತ್ತಿದ್ದುದು, ಅವರ ಮಾರ್ಗದರ್ಶನ ನೀತಿ. ಅವರ ಎಲ್ಲ ಮಕ್ಕಳ ಮದುವೆಗಳನ್ನು ಆಡಂಬರವಿಲ್ಲದ ಸರಳ ರೀತಿಯಲ್ಲಿ ಮಹಾಚೇತನ ಕುವೆಂಪುರವರ ಮಂತ್ರಮಾಂಗಲ್ಯದ ರೀತಿಯಲ್ಲಿ ನಡೆಸಿದುದು ಎಲ್ಲರಿಗೂ ತಿಳಿದಿದೆ.

ಜವರಪ್ಪಗೌಡರಿಗೆ ಹಳ್ಳಿಯ ಒಡನಾಡಿತನವು ಇತ್ತು. ಗ್ರಾಮಕ್ಕೆ ಆಗಾಗ್ಗೆ ಹೋಗಿ ಬರುವುದು ವಾಡಿಕೆ. ಜವರಪ್ಪಗೌಡರಿಗೆ ಯಾರಾದರೂ ಏನನ್ನಾದರೂ ಹೇಳಿದರೆ, ಅದನ್ನು ಬಹಳ ಬೇಗ ನಂಬಿ ಬಿಡುವ ಮನುಷ್ಯ. ಅವರು ಹೇಳಿದ್ದು ಸರಿಯೇ, ತಪ್ಪೇ, ಅವರು ಯಾಕಾಗಿ ಇದನ್ನು ಹೇಳಿದರು ಎಂಬುದನ್ನು ಪರಿಶೀಲಿಸಿ ನೋಡಬೇಕೆಂಬ ತಾಳ್ಮೆ ಕಡಿಮೆ. "ಬಟ್ಟೆನಲ್ಲಿ ಎತ್ತು ಕರು ಹಾಕಿತು ಎಂದರೆ ಕೊಟ್ಟಿಗೆಗೆ ಕಟ್ಟು" ಎಂಬಂತೆ ಒರೆ ಹಚ್ಚಿ ನೋಡುವ ಹವ್ಯಾಸ ಜವರಪ್ಪಗೌಡರಿಗೆ ಕಡಿಮೆ. ಬಹಳ ಅನಾಹುತಕ್ಕೆ ಎಡೆಯಾದರೂ, ನಿಧಾನವಾಗಿಯಾದರೂ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಿರಬಹುದು ಎಂಬುದು ನನ್ನ ಅನಿಸಿಕೆ.

ಜವರಪ್ಪಗೌಡರ ಬಾಳಿನಲ್ಲಿ ಒಂದು ಅರ್ಥ ಬರಬೇಕಾದರೆ, ಗಂಡನ ಹೆಸರು ಒಳ್ಳೆಯದಾಗಿರಬೇಕಾದರೆ, ಆ ಮನೆಯ ಗರತಿಯ ಪಾತ್ರ ಬಹಳ ಮುಖ್ಯ."ಏನಪ್ಪಾ? ಇದಾನೇನಪ್ಪಾ ?" ಎಂದು ಹೊರಗೆ ಕೂಗಿದರೆ, ಬಹಳ ಗೌರವಯುತವಾಗಿ "ಒಳಗೆ ಬನ್ರಣ್ಣ" ಎಂದು ಕರೆದು, ನೋವಿರಲಿ, ನಂಜಿರಲಿ ಗಂಡನ ಪಾಲಿನಲ್ಲಿ ಸಮಪಾಲಾಗಿ ನಿಂತು ಬಂದವರನ್ನು ಬಂದಂತೆ ಕಳಿಸದೆ, ಆ ಮನೆಯ ಅತಿಥಿಸತ್ಕಾರವನ್ನು ನೀಡಿದ

ಸೋದರಿ ಪಾರ್ವತಮ್ಮ ಅನ್ನಪೂರ್ಣೆ. ಯಾವಾಗಲೂ ನಗುನಗುತ್ತ ಬಂದವರ ಯೋಗಕ್ಷೇಮ ವಿಚಾರಿಸಿ, ದೀಪ ತಾನು ಉರಿದು ಬೇರೆಯವರಿಗೆ ಬೆಳಕನ್ನು ನೀಡುವಂತೆ ಮನೆಯಲ್ಲಿ ಇದೆಯೋ ಇಲ್ಲವೋ ಎಂಬುದನ್ನು ಮರೆತು ಬಂದವರಿಗೆ ಸಮೃದ್ಧವಾದ ಸತ್ಕಾರ ನೀಡಿದರು. ಆತಿಥ್ಯ ಪಡೆದವರು ಆ ಮನೆಯ ಆದರ್ಶತೆಯನ್ನು ಮರೆಯಲಾರರು. ಆದರ್ಶಗೃಹಿಣಿಗೆ ಇರಬೇಕಾದ ಎಲ್ಲ ನಡತೆಗಳನ್ನು ಪಾರ್ವತಮ್ಮ ನಲ್ಲಿ ಕಾಣಬಹುದು.

**ಕೆ. ಸಿಂಗಾರಿಗೌಡ**



# ಪುಟವಿಟ್ಟ ಚಿನ್ನ

ಜವರಪ್ಪಗೌಡರು ಮಂಡ್ಯಜಿಲ್ಲೆಯ ಅತ್ಯಂತಹಿರಿಯ ನಿಸ್ವಾರ್ಥ ಸಮಾಜ ಸೇವಕರೆಂಬುದು ನಿರ್ವಿವಾದ. ಮಂಡ್ಯದ ಜನತೆ ಸನ್ಮಾನಕ್ಕಾಗಿ ಆಯ್ಕೆ ಮಾಡಿರುವ ಈ ವ್ಯಕ್ತಿ ಪುಟವಿಟ್ಟ ಚಿನ್ನ. ಜವರಪ್ಪಗೌಡ ಎಂಬ ಹೆಸರು ಮಂಡ್ಯದಲ್ಲಿ ಮಾತ್ರವಲ್ಲ ಇಡೀ ಕರ್ನಾಟಕದಲ್ಲೇ ಹೆಸರುವಾಸಿಯಾದುದು. ಇದಕ್ಕೆ ಇವರ ಬಹುಮುಖ ವ್ಯಕ್ತಿತ್ವ ಕಾರಣವಾಗಿದೆ. ಒಬ್ಬ ವ್ಯಕ್ತಿ ಜನಪ್ರಿಯವಾಗಬೇಕಾದರೆ ಅವನಲ್ಲಿ ಜನರಿಗೆ ಒಪ್ಪಿಗೆಯಾಗುವಂತಹ ಸದ್ಗುಣಗಳು ಇರಲೇಬೇಕು. ಕೇವಲ ಹಣದ ಶ್ರೀಮಂತಿಕೆಯಿಂದಾಗಲಿ ಅಥವಾ ದರ್ಪದಿಂದ ಕೂಡಿದ ಅಧಿಕಾರದಿಂದಾಗಲಿ ಜನಪ್ರಿಯರಾಗಲು ಸಾಧ್ಯವಿಲ್ಲ. ಒಬ್ಬ ವ್ಯಕ್ತಿ ಜನರವಿಶ್ವಾಸ ಮತ್ತು ಪ್ರೀತಿಗಳಿಸಬೇಕಾದರೆ ಆ ವ್ಯಕ್ತಿಯಲ್ಲಿ ಸೇವಾಮನೋಭಾವನೆ ತ್ಯಾಗಮನೋಭಾವನೆ ಸರಳತೆ ಪ್ರಾಮಾಣಿಕತೆ ಮತ್ತು ಸೌಜನ್ಯದಿಂದ ಕೂಡಿದ ಮಾತುಗಾರಿಕೆ, ಜಾತ್ಯಾತೀತ ಮನೋಭಾವನೆ, ಬಡ ಜನತೆಯ ಬಗ್ಗೆ ಅನುಕಂಪ ಮತ್ತು ಜನತೆಯಲ್ಲಿ ಹೊಂದಾಣಿಕೆ ಬೆಸೆಯುವ ನಾಯಕತ್ವದ ಲಕ್ಷಣಗಳು ಇದ್ದರೆ ಮಾತ್ರ ಆ ವ್ಯಕ್ತಿ ನಿಸ್ಸಂಕೋಚವಾಗಿ ಜನಾನುರಾಗಿಯಾಗಬಲ್ಲ. ಇಂತಹ ವ್ಯಕ್ತಿಯನ್ನೇ ಮಾನವತಾವಾದಿ ಅಥವಾ ಮಹಾನ್ ವ್ಯಕ್ತಿಯೆಂದು ಹಾಡಿ ಹೊಗಳುತ್ತಾರೆ. ಇಂತಹ ಎಲ್ಲಾ ಮಾನವೀಯ ಮೌಲ್ಯಗಳನ್ನು ಶ್ರೀ ಜವರಪ್ಪನವರಲ್ಲಿ ನಾನು ಕಂಡಿದ್ದೇನೆ. ಎಲೆಮರೆಯ ಕಾಯಿಯಂತೆ ಸುಮಾರು ಐದು ದಶಕಗಳಿಂದಲೂ ಸಮಾಜದ ಅನೇಕ ರಂಗಗಳಲ್ಲಿ ನಿಸ್ವಾರ್ಥಸೇವೆಯನ್ನು ಮಾಡಿಕೊಂಡು ಬರುತ್ತಿದ್ದ ಈ ಮಹಾನ್ ವ್ಯಕ್ತಿಯನ್ನು ಮಂಡ್ಯ ಜನತೆ ಸನ್ಮಾನಿಸಲು ಅಣಿಮಾಡಿಕೊಂಡಿರುವುದಲ್ಲದೆ ಅಭಿನಂದನಾಗ್ರಂಥವನ್ನು ಅರ್ಪಿಸಲು ಮಾಡಿಕೊಂಡಿರುವ ವ್ಯವಸ್ಥೆ ಎಲ್ಲ ನಿಸ್ವಾರ್ಥಸಮಾಜ ಸೇವಕರಿಗೆ ಸಮಾಧಾನದ ಸಂಗತಿಯಾಗಿದೆ.

ಮಾನ್ಯಶ್ರೀ ಜವರಪ್ಪನವರು ಮಂಡ್ಯಜಿಲ್ಲೆಯ ಸ್ವಾತಂತ್ರ್ಯಹೋರಾಟಗಾರರಲ್ಲಿ ಹಿರಿಯರು. ಇವರು ದೇಶ ಸ್ವಾತಂತ್ರ್ಯ ಪಡೆಯಲು ಯತ್ನಿಸುತ್ತಿದ್ದಾಗ ಮಂಡ್ಯದ ಜನತೆಗೇ ಅಲ್ಲದೆ ಇಡೀ ಕರ್ನಾಟಕದ ಜನತೆಗೆ ಸ್ವಾತಂತ್ರ್ಯದ ಅರಿವನ್ನು ಮೂಡಿಸಲು ನಾಡಿನಾದ್ಯಂತ ಸಂಚರಿಸಿ ಸ್ವಾತಂತ್ರ್ಯದ ಕಹಳೆ ಊದಿದರು. ಬ್ರಿಟಿಷರ ಆಳ್ವಿಕೆಯಿಂದ ನಾವು ಜೀತದಾಳುಗಳಂತೆ ದುಡಿಯುತ್ತಿದ್ದುದನ್ನು ಖಂಡಿಸುತ್ತಿದ್ದರು. ಬ್ರಿಟಿಷರ ವಿರುದ್ಧ ನಿಷ್ಠುರದ ಮಾತುಗಳನ್ನಾಡಿ ಅನೇಕ ಬಾರಿ ಜೈಲಿಗೆ ಹೋಗಿದ್ದುಂಟು. ಶ್ರೀಯುತರು "ವಿಶ್ವಾಮಿತ್ರ" ಎಂಬ ಪತ್ರಿಕೆಯನ್ನು ಹೊರಡಿಸುತ್ತ ನಾಡಿನ ಜನತೆಯಲ್ಲಿ, ನಮ್ಮ ಸಂಸ್ಕೃತಿ ಮತ್ತು ಪರಂಪರೆಯ ಅರಿವನ್ನು ಮೂಡಿಸಲು ಪ್ರಯತ್ನಪಟ್ಟಿರುತ್ತಾರೆ. ಜನರಲ್ಲಿ ಕರ್ತವ್ಯಪ್ರಜ್ಞೆ, ಕಾರ್ಯಶೀಲತೆ ಹಾಗೂ ಪ್ರಾಮಾಣಿಕ ವ್ಯಕ್ತಿತ್ವದ ಜ್ಞಾನ ತುಂಬಲು ಈ ಪತ್ರಿಕೆ ಇವರಿಗೆ ಸಹಾಯಕವಾಯಿತು.

ಮಂಡ್ಯಜಿಲ್ಲೆಯ ಯಾವುದೆ ಪ್ರಮುಖ ಸಾಮಾಜಿಕ ಸಮಾರಂಭಗಳಲ್ಲಿ ಇವರ ಇರುವಿಕೆ ಅತ್ಯವಶ್ಯವಾಗಿತ್ತು. ಇವರು ಸಮಾಜದ ಆರ್ಥಿಕ ಪಿಡುಗುಗಳ ವಿರುದ್ಧ ಹೋರಾಟ ನಡೆಸಿಕೊಳ್ಳುತ್ತ ಬಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ 'ಮದುವೆ' ಎಂಬುದು ನಮ್ಮ ಸಮಾಜದಲ್ಲಿ ತಲೆನೋವಿನ ಕಾರ್ಯವಾಗಿದೆ. ಏಕೆಂದರೆ ವರದಕ್ಷಿಣೆ ಪಿಡುಗು ಈ ಮದುವೆ ಎಂಬ ಪವಿತ್ರಕಾರ್ಯವನ್ನು ಒಂದು ಪ್ರೇತಕಾರ್ಯವನ್ನಾಗಿ ಮಾಡಿದೆ. ಈ ವರದಕ್ಷಿಣೆ ವಿರುದ್ಧ ಹೋರಾಡಲು ಶ್ರೀಯುತರು ಸರಳ ಹಾಗೂ ಸಾಮೂಹಿಕ ವಿವಾಹಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದಾರೆ.

ಶ್ರೀಯುತ ಜವರಪ್ಪಗೌಡರು ನಮ್ಮ ದೇಶದ ಬಡತನಕ್ಕೆ ಅಜ್ಞಾನವೇ ಮುಖ್ಯ ಕಾರಣವೆಂದು ತಿಳಿದು ಅಕ್ಷರಜ್ಞಾನವನ್ನು ವಯಸ್ಕರಲ್ಲಿ ತುಂಬಬೇಕೆಂದು ಮನಗಂಡರು. ಆದಕ್ಕಾಗಿ ಇವರು ಕರ್ನಾಟಕ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ವಯಸ್ಕರಲ್ಲಿ ಸಾಕ್ಷರತೆ ತುಂಬಲು ಅವಿರತವಾಗಿ ಶ್ರಮಿಸುತ್ತಿದ್ದಾರೆ. ಇವರ ಶ್ರಮಕ್ಕಾಗಿ ಕರ್ನಾಟಕ ವಯಸ್ಕರಶಿಕ್ಷಣ ಮಂಡಳಿಗೆ 1971ರಲ್ಲಿ ನೆಹರು ಸಾಕ್ಷರತಾ ಪ್ರಶಸ್ತಿ ಬಂದಿತು. ರಾಜ್ಯದ ವಯಸ್ಕರಶಿಕ್ಷಣ ಮಂಡಳಿಗೆ ಸಾಕ್ಷರತಾ ಯೋಜನೆಯಲ್ಲಿ ರಾಷ್ಟ್ರಮಟ್ಟದ ಕೀರ್ತಿ ಪ್ರಾಪ್ತವಾಯಿತು. ಇವರ ಪ್ರಗತಿದಾಯಕ ಮಾರ್ಗದರ್ಶನದಿಂದ 1972ರಲ್ಲಿ ವಯಸ್ಕರಶಿಕ್ಷಣ ವಿಭಾಗಕ್ಕೆ ರಾಜ್ಯಮಟ್ಟದ ಪ್ರಶಸ್ತಿಯೂ ಲಭಿಸಿತು. ಶ್ರೀ ಜವರಪ್ಪಗೌಡರ ಕಾರ್ಯದಕ್ಷತೆ, ಸಾಕ್ಷರತೆಯ ದಾಹ ಮತ್ತು ಅವರ ಪ್ರಾಮಾಣಿಕ ಪ್ರಯತ್ನ ಈ ಪ್ರಶಸ್ತಿಗಳ ಲಭ್ಯಕ್ಕೆ ಮುಖ್ಯ ಕಾರಣವಾಗಿದೆ.

ಮಾನ್ಯರು ವಯಸ್ಕರಶಿಕ್ಷಣ ಸಮಿತಿ ಅಧ್ಯಕ್ಷರಾಗಿದ್ದಾಗ ನಾನು ಅದರ ಸದಸ್ಯನಾಗಿ ಸೇವೆಮಾಡುವಂತಹ ಅವಕಾಶ ಲಭಿಸಿತ್ತು. ಜವರಪ್ಪಗೌಡರ ಜೊತೆಯಲ್ಲಿ ನಾನು ಅನೇಕ ವಿದ್ಯಾಪೀಠಗಳಿಗೆ ಭೇಟಿ ಕೊಟ್ಟಿದ್ದೆ. ಆ ವಿದ್ಯಾಪೀಠಗಳಲ್ಲಿ ತರಪೇತಿ ಪಡೆಯುವ ವಯಸ್ಕರಿಗೆ ಉತ್ತಮಬೇಸಾಯ ಕ್ರಮದಲ್ಲಿ, ಜೀವನ ವೃತ್ತಿಗಳಲ್ಲಿ ಯಶಸ್ವಿಯಾಗಲು ಉತ್ತಮ ಮಾರ್ಗದರ್ಶನ ಕೊಡುತ್ತಿದ್ದರು. ಇವರು ಉತ್ತಮ ವಾಗ್ಮಿಗಳಾಗಿದ್ದರಿಂದ ಇವರ ಮಾತುಗಳನ್ನು ಕೇಳಲು ಅಸಂಖ್ಯಜನತೆ ಸೇರಿಕೊಳ್ಳುತ್ತಿದ್ದರು. ಇವರು ಸರಳವಾದ ಭಾಷೆಯಲ್ಲಿ ಹಲವು ಜೀವಂತ ದೃಷ್ಟಾಂತಗಳೊಂದಿಗೆ ಉಪಮಾನ ಉಪಮೇಯಗಳೊಂದಿಗೆ ಸಾಮಾನ್ಯ ಜನರ ಮನಮುಟ್ಟುವಂತೆ ವಿಚಾರಗಳನ್ನು ಹರಿಯಬಿಡುತ್ತಿದ್ದರು. ಇವರು ನೋಡಲು ಎಷ್ಟು ಸರಳರೋ ನಡತೆಯಲ್ಲಿಯೂ ಅದೇ ಸರಳತೆಯಿತ್ತು. ಇವರು ಕೇವಲ ಆಡುವವರಾಗಿರಲಿಲ್ಲ. ಆಡಿದಂತೆ ನಡೆದು ತೋರಿಸುತ್ತಿದ್ದ ಪ್ರಾಮಾಣಿಕ ವ್ಯಕ್ತಿ. ಇವರು ಸ್ನೇಹಿತರ ಮನೆಗೆ ಹೋದಾಗ ಅಥವಾ ವಿದ್ಯಾಪೀಠಗಳಿಗೆ ಭೇಟಿಕೊಟ್ಟಾಗ ಇವರ ಊಟ ಉಪಚಾರಗಳಲ್ಲಿ ಅತ್ಯಂತ ಸರಳತೆ ಇರುತ್ತಿತ್ತು. ಆದರೆ ಮನೆಗೆ ಬಂದ ಅತಿಥಿಗಳನ್ನು ಮಾತ್ರ ಲೋಕಾರೂಢಿಯಲ್ಲಿ ಉಪಚರಿಸಿ ಕಳಿಸುವ ಸೌಜನ್ಯ ಇವರಲ್ಲಿತ್ತು.

ಇವರು ಒಮ್ಮೆ ನಮ್ಮ ಗ್ರಾಮವಾದ ಅವುಟೆಕೊಪ್ಪಕ್ಕೆ ಬಂದಿದ್ದರು. ಇವರು

ಬಂದ ಸಂದರ್ಭದಲ್ಲಿ ನಾನು ನಮ್ಮ ಭತ್ತದ ಒಕ್ಕಲು ಮಾಡಿ ಸುಮಾರು ಸಾವಿರಾರು ಚೀಲ ಭತ್ತದ ರಾಶಿಹಾಕಿ ಆ ರಾಶಿಗೆ ಸಂಪ್ರದಾಯದಂತೆ ರಾಶಿಪೂಜೆ. ಅದೇ ಸಮಯದಲ್ಲಿ ಶ್ರೀ ಸತ್ಯನಾರಾಯಣಪೂಜೆ ಮಾಡಿ ಸ್ನೇಹಿತರಿಗೆ ಮತ್ತು ಹೊಲದಲ್ಲಿ ದುಡಿದಿದ್ದ ಕೆಲಸಗಾರರಿಗೆ ಔತಣ ಕೂಟ ಏರ್ಪಡಿಸುತ್ತಿದ್ದೆ. ಈ ಒಂದು ಕಾರ್ಯಕ್ರಮ ನಮ್ಮ ತಂದೆಯವರ ಕಾಲದಿಂದಲೂ ನಡೆದುಕೊಂಡು ಬರುತ್ತಿದ್ದ ಒಂದು ರೂಢಿ ಅಷ್ಟೆ. ಆಗ ಶ್ರೀ ಜವರಪ್ಪನವರು ನನ್ನನ್ನು ಒಬ್ಬ ಮಾದರಿ ರೈತ ಅಥವಾ ಜಮೀನ್ದಾರ ಎಂದು ಗುರುತಿಸಿದರು. ನನ್ನನ್ನು ತಮ್ಮ ಜೊತೆಯಲ್ಲಿ ವಿದ್ಯಾಪೀಠಗಳಿಗೆ ಕರೆದೊಯ್ದು ನನ್ನಿಂದ ಭತ್ತದ ಬೆಳೆ ಮತ್ತು ಆಧುನಿಕ ಬೇಸಾಯಪದ್ಧತಿಯ ಬಗ್ಗೆ ಮಾರ್ಗದರ್ಶನ ಕೊಡಿಸುತ್ತಿದ್ದರು. ಹೀಗೆ ಇವರು ನಾಡಿನಾದ್ಯಂತ ತರುಣ ಹಾಗೂ ಉದಯೋನ್ಮುಖ ಜಮೀನ್ದಾರರನ್ನು ತಮ್ಮಂತೆ ಜ್ಞಾನವಂತ ರೈತರನ್ನಾಗಿಸಲು ವಯಸ್ಕರಲ್ಲಿ ಬೆರಸುತ್ತಿದ್ದರು. ಇವರು ಅಧಿಕಾರದ ಅವಧಿಯಲ್ಲಿ ವಿದ್ಯಾಪೀಠದ ಅಧಿಕಾರಿಗಳೊಂದಿಗೆ ಸೌಜನ್ಯದಿಂದ ವರ್ತಿಸುತ್ತಿದ್ದರು. ಅಲ್ಲದೆ ಅವರಿಗೆ ಸಮಗ್ರಮಾರ್ಗದರ್ಶನ ಕೊಡುತ್ತಿದ್ದರೇ ವಿನಃ ಯಾವ ರೀತಿಯಲ್ಲೂ ಅವರಿಗೆ ನೋವು ಕೊಡುತ್ತಿರಲಿಲ್ಲ. ಅಧಿಕಾರದ ಅಹಂಕಾರವಾಗಲಿ ದರ್ಪವಾಗಲಿ ನಾನು ಇವರಲ್ಲಿ ಕಾಣಲಿಲ್ಲ.

ನಾನು ಶ್ರೀ ಜವರಪ್ಪನವರನ್ನು ಕಾಣಲು ಅನೇಕ ಬಾರಿ ಮಂಡ್ಯಕ್ಕೆ ಹೋಗಿದ್ದೆ. ಆಗ ಅವರು ನನ್ನನ್ನು ಒಬ್ಬ ಆತ್ಮೀಯಬಂಧುವಿನ ರೀತಿ ಸತ್ಕರಿಸಿದರು. ನನ್ನನ್ನೇ ಅಲ್ಲ. ಆ ಸಮಯದಲ್ಲಿ ಬಂದ ಎಲ್ಲರನ್ನೂ ಇದೇ ರೀತಿಯಲ್ಲಿ ಸ್ವಾಗತಿಸಿ ಸತ್ಕರಿಸುತ್ತಿದ್ದರು. ಇವರ ಮನೆ ಒಂದು ರೀತಿಯ 'ಅನ್ನಸಂತರ್ಪಣೆಯ ಕಾರ್ಯಾಗಾರ' ಅನ್ನಿಸಿತು. ಇದು ಇವರ ಶ್ರೀಮಂತಿಕೆಯಪ್ರದರ್ಶನವಲ್ಲ 'ಅತಿಥಿದೇವೋಭವ' ಎಂಬ ಸಂಸ್ಕೃತಿಯ ಪ್ರತೀಕ.

ಶ್ರೀ ಜವರಪ್ಪಗೌಡರು ನಾಡಿನ ಬಗ್ಗೆ ಮತ್ತು ನಾಡಿನ ಜನತೆಯ ಬಗ್ಗೆ ಅಪಾರ ಶ್ರದ್ಧೆಯುಳ್ಳ ಒಬ್ಬ ಧೀಮಂತ ವ್ಯಕ್ತಿ. ಇವರಿಗೆ ಅನ್ಯಾಯ ಎಂದು ಕಂಡಾಗ ಸಿಡಿದೇಳುವ ಸ್ವಭಾವವಿದೆ. ಸಂದರ್ಭ ಬಂದರೆ ಹೋರಾಟಕ್ಕೆ ಇಳಿಯುತ್ತಿದ್ದರು. ಉದಾಹರಣೆಗೆ ವರಣನಾಲಾ ಚಳುವಳಿ, ಗೋಕಾಕ್ ಚಳುವಳಿ, ವೆಂಕಟಸ್ವಾಮಿ ಆಯೋಗದ ವಿರುದ್ಧ ನಡೆಸಿದ ಚಳುವಳಿ ಮುಂತಾದ ಅನೇಕ ಚಳುವಳಿಯಲ್ಲಿ ಮುಂದಾಳ್ತನ ವಹಿಸಿದ್ದರು.ಇಂತಹ ಮಹಾನ್‌ವ್ಯಕ್ತಿ ಚೈತನ್ಯಮೂರ್ತಿ ನಾನು ಕಂಡಂತೆ ನಾಡಿನ ಆಸ್ತಿಯಾಗಿದ್ದಾರೆ. ಇವರ ಆದರ್ಶಜೀವನ ಮೌಲ್ಯಗಳು ನಾಡಿನ ಜನತೆಯ ದಾರಿದೀಪವಾಗಿವೆ. ಇವರ ನಿಸ್ವಾರ್ಥ ಜೀವನ ಇವರ ಬದುಕಿಗೆ ಕಳಶಪ್ರಾಯವಾಗಿದೆ. ಮಂಡ್ಯಜಿಲ್ಲೆಯ ಮಹಾಜನತೆ ರಾಜಕಾರಿಣಿಗಳು, ವರ್ತಕರು, ಸಾಹಿತಿಗಳು, ಕಾರ್ಮಿಕರು, ಪತ್ರಕರ್ತರು, ಕುಶಲಕರ್ಮಿಗಳು ಇಂತಹ ಚೈತನ್ಯಮೂರ್ತಿಯನ್ನು ಪಡೆದಿರುವ ಭಾಗ್ಯವಂತರು ಎಂದು ನನ್ನ ಭಾವನೆ.

ಎ. ಪಿ. ಯಂಗಪ್ಪನಾಯ್ಡು

# ಧರ್ಮಕಾರ್ಯರತ್ನ

ರಾಷ್ಟ್ರದ ಸ್ವಾತಂತ್ರ್ಯಕ್ಕೆ ಮುನ್ನ, ಸ್ವಾತಂತ್ರ್ಯಕ್ಕಾಗಿ ನಡೆದ ನಿರಂತರ ಹೋರಾಟದಲ್ಲಿ ಮಂಡ್ಯಜಿಲ್ಲೆ ಸಹ ಗಣನೀಯ ಕಾಣಿಕೆ ಸಲ್ಲಿಸಿದೆ.

ಅಂದಿನ ಆಂಗ್ಲರ ಭಾರತ ಸರ್ಕಾರ ಮತ್ತು ಮೈಸೂರು ಅರಸರ ಆಡಳಿತಗಳ ವಿರುದ್ಧ, ಇಡೀ ಮೈಸೂರುರಾಜ್ಯದಲ್ಲಿ ವಿಧ್ಯುಕ್ತವಾಗಿ ಒಂದು ತಿಂಗಳ ಕಾಲ ನಡೆದ ಧ್ವಜಸತ್ಯಾಗ್ರಹದ ಮೂಲಕ ಸ್ವಾತಂತ್ರ್ಯಾಂದೋಳನದ ಕಹಳೆ ಮೊದಲು ಮೊಳಗಿದ್ದು ಮದ್ದೂರು ತಾಲ್ಲೂಕಿನ ಶಿವಪುರದಲ್ಲಿ.

1938ರ ಏಪ್ರಿಲ್ 10, 11 ಮತ್ತು 12ನೆಯ ದಿನಾಂಕಗಳಂದು ನಡೆದ ಈ ಅಹಿಂಸಾತ್ಮಕ ಕಾರ್ಯಕ್ರಮ ರಾಷ್ಟ್ರದ ಸ್ವಾತಂತ್ರ್ಯಸಂಗ್ರಾಮದ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಉಲ್ಲೇಖಗೊಳ್ಳುವಂತಹ ಮಹತ್ವಪೂರ್ಣ ಸ್ಥಾನ ಪಡೆದಿದೆ.

ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರ ಕರೆಗೆ ಓಗೊಟ್ಟು ಅಂದಿನ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಸಹಸ್ರಾರು ಸ್ವಾತಂತ್ರ್ಯಯೋಧರು ಶಿವಪುರ ಧ್ವಜಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದರು. ಸೀಮಿತ ಸಂಚಾರ ಮಾಧ್ಯಮಗಳಿದ್ದು, ಆಂಗ್ಲರ ಮತ್ತು ಮಹಾರಾಜರ ಸರ್ಕಾರಗಳಿಂದ ಬಹಿಷ್ಕೃತವಾಗಿದ್ದ ಕಾರ್ಯಕ್ರಮದಲ್ಲಿ, ಆ ಕಾಲದಲ್ಲಿ ನಿರ್ಭೀತಿಯಿಂದ ಸುಮಾರು ಜನರು ಭಾಗಿಗಳಾಗಿದ್ದರೆಂದರೆ, ಅಂದಿನ ಆ ಸ್ವಾತಂತ್ರ್ಯಯೋಧರ ಅದಮ್ಯ ದೇಶಾಭಿಮಾನದ ಪ್ರಮಾಣ ಊಹಾತೀತ.

ರಾಷ್ಟ್ರ ಸ್ವಾತಂತ್ರ್ಯಗಳಿಸಿದ ಬಳಿಕ, ರಾಜ್ಯದ ಮುಖ್ಯಮಂತ್ರಿಗಳಾದ ಸ್ವರ್ಗೀಯ ಶ್ರೀ ಕೆ. ಸಿ. ರೆಡ್ಡಿ, ಸ್ವರ್ಗೀಯ ಶ್ರೀ ಕೆ. ಹನುಮಂತಯ್ಯ, ಶ್ರೀ ಕಡಿದಾಳ್ ಮಂಜಪ್ಪ, ಶ್ರೀ ಎಸ್. ನಿಜಲಿಂಗಪ್ಪ, ಹಿರಿಯ ಸ್ವಾತಂತ್ರ್ಯಯೋಧರಾದ ಸ್ವರ್ಗೀಯ ಶ್ರೀ ಟಿ. ಸಿದ್ಧಲಿಂಗಯ್ಯ, ಸ್ವರ್ಗೀಯ ಶ್ರೀ ತಗಡೂರು ರಾಮಚಂದ್ರರಾವ್, ಶ್ರೀ ಎಂ. ಎಸ್. ಜೋಯಿಸ್ ಅವರುಗಳೂ ಸೇರಿದಂತೆ ನೂರಾರು ನಾಯಕರು ಪಾಲ್ಗೊಂಡಿದ್ದ ಧ್ವಜ ಸತ್ಯಾಗ್ರಹ ಕಾರ್ಯಕ್ರಮದಲ್ಲಿ, ಮಂಡ್ಯಜಿಲ್ಲೆಯ ಎಲ್ಲೆಡೆಗಳಿಂದಲೂ ಅಸಂಖ್ಯಾತ ಮಂದಿ, ಸತ್ಯಾಗ್ರಹಿಗಳಾಗಿ, ಸ್ವಯಂ ಸೇವಕರಾಗಿ, ಪ್ರೇಕ್ಷಕರಾಗಿ ಭಾಗವಹಿಸಿದ್ದರು. ಹಾಗೆ ಭಾಗವಹಿಸಿದವರು, ಸಹಸ್ರಾರು ಮಂದಿಯಾದರೂ, ಸ್ವಾತಂತ್ರ್ಯಪೂರ್ವದ ಹೋರಾಟದ ದಿನಗಳಂತೆ, ಸ್ವಾತಂತ್ರ್ಯದ ನಂತರವೂ ಸಾರ್ವಜನಿಕ ಜೀವನದಲ್ಲಿ ಸಕ್ರಿಯವಾಗಿ ಉಳಿದುಕೊಂಡು, ಇಂದಿಗೂ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕ್ರಿಯಾಶೀಲ

ರಾಗಿ ಸೇವೆ ಸಲ್ಲಿಸುತ್ತಿರುವ, ಜಿಲ್ಲೆಯ ಕೆಲವೇ ನಿಷ್ಠಾವಂತ ಸಮಾಜ ಸೇವಕರಲ್ಲಿ ಪ್ರಧಾನವಾಗಿ ಕೇಳಿ ಬರುವ ಹೆಸರೆಂದರೆ ಶ್ರೀ ಪಿ. ಎಸ್. ಜವರಪ್ಪಗೌಡ ಅವರದು.

1938ರಲ್ಲಿ ಶಿವಪುರ ಧ್ವಜಸತ್ಯಾಗ್ರಹದ ಸಮಯದಲ್ಲಿ ಸುಮಾರು ಒಂದು ತಿಂಗಳಿಗೂ ಹೆಚ್ಚು ಕಾಲ, ಸ್ವಯಂಸೇವಕರಾಗಿ ಎಲ್ಲ ವಿಭಾಗಗಳಲ್ಲಿಯೂ ಅದರಲ್ಲಿಯೂ ವಿಶೇಷವಾಗಿ ಕಛೇರಿಯಲ್ಲಿ ಸೇವೆ ಸಲ್ಲಿಸಿದ ಶ್ರೀ ಪಿ. ಎಸ್. ಜವರಪ್ಪ ಗೌಡರ ಕ್ರಿಯಾಶೀಲತೆ ಮತ್ತು ಅರ್ಪಣಾಮನೋಭಾವದ ಸೇವೆಯನ್ನು ಐದು ದಶಕ ಗಳ ನಂತರವೂ ಇಂದಿಗೂ ಹಲವರು ಸ್ಮರಿಸಿಕೊಳ್ಳುತ್ತಾರೆ.

ಕ್ರಿಯಾಶೀಲತೆಯ ಜೊತೆಗೆ, ನಿಷ್ಠೆಯೂ ಸೇರಿದರೆ ಯಾವುದೇ ವ್ಯಕ್ತಿ ಎಂತಹ ಮಹತ್ಸಾಧನೆ ಮಾಡಬಹುದು. ಎಷ್ಟು ಎತ್ತರಕ್ಕೆ ಬೆಳೆಯಬಹುದು ಎನ್ನುವುದಕ್ಕೆ ಜೀವಂತ ನಿದರ್ಶನನಾಗಿ ಶ್ರೀ ಪಿ. ಎಸ್. ಜವರಪ್ಪಗೌಡರು ಇಂದು ನಮ್ಮ ಮಧ್ಯೆ ಇರುವುದು ನಮ್ಮ ಜಿಲ್ಲೆಯ ವಿಶೇಷಪುಣ್ಯ.

ವಯೋಮಾನದ ದೃಷ್ಟಿಯಿಂದ ಎಪ್ಪತ್ತರ ಗಡಿಯನ್ನು ದಾಟಿದ್ದರೂ ದೈಹಿಕ ಹಾಗೂ ಮಾನಸಿಕ ಚಟುವಟಿಕೆಗಳಲ್ಲಿ ಇಪ್ಪತ್ತರ ಹರೆಯದ ಉತ್ಸಾಹವನ್ನು ಕಾಣುವ ಶ್ರೀ ಗೌಡರದು ವಿಶೇಷ ವ್ಯಕ್ತಿತ್ವ. ಜಿಲ್ಲೆಯ ರೈತರ ಹಿತರಕ್ಷಣೆಗೆ ಸಂಬಂಧಿಸಿದ ವರುಣಾ ನಾಲೆ ವಿರುದ್ಧದ ಚಳುವಳಿಯಾಗಲೀ, ವೆಂಕಟಸ್ವಾಮಿ ಆಯೋಗದ ವರದಿಯ ವಿರುದ್ಧದ ಪ್ರತಿಭಟನಾ ಚಳುವಳಿಯಾಗಲೀ, ಅಲ್ಲಿ ಶ್ರೀ ಗೌಡರ ಪ್ರಧಾನ ಪಾತ್ರವಿದ್ದೇ ಇದೆ.

ಧಾರ್ಮಿಕ ಕ್ಷೇತ್ರದಲ್ಲಿಯೂ ಉಲ್ಲೇಖನೀಯ ಸೇವೆ ಸಲ್ಲಿಸಿರುವ ಶ್ರೀ ಗೌಡರಿಗೆ, ಭಾರತೀಯ ಧರ್ಮಸಮ್ಮೇಳನವಲ್ಲಿ 'ಧರ್ಮಕಾರ್ಯರತ್ನ' ಪ್ರಶಸ್ತಿ, ಪ್ರದಾನಿಸಲ್ಪಟ್ಟಿ ರುವುದು ಅವರ ಧರ್ಮಶ್ರದ್ಧೆಗೆ ಅತ್ಯುತ್ತಮ ನಿದರ್ಶನ.

ಹಳೆಯ ಗಾದೆಗಳನ್ನು ಉಲ್ಲೇಖಿಸಿ, ಶ್ರೋತೃಗಳ ಮನ ಮುಟ್ಟುವಂತೆ, ಆಡು ಭಾಷೆಯಲ್ಲಿ ಪರಿಣಾಮಕಾರಿಯಾಗಿ ಭಾಷಣ ಮಾಡುವುದು ಶ್ರೀ ಗೌಡರಿಗೆ ಸಿದ್ಧಿಯಾದ ಅಪರೂಪದ ಕಲೆ.

ಆಡುಮುಟ್ಟದ ಸೊಪ್ಪಿರಬಹುದು. ಆದರೆ ಶ್ರೀ ಗೌಡರು ಸೇವೆ ಸಲ್ಲಿಸದ ಕ್ಷೇತ್ರವಂತೂ ಇಲ್ಲ. ರಾಜಕೀಯ, ಶಿಕ್ಷಣ, ಸಹಕಾರ, ಧರ್ಮ ಪ್ರಕಟಣೆ, ಪತ್ರಿ ಕೋದ್ಯಮ, ಕಲೆ, ಕಾವ್ಯ, ಸಮಾಜ–ಸುಧಾರಣೆ, ಹೀಗೆ ಶ್ರೀ ಗೌಡರು ಹಲವು ಹತ್ತು ಕ್ಷೇತ್ರಗಳಲ್ಲಿ ನಿಷ್ಠೆಯಿಂದ ನಿರಂತರ ಸೇವೆ ಸಲ್ಲಿಸಿ, ತಮ್ಮ ಹೆಸರು ಮಂಡ್ಯ ಜಿಲ್ಲೆಯಲ್ಲಿ ಶಾಶ್ವತವಾಗಿ ಉಳಿಯುವಂತೆ ಮಾಡಿದ್ದಾರೆ.

ರಾಜ್ಯದ ವಯಸ್ಕರ ಶಿಕ್ಷಣಸಮಿತಿಯ ಅಧ್ಯಕ್ಷರಾಗಿ ಶ್ರೀ ಗೌಡರು ಸಲ್ಲಿಸಿದ ಸೇವೆ ಅಪಾರ.

ವರಕವಿ ಕುವೆಂಪು ಅವರ 'ಮಂತ್ರಮಾಂಗಲ್ಯದ' ಪ್ರಧಾನ ಪ್ರತಿಪಾದಕರಾದ ಶ್ರೀಗೌಡರು, ತಮ್ಮ ಕೌಟುಂಬಿಕ ಜೀವನದಲ್ಲೂ ಸರಳ ವಿವಾಹ ನಡೆಸಿ, ಇಂದಿನ ಆಡಂಬರ ಪ್ರಿಯರಿಗೆ ಆದರ್ಶಪ್ರಾಯರೆನಿಸಿದ್ದಾರೆ.

'ಜಗದ ಕಲ್ಯಾಣದೊಳಾತ್ಮ ಕಲ್ಯಾಣ'ವನ್ನು ಬಯಸಿ, ಶುದ್ಧ ಖಾದೀಧಾರಿಗಳಾಗಿ, ಪರಿಶುದ್ಧ ಜೀವನ ನಡೆಸುತ್ತಿರುವ ಶ್ರೀ ಪಿ. ಎಸ್. ಜವರಪ್ಪಗೌಡರು, ಶತಾಯುಷಿಗಳಾಗಿ, ಅವರ ನಿಷ್ಕಾಮಿತ ಸೇವೆ, ಸಮಾಜಕ್ಕೆ ಇನ್ನೂ ಹಲವಾರು ವರ್ಷಗಳು ಲಭ್ಯವಾಗಲೆಂಬುದೇ ನನ್ನ ಬಯಕೆ.

ಬಿ. ಆರ್. ಶ್ರೀನಿವಾಸಮೂರ್ತಿ



# ಸಮಾಜಸೇವಕ

"ಜ್ಞಾನಜ್ಯೋತಿ ಬೆಳಗಿಸಿ ಅಜ್ಞಾನದ ಅಂಧಕಾರವನ್ನು ಹೊಡೆದೋಡಿಸಿ ಆರ್ಥಿಕ ಉನ್ನತಿಗಾಗಿ ಶ್ರಮಿಸಿ ಬಡತನವನ್ನು ಹೋಗಲಾಡಿಸಿ"– ಎಂಬುದೇ ನಮ್ಮ ಮಹಾತ್ಮರ ಆದೇಶವಾಣಿಯಾಗಿದೆ. ಪಿ. ಎನ್. ಜವರಪ್ಪಗೌಡರು ಇದೇ ನಾಣ್ಣುಡಿಯನ್ನು ಜೀವನದ ಆದರ್ಶವನ್ನಾಗಿ ಮಾಡಿಕೊಂಡವರು. ಇದನ್ನು ಸಾಧಿಸಲು ಅವರು ಆರಿಸಿಕೊಂಡ ಕ್ಷೇತ್ರ 'ಸಮಾಜ ಸೇವೆ'. ಅದಕ್ಕಾಗಿ ಜೀವನವನ್ನೇ ಮುಡಿಪಾಗಿಟ್ಟಿದ್ದಾರೆ. ದೀನ ದಲಿತರ ಸೇವೆಗಾಗಿ, ಮಾನವರ ಸಮಾನತೆಗಾಗಿ ಮಾನವೀಯ ಗುಣಗಳಿಂದ ದುಡಿದಿದ್ದಾರೆ."

ಮಹಾತ್ಮಗಾಂಧಿಯವರ ಸ್ವಾತಂತ್ರ್ಯಹೋರಾಟ ಚಳುವಳಿಯಲ್ಲಿ ಭಾಗವಹಿಸುವ ಸುಸಂದರ್ಭಕ್ಕೆ ಸ್ಪಂದಿಸಿ, ಭಾರತ ಜನನಿಯ ದಾಸ್ಯಶೃಂಖಲೆಯನ್ನು ತೊಡೆದು ಹಾಕಲು ಛಲದಿಂದ ಹೋರಾಡಿದ ಸ್ವಾತಂತ್ರ್ಯಹೋರಾಟಗಾರರಲ್ಲಿ ಒಬ್ಬರು. ಇದೇ ಹೋರಾಟವನ್ನು ಸ್ವಾತಂತ್ರ್ಯಾನಂತರ ಬಡಜನರ ಉದ್ಧಾರಕ್ಕಾಗಿ ಮೀಸಲಿಟ್ಟಿದ್ದಾರೆ.

ಶ್ರೀಯುತರು ಸ್ನಾತಕೋತ್ತರ ಪದವೀಧರರಲ್ಲದಿದ್ದರೂ, ಸಾಹಿತ್ಯಾಭಿಮಾನಿ, ಪುಸ್ತಕ ಪ್ರೇಮಿ, ಕಲಾಸಕ್ತರು. ಅವರ ನಡೆನುಡಿಗಳಲ್ಲಿ ಜ್ಞಾನಿಯ ಘನತೆ, ಗಾಂಭೀರ್ಯ ತುಂಬಿ ತುಳುಕುತ್ತಿದೆ. ಅವರ ಜ್ಞಾನದ ಆಳ ಅವರ ಭಾಷಣವನ್ನು ಆಲಿಸಿದವರಿಗೆ ತಕ್ಷಣ ವೇದ್ಯವಾಗುತ್ತದೆ. ಬೀಚಿಯವರಂತೆ ಹಾಸ್ಯದಲ್ಲೊಂದು ಉಪದೇಶ ವ್ಯಂಗ್ಯದಲ್ಲೊಂದು ಪಾಠ ಹೇಳಿದರು. ಒಮ್ಮೆ ನಾಗಮಂಗಲದ ರಾಜಕೀಯ ಧುರೀಣರೊಬ್ಬರು ಭಾಷಣ ಮಾಡುತ್ತ 'ನಾನು ಸಮಾಜಸೇವೆ, ದೇಶಸೇವೆಗಾಗಿ ಬಹಳಷ್ಟು ಆಸ್ತಿ ಕಳೆದುಕೊಂಡಿರುವೆನು' ಎಂದರು. ಅವರ ನಂತರ ವೇದಿಕೆಗೆ ಬಂದ ಶ್ರೀಯುತರು "ಇವರು ತಮ್ಮ ಆಸ್ತಿಯನ್ನೇ ನೋಡಿಕೊಳ್ಳಲಾಗದೆ ಕಳೆದುಕೊಂಡಿರುವಾಗ, ಇನ್ನು ದೇಶದ ಆಸ್ತಿಯನ್ನು ಎಷ್ಟರಮಟ್ಟಿಗೆ ಕಾಯುಬಹುದು" ಎಂದು ಪ್ರೇಕ್ಷಕರಿಗೆ ಸವಾಲೆಸೆದು ನವಿರಾದ ವ್ಯಂಗ್ಯದಿಂದ ನಗೆಯೆಬ್ಬಿಸಿದರು.

ಸಾಮಾನ್ಯ ಕುಟುಂಬದಲ್ಲಿ ಜನಿಸಿ, ಜೀವನದ ಏರು–ಪೇರುಗಳನ್ನು ಧೃಡ ಸಂಕಲ್ಪದಿಂದ ಎದುರಿಸಿ ಬೆಳೆದಿರುವ ಜವರಪ್ಪಗೌಡರು, ಸ್ಥಿತಪ್ರಜ್ಞರೆಂದೇ ಹೇಳಬಹುದು. ಸುಖದುಃಖಗಳನ್ನು ಸಮಾನದೃಷ್ಟಿಯಿಂದ ಸ್ವೀಕರಿಸಿ ನಗುನಗುತ್ತ ಬಾಳು ನಡೆಸಿದ್ದಾರೆ. ನಾನೂ, ನಮ್ಮ ಸ್ನೇಹಿತರೂ, ಒಮ್ಮೆ ಆಕ್ಸಿಡೆಂಟಾಗಿ ಆಸ್ಪತ್ರೆ ಸೇರಿದ್ದ ಜವರಪ್ಪಗೌಡರನ್ನು ಕಂಡು ಅನುಕಂಪ ಸೂಚಿಸಿದಾಗ, ಶ್ರೀಯುತರು ನೋವಿನಲ್ಲೂ ನಗೆ ತಂದುಕೊಂಡು, "ಛೆ, ಛೆ, ಹೀಗಾಯ್ತು ಎಂದು ನನಗೇನೂ ಬೇಜಾರಿಲ್ಲ.

ನನ್ನ ಹೆಂಡತಿಯ ಕೈಯಲ್ಲಿ ಊಟ ಮಾಡಿಸಿಕೊಳ್ಳಲು ಇದೊಂದು ಸುಸಂದರ್ಭ" ಎಂದು ಹಾಸ್ಯ ಚಟಾಕಿ ಹಾರಿಸಿ ನಗಿಸಿ ನಕ್ಕ ಮಹಾನುಭಾವರು.

ವಾಕ್ಪಟುಗಳೂ, ಶ್ರೇಷ್ಠ ಸಮಾಜಸುಧಾರಕರೂ, ತತ್ವನಿಷ್ಠರೂ ಆದ ಜವರಪ್ಪ ಗೌಡರದು ನಿಜಕ್ಕೂ ಸಾರ್ಥಕ ಜೀವನ. ವೈಭವೋಪೇತ ಹಿಂದೂವಿವಾಹ ಪದ್ಧತಿಯ ಕಷ್ಟ ನಿಷ್ಠುರಗಳನ್ನು ಮನಗಂಡು, ಕುವೆಂಪುರವರು ತೋರಿಸಿಕೊಟ್ಟ ಸರಳ ವಿವಾಹ ಪದ್ಧತಿಯಲ್ಲಿ ಅಚಲ ನಂಬಿಕೆಯಿಟ್ಟು ಬಹಳಷ್ಟು ಸರಳ ವಿವಾಹಗಳನ್ನು ನಡೆಸಿಕೊಟ್ಟು ನಮ್ಮ ಯುವಜನತೆಗೆ ಮಾರ್ಗದರ್ಶಕರಾಗಿ, ಜನತೆಯ ಒಲವು, ವಿಶ್ವಾಸಗಳನ್ನು ಗಳಿಸಿದ್ದಾರೆ.

ಭಾಷಾಭಿಮಾನಿಗಳೂ, ದೇಶಾಭಿಮಾನಿಗಳೂ, ನಿಸ್ವಾರ್ಥ ಸಮಾಜಸೇವಾ ಕರ್ತರೂ ಆಗಿರುವ ಜವರಪ್ಪಗೌಡರಿಗೆ ದೇವರು ಶತಾಯುಷ್ಯವನ್ನಿತ್ತು, ಇನ್ನೂ ಹೆಚ್ಚಿನ ಚೇತನ ನೀಡಿ ಜನಸೇವೆ ಮಾಡುವಂತೆ ಅನುಗ್ರಹಿಸಲಿ ಎಂದು ಹಾರೈಸುತ್ತೇನೆ.

ಎಸ್. ಟಿ. ನಾಗರಾಜು



# ಪ್ರಾತಃಸ್ಮರಣೀಯರು

ಸ್ವಾತಂತ್ರ್ಯಪೂರ್ವ ನಾಡಿನ ಬಿಡುಗಡೆಗಾಗಿ ಹೋರಾಡಿದ ಪ್ರಾತಃಸ್ಮರಣೀಯ ಹಿರಿಯರ ಸಾಲಿನಲ್ಲಿದ್ದು ಇಂದೂ ನಮ್ಮ ಮಧ್ಯೆ ಇರುವ ಕೆಲವೇ ಕೆಲವು ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀ ಪಿ. ಎನ್. ಜವರಪ್ಪಗೌಡರದು ವಿಶಿಷ್ಟ ವ್ಯಕ್ತಿತ್ವ. ಉನ್ನತ ವ್ಯಕ್ತಿಗಳನ್ನು ಪರಿಚಯಿಸುವಾಗ ಕೆಲವೊಂದು ಹೋಲಿಕೆಗಳನ್ನು ಕೊಡುತ್ತೇವೆ. ಸರ್ದಾರ್ ವಲ್ಲಭಭಾಯಿ ಪಟೇಲರನ್ನು ಜರ್ಮನಿಯ ಬಿಸ್ ಮಾರ್ಕ್‌ಗೆ ಹೋಲಿಸುತ್ತೇವಲ್ಲ ಹಾಗೆ. ಹಳೆಯ ಮೈಸೂರಿನ ಸ್ವಾತಂತ್ರ್ಯ ಹೋರಾಟದ ನೇತಾರರಾಗಿದ್ದು ಸ್ವಾತಂತ್ರ್ಯ ಬಂದ ನಂತರದ ದಿನಗಳಲ್ಲಿ ಆಡಳಿತ ಸೂತ್ರ ವಹಿಸಿದ ಶ್ರೀಗಳಾದ ಎಚ್. ಸಿ. ದಾಸಪ್ಪ, ಕೆ. ಟಿ. ಬಾಷ್ಯಂ, ಕೆ. ಸಿ. ರೆಡ್ಡಿ, ಹೆಚ್. ಸಿದ್ಧಯ್ಯ, ಟಿ. ಮರಿಯಪ್ಪ, ಹೆಚ್. ಕೆ. ವೀರಣ್ಣಗೌಡ, ಎಸ್. ನಿಜಲಿಂಗಪ್ಪ ಮುಂತಾದವರು ಮತ್ತು ಆಡಳಿತ ಸೂತ್ರದ ಕಟ್ಟುಪಾಡುಗಳಿಂದ ಬಂಧಿತರಾಗದೆ ಪಕ್ಷದ ನೇತೃತ್ವ ವಹಿಸಿ ತೆರೆಮರೆಯಿಂದ ಚಾಲನೆ ನೀಡುತ್ತಿದ್ದ ಶ್ರೀ ಸಾಹುಕಾರ್ ಚೆನ್ನಯ್ಯನವರಂತಹವರು ಕೆಲವೊಂದು ಗುಣವಾಚಕಗಳಿಗೂ ಹೋಲಿಕೆಗಳಿಗೂ ಹೆಸರಾಗಿದ್ದರು. ಶ್ರೀ ಪಿ. ಎನ್. ಜವರಪ್ಪಗೌಡ ಅವರನ್ನು ಮತ್ತೊಬ್ಬರೊಡನೆ ಹೋಲಿಸುವುದು ಮತ್ತು ಅವರಿಗೆ ವಿಶಿಷ್ಟ ಗುಣವಾಚಕಗಳನ್ನು ಹಚ್ಚುವುದು ತುಸು ಕಷ್ಟದ ಕೆಲಸವೆ. ಏತಕ್ಕೆಂದರೆ ಹೀಗೆ ಮಾಡುವಲ್ಲಿ ನಾವೇ ಎಲ್ಲಿ ಜಾರುತ್ತೇವೋ ಎನ್ನುವ ಅಳುಕು. ಮಂಡ್ಯಜಿಲ್ಲೆಯ ನಾಗಮಂಗಲ ತಾಲ್ಲೂಕಿನಿಂದ ಬಂದ ಜನರೆಂದರೆ ಮತ್ತೂ ಅಂಜಿಕೆ. ಪ್ರಪಂಚದ ಉದ್ದ ಅಗಲಕ್ಕೂ ಹೆಸರು ಮಾಡಿದ ಜನ. ಕಷ್ಟ ಸಹಿಷ್ಣುಗಳು, ಜೀವನ ನಿರ್ವಹಣೆಗೆಂದು ಹೊಸ ದಿಗಂತ ಅರಸುತ್ತ ಹೊರಟ ಈ ಜನರು ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಪಾರ. ಸಾಹಿತ್ಯಲೋಕದಲ್ಲಿ ಹೊಸ ಬೆಳಕಿನತ್ತ ಕೈ ತೋರಿದ ಶ್ರೀ ಬಿ. ಎಂ. ಶ್ರೀ ಅವರಂತಹ ದಿಗ್ಗಜ, ರಾಜಕೀಯದಲ್ಲಿ ಹಿಂದಿನ ತಲೆಮಾರಿನ ಒಂದೊಂದು ಹೆಸರು ಜಿಲ್ಲೆಗೆ ಹೆಮ್ಮೆ ತಂದವು. ಶ್ರೀಗಳಾದ ಕೃಷ್ಣಪ್ಪಗೌಡ, ಟಿ. ಮರಿಯಪ್ಪ, ಟಿ. ಎನ್. ಮಾದಪ್ಪಗೌಡ, ಪಿ. ಎನ್. ಜವರಪ್ಪಗೌಡ, ಶಂಕರಲಿಂಗೇಗೌಡ. ಎಂ. ಆರ್. ಎನ್, ಶಾಸ್ತ್ರಿ ಇವರೆಲ್ಲ ಧೀಮಂತ ವ್ಯಕ್ತಿಗಳು. ಇವರೆಲ್ಲರಿಂದ ಪಿ. ಎನ್. ಜವರಪ್ಪಗೌಡರವರನ್ನು ಬೇರ್ಪಡಿಸಿ ನೋಡಿದಾಗ ನಾನು ಮೊದಲೆ ಹೇಳಿದಂತೆ ಹೋಲಿಕೆಗೆ ಸುಲಭದಲ್ಲಿ ಸಿಕ್ಕದ ವ್ಯಕ್ತಿತ್ವ.

ದಿವಂಗತ ಎಂ. ವಿ. ಕೃಷ್ಣಪ್ಪನವರ ಬಗ್ಗೆ ಒಂದು ಕಥೆಯಿದೆ. ಅವರು ಭಾಷಣ ಮಾಡುವಾಗ ಗ್ರಾಮಾಂತರ ಪ್ರದೇಶದ ಜನರನ್ನು ಕತೆ ಉಪಕತೆಗಳ ಮೂಲಕ ಮೋಡಿ

ಹಾಕಿ ಆಕರ್ಷಿಸುತ್ತಿದ್ದರು. ಅವರೊಮ್ಮೆ ಲೋಕಸಭೆಯಲ್ಲಿ ಆಹಾರ ಧಾನ್ಯಗಳು ಪೋಲಾಗುವ ಬಗ್ಗೆ ಮಾತನಾಡುತ್ತಾ, ಭಾರತದಲ್ಲಿ ಒಟ್ಟು ಇರುವ ಇಲಿಗಳ ಸಂಖ್ಯೆ ಹೇಳಿ, ಅವುಗಳಿಂದ ಇಡೀ ರಾಷ್ಟ್ರದಲ್ಲಿ ಆಗುತ್ತಿರುವ ಆಹಾರ ಧಾನ್ಯದ ಪೋಲಿನ ಬಗ್ಗೆ ವಿವರಣೆ ಇತ್ತರಂತೆ. ಇಲಿಗಳ ಸಂಖ್ಯೆಯನ್ನು ಎಲ್ಲಿಯಾದರೂ ಎಣಿಸಲು ಸಾಧ್ಯವೇ ? ಆದರೂ ಒಂದು ನಿರ್ದಿಷ್ಟ ಅಂಕಿ ಸಂಖ್ಯೆಗಳನ್ನು ಕೊಡುತ್ತ ಅವರು ಮಾತನಾಡಿದ ಧಾಟಿ ಅಂದಿನ ಆಹಾರ ಮಂತ್ರಿ ಶ್ರೀ ರಫಿ ಅಹಮದ್ ಕಿದ್ವಾಯಿ ಅವರನ್ನು ಆಕರ್ಷಿಸಿ ಶ್ರೀ ಎಂ. ವಿ. ಕೃಷ್ಣಪ್ಪನವರು ಕೇಂದ್ರಮಂತ್ರಿಯಾದರು ಎನ್ನುವುದು ಪ್ರತೀತಿ. ಇದನ್ನು ಯಾತಕ್ಕೆ ಹೇಳುತ್ತಿರುವೆನೆಂದರೆ ಶ್ರೀ ಪಿ. ಎನ್. ಜವರಪ್ಪಗೌಡರು ಹಾಕುವ ಮೋಡಿಗೂ ಶ್ರೀ ಎಂ. ವಿ. ಕೃಷ್ಣಪ್ಪನವರ ಕತೆ ಉಪಕತೆಗಳಿಗೂ ನಂಟಿದೆಯೆಂದೇ ನನ್ನ ಭಾವನೆ. ಎಂದೂ ಮುಗಿಯದ ಅವರ ಅನುಭವಕಥನಗಳು ಅನೇಕ. ಭಾಷೆಗಳ ಆಧಾರದ ಮೇಲೆ ರಾಜ್ಯದಪುನರ್ವಿಂಗಡನೆಯ ಸಂದರ್ಭದಲ್ಲಿ ಪ್ರಧಾನ ಮಂತ್ರಿ ಶ್ರೀ ಜವಹರಲಾಲ್ ನೆಹರೂರವರನ್ನು ಹಳೆಯ ಮೈಸೂರು ಮುಖಂಡರು ಸಂದರ್ಶಿಸಿದಾಗ ನಡೆದ ಮಾತುಕತೆಯ ವಿವರಣೆ ಕೊಡುವಲ್ಲಿಯಾಗಲಿ, ಭಾರತೀಯನೊಬ್ಬನ ಮೃತ ಶರೀರವನ್ನು ಸ್ಮಶಾನಕ್ಕೆ ಕೊಂಡೊಯ್ಯುವುದನ್ನು ನೋಡಿದ ಆಂಗ್ಲನೊಬ್ಬನ ಗ್ರಹಿಕೆಯನ್ನು ವಿವರಿಸುವುದನ್ನಾಗಲಿ ಅವರ ಬಾಯಿಂದ ಕೇಳಿದಾಗ ಆಗುವ ಖುಷಿ ಹೇಳತೀರದು. ಸತ್ತ ವ್ಯಕ್ತಿ ಯಾರೆಂದು ಹಿಂದಿಭಾಷೆಯ ಭಾರತೀಯನೊಬ್ಬನನ್ನು ಕೇಳಿದಾಗ ಅವನು ಹೇಳುವ ಮಾಲುಂ ನಹಿ ಸಾಬ್ ಎಂದಾಗ ಸತ್ತವನ ಹೆಸರು ಅದೇ ಎಂದು ಆಂಗ್ಲ ತಿಳಿಯುತ್ತಾನೆ, ಬಹಳ ಜನ ಶವಯಾತ್ರೆಯಲ್ಲಿ ಪಾಲ್ಗೊಂಡಿರುವುದರಿಂದ ಸತ್ತವನೊಬ್ಬ ಪ್ರಮುಖ ವ್ಯಕ್ತಿಯೆಂದು ಭಾವಿಸಿ ತನ್ನ ಹ್ಯಾಟು ತೆಗೆದು ಗೌರವ ಸಲ್ಲಿಸಿದ. ಸಮಾಚಾರವನ್ನು ತನ್ನ ನಾಡಿನ ಆಡಳಿತ ಮುಖ್ಯಸ್ಥರಿಗೆ ತಿಳಿಸುತ್ತಾನೆ. ಹೀಗೆ ಅವರು ಕೊಡುವ ವಿವರಣೆ ಕೇಳುವವರ ಮನ ತಣಿಸಿ ನಗೆಬುಗ್ಗೆಯನ್ನು ತರಿಸುತ್ತದೆ. ಒಂದೇ ಎರಡೇ ಇಂತಹ ನೂರಾರು ಪಿ. ಎನ್. ಜವರಪ್ಪಗೌಡರ ಬಳಿ.

ರಾಷ್ಟ್ರಕವಿ ಶ್ರೀ ಕುವೆಂಪು ಅವರ ವಿಶ್ವಮಾನವ ತತ್ವ ಪ್ರಚಾರ ಶ್ರೀ ಎನ್. ಜವರಪ್ಪಗೌಡರ ಇಳಿವಯಸ್ಸಿನ ಜೀವನದ ಏಕೈಕ ಗುರಿಯೆಂದುಕೊಂಡಿದ್ದೇನೆ. ಅದರಲ್ಲಿ ಅವರಿಗಿರುವ ಕಳಕಳಿ, ವಿವರಿಸುವಾಗಿನ ಉತ್ಸಾಹ ಎಂತಹವರನ್ನಾದರೂ ಮುಗ್ಧಗೊಳಿಸುತ್ತದೆ. ಅವರ ಸ್ವಾತಂತ್ರ್ಯಪೂರ್ವದ ಹೋರಾಟದ ಬದುಕನ್ನು ದಿವಂಗತ ಶ್ರೀ ಎಚ್. ಕೆ. ವೀರಣ್ಣಗೌಡರಂತಹ ಹಿರಿಯರ ಬಾಯಿಂದ ಕೇಳಿದ್ದೇನೆ. ಬಗಲಿನ ಚೀಲದಲ್ಲಿ ಪ್ರಚಾರ ಸಾಧನಗಳು, ಸಿಕ್ಕಿದ ಕಡೆ ಒಂದಿಷ್ಟು ಆಹಾರ. ಮಲಗಲು ಜಗಲಿ ಅಂತೂ ನಿರಂತರ ಓಡಾಟ. ಹೋರಾಟ ಹೆಚ್ಚಿಸುವಲ್ಲಿ ಸಿಡಿಲಿನ ಆರ್ಭಟ, ಮಿಂಚಿನ ಪ್ರಕಾಶ. ಭಾರತ ರಾಷ್ಟ್ರೀಯ ಕಾಂಗ್ರೆಸ್ ಸೇವಾಕರ್ತನಾಗಿ ದೀಕ್ಷೆ ಪಡೆದ ಇವರು ಅಂದಿನಿಂದ ಇಂದಿನವರೆಗೂ ನಿಷ್ಠಾವಂತರಾಗಿ ನಾಡಿಗಾಗಿ ದುಡಿದಿದ್ದಾರೆ. ಮೈಸೂರು

ಕಾಂಗ್ರೆಸ್‌ನ ಪ್ರಥಮ ಅಧಿವೇಶನ ಮಂಡ್ಯಜಿಲ್ಲೆಯ ಮದ್ದೂರು ಶಿವಪುರದಲ್ಲಿ 1938 ರ ಏಪ್ರಿಲ್ ತಿಂಗಳಿನಲ್ಲಿ ನಡೆಯಿತಷ್ಟೆ. ಅಲ್ಲಿ ಶ್ರೀ ಪಿ. ಎಸ್. ಜವರಪ್ಪ ಗೌಡರು ಎತ್ತಿದ ಕೈ ಮುಂದಿಟ್ಟ ಹೆಜ್ಜೆಯನ್ನು ಇಂದಿನ ಯುವಪೀಳಿಗೆ ಗುರುತಿಸಬೇಕು. ಸ್ವಾತಂತ್ರ್ಯಗಳಿಕೆಯ ನಂತರ ಬೇರೆಯವರಿಗೆ ದಕ್ಕಿದ ಅಧಿಕಾರ ಗಳಾವುವು ದೊರೆಯಲಿಲ್ಲವಾದರೂ ಕುಗ್ಗಲಿಲ್ಲ. ಪ್ರತಿಕಾರಂಗಕ್ಕೂ ಇಳಿದು ವಿಶ್ವಾಮಿತ್ರರಾಗಿ ಮಿಂಚಿದರು. ಆದರ ನಂಟು ಇನ್ನೂ ಉಳಿದು ಬಂದಿದೆ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಷ್ಟು ಕಾಲ ನಿಸ್ಪೃಹಸೇವೆಸಲ್ಲಿಸಿ ಹೊರಬಂದಿದ್ದಾರೆ. ಮೈಸೂರು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಇವರದು ಗಣನೀಯ ಹೆಸರೆಂದೆ ನನ್ನ ಅಚಲ ನಂಬಿಕೆ.

**ಕೆ. ಟಿ. ಚಂದು**

# ಸೊಗಸುಗಾರ

ಪರಿಚಯವಾದ ಐದೇ ನಿಮಿಷಗಳಲ್ಲಿ ಎಂಥ ಮೌನಿಯನ್ನು ಕೆಂಟಿ, ಮಾತಿನ ಮೋಜಿನಲ್ಲೇ ಮುಗ್ಧಗೊಳಿಸಿಬಿಡುವ, ಸರಳ ಸ್ವಭಾವದ, ಸರಸ ಪ್ರವೃತ್ತಿಯ ಸಹೃದಯಿ ಸೊಗಸುಗಾರವ್ಯಕ್ತಿ ಶ್ರೀ ಪಿ. ಎನ್. ಜವರಪ್ಪಗೌಡರು.

ಯಾವುದೇ ಸಭೆ ಸಮಾರಂಭ, ಮದುವೆ ; ಒಟ್ಟಾರೆ ನಾಲ್ಕು ಕೇಳುವ ಕಿವಿಗಳು ಇದ್ದಲ್ಲಿ ಹೊತ್ತು ಬಾರಿಸುತ್ತ 'ಕುವೆಂಪು ಮತ್ತು ಚುಂಚನಗಿರಿ ಮಠ' ಈ ಎರಡನ್ನು ಏಕಕಾಲಕ್ಕೆ ಒಂದುಗೂಡಿಸುತ್ತ ಕನವರಿಸುವ ಯಾರಾದರೂ ಒಬ್ಬ ವ್ಯಕ್ತಿ ಇದ್ದಲ್ಲಿ ಅವರನ್ನು ನೀವು ಕುರ್ತೇಬಾಣಿ ಜವರಪ್ಪಗೌಡರೆಂದು ಗುರ್ತಿಸಿಬಿಡಬಹುದು.

ಇಂಥ ಶ್ರೀ ಪಿ. ಎನ್. ಜವರಪ್ಪಗೌಡರನ್ನು, ನಾನು ಕಂಡಂತೆ ದಾಖಲು ಗೊಳಿಸುವುದು ತುಸು ಕಷ್ಟದ ಕೆಲಸವೆ. ಮಂಡ್ಯಜಿಲ್ಲೆಯ ಆಧುನಿಕ ವಿಶ್ವೇಶ್ವರಯ್ಯ ಎಂದು ಶಿಕ್ಷಣ, ಸಹಕಾರ, ರಾಜಕೀಯ ಹಾಗೂ ಸಾಹಿತ್ಯಕ್ಷೇತ್ರಗಳಲ್ಲಿ ಜನಪ್ರಿಯತೆ ಗಳಿಸಿಕೊಂಡಿರುವ ಹಿರಿಯ ಮುತ್ಸದ್ದಿ ಶ್ರೀ ಕೆ. ವಿ. ಶಂಕರಗೌಡರ ಆಸ್ಥಾನ ಕೋಗಿಲೆ ಜವರಪ್ಪಗೌಡರು. ಕೆ. ವಿ. ಎಸ್. ಅವರ ಆಸ್ಥಾನದಲ್ಲಿ ಇಂದಿಗೂ ಈ ಕೋಗಿಲೆ ಗೌರವಾನ್ವಿತ ಸ್ಥಾನದಲ್ಲಿದೆ. ಅಂಥಾದ್ದರಲ್ಲಿ, ಈ ಕೋಗಿಲೆ ಸ್ವರ–ಅಪಸ್ವರಕ್ಕೂ ಹೆಚ್ಚು ಮಹತ್ವ ಇರುವುದರಿಂದಾಗಿ ಜಿಲ್ಲೆಯ ರಾಜಕೀಯ ಕ್ಷೇತ್ರದಲ್ಲಿ ಗಂಭೀರ ಬದಲಾವಣೆಗೆ ಪ್ರೇರಕವಾಗಿತ್ತೆಂಬುದು ರಾಜಕೀಯ ಆಸಕ್ತರಿಗೆಲ್ಲ ಗೊತ್ತಿರುವ ಸಂಗತಿಯೆ.

ಜವರಪ್ಪಗೌಡರು ವ್ಯಾಪಾರಿಯಾಗಿ, ಪತ್ರಿಕೋದ್ಯಮಿಯಾಗಿ, ರಾಜಕಾರಣಿ ಯಾಗಿ, ಸಾಹಿತ್ಯಾಸಕ್ತರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ ; ಸಮಾಜ ಸುಧಾರಕ ರಾಗಿ ; ಬದುಕಿನ ವಿವಿಧ ಸ್ತರಗಳಲ್ಲಿ ಸ್ಪಂದಿಸುತ್ತ ತಮ್ಮದೇ ಆದ ಅಸ್ತಿತ್ವವನ್ನು ಉಳಿಸಿ ಕೊಂಡು ಬೆಳೆಸಿಕೊಂಡು ಬಂದಿದ್ದಾರೆ. ಜವರಪ್ಪಗೌಡರು ನನಗೆ ತೀರಾ ಹತ್ತಿರವಾಗು ವುದು, ಮೆಚ್ಚಿಕೆಯಾಗುವುದು, ಒಪ್ಪಿತವಾಗುವುದು, ಹಮ್ಮು–ಬಿಮ್ಮಿಲ್ಲದ ತೆರೆದ ವ್ಯಕ್ತಿತ್ವದಿಂದ. ಹೊಗಳಿಕೆಗೆ ಉಬ್ಬದೆ, ತೆಗಳಿಕೆಗೆ ಕುಗ್ಗದೆ ಆ ಕ್ಷಣದಿಂದ ಹೊಸತಾಗಿ ಬಿಡುವ ಸ್ನೇಹ–ಸೌಜನ್ಯತೆ, ಅವರಿಗೆ ನೆಂಟರು ಜಾಸ್ತಿಯಾಗಲು ಕಾರಣವಾಗಿದೆ. 'ಅವರ ಮನೆ ಒಂದು ಧರ್ಮಛತ್ರವಿದ್ದಂತೆ' ಎಂದು ಗೆಳೆಯ ಶ್ರೀ ಜಯಪ್ರಕಾಶ್ ಗೌಡರು ಹೇಳಿರುವುದರಲ್ಲಿ ಸತ್ಯವಿದೆ.

ನಾಗಮಂಗಲದ ತಾಲ್ಲೂಕಿನ ಒಣನೆಲದ ರೈತ ಕುಟುಂಬದಿಂದ ಬಂದ ಜವರಪ್ಪ ಗೌಡರ ಬದುಕು ಆರಂಭವಾದದ್ದೂ ಆ ಹಸಿವಿನೊಡನೆಯ ಹೋರಾಟದಿಂದಲೆ. ಆರ್ಥಿಕ ಸಂಕಷ್ಟಗಳು ಅವರನ್ನು ಒಬ್ಬ ಉತ್ತಮ ವ್ಯಾಪಾರಿಯನ್ನಾಗಿ ತಿದ್ದಿ ಚತುರತೆಯನ್ನು

ತಂದು ಕೊಟ್ಟರೆ : ಅನಕ್ಷರಸ್ಥ ಪರಿಸರ ಅವರನ್ನು ಮುಂದೆ ವಯಸ್ಕರಶಿಕ್ಷಣಕ್ಷೇತ್ರ ದಲ್ಲಿ ಅವರು ಸಲ್ಲಿಸಿರುವ ಸೇವೆ ದೆಪಲಿಯುವರೆಗೂ ಜನಪ್ರಿಯತೆ ಪರಡುವಂತೆ ಪ್ರೇರಣೆ ತುಂಬಿತು. ಈ ಎರಡುಕ್ಷೇತ್ರದಲ್ಲಿ ಜನಸಾಮಾನ್ಯರಿಗಾಗಿ ಅವರು ಮಾಡಿದ ಸೇವೆ ಇಂದಿಗೂ ನನಗೆ ಪ್ರಿಯವೆನಿಸಿದೆ.

ಜವರಪ್ಪಗೌಡರು ಉತ್ತಮ ವ್ಯಾಪಾರಿ ಎಂದೆ : ಅವರ ಚತುರತೆಗೆ ದಿಢೀರನೆ ಶ್ರೀಮಂತನಾಗಬಲ್ಲ ಯಾವುದಾದರೂ ವ್ಯಾಪಾರವನ್ನು ಆಯ್ದುಕೊಳ್ಳಬಹುದಾಗಿತ್ತು. ಆದರೆ ಅವರು ತೆರೆದದ್ದು ಅಷ್ಟೇನೂ ಲಾಭದಾಯಕವಲ್ಲದ ಪುಸ್ತಕಗಳ ಅಂಗಡಿ, ಮುದ್ರಣಾಲಯ, ವಾರ್ತಾಪತ್ರಿಕೆಗಳ ಪ್ರತಿನಿಧಿ. ಪತ್ರಿಕೆ, ಪುಸ್ತಕ, ಮುದ್ರಣಾಲಯ ಗಳನ್ನು ಮೂರುದಶಕಗಳ ಹಿಂದೆಯೇ ನಡೆಸುವುದು ಎಷ್ಟು ಕಷ್ಟದ ಹಾದಿ ಎಂಬುದು ಆ ಕ್ಷೇತ್ರದಲ್ಲಿ ಶ್ರಮಿಸಿದವರಿಗೇ ಗೊತ್ತು.

'ಪತ್ರಿಕೆ ಪುಸ್ತಕ ಮಾರಿಯೇ ಮಂಡ್ಯದಲ್ಲಿ ಮೂರು ಕಾಸು ಸಾಲ ಮಾಡದೆ ಮನೆಯೊಂದನ್ನು ಕಟ್ಟಿಸಿದೆ.' ಎಂದು ಒಮ್ಮೆ ನನ್ನೊಡನೆ ಹೇಳಿದ ನೆನಪುಂಟು. ಈ ಮಾತು ಹೇಳುವುದಕ್ಕೆ ಕಾರಣ ಇಷ್ಟೆ ಅವರು ಬದುಕಿನಲ್ಲಿ ನಡೆಸಿದ ಹೋರಾಟ ; ದುಡಿಮೆಯಲ್ಲೇ ಗಳಿಸಿಕೊಂಡ ಆತ್ಮವಿಶ್ವಾಸ ಹಾಗೂ ತೃಪ್ತಿ ; ದಾಖಲೆಯಾಗು ವಂಥವು.

ಜಿಲ್ಲೆಯ ರೈತರ ಮನದಾಳದಲ್ಲಿ ಜವರಪ್ಪಗೌಡರು ಎಷ್ಟು ಜನಪ್ರಿಯಗೊಂಡಿ ದ್ದಾರೆಂದರೆ ನಿಜಕ್ಕೂ ವಿಸ್ಮಯವಾಗುತ್ತದೆ. ಕಂದಾಯಇಲಾಖೆಗೆ ಜವರಪ್ಪಗೌಡರು ಸಲ್ಲಿಸಿದ ಸೇವೆ ಗುಣನಾರ್ಹ, 'ಪಿ. ಎಸ್. ಜವರಪ್ಪಗೌಡ ಅಂಡ್ ಸನ್ಸ್' ಸ್ಟೇಷನರಿ ಅಂಗಡಿಯಿಂದ ಇಂದಿಗೂ ತಾಲ್ಲೂಕು ಕಛೇರಿಗೆ, ಕಂದಾಯ ಇಲಾಖೆಗೆ ಅಥವಾ ಬೇರೆಯಾವುದೇ ಇಲಾಖೆಗೆ ಬೇಕಾದ ಅಗತ್ಯ ಪೂರೈಕೆಗಳು ಇಲ್ಲಿಂದಲೇ ಸರಬರಾಜಾಗು ತ್ತಿವೆ. ಕಂದಾಯ ಪಟ್ಟಾ, ಆರ್.ಟಿ.ಸಿ. ಅರ್ಜಿಗಳು, ಸರ್ಟಿಫಿಕೇಟ್‌ಗಳು, ಫಾರಂಗಳು, ಯಾವುದು ಬೇಕು ? ಜವರಪ್ಪಗೌಡರ ಅಂಗಡಿಯಲ್ಲಿ ರೆಡಿಮೇಡ್ ಆಗಿ ಸಿಗುತ್ತದೆ. ನೋಡುವುದಕ್ಕೆ ಇದು ಸಣ್ಣವಿಚಾರ ಅನಿಸಬಹುದು ಆದರೆ ಅದು ಮಹತ್ವದ ಸಂಗತಿಯೆ.

ಜವರಪ್ಪಗೌಡರು ಪತ್ರಿಕಾಪ್ರತಿನಿಧಿ ; ಸ್ವತಃ ಸಂಪಾದಕರಾಗಿ ಅವರು 'ವಿಶ್ವಾ ಮಿತ್ರ' ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು.

ನಮ್ಮ ದೊಡ್ಡಪ್ಪನವರಾದ ದಿವಂಗತ ಕಂಟ್ರ್ಯಾಕ್ಟರ್ ಶ್ರೀ ಪುಟ್ಟೇಗೌಡರು (ಹುಲ್ಲುಕೆರೆ ಪಿ. ಜೋಗಯ್ಯ ಅವರ ತಂದೆ) ಹೇಳುತ್ತಿದ್ದ ಮಾತಿದು : 'ಜವರಪ್ಪ ಅಂಥ ಒಬ್ಬ ಕಲಿಪುರುಷನ್ನು ಈ ಪತ್ರಿಕೆ ('ವಿಶ್ವಾಮಿತ್ರ') ಈ ಮೊಸಗಾರ ಮಗ ರೈತರಿಗೆ ಏನು ಬೇಕು ಅಂತ ಸರಕಾರ ಕಾನೂನು ತರ್‍ತಾ ಇದ್ದಂಗೇ ಬರೀತಾನೆ' ಅಂಥ ಜವರಪ್ಪಗೌಡರ ಪತ್ರಿಕೆಯನ್ನು ಪರಿಚಯಿಸಿದ್ದು ನೆನಪಿದೆ.

ತಮ್ಮ ಪ್ರತಿಭೆಗೆ ತಕ್ಕ ಸ್ಥಾನಮಾನಗಳಲ್ಲಿ ರಾಜಕೀಯ ಕ್ಷೇತ್ರದಲ್ಲಿ ಶ್ರೀ ಪಿ.ಎಸ್. ಜವರಪ್ಪಗೌಡರು ಮಿಂಚದೇ ಹೋದುದು ವಿಷಾದನೀಯ. ರಾಜಕೀಯ ಮೂರ್ಖರ ಕೊನೆಯ ಆಟ. 'ಅಧಿಕಾರ ಸ್ಥಾನಗಳಲ್ಲಿ ಕೂರಿಸಿದ ದಡ್ಡರು ; ಪ್ರತಿಭಾವಂತರಿಗಿಂತ ಹೆಚ್ಚು ಸುರಕ್ಷಿತ' ಎನ್ನುವುದು ಸರಳ ಸೂತ್ರ. ಆದ್ದರಿಂದ ಜವರಪ್ಪಗೌಡರನ್ನು ಬೆಳೆಯಲು ಬಿಡಲಿಲ್ಲವೇನೋ ಅನಿಸುವುದು ಸಹಜವೆ. ಆದರೂ ಸಹ ಸಿಕ್ಕಿದ ಅವಕಾಶ ಗಳನ್ನು ಸದುಪಯೋಗಿಸಿಕೊಂಡ ನಿದರ್ಶನಗಳಿವೆ. ರಾಜ್ಯ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ 'ಅಕ್ಷರ ಚಳುವಳಿ'ಗೆ ಹೆಚ್ಚು ಮಹತ್ವ ದೊರಕಿ ತೆಂದೇ ಹೇಳಬೇಕು.

ಜವರಪ್ಪಗೌಡರು ಸ್ವಾತಂತ್ರ್ಯ ಹೋರಾಟಗಾರರು. ಸ್ವಾಭಿಮಾನಿ ಮತ್ತು ಸ್ವಾತಂತ್ರ್ಯ ಪ್ರೇಮಿ. ಸ್ವಾಭಿಮಾನಕ್ಕೆ ಅಡ್ಡಿ ಬಂದಾಗ–ಚಾಣಕ್ಯ–ಸುಮ್ಮನಾಗಬಲ್ಲ; ಇರಬಲ್ಲ ಮನುಷನೇ ಅಲ್ಲ.

ಜವರಪ್ಪಗೌಡರು ವಿಶ್ವವಿದ್ಯಾಲಯದಲ್ಲಿ ಕಲಿತವರಲ್ಲ ; ಆದರೆ ಜೀವನವೆಂಬ ಮಹಾವಿಶ್ವವಿದ್ಯಾಲಯದಲ್ಲಿ ಖಂಡಿತ ಇವರು ಮೆರಿಟ್‌ವಿದ್ಯಾರ್ಥಿಯೆ! ಪುಸ್ತಕ ಓದುವ, ಪ್ರವಾಸಮಾಡುವ ಈ ಹವ್ಯಾಸ ರೂಢಿಸಿಕೊಂಡ ಪರಿಣಾಮವಾಗಿ ಪಂಡಿತರಲ್ಲಿ ಪಂಡಿತ ರಾಗಿ ; ಪಾಮರರಲ್ಲಿ ಒಂದುಗೂಡುತ್ತ ತಮ್ಮ ವಿಚಾರಲಹರಿಗಳನ್ನು ಜನಸಾಮಾನ್ಯ ರಿಗೆ ಮುಟ್ಟಿಸಬಲ್ಲ ಒಳ್ಳೆಯ ಪ್ರಚಾರಕರಂತೆ ಕಾಣಿಸುತ್ತಾರೆ.

ರಾಷ್ಟ್ರಕವಿ ಕುವೆಂಪು ಇವರ ಮೆಚ್ಚಿನ ಕವಿ. ಕುವೆಂಪುಸಾಹಿತ್ಯ ಜನಸಾಮಾನ್ಯನಿಗೆ ತಲುಪಿಸಬೇಕೆನ್ನುವ ಇವರ ಕಳಕಳಿ ಬೆರಗುಗೊಳಿಸುತ್ತದೆ. ಹಾಗೆಯೇ ಆದಿಚುಂಚನಗಿರಿ ಮಠದ ಬಗ್ಗೆ ಇವರಿಗಿರುವ ಜಾತೀಯ ಒಲವು ಚಕಿತಗೊಳಿಸುತ್ತದೆ ! ರಾಷ್ಟ್ರಕವಿ ಕುವೆಂಪು ಮತ್ತು ಶ್ರೀ ಆದಿಚುಂಚನಗಿರಿ ಮಠ ಈ ಎರಡನ್ನೂ ಒಟ್ಟಿಗೆ ಕಲಬೆರಸುವ ಮೋಜು ನನ್ನಂಥವರಿಗೆ ಅರ್ಥವಾಗುವುದಿಲ್ಲ.

ರಾಷ್ಟ್ರಕವಿ ಕುವೆಂಪು ಮಠದೊಳಗಿದ್ದಾರೋ ; ಮಠವೇ ಕುವೆಂಪು ಅವರ 'ವಿಶ್ವಮಾನವ'ದಲ್ಲಿ ಐಕ್ಯಗೊಂಡಿದೆಯೋ ಎನ್ನುವ ದ್ವಂದ್ವ ಕಾಡುವುದಕ್ಕೆ—ಜವರಪ್ಪ ಗೌಡರು ಪೂರಕವಾಗುತ್ತಿದ್ದಾರೆ. ಒಕ್ಕಲಿಗರು ಶ್ರೀಮಠವನ್ನು ರಕ್ಷಿಸಬೇಕೆ ? ರಾಷ್ಟ್ರ ಕವಿ ಕುವೆಂಪು ಅವರನ್ನು ಅನುಸರಿಸ ಬೇಕೆ ? ಹೇಗೆ ಇವೆರಡನ್ನೂ ಉಳಿಸಿ ಕೊಳ್ಳುವುದು ತಿಳಿಯದಾಗಿದೆ.

ಕಡೆಯದಾಗಿ ಪ್ರಸ್ತಾಪಿಸಬಹುದಾದ ಮತ್ತೊಂದು ಮಹತ್ವದ ವಿಚಾರವಿದೆ ; ಶ್ರೀ ಕುವೆಂಪು ಅವರ ಮಂತ್ರಮಾಂಗಲ್ಯದ ಅನುಷ್ಠಾನದ ಬಗ್ಗೆ ಶ್ರೀ ಪಿ. ಎಸ್. ಜವರಪ್ಪಗೌಡರ ನಿಲುವು.

ಮಂಡ್ಯ ಜಿಲ್ಲೆಯಲ್ಲಿ 'ಹೊರೆಯಾಗದ ಸರಳ ಮದುವೆ' ಚಳವಳಿ 1970 ರ ದಶಕದಲ್ಲೇ ತೀವ್ರವಾಗಿ ಆರಂಭವಾಯಿತು. ಈ ಚಳವಳಿಯನ್ನು ಮಂಡ್ಯದ ರೈತ

ಸಭಾಂಗಣಕ್ಕೆ ತಂದು, 'ಕುವೆಂಪು ಮಂತ್ರಮಾಂಗಲ್ಯ' ಎಂಬ ಹೆಸರಿನಲ್ಲಿ ಜನಪ್ರಿಯ ಗೊಳಿಸಿದವರು ಶ್ರೀ ಕೆ.ವಿ. ಶಂಕರಗೌಡರು ಮತ್ತು ಶ್ರೀ ಪಿ. ಎನ್. ಜವರಪ್ಪಗೌಡರು. ಆನಂತರ ಶ್ರೀ ಎಂ. ಶ್ರೀನಿವಾಸ್ ಅವರ ನೇತೃತ್ವದಲ್ಲಿ ಜಿಲ್ಲಾ ರೈತಸಂಘ ಜನ ಸಾಮಾನ್ಯರ ಗಮನ ಸೆಳೆದು, ಅದಕ್ಕೊಂದು ಮಹತ್ವ ತಂದುಕೊಟ್ಟಿತು.

ಜವರಪ್ಪಗೌಡರ ಹೋರಾಟದ ಬದುಕು ಕುತೂಹಲಕಾರಿ. ಎಪ್ಪತ್ತರ ಹರೆಯ ದಲ್ಲೂ, ಸ್ಫೂರ್ತಿತುಂಬುವ ಉತ್ಸಾಹಶಾಲಿ. ಹಿರಿಯ ಪತ್ರಿಕೋದ್ಯಮಿಯಾಗಿ ನಮ್ಮೊಡನೆ ಕಿರಿಯರಲ್ಲಿ ಕಿರಿಯರಂತೆ ನಡೆದುಕೊಳ್ಳುತ್ತಿದ್ದ ಅವರ ಹೃದಯವಂತಿಕೆ ಸ್ಮರಣೀಯ.

**ರಮೇಶ ಹುಲ್ಲಕೆರೆ**

## ದನಿ ಇಲ್ಲದವರ ದನಿ

ಮಂಡ್ಯಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ನಾಗಮಂಗಲ, ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಒಟ್ಟಾರೆ ಸಾಂಸ್ಕೃತಿಕ ಚಟುವಟಿಕೆಗಳು ಹೆಚ್ಚು. ಇಂದಿಗೂ ಈ ಮಾತು ಸತ್ಯಕ್ಕೆ ಸಮೀಪವಾಗಿಯೇ ಇದೆ. ಇಂತಹ ಸಂಸ್ಕೃತಿಯ ದಟ್ಟಣೆಯ ತವರೂರಾದ ನಾಗಮಂಗಲ ತಾಲ್ಲೂಕಿನಲ್ಲಿ ಜನ್ಮ ತಳೆದ ಪಿ. ಎಸ್. ಜವರಪ್ಪಗೌಡರು ಎಲ್ಲಿಯೇ ಇರಲಿ ಗಮನ ಸೆಳೆಯುವ ವ್ಯಕ್ತಿತ್ವ ಹೊಂದಿದ್ದಾರೆ.

ಎತ್ತರವಲ್ಲದ ನಿಲುವು, ಕೃಷ್ಣವರ್ಣದ ಗೌಡರಿಗೆ ಸದಾ ಹಸನ್ಮುಖ. ಬಿಳಪು ಖಾದಿಯ ಬಟ್ಟೆಯಲ್ಲಿ ಎಲ್ಲೇ ಇದ್ದರು ಎದ್ದು ಕಾಣುವ ಆಸಾಮಿ. ನಗರದಲ್ಲಿ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಎಲ್ಲಿಯೇ ಆಗಲಿ ಅಲ್ಲಿಗೆ ಹಾಜರು. ಬಾಯಿ ತೆರೆದರೆ ಸಾಕು, ವಿದ್ವತ್ತಿನ ಹೊನಲು, ಕುವೆಂಪು ಸಾಹಿತ್ಯದ ಉದ್ಧರಣೆಗಳು, ಸ್ವಾನುಭವದ ಕಿಡಿ ನುಡಿಗಳು ಓತಪ್ರೋತವಾಗಿ ನುಗ್ಗುತ್ತವೆ. ರಸ್ತೆಯಲ್ಲಿ ನಡೆಯುತ್ತಿದ್ದವರು ಒಂದು ಘಳಿಗೆ ನಿಂತು ಆಲಿಸಿ ಮುಂದೆ ಸಾಗುವಂತೆ, ಮಾತಿನ ಗತ್ತು, ವಾದ ವಿವಾದದ ವೈಖರಿ.

ನಾನಾಗ ಮಂಡ್ಯದ ಸರ್ಕಾರಿಕಾಲೇಜಿನಲ್ಲಿ ಓದುತ್ತಿದ್ದೆ. ರೈತ ಸಭಾಂಗಣ ದಲ್ಲೊಂದು ಕಾರ್ಯಕ್ರಮ, ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ. ಆ ಸಮಾರಂಭದಲ್ಲಿ ಜವರಪ್ಪಗೌಡರೂ ಮಾತನಾಡಿದರು. ಸಾಮಾನ್ಯ ಪತ್ರಕರ್ತ ಏನು ಮಾತನಾಡಿಯಾನು ಎಂದುಕೊಂಡು, ಕನ್ನಡ ವಿಶೇಷ ಅಧ್ಯಯನ ಮಾಡುತ್ತಿದ್ದ ನಾಲ್ವರು ಗೆಳೆಯರು ಕೂಡಿ 'ಬೋರ್'ನಿಂದ ಬಿಡುಗಡೆಗಾಗಿ ಕೆಳಗೆ ಇಳಿದೆವು.

ಜವರಪ್ಪಗೌಡರು ಭಾಷಣ ಪ್ರಾರಂಭಿಸಿದ್ದರು. ಕುವೆಂಪು ಅವರ ರಾಮಾಯಣ ದರ್ಶನಂನ ಸನ್ನಿವೇಶಗಳ ವರ್ಣನೆ ಪ್ರಾರಂಭಿಸಿದ್ದರು. ಶಬರಿಗಾದನು ಅತಿಥಿ ದಾಶರಥಿ, ಶಿಲಾತಪಸ್ವಿನಿ, ಊರ್ಮಿಳಾದೇವಿ, ಓ ಲಕ್ಷ್ಮಣ. ಕೆಳಗೆ ಹರಟೆಹೊಡೆಯುತ್ತಿದ್ದ ನಾವು ಮೇಲೆ ಓಡಿದೆವು. ಕಥೆಯನ್ನು ವಿಶ್ಲೇಷಿಸುತ್ತಿದ್ದ ಶೈಲಿ, ನಿರೂಪಣಾ ರೀತಿ, ಪುಟ ಸಮೇತ ಉದ್ಧರಿಸುತ್ತಿದ್ದ ವೈಖರಿಗೆ ಬೆರಗಾಗಿ ಹೋದೆವು. ಕನ್ನಡ ಅಧ್ಯಾಪಕರಿಗಿಂತ ಸೊಗಸಾಗಿ ಆ ದಿನ ಮಾತನಾಡಿದರು. ಮುಂದೆ ಅವರೂ ಭಾಷಣಕಾರರಲ್ಲಿ ಒಬ್ಬರು ಎಂಬುದು ಗೊತ್ತಾದಾಗಲೆಲ್ಲ ತಪ್ಪದೆ ನಮ್ಮ 'ಗೆಳೆಯರ ಗುಂಪು' ಅಲ್ಲಿಗೆ ಹಾಜರಾಗುತ್ತಿತ್ತು.

ಮತ್ತೊಂದು ಕಡೆ ಭಾಷಣ ಮಾಡುತ್ತ ಅವರು ಹೇಳಿದ ಮಾತುಗಳು ನನ್ನ ನೆನಪಿನಲ್ಲಿ ಹಸಿರಾಗಿವೆ : "ಮಂಡ್ಯ ಜಿಲ್ಲೆಯಲ್ಲಿ ಹಣದ ಹೊಳೆ ಹರಿಯುತ್ತಿದೆ. ವಿದ್ಯೆ

ಸಾಲುತ್ತಿಲ್ಲ. ಲಕ್ಷಾಂತರ ರೂಪಾಯಿಗಳ ಮನೆ ಕಟ್ಟಿಸಿದ್ದಾರೆ, ಸಾವಿರಾರು ರೂಪಾಯಿ ಖರ್ಚು ಮಾಡಿ 'ಷೋಕೇಸ್, ಕಟ್ಟಿಸಿ, ಅದರಲ್ಲಿ ನಾಯಿ ನರಿ ಬೊಂಬೆ ತುಂಬಿಸಿದ್ದಾರೆ. ಇದು ತಪ್ಪಬೇಕು. ಅಲ್ಲೆಲ್ಲ ಪುಸ್ತಕಗಳನ್ನು ಜೋಡಿಸುವಂತಾಗಬೇಕು. ನೀವು ಓದದಿದ್ದರೂ ಪರವಾಗಿಲ್ಲ. ಮನೆಗೆ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಇಡಿ. ನಿಮ್ಮ ಮಕ್ಕಳು, ಮೊಮ್ಮಕ್ಕಳು ಅದರಿಂದ ಪ್ರಯೋಜನ ಪಡೆಯುತ್ತವೆ'' ಎಂದರು. ಈ ಲೇಖನ ಬರೆಯಲು ಪ್ರಾರಂಭಿಸಿ. ತಲೆ ಕೆರೆದುಕೊಳ್ಳುತ್ತಿದ್ದಾಗ ನನ್ನ ಹೆಂಡತಿ ನೆನಪಿಗೆ ತಂದುಕೊಂಡ ಸಂಗತಿ ಇದು. ಗಂಡು ಹೆಣ್ಣು ಎನ್ನದೆ ಎಲ್ಲರ ಮನಸ್ಸಿನ ಮೇಲೆ ಪ್ರಭಾವ ಬೀರುವಂತಹ ಮಾತುಗಾರಿಕೆ ಜವರಪ್ಪಗೌಡರದಾಗಿದೆ ಎಂಬುದು ನನ್ನ ಅನ್ನಿಸಿಕೆ.

ಕುವೆಂಪು ಎಂದರೆ ಎಲ್ಲೆ ಇಲ್ಲದ ಅಭಿಮಾನ. ಒಣಗಿದ, ತೋರಿಕೆಯ ಕೃತಕಾಭಿಮಾನವಲ್ಲ. ಅವರ ಸಾಹಿತ್ಯವನ್ನು ಅರಗಿಸಿಕೊಂಡು ಮೂಡಿದಂತಹ ಸಹಜಾಭಿಮಾನ. ಕುವೆಂಪು ಅವರ ವಿಚಾರಧೋರಣೆಗಳಿಂದ ಪ್ರಭಾವಿತರಾಗಿ ಕ್ರಿ.ಶ. 1977ರಷ್ಟು ಹಿಂದೆಯೇ ತಮ್ಮ ಮಗನಿಗೆ 'ಸರಳ ಮದುವೆ' ಮಾಡಿ ಮಂಡ್ಯ ಜಿಲ್ಲೆಯಲ್ಲಿ ಮಾದರಿ ಎನ್ನಿಸಿದವರು. ಇತ್ತೀಚೆಗೆ ರೈತಸಂಘದ ನೇತೃತ್ವದಲ್ಲಿ ಹಲವಾರು ಸರಳ ಮದುವೆಗಳು ಜರಗುತ್ತಿವೆ. ''ಜನ, ನಮ್ಮ ಜಿಲ್ಲೆಯ ಜನ, ಮೌಢ್ಯದಿಂದ ಹೊರ ಬರಬೇಕು. ಹಣ ಸಂಪಾದನೆಗೆ ಎಷ್ಟೊಂದು ಉತ್ಸಾಹಿಗಳಾಗಿದ್ದೇವೊ, ಹಣ ಖರ್ಚು ಮಾಡಲು ಬೇಕಾದ ವಿದ್ಯೆ ಬುದ್ಧಿ ಸಂಸ್ಕೃತಿಯ ಗಳಿಕೆಗೂ ನಾವು ಉತ್ಸಾಹ ತೋರಿಸಬೇಕಾಗಿದೆ'' ಎಂಬ ಕಡೆಗೆ ಅವರ ಒಲವು.

ವಿದ್ಯೆ ಇಲ್ಲದಿದ್ದರೆ ಜನರ ಶ್ರೀಮಂತಿಕೆಗೆ ಬೆಲೆ ಇಲ್ಲ ಎಂಬುದನ್ನು ಅರಿತಿದ್ದ ಗೌಡರು 'ಕರ್ನಾಟಕ ವಯಸ್ಕರಶಿಕ್ಷಣ ಸಮಿತಿ'ಯ ಅಧ್ಯಕ್ಷರಾಗಿದ್ದಾಗ ಕಳಕಳಿಯಿಂದ ದುಡಿದವರು. ಉತ್ತಮ ಕೃತಿಗಳನ್ನು ದಪ್ಪದಪ್ಪ ಅಕ್ಷರಗಳಲ್ಲಿ ಮುದ್ರಿಸಿ ನವ ಸಾಕ್ಷರರು ಓದಲು ಅನುಕೂಲವಾಗುವಂತೆ ವಿತರಣೆ ಮಾಡಿದ್ದ ನೆನಪು.

ಸ್ವಾತಂತ್ರ್ಯ ಹೋರಾಟಗಾರರು, ಗಾಂಧೀವಾದಿಗಳು, ಅಪ್ಪಟ ಖಾದಿಧಾರಿಗಳ ರಾಜಕೀಯ ಭಾಷಣ ಕೇಳಿದ ನೆನಪು ನನಗಿದೆ. ಆದರೆ ಅವು ನನ್ನ ಮೇಲೆ ಪ್ರಭಾವ ಬೀರಲಿಲ್ಲ. ಮಂಡ್ಯದಲ್ಲೆಲ್ಲ ಪತ್ರಿಕೋದ್ಯಮಿಯಾಗಿ ಚಿರಪರಿಚಿತರು. 'ವಿಶ್ವಾಮಿತ್ರ' ಎಂಬ ಪತ್ರಿಕೆ ನಡೆಸಿ, ಕೈಸುಟ್ಟುಕೊಂಡು ಕೈಬಿಟ್ಟೆ ಎಂದು ನಗುತ್ತಾರೆ.

ಲೇಖನಿಯ ಮೂಲಕ ಶೋಷಣೆಗೆ ಒಳಗಾದವರಿಗೆ ನ್ಯಾಯ ದೊರಕಿಸಿಕೊಟ್ಟ ಪ್ರಸಂಗಗಳೆಷ್ಟೊ. ಬಡವರ ವಿರೋಧಿಯಾಗಿದ್ದ ಜಿಲ್ಲಾಧಿಕಾರಿಗಳೊಬ್ಬರನ್ನು ಲೇಖನಿ ಮೂಲಕ, ಪತ್ರಿಕೆನಲ್ಲಿ ಬರೆದು 'ನೀವು ಹೇಳಿದ್ದು ನಿಜ, ನನ್ನಿಂದ ತಪ್ಪಾಗಿದೆ, ಸರಿಪಡಿಸಿಕೊಳ್ಳುತ್ತೇನೆ' ಎಂದು ತಪ್ಪೊಪ್ಪಿಸಿ ತಿದ್ದಿದ್ದುಂಟು.

ನನ್ನ ಬಾಲ್ಯದಲ್ಲಿ, ನನ್ನ ತಾತ ಸಾದೊಳಲು ಮಲ್ಲೇಗೌಡರ ಜೊತೆ ಪತ್ತಾರು

ಸಲ ಜವರಪ್ಪಗೌಡರ ಮನೆಗೆ ಹೋದದ್ದು ಉಂಟು. ಅವರ ಮನೆಯೊಂದು ಸಂತೆ ಇದ್ದಂತೆ. ಸದಾ ಜನ ಜಂಗುಳಿ, ರಾಜಕಾರಣದ ಚರ್ಚೆ, ಆರ್ಭಟ, ವಾಗ್ವಾದ, ಮನೆಯ ಮಾಡು ಹಾರಿಹೋಗುವಂತೆ ನಗು ಉಕ್ಕುಕ್ಕಿ ಹೊನಲಾಗಿ ಹರಿಯುತ್ತಿತ್ತು. ಕಾಫಿ ತಿಂಡಿಯ ಸಮಾರಾಧನೆಯೂ ನಡೆಯುತ್ತಿತ್ತು.

ಜವರಪ್ಪಗೌಡರು ನನಗೆ ರಾಜಕಾರಣಿಯಂತೆ ಕಂಡುಬರಲಿಲ್ಲ. ಕಾವ್ಯಾರಾಧಕರಾಗಿ, ಸಾಂಸ್ಕೃತಿಕ ರಾಯಭಾರಿಯಾಗಿ, ಸಮಾಜಸೇವಕರಾಗಿ, ಪತ್ರಿಕೆಯ ಮೂಲಕ ದನಿ ಇಲ್ಲದವರ ದನಿಯಾಗಿ ಕಂಡುಬಂದಿದ್ದಾರೆ.

**ಅರ್ಜುನಪುರಿ ಅಪ್ಪಾಜಿಗೌಡ**

# ಕ್ರಿಯಾಶೀಲ

ಅನಕ್ಷರತೆ ಒಂದು ಭೂತ. ಇದನ್ನು ಹೊಡೆದೋಡಿಸುವ ಪವಿತ್ರಕಾರ್ಯದಲ್ಲಿ ತಮ್ಮನ್ನು ತೊಡಗಿಸಿ ಕೊಂಡವರು ಶ್ರೀ ಜವರಪ್ಪಗೌಡರು. ಅಕ್ಷರ ಕಲಿಸಿದಾತನೇ ಗುರು ಎಂಬ ಗೌರವಕ್ಕೆ ಪಾತ್ರರಾದವರು. ರಾಜ್ಯ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಅವರು ದುಡಿದ ಪರಿ ಸ್ತುತ್ಯರ್ಹ. ಸಾಹಸ ಜೀವಿಗಳೂ ಸಾಧನೆ ಗಳನ್ನು ಮಾಡಿದವರೂ ಆದ ಜವರಪ್ಪಗೌಡರು ಸರಳ ಜೀವಿಗಳು.

ನನಗೆ ಅವರ ಪರಿಚಯವಾದದ್ದು ಸುಮಾರು 1972–73ರಲ್ಲಿ. ಆ ಪರಿಚಯ ನನ್ನಂತಹ ತರುಣರಿಗೆ ಆಗ ಒಂದು ಪ್ರೇರಕಶಕ್ತಿಯಾಯಿತೆನ್ನಬಹುದು. ಅರಳು ಹುರಿದಂತೆ ಮಾತು, ನಗುಮುಖ, ಸ್ನೇಹಭಾವ, ಕಿರಿಯರಲ್ಲಿ ಗೌರವ, ವಿದ್ಯಾವಂತ ರೆಂದರೆ ಮನ್ನಣೆ ಇವು ಗೌಡರ ವಿವಿಧ ಮುಖಗಳು. ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರ ಕಛೇರಿಯಲ್ಲಿ ನಾನು ಅವರ ಪರಿಚಯಮಾಡಿಕೊಂಡೆ. ನನ್ನನ್ನು ಬಹು ದಿನಗಳಿಂದಲೂ ಬಲ್ಲವರಂತೆ ವಿಶ್ವಾಸದಿಂದ ಮಾತನಾಡಿಸಿದರು. ಕಾರಿನಲ್ಲಿ ನಾವು ಶ್ರೀ ನಾಗೇಗೌಡರ ಮನೆಗೆ ಹೊರಟೆವು. ನನ್ನದು ಕೇವಲ ಆಕಸ್ಮಿಕ ಭೇಟಿಯಾಗಿತ್ತು. ಮಾರ್ಗದಲ್ಲಿ ಇಳಿದುಕೊಂಡೆ. ಆದರೆ ಕಾರಿನಲ್ಲಿ ಸಾಗಿದಷ್ಟು ದೂರ ಜವರಪ್ಪಗೌಡರು ಅಂದಿನ ತರುಣ ಕತೆಗಾರರ ಒಂದು ಸ್ಥೂಲವಿಮರ್ಶೆಯನ್ನು ಮುಂದಿಟ್ಟರು. ಕತೆಗಾರ ಈಶ್ವರಚಂದ್ರರ ಒಂದು ಕಥೆಯನ್ನು ಮೆಚ್ಚಿಕೊಂಡು ವಿವರಣೆ ನೀಡಿದರು. ನನಗೆ ಗೌಡರು ಇಷ್ಟೊಂದು ಕಾರ್ಯಭಾರಗಳ ನಡುವೆ ಎಷ್ಟೊಂದು ಓದಿ ಕೊಂಡಿದ್ದಾರೆ. ಸಮಯವನ್ನು ಸದುಪಯೋಗ ಮಾಡಿ ಕೊಂಡಿದ್ದಾರೆ ಎಂಬುದು ಒಂದು ವಿಸ್ಮಯವೇ ಆಯಿತು. ಆದರೆ ಕಾರ್ಯಶೀಲರಿಗೆ, ಕ್ರಮಬದ್ಧ ಜೀವನ ನಡೆಸುವವರಿಗಲ್ಲವೆ ಇದು ಸಾಧ್ಯ ಎಂಬುದು ಮನವರಿಕೆ ಯಾಯಿತು.

ಮುಂದೆ ನಾನು ಆಗಾಗ ಅವರನ್ನು ನೋಡಿದೆನಾದರೂ ಹೆಚ್ಚು ಸಂಪರ್ಕಕ್ಕೆ ಬರಲಾಗಲಿಲ್ಲ. 1988ರ ಜನವರಿಯಲ್ಲಿ ಮಂಡ್ಯಜಿಲ್ಲೆಯ ಶ್ರೀ ಆದಿಚುಂಚನಗಿರಿ ಕ್ಷೇತ್ರದಲ್ಲಿ ನಡೆದ ರಾಜ್ಯಮಟ್ಟದ ಮೂರನೆಯ ಮಕ್ಕಳಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಅವರು ನನಗೆ ಹತ್ತಿರವಾದರು. ಅವರು ಪತ್ರಿಕೋದ್ಯಮಿಗಳು, ಉದ್ಘಾಟನಾ ಸಮಯದಲ್ಲಿ ಪತ್ರಿಕಾವರದಿಗಾರರ ನಡುವೆ ಕುಳಿತಿದ್ದರು. ಮುಖ್ಯ ಮಂತ್ರಿಗಳು ದೀಪ ಬೆಳಗಿ ಉದ್ಘಾಟನೆ ಮಾಡುವ ಸಮಯದಲ್ಲಿ ಪ್ರಧಾನ ಕಾರ್ಯದರ್ಶಿ ಯಾಗಿದ್ದ ನನಗೆ ಮಕ್ಕಳನ್ನು ಮುಂದೆ ಬಿಡಿ ಎಂದರು. ನಾನು ಹಾಗೆಯೇ ನಡೆದು

ಕೊಂಡೆ. ಮಕ್ಕಳ ನಡುವೆ ಮುಖ್ಯಮಂತ್ರಿಗಳು ದೀಪ ಬೆಳಗಿದರು. ಗೌಡರ ಸಾಮಯಿಕ ಪ್ರಜ್ಞೆ ನನಗೆ ತುಂಬಾ ಮೆಚ್ಚುಗೆಯಾಯಿತು. ತಾವು ಹೇಳಿದಂತೆ ಮಾಡಿದುದಕ್ಕಾಗಿ ನನಗೆ ಮೆಚ್ಚುಗೆ ಮಾತುಗಳನ್ನಾಡಿದುದನ್ನು ಮರೆಯಲಾರೆ.

ಮುಂದೆ ಎರಡು ಮೂರು ಸಭೆ ಸಮಾರಂಭಗಳಲ್ಲಿ ಅವರನ್ನು ಕಂಡು ಮಾತನಾಡಲು ಅವಕಾಶವಾಯಿತು. ಒಮ್ಮೆಯಂತೂ ನಾನೊಂದು ಸಭೆಗೆ ಬಂದಾಗ ದೂರದಿಂದಲೇ ಎದ್ದು ಬಂದು ಸ್ವಾಗತಿಸಿ ನನ್ನಲ್ಲಿ ಸ್ನೇಹದ ಮಾತುಗಳನ್ನಾಡಿದುದಲ್ಲದೇ ಅಲ್ಲಿ ಸೇರಿದ್ದ ಕೆಲವು ಗಣ್ಯರಿಗೆ ನನ್ನನ್ನು ಪರಿಚಯಿಸಿದರು. ಇದು ದೊಡ್ಡವರ ದಾರಿ. ಚಿಕ್ಕವರಲ್ಲಿ ಅವರು ತೋರುವ ಪ್ರೀತಿ, ವಿಶ್ವಾಸ ನಿಜಕ್ಕೂ ಗಮನಿಸ ಬೇಕಾದ ಸಂಗತಿ. ಅಷ್ಟೇ ಅಲ್ಲ ಸಭೆಯಿಂದ ಹೊರಡುವಾಗಲೂ ಬೀಳ್ಕೊಡುವ ಬಗ್ಗೆ ಗೌಡರ ಸ್ನೇಹ ಎಂಥ ಆದರ್ಶಪ್ರಾಯ ಎನಿಸುತ್ತದೆ.

ನನ್ನ ಜನ, ನನ್ನ ದೇಶ ಎಂಬ ವಿಶಾಲಮನೋಭಾವವುಳ್ಳ ವ್ಯಕ್ತಿ, ಜವರಪ್ಪಗೌಡರು. ಇಳಿ ವಯಸ್ಸಿನಲ್ಲಿ ಅವರು ಯಾವುದೇ ಕೆಲಸವನ್ನು ಸಂತೋಷದಿಂದ ಸಂಭ್ರಮದಿಂದ ಮಾಡುವ ರೀತಿ ಮನೋತರುಣರಂತೆ ಓಡಾಡುವ ಪರಿ ಎಂಥವರನ್ನೂ ದಂಗುಬಡಿಸುತ್ತದೆ. ಜವರಪ್ಪಗೌಡರು ಮಂಡ್ಯ ಜಿಲ್ಲೆಯ ಆದರ್ಶ, ಕೀರ್ತಿ, ನವಪೀಳಿಗೆ ಅವರಿಂದ ಕಲಿಯಬೇಕಾದದ್ದು ಬಹಳವಿದೆ.

**ಬೆ. ಗೋ. ರಮೇಶ್**

# ಸುಸಂಸ್ಕೃತ

ಅಂದು 1980ನೆಯ ಇಸವಿಯ ಒಂದು ದಿನ, ಕೊಪ್ಪ ಹೋಬಳಿಯ ಒಂದು ಗ್ರಾಮದಲ್ಲಿ ಮದುವೆಯ ನಿಶ್ಚಿತಾರ್ಥ. ಒಂದು ಕೊಠಡಿಯಲ್ಲಿ ಸುಮಾರು ಹತ್ತು ಜನ ಮಂತ್ರಮುಗ್ಧರಂತೆ ಮಾತಿನ ಮೋಡಿಗೆ ಒಳಗಾಗಿದ್ದವರನ್ನು ನಾನು ನೋಡುತ್ತಿದ್ದೆ. ಒಣಕಲುದೇಹದ ಬಿಳಿಜುಬ್ಬದ ಮೇಲೆ ಶಲ್ಯಹಾಕಿಕೊಂಡಿದ್ದ ಈ ವೃದ್ಧರು ಯಾರು ಎಂದು ಪಕ್ಕದಲ್ಲಿದ್ದವರನ್ನು ಕೇಳಿದೆ, ಅದಕ್ಕೆ ಅವರು ಶ್ರೀ ಪಿ. ಎನ್. ಜವರಪ್ಪ ಗೌಡರು ಎಂದು ತಿಳಿಸಿದರು. ನಾನು ಅದುವರೆವಿಗೂ ಅವರ ಹೆಸರನ್ನು ಮಾತ್ರ ಕೇಳಿದ್ದೆ, ಆದರೆ ಶ್ರೀ ಗೌಡರನ್ನು ನೋಡಿರಲಿಲ್ಲ, ಅಂದಿನಿಂದ ಇಂದಿನವರೆವಿಗೂ ನನಗೂ ಅವರಿಗೂ ನಂಟು. ನಾನು ಮಂಡ್ಯಕ್ಕೆ ಹೋದಾಗಲೆಲ್ಲ ಅವರ ಮನೆಗೆ ಭೇಟಿ ನೀಡದ ದಿನವಿಲ್ಲ.

ಮಂಡ್ಯದ ಸುಭಾಷ್ ನಗರದಲ್ಲಿರುವ ಅವರ ಮನೆಯ ಬಾಗಿಲು ಅತಿಥಿಗಳಿಗೆ ಯಾವಾಗಲೂ ತೆರೆದಿರುತ್ತದೆ. ವಯಸ್ಸಿನ, ಜಾತಿಮತದ ಭೇದಭಾವವಿಲ್ಲದೆ ಆತ್ಮೀಯವಾಗಿ ಮಾತನಾಡಿ ಉಣಬಡಿಸಿ ಅವರು ಕಳುಹಿಸಿಕೊಡುತ್ತಾರೆ. ಅವರ ಜೊತೆ ಇರುವ ಕೆಲವು ನಿಮಿಷಗಳಲ್ಲಿ ಒಂದು ಹತ್ತು ಸಾರಿ ರಾಷ್ಟ್ರಕವಿ ಕುವೆಂಪು ರವರ ಹೆಸರು ಉಚ್ಚಾರವಾಗುತ್ತದೆ. ಕವಿಪುಂಗವರ ಗುಣಗಾನವಾಗುತ್ತದೆ. ಅವರ ಬಾಯಿಂದ ಸಂಸ್ಕೃತದ ಶ್ಲೋಕಗಳು ಉದುರುತ್ತವೆ. ನೇಗಿಲಯೋಗಿಯ ಬಗ್ಗೆ ಹುರುಪಿನಿಂದ ಮಾತಾಡುತ್ತಾರೆ. ರೈತರ, ರೈತಸಂಘದ ಬಗ್ಗೆ ಅಪಾರ ಕಾಳಜಿ ಹೊಂದಿರುವ ಶ್ರೀ ಗೌಡರು ಅವರ ಪ್ರಗತಿಗಾಗಿ ಕೆಲವು ಯೋಜನೆಗಳನ್ನು ತಲೆಯಲ್ಲಿ ತುಂಬಿ ಕೊಂಡಿದ್ದಾರೆ. ಅವರ ಬಾಯಿಂದ ಜಾನಪದ ಸಾಹಿತ್ಯ ಕಲೆ, ಕೃಷಿ, ಧಾರ್ಮಿಕ ಮತ್ತು ಶೈಕ್ಷಣಿಕ ವಿಷಯಗಳನ್ನು ಕೇಳಿಯೇ ಆನಂದ ಪಡಬೇಕು.

ಶ್ರೀ ಗೌಡರ ಧರ್ಮ ಪತ್ನಿ ಶ್ರೀಮತಿ ಪಾರ್ವತಮ್ಮ ನವರ ಬಗ್ಗೆ ಬರೆಯದಿದ್ದರೆ ಅಪಚಾರವಾಗುತ್ತದೆ. ಶ್ರೀ ಗೌಡರದು ಆದರ್ಶದಾಂಪತ್ಯ ಮನೆಗೆ ಬಂದ ಅತಿಥಿಗಳನ್ನು ಅತ್ಯಂತ ಆದರದಿಂದ ಬರಮಾಡಿಕೊಳ್ಳುವ ಈ ದಂಪತಿಗಳು, ಮಂಡ್ಯ ಜಿಲ್ಲೆಗೇ ಆದರ್ಶವಾದ ಒಂದು ರೈತ ಸಂಸಾರ.

ಸುಸಂಸ್ಕೃತರೂ ರಾಷ್ಟ್ರಪ್ರೇಮಿಗಳೂ ವಿದ್ಯಾವಂತರೂ ಧಾರ್ಮಿಕ ಮನೋಭಾವನೆಯುಳ್ಳವರೂ 'ಕೃಷಿಯಲ್ಲಿ ಅಪಾರ ಜ್ಞಾನವುಳ್ಳರೂ, ಆದ ಶ್ರೀ ಗೌಡರು ಶತಾಯುಷಿಯಾಗಿ ಮಂಡ್ಯಜಿಲ್ಲೆಗೆ ಅವರ ಸೇವೆ ಲಭಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

**ಸಿ. ಚನ್ನಯ್ಯ**

## ಸಂಕ್ರಾಂತಿಯ ಸಿರಿ

ನಾನು ಶ್ರೀ ಜವರಪ್ಪಗೌಡರನ್ನು 1970 ರಿಂದ ಪರಿಚಯಿಸಿಕೊಂಡೆ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುವದು ಸಮಿತಿಯ ಕಾರ್ಯಕರ್ತರಿಗೆ ಸ್ಮರಣೀಯ ದಿನಗಳಾದರೆ ಅವರು ಪ್ರವಾಸ ಮಾಡಿದ ಸ್ಥಳದ ಜನರಿಗೆ ಅವರ ಮಾತುಗಳನ್ನು ಆಲಿಸಿದವರಿಗೆ ಜವರಪ್ಪಗೌಡರ ಮಾತು ಇನ್ನೂ ನೆನಪಿನಲ್ಲಿರಲು ಸಾಧ್ಯ.

ವಿದ್ಯಾಪೀಠದ ಬೆಳವಣಿಗೆಯಲ್ಲಿ ಜವರಪ್ಪಗೌಡರು ಆಸಕ್ತಿ ಹೊಂದಲು ಕಾರಣ ವಿದ್ಯಾಪೀಠದ ಯೋಜನೆಯ ಹಿನ್ನೆಲೆ. ಸ್ವಾತಂತ್ರದ ಉದಯಕ್ಕೂ ಮುನ್ನ ಮೈಸೂರಿನಲ್ಲಿ ವಿದ್ಯಾಪೀಠದ ಯೋಜನೆ ಆರಂಭವಾಯಿತು. ಗ್ರಾಮದಲ್ಲಿ ಒಗ್ಗಟ್ಟು ಪುನಃ ಉದಯಿಸಬೇಕು. ಹೊಸ ವಾತಾವರಣ ಚೈತನ್ಯ ಬರಬೇಕು. ಬುದ್ಧಿವಂತರು, ವಿದ್ಯಾವಂತರು ಜಾಸ್ತಿಯಾಗಬೇಕು. ತಮಗೆ ತಿಳಿಯದಿರುವದನ್ನು ಅವಶ್ಯವಿರುವ ಸಲಹೆಯನ್ನು ನಂಬಿಕೆಗೆ ಯೋಗ್ಯನಾದ ಮುಖಂಡನಿಂದಪಡೆಯಬೇಕು, ಸಹಾನುಭೂತಿಯಿಂದ ಕೇಳಿ ಸಹಾಯ ಮಾಡುವ ಮಾರ್ಗದರ್ಶಿಯಾಗಿ ಬರಬೇಕು. ಸಭ್ಯತೆ–ಸಂಸ್ಕೃತಿಯನ್ನು ಅಳವಡಿಸಿಕೊಂಡ ಮುಂದಾಳು ಬೇಕು. ಇಂಥ ಮುಂದಾಳುಗಳನ್ನು ತಯಾರಿಸುವ ಕೇಂದ್ರ ವಿದ್ಯಾಪೀಠಗಳು. ಅಲ್ಲದೆ ವಿದ್ಯಾಪೀಠಗಳು ಡೆನ್ಮಾರ್ಕ ದೇಶದ ಫೋಕ್-ಸ್ಕೂಲ್ ಅಥವಾ ಜನತಾಶಾಲೆಗಳ ಮಾದರಿಯವುಗಳಾಗಿರುವದನ್ನು ಶ್ರೀ ಗೌಡರು ಕಂಡುಕೊಂಡರು. ಅಲ್ಪ ಸಮಯದಲ್ಲಿ ಗ್ರಾಮದ ಯುವಕರಿಗೆ ಗ್ರಾಮ ಮುಖಂಡತ್ವ ಬಿಂಬಿಸುವ ಮತ್ತು ರಾಷ್ಟ್ರೀಯಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವ ಈ ಜನತಾ ಶಾಲೆಗಳ ಅಭಿವೃದ್ಧಿಯಿಂದ ಗ್ರಾಮದ ಜನತೆಗೆ ತುಂಬಾ ಸಹಕಾರಿಯೆಂದು ತಿಳಿದರು.

ಶ್ರೀ ಜವರಪ್ಪಗೌಡರು ಸಮಿತಿಯ ಅಧ್ಯಕ್ಷರಾಗಿದ್ದ ಸಮಯದಲ್ಲಿ ಕರ್ನಾಟಕದಲ್ಲಿ 12 ವಿದ್ಯಾಪೀಠಗಳು ಇದ್ದವು. ಈಗ ಅವು 14 ವಿದ್ಯಾಪೀಠಗಳಾಗಿವೆ. ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯ ಅಕ್ಷರಪ್ರಸಾರಕ್ಕೆ ಒತ್ತು ನೀಡಿದ್ದರೂ ಸಮಿತಿಯ ಘನತೆಯು ವಿದ್ಯಾಪೀಠಗಳ ಕಾರ್ಯದ ಮೇಲೆ ಅವಲಂಬಿಸಿದೆಯೆಂಬುದು ಶ್ರೀ ಗೌಡರ ಅನಿಸಿಕೆಯಾಗಿತ್ತು. ಗ್ರಾಮಾಂತರ ಯುವಕರು ಸೇರಲು ಹೆಚ್ಚು ಸಹಾಯವಾಗಲೆಂದು ಕನಿಷ್ಠವಿದ್ಯಾರ್ಹತೆಯನ್ನು ಗೊತ್ತುಮಾಡಿ ವಯಸ್ಸಿನ ಮಿತಿಯನ್ನು 18 ರಿಂದ 25ಕ್ಕೆ ನಿಗದಿಮಾಡಿದರು. ತರಬೇತಿಯ ಅವಧಿಯನ್ನು 5 ತಿಂಗಳು ಇರುವುದನ್ನು 6 ತಿಂಗಳಾಗಿಸಿದರು. ವಿದ್ಯಾಪೀಠದ ಪ್ರಾಚಾರ್ಯರು ಪದವೀಧರರಾಗಿರಬೇಕೆಂದು ಆ ದಿಸೆಯಲ್ಲಿ ಆಯ್ಕೆ ಮಾಡಿದರು. ಇತರ ಉದ್ಯೋಗಿಗಳು ಕನಿಷ್ಠ ಸೂಕ್ತ ತಾಂತ್ರಿಕತೆ

ಹೊಂದಿರುವಂತೆ ನೋಡಿಕೊಂಡರು. ತರಬೇತಿಯಲ್ಲಿ ವ್ಯವಸಾಯ–ತೋಟಗಾರಿಕೆಗೆ ಹೆಚ್ಚು ಮಹತ್ವ ನೀಡುವಂತೆ ಆಚಾರ್ಯರಿಗೆ ಮತ್ತು ಇತರ ಬೋಧಕರಿಗೆ ಆಗಾಗ ನೆನಪಿಸುತ್ತಿದ್ದರು.

ಸರಕಾರದ ಎಲ್ಲಾ ಇಲಾಖೆಗಳ ಕಾರ್ಯವು ಮತ್ತು ಅವುಗಳ ಉಪಯೋಗ ಗ್ರಾಮದ ಯುವಕ–ಯುವತಿಯರಿಗೆ ಆಗಬೇಕೆಂದು ಬಯಸಿದ ಗೌಡರು ವಿದ್ಯಾಪೀಠ ಗಳಲ್ಲಿ ಆಗಾಗ ಅಲ್ಪಾವಧಿ ಶಿಕ್ಷಣ ಶಿಬಿರ (3 ದಿವಸ, 6 ದಿವಸಗಳ)ಗಳನ್ನು ಏರ್ಪಡಿ ಸಲು ಸಾಕಷ್ಟು ಪ್ರೋತ್ಸಾಹ ನೀಡಿದರು. ಇದರಿಂದ ವಿದ್ಯಾಪೀಠಕ್ಕೆ ಸುತ್ತಮುತ್ತಲ ಗ್ರಾಮದ ಯುವಕ ಯುವತಿಯರು ಆಸಕ್ತಿಯಿಂದ ಬರುವಂತಾಯಿತು. ಅವರು ಅನೇಕ ಹೊಸ ವಿಷಯಗಳನ್ನು ತಿಳಿದು ವಿದ್ಯಾಪಿಠದ ಧ್ಯೇಯಧೋರಣೆಯನ್ನು ಬೇರೆ ಯವರಿಗೆ ತಿಳಿಸುವಂತಾಯಿತು.

ಶ್ರೀ ಜವರಪ್ಪಗೌಡರು ತಮ್ಮ ಪ್ರವಾಸ ಸಮಯದಲ್ಲಿ ವಿದ್ಯಾಪೀಠಕ್ಕೆ ಭೇಟಿ ನೀಡಿದಾಗ ಹೆಚ್ಚಿನ ಸಮಯವನ್ನು ವಿದ್ಯಾರ್ಥಿಗಳ ಸಂಗಡ ಕಳೆಯುತ್ತಿದ್ದರು. ಶ್ರಮದಾನದ ಆಧಾರ ಮತ್ತು ಸಾಂಘಿಕ ಜೀವನವು ವಿದ್ಯಾಪೀಠದಲ್ಲಿ ಹೇಗೆ ಬೆಳೆಯು ತ್ತಿದೆಯೆಂಬುದನ್ನು ವಿದ್ಯಾರ್ಥಿಗಳಿಗೆ ಹಲವು ಹತ್ತು ಉದಾಹರಣೆಯಿಂದ ತೋರಿಸು ತ್ತಿದ್ದರು.

ನನಗೆ ಇನ್ನು ನೆನಪಿರುವ ಘಟನೆ. 1972ರಲ್ಲಿ ಸಿರಸಿ ವಿದ್ಯಾಪೀಠದಲ್ಲಿ ಒಂದು ಅಲ್ಪಾವಧಿ ತರಬೇತಿಯ ಶಿಬಿರ ಏರ್ಪಡಿಸಿದ್ದೆವು. ಶಿಬಿರಕ್ಕೆ ಮಿತಿ 50 ಅಭ್ಯರ್ಥಿಗಳು ಮಾತ್ರ. ಆಗ ಹೆಚ್ಚು ಬಸ್ಸಿನ ಸೌಕರ್ಯ ಇರದ ಸಮಯ. ಒಂದು ದಿವಸ ಮುಂಚೆಯೇ ಬಂದ ಗೌಡರು ಶಿಬಿರಕ್ಕೆ ಗ್ರಾಮಾಂತರದ ಜನರು ತುಂಬಾ ಆಸಕ್ತಿಯಿಂದ ಬರುವ ದನ್ನು ತಿಳಿದರು. ಮಲೆನಾಡಿನ ಕಾಲುದಾರಿಗಳ ಕ್ರಾಸುಗಳಲ್ಲಿ ಬಸ್ಸಿಗಾಗಿ ಕಾದು ಶಿಬಿರಕ್ಕೆ ಬರಲಾರದೇ ಅನೇಕರು ಅಲ್ಲೇ ನಿಂತಿದ್ದಾರೆ ಎಂದು ತಿಳಿದು ತಮ್ಮ ಕಾರನ್ನು ಕೆಲವು ಹಳ್ಳಿಗೆ ಕಳಿಸಿದರು. ಇದರಿಂದ ಅನೇಕ ಜನರು ಶಿಬಿರಕ್ಕೆ ಬಂದು ಭಾಗವಹಿಸಿದರು.

ಇನ್ನೊಮ್ಮೆ ಒಂದು ಅಲ್ಪಾವಧಿಯ ಶಿಬಿರಕ್ಕೆ ಬಂದರು. ಕಾರಿನಿಂದ ಒಂದು ಚೀಲವನ್ನು ತೆಗೆದರು. "ಹೆಗಡೆಯವರೆ ಇದನ್ನು ಎಲ್ಲಾ ಶಿಬಿರಾರ್ಥಿಗಳಿಗೆ ನೀಡಿ" ಎಂದರು. ಸಂಕ್ರಾಂತಿಯ ಸಿಹಿಯನ್ನು ಮಂಡ್ಯದಿಂದ ಉತ್ತರ ಕನ್ನಡದ ಶಿಬಿರಾರ್ಥಿಗಳಿಗೆ ತಂದಿದ್ದರು. ಮಂಡ್ಯಕ್ಕೆ ಹಿಂದಿರುಗುವಾಗ ನೂರಾರು ಜನರ ಆತ್ಮೀಯತೆಯ ನೆನಪುಗಳ ಸಂಗಡ ಹಿಂದಿರುಗಿದರು.

ತರಬೇತಿಯು ಅಭ್ಯರ್ಥಿಗಳಲ್ಲಿ ಸರಿಯಾಗಿ ಅರ್ಥವಾಗುವಂತೆ ನಡೆಯಬೇಕು. ಹಾಗಾದರೆ ವಿದ್ಯಾಪೀಠದ ಉತ್ಪನ್ನವೂ ಏರುವದು ಎಂಬುದು ಶ್ರೀ ಜವರಪ್ಪಗೌಡರ ಅನಿಸಿಕೆಯಾಗಿತ್ತು.

ವಿದ್ಯಾಪೀಠದ ಬೆಳವಣಿಗೆಯಲ್ಲಿ ಶ್ರೀ ಗೌಡರು ಕೇವಲ ತಮ್ಮ ಅಭಿಪ್ರಾಯ

ಮಾತ್ರ ಕಾರ್ಯರೂಪಕ್ಕೆ ತಂದಿರಲಿಲ್ಲ. ಯಾವುದಾದರೂ ಒಂದು ವಿದ್ಯಾಪೀಠಕ್ಕೆ ಹೋದಾಗ ಸ್ಥಳೀಯರನ್ನು ವಿದ್ಯಾಪೀಠದ ತರಬೇತಿಯ ಸದಸ್ಯರನ್ನು ಅವರವರ ಮನೆಗೆ ಹೋಗಿ ಭೇಟಿಮಾಡಿ ಅಭಿವೃದ್ಧಿಯ ಬಗ್ಗೆ ಆತ್ಮೀಯತೆಯ ಕೇಳಿಕೆಯನ್ನು ಮುಂದಿಡುತ್ತಿದ್ದರು. ಅದು ಹೇಗಿರುತ್ತಿತ್ತೆಂದರೆ ಅವರು ಮುಂದಿನ ವಿದ್ಯಾಪೀಠಕ್ಕೆ ಹೊರಟಾಗ ಒಂದಿಬ್ಬರು ಸ್ಥಳೀಯರು ಮುಂದಿನ ವಿದ್ಯಾಪೀಠ ನೋಡಿಬರಲು ಗೌಡರ ಕಾರನ್ನು ಏರುತ್ತಿದ್ದರು. ಹಿಂದಿರುಗಿ ಬಂದವರು ನೇರವಾಗಿ ಪ್ರಾಚಾರ್ಯರಿಗೆ ಆತ್ಮೀಯವಾಗಿ ನೆರವಾಗುತ್ತಿದ್ದರು.

ಆತ್ಮೀಯತೆಯ ಸಂಗಡ ಕಾರ್ಯಮಾಡಿಸಿಕೊಳ್ಳುತ್ತಿದ್ದ ಶ್ರೀ ಗೌಡರು ಅಪ್ರಾಮಾಣಿಕ ಕಾರ್ಯಕರ್ತರು, ವಿದ್ಯಾರ್ಥಿಗಳು ಅಥವಾ ಯಾರೇ ಇರಲಿ ನಿಷ್ಠುರವಾಗಿ ಅವರಿಗೆ ಯಾವ ಸಂಕೋಚ ಇಲ್ಲದೆ ದಂಡನೆಗೆ ಗುರಿಪಡಿಸಿ ಕೂಡಲೇ ಅವರು ಕಾರ್ಯಪ್ರವೃತ್ತರಾಗುವಂತೆ ಮಾಡುತ್ತಿದ್ದರು.

ಈ ಸಮಯದಲ್ಲಿ ಇವರ ಸಂಗಡ ಶ್ರೀಮತಿ ಪಾರ್ವತಮ್ಮ ಜವರಪ್ಪಗೌಡರನ್ನು ನೆನಪಿಸಿಕೊಳ್ಳಬೇಕು. ಅವರ ಪ್ರವಾಸ ಕಾಲದಲ್ಲಿ ಅನೇಕ ಕಡೆಗೆ ಶ್ರೀಮತಿ ಜವರಪ್ಪ ಗೌಡರು ಪ್ರವಾಸ ಮಾಡಿ ಶ್ರೀ ಗೌಡರ ಕೆಲಸ ಕಾರ್ಯಗಳಿಗೆ ಚೇತೋಹಾರಿಯಾಗಿ ಸಹಕರಿಸಿದರು. ಅಲ್ಪಾವಧಿ ಶಿಬಿರಗಳಲ್ಲಿ ಗ್ರಾಮದ ಯುವತಿಯರ ಸಂಗಡ ಬೆರೆತು ಅವರ ಕಷ್ಟಕಾರ್ಪಣ್ಯ ವಿಚಾರಿಸುತ್ತಿದ್ದರು.

ಬಡವ-ಬಲ್ಲಿದ, ಮೇಲು ಕೀಳು ಎಂಬ ಯಾವ ಭೇದಭಾವ ಇಲ್ಲದೆ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗೆ ಆತ್ಮೀಯ ಸೇವೆ ಸಲ್ಲಿಸಿ ಕಾರ್ಯಕರ್ತರು ಸದಾ ಅವರನ್ನು ಸ್ಮರಿಸುವಂತಾಗಲು ಸಮಿತಿಯ ಕಾರ್ಯಕರ್ತರಿಗೆ ಉಪಯೋಗವಾಗುವಂತೆ ಮಾಡಿ ನಿವೃತ್ತರಾದಾಗ ಪೆನಶನ್ ಬರುವಂತೆ ಸಹಾಯ ಮಾಡಿದ ಕೀರ್ತಿ ಶ್ರೀ ಜವರಪ್ಪಗೌಡರಿಗೆ ಸಲ್ಲುತ್ತದೆ.

ಈಗ ನಾನು ಹೇಳಿದ್ದು ಅವರ ಬಗ್ಗೆ ತೀರ ಸ್ವಲ್ಪ. ಮರೆಯಲಾಗದೆ ನೆನಪಿಸಿಕೊಂಡರೆ ಒಂದೊಂದೇ ನೆನಪಾಗುತ್ತದೆ. 'ಮಾಲುಮ್ ನಹೀ ಸಾಬ್' ಉದಾಹರಣೆಯೊಂದಿಗೆ ಜನರ ಅನಾಸಕ್ತಿಯನ್ನು ಆಸಕ್ತಿಯ ಕಡೆ ತರುತ್ತಿದ್ದ ಶ್ರೀ ಜವರಪ್ಪಗೌಡರು ಹೇಳುತ್ತಿದ್ದ ನೂರಾರು ಉದಾಹರಣೆಗಳು ನೆನಪಾಗುತ್ತವೆ. ಭಗವಂತನು ಈ ದಂಪತಿಗಳಿಗೆ ಮತ್ತು ಮಕ್ಕಳಿಗೆ ಆಯುರಾರೋಗ್ಯ ದಯಪಾಲಿಸಲೆಂದು ಪ್ರಾರ್ಥಿಸುತ್ತಿದ್ದಾಗ ವಿದ್ಯಾಪೀಠಗಳ ಜಮೀನು-ಮರ-ಗಿಡಗಳೂ ಜವರಪ್ಪಗೌಡರನ್ನು ನೆನಪಿಸಿಕೊಂಡಂತೆ ಭಾಸವಾಗುತ್ತಿದೆ.

ಜಿ. ಎಸ್. ಹೆಗಡೆ

# ಹಿತಚಿಂತಕ

ಶ್ರೀ ಪಿ. ಎನ್. ಜವರಪ್ಪಗೌಡರು 70ರ ದಶಕದಲ್ಲಿ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರಾಗಿದ್ದರು. ಆಗ ನಾನು ವಿದ್ಯಾರ್ಥಿ. ಸಮಿತಿಯಲ್ಲಿ ಆಗ ನಡೆಯುತ್ತಿದ್ದ ಸಾಂಸ್ಕೃತಿಕ ಚಟುವಟಿಕೆಗಳು, ಬರಹಗಾರರ ಕಮ್ಮಟಗಳ ವಿಷಯಗಳು ನನ್ನ ಕಿವಿಗೆ ಬೀಳುತ್ತಿದ್ದವು. ಅಂದಿನಿಂದಲೇ ಗೌಡರ ಬಗ್ಗೆ ಸಮಿತಿಯ ಕಾರ್ಯಚಟುವಟಿಕೆಗಳ ಬಗ್ಗೆ ಕುತೂಹಲ.

ಮೂಲತಃ ಕೃಷಿಮೂಲವಾದ ಗ್ರಾಮೀಣ ಪರಿಸರದಿಂದ ಬಂದ ಜವರಪ್ಪಗೌಡರು ರೈತಜನಾಂಗದ ಕಷ್ಟಸುಖಗಳನ್ನು ಬಲ್ಲವರು. ಹಿರಿಯ ಸ್ವಾತಂತ್ರ್ಯಹೋರಾಟಗಾರರಾಗಿ ಸ್ವಾತಂತ್ರ್ಯಪೂರ್ವದಲ್ಲಿ ಕಂಡುಂಡ ಸಿಹಿಕಹಿಗಳನ್ನು ಸ್ವಾತಂತ್ರ್ಯಾನಂತರ ಗ್ರಾಮೀಣ ರೈತನ ಅಭಿವೃದ್ಧಿಗೆ ಪೂರಕವಾದ 'ವಯಸ್ಕರ ಶಿಕ್ಷಣ' ಕ್ಷೇತ್ರದಲ್ಲಿ ಸಮಿತಿಯ ಅಧ್ಯಕ್ಷರಾಗಿ, ಅದಕ್ಕೂ ಪೂರ್ವದಲ್ಲಿ ಒಂದು ತಾಲ್ಲೂಕಿನ ವ್ಯವಸ್ಥಾಪಕರಾಗಿ ದುಡಿದು ಸಮಿತಿಗೆ ಸ್ಮರಣಾರ್ಹವಾದ ಕೆಲವು ಉತ್ತಮ ಕಾರ್ಯ ಮಾಡಿದ್ದಾರೆ. ಗೌಡರು ಸಮಿತಿಯ ಅಧ್ಯಕ್ಷರಾಗಿದ್ದಾಗ ಮಾಡಿದ ಉತ್ತಮಕಾರ್ಯಗಳನ್ನು ಈ ಸಂದರ್ಭದಲ್ಲಿ ಹೇಳಿದರೆ ತಪ್ಪಾಗಲಾರದು.

ವಯಸ್ಕರಶಿಕ್ಷಣ ಸಮಿತಿ ನೌಕರರು ಬಹಳ ದಿನಗಳಿಂದ ಕನಿಷ್ಠವೇತನದಲ್ಲಿ ಗರಿಷ್ಟ ಸೇವೆಯಲ್ಲಿ ದುಡಿಯುತ್ತಿರುವುದನ್ನು ಮನಗಂಡು ಅವರ ಕುಟುಂಬಕ್ಕೆ ಆಸರೆಯಾಗುವಂತೆ ವಿಶ್ರಾಂತಿವೇತನ, ತ್ರಿವಿಧ ಸೌಲಭ್ಯಗಳನ್ನು ದೊರಕಿಸಿಕೊಟ್ಟಿರುತ್ತಾರೆ. ಈ ಉಪಕಾರವನ್ನು ನಿವೃತ್ತರಾದ ನೌಕರರು ಆಗಾಗ ನನ್ನಲ್ಲಿ ಹೇಳುತ್ತಿರುತ್ತಾರೆ. ಗೌಡರನ್ನು ನಾನು ಭೇಟಿ ಮಾಡಿದಾಗಲೆಲ್ಲ ಸಮಿತಿಯ ನೌಕರರ ಹಿತದೃಷ್ಟಿಯಿಂದ ಕೆಲವು ಉತ್ತಮ ಸಲಹೆಗಳನ್ನು ಪಡೆದಿದ್ದೇನೆ. ನೌಕರರ ಸವಲತ್ತುಗಳನ್ನು ಉತ್ತಮಪಡಿಸುವ ಹಿನ್ನೆಲೆಯಲ್ಲಿ ಅವರೆಂದೂ ಸಾರ್ವಜನಿಕಜೀವನದ ಕುಂದುಕೊರತೆಗಳನ್ನು ಮರೆತವರಲ್ಲ.

ಸಮಿತಿಯ ಅಧ್ಯಕ್ಷರಾಗಿದ್ದಾಗ ಕನ್ನಡದ ಹಿರಿ-ಕಿರಿಯ ಸಾಹಿತಿ, ಕವಿ ಕಲಾವಿದರನ್ನು ವಯಸ್ಕರಶಿಕ್ಷಣ ಕ್ಷೇತ್ರಕ್ಕೆ ತಂದು ಅವರಿಂದ ದೊರೆಯಬಹುದಾದ ಸೇವೆಯನ್ನು ಉಪಯೋಗಿಸಿಕೊಂಡಿದ್ದಾರೆ. ರಾಷ್ಟ್ರಕವಿ ಕುವೆಂಪುರವರಲ್ಲಿ ಗೌಡರಿಗೆ ಅಪಾರವಾದ ಪ್ರೀತಿ, ವಿಶ್ವಾಸ. ಕುವೆಂಪುರವರು ಗೌಡರ ಹಾಗೂ ಸಮಿತಿಯ ವಿಶ್ವಾಸದ ದ್ಯೋತಕವಾಗಿ 'ಜನಪ್ರಿಯ ವಾಲ್ಮೀಕಿ ರಾಮಾಯಣ' ಗ್ರಂಥದ ಪ್ರಕಾಶನವನ್ನು ಸಮಿತಿಗೆ ವಹಿಸಿಕೊಟ್ಟಿದ್ದಾರೆ.

ಸಮಿತಿಯಿಂದ ಉತ್ತಮ ಕೃತಿಗಳನ್ನು ಮುದ್ರಿಸಿ ಅವು ಜನಸಾಮಾನ್ಯರಿಗೆ ಅಗ್ಗದಲ್ಲಿ ಸಿಗುವಂತೆ ಮಾಡಿರುತ್ತಾರೆ. ಅವರ ಕಾಲದಲ್ಲಿ ಕಿರಿಯ ಹಿರಿಯ ಬರಹಗಾರರನ್ನು ಪ್ರೋತ್ಸಾಹಿಸಲು ವಿದ್ಯಾಪೀಠಗಳಲ್ಲಿ 'ಬರಹಗಾರರ ಕಮ್ಮಟ, ಏರ್ಪಡಿಸಿ ಅವರು ಮುಂದೆ ಬರುವಂತೆ ಪ್ರೋತ್ಸಾಹಿಸಿದ್ದಾರೆ. ಅಂದಿನ ಉದಯೋನ್ಮುಖ ಬರಹಗಾರರಾದ ಕೆಲವರು ಇಂದು ಪ್ರಸಿದ್ಧರಾಗಿ ಗೌಡರನ್ನು ಸ್ಮರಿಸುತ್ತಿರುತ್ತಾರೆ.

ಗೌಡರು ಗ್ರಾಮೀಣ ಜನರ ಬದುಕನ್ನು ಬಲ್ಲವರು. ಸಂಘಟನೆಗಾಗಿ ಜನಸಾಮಾನ್ಯರಲ್ಲಿ ಸುಪ್ತವಾಗಿರುವ ಕಲೆಗಳು ಅವಶ್ಯವೆಂದು ತಿಳಿದು, ಜನಪದ ಕಲೆಗಳ ಪುನರುಜ್ಜೀವನಕ್ಕಾಗಿ ಗೌಡರು ಸಮಿತಿಯ ಅಧ್ಯಕ್ಷರಾಗಿದ್ದಾಗ ಹಲವಾರು ಮೇಳಗಳನ್ನು ವ್ಯವಸ್ಥೆ ಮಾಡಿದ್ದಾರೆ. ನಂಜನಗೂಡು—ಶಿವಾರಗುಡ್ಡ ವಿದ್ಯಾಪೀಠಗಳಲ್ಲಿ ನಡೆದ ಜನಪದ ಕಲೆಗಳ ಕಾರ್ಯಕ್ರಮಗಳನ್ನು ಅಲ್ಲಿನ ಜನರು ಇಂದಿಗೂ ನೆನೆದುಕೊಳ್ಳುತ್ತಾರೆ. 'ಜಾನಪದ ಕಾರ್ಯಕ್ರಮಗಳು ಎಲ್ಲಿ ಎಂದರೆ ಅಲ್ಲಿ ಗೌಡರು ಹಾಜರಾಗುತ್ತಿದ್ದರು.

ಇಂತಹ ಕ್ರಿಯಾಶೀಲ ಗೌಡರ ಬದುಕು ಸಮಾಜಕ್ಕೆ ಪ್ರೇರಕವಾಗಲಿ ಎಂದು ಹಾರೈಸುತ್ತೇನೆ.

**ದೇವನೂರು ಶಿವಮಲ್ಲು**



# ದೂರದರ್ಶಿ

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಪ್ರಾರಂಭದ ಹೆಸರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ. ಆಗ ಮಾನ್ಯಶ್ರೀ ಜವರಪ್ಪಗೌಡರು ಮಂಡ್ಯ ಜಿಲ್ಲೆಯ ಅಕ್ಷರಪ್ರಚಾರ ಸಮಿತಿಯ ವ್ಯವಸ್ಥಾಪಕರಾಗಿ ಕೆಲವು ಕಾಲ ಸೇವೆಸಲ್ಲಿಸಿದರು. ಅವರು ಸದಾ ಖಾದಿಧಾರಿಗಳು—ಒಂದು ಜುಬ್ಬ ಮತ್ತು ಪೈಜಾಮ.

ಸಮಿತಿಯ ಪ್ರಾರಂಭದಲ್ಲಿ ಕಾರ್ಯಕರ್ತರು ಅಧಿಕಾರಿಗಳು ಮತ್ತು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ಸೇವೆಸಲ್ಲಿಸುತ್ತಿದ್ದ ಖಾಸಗಿ ಮಹನೀಯರು ಎಂಬ ಭೇದವಿರಲಿಲ್ಲ. ಸಮಿತಿಯ ಕಾರ್ಯಕರ್ತರನ್ನು ಅಧಿಕಾರಿಗಳು ತಮ್ಮ ಸ್ನೇಹಿತರಂತೆ ಮತ್ತು ಆತ್ಮೀಯ ರಂತೆ ಕಾಣುತ್ತಿದ್ದರು. ಅಧಿಕಾರಿಗಳು ಕಾರ್ಯಕರ್ತರ ಹೆಗಲಮೇಲೆ ಕೈಹಾಕಿಕೊಂಡು ಮಾತನಾಡಿಸುತ್ತಿದ್ದುದು ಅಂದಿನ ವೈಶಿಷ್ಟ್ಯ. ಅಂತಹ ಕಾಲದಲ್ಲಿ ಸೇವೆ ಸಲ್ಲಿಸಿದವರು ಜವರಪ್ಪಗೌಡರು.

ಕರ್ನಾಟಕರಾಜ್ಯಸರಕಾರ ಹಲವಾರು ವರ್ಷಗಳಿಂದ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗೆ ಖಾಸಗಿ ಮಹನೀಯರನ್ನೇ ಅಧ್ಯಕ್ಷರನ್ನಾಗಿ ನಾಮಕರಣ ಮಾಡುತ್ತಿದೆ. ಅಂತಹ ಸದಸ್ಯರಿಗೆ ವಯಸ್ಕರಶಿಕ್ಷಣದ ಮಾಹಿತಿ ಬೇಕಿಲ್ಲ. ಕಾರ್ಯಕ್ರಮದಲ್ಲಿ ಕಳಕಳಿ ಇಲ್ಲದಿದ್ದರೂ ಪರವಾಗಿಲ್ಲ. ಪಕ್ಷದ ಸದಸ್ಯರಾಗಿದ್ದರೆ ಸಾಕು. ಯಾರಾದರೂ ಮಂತ್ರಿಗಳ ಚೇಲಾ ಆಗಿದ್ದರೆ ಇನ್ನೂ ಒಳ್ಳೆಯದೇ ! ಆದರೆ ಜವರಪ್ಪಗೌಡರು ಅದಕ್ಕೆ ಅಪವಾದ. ಮಾನ್ಯಶ್ರೀ ಶಂಕರಗೌಡರು ಮಂಡ್ಯಜಿಲ್ಲೆಯವರು. ಆಗ ಶಿಕ್ಷಣ ಮಂತ್ರಿ ಗಳಾಗಿದ್ದವರು. ಜವರಪ್ಪಗೌಡರು ಅದೇ ಜಿಲ್ಲೆಯಿಂದ ಬಂದವರು. ಜವರಪ್ಪ ಗೌಡರನ್ನು ಅಧ್ಯಕ್ಷ ಸ್ಥಾನಕ್ಕೆ ಮಾನ್ಯಮಂತ್ರಿಗಳಾದ ಶಂಕರಗೌಡರು ನಾಮಕರಣ ಮಾಡಿದ್ದು ಔಚಿತ್ಯಪೂರ್ಣ. ಕಾರಣ ಅವರು ಜನಪ್ರಿಯ ಮುಖಂಡರು, ಮೇಲಾಗಿ ಕ್ಷೇತ್ರದಲ್ಲಿ ದುಡಿದು ಸಾಕಷ್ಟು ಅನುಭವ ಪಡೆದಿದ್ದರು.

ಜವರಪ್ಪಗೌಡರು ಸಮಿತಿಯ ಅಧ್ಯಕ್ಷರಾದ ಕೆಲವು ದಿನಗಳ ನಂತರ Asian team of Educators ಸಮಿತಿಗೆ ಭೇಟಿ ನೀಡಿದ್ದರು. ಅವರ ಪೈಕಿ ನೇಪಾಳ ದವರು ಒಬ್ಬರು. ಅವರು ಯುನೆಸ್ಕೊ ಕೈಗೊಂಡ ಬ್ಯಾಂಕಾಕ್ ಕಾರ್ಯಾಗಾರದಲ್ಲಿ ನನ್ನ ಸ್ನೇಹಿತರಾದವರು. ಅವರು ನನ್ನ ಬಗ್ಗೆ ಅಧ್ಯಕ್ಷರನ್ನು ವಿಚಾರಿಸಿದರು. ಆಗ ನಾನು ಚಿಕ್ಕಮಗಳೂರಿನಲ್ಲಿ ಜಿಲ್ಲಾ ವಯಸ್ಕರ ಶಿಕ್ಷಣ ಅಧಿಕಾರಿ ಆಗಿದ್ದೆ. ಜವರಪ್ಪಗೌಡರು ಪುಸ್ತಕಗಳನ್ನು ಓದುವ ಹವ್ಯಾಸ ಬೆಳಸಿಕೊಂಡಿದ್ದಾರೆ. ಆಗತಾನೆ Indian Adult Education Association ಮಾಸಿಕ ಪತ್ರಿಕೆಯಲ್ಲಿ ನನ್ನ ಲೇಖನ ಪ್ರಕಟವಾಗಿತ್ತು.

ಅದನ್ನು ಅವರು ಅವಲೋಕಿಸಿದ್ದರು. ನನ್ನ ಲೇಖನ ಓದಿದ್ದು ಮತ್ತು ನೇಪಾಳದ ನನ್ನ ಸ್ನೇಹಿತರು ವಿಚಾರಿಸಿದ್ದು ಅವರ ಮನಸ್ಸಿನಲ್ಲಿತ್ತು. ಒಂದು ದಿನ ಸಮಿತಿಯ ಪ್ರಧಾನ ಕಾರ್ಯದರ್ಶಿಗಳನ್ನು ಕರೆದು 'ಅನುಭವಸ್ಥರನ್ನು ಮತ್ತು ದಕ್ಷರಾದ ಕಾರ್ಯಕರ್ತರನ್ನು ಕೇಂದ್ರಕಚೇರಿಗೆ ಕರೆಸಿಕೊಂಡು ಅವರ ಸೇವೆ ಪಡೆಯುವುದು ಒಳ್ಳೆಯದು. ಕೂಡಲೇ ಅಂದರೆ ಒಂದು ವಾರದೊಳಗೆ ನಾಗಪ್ಪನವರನ್ನು ಕೇಂದ್ರ ಕಚೇರಿಗೆ ವರ್ಗ ಮಾಡಿ ನನಗೆ ವರದಿ ಮಾಡಿ' ಎಂದು ಹೇಳಿದರು. ಈ ಸಂಗತಿಯನ್ನು ಹೇಳುವ ಉದ್ದೇಶ ಇಷ್ಟೇ. ಕಾರ್ಯಕರ್ತರಲ್ಲಿನ ಯೋಗ್ಯತೆ ಮತ್ತು ದಕ್ಷತೆಯನ್ನು ಗುರುತಿಸಿ ಅವರಿಂದ ಸೂಕ್ತರೀತಿಯಲ್ಲಿ ಕೆಲಸ ಪಡೆಯುವುದು ಅವರಿಗೆ ಗೊತ್ತಿತ್ತು.

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಒಂದು ಖಾಸಗಿ ಸಂಸ್ಥೆ. ಅದರ ಕಾರ್ಯಕ್ರಮಗಳು ಈಗಲೂ ಅನೇಕರಿಗೆ ತಿಳಿಯದು. ಕೆಲವರಿಗಂತೂ ಈ ಸಂಸ್ಥೆಯ ಅಸ್ತಿತ್ವವೇ ಗೊತ್ತಿಲ್ಲ. ಸಂಸ್ಥೆ ತನ್ನ ಅಸ್ತಿತ್ವವನ್ನು ತನ್ನ ಕಾರ್ಯಕ್ರಮ ಮತ್ತು ಪರಿಣಾಮಕಾರಿಯಾದ ಪ್ರಚಾರದ ಮೂಲಕ ಬಹಿರಂಗಗೊಳಿಸಬೇಕಾದುದು ಅನಿವಾರ್ಯ. ಜವರಪ್ಪಗೌಡರಿಗೆ ಪ್ರಚಾರದ ಮಹತ್ವ ಮನವರಿಕೆಯಾಗಿತ್ತು. ಅವರಿಗೆ ಪತ್ರಿಕಾಕ್ಷೇತ್ರದಲ್ಲಿ ಸಾಕಷ್ಟು ಪರಿಶ್ರಮವಿದೆ. ಅದರಿಂದ ಅವರ ಕಾಲದಲ್ಲಿ ನಿತ್ಯವೂ ಪತ್ರಿಕೆಗಳಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ವಿಚಾರವಾಗಿ ಒಂದಲ್ಲ ಒಂದು ಸುದ್ದಿ ಪ್ರಕಟವಾಗುತ್ತಿತ್ತು. "ಏನ್ರಿ ನಿಮ್ಮ ಹೊಸ ಅಧ್ಯಕ್ಷರ ಕಾಲದಲ್ಲಿ ಸಮಿತಿ ನಿದ್ದೆಯಿಂದ ಎದ್ದು ಕೆಲಸ ಮಾಡುತ್ತಿರುವಂತೆ ಕಾಣುತ್ತಿದೆ ಕಾರಣ ಪತ್ರಿಕೆಯಲ್ಲಿ ಸಮಿತಿಯ ಸುದ್ದಿ ನಿತ್ಯವೂ ಬರುತ್ತಿದೆ" ಎಂದು ನನ್ನನ್ನು ಅನೇಕರು ಕೇಳಿದ್ದುಂಟು.

ಅಖಿಲ ಭಾರತ ಮಟ್ಟದಲ್ಲಿ Indian Adult Education Assosication ಎಂಬ ಸಂಸ್ಥೆ ಇದೆ. ವಯಸ್ಕರ ಶಿಕ್ಷಣಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಹಾಗೂ ಸಲ್ಲಿಸು ತ್ತಿರುವ ಮಹನೀಯರಿಗೆ 'ನೆಹರು ಸಾಕ್ಷರತಾ ಪ್ರಶಸ್ತಿ'ಯನ್ನು ಅದು ಪ್ರತಿವರ್ಷ ನೀಡುತ್ತಿದೆ. 1971ನೆಯ ಸಾಲಿನಲ್ಲಿ ಅಂತಹ ಪ್ರಶಸ್ತಿಯನ್ನು ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಪರವಾಗಿ ಪಡೆದ ಸೌಭಾಗ್ಯ ಜವರಪ್ಪಗೌಡರ ಪಾಲಿನದು.

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಪ್ರಾರಂಭದಿಂದಲೂ 'ಬೆಳಕು' ವಾರಪತ್ರಿಕೆಯನ್ನು ಪ್ರಕಟಿಸುತ್ತಿದೆ. ಅದು ಒಂದು ಕಾಲಕ್ಕೆ ಒಳ್ಳೆಯ ಹೆಸರನ್ನು ಗಳಿಸಿತ್ತು. ಯುನೆಸ್ಕೊ ದಾಖಲೆಗಳಲ್ಲಿ 'ಬೆಳಕು' ಪತ್ರಿಕೆಯ ಬಗ್ಗೆ ಪ್ರಶಂಸೆ ಇದೆ. ಇಂದು ಸಮಿತಿ ಬೆಳಕು ಪತ್ರಿಕೆಯ ಉದ್ದೇಶ ಮರೆತಿದೆ. ಈಗ ಅದೊಂದು ಸಮಿತಿಯ ಅಧಿಕಾರಿವರ್ಗದವರ ಪ್ರಚಾರ ಪತ್ರಿಕೆಯಾಗಿ ಪರಿವರ್ತನೆಯಾಗಿರುವುದು ಒಂದು ದುರ್ದೈವ. ಬೆಳಕು ಪತ್ರಿಕೆಯನ್ನು 4 ಪುಟದಿಂದ 8 ಪುಟಕ್ಕೆ ಹೆಚ್ಚಿಸಿದ್ದು ಜವರಪ್ಪಗೌಡರ ಕಾಲದಲ್ಲಿ. ಅವರ ನಂತರ ಬೆಳಕು ಪತ್ರಿಕೆಯ ಗಾತ್ರ ಪುನಃ 4

ಪುಟಕ್ಕೆ ಇಳಿಯಿತು. ಗ್ರಾಮಾಂತರ ಓದುಗರಿಗೆ ಹೆಚ್ಚೆಚ್ಚು ವಿಷಯಗಳನ್ನು ಒದಗಿಸ ಬೇಕು ಎಂಬ ಕಳಕಳಿಯಿಂದ ಪತ್ರಿಕೆಯ ಗಾತ್ರ 8 ಪುಟಕ್ಕೆ ಹೆಚ್ಚಲು ಜವರಪ್ಪಗೌಡರು ಕಾರಣ. ಆದರೆ ಚಂದಾಹಣವನ್ನು ಹೆಚ್ಚಿಸಲಿಲ್ಲ. ಜಿದುರೂಪಾಯಿಯಾಗಿ ಉಳಿಯಿತು. ಅವರ ಕಾಲದಲ್ಲಿ ಸಮಿತಿಯ ಪ್ರಕಟಣಾ ಶಾಖೆ ಚುರುಕುಗೊಂಡಿತು. ಪರಿಣಾಮವಾಗಿ 1972 ರಲ್ಲಿ ಸರಕಾರದಿಂದ ಸಮಿತಿಯು ಉತ್ತಮ ಮುದ್ರಣ ಕಾರ್ಯಕ್ಕೆ ಪ್ರಶಸ್ತಿ ಯನ್ನು ಪಡೆದ ಕೀರ್ತಿ ಜವರಪ್ಪಗೌಡರ ಅವಿರತ ದುಡಿಮೆಯ ಫಲ.

ನಾಗಮಂಗಲ ಅವರ ತಾಲ್ಲೂಕು. ಅಲ್ಲಿ ಅವರು ಪ್ರಭಾವಶಾಲಿಗಳು. ತಮ್ಮ ಅವಧಿಯಲ್ಲಿ ನಾಗಮಂಗಲ ಟೌನಿನಲ್ಲಿ ಪೂರ್ಣ ಸಾಕ್ಷರತಾ ಕಾರ್ಯಕ್ರಮಯೋಜನೆ ಪ್ರಾರಂಭಿಸಿದರು. ಯಾವುದೇ ಕಾರ್ಯದ ಯಶಸ್ಸು ಕಾರ್ಯಕರ್ತರ ಶ್ರದ್ಧೆ, ನಿಷ್ಠೆ ಮತ್ತು ದಕ್ಷತೆಯನ್ನು ಅವಲಂಬಿಸಿದೆ. ಈ ಯೋಜನೆ ಹಣದ ಕೊರತೆ ಮತ್ತು ದಕ್ಷ ಕಾರ್ಯಕರ್ತರ ಅಭಾವದಿಂದ ಪೂರ್ಣಕಾಲ ನಡೆಯದೆ ನಿಂತುಹೋಯಿತು. ಆದರೂ ಇವರ ದೂರದರ್ಶಿತ್ವ ಇಂದಿಗೂ ಮಾರ್ಗದರ್ಶಿ.

ಜವರಪ್ಪಗೌಡರು ಎಲ್ಲ ಕಾರ್ಯಕರ್ತರನ್ನು ಒಂದೇ ಸಮನಾಗಿ ನೋಡುತ್ತಿದ್ದರು. ಕಾರ್ಯಕರ್ತರ ಭವಿಷ್ಯದ ಬಗ್ಗೆ ಅವರಿಗೆ ಕಳಕಳಿ ಇತ್ತು. ಸಮಿತಿಯ ಕಾರ್ಯಕರ್ತರಿಗೆ ತ್ರಿವಿಧ ಸೌಲಭ್ಯ ಯೋಜನೆ ದೊರೆತಿದ್ದು ಇವರ ಕಾಲದಲ್ಲೇ.

ಭಾರತದ ಭೂಪಟದಲ್ಲಿ ಸಮಿತಿಯ ಅಸ್ತಿತ್ವ ಮತ್ತು ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಚಾರ ಮತ್ತು ಪುರಸ್ಕಾರ ದೊರಕಿಸಿದ ಕೀರ್ತಿ ಜವರಪ್ಪಗೌಡರಿಗೆ ಸಲ್ಲಬೇಕು.

**ಟಿ. ಆರ್. ನಾಗಪ್ಪ**

# ಹೋರಾಟದ ಕಲಿ

ಐದುಸಾವಿರ ವರ್ಷಗಳಿಂದ ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾದ ಹಿಂದುಳಿದ ವರ್ಗಗಳ ಸರ್ವನಾಶಕ್ಕೆ ನಾಂದಿಯೋ ಎನ್ನುವಂತಿದ್ದ ಶ್ರೀ ಬಿ. ವೆಂಕಟಸ್ವಾಮಿ ವರದಿಯನ್ನು ಶಾಸನ ಸಭೆಯಲ್ಲಿ ಮಂಡಿಸಿ ಬಹುಶಃ ಇದರ ಪಾಪದ ಫಲವೋ ಏನೋ ಮುಖ್ಯಮಂತ್ರಿ ಸ್ಥಾನಕ್ಕೆ ಎರವಾದ ದುರದೃಷ್ಟರು ಶ್ರೀ ರಾಮಕೃಷ್ಣ ಹೆಗಡೆ ಅವರು.

ಮುಖ್ಯಮಂತ್ರಿ ಸ್ಥಾನ ಅಲಂಕರಿಸಿದ ಗ್ರಹಮಾನಗಳ ಸಮಯಾಸಮಯಗಳ ಅನಾನುಕೂಲವಾದರು ಇದ್ದೀತು. ಇದಕ್ಕೆ ನಿದರ್ಶನವಾಗಿ ಮಹಾಭಾರತದ ಕಥೆ ಕೇಳಿ "ಯಾವುದೇ ಮಗು ಜನನವಾದಾಗ ಹುವ್ವಾ, ಹುವ್ವಾ, ಹುವ್ವಾ, ಅವ್ವಾ ಎಂದು ಅಳಲು ಪ್ರಾರಂಭಿಸುವುದು" ಗುಡಿಸಿಲಿನಿಂದ ಅರಮನೆಯವರೆಗಿನ ಪಂಡಿತ ಪಾಮರರಿಗೆ ಗೊತ್ತಿರುವ ವಿಚಾರ.

ಹಸ್ತಿನಾವತಿಯಲ್ಲಿ ಕೌರವನು ಜನಿಸಿದಾಗ ಗಾರ್ದಭ(ಕತ್ತೆ)ನಂತೆ ಕಿರುಚಲು ಪ್ರಾರಂಭಿಸಿದನಂತೆ. ನಗರದಲ್ಲಿ ಗಾರ್ದಭ ಸ್ನೇಹಿತರು ಕಿರುಚಲು ಪ್ರಾರಂಭಿಸಿದುವಂತೆ. ಈ ದುಶ್ಶಕುನದಿಂದ ನೊಂದ ಧೃತರಾಷ್ಟ್ರನು ರಾಜಪುರೋಹಿತರುಗಳನ್ನು ಕರೆಸಿ ಕೌರವನು ಜನಿಸಿದ ಗ್ರಹಮಾನಗಳ ಪರಿಶೋಧನೆ ಮಾಡಿ ಮುಂದೆ ಆ ಮಗುವಿನ ಭವಿಷ್ಯ ತಿಳಿಸುವಂತೆ ಪುರೋಹಿತರಿಗೆ ಆಜ್ಞಾಪಿಸಿದ. ನಿಜಾಂಶ ಹೇಳುವುದೇ ಬಿಡು ವುದೇ ಎಂಬ ಆತಂಕ ರಾಜಪುರೋಹಿತರಿಗೆ. ವಿದುರನ ಆಶ್ವಾಸನೆಯಂತೆ ಗ್ರಹಮಾನಗಳ ವಿವರ ಪರಿಶೋಧಿಸಿ ಈ ನಕ್ಷತ್ರದಲ್ಲಿ ಜನಿಸಿದ ಮಗುವಿನಿಂದ ಚಕ್ರಾಧಿಪತ್ಯಕ್ಕೆ ಹಾನಿ ಯಾಗಿ ಅಂತ್ಯದಲ್ಲಿ ನಿರಾಭರಣ ಸುಂದರಿಯಂತೆ ರಾಜ್ಯ ಬಣಗುಡುವ ದುಃಸ್ಥಿತಿಗೆ ಕಾರಣವಾಗುತ್ತದೆ. ಈ ಮಗುವನ್ನು ರಾಜಮನೆತನ ತಿರಸ್ಕರಿಸಿದರೂ ಅಷ್ಟೆ. ಮಗುವು ತಾನೇ ತಾನಾಗಿ ಬೆಳೆದು ಯಾವುದೇ ರೀತಿ ಜೀವಭಯವಿಲ್ಲದೆ, ತನ್ನ ಅಂತ್ಯಕಾಲವನ್ನು ಬಂಧು ಬಾಂಧವರು, ನೆಂಟರಿಷ್ಟರು ಸರ್ವವನ್ನು ಕಳೆದುಕೊಂಡು ಸ್ಮಶಾನ ಸದೃಶ ಚಕ್ರಾಧಿಪತ್ಯವನ್ನು ನೋಡಿ ಕಣ್ಮುಚ್ಚುವನು. ಇಂತಹ ಪರಿಸ್ಥಿತಿ ನೋಡಿಯೇ ತಾನು ಮಡಿವನಲ್ಲದೆ ಈತನ ಸಾವಿಗೆ ಬೇರಾರು ಕಾರಣರಾಗರು ಎಂದು ಪುರೋಹಿತರು ಸ್ಪಷ್ಟೀಕರಣ ನೀಡಿದರು.

ಅಂತೆಯೆ ಶ್ರೀ ರಾಮಕೃಷ್ಣಹೆಗಡೆ ಅವರು ತಮ್ಮ ಮುಖ್ಯಮಂತ್ರಿತ್ವದ ಉದಯದ ಘಳಿಗೆ ನಕ್ಷತ್ರಗಳ ದುಷ್ಪರಿಣಾಮ ಲಗ್ನಕ್ಕೆ ಇಂಬು ಕೊಡುವಂತೆ ಬಂದೆರಗಿದ ಬಿ. ವೆಂಕಟಸ್ವಾಮಿ ಹಿಂದುಳಿದ ವರ್ಗಗಳ ವರದಿ, ಜನಮನಕ್ಕಿಂತ ಸ್ವತಃ ಹೆಗಡೆ ಅವರ

ಸ್ಥಾನಮಾನಕ್ಕೆ ಮೃತ್ಯುಕೂಪವನ್ನು ನಿರ್ಮಿಸಿತು ಎಂದು ಶ್ರೀ ಬಿ. ವೆಂಕಟಸ್ವಾಮಿ ವರದಿ ವಿರೋಧಿಸಲು ಕರೆದ ಸರ್ವಪಕ್ಷಗಳ ಪ್ರಮುಖರು ಮತ್ತು ಕಾರ್ಯಕರ್ತರ ಸಭೆಯಲ್ಲಿ ಹಿರಿಯರಾದ ಶ್ರೀ ಪಿ. ಎಸ್. ಜವರಪ್ಪಗೌಡರು ಮಾತನಾಡುತ್ತ ತಮ್ಮ ಮಾತಿನ ಮೋಡಿಯಿಂದ ಸರ್ವರ ಮನವನ್ನು ಸೂರೆಗೊಂಡು ಚಳುವಳಿಗೆ ಸನ್ನದ್ಧರಾಗುವಂತೆ ಮಾಡಿದ ಭಾಷಣ ಇಂದೂ ಸಹ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತದೆ.

ಚಳುವಳಿ ಪ್ರಾರಂಭದ ಸಭೆ ಕರೆದಿದ್ದವರು ದಿವಂಗತ ಜಿ. ಗುಂಡಣ್ಣನವರು ಮತ್ತು ಶ್ರೀ ಪಿ. ಎಸ್. ಜವರಪ್ಪಗೌಡರೆ. ರಾಜಕೀಯವಾಗಿ ಎಲ್ಲ ರಾಜಕೀಯ ಪಕ್ಷಗಳ ಪ್ರಮುಖರು ಹಾಗೂ ಕಾರ್ಯಕರ್ತರೆಲ್ಲ ಸೇರಿದ್ದರು. ಯಾರೊಬ್ಬರೂ ವೆಂಕಟಸ್ವಾಮಿ ವರದಿ ಚಳುವಳಿಗೆ ವಿರೋಧ ವ್ಯಕ್ತಪಡಿಸದೆ ಎಲ್ಲರೂ ಸಹಕಾರ ನೀಡುವ ಹಸ್ತ ನೀಡಿದರು. ಮುಖ್ಯಮಂತ್ರಿ ಗುಂಡೂರಾಯರ ವಿರುದ್ಧ ನಡೆಸಿದ ಗೋಕಾಕ್ ವರದಿ ಚಳುವಳಿ ಮುಗಿದಿದ್ದು, ಜನಮನ ಚೇತರಿಸಿಕೊಳ್ಳುವ ಕಾಲಕ್ಕೆ ರಾಜ್ಯದಲ್ಲಿ ಬಿ. ವೆಂಕಟಸ್ವಾಮಿ ಹಿಂದುಳಿದ ವರ್ಗಗಳ ಆಯೋಗದ ವರದಿ ಮೇಲೆ ಪ್ರಯೋಗಿಸಿ ಹೋರಾಡಲು ಸನ್ನದ್ಧರಾದರು.

ಪ್ರತಿಯೊಬ್ಬನ ಹುಟ್ಟಿನಲ್ಲು ಏನಾದರೊಂದು ಮನಸಿಗೆ ಒಳ್ಳೆಯದು ಕೆಟ್ಟದ್ದುಳ್ಳ ವಿಚಾರಗಳಿರುತ್ತವೆ. ರಾಜ್ಯದ ಮುಖ್ಯಮಂತ್ರಿ ಸ್ಥಾನ ಎಂದರೆ ರಾಜ್ಯಕ್ಕೆ ಒದಗಿಬರಬಹುದಾದ ಸಿಹಿ, ಕಹಿಗಳ ಬಗ್ಗೆ ಯೋಚನೆ ಮಾಡಬೇಕಲ್ಲ. ಆದ್ದರಿಂದಲೆ ಮೊದಲನೇ ಪ್ಯಾರದಲ್ಲಿ ಶ್ರೀ ಪಿ. ಎಸ್. ಜವರಪ್ಪಗೌಡರು ಹೇಳಿರುವ ಮುಖ್ಯಮಂತ್ರಿ ಜನನ ಜಾತಕ ರಾಜ್ಯಕ್ಕೆ ಮಾರಕವಾಗಿ ಕನ್ನಡ ಭಾಷೆಗೆ ಪರಿಣಮಿಸಿತು. ಅದಾದ ತರುಣದಲ್ಲಿ ಎರಗಿ ಬಂದ ವೆಂಕಟಸ್ವಾಮಿ ವರದಿ ಹೀಗೆ ಅನಿಷ್ಟ ಪರಂಪರೆಗಳು ಒಂದರಮೇಲೊಂದು ಹೆಗಡೆ ಅವರ ಮುಖ್ಯಮಂತ್ರಿ ಸ್ಥಾನದ ಮೇಲೆ ಧಾಳಿಮಾಡಿಸಲು ಗ್ರಹಮಾನಗಳು ಪ್ರಚೋದನೆ ಮಾಡಿದವು.

ಶ್ರೀ ಬಿ. ವೆಂಕಟಸ್ವಾಮಿ ವರದಿ ವಿರುದ್ಧ ಹೋರಾಟಕ್ಕೆ ಮಂಡ್ಯ ಪ್ರವಾಸಿ ಮಂದಿರದಲ್ಲಿ ಎಲ್ಲ ರಾಜಕೀಯ ಪಕ್ಷಗಳವರ ಸಭೆ ಕರೆಯಲಾಯ್ತು. ಎಲ್ಲ ರಾಜಕೀಯ ಪಕ್ಷಗಳ ಪ್ರಮುಖರು ಮತ್ತು ಕಾರ್ಯಕರ್ತರು ಸೇರಿದ್ದರು. ಜಿಲ್ಲೆಯ ಹಿರಿಯ ನಾಯಕರಾದ ಶ್ರೀ ಕೆ. ವಿ. ಶಂಕರಗೌಡರು ಭಾಗವಹಿಸುವುದಿಲ್ಲವೆಂದು ಸಭೆಗೆ ತಿಳಿದುಬಂತು. ಶ್ರೀ ಪಿ. ಎಸ್. ಜವರಪ್ಪಗೌಡರು ಮತ್ತು ಶ್ರೀ ಕೆ. ವಿ. ಶಂಕರಗೌಡರು ಮಂಡ್ಯ ರಾಜಕೀಯದಲ್ಲಿ ಕೃಷ್ಣಾರ್ಜುನರಂತೆ ಏಕದೇಹ ನ್ಯಾಯವುಳ್ಳವರು. ಶ್ರೀ ಶಂಕರಗೌಡರು ಬಾರದ ಚಳುವಳಿಯಲ್ಲಿ ಜವರಪ್ಪಗೌಡರ ಪಾತ್ರವೇನು ? ಎಂಬ ಶಂಕೆ ಪ್ರಮುಖರಾದವರಲ್ಲಿ. ಶ್ರೀ ಕೆ. ವಿ, ಶಂಕರಗೌಡರು ಈ ಚಳುವಳಿಯಲ್ಲಿ ಭಾಗವಹಿಸುವಂತೆ ಶ್ರಮವಹಿಸುವಿರಾ ? ಎಂದು ಶ್ರೀ ಜವರಪ್ಪಗೌಡರನ್ನು ಪ್ರಮುಖರು ಪ್ರಶ್ನಿಸಿದರು, ಅದ್ಹೇಗೆ ಸಾಧ್ಯ ? ಅವರ ಅಭಿಪ್ರಾಯ ಬೇರೆ ನಮ್ಮದು

ನಿಮ್ಮದು ಬೇರೆ ಎಂದ ಮೇಲೆ ನಾಡಿನ ಸಮಸ್ಯೆಯಾದ ಹಿಂದುಳಿದ ವರ್ಗಗಳ ಈ ವಿರೋಧಿ ಆಯೋಗವನ್ನು ವಿರೋಧಿಸಲು ಜನರೇ ಸಡುಕಟ್ಟಿ ನಿಂತಿದ್ದಾರೆ. ನಾವು ಹೋರಾಡೋಣ ಆಕಾಶ ನೋಡಲು ಸಾಲೇಕೆ ? ಎಲ್ಲಿ ಯಾವಾಗ ಯಾರು ನಿಂತೋ ಕುಳಿತೋ ನೋಡಿದರೆ ಆಕಾಶ ಕಂಡೇ ಕಾಣುತ್ತದೆ ಎಂದು ವಿವರಿಸಿದರು. ಊರಲ್ಲಿ ಯಾವುದೇ ರಾಜಕೀಯಚಳುವಳಿ ನಡೆದರೂ ಸಭೆಗೆ ಬಂದವರು ಜವರಪ್ಪ ಗೌಡರತ್ತ ಕಣ್ಣುಹಾಯಿಸುವುದು ನಡೆದು ಬಂದ ರೂಢಿ. ಅಂತೆಯೇ ಇಂದು ಆರಂಭ ವಾಗಬೇಕಾದ ಹಿಂದುಳಿದ ವರ್ಗಗಳನ್ನು ವ್ಯುತ್ಕ್ರಮಕೂಪಕ್ಕೆ ತಳ್ಳುವ ಈ ವರದಿಯನ್ನು ಸರ್ಕಾರ ಹಿಂದಕ್ಕೆ ಪಡೆಯಬೇಕು. ಇಲ್ಲವೆ ಈ ಸರ್ಕಾರವೇ ಇಲ್ಲ ಎನ್ನಿಸಬೇಕು. ಇದಕ್ಕೆ ನಾವೆಲ್ಲ ಭೀಷ್ಮ ಪ್ರತಿಜ್ಞಾವಂತರಾಗೋಣವೆಂದು ಮಾತನಾಡಿದ ಗೌಡರು ಸಭಿಕರಲ್ಲಿ ವೀರಾವೇಶವನ್ನುಂಟು ಮಾಡಿದರು.

ಜಿಲ್ಲೆಯ ಚಳುವಳಿಯ ಮುಖಂಡನಾಗಿ ನನ್ನನ್ನು ಸಭೆ ನೇಮಿಸಿತು, ಜವರಪ್ಪ ಗೌಡರು ಮಂಡ್ಯಜಿಲ್ಲಾ ಒಕ್ಕಲಿಗರಸಂಘದಿಂದ ರಾಜ್ಯಒಕ್ಕಲಿಗರ ಸಂಘದ ಹೋರಾಟ ಸಮಿತಿಗೆ ಸದಸ್ಯರಾಗಿ ಆಯ್ಕೆಯಾದರು. ನನಗೆ ಜವರಪ್ಪಗೌಡರ ನೆರವು ಅತ್ಯಗತ್ಯ ವಾಗಿದ್ದು ಜಿಲ್ಲೆಯ ಹೋರಾಟದಲ್ಲಿ ಸಂಪೂರ್ಣವಾಗಿ ಇನ್ನಿತರರೊಡನೆ ನೆರವು ನೀಡಲು ಜವರಪ್ಪಗೌಡರು ಸಹಕರಿಸುವಂತೆ ಕೇಳಿ ಗೌಡರನ್ನು ಇಲ್ಲಿಯೇ ಉಳಿಸಿ ಕೊಂಡು, ರಾಜ್ಯಒಕ್ಕಲಿಗರ ಸಂಘದ ಸಭೆಗೆ ಹೋಗಿ ಬರಲು ಒಪ್ಪಿಸಿದೆ.

ನನ್ನ ಅಣ್ಣ ದಿವಂಗತ ಶಿವನಂಜಪ್ಪನವರು ಮತ್ತು ಪಿ. ಎನ್. ಜವರಪ್ಪಗೌಡರು ತುಂಬ ಅಚ್ಚುಮೆಚ್ಚಿನ ಸ್ನೇಹಿತರಾಗಿದ್ದರು. ನನ್ನ ಅಣ್ಣ ದೆಹಲಿಯಿಂದ ಬಂದರೆಂದರೆ ಜವರಪ್ಪಗೌಡರು ಅವರನ್ನು ದಿನವೂ ತಪ್ಪದಂತೆ ಸಂಪರ್ಕಿಸಿ, ದಿನಗಟ್ಟಲೆ ರಾಜಕೀಯ ಅಳೆದು ಸುರಿಯುವುದು ವಾಡಿಕೆ. ಈ ಹಿನ್ನೆಲೆಯಲ್ಲಿ ನನ್ನ 10ನೆಯ ವರ್ಷದಿಂದ ಅವರ ಸಂಪರ್ಕ, ನನ್ನನ್ನು ಸ್ವಂತ ತಮ್ಮನಂತೆ ಕಾಣುತ್ತಿದ್ದರು. ನನ್ನ ಚಿಕ್ಕಂದಿನಿಂದಲೂ ರಾಮಲಿಂಗು ಎಂದು ಪ್ರೀತಿಯಿಂದ ಸಂಬೋಧನೆ ಮಾಡುವುದು ವಾಡಿಕೆ. ಅಂತೆಯೇ ಇಂದೂ ನಾನು ಮಂಡ್ಯ ನಗರಸಭೆ ಅಧ್ಯಕ್ಷನಾಗಿದ್ದು ಗೌರ್ನರ್ ಭಾಗವಹಿಸಿರುವ ಸಭೆ ಇರಬಹುದು, ಆ ಸಭೆಯಲ್ಲು ಜವರಪ್ಪಗೌಡರು ನನ್ನನ್ನು ರಾಮಲಿಂಗು ಎಂದೇ ಸಂಬೋಧನೆ ಮಾಡುತ್ತಾರೆ. ಈ ಸಂಬೋಧನೆ ಹಿಂದೆ ನನ್ನ ಬಗ್ಗೆ ಅವರಲ್ಲಿ ತುಂಬಿ ತುಳುಕುವ ಪ್ರೀತ್ಯಾದರಗಳ ಗಣಿಯೇ ಇದೆ ಎಂದು ಬಲ್ಲೆ.

ಈ ರೀತಿ ಪ್ರೀತ್ಯಾದರದಿಂದ ನನ್ನನ್ನು ಕಾಣುವ ಗೌಡರಿಗೆ ವೆಂಕಟಸ್ವಾಮಿ ವರದಿ ವಿರೋಧಿ ಚಳುವಳಿಯಲ್ಲಿ ಬೆಂಗಳೂರಿನ ದಿನಪತ್ರಿಕೆಗಳ ಮುಖಪುಟದಲ್ಲಿ ನನ್ನ ಹೆಸರು ಜಾಹಿರಾಗುವಂತೆ ಸ್ವತಃ ಪತ್ರಿಕೋದ್ಯಮಿಯಾದ ಜವರಪ್ಪಗೌಡ ಅವರು ಆಸಕ್ತಿ ವಹಿಸಿದರಷ್ಟೆ ಅಲ್ಲದೆ ಕರ್ನಾಟಕದ ಹೋರಾಟ ಕಣಗಳ ಮುಖ್ಯಕೇಂದ್ರ ಮಂಡ್ಯ ಜಿಲ್ಲೆ ಎನ್ನುವಷ್ಟರ ಮಟ್ಟಿಗೆ ಪತ್ರಿಕಾ ವರದಿಗಳು ಪ್ರತಿಧ್ವನಿಗೊಂಡವು.

ಸರಳ ಸಜ್ಜನಿಕೆ, ಶಾಂತ ಸ್ವಭಾವ ಪ್ರವೃತ್ತಿ ಜವರಪ್ಪಗೌಡರು ಹೋರಾಟ ಕಣದಲ್ಲಿ ಕಲಿಯಾಗಿ ಉಕ್ಕಿನಂತೆ ಕಠಿಣವಾಗಿ ದಯಾ ದಾಕ್ಷಿಣ್ಯ ಪರವಶರಾಗದೇ ಯುವಕ ನಂತೆ ಅಹೋರಾತ್ರಿ ನನ್ನನ್ನು ಬೆನ್ನಿ ಹಾಕಿಕೊಂಡು ನಡೆಸಿದ ಹೋರಾಟ ಅವಿಸ್ಮರಣೀಯವಾದುದು. ಜವರಪ್ಪಗೌಡರನ್ನು ಕಂಡರೆ ಜಿಲ್ಲೆಯ ಆಸ್ಪತ್ರೆ ಬಳಿ ಎಂ. ಸಿ. ರಸ್ತೆ ಮಧ್ಯದಲ್ಲಿ ಬಿ. ವೆಂಕಟಸ್ವಾಮಿ ಮತ್ತು ರಾಮಕೃಷ್ಣ ಹೆಗಡೆ ಅವರ ಪ್ರಕೃತಿಗಳನ್ನು ಇಟ್ಟುಕೊಂಡು ''ಸತ್ತರಲ್ಲಪ್ಪೋ'' ಎಂದು ವಿದ್ಯಾರ್ಥಿಗಳು ಬಾಯಿ ಬಡಿದುಕೊಳ್ಳುತ್ತಾ ದೂರದಲ್ಲಿದ್ದ ನಮ್ಮ ಬಳಿಗೆ ಬಂದು ಬನ್ನಿ ವೆಂಕಟಸ್ವಾಮಿ ಮತ್ತು ರಾಮಕೃಷ್ಣಹೆಗಡೆ ಅವರ ಪ್ರತಿಕೃತಿಗಳನ್ನು ತಂದಿದ್ದೇವೆ ಸುಡಬೇಕು ಎಂದು ಕರೆದರು. ನಾನು ನಿರಾಕರಿಸಿ ನಗರ ಸಭೆ ಅಧ್ಯಕ್ಷನಾಗಿ ಅಷ್ಟು ಕೀಳುಮಟ್ಟಕ್ಕೆ ಇಳಿಯ ಲಾರೆ ಎಂದುಬಿಟ್ಟೆ. ಪಕ್ಕದಲ್ಲೆ ಇದ್ದ ಗೌಡರು ನನ್ನ ಕಿವಿಯಲ್ಲಿ ನೀನು ಹುಡುಗರ ಮಾತಿಗೆ ಕಿವಿಗೊಡಲಿಲ್ಲವೊ ನಾಳೆಯಿಂದ ಅವರು ನಿನ್ನ ಮಾತಿಗೆ ಕಿವಿಗೊಡರು. ಜನಬಲ ಕೆದರಿದರೆ ಜಳುವಳಿ ಸತ್ತಂತೆ. ಇದು ಯುದ್ಧಭೂಮಿ ನಡೆ ಹೋಗೋಣ ಎಂದು ಪ್ರತಿಕೃತಿಗಳ ಬಳಿ ಕುಳಿತು ಮಕ್ಕಳೊಡನೆ ತಾವು ಕುಳಿತು ಬಾಯಿಬಡಿದುಕೊಂಡು ಅಂತ್ಯ ಕ್ರಿಯೆಗೆ ಅಗ್ನಿಸ್ಪರ್ಶ ಮಾಡಿದ್ದನ್ನು ಕಂಡ ನನಗೆ ಅತ್ಯಾಶ್ಚರ್ಯವಾಯಿತು.

ಆಯಾ ದಿನದ ಸಭೆಯಲ್ಲಿ ಹೀಗೆ ಮಾಡಿ ಎಂದು ಹೇಳುವ ಗೋಜಿಗೆ ಜವರಪ್ಪ ಗೌಡರು ಹೋದವರಲ್ಲ. ಇಂದಿನ ಪತ್ರಿಕೆ ಓದಿ .ಇಂತಹ ಊರಲ್ಲಿ ನಾಯಿಗಳೆರಡರ ಕತ್ತಿಗೆ ವೆಂಕಟಸ್ವಾಮಿ ರಾಮಕೃಷ್ಣಹೆಗಡೆ ಎಂದು ಬಿಲ್ಲೆಗಳಲ್ಲಿ ಹೆಸರು ಬರೆದು ನೇತುಹಾಕಿ ದೊಡ್ಡ ಮೆರವಣಿಗೆ ನಡೆಸಿದ್ದಾರೆ. ಸಾವಿರಾರು ಜನರು ನಿಂತು ನೋಡಿ ಹಿಂದುಳಿದ ವರ್ಗಗಳ ಮಾರಣ ಹೋಮಗಳಿಗೆ ಧಿಕ್ಕಾರ ಕೂಗಿದ ಜನ ಕ್ಯಾಕರಿಸಿಉಗಿದರಂತೆ ಎಂದು ತಿಳಿಸಿದರು.

ಮಾರನೆಯ ಬೆಳಿಗ್ಗೆ ಹುಡುಗರು ನನ್ನ ಮನೆ ಹತ್ತಿರ ಬಂದರು. ಸಾರ್ ನಾವು ಎರಡು ಜೂಲು ನಾಯಿಗಳ ಮೆರವಣಿಗೆ ತರುತ್ತಿದ್ದೇವೆ. ಗುತ್ತಲು ರಸ್ತೆಯಲ್ಲಿ ಮೆರವಣಿಗೆ ಉದ್ಘಾಟಿಸಲು ತಾವು ಬರಬೇಕು. ಎಂದರು. ಛೀ, ಛೀ, ಅದ್ಯಾಕೆ ಇಂತಹ ಮೆರವಣಿಗೆ ಏರ್ಪಡಿಸಿದಿರಿ ಎಂದು ಕೇಳಿದೆ. ಜವರಪ್ಪಗೌಡರು ನೆನ್ನೆ ಹೇಳಿದ ಊರಿನವರಿಗಿಂತ ನಮ್ಮ ಮಂಡ್ಯ ಕಡೆ ಆಗಬಾರದು ಅಲ್ಲವೆ ? ಅದಕ್ಕೆ ಈ ಮೆರವಣಿಗೆ ಎಂದು ಹೇಳಿ ವಾದ್ಯ ಸಮೇತ ನಾಯಿಗಳ ಮೆರವಣಿಗೆ ನಡೆಸಿದರು. ಮೆರವಣಿಗೆಗೆ ಜವರಪ್ಪಗೌಡರು ಜಿ. ಮಾದೇಗೌಡರು ಬಂದಿದ್ದರು. ಸಭೆಯಲ್ಲಿ ಮೆರವಣಿಗೆಯನ್ನು ವಿರೋಧಿಸಿ ಗುಂಪಿನಲ್ಲಿ ಮಾತಾಡಿದ ಮಾತುಗಳನ್ನು ಗೌಡರು ಗಮನಿಸಿದ್ದರು. ಸಭೆಯಲ್ಲಿ ಮಾತ ನಾಡುವಾಗ ಹಿಂದೆ ಮಾತನಾಡಿದವರಿಗೆ ವಿದ್ಯಾರ್ಥಿಗಳ ಪರವಾಗಿ ಉತ್ತರಿಸಿ ರಾಮಾಯಣದ ಸೇತುಬಂಧನವನ್ನೇ ಉದಾಹರಿಸಿ ಕಪಿಸೈನ್ಯದಲ್ಲಿದ್ದವರೆಲ್ಲರೂ ಆಂಜನೇಯನಷ್ಟೇ ಶಕ್ತಿವಂತರಾಗಿರಲಿಲ್ಲ' ಅವರವರ ಶಕ್ತ್ಯಾನುಸಾರ ಕಲ್ಲುಗಳನ್ನು

ಹಾಕಿ ಸೇತುಬಂಧನಕ್ಕೆ ನೆರವಾದರು, ಹಾಗೇ ಅಳಿಲುಗಳು ಕೂಡ ಮರಳಿನಲ್ಲಿ ಹೊರಳಾಡಿ ಮೈಗೆ ಅಂಟಿ ಬಂದ ಮರಳಿಂದ ಸೇತುಬಂಧಕ್ಕೆ ನೆರವಾದ ಕತೆ ಕೇಳಿದ್ದೀರಿ. ಚಳುವಳಿ ಎಂದರೆ ಅವರಿಗೆ ಎಟುಕುವ ಮಟ್ಟಕ್ಕೆ ಕಾರ್ಯಕ್ರಮ ಹಾಕಿಕೊಂಡು ನಡೆದಿದ್ದಾರೆ. ಇಂದು ನಾಯಿಮೆರವಣಿಗೆ ತಂದ ವಿದ್ಯಾರ್ಥಿನಾಯಕರು ಆನೆ ತರಲು ಸಾಧ್ಯವಿತ್ತೇನು ? ಇಲ್ಲ. ನಾಯಿಗಳ ಮೂಲಕ ವೆಂಕಟಸ್ವಾಮಿವರದಿ ವಿರೋಧಿ ಚಳುವಳಿಗೆ ಸಹಾಯಕರಾಗಿದ್ದಾರೆ. ಅದಕ್ಕಾಗಿ ಅಭಿನಂದಿಸೋಣ ಎಂದು ಮಕ್ಕಳಿಂದ ಚಪ್ಪಾಳೆ ಗಿಟ್ಟಿಸಿದರು ಗೌಡರು.

ತದನಂತರ ಮಾತನಾಡುತ್ತ ಮೊನ್ನೆ ಶಿವಮೊಗ್ಗ ಜಿಲ್ಲೆ ಊರೊಂದರಲ್ಲಿ ಜನತೆ ಸೇರಿ ರಾಮಕೃಷ್ಣ ಹೆಗಡೆ ಅವರ ಪ್ರತಿಕೃತಿಗೆ ಅಗ್ನಿಸ್ಪರ್ಶ ಮಾಡಿ ಸಂಜೆ ಹೊಳೆ ತೀರದಲ್ಲಿ ಸೇರಿ ಪುರೋಹಿತರಿಂದ ಅಂತ್ಯಕ್ರಿಯಾದಿಗಳನ್ನು ನಡೆಸಿ ತಿಲತರ್ಪಣ ಅರ್ಪಿಸಿ ನೂರಾರು ಜನಕ್ಕೆ ಅನ್ನಸಂತರ್ಪಣೆ ನಡೆಸಿದರೆಂದು ಪತ್ರಿಕಾ ವರದಿ ತಿಳಿಸಿದೆ ಎಂದು ಜವರಪ್ಪಗೌಡರು ತಿಳಿಸಿದರು.

ನಾಯಿಮೆರವಣಿಗೆಯಂತೆಯೇ ಗೋಪಾಲಪುರದ ಯುವಕರು ಹೆಗಡೆ ಅವರ ಪ್ರತಿಕೃತಿ ನಿರ್ಮಿಸಿ ಅದರ ದಹನ ಕ್ರಿಯೆಗೆ ನನ್ನ ಮತ್ತು ಜವರಪ್ಪಗೌಡರನ್ನು ಆಹ್ವಾನಿಸಿದರು. ನಾವು ಊರಿಗೆ ಹೋಗಿ ಅವರ ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರತಿಕೃತಿಗಳ ದಹನವನ್ನು ಊರಿನ ನಡುಬೀದಿಯಲ್ಲಿ ನಡೆಸಿದೆವು. ಪುರೋಹಿತರಿಂದ ಹೆಬ್ಬಾಳದಲ್ಲಿ ತಿಲತರ್ಪಣವಿತ್ತು ಬಂದೆವು.

ಒಂದರ ಹಿಂದೆ ಒಂದಾಗಿ ಜನಮನ ತೋಚಿದಂತೆ ತರಹೇವಾರಿಯಾಗಿ ಚಳುವಳಿ ಹೆಮ್ಮರವಾಗಿ ಬೆಳೆದು ನಿಲ್ಲಲು ಜವರಪ್ಪಗೌಡರು ಪತ್ರಿಕೋದ್ಯಮಿಯಾಗಿ ಕುಳಿತಲ್ಲೇ ಜಿಲ್ಲೆಯಾದ್ಯಂತ ರಾಜ್ಯಾದ್ಯಾಂತ ಚಳುವಳಿಗೆ ನಿರೂಪಣೆಯನ್ನು ಯಾರಿಗೂ ಅರಿಯದ ರೀತಿ ನೀಡಿದ್ದನ್ನು ಕಂಡು ನನಗೆ ತುಂಬಾ ಆಶ್ಚರ್ಯವಾಯಿತು. ತಿಂಗಳು ಕಾಲ ಬಸ್ಸುಗಳ ಓಡಾಟವಿಲ್ಲ. ಬಂದ ಕಾರುಗಳು ವ್ಯಾನುಗಳನ್ನು ಇಂತಿಷ್ಟುಕಾಲ ತಡೆ ಹಿಡಿದು ಬಿಡುವ ಕಾಲ ಗೊತ್ತು ಮಾಡಲಾಗಿತ್ತು. ಚಳುವಳಿಗಾರರಿಗೆ ಕಾರು ವ್ಯಾನುಗಳವರು, ನಿಮ್ಮ ಮುಖಂಡರಾದ ಎಂ. ಕೆ. ರಾಮಲಿಂಗೇಗೌಡರು ವಿವಾಹಕ್ಕೆ ಹೋಗುವ ನಮ್ಮನ್ನು ಬಿಡಲು ಹೇಳಿದ್ದಾರೆ ಎಂದು ಹೇಳಿ ತಡೆಯಿಂದ ತಪ್ಪಿಸಿಕೊಂಡು ಹೋದ ನಿದರ್ಶನಗಳಿದ್ದು ಬೆಳಗಾಗಿ ಎದ್ದು ಪತ್ರಿಕಾವರದಿಯಲ್ಲಿ "ವೆಂಕಟಸ್ವಾಮಿವರದಿ ವಿರೋಧಿ ನಾಯಕ ಶ್ರೀ ಎಂ. ಕೆ. ರಾಮಲಿಂಗೇಗೌಡರ ಹೇಳಿಕೆ ಎಂದು ದೊಡ್ಡ ಶಿರೋನಾಮೆ ನೋಡಿದ ನನ್ನ ಹೆಸರು ಚಳುವಳಿ ಮುಗಿದ ಕಾಲಕ್ಕೆ ಜನಮನಕ್ಕೆ ಚಿರಪರಿಚಿತವಾಗಿ ಹೋಗಿತ್ತು.

ಮಂಡ್ಯದಲ್ಲಿ ಬ್ರಾಹ್ಮಣರೂ ಲಿಂಗಾಯಿತರೂ ಸೇರಿದಂತೆ, 19 ಜಾತಿಗಳ ಪ್ರಮುಖರನ್ನು ಸಭೆ ಸೇರಿಸಿ ಅವರುಗಳನ್ನು ಒಕ್ಕಲಿಗರು ಬೆನ್ನಿಗೆ ಕಟ್ಟಿಕೊಂಡು

ಹೋರಾಟ ನಡೆಸಿದರು. ಬಡವರು, ದರಿದ್ರರು ಇಲ್ಲದ ಜಾತಿಗಳವರು ಯಾರಿದ್ದಾರೆ ಅವರೆಲ್ಲರ ಕ್ಷೇಮ ಈ ಹಿನ್ನೆಲೆಯಲ್ಲಿ ನಡೆದ ಬಿ. ವೆಂಕಟಸ್ವಾಮಿ ವರದಿ ವಿರೋಧ ಹೋರಾಟ ಮಂಡ್ಯಜಿಲ್ಲೆಯ ರಾಜಕೀಯಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಲ್ಲಿ ಉಳಿಯಬೇಕಾದ ಚಳುವಳಿ.

ವೆಂಕಟಸ್ವಾಮಿ ವರದಿ ವಿರುದ್ಧ ಹೋರಾಟ ನಡೆಸುತ್ತಿದ್ದ ತರುಣರು ಶಿಸ್ತಿನ ಸಿಪಾಯಿಗಳಾಗಿ ನಾಯಕರ ಮಾತು ಚಾಚೂ ತಪ್ಪದೆ ನಡೆದುಕೊಳ್ಳಲು ಪದೇ ಪದೇ ಒತ್ತಾಯ ಪೂರ್ವಕವಾಗಿ ಯುವಕರ ಮನಸ್ಸಿನ ಮೇಲೆ ದೊಡ್ಡ ಪರಿಣಾಮವನ್ನುಂಟು ಮಾಡುವಂತೆ ಮಹಾಕವಿ ಕುವೆಂಪು ಅವರ ಗೀತೆಗಳನ್ನು ಹೇಳಿ ಶ್ರೀ ಜವರಪ್ಪ ಗೌಡರು ಯುವಪೀಳಿಗೆಯಲ್ಲಿ ಉಂಟುಮಾಡಿದ ಶಿಸ್ತಿನ ಘಟನೆ ಅಪೂರ್ವವಾದುದು. ಇದಕ್ಕೆ ಉದಾಹರಣೆಯಾಗಿ ಸಂಸ್ಥಾನದ ಒಕ್ಕಲಿಗರ ಸಂಘದ ಅಧ್ಯಕ್ಷ ಡಾ. ಕೆ. ಎಸ್. ರಾಮೇಗೌಡರು ಮೈಸೂರಿಗೆ ಬರುವಾಗ ಮದ್ದೂರಿನ ಪ್ರವಾಸಿ ಮಂದಿರದ ಬಳಿ ಅವರನ್ನು ತಡೆ ಹಿಡಿದು ನಿಲ್ಲಿಸಿದರು ಚಳುವಳಿಕಾರರು. ಈ ವಿಚಾರವನ್ನು ದೂರವಾಣಿ ಮೂಲಕ ತಿಳಿಸಿ ಡಾ. ಕೆ.ಎಸ್. ರಾಮೇಗೌಡರನ್ನು ಮೈಸೂರಿಗೆ ಹೋಗಲು ಬಿಡುವಂತೆ ಯುವಕರಿಗೆ ಸಲಹೆ ಮಾಡಲು ಮಿತ್ರರು ತಿಳಿಸಿ ದೂರವಾಣಿ ಸಂಖ್ಯೆ ಕೊಟ್ಟರು.

ಅಲ್ಲಿ ಗುಂಪಿನಲ್ಲಿರುವ ಯುವಕರು ನನಗೆ ತಿಳಿದವರಲ್ಲ. ನನ್ನ ಅವರು ತಿಳಿದವರಲ್ಲ. ಆದರೂ ಚಳುವಳಿ ನಾಯಕನಾಗಿ ಮಂಡ್ಯಜಿಲ್ಲೆಯಲ್ಲಿ ಹೋರಾಟ ಮಾಡುವ ನನ್ನ ಹೆಸರನ್ನು ವಾರ್ತಾಪತ್ರಿಕೆಗಳು ಪರಿಚಯಿಸಿದ್ದಲ್ಲದೆ ಜವರಪ್ಪಗೌಡರು ಪ್ರತಿ ಗುಂಪಿಗೂ ಹೋಗುತ್ತ ಬರುತ್ತ ಪರಿಚಯಿಸಿದ್ದರು. ಈ ಪರಿಚಯದ ಹಿನ್ನೆಲೆಯಲ್ಲಿ ನಾನು ಮದ್ದೂರಿಗೆ ದೂರವಾಣಿ ಮೂಲಕ ಮಾತನಾಡಿ ಡಾ. ಕೆ. ಎಸ್. ರಾಮೇಗೌಡರನ್ನು ತಡೆಯಬಾರದೆಂದು ತಿಳಿಸಿದೆ. ಆಗಲಿ ಸಾರ್ ಬಿಡುತ್ತೇವೆಂದು ಮುಂದಕ್ಕೆ ಹೋಗಲು ಬಿಟ್ಟಿದ್ದರು. ಈ ಅಂಶವನ್ನು ಡಾ. ರಾಮೇಗೌಡರು ಮಂಡ್ಯ ಸಮೀಪದ ಎಂ.ಸಿ. ರಸ್ತೆಯ ಗುಂಪಿನಲ್ಲಿದ್ದ ನನಗೆ ತಿಳಿಸಿ ಯುವಕರ ಶಿಸ್ತು ಮಿಲಿಟರಿಸಿಪಾಯಿಗಳಂತದ್ದೆಂದು ಹೊಗಳಿ ಹಾರೈಸಿದರು.

ವೆಂಕಟಸ್ವಾಮಿ ವರದಿ ವಿರೋಧ ಹೋರಾಟ ನಡೆಸುವಲ್ಲಿ ಮೂರು ಮನೆ ಕೊಪ್ಪಲು ಹೊರತಾಗಿರಲಿಲ್ಲ. ಗ್ರಾಮಾಂತರ ಜನರ ಜೀವನದ ಮೇಲೆ ಮುಖ್ಯಮಂತ್ರಿ ಹೆಗಡೆಯವರು ನಡೆಸುವ ಮಾರಕ ಮಹಾಯಾಗ ಎಂದರಿತ ಜನರು ನಡೆಸಿದ ಹೋರಾಟಕ್ಕೆ ಸರ್ಕಾರ ಮಣಿದು ವೆಂಕಟಸ್ವಾಮಿ ವರದಿಯನ್ನು ಹಿಂದಕ್ಕೆ ಪಡೆಯಿತು. ಗ್ರಾಮಾಂತರ ಅಮಾಯಕ ಜನರ ವಿರುದ್ಧ ಕುತಂತ್ರಮಾರ್ಗದಿಂದ ಹೂಡಿದ ಮಾಯಾಜಾಲದ ಪಾಪ ಕೂಪಕ್ಕೆ ಸಿಕ್ಕಿಕೊಂಡ ಹೆಗಡೆ ಅವರನ್ನು ಅಲ್ಲಿಂದೀಚಿಗೆ ಒಂದಲ್ಲೊಂದು ಪ್ರಕರಣದಲ್ಲಿ ಸಿಕ್ಕಿಕೊಳ್ಳುತ್ತ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ಕೊಡುವ ಮೂಲಕ ಪರ್ಯವಸಾನಕ್ಕೆ ಈಡುಮಾಡಿತು ವೆಂಕಟಸ್ವಾಮಿ ಮಹಾನುಭಾವನ ಪಾಪಕೂಪದ

ವರದಿ.

ಹಿರಿಯರಾದ ಪಿ.ಎಸ್.ಜೆ ಅವರ ದಿನಸತ್ಯದ ಜೀವನವನ್ನು ಬಹು ಸಮೀಪದಿಂದ ಕಂಡವನು. ಇಂದೂ ಕಾಣುತ್ತಿರುವವನು ನನಗೆ ವಿವೇಕದ ವಯಸ್ಸು ಬಂದ ಮೇಲೆ ಅವರ ಸಮಗ್ರಜೀವನದ ಬಗ್ಗೆ ಚಿಂತನೆ ಮಾಡುತ್ತಿದ್ದೇನೆ. ಪಿ. ಎಸ್.ಜೆ. ಅವರು ಶ್ರೀಮಂತರೆ, ಬಡವರೆ ಎಂಬುದನ್ನು ನೀವು ಅವರ ಯಾವ ಮಗ್ಗುಲಿನಿಂದ ನೋಡಿದರೂ ಕಾಣುವುದು ಕಷ್ಟಸಾಧ್ಯ.

ಸಹಕಾರ ಸಂಘಗಳೊ, ಗ್ರಾಮಪಂಚಾಯಿತಿಗಳೊ, ಪುರಸಭೆಗಳೊ, ತಾಲ್ಲೂಕು ಬೋರ್ಡುಗಳೊ ಮಂತ್ರಿಸ್ಥಾನವೊ ಯಾವುದೇ ಕ್ಷೇತ್ರವಾಗಬಹುದು. ಅವುಗಳ ಚುನಾವಣೆಯಲ್ಲಿ ಜಯಶಾಲಿಗಳಾದವರಿಗೆ ಪಿ.ಎಸ್.ಜೆ ಅವರ ಮನೆಯಲ್ಲಿ ಮೊದಲನೆ ಭೋಜನಕೂಟದ ಏರ್ಪಾಡಾಗಿರುತ್ತದೆ. ಮಂತ್ರಿಗಳಾದ ಶಂಕರಗೌಡರು, ವಿಧಾನ ಪರಿಷತ್ ಸದಸ್ಯರುಗಳಾಗಿ ಚುನಾಯಿತರಾದ ಸ್ನೇಹಿತರು, ಹೀಗೆ ಎಲ್ಲರನ್ನು ಆಹ್ವಾನಿಸಿ ಭೋಜನವಿತ್ತು ಗೌರವಿಸಿ ಅವರಿಂದ ಗೌರವ ಹೊಂದಿದವರು ಪಿ.ಎಸ್.ಜೆ. ಅವರು. ''ಗೌರವ ಕೊಟ್ಟು ಗೌರವ ಪಡೆ'' ಎಂಬ ನಾಣ್ಣುಡಿ ಅನುಕರಣೆ ಅವರದು.

ಮಂಡ್ಯಪುರಸಭೆ ಅಧ್ಯಕ್ಷನಾಗಿ ನಾನು, ಉಪಾಧ್ಯಕ್ಷನಾಗಿ ಶ್ರೀ ಬಿ. ಕೆ. ರಾಮಚಂದ್ರಪ್ಪ, ನಾಗಮಂಗಲ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿ ಚುನಾಯಿತರಾದ ಶ್ರೀ ಹೆಚ್. ಟಿ. ಕೃಷ್ಣಪ್ಪನವರ ಗೌರವಾರ್ಥ ಭೋಜನ ಕೂಟ ಏರ್ಪಡಿಸಿದ್ದರು. ಬಹುಜನ ಆಹ್ವಾನಿತರು ನೋಡಿದವರಿಗೆ ಮನೆ ಚಿಕ್ಕದಾಗಿ ಕಾಣಬಹುದು ಅವರ ಮನಸ್ಸು ವೈಶಾಲ್ಯವಾದುದು. ಅವರ ಹೃದಯವೈಶಾಲ್ಯಪ್ರಾಂಗಣದಲ್ಲಿ ಸಾವಿರಗಟ್ಟಲೆ ಜನ ಕುಳಿತುಕೊಳ್ಳಲು ಸ್ಥಳಾವಕಾಶವಿದೆ. ಊರಿಗೆ ಬರುವ ಪರಿಚಯದ ಮಂತ್ರಿ ಮಹೋದಯರು ಪಿ.ಎಸ್.ಜೆ. ಅವರನ್ನು ಕಾಣದೆ ಹೋಗುವುದು ವಿರಳ.

ಗೌಡರು ಸ್ವಾತಂತ್ರ್ಯಹೋರಾಟ ಕಣದಲ್ಲಿ ರಾಜಕೀಯ ಕ್ಷೇತ್ರದ ದುಡಿಮೆಯಲ್ಲಿ 60 ವರ್ಷಕ್ಕೂ ಹೆಚ್ಚುಕಾಲ ಸವೆಸಿದರು. ಕರ್ನಾಟಕದ ಉದ್ದಗಲಕ್ಕೂ ಮಹಾ ಮಹಾ ರಾಜಕಾರಣನಾಯಕರ ಪರಿಚಯ. ಕೆ. ಸಿ. ರೆಡ್ಡಿಯವರು, ಕೆ. ಹನುಮಂತಯ್ಯ, ದೇವರಾಜು ಅರಸು, ಕಡಿದಾಳರು, ವೀರಣ್ಣಗೌಡರು ಮುಂತಾದ ಮಂತ್ರಿ ಮುಖ್ಯ ಮಂತ್ರಿಗಳ ನಿಕಟವರ್ತಿ ಪಿ.ಎಸ್.ಜೆ. ಅವರದು ನಿಸ್ವಾರ್ಥ ಜೀವನ, ಸತ್ಯದ ದಾರಿ ಬದುಕು ಗಾಂಧೀಜಿ ಅವರ ಮಾರ್ಗಾನುಕರಣೆ ಇವರ ಜೀವನ ದಾರಿಯ ದೀಪ. ಶುದ್ಧ ಚಾರಿತ್ರ್ಯದ ಜೊತೆಗೆ ಕಾರ್ಯ ಸಾಧಿಸುವ ಶಕ್ತಿ ಅವರಲ್ಲಿದೆ. ಶಿಲ್ಪಿ ಸಂದರ್ಭಕ್ಕೆ ತಕ್ಕ ಉಪಕರಣಗಳನ್ನು ಆರಿಸಿಕೊಳ್ಳುವಂತೆ ತಕ್ಕ ಶಕ್ತಮಿತ್ರರನ್ನೇ ಆರಿಸಿಕೊಳ್ಳುವ ಜಾಣ್ಮೆ ಅವರಲ್ಲಿದೆ. ಇತ್ತೀಚೆಗೆ ಸಂಭವಿಸಿದ ಶ್ರೀ ಆದಿ ಚುಂಚನಗಿರಿ ವೈದ್ಯಕೀಯ ಮಹಾ ವಿದ್ಯಾಲಯ ವಿದ್ಯಾರ್ಥಿಗಳ ಮುಷ್ಕರ ಅಂತ್ಯಗೊಳಿಸಲು ಜಿಲ್ಲೆಯ ನಾಯಕ ಶಿಕ್ಷಣತಜ್ಞ ಶ್ರೀ ಕೆ. ವಿ. ಶಂಕರಗೌಡರನ್ನು ಬಳಸಿಕೊಂಡು ಜಾಣ್ಮೆ ವ್ಯಕ್ತಪಡಿಸಿದರು.

ದೇಶಕ್ಕೆ ಉಪಯೋಗವಾಗುವ ಯಾವುದಾದರೊಂದು ಕೆಲಸವನ್ನು ಚಿಕ್ಕದಾದರೂ ಚಿಂತಿಲ್ಲ ಮಾಡುತ್ತಲೇ ಹೋಗಬೇಕೆನ್ನುವ ಪಾಠವನ್ನು ಪಿ.ಎಸ್.ಜೆ ಅವರ ಜೀವನದಿಂದ ರಾಜಕಾರಣಿಗಳು ಕಲಿಯಬಹುದಾಗಿದೆ. ಅಸಾಧಾರಣ ಮೇಧಾಶಕ್ತಿ, ಗಾಂಧಿ ತತ್ವಾನುಷ್ಠಾಯಿಗಳು, ದೃಢಪ್ರತಿಜ್ಞರು, ಕಠಿಣ ವ್ರತಸ್ಥರೂ ಆದ ಪಿ.ಎಸ್.ಜೆ ಅವರಿಗೆ ವಿದ್ಯೆ ಅಷ್ಟಕ್ಕಷ್ಟೆ. ಆದರೂ ಅವರು ಸ್ವಯಂಭು. ಪತ್ರಕರ್ತರಿಗೆ ಕೊಡುವಂತೆ ಪಿ.ಎಸ್.ಜೆ ಅವರಿಗೂ ಪುರಸಭೆ ಹಿಂದೆ ನಿವೇಶನ ಕೊಟ್ಟಿದೆ. ಮನೆ ಕಟ್ಟಿದ್ದಾರೆ. ಎರಡು ಮೂರು ಮಂದಿ ಪತ್ರಕರ್ತರು ಎರಡು ಮೂರು ಸೈಟು ಪಡೆದು ಮಾರಾಟ ಮಾಡಿಕೊಂಡವರು ಉಂಟು. ನಾನೇ ಒಮ್ಮೆ ಸಾರ್ ನಾಲ್ಕು ಜನ ಗಂಡು ಮಕ್ಕಳಿದ್ದಾರೆ ಅವರಿಗೆ ಸೈಟು ಬೇಡವೆ ? ಎಂದು ಕೇಳಿದೆ. ಬೇಕು ಅವರಿಗೆ ಸೈಟು ಕೊಡುವ ಪುರಸಭೆ ಅವರು ವಯಸ್ಸಿಗೆ ಬಂದಾಗ ಕೊಡಬೇಕು ಕೊಡುತ್ತಾರೆ ಎಂದರೆ ಹೊರತು ಸೈಟನ್ನು ಕೊಡಿಸಿ ಎನ್ನುವ ಮಾತಾಡಲಿಲ್ಲ.

ದಯಾಮಯನು ಪಿ.ಎಸ್.ಜೆ ಅವರಿಗೆ ಮತ್ತು ಸಂಸಾರಕ್ಕೆ ಆಯುರಾರೋಗ್ಯಾದಿ ಸಕಲ ಸಂಪತ್ತನ್ನಿತ್ತು ಸನ್ಮಂಗಳವನ್ನೀಯಲೆಂದು ಪ್ರಾರ್ಥಿಸುತ್ತೇನೆ.

ಎಂ. ಕೆ. ರಾಮಲಿಂಗೇಗೌಡ

# ಒಡನಾಡಿ

ಪಿ. ಎಸ್. ಜವರಪ್ಪಗೌಡರು ನಾನು ಕಂಡ ವೈಶಿಷ್ಟ್ಯಪೂರ್ಣ ವ್ಯಕ್ತಿಗಳಲ್ಲಿ ಒಬ್ಬರು. ನನ್ನ ಪೂಜ್ಯ ತಂದೆ ದಿವಂಗತ ಎಂ. ಕೆ. ಶಿವನಂಜಪ್ಪನವರ ಅತ್ಯಂತ ನಿಕಟ ಮಿತ್ರರು, ಒಡನಾಡಿಗಳು. ನನ್ನ ತಂದೆಯವರು ಗತಿಸಿದ ಮೇಲೂ ಸಹ ನಮ್ಮ ಕುಟುಂಬದ ಮೇಲೆ ತಂದೆಯವರು ಇದ್ದಾಗಿನ ಮಮತೆ, ವಿಶ್ವಾಸ ಪ್ರೀತಿಯನ್ನು ಇಟ್ಟುಕೊಂಡಿರತಕ್ಕಂಥ ಸಹೃದಯ ಹಿರಿಯರು. ಇಂತಹ ಮಿತ್ರತ್ವವುಳ್ಳ ವ್ಯಕ್ತಿಗಳು ಇಂದಿನ ದಿನಗಳಲ್ಲಿ ಅಪರೂಪ. ಈ ವ್ಯಕ್ತಿಯಲ್ಲಿ ಅದೇನೋ ಶಕ್ತಿ ಮತ್ತು ಚೈತನ್ಯ ಅಡಗಿದೆ.

ಮಂಡ್ಯಜಿಲ್ಲೆಯ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದ ಆಗುಹೋಗುಗಳಲ್ಲಿ ಸದಾ ನೆನಪಿನಲ್ಲಿ ಉಳಿಯುವ ವ್ಯಕ್ತಿತ್ವದ ಅನುಭವಿ ಕಾರ್ಯಶೀಲ. ಇವು ಇಂದಿನ ತಲೆಮಾರಿನವರ ಚಿಂತನೆಗೆ ಗ್ರಾಸ.

ಮಂಡ್ಯಜಿಲ್ಲೆಯ ರಾಜಕೀಯ ಏಳು ಬೀಳುಗಳಲ್ಲಿ ತನ್ನದೇ ಆದ ಅನುಕರಣೀಯ ರೀತಿಯಲ್ಲಿ ಪಾತ್ರನಿರ್ವಹಣೆ, ಎಂತಹ ಅತಿನಿಕೃಷ್ಟ ವಿಷಯಕ್ಕೂ ಮೆರುಗು ಕೊಡಬಲ್ಲ ಶಕ್ತಿ ಹೊಂದಿರುವ ವ್ಯಕ್ತಿ ಪಿ.ಎಸ್.ಜೆ ಮಂಡ್ಯಜಿಲ್ಲೆಯಲ್ಲಿನ ಸ್ವಾತಂತ್ರ್ಯ ಚಳುವಳಿ ನಡೆದ ರೀತಿ, ಭಾಗವಹಿಸಿದ ವ್ಯಕ್ತಿಗಳು, ಅಂದು ನಡೆದ ಘಟನೆಗಳು ಇವರ ನೆನಪಿನ ನಿಘಂಟಿನಲ್ಲಿ ಹಸಿರಾಗಿದ್ದು, ಅದರ ವರ್ಣನೆ ಅವರಿಂದಲೇ ಕೇಳಿ ಸವಿಯಬೇಕು. ರಾಜಕೀಯ ಚಟುವಟಿಕೆಗಳಲ್ಲಿ ಜಿಲ್ಲಾ ಕಾಂಗ್ರೆಸ್ ಪಕ್ಷ ಕಟ್ಟಲು ನಡೆಸಿದ ಪ್ರಯತ್ನಗಳು, ಚುನಾವಣೆಗಳು, ಎದುರಿಸಿದ ಚುನಾವಣೆಯ ನಿಂತ ಅಭ್ಯರ್ಥಿಗಳು, ಚುನಾವಣೆ ನಡೆಸಿದ ವೈಖರಿಗಳು ಇವರ ಮಾತಲ್ಲೇ ಕೇಳಿ ತಿಳಿದರೆ ಬಹಳ ವಿಶೇಷವೆನಿಸುತ್ತದೆ.

ಮಂಡ್ಯಜಿಲ್ಲೆಯ ಪ್ರಮುಖರುಗಳು, ಜಿಲ್ಲೆಯ ಜನತೆಯ ಸಹಕಾರದೊಡನೆ ಮಂಡ್ಯಜಿಲ್ಲೆಗೆ ಆವಶ್ಯಕವಾದ ಪ್ರಗತಿ ಕೆಲಸಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಶೈಕ್ಷಣಿಕ ಸಂಸ್ಥೆಯಾಗಲಿ ಸಹಕಾರ ಕ್ಷೇತ್ರವಾಗಲಿ ಕೆಲಸ ಮಾಡಿರುವ ಹೆಗ್ಗಳಿಕೆ ಇವರದು.

ಈ ಎಲ್ಲ ಜಂಜಾಟಗಳ ಮಧ್ಯೆಯು ಪತ್ರಿಕಾರಂಗದಲ್ಲಿ ತನ್ನ ಅಸ್ತಿತ್ವದ ಕುರುಹನ್ನು ಅಂದು ಏಕೆ ? ಇಂದೂ ಸಹ ನೀಡುತ್ತಿರುವ ಹಿರಿಯರು. ಅನೇಕ ಹಿರಿಯ ಪತ್ರಿಕೋದ್ಯಮಿಗಳ ಒಡನಾಟ, ಮಂಡ್ಯಜಿಲ್ಲೆಯನ್ನು ಪತ್ರಿಕಾಮಾಧ್ಯಮದಲ್ಲಿ ಹಸಿರಾಗಿ ಇಡುವಂತೆ ಮಾಡಿದವರು. ಸ್ವಯಂ ವಿಶ್ವಾಮಿತ್ರ ಪತ್ರಿಕೆಯನ್ನು ನಡೆಸಿ ಅನುಭವಿಸಿರುವವರು.

ವಿಶಾಲಕರ್ನಾಟಕ ರಚನೆಗೆ ವಿರೋಧ ಚಳುವಳಿ, ಕರ್ನಾಟಕ ವಯಸ್ಕರಶಿಕ್ಷಣ

ಸಮಿತಿಯ ಅಧ್ಯಕ್ಷರಾಗಿ ಕೆಲಸ ಮಾಡಿದ ಅವರ ಅಧಿಕಾರಾವಧಿಯಲ್ಲಿ ಆ ಸಂಸ್ಥೆಯನ್ನು ಶೈಶವಾಸ್ಥೆಯಿಂದ ಪೂರ್ಣ ಪ್ರಮಾಣದ ವ್ಯಕ್ತಿಯು ಬೆಳೆಯುವ ಹಾಗೆ ಶಿಕ್ಷಣ ಸಮಿತಿಯನ್ನು ಬೆಳೆಸಿದರು. ಇವರ ಅಧಿಕಾರಾವಧಿಯಲ್ಲಿ ನೆಹರುಸಾಕ್ಷರತಾ ಪುರಸ್ಕಾರವನ್ನು ವಯಸ್ಕರ ಶಿಕ್ಷಣ ಸಮಿತಿಗೆ ಪಡೆದುಕೊಂಡಿದ್ದೇ ಅಲ್ಲದೆ ಭಾರತ ದೇಶದ ವಯಸ್ಕರ ಶಿಕ್ಷಣದ ಆಂದೋಲನದಲ್ಲಿ ಕರ್ನಾಟಕ ವಿಶೇಷ ಸ್ಥಾನಕ್ಕೆ ಏರಿಸಲ್ಪಟ್ಟಿತು. ಅನೇಕ ವಿದ್ಯಾಪೀಠಗಳು ಸಕ್ರಿಯವಾಗಿ ಕೆಲಸ ಮಾಡಿ ಚಟುವಟಿಕೆಗಳ ಕೇಂದ್ರಗಳಾದುವು. ವಯಸ್ಕರಶಿಕ್ಷಣ ಸಮಿತಿಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಪೀಠಗಳನ್ನು ತೆರೆದು ಜ್ಞಾನ ಪಸರಿಸಲು ಶ್ರಮಿಸಿದಂತಹ ರೂವಾರಿಗಳು ಇವರು. ಅದೂ ಅಲ್ಲದೆ ಮಂಡ್ಯಜಿಲ್ಲೆಯ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾದ ಜನತಾಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿಯಲ್ಲಿ ಸೇವೆ ಸಲ್ಲಿಸಿ ಗ್ರಾಮಾಂತರದ ಅನೇಕ ಯುವಕರಿಗೆ ವಿದ್ಯಾರ್ಜನೆಗೆ ಸಹಾಯ ಮಾಡಿ ಮಾರ್ಗದರ್ಶನ ಮಾಡಿದ್ದಾರೆ.

ಅನೇಕ ಚಳುವಳಿಗಳಲ್ಲಿ ನನಗೆ ಇವರ ಒಡನಾಟ. ಆ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಅವಕಾಶ. ಮಂಡ್ಯ ಜಿಲ್ಲೆಯಲ್ಲಿ ವ್ಯಾಪಕವಾಗಿ ಹಾಗೂ ಪರಿಣಾಮಕಾರಿಯಾಗಿ ನಡೆದ ವರುಣಾನಾಲಾ ವಿರೋಧಿ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದು, ಚಳುವಳಿಯು ನಡೆದಷ್ಟು ಕಾಲ ಚಳುವಳಿಗೆ ಹೊಸ ಕಾರ್ಯಕ್ರಮ ಕೊಡುವುದರಲ್ಲಿ ಚಳುವಳಿಯಲ್ಲಿ ಭಾಗವಹಿಸುವವರಿಗೆ ವಿಷಯ ನಿರೂಪಣೆ ಮಾಡುವುದರಲ್ಲಿ ಪ್ರೇರಕ ಶಕ್ತಿಯಾಗಿದ್ದರು.ಅಷ್ಟೇ ಅಲ್ಲದೆ ಪ್ರತಿ ನಿತ್ಯ ಚಳುವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿ ಶಿಸ್ತು ಸಂಯಮ ಕಾಪಾಡಿದವರು.

ಮಂಡ್ಯ ರೈತ ಮತ್ತು ಕಾರ್ಮಿಕ ಸಂಘದ ಅಧ್ಯಕ್ಷರಾಗಿ ರೈತ ಮತ್ತು ರೈತ ಕಾರ್ಮಿಕರ ಹಿತಾಸಕ್ತಿ ಕಾಪಾಡಲು ಶ್ರೇಯಸ್ಸುಂಟಾಗಿ ಅಭಿವೃದ್ಧಿ ಆಗಲು ಮಾಡಬೇಕಾದ ಅಂಶಗಳನ್ನುಳ್ಳ ಬೇಡಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿದಾಗ ಮುಖ್ಯಮಂತ್ರಿ ಆರ್. ಗುಂಡುರಾವ್ ಸಮಿತಿಯೊಟ್ಟಿಗೆ ಚರ್ಚೆಮಾಡಿ ಸಮಿತಿಯ ಅನೇಕ ಸಲಹೆಗಳಿಗೆ ಸಹಮತ ಸೂಚಿಸಿ ಸಮಿತಿಯ ಕಾರ್ಯಕ್ಕೆ ಸೂಚಿಸಿದ್ದು ಇನ್ನೂ ನೆನಪಿನಲ್ಲಿರುವುದು. ಮಂಡ್ಯಜಿಲ್ಲೆಯ ಪರಮಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ನಿಕಟಸಂಪರ್ಕ ಹೊಂದಿರತಕ್ಕಂತ ಶ್ರೀ ಪಿ. ಎನ್. ಜವರಪ್ಪಗೌಡರು, ಧಾರ್ಮಿಕ ಸಂಸ್ಥೆಗಳು ಮತ್ತು ಸಮಾಜಸೇವೆಯಲ್ಲಿ ಯುವಕರಾದವರು ಆಸಕ್ತಿ ತೆಗೆದುಕೊಳ್ಳುವುದಕ್ಕೆ ಕಾರಣಕರ್ತರು.

ಇವರ ಇಳಿವಯಸ್ಸಿನಲ್ಲಿಯೂ ಆರೋಗ್ಯ ಉತ್ತಮವಾಗಿಲ್ಲದಿದ್ದರೂ ಸಹ ಶ್ರೀ ಆದಿಚುಂಚನಗಿರಿ ಮಠದ ವತಿಯಿಂದ ಆಗಿರುವ ಸಮಾಜದ ಅಭ್ಯುದಯದ ಅನೇಕ ಕಾರ್ಯಗಳಲ್ಲಿ ಇವರ ಅವಿರತ ಸೇವೆಯ ಪಾಲಿದೆ. ಇನ್ನೂ ಕೆಲಸ ಮಾಡುತ್ತಿದ್ದಾರೆ. ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಮಂಡ್ಯ ಶಾಖೆಯ ಸಲಹಾ ಸಮಿತಿಯ ಸದಸ್ಯರು.

ಇವರ ಒಟ್ಟಿಗೆ ನಾನು ಸಹ ಸಲಹಾಸಮಿತಿ ಸದಸ್ಯನಾಗಿ ಕೆಲಸ ಮಾಡುತ್ತಿದ್ದೇನೆ. ಸ್ವಾಮೀಜಿಯವರ ಅವಿರತ ಶ್ರಮದ ಪ್ರತೀಕವಾಗಿ ಅನೇಕ ಶಾಲಾ ಕಾಲೇಜುಗಳು, ಪ್ರೌಢಶಾಲೆಗಳು, ವಸತಿನಿಲಯಗಳು, ಆಶ್ರಮಗಳು ಸಮಾಜದ ಅಭ್ಯುದಯಕ್ಕಾಗಿ ಕಾರ್ಯತತ್ಪರವಾಗಿವೆ. ಮಂಡ್ಯನಗರದ ವಸತಿನಿಲಯ ನಿರ್ವಹಣೆಯಲ್ಲಿ ಮತ್ತು ಅನೇಕ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆ ಮಾಡಲು ನೆರವು ನೀಡಿರುವ ವ್ಯಕ್ತಿಗಳು ಪಿ. ಎನ್. ಜವರಪ್ಪಗೌಡರು.

ಮಂಡ್ಯಜಿಲ್ಲೆಯಲ್ಲಿ ಅತಿ ಅವಶ್ಯವಾದ ಒಂದು ಉತ್ತಮವಾದ ವಸತಿಶಾಲೆ ಪ್ರಾರಂಭವಾಗಬೇಕು. ಅದೂ ಮಂಡ್ಯ ನಗರದ ಸಮೀಪ ಪ್ರಾರಂಭವಾಗಬೇಕು ಎಂಬುದು ನಮ್ಮೆಲ್ಲರ ಆಶಯವಾಗಿತ್ತು. ಸ್ವಾಮೀಜಿಯವರೂ ಸಹ ಅಭಿಪ್ರಾಯ ಪಟ್ಟಿದ್ದರು ಸ್ಥಳದ ಕೊರತೆ ಇತ್ತು ಈ ಕೊರತೆ ನಿವಾರಿಸಲು ಮುಂದೆ ಬಂದವರು ಮಂಡ್ಯ ತಾಲ್ಲೂಕಿನ ಕೊಮ್ಮೇರಹಳ್ಳಿ ಹಾಗೂ ಸಾತನೂರು ಗ್ರಾಮಗಳ ರೈತ ಬಾಂಧವರು. ಇವರು ಜಮೀನನ್ನು ಕೊಡುಗೆಯಾಗಿ ಕೊಟ್ಟಿದ್ದು ಪವಾಡಸದೃಶವೇ ಸರಿ. ಮಂಡ್ಯಜಿಲ್ಲೆಯಲ್ಲಿ ಜಮೀನು ಬೆಲೆ ಬಾಳುವುದಾಗಿದ್ದು ರೈತ ಏನುಬೇಕಾದರೂ ಕಳೆದುಕೊಳ್ಳಬಯಸಿದರು ಜಮೀನನ್ನು ಕಳೆದುಕೊಳ್ಳಲು ಬಯಸುವುದಿಲ್ಲ. ಇಂತಹ ಪ್ರಸಂಗವಿದ್ದರೂ ಪರಿಸ್ಥಿತಿಯಿದ್ದರೂ ಒಂದು ದಿನ ಸಾಯಂಕಾಲ ವಿದ್ಯುತ್ ಹೋಗಿ ಕತ್ತಲೆಯಾಗಿದ್ದು, ಗಾಳಿ ಮಳೆಗಳಿಂದ ಕೂಡಿದ ವಾತಾವರಣ ಆದರೂ ಗ್ರಾಮಸ್ಥರೆಲ್ಲ ಒಗ್ಗಟ್ಟಿನಿಂದ ಒಂದೇ ಗಂಟೆಯ ಸಮಯದೊಳಗೆ ಜಮೀನನ್ನು ಶ್ರೀಗಳಿಗೆ ದಾನಮಾಡಿ ಸಮಾಜದಲ್ಲಿ ಬೆಳಕು ಮೂಡಿಸಿದರು ಪುಣ್ಯಗಳಿಸಿದರು ಇತರರಿಗೆ ಮಾರ್ಗದರ್ಶಕ ರಾದರು ಅನುಕರಣೀಯರಾದರು. ಇದರ ಹಿಂದೆ ಪ್ರೇರಕಶಕ್ತಿಯಾಗಿ ಕಾರ್ಯ ನಿರ್ವಹಿಸಿದ ವ್ಯಕ್ತಿಗಳು ಪಿ.ಎನ್.ಜೆ ಅವರು ಹಾಗೂ ಕಾರ್ಯದರ್ಶಿಗಳಾಗಿ ಮಹತ್ವದ ಸೇವೆ ಸಲ್ಲಿಸುತ್ತಿರುವ ಶ್ರೀ ಕೆ. ರಾಮೇಗೌಡರು.

ವಿಶ್ವಮಾನವ ವಸತಿ ಶಾಲೆ ಪ್ರಾರಂಭ ಮಾಡಲು ಸಂಪನ್ಮೂಲ ಕ್ರೋಢೀ ಕರಿಸಲು ಜಿಲ್ಲೆಯಾದ್ಯಂತ ಸ್ವಾಮೀಜಿಯವರು ಪ್ರವಾಸ ಕೈಗೊಂಡರು. ಇದರ ಪೂರ್ವ ಭಾವಿ ಸಿದ್ಧತೆಯಲ್ಲಾಗಲೀ ಶ್ರೀಗಳ ವಿದೇಶಪ್ರವಾಸದ ಬೀಳ್ಕೊಡುಗೆ ಕಾರ್ಯಕ್ರಮ ದಲ್ಲಾಗಲೀ ಪಿ.ಎನ್.ಜೆ ರವರ ಒಟ್ಟಿಗೆ ಕುಳಿತು ಕೆಲಸ ಮಾಡಿದುದು ನಮ್ಮಗಳ ಮನಸ್ಸಿನಲ್ಲಿ ಇನ್ನೂ ಹಸಿರಾಗಿದೆ. ಶ್ರೀಗಳವರು ವಿದೇಶ ಪ್ರವಾಸದಿಂದ ಹಿಂದಿರುಗಿ ಬಂದ ಮೇಲೆ ಸ್ವಾಮೀಜಿಯವರನ್ನು ಮಂಡ್ಯ ಜನತೆಯ ಪರವಾಗಿ ಸ್ವಾಗತಿಸಿ ದಂತಹ ಕಾರ್ಯಕ್ರಮ, ಮಂಡ್ಯ ನಗರದಲ್ಲಿ ಒಂದು ಅಭೂತಪೂರ್ವ ಕಾರ್ಯಕ್ರಮ. ಬಹಳ ವಿಜೃಂಭಣೆಯಿಂದ ಅಪಾರ ಜನಸ್ತೋಮ ಸ್ವಾಮೀಜಿಯವರನ್ನು ಸ್ವಾಗತಿಸಿ, ಆ ಮಹಿಮರ ಅನುಭವವಾಣಿಯನ್ನು ಕೇಳಿ ಸಂತೋಷಿಸಿದರು. ಶ್ರೀ ಕೆ. ರಾಮ ಲಿಂಗೇಗೌಡರ ಮನೆಯಲ್ಲಿ ವೈದ್ಯಕೀಯ ಕಾಲೇಜಿನ ಸ್ಥಾಪನೆ ಬಗ್ಗೆ ಸಹಕಾರ ಮತ್ತು

ಸಹಾಯವನ್ನು ಕೋರುವ ಅನೇಕ ಗಣ್ಯರ ಮತ್ತು ಒರಿಯರೆ ಸಭೆ ಏರ್ಪಡಿಸುತ್ತ ಇದ್ದೆವು.

ಈ ಎಲ್ಲ ಕೆಲಸಗಳಲ್ಲೂ ಸಕ್ರಿಯವಾಗಿ ಭಾಗವಹಿಸಿ ತಮ್ಮ ಸೇವೆಸಲ್ಲಿಸಿ ಇಂದಿನ ಪೀಳಿಗೆಗೆ ಉದಾಹರಣೆಯಾಗಿದ್ದಾರೆ. ಕುವೆಂಪುರವರ ಅಭಿಮಾನಿಗಳು ಮತ್ತು ಅತ್ಯಂತ ನಿಕಟ ಸಂಪರ್ಕ ಹೊಂದಿರತಕ್ಕವರು. ಕುವೆಂಪುಸಾಹಿತ್ಯದಲ್ಲಿ ಪ್ರೌಢಿಮೆಯನ್ನು ಪಡೆದುಕೊಂಡಿರತಕ್ಕವರು. ಅದೂ ಅಲ್ಲದೆ ಭಾರತದೇಶದಲ್ಲಿ ಸಂಚರಿಸಿ ಅನೇಕ ವ್ಯಕ್ತಿಗಳ ಸಂಪರ್ಕ ಇಟ್ಟುಕೊಂಡಿರತಕ್ಕವರು, ತುಂಬಾ ಅನುಭವಿಗಳು.

ಬಲಗೈ ಕೊಟ್ಟ ದಾನವನ್ನು ಎಡಗೈ ಕಾಣದಂತಿರಬೇಕು ಎಂಬುದು ಮಹಾಭಾರತದಲ್ಲಿ ಬರುವ ಒಂದು ವಿಚಾರ. ಈ ಒಂದು ಪ್ರಸಂಗ ಶ್ರೀ ಪಿ. ಎನ್. ಜೆ. ಗೌಡರು ಅನುಸರಿಸಿದ್ದಾರೆ. ವಿಶ್ವವಿಖ್ಯಾತ ಸಂತ ಆಚಾರ್ಯವಿನೋಬರು ಹೇಳುವಂತೆ ಪ್ರತಿವ್ಯಕ್ತಿ ಗಳಿಸುವ ತನ್ನ ಗಳಿಕೆಯಲ್ಲಿ ಸಮಾಜದ ಭಾಗವಿದೆ ಎಂಬುದನ್ನು ಪಿ. ಎನ್. ಜೆ. ಅವರು ಒಪ್ಪುತ್ತಾರೆ.

ವಿಶ್ವಮಾನವ ವಿದ್ಯಾರ್ಥಿಗಳಿಗೆ ವಸತಿಕೊಠಡಿಗಳ ನಿರ್ಮಾಣ ಮಾಡಲು ತಮ್ಮ ಗಳಿಕೆಯ ಸಮಾಜದ ಭಾಗ 15 ಸಾವಿರ ರೂಪಾಯಿಗಳನ್ನು ಸಾಲ ಮಾಡಿ ದಾನಮಾಡಿ ಮಾರ್ಗದರ್ಶಕರಾದ ಗೌಡರನ್ನು ಶ್ರೀ ಆದಿಚುಂಚನಗಿರಿ ಶ್ರೀಗಳವರು ಸಭೆಯೊಂದರಲ್ಲಿ ಆಶೀರ್ವದಿಸಿ ಹರಸಿದರು.

ಶ್ರೀ ಪಿ.ಎನ್.ಜೆ. ರವರು ಮತ್ತು ಅವರ ಕುಟುಂಬ ವರ್ಗದವರು ಬಹಳ ಒಳ್ಳೆಯ ಅತಿಥೇಯರು. ಆತಿಥಿ ದೇವೋಭವ ಎಂಬಂತೆ ಅತಿಥಿಗಳನ್ನು ಸತ್ಕರಿಸಿ ಸಂತೃಪ್ತಿಯನ್ನು ಸಂತೋಷವನ್ನು ಉಂಟುಮಾಡುವವರಾಗಿರುತ್ತಾರೆ. ಅಪಾರ ಬಂಧುಗಳನ್ನು ಹೊಂದಿರುವ ಶ್ರೀ ಪಿ.ಎನ್.ಜೆ ಮತ್ತು ಶ್ರೀಮತಿ ಪಾರ್ವತಕ್ಕ ಯಾವಾಗಲೂ ಹರ್ಷಚಿತ್ತರಾಗಿ. ಶಾಂತಿ ಸಮಾಧಾನರಾಗಿರುತ್ತಾರೆ. ಎಷ್ಟೋಸಲ ಇವರ ಜೊತೆಯಲ್ಲಿ ಪ್ರಯಾಣ ಮಾಡಿದಾಗ ಸಮಯ ಹೋದದ್ದೇ ಗೊತ್ತಾಗುತ್ತಿರಲಿಲ್ಲ. ನಕ್ಕು ನಗಿಸುತ್ತ ಮಾತನಾಡಿಕೊಂಡು ಸಂತೋಷವಾಗಿ ಕಾಲ ಕಳೆದಿರುತ್ತೇವೆ. ಇವರ ಹತ್ತಿರ ಮಾತನಾಡಿದಾಗ ಕೇಳಿ ಗಳಿಸಿದುದು ಅನೇಕ ಅನುಭವಾಮೃತಗಳು, ಇವರಲ್ಲಿ ಸೇವಾ ಮನೋಭಾವ, ಕಾರ್ಯತತ್ಪರತೆ, ಹಾಸ್ಯ ಪ್ರಜ್ಞೆ, ಮಿತ್ರರ ಬಗ್ಗೆ ಚಿಂತನೆ ಹಾಗೂ ಅಭಿಮಾನ, ಶಾಂತ ಚಿತ್ತತೆ ನಾನು ಕಂಡದ್ದು.

ಇವರಿಗೆ ಭಗವಂತ ಸಕಲ ಸನ್ಮಂಗಳ ಉಂಟುಮಾಡಲಿ ಎಂದು ಹಾರೈಸಿ ಶ್ರೇಯಸ್ಸುಂಟಾಗಲಿ ಎಂದು ಬಯಸುತ್ತೇನೆ.

**ಎಂ. ಎಸ್. ಆತ್ಮಾನಂದ**

# ಕುವೆಂಪು ಸಾಹಿತ್ಯಪ್ರೇಮಿ

ನಾನು ಜವರಪ್ಪಗೌಡರನ್ನು 1970 ರಲ್ಲಿ ನಾಗಮಂಗಲದಲ್ಲಿ ಒಂದು ರಾಜಕೀಯ ಭಾಷಣ ಮಾಡುತ್ತಿದ್ದಾಗ ಕಂಡೆ. ಯಾರೋ ಹಳ್ಳಿಗ, ಚೆನ್ನಾಗಿ ಜನರನ್ನು ಮೆಚ್ಚಿಸಿ, ವೋಟು ಕೇಳಬಲ್ಲ ಗಿರಾಕಿ ಎಂದುಕೊಳ್ಳುತ್ತಿದ್ದಂತೆಯೇ ಪಕ್ಕದಲ್ಲಿದ್ದ ಗುಂಪಿನಿಂದ ಇವರ ಬಗ್ಗೆ ಚರ್ಚೆನಡೆಯುತ್ತಿತ್ತು. ಆಗ ಇವರು ಜವರಪ್ಪಗೌಡರೆಂದು ತಿಳಿಯಿತು. ಆದರೆ ಇವರು 1955–56 ರಲ್ಲಿ ಮಂಡ್ಯದಿಂದ ಹೊರತರುತ್ತಿದ್ದ 'ವಿಶ್ವಾಮಿತ್ರ'ಎಂಬ ವಾರ ಪತ್ರಿಕೆಯನ್ನು ಓದಿದ್ದೆ. ಕರ್ನಾಟಕವಾಗಲು ಬಿಡುವುದಿಲ್ಲವೆಂದು ಆ ಪತ್ರಿಕೆ ಶಪಥ ಮಾಡಿತ್ತು. ಆದರೂ ಕರ್ನಾಟಕರಾಜ್ಯವಾಯಿತು. ಅನಂತರ ಸನ್ಮಾನ್ಯ ಗೌಡರು ಕರ್ನಾಟಕದಲ್ಲಿ ಅನೇಕ ಪತ್ರಿಕೆಗಳ ಮುಖ್ಯವಿತರಕರೂ, ವರದಿಗಾರರೂ ಆಗಿ ಚಾಣಾಕ್ಷತನದಿಂದ ಕೆಲಸಮಾಡಿ ಸರಸ್ವತಿಯನ್ನು ಮೆಚ್ಚಿಸಿದ್ದಾರೆ ಹಾಗೂ ಈ ಸೇವೆಯನ್ನು ಮುಂದುವರಿಸುತ್ತಿದ್ದಾರೆ. ಈ ಇಳಿವಯಸ್ಸಿನಲ್ಲಿಯೂ ಸನ್ಮಾನ್ಯರ ಸರಸ್ವತಿಸೇವೆಯನ್ನು ಕಂಡಾಗ, ಇವರಿಗೆ ಇವರಲ್ಲಿರುವ ಉತ್ಸಾಹವನ್ನು ನೆನೆದುಕೊಂಡಾಗ ಕರ್ನಾಟಕದಲ್ಲಿ ಕನ್ನಡಮ್ಮನಸೇವೆಗೆ ಬರವಿಲ್ಲವೆಂದು ಮನಸ್ಸಿಗೆ ಸಮಾಧಾನ ವಾಗುತ್ತದೆ. ಹೀಗೆಯೇ ಶ್ರೀ ಜವರಪ್ಪಗೌಡರ ಕನ್ನಡಮ್ಮನ ಸೇವೆ ಸರ್ವರಿಗೂ ಆದರ್ಶಪ್ರಾಯವಾಗಲೆಂದು ಅವರ ಅಭಿಮಾನಿಗಳು ದೈವವನ್ನು ಕೋರದೆ ಇರರು.

ಗಾಂಧಿಯನ್ನು ನಂಬಿ ಜವರಪ್ಪಗೌಡರು ತಮ್ಮ ಹೋರಾಟದ ಬಲವನ್ನೆಲ್ಲ ಭಾರತ ಸ್ವಾತಂತ್ರ್ಯವಾಗಲು ಮುಡಿಪಿಟ್ಟವರು. ಗಾಂಧಿಯವಾದ ಹಾಗೂ ಹೋರಾಟದ ನಂತರ ಸ್ವತಂತ್ರಭಾರತದಲ್ಲಿ ಬದುಕಲು ತಮ್ಮ ವ್ಯವಹಾರಜ್ಞಾನವನ್ನು ಚಾಣಾಕ್ಷತನದಲ್ಲಿ ಬೆವರುಸುರಿಸಿ ಅಂಗಡಿಮುಂಗಟ್ಟುಯಿಟ್ಟು ವರ್ತಕರೂಬೆರಗಾಗುವಂತೆ ಮಂಡ್ಯದಲ್ಲಿ ತಮ್ಮ ಕಾಲಮೇಲೆ ನಿಂತವರು. ಅಲ್ಲದೆ ಇನ್ನೊಂದು ಸೋಜಿಗವೆಂದರೆ : ಇವರ ಸಾಹಿತ್ಯಪ್ರೇಮ. ಕರ್ನಾಟಕವಾಗಬೇಕೆಂದು ಸದಾ ಕೊರಳೆತ್ತಿಹಾಡುತ್ತಿದ್ದ, ಹಂಬಲಿಸುತ್ತಿದ್ದ ಈಗ ಕರ್ನಾಟಕದ ಏಳ್ಗೆಗೇ ಜೀವ ಮುಡಿಪಿಟ್ಟಿರುವ 'ಕುವೆಂಪು' ಅವರ ಸಾಹಿತ್ಯವನ್ನು ಬಹಳ ಚನ್ನಾಗಿ ಓದಿಕೊಂಡು, ಕರ್ನಾಟಕವಾಗಬಾರದೆಂದು 'ವಿಶ್ವಾಮಿತ್ರನ' ಸಂಪಾದಕರಾದ ಸನ್ಮಾನ್ಯರು ಕುವೆಂಪು ಅಭಿಮಾನಿಗಳಾದದ್ದು ಅವರು ಬೋಧಿಸಿದ ವಿವಾಹ ಸಂಹಿತೆಯನ್ನು ಕುವೆಂಪು ಹಾಗೂ ಶ್ರೀಶ್ರೀಶ್ರೀ ಬಾಲಗಂಗಾಧರ ಸ್ವಾಮಿಯವರ ಭಾವಚಿತ್ರಗಳೊಡನೆ ಅಚ್ಚಿಸಿ, ಮಂಡ್ಯದ ಪಾಮರ ಜನತೆಗೆ ಹಂಚಿ; ಕಣ್ಣು ತೆರೆಸಲು ಯತ್ನಿಸುತ್ತಿರುವುದು.

ಮನುಷ್ಯನಿಗೆ ತಾನು ಹುಟ್ಟಿದ ನೆಲದ ಮೇಲೆ ಯಾವಾಗಲೂ ಪ್ರೇಮವಂತೆ !

ಆದರೆ ಸನ್ಮಾನ್ಯ ಗೌಡರ ನಾಗಮಂಗಲ ನೆಲದ ಮೇಲಿನ ಪ್ರೇಮದ ಉತ್ಕಟತೆಯನ್ನು, ಅನುಭವಿಸಿಯೇ ಪಡೆಯಬೇಕು. ಜವರಪ್ಪಗೌಡರಿಗೆ ಹಿಮಾಲಯಪರ್ವತಕ್ಕಿಂತ ಆಲತಿಬೆಟ್ಟ ಹಿರಿದಾದುದು; ಗಂಗಾನದಿಗಿಂತ ವೀರವೈಷ್ಣವಿ ಹಾಗೂ ಲೋಕಪಾವನಿಗಳು ಪವಿತ್ರವಾದವು ! ಕೆಲವರಂತೂ ಸನ್ಮಾನ್ಯಗೌಡರು ಒಮ್ಮೊಮ್ಮೆ ಕುವೆಂಪು ಅವರ ಪೂರ್ವಜರೂ ಒಮ್ಮೆ ನಾಗಮಂಗಲ ತಾಲ್ಲೂಕಿನಲ್ಲಿ ನೆಲಸಿದ್ದರೆಂದು ಹೇಳುವುದಿರಲಿ ; ಆಲ್ಬರ್ಟ್‌ಐನ್‌ಸ್ಟೀನನೂ ಹಿಂದಿನ ಜನ್ಮದಲ್ಲಿ ಈ ನೆಲದಲ್ಲೇ ಜನ್ಮತಾಳಿದ್ದವನೆಂದು ಗತಇತಿಹಾಸವನ್ನು ಶೋಧಿಸಿ ಹೇಳಬಲ್ಲರೆಂದು ನಗುವುದುಂಟು. ಇವರ ಈ ಹುಟ್ಟಿದ ನೆಲದ ಮೋಹದಿಂದ ಜಡವಸ್ತುಗಳಿಗೆ ತೊಂದರೆ ಇಲ್ಲ. ಆದರೆ ಜೀವಂತ ಮಾನವರಿಗೆ ಅನೇಕಸಲ ತೊಂದರೆಗಳಾಗಿರುವುದುಂಟು. ಆದರೂ ಹೆತ್ತವರಿಗೆ ಹೆಗ್ಗಣವೇ ಮುದ್ದು ಎಂದು ಜನನುಡಿಯನ್ನು ಆಧಾರವಾಗಿಟ್ಟುಕೊಂಡು ನೋಡಿದರೆ ಗೌಡರ ನಾಗಮಂಗಲ ಪ್ರೇಮವನ್ನು ನಾವು ಅರ್ಥಮಾಡಿಕೊಳ್ಳಬಹುದು.

ಭಾರತದಲ್ಲಿ ಸ್ವಾತಂತ್ರ್ಯ ಬಂದಮೇಲೆ ಗಾಂಧಿಯತತ್ವಗಳನ್ನು ನಂಬಿ ಬದುಕುವುದು ಕಷ್ಟವೆಂದು ಸನ್ಮಾನ್ಯ ಜವರಪ್ಪಗೌಡರನ್ನು ಕಂಡಾಗಲೆಲ್ಲ ನನ್ನ ಮನಸ್ಸು ನುಡಿಯುತ್ತದೆ.

ತೊಂಬತ್ತೆಂಟು ವರ್ಷಗಳು ಬದುಕಿ ಸತ್ತ ನನ್ನತಂದೆಯ ಕಷ್ಟಗಳನ್ನು ಕಣ್ಣಾರೆ ಕಂಡ ನಾನು ; ಕೈಕಾಲು, ಹೃದಯ, ಮನಸ್ಸು ಆರೋಗ್ಯವಾಗಿರುವಾಗಲೇ ಶತಾಯುವಾಗಲಿ ಎಂದು ಹಾರೈಸುತ್ತೇನೆ. ಇವರನ್ನು ಹಡೆದನೆಲಕ್ಕಿಂತ ಭಾರತದ ಹಿತಚಿಂತನೆಯನ್ನು ಸನ್ಮಾನ್ಯ ಗೌಡರು ಇನ್ನು ಮುಂದೆ ಮಾಡುವುದರಲ್ಲಿ ನನಗೆ ನಂಬಿಕೆ ಇದೆ. ಯಾಕೆಂದರೆ ಮನುಷ್ಯ ಬಲಿತಂತೆ ಅವನ ತಪ್ಪುಗಳು ಅವನಿಗೆ ಅರಿವಾಗ ಬಲ್ಲವಲ್ಲವೆ ? ಗಾಂಧಿಯವರು ಬಾಡುತಿಂದದ್ದು, ಸಿಗರೇಟು-ಬೀಡಿಸೇದದ್ದು, ಸೂಳೆ ಮನೆಗೆ ಹೋಗಿದ್ದು–ಇವುಗಳನ್ನು ತಮ್ಮ ಆತ್ಮಕತೆಯಲ್ಲಿ ಬರೆದು ಭಾರತಕ್ಕೆ ಉಪಕರಿಸಿದ್ದಾರೆ. ಶ್ರೀಗೌಡರು ತಮ್ಮ ಈ ಅರಿವಿನಿಂದ ಅನೇಕ ಅವಿವೇಕಿಗಳ ಮನದಲ್ಲಿರುವ ಕುಬ್ಜತನವನ್ನು ಅಳಿಸಬಹುದೆಂಬ ಗಾಢ ನಂಬಿಕೆ–'ನನಗೆ'.

**ಬೆಸಗರಹಳ್ಳಿ ರಾಮಣ್ಣ**

# ಮನೆಗೆ ಬಂದ ಭಾಗ್ಯವಂತೆಯರು

ನಾನು ನಮ್ಮ ಯಜಮಾನರು ನಮ್ಮ ಯಜಮಾನರ ಸ್ನೇಹಿತರಾದ ಬೊಮ್ಮೇಗೌಡರು ಅವರ ಪತ್ನಿ ಸೇರಿ ರಾಮನಾಥಪುರಕ್ಕೆ ಮದುವೆ ಸಮಾರಂಭಕ್ಕೆ ಹೋಗಿದ್ದೆವು. ಮದುವೆಯಿಂದ ಮೈಸೂರಿಗೆ ಬಂದು ಜಿ.ಎಸ್. ಬೊಮ್ಮೇಗೌಡರನ್ನು ಡಾಕ್ಟರೊಬ್ಬರಿಗೆ ತೋರಿಸಲು ಹೋದೆವು. ಡಾಕ್ಟರು ಮನೆಗೆ ಬರುವುದು ಇನ್ನೂ ಎರಡು ಘಂಟೆಗಳಾಗುವುದೆಂದು ತಿಳಿಯಿತು. ಆ ಡಾಕ್ಟರ ಮನೆ ಕುವೆಂಪು ಕವಿಗಳ ಮನೆ ರಸ್ತೆಯಲ್ಲೇ ಇತ್ತು. ಡಾಕ್ಟರು ಬರುವ ಹೊತ್ತಿಗೆ ಕವಿಗಳ ಮನೆಗೆ ಹೋಗಿದ್ದು ಬರಬಹುದಲ್ಲ ಎಂದು ನಮ್ಮ ಯಜಮಾನರು ತಿಳಿಸಿದರು. ಸರಿ ನಾವು ನಾಲ್ವರು ಮಹಾಕವಿಗಳ ಮನೆಗೆ ಹೋದೆವು. ಆ ವೇಳೆಗಾಗಲೇ ಕವಿಗಳು ಸಂಜೆ ಗಾಳಿಸೇವನೆಗೆ ಸಿದ್ಧರಾಗಿದ್ದರು. ನಮ್ಮನ್ನು ಬರಮಾಡಿಕೊಂಡು ಕುಶಲೋಪರಿಯಾಯಿತು. ಬರುವ ತಿಂಗಳು ನನ್ನ ಹಿರಿಯಮಗನ ಮದುವೆ ನಡೆಯಲಿದೆ ಎಂಬ ವಿಚಾರವನ್ನು ನಮ್ಮ ಯಜಮಾನರು ಕವಿಗಳಿಗೆ ತಿಳಿಸಿದರು. ನನ್ನನ್ನು ಮತ್ತು ಬೊಮ್ಮೇಗೌಡರ ಪತ್ನಿಯನ್ನು ಅವರ ಸಮೀಪದ ಆಸನಕ್ಕೆ ಕರೆದು ಕೂರಿಸಿದರು. ನಮ್ಮ ಜೊತೆ ತಾಯಿ ಹೇಮಾವತಮ್ಮ ಅವರು ಸೇರಿದರು. ಸರಳಮದುವೆ ವಿಚಾರವನ್ನು ಪ್ರಸ್ತಾಪಿಸುತ್ತ ಕವಿಗಳು "ನೋಡಿ ತಾಯಿ ನನ್ನಮನೆಗೆ ಬ್ರಾಹ್ಮಣರು ಬರುತ್ತಾರೆ. ನನ್ನ ಗುರುಗಳು ಬ್ರಾಹ್ಮಣರು. ಆದರೆ (1977) ನನ್ನ ಮನೆಗೆ ಪಂಚಾಂಗ ಬಾರದೆ 52 ವರ್ಷಗಳು ಕಳೆದಿವೆ. ಸುಮಾರು ಐದುಸಾವಿರ ವರ್ಷದಿಂದ ಪುರೋಹಿತ ವರ್ಗದವರು ರಾಹುಕಾಲ, ಯಮಗಂಡಕಾಲ, ಮತ್ತು ಗುಳಿಕಕಾಲಗಳೆಂಬ ಕಾಲಗಳ ಹೆಸರಿನಲ್ಲಿ ಜನರಲ್ಲಿ ಅಪಾರ ಭೀತಿ ತಂದೊಡ್ಡಿದ್ದಾರೆ. ಜೊತೆಗೆ ನಕ್ಷತ್ರಗಳ ಹೆಸರಿನಲ್ಲಿ ಬೆದರಿಕೆ ನಿರ್ಮಿಸಿದ್ದಾರೆ. ಈ ಬೆದರಿಕೆಗಳಿಗೆ ಕೇವಲ ಶೂದ್ರರೇ ಈಡಾಗಿದ್ದಾರೆ ಎಂದುಕೊಳ್ಳಬೇಡಿ, ಬ್ರಾಹ್ಮಣರೂ ಇದರಿಂದ ಹೊರತಾಗಿಲ್ಲ, ಪುರೋಹಿತ ಶಾಹಿ ಎಂಬುದು ಬಾಂಬಿಗಿಂತ ಶಕ್ತಿಶಾಲಿ ಅಸ್ತ್ರವಾಗಿದೆ. ಆಟಂಬಾಂಬ್ ಒಂದು ದಿನ ಸಿಡಿದು ವಿರಮಿಸಬಹುದು.

ಆದರೆ ಪುರೋಹಿತ ಶಾಹಿ ಆಟಂಬಾಂಬು ನೋಡಿ ಮಾನವನ ಹುಟ್ಟಿನಿಂದ ಆತನ ಸ್ಮಶಾನದವರೆಗೆ ದಿನವೂ ಜೊತೆಯಲ್ಲಿದ್ದು ಆಗಬಾರದ್ದನ್ನು ಕೇಡಿಗೆ ನಕ್ಷತ್ರಗಳನ್ನು ರಾಹುಕಾಲಗಳ ದಾಳಿಗೆ ಸಿಲುಕಿಸುತ್ತವೆ. ನಿಮ್ಮ ಮಕ್ಕಳ ಮದುವೆಯನ್ನು ಸರಳವಾಗಿ ಮದುಮಕ್ಕಳ ಮಾತಾಪಿತೃಗಳಿಗೆ ಅನುಕೂಲವಾದ ದಿನ ಮತ್ತು ಕಾಲದಲ್ಲಿ ಅತೀ ಸಮೀಪದ ಬಂಧು ಬಳಗದವರು ಸೇರಿ ಮದುವೆ ನೆರವೇರಿಸಲು ಗೃಹತಪಸ್ವಿನಿಯರಾದ ತಾವು ಮನಸ್ಸುಮಾಡಬೇಕು. ಹೆಣ್ಣು ಗಂಡೊಪ್ಪಿ ಗಂಡು ಹೆಣ್ಣೊಪ್ಪಿದ

ಮೇಲೆ ಪುರೋಹಿತರ ಗೊಡವೆಗೆ ಏಕೆ ಹೋಗಬೇಕು. ಸೂರ್ಯೋದಯವಾಯ್ತೆಂದರೆ ಇಡೀ ದಿನ ಶುಭೋದಯ. ಈ ಮಾರ್ಗವನ್ನು ನೀವು ಅನುಸರಿಸಿ ಇತರರು ಅನುಸರಿಸುವಂತೆ ಪ್ರೇರೇಪಣೆ ಮಾಡುತ್ತೀರಾ ? ನೋಡಿ ಮೈಸೂರಲ್ಲಿ ಗಂಗೋತ್ರಿ ಯಲ್ಲಿರುವ ಶ್ರೀ ಸಿದ್ಧವೀರೇಗೌಡರು ತಮ್ಮನ ಮದುವೆಯನ್ನು ಹತ್ತಾರು ಲೋಟ ಟೀ ಕೊಟ್ಟು ನೆರವೇರಿಸಿದರು. ವಾರ್ತಾಪತ್ರಿಕೆಗಳ ಮುಖಪುಟಗಳಲ್ಲಿ ಪ್ರಕಟವಾದವು. ಎಂದು ತಿಳಿಸಿದರು. ಮುಂದೆ ಶ್ರೀ ಸಿದ್ಧವೀರೇಗೌಡರ ತಂಗಿಯೆ ನಮ್ಮ ಮೊದಲ ಸೊಸೆಯರಾಗಿ ಬಂದರು. ಈ ಮಾತುಕತೆ ಕಾಲಕ್ಕೆ ಕನ್ಯಾನ್ವೇಷಣಕ್ಕೆ ಹೊರಟೇ ಇರಲಿಲ್ಲ. ಕವಿಗಳ ಆವಾಸದಿಂದ ಹೊರಬರುವಾಗ ಬೊಮ್ಮೇಗೌಡರು "ಏನಯ್ಯ ಕವಿಗಳು ಹೇಳಿದ್ದಕ್ಕೆ ಹೆಂಡತಿ ಗಂಡ ಕೋಲೇಬಸವನಂತೆ ತಲೆ ಅಲ್ಲಾಡಿಸುವುದರಲ್ಲೆ ಪರ್ಯ ವಾಸನವೊ ನಿಜಕ್ಕೂ ಕವಿಗಳು ಹೇಳಿದಂತೆ ನಿಮ್ಮ ಮಗನ ಮದುವೆ ಮಾಡುತ್ತೀರೋ ಎಂದು ಪ್ರಶ್ನಿಸಿದರು, ಅವರಿಗೆ ಉತ್ತರ ನೀಡಲು ನನ್ನಕಡೆ ನೋಡಿದರು. ಖಂಡಿತ ಕವಿಗಳು ಹೇಳಿದಂತೆ ಮಾಡುವೆ. ಪುರೋಹಿತರು ವಾದ್ಯಗಳು ಮುಂತಾದ ಸಂಪ್ರದಾಯ ನಡುವಳಿಕೆ ಬಿಟ್ಟು ಸರಳಮದುವೆ ಮಾಡುತ್ತೇವೆ ಎಂದು ತಿಳಿಸಿದೆ.

ನಮ್ಮ ಯಜಮಾನರು ಮಧ್ಯಾಹ್ನ ಬೆಂಗಳೂರಿನಿಂದ ಬಂದರು. ಪಾರ್ವತೀ ಎಂದು ಕೂಗಿದರು, ಏನ್ರೀ ಅದು ಅಂದೆ. ಮಗನಿಗೆ ಅನುರೂಪಳಾದ ಹೆಣ್ಣನ್ನು ನೋಡಿದೆ. ಎತ್ತರ ನಿಲುವು ಲಕ್ಷಣವಂತೆ ಮತ್ತು ವಿದ್ಯಾವಂತೆ ಎಂದು ತಿಳಿಸಿದರು. ಆ ಹೆಣ್ಣುಮಗಳು ಯಾವೂರು ಅವಳ ತಂದೆ ತಾಯಿ ಯಾರು ಅವರ ಮನೆ ಮಠ ವಂಶಾವಳಿ ಮುಂತಾದುವುಗಳನ್ನೆಲ್ಲ ತಿಳಿದಿದ್ದೀರ ? ಹೇಗೆ ಯಾವುದೊ ಹೆಣ್ಣನ್ನು ನೋಡಿದೆ ಎಂದರೆ ಹೇಗೆ ಎಂದು ಒಲ್ಲದ ಮನಸ್ಸಿನಿಂದಲೇ ತಿಳಿಸಿದೆ.

ಹೆಣ್ಣನ್ನು ನೋಡಿದ್ದು ಯಾರ ಮನೆಯಲ್ಲೂ ಅಲ್ಲ. ಇಂದು ನಾನು ಬೆಂಗಳೂರಿ ನಿಂದ ಬಂದ ಬಸ್ಸಿಗೆ ಸಕ್ಕರೆಕಂಪನಿ ಸರ್ಕಲ್‌ನಲ್ಲಿ ತಾಯಿಮಗಳು ಮೈಸೂರಿಗೆ ಅದೇಬಸ್ ಏರಿದರು. ಹುಡುಗಿಯ ಕತ್ತು ನೋಡಿದೆ ತಾಳಿಯಿರಲಿಲ್ಲ. ಒದಗಿ ಬಂದರೆ ಈ ಹುಡುಗಿ ಯನ್ನೇ ಸೊಸೆಮಾಡಿಕೊಳ್ಳಲು ನಿಶ್ಚಯಿಸಿದೆ.ಹುಡುಗಿಯ ತಾಯಿಯನ್ನು ಅಜ್ಜಿ ಎಲ್ಲಿಗೆ ಹೋಗಿ ಬಂದಿದ್ದೀರಿ, ಎಲ್ಲಿಗೆ ಹೋಗುತ್ತೀರಿ ? ಎಂದು ವಿಚಾರಿಸಿದೆ. ಸ್ವರ್ಣಸಂದ್ರದ ಬಳಿ ಚನ್ನಪ್ಪನದೊಡ್ಡಿಯಲ್ಲಿ ಹುಡುಗಿ ಸೋದರ ಮಾವನ ಮನೆಗೆ ಹೋಗಿದ್ದುದಾಗಿ ತಿಳಿಸಿದರು. ಮೈಸೂರಿನಲ್ಲಿ ಸರಸ್ವತಿಪುರದಲ್ಲಿರುವ ಶ್ರೀ ಸಿದ್ಧವೀರೇಗೌಡರ ಮನೆಗೆ ಹೋಗುತ್ತಿರುವುದಾಗಿ ಅಜ್ಜಿ ತಿಳಿಸಿದ್ದರು. ಸಿದ್ಧವೀರೇಗೌಡರು ನನಗೆ ಪರಿಚಯವಿದೆ. ಸುಬ್ಬೇಗೌಡರಿಗೆ ಹೆಚ್ಚಿನ ಪರಿಚಯವಿತ್ತು ನನ್ನು ಸಂಪು ಮಾಡಿಕೊಂಡು ಮೈಸೂರಿಗೆ ನಾನು ಸುಬ್ಬೇಗೌಡರು ಹೋಗಿ ವಿಚಾರ ಮಾಡಿ ಬರುತ್ತೇವೆ ಎಂದು ತಿಳಿಸಿದರು. ಇದೇನ್ರಿ ನೀವು ಹೆಣ್ಣು ನೋಡೋ ಆಟ ಇದೇನು ತಮಾಷೆ ಎಂದುಕೊಂಡಿರ. ಹೆಣ್ಣು ನೋಡಿ ಮನೆಗೆ ಸೊಸೆ ತರಲು ಏಳುಜೋಡಿ ಕೆರ ಸವೆಯುತ್ತಿದ್ದವು ಎಂದು ಹಿರಿಯರು

ಹೇಳುತ್ತಾರೆ. ಸ್ವಲ್ಪ ನಿಧಾನಿಸಿ. ನಾಲ್ಕಾರುಕಡೆ ಹೆಣ್ಣುಗಳನ್ನು ವಿಚಾರಿಸಿ ತಿಳಿದವರಿಂದ ಆ ಸಂಸಾರಗಳ ಆಗು ಹೋಗುಗಳನ್ನು ಅರಿತು ಕಾಲಿಡಬೇಕು. ಮಧ್ಯಾಹ್ನ ಬಸ್ಸಿನಲ್ಲಿ ಹೆಣ್ಣುನೋಡಿ, ಹಿಂದೆಯೇ ಓಡಿಹೋದರೆ ಹೆಣ್ಣಿನ ಮನೆಯವರು ಏನೆಂದುಕೊಂಡಾರು. ಸ್ವಲ್ಪ ತಾಳ್ಮೆಯಿರಲಿ ಎಂದುತಿಳಿಸಿದೆ. ಬಿಡೆ ನಿನಗೇನು ಗೊತ್ತಾಗುತ್ತೆ. ಹಿಂದಿನಕಾಲದಲ್ಲಿ ಕೆರ ಸವೆಯುತ್ತಿತ್ತು. ಈಗ ಕೆರಗಳ ಸುಳಿವೇ ಇಲ್ಲ. ಬಾಟಾಕಂಪನಿ ಚಪ್ಪಲಿಗಳು ಬಂದಿವೆ. ಅವಂತೂ ಸವೆಯುವುದೇಯಿಲ್ಲ ಎಂದು ತಿಳಿಸಿದವರೇ ವಿಶ್ರಾಂತಿನಂತರ ಶ್ರೀ ಸುಬ್ಬೇಗೌಡರೊಡನೆ ಮೈಸೂರಿಗೆ ಹೋಗಿ ರಾತ್ರಿಗೆ ಬಂದರು. ಸಂಬಂಧ ಬೆಳೆಸಲು ಹೆಣ್ಣಿನವರಿಗೆ ಮನಸ್ಸಿದ್ದಂತೆ ಕಾಣುವುದೆಂದು ಶ್ರೀ ಸುಬ್ಬೇಗೌಡರು ತಿಳಿಸಿ ಹುಡುಗನಿಗಿಂತ ಹುಡುಗಿ ತುಸು ಎತ್ತರವಾಗಬಹುದು ಎಂದು ಸಂಶಯಿಸಿದರು. ಹೆಣ್ಣು ಎತ್ತರವಾದರೆ ಗಂಡಿಗೆ ಎತ್ತರವಾದ ಮಣೆ ಮೇಲೆ ನಿಲ್ಲಿಸಿದರಾಯ್ತು. ಗಂಡು ಎತ್ತರವಾದರೆ ಹೆಣ್ಣನ್ನು ಎತ್ತರವಾದ ಮಣೆ ಮೇಲೆ ನಿಲ್ಲಿಸಿದ ರಾಯ್ತು ಎಂದು ತಮಾಷೆ ಮಾಡಿದರು. ನಮ್ಮ ಮನೆಯ ಯಜಮಾನಿ ಮತ್ತು ಅಳಿಯಂದಿರು ಮಕ್ಕಳು ಬರುವುದಾಗಿ ತಿಳಿಸಿ ಬಂದಿದ್ದೇವೆ ಎಂದು ಹೇಳಿದರು. ಹೆಣ್ಣಿನಗುಣ ಹೇಗೆ ಎಂತು ಎಂದು ಆಜುಬಾಜಲ್ಲಿ ಕೇಳಿ ತಿಳಿದುಕೊಂಡು ಮದುವೆ ಮಾತುಕತೆಗೆ ಕಾಲಿಡಬೇಕ್ರಿ ಎಂದು ತಿಳಿಸಿದೆ. "ಆನೆಯನ್ನು ಹಿಡಿದು ಪಳಗಿಸಿ ಸರ್ಕಸ್‌ನಲ್ಲಿ ಸೈಕಲ್‌ಸವಾರಿ ಮಾಡಿಸುತ್ತಾರೆ" ಅಂದ ಮೇಲೆ ಹುಡುಗಿಯನ್ನು ಪಳಗಿಸಿ ನಮ್ಮ ಸಂಸಾರಕ್ಕೆ ಹೊಂದಾಣಿಕೆ ಮಾಡಿಕೊಳ್ಳುವುದು ಕಷ್ಟವಲ್ಲ. ಹುಡುಗಿ ಬಗ್ಗಿಸ ಲಾರದ ನಾನು ಪಾರ್ಕಿನಲ್ಲಿ ಭಾಷಣಮಾಡಿ ನಮ್ಮ ಪಾರ್ಟಿಗೆ ಓಟು ಗಿಟ್ಟಿಸೋದು ಸಾಧ್ಯವೇನು ? ಎಂದು ಮಾತು ಮುಗಿಸಿದರು.

ಹುಡುಗಿ ಎತ್ತರವೆ ಎನ್ನೊ ಮಾತು ಕೇಳಿ ಮಗ ಹುಡುಗಿ ನನಗೆ ಸಮಸಮ ವಾದರೂ ಮದುವೆ ಆಗುವುದಿಲ್ಲ ಎಂದು ತಿಳಿಸಿಬಿಟ್ಟ. ಶ್ರೀಮತಿ ಲೀಲಮ್ಮಶಿವನಂಜಪ್ಪ ನಮ್ಮ ಪಕ್ಕದಮನೆ ಅಜ್ಜಿ ನನ್ನ ತಮ್ಮ ಕೃಷ್ಣನೊಡನೆ ಹೋಗಿ ಸಂಬಂಧ ಒಪ್ಪಿ ಬಂದೆವು. ಕವಿಗಳ ಅಪ್ಪಣೆಯಂತೆ ಮಗನ ಮದುವೆಯನ್ನು ಸರಳವಾಗಿ ಮಂತ್ರ ಮಾಂಗಲ್ಯದಿಂದ ನೆರವೇರಿಸಿದೆವು. ಇಂತಹ ಮದುವೆಯಿಂದ ಕೆಲವರ ಆತಂಕ ಸ್ವಲ್ಪ ದೂರವಾಯಿತು. ಇದಾದನಂತರವು ನಮ್ಮ ಯಜಮಾನರಿಗೆ ಹೊಸ ಕೋಡು ಮೂಡಿ ಮಗನ ಮದುವೆ ಸವಿನೆನಪಿನ ಕಾಣಿಕೆಯಾಗಿ ಮಂತ್ರಮಾಂಗಲ್ಯ ನೀಡಿದರು. ಸಂಪ್ರ ದಾಯ ಮದುವೆಗಳಿಗೆ ಹೋದಾಗಲೂ ಮಂತ್ರಮಾಂಗಲ್ಯದ ಪ್ರತಿಗಳನ್ನು ಹಂಚಿಸು ವುದು ಸರಳಮದುವೆಯನ್ನು ಭಾಷಣಕ್ಕೆ ಅವಕಾಶ ಸಿಕ್ಕಾಗಲೆಲ್ಲ ಮೂಲಮಂತ್ರವಾಗಿಸಿ ಕೊಂಡರು.

ಹೆಸರಾಂತ ರಾಜಕೀಯಧುರೀಣ ಸ್ನೇಹಿತರುಗಳ ಹಾಗೂ ರೈತಸಂಘದ ಪ್ರಮುಖ ರುಗಳನ್ನು ಒಪ್ಪಿಸಿದರು. ಸರಳಮದುವೆ ನಡೆಸಲು ಪ್ರಚಾರ ಕಾರ್ಯಕ್ರಮ ನಡೆಸಲು

ಅವರ ಸಹಕಾರ ಪಡೆದುಕೊಂಡರು. ಕಣ್ಣಾದ ಶ್ರೀಮಂತ ವರ್ಗದಲ್ಲಿ ಹೆಣ್ಣುಗಂಡಿನ ಮದುವೆ ನಡೆಯುವುದನ್ನು ತೀವ್ರವಾಗಿ ಗಮನಿಸುತ್ತಿದ್ದರು. ಮದುವೆಯಾಗುವ ಹುಡುಗನಿಗೆ ಸರಳಮದುವೆ ಆಗುವಂತೆ ಪ್ರೋತ್ಸಾಹನೀಡಿ ಒಪ್ಪಿಸಿ ಅವರ ತಂದೆ ತಾಯಿಯರಲ್ಲಿ ಮಾತುಕತೆ ನಡೆಸಿ ಸರಳಮದುವೆಗೆ ಒಪ್ಪಿಸುತ್ತಿದ್ದರು. ಅಂತು ನಮ್ಮ ಸಂಸಾರದಲ್ಲಿ ಆರುಮದುವೆಗಳನ್ನು ಸರಳವಾಗಿ ನಡೆಸಿದರು. ನಮ್ಮ ಕೊನೆಯ ಮಗನ ಮದುವೆ 2-12-88 ರಂದು ನಡೆಯಿತು. ಬೆಂಗಳೂರಿನಲ್ಲಿ ಕನ್ಯೆ ನೋಡಿದ್ದು ಸರಳ ಮದುವೆಗೆ ಒಪ್ಪಲಿಲ್ಲವೆಂದು ಆ ಸಂಬಂಧವನ್ನೇ ಬಿಟ್ಟು ಸರಳಮದುವೆ ಮಾಡಲು ಮುಂದಾದವರ ಸಂಬಂಧ ಬೆಳೆಸಲು ಮದುವೆ ನೆರವೇರಿಸಲಾಯಿತು.

ಪುರೋಹಿತರಿಂದ ಹೆಣ್ಣುಗಂಡಿನ ಹೆಸರುಬಲ, ತಾರಾಬಲ ಕೇಳದೆ ರಾಹುಕಾಲ, ಗುಳಿಕಕಾಲ ಮತ್ತು ಯಮಗಂಡಕಾಲ, ಅವೈಜ್ಞಾನಿಕ ನಿಲವನ್ನು ಧಿಕ್ಕರಿಸಿ ಋಷಿ ಪಡುವ ಕುವೆಂಪು ಅವರ ಆಶೀರ್ವಾದದಂತೆ ತಂದೆ ತಾಯಿಗಳಾದ ನಾವೇ ಮದು ಮಕ್ಕಳಿಗೆ ಮಾಂಗಲ್ಯಧಾರಣೆ ಮಾಡಿಸಿ ವಿವಾಹ ದೀಕ್ಷೆಯನ್ನಿತ್ತು ಆಶೀರ್ವದಿಸಿದೆವು. ಮಂತ್ರಮಾಂಗಲ್ಯ ರೀತ್ಯ ಮದುವೆ ನಡೆಸಿ ಮನೆತುಂಬಿಕೊಂಡ ನಾಲ್ವರು ಸೊಸೆಯರು ಒಂದೇ ತಾಯಿಯ ಮಕ್ಕಳಂತೆ ಪ್ರೀತ್ಯಾದರಗಳಿಂದ ನಡೆದುಕೊಂಡು ನಮ್ಮನ್ನೇ ಅವರ ತಂದೆ ತಾಯಂದಿರಂತೆ ವಿನಯ ಪ್ರೀತಿ ಗೌರವಗಳಿಂದ ಕಾಣುತ್ತಿದ್ದಾರೆ.

ಇಷ್ಟು ಹೇಳುವಾಗ ಅಕ್ಕತಂಗಿಯರಾದರೂ ಒಂದೆಡೆಯಿದ್ದಾಗ ಕಿತ್ತಾಡುತ್ತಾರೆ. ಬೇರೆಬೇರೆ ಸಂಸಾರಗಳಿಂದ ಬಂದ ಸೊಸೆಯರಲ್ಲಿ ಕಿತ್ತಾಟವೆ ಇಲ್ಲವೆ? ಎನ್ನುವಿರೇನೋ ಅಲ್ಲವೆ. ಜನ ಇದ್ದಕಡೆ ಜಗಳ, ದನಗಳಿದ್ದ ಕಡೆ ಗುದ್ದಾಟ, ಇದು ನಿಸರ್ಗನಿಯಮ ವಾದರು ಅದನ್ನು ಮೆಟ್ಟಿನಿಂತು ತಾಯಿ ಮಕ್ಕಳ ಸಂಬಂಧ ಕಲ್ಪಿಸಿಕೊಂಡು ಏನೇ ಸದ್ದು ಗದ್ದಲವಿಲ್ಲದಂತೆ ಸಂಸಾರದಲ್ಲಿ ಪ್ರಶಾಂತವಾತಾವರಣ ಕಾಪಾಡಲು ಸಾಧ್ಯ ಎಂಬುದನ್ನು ಸೊಸೆಯರು ಸಾಧಿಸಿದ್ದಾರೆ.

ಗೃಹಲಕ್ಷ್ಮಿಯರಂತೆ ಸಂಸಾರದ ಯಜಮಾನ್ಯ ವಹಿಸಿಕೊಂಡು ಐಕ್ಯತೆಯಿಂದ ಗೃಹತಪಸ್ವಿನಿಯರಾಗಿ ದೇಹಿ ಎಂದು ಬಂದ ದರಿದ್ರನಾರಾಯಣನಿಗೆ ಹಿಡಿಕಾಳು ಕೊಡುವ ಕಡೆ ನಾಲ್ಕುಕಾಳನ್ನಾದರು ನೀಡಿ ಸಂತೈಸುವ ಮತ್ತು ಮನೆಗೆ ಕೇಳಿ ಬರುವ ಅತಿಥಿಗಳಿಗೆ ನೀರನ್ನಾದರೂ ಇತ್ತು ಗೌರವ ವ್ಯಕ್ತಪಡಿಸುವ ಉದಾರಬುದ್ಧಿಯ ಈ ಸೊಸೆಯರು "ಮನೆಗೆ ಬಂದ ಭಾಗ್ಯವಂತೆಯರಲ್ಲವೆ."

**ಪಾರ್ವತಮ್ಮ ಜವರಪ್ಪಗೌಡ**



# ನಮ್ಮ ಶ್ರೀರಕ್ಷೆ

ಒಂದು ಬೇಸಿಗೆಯು. ಮಧ್ಯಾಹ್ನ ನಾನು ಮತ್ತು ನಮ್ಮ ತಾಯಿ ಮಂಡ್ಯದ ಗಿರಿಜಾ ಟಾಕೀಸಿನ ಬಳಿ ಮೈಸೂರಿಗೆ ಬಸ್ಸಿಗಾಗಿ ಕಾದುನಿಂತಿದ್ದೆವು. ಬೆಂಗಳೂರಿನ ಕಡೆಯಿಂದ ಒಂದು ಬಸ್ಸು ಬಂತು. ಅದರಲ್ಲಿ ಹಿಡಿಸಲಾರದಷ್ಟು ಜನ. ಆದರೂ ನಮಗೆ ಊರು ಸೇರುವ ಆತುರವಿದ್ದುದರಿಂದ ನಿಂತೇ ಹೋದರಾಯಿತೆಂದು ಕಷ್ಟಪಟ್ಟು ಬಸ್ಸನ್ನು ಹತ್ತಿದೆವು. ಆಗ ಅಲ್ಲಿಯೇ ಪಕ್ಕದ ಸೀಟಿನಲ್ಲಿ ಕುಳಿತಿದ್ದ ವೃದ್ಧರೊಬ್ಬರು, ನೀವು ಎಲ್ಲಿಗೆ ಹೋಗುತ್ತೀರಿ. ಯಾರ ಮನೆಯುವರು ಎಂದೆಲ್ಲ ನಮ್ಮ ಪೂರ್ವಾಪರಗಳನ್ನು ವಿಚಾರಿಸಿಕೊಂಡು, ಇಳಿಯುವಾಗ ನಮಗೆ ಆ ಸೀಟನ್ನು ಬಿಟ್ಟುಕೊಟ್ಟು ಹೋದರು.

ನಾವು ಅವರಿಗೆ ಕೃತಜ್ಞತೆಯನ್ನು ಅರ್ಪಿಸಿ ಒಂದೆರಡು ದಿವಸಗಳಲ್ಲಿ ಆ ವಿಷಯ ವನ್ನು ಮರೆತವು. ಮುಂದೆ ಅವರು ನಮ್ಮ ಮನೆಗೆ ಸಂಬಂಧ ಬೆಳೆಸುವ ಇಚ್ಛೆಯನ್ನು ವ್ಯಕ್ತಪಡಿಸಿ ಬಂದಾಗಲೇ ನಮಗೆ ಅವರು ಬಸ್ಸಿನಲ್ಲಿ ಸಿಕ್ಕಿದ್ದೂ ಹಾಗೂ ವಿಳಾಸವನ್ನು ವಿಚಾರಿಸಿದುದರ ಹಿನ್ನೆಲೆ ಅರಿವಾದದ್ದು. ಹೀಗೆ ನಾನು ಅವರ ಮನೆಯ ಸೊಸೆ ಯಾದದ್ದೇ ಒಂದು ಕಥೆ.

ಇಷ್ಟೊಂದು ಹಿನ್ನೆಲೆಯನ್ನು ನಾನು ಹೇಳಿದುದರ ಉದ್ದೇಶ, ಮನಸ್ಸಿಗೆ ಸರಿ ಎನಿಸಿದ್ದನ್ನು ಸಾಧಿಸುವ ಅವರ ವ್ಯಕ್ತಿತ್ವವನ್ನು ಪರಿಚಯಿಸುವುದಷ್ಟೆ. ಅತಿಥಿ ಸತ್ಕಾರ ಅವರ ಅಚ್ಚು ಮೆಚ್ಚಿನದು. ಅಂಥ ಸತ್ಕಾರಕೂಟಗಳು ನಮ್ಮ ಮನೆಯಲ್ಲಿ ಆಗಾಗ ನಡೆಯುತ್ತಲೇ ಇರುತ್ತವೆ. ಅವರ ಸತ್ಕರಿಸುವ ಆಸೆಯಲ್ಲಿ ಅತಿಥಿಗಳನ್ನು ತಾವೇ ಕರೆದು, ಮನೆಯಲ್ಲಿ ಹೆಂಗಸರು ಬೈದುಕೊಳ್ಳಬಾರದೆಂದು ನಾನು ಕರೆಯಲಿಲ್ಲ ಅವರೇ ಬರ್ತೀವಿ ಎಂದಿದ್ದಾರೆಂದು ಹೇಳಿ ಅಡುಗೆ ಮಾಡಿಸಿರುವುದು ಉಂಟು. ಆದರೆ ಅದು ಸುಳ್ಳೆಂದು ನಮಗೆಲ್ಲ ಅನುಭವದಿಂದ ಗೊತ್ತು.

ನಾನು ಅವರ ಮನೆಗೆ ಸೊಸೆಯಾಗಿ ಬಂದು ಸುಮಾರು 12 ವರುಷಗಳಾಗುತ್ತ ಬಂದಿವೆ. ಇಷ್ಟು ವರ್ಷಗಳಲ್ಲಿ ಒಮ್ಮೆಯೂ ಮಾವನವರು ಯಾರ ಬಗ್ಗೆಯಾದರೂ ಕೆಟ್ಟದಾಗಿ ಮಾತನಾಡಿದುದನ್ನಾಗಲೀ, ಕೆಟ್ಟದ್ದನ್ನ ಬಯಸಿದುದನ್ನಾಗಲೀ ನಾನು ಕಂಡವಳಲ್ಲ. ಸದಾ ಎಲ್ಲರಿಗೂ ಒಳ್ಳೆಯದನ್ನ ಬಯಸುವ ಸರಳವ್ಯಕ್ತಿತ್ವದ ಸಜ್ಜನ ವ್ಯಕ್ತಿ. ಇವರಿಗೆ ಅನುರೂಪ ಜೋಡಿ ನನ್ನ ಅತ್ತೆ. ಇದರಿಂದಾಗಿ ನಮ್ಮ ದೊಡ್ಡ ಕುಟುಂಬದಲ್ಲಿ ಜಗಳ, ಮುನಿಸುಗಳು ಬಹಳ ಕಡಿಮೆ. ಇಲ್ಲವೆಂದೇ ಹೇಳಬಹುದು. ಸದಾ ಸಂತೋಷ ತೃಪ್ತಿಗಳಿಂದ ಕೂಡಿರುವ ನಮ್ಮ ಮನೆಗೆ ಈ ಎರಡು ಹಿರಿಯ ಜೀವಗಳದೇ ಶ್ರೀರಕ್ಷೆ.

ಯಾವುದೇ ಒಂದು ಒಳ್ಳೆಯ ಕೆಲಸದಲ್ಲಿ ಅವರು ತೋರುವ ಆಸಕ್ತಿ ಹಾಗೂ ಭಾಗವಹಿಸುವುದನ್ನು ಕಂಡಾಗ, ಅವರಿಗೆ ಆರೋಗ್ಯ ಸರಿಯಾಗಿದ್ದು ಎಲ್ಲರಂತೆ ಆಹಾರವನ್ನು ತೆಗೆದುಕೊಂಡು ಅರಗಿಸುವ ಶಕ್ತಿ ಇದ್ದಿದ್ದರೆ ಇನ್ನೆಷ್ಟು ಚಟುವಟಿಕೆಯಿಂದಿರುತ್ತಿದ್ದರೋ ಎನಿಸುತ್ತದೆ. (ಬರೀ ಹಾಲು, ಜ್ಯೂಸು ಇಂಥ ದ್ರವಾಹಾರಗಳೇ ಅವರ ಊಟ).

ನಮ್ಮದು ತುಂಬಾ ದೊಡ್ಡ ಕುಟುಂಬ. ಮಕ್ಕಳು ಮೊಮ್ಮಕ್ಕಳು ಎಲ್ಲರೂ ಸೇರಿದರೆ ಐವತ್ತು ಮಂದಿ ಆಗಬಹುದು. ಮೊಮ್ಮಕ್ಕಳೇ ಹದಿನೈದು ಮಂದಿ ಇದ್ದಾರೆ. ಅವರಿಗೆ ಮೊಮ್ಮಕ್ಕಳೆಂದರೆ ಅತಿಶಯವಾದ ಪ್ರೀತಿ. ಹದಿನೈದು ಮಂದಿ ಮೊಮ್ಮಕ್ಕಳು ಸೇರಿಕೊಂಡು ಕಿರುಚಿ ಗಲಾಟೆ ಮಾಡಿದರೂ ಅವರು ಬೇಸರಿಸಿಕೊಂಡವರಲ್ಲ. ಇದರಿಂದ ಮಕ್ಕಳಿಗೆಲ್ಲ ಅವರು ಅಚ್ಚುಮೆಚ್ಚು. ವರದಕ್ಷಿಣೆ ವರೋಪಚಾರಗಳ ಆಡಂಬರದ ಮದುವೆಗಳ ಕಟ್ಟಾ ವಿರೋಧಿ. ಮಂಡ್ಯಜಿಲ್ಲೆಯಲ್ಲಿ ಸರಳವಿವಾಹವನ್ನು ಪ್ರಥಮ ಬಾರಿಗೆ ಆಚರಣೆಗೆ ತಂದವರು ಇವರು.

ಇತ್ತೀಚಿನ ಅವರ ಅನಾರೋಗ್ಯದ ಕಾರಣ ಅವರ ಕಾರ್ಯಕಲಾಪಗಳಿಗೆಲ್ಲ ಸ್ವಲ್ಪ ಮಟ್ಟಿನ ಬಿಡುವು. (ಪೂರ್ತಿ ಅಲ್ಲ). ಅವರು ಆದಷ್ಟು ಬೇಗ ಗುಣಮುಖರಾಗಿ ಮೊದಲಿನಂತಾಗಲೆಂಬುದೇ ನಮ್ಮೆಲ್ಲರ ಬಯಕೆ.

**ಉಷಾ ಚೈತನ್ಯಕುಮಾರ್**



# ಜೀವನೋತ್ಸಾಹಿ

ಶ್ರೀಮಾನ್ ಪಿ. ಎನ್. ಜವರಪ್ಪಗೌಡರನ್ನು ನಾನು ಕಂಡದ್ದು ಸುಮಾರು ಹದಿನೈದು ವರ್ಷಗಳ ಹಿಂದೆ. ಕೆ.ವಿ. ಶಂಕರಗೌಡರ ಅಭಿನಂದನ ಗ್ರಂಥ 'ಕಬ್ಬಿನ ಹಾಲು' ಸಿದ್ಧತೆಯ ಸಂದರ್ಭದಲ್ಲಿ. ಅವರಿಗೂ ನನಗೂ ತಲೆಮಾರಿನ ಅಂತರವಿದ್ದೂ ನಾನು ಅವರನ್ನು ಮೆಚ್ಚಲು ಹಲವಾರು ಕಾರಣಗಳಿವೆ.

ಅಷ್ಟೇನೂ ಆಕರ್ಷಕವಲ್ಲದ ಜವರಪ್ಪಗೌಡರನ್ನು ನಾನು ಮೊದಲಿಗೆ ಕಂಡಾಗ ಯಾರೋ ಮಂಡ್ಯದ ಗೌಡ, ತರಲೆ ರಾಜಕಾರಣಿ ಎಂದು ಉಪೇಕ್ಷಿಸಿದ್ದು ನಿಜ. ಅದಕ್ಕೆ ಅವರ ವಾಚಾಳಿತನವೂ ಕಾರಣವಿದ್ದಿರಬಹುದು. ಆದರೆ ಅವರನ್ನು ಮತ್ತೆ ಮತ್ತೆ ಭೇಟಿಯಾದಂತೆಲ್ಲ ಮಾನವೀಯ ಅಂತಃಕರಣದಿಂದ ಕೂಡಿದ ಅವರ ಶಿಶುಸಹಜ ಮುಗ್ಧತೆ, ನೇರ ನಡೆ ನುಡಿ, ನ್ಯಾಯನಿಷ್ಠುರತೆಗಳ ಪರಿಚಯವಾಗುತ್ತ ಹೋಯಿತು. ಅವರ ಅರಿವಿಗೆ ಬಾರದಂತೆ ಅವರ ಅನುಯಾಯಿಗಳಲ್ಲಿ ನಾನೂ ಒಬ್ಬನಾದೆ.

ರಾಜಕಾರಣದಲ್ಲಿದ್ದೂ ರಾಜಕಾರಣಿಯಾಗದ ಇವರು ಓಟು ಎನ್ನುವ ಶಬ್ದ ವಿರುವ ಯಾವ ಸಂಸ್ಥೆಯಲ್ಲಿಯೂ ಭಾಗಿಯಾಗಲಿಲ್ಲ ಎನ್ನುವುದೇ ಒಂದು ಆಶ್ಚರ್ಯ. ಭಾರತದ ಸ್ವಾತಂತ್ರ್ಯಸಂಗ್ರಾಮ, ಶಿವಪುರದ ಧ್ವಜಸತ್ಯಾಗ್ರಹ, ಹ್ಯಾಮಿಲ್ಟನ್ ಕಟ್ಟಡದ ಚಳುವಳಿ, ಮೈಸೂರು ಚಲೋ ಚಳುವಳಿ ಮತ್ತು ಕರ್ನಾಟಕ ಏಕೀಕರಣ ವಿರೋಧಿ ಚಳುವಳಿಗಳಲ್ಲೂ ಭಾಗವಹಿಸಿ ಹಲವಾರು ಬಾರಿ ಜೈಲುವಾಸವನ್ನನುಭವಿಸಿದ ಗೌಡರಿಗೆ ಮತ್ತು ಅವರಂತಹ ಹಲವಾರು ಜನರಿಗೆ ಸ್ವಾತಂತ್ರ್ಯೋತ್ತರ ಭಾರತದ ಸಮಾಜ ನೀಡಿದ ಕೊಡುಗೆ ನಾಚಿಕೆ ಪಡುವಂತಹುದು. ನೂರಾರು ವರುಷಗಳಿಂದ ದಾಸ್ಯಕ್ಕೊಳಗಾಗಿದ್ದ ಭಾರತೀಯರಿಗೆ ಬಂದ ಸ್ವಾತಂತ್ರ್ಯ ಮತ್ತು ತಂದುಕೊಟ್ಟ ಪ್ರಜಾಪ್ರಭುತ್ವಕ್ಕೆ ಒಗ್ಗಿಕೊಳ್ಳಲು ಆಗಲೇ ಇಲ್ಲ. ಸ್ವಾರ್ಥಮೂಲ ಅಧಿಕಾರದಾಹ ಆಳುವ ಪ್ರಭುಗಳ ಕಣ್ಣನ್ನು ಕಟ್ಟಿತು. ಆ ಕಾರಣವಾಗಿ ಜವರಪ್ಪಗೌಡರಂತಹ ಮಹನೀಯರು ರಾಜಕಾರಣಿಗಳ ರಾಜಕಾರಣಿಗಳಾಗುವ ಸಂದರ್ಭ ಮೂಡಿ ಬಂದಿತು.

ಮಾಧ್ಯಮಿಕಶಾಲೆಯನ್ನೂ ದಾಟದ 'ಪಾಲಗ್ರಹಾರದ ಪರಕಲುಜುಬ್ಬ', 'ನಾಗಮಂಗಲದ ರಾಗಿಮುದ್ದೆ' ಎಂದು ವಿರೋಧಿಗಳಿಂದ ಲೇವಡಿಗೊಳಗಾದ ಜವರಪ್ಪಗೌಡರ ಜೀವನ ರೂಪುಗೊಂಡ ಬಗೆ ನನಗೆ ಪವಾಡಸದೃಶವಾಗಿ ತೋರಿದೆ. ಅವರ ಹಿರೀಕರು ಬಡತನದ ಬವಣೆಯ ಮಧ್ಯದಲ್ಲಿಯೂ ಸಭ್ಯಸಾಮಾಜಿಕರಾಗಿ ನಡೆಸಿದ ಸುಸಂಸ್ಕೃತ ಜೀವನ ಅವರನ್ನು ಹೀಗೆ ರೂಪಿಸಿದೆಯೆಂದು ಭಾವಿಸಿದ್ದೇನೆ.

ಬಾಲ್ಯದಿಂದಲೂ ಮೌಢ್ಯವನ್ನು ಶೋಷಣೆಯನ್ನು ವಿರೋಧಿಸುತ್ತ ಬಂದ

ಚಾಯುವಮಾನದ ಗೌಡರು ಎಂ. ಎಸ್. ಜೋಯಿಸ್, ತಗಡೂರು ರಾಮಚಂದ್ರರಾವ್, ತಗಡೂರು ಸುಬ್ಬಣ್ಣ, ರಾಜಶೇಖರಪ್ಪ, ಅರಕೆರೆಯ ಯು. ಕೆಂಚಪ್ಪ, ಕಾಂಗ್ರೆಸ್‌ಬೀಡಿ ಮಾಲೀಕರಾಗಿದ್ದ ಎಂ. ಆರ್. ಸಿ. ಬಸಪ್ಪ ಮುಂತಾದವರ ಒಡನಾಟದಿಂದಾಗಿ ಶ್ರೇಷ್ಠಹೋರಾಟಗಾರರಾಗಿ ಬೆಳೆದರು. ಎಚ್. ಸಿ. ದಾಸಪ್ಪನವರ ಪ್ರಭಾವದಿಂದ ಹಿರಿಯ ಸಹಕಾರಿಗಳಾಗಿ ರೂಪುಗೊಂಡರು.

ಗಾಂಧೀಜಿಯವರ ಸಾಮಾಜಿಕ ನೀತಿಸಂಹಿತೆಯನ್ನು ಒಪ್ಪಿಕೊಂಡು ಸಮಾಜಕ್ಕೆ ಭಾರವಾಗದೆ ಬೆಳೆದರು. ಕುವೆಂಪು ಅವರ ಸಾಹಿತ್ಯಶ್ರೀಗೆ ಮಾರುಹೋಗಿ ಅದನ್ನು ಸ್ವಾತಂತ್ರ್ಯ ಆಂದೋಲನದ ಪ್ರಚಾರ ಮತ್ತು ಸಮಾಜ ಸುಧಾರಣೆಗೆ ಬಳಸಿಕೊಂಡರು. (ಇಂದಿಗೂ ಕುವೆಂಪು ವಿಚಾರ ಪ್ರಚೋದಕ ಸಾಹಿತ್ಯವನ್ನು ಮುದ್ರಿಸಿ ಉಚಿತವಾಗಿ ಹಂಚುತ್ತಿದ್ದಾರೆ.) ವಿನೋಬಾರವರೊಡನೆ ಹಿಂದಿಯಲ್ಲಿ, ಜವಹರಲಾಲನೆಹರೂ ಅವರೊಡನೆ ಇಂಗ್ಲಿಷಿನಲ್ಲಿ ಮಾತನಾಡುವಂತಾದರು. ಹಿಂದೂಧರ್ಮದ ಮೇಲ್ಮೆ ಯನ್ನು ಎತ್ತಿ ಹಿಡಿದು, ಕ್ರೈಸ್ತಧರ್ಮದ ಅನಗತ್ಯ ಮತಾಂತರವನ್ನು ತಡೆದರು. ಅಸ್ಪೃಶ್ಯತೆಯ ವಿರುದ್ಧ ಹೋರಾಟವನ್ನು ನಡೆಸಿದರು. ವಯಸ್ಕರ ಶಿಕ್ಷಣದಲ್ಲಿ ಒಬ್ಬ ಕಾರ್ಯಕರ್ತರಾಗಿ ಕೆಲಸ ಮಾಡಿ ಮುಂದೆ ಆ ಸಂಸ್ಥೆಯ ಅಧ್ಯಕ್ಷರಾಗಿ ವಯಸ್ಕರ ಸಾಕ್ಷರತಾ ಚಳುವಳಿಗೆ ಹೊಸ ಆಯಾಮವನ್ನು ದೊರಕಿಸಿಕೊಟ್ಟರು. ಗುರುಪೀಠದ ಬಗ್ಗೆ ಭಕ್ತಿ ವಿಶ್ವಾಸ ಗೌರವಗಳನ್ನುಳ್ಳವರಾಗಿ ಶ್ರೀಗಂಧದ ಮರ ಬಲಿತಷ್ಟೂ ಕೆಚ್ಚು ಗೊಳ್ಳುವಂತೆ ಜೀವನಸಂಗ್ರಾಮದಲ್ಲಿ ಕೆಚ್ಚನ್ನು ಬೆಳೆಸಿಕೊಂಡರು. ಕೆ. ವಿ. ಶಂಕರ ಗೌಡ, ಸಿಂಗಾರಿಗೌಡ, ಜಿ. ಮಾದೇಗೌಡ ಮತ್ತು ಎಚ್.ಡಿ. ಚೌಡಯ್ಯನವರ ಸಹವರ್ತಿ ಯಾಗಿ ಶಿಕ್ಷಣ ಮತ್ತು ಸಹಕಾರಿರಂಗಕ್ಕೆ ಮಹತ್ತರ ಸೇವೆ ಸಲ್ಲಿಸಿದರು. ಮಂಡ್ಯಜಿಲ್ಲೆಯ ಸಾಂಸ್ಕೃತಿಕ ವೈಭವಕ್ಕೆ ಕಾರಣರಾದರು.

ಗಟ್ಟಿಗನನ್ನು ಸಮರ್ಥನಾದವನನ್ನು ಒಂದೇ ಕಾಲಕ್ಕೆ ಎರಡೂ ಕೈಯಲ್ಲಿ ತಬಲ ಬಾರಿಸುವವನೆಂದು ಹೇಳುತ್ತಾರೆ. ಹಾಗೆಯೇ ಜವರಪ್ಪಗೌಡರೂ ಸಹ. ಸಾರ್ವಜನಿಕ ಜೀವನದಲ್ಲಿ ಯಶಸ್ವಿಯಾದವರು ಗೃಹಕೃತ್ಯದಲ್ಲಿ ಎಡವುತ್ತಾರೆ. ಗೃಹಕೃತ್ಯದಲ್ಲಿ. ಮುಳುಗಿದವರು ಸಾರ್ವಜನಿಕ ಜೀವನದಲ್ಲಿ ಸೋಲುತ್ತಾರೆ. ಆದರೆ ಗೌಡರ ಜೀವನ ಮೇಲಿನ ಮಾತಿಗೆ ಅಪವಾದ. ಅವರು ಊರಿಗೆ ಉಪಕಾರಿ ಮನೆಗೆ ಮಾರಿ ಎನ್ನು ವಂಥವರಲ್ಲ.

ಜಸ್ಟಿಸ್ ಹೊಂಬೇಗೌಡರ ಪ್ರೇರಣೆಯಂತೆ ಹಳೆಯ ಮಾಸಿಕಗಳನ್ನು ಮಾರು ವುದರ ಮೂಲಕ ತಮ್ಮ ಉದ್ಯಮವನ್ನು ಆರಂಭಿಸಿ ಇಂದು ಮಂಡ್ಯಜಿಲ್ಲೆಯ ಹೆಸರಾಂತ ಪುಸ್ತಕ ವ್ಯಾಪಾರಿಯಾಗಿದ್ದಾರೆ. ಪ್ರಜಾಮತ ಪತ್ರಿಕೆಯ ಮಾಲೀಕರಂತೆ, ಸಂಪಾದ ಕರಂತೆ, ಭವ್ಯ ಬಂಗಲೆ ಮತ್ತು ಕಾರಿನ ಓಡಾಟದ ಕನಸು ನನಸಾಗದಿದ್ದರೂ 'ವಿಶ್ವಾಮಿತ್ರ' ದಿಂದ ಅನ್ನಕೊಡುವ ಗದ್ದೆ ಕೈಬಿಟ್ಟರೂ ಅದಕ್ಕಾಗಿ ದುಃಖಿಸಿದವರಲ್ಲ.

ತಮ್ಮ ಪುಸ್ತಕದಂಗಡಿ ಮತ್ತು ಮುದ್ರಣಾಲಯುಗಳಿಂದ ತಮ್ಮದೆ ಆದ ಮನೆ ದೊರೆತಿದೆ, ಮಕ್ಕಳು ಮರಿಗಳ ಮದುವೆಯಾಗಿದೆ ಎನ್ನುವ ಸಮಾಧಾನ ಅವರಿಗಿದೆ. ಬೇಕಾದ್ದು ಬೇಡವಾದ್ದನ್ನು ಒದಗಿಸುವ ಮಕ್ಕಳು, ಹೊತ್ತುಹೊತ್ತಿಗೆ ರುಚಿಯಾಗಿ ಬಿಸಿಯಾಗಿ ಮಾಡಿ ಬಡಿಸುವ ಸೊಸೆಯಂದಿರು, ತಾಯಿಗಿಂತ ಹೆಚ್ಚಾಗಿ ನೋಡಿಕೊಳ್ಳುವ ಧರ್ಮ ಪತ್ನಿಯಿಂದ ತಮ್ಮ ಮನೆ ಸ್ವರ್ಗ ಸಮಾನವಾಗಿದೆ ಎಂದು ಭಾವಿಸಿದ್ದಾರೆ. ಜೀವನ ಸಂಧ್ಯೆಯಲ್ಲಿ ಇಂತಹ ಸಂತೃಪ್ತಿಯನ್ನು ಎಲ್ಲಿ ತಾನೇ ಕಾಣಲು ಸಾಧ್ಯವಾದೀತು ಜವರಪ್ಪಗೌಡರಂತಹ ವ್ಯಕ್ತಿತ್ವದವರಲ್ಲಲ್ಲದೆ. ಇದನ್ನು ಸ್ವತಃ ಅನುಭವಿಸುವ ಭಾಗ್ಯವೂ ನನ್ನದಾಗಿದೆ. ಅವರ ಮನೆಯಲ್ಲಿ ಊಟಮಾಡಿದ ರಾಗಿಮುದ್ದೆ ಮತ್ತು ಸೊಪ್ಪಿನ ಸಾರಿನ ಸೊಗಸು ನನ್ನ ನಾಲಿಗೆಯಿಂದ ಇನ್ನೂ ಮರೆಯಾಗಿಲ್ಲ.

ಸಜ್ಜನರಲ್ಲಿ ಕಂಡುಬರುವ ಗುಣವಿಶೇಷಗಳನ್ನು ವೃದ್ಧಚಾಣಕ್ಯ ಶತಕದಲ್ಲಿ ಹೀಗೆ ಹೇಳಿದೆ—

ಧರ್ಮೇ ತತ್ಪರತಾ ಮುಖೇ ಮಧುರತಾ ದಾನೇ ಸಮುತ್ಸಾಹಿತಾ
ಮಿತ್ರೇಽವಂಚಕತಾ ಗುರೌ ವಿನಯತಾ ಚಿತ್ತೇಽತಿಗಂಭೀರತಾ
ಆಚಾರೇ ಶುಚಿತಾ ಗುಣೇ ರಸಿಕತಾ ಶಾಸ್ತ್ರೇಽ ವಿಜ್ಞಾನಿತಾ
ರೂಪೇ ಸುಂದರತಾ ಹರೌ ಭಜನಿತಾ ಸತ್ಸ್ವೇವಸಂದೃಶ್ಯತೇ

ಧರ್ಮ ತತ್ಪರತೆ, ಮಾತಿನಲ್ಲಿ ಮಾಧುರ್ಯ, ದಾನದಲ್ಲಿ ಉತ್ಸಾಹ, ಮಿತ್ರರನ್ನು ವಂಚಿಸದಿರುವುದು, ಗುರುಗಳಲ್ಲಿ ವಿನಯಭಾವನೆ, ಗಂಭೀರಚಿತ್ತ, ಶುಚಿಯಾದ ಆಚಾರ, ಗುಣಗಳಿಂದ ಕೂಡಿದ ರಸಿಕತೆ, ಶಾಸ್ತ್ರಗಳಲ್ಲಿ ವಿಶೇಷವಾದ ಜ್ಞಾನ, ಸುಂದರ ವಾದ ರೂಪ ಮತ್ತು ಹರಸ್ತುತಿಗಳನ್ನು ಸಜ್ಜನರಾದವರಲ್ಲಿ ಕಾಣುತ್ತೇವೆ. ಈ ಮಾತಿನ ಸಾರ್ಥಕ್ಯವನ್ನು ಶ್ರೀಮಾನ್ ಪಿ. ಎನ್. ಜವರಪ್ಪಗೌಡರಲ್ಲಿ ನಾನು ಕಂಡಿದ್ದೇನೆ. ಅವರಿಗೂ ಅವರ ಕುಟುಂಬವರ್ಗದವರಿಗೂ ಶುಭವಾಗಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಜಿ. ಜಿ. ಮಂಜುನಾಥನ್

# ಹಾಸ್ಯಪ್ರಿಯ

ಶ್ರೀ ಪಿ. ಎಸ್. ಜವರಪ್ಪನವರು ನನ್ನ ಬಹಳ ವರ್ಷದ ಆಪ್ತಸ್ನೇಹಿತರು. ಅವರ ಬಗ್ಗೆ ಲೇಖನ ಬರೆದರೆ ದೃಷ್ಟಿಯಿದ್ದವರಿಗೆ ಬೆಳಕನ್ನು ಪರಿಚಯ ಮಾಡಿದಂತಾಗುತ್ತದೆ. ಆದರೂ ಅವರ ವಿಚಾರ ತಿಳಿಯದೆ ಇರುವವರ ತಿಳುವಳಿಕೆಗಾಗಿ ಶ್ರೀ ಜವರಪ್ಪಗೌಡರ ಬಗ್ಗೆ ನನ್ನ ಅನಿಸಿಕೆಗಳನ್ನು ಬರೆಯುತ್ತಿದ್ದೇನೆ.

ಶ್ರೀ ಜವರಪ್ಪಗೌಡರು ಹೆಸರಾಂತ ಸ್ವಾತಂತ್ರ್ಯಹೋರಾಟಗಾರರಾಗಿ ದುಡಿದು ಮಂಡ್ಯಜಿಲ್ಲೆಗೆ ಅಲ್ಲದೆ ಕರ್ನಾಟಕಕ್ಕೆ ಒಂದು ಹೆಸರನ್ನು ತಂದಿದ್ದಾರೆ. ಬಹಳವರ್ಷ ತುರಂಗವಾಸವನ್ನು ಅನುಭವಿಸಿದ್ದಾರೆ. ಮಂಡ್ಯಜಿಲ್ಲಾ ಕಾಂಗ್ರೆಸ್‌ಸಮಿತಿಯಲ್ಲಿ ಕಾರ್ಯದರ್ಶಿಯಾಗಿ, ಕಾಂಗ್ರೆಸ್ಸಿನ ನಿಷ್ಠಾವಂತ ಕಾರ್ಯಕರ್ತರಾಗಿ ಸೇವೆ ಸಲ್ಲಿಸಿದ್ದಾರೆ. ಸ್ವಾತಂತ್ರ್ಯ ಬಂದ ಮೇಲೆ ಅವರಿಗೆ ರಾಜಕೀಯ ಮುಖಂಡರಲ್ಲಿ ಮಂತ್ರಿಗಳಲ್ಲಿ ಮತ್ತು ಅಧಿಕಾರಿಗಳಲ್ಲಿ ಇದ್ದ ಪರಿಚಯವನ್ನು ದುರುಪಯೋಗ ಮಾಡಿಕೊಳ್ಳದೆ ಒಳ್ಳೆಯ ಹೆಸರನ್ನು ಉಳಿಸಿಕೊಂಡಿದ್ದಾರೆ.

ಸ್ವಂತ ಗಳಿಕೆಗಾಗಿ ಅವರ ರಾಜಕೀಯಪರಿಚಯದ ಲಾಭವನ್ನು ಪಡೆಯದೆ ಸ್ವಶಕ್ತಿಯಿಂದ ದುಡಿದ ಆದಾಯದಲ್ಲೇ ಜೀವನಮಾಡುತ್ತ, ಈಗಲೂ ಆಸ್ತಿ ಮತ್ತು ವರಮಾನದ ಲೆಕ್ಕದಲ್ಲಿ ಮಧ್ಯಮವರ್ಗದಲ್ಲಿ ಕೆಳಮಟ್ಟದಲ್ಲಿರುವವರ ಜೀವನವನ್ನು ನಡೆಸುತ್ತಿದ್ದಾರೆ. ರಾಜಕೀಯವಾಗಿಯಾಗಲಿ, ಅಥವಾ ಬೇರೆ ವಿಚಾರವಾಗಿಯಾಗಲಿ ಶ್ರೀ ಜವರಪ್ಪಗೌಡರ ಜತೆ ಮಾತನಾಡುತ್ತ ಕುಳಿತರೆ ಕಾಲ ಹೋದದ್ದೇ ಗೊತ್ತಾಗುವುದಿಲ್ಲ. ಅವರ ಮತ್ತು ಬೇರೆಯವರ ಜೀವನಗಳ, ರಾಜಕೀಯಘಟನೆಗಳ ಮತ್ತು ಇತರ ವಿಷಯಗಳನ್ನು ಬಹಳ ಸ್ವಾರಸ್ಯವಾಗಿ ವಿವರಿಸಿ, ನಗಿಸುವುದು ಅವರ ಒಂದು ಅಪಾರ ಶಕ್ತಿ.

ಸ್ನೇಹಿತರು ತಪ್ಪುದಾರಿಗೆ ಹೋಗುತ್ತಿದ್ದರೆ ಅವರ ಮನಸ್ಸಿಗೆ ನಾಟುವಂತೆ ಅವರಿಗೆ ಬುದ್ಧಿ ಹೇಳಿ ಹಲವಾರು ಸಂದರ್ಭಗಳಲ್ಲಿ ಆಗಬಹುದಾದ ಅನರ್ಥಗಳನ್ನು ತಪ್ಪಿಸಿದ್ದಾರೆ.

ಪತ್ರಿಕಾಕರ್ತರಾಗಿಯೂ ಅಪಾರ ಸೇವೆಮಾಡಿ ಅದರಲ್ಲೂ ಅಜೇಯರಾಗಿದ್ದಾರೆ ಅವರಿಗೆ ಪತ್ರಿಕಾಅಕಾಡಮಿಯವರು "ರಾಜ್ಯ ಪ್ರಶಸ್ತಿ"ಯನ್ನು ಕೊಟ್ಟು ಗೌರವಿಸಿರುವುದು ನಮಗೆಲ್ಲ ಬಹಳ ಸಂತೋಷ. ಜಿಲ್ಲೆಯಲ್ಲಿ ಯಾವ ಹೋರಾಟ ಬಂದರೂ ಅವರೇ ಅದರಲ್ಲಿ ಮುಂದು. ಮನೆಮಠಗಳನ್ನು ನೋಡಿಕೊಳ್ಳುವುದನ್ನು ಬಿಟ್ಟು ಸಾರ್ವಜನಿಕ ಕೆಲಸಮಾಡುವುದು ಅವರ ದೊಡ್ಡ ಗುಣ. ಕಾಲೇಜುಗಳಲ್ಲಿ ಓದಿ

ಡಿಗ್ರಿಗಳನ್ನು ಪಡೆಯದಿದ್ದರೂ, ಶ್ರೀ ಜವರಪ್ಪಗೌಡರಿಗಿರುವ ತಿಳಿವಳಿಕೆ ಮತ್ತು ಜ್ಞಾನ, ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್‌ಪದವಿ ಪಡೆದಿರುವ ಹಲವರಿಗಿಂತಲೂ ಜಾಸ್ತಿ. ರಾಷ್ಟ್ರಕವಿ ಕುವೆಂಪುರವರ ಆತ್ಮೀಯರಾಗಿದ್ದು, ಕುವೆಂಪುರವರ "ವಿಶ್ವಮಾನವ ತತ್ವ"ವನ್ನು ಮತ್ತು "ಮಂತ್ರಮಾಂಗಲ್ಯ"ದ ರೀತಿ ಮದುವೆಮಾಡುವುದನ್ನು ಪ್ರಚಾರ ಮಾಡುವುದರಲ್ಲಿ ಅವರು ಮೊದಲಿಗರು. ಅವರ ಮಗನ ಮದುವೆಯನ್ನು 1977ರಲ್ಲಿ "ಮಂತ್ರಮಾಂಗಲ್ಯ"ದ ರೀತಿಯಲ್ಲಿ ಸರಳವಾಗಿ ಮಾಡಿ ನೂರಾರು ಇಂತಹ ಸರಳ ಮದುವೆಗಳಿಗೆ ಬುನಾದಿ ಹಾಕಿದ್ದಾರೆ. ವಯಸ್ಕರಶಿಕ್ಷಣ ಸಮಿತಿಯ ರಾಜ್ಯಸಮಿತಿಯ ಅಧ್ಯಕ್ಷರಾಗಿ ಅವರು ಮಾಡಿದ ಸೇವೆ ಅಪಾರವಾದದ್ದು. ಅಖಿಲ ಭಾರತ ಮಟ್ಟದಲ್ಲಿಯೂ ಮಾನ್ಯತೆ ಪಡೆದ ಅಖಿಲ ಭಾರತ ವಯಸ್ಕರಶಿಕ್ಷಣ ಸಮಿತಿಯ ಉಪಾಧ್ಯಕ್ಷರಾಗಿದ್ದು ರಾಜ್ಯಕ್ಕೆ ದೊಡ್ಡ ಗೌರವ ತಂದರು.

ಅವರು ಬಹಳ ಹಾಸ್ಯಪ್ರಿಯರು. ರಾಜಕೀಯ ಕಾರ್ಯಗಳಲ್ಲಿಯೂ ಹಾಸ್ಯವನ್ನು ಹೊಂದಿಸಿಕೊಳುತ್ತಿದ್ದರು. ಆ ಒಂದು ಘಟನೆಯನ್ನು ಹೇಳಲು ಇಚ್ಛಿಸುತ್ತೇನೆ.

1978ರಲ್ಲಿ ನಾನು ಹುಣಸೂರು ಕ್ಷೇತ್ರದಿಂದ ಅಂದಿನ ಮುಖ್ಯಮಂತ್ರಿಗಳಾದ ಶ್ರೀ ದೇವರಾಜೇಅರಸ್‌ರವರು ಅವರ ವಿರುದ್ಧ ವಿಧಾನಸಭೆಯ ಚುನಾವಣೆಯಲ್ಲಿ ಸ್ಪರ್ಧಿಸಿದ್ದೆ. ಶ್ರೀ ಜವರಪ್ಪಗೌಡರವರು ನನ್ನ ಪರವಾಗಿ ಪ್ರಚಾರ ಭಾಷಣ ಮಾಡಲು ಬಂದಿದ್ದರು, ಅವರು ಶ್ರೀ ದೇವರಾಜೇಅರಸ್‌ರವರಿಗೂ ಬಹಳ ಪರಿಚಯಸ್ತರು ಮತ್ತು ಸ್ನೇಹಿತರು, ಎಲ್ಲರಿಗೂ ತಿಳಿದಿರುವಂತೆ, ಬೇರೆಯವರು ಅರಸುಗಳನ್ನು ಮಾತನಾಡಿಸುವಾಗ "ಬುದ್ಧಿ" ಎಂದು ಕರೆಯುತ್ತಾರೆ. ಆ ದಿವಸದ ಶ್ರೀ ಜವರಪ್ಪ ಗೌಡರ ಪ್ರಚಾರ ಭಾಷಣ ಕೇಳಕಂಡಂತಿತ್ತು.

ಬ್ರಹ್ಮದೇವರು ಜನರನ್ನು ಸೃಷ್ಟನೆ ಮಾಡಿದ ಮೇಲೆ, ಒಂದು ದಿವಸ ಎಲ್ಲರಿಗೂ "ಬುದ್ಧಿ"ಯನ್ನು (ಕಾಮನ್ ಸೆನ್ಸ್) ಹಂಚಿದನಂತೆ, ಆ ವೇಳೆಯಲ್ಲಿ ಅರಸುಗಳು ಆ ದಿನ ಹೆಚ್ಚಿಗೆ ಹೋಳಿಗೆ ಊಟಮಾಡಿದ್ದರಿಂದ ಬೇದಿ ಶುರುವಾಗಿದ್ದು ಬ್ರಹ್ಮದೇವರು "ಬುದ್ಧಿ"ಯನ್ನು ಹಂಚುತ್ತಿದ್ದಾಗ ಕಕ್ಕಸ್ಸಿಗೆ ಹೋಗಿದ್ದರಂತೆ. ಅವರು ಹೊರಗಡೆ ಬರುವ ವೇಳೆಗೆ ಬ್ರಹ್ಮ "ಬುದ್ಧಿ"ಯನ್ನೆಲ್ಲಾ ಹಂಚಿ ಮುಗಿಸಿಬಿಟ್ಟಿದ್ದ. ಅರಸುಗಳಿಗೆ ಹಂಚಲು "ಬುದ್ಧಿ" ಉಳಿದಿರಲಿಲ್ಲ. ಇದನ್ನು ತಿಳಿದು ಅರಸುಗಳು, ಮಹಾಸ್ವಾಮಿ, ನಮಗೂ "ಬುದ್ಧಿ"ಯನ್ನು ಹೇಗಾದರೂ ಮಾಡಿ ಕೊಡಿ ಎಂದು ಕೇಳಿದರು, ಆಗ ಬ್ರಹ್ಮ, ಇದ್ದ "ಬುದ್ಧಿ"ಯನ್ನೆಲ್ಲಾ ಹಂಚಿಯಾಗಿದೆ, ಏನು ಮಾಡುವುದು ಎಂದು ಸ್ವಲ್ಪಹೊತ್ತು ಯೋಚನೆ ಮಾಡಿ ಆ ಮೇಲೆ ಬ್ರಹ್ಮ ಈ ರೀತಿ ಹೇಳಿದನಂತೆ. ಈಗ "ಬುದ್ಧಿ"ಯನ್ನೆಲ್ಲಾ ಹಂಚಿ ಆಗಿ ಹೋಗಿದೆ. ನಿಮಗೆ "ಬುದ್ಧಿ"ಯನ್ನು ಕೊಡಲು ಏನೂ ಉಳಿದಿಲ್ಲ, ಆದರೆ ನಾನು ಭೂಲೋಕಕ್ಕೆ ಒಂದು ಸಂದೇಶ ಕಳುಹಿಸಿ ಕೊಡುತ್ತೇನೆ. ಅದರಲ್ಲಿ ಅರಸುಗಳಿಗೆ "ಬುದ್ಧಿ"ಯನ್ನು ಕೊಡಲು ಸಾಧ್ಯ

ವಾಗಿಲ್ಲ. ಆದರೂ ಜನ ಅವರನ್ನು "ಬುದ್ಧಿ" ಎಂದು ಕರೆಯಲಿ ಎಂದು ತಿಳಿಸುತ್ತೇನೆ ಎಂದು ಹೇಳಿ, ಅದರಂತೆ ಭೂಲೋಕಕ್ಕೆ ಸರ್ಕ್ಯುಲರ್ ಕಳುಹಿಸಿದನಂತೆ. ಆದ್ದರಿಂದ ಅರಸುಗಳಿಗೆ ಜನ "ಬುದ್ಧಿ" ಎಂದು ಕರೆಯುತ್ತಿದ್ದಾರೆ ಎಂದರು.

ಇದು ಶ್ರೀ ದೇವರಾಜೇಅರಸ್‌ರವರಿಗೆ ತಿಳಿಯಿತು. ಶ್ರೀ ಜವರಪ್ಪಗೌಡರು ಅವರಿಗೆ ಸಿಕ್ಕಾಗ "ಏನು ಜವರಪ್ಪಗೌಡರೇ ನನ್ನ ಮೇಲೆ ಇಷ್ಟು ಹಾಸ್ಯ ಮಾಡುವುದು ಸರಿಯೇ" ಎಂದರಂತೆ. ಅದಕ್ಕೆ ಜವರಪ್ಪಗೌಡರು ಬುದ್ಧಿ ನಾನು ಹೇಳಿದ ಕಥೆ ತೇಟ್ ಅರಸುಗಳಿಗೆ ಸಂಬಂಧಪಟ್ಟಿದ್ದು. ನಿಮಗಲ್ಲ ಎಂದರಂತೆ. ಹಿಂದೆ ರಾಜರ ಮನೆತನದಲ್ಲಿ, ಅರಸುಗಳ ಮನೆಯಲ್ಲಿ ಅಡಿಗೆಯವರು ಹೆಚ್ಚಿಗೆ ಲಿಂಗಾಯಿತ ಹೆಂಗಸರು ಇರುತ್ತಿದ್ದರು, ಅವರ ಸಂಬಂಧದಿಂದ ಹುಟ್ಟಿದ ಮಕ್ಕಳಿಗೆ "ಬಂಗಾರದ ಅರಸುಗಳು" ಎಂದು ಹೆಸರು. ತೇಟ್‌ಅರಸುಗಳು ಅಂದರೆ ಗಂಡಸರೂ ಹೆಂಗಸರೂ ಇಬ್ಬರೂ ಅರಸುಗ ಳಾಗಿದ್ದು ಅವರಿಗೆ ಹುಟ್ಟಿದವರು ಮಾತ್ರ. ಇದನ್ನು ಕೇಳಿದ ಮೇಲೆ ದೇವರಾಜೇ ಅರಸ್‌ರವರು "ನಿಮ್ಮನ್ನು ನಾನು ಮಾತಿನಲ್ಲಿ ಸೋಲಿಸಲಾರೆ, ಹೋಗಲಿ ಬಿಡಿ" ಎಂದರಂತೆ.

ಅವರ ಮತ್ತು ಅವರ ಪತ್ನಿಯವರದು ಒಂದು ಆದರ್ಶದಾಂಪತ್ಯ ಎನ್ನ ಬಹುದು. ಅವರ ಪತ್ನಿಯವರು ಜವರಪ್ಪಗೌಡರು ಹಲವಾರು ಸಲ ಜೈಲಿಗೆ ಹೋದಾಗ ಮತ್ತು ಇತರ ಸಮಯಗಳಲ್ಲಿಯೂ ಮನೆಯನ್ನು ನಡೆಸಿಕೊಂಡು ಹೋಗುವ ಮತ್ತು ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಜವಾಬ್ದಾರಿಯನ್ನು ತೆಗೆದು ಕೊಂಡು, ಜವರಪ್ಪಗೌಡರಿಗೆ ಅವರ ರಾಜಕೀಯದ ಮತ್ತು ಇತರ ಕೆಲಸಗಳಿಗೆ ತಡೆ ಯಾಗದಂತೆ ಸಂಪೂರ್ಣ ಸಹಕಾರ ಕೊಟ್ಟಿದ್ದಾರೆ. ಅವರೂ ಕೂಡ ಯಾವಾಗಲೂ ನಗುಮುಖದಿಂದ ಇದ್ದು, ಅವರ ಮನೆಗೆ ಬರುವ ರೀತಿ ಅಪಾರ ಸಂಖ್ಯೆಯಲ್ಲಿ ಬರುವ ಅತಿಥಿಗಳಿಗೆ ಸತ್ಕಾರ ಮಾಡುತ್ತಾರೆ. ಆದ್ದರಿಂದ ಶ್ರೀ ಜವರಪ್ಪಗೌಡರು, ಅವರನ್ನು ಪೂರ್ತಿ ಅರ್ಥಮಾಡಿಕೊಂಡು ಅವರ ಸಂಪೂರ್ಣ ಸಹಕಾರ ಮತ್ತು ಉತ್ತೇಜನ ಪಡೆಯುವ ಪತ್ನಿಯವರನ್ನು ಹೊಂದಿರುವ ಒಬ್ಬ ಅದೃಷ್ಟವಂತರು.

ಆದರೆ ಇಲ್ಲಿಯವರೆವಿಗೆ ಶ್ರೀ ಜವರಪ್ಪಗೌಡರ ಜೊತೆ ಕೆಲಸ ಮಾಡಿರುವ ಮತ್ತು ಅವರಲ್ಲಿರುವ ಅನುಭವ ಮತ್ತು ಜ್ಞಾನವನ್ನು ತಿಳಿದುಕೊಂಡಿರುವ, ರಾಜ ಕಾರಿಣಿಗಳಾರೂ ಅವರನ್ನು ವಿಧಾನಪರಿಷತ್ತಿಗೆ ಸದಸ್ಯರನ್ನಾಗಿ ಮಾಡುವ ಅಥವಾ ಮಾಡಿಸುವ ಗೋಜಿಗೆ ಹೋಗಲೇ ಇಲ್ಲ.

ದೇವರು ಅವರಿಗೆ ಉತ್ತಮ ಆರೋಗ್ಯವನ್ನು ದಯಪಾಲಿಸಿ ಅವರ ಸೇವೆ ನಮ್ಮ ರಾಜ್ಯಕ್ಕೆ ಇನ್ನೂ ಹಲವಾರು ವರ್ಷಗಳು ದೊರೆಯುವಂತೆ ಆಗಲೆಂದು ಆಶಿಸುತ್ತೇನೆ ಮತ್ತು ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಡಾ: ಎಚ್. ಎಲ್. ತಿಮ್ಮೇಗೌಡ**

# ದೇಶಾಭಿಮಾನಿ

ಮೊದಲಬಾರಿಗೆ ರೈಲಿನಲ್ಲಿ ಕುಳಿತು ಪ್ರಯಾಣ. ಮಂಡ್ಯ ಸಮೀಪಿಸಿದಾಗ ನನ್ನ ಮನಸ್ಸಿನಲ್ಲಿದ್ದ ಸಕ್ಕರೆ ಕಾರ್ಖಾನೆಯ ಹೊಗೆಯಾಡುತ್ತಿದ್ದ ಎರಡು ಭಾರಿ ಕೊಳವೆಗಳನ್ನು ಕಂಡೆ. ಮಂಡ್ಯದ ಸೆಳೆತಕ್ಕೆ ಸಮಾಧಾನ

ಕಾಲ ನನ್ನನ್ನು ಕೇಳಿ ಉರುಳುತ್ತದೆ ಎಂಬ ಭ್ರಮೆಯಿದ್ದ ಸಮಯ, ಅದರ ಪಾಡಿಗೆ ಅದು ಉರುಳುತ್ತ ಹೋಯಿತು. ನನ್ನ ಅದೃಷ್ಟ ; ಮಂಡ್ಯಜಿಲ್ಲೆಯೊಡನೆ ನಾನಾ ಸಂಬಂಧ ಬೆಳೆಯಿತು. ನಿಕಟವಾಯಿತು.

ನಾನು ವಿದ್ಯಾರ್ಥಿಯಾಗಿದ್ದಾಗಲೇ ಇವರೊಬ್ಬರು ಸ್ವಾತಂತ್ರ್ಯಹೋರಾಟಗಾರ ಎಂದು ಕೇಳಿದ್ದೆ. ಪತ್ರಕರ್ತರು ಎಂದೂ ಕೇಳಿದ್ದೆ. ನಾನು ಪತ್ರಿಕೋದ್ಯಮಕ್ಕೆ ಕಾಲಿಟ್ಟ ಕಾರಣ ಅನೇಕ ಬಾರಿ ಇವರ ಭೇಟಿ ನನ್ನ ಭಾಗ್ಯ.

ಆತ್ಮೀಯತೆಯಿಂದ ಮಾತನಾಡಿಸಿದರು. ಚಿಕ್ಕವನಾದ ನನಗೆ ಮಂಡ್ಯದಲ್ಲಾದ ಮೊದಲ ಭೇಟಿಯ ಬಗ್ಗೆ ಉಳಿದಿರುವ ಜ್ಞಾಪಕ. ಅವರ ಬಗ್ಗೆ ಗೌರವ ಹೆಚ್ಚಾಯಿತು.

ಅನಂತರ ಅನೇಕ ಬಾರಿ ಭೇಟಿಮಾಡಿದ್ದೇನೆ. ಅವರನ್ನು ಆಲಿಸಿದ್ದೇನೆ. ಕಲಿತಿದ್ದೇನೆ.

ಜೊತೆಗೆ ನಕ್ಕಿದ್ದೇನೆ. ನಗದೆ ಇವರೊಡನೆ ಮಾತು ಅಸಾಧ್ಯ ಇತರರನ್ನುನಗಿಸುವ ಭಾಗ್ಯ ಎಷ್ಟು ಮಂದಿಗಿದೆ ?

ಮಂಡ್ಯಜಿಲ್ಲೆಯ ಬಗ್ಗೆ ಇರುವಷ್ಟೇ, ಭೂಮಂಡಲದ ಬಗ್ಗೆ ಅಭಿಮಾನ ಈ ಜ್ಞಾನ, ಈ ಕಳಕಳಿ, ಉದ್ದಕ್ಕೂ "ಅಲ್ಲಾಂದ್ರೆ" ಎಂದು ಮನಸೆಳೆಯುವ ರಾಗದಿಂದ ಆರಂಭಿಸಿ, ತಿಳಿಹಾಸ್ಯದಲ್ಲಿ ತೇಲುತ್ತ ಅಲ್ಲಲ್ಲಿ ತಿವಿತ, ಕರಾಟೆ, ವ್ಯಂಗ್ಯ ಮೆಚ್ಚುಗೆಗಳ ಮೈಲಿಗಲ್ಲುಗಳನ್ನು ನೆಡುತ್ತ ಇವರು ಸಾಗಿದರೆ, ಕಾಲ ಮರೆಯುತ್ತೇವೆ. ಆದರೆ ಕಲಿತಿರುತ್ತೇವೆ.

ಒಮ್ಮೆ ಭೇಟಿ ಅಲ್ಪಕಾಲದ್ದೆ. ಅಲ್ಲಿ ಇಲ್ಲಿ ಅಡ್ಡಾಡಿ ಇವರು ಕುವೆಂಪು ಅವರ ಶ್ರೀ ರಾಮಾಯಣದರ್ಶನಂ ಬಳಿ ಬಂದು ನಿಂತರು.

ಈ ಮಹಾಕಾವ್ಯದಲ್ಲಿ ಇವರು ಕಂಡ ದರ್ಶನವನ್ನು ಕಿವಿಗಳ ಮೂಲಕ ನೋಡುತ್ತಿದ್ದೆ.

ಸಹೃದಯಿ ಸಾಹಿತ್ಯ ಪ್ರೇಮಿ ಹಾಗೂ ವಿಮರ್ಶಕ ಕವಿಯ ಪ್ರತಿಭೆಯನ್ನು ಪಸರಿಸುತ್ತಾನೆ ಎಂಬುದು ಎಷ್ಟು ನಿಜ ಎಂದು ಆನಂದಿಸುತ್ತಿದ್ದೆ.

ಇವರಿಗೆ ರಾಜ್ಯ ವಯಸ್ಕರಶಿಕ್ಷಣ ಮಂಡಳಿಯ ಅಧ್ಯಕ್ಷರಾಗಿ ಕೆಲಸಮಾಡುವ

ಅವಕಾಶ ಒದಗಿತ್ತು. ಆಗ ಅವರು ಈ ಚಳುವಳಿಗೆ ನೀಡಿದ ಆಚಾರ-ವಿಚಾರಗಳ ಕೊಡುಗೆ ಅಸಾಮಾನ್ಯ.

ಇವರಿಗೆಲ್ಲಿಂದ ಬಂತು ಈ ದೃಷ್ಟಿ, ಇಂತಹ ಸಾಮರ್ಥ್ಯ ? ಇವರು ಪ್ರಥಮತಃ ದೇಶಾಭಿಮಾನಿ. ಅನಂತರ ಉಳಿದವು.

ಪರಿಸರ ಕುರಿತ ಚಿಂತನೆ ದೇಶಾಭಿಮಾನಿಯ ಗುಣ. ಇಂತಹ ಚಿಂತನೆ ಚತುರ ಮಾತುಗಾರಿಕೆಯ ಮೂಲಕ ಚಿಮ್ಮುವಾಗ ಕೇಳಿದವರು ಹಾಗೂ ಕೇಳಿಸಿಕೊಂಡವರು ಆನಂದ ಪಡೆಯದಿರಲು ಹೇಗೆ ಸಾಧ್ಯ ? ಲಾಭ ಪಡೆಯದಿರಲು ಹೇಗೆ ಸಾಧ್ಯ ?

ಈಗ, ಮಂಡ್ಯವನ್ನ ನೆನೆಸಿಕೊಂಡಾಗ ಅದರ ಮೂಲಕ ಹಾದು ಹೋಗುವಾಗ, ನಾನು ಅನುಭವಿಸುವ ಸೆಳೆತಗಳಲ್ಲಿ ಇವರೊಬ್ಬರು.

ಹಿರಿಯರಾದ ಶ್ರೀ ಪಿ. ಎನ್. ಜವರಪ್ಪಗೌಡರು ಬಹುಕಾಲ ಬಾಳಲಿ. ಪರಿಸರ ವನ್ನು ನಗಿಸುತ್ತಿರಲಿ, ನಡುಗಿಸುತ್ತಿರಲಿ, ಎಂದು ಅವರಿಗೆ ಆ ಚೈತನ್ಯ ನೀಡಿರುವ ಚೇತನವನ್ನು ಪ್ರಾರ್ಥಿಸುತ್ತೇನೆ.

**ಎಸ್. ವಿ. ಜಯಶೀಲರಾವ್**

# ಬದುಕಿಗೊಂದು ಆದರ್ಶ

ಮಂಡ್ಯಜಿಲ್ಲೆಯ ನಾಗಮಂಗಲ ಭೌಗೋಳಿಕವಾಗಿ ಈ ಜಿಲ್ಲೆಗೇ ಸೇರಿದ್ದರೂ, ಸಾಂಸ್ಕೃತಿಕವಾಗಿ ತನ್ನನ್ನು ಪ್ರತ್ಯೇಕವಾಗಿಯೇ ಗುರುತಿಸಿಕೊಳ್ಳುತ್ತ ಬಂದಿದೆ. ಬೆಂಗಾಡಾದ ಈ ತಾಲ್ಲೂಕು ಬದುಕುವವರಿಗೊಂದು ಸವಾಲಾಗಿ ನಿಂತಿದೆ. ಇಲ್ಲಿಯ ಜನ ನಿತ್ಯ ಹೋರಾಟಗಾರರು, ಸಾಹಸಪ್ರಿಯರು. ಹುಟ್ಟಿನೊಡನೆಯೇ ಸಾಹಸದತ್ತ ಹೆಜ್ಜೆ ಇಡಲು ಪ್ರಯತ್ನಿಸುವ ನಾಗಮಂಗಲದ ಜನ ನಮ್ಮ ಬದುಕಿಗೊಂದು ಆದರ್ಶ. ಈ ನೆಲದಲ್ಲಿಯೇ ಬದುಕನ್ನರಸಿ ಕಂಗಾಲಾದ ಇಲ್ಲಿಯ ಜನ ಇಂದು ಎಲ್ಲ ಕಡೆಯಲ್ಲಿಯೂ ಹರಡಿ ಹೋಗಿ, ಅಲ್ಲಲ್ಲಿ ತಮ್ಮ ನೆಲದ ಕಂಪನ್ನು ಪಸರಿಸುತ್ತ, ನಾಗಮಂಗಲಕ್ಕೆ ವಿಸ್ತೃತತೆಯನ್ನು ತಂದು ಕೊಡುತ್ತಿರುವುದು ಅಭಿಮಾನಾಸ್ಪದವಾದ ವಿಷಯ. ಕರ್ನಾಟಕದ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ತನ್ನದೇ ಆದ ವಿಶಿಷ್ಟ ಕೊಡುಗೆ ನೀಡಿರುವ ನಾಗಮಂಗಲವನ್ನು ಗಣನೆಗೆ ತಂದುಕೊಳ್ಳದೆ ಮುಂದಡಿಯಿಡಲಾಗದು. ಮಳೆಯನ್ನೇ ನಂಬಿ ಬದುಕುತ್ತಿರುವ ಇಲ್ಲಿಯ ಜನ ಯಾವ ಸಂದರ್ಭದಲ್ಲೂ ಪೂರ್ಣವಾಗಿ ಬಾಡಿ ಹೋಗದ 'ಗರಿಕೆ ಹುಲ್ಲ'ನ್ನು ನೆನಪಿಗೆ ತರುತ್ತಾರೆ, ಇಂತಹ ತಾಲ್ಲೂಕಿನಲ್ಲಿ ಹುಟ್ಟಿದ ಜವರಪ್ಪಗೌಡರು ಬದುಕನ್ನರಸಹೋಗಿ ಜೀವನದಲ್ಲಿ ಸಫಲತೆಯನ್ನು ಕಂಡುಕೊಂಡವರು.

ಕರ್ನಾಟಕದಲ್ಲಿನ ಸ್ವಾತಂತ್ರ್ಯ ಚಳುವಳಿಯ ಪರಿಚಯವಿರುವ ಜನಕ್ಕೆ ಜವರಪ್ಪಗೌಡರ ಹೆಸರು ಅಪರಿಚಿತವೇನಲ್ಲ. ದೇಶದ ಸ್ವಾತಂತ್ರ್ಯಹೋರಾಟಕ್ಕೆ ಮಂಡ್ಯಜಿಲ್ಲೆ ನೀಡಿದ ಕಾಣಿಕೆಗಳಲ್ಲಿ ಶ್ರೀ ಜವರಪ್ಪಗೌಡರೂ ಒಬ್ಬರು. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಬದುಕಿಗೆ ಕೊಂಡಿಯಂತಿರುವ ಶ್ರೀ ಜವರಪ್ಪಗೌಡರು ಮಂಡ್ಯ ಜಿಲ್ಲೆಯ ಇಂದಿನ ಪೀಳಿಗೆಗೂ ಪರಿಚಿತರು.

'ಅನುಭವ ಮನುಷ್ಯನನ್ನು ರೂಪಿಸುತ್ತದೆ' ಎಂಬ ಮಾತಿಗೆ ಶ್ರೀಗೌಡರು ಜೀವಂತ ನಿದರ್ಶನ. ಇಂದು ಇಳಿವಯಸ್ಸಿನ ಅಂಚಿನಲ್ಲಿರುವ ಇವರ ಲವಲವಿಕೆ ಇಂದಿನ ಯುವಕರನ್ನು ನಾಚಿಸುತ್ತದೆ.

ಶ್ರೀ ಪಿ. ಎಸ್. ಜವರಪ್ಪಗೌಡರನ್ನು ನಾನಿಂದು ಎರಡು ಕಾರಣಗಳಿಗಾಗಿ ಜ್ಞಾಪಿಸಿಕೊಳ್ಳುತ್ತೇನೆ. ಒಂದು, ಸ್ವಾತಂತ್ರ್ಯಹೋರಾಟದಲ್ಲಿ ನಿರಂತರವಾಗಿ ಭಾಗವಹಿಸಿದ್ದಕ್ಕಾಗಿ, ಎರಡನೆಯದು ಸ್ವಾತಂತ್ರ್ಯಾನಂತರದ ಮಂಡ್ಯಜಿಲ್ಲೆಯ ರಾಜಕಾರಣದಲ್ಲಿ ಪೌರೋಹಿತ್ಯವನ್ನು ವಹಿಸಿದ್ದಕ್ಕಾಗಿ. ಮಂಡ್ಯಜಿಲ್ಲೆ ಸ್ವಾತಂತ್ರ್ಯಾನಂತರದ ರಾಜಕಾರಣದಲ್ಲಿ ತನ್ನದೇ ಆದ ಪ್ರಭಾವವನ್ನು ಹೊಂದಿತ್ತು. ಇಲ್ಲಿಯ ರಾಜಕಾರಣಿಗಳು ತಮ್ಮ ಮತ್ತು ಗಮ್ಮತ್ತುಗಳಿಂದ, ರಚನಾತ್ಮಕ ಹಾಗೂ ಕ್ರಿಯಾಶೀಲ ಚಟುವಟಿಕೆ

ಗಳಿಂದ ನಾಡಿನಲ್ಲಿ ಹೆಸರಾದವರಾಗಿದ್ದರು. ಇಂಥವರ ಜೊತೆ ಜೊತೆಯಲ್ಲಿಯೇ ಸಾಗಿದ ಶ್ರೀಯುತರು ನೇರ ರಾಜಕಾರಣದಲ್ಲಿ ತೊಡಗಲಿಲ್ಲ. ಆದರೆ ರಚನಾತ್ಮಕ ರಾಜಕಾರಣಿಗಳ ಜೊತೆಯಲ್ಲಿರುವುದನ್ನು ಮರೆಯಲಿಲ್ಲ.

ಸ್ವಾತಂತ್ರ್ಯಸಂಗ್ರಾಮಕ್ಕಾಗಿ ಗಾಂಧೀಜಿಯ ಕರೆ ಹಳ್ಳಿ ಹಳ್ಳಿಯನ್ನು ತಲುಪಿದಾಗ ಹಳ್ಳಿಯ ಹೈದನಾಗಿದ್ದ ಗೌಡರು ಆ ವಯಸ್ಸಿನಲ್ಲಿಯೇ ರಾಷ್ಟ್ರದ ಬಗೆಗೆ ಅಭಿಮಾನ ತಾಳಿದ್ದು, ಅದರ ಫಲವಾಗಿ ಸ್ವಾತಂತ್ರ್ಯ ಬರುವ ತನಕ ಅನೇಕ ವರ್ಷಗಳನ್ನು ಜೈಲಿನಲ್ಲೇ ಕಳೆದದ್ದು ಹೆಗ್ಗಳಿಕೆಯ ವಿಷಯ. ನಾಗರಿಕತೆಯ ಕುರುಹುಗಳಾದ ಸಾರಿಗೆ ಸಂಪರ್ಕಗಳು ವಿರಳವಾಗಿದ್ದ ಆ ಕಾಲದಲ್ಲಿ ಖಾದಿ ಮತ್ತು ಸ್ವಾತಂತ್ರ್ಯದ ಪರವಾಗಿ ಹಳ್ಳಿ ಹಳ್ಳಿಯನ್ನು ಕಾಲುನಡಿಗೆಯಲ್ಲೇ ಸುತ್ತಿ ಪ್ರಚಾರ ಮಾಡಿದ್ದು ಇವರ ಸಾಹಸಪ್ರಿಯತೆಗೊಂದು ನಿದರ್ಶನ.

ಸ್ವಾತಂತ್ರ್ಯಾನಂತರದ ಮಂಡ್ಯಜಿಲ್ಲೆಯ ಚರಿತ್ರೆಯಲ್ಲಿ ಶ್ರೀ ಕೆ. ವಿ. ಶಂಕರಗೌಡರ ಹೆಸರು ಹೆಚ್ಚು ಉಲ್ಲೇಖಿಸೀಯ. ಶ್ರೀ ಶಂಕರಗೌಡರ ರಚನಾತ್ಮಕ ಕಾರ್ಯಗಳಿಗೆ, ಹೃದಯ ವೈಶಾಲ್ಯಕ್ಕೆ ಮನಸೋತ, ಸ್ವಾತಂತ್ರ್ಯ ಹೋರಾಟಗಾರ ಜವರಪ್ಪಗೌಡರು ಶಂಕರಗೌಡರನ್ನು ನೆರಳಿನಂತೆಯೇ ಹಿಂಬಾಲಿಸಿದ್ದು ಇವರ ಆರೋಗ್ಯ ಪೂರ್ಣ ಮನಸ್ಸಿನ ದ್ಯೋತಕ. ಇದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ.

ಬದುಕನ್ನೆಂದೂ ಗೌಣವಾಗಿ ಕಾಣದೆ ಗಂಭೀರವಾಗಿ ತೆಗೆದುಕೊಂಡು, ಹೋರಾಟದಿಂದಲೇ ತಮ್ಮ ಬದುಕಿಗೊಂದು ಅಸ್ತಿತ್ವವನ್ನು ತಂದುಕೊಂಡ ಜವರಪ್ಪಗೌಡರ ವ್ಯಕ್ತಿತ್ವ ಯಾವುದೇ ಒಂದು ಮಿತಿಗೆ ಒಳಪಡುವುದಿಲ್ಲ. 'ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ' ಎಂಬ ಸರ್ವಜ್ಞನ ವಾಣಿಗೆ ಉದಾಹರಣೆಯಾಗಿರುವ ಶ್ರೀಯುತರು ಪರಿಚಿತವಲಯದಲ್ಲಿ ಮಾತುಗಾರರೆಂದೆ ಹೆಸರಾದವರು. ತಮ್ಮ ಮಾತಿನ ಮೋಡಿಗೆ ಯಾರನ್ನಾದರೂ ಸಿಕ್ಕಿ ಹಾಕಿಸಿಕೊಳ್ಳುವ ಇವರ ಜಾಣ್ಮೆ ಆಶ್ಚರ್ಯವನ್ನುಂಟುಮಾಡುವಂಥದ್ದು. ಯಾವುದೇ ವಿಷಯದ ಬಗ್ಗೆ ಮಾತಾಡುತ್ತಿರಲಿ ಇವರು ಆ ವಿಷಯದಲ್ಲಿ 'ಅಥಾರಿಟೀವ್' ಏನೋ ಎಂದು ಭ್ರಮೆಯುಂಟು ಮಾಡುವ 'ಇವರ ವಾಕ್‌ಶಕ್ತಿ' ಅಪರೂಪವಾದದ್ದು. ಮಾತನಾಡುವಾಗ ಪ್ರಾಚೀನ, ಅರ್ವಾಚೀನ ಕವಿಗಳ ಕಾವ್ಯಗಳ ಸಾಲು ಸಾಲುಗಳನ್ನು ಉದ್ಧರಿಸುವುದನ್ನು ಕಂಡಾಗ ಇವರ ಸಾಹಿತ್ಯಪ್ರೇಮ ಎಂಥದ್ದು? ಎಂಬ ಅರಿವುಂಟಾಗುತ್ತದೆ. ಜ್ಞಾಪಕಶಕ್ತಿಗೆ ತಲೆದೂಗಬೇಕಾಗುತ್ತದೆ.

ರಾಷ್ಟ್ರಕವಿ ಕುವೆಂಪು ಬಗ್ಗೆ ಅಪಾರವಾಗಿ ಮಾತನಾಡುವ ಶ್ರೀ ಜವರಪ್ಪಗೌಡರು ಆದಿಚುಂಚನಗಿರಿಯ ಮಠಾಧೀಶರ ಬಗೆಯೂ ಹೆಚ್ಚು ಒತ್ತು ಕೊಡುತ್ತಾರೆ. ಕುವೆಂಪು ಅವರಿಂದ ಪ್ರಭಾವಿತರಾಗಿ ವೈಜ್ಞಾನಿಕದೃಷ್ಟಿಕೋನವನ್ನು ಬೆಳಸಿಕೊಳ್ಳಬೇಕೆಂದು ಕರೆನೀಡುವ ಮತ್ತು ಪರಂಪರಾಗತವಾಗಿ ಬಂದ ಶ್ರೀಮಠದ ಸಂಪ್ರದಾಯಗಳಿಗೂ ಮಾರುಹೋಗುವ ಶ್ರೀ ಗೌಡರ ವ್ಯಕ್ತಿತ್ವ ನಮ್ಮಲ್ಲಿ ಮಿಶ್ರಪ್ರತಿಕ್ರಿಯೆಯನ್ನು ಉಂಟು

ಮಾಡುತ್ತದೆ. ಸಮಾಜದಲ್ಲುಂಟಾಗುವ ಯಾವುದೇ ಆರೋಗ್ಯಕರ ಬದಲಾವಣೆಯನ್ನು ಸ್ವಾಗತಿಸುವ ಶ್ರೀಯುತರು ಈ ಬದಲಾವಣೆಗಳನ್ನು ಬಿಗಿಯಾಗಿ ಅಪ್ಪಿಕೊಂಡಿದ್ದರೆ ಅವರ ವ್ಯಕ್ತಿತ್ವಕ್ಕೆ ಮತ್ತಷ್ಟು ಮೆರುಗು ಬರುತ್ತಿತ್ತು. ವಯಸ್ಸಿನ ಕಾರಣದಿಂದಲೋ ಏನೋ, ತಮ್ಮ ನಿಲುವುಗಳಲ್ಲಿ ದ್ವಂದ್ವವನ್ನು ತಂದುಕೊಳ್ಳುವ ಶ್ರೀ ಜವರಪ್ಪಗೌಡರು ಹೊಸಪೀಳಿಗೆಯವರಲ್ಲಿ ಅನುಮಾನ ಮೂಡಿಸುತ್ತಾರೆ. ಆದರೆ ಇವರ ರಾಷ್ಟ್ರಪ್ರೇಮ, ಸಾಹಿತ್ಯಪ್ರೇಮ ರಚನಾತ್ಮಕ ದೃಷ್ಟಿಕೋನವನ್ನು ಯಾರಾದರೂ ಮೆಚ್ಚಿಕೊಳ್ಳಲೇಬೇಕು.

ದೊರೆತ ರಾಜ್ಯ ವಯಸ್ಕರಶಿಕ್ಷಣ ಸಮಿತಿಯ ಅಧ್ಯಕ್ಷ ಪದವಿಯನ್ನು ಸಮರ್ಥವಾಗಿ ನಿರ್ವಹಿಸಿ ಅದಕ್ಕೊಂದು ಘನತೆ ತಂದುಕೊಡುವಲ್ಲಿ ಯಶಸ್ವಿಯಾದವರೆಂದೇ ಹೇಳಬಹುದು. ರಚನಾತ್ಮಕ ಚಟುವಟಿಕೆಗಳಿಂದ ವಯಸ್ಕರಶಿಕ್ಷಣ ಸಮಿತಿಗೆ ಒಂದು ಹೊಸ ಆಯಾಮ ತಂದು ಕೊಟ್ಟ ಶ್ರೀಯುತರು ಈ ನಾಡಿನಲ್ಲಿ ಎಲ್ಲರೂ ಅಕ್ಷರವಂತರಾದಾಗ ಮಾತ್ರ ಬದುಕಿನ ಹಲವಾರು ಸಮಸ್ಯೆಗಳು ನಿವಾರಣೆಯಾಗುತ್ತವೆ ಎಂದು ಅಚಲವಾಗಿ ನಂಬಿದವರು. ಶೂದ್ರಸಮುದಾಯಕ್ಕೆ ಹೊರೆಯಾಗಿದ್ದ, ಅನಿಷ್ಟಪಿಡುಗುಗಳಲ್ಲಿ ಒಂದಾದ ಆಡಂಬರದ ಮದುವೆಗಳಿಗೆ ಬದಲಾಗಿ ಸರಳಮದುವೆಗಳಿಗೆ ಪ್ರಚೋದನೆ ನೀಡುತ್ತ ಸಾಗಿರುವುದು—ಬದಲಾವಣೆಯನ್ನು ಬಯಸುವ ಇವರ ಮನೋಭಾವಕ್ಕೊಂದು ನಿದರ್ಶನ.

ಶ್ರೀ ಜವರಪ್ಪಗೌಡರ ಅತಿಥಿಸತ್ಕಾರವನ್ನಂತೂ ಕಡೆಗಣಿಸುವಂತಿಲ್ಲ. ನಾಡಿನ ಬಹುತೇಕ ಸಾಹಿತಿಗಳಿಗೆ, ವಿಮರ್ಶಕರಿಗೆ. ಸಂಘಟನಕಾರರಿಗೆ ಪರಿಚಿತವಿರುವ ಮಂಡ್ಯದ ಇವರ ಮನೆ, ಮಕ್ಕಳು, ಮೊಮ್ಮಕ್ಕಳು, ಅಳಿಯಂದಿರು ಮತ್ತಿನ್ನಿತರ ಬಂಧುಗಳಿಂದ ಸದಾ ಗಿಜಿಗುಟ್ಟುತ್ತಿರುವ ತಾಣ. ಪತ್ರಿಕಾಕರ್ತರಾಗಿ ವೃತ್ತಿಯನ್ನು ಪ್ರಾರಂಭಿಸಿದ ಜವರಪ್ಪಗೌಡರು ಆ ಕ್ಷೇತ್ರದಲ್ಲೇ ಮುಂದುವರಿದಿದ್ದರೆ ಇಂದು ಕರ್ನಾಟಕದ ಪತ್ರಿಕಾ ಪ್ರಪಂಚದಲ್ಲಿ ಅದ್ವಿತೀಯರೆನಿಸುತ್ತಿದ್ದರೋ ಏನೋ, ಕಾರಣ ಪತ್ರಕರ್ತನ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡಿರುವುದು. ಯಾವುದೇ ವಿಷಯಗಳನ್ನು ಮನಸ್ಸು ಮಾಡಿದರೆ ವೈಭವೀಕರಿಸಿ ಅಥವಾ ತುಚ್ಛೀಕರಿಸಿ. ಜನಸಾಮಾನ್ಯರನ್ನು ನಂಬಿಸುವ ಕಲೆಯನ್ನು ಕರಗತ ಮಾಡಿಕೊಂಡಿರುವ ಶ್ರೀ ಜವರಪ್ಪಗೌಡರು—ವಯಸ್ಸಿನ ಅಂತರವನ್ನು ಮರೆತು ಎಲ್ಲರೊಡನೆ ಬೆರೆಯುತ್ತಾರೆ.

ಚಿಕ್ಕಂದಿನಲ್ಲಿಯೆ ಇವರ ಹೆಸರು ಕೇಳಿದ್ದ ನನಗೆ ಅಧ್ಯಾಪಕನಾದ ಮೇಲೆ ತುಂಬ ಹತ್ತಿರ ಕಾಣುವಂತಾಯಿತು. ಭೇಟಿಯಾದಾಗಲೆಲ್ಲ ನನ್ನಲ್ಲಿ ಹೊಸ ಹೊಸ ಭಾವನೆಗಳನ್ನು ಉಂಟುಮಾಡುವ ಇವರ ವ್ಯಕ್ತಿತ್ವ ಅಂದೂ ಇಂದೂ ನನಗೆ ಸಮಸ್ಯೆಯಾಗಿಯೇ ಉಳಿದಿದೆ.

**ಬಿ. ಜಯಪ್ರಕಾಶಗೌಡ**

# ನನ್ನ ತಂದೆ

ನನ್ನ ತಂದೆಗೆ ಗಂಡುಮಕ್ಕಳಲ್ಲಿ ನಾನೇ ಹಿರಿಯವನು. ಇಬ್ಬರು ಅಕ್ಕಂದಿರ ಹಿಂದೆ ಬಂದವನು. ಬೆಳಗೆದ್ದರಾಯಿತು, ಜನರ ಮೇಲೆ ಜನ ತಂದೆ ನೋಡಲು ಬರುತ್ತಾರೆ. ಇಂದಿಗೂ ಬರುತ್ತಲೇ ಇದ್ದಾರೆ. ಬಂದವರು ಯಾರೇ ಆಗಲೀ ತಾಯಿಯನ್ನು ಕರೆದು ಪರಿಚಯಿಸುವುದು ಪದ್ಧತಿ.ಬಂದವರನ್ನು ಇವರು ನನ್ನ ಆತ್ಮೀಯರಲ್ಲೊಬ್ಬರು ಎಂದು ಪರಿಚಯಿಸುವ ವಾಡಿಕೆ. ಪರಿಚಯ ಮಾಡುವಾಗ ತಂದೆ ಯಾವುದೇ ಪದ ಮರೆಯಬಹುದು 'ಆತ್ಮೀಯರು' ಎನ್ನುವ ಪದ ಮರೆತವರಲ್ಲ. ನನಗಾಗಲೇ 36 ವರ್ಷ ತುಂಬಿದೆ. ತಂದೆಯವರ ಆತ್ಮೀಯ ಗೆಳೆಯರೆಲ್ಲರ ಪರಿಚಯವಾಗಿದೆ. ತಂದೆಯನ್ನು ಕೇಳಿ ಬಂದವರನ್ನು ಆತ್ಮೀಯವಾಗಿ ಕೂರಿಸಿ ತಂದೆಗೆ ವರದಿ ಮಾಡಬೇಕು. ಎಳ್ಳಷ್ಟು ತಪ್ಪಿದರೂ ತಂದೆಗೆ ಮೂಗಿನ ಮೇಲೆ ಕೋಪ ಕಾಣಿಸಿಕೊಂಡು ಬಿಡುತ್ತದೆ.

ನನ್ನ ತಂದೆಯವರು ಪತ್ರಿಕೋದ್ಯಮಿ. ಪತ್ರಿಕೆಯವರು ಎಂದರಾಯಿತು ಜನಕ್ಕೆ ಎಲ್ಲವನ್ನು ತಿಳಿದವರೆಂದೇ ಭಾವನೆ. ತಮ್ಮ ಸಮಸ್ಯೆಗಳಿಗೆ ಪರಿಹಾರ ಕೇಳಲು ಬರುವವರು ಈ ಗುಂಪಿನಲ್ಲಿ. ಅಯ್ಯೋ ನಿನ್ನ ಸಮಸ್ಯೆ ನನಗೆ ಒದಗಿದರೂ, ನಾನು ಸಮಸ್ಯೆ ಬಗೆಹರಿಸಿಕೊಳ್ಳಲು ಹೋಗುವುದು ಲಾಯರಲ್ಲಿಗಲ್ಲವೆ ? ಎಂದು ಹೇಳಿ ಲಾಯರು ಮನೆ ತೋರಿಸಿ ಅವರಿಗೊಂದು ಕಾಗದ ಬರೆದು ಈ ಕಾಗದ ತಂದಿರುವಾತ ನನ್ನ ಆತ್ಮೀಯನೆಂದು ಬರೆದು ಕಳುಹಿಸುವರು. ಸ್ವತಃ ಸ್ವಾತಂತ್ರ್ಯಹೋರಾಟಗಾರರಾದ ತಂದೆಯನ್ನು ಕಾಣಲುಬರುವ ಸ್ವಾತಂತ್ರ್ಯಸೈನಿಕರು, ಸಾಮಾಜಿಕ ಕಾರ್ಯಕರ್ತರು ತಂದೆಯವರಲ್ಲಿ ಸಾಮಾಜಿಕಸಮಸ್ಯೆಗಳ ಪರಿಹಾರ ಮಾರ್ಗ ಕೇಳುವವರು, ಪತ್ರಿಕಾವರದಿಗಾರರಾದ ತಂದೆಗೆ ಪತ್ರಿಕೆಯಲ್ಲಿ ಪ್ರಕಟಿಸಲು ವರದಿತರುವ ಸಂಘ ಸಂಸ್ಥೆಗಳವರು, ಸಾಹಿತ್ಯಕ್ಷೇತ್ರದಲ್ಲಿ ಕೈ ಆಡಿಸುವುದರಿಂದ ಕೆಲವು ವಿಶಿಷ್ಟ ವ್ಯಕ್ತಿಗಳ ಕೃತಿಗಳನ್ನು ಕೇಳಿ ಬರುವವರು ಅದೆಷ್ಟು ಸಾರಿ ಕುವೆಂಪು ಕೃತಿಗಳನ್ನು ಕೊಂಡು ತಂದಿದ್ದಾರೊ ಹೇಳಲಾಗದು.

ನಾಲೆಗೆ ನೀರು ಬಂದಿಲ್ಲ ನಾಟಿ ಆರಂಭವಾಗಿದೆ, ಕಿತ್ತ ಪೈರು ಒಣಗುತ್ತಿದೆ ಇಂಜಿನಿಯರಿಗೆ ಫೋನ್ ಮಾಡಿ ಎನ್ನುವವರು, ವಿದ್ಯಾರ್ಥಿಗಳು. ಸರ್ಕಾರದಿಂದ ಸಾಲ ಸಿಗದೆ ಮೋಸವಾಗಿದೆ ಎಂದು ದೂರು ತರುವವರು, ಶ್ರೀ ಆದಿಚುಂಚನಗಿರಿ ಸ್ವಾಮಿಗಳನ್ನು ನಮ್ಮೂರ ಕಾರ್ಯಕ್ರಮಕ್ಕೆ ಕರೆಯಬೇಕಾಗಿದೆ. ಅವರನ್ನು ನೋಡಲು ಎಲ್ಲಿ ಸಾಧ್ಯ ? ಫೋನ್‌ನಲ್ಲಿ ತಿಳಿದುಕೊಳ್ಳಿ ಎನ್ನುವವರು. ಸರಳಮದುವೆಗೆ ನೇತೃತ್ವ ವಹಿಸಲು ಆಹ್ವಾನಿಸಲು ಬರುವವರು ಹೀಗೆ ನಾನಾ ವರ್ಗದ ಜನ ತಂದೆಯನ್ನು

ನೋಡಲು ಬರುತ್ತಾರೆ.

ಇಷ್ಟು ಜನಕ್ಕೂ ಇಲ್ಲ ಎನ್ನದೆ ನಿಭಾಯಿಸಿ ಕಳುಹಿಸುವರು ತಂದೆ. ಒಳಗೆ ಬಂದವರು ಎಷ್ಟು ಜನ ಎಂಬುವದನ್ನು ನೋಡಿದ ಸೊಸೆ, ತಂದೆ ಬಳಿ ಆಸೀನರಾಗುವ ಮುನ್ನವೇ ಕುಡಿಯಲು ಏನು ತರಲಿ ಕಾಫಿ ಕೊಡಲೇ ಸಕ್ಕರೆ ಹಾಕಬಹುದೇ ಹಾಲು ಕೊಡಲೇ, ಮಜ್ಜಿಗೆ ಕೊಡಲೇ ಎಂದು ಯಾವುದಾದರೂ ಒಂದನ್ನು ಅತಿಥಿಗೆ ನೀಡುವ ಅಭ್ಯಾಸವನ್ನು ಅತ್ತೆ ಜೊತೆ ಸೊಸೆಯಂದಿರು ರೂಢಿ ಮಾಡಿಕೊಂಡಿದ್ದಾರೆ.

ಭಿಕ್ಷುಕರು ಬಂದು 'ತಾಯಿ' ಎಂದು ಕೂಗಿದ ಕೂಡಲೇ ಭಿಕ್ಷ ಹಾಕಬೇಕು. ಏನೋ ಮಕ್ಕಳ ಗಲಾಟೆಯಲ್ಲಿ ಮುಂದೆ ಹೋಗಯ್ಯ ಎನ್ನುವಂತಿಲ್ಲ ಸೊಸೆ. ಭಿಕ್ಷುಕನ ರೂಪದಲ್ಲಿ ಬಂದಿರುವವ ನಾರಾಯಣನೋ ಭೈರವನೋ ಅಥವಾ ತಿರುಪತಿ ತಿಮ್ಮಪ್ಪನೋ ಆಗಿರಬಹುದು. ಅದೇನು ಧೈರ್ಯ ನಿನಗೆ ಮುಂದೆ ಹೋಗು ಎಂದು ಹೇಳಲು. ನೋಡು ನಿನಗೆ 10 ರೂಪಾಯಿ ಕೊಡುತ್ತೇನೆ. ನೀನು ಇಡೀ ಬೀದಿ ಉದ್ದಕ್ಕೂ ಹೋಗಬೇಡ. ನಾಲ್ಕಾರು ಮನೆಬಾಗಿಲಿಗೆ ಹೋಗಿ ತಾಯಿ ಭಿಕ್ಷ ಎಂದು ಕೇಳಿ ಬಾ ನಿನ್ನ ಧೈರ್ಯನೋಡುತ್ತೇನೆ. ಭಿಕ್ಷುಕ ಧೈರ್ಯದಲ್ಲಿ ನೆಪೋಲಿಯನ್ ಬೊನೋ ಪಾರ್ಟ್ ಮೀರಿದ ಮಹಾದಂಡನಾಯಕ. ಹೀಗೆ ನಾನಾ ರೀತಿಯಲ್ಲಿ ಕವಿಗಳ ಕೃತಿಗಳಿಂದ ಉದಹರಿಸಿ ಸೊಸೆಯಂದಿರು ಬೇಜಾರು ಮಾಡಿಕೊಳ್ಳದಂತೆ ನಕ್ಕು ನಗಿಸುತ್ತ ಅವರ ಮನಸವನ್ನು ಸ್ಪಂದಿಸುವ ಒಂದು ಕಲೆ ತಂದೆಗೆ ಹುಟ್ಟಿನಿಂದ ಬಂದುದು.

ತಂದೆಯವರು ಊಟ ಮಾಡುವ ಸಮಯದಲ್ಲಿ ಬಂದ ಅತಿಥಿಗಳನ್ನು ತಂದೆ ಊಟ ಮಾಡುತ್ತಾರೆ ವಿಶ್ರಮಿಸಿಕೊಳ್ಳಿ ಎಂದು ವರಾಂಡದಲ್ಲಿ ಕೂರಿಸುವ ಹಾಗಿಲ್ಲ, ಬಂದವರನ್ನು ತಂದೆ ಊಟಮಾಡುವ ಮೇಜದ ಬಳಿಯೇ ಕೂರಿಸಬೇಕು. ಬಂದವರನ್ನು ಆಯ್ತು ಹಿಂದಿಡಿದು ಮಾತನಾಡೋಣಾ ಊಟಮಾಡಿ ಮೊದಲು. ಮಗು ತಟ್ಟೆ ಹಾಕಮ್ಮ ಎನ್ನುತ್ತಾರೆ. ಬಂದವನು ಊಟಮಾಡಿದ್ದೇನೆಂದರೂ ಅನೇಕ ಸಲ ಅವರನ್ನು ಬಿಡದೆ ಕಾಳು ಸೊಪ್ಪಾದರೂ ತಿನ್ನಿ. ಇಂದು ತಾನೇ ತೋಟದಿಂದ ತಂದ ತಾಜಾ ಸೊಪ್ಪು ಹೀಗೆ ಹೇಳಿ ತಿನ್ನಿಸಿ ಮಜ್ಜಿಗೆಯಾದರೂ ಕುಡಿಸಿ ಅವರ ಅಹವಾಲನ್ನು ಕೇಳಿ ಪರಿಹಾರ ಸೂಚಿಸಿ ಬೀಳ್ಕೊಳ್ಳುವುದು ರೂಢಿಮೂಲವಾಗಿ ಹೋಗಿದೆ, ತಂದೆಯವರಿಗೆ. ಹೀಗೆ ಬಂದು ಹೋಗುವ ಅತಿಥಿಗಳನ್ನು ಉದಾರವಾಗಿ ಮಾತನಾಡಿಸಿ ಕಳುಹಿಸುವ ತಂದೆಗೆ ನಾವು ಶಾಲೆಗೆ ಹೋಗುತ್ತಿದ್ದ ಕಾಲದಲ್ಲಿ ನೀನು ಯಾವ ತರಗತಿಯಲ್ಲಿ ಓದುತ್ತಿದ್ದೀಯೆ ? ಪರೀಕ್ಷೆಯಲ್ಲಿ ನೀನು ಪಡೆದ ಅಂಕಗಳೆಷ್ಟು ? ಯಾವ ಸಬ್‌ಜೆಕ್ಟ್‌ನಲ್ಲಿ ಚೆನ್ನಾಗಿದ್ದೀಯೇ ? ಹೀಗೆ ನನ್ನನ್ನೇ ಆಗಲಿ ನನ್ನ ಅಕ್ಕಂದಿರನ್ನೇ ಆಗಲಿ, ತಮ್ಮಂದಿರನ್ನೇ ಆಗಲಿ 36 ವರ್ಷದಲ್ಲಿ ಒಂದೇ ಒಂದು ದಿನ ಪ್ರಶ್ನಿಸಿದವರಲ್ಲ. ಬಂದವರೇ ಆಕಸ್ಮಿಕ ಈ ಮಗ ಎಷ್ಟನೆಯವನು ಯಾವ ತರಗತಿಯಲ್ಲಿ ಓದುತ್ತಿದ್ದಾನೆ ಎಂದು ಗ್ರಹಚಾರವಶಾತ್ ಕೇಳಿಬಿಟ್ಟರೆ, ಲೋ, ಮಗು ಬಾರೋ ಇಲ್ಲಿ, ನೀನು

ಯಾವ ತರಗತಿಯಲ್ಲಿ ಓದುತ್ತೀ ಎಂದು ಕೇಳಿ, ಅವರಿಗೆ ಉತ್ತರಿಸುತ್ತಿದ್ದರು. ನಮ್ಮ ಶಾಲಾದಿನಗಳ ಪಠ್ಯಕಾರ್ಯಕ್ರಮಗಳನ್ನು ತುಂಬ ನಿಗಾಇಟ್ಟು ಎಲ್ಲರನ್ನು ಕೂರಿಸಿ ಪಾಠ ಓದಿಸುವುದು ತಪ್ಪಾದುದನ್ನು ತಿದ್ದುವುದು ನನ್ನ ತಾಯಿಯ ಪಾಲಿನ ಕರ್ತವ್ಯವಾಗಿತ್ತು. ಸರಿಯಾಗಿ ಓದದಿದ್ದ ಮಗನನ್ನೋ ಮಗಳನ್ನೋ ತಾಯಿ ದೂರಿದರೆ ಎಳ್ಳಷ್ಟು ಬೆಲೆ ಕೊಟ್ಟವರಲ್ಲ. ಶಾಲೆಯಿಂದ ಬಂದಿವೆ ಮಕ್ಕಳು, ಸ್ವಲ್ಪ ಆಟ ಆಡಿ ಬರಲಿ, ಎಂದು ಸಡಿಲವಾದ ಮಾತು ಆಡುವ ತಂದೆ ಮೇಲೆ ಬೆಂಕಿ ಕಾರುತ್ತಿದ್ದರು ತಾಯಿ. "ಬಿಡೇ ನಮ್ಮ ಮಕ್ಕಳೇಕೆ ? ಫೇಲಾಗುತ್ತಾರೆ. ನಾವೇನು ಯಾರ ಮಕ್ಕಳಿಗಾದರು ತೊಂದರೆ ಮಾಡಿದ್ದೇವೆಯೆ" ಎನ್ನುತ್ತ ಉದಾರವಾಗಿ ವೇದಾಂತ ಬೋಧಿಸುತ್ತಿದ್ದರು ತಾಯಿಗೆ. ಸದ್ಯ ತಾಯಿಯು ತಂದೆಯಂತಾಗಿದ್ದರೆ ನಮ್ಮ ವಿದ್ಯೆ ನೈವೇದ್ಯವಾಗುತ್ತಿತ್ತು

ದೇವರ ದಯೆ ನಾವ್ಯಾರೂ ಎಲ್ಲೂ ಅನುತ್ತೀರ್ಣರಾದವರಲ್ಲ. ಯಾರ್‍ಯಾರು ಏನು ವ್ಯಾಸಂಗ ಮಾಡಬೇಕೆಂದಿದ್ದರೋ ಅವೇ ಟೆಕ್ನಿಕಲ್ ಕೋರ್ಸ್‌ಗಳು ಮೆರಿಟ್ ಮೇಲೆ ದೊರೆತವು. ನೌಕರಿಯೂ ಅಷ್ಟೆ ತಾನಾಗೆ ಲಭ್ಯವಾದುವು. "ರೀ ಶಂಕರಗೌಡರಿಗೆ ಹೇಳಿ ಅವರ ಕಾಲೇಜಿನಲ್ಲಿ ನರಸಿಂಹನಿಗೆ (ನಮ್ಮ ಚಿಕ್ಕಪ್ಪನ ಮಗ) ಅಟೆಂಡರ್ ಕೆಲಸವಾದರೂ ಕೊಡಿಸಿ ಎಂದು ಕೇಳಿದರು ನನ್ನ ತಾಯಿ. ಶಂಕರಗೌಡರಿಗೆ ಹೇಳುವುದೇನಿದೆ. ನಾನೇ ಉಪಾಧ್ಯಕ್ಷನಲ್ಲವೆ. ನರಸಿಂಹನ ಕೆಲಸಕ್ಕೆ ಒಪ್ಪತ್ತು ಊಟಕ್ಕಿಲ್ಲದವರು ನನ್ನಲ್ಲಿ ನೆನ್ನೆಯಿಂದ ಬಂದು ದೈನೇ ಎನ್ನುತ್ತಿದ್ದಾರೆ. ನನ್ನ ಕೈ ನಡೆಯುತ್ತದೆಂದು ಆ ದರಿದ್ರರ ಬಾಳಿಗೆ ಕಲ್ಲುಹಾಕಿದರೆ ದೇವರು ಏನೆನ್ನುವುದಿಲ್ಲ", ಎಂದರು ತಂದೆ. ಸರಿ ತಾಯಿ ಹಿಡಿದಿದ್ದ ಚಂಬನ್ನು ಹಾಗೇ ಕೋಪದಿಂದ ಬಿಸಾಡಿಬಿಟ್ಟರು. ಅದನ್ನು ಲೆಕ್ಕಿಸಲೇ ಇಲ್ಲ. ಕಾಲೇಜ್ ಕೆಲಸಕ್ಕೆ ಸೇರಿಸಲು ಎಂದು ಕರೆತಂದ ನರಸಿಂಹನಿಗೆ ಮದುವೆಯಾಗಿ ಮಗುವಿದೆ, ಇಂದಿಗೂ ಆತನನ್ನು ಯಾವುದೇ ಕಾಲೇಜ್ ಜವಾನಿಕೆಗೂ ಸೇರಿಸಲು ನನ್ನ ತಂದೆ ಮನಸ್ಸು ಮಾಡದೆಹೋದ ಪ್ರಕರಣ ಇಂದಿಗೂ ಕಿರಿಯ ವಯಸ್ಕನಾದ ನನ್ನ ಮನದಲ್ಲಿ ಅಚ್ಚಳಿಯದೆ ಇರುವ ಪ್ರಸಂಗ.

ನನ್ನ ತಂದೆಗೆ ರಾಜ್ಯಮಟ್ಟದ ಅನೇಕ ಅಧಿಕಾರಿಗಳು ಪರಿಚಯಸ್ಥರು ಉಂಟು. ಅನೇಕ ಮಂದಿ ಮಂತ್ರಿಗಳು ಮನೆಗೆ ಭೋಜನಕ್ಕೆ ಬರುವುದು ವಾಡಿಕೆ. ಮಂತ್ರಿ ಬಂದರು ಅಧಿಕಾರಿಗಳು ಬಂದರು ಎನ್ನುವ ಭಿನ್ನ ಭೇದವಿಲ್ಲ. ಮನೆಯಲ್ಲಿ ಏನು ಅಡಿಗೆಯಾಗುತ್ತೊ ಅದನ್ನೇ ಉಣಬಡಿಸುವುದು ಇಂದಿಗೂ ನಡೆದು ಬರುತ್ತಿರುವ ವಾಡಿಕೆ.

ವಿದ್ಯಾಭ್ಯಾಸ ವಿಚಾರದಲ್ಲಿ ಮನೋಗತವನ್ನು ಈ ಮೊದಲೇ ತಿಳಿಸಿದ್ದೇನೆ. ನಮಗೆ ಮದುವೆ ಮಾಡಲು ಸೊಸೆಯಂದಿರನ್ನು ತರುವುದರಲ್ಲಿ ತಂದೆಗೆ ಹೆಚ್ಚಿನ ಕಾಳಜಿ, ತಾಯಿಯಾಗಲಿ ತಂದೆಯಾಗಲೀ ನಾಲ್ಕಾರು ಕನ್ಯೆಯನ್ನು ತೋರಿಸದೆ ಮದುವೆ ಮಾಡಿದ್ದಾರೆ. ಅವರೇ ನಾಲ್ಕಾರು ಕನ್ಯೆಯರನ್ನು ನೋಡಿ ಅವರಲ್ಲಿ ಒಬ್ಬಾಕೆಯನ್ನು

ಆಯ್ದು ನಮಗೆ ಆಯ್ದುಕೊಳ್ಳಲು ಹೇಳುತ್ತಿದ್ದರು. ಆಯ್ದುಕೊಳ್ಳಲು ತೋರಿಸಿದ್ದು ಒಂದೇ ಹೆಣ್ಣು ಎಂದ ಮೇಲೆ ಒಪ್ಪುವುದು ತಾನೆ. ತಂದೆ ತಾಯಿಯರು ಆಯ್ದ ಸೊಸೆಯರು ವಿದ್ಯಾವಂತರಾಗಿ, ಬಿದುರೆಂಬೊಳಗಲ ಚೆದುರೆಯರು, ಎನ್ನುವಂತೆ ಸುಂದರಿಯರು. ವಿನಯಶೀಲರು. ಬಂದಮನೆಗೆ ಹುಟ್ಟಿದಮನೆಗೆ ಕೀರ್ತಿ ಪ್ರಾಯರಾದವರು.

"ಅತಿಥಿ ದೇವೋಭವ"
"ದರಿದ್ರ ದೇವೋಭವ"

ಇದೇ ನನ್ನ ತಂದೆಯವರ ಗುರುಕೃಪ ನಿಲಯದ ಉಪನಿಷತ್ ಮಂತ್ರ, ನಾವೆಲ್ಲರೂ ಈ ಮಂತ್ರವನ್ನೇ ಸ್ವೀಕಾರ ಮಾಡಿಕೊಂಡು ತಂದೆ ತಾಯಿಯ ಜಾಡಿನಲ್ಲಿ ನಡೆಯುತ್ತಿದ್ದೇವೆ.

ಪಿ. ಜೆ. ಚೈತನ್ಯಕುಮಾರ್



# ಜನಾನುರಾಗಿ

ವ್ಯಕ್ತಿಯೊಬ್ಬ ಜನಾನುರಾಗವನ್ನು ಗಳಿಸಲು ಹಣ, ಅಧಿಕಾರ, ಅಂತಸ್ತುಗಳೇ ಬೇಕಾಗಿಲ್ಲ. ಅದಿಲ್ಲದೆಯೂ ಜೀವನದಲ್ಲಿ ತಾನು ಕೈಗೊಂಡ ಜನಹಿತಕಾರ್ಯಗಳಿಂದಾಗಿ ಜನಪ್ರೀತಿಯನ್ನು ಗಳಿಸಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿರುವ ಅಪರೂಪದ ವ್ಯಕ್ತಿ ಶ್ರೀಮಾನ್ ಪಿ. ಎಸ್. ಜವರಪ್ಪಗೌಡರು. ಶ್ರೀಯುತರು ಹುಟ್ಟಿದ್ದು ಬಡತನ ವನ್ನೇ ಹಾಸಿಹೊದೆಯುವ ಬಡ ಕುಟುಂಬದಲ್ಲಿ. ನಾಗಮಂಗಲದ ಯಾವುದೋ ಒಂದು ಹಳ್ಳಿಯಲ್ಲಿ ಜನ್ಮ ತಾಳಿದ ಈ ವ್ಯಕ್ತಿಯನ್ನು ಸಾರ್ವಜನಿಕರು ಗುರುತಿಸಿ ಸತ್ಕರಿಸಲು ಮುಂದಾಗಿದ್ದಾರೆ ಎಂದರೆ ಅವರಲ್ಲೇನೋ ವಿಶೇಷತೆ, ದೊಡ್ಡತನಗಳು ಇರಲೇಬೇಕು. ಸಾರ್ವಜನಿಕರ ಮನ್ನಣೆ ಸುಲಭವಾಗಿ ಸಿಕ್ಕುವಂಥದ್ದಲ್ಲ. ಅದಕ್ಕೆ ಸಾಧನೆಬೇಕು. ಶ್ರೀಮಾನ್ ಜವರಪ್ಪಗೌಡರ ಜೀವನಸಾಧನೆಯ ಕೆಲವು ಮುಖಗಳನ್ನು ಪರಿಚಯಿಸು ವುದು ನನಗೆ ಸಂತೋಷದ ವಿಷಯ.

ಜವರಪ್ಪಗೌಡರು ನಾಗಮಂಗಲ ತಾಲ್ಲೂಕಿನವರು ಎಂದು ಹೇಳಿದೆ. ಇಡೀ ಮಂಡ್ಯಜಿಲ್ಲೆಯಲ್ಲಿ ಆರ್ಥಿಕವಾಗಿ ಅತ್ಯಂತ ಹಿಂದುಳಿದ ತಾಲ್ಲೂಕು ಎಂದರೆ ನಾಗಮಂಗಲ. ಆರ್ಥಿಕ ಕೊರತೆಯ ಹೊರತಾಗಿ ಉಳಿದಂತೆ ನಾಗಮಂಗಲ ಹೆಸರುವಾಸಿಯಾದುದು. ಬಡತನವಿರುವಲ್ಲಿ ಛಲವಂತಿಕೆ, ಹಟ. ಕಷ್ಟಸಹಿಷ್ಣುತೆ, ಸಾಹಸಪ್ರವೃತ್ತಿಗಳು ಮನೆ ಮಾಡಿರುತ್ತವೆ. ನಾಗಮಂಗಲದವರು ಸಾಹಸಿಗರು. ರಾಜಕೀಯವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಈ ತಾಲ್ಲೂಕಿಗಿರುವ ಹಿರಿಮೆ ಮಂಡ್ಯದ ಬೇರಾವ ತಾಲ್ಲೂಕಿಗೂ ಇಲ್ಲ. ಇಂಥ ಹೆಮ್ಮೆಯ ನಾಗಮಂಗಲಕ್ಕೆ ಸೇರಿದ ಜವರಪ್ಪಗೌಡರಲ್ಲಿ ಸಹಜವಾಗಿಯೆ ಸಾಹಸ ಮನೋಭಾವ, ಪರೋಪಕಾರೀ ಪ್ರವೃತ್ತಿ, ಕಷ್ಟಸಹಿಷ್ಣುತೆ ಬೆಳೆದುಬಂದಿವೆ. ಅವುಗಳ ಬಲದಿಂದ ಗೌಡರು ತಮ್ಮ ವ್ಯಕ್ತಿತ್ವಕ್ಕೆ ಘನತೆಯನ್ನು ತಂದುಕೊಂಡಿದ್ದಾರೆ ಗೌರವ ಭಾಜನರಾಗಿದ್ದಾರೆ, ಪುರಸ್ಕಾರ ಪಡೆದಿದ್ದಾರೆ. ಮನ್ನಣೆ ಗಳಿಸಿದ್ದಾರೆ.

ಚಿಕ್ಕಂದಿನಲ್ಲಿಯೇ ಗಾಂಧಿಜೀಯವರ ಸ್ವಾತಂತ್ರ್ಯಾಂದೋಲನಕ್ಕೆ ಓಗೊಟ್ಟು ಜವರಪ್ಪಗೌಡರು ಅಹಿಂಸಾತ್ಮಕಚಳುವಳಿಯಲ್ಲಿ ಭಾಗವಹಿಸಿದರು. ಊರೂರು ಅಲೆದರು. ಜನೋದ್ರೇಕವಾಗುವಂಥ ಭಾಷಣಗಳನ್ನು ಮಾಡಿ ಗ್ರಾಮೀಣ ಜನತೆ ಯನ್ನು ಹುರಿದುಂಬಿಸಿದರು. ಅದರ ಪ್ರತಿಫಲ ಲಾಠಿ ಏಟು ಮತ್ತು ತುರಂಗವಾಸ. ಹೀಗೆ ಚಿಕ್ಕಂದಿನಲ್ಲಿಯೆ ಸಾಹಸಪ್ರವೃತ್ತಿಯನ್ನು ಮೈಗೂಡಿಸಿಕೊಂಡ ಗೌಡರು ಅಲ್ಲಿಂದ ಮಂಡ್ಯ ನಗರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು, ಹಲವು ಜನೋಪಯೋಗಿ ಕೆಲಸಗಳಲ್ಲಿ ತೊಡಗಿ ಮಂಡ್ಯದ ಪ್ರತಿಷ್ಠಿತ ಪುರುಷರಾಗಿ ರೂಪುಗೊಂಡರು.

ಮಂಡ್ಯನಗರದ ಯಾವುದೇ ಚಟುವಟಿಕೆಯಲ್ಲಿಯೂ ಜವರಪ್ಪಗೌಡರದು ಪ್ರಧಾನಪಾತ್ರ. ಅವರಿಲ್ಲದೆ ಮಂಡ್ಯದಲ್ಲಿ ಜರುಗುವ ಯಾವುದೇ ಕಾರ್ಯಕ್ರಮವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲದಷ್ಟು ತಾದಾತ್ಮ್ಯತೆ ಅವುಗಳಲ್ಲಿ. ಮದುವೆಯೇ, ಸ್ಮಶಾನಯಾತ್ರೆಯೇ, ರಾಜಕಾರಣ ಸಭೆ, ಸನ್ಮಾನ ಸಮಾರಂಭ, ಧಾರ್ಮಿಕ ಕಾರ್ಯಕ್ರಮ ಏನೇ ಇರಲಿ ಜವರಪ್ಪಗೌಡರು ಇದ್ದೇ ಇರುತ್ತಾರೆ. ಸಾರ್ವತ್ರಿಕ ಚಟುವಟಿಕೆಗಳಲ್ಲಿ ಜವರಪ್ಪಗೌಡರು ಎತ್ತಿದ ಕೈ. ಪಾದರಸದ ಚಟುವಟಿಕೆಯ ಈ ವ್ಯಕ್ತಿ ಹಿಡಿದ ಕೆಲಸವನ್ನು ಸುಸೂತ್ರವಾಗಿ ಮುಗಿಸದೆ ಬಿಡುವುದಿಲ್ಲ. ವೈಯಕ್ತಿಕವಾಗಿ ಎಷ್ಟೇ 'ಕಷ್ಟವಾದರೂ ವಹಿಸಿಕೊಂಡ ಜವಾಬ್ದಾರಿಯನ್ನು ನಿರ್ವಿಘ್ನವಾಗಿ ಮಾಡಿ ಮುಗಿಸುವುದರಲ್ಲಿ ಜವರಪ್ಪಗೌಡರನ್ನು ಬಿಟ್ಟರೆ ಇಲ್ಲ ಎನ್ನುವುದು ಮಂಡ್ಯದ ಮನೆ ಮಾತು. ಹೀಗಾಗಿ ಜವರಪ್ಪಗೌಡರು ಎಲ್ಲರಿಗೂ ಬೇಕು. ಹಾಗೆಯೇ ಜವರಪ್ಪಗೌಡರಿಗೆ ಎಲ್ಲರೂ ಬೇಕು.

ಹೀಗೆ ಹಲವು ದಶಕಗಳಿಂದ ಜನೋಪಯೋಗಿ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅವಿಶ್ರಾಂತವಾಗಿ ದುಡಿಯುತ್ತಿರುವ ಜವರಪ್ಪಗೌಡರದು ಪರಿಶುದ್ಧವಾದ ಬದುಕು. ಆರಕ್ಕೆ ಏರದ ಮೂರಕ್ಕೆ ಇಳಿಯದ ಇದ್ದುದರಲ್ಲಿ ತೃಪ್ತಿಪಡುವ ಸ್ವಭಾವ. ಪರಿಮಿತಿಗಳ ಮಧ್ಯದಲ್ಲಿಯೇ ಏನೋ ಸಮಾಧಾನ. ಬದುಕಿರುವಷ್ಟು ಕಾಲ ಸಮಾಜಕ್ಕೆ ತನ್ನಿಂದ ಸಾಧ್ಯವಾದಷ್ಟು ಸೇವೆಯನ್ನು ಸಲ್ಲಿಸಬೇಕೆಂಬುದು ಅವರ ಧ್ಯೇಯ ಬಯಕೆ, ಅದೇ ಅವರ ಆಸೆ ಮತ್ತು ಅಪೇಕ್ಷೆ.

ಸದ್ಯದ ಸಾಮಾಜಿಕ ಜೀವನವನ್ನು ಪರಿಭಾವಿಸಿದಾಗ ಪ್ರತಿಯೊಬ್ಬ ಮನುಷ್ಯನಿಗೂ ತನ್ನನ್ನು ಕ್ಷುಲ್ಲಕ ಕಾರಣಕ್ಕಾಗಿ ದ್ವೇಷಿಸುವ, ಏಳ್ಗೆಯನ್ನು ಸಹಿಸದ ಒಬ್ಬಿಬ್ಬರಾದರೂ ಇರುತ್ತಾರೆ. ಆದರೆ ಜವರಪ್ಪಗೌಡರು ಇದಕ್ಕೆ ಅಪವಾದ. ಅವರೊಬ್ಬ ಅಜಾತಶತ್ರು. ಚುನಾವಣೆ ಸಂದರ್ಭಗಳಲ್ಲಿ ಪಕ್ಷ ಪಂಗಡ ಎಂದು ಕೆಲಸಮಾಡಿದರೂ ಅನಂತರ ಮರುಗಳಿಗೆಯೆ ರಾಜಕೀಯ ಭಿನ್ನಾಭಿಪ್ರಾಯಗಳೆಲ್ಲವನ್ನೂ ಅತ್ತ ಸರಿಸಿ ಎಲ್ಲರೊಡನೆ ಒಂದಾಗುವುದು ಅವರ ಗುಣ. ರಾಜಕೀಯ ಭಿನ್ನಾಭಿಪ್ರಾಯವನ್ನೇ ಮುಂದುವರಿಸಿಕೊಂಡು ಹೋಗಲು ಇಷ್ಟಪಡುವುದಿಲ್ಲ. ಇದು ಪ್ರತಿಯೊಬ್ಬ ಸಮಾಜ ಸೇವಕನೂ ಅನುಸರಿಸಬೇಕಾದ ಆದರ್ಶ. ಇದರಿಂದಾಗಿ ಜವರಪ್ಪಗೌಡರು ಇವತ್ತಿಗೂ ಎಲ್ಲರೂ ಬಯಸುವ ಗೌರವಿಸುವ ಮನುಷ್ಯರಾಗಿ ಉಳಿದುಕೊಂಡು ಬಂದಿದ್ದಾರೆ. ದ್ವೇಷದಿಂದ ವಿನಾಶವೇ ಹೊರತು ಒಳಿತು ಸಾಧ್ಯವಿಲ್ಲ ಎಂಬುದು ಅವರ ನಂಬುಗೆ. ಇವರು ರಾಜಕಾರಿಣಿ ಅಲ್ಲ. ಆದರೆ ಮಂಡ್ಯದ ರಾಜಕಾರಿಣಿಗಳೆಲ್ಲ ಇವರನ್ನು 'ಮೇಷ್ಟ್ರೆ' ಎಂದು ಸಂಬೋಧಿಸುತ್ತಾರೆ. ಅಂಥ ಗೌರವದ ಸ್ಥಾನವನ್ನು ಮಂಡ್ಯದ ರಾಜಕಾರಿಣಿಗಳು ಇವರಿಗೆ ನೀಡಿದ್ದಾರೆ.

ಜವರಪ್ಪಗೌಡರ ಜನಪ್ರಿಯತೆಗೆ ಹಲವು ಕಾರಣಗಳಲ್ಲಿ ಅವರ ಮಾತುಗಾರಿಕೆಯೂ

ಒಂದು. ಅವರು ಚಾಣಾಕ್ಷಮಾತುಗಾರರು, ಮಾತಿನ ಮಲ್ಲರು : ಬಾಯಿಬಿಟ್ಟರೆ ಸಾಕು ವಾಕ್ಪ್ರವಾಹ ವಿರಾಮವಿಲ್ಲದೆ ಹರಿಯುತ್ತಿರುತ್ತದೆ. ಆದರೆ ಅವು ಅಸಾಮರ್ಥ್ಯೇಯ ನೊಬ್ಬನ ಖಾಲಿ ಬುರುಡೆಯಿಂದ ಬಂದಂಥ ಪೊಳ್ಳು ಮಾತುಗಳಲ್ಲ. ಆ ಮಾತುಗಳಲ್ಲಿ ಜೀವನಾನುಭವ ತುಂಬಿತುಳುಕುತ್ತಿರುತ್ತದೆ. ಸಾಹಿತ್ಯ, ರಾಜಕಾರಣ, ಆಧ್ಯಾತ್ಮ, ಇತಿಹಾಸ, ಸಂಸ್ಕೃತಿ ಯಾವುದೇ ವಿಷಯವಾಗಲಿ ಗಂಟೆಗಟ್ಟಲೆ ಯಾಕೆ ದಿನಗಟ್ಟಲೆ ಮಾತಾಡುವ ಶಕ್ತಿ ಜವರಪ್ಪಗೌಡರಿಗಿದೆ. ಇದೊಂದು ಅದ್ಭುತವೇ ಸರಿ. ಅವರು ಹೆಚ್ಚು ಓದಿದವರಲ್ಲ ; ಆದರೆ ಜೀವನಶಾಲೆಯಲ್ಲಿ ಕಲಿತ ವಿದ್ಯೆ ಸಮೃದ್ಧವಾಗಿದೆ. ಮಾತಿನ ಮಧ್ಯೆ ಅವರು ಉದಾಹರಿಸುವ ನುಡಿಗಟ್ಟುಗಳು, ಗಾದೆ ಮಾತುಗಳು, ಕಾವ್ಯದ ಸಾಲುಗಳು, ಗದ್ಯಭಾಗಗಳು ಅವರ ಓದಿನ ಹರವನ್ನು ಪರಿಚಯಿಸುವುದರ ಜೊತೆಗೆ ಅವರೆಂಥ ಮೇಧಾವಿ ಎಂಬುದನ್ನು ಮನಗಾಣಿಸುತ್ತದೆ. ಅವರ ಮಾತಿನ ಮೋಡಿಗೆ ಎಂಥವರೂ ಭಾವಪರವಶರಾಗಬೇಕು ಅಂತಹ ಅಯಸ್ಕಾಂತ ಶಕ್ತಿ ಇರುತ್ತದೆ ಅವರ ಮಾತಿಗೆ. ಅವರ ಈ ಮೇಧಾಶಕ್ತಿ ಬರವಣಿಗೆಯಲ್ಲಿ ಮೂಡಿಬಂದಿದ್ದರೆ ಇತರರೂ ಅದರ ಪ್ರಯೋಜನವನ್ನು ಪಡೆಯಬಹುದಾಗಿತ್ತು ; ಆದರೆ ಹಾಗಾಗಲಿಲ್ಲ. ಈಗಲೂ ಕಾಲ ಮಿಂಚಿಲ್ಲ. ಜೀವನಸಂಧ್ಯೆಯಲ್ಲಿರುವ ಜವರಪ್ಪಗೌಡರು ಮನಸ್ಸುಮಾಡಿ ತಮ್ಮ ಅನುಭವ ಸರ್ವಸ್ವವನ್ನೂ ಬರವಣಿಗೆಯಲ್ಲಿ ಮೂಡಿಸಿ ತನ್ಮೂಲಕ ಸಾಹಿತ್ಯಕ್ಕೂ ತಮ್ಮ ಕಿರುಕಾಣಿಕೆಯನ್ನು ಸಲ್ಲಿಸಿದ ಕೃತಕೃತ್ಯೆಗೆ ಕಾರಣವಾಗಲು ಈಗಲೂ ಸಾಧ್ಯವಿದೆ. ಈ ಬಗೆಗೆ ಅವರು ಆಲೋಚಿಸಬೇಕು.

ಜವರಪ್ಪಗೌಡರು ಕುವೆಂಪು ಪ್ರಿಯರು ಹಾಗೂ ಕುವೆಂಪುಸಾಹಿತ್ಯ ಪ್ರಿಯರು. ಕುವೆಂಪು ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಕಿರುಕವಿತೆಯಿಂದ ಮಹಾ ಕಾವ್ಯದವರೆಗೆ ರಾಷ್ಟ್ರಕವಿಗಳ ಎಲ್ಲ ಬರವಣಿಗೆಯನ್ನು ಅಭ್ಯಾಸ ಮಾಡಿರುವ ಜವರಪ್ಪ ಗೌಡರು ಒಬ್ಬ ಸಾಹಿತ್ಯದ ವಿದ್ಯಾರ್ಥಿ ಅಥವಾ ಅಧ್ಯಾಪಕನಿಗಿಂತ ಹೆಚ್ಚು ಪ್ರಭುತ್ವ ವನ್ನು ಪಡೆದಿದ್ದಾರೆ. ಕುವೆಂಪು ಅವರ ಹೆಸರೆತ್ತಿದರೆ ಸಾಕು ಮೈಮರೆತು ಮಾತಾಡುವ ಜವರಪ್ಪಗೌಡರು ಕುವೆಂಪುಸಾಹಿತ್ಯದಿಂದ ಉದಾಹರಿಸುವ ಮಾತುಗಳು ಅವರನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಇದು ಒಂದು ಮುಖವಾದರೆ ಕುವೆಂಪು ತಮ್ಮ ಜೀವಿತದ ಪರಮಗಂತವ್ಯವೆಂದು ಭಾವಿಸಿರುವ ವಿಶ್ವಮಾನವಸಂದೇಶವನ್ನು ಸಾವಿರಾರು ಪ್ರತಿಗಳಲ್ಲಿ ಮುದ್ರಿಸಿ ಜನಮಾನಸಕ್ಕೆ ತಲುಪಿಸುವಲ್ಲಿ ಜವರಪ್ಪಗೌಡರು ಮುಂದಾಳಾಗಿದ್ದಾರೆ. ಆ ಕವಿಚೇತನದ ವಾಣಿಯನ್ನು ಮನೆಮನೆಗೂ ಹೊತ್ತೊಯ್ಯುವುದೆಂದರೆ ಜವರಪ್ಪಗೌಡರಿಗೆ ಎಲ್ಲಿಲ್ಲದ ಉತ್ಸಾಹ ಮತ್ತು ಶ್ರದ್ಧೆ.

ಜವರಪ್ಪಗೌಡರು ಚತುರ ಮಾತುಗಾರರು ಅಂತೆಯೇ ಉತ್ತಮ ಭಾಷಣಕಾರರೂ ಹೌದು. ಅವರು ಭಾಷಣಕ್ಕೆ ನಿಂತರೆ ಹೊತ್ತಿನ ಪರಿವೆಯಿರುವುದಿಲ್ಲ. ವಿಷಯ

ಯಾವುದೇಯಿರಲಿ ತಮ್ಮ ಪ್ರಭುತ್ವವನ್ನು ಪ್ರಕಟಿಸದೆ ಬಿಡುವುದಿಲ್ಲ. ಜನಬೇಸರಕ್ಕೆ ಅವಕಾಶವಾಗದಂತೆ ತಮ್ಮ ವಾಕ್ಚಾತುರ್ಯವನ್ನು ತೋರುವ ಗೌಡರ ಸಭೆ ಅಂದರೆ ಸಭಿಕರಿಗೆ ರಸದೌತಣ. ಅಂದರೆ ಅವರು ಜನ ಪ್ರೀತಿಸುವ ಮಾತುಗಾರರು.

ಒಟ್ಟಾರೆ ಜವರಪ್ಪಗೌಡರ ವ್ಯಕ್ತಿತ್ವ ಹಲವು ಮುಖವಾದುದು. ಅದನ್ನು ಇಷ್ಟೇ ಎಂದು ಹೇಳಲಾಗದು. ದೇಶಭಕ್ತರಾಗಿ, ಸಮಾಜಸೇವಕರಾಗಿ, ಪತ್ರಿಕೋದ್ಯಮಿಯಾಗಿ ಹಲವು ನಿಟ್ಟಿನಲ್ಲಿ ಅವರು ಸಲ್ಲಿಸಿರುವ ಸೇವೆ ಅನನ್ಯವಾದದು. ಪ್ರತಿಫಲಾಪೇಕ್ಷೆ ಇಲ್ಲದೆ ಅವರು ಇದನ್ನೆಲ್ಲ ಮಾಡಿದ್ದಾರೆ ಎಂಬುದು ಬಹಳ ಮುಖ್ಯ. ಜವರಪ್ಪ ಗೌಡರು ಸರಳ ಸಜ್ಜನಿಕೆಯ ವ್ಯಕ್ತಿ ಪ್ರಾಮಾಣಿಕ ಜನಸೇವಕ. ಎಲೆಮರೆಯ ಕಾಯಿ.

ಏನೇ ಆಗಲಿ ನಾಗಮಂಗಲದ ಹಳ್ಳಿ ಹೈದನೊಬ್ಬ ಇಷ್ಟರ ಮಟ್ಟಿಗೆ ಜನಾದರಣೆಯನ್ನು ಗಳಿಸಿಕೊಂಡು ಸರ್ವಸಾಮಾನ್ಯವಾಗಿರುವುದು ಸಾಮಾನ್ಯ ಸಂಗತಿಯಲ್ಲ. ಮಂಡ್ಯಜಿಲ್ಲೆ ಅವರನ್ನು ಬಹಳಕಾಲ ನೆನಪಿನಲ್ಲಿಟ್ಟುಕೊಳ್ಳುತ್ತದೆ.

**ಸದಾಶಿವ ಎಣ್ಣೆಹೊಳೆ**

# ಪುಸ್ತಕದಂಗಡಿ ಮಾವ

ನಾನು ಬಹಳ ಸಣ್ಣವನಿದ್ದಾಗ ತಾಯಿಯ ಜೊತೆಯಲ್ಲಿ ಕೆಲವೊಮ್ಮೆ ಮಾವನವರ ಮನೆಗೆ ಬಂದು ಹೋಗುತ್ತಿದ್ದೆ. ಆ ಸಮಯದಲ್ಲಿ ಮನೆಗೆ ಬರುತ್ತಿದ್ದ ಜುಬ್ಬಾ ಧಾರಿಗಳು, ದೊಡ್ಡ ದೊಡ್ಡ ಮನುಷ್ಯರನ್ನು ಕಂಡ ನನ್ನ ಹಳ್ಳಿಯ ಮನಸ್ಸು ಸಂಕೋಚದಿಂದ ಮುದುಡಿ ಮೂಲೆ ಸೇರಿ ಇವರೆಲ್ಲ ಯಾರು ಏಕೆ ಬರುತ್ತಾರೆಂದು ಚಿಂತಿಸುತ್ತಿತ್ತು. ನಾನು ಬೆಳೆದಂತೆಲ್ಲ ನಮ್ಮ ಮಾವನವರ ಸಕ್ರಿಯ ರಾಜಕಾರಣದ ಚಟುವಟಿಕೆ ಅವರು ಈ ದೇಶದ ಸ್ವಾತಂತ್ರ್ಯಕ್ಕಾಗಿ ಸಲ್ಲಿಸಿದ ಸೇವೆ ಜಿಲ್ಲೆಯ ಅನೇಕ ಪ್ರಮುಖ ಕಾರ್ಯಗಳಲ್ಲಿ ಅವರ ಪಾತ್ರ. ಮಂಡ್ಯದಲ್ಲಿ ನಡೆದ ಮೈಸೂರು ವಿಲೀನ ವಿರೋಧಿ ಸಮ್ಮೇಳನದಲ್ಲಿ ಹಿರಿಯ ನಾಯಕ ಕೆ. ವಿ. ಶಂಕರಗೌಡರ ನಾಯಕತ್ವದಲ್ಲಿ ಗೌಡರ ಪಾತ್ರ ಅವಿಸ್ಮರಣೀಯ ಎಂಬುದು ಅವರ "ವಿಶ್ವಾಮಿತ್ರ" ಸಂಚಿಕೆಗಳಿಂದ ಗೊತ್ತಾಗುತ್ತದೆ. ಹೀಗೆ ಅವರ ಕಾರ್ಯಚಟುವಟಿಕೆ ತಿಳಿದು ಬಹಳ ಮುದ ಗೊಳ್ಳುತ್ತಿದ್ದೆ. ಅಲ್ಲಿಯವರೆವಿಗೂ ನನಗೆ ಕೇವಲ ಪುಸ್ತಕದಂಗಡಿ ಮಾವನಾಗಿದ್ದ ಜವರಪ್ಪಗೌಡರು ರಾಜಕಾರಣಿಯಾಗಿ ಕಾಣಲಾರಭಿಸಿದರು.

ಸಾರ್ವತ್ರಿಕಚುನಾವಣೆಗಳು ಬಂತೆಂದರೆ ನನಗೆ ಭಾಷಣ ಕೇಳುವ ಹುಚ್ಚು. ನನಗೆ ತಿಳಿದಂತೆ ಸಿಂಗಾರಿಗೌಡರ ಪರವಾಗಿ ಜವರಪ್ಪಗೌಡರು ಮಾತನಾಡುತ್ತಾರೆಂದರೆ ಅಸಂಖ್ಯಾತ ಜನರನ್ನು ತಮ್ಮ ಮಾತಿನ ಮೋಡಿಯಿಂದ ಬೆಕ್ಕಸ ಬೆರಗಾಗುವಂತೆ ಮಾಡಿ ಎಂತಹ ವಿರೋಧಮನಸ್ಸಿನವರು ಕೂಡ ಒಪ್ಪುವಂತೆ ಮಾಡುತ್ತಿದ್ದರು. ಜೊತೆಗೆ ಎದುರಾಳಿಗಳಿಗೆ ಒಂದು ರೀತಿಯಲ್ಲಿ ದುಃಸ್ವಪ್ನವಾಗುತ್ತಿದ್ದರು. ಗೌಡರಂತೆಯೇ ವಿರೋಧಿಗುಂಪಿನಲ್ಲಿ ಮಾದಪ್ಪಗೌಡರ ಪರವಾಗಿ ಎಂ. ಆರ್. ಎನ್ ಶಾಸ್ತ್ರಿಯವರ ನಿಲುವು ಮತ್ತು ವಾಕ್ಚಾತುರ್ಯ ಮೆಚ್ಚುವಂತಿರುತ್ತಿತ್ತು. ಜವರಪ್ಪಗೌಡರ ಭಾಷಣ ಕೇಳುವುದೆಂದರೆ ಕತೆ ಉಪಕತೆಗಳನ್ನು ಹೇಳಿ ಜನರು ಹೊಟ್ಟೆ ಹುಣ್ಣಾಗುವಂತೆ ನಗುವಂತೆ ಮಾಡುತ್ತಿದ್ದರು. ಅಂದರೆ ಅವರ ಭಾಷಣ ಶೈಲಿ ವಿಚಾರಪೂರಿತವಾದ ಮಂಡನೆ ಉದ್ದಾಮ ಪಂಡಿತನಂತೆ ಕಾಣುತ್ತಿತ್ತು. ಅನೇಕ ಭಾಷೆಗಳ ಬಗ್ಗೆ ಹಿಡಿತವಿದ್ದ ಗೌಡರ ಮೇಧಾಶಕ್ತಿ ಒಂದು ಶಬ್ದಕೋಶದಂತಿತ್ತು ಎಂದರೆ ಅಚ್ಚರಿಯೇನಲ್ಲ.

ಪತ್ರಿಕೋದ್ಯಮದಲ್ಲಿ ಜವರಪ್ಪಗೌಡರ ಪಾತ್ರ ಒಂದು ಮೈಲಿಗಲ್ಲು. ಅವರ ವರದಿ ಮತ್ತು ಲೇಖನ ಬಹಳ ಸೂಕ್ಷ್ಮಬುದ್ಧಿಯವರಿಗೆ ಅಚ್ಚರಿಯಾಗುವಂತಿರುತ್ತಿತ್ತು ಮತ್ತು ನೇರವಾಗಿರುತ್ತಿತ್ತು. ಸಮಾಜದ ಮತ್ತು ಜಿಲ್ಲೆಯ ಹಿತದೃಷ್ಟಿಯಿಂದ ಜನರನ್ನು ಎಚ್ಚರಿಸುತ್ತಿದ್ದ ಅವರ ಬರವಣಿಗೆ ಮನಮುದುಡಿ ಹಿಂದೆಬಿದ್ದವರನ್ನು

ಕೆರಳಿಸಿ ಮುಂದೆ ತರುತ್ತಿತ್ತು. ಆ ಕಾಲದಲ್ಲಿಯೇ "ವಿಶ್ವಾಮಿತ" ಪತ್ರಿಕೆ ಎಲ್ಲರ ಮೆಚ್ಚುಗೆಗಳಿಸಿತ್ತು ಎಂಬುದನ್ನು ಈಗಲೂ ಅವರ ಸಮಕಾಲೀನರು ನೆನಪಿಸುತ್ತಾರ.

ಕಾರಣಾಂತರದಿಂದ ಅವರಿಗೂ ನನಗೂ ಕೆಲವು ಕಾಲ ವಿರಸವುಂಟಾಯಿತು. ಅದೂ ಮಧ್ಯವರ್ತಿಗಳಿಂದಾಗಿ. ನಮ್ಮ ವಿರಸ ಎಲ್ಲಿಯವರೆಗೆಹೋಯಿತೆಂದರೆ ನನ್ನ ತಂದೆ ಮತ್ತು ತಾಯಿ (ಅವರ ಸ್ವಂತ ತಂಗಿ) ಸತ್ತಾಗಲು ಅವರ ಮನೆಗೆ ಹೋಗಿ ತಿಥಿ ಕಾರ್ಯಕ್ಕೆ ಕರೆಯಲಿಲ್ಲ. ಈ ಸಂದರ್ಭದಲ್ಲಿ ಗೌಡರ ಉದಾರ ಮನೋಭಾವದ ಬಗ್ಗೆ ಹೆಮ್ಮೆ ಯೆನಿಸುತ್ತದೆ. ನಾನು ಎಷ್ಟೇ ಟೀಕಿಸಿದ್ದರು ಸಹ ನನ್ನ ಶ್ರೇಯಸ್ಸನ್ನೇ ಬಯಸುತ್ತಿದ್ದ ಅವರು ನನ್ನ ಕಾರ್ಯ ಚಟುವಟಿಕೆ ಮತ್ತು ವ್ಯವಹಾರದ ಬಗ್ಗೆ ಹಿತೈಷಿಗಳನ್ನು ಕೇಳಿ ಸಂತೋಷಪಡುತ್ತಿದ್ದರು ಮತ್ತು ಸಲಹೆ ನೀಡಿದರು ಸಹ. ನಾನಂತು ಬಹಳ ಮುನಿಸಿ ನಲ್ಲಿದ್ದು ಅವರ ಸಾಮೀಪ್ಯದಿಂದ ಬಹಳ ಕಾಲ ವಂಚಿತನಾದೆನಲ್ಲ ಎಂಬುದು ಈಗ ನನ್ನ ಮೊಂಡು ಬುದ್ಧಿಗೆ ಹೊಳೆಯುತ್ತಿನೆ. ಇದೇ ರೀತಿ ಅವರನ್ನು ವಿರೋಧಿಸುವ ಅಥವಾ ಟೀಕಿಸುವ ಯಾರ ಬಗ್ಗೆಯಾದರು ಗೌಡರು ವಿರೋಧ ಕಟ್ಟುತ್ತಿರಲಿಲ್ಲ. ಅವರ ತಪ್ಪನ್ನು ನೇರವಾಗಿ ತಪ್ಪೆನ್ನುವ ಎಂತಹ ಕಡುವೈರಿಯಾದರು ಅವರ ಒಳ್ಳೆಯ ಗುಣದ ಬಗ್ಗೆ ಪ್ರಶಂಸಾರ್ಹವಾದ ಮಾತನ್ನೇ ಆಡುತ್ತಿದ್ದ ನಿಷ್ಪಕ್ಷಪಾತಿ ಎಂದೇ ಹೇಳಬೇಕು. ಒಮ್ಮೊಮ್ಮೆ ಮಧ್ಯವರ್ತಿಗಳ ಪಾತ್ರವೇ ಇಷ್ಟೆಂದು ಕೊಂಡಿದ್ದೇನೆ. ಕೊನೆ ಗೊಮ್ಮೆ ನಾನೇ ಸೋತು ನನ್ನ ಮದುವೆಯ ಆಮಂತ್ರಣ ಪತ್ರಿಕೆ ಕೊಡಲು ಅವರ ಮನೆಗೆ ಹೋದಾಗ ಅವರ ಹದಗೆಟ್ಟ ಆರೋಗ್ಯಪರಿಸ್ಥಿತಿಯಲ್ಲಿಯೂ ಅದೇ ಕಾರ್ಯ ಚಟುವಟಿಕೆ ಕಂಡು ಬಹಳ ಹರ್ಷಗೊಂಡೆನು.

ಅವರ ಸಮೃದ್ಧ ಮನಸ್ಸು ದಿನಗಟ್ಟಲೆ ಹೇಳುತ್ತಿದ್ದರೂ ಕರಗದ ಮೇಧಾಶಕ್ತಿ ಎಲ್ಲರಿಗೂ ದೊರಕುವಂತೆ ದಂಪತಿಗಳಿಬ್ಬರು ನೂರುಸಂವತ್ಸರಗಳನ್ನು ದಾಟಿ ಬಾಳಲಿ.

ಜವರೇಗೌಡ



# ಪಂಪ ಪ್ರಶಸ್ತಿಯು ಕುವೆಂಪು

೧

'ಕನ್ನಡ ಸಾರಸ್ವತ ಲೋಕದ ಸಾರ್ವಭೌಮ, ಮಹಾಕವಿ, ರಾಷ್ಟ್ರಕವಿ, ದಾರ್ಶನಿಕ ಕ್ರಾಂತಿಕಾರ ಶ್ರೀ ಕುವೆಂಪು ಅವರಿಗೆ ಕನ್ನಡ ಸಾಹಿತ್ಯದ ಅತ್ಯುಚ್ಚ ಗೌರವವಾದ ಪಂಪ ಪ್ರಶಸ್ತಿಯನ್ನು ಪ್ರಪ್ರಥಮಬಾರಿಗೆ ನೀಡುವ ಭಾಗ್ಯ ಲಭಿಸಿದ್ದಕ್ಕಾಗಿ ನಾನು ಧನ್ಯ ; ಇಂಥ ಧನ್ಯತೆ ದೊರಕಿದ ದಿನವೇ ಸುದಿನ ; ನನ್ನ ಜೀವನದಲ್ಲಿಯೇ ಇದೊಂದು ಮಹಾ ಸುದಿನ. ಎಂ. ಎನ್. ರಾಯ್ ಅವರ ನವಮಾನವತಾವಾದ ಕುವೆಂಪು ಕೃತಿಗಳಲ್ಲಿ ರೂಪುಗೊಂಡಿದೆ. ಎಲ್ಲ ಶೋಷಣೆಗಳಿಂದ ಮುಕ್ತಗೊಳಿಸುವುದೇ ಸ್ವಾತಂತ್ರ್ಯದ ಗುರಿ ; ಅದು ಬದುಕಿನ ಗುರಿಯೂ ಅಹುದು. ಸರ್ವರಿಗು ಸಮಪಾಲು, ಸರ್ವರಿಗು ಸಮಬಾಳು ದೊರೆಯಬೇಕು. ಇದು ಕುವೆಂಪು ಅವರ ವಿಶ್ವಮಾನವ ಸಂದೇಶದ ಸಾರ.

'ಇಂದು ಎಲ್ಲ ಕಡೆ ಜಾತಿ ಭಾಷೆ ವರ್ಗಗಳ ಹೆಸರಿನಲ್ಲಿ ಕಚ್ಚಾಟ ನಡೆಯುತ್ತಿದೆ ದುಷ್ಟಶಕ್ತಿಗಳು ಸಮಾಜವನ್ನು ಅಂಧಕಾರಕ್ಕೆ ನೂಕುತ್ತಿವೆ. ಇಂಥ ಪರಿಸ್ಥಿತಿಯಲ್ಲಿ ಎಲ್ಲ ಜಾತಿ, ಮತ, ಬಣ್ಣ, ಲಿಂಗ, ದೇಶ, ಭಾಷೆಗಳಿಗೆ ಅತೀತವಾದ ಮಾನವೀಯತೆ ಬೆಳೆಯಬೇಕೆಂಬುದು ವಿಶ್ವದರ್ಶನವನ್ನು ಸಾರಿದ ಕುವೆಂಪು ಅವರ ಅಭಿಲಾಷೆ. ವಿಚಾರಕ್ರಾಂತಿಯಿಲ್ಲದೆ ಪ್ರಗತಿ ಸಾಧ್ಯವಿಲ್ಲವೆಂದು ಸಾಹಿತ್ಯದ ಮೂಲಕ ಇಡೀ ಸಮಾಜಕ್ಕೆ ಚೈತನ್ಯ ನೀಡಿದವರು ಕುವೆಂಪು' ಎಂಬುದಾಗಿ ಕುವೆಂಪು ಅವರಿಗೆ ಪಂಪ ಪ್ರಶಸ್ತಿಯನ್ನು ನೀಡುವ ಸಮಯದಲ್ಲಿ ಮುಕ್ತಕಂಠದಿಂದ ಘೋಷಿಸಿದವರು ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್. ಆರ್. ಬೊಮ್ಮಾಯಿಯವರು.

ಭಾರತದ ಸ್ವಾತಂತ್ರ್ಯ ಪ್ರಾಪ್ತಿಯ ಈ ನಲವತ್ತು ವರ್ಷಗಳಲ್ಲಿ ಕನ್ನಡದಲ್ಲಿ ಪ್ರಕಟಗೊಂಡಿರುವ ಅತ್ಯುತ್ತಮ ಸೃಜನಶೀಲ ಕೃತಿ ಎಂಬ ಕಾರಣಕ್ಕಾಗಿ 1988ನೆಯ ಸಾಲಿನ ಪ್ರಶಸ್ತಿಗೆ ಶ್ರೀ ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಆಯ್ಕೆಗೊಂಡಿದೆ, ಪ್ರಶಸ್ತಿ ಪ್ರದಾನ ಸಮಾರಂಭವನ್ನು ಮೈಸೂರಿನ ಕಲಾಮಂದಿರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ 25-3-1989ರಂದು ಸಂಜೆ ನೆರವೇರಿಸಿತು. ಸಮಾರಂಭದ ಅದ್ವಿತೀಯ, ಅಪೂರ್ವ, ಆಕರ್ಷಕ ವ್ಯವಸ್ಥೆ ದೇವತೆಗಳಿಗೂ ದರ್ಶನೀಯವಾಗಿತ್ತು. ಆವರಣದ ದ್ವಾರದಲ್ಲಿ ವರ್ಣರಂಜಿತ ವೇಷ ಭೂಷಣಗಳಿಂದಲಂಕೃತರಾಗಿದ್ದ ನಾಲ್ವರು ಅಶ್ವಾರೋಹಿಗಳು ದರ್ಶನ ಕುತೂಹಲಿಗಳಾಗಿ ಬರುತ್ತಿದ್ದವರಿಗೆ

ಗೌರವ ಸಲ್ಲಿಸುವ ರೀತಿಯಲ್ಲಿ ನೆಲೆಗೊಂಡಿದ್ದರು. ಮಂದಿರದ ಪ್ರವೇಶದ್ವಾರದಲ್ಲಿ ಸರ್ವಾಲಂಕಾರ ಭೂಷಿತವಾಗಿದ್ದ ಎರಡು ಗಜರಾಜಗಳು ಕವಿಗಳ ಸ್ವಾಗತಕ್ಕಾಗಿ ನಿಂತಿದ್ದುವು. ರಾಷ್ಟ್ರಕವಿಯ ವಿವಿಧ ಭಾವಚಿತ್ರಗಳು ವಿದ್ಯುದ್ದೀಪಗಳ ಕಾಂತಿಯಲ್ಲಿ ರಾರಾಜಿಸುತ್ತಿದ್ದುವು. ಆಸನ ವ್ಯವಸ್ಥೆಯಲ್ಲಿಯೂ ವಿಶೇಷತೆ ಎದ್ದು ಕಾಣುತ್ತಿತ್ತು. 'ಪರಮ ಜಿನೇಂದ್ರವಾಣಿಯೆ ಸರಸ್ವತಿ' ಮತ್ತು 'ಜಯ್ ಭಾರತ ಜನನಿಯ ತನುಜಾತೆ' ಎಂಬ ಪ್ರಾರ್ಥನೆಯೊಡನೆ ಕಾರ್ಯಕ್ರಮಗಳು ಆರಂಭವಾದುವು.

ಸ್ವಾಗತಾನಂತರ ಪ್ರಶಸ್ತಿ ವರಣಸಮಿತಿಯ ಅಧ್ಯಕ್ಷರಾದ ಪ್ರೊ. ವಿ. ಕೃ. ಗೋಕಾಕ ಅವರು 'ಪೂಜ್ಯ ಶ್ರೀ ಕುವೆಂಪು ಅವರೆ' ಎಂದು ಸಂಬೋಧಿಸಿ, ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಪ್ರಥಮ ಪ್ರಶಸ್ತಿಗೆ ಆಯ್ದುದರ ಔಚಿತ್ಯವನ್ನು, ಆ ಕಾವ್ಯದ ಹಿರಿಮೆಯನ್ನು ವಿಶದಪಡಿಸಿದರು. 'ಕುವೆಂಪು ಸರ್ವೋದಯ ಕಾಲದ ಆದಿಕವಿ, ಉಚ್ಚಕವಿ ಎಂಬುದರಲ್ಲಿ ಸಂಶಯವಿಲ್ಲ. ''ಸೂರ್ಯೋದಯ ಚಂದ್ರೋದಯ ದೇವರದಯೆ ಕಾಣೊ'' ಎಂಬ ಕವಿತೆಯಿಂದ ಕಾವ್ಯಕೃಷಿಯನ್ನು ಆರಂಭಿಸಿದ ಕವಿ ಕುವೆಂಪು ಅವರು ''ಓ ನನ್ನ ಚೇತನ ಆಗು ನೀ ಅನಿಕೇತನ'' ಎಂಬುದಾಗಿ ಭಾರತೀಯ ದರ್ಶನ ದೃಷ್ಟಿಯನ್ನು ತಮ್ಮ ಕೃತಿಗಳ ಮೂಲಕ ಹರಡಿದ್ದಾರೆ' ಎಂದು ನುಡಿದು, ವಿಶ್ವಮಾನವ ಸಂದೇಶದ ಸ್ವರೂಪವನ್ನು ವಿವರಿಸಿದರು.

ಅಭಿನಂದನ ಭಾಷಣಮಾಡಿದ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಬಿ. ಕೆ. ಭಟ್ಟಾಚಾರ್ಯ ಅವರು ಕಲೆ, ಸಾಹಿತ್ಯ, ಸಂಸ್ಕೃತಿಗಳ ಬೆಳವಣಿಗೆಗೆ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಪ್ರೋತ್ಸಾಹ ಅತ್ಯಗತ್ಯವೆಂದು ಪ್ರತಿಪಾದಿಸಿದರು. 'ಸೃಜನಶೀಲತೆಯ ಭವ್ಯತೆಗೆ ಕುವೆಂಪು ಸಂಕೇತವಾಗಿದ್ದಾರೆ. ಸರ್ವೋದಯ, ಸಮನ್ವಯ ಪೂರ್ಣದೃಷ್ಟಿ ತತ್ತ್ವಗಳು ಶ್ರೀ ರಾಮಾಯಣ ದರ್ಶನಂ ಮಹಾ ಕಾವ್ಯದಲ್ಲಿ ಹಾಸುಹೊಕ್ಕಾಗಿ ಹರಿದಿವೆ. ಭಯೋತ್ಪಾದಕತೆ, ಕ್ಷೋಭೆ, ಮಾಲಿನ್ಯ ಸರ್ವತ್ರ ತಾನೇ ತಾನಾಗಿ ಹರಡುತ್ತಿರುವ ಈ ಸಮಯದಲ್ಲಿ ಕುವೆಂಪು ಅವರ ವಿಶ್ವಮಾನವ ಸಂದೇಶ ಅರ್ಥಪೂರ್ಣವಾಗಿದೆ. ಕುವೆಂಪು ಎಲ್ಲ ದೃಷ್ಟಿಯಿಂದಲೂ ನೊಬೆಲ್ ಪ್ರಶಸ್ತಿಗೆ ಅರ್ಹರಾಗಿದ್ದಾರೆ' ಎಂದವರು ನುಡಿದರು.

'ಕುವೆಂಪು ಅವರು ಸಮಕಾಲೀನ ಕನ್ನಡ ಸಾಹಿತ್ಯದ ಕೆಲವೇ ಕೆಲವು ಶಿಖರ ಸಾಹಿತಿಗಳಲ್ಲಿ ಅತ್ಯಂತ ಪ್ರಮುಖರಾದವರು. ತುಂಗಾತೀರದ ಸಹ್ಯಾದ್ರಿ ಗಿರಿಶ್ರೇಣಿಗಳ ದಟ್ಟವಾದ ಅರಣ್ಯ ಪರಿಸರದಿಂದ ಮೂಡಿ ಬಂದ ಈ ಕಾಡಿನ ಕವಿ ನಮ್ಮ ನಾಡಿನ ಪ್ರೀತಿಯ ಕವಿಯಾಗಿ, ಇಡೀ ರಾಷ್ಟ್ರದ ಕವಿಯಾಗಿ, ವಿಶ್ವಮಾನವ ಪ್ರಜ್ಞೆಯನ್ನು ಜೀವಂತವಾಗಿ ಮೈಗೂಡಿಸಿಕೊಂಡ ಮಹಾವ್ಯಕ್ತಿಯಾಗಿ ನಮ್ಮ ನಡುವೆ ಇರುವುದು ನಮಗೆಲ್ಲ ಒಂದು ಹೆಮ್ಮೆಯ ಹಾಗೂ ಧನ್ಯತೆಯ ಸಂಗತಿಯಾಗಿದೆ. ಕುವೆಂಪು ಅವರ ಬಹುಮುಖ ಪ್ರತಿಭೆಯ, ಸೃಜನಶೀಲ ವ್ಯಕ್ತಿತ್ವ ಪ್ರಾಚ್ಯ ಪಾಶ್ಚಾತ್ಯ ಸಾಹಿತ್ಯ ಹಾಗೂ

ವಿವಿಧ ಜ್ಞಾನ ಶಾಖೆಗಳ ಪರಂಪರೆಯಿಂದ ಸತ್ವ ಸಂಪನ್ನವಾಗಿ. ಕನ್ನಡ ಸಾಹಿತ್ಯದ ಸಮಸ್ತ ಪ್ರಕಾರಗಳಲ್ಲಿಯೂ ನಿಶ್ಚಿತವಾದ ಎತ್ತರದ ಕೃತಿಗಳನ್ನು ನಿರ್ಮಿಸಿ, ಕನ್ನಡ ಸಾಹಿತ್ಯಕ್ಕೆ ಜಾಗತಿಕ ಸಾಹಿತ್ಯದಲ್ಲಿ ಸುಭದ್ರವಾದ ಸ್ಥಾನವನ್ನು ಗಳಿಸಿಕೊಟ್ಟಿದೆ.

'ಭಾರತೀಯ ರಾಷ್ಟ್ರೀಯ ಆಂದೋಲನದ ಸಮಯದಲ್ಲಿ ಒಂದು ನಿರ್ಭಯ ಪ್ರತಿಭಟನೆಯ ಪ್ರಮುಖ ವಾಣಿಯಾಗಿ ಅಂದಿನ ಹೋರಾಟಕ್ಕೆ ಸ್ಫೂರ್ತಿಯನ್ನು ನೀಡಿದ ಕುವೆಂಪು ಅವರ ಸಾಹಿತ್ಯ ನಿರ್ಮಿತಿ ಈ ರಾಷ್ಟ್ರದ ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಾಲದ ಆಶೋತ್ತರಗಳನ್ನೂ ಸ್ಥಿತ್ಯಂತರಗಳನ್ನೂ ಪ್ರತಿಬಿಂಬಿಸಿದ ಹಾಗೂ ವಿಮರ್ಶೆಗೆ ಗುರಿಪಡಿಸಿದ ಮಹತ್ವದ ಸಾಂಸ್ಕೃತಿಕ ದಾಖಲೆಯೂ ಹೌದು. ಅಧ್ಯಾತ್ಮ ವೈಚಾರಿಕತೆ ಹಾಗೂ ಅದಮ್ಯವಾದ ನಿಸರ್ಗ ಪ್ರೀತಿಯನ್ನು ಮೂಲದ್ರವ್ಯವನ್ನಾಗಿ ಮಾಡಿಕೊಂಡ ಅವರ ಸಾಹಿತ್ಯವು ಶ್ರೀಸಾಮಾನ್ಯರ ಬದುಕನ್ನು ನಿಯಂತ್ರಿಸುವ ಹಾಗೂ ಶೋಷಿಸುವ ಸಂಪ್ರದಾಯವನ್ನು ಉಗ್ರವಾದ ಚಿಕಿತ್ಸೆಗೆ ಗುರಿ ಪಡಿಸಿ, ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿಯ ನೆಲೆಯಲ್ಲಿ ಮನುಷ್ಯನ ವ್ಯಕ್ತಿತ್ವವು ನಿರಂಕುಶವಾಗಿ ಹಾಗೂ ಅನಿಕೇತನವಾಗಿ ವಿಕಾಸಗೊಳ್ಳುವ ಕಳಕಳಿಯನ್ನು ಅನನ್ಯವಾಗಿ ಪ್ರತಿಪಾದಿಸುವ ಸ್ವರೂಪದ್ದಾಗಿದೆ.

"ಭಾರತದ ಮಾತ್ರವಲ್ಲ, ಜಾಗತಿಕ ಮಹಾಕಾವ್ಯ ಪರಂಪರೆಯ ಸತ್ವವನ್ನು ಮೈಗೂಡಿಸಿಕೊಂಡು, ಸಮಕಾಲೀನ ಕನ್ನಡ ಸಂದರ್ಭದಲ್ಲಿ ಆವಿರ್ಭವಿಸಿರುವ ಶ್ರೀ ರಾಮಾಯಣ ದರ್ಶನಂ ಮೇರುಕೃತಿ ವಿಶ್ವವಾಣಿಯ ಮುಡಿಯ ಮಣಿಯಾಗಿದೆ. ಪಂಪನಿಂದ ಕುವೆಂಪುವರೆಗೆ ಎಂಬ ನುಡಿಗಟ್ಟು ಪಂಪನಿಗೂ ಕುವೆಂಪುವಿಗೂ ಇರುವ ಸಾದೃಶ್ಯವನ್ನು ಸೂಚಿಸುವುದರ ಜತೆಗೆ, ಕನ್ನಡ ಸಾಹಿತ್ಯದ ಸೀಮಾರೇಖೆಗಳನ್ನೂ ಸೂಚಿಸುತ್ತದೆ. ವಾಸ್ತವವಾಗಿ ಪಂಪ-ಕುವೆಂಪು ಇಬ್ಬರೂ ಕನ್ನಡ ಸಾಹಿತ್ಯದ ಸೀಮಾ ಪುರುಷರು.'

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ವಿಠಲಮೂರ್ತಿಯವರು ಸರ್ಕಾರದ ಪರವಾಗಿ ಮಾಡಿದ ಪ್ರಶಸ್ತಿ ಘೋಷಣೆಯ ಸಾರಾಂಶವಿದು.

ಸಚಿವ ಶ್ರೀ ಎಂ. ಪಿ. ಪ್ರಕಾಶ್ ಅವರು ಪಂಪ ಮತ್ತು ಕುವೆಂಪು ಅವರ ನಡುವಣ ಸಾದೃಶ್ಯಗಳನ್ನು ವಿವರಿಸಿ, ಅವರ ಆಂತರಂಗಿಕ ಸಂಬಂಧವನ್ನು ವಿವರಿಸಿ, ಕುವೆಂಪು ಅವರ ಕೃತಿಗಳು 'ಅಪೌರುಷೇಯ' ಸದೃಶವಾದುವೆಂದು ತಿಳಿಸಿದರು. ತಮ್ಮ 'ಪೂಜ್ಯ ಗುರು' ಶ್ರೀಕುವೆಂಪು ಅವರು 'ತಮ್ಮ ಕೃತಿಗಳ ಮೂಲಕ ವರ್ಣಾಶ್ರಮ ಧರ್ಮದ ಕೊಳಕನ್ನೆತ್ತಿ ತೋರಿಸಿ, ದಲಿತರಲ್ಲಿ ನವಚೈತನ್ಯವನ್ನು ಮೂಡಿಸಿದ್ದಾರೆ' ಎಂದು ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಅರಣ್ಯ ಮಂತ್ರಿ ಶ್ರೀ ಬಿ. ರಾಚಯ್ಯನವರು ನುಡಿದರು.

ಕೊನೆಯಲ್ಲಿ ಶ್ರೀ ಕುವೆಂಪು ಅವರು 'ಪಂಪ ಪ್ರಶಸ್ತಿ ತಮ್ಮ ಕಾವ್ಯ ಸಮಸ್ತ

ದಲ್ಲಿಯೂ ಪ್ರವಹಿಸುವ ವಿಶ್ವಮಾನವ ಸಂದೇಶಕ್ಕೆ ಸಂದ ಗೌರವ' ಎಂದು ತಮ್ಮ ವಂದನಾ ಭಾಷಣದಲ್ಲಿ ತಿಳಿಸಿದರು. 'ಸರ್ವ ಭಾಷಾಮಯಿ ಸರಸ್ವತಿಗೆ ನಮಸ್ಕಾರ' ಎಂಬ ಸಂಬೋಧನೆಯೊಡನೆ ಅವರು ತಮ್ಮ ಭಾಷಣವನ್ನು ಪ್ರಾರಂಭಿಸಿದರು. 'ನನ್ನ ಬಗ್ಗೆ ಮಾತಾಡಿದ ಶ್ರೀ ಬೀರೆಂದ್ರ ಕುಮಾರ ಭಟ್ಟಾಚಾರ್ಯರೂ, ಡಾ. ವಿ. ಕೃ. ಗೋಕಾಕರೂ "ಕವಿಗೆ ಕವಿ ಮುನಿವಂ" ಎಂಬುದನ್ನು ಸುಳ್ಳುಮಾಡಿ "ಕವಿಗೆ ಕವಿ ನಮಿಪಂ" ಎಂಬ ಹೊಸ ಸೂಕ್ತಿಯ ಉದಯಕ್ಕೆ ಕಾರಣರಾಗಿದ್ದಾರೆ. ಕರ್ನಾಟಕ ಸರ್ಕಾರ ಮೊದಲಿನಿಂದಲೂ ನನ್ನ ವಿಷಯದಲ್ಲಿ ತುಂಬ ಅಭಿಮಾನವನ್ನು ತೋರಿಸುತ್ತ ಬಂದಿದೆ. ಅರುವತ್ತು ವರ್ಷಗಳಿಂದ ಲಕ್ಷಾಂತರ ಕನ್ನಡಿಗರು ಪ್ರೀತಿ ಅಭಿಮಾನಗಳನ್ನು ಧಾರೆಯೆರೆದು ನನಗೆ ಧನ್ಯತೆಯ ಭಾವವನ್ನು ನೀಡಿದ್ದಾರೆ. ಪಂಪ ಪ್ರಶಸ್ತಿ ನನಗೆ ದೊರೆತಿರುವುದು ಹೊರನೋಟಕ್ಕೆ ಕೇವಲ ಆಕಸ್ಮಿಕವೆಂದು ತೋರಬಹುದು. ಆದರೆ ಕನ್ನಡದ ಆದಿಕವಿ ಪಂಪನಿಗೂ ನನಗೂ ಇರುವ ಅಂತರಂಗ ಸಂಬಂಧವನ್ನು ನೆನೆದರೆ ಈ ಪ್ರಶಸ್ತಿಲಾಭ ಎಷ್ಟು ಅರ್ಥಪೂರ್ಣ ಎಂಬುದು ಸ್ಪಷ್ಟವಾಗುತ್ತದೆ. ಈ ಪ್ರಶಸ್ತಿಯನ್ನು ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸಿ, ಎಂದಿನಂತೆ ಸರ್ವಧರ್ಮ ಸಮನ್ವಯಾಚಾರ್ಯ ಶ್ರೀ ರಾಮಕೃಷ್ಣ ಪರಮಹಂಸರ ಅಡಿದಾವರೆಗಳಿಗೆ ಅರ್ಪಿಸುತ್ತೇನೆ' ಎಂದು ನುಡಿದು, ಹೊರಗೊಳಗೆ ಕಿಕ್ಕಿರಿದಿದ್ದ ಶ್ರೋತೃಗಳ ಕರತಾಡನ ಮೊಳಗುತ್ತಿರುವಾಗ ವಿಶ್ವಮಾನವ ಕುವೆಂಪು ಅವರು ತಮ್ಮ ಭಾಷಣವನ್ನು ಮುಗಿಸಿದರು.

'ಯುಗದ ಕವಿ, ಜಗದ ಕವಿ' ಯೆಂದು ಎಂದೋ ವರಕವಿ ಬೇಂದ್ರೆಯವರಿಂದ ಹೊಗಳಿಸಿಕೊಂಡ ಕುವೆಂಪು ಭರತ ಖಂಡದ ಅತ್ಯುಚ್ಚ ಗೌರವ ಪ್ರಶಸ್ತಿಗಳನ್ನು ಪಡೆದುಕೊಂಡ ಮೊದಲಿಗರಾಗಿದ್ದಾರೆ. ಅವು ಅವರ ಅರ್ಹತೆಗೆ ಸಂದ, ಸಾಧನೆ ಸಿದ್ಧಿಗಳಿಗೆ ಲಭಿಸಿದ ಪುರಸ್ಕಾರಗಳೆ ಹೊರತು, ಲೌಕಿಕಾಧಿಕಾರಕ್ಕೆ ದಾಕ್ಷಿಣ್ಯಕ್ಕೆ ಬಲಾತ್ಕಾರಕ್ಕೆ ಪ್ರತ್ಯುಪಕಾರ ನಿರೀಕ್ಷೆಗೆ ಲಬ್ಧವಾದ ಮುಯ್ಯಿ ಕಾಣಿಕೆಗಳಲ್ಲ. ಡಾ. ಡಿ.ಎಲ್. ನರಸಿಂಹಾಚಾರ್ಯರು ಅವರು ಹೇಳುವಂತೆ ಕುವೆಂಪು ದೇವರ ಮನುಷ್ಯ,ದೇವಮಾನವರೆಂಬುದು ನಿಜ. ಅವರು ದೇವಮಾನವರಾದದ್ದು ಕೇವಲ ಹೊಗಳಿಕೆಯಿಂದಲ್ಲ. ಕಟ್ಟುಕತೆಗಳಿಂದಲ್ಲ, ಪುರಾಣಗಳ ನೇಯ್ಗೆಯಿಂದಲ್ಲ, ಹಳುಬೀಳುಗಳ, ತೊಡರೆಡರುಗಳ, ನಿಂದಾಪಹಾಸ್ಯಗಳ, ದ್ವೇಷಾಸೂಯೆಗಳ ಬೆಂಕಿಯುರಿಯಲ್ಲಿ ಬೆಂದು, ಶತಶತ ವಿಘ್ನಗಳ ಜಂಝೆಯಲ್ಲಿ ತತ್ತರಿಸಿ, ನಿರಂತರ ತಪಶ್ಚರ್ಯೆಯ, ಶ್ರದ್ಧಾಪೂರ್ಣ ಸಾಧನೆಯ ಶಿಖರವನ್ನೇರಿದನಂತರ. ಶ್ರೀರಾಮಕೃಷ್ಣ ಪರಮಹಂಸರ ಗೋತ್ರದಲ್ಲಿ, ಶ್ರೀವಿವೇಕಾನಂದರ ಮಾನಸ ಪುತ್ರರಾಗಿ, ಶ್ರೀ ಮಹಾ ಪುರುಷರ ಶಿಷ್ಯರಾಗಿ, ಪ್ರಕೃತಿಯಾರಾಧಕರಾಗಿ, ಪ್ರಾಚ್ಯ ಪಾಶ್ಚಾತ್ಯ ಜ್ಞಾನಧೇನುವಿನ ಕೆಚ್ಚಲುಂಡು ಪರಿಪುಷ್ಟರಾಗಿ, ವಿಜ್ಞಾನ ವೈಚಾರಿಕ ಹಾಗೂ ಸ್ವಾತಂತ್ರ್ಯಾಂದೋಲನ ಯುಗಗಳ ಮಂಥನಲಬ್ಧ ವಿಚಾರಾಮೃತಪಾನದಿಂದ ಸಚೇತನರಾಗಿ, ದಿನದಿನವೂ ಅನಿಕೇತನರಾಗಿ, ಅನಂತವಾಗಿ, ನಿರ್ದಿಗಂತವಾಗಿ ಬೆಳೆದ

ವಿಶ್ವಮಾನವರವರು.

ಜಗತ್ತಿನಲ್ಲಿ ಮಹಾಕವಿಗಳೇ ವಿರಳ; ಯುಗಕ್ಕೊಬ್ಬ; ಮಹಾಪುರುಷರೂ ಅಷ್ಟೇ. ಮಹಾಪುರುಷ ಮಹಾಕವಿಯಾದದ್ದಿಲ್ಲ. ಮಹಾಕವಿ ಮಹಾಪುರುಷರು ಒಮ್ಮೆಯ್ಯಾಗಿರುವುದಂತು ದುರ್ಲಭ: ಆ ದುರ್ಲಭತೆ ಕುವೆಂಪು ಅವರಲ್ಲಿ ಸಾಧ್ಯ ವಾಗಿರುವುದು ಕನ್ನಡಕ್ಕೆ, ಕನ್ನಡನಾಡಿಗೆ, ಇಡೀ ಭಾರತಕ್ಕೆ ಸಂದ ಗೌರವವೆಂದು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಯಬೇಕಾಗಿದೆ.

೨

ಕುವೆಂಪು ಅವರ ವಿಸ್ಮಯಕಾರಿ ಅಂತಶ್ಚೈತನ್ಯದ ತ್ವರಿತ ವಿಕಾಸಗತಿಯನ್ನು ಅಮಲನ ಕಥೆ, ಕೊಳಲು ಮೊದಲಾದ ಅವರ ಪ್ರಾರಂಭದ ಕೃತಿಗಳಿಂದ ಹಿಡಿದು ಅವರ ಶ್ರೀ ರಾಮಾಯಣದರ್ಶನಂ, ಮಲೆಗಳಲ್ಲಿ ಮದುಮಗಳು ಮುಂತಾದ ಶಿಖರಪ್ರಾಯದ ಕೃತಿಗಳವರೆಗಿನ ಅವರ ಸಾಹಿತ್ಯರಾಶಿಯಲ್ಲಿ ಗುರುತಿಸಬಹುದು. ಬಾಲ್ಯದಲ್ಲಿಯೇ ಹಿರಿಯರೊಬ್ಬರಿಂದ ಕೇಳಿದ ಲಾಂಗ್‌ಫೆಲೊ ಕವಿಯ 'ದಿ ಸಾಮ್ ಆಫ್ ಲೈಫ್' ಎಂಬ ಕವಿತೆ ಅವರ 'ಆತ್ಮಕ್ಕೆ ಚೈತನ್ಯಪೂರ್ಣವಾದ ಮಂತ್ರದೀಕ್ಷೆಯನ್ನೇ' ನೀಡುತ್ತದೆ; ಅದನ್ನು ಆಲಿಸುತ್ತಾ ಆಲಿಸುತ್ತಾ 'ನನ್ನ ಜೀವ ಜ್ವಾಲಾಮಯವಾಯ್ತು. ನನ್ನ ಅಂತ ಶ್ಚೇತನಕ್ಕೊಂದು ಮೊತ್ತಮೊದಲನೆಯ ಉಪನಯನವಾಯ್ತು' ಎಂದವರೇ ಸ್ಪಷ್ಟ ಪಡಿಸಿದ್ದಾರೆ. ಅವರು ಮೊದಮೊದಲು ರಚಿಸುತ್ತಿದ್ದ ಆಂಗ್ಲಕವಿತೆಗಳಲ್ಲಿಯೇ ಅವರ ಊರ್ಧ್ವಮುಖ ಚಿಂತನೆಯ, ಕಲ್ಪನಾವೈಭವದ, ಭಾವಾನುಭವ ಶ್ರೀಮಂತಿಕೆಯ ಸಂಸ್ಪರ್ಶವನ್ನು ಗುರುತಿಸಬಹುದು.

ಎಲ್ಲಿ ಧರ್ಮಧ್ವಜವು ಇರುವುದೊ,
ಎಲ್ಲಿ ಸತ್ಯವು ಆಳುತಿರುವುದೊ,
ಎಲ್ಲಿ ಕರುಣೆಯು ಪಾಡುತಿರುವುದೊ,
ಅಲ್ಲಿ ನೆಲಸುವೆ ನಿತ್ಯವು.

ಎಂಬ ಅಮಲನ ಕಥೆಯ ಪದ್ಯವೂ, ಕೊಳಲು ಸಂಗ್ರಹದ 'ಮುಂದಕೆಲ್ಲಿಗೆ?', 'ಗುರಿ', 'ಅಡವಿಯಲ್ಲಿ', 'ಬಡವನೆಂದುಸುರಲತಿ ನಾಚುವೆನು ದೇವ', 'ಇನ್ನೇನು ಬೇಕೆನಗೆ ದೇವ?' ಇವೇ ಮೊದಲಾದ ಹಲವಾರು ಕವಿತೆಗಳೂ ಕುವೆಂಪು ಅವರ ಅಂತಶ್ಚೇತನದ ಸ್ವರೂಪಕ್ಕೂ ಅವರ ಜೀವನಧ್ಯೇಯಕ್ಕೂ ಕನ್ನಡಿ ಹಿಡಿಯುತ್ತವೆ.

ಕುವೆಂಪು ಅವರ ಕವಿತೆಗಳ ಸೃಷ್ಟಿ ಬಹು ವಿಸ್ತಾರವಾದದ್ದು. ಬಹು ಮುಖ ವಾದದ್ದು, ಭಾವಾಂಶ, ಕಲ್ಪನಾಂಶ, ಚಿಂತನಾಂಶ ಹಾಗೂ ರೂಪಾಂಶಗಳಿಂದ ಸಮೃದ್ಧ ವಾದದ್ದು. ಇಪ್ಪತ್ತೈದು ಭಾವಗೀತೆಗಳ ಸಂಕಲನಗಳಲ್ಲಿ (ಎರಡು ಆಂಗ್ಲ ಕವಿತಾ ಸಂಗ್ರಹಗಳೂ ಸೇರಿ), ಎರಡು ಕಥನ ಕಾವ್ಯಗಳಲ್ಲಿ, ಒಂದು ಪ್ರಗಾಥದಲ್ಲಿ, ಎರಡು

ಖಂಡ ಮಹಾಕಾವ್ಯಗಳಲ್ಲಿ ಹಾಗೂ ಒಂದು ವಚನಕಾವ್ಯದಲ್ಲಿ ಸಮಗ್ರಜೀವನದ ನೋಟ ವನ್ನು ಸೇಂದ್ರಿಯವೂ, ಸೇಂದ್ರಿಯಾತೀತವೂ ಆದ ರುಂದ್ರ ಸಾಂದ್ರ ರಮ್ಯಭಾವ ವಿಸ್ತಾರವನ್ನು, ಲೋಕಾನುಭವ ಸಮೃದ್ಧಿಯನ್ನು ಕಾಣಬಹುದು. ಮಾನವನ ಗುಣ, ದೋಷ, ದೌರ್ಬಲ್ಯಗಳು, ಹಿತಾಹಿತಗಳು, ಅವನ ಅಂತರಂಗದಲ್ಲಿ ಅವಿರತವಾಗಿ ಜರುಗು ತ್ತಿರುವ ಕ್ರಿಯೆ, ಪ್ರಕ್ರಿಯೆ, ಪ್ರತಿಕ್ರಿಯೆಗಳು, ಪ್ರಣಯ, ಪ್ರೇಮ, ವಾತ್ಸಲ್ಯ, ಭಕ್ತಿ, ಕರುಣೆ, ಪಾಪ, ಪುಣ್ಯ, ಕರ್ಮ, ಅಕರ್ಮ. ನಾನಾ ದ್ವಂದ್ವಗಳ ಸಂಘರ್ಷ–ಇವೇ ಮೊದಲಾದ ಜೀವನ ಲೀಲಾ ವಿಲಾಸಗಳು. ಸಾಮಾಜಿಕ ಹಾಗೂ ಆರ್ಥಿಕರೀತಿ–ನೀತಿ, ಅಸಮತೆ–ವಿಷ ಮತೆ, ರೂಢಿ–ಸಂಪ್ರದಾಯಗಳು, ರಾಜಕೀಯ ಸಂಗತಿ–ವಿಸಂಗತಿಗಳು, ರಾಷ್ಟ್ರೀಯ-ಅಂತಾರಾಷ್ಟ್ರೀಯ ವಿಚಾರಗಳು, ಭಾಷೆ ಪ್ರದೇಶ ಜಾತಿ ಮತಗಳಿಗೆ ಸಂಬಂಧಿಸಿದ ಸಮಸ್ಯೆಗಳು, ಪ್ರಾಕೃತಿಕ ವ್ಯಾಪಾರಗಳು, ಸತ್ಯ ಸೌಂದರ್ಯಾದಿ ಜೀವನ ಮೌಲ್ಯಗಳು, ದರ್ಶನಾನುಭೂತಿ–ಇವೇ ಮೊದಲಾದ ನೂರಾರು, ಸಾವಿರಾರು ವಿಷಯಗಳು ಅವರ ಕೃತಿಗಳಲ್ಲಿ ಪಡಿಮೂಡಿವೆ, ಅನುರಣಿಸುತ್ತಿವೆ. ಇಡೀ ವಿಶ್ವವೇ ಅವರ ಕಾವ್ಯದ ವಸ್ತು ವಾಗುತ್ತದೆ. ಅವರು ಈ ಜಗತ್ತನ್ನು ಗಾಢವಾಗಿ ಪ್ರೀತಿಸುತ್ತಾರೆ ; ಜಗತ್ತಿನ ಮೂಲಕವೇ ಜಗತ್ತನ್ನು ವ್ಯಾಪಿಸಿಕೊಂಡಿರುವ ಹಾಗೂ ಅದರಾಚೆಗಿರುವ ಸತ್ಯವನ್ನು ಕಾಣುತ್ತಾರೆ. ‘ಆನಂದಮಯ ಈ ಜಗ ಹೃದಯ’ ಎಂಬುದು ಅವರಿಗೆ ಅನುಭವೈಕ ವೇದ್ಯ. ಬಿತ್ತರದಾಗಸದ ಹಿನ್ನೆಲೆಯಲ್ಲಿ ತೇಲುತ್ತ ಬಂದ ಬಲಾಕಪಂಕ್ತಿ ದೇವರ ರುಜು ವಾಗಿ ಪರಿಣಮಿಸಿ, ಅವರನ್ನು ಆನಂದಾಬ್ಧಿಯಲ್ಲಿ ಮುಳುಗಿಸುತ್ತದೆ. ಸಹಧರ್ಮಿಣಿಯಲ್ಲಿ ಜಗನ್ಮಾತೆಯ, ಆದಿಶಕ್ತಿಯ ಅವತಾರವನ್ನು ಕಾಣುವ ದಿವ್ಯಪ್ರೇಮ ಅವರದು. ಸಾಮಾಜಿಕ ಸ್ವಾಸ್ಥ್ಯದಲ್ಲಿ ನಾಡಿನ ಆರೋಗ್ಯವನ್ನು ಭಾರತೀಯ ಸ್ವಾತಂತ್ರ್ಯದಲ್ಲಿ ವಿಶ್ವಶಾಂತಿಯನ್ನು, ಸಮಬಾಳು ಸಮಪಾಲುಗಳಲ್ಲಿ ಸರ್ವ ಸಾಮರಸ್ಯವನ್ನು, ಸರ್ವ ಭಾವರಸಗಳು ದಿವ್ಯಪ್ರೇಮದಲ್ಲಿ ಪರಿಣಾಮಗೊಂಡಾಗ ಭೂಮಿಯಲ್ಲಿ ಸ್ವರ್ಗೋದಯ ವಾಗುತ್ತದೆನ್ನುವ ಸತ್ಯವನ್ನವರು ತಮ್ಮ ಕವಿತೆಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಕುವೆಂಪು ಚೈತನ್ಯದ ಮೂಲದ್ರವ್ಯ ಅಧ್ಯಾತ್ಮಭಾವ ; ವಸ್ತು ಯಾವುದೇ ಇರಲಿ. ಆ ಭಾವ ಅವರ ಅನೇಕ ಕವಿತೆಗಳ ಮೂಲದಲ್ಲಿ ಪ್ರಕಾಶಿಸುತ್ತದೆ ಮಾತ್ರವಲ್ಲ, ಅದೇ ವಸ್ತುವಾಗಿರುವ ಕವಿತೆಗಳು ಹಲವಾರಿವೆ ; ಸೃಷ್ಟಿಯ ಪ್ರತಿಯೊಂದು ವಸ್ತುವಿನಲ್ಲಿಯೂ ಋತ ಚಿತ್ ಶಕ್ತಿಯ ವಿಲಾಸವನ್ನು ದರ್ಶಿಸಿ, ತಾವು ಕಂಡುಂಡ ದರ್ಶನವನ್ನು ಶಬ್ದ ಚಿತ್ರದಲ್ಲಿ ಹಿಡಿ ದಿರಿಸುತ್ತಾರೆ. ‘ಗೊಲ್ಲನ ಗಾಯತ್ರಿ’ಯಿಂದ ಹಿಡಿದು ಋತಚಿನ್ಮಯೀ ಜಗನ್ಮಾತೆಯನ್ನು ಕುರಿತ ತಾತ್ತ್ವಿಕ ಪ್ರಾರ್ಥನಾಗೀತೆಯ ತನಕ ಅವರ ದಾರ್ಶನಿಕ ಕವನಗಳು ಹಬ್ಬಿವೆ. ಅವರ ಅಧ್ಯಾತ್ಮಯಾತ್ರೆಯ ಮತ್ತು ಆತ್ಮವಿಕಾಸದ ಅಗ್ನಿಪಥವೇ ಅವರ ಕವಿತಾವಾಹಿನಿ. ಸಕಲ ಭಾವರಸಗಳಿಗೆ ಅಧ್ಯಾತ್ಮ ಭಾವರಸಗಳೇ ಅಂತಿಮ ಆಶ್ರಯವೆನ್ನುವುದು ಕುವೆಂಪು ಅವರ ಸಿದ್ಧಾಂತ.

ಕುವೆಂಪು ಅವರ ಕಾವ್ಯಪ್ರಜ್ಞೆ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಸಿದ್ಧಿ ಪಡೆದಿದೆಯೆಂಬ, ಯುಗಪ್ರಜ್ಞೆಗೆ ಅದು ಕನ್ನಡಿಯಾಗಿದೆಯೆಂಬ, ಅದು ಕಾಲ ದೇಶಾತೀತವಾದ ಚಿರಂತನ ಮೌಲ್ಯಗಳಿಂದ ಅಮರಕಾವ್ಯವಾಗಿದೆಯೆಂಬ ಸಂಗತಿ ರೂಢ ಮೂಲವಾಗಿ ಸಂಸ್ಥಾಪನೆಗೊಂಡಿದೆ. ತಮ್ಮ ಕಾವ್ಯಕ್ಕೆ ಆರಿಸಿಕೊಂಡಿರುವ ಕಥೆ ಆದ್ಯಂತ್ಯ ವಿಲ್ಲದ್ದು, ಕಾಲ ದೇಶಾತೀತವಾದದ್ದು ; ಆ ಕತೆಯಲ್ಲಿ ಬರುವ ಪಾತ್ರಗಳು ಅನಾದಿ ಅನಂತ ಮನುಕುಲವನ್ನು ಪ್ರತಿನಿಧಿಸುವ ಪ್ರತಿಮಾ ಸ್ವರೂಪರು. ಆದ್ದರಿಂದ ಆ ಕಥೆ ಮತ್ತು ಆ ಪಾತ್ರಗಳು ಸದಾ ವಿಕಾಸಶೀಲವಾಗಿದ್ದು, ಸಾರ್ವಕಾಲಿಕ, ಸಾರ್ವದೇಶಿಕ ವಿಶ್ವಪ್ರಜ್ಞೆಯ ಅಭಿವ್ಯಕ್ತಿಗೆ ಸೂಕ್ತಸಮರ್ಥ ಮಾಧ್ಯಮಗಳಾಗಿವೆ. ತಮ್ಮ ಕಾವ್ಯ ಕೃಷಿಯ ಪ್ರಾರಂಭದಲ್ಲಿಯೇ ತಾವು ಮಹಾಕವಿಯಾಗುವುದಾಗಿ ಕನಸು ಕಂಡಿದ್ದರು. 1927ನೆಯ ಸಂವತ್ಸರದಲ್ಲೊಂದು ದಿನ 'ನಾನೊಂದು ಬೃಹದ್‌ಗಾತ್ರದ ಅಪ್ರಾಸ ಛಂದಸ್ಸಿನ (ಬ್ಲಾಂಕ್ ವರ್ಸ್) ಮಹಾಕಾವ್ಯ ರಚಿಸಿದ್ದೇನೆ. ಅದು ಅಚ್ಚಾಗಿ ಬಂದಿದೆ! ಕೈಯಲ್ಲಿ ಹಿಡಿದಿದ್ದೇನೆ, ತೂಕವಾಗಿದೆ !' ಎಂಬಂಥ ಕನಸು ಕಂಡುದಾಗಿ 'ನೆನಪಿನ ದೋಣಿಯಲ್ಲಿ' ಆತ್ಮಕಥೆಯ 765ನೆಯ ಪುಟದಲ್ಲಿ ಅವರೇ ತಿಳಿಸಿದ್ದಾರೆ. ಪ್ರಾಚೀನ–ಅರ್ವಾಚೀನ ಪ್ರಾಚ್ಯ ಪಾಶ್ಚಾತ್ಯ ದರ್ಶನಶಾಸ್ತ್ರಗಳ ಅಧ್ಯಯನ ಹಾಗೂ ಚಿಂತನ ಮಂಥನಗಳಿಂದ ಲಬ್ಧವಾದ ನಿನೂತನ ಆಲೋಚನಾನುಭವಗಳ ಅಭಿವ್ಯಕ್ತಿಗಾಗಿ, ಪರಂಪರಾಗತ ಪ್ರಗತಿಪರ ಆಧುನಿಕ ವೈಜ್ಞಾನಿಕ ವೈಚಾರಿಕ ಜ್ಞಾನವಾಹಿನಿಯಲ್ಲಿ ಮಿಂದ ಫಲವಾಗಿ ಮೂಡಿದ ಅಮೃತ ಸ್ವರೂಪದ ಮೌಲ್ಯಗಳ ಅಭಿವರ್ಣನೆಗಾಗಿ, ಸಮಕಾಲೀನ ಘಟನಾವಳಿ ಸಮೀಕ್ಷೆಯಿಂದ ಹಾಗೂ ದೀರ್ಘ ತಪಸ್ಸಿನ ಆಧ್ಯಾತ್ಮಸಿದ್ಧಿಯಿಂದ ಉದ್ಭೂತವಾದ ದಾರ್ಶನಿಕ ಸತ್ಯಗಳ ಉದ್ದೀಪನಕ್ಕಾಗಿ ಕವಿಪ್ರತಿಭೆ ಕಾರ್ಯನಿರತ ವಾದಾಗ ಕತೆ ಮತ್ತು ಪಾತ್ರಗಳು ಸಹಜವಾಗಿಯೇ ಹೊಸ ರೂಪ ಪಡೆಯುತ್ತವೆ ; ಅವು ಹೊಸ ರೂಪ ಪಡೆದಂತೆ ಶೈಲಿಗೂ ಹೊಸ ಮೆರಗು ಹೊಗರು ವ್ಯಾಪ್ತಿಗಳು ಸಮನಿಸುತ್ತವೆ. ರಾಮಕೃಷ್ಣ, ವಿವೇಕಾನಂದ, ಅರವಿಂದ ಗಾಂಧೀಜಿಯರ ಅಭೂತ ಪೂರ್ವ ವ್ಯಕ್ತಿತ್ವದ ಪ್ರಭಾವವೂ, ಅದಕ್ಕಿಂತ ಮಿಗಿಲಾಗಿ ವಿಶ್ವಮಾನಪ್ರಜ್ಞೆಯೂ ಈ ಕಾವ್ಯದಲ್ಲಿ ಆದ್ಯಂತವಾಗಿ ಹಾಸು ಹೊಕ್ಕಾಗಿ ಹಬ್ಬಿಕೊಂಡಿವೆ. ಅನಂತದಿಂದ ಬಂದ ಜೀವ ದೀರ್ಘಯಾತ್ರೆ ಹೋರಾಟ ಸಾಧನೆಗಳ ಫಲವಾಗಿ ಅನಂತವನ್ನೇ ಸೇರುತ್ತದೆಂಬ ದರ್ಶನಧ್ವನಿಗೆ ಇಡೀ ಕಾವ್ಯವೇ ಪ್ರತಿಮೆಯಾಗಿದೆ. ಈಗಾಗಲೇ ಈ ಕೃತಿಯ ಬಗ್ಗೆ ಸಾಕಷ್ಟು ವಾದ ವಿವಾದಗಳು ನಡೆದಿವೆ ; ಖಂಡನೆ ಮಂಡನೆಗಳು ಜರುಗಿವೆ. ಇದು ಜಗತ್ತಿನ ಶ್ರೇಷ್ಠ ಮಹಾಕಾವ್ಯಗಳ ಅಗ್ರಪಂಕ್ತಿಯಲ್ಲಿ ಅವುಗಳಿಗೆ ಹೆಗಲೆಣೆಯಾಗಿ ನಿಲ್ಲ ಬಲ್ಲ ಕೃತಿಯೆಂಬ ನೆಲೆಯಲ್ಲಿ ವಿಮರ್ಶೆ ಬಂದು ನಿಂತಿದೆ.

ಮಹಾಕಾವ್ಯದಲ್ಲಿ ಸಕಲ ಸೃಜನಶೀಲ ಸಾಹಿತ್ಯಪ್ರಕಾರಗಳು ಉಚಿತ ಪ್ರಮಾಣ ದಲ್ಲಿ ಒಡಲುಗೊಳ್ಳುತ್ತವೆಂಬುದು ನಿಜವಾದರೂ, ಕುವೆಂಪು ಅವರ ಪರುಷಸದೃಶ

ಲೇಖನಿಯಿಂದ ಪ್ರತ್ಯೇಕವಾಗಿ ಹೊರಹೊಮ್ಮಿದ ಸಾಹಿತ್ಯಪ್ರಕಾರಗಳು ತಮ್ಮಷ್ಟಕ್ಕೆ ತಾವೇ ಅಗ್ರಸ್ಥಾನ ಪಡೆದಿವೆ. ಅವರು ರಚಿಸಿರುವ ಕಥೆಗಳು ಸಂಖ್ಯಾದೃಷ್ಟಿಯಿಂದ ಹೆಚ್ಚಿಲ್ಲವಾದರೂ, ಸಮಾಜದ ಲೋಪದೋಷಗಳನ್ನು ಎತ್ತಿ ತೋರಿಸುವಲ್ಲಿ, ಮಾನವ ಸ್ವಭಾವವನ್ನು ಪ್ರದರ್ಶಿಸುವಲ್ಲಿ ಯಶಸ್ವಿಯಾಗಿವೆ. 'ಧನ್ವಂತರಿಯ ಚಿಕಿತ್ಸೆ'ಯೊಂದೇ ಸಾಕು, ಅವರ ಕಥನ ಕೌಶಲಕ್ಕೆ ಹಾಗೂ ಧ್ವನಿಪೂರ್ಣವಾದ ವಿಡಂಬನೆಗೆ ಸಾಕ್ಷಿಯಾಗಿ. ಕುವೆಂಪು ರಚಿಸಿರುವ ಕಾದಂಬರಿಗಳು ಎರಡೇ ಎರಡು : ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು : ಗುಣಗಾತ್ರಗಳಿಂದ ಜಗತ್ತಿನ ಅಗ್ರಗಣ್ಯ ಕಾಂದಬರಿಗಳಿಗೆ ಹೊಯ್‌ಕಯ್ಯಾಗಿ ನಿಲ್ಲುವಂಥವು. ಮಲೆನಾಡಿನ ಭಾರತಗಳಂತಿರುವ ಈ ಎರಡು ಕಾದಂಬರಿಗಳಲ್ಲಿ ಒಂದೇ ಒಂದನ್ನು ಬರೆದಿದ್ದರೂ ಅವರ ಹೆಸರು ಜಾಗತಿಕ ಸಾರಸ್ವತ ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯುತ್ತಿತ್ತು. ಮಲೆನಾಡಿನ ಹಿನ್ನೆಲೆಯಲ್ಲಿ ನಿಸರ್ಗ ಸೌಂದರ್ಯಾಮೃತವಾರ್ಧಿಯಿಂದ ಮೂಡಿರುವ ಈ ಎರಡು ಕಾದಂಬರಿಗಳಲ್ಲಿ ಸಮಾಜ ಪುರುಷನ ನೂರಾರು ಅವತಾರಗಳನ್ನು, ಜೀವನದ ಸಹಸ್ರಮುಖಿಗಳನ್ನು, ಮಾನವನ ಸ್ವಭಾವ ಚೇಷ್ಟೆಗಳ ಅನಂತತೆಯನ್ನು ಗುರುತಿಸಬಹುದು. ಇಲ್ಲಿಯ ವಸ್ತು ಸನ್ನಿವೇಶ. ಪಾತ್ರಗಳನ್ನು ವಾಸ್ತವತೆಯಲ್ಲದ್ದಿ ತೆಗೆದಂತಿದ್ದರೂ, ಕ್ವಚಿತ್ತಾಗಿ ಆದರ್ಶದ ಹೋಳಿಯ ರಂಗಿನ ಗೆರೆಗಳು ಕಾಣಿಸಿಕೊಳ್ಳುತ್ತವೆ. ಆದರೆ ಆ ರಂಗುರಂಗಿನ ಗೆರೆಗಳು ಸ್ವಾದನೀಯ ಎಂಬುದನ್ನು ಮರೆಯುವಂತಿಲ್ಲ.

ಕುವೆಂಪು ಅವರು ಸುಸಮೃದ್ಧವಾಗಿ ಬೆಳೆಸಿರುವ ಮತ್ತೊಂದು ಸಾಹಿತ್ಯಪ್ರಕಾರ ನಾಟಕ. ಅವರು ರಚಿಸಿರುವ ಹದಿನಾಲ್ಕು ನಾಟಕಗಳಲ್ಲಿ 'ನನ್ನ ಗೋಪಾಲ' ಮತ್ತು 'ಮೋಡಣ್ಣನ ತಮ್ಮ' ಮಕ್ಕಳ ನಾಟಕಗಳು ; ಒಂದು ಭಕ್ತಿಪ್ರಧಾನ ನಾಟಕವಾದರೆ, ಮತ್ತೊಂದು ವಾಸ್ತವತೆಯನ್ನು ಪ್ರತಿಬಿಂಬಿಸುವ ಕಾಲ್ಪನಿಕ ಕೃತಿ, ಚಂದ್ರಹಾಸ. ಯಮನ ಸೋಲು, ಮಹಾರಾತ್ರಿ, ಶ್ಮಶಾನ ಕುರುಕ್ಷೇತ್ರ, ವಾಲ್ಮೀಕಿಯ ಭಾಗ್ಯ, ಕಾನೀನ, ಶೂದ್ರತಪಸ್ವಿ ಮತ್ತು ಬೆರಳ್‌ಗೆ ಕೊರಳ್ ಪೌರಾಣಿಕ ನಾಟಕಗಳು. ಶೇಕ್ಸ್‌ಪಿಯರ್‌ನ ಟೆಂಪೆಸ್ಟ್ ನಾಟಕದ ಭಾವಾನುವಾದ 'ಬಿರುಗಾಳಿ', ರಕ್ತಾಕ್ಷಿ ಐತಿಹಾಸಿಕ ನಾಟಕ; ಜಲಗಾರ ದಲಿತ ಪ್ರಜ್ಞೆಯ ಸಾಮಾಜಿಕ ನಾಟಕ, ಬಲಿದಾನ ಪೌರಾಣೇತಿಹಾಸ ನಾಟಕ, ಯಮನ ಸೋಲು, ರಕ್ತಾಕ್ಷಿ, ಶೂದ್ರತಪಸ್ವಿ, ಬೆರಳ್‌ಗೆ ಕೊರಳ್ ನಾಟಕಗಳು ವಸ್ತು, ಪಾತ್ರ, ಸಂದೇಶ ಹಾಗೂ ನಾಟಕೀಯತೆಗಳ ದೃಷ್ಟಿಯಿಂದ ಅವರ ಅತ್ಯುತ್ತಮ ಕಲಾಕೃತಿಗಳು ಮಾತ್ರವಲ್ಲ, ನಾಟಕ ಕ್ಷೇತ್ರದಲ್ಲಿ ಅಗ್ರಸ್ಥಾನಕ್ಕರ್ಹವಾದವುಗಳು. ನಾಟ್ಯ ಛಂದಸ್ಸಿನ ಪ್ರಯೋಗದಲ್ಲಿ, ಪಾತ್ರ ಸನ್ನಿವೇಶಾನುಗುಣವಾದ ಸಂಭಾಷಣೆಯನ್ನು ರೂಪಿಸುವ ಕೌಶಲ್ಯದಲ್ಲಿ, ಪುರಾಣಗಳ ಪ್ರಾಚೀನತೆಯ ಗರ್ಭದಲ್ಲಿ ನವೀನತೆಯ ಕುಸುಮಗಳನ್ನರಳಿಸುವಲ್ಲಿ, ದಾರ್ಶನಿಕ ನಿತ್ಯಸತ್ಯಗಳನ್ನು ಅಭಿವ್ಯಕ್ತಗೊಳಿಸುವಲ್ಲಿ, ಪರಸ್ಪರ ವಿರೋಧವಾಗದಂತೆ ಲೌಕಿಕಾಲೌಕಿಕ ಸಂಗತಿಗಳನ್ನು ಸಮರಸವಾಗಿ ಮಿಲನ

ಗೊಳಿಸುವಲ್ಲಿ ಕುವೆಂಪು ಸಫಲರಾಗಿದ್ದಾರೆ.

'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಸೂಕ್ತಿ ವಿಖ್ಯಾತವಾಗಿದ್ದರೂ ಹಳಗನ್ನಡ ನಡುಗನ್ನಡ ಸಾಹಿತ್ಯವೆಲ್ಲ, ಕೆಲವು ಅಪವಾದಗಳನ್ನುಳಿದರೆ, ಬಹುಪಾಲು ಪದ್ಯ ಕಾವ್ಯಗಳಿಂದ ಕಿಕ್ಕಿರಿದಿದೆ. ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದಿಂದಾಗಿ ಕಾದಂಬರಿ ಪ್ರಬಂಧ ಮೊದಲಾದ ಅನೇಕ ಸಾಹಿತ್ಯಪ್ರಕಾರಗಳು ಉದಯಿಸಿದಂತೆ, ಪಾಶ್ಚಾತ್ಯ ನಾಗರಿಕತೆಯ ಪರಿಣಾಮವಾಗಿ, ವಿಜ್ಞಾನ ತಂತ್ರವಿಜ್ಞಾನಗಳ ಪ್ರಭಾವದಿಂದಾಗಿ ಚಲನೆ ಗೊಂಡ ಹೊಸ ವಿಚಾರಾಲೋಚನೆಗಳ ಅಭಿವ್ಯಕ್ತಿಗಾಗಿ ಬಹು ಆಯ ಆಯಾಮಗಳ ಆಯಾತವಾದ ಹೊಸ ರೀತಿಯ ಗದ್ಯ ಅನಿವಾರ್ಯವಾಯಿತು. ಅಂಥ ವೈವಿಧ್ಯಮಯ ಗದ್ಯಸೃಷ್ಟಿ ನವೋದಯ ಕಾಲದ ಸಾಹಿತಿಗಳಿಗೆ, ಪತ್ರಕರ್ತರಿಗೆ ಹಾಗೂ ಎಲ್ಲ ಬಗೆಯ ವಿಚಾರವಂತರಿಗೆ ಸವಾಲಾಯಿತು. ಆ ಸವಾಲನ್ನೆದುರಿಸಿ, ಕನ್ನಡವನ್ನು ಪುಷ್ಟಿಗೊಳಿಸಿ, ಅದಕ್ಕೆ ಸಕಲ ಸಾಮರ್ಥ್ಯ ತೇಜಸ್ಸುಗಳನ್ನು ದಾನ ಮಾಡಿ, ಅದನ್ನು ಶ್ರೀಮಂತ ಗೊಳಿಸಿದವರಲ್ಲಿ ಕುವೆಂಪು ಅಗ್ರಗಣ್ಯರು. ಅವರ ಗದ್ಯದಲ್ಲಿ ಸೂರ್ಯಪ್ರಭೆಯಿದೆ, ನಕ್ಷತ್ರ ಗಳ ಮಿಂಚಿದೆ, ಸಿಂಹ ಗಾಂಭೀರ್ಯವಿದೆ, ಮಂದ ಮಂದಾಕಿನಿಯ ವೈಭವವಿದೆ, ನಿರ್ಝರಿಣಿಯ ಆವೇಶವಿದೆ, ವಾಯುವಿನ ವ್ಯಾಪಕತೆಯಿದೆ, ತೇಜಿಯ ಚಟುಲತೆ ಇದೆ, ಮಯೂರನ ನೃತ್ಯವಿಲಾಸವಿದೆ, ನಿಸರ್ಗದ ಚೆಲುವಿದೆ, ನೆಲದ ಸೊಗಡಿದೆ, ಕಾವ್ಯದ ಮೋಹಕತೆಯಿದೆ, ಲಯದ ಮೋಡಿಯಿದೆ. ಕತೆಗಾರಿಕೆಯೆ, ನಾಟಕೀಯತೆಯೆ, ಚರಿತ್ರೆಯೆ, ತತ್ತ್ವಶಾಸ್ತ್ರವೆ, ತರ್ಕವೆ, ಕಾವ್ಯಮೀಮಾಂಸೆಯೆ–ಎಂಥ ಗಹನ ಸೂಕ್ಷ್ಮ ವಿಚಾರಗಳನ್ನಾದರೂ ಮೂರ್ತೀಕರಿಸಬಲ್ಲ ಅಗಾಧ ಶಕ್ತಿ ಅದಕ್ಕಿದೆ. ಕನ್ನಡ ಗದ್ಯ ಸಮೂಹದಲ್ಲಿದ್ದು ಕಾಣುವ ಭವ್ಯ ದೈತ್ಯಶೈಲಿ ಕುವೆಂಪು ಅವರದು. ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆಗಳು ಗದ್ಯಕಾವ್ಯಗಳಾ ಗಿವೆ. ಗದ್ಯದ ವಿವಿಧ ಲಾಸ್ಯ ತಾಂಡವಗಳಿಗೆ ಅವರ ಕಾದಂಬರಿಗಳು ಹಾಗೂ ಅವರ ಆತ್ಮಕಥೆ ವೇದಿಕೆಗಳಾಗಿವೆ.

ಕುವೆಂಪು ಗದ್ಯದ ಲಾಲಿತ್ಯಕ್ಕೆ ಹಾಗೂ ಸೌಕುಮಾರ್ಯಕ್ಕೆ 'ಮಲೆನಾಡಿನ ಚಿತ್ರಗಳು' ನಿದರ್ಶನವಾಗಿದೆ. ಕತೆಗಳೂ ಅಲ್ಲದ, ಪ್ರಬಂಧಗಳೂ ಅಲ್ಲದ ಆ ಚಿತ್ರಗಳ ಗದ್ಯದಲ್ಲಿ ಮಲೆನಾಡಿನ ವನರಾಜಿಯ ಸೌಮ್ಯವರ್ಣಗಳ ಲಾವಣ್ಯವನ್ನು ಕಾಣಬಹುದು. ಗದ್ಯದಲ್ಲಿ ಸಮುದ್ರಘೋಷದ ಗಾಂಭೀರ್ಯವನ್ನು, ಗಗನೌನ್ನತ್ಯವನ್ನು, ವಿಯತ್‌ಪರ್ಯಟನ ಸಾಮರ್ಥ್ಯವನ್ನು, ಬೀಸು ಬಿರುಸು ಬನಿಗಳನ್ನು ಕಾಣಬೇಕಾದರೆ ಅವರ ಉಪನ್ಯಾಸ ಗಳನ್ನೂ, ಪ್ರಬಂಧಗಳನ್ನೂ ಮರೆಹೊಗಬೇಕು. ಕಾವ್ಯಮೀಮಾಂಸೆ ಮತ್ತು ವಿಮರ್ಶೆ ಗಳ ಗದ್ಯ ಹೊಚ್ಚ ಹೊಸದಾಗಿದ್ದು, ಅದು ಕನ್ನಡ ಭಾಷೆಗೊಂದು ವಿಶಿಷ್ಟ ಕೊಡುಗೆ ಯಾಗಿದೆಯೆಂದೇ ಹೇಳಬಹುದು ! ಸಂಸ್ಕೃತ, ಸಮಸಂಸ್ಕೃತ, ತತ್ಸಮಗಳನ್ನು ಕನ್ನಡಕ್ಕೆ ಸರಿಮಾಡಿ, ಕನ್ನಡದ ಮೇಲೆ ಕಸಿ ಕಟ್ಟಿ, ಕನ್ನಡ ಪದಗಳೊಡನೆ ಸಂಗಳಿಸಿದಾಗ, ಅವು

ಕನ್ನಡ ವ್ಯಾಕರಣದ ನಿಯಮಗಳನ್ನು ಪಾಲಿಸಿ, ಅದರ ಪ್ರಕ್ರಿಯೆಗಳನ್ನೊಪ್ಪಿಕೊಂಡು ಕನ್ನಡದ ಗೋತ್ರವನ್ನು ಸ್ವೀಕರಿಸಿದಾಗ ಕನ್ನಡ ಗದ್ಯ ಅನುಪಮ ಸೌಂದರ್ಯದಿಂದ ವಿರಾಜಿಸುತ್ತದೆ. ಸಂಸ್ಕೃತ ಪದಗಳಿಗೆ ಹೊಸ ಅರ್ಥವನ್ನು ಕಲ್ಪಿಸಿ, ಅವುಗಳಿಂದ ವಿನೂತನ ಪದಗಳನ್ನು ಟಂಕಿಸಿ, ನಿರ್ಜೀವ ಪದಗಳಿಗೆ ಪ್ರಾಣದಾನ ಮಾಡಿ ಹೊಸ ಪರಿಭಾಷೆಯನ್ನವರು ನಿರ್ಮಿಸಿದ್ದಾರೆ. ಅರ್ಥಸ್ಫುರಣಕ್ಕೆ ವಿಘ್ನವಾಗದ ಕಾವ್ಯಸೌಂದರ್ಯ ಇಲ್ಲಿಯ ಗದ್ಯದ ಪ್ರಮುಖ ಲಕ್ಷಣಗಳಲ್ಲೊಂದಾಗಿರುವುದರಿಂದ, ಈ ಪ್ರಬಂಧಗಳು ಸುಲಭಗಮ್ಯವಾಗುತ್ತವೆ.

ಶಿಶುಸಾಹಿತ್ಯದಿಂದ ಹಿಡಿದು ಪ್ರೌಢಸಾಹಿತ್ಯದವರೆಗೆ, ಸರ್ವಪ್ರಕಾರಗಳಲ್ಲಿ ಸಾಧನಾನಿರತರಾಗಿ, ಶಿಖರಸ್ಥಾನವನ್ನು ತಲುಪಿರುವ ಹೆಗ್ಗಳಿಕೆ ಕುವೆಂಪು ಅವರದು. ಇಂಥ ಬಹುಮುಖಪ್ರತಿಭೆಯ ಸಾಹಿತಿಗಳು ಪಾಶ್ಚಾತ್ಯ ಸಾಹಿತ್ಯ ಲೋಕದಲ್ಲಿಯೂ ವಿರಳ. ರಾಮಕೃಷ್ಣ ಪರಮಹಂಸರ ಸರ್ವಧರ್ಮ ಸಮನ್ವಯ ತತ್ತ್ವವನ್ನು, ಸ್ವಾಮಿ ವಿವೇಕಾನಂದರ ವೇದಾಂತವನ್ನು, ಅರವಿಂದರ ಪೂರ್ಣದೃಷ್ಟಿಯನ್ನು, ಗಾಂಧೀಜಿಯ ಸರ್ವೋದಯ ಸಿದ್ಧಾಂತವನ್ನು ತಮ್ಮ ಬದುಕಿನಲ್ಲಿ ಅರಗಿಸಿಕೊಂಡಿರುವ ಕುವೆಂಪು ಅವರಿಗೆ ಜಾತಿಮತ ವರ್ಣವರ್ಗಗಳ ಸೂತಕವಾಗಲಿ, ಯಾವುದೇ ತಾರತಮ್ಯದ ದೋಷವಾಗಲಿ ತಗಲುವುದಿಲ್ಲ : ಅವರಿಗೆ ಶೋಷಣೆಯೆಂದರಾಗದು ; ಅಸಾಮಾನ್ಯರಲ್ಲೆಷ್ಟೋ ಸಾಮಾನ್ಯರಲ್ಲಿಯೂ ಅಷ್ಟೇ ಗೌರವ ; ಹಿಂದಿನ ಸಾಹಿತ್ಯದಲ್ಲೆಲ್ಲಿಯೂ ಕಾಣಸಿಗದ ದಾಂಪತ್ಯದರ್ಶನ ಪ್ರೇಮೋಪನಿಷತ್ತಿನಂತಿರುವ ಹಲವು ಕವನಗಳಲ್ಲಿ ಮೈದೋರಿದೆ ; ಮನುಕುಲದ ಅಂತಿಮ ಶ್ರೇಯಸ್ಸಿನಲ್ಲಿ, ಮಾನವತೆ ಅತಿಮಾನವತೆಯ ಕಡೆಗೆ ಯಾತ್ರೆಗೈಯುತ್ತಿದೆಯೆಂಬ ಋಷಿವಾಣಿಯಲ್ಲಿ ಅವರಿಗೆ ವಿಶ್ವಾಸವಿದೆ. ಈ ಎಲ್ಲ ಪ್ರೇರಣೆಗಳ ಹಾಗೂ ವಿಶ್ವಾಸದ ಪರಿಣಾಮವಾಗಿ ಅವರ ಮಾನಸತೀರ್ಥದಲ್ಲಿ ವಿಶ್ವಪ್ರಜ್ಞೆ ಅರಳಿದೆ; ಅದೇ ಅವರ ವಿಶ್ವಮಾನವ ಸಿದ್ಧಾಂತಕ್ಕೆ ಸ್ಫೂರ್ತಿ ಶಕ್ತಿಯಾಗಿದೆ.

ಈ ವಿಶ್ವಮಾನವ ಸಂದೇಶ ದಿಢೀರನೆ ಸಿದ್ಧಗೊಂಡ ಅಪರಿಪಕ್ವ ಪಾಕವಲ್ಲ; ಅದು ಕವಿಯ ಇಡೀ ಬದುಕಿನ ಸಾರಸರ್ವಸ್ವವಾಗಿದೆ. ಅವರ ಮೊದಮೊದಲ ಕವಿತೆಗಳಲ್ಲಿಯೇ ಅದು ಅಂಕುರಾರ್ಪಣೆಗೊಂಡಂತೆ ತೋರುತ್ತದೆ. 'ನಿನ್ನ ಬಾಂದಳದಂತೆ ನನ್ನ ಮನವಿರಲಿ ! ನಿನ್ನ ಸಾಗರದಂತೆ ನನ್ನ ಎದೆಯಿರಲಿ' ಎಂಬ ಸ್ತೋತ್ರದಲ್ಲಿಯೇ ಕವಿಯ ಅಭೀಪ್ಸೆ ಸುವ್ಯಕ್ತವಾಗುತ್ತದೆ. ಅದು ಕಾಲಕ್ರಮೇಣ ವಿಕಾಸಗೊಂಡದ್ದನ್ನು 'ಗುಡಿ ಚರ್ಚು ಮಸಜೀದುಗಳ ಬಿಟ್ಟು ಹೊರಬನ್ನಿ' : 'ಯಾವ ಮತದವನಲ್ಲ, ಎಲ್ಲ ಮತದವನು ! ಯಾವ ಪಂಥವು ಅಲ್ಲ ಬಹುಪಂಥದವನು' : 'ಇದು ಸರ್ವರ ಕಾಲ ; ಸರ್ವೋದಯ ಯುಗಮಂತ್ರ.' ಎಂದು ಮೊದಲಾಗಿ ಅವರು ಕೊನೆತನಕ ಘೋಷಿಸುತ್ತ ಬಂದಿದ್ದಾರಲ್ಲದೆ, ತಮ್ಮ ಬಳಿಗ ಬಂದವರಿಗೆಲ್ಲ ಆ ಮಂತ್ರವನ್ನೆ ಉಪದೇಶಿಸುತ್ತಾರೆ. 'ಆ ಮತದ ಈ ಮತದ ಹಳೆ ಮತದ ಸಹವಾಸ ! ಸಾಕಿನ್ನು ಸೇರಿರೈ ಮನುಜಮತಕೆ !

ಓ ಬನ್ನಿ ಸೋದರರೆ, ವಿಶ್ವಪಥಕೆ' ಎಂದವರು ಅರ್ಧ ಶತಮಾನದ ಹಿಂದಿನಿಂದ ಒಂದೇ ಸಮನೆ ಹೇಳುತ್ತಿದ್ದಾರೆ. 7-5-1937ರಂದು 39ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಮಾತಾಡುತ್ತ, ಸೆಕ್ಯೂಲರ್ ಸ್ಟೇಟ್ ಎಂದರೆ ಸಮನ್ವಯ ರಾಷ್ಟ್ರವೆಂದು ಅರ್ಥೈಸಿ, 'ಎಲ್ಲ ಮತಗಳೂ ಸತ್ಯದೆಡೆಗೆ ನಮ್ಮನ್ನು ಕೊಂಡೊಯ್ಯುವ ಬೇರೆ ಬೇರೆ ಪಥಗಳು' ಎಂದು, 'ರಿಪಬ್ಲಿಕ್' ಅಥವಾ ಸರ್ವಪ್ರಜಾಧಿಪತ್ಯದ ಗುರಿ ಸರ್ವೋದಯ, ಸಮತೆ ಮತ್ತು ಸಮದರ್ಶನ' ಎಂದು, 'ಮಾನವನ ಬ್ರಾಹ್ಮೀ ಪ್ರಜ್ಞಾ ವಿಕಾಸಕ್ಕೆ ಪೂರ್ವ ಭಿತ್ತಿರೂಪವಾಗಿರುವ ಪೂರ್ಣದೃಷ್ಟಿಯ ರಸಸ್ಯಂದಿಯಾದ ಪ್ರತಿಪಾದನೆ' ಅಗತ್ಯವೆಂದು, 'ಈ ವಿಶ್ವಮಾನವ ರಚನೆಯೆ ನಮ್ಮ ಇತರ ಎಲ್ಲ ಉದ್ಧಾರೋದ್ಯಮಗಳ ಮತ್ತು ಸುಖಸಾಧನೆಯ ಸಾಹಸಗಳ ಅಂತರಾತ್ಮದಲ್ಲಿ ಅಡಗಿರುವ ಪ್ರಚ್ಛನ್ನ ಪ್ರೇರಣೆ ಎಂದು, 'ಈ ಪೂರ್ಣದೃಷ್ಟಿ ದೇಶ ಕಾಲ, ಪೂರ್ವ ಪಶ್ಚಿಮ, ಮತ ಜಾತಿ, ವರ್ಣ ಪಕ್ಷ ಪಂಥ ಸಿದ್ಧಾಂತಾದಿ ಎಲ್ಲ ತೆರನಾದ ಸೀಮೆಗಳನ್ನೂ ಉಲ್ಲಂಘಿಸಿ ಅತೀತವಾಗಿರುತ್ತದೆ, ಅನಿಕೇತನವಾಗಿರುತ್ತದೆ, ನಿತ್ಯವಾಗಿರುತ್ತದೆ' ಎಂದವರು ಸ್ಪಷ್ಟಪಡಿಸುತ್ತಾರೆ. ವಿಶ್ವಮಾನವ ಸಂದೇಶದ ಜೀವಾಳದಂತಿರುವ 'ಅನಿಕೇತನ' ಕವಿತೆ ಸೃಷ್ಟಿಯಾದುದು ಇನ್ನೂ ಹಿಂದೆ ಎಂಬುದು ಗಮನಾರ್ಹ ಸಂಗತಿ. 1959ರಲ್ಲಿ ಮಡಿಕೇರಿಯಲ್ಲಿ ನೀಡಿದ ಉಪನ್ಯಾಸವೊಂದರಲ್ಲಿ, ವಿಶ್ವಪ್ರಜ್ಞೆಯ ವಿಕಾಸಕ್ಕೆ, ವಿಶ್ವಮೈತ್ರಿಯ ಸಂಘಟನೆಗೆ ವಿಶ್ವಮಾನವ ರಚನೆಗೆ ವಿಶ್ವವಿದ್ಯಾನಿಲಯಗಳು ಪ್ರಯತ್ನಿಸಬೇಕೆಂದು ಲೋಕಕ್ಕೆ ಕರೆಕೊಡುತ್ತಾರೆ. ಸುಮಾರು ಅದೇ ಸಮಯದಲ್ಲಿ ಪುತ್ತೂರಿನಲ್ಲಿ ನೀಡಿದ ಉಪನ್ಯಾಸದಲ್ಲಿಯೂ ಸಮನ್ವಯರಾಷ್ಟ್ರದಲ್ಲಿ ವಿಶ್ವವಿದ್ಯೆಯ ಅಗತ್ಯವನ್ನು ಒತ್ತಿ ಹೇಳುತ್ತಾರೆ. 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ತಮಗೆ ಡಾಕ್ಟರೇಟ್ ಪ್ರಶಸ್ತಿ ನೀಡಿದ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿಯೂ ಇದೇ ಭಾವನೆ ಮೊಳಗುತ್ತದೆ : 'ಉಗ್ರಪ್ರಾಂತೀಯತೆಯ ಸ್ವಾರ್ಥತೆ ಸ್ವಪ್ರತಿಷ್ಠೆಗಳು ರಾಷ್ಟ್ರೀಯತೆಯ ಪ್ರೇಮ ಸೌಹಾರ್ದದಲ್ಲಿ, ಉಗ್ರರಾಷ್ಟ್ರೀಯತೆಯ ಸಂಕುಚಿತ ಭಾವನೆಗಳು ಅಂತಾರಾಷ್ಟ್ರೀಯತೆಯ ವಿಶಾಲ ಭಾವನೆಯಲ್ಲಿ ಲೀನವಾಗದ ಹೊರತು ನಾಡಿಗೆ ಕ್ಷೇಮವಿಲ್ಲ. ಲೋಕಕ್ಕೆ ಕಲ್ಯಾಣವಿಲ್ಲ. ಜೀವನವನ್ನು ಪೂರ್ಣದೃಷ್ಟಿಯಿಂದ ನೋಡಿ, ಅನೇಕತೆಯನ್ನು ಸಮನ್ವಯಗೊಳಿಸುವ ಬುದ್ಧಿ ತಲೆದೋರಿದಾಗ ಎಲ್ಲೆಲ್ಲೂ ಸಮತಾಭಾವ ಮೈದೋರಿ ಸರ್ವೋದಯ ಸಿದ್ಧಾಂತ ಸಂಸ್ಥಾಪಿತವಾಗುತ್ತದೆ'. (ಷಷ್ಟಿನಮನ : ಪು. 200) ಮನಕುಲದ ಐಕ್ಯಸಾಧನೆಗೆ ನೆರವಾಗಬೇಕಾಗಿದ್ದ, ಮಾನವನ ಹೃದಯದಲ್ಲಿ ಆಧ್ಯಾತ್ಮ ಬೀಜವನ್ನು ಬಿತ್ತಬೇಕಾಗಿದ್ದ, ಯುದ್ಧ ಕಲಹಗಳನ್ನು ಸ್ತಂಭನಗೊಳಿಸಬೇಕಾಗಿದ್ದ ಮತ ಅನೈಕ್ಯಕ್ಕೆ, ಮೌಢ್ಯಕ್ಕೆ ಹಾಗೂ ಯುದ್ಧಕಲಹಗಳಿಗೆ ಚೋದಕ ಶಕ್ತಿಯಾಗುತ್ತಿರುವುದನ್ನು ಕಂಡಾಗ ಕುವೆಂಪು ಕಳವಳಕ್ಕೀಡಾಗುತ್ತಾರೆ. ವಿಶ್ವಮಾನವನಾಗಿ ಹುಟ್ಟಿದ ಮಗು ಮತೀಯ ಸಂಕೋಲೆಯಲ್ಲಿ ಬೆಳೆಯುವಾಗ, ಲೋಕದಲ್ಲಿ ಶಾಂತಿಸ್ಥಾಪನೆ ಸಾಧ್ಯವೇ

ಎಂದವರು ಪ್ರಶ್ನಿಸುತ್ತಾರೆ.

ಕುವೆಂಪು ಅವರ ಬದುಕಿನ ಸಮಸ್ತ ಚೈತನ್ಯದ ಸಾರವಾಗಿ, ಅವರ ಕಾವ್ಯ ಪ್ರತಿಭೆಯ ವೈಜ್ಞಾನಿಕ ಮನೋಧರ್ಮದ ವೈಚಾರಿಕ ಬುದ್ಧಿಯ ಕ್ರಾಂತಿಕಾರಿ ಮತಿಯ ಸಾರಾಯವಾಗಿ, ಸುದೀರ್ಘಾನುಭವ ಹಾಗೂ ಅನುಭಾವದ ಪರಿಣಾಮವಾಗಿ, ಅವರ ಸಮಗ್ರ ಕಾವ್ಯಸಂದೇಶಕ್ಕೆ ಶಿಖರಪ್ರಾಯವಾಗಿ, ವಿಶ್ವಮಾನವ ಸಂದೇಶ ಹೊರ ಹೊಮ್ಮಿದೆ. ಅವರೀಗ ಕಾರಯಿತ್ರೀ ಪ್ರತಿಭೆಯನ್ನು ಸ್ಥಗಿತಗೊಳಿಸಿ, ಆಗಾಗ್ಗೆ ತಾವೇ ಸೃಷ್ಟಿಸಿದ ಕಾವ್ಯಲೋಕದಲ್ಲಿ ವಿಹರಿಸುತ್ತ ಅಧ್ಯಾತ್ಮಸಾಧನೆಯನ್ನು ಮುಂದುವರಿಸುತ್ತ, ಲೋಕಕಲ್ಯಾಣಕ್ಕಾಗಿ ಪ್ರಾರ್ಥನೆ ನಡೆಸುತ್ತ, ಸಂದರ್ಶನಾರ್ಥಿಗಳಾಗಿ ಬಂದವರಿಗೆ ವಿಶ್ವ ಮಾನವ ಸಂದೇಶವನ್ನು ಉಪದೇಶಿಸುತ್ತ, ನಿರ್ಲಿಪ್ತರಂತಿದ್ದಾರೆ. ಶ್ರೀ ರಾಮಾಯಣ ದರ್ಶನಂ ವಿಶ್ವಮಾನವ ಸಂದೇಶಕ್ಕೆ ಭಾಷ್ಯದಂತಿದೆ. ಅದು ಕುವೆಂಪುವನ್ನು ಸೃಜಿಸಿ ದಂತೆ, ವಿಶ್ವಮಾನವ ಸಂದೇಶ ಅವರನ್ನು ವಿಶ್ವಮಾನವತ್ವಕ್ಕೇರಿಸಿದೆ.

ಡಾ. ದೇ. ಜವರೇಗೌಡ

# ಕನ್ನಡದಲ್ಲಿ ರಾಮಾಯಣ

ರಾಮಾಯಣ ಜಗತ್ತಿನ ಮಹಾಕಾವ್ಯಗಳಲ್ಲಿ ಒಂದು. ನಮ್ಮ ದೇಶದಲ್ಲಂತೂ ಅದು ಆದಿಕಾವ್ಯ, ಪೂಜ್ಯ ಕಾವ್ಯ. ಅದನ್ನು ಕಾವ್ಯವೆಂದು ಆಸ್ವಾದಿಸುವ, ಪುರಾಣ ವೆಂದು ಆರಾಧಿಸುವ ಕೋಟಿ ಕೋಟಿ ಜನರಿದ್ದಾರೆ: ಇತಿಹಾಸವೆಂದು ತಿಳಿದಿರು ವವರೂ ಅನೇಕರಿದ್ದಾರೆ. ಸಾಮಾನ್ಯ ಭಾರತೀಯನಿಗೆ ಅದೊಂದು ದೈವಿಕ ಘಟನೆ. ಅದರ ಬಗೆಗೆ ಅವನಲ್ಲಿ ಯಾವ ಪ್ರಶ್ನೆಗೂ, ಶಂಕೆಗೂ ಆಸ್ಪದವಿಲ್ಲ. ಸಂಸ್ಕೃತದಲ್ಲಿಯೂ ಭಾರತದ ಇತರ ದೇಶ ಭಾಷೆಗಳಲ್ಲಿಯೂ ಮಾತ್ರವಲ್ಲ, ಭಾರತದ ನೆರೆಹೊರೆಯ ಇತರ ರಾಷ್ಟ್ರಗಳ ಅನೇಕ ಭಾಷೆಗಳಲ್ಲಿಯೂ ರಾಮಾಯಣ ಸಾವಿರಾರು ಕೃತಿಗಳಿಗೆ ಆಕರವಾಗಿದೆ ; ಸಾವಿರಾರು ಕವಿಗಳಿಗೆ ಅದು ಸ್ಫೂರ್ತಿಯನ್ನೊದಗಿಸಿದೆ. ರಾಮಾಯಣ ಭಾಷಾಂತರಗೊಳ್ಳದ ನಮ್ಮ ಭಾಷೆಗಳೇ ಇಲ್ಲವೆನ್ನಬಹುದು, ಶಿಷ್ಟಸಾಹಿತ್ಯ, ಬರವಣಿಗೆ ಇಲ್ಲದ ಭಾಷೆಗಳಲ್ಲಿಯೂ ಅದು ಜನಪದ ಸಾಹಿತ್ಯದ ರೂಪತಾಳಿದೆ. ರಾಮಾಯಣ ಎಷ್ಟರ ಮಟ್ಟಿಗೆ ಜನಪ್ರಿಯವಾಯಿತೆಂದರೆ, ಎಷ್ಟು ಕೃತಿಗಳು ಅದನ್ನು ಅನುಸರಿಸಿ ರಚಿತ ವಾದುವೆಂದರೆ, ಕುಮಾರವ್ಯಾಸನೆಂಬ ಕನ್ನಡದ ಮಹಾಕವಿಯೊಬ್ಬ ರಾಮಾಯಣದ ಭಾರದಿಂದ ಆದಿಶೇಷನೆ ತಿಣುಕುತ್ತಿದ್ದಾನೆಂದು ಹೇಳಿ ತಾನು ಮಹಾಭಾರತದ ಕಥೆ ಯನ್ನು ಆರಿಸಿಕೊಂಡ !

ನಮ್ಮ ರಾಷ್ಟ್ರದ ಅನೇಕ ಸಾಹಿತ್ಯಗಳ ಪ್ರಾರಂಭಿಕ ಕೃತಿಗಳು ರಾಮಾಯಣ ಮಹಾಭಾರತಗಳ ಅನುವಾದಗಳೋ, ಅವನ್ನು ಅನುಸರಿಸಿ ನಿರ್ಮಿಸಿದ ಸ್ವತಂತ್ರ ಕೃತಿ ಗಳೋ ಆಗಿವೆ. ರಾಮಾಯಣ, ಮಹಾಭಾರತಗಳು ನಮ್ಮ ಜನದ ಮನಸ್ಸಿನಲ್ಲಿ ಎಷ್ಟು ಬಲವಾಗಿ ಬೇರೂರಿವೆ ಎಂದರೆ, ಎಷ್ಟರಮಟ್ಟಿಗೆ ರಾಷ್ಟ್ರಜೀವನವನ್ನು ತುಂಬಿಕೊಂಡಿವೆ ಎಂದರೆ ಹಿಂದುಗಳು ಅಲ್ಲದವರು ಕೂಡ ಈ ಕಾವ್ಯಗಳ ಪ್ರಭಾವದಿಂದ ತಪ್ಪಿಸಿಕೊಳ್ಳು ವುದು ಸಾಧ್ಯವಾಗಲಿಲ್ಲ. ನಮ್ಮ ಸಾಹಿತ್ಯಗಳಲ್ಲಿ ಕೃಷಿ ಮಾಡಿದ ಬೌದ್ಧರು, ಜೈನರು ಈ ಮಹಾಕಾವ್ಯಗಳ ಆಕರಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾರೆ. ಮುಸ್ಲಿಂ ಮತ್ತು ಕ್ರೈಸ್ತ ಲೇಖಕರು ಕೂಡ ಇದಕ್ಕೆ ಅಪವಾದವಾಗಿಲ್ಲ. ಎಲ್ಲರೂ ತಮ್ಮ ತಮ್ಮ ಜೀವನ ವಿಧಾನ ದೃಷ್ಟಿ ಧೋರಣೆ ನಂಬುಗೆ ಶ್ರದ್ಧೆಗಳಿಗೆ ಅನುಗುಣ ವಾಗಿ ಕೃತಿರಚನೆ ಮಾಡಿದ್ದರೂ, ಹಿನ್ನೆಲೆಯಲ್ಲಿ ಈ ರಾಷ್ಟ್ರೀಯ ಮಹಾಕಾವ್ಯಗಳು ಪ್ರಬಲವಾಗಿ ನಿಂತಿವೆ. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯ ಬೇರೆಯಾದುದೇನೂ ಅಲ್ಲ. ವಿವಿಧ ದೃಷ್ಟಿಯ ರಾಮಾಯಣ ರಚನೆಗಳನ್ನು ಈ ಸಾಹಿತ್ಯದಲ್ಲಿ ನೋಡಬಹುದು. ಇಂದಿಗೂ ಇಲ್ಲಿ ರಾಮಾಯಣದ ಬೇರೆ ಬೇರೆ ಬಗೆಯ ಅನುವಾದಗಳು ಪ್ರಕಟವಾಗು

ತ್ತಿವೆ ; ರಾಮಾಯಣದ ವಸ್ತುವನ್ನಾಧರಿಸಿದ ಕೃತಿಗಳು ಪ್ರಕಟವಾಗುತ್ತಿವೆ ; ರಾಮಾಯಣದ ವಿವಿಧ ಸಮಸ್ಯೆಗಳನ್ನು ಚರ್ಚಿಸುವ ಸಂಶೋಧನೆಯ, ವಿಮರ್ಶೆಯ ಕೃತಿಗಳು ಪ್ರಕಟವಾಗುತ್ತಿವೆ. ಏಕಪ್ರಕಾರವಾಗಿ ಮಾರಾಟವಾಗುವ ಪುಸ್ತಕಗಳೆಂದರೆ ರಾಮಾಯಣದ ಕಥೆಗಳೇ. ಅದರ ಹೊಸ ಒಂದು ಅನುವಾದ ಪ್ರಕಟವಾದರೆ ಅದು ಕಾದಂಬರಿಯ ಮಾರಾಟವನ್ನು ಮೀರಿಸುತ್ತದೆ.

ಪ್ರಸ್ತುತ ಚಿಕ್ಕ ಸಮೀಕ್ಷೆಯಲ್ಲಿ ಕನ್ನಡದ ರಾಮಾಯಣ ಪರಂಪರೆಯನ್ನು ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ. ಎಲ್ಲ ಕೃತಿಗಳನ್ನೂ, ಎಲ್ಲ ಲೇಖಕರನ್ನೂ ಕುರಿತು ಹೇಳುವುದಿರಲಿ, ಹೆಸರಿಸುವುದು ಕೂಡ ಇಂಥ ಸಂದರ್ಭದಲ್ಲಿ ಸಾಧ್ಯವಿಲ್ಲ. ಸಂಖ್ಯೆ ನಿಜಕ್ಕೂ ಅಷ್ಟು ದೊಡ್ಡದು. ಆದರೆ ರಾಮಾಯಣದಲ್ಲಿ ಆಸಕ್ತರಾದವರನ್ನು ಗಮನದಲ್ಲಿಟ್ಟುಕೊಂಡು ಇಲ್ಲಿ ತುಂಬ ಮುಖ್ಯ ಲೇಖಕರನ್ನೂ, ಕೃತಿಗಳನ್ನೂ ಉಲ್ಲೇಖಿಸಲಾಗಿದೆ. ಈ ಸ್ಥೂಲ ಪರಿಚಯ ಓದುಗರನ್ನು ಕನ್ನಡ ರಾಮಾಯಣ ಸಾಹಿತ್ಯದ ಕಡೆಗೆ ಸೆಳೆಯುವಂತಾದರೆ ಸಾಕು. ರಾಮಾಯಣದ ಬಗೆಗೆ ಆಗಾಗ ಅಡ್ಡ ಮಾತುಗಳು ಕೇಳಿಬಂದರೂ, ಜನರ ಆಸಕ್ತಿ ಆ ಕುರಿತು ಏನೂ ಕಡಿಮೆಯಾಗಿಲ್ಲ. ನಮ್ಮ ದೇಶಕ್ಕೆ ಮಹಾ ಪರ್ವತಗಳೂ, ಸಮುದ್ರಗಳೂ ಮೇರೆಯಾದಂತೆ ನಮ್ಮ ಜನರ ಜೀವನ ಆದರ್ಶದ ಮೇರೆಗಳನ್ನು ರಾಮಾಯಣ, ಮಹಾಭಾರತಗಳಂಥ ಕೃತಿಗಳು ನಿರ್ಧರಿಸಿವೆ. ಆದ್ದರಿಂದ ರಾಮಾಯಣ ಸ್ಮರಣೆ ಎಲ್ಲ ಕಾಲಕ್ಕೂ ಸ್ವಾಗತಾರ್ಹವಾದದ್ದೆ.

ಹತ್ತಿರ ಹತ್ತಿರ ಎರಡು ಸಾವಿರ ವರ್ಷಗಳ ಇತಿಹಾಸವನ್ನುಳ್ಳ ಕನ್ನಡ ಭಾಷೆಯಲ್ಲಿ ಸೃಷ್ಟಿಯಾದ ಸಾಹಿತ್ಯದಲ್ಲಿ ಸದ್ಯಕ್ಕೆ ಮೊದಲನೆಯದೆಂದು ದೊರೆತಿರುವ ಗ್ರಂಥ 'ಕವಿರಾಜಮಾರ್ಗ' (ಕ್ರಿ. ಶ. ಸು. 850). ಇದು ಒಂದು ಅಲಂಕಾರ ಗ್ರಂಥವಾದರೂ ಕನ್ನಡ ಸಾಹಿತ್ಯದ ಪ್ರಾಚೀನತೆಯ ಮೇಲೆ ಬೆಳಕು ಚೆಲ್ಲುವ ಅನೇಕ ಅಂಶಗಳನ್ನೊಳಗೊಂಡಿದೆ. ಈ ಗ್ರಂಥದಲ್ಲಿ ಉದಾಹರಿತವಾಗಿರುವ ಕೆಲವು ಪದ್ಯಗಳು, ಅಸ್ತಿತ್ವದಲ್ಲಿದ್ದಿರ ಬಹುದಾದ ರಾಮಾಯಣವನ್ನು ಕುರಿತ ಕಾವ್ಯವೊಂದರ ಬಗೆಗೆ ಸುಳಿವು ನೀಡುತ್ತವೆ. ಆದರೆ ಇದು ಚರ್ಚಾಸ್ಪದವಾದ ವಿಷಯವೂ ಹೌದು. ಕೆಲವರ ಅಭಿಪ್ರಾಯದಂತೆ ಇಂಥ ಎಲ್ಲ ಪದ್ಯಗಳೂ ಕವಿರಾಜಮಾರ್ಗಕಾರನ ಸ್ವಂತ ರಚನೆಗಳೇ ಆಗಿರುವ ಸಾಧ್ಯತೆಯೂ ಉಂಟು.

ಪೊನ್ನನು ಕ್ರಿ. ಶ. ಹತ್ತನೆಯ ಶತಮಾನದ ಕವಿ. ನಮಗೆ ಲಭಿಸಿರುವ ಅವನ ಕಾವ್ಯ 'ಶಾಂತಿಪುರಾಣ'. ಅದರಲ್ಲಿ ಅವನು 'ಭುವನೈಕ ರಾಮಾಭ್ಯುದಯ' ಎಂಬ ಒಂದು ರಾಮಕಾವ್ಯವನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಆದರೆ ಈ ಕಾವ್ಯ ನಮಗೆ ಇನ್ನೂ ಲಭ್ಯವಾಗಿಲ್ಲ. ಈ ಕಾವ್ಯದ್ದೆಂದು ಹೇಳಲಾದ ಒಂದು ಪದ್ಯ ಮಾತ್ರ ಎರಡು ಶಾಸ್ತ್ರಗ್ರಂಥಗಳಲ್ಲಿ ಉದ್ಧರಿಸಲ್ಪಟ್ಟಿದೆ. ಒಂದು ಲೌಕಿಕ ಹಾಗೂ ಒಂದು

ಜಿನಾಗಮ ಕಾವ್ಯವನ್ನು ರಚಿಸುವ ತನ್ನ ಕಾಲದ ಶಿಷ್ಟಸಂಪ್ರದಾಯದಂತೆ ಪಂಪನೂ ಈ ಕಾವ್ಯವನ್ನು ರಚಿಸಿದ್ದನೆಂಬುದರಲ್ಲಿ ಸಂದೇಹವಿಲ್ಲ. ಇದು ದೊರಕಿದ್ದರೆ ಅದೇ ರಾಮ ಕಥೆಯನ್ನೊಳಗೊಂಡ ಮೊದಲನೆಯ ಕನ್ನಡ ಕಾವ್ಯವಾಗುತ್ತಿತ್ತೆಂದು ಹೇಳಬಹುದು.

ಪ್ರಾಚೀನ ಕನ್ನಡ ಸಾಹಿತ್ಯವೆಂದರೆ ಜೈನಸಾಹಿತ್ಯ. ಆ ಕಾಲದಲ್ಲಿ ಬ್ರಾಹ್ಮಣ ಸಾಹಿತ್ಯಕೂಡ ಇದ್ದಿರಬಹುದೆಂದು ತರ್ಕಿಸಲಾಗಿದ್ದರೂ, ಅದನ್ನು ಸ್ಥಾಪಿಸುವುದಕ್ಕೆ ಅಗತ್ಯವಾದ ಆಧಾರಗಳು ದೊರಕಿಲ್ಲ. ಆದುದರಿಂದ ಅದನ್ನು ನಾವು ಮರೆತು ಬಿಡಬಹುದು. ನಮ್ಮ ಜೈನ ಸಾಹಿತ್ಯ ರಾಮಾಯಣ ಮಹಾಭಾರತಗಳ ದೃಷ್ಟಿಯಿಂದ ಸಂಪನ್ನವಾಗಿದೆ. ಜೈನರು ಅಳವಡಿಸಿಕೊಂಡ ರಾಮಾಯಣಕ್ಕೆ ಎರಡು ಪರಂಪರೆಗಳು: ಒಂದು ವಿಮಲಸೂರಿಯ 'ಪಉಮಚರಿಯ' ಪರಂಪರೆ; ಇನ್ನೊಂದು, ಗುಣಭದ್ರನ 'ಉತ್ತರ ಪುರಾಣ' ಪರಂಪರೆ. ಕನ್ನಡದಲ್ಲಿ ಎರಡೂ ಪರಂಪರೆಯ ಕೃತಿಗಳು ಲಭ್ಯವಾಗಿವೆ. ತುಂಬ ಪ್ರಸಿದ್ಧವಾದ ವಾಲ್ಮೀಕಿ ರಾಮಾಯಣಕ್ಕೂ ಜೈನಪರಂಪರೆಯ ರಾಮಾಯಣಕ್ಕೂ ಅನೇಕ ವಿಚಾರಗಳಲ್ಲಿ, ವಿವರಗಳಲ್ಲಿ ಕಥೆಯ ರೂಪುರೇಷೆಗಳಲ್ಲಿ ಭಿನ್ನತೆಯಿದೆ. ಹಾಗೆಯೇ ಜೈನರ ಈ ಎರಡೂ ಪರಂಪರೆಗಳಲ್ಲಿ ಕೂಡ ಬಹಳ ವ್ಯತ್ಯಾಸಗಳಿವೆ.

'ಚಾವುಂಡರಾಯ ಪುರಾಣ' ವೆಂದು ಪ್ರಸಿದ್ಧವಾಗಿರುವ ಚಾವುಂಡರಾಯನ ಗದ್ಯಕೃತಿ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ'ದಲ್ಲಿ (ಕ್ರಿ. ಶ. 978) ಸೇರಿರುವ ರಾಮ ಕಥೆಯು ಗುಣಭದ್ರನ ಉತ್ತರ ಪುರಾಣವನ್ನು ಅನುಸರಿಸಿದೆ. ಹಳಗನ್ನಡದ ಪ್ರಖ್ಯಾತ ಕವಿಗಳಲ್ಲಿ ಒಬ್ಬನಾದ ರನ್ನನು (ಕ್ರಿ. ಶ. 993) ಬರೆದಿರುವನೆಂದು ಹೇಳಲಾದ 'ಪರಶುರಾಮಚರಿತ' ಹೆಸರೇ ಸೂಚಿಸುವಂತೆ, ಪರಶುರಾಮನ ಕಥೆಯನ್ನೊಳಗೊಂಡು ರಾಮಾಯಣಕ್ಕೆ ಸಂಬಂಧಿಸಿದ ಕೃತಿಯಾಗಿದ್ದಿರಬಹುದು. ದುರ್ದೈವವೆಂದರೆ ಈ ಕೃತಿಯನ್ನು ಕಾಲ ನಮಗೆ ಉಳಿಸಿಕೊಟ್ಟಿಲ್ಲ. ಕನ್ನಡ ಸಾಹಿತ್ಯದ ಆರಂಭದ ಯುಗದಲ್ಲಿಯೇ ಹೀಗೆ ರಾಮಾಯಣದ ಕಥೆ ಕವಿಗಳನ್ನು ಆಕರ್ಷಿಸಿರುವುದು ಆ ಮಹಾಕಾವ್ಯದ ಗಾಢವಾದ ಪ್ರಭಾವವನ್ನು ತೋರಿಸುತ್ತದೆ.

ಅಭಿನವ ಪಂಪನೆಂದು ಜನಪ್ರಿಯನಾದ ನಾಗಚಂದ್ರನ (ಕ್ರಿ.ಶ.ಸು. 1140) 'ರಾಮಚಂದ್ರ ಚರಿತ ಪುರಾಣ' ಪಂಪರಾಮಾಯಣವೆಂದು ಹೆಸರಾಗಿದೆ. ಇದು ಕನ್ನಡದ ಜೈನ ರಾಮಾಯಣಗಳಲ್ಲಿ ನಿಸ್ಸಂದೇಹವಾಗಿ ಅಗ್ರಗಣ್ಯವಾದುದು; ಮಾತ್ರವಲ್ಲ, ಸಮಗ್ರ ಕನ್ನಡಸಾಹಿತ್ಯದ ಅತ್ಯಂತ ಸುಂದರವಾದ ಕೃತಿಗಳಲ್ಲಿಯೂ ಒಂದು. ಮುಂದಿನ ಜೈನ ರಾಮಾಯಣಗಳಿಗೆ ಈ ಕಾವ್ಯ ಒಂದು ಹೊಸ ಹಾದಿಯನ್ನು ತೋರಿತು. ಇದು ವಿಮಲಸೂರಿಯ ಸಂಪ್ರದಾಯವನ್ನು ಅನುಸರಿಸುವ ಕೃತಿಯಾಗಿದೆ. ಇದರಲ್ಲಿ ರವಿಷೇಣನ 'ಪದ್ಮಪುರಾಣ'ದ ಪ್ರಭಾವವನ್ನೂ ನೋಡಬಹುದು. ಪಂಪರಾಮಾಯಣವು ಕೇವಲ ಅನುವಾದ ಅನುಕರಣಗಳ ಕೃತಿಯಲ್ಲ. ಅದರಲ್ಲಿ ಕವಿಯ ಸ್ವೋಪಜ್ಞತೆಯು ನಿಚ್ಚಳವಾಗಿ ಕಾಣಿಸುತ್ತದೆ. ಮೂಲವನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಬಗ್ಗಿಸಿಕೊಳ್ಳುವ

ಹಾಗೂ ಬಗ್ಗಿಸಿಕೊಳ್ಳುವ ಕಲೆ ನಾಗಚಂದ್ರನಿಗೆ ಚೆನ್ನಾಗಿ ತಿಳಿದಿದೆ. ಸನ್ನಿವೇಶಗಳನ್ನು ನಿರ್ಮಿಸುವುದರಲ್ಲಿ ಪಾತ್ರಗಳನ್ನು ಸೃಷ್ಟಿಸುವುದರಲ್ಲಿ ಅವನು ತನ್ನ ಕೈಚಳಕವನ್ನು ತೋರಿಸಿದ್ದಾನೆ. ನಾಗಚಂದ್ರನು ರಚಿಸಿರುವ ರಾವಣನ ಪಾತ್ರವು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಈ ರಾವಣನು ದುರಂತನಾಯಕನ ಎತ್ತರಕ್ಕೆ ಹೋಗಿದ್ದಾನೆಂಬುದನ್ನು ತೋರಿಸಿಕೊಡಲು ಬಹಳ ಹಿಂದೆಯೇ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರು ಪ್ರಯತ್ನಿಸಿದ್ದಾರೆ. ಅನೇಕ ಹೃದಯಸ್ಪರ್ಶಿಯಾದ ಪ್ರಸಂಗಗಳಿಂದ ಕೂಡಿದ ಈ ಕಾವ್ಯವು ಮುಂದಿನ ಕವಿಗಳಿಗೆ ಒಂದು ಮಾದರಿಯಾದುದರಲ್ಲಿ ಆಶ್ಚರ್ಯವಿಲ್ಲ.

ಉಳಿದ ಜೈನರಾಮಾಯಣಗಳಲ್ಲಿ ಕುಮುದೇಂದು (ಕ್ರಿ. ಶ. ಸು. 1275) ಮತ್ತು ದೇವಪ್ಪ (ಕ್ರಿ. ಶ. ಸು. 1525) ಎಂಬುವವರ ಕೃತಿಗಳು ತಕ್ಕಷ್ಟು ಪ್ರಸಿದ್ಧಿಯನ್ನು ಪಡೆದಿವೆ. ಕುಮುದೇಂದು ರಾಮಾಯಣವು ವಿಮಲಸೂರಿ, ರವಿಷೇಣ ಹಾಗೂ ನಾಗಚಂದ್ರನ ಗಾಢವಾದ ಪ್ರಭಾವಕ್ಕೆ ಒಳಗಾಗಿರುವ ಷಟ್ಪದಿ ಛಂದಸ್ಸಿನ ಕೃತಿ. ಈ ಛಂದಸ್ಸನ್ನು ಬಳಸಿದ ಮೊದಲನೆಯ ಜೈನಕವಿ ಎಂಬ ಖ್ಯಾತಿಗೆ ಕುಮುದೇಂದು ಭಾಜನನಾಗಿದ್ದಾನೆ. ಕಾವ್ಯಸ್ವಾರಸ್ಯಕ್ಕಿಂತ ಹೆಚ್ಚಾಗಿ ಛಂದೋವೈವಿಧ್ಯಕ್ಕಾಗಿ ಇವನು ಪ್ರಸಿದ್ಧನಾಗಿದ್ದಾನೆ. ದೇವಪ್ಪ ಕವಿಯ 'ರಾಮವಿಜಯ ಚರಿತೆ' ದೇಶೀಯ ಛಂದಸ್ಸು ಸಾಂಗತ್ಯದ ಕಾವ್ಯ. ಶಿಶುಮಾಯಣ (ಕ್ರಿ.ಶ. 1472) ದೇವಚಂದ್ರ (ಕ್ರಿ.ಶ. 1770–1841) ಮತ್ತು ಚಂದ್ರಸಾಗರವರ್ಣಿ (ಕ್ರಿ.ಶ. ಸು. 1331) ಇವರು ರಾಮಾಯಣ ವಸ್ತುವನ್ನಾಯ್ದುಕೊಂಡ ಇತರ ಜೈನಕವಿಗಳಾಗಿದ್ದಾರೆ. ನಾಗರಾಜ (ಕ್ರಿ.ಶ. ಸು. 1331) ಮತ್ತು ಬಂಧುವರ್ಮ (ಕ್ರಿ. ಶ. ಸು. 1200) ರನ್ನೂ ಈ ಪಟ್ಟಿಗೆ ಸೇರಿಸಬಹುದು. ಚಂದ್ರಸಾಗರವರ್ಣಿ ತನ್ನ ರಚನೆಯಲ್ಲಿ ವಾಲ್ಮೀಕಿ ಸಂಪ್ರದಾಯವನ್ನೂ, ಜೈನ ಸಂಪ್ರದಾಯಗಳನ್ನೂ ಮೇಳವಿಸಲು ಪ್ರಯತ್ನಿಸಿದ್ದಾನೆಂದು ಹೇಳಲಾಗಿದೆ.

ಈ ಸಂದರ್ಭದಲ್ಲಿ ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಯವರ ಈ ಅಭಿಪ್ರಾಯ ತುಂಬ ಗಮನಾರ್ಹವಾಗಿದೆ: "ಕನ್ನಡ ಜೈನ ಕವಿಗಳು ಪ್ರಾಕೃತ ಸಂಸ್ಕೃತ ರಾಮಾಯಣಗಳ ಆದಿಕವಿಗಳಾದ ವಿಮಲಸೂರಿ, ರವಿಷೇಣರಿಗೆ ಹೆಚ್ಚು ಆದ್ಯತೆ ಕೊಟ್ಟಿರುವಂತೆ ತೋರುತ್ತದೆ. ಆದರೆ ಜೈನರಾಮಾಯಣ ಕರ್ತೃಗಳು ಜೈನಭಾರತ ಕರ್ತೃಗಳಂತೆಯೇ ಯಾವುದಾದರೊಂದು ಆಕರವನ್ನು ಹಿಡಿದು. ಅನುವಾದವನ್ನೋ ಸಂಗ್ರಹವನ್ನೋ ಮಾಡಿರದೆ ನಾನಾ ಆಕರಗಳಿಂದ ಎತ್ತಿದ ಬೇರೆ ಬೇರೆ ಸಂಪ್ರದಾಯಗಳ ಹಾಗೂ ಕಥೆಗಳ ಸಮ್ಮಿಶ್ರ ಕಥಾಮಂಜರಿಯಾಗಿ ತಮ್ಮ ಕೃತಿಗಳನ್ನು ರಚಿಸಿರುವುದೇ ಸಾಮಾನ್ಯ."

ವಾಲ್ಮೀಕಿ ಸಂಪ್ರದಾಯದ ಕೃತಿಗಳಲ್ಲಿ ತುಂಬ ಮುಖ್ಯವಾದುದೆಂದರೆ ತೊರವೆ ರಾಮಾಯಣ. ಇದರ ಕರ್ತೃ ನರಹರಿ (ಕ್ರಿ. ಶ. ಸು. 1500) ತೊರವೆ ಎಂಬ ಊರಿನವನು. ಇವನು 'ಕುಮಾರ ವಾಲ್ಮೀಕಿ' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಕನ್ನಡದ ಅತ್ಯಂತ ಜನಪ್ರಿಯ ಕವಿಗಳಲ್ಲಿ ನರಹರಿಯೂ ಒಬ್ಬನಾಗಿದ್ದಾನೆ. ಕುಮಾರ

ವ್ಯಾಸನ ಭಾರತ, ಕುಮಾರ ವಾಲ್ಮೀಕಿಯ ರಾಮಾಯಣ, ಲಕ್ಷ್ಮೀಶನ ಜೈಮಿನಿ ಭಾರತ ಇವು ಒಂದು ಕಾಲದಲ್ಲಿ ನಮ್ಮ ಹಳ್ಳಿಗಳ ನಿರಕ್ಷರಸ್ಥರ ನಾಲಿಗೆಯಲ್ಲಿ ಕೂಡ ನಲಿದಾಡುತ್ತಿದ್ದವು. ಈ ಕಾವ್ಯಗಳನ್ನು ವಾಚಿಸುವುದೇ ಒಂದು ಕಲೆಯಾಗಿ ಬೆಳೆಯಿತು. ತೊರವೆಯ ನರಹರಿ ರಾಮಾಯಣವನ್ನು ಕನ್ನಡದಲ್ಲಿ ಬರೆದ ಮೊದಲನೆಯ ಬ್ರಾಹ್ಮಣ ಕವಿ. ಅವನ ಕಾವ್ಯ ನೂರೊಂಬತ್ತು ಸಂಧಿಗಳ ದೀರ್ಘ ಕೃತಿ. ಇದು ಪ್ರಧಾನವಾಗಿ ವಾಲ್ಮೀಕಿಯನ್ನೇ ಅನುಸರಿಸಿದ್ದರೂ. ಇತರ ರಾಮಾಯಣಗಳ ಪ್ರಭಾವ ಇದರ ಮೇಲೆ ಆಗಿದೆಯೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. "ರಾಮನನ್ನು ವಿಷ್ಣುವಿನ ಅವತಾರವೆಂದು ಭಕ್ತಿಪರವಾಗಿ ನೋಡುವ ಭಾಗವತ ದೃಷ್ಟಿಯ ಪ್ರಭಾವವು ಅದರಲ್ಲಿ ನಿಚ್ಚಳವಾಗಿದೆ" ಎಂದು ಸಾಹಿತ್ಯ 'ಚರಿತ್ರಕಾರ' ಡಾ॥ ರಂ. ಶ್ರೀ ಮುಗಳಿ ಹೇಳುತ್ತಾರೆ. ನರಹರಿಯ ಕಾಲಕ್ಕಾಗಲೇ ಕರ್ನಾಟಕದಲ್ಲಿ ಭಕ್ತಿಪಂಥವು ಅಸ್ತಿತ್ವಕ್ಕೆ ಬರುತ್ತಿದ್ದುದರಿಂದ ಅವನ ಸೃಷ್ಟಿಯು ಈ ದೃಷ್ಟಿಯಲ್ಲಿ ಅಸಹಜವಾದು ದೇನೂ ಇಲ್ಲವೆಂದು ಹೇಳಬಹುದು. ನರಹರಿ ಖಂಡಿತವಾಗಿಯೂ ಮೊದಲನೆಯ ದರ್ಜೆಯ ಕವಿಯಲ್ಲ. ಆದರೆ ಅವನ ಜನಪ್ರಿಯತೆಯನ್ನು ಪಡೆದ ಮೊದಲನೆಯ ದರ್ಜೆಯ ಕವಿಯೆಂದರೆ ಕುಮಾರವ್ಯಾಸ ಮಾತ್ರ ! ತೊರವೆ ರಾಮಾಯಣದಲ್ಲಿ ವಾಲ್ಮೀಕಿ ರಾಮಾಯಣದ ಅನೇಕ ವೈಶಿಷ್ಟ್ಯಗಳು ಮರೆಯಾಗಿ ಹೋಗಿದ್ದರೂ, ನರಹರಿ ಯಲ್ಲಿ ಜನರನ್ನು ಆಕರ್ಷಿಸುವ ಶಕ್ತಿ ಧಾರಾಳವಾಗಿದೆ. ಇದೇ ಅವನ ಮಹತ್ವ. ವಾಲ್ಮೀಕಿ ರಾಮಾಯಣ ಚಿರವಾಗಿರುವುದೇ ಇಂಥ ಕೃತಿಗಳಿಂದ. ಸಾಮಾನ್ಯರಿಗೆ ರಾಮಾಯಣ ವನ್ನು ಮುಟ್ಟಿಸುವ ಕೆಲಸ ತೊರವೆ ರಾಮಾಯಣದಿಂದ ಯಶಸ್ವಿಯಾಗಿದೆ.

ಕನ್ನಡನಾಡಿನ ಕೆಲವು ಭಾಗಗಳಲ್ಲಿ ಸಾಕಷ್ಟು ಪ್ರಚಾರದಲ್ಲಿದ್ದ ಒಂದು ರಾಮಾಯಣ, ಬತ್ತಲೇಶ್ವರ ರಾಮಾಯಣವೆಂದೂ. ಕೌಶಿಕರಾಮಾಯಣವೆಂದೂ ಪ್ರಸಿದ್ಧವಾಗಿದೆ. ಇದನ್ನು ಬರೆದವನು ಬತ್ತಲೇಶ್ವರ ಎಂಬ ಕವಿ. ಇವನ ಕಾಲ ಚರ್ಚಾಸ್ಪದವಾದ್ದು. ಕ್ರಿ. ಶ. ೧೫೦೦ ರಿಂದ ೧೭೦೦ ರವರೆಗೆ ಅದು ತೊನೆದಾಡು ತ್ತದೆ. ಈ ರಾಮಾಯಣ ತನ್ನ ಹಿಂದಿನ ಎಲ್ಲ ಬಗೆಯ ರಾಮಾಯಣಗಳ ಮಿಶ್ರಣ ವಾಗಿದೆ. ತುಂಬ ಪ್ರಸಿದ್ಧನಾದ ಕವಿ ಲಕ್ಷ್ಮೀಶನ (ಕ್ರಿ.ಶ.ಸು. ೧೫೫೦) ಜೈಮಿನಿ ಭಾರತ ದಲ್ಲಿ ಬರುವ ಸೀತಾಪರಿತ್ಯಾಗದ ಭಾಗವು ಹೃದಯಸ್ಪರ್ಶಿಯಾಗಿದ್ದು ಬಹು ಜನಪ್ರಿಯ ವಾಗಿದೆ. ವೈದಿಕ ಸಂಪ್ರದಾಯದ ರಾಮಾಯಣ ಕರ್ತೃಗಳ ಸಂಖ್ಯೆಯೇನೋ ಬಹಳ ದೊಡ್ಡದು. ಆದರೆ ಗುಣದ ದೃಷ್ಟಿಯಿಂದ ದೊಡ್ಡದಾದ ಕೃತಿಯನ್ನು ಮಾತ್ರ ಅವರಲ್ಲಿ ಯಾರೂ ರಚಿಸಲಿಲ್ಲ. ನಾರಾಯಣ (ಸು. ೧೬೦೦), ನಾಗಸಪ್ಪ (೧೬೧೨), ತಿರುಮಲೆ ವೈದ್ಯ (ಸು. ೧೬೫೦), ತಿಮ್ಮರಸ (೧೬೫೦), ಸುಬ್ರಹ್ಮಣ್ಯ (ಸು. ೧೭೫೦). ತಿಮ್ಮಾಮಾತ್ಯ (ಸು. ೧೭೫೦) ಮೊದಲಾದ ಅನೇಕರು ಇಂಥ ಕವಿಗಳಾಗಿದ್ದಾರೆ. ಇವ ರೆಲ್ಲ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಗೊಳ್ಳುತ್ತಾರೆ ; ವಿಮರ್ಶೆಯಲ್ಲಿ ಕೊಚ್ಚಿಕೊಂಡು

ಹೋಗುತ್ತಾರೆ. ವೆಂಕಾಮಾತ್ಯನೆಂಬುವವನ (ಸು. ೧೭೭೦) ರಾಮಾಯಣ ಗಾತ್ರದಲ್ಲಿ ತುಂಬ ದೊಡ್ಡದು. ಮೈಸೂರಿನ ಪ್ರಸಿದ್ಧ ದೊರೆ ಮುಮ್ಮಡಿ ಕೃಷ್ಣರಾಜ ಒಡೆಯರ (೧೭೭೪-೧೮೬೮) ಹೆಸರಿನಲ್ಲಿರುವ ಗ್ರಂಥಗಳ ಪಟ್ಟಿಯಲ್ಲಿ ಕೆಲವು ರಾಮಾಯಣ ಸಂಬಂಧವಾದ ಗ್ರಂಥಗಳೂ ಇವೆ. ಅಳಿಯ ಲಿಂಗರಾಜನೂ (೧೮೨೩-೭೪) ಅನೇಕ ಕೃತಿಗಳನ್ನು ರಚಿಸಿದ್ದಾನೆ. ಈ ಬಗೆಯ ಕೃತಿಗಳ ಅಧ್ಯಯನ ವಿವರವಾಗಿ ಇನ್ನೂ ನಡೆದಿಲ್ಲ. ಆದರೂ ಅವುಗಳಲ್ಲಿ ಮಹೋನ್ನತವಾದುದೇನೂ ಇಲ್ಲವೆಂದು ಈವರೆಗಿನ ಪರಿಶೀಲನೆಗಳು ತೋರಿಸಿಕೊಟ್ಟಿವೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡಸಾಹಿತ್ಯ ಅನೇಕ ಹೊಸ ಪ್ರಭಾವಗಳಿಗೆ ಒಳಗಾಯಿತು. ಗದ್ಯ ಜನಪ್ರಿಯವಾಯಿತು. ಹೊಸ ಹೊಸ ಸಾಹಿತ್ಯ ಪ್ರಕಾರಗಳು ಅಸ್ತಿತ್ವಕ್ಕೆ ಬಂದವು. ಅಭಿರುಚಿ, ದೃಷ್ಟಿ, ಧೋರಣೆಗಳಲ್ಲಿ ಅನೇಕ ಬದಲಾವಣೆಗಳಾದವು. ಮುದ್ರಣದಿಂದ, ಒಂದು ದೃಷ್ಟಿಯಲ್ಲಿ ಬರವಣಿಗೆ ಸುಲಭವಾಯಿತು. ಇದೆಲ್ಲದರ ಫಲವಾಗಿ ರಾಮಾಯಣಕ್ಕೆ ಸಂಬಂಧಿಸಿದ ಹಲವಾರು ಕೃತಿಗಳೂ ರಚನೆಯಾದವು ; ಕಾವ್ಯಗಳು, ಕಾವ್ಯ ಭಾಗಗಳು, ನಾಟಕಗಳು, ನೇರವಾಗಿ ಅನುವಾದಗೊಂಡವು. ಪದ್ಯಕೃತಿಗಳು ಗದ್ಯಾವತಾರ ತಾಳಿದವು. ವಾಲ್ಮೀಕಿ ರಾಮಾಯಣವಲ್ಲದೆ, ಅದ್ಭುತ ರಾಮಾಯಣ, ಆನಂದರಾಮಾಯಣ, ಅಧ್ಯಾತ್ಮ ರಾಮಾಯಣ ಮೊದಲಾದ ಬಗೆಬಗೆಯ ರಾಮಾಯಣಗಳು ಕನ್ನಡಕ್ಕೆ ಬಂದವು.

ಮುದ್ದಣ ಎಂಬ ಕಾವ್ಯನಾಮದ ನಂದಳಿಕೆ ಲಕ್ಷ್ಮೀನಾರಾಯಣಪ್ಪನನ್ನು ಈ ಸಂದರ್ಭದಲ್ಲಿ ಪ್ರತ್ಯೇಕವಾಗಿ ಉಲ್ಲೇಖಿಸಬೇಕು (೧೮೬೯-೧೯೦೧). ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳನ್ನು ಬೆಸೆದ ಈ ಬಡ ಶಾಲಾಮಾಸ್ತರ ಕವಿಯ ಜೀವನವು ಕನಿಕರಕ್ಕೆ ಪಾತ್ರವಾದದ್ದು. ಅವನ ಪ್ರಸಿದ್ಧವಾದ ಕೃತಿಗಳು ಮೂರು ; ಮೂರೂ ರಾಮಾಯಣ ಸಂಬಂಧಿಯಾದವು. ಅವುಗಳಲ್ಲಿ ರಾಮಾಶ್ವಮೇಧವೆಂಬ ಗದ್ಯಕೃತಿ ತುಂಬ ಮಹತ್ವದ್ದು. ಉತ್ತರಕಾಂಡದ ಈ ರಾಮಕಥೆಯ ಭಾಷೆ ಹಳಗನ್ನಡವಾದರೂ, ತಂತ್ರ, ನಿರೂಪಣೆ, ಸಂವೇದನೆಗಳು ತೀರ ಆಧುನಿಕವಾದವು. ಕಥೆಗೆ ಒದಗಿಸಿರುವ ಚೌಕಟ್ಟು, ನವದಂಪತಿಗಳ ಸರಸ ಸಲ್ಲಾಪ, ಮುದ್ದಣ ಮನೋರಮೆ ಎಂಬ ಈ ದಂಪತಿಗಳ ಸಂಭಾಷಣೆಯ ಭಾಗ ಕನ್ನಡ ಸಾಹಿತ್ಯದ ರಸಸ್ಥಾನಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಮುದ್ದಣನ ಇನ್ನೊಂದು ಗದ್ಯಗ್ರಂಥ, ಅದ್ಭುತ ರಾಮಾಯಣ. ಸಂಸ್ಕೃತದ ಅದೇ ಹೆಸರಿನ ಗ್ರಂಥದ ಸಂಗ್ರಹಾನುವಾದ. ಶಾಕ್ತ ಸಂಪ್ರದಾಯದ ಕಥೆ ಇದರಲ್ಲಿದೆ. ಶ್ರೀರಾಮ ಪಟ್ಟಾಭಿಷೇಕಮ್ ಎಂಬುದು ವಾರ್ಧಕಷಟ್ಪದಿಯ ಕಾವ್ಯ. ಹೆಸರೇ ಸೂಚಿಸುವಂತೆ ಇದರಲ್ಲಿ ರಾಮಪಟ್ಟಾಭಿಷೇಕವೇ ಕಾವ್ಯವಸ್ತು. ಮುದ್ದಣನಲ್ಲಿ ಮಹಾಕವಿ ಯೋಗ್ಯವಾದ ಕೆಲವಾದರೂ ಅಂಶಗಳಿವೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಕರ್ನಾಟಕದ ಪ್ರಸಿದ್ಧವಾದ ಜನಪದ ರಂಗಭೂಮಿಯು ಒಂದು ಪ್ರಕಾರ, ಯಕ್ಷಗಾನ ಬಯಲಾಟ. ಇದರ ಸಾಹಿತ್ಯವನ್ನು ಪ್ರಸಂಗವೆಂದು ಕರೆಯುತ್ತಾರೆ. ರಾಮಾಯಣದ ನಾನಾ ಸಂದರ್ಭಗಳನ್ನು, ಕಥಾಭಾಗಗಳನ್ನು ನಿರೂಪಿಸುವ ಇಂಥ ಪ್ರಸಂಗಗಳು ಅಕ್ಷರಶಃ ಅನೇಕ ನೂರು ಇವೆ. ಇವುಗಳಲ್ಲಿ ಜನಪದ ಪ್ರತಿಭೆಯ ವಿವಿಧ ವಿಲಾಸಗಳನ್ನು ನೋಡಬಹುದು. ಸುಮಾರು ಇನ್ನೂರೈವತ್ತು ವರ್ಷಗಳಿಂದಲೂ ಈ ಪ್ರಸಂಗ ಸಾಹಿತ್ಯ ಬೆಳೆದು ಬಂದಿರುವುದಕ್ಕೆ ದಾಖಲೆಗಳಿವೆ. ವಾಸ್ತವವಾಗಿ ಈ ಇತಿಹಾಸ ಇನ್ನೂ ಹಿಂದಿನಿಂದಲೇ ತೊಡಗುತ್ತದೆ. ನಮ್ಮ ಶ್ರೀಸಾಮಾನ್ಯರಿಗೆ ರಾಮಾಯಣದ ಕಥೆಯನ್ನು ಪರಿಚಯ ಮಾಡಿಕೊಡುವುದರಲ್ಲಿ. ಆ ಮೂಲಕ ಜೀವನದ ಆದರ್ಶಗಳನ್ನೂ ಮೌಲ್ಯಗಳನ್ನೂ ಬೋಧಿಸುವುದರಲ್ಲಿ ಈ ಪ್ರಸಂಗ ಸಾಹಿತ್ಯ ವಹಿಸಿದ ಪಾತ್ರ ಮಹತ್ತರವಾದದ್ದು. ಕರ್ನಾಟಕದ ಕೆಲವು ಭಾಗಗಳಲ್ಲಿ ಈ ಪರಂಪರೆ ಇನ್ನೂ ಉಳಿದುಕೊಂಡಿದೆ. ಹೆಳವನಕಟ್ಟೆ ಗಿರಿಯಮ್ಮ, ಗೇರುಸೊಪ್ಪೆ ಶಾಂತಯ್ಯ, ಪಾರ್ತಿ ಸುಬ್ಬ, ಮುದ್ದಣ ಮುಂತಾದ ಪ್ರಖ್ಯಾತರಲ್ಲದೆ ನೂರಾರು ಅನಾಮಧೇಯರು ಯಕ್ಷಗಾನ ಪ್ರಸಂಗ ಸಾಹಿತ್ಯವನ್ನು ಬೆಳೆಸಿ ಪೋಷಿಸಿದ್ದಾರೆ. ಆ ಮೂಲಕ ರಾಮಾಯಣವನ್ನು ಸಾಮಾನ್ಯ ಜನರ ಬದುಕಿನ ಭಾಗವನ್ನಾಗಿಸಿದ್ದಾರೆ.

ನಮ್ಮ ಜನಪದ ಸಾಹಿತ್ಯದಲ್ಲಿಯೂ ರಾಮಾಯಣದ ಬಳಕೆಯಾಗಿದೆ. ಆ ಮಹಾಕಾವ್ಯದ ಅನೇಕ ಪ್ರಸಂಗಗಳನ್ನು ಜನಪದ ಕವಿಗಳು ತಮತಮಗೆ ತೋರಿದಂತೆ ನೇಯ್ದಿದ್ದಾರೆ. ಈಚೆಗೆ ಕೆಲವರು ಈ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇವುಗಳಲ್ಲಿ ಶ್ರೀ ರಾಮೇಗೌಡ ಅವರು ತಮ್ಮ ಸ್ನೇಹಿತರೊಡನೆ ಸೇರಿ ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿರುವ 'ಜನಪದ ರಾಮಾಯಣ' (೧೯೭೩) ಇಲ್ಲಿ ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಇದರಲ್ಲಿ ನಾಲ್ಕು ಭಾಗಗಳಿವೆ : ಎರಡು ಲಾವಣಿಗಳು, ಎರಡು ವೃತ್ತಿಗಾಯಕ ಪರಂಪರೆಯ ಕಾವ್ಯ ಭಾಗಗಳು. ಈ ಕಾವ್ಯದಲ್ಲಿ ಸೀತೆಯೇ ಪ್ರಧಾನವಾಗಿರುವುದು ಒಂದು ವಿಶೇಷ. ಜನಪದ ಗೀತೆ, ಕಥೆ, ಗಾದೆ, ನಂಬಿಕೆ, ಸ್ಥಳಗತೆ ಮೊದಲಾದವುಗಳಲ್ಲೆಲ್ಲ ರಾಮಾಯಣದ ಪ್ರಭಾವವನ್ನು ಗುರುತಿಸಬಹುದಾಗಿದೆ.

ಇಪ್ಪತ್ತನೆಯ ಶತಮಾನದ ಆಧುನಿಕ ಸಾಹಿತ್ಯದಲ್ಲಿಯೂ ರಾಮಾಯಣದ ವಸ್ತು ಅವತಾರವಾಗುತ್ತಿದೆ : ಕಥೆ ಸೃಷ್ಟಿಯಾಗುತ್ತಿದೆ. ದೊಡ್ಡಬೆಲೆ ನಾರಾಯಣಶಾಸ್ತ್ರಿ (ಸು. ೧೮೫೦), ದೇವಶಿಖಾಮಣಿ ಅಳಸಿಂಗಾಚಾರ್ಯ (೧೮೭೭–೧೯೪೦), ಪಟ್ಟಾಭಿ ರಾಮಶಾಸ್ತ್ರಿ, ಸುಬ್ರಹ್ಮಣ್ಯಶಾಸ್ತ್ರಿ ಮೊದಲಾದ ಅನೇಕರು ವಾಲ್ಮೀಕಿ ರಾಮಾಯಣವನ್ನು ಕನ್ನಡದಲ್ಲಿ ಗದ್ಯಾನುವಾದ ಮಾಡಿದ್ದಾರೆ. ಈ ಸಾಲಿನಲ್ಲಿ ದೇವುಡುನರಸಿಂಹಶಾಸ್ತ್ರಿ, ತ. ಸು. ಶಾಮರಾಯ, ದೇರಾಜೆ ಸೀತಾರಾಮಯ್ಯ ಮೊದಲಾದವರ ಕೃತಿಗಳು ಈಚಿನವಾಗಿವೆ. ಪದ್ಯರೂಪದಲ್ಲಿನ ರಚನೆಗಳೂ ನಿಂತಿಲ್ಲ. ರಾಮಾಯಣದ ವಸ್ತು ಆಕರ್ಷಕವಾದದ್ದು ; ಕೃತಿ ಜನಪ್ರಿಯವಾದದ್ದು. ಸಹಜವಾಗಿಯೇ ನಮ್ಮ ಲೇಖಕರು

ಅದರ ಕಡೆ ಧಾವಿಸುತ್ತಾರೆ. ಆದರೆ ಸ್ವೋಪಜ್ಞತೆಯನ್ನು ಮೆರೆಯುವ ಕೃತಿಗಳು ತೀರ ವಿರಳ. ರಾಮಾಯಣವನ್ನು ಕಾದಂಬರಿ ರೂಪದಲ್ಲಿ ನಿರೂಪಿಸುವ ಪ್ರಯತ್ನವನ್ನು ಎಚ್. ವಿ. ಸಾವಿತ್ರಮ್ಮ ಈಚೆಗೆ ನಡೆಸಿದ್ದಾರೆ. ಇದೊಂದು ಹೊಸ ವಿಧಾನ, ಹೊಸ ಕಾಲಕ್ಕೆ ಅನುಗುಣವಾದದ್ದು.

"ರಾಮಾಯಣದ ಕಥೆ ಪ್ರತಿಭಾವಂತ ಕವಿಗಳ ಕೈಯಲ್ಲಿ ಶ್ರೇಷ್ಠ ರೀತಿಯಿಂದ ನಿರೂಪಿತವಾಗಲಿಲ್ಲ" ಎಂದು ವಿದ್ವಾಂಸರೊಬ್ಬರು, ನಮ್ಮ ಹಳೆಯ ಸಾಹಿತ್ಯವನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು, ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಮಾತು ಆಧುನಿಕ ಸಾಹಿತ್ಯಕ್ಕೆ ಅನ್ವಯವಾಗುವುದಿಲ್ಲವೆಂಬುದನ್ನು ನಮ್ಮ ಕಾಲದ ಮಹಾಕವಿ ಕುವೆಂಪು ಸ್ಥಾಪಿಸಿದ್ದಾರೆ–ತಮ್ಮ ಶ್ರೀರಾಮಾಯಣ ದರ್ಶನಮ್ ಕಾವ್ಯದ ಮೂಲಕ. ಈ ಕಾವ್ಯ ಈ ಶತಮಾನದ ಒಂದು ಮಹತ್ವದ ಕೃತಿಯಾಗಿದೆ (೧೯೪೯). ಸರಳ ರಗಳೆಯ ಮಹಾ ಛಂದಸ್ಸಿನಲ್ಲಿ ರಚಿತವಾದ ಸುಮಾರು ೨೩ ಸಾವಿರ ಸಾಲುಗಳ ಈ ಕಾವ್ಯವನ್ನು ರಚಿಸಲು ಕವಿ ಒಂಬತ್ತು ವರ್ಷ ತೆಗೆದುಕೊಂಡರು. ಮಿಲ್ಟನನ ಮಹಾ ಕಾವ್ಯದ ನಂತರ ಇಂಥದೊಂದು ಮಹಾಕಾವ್ಯವನ್ನು ತಾವು ನೋಡಿದುದಿಲ್ಲವಾಗಿ ರಾಷ್ಟ್ರಕವಿ ಗೋವಿಂದ ಪೈ 'ಶ್ರೀರಾಮಾಯಣ ದರ್ಶನಮ್' ಕಾವ್ಯದ ಬಗೆಗೆ ಹೇಳಿದ್ದುಂಟು. ಮೂಲತಃ ಇದು ವಾಲ್ಮೀಕಿಯ ಕಥೆಯಾದರೂ ಇದರಲ್ಲಿ ವಿಮರ್ಶಾತ್ಮಕ, ವಿಶ್ಲೇಷಣಾತ್ಮಕ ಆಧುನಿಕ ದರ್ಶನವೊಂದು ವ್ಯಕ್ತವಾಗಿದೆ. ಪೂರ್ಣದೃಷ್ಟಿಯ ಹರಿಕಾರನಾಗಿ ಕವಿ ಈ ಕಾವ್ಯವನ್ನು ರಚಿಸಿದ್ದಾರೆ. ಅಯೋಧ್ಯಾ, ಕಿಷ್ಕಿಂಧಾ, ಲಂಕಾ ಮತ್ತು ಶ್ರೀ ಎಂಬ ನಾಲ್ಕು ಸಂಪುಟಗಳ ಈ ಮಹಾಕಾವ್ಯಕ್ಕೆ ಕನ್ನಡಕ್ಕೆ ಬಂದ ಮೊದಲನೆಯ ಸಾಹಿತ್ಯ ಅಕಾಡೆಮಿಯ ಬಹುಮಾನವೂ, ಜ್ಞಾನಪೀಠ ಪ್ರಶಸ್ತಿಯೂ ಲಭಿಸಿರುವುದು ಸಹಜವಾಗಿದೆ. ತಮ್ಮ ಕೃತಿಗಳನ್ನು ಕಣ್ಣುಮುಚ್ಚಿಕೊಂಡು ಹೊಗಳುವ, ಓದದೆ ತೆಗಳುವ ಎರಡು ಗುಂಪುಗಳ ನಡುವೆ ಸಿಕ್ಕಿಕೊಂಡು ಕುವೆಂಪು ನರಳಿದ್ದಾರೆ ; ನಷ್ಟವನ್ನನುಭವಿಸಿದ್ದಾರೆ. ಆದರೆ ಅವರ ಕಾವ್ಯಕ್ಕೆ ಕಾಲ ನ್ಯಾಯವನ್ನು ದೊರಕಿಸುತ್ತದೆಂಬುದರಲ್ಲಿ ಸಂದೇಹವಿಲ್ಲ. ಆಧುನಿಕ ಭಾರತದ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ಕುವೆಂಪು ತಮ್ಮ ಭೀಮಪ್ರತಿಭೆಯನ್ನು ಈ ಕಾವ್ಯದಲ್ಲಿ ಮುಡುಗಟ್ಟಿಸಿದ್ದಾರೆ ಅನೇಕ ಹೊಸತನಗಳನ್ನು ತಳೆದ ಈ ಕಾವ್ಯದ ಕೊರತೆಗಳನ್ನು ಲಕ್ಷಿಸಿದರೂ ಅದರ ಮಹತ್ವವನ್ನು ಗಮನಿಸದೆ ಇರುವುದು ಸಾಧ್ಯವಿಲ್ಲ. ಸಾಂಪ್ರತಕಾಲದಲ್ಲಿ ಮಹಾಕಾವ್ಯಗಳ ರಚನೆ ಸಾಧ್ಯವಿಲ್ಲ ಎನ್ನುವವರಿಗೆ ಕುವೆಂಪು ಇಲ್ಲಿ ಒಂದು ಸವಾಲನ್ನೆಸೆದಿದ್ದಾರೆ

ಜನಪ್ರಿಯ 'ವಾಲ್ಮೀಕಿ ರಾಮಾಯಣ' ಕುವೆಂಪು ಅವರ ಇನ್ನೊಂದು ಕೃತಿ (೧೯೫೦). ಇದು ಮೂಲ ವಾಲ್ಮೀಕಿ ರಾಮಾಯಣದ ಸರಳ ಸುಂದರ ನಿರೂಪಣೆ. ಇದರಲ್ಲಿ ಕುವೆಂಪು ಅವರ ಗದ್ಯ ಒಂದು ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಹೊಸದಾಗಿ ಓದು ಕಲಿತವರ ಉಪಯೋಗಕ್ಕೆಂದು ಮೂಲತಃ ಇದನ್ನು ಪ್ರಕಟಿಸಲಾಗಿದ್ದರೂ,

ಇದು ರಾಮಾಯಣ ಪ್ರಿಯರೆಲ್ಲರ ಮೆಚ್ಚುಗೆಗೆ ಪಾತ್ರವಾಗಿ ಅನೇಕ ಮುದ್ರಣಗಳನ್ನು ಕಂಡಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ 'ವಚನ ಭಾರತ ಮತ್ತು ಕುವೆಂಪು ಅವರ ಜನಪ್ರಿಯ ವಾಲ್ಮೀಕಿ ರಾಮಾಯಣ' ಆಧುನಿಕ ಸಾಹಿತ್ಯದ ಎರಡು ಚಿರಕೃತಿಗಳಾಗಿವೆ.

ಮಹತ್ವದ ರಾಮಾಯಣ ಕಾವ್ಯವನ್ನು ರಚಿಸಿದ ಮತ್ತೊಬ್ಬ ಲೇಖಕರೆಂದರೆ ಶ್ರೀನಿವಾಸರು (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಸುಮಾರು ನಾಲ್ಕು ದಶಕಗಳ ಹಿಂದೆಯೇ (೧೯೩೮) ಅವರು ಆದಿ ಕವಿ ವಾಲ್ಮೀಕಿ ಎಂಬ ಶ್ರೇಷ್ಠ ವಿಮರ್ಶೆಯ ಗ್ರಂಥವೊಂದನ್ನು ಪ್ರಕಟಿಸಿದ್ದರು. ಪ್ರಚಲಿತವಾಗಿರುವ ರಾಮಾಯಣದ ಅನೇಕ ಸಂದರ್ಭಗಳಲ್ಲಿ ಎದ್ದು ತೋರುವ ಸಮಸ್ಯೆಗಳನ್ನು, ಪಾತ್ರಗಳಲ್ಲಿ ಕಂಡುಬರುವ ತೊಡಕುಗಳನ್ನು ಚಿಕಿತ್ಸಕ ದೃಷ್ಟಿಯಿಂದ ಅದರಲ್ಲಿ ಪರಿಶೀಲಿಸಲಾಗಿದೆ. ನಮ್ಮ ಕಾಲಕ್ಕೆ ಸರಿಹೊಂದುವ ರಾಮಾಯಣದ ಅಂಶಗಳನ್ನು ಗುರುತಿಸಲು ಅವರು ಸತತವಾಗಿ ಪ್ರಯತ್ನಿಸಿದ್ದಾರೆ. ಚೂಪಾದ ವಿಮರ್ಶಕ ಬುದ್ಧಿಯೊಂದು ಆದಿ ಕಾವ್ಯದ ಬಗೆಗೆ ಕೇಳಬಹುದಾದ ಪ್ರಶ್ನೆಗಳನ್ನೆಲ್ಲ ಕೇಳಿ ವಾಸ್ತವ ರಾಮಾಯಣವನ್ನು ಪತ್ತೆ ಮಾಡಲು ಮಾಸ್ತಿಯವರು ಶ್ರಮಿಸಿದ್ದಾರೆ. ಮಾಸ್ತಿಯವರು ತೀರ ಸಂಪ್ರದಾಯಸ್ಥರು ; ಆದರೆ ಮೌಢ್ಯ ಪ್ರತಿಪಾದಕರಲ್ಲ, ಚಿಕಿತ್ಸಕ ಧೋರಣೆಗಳನ್ನು ಬಿಟ್ಟುಕೊಡುವವರಲ್ಲ. ಇದರಿಂದ ಅವರ ರಾಮಾಯಣ ದೃಷ್ಟಿಗೆ ತೀರ ವಿಶೇಷವಾದ ಮಹತ್ವವಿದೆ. ಕುರುಡ ಸಂಪ್ರದಾಯ ಶರಣರಿಗೆ ಮೆಚ್ಚುಗೆಯಾಗದ ತಮ್ಮ ಈ ಚಿಂತನೆಯನ್ನೆಲ್ಲ ಭಟ್ಟಿ ಇಳಿಸಿ ತಮಗೆ ಸರಿಯೆಂದು ತೋರಿದ ರಾಮಾಯಣ ಕಾವ್ಯವೊಂದನ್ನು ಮಾಸ್ತಿಯವರು ಈಚೆಗೆ ಪ್ರಕಟಿಸಿದ್ದಾರೆ (೧೯೭೨). 'ಶ್ರೀರಾಮ ಪಟ್ಟಾಭಿಷೇಕ' ಎಂಬ ಈ ಸರಳ ರಗಳೆಯ ದೀರ್ಘ ಕಾವ್ಯ, ಶ್ರೀರಾಮ ದೇವರಾಗಿದ್ದುದರಿಂದ ಶ್ರೇಷ್ಠ ಮಾನವನಾಗಲಿಲ್ಲ ; ಶ್ರೇಷ್ಠ ಮಾನವನಾಗಿದ್ದುದರಿಂದ ದೇವರೆನ್ನಿಸಿಕೊಂಡು ಪೂಜಿತನಾದ ಎಂಬ ದೃಷ್ಟಿಯನ್ನು ಅತ್ಯಂತ ಸೊಗಸಾಗಿ ಪ್ರತಿಪಾದಿಸುತ್ತದೆ. ಅವರ ಪ್ರಖ್ಯಾತ ಕಥನ ಕವನಗಳ ಸರಳ ರಗಳೆ ಛಂದಸ್ಸಿನಲ್ಲಿ ರಚಿತವಾದ ಈ ಮಹಾಕಾವ್ಯ ಸಿಂಹಾವಲೋಕನ ಕ್ರಮದಿಂದ ರಾಮಾಯಣದ ಕಥೆಯನ್ನು ನಿರೂಪಿಸುತ್ತದೆ. ಪಟ್ಟಾಭಿಷೇಕ ಕಾವ್ಯದ ಕೇಂದ್ರಬಿಂದು ಆದರೆ ಸಮಗ್ರ ರಾಮಾಯಣ ಅದರ ವಸ್ತು. ಇದರ ನಿರ್ವಹಣೆಯಲ್ಲಿಯೇ ಮಾಸ್ತಿಯವರು ಕಾವ್ಯಕ್ಕೆ ಮೆರಗು ತಂದಿದ್ದಾರೆ. ಹತ್ತು ಹಲವು ದೃಷ್ಟಿಗಳಿಂದ ಈ ಕಾವ್ಯ ಅಭ್ಯಾಸಯೋಗ್ಯವಾಗಿದೆ. ಈಚೆಗೆ (೧೯೮೦) ಪ್ರೊಫೆಸರ್ ವಿ. ಎಂ. ಇನಾಂದಾರ್ ಈ ಕಾವ್ಯದ ಒಂದು ಸ್ವತಂತ್ರ ಅಧ್ಯಯನವನ್ನೇ ಪ್ರಕಟಿಸಿದ್ದಾರೆ. ಮಾಸ್ತಿಯವರ ಕಥನ ಪ್ರಪಂಚದ ಖ್ಯಾತಿ ವಾಚಕರನ್ನು ಅವರ ಕಾವ್ಯದ ಕಡೆಗೆ ಅಷ್ಟಾಗಿ ಗಮನ ಹರಿಸದಂತೆ ಮಾಡಿರುವುದು ದುರ್ದೈವದ ಸಂಗತಿ. ಕುವೆಂಪು ಮತ್ತು ಮಾಸ್ತಿಯವರ ಎರಡೂ ರಾಮಾಯಣಗಳು ನಮ್ಮ ಕಾಲದ ಮಹಾ ಕೊಡುಗೆಗಳೆಂದು ವಿ. ಸೀ. ಕೊಂಡಾಡಿದ್ದಾರೆ. ಸುದೀರ್ಘವಾದ ಕನ್ನಡ ರಾಮಾಯಣ ಕಾವ್ಯಗಳ ಇತಿಹಾಸದಲ್ಲಿ ನಾಲ್ಕು

ನಾಲ್ಕು ಹೆಜ್ಜೆಗಳನ್ನು ನಾವು ನೋಡಬಹುದು. ನಾಗಚಂದ್ರ, ನರಹರಿ, ಕುವೆಂಪು ಮತ್ತು ಶಾಸ್ತ್ರಿಯವರ ಕಾವ್ಯಗಳೇ ಈ ನಾಲ್ಕು ಹೆಜ್ಜೆಗಳು. ಗುಣದ ಹಾಗೂ ಸ್ವರೂಪದ ದೃಷ್ಟಿಯಿಂದ ನಾಲ್ಕು ತೀರ ಬೇರೆ ಬೇರೆ ಬಗೆಯವಾಗಿದ್ದರೂ ಅವುಗಳಿಗೆ ಅವುಗಳದ್ದೇ ಆದ ವೈಶಿಷ್ಟ್ಯವಿದೆ, ಸ್ವಾರಸ್ಯವಿದೆ.

ನಮ್ಮ ರಾಮಾಯಣದ ದೃಷ್ಟಿಯನ್ನು ಮೂಲ ವಾಲ್ಮೀಕಿಯಲ್ಲಿಯೇ ಹೇಗೆ ಕಾಣಬಹುದು ಎಂಬುದನ್ನು ತೋರಿಸುವ ಉದ್ದೇಶದಿಂದ ಶಾಸ್ತ್ರಿಯವರು 'ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ'ವನ್ನು ಸಿದ್ಧಪಡಿಸಿದ್ದಾರೆ (೧೯೮೧). ವಾಲ್ಮೀಕಿಯ ಆಯ್ದ ಶ್ಲೋಕಗಳನ್ನೂ, ಅವುಗಳ ಕನ್ನಡ ಅನುವಾದವನ್ನೂ ಇದರಲ್ಲಿ ನೋಡಬಹುದು. ಈ ಕೃತಿಯೊಂದಿಗೇ ಶಾಸ್ತ್ರಿಯವರು 'ಉತ್ತರಕಾಂಡ ವಿಚಾರ' ಎಂಬೊಂದು ಗ್ರಂಥವನ್ನೂ ಪ್ರಕಟಿಸಿದ್ದಾರೆ. ಹೆಸರೇ ಹೇಳುವಂತೆ ಇದರಲ್ಲಿ ಉತ್ತರ ಕಾಂಡದ ಸಮಸ್ಯೆ ಚರ್ಚಿತವಾಗಿದೆ.

ನಮ್ಮ ಲೇಖಕರಿಗೆ ರಾಮಾಯಣವು ಬತ್ತದ ಸ್ಫೂರ್ತಿಯ ಸೆಲೆಯಾಗಿದೆ. ಅದರ ಪ್ರಸಂಗಗಳನ್ನು ಆಧರಿಸಿ ಅನೇಕ ಲೇಖಕರು ತಮ್ಮದೇ ಉಜ್ವಲ ಕೃತಿಗಳನ್ನು ಸೃಷ್ಟಿಸಿದ್ದಾರೆ. ಇಂಥ ಸ್ವತಂತ್ರ ಕೃತಿಗಳಿಗೆ ಅತ್ಯುತ್ತಮ ಉದಾಹರಣೆಗಳೆಂದರೆ ಪು. ತಿ. ನರಸಿಂಹಾಚಾರ್ಯರ ನಾಟಕ 'ಅಹಲ್ಯೆ' (೧೯೪೧) ಮತ್ತು ಡಿ. ವಿ. ಗುಂಡಪ್ಪನವರ ಕಾವ್ಯ 'ಶ್ರೀರಾಮ ಪರೀಕ್ಷಣಮ್' (೧೯೪೫). ಇಂದೂ ನಮ್ಮ ಸಾಹಿತ್ಯದಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಚಟುವಟಿಕೆಗಳು ಒಂದೇ ಸಮನೆ ನಡೆಯುತ್ತಿವೆ. ವಿದ್ವಾನ್ ರಂಗನಾಥ ಶರ್ಮರು ವಾಲ್ಮೀಕಿ ರಾಮಾಯಣವನ್ನು ಕನ್ನಡ ಅನುವಾದ ಸಹಿತ ಒಂಬತ್ತು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ (೧೯೬೬), ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ ಎಂಬ ಗಣಿತಶಾಸ್ತ್ರ ಪ್ರಾಧ್ಯಾಪಕರು ಎರಡು ಸಂಪುಟಗಳಲ್ಲಿ (೧೫೨೦ ಪುಟ) ವಾಲ್ಮೀಕಿ ರಾಮಾಯಣದ ಗದ್ಯಾನುವಾದ ಪ್ರಕಟಿಸಿದ್ದಾರೆ (೧೯೭೩), ಮಿರ್ಜಿ ಅಣ್ಣಾರಾಯರು ರವಿಷೇಣನ 'ಪದ್ಮಪುರಾಣ'ವನ್ನು 'ರವಿಷೇಣ ರಾಮಾಯಣ' ಎಂಬ ಹೆಸರಿನಲ್ಲಿ ಕನ್ನಡ ಗದ್ಯದಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ (೧೯೬೮). ಐ. ಮಾ. ಮುತ್ತಣ್ಣನವರು ಕಿರಿಯರಿಗಾಗಿ 'ಮಕ್ಕಳ ಬಾಲರಾಮಾಯಣ' ಎಂಬ ಪದ್ಯರೂಪದ ಕೃತಿಯೊಂದನ್ನು ಬರೆದಿದ್ದಾರೆ (೧೯೭೪). ಇದು ಸುಮಾರು ಹತ್ತುಸಾವಿರ ಸಾಲುಗಳಷ್ಟು ದೀರ್ಘವಾಗಿದೆ. ನಾರಾಯಣರಾವ ತಾಳೀಕೋಟಿ ಅವರೂ ಮಕ್ಕಳಿಗಾಗಿಯೇ ಆರು ಸಂಪುಟಗಳಲ್ಲಿ ರಾಮಾಯಣವನ್ನು ಪದ್ಯದಲ್ಲಿ ಹೇಳಿದ್ದಾರೆ (೧೯೭೭–೭೯). ಇದರ ಹೆಸರೂ 'ಬಾಲರಾಮಾಯಣ'. ಈ ಎರಡು ಕೃತಿಗಳ ಉದ್ದೇಶ ಸ್ಪಷ್ಟ. ಸರಳವಾಗಿ ಸುಲಭವಾಗಿ ಸೊಗಸಾಗಿ ಪದ್ಯರೂಪದಲ್ಲಿ ಕಥೆ ಹೇಳುವುದು ಅವುಗಳ ಗುರಿ, ಇವರಲ್ಲಿ ಲೇಖಕರು ಸಫಲರಾಗಿದ್ದಾರೆಂದೇ ಹೇಳಬೇಕು. ಗದ್ಯದಲ್ಲಿ ಇಂಥ ಪ್ರಯತ್ನಗಳು ಸಾಕಷ್ಟು ನಡೆದಿವೆ. ಸಣ್ಣಪುಟ್ಟ ರಚನೆಗಳಿಗಂತೂ ಲೆಕ್ಕವೇ ಇಲ್ಲ ಎನ್ನಬಹುದು.

ಕಂಬ, ತುಲಸೀದಾಸ ಮೊದಲಾದವರ ಇತರ ಭಾರತೀಯ ಭಾಷೆಗಳ ರಾಮಾಯಣಗಳು ನೇರ ಅನುವಾದ ರೂಪದಲ್ಲಿಯೋ ಸಾರಾಂಶ ರೂಪದಲ್ಲಿಯೋ ಪ್ರಕಟವಾಗುತ್ತಿವೆ. ದುರ್ಲಭವಾಗಿರುವ ಅನೇಕ ಅನೇಕ ಪ್ರಾಚೀನ ಕೃತಿಗಳು ಪುನರ್ಮುದ್ರಣಗೊಳ್ಳುತ್ತಿವೆ. ಮುನ್ಷಿ, ರಾಜಾಜಿಯವರಂಥ ಆಧುನಿಕರ ಕೃತಿಗಳ ಅನುವಾದಗಳಿಗೂ ಕನ್ನಡ ವಾಚಕರು ಉತ್ಸಾಹದ ಸ್ವಾಗತ ನೀಡಿದ್ದಾರೆ.

ರಾಮಾಯಣ ಸಂಬಂಧಿ ವಿಚಾರ ಸಾಹಿತ್ಯ ಅಷ್ಟೇನೂ ವಿಪುಲವಾಗಿ ಬೆಳೆದಿಲ್ಲ. ತೊರವೆ ರಾಮಾಯಣ ಹಾಗೂ ಅದರ ಕರ್ತೃವನ್ನು ಕುರಿತು ಸಂಶೋಧನ ಪ್ರಬಂಧವೊಂದನ್ನು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದೆ(೧೯೭೬). ಲೇಖಕರಾದ ಹೊಸಬೆಟ್ಟು ಸೀತರಾಮ ಆಚಾರ್ ಇದರಲ್ಲಿ ಬಹುಕಾಲದ ಒಂದು ಅಗತ್ಯವನ್ನು ಪೂರೈಸಿದ್ದಾರೆ. ಅನುಬಂಧಗಳಲ್ಲಿ ನಾನಾ ವಿಷಯಗಳಿಗೆ ಸಂಬಂಧಿಸಿದ ಕೃತಿಗಳ ಪಟ್ಟಿಗಳನ್ನು ಕೊಟ್ಟಿದ್ದಾರೆ. ಆನಂದರಾಮ ಉಪಾಧ್ಯಾಯ ಯಕ್ಷಗಾನ ಪ್ರಸಂಗಗಳಿಗೆ ಸಂಬಂಧಿಸಿದ ತಮ್ಮ ಅಧ್ಯಯನವನ್ನು ಈಚೆಗೆ ಪ್ರಕಟಿಸಿದ್ದಾರೆ (೧೯೮೦). ಕುವೆಂಪು ಅವರ ಮಹಾಕಾವ್ಯವನ್ನು ಕುರಿತ ಅಧ್ಯಯನಗಳಲ್ಲಿ ಕೋ. ಚೆನ್ನಬಸಪ್ಪನವರ ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ ತುಂಬ ಉಪಯುಕ್ತವಾದದ್ದು (೧೯೭೧). ಅಭ್ಯಾಸಿಗಳಿಗೆ ನೆರವಾಗುವ ಬೆಲೆಬಾಳುವ ಸಾಮಗ್ರಿಯನ್ನು ಇವರಲ್ಲಿ ಕಲೆಹಾಕಲಾಗಿದೆ. ವಿ. ಸೀತಾರಾಮಯ್ಯನವರ ವಾಲ್ಮೀಕಿ ರಾಮಾಯಣ (೧೯೭೬) ಅವರದೆ ಇಂಗ್ಲಿಷ್ ಕೃತಿಯ ಅವರದೇ ಅನುವಾದ. ಈ ಪುಸ್ತಕದ ರಚನೆಯಲ್ಲಿ ದೊಡ್ಡ ಪ್ರಮಾಣದ ಪ್ರೀತಿಯ ಕಾಯಕ ಸೇರಿದೆಯೆಂದು ಪಿ. ಲಾಲ್ ಅಭಿಪ್ರಾಯಪಟ್ಟಿದ್ದಾರೆ. ಮಾಸ್ತಿಯವರ 'ಆದಿಕವಿ ವಾಲ್ಮೀಕಿ' ಪ್ರಕಟವಾದಮೇಲೆ ಕನ್ನಡದಲ್ಲಿ ಬಂದ ರಾಮಾಯಣವನ್ನು ಕುರಿತ ವಿಮರ್ಶೆಯಲ್ಲಿ ವಿ. ಸೀ. ಅವರ ಈ ಕೃತಿಯೇ ಸ್ವೋಪಜ್ಞವಾದದ್ದು, ಶ್ರೇಷ್ಠವಾದದ್ದು ಇದರಲ್ಲಿ ರಾಮಾಯಣದ 'ಮಾನವೀಯ ಲಕ್ಷಣಗಳಿಗೆ' ಹೆಚ್ಚಿನ ಒತ್ತು ಕೊಡಲಾಗಿದೆ.

ಕನ್ನಡ ರಾಮಾಯಣ ಸಾಹಿತ್ಯವನ್ನು ಕುರಿತು ವಿಮರ್ಶಾತ್ಮಕವಾಗಿಯಾಗಲಿ, ತೌಲನಿಕವಾಗಿಯಾಗಲಿ ಹೆಚ್ಚಿನ ಅಧ್ಯಯನ ಸಂಶೋಧನೆಗಳು ನಡೆಯದಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಈ ದಿಕ್ಕಿನಲ್ಲಿ ವಿ. ಸೀತಾರಾಮಯ್ಯ. ಉ. ಕಾ. ಸುಬ್ಬರಾಯಾಚಾರ್ ಮತ್ತು ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿಗಳ ಸಮೀಕ್ಷಾತ್ಮಕ ಲೇಖನಗಳು ಪ್ರಕಟವಾಗಿವೆ. ಈ ಕೆಲಸವನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಳ್ಳುವುದು ಆಗತ್ಯವಾಗಿದೆ. ಸಮಗ್ರ ಸಂಶೋಧನೆ ಮತ್ತು ವಿಮರ್ಶೆಗಳು ಕನ್ನಡಕ್ಕಷ್ಟೆ ಅಲ್ಲ ತೌಲನಿಕ ಸಾಹಿತ್ಯಕ್ಕೂ ಕೊಡುಗೆಗಳಾಗುತ್ತವೆ. ಅನೇಕ ಸಂಪ್ರದಾಯಗಳ ರಾಮಾಯಣಗಳು ಇಲ್ಲಿರುವುದರಿಂದ ಇಂಥ ಕೆಲಸಕ್ಕೆ ವಿಪುಲ ಅವಕಾಶವಿದೆ.

ಡಾ. ಹಾ. ಮಾ. ನಾಯಕ

# ಶ್ರೀ ರಾಮಾಯಣ ದರ್ಶನಂ ಮತ್ತು ಜನಪದ ರಾಮಾಯಣಗಳು

ರಾಮಾಯಣದ ಕತೆ ಕಾಲದ ಅಂತರದಲ್ಲಿ ಎಷ್ಟೆಷ್ಟು ವ್ಯತ್ಯಾಸಗಳನ್ನು ಹೊಂದುತ್ತ ಬಂದಿದೆ ಎಂಬುದಕ್ಕೆ 'ಶ್ರೀರಾಮಾಯಣ ದರ್ಶನಂ' ಒಂದು ಸ್ಪಷ್ಟ ನಿದರ್ಶನ. ವಾಲ್ಮೀಕಿ ರಾಮಾಯಣವೇ ಮೂಲರಾಮಾಯಣ ಎಂದು ಇಟ್ಟುಕೊಂಡರೂ, ಅಲ್ಲಿಂದ ಇಲ್ಲಿಯವರೆಗೆ ಅದು ನಡೆದು ಬಂದಿರುವ ದಾರಿಯನ್ನು ಗಮನಿಸುವಾಗ ಹಲವು ಸ್ಥಿತ್ಯಂತರಗಳು ಸಹಜವಾಗಿಯೇ ಕಂಡು ಬರುತ್ತವೆ. ಹೊಸ ಪ್ರಜ್ಞೆ-ಸಂವೇದನೆಗಳಿಂದ, ತನ್ನ ಕಾಲದ ಸಾಮಾಜಿಕ ಜವಾಬ್ದಾರಿಯನ್ನು ಹೊತ್ತು ಹೊರ ಹೊಮ್ಮಿದ ಕಾವ್ಯ ಮಹತ್ವದ ಕಾವ್ಯವಾಗಿ ಮನ್ನಣೆ ಪಡೆಯುತ್ತದೆ. ಸಾಮಾಜಿಕ ಕಾಳಜಿಯನ್ನು ಹೊತ್ತು ಕಾವ್ಯರಚನೆಗೆ ಕೈಹಾಕಿದ ವ್ಯಕ್ತಿ ಕತೆ ಬೆಳೆಸಿಕೊಂಡು ಹೋಗುವಷ್ಟರಲ್ಲಿಯೇ ತೃಪ್ತನಾಗುವುದಿಲ್ಲ. ತನ್ನ ಕಾಲದ ಎಲ್ಲ ತೊಡಕುಗಳನ್ನು ಹಾದು ಹೋಗುತ್ತಾನೆ, ಅವುಗಳನ್ನು ಬಿಡಿಸಲು ಮಾರ್ಗಗಳನ್ನು ತೋರುತ್ತ ಹೋಗುತ್ತಾನೆ. ವಿಶ್ವಪಥ-ಮನುಜಮತದಂತಹ ದಾರಿಯನ್ನು ತೋರಿ ಸಂಕೋಲೆಯಿಂದ ಹೊರ ಬರಲು ಸಹಾಯಕನಾಗುತ್ತಾನೆ. ಹೀಗೆ ಒಂದುಹೊಸ ಪಥವನ್ನು ತೋರಲು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಪೂರ್ಣ ಪ್ರಜ್ಞಾಯುಕ್ತ ಕವಿಯಿಂದ ಮಾತ್ರ ಅದು ಸಾಧ್ಯವಾಗುತ್ತದೆ. ರಸಋಷಿ ಕುವೆಂಪು 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯದ ಮೂಲಕ ಆ ಕೆಲಸವನ್ನು ಮಾಡಿದ್ದಾರೆ. ಈ ದೃಷ್ಟಿಯಿಂದ, ಶ್ರೀರಾಮಾಯಣ ದರ್ಶನಂ ಈ ಯುಗದ ಮಹಾಕಾವ್ಯವಾಗಿ, ಶ್ರೇಷ್ಠಕಾವ್ಯವೆನಿಸಿ ಎಲ್ಲರ ಗಮನ ಸೆಳೆದಿದೆ.

ಮೂಲರಾಮಾಯಣದಿಂದ ಹಲವಂಶಗಳಲ್ಲಿ ಶ್ರೀರಾಮಾಯಣ ದರ್ಶನಂ ಭಿನ್ನವಾಗಿದೆ. ಮೂಲ ರಾಮಾಯಣದಲ್ಲಿಯಂತೆ, ಸಿದ್ಧ ಪಾತ್ರಗಳನ್ನಾಗಲಿ ಅಥವಾ ಪಾತ್ರಗಳಲ್ಲಿ ಮೇಲು-ಕೀಳೆಂಬ ಭೇದವನ್ನಾಗಲಿ ತರಲು ಹೋಗದೆ-ಸಮಾನತೆಯನ್ನು ಹಾಗೂ ಮಾನವ ಸಹಜವಾದ ದೌರ್ಬಲ್ಯಗಳನ್ನು ಸಹಜವಾಗಿ ತಂದಿದ್ದಾರೆ. ಈ ದೃಷ್ಟಿಯಿಂದಲೂ ಶ್ರೀರಾಮಾಯಣ ದರ್ಶನಂ ಸಹೃದಯರಿಗೆ ಮೆಚ್ಚುಗೆಯಾದ ಕೃತಿಯಾಗಿದೆ.

ಬದಲಾವಣೆ, ಬದುಕಿನಲ್ಲಿಂತೆಯೇ ಅಂತೆಯೇ ಸಾಹಿತ್ಯದಲ್ಲಿಯೂ ಒಂದು ಸಹಜ ಕ್ರಿಯೆ. ದ್ರಷ್ಟಾರನಾದ ಕವಿ ಅದನ್ನು ಹೆಚ್ಚು ಸಮರ್ಥವಾಗಿ ತರುತ್ತಾನೆ. ಕವಿಯ

ದೃಷ್ಟಿ, ಅವನ ಮನೋಭಾವ, ಅವಕ್ಕೆ ಹಿನ್ನೆಲೆಯಾಗಿ ನಿಲ್ಲುವ ಅವನ ಪ್ರತಿಭೆ ಇದಕ್ಕೆ ಕಾರಣವಾಗುತ್ತವೆ. ಮೂಲವನ್ನು ನೆಪಮಾತ್ರವಾಗಿಟ್ಟುಕೊಂಡು, ಆ ಚೌಕಟ್ಟಿನಲ್ಲಿ ತನ್ನ ಪಟ್ಟುಗಳನ್ನು ತೋರುತ್ತಾನೆ. ಹಲವೊಮ್ಮೆ ಆ ಚೌಕಟ್ಟಿನಿಂದ ಹೊರಬರುವುದು ಸಮರ್ಥನಾದ ಕವಿಗೆ ಮಾತ್ರ ಸಾಧ್ಯವಾಗುವಂಥದು. ಈ ಹಿನ್ನೆಲೆಯಲ್ಲಿ ಗಮನಿಸು ವಾಗ ವಾಲ್ಮೀಕಿ ರಾಮಾಯಣಕ್ಕೂ-ಶ್ರೀರಾಮಾಯಣ ದರ್ಶನಂಗೂ ಇರುವ ಅಂತರ ಗಣನೀಯ.

ಶಿಷ್ಟ ರಾಮಾಯಣ ಪರಂಪರೆಯಲ್ಲಿ ವಾಲ್ಮೀಕಿ ರಾಮಾಯಣ ಮೂಲವೆನ್ನ ಬಹುದಾದರೂ. ರಾಮಾಯಣದ ಕಥಾ ಪರಂಪರೆಯಲ್ಲಿಯೇ ಮೂಲ ಎಂದು ಹೇಳ ಲಾಗುವುದಿಲ್ಲ. ಇದ್ದಕ್ಕಿದಂತೆಯೇ ಯಾವುದೊಂದೂ ಉದ್ಭವಿಸಲು ಸಾಧ್ಯವಿಲ್ಲ. ಅದಕ್ಕೊಂದು ಮೂಲವಸ್ತು ಇದ್ದೇ ಇರುತ್ತದೆ. ರಾಮಾಯಣ, ಮಹಾಭಾರತ ಕಥೆ ಗಳಿಗೂ ಅಂತಹ ಮೂಲವಸ್ತು ಜನಪದ ಮೂಲದಿಂದಲೇ ಬಂದಿರಬೇಕು. ಮಣ್ಣು ಮೊದಲು, ನಂತರ ಮಡಕೆ. ಮಣ್ಣೆ ಇಲ್ಲದೆ ಮಡಿಕೆ ಮಾಡಲು ಎಂತು ಸಾಧ್ಯ ? ಎಲ್ಲ ಶಿಷ್ಟ ಕಾವ್ಯ, ನಾಟಕಗಳಿಗೂ ಜನಪದವೇ ಮೂಲ ಎಂಬುದು ವಿದ್ವಾಂಸರ ಅಭಿಪ್ರಾಯ. ಮೂಲವಸ್ತು ಕಾಲಾನಂತರ ಪ್ರತಿಭೆಗಳಿಗೆ ಸಿಕ್ಕಿ, ವೈವಿಧ್ಯವನ್ನು–ವೈಶಿಷ್ಟ್ಯ ವನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ. ಇದರಿಂದಾಗಿ ತನ್ನ ಗಾತ್ರವನ್ನು ಅದು ಹೆಚ್ಚಿಸಿಕೊಳ್ಳುತ್ತದೆ. ಅಪೌರುಷೇಯವಾದ ಸಂಬಂಧಗಳನ್ನು ಬದಿಗೊತ್ತಿ ವಾಸ್ತವಿ ಕತೆಯ ನೆಲೆಗಟ್ಟಿನಲ್ಲಿ ನಿಂತು ಚಿಂತಿಸಿದಾಗ ಈ ಅಂಶಗಳು ಬೆಳಕಿಗೆ ಬರುತ್ತವೆ ಅನ್ನಿಸುತ್ತದೆ.

ರಾಮಾಯಣ, ಮಹಾಭಾರತಗಳ ಕಥೆ ಜನಪದರ ಬಾಯಲ್ಲಿ ಇಂದು ಸಂಪೂರ್ಣ ವಾಗಿ ನಮಗೆ ದೊರೆಯದಿರುವುದು ಅಚ್ಚರಿಯ ಸಂಗತಿಯಾದರೂ. ಅದರ ಅರಿವು ಅವರಿಗಿರಲಿಲ್ಲವೆಂದು ಹೇಳುವಂತಿಲ್ಲ. ವಾಲ್ಮೀಕಿಯೇ ರಾಮಾಯಣದ ಮೂಲ ಕರ್ತೃ ಎಂದೂ ಹೇಳಬರುವುದಿಲ್ಲ. ಜನಪದ ಮೂಲವಾದ ಕಥೆಯೊಂದು ಮೊದಲಿನಿಂದಲೂ ಇದ್ದಿರಬೇಕು. ಅನಂತರ ಅದು ಶಿಷ್ಟರ ಕೈಸೇರಿ ಶಿಷ್ಟರೂಪವನ್ನು ಪಡೆದಿರಲು ಸಾಧ್ಯ. ರಾಮಾಯಣ. ಮಹಾಭಾರತ. ಭಾಗವತಗಳಲ್ಲಿ ಬರುವ ಅನೇಕ ಉಪಾಖ್ಯಾನ ಸನ್ನಿವೇಶ ಘಟನೆಗಳಿಗೆ ಜನಪದ ಸಾಹಿತ್ಯವೇ ಮಹಾ ಆಕರ. ನಿದರ್ಶನಾರ್ಥವಾಗಿ ಧರ್ಮವ್ಯಾಧನ ಕಥೆಯನ್ನೂ ನಳೋಪಾಖ್ಯಾನವನ್ನೂ ಹೆಸರಿಸಬಹುದು. ವೇದಗಳಲ್ಲಿಯೂ ಈ ಸಂಪ್ರದಾಯ ಹಾಸುಹೊಕ್ಕಾಗಿ ಸೇರಿಕೊಂಡಿದೆಯಾದರೂ, ಊರ್ವಶಿಪುರೂರವರ ಕಥೆ ಜಾನಪದೀಯವೆಂದೂ, ಸೂರ್ಯ ಚಂದ್ರರ ಪ್ರತೀಕ ಕಲ್ಪನೆ ಪುರಾತನವಾದುದೆಂದೂ ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ[1] ಹೇಗೋ ಜನಸಾಮಾನ್ಯರ ಬಾಯಲ್ಲಿ ಹುಟ್ಟಿ

1. ಡಾ. ದೇಜಗೌ (ಮುನ್ನುಡಿ), ಡಾ. ಜೀಶಂಪ : ಜನಪದ ಸಾಹಿತ್ಯ ಸಮೀಕ್ಷೆ ಪು. iv.

ಕೊಂಡು, ಉಳಿದು ಬಂದ ಅನೇಕ ವಿಚಾರಗಳು ರೆಕ್ಕೆ ಪುಕ್ಕವನ್ನು ಕಾಲಾನಂತರದಲ್ಲಿ ಬೆಳೆಸಿಕೊಂಡು, ಅನಂತರ ಯಾರೋ ಒಬ್ಬ ಶಿಷ್ಟನ ಕೈಗೆ ಸಿಕ್ಕಾಗ ಅದು ಒಂದು ಸಮಗ್ರತೆಯನ್ನು, ಸ್ಪಷ್ಟತೆಯನ್ನು ಪಡೆದುಕೊಳ್ಳುವುದು ಸಾಮಾನ್ಯ. ರಾಮಾಯಣ, ಮಹಾಭಾರತಗಳಂತಹ ಕಥಗಳ ವಿಚಾರದಲ್ಲಿಯೂ ಹೀಗೆ ಆಗಿರಲು ಸಾಧ್ಯ. ಈ ಸಂಬಂಧದಲ್ಲಿ 'Vedic Folklore'ನಲ್ಲಿ ಬರುವ ಮಾತೂ ಗಮನಾರ್ಹ.

It seems quite Probable that the Puranas and the great dramatist kalidasa took their account from Pre existing folklore tradition.

ವಾಲ್ಮೀಕಿ. ವ್ಯಾಸರಿಗಿಂತಲೂ ಮೊದಲೇ ರಾಮಾಯಣ, ಭಾರತದ ಕಥೆಗಳು ಜನರ ಬಾಯಲ್ಲಿ ಕೇಳುತ್ತಿದ್ದು ಅನಂತರ ಅವೇ ಇವರುಗಳಿಗೆ ಆಕರಗಳಾಗಿರಲೂ ಸಾಧ್ಯ. ಅನಂತರವೂ ಅವು ಹಾಗೇ ಜನರ ಬಾಯಲ್ಲಿ ಉಳಿದು ಬಂದಿರುವುದೂ ಸತ್ಯ. ಕಾಲಾನಂತರದಲ್ಲಿ ಇದರ ಹಲವು ಪಾಠಾಂತರಗಳು ಅಲ್ಲಲ್ಲಿ ಹುಟ್ಟಿಕೊಂಡು ಜನಮನ ವನ್ನು ರಂಜಿಸುತ್ತ ಬಂದಿರಬೇಕು. ಆದರೆ ಅದರ ಚೌಕಟ್ಟು ಮಾತ್ರ ಹೆಚ್ಚು ಕಡಿಮೆ ಒಂದೇಯಾಗಿ ಉಳಿದು ಬಂದಿದೆಯೆಂಬುದೂ ಗಮನಾರ್ಹ. ಕಾರಣ, ರಾಮಾಯಣದ ಕಥೆ ನಿಶ್ಚಿತ ಪ್ರದೇಶವೊಂದರಲ್ಲಿ ಜನ್ಮತಾಳಿದ್ದಾಗಿದ್ದು, ಆಮೇಲೆ ರಾಷ್ಟ್ರೀಯ ಘಟನೆ ಯಾಗಿ, ಸಂಸ್ಕೃತಿಯ ಪ್ರತಿಸಿಧಿಯಾಗಿ ರೂಪಿತವಾದುದಾಗಿರಬೇಕು. ಇದರ ಮೂಲ ರಚನಾಕಾರ ನಮಗಿಂದು ಅನಾಮಧೇಯ. ಸಮೂಹವೊಂದು ಅದನ್ನು ಕೈಗೆತ್ತಿ ಕೊಂಡಾಗ ಸಮೂಹದ್ದಾಯಿತು. ಪರಂಪರಾಗತವಾಗಿ ವಹನಿಸಿದಾಗ ಸಾಂಪ್ರದಾಯಿಕ ವಾಯಿತು. ಇದು ದೇಶದ ತುಂಬ ಹರಡಿ, ತಲೆಮಾರುಗಳ ಮೂಲಕ ಹರಿದಾಗ ಹಲವಾರು ಪಾಠಾಂತರಗಳು, ರೂಪಾಂತರಗಳು, ಪ್ರಾದೇಶಿಕ ವ್ಯತ್ಯಯಗಳು, ಕಡೆಗೆ ಭಿನ್ನ ಕಥಾ ಸಂಪ್ರದಾಯಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಹೀಗೆ ರಾಮಾ ಯಣದ ಬೇರೆ ಬೇರೆ ಸಂಪ್ರದಾಯಗಳು ರೂಪುಗೊಂಡ ಎಷ್ಟೋ ವರ್ಷಗಳ ತರುವಾಯ ಬಂದ ವಾಲ್ಮೀಕಿ ಕವಿ ಅಂತಹ ಒಂದು ಸಂಪ್ರದಾಯಕ್ಕೆ ಮಾತ್ರ ತನ್ನ ಕಾವ್ಯರೂಪದಲ್ಲಿ ಅಭಿವ್ಯಕ್ತಿ ನೀಡಿದ್ದಾನೆಂದು ಭಾವಿಸಬಹುದು.[2] "ಜನಪದ ಕಾವ್ಯ ರೂಪದಲ್ಲಿ ಕಂಠಸ್ಥ ಮೂಲದಲ್ಲಿ ಉಳಿದಿದ್ದ. ಈ ಕಾವ್ಯ ವೃತ್ತಗಳನ್ನು ವಾಲ್ಮೀಕಿ ವ್ಯಾಸರು ಸ್ವೀಕರಿಸಿ, ಪರಿಷ್ಕರಿಸಿರಬಹುದು. ರಕ್ತಮಾಂಸಗಳನ್ನು ತುಂಬಿ ಬೆಳೆಸಿರ ಬಹುದು[3]

ರಾಮಾಯಣ, ಭಾರತದ ಕಥೆಗಳು ಒಂದು ದೇಶೀಯ ಸ್ವತ್ತಾಗಿ ಉಳಿದು

---

2. ಜನಪದ ರಾಮಾಯಣ ರಾಗೌ (ಪ್ರಸ್ತಾವನೆ)

3. ಡಾ. ಜೀಶಂಪ ; ಕುವೆಂಪು ಸಾಹಿತ್ಯಲೋಕ-೧-ಪು. ೧೭೧.

ಬಂದಿವೆ. ಭಾರತೀಯ ಸಂಸ್ಕೃತಿಯ ಪ್ರತಿರೂಪಗಳಾಗಿ ಸ್ಥಾನ ಪಡೆದಿವೆ ದೇಶೀಯ ಭಾಷೆಗಳಲ್ಲಿ ಕಂಡುಬರುವ ರಾಮಾಯಣದ ಕಥೆಯ ವ್ಯತ್ಯಾಸದಂತೆಯೇ ಜನಪದ ರಾಮಾಯಣದಲ್ಲಿಯೂ ಕಂಡುಬರುತ್ತದೆ. ಹಲವು ಸಣ್ಣ ಪುಟ್ಟ ವ್ಯತ್ಯಾಸಗಳು ಇಲ್ಲಿ ಧಾರಾಳವಾಗಿ ಕಂಡುಬರುತ್ತವೆ. ಗೋಂಡ ಜನರಲ್ಲಿ ಕಂಡುಬರುವ ರಾಮಾಯಣದ ಕಥೆಯನ್ನು ವೆರಿಯರ್ ಎಲ್ವಿನ್ನರು ತಮ್ಮ ಗಿರಿಜನ ಪ್ರಪಂಚದಲ್ಲಿ ಹೆಸರಿಸಿದ್ದಾರೆ. ಹೀಗೆಯೇ ಇನ್ನಿತರ ಭಾಗಗಳಲ್ಲಿಯೂ, ಭಾಷೆಗಳಲ್ಲಿಯೂ, ಜನಾಂಗದಲ್ಲಿಯೂ ಬೇರೆ ಬೇರೆ ಕಥಾ ಸಂಪ್ರದಾಯಗಳು ಕಂಡು ಬಂದರೆ ಆಶ್ಚರ್ಯವೇನೂ ಇಲ್ಲ. ಕನ್ನಡ ಜಾನಪದ ರಾಮಾಯಣದ ಕಥೆಯನ್ನೇ ಪರಿಶೀಲಿಸಿದಾಗಲೂ ಹಲವು ಭಿನ್ನಪಾಠಗಳು ಕಂಡು ಬರುವುದು ಗಮನಾರ್ಹ. ಸಂಪೂರ್ಣ ರಾಮಾಯಣದ ಕಥೆ ಒಟ್ಟಿಗೆ ಇಲ್ಲಿ ದೊರೆಯದಿದ್ದರೂ, ಅದರ ಹಲವು ಭಾಗಗಳು ಇಂದಿಗೂ ಜನಪದಗಾಯಕರ ಬಾಯಲ್ಲಿ ಉಳಿದು ಬಂದಿವೆ.

ಜಾನಪದ ಮುದ್ರೆ ಎಲ್ಲ ಶಿಷ್ಟ ಸಾಹಿತ್ಯ, ಸಂಸ್ಕೃತಿ, ಕಲೆಗಳ ಮೇಲೂ ಆಗಿದೆ ಎಂಬುದನ್ನು ಎಲ್ಲ ವಿದ್ವಾಂಸರೂ ಒಪ್ಪಿಕೊಂಡಿದ್ದಾರೆ. ಹೀಗಿರುವಾಗ ರಾಮಾಯಣ ಭಾರತದ ಕಥೆಗಳು ಇದರಿಂದ ಹೊರತಾದುವು ಎಂದು ಹೇಳಲಾಗುವುದಿಲ್ಲ.[4] ಆದರೆ ಒಂದಂಶವನ್ನು ಇಲ್ಲಿ ಸ್ಪಷ್ಟಗೊಳಿಸಿಕೊಳ್ಳ ಬೇಕಾಗುತ್ತದೆ. ಅದು : ವಾಲ್ಮೀಕಿ–ವ್ಯಾಸರ ರಾಮಾಯಣ, ಭಾರತಗಳ ಸ್ವರೂಪಕ್ಕೂ, ಜನಪದ ರಾಮಾಯಣ, ಭಾರತಗಳ ಸ್ವರೂಪಕ್ಕೂ ಇರುವ ಅಂತರ. ಪ್ರಾರಂಭದಿಂದಲೂ ಜನರ ತಿಳುವಳಿಕೆಯಲ್ಲಿ ಬಂದ ರಾಮಾಯಣದ ಕಥೆಯ ಸ್ವರೂಪವೇ ಬೇರೆ. ವಾಲ್ಮೀಕಿ–ವ್ಯಾಸರ ಕಥೆಯ ಸ್ವರೂಪವೇ ಬೇರೆ. ಇಲ್ಲಿಯ ಕಥಾಮೂಲ ಒಂದೇ ಆಗಿದ್ದರೂ, ಒಂದೇ ಸ್ವರೂಪದ್ದಾಗಿದ್ದರೂ–ವ್ಯಾಸ ವಾಲ್ಮೀಕಿಗಳ ಕಾವ್ಯ ಚಿಂತನೆಯಾಗಲಿ, ಆಲೋಚನೆಯ ಅಥವಾ ದರ್ಶನಾದಿಗಳ ವಿವರವಾಗಲಿ ಅಲ್ಲ. ಹಾಗೆಯೇ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ'ನಲ್ಲಿನ 'ಪಾಪಿಗುದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯೂಹ ರಚನೆಯಲಿ' ಎಂಬ ದಿವ್ಯ ಸಂದೇಶವನ್ನಾಗಲಿ ಅಲ್ಲ. ಅಪೇಕ್ಷಿಸುವುದು ಸಾಧುವೂ ಅಲ್ಲ. ಸಾಧ್ಯವೂ ಇಲ್ಲ. ಇಲ್ಲಿಯ ಕಥೆಗಳ ಸ್ವರೂಪವೇ ಬೇರೆ, ಸ್ವಾರಸ್ಯವೇ ಬೇರೆ.

ಶ್ರೀರಾಮಾಯಣ ದರ್ಶನಂ ಮತ್ತು ಜನಪದ ರಾಮಾಯಣಗಳ ತೌಲನಿಕ ಅಧ್ಯಯನ ನಡೆಸುವವರಿಗೆ ಮೊದಲ ಹಂತದಲ್ಲೇ ಎದುರಾಗುವ ತೊಡಕೆಂದರೆ, ಜನಪದ ರಾಮಾಯಣಗಳಾವುವೂ ಸಮಗ್ರವಾಗಿ ದೊರೆಯದಿರುವುದು. ಸ್ವಲ್ಪಮಟ್ಟಿಗೆ ಹಾಗೆ

---

4. The influence of folk culture, art music, dance literature--is directly to be found every where in all his activities and creations-Influence of folk art on some modern artists, by Chittaranjan Dev : pub in Folklore vol. I, No-5, P-342.

ದೊರೆಯುವ ರಾಮಾಯಣವೆಂದರೆ ಭಾಗವಂತಿಕೆ ಸಂಪ್ರದಾಯದ್ದು, ಇದು ಇಂದಿಗೂ ಕಂಠಸ್ಥ ಸಂಪ್ರದಾಯದಲ್ಲಿ ಉಳಿದು ಬರುವುದರ ಜೊತೆಗೆ, ಇದರ ಕಾಗದದ ಹಸ್ತ ಪ್ರತಿಯೂ ಲಭ್ಯವಾಗುತ್ತದೆ. ಅಲ್ಲದೆ ಶಿಷ್ಟಕವಿಯೊಬ್ಬ ಇದರ ಕಥೆಯನ್ನು ಸ್ವಲ್ಪ ಮಟ್ಟಿಗೆ ಸುಧಾರಿಸಿದಂತೆಯೂ ತೋರುತ್ತದೆ. ಭಾಗವಂತಿಕೆ ಸಂಪ್ರದಾಯದ ಮುಖ್ಯ ಕಾವ್ಯವೂ ಇದೇ ಆಗಿದೆ. ಭಾಗವಂತಿಕೆ ಸಂಪ್ರದಾಯದ ಹಾಡುಗಳಲ್ಲಿ ರಾಮಾಯಣವೂ ಕಂಡು ಬರುತ್ತದೆ. ಆ ಸಂಪ್ರದಾಯದ ಮುಖ್ಯಕಾವ್ಯವೇ ಇದಾಗಿದೆ. ಸಮಗ್ರ ರಾಮಾಯಣವನ್ನು ಅಳವಡಿಸಿ ಭಾಗವಂತಿಕೆ ರಾಮಾಯಣವನ್ನು ರಚಿಸಲಾಗಿದೆ. ಶಿಷ್ಟ ಮೂಲದ ರಾಮಾಯಣದ ಕಥಾ ಚೌಕಟ್ಟನ್ನೇ ಈ ಕತೆಯೂ ಹೋಲುತ್ತದೆ. ಆದರೆ ಅನೇಕ ಜನಪದ ಆಶಯಗಳು ಈ ಕತೆಯೊಡನೆ ಬೆರೆತು ಸುಂದರವಾದ ಜನಪದ ಕಾವ್ಯದ ಆವರಣವನ್ನು ಇಲ್ಲಿ ಕಲ್ಪಿಸಿಬಿಡುತ್ತವೆ. ಬ್ರಹ್ಮ ಕೌಸಲ್ಯೆಗೆ ರಾಮಾವತಾರದ ವಾರ್ತೆಯನ್ನು ಕೊರವಂಜಿಯ ರೂಪದಲ್ಲಿ ಬಂದು ಹೇಳುವುದು, ಸಮುದ್ರತೀರದಲ್ಲಿ ಆಂಜನೇಯ ಬಾಲವನ್ನು ಬಿಟ್ಟು ಆಳವನ್ನು ನೋಡುವುದು, ಕುಂಭಕರ್ಣ 'ಮಾರಿಯುಂದದಿ ಬಿದ್ದು' 'ಘೋರೆಂದು' ನಿದ್ರೆಮಾಡುತ್ತಿದ್ದುದು ಮುಂತಾದ ಅನೇಕ ಸನ್ನಿವೇಶಗಳು 'ಭಾಗವಂತಿಕೆ ರಾಮಾಯಣ'ವೂ ಜನಪದ ಮೂಲದ ಕಾವ್ಯವೇ ಎಂಬು ದನ್ನು ಸ್ಪಷ್ಟಪಡಿಸುತ್ತದೆ. ಶಿಷ್ಟಕವಿಯೊಬ್ಬ ಈ ಕತೆಯನ್ನು ಸುಧಾರಿಸಿದಂತೆ ತೋರು ತ್ತದೆ. ಸಾಂಗತ್ಯ ಕಾವ್ಯವೊಂದು ಕಂಠಸ್ಥ ಸಂಪ್ರದಾಯದಲ್ಲಿ ಉಳಿದು ಬಂದಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ಸಮಗ್ರ ರಾಮಾಯಣ ಜನಪದ ಸಂಪ್ರದಾಯದಲ್ಲಿ ಕಂಡು ಬರುವುದೂ ಗಮನಾರ್ಹವಾಗಿದೆ.[5]

ಭಾಗವಂತಿಕೆ ಸಂಪ್ರದಾಯದ ರಾಮಾಯಣವನ್ನು ಬಿಟ್ಟರೆ, ಅಷ್ಟೇ ಪ್ರಮುಖ ವಾದ ಮತ್ತೊಂದು ಜನಪದ ಮೂಲದ ರಾಮಾಯಣ ತಂಬೂರಿ ಸಂಪ್ರದಾಯದ 'ಸಂಪೂರ್ಣ ರಾಮಾಯಣ.[6] ತಂಬೂರಿಯವರು ಹಾಗೂ ಭಾಗವಂತಿಕೆ ಮೇಳದ ವರು, ಇವರಿಬ್ಬರೂ ಜನಪದ ಕಾವ್ಯಸಂಪ್ರದಾಯದಲ್ಲಿ ಹೆಸರಾದವರು. ತಂಬೂರಿ ಯವರು ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ವಿಶೇಷವಾಗಿ ಕಂಡುಬಂದರೆ, ಭಾಗವಂತಿಕೆ ಮೇಳದವರು ಮಂಡ್ಯ, ಪಾಂಡವಪುರ, ಮಾಗಡಿ, ರಾಮನಗರ, ಚೆನ್ನರಾಯಪಟ್ಟಣ ತಾಲ್ಲೂಕುಗಳಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಭಾಗವಂತಿಕೆ ಮೇಳ ವೈಷ್ಣವಸಂಪ್ರದಾಯದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರಬಹುದಾದ ಬಯಲು ಸೀಮೆಯ ಒಂದು ವಿಶಿಷ್ಟ ಸಂಪ್ರದಾಯ. ಈ ಸಂಪ್ರದಾಯವನ್ನು ವಿಶೇಷವಾಗಿ

---

5. ಡಾ. ಜೀ. ಶಂ. ಪರಮಶಿವಯ್ಯ - ದ. ಕ. ಜನಪದ ಕಾವ್ಯ ಪ್ರಕಾರಗಳು ಪು. ೨೮೪

6. ರಾಗೌ ಮತ್ತು ಸಂಗಡಿಗರು ಸಂಪಾದಿಸಿರುವ 'ಜನಪದ ರಾಮಾಯಣ' ದಲ್ಲಿನ ಕಥೆ ಯನ್ನು ಇಲ್ಲಿ ಹೆಚ್ಚಾಗಿ ಗಮನಿಸಲಾಗಿದೆ.

ದೀವಳಿಗೆಯ ಸಂದರ್ಭದಲ್ಲಿ ಆಡುತ್ತಾರೆ. ಇವರ ತಂಡವನ್ನು 'ದೀವಳಿಗೆ ದಂಡು' ಎಂದೂ ಕರೆಯುತ್ತಾರೆ. ಇವರುಗಳು ಊರೂರಿನ ಮೇಲೆ ಹೊರಟು ರಾಮಾಯಣ, ಭಾರತದ ಕಥೆಗಳನ್ನುಹಾಡುತ್ತಾರೆ. ಬೇರೆ ಬೇರೆ ಊರಿನ ಎರಡು ತಂಡಗಳು ಸೇರಿದಾಗ ಹಲವೊಮ್ಮೆ ತೀವ್ರ ಸ್ಪರ್ಧೆ ನಡೆಯುವುದೂ ಉಂಟು :

ಕೇಳಿರಿ ದಶರಥ ರಾಮರ ಚರಿತೆಯ
ಲಾಲಿಸಿ ಕೇಳಿರಿ ಜನರೆಲ್ಲ
ರಾಮರ ಕಂಡನು ಹನುಮಂತ
ಸಂಜೀವನ ತಂದನು ಹನುಮಂತ

ಬಂದಳು ಕೈಕೆ ದಶರಥನೋಲಗಕೆ
ನಿಂದಳು ಮಾತಾಡಿದಳು
ರಾಮ ರಾಮ ಎನ್ನಿರಿ ಮಾಜನರೆಲ್ಲ
ಶ್ರೀರಾಮ ಎನ್ನವುದೆ ಪಾವನವು

ಹೀಗೆ ಕಥೆಯ ಭಾಗಗಳನ್ನು ಹಾಡುತ್ತಾ ಹೋಗುತ್ತಾರೆ. ಲಘು ಕವಿತೆ. ವಾದ್ಯಗಳ ಹಿನ್ನೆಲೆಯಲ್ಲಿ ಹಿಮ್ಮೇಳ–ಮುಮ್ಮೇಳಗಳ ಮಧುರ ಕಂಠ ಸ್ವಾರಸ್ಯವನ್ನು ತರುತ್ತದೆ.

ತಂಬೂರಿಯವರೂ, ಇವರಂತೆಯೇ ಒಂದು ಕಾಲಕ್ಕೆ ಧಾರ್ಮಿಕ ಸಂಪ್ರದಾಯದವರಾಗಿದ್ದು ಈಗ ಲೌಕಿಕಗಾಯಕ ವರ್ಗದಲ್ಲಿ ಕಂಡುಬರುವವರಾಗಿದ್ದಾರೆ. ಬಹುವಾಗಿ ಮಂಟೆಸ್ವಾಮಿ ಸಂಪ್ರದಾಯದ ನೀಲಗಾರರನ್ನು ಹೋಲುವ ಇವರು ಈಗ ಅವರೊಂದಿಗೆ ಯಾವ ಸಂಬಂಧವನ್ನು ಇಟ್ಟುಕೊಂಡಂತೆ ಕಾಣುವುದಿಲ್ಲ. ಸೊಗಸಾದ ಕಥನಗೀತೆಗಳ ಜೊತೆಗೆ ರಾಮಾಯಣದ ಕಥೆಯನ್ನು ಹಾಡಿಕೊಂಡು ಜನಪ್ರಿಯ ಕಲಾವಿದರಾಗಿದ್ದಾರೆ.

ಈ ಎರಡು ಸಂಪ್ರದಾಯಗಳನ್ನು ಬಿಟ್ಟರೆ, ರಾಮಾಯಣದ ಕಥಾಭಾಗಗಳು ನಮಗೆ ವಿಶೇಷವಾಗಿ ದೊರೆಯುವುದು ಯಕ್ಷಗಾನ ಪ್ರತಿಗಳಲ್ಲಿ. ಬಯಲಾಟದಲ್ಲಿ ರಾಮಾಯಣ, ಮಹಾಭಾರತ ಹಾಗೂ ಭಾಗವತಗಳ ಪ್ರಸಂಗಗಳೇ ಪ್ರಧಾನ. ಯಕ್ಷಗಾನ ಪ್ರಸಂಗದ ಕವಿಗಳು ತಮ್ಮದೇ ಆದ ರೀತಿಯಲ್ಲಿ ಆ ಪ್ರಸಂಗಗಳನ್ನು ಕಲ್ಪಿಸಿ ಚಿತ್ರಿಸಿದ್ದಾರೆ ಹಾಗಾಗಿ ಎಲ್ಲ ಪ್ರಸಂಗಗಳನ್ನೂ ಒಟ್ಟುಗೂಡಿಸಿದರೆ–'ಸಂಪೂರ್ಣ ರಾಮಾಯಣ' ಸಿದ್ಧವಾಗುವಂತಿದೆ. ಏಕೆಂದರೆ, ಬಿಡಿಬಿಡಿಯಾಗಿ ಎಲ್ಲ ಭಾಗಗಳೂ ಅಲ್ಲಿ ಕಂಡುಬರುತ್ತವೆ: ಪುತ್ರಕಾಮೇಷ್ಟಿ. ಸೀತಾಸ್ವಯಂವರ. ರಾಮರಾಜ್ಯ ವಿಯೋಗ. ಪಂಚವಟಿ ವಾಲಿ ಸುಗ್ರೀವರ ಕಾಳಗ, ರಾವಣೋದ್ಭವ, ರಾವಣಪ್ರತಾಪ, ಅಂಗದ ಸಂಧಾನ. ಚೂಡಾಮಣಿ, ಮಕರಾಕ್ಷ ಕಾಳಗ, ನಾಗಾಸ್ತ್ರ ಕುಂಭಕರ್ಣ ಕಾಳಗ. ಮೈರಾವಣ ಕಾಳಗ, ರಾವಣಾಸುರ ಕಾಳಗ, ಇಂದ್ರಜಿತು ಕಾಳಗ. ಸೀತಾವಿಜಯ, ರಾಮಾಂಜನೇಯ ಕಾಳಗ, ಸುಬಾಹು ಕಾಳಗ, ಅತಿಕಾಯ ಕಾಳಗ, ಲವಕುಶರ ಕಾಳಗ, ಅಶ್ವಮೇಧ ಇತ್ಯಾದಿ. ಹೀಗೆ ಯಕ್ಷಗಾನ ಸಾಹಿತ್ಯದಲ್ಲಿ ಹೇರಳವಾಗಿ ರಾಮಾಯಣದ ಕಥಾಪ್ರಸಂಗಗಳು

ಕಂಡು ಬರುತ್ತವೆ.

ಇವಲ್ಲದೆ ಕೆಲವು ಸಾಮಾನ್ಯಗಾಯಕ-ಗಾಯಕಿಯರು ಹಾಡುವ ರಾಮಾಯಣ ಕಥೆಯ ಬಿಡಿ ಹಾಡುಗಳು ಸಿಗುತ್ತವೆ. ತಮಗೆ ಪ್ರಿಯವಾದ ಹಾಗೂ ಮೆಚ್ಚುಗೆಯಾದ ಹಲವು ಕಥಾ ಭಾಗಗಳನ್ನು ಅವರು ಉಳಿಸಿಕೊಂಡು ಬಂದಿದ್ದಾರೆ. ಸಮಗ್ರ ಕಥೆ ಈ ಗಾಯಕರಲ್ಲಿ ದೊರೆಯುವುದಿಲ್ಲವಾದರೂ, ಅವರು ಉಳಿಸಿಕೊಂಡು ಬಂದಿರುವ ಭಾಗಗಳ ಸ್ವಾರಸ್ಯ ಮಾತ್ರ ವಿಶೇಷವಾಗಿ ಉಳಿದು ಬಂದಿದೆ. ತ್ರಿಪದಿಯ ರೂಪದಲ್ಲಿ ಕಂಡುಬರುವ ಈ ಬಿಡಿಹಾಡುಗಳು ರಾಮಾಯಣದ ಸ್ವಾರಸ್ಯವನ್ನು ಅದ್ಭುತವಾಗಿ ಚಿತ್ರಿಸುತ್ತವೆ. ಕುಟ್ಟುವಾಗ, ಬೀಸುವಾಗ, ಕಳೆಕೀಳುವಾಗ ಹಾಡುವ ಹಾಡುಗಳಿವಾದರೂ, ರಾಮಾಯಣದ ಕಥೆ ಅವರಲ್ಲಿ ಎಷ್ಟು ಆಳವಾಗಿ ಬೇರು ಬಿಟ್ಟಿವೆ ಎಂಬುದನ್ನು ಅವು ಮನದಟ್ಟಾಗಿಸುತ್ತವೆ. ಈ ಕೆಲವು ತ್ರಿಪದಿಗಳನ್ನು ಗಮನಿಸಬಹುದು—

ರಾಗಿಯ ಕಲ್ಲಿಡಿದು ಸಿರಿರಾಮರ ಪಾದ ನೆನೆದೇವು
ರಾವುಳನ ಕೊಂದು ರಣದಲ್ಲಿ—ಚೆಂಡಾಡಿದ
ಸಿರಿ ರಾಮರ ಪಾದ ನೆನೆದೇವು

ರಾಮ ರಾಮನೆ ರಾಮ ನನ್ನಯ್ಯನ
ರಾಮ ಜಾನಕಿಯ ರಾಮನೆ—ಕೌಸಲ ದೇವಿ
ಪ್ರೇಮದಲ್ಲಿ ರಾಮನ ಕರೆದಳು

ಸೀತಮ್ಮ ಹುಟ್ಟಿದಳೆಂದು ಮಾತಾಡೊ ಲೆಂಕೇಲಿ
ಸೀತೆ ಸಿರಿರಾಮರ ಮಡದಿಯು—ಆದಳೆಂದು
ಮಾತಾಡೊ ಲೆಂಕೆ ಪುರದಲ್ಲಿ

ಆದರಿಸಿ ತಂದಾರೊ ಗೋದುವೆ ಮೈಯೊಳ
ಎಳ್ಳೂವಿನಂಗೆ ಬಳುಕೋಳ—ಸೀತಮ್ಮ
ಎಲ್ಲರಸಿ ತಂದ್ರಿ ರಾಮದೇವ್ರ

ಬಾರೆ ಸೀತಮ್ಮ ನಿಮ್ಮ ಮಾವ ನೋಡಾರಂತೆ
ಅಂಗಾಲು ಪದ್ಮ ಸುಳಿಶುದ್ಧ—ನೋಡಾರಂತೆ
ಸೀತೆಗು ರಾಮನಿಗು ಸರಿಯೆಂದು

ಅಡವಿ ಅರಣ್ಯದಲ್ಲಿ ಗಿಡನೋಡಿ ರಾಮಗೆ
ಹೊನ್ನ ಮಿರುಗ್ಮವ ಎಳೆತಂದ—ರಾವುಳ
ಸೀತಾದೇವಿಯ ಕದ್ದು ಸೆರೆತಂದ

ಸೀತಮ್ಮ ಸೆರೆ ಹೋದ್ದ ಯಾರೂ ಕಾಣರಂತೆ
ಮೇಘದಲ್ಲಾಡೊ ಗರುಡಾಳ—ಕಂಡುಕೊಂಡು
ರಾವಳನ ದಂಡ ಎದುರಿಸಿದೊ

ಸೀತೆ ಕದ್ದೋರ್‍ಯಾರೋ ಸಿರಿರಾಮರ ಮಡದೀಯ
ಹೊತ್ತಿನಲಿ ಕೊಂಡ್ಹೋದ ರಾವಳ—ಸೀತಮ್ನ
ಜಗಳ ಮಾಡ್ಯಾನೆ ಜಟಾಯು

ರಾವಳನ ದಂಡ ತಡೆದು ಯುದ್ಧವ ಮಾಡಿ
ರಾಮರಿಗೆ ಬರೆದ ಸುದ್ದಿಯ—ಏನೆಂದು
ಸೀತಮ್ಮ ರಾವಳನ ಸೆರೆಹೋದ್ಳು

ಚೆಂದಾಕೆ ರಾಮರು ಮಿರುಗದ ಬ್ಯಾಟೆಗೆ ಹೋಗಿ
ಆದಂಗ್ಹೋಗಿ ನಂದಿ ವನಸೇರಿ—ಸೀತಮ್ಮ
ಸಿರಿ ರಾಮರ ದಂಡ ನಡಸ್ಯಾಳು

ದೊಡ್ಡೋನು ಹನುಮಯ್ಯ ದೊರೆಗೆ ತಾಸಂಜೋನು
ತಿದ್ದೀದ ಮೀಸೆ ಸುಲಿಪಲ್ಲು—ಹನುಮಯ್ಯ
ಬಗ್ಗಿ ರಾಮರಿಗೆ ಶರಣೆನ್ನಿ

ಡೊಂಕು ಮೋರೆಯ ಹನುಮ ಲೆಂಕೆಗೆ ಬಲುಚೆಲುವ
ಟೊಂಕದ ಮೇಲೆ ಎಡಗೈಯ—ಇಟುಕೊಂಡು
ಲಂಕಾಕ ಲಾಗ ಹೊಡೆದಾನೂ

ಆನೆಗಾತ್ರದ ಕೆಂಡ ಆರಿಸಿ ಬೀಳುವಾಗ
ಇವನ್ಯಾರೊ ಲಂಕೆ ಸುಡುವೋನು—ಹನುಮಂತ
ತಾಸಿನಲೆ ಹಾಕಿದ ಜಲದೀಗೆ

ಉಂಗುರವ ತಂದ ರಂಗಪಿಲ್ಲಿಯ ತಂದ
ಇಂಬಿಯ ವನದಲ್ಲಿ ಸೆರೆಯಿರುವ—ಸೀತೆಯ
ಉಂಗುರವ ತಂದ ಹನುಮಂತ

ರಾಮರು ಬಿಟ್ಟಬಾಣ ರಾಜ್ಯಕ್ಕೆ ಹೆಸರಾದೊ
ರಾಮ ದೇವರ ತಮ್ಮ ಲಕ್ಷ್ಮಣ—ಬಿಟ್ಟ ಬಾಣ
ಮೇಲು ಲೋಕದಲಿ ಗುಡುಗೀದೊ

ಮದ್ದು ತಾರೆಂದರೆ ಮರವ ತಂದಿಳುಕಿದ
ಮದಗಿರಿ ಬೆಟ್ಟವ ತಲೆಕೆಳಗ—ಮಾಡಿದ
ಮುದ್ದು ರಾಮರ ಬಂಟ ಹನುಮಂತ

ರಾಮರು ಬರುವಾಗ ರಾಜ್ಯವೆ ಹಗಲಾದೊ
ರಾಮರು ಒಬ್ಬ ಲಕ್ಷ್ಮಣ—ಲಂಕೆಯ ಹನುಮ
ಅವರ್‍ಮೂವರಾಳಿದರು ದುರ್ಗವ

ಈ ಬಿಡಿಬಿಡಿ ತ್ರಿಪದಿಗಳು ಸಮಗ್ರರಾಮಾಯಣದ ಚಿತ್ರವನ್ನು ತಂದು ಕೊಡುವಲ್ಲಿ ಸಮರ್ಥವಾಗಿವೆ. ಆಕಾರದಲ್ಲಿ ವಾಮನಾಕಾರದ ಇವು ಅರ್ಥದಲ್ಲಿ, ವ್ಯಾಪ್ತಿಯಲ್ಲಿ, ತ್ರಿವಿಕ್ರಮರೂಪಿಯಾಗಿ ನಮ್ಮ ಕಣ್ಣೆದುರಿಗೆ ನಿಲ್ಲುತ್ತವೆ. ಹೇಳುವುದನ್ನು ಸಂಕ್ಷಿಪ್ತ

ವಾಗಿ ; ಆದರೆ ಅರ್ಥಪೂರ್ಣವಾಗಿ. ಸ್ವಾರಸ್ಯಪೂರ್ಣವಾಗಿ ಹೇಳುವ ಗುಣ ಜನಪದರಿಗೆ ಹುಟ್ಟಿನೊಡನೆ ಬಂದ ಗುಣ. ರಾಮ ಲಕ್ಷ್ಮಣರ ಪರಾಕ್ರಮದ ವರ್ಣನೆಯಾಗಲಿ, ಸೀತಾದೇವಿಯ ಸೌಂದರ್ಯದ ವರ್ಣನೆಯಾಗಲಿ ಅಥವಾ ಸೀತೆಯ ಅಪಹರಣಕ್ಕೆ ಕಾರಣವಾದ ಅಂಶವನ್ನಾಗಲಿ ಅವರು ಚಿತ್ರಿಸುವಲ್ಲಿ ಅವರದ್ದೆ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಸೀತೆ, ರಾವಣನಿಗೆ ಸೆರೆಯಾಗಲು ಸೀತೆಯೇ ಕಾರಣಳು ಎಂದು ಅವರು ಹೇಳುವ ರೀತಿ ಸೊಗಸಾಗಿ–

ಚೆಂದಾಕೆ ರಾಮರು ಮಿರುಗದ ಬ್ಯಾಟೆಗೆ ಹೋಗಿ
ಆದಂಗ್ಹೋಗಿ ನಂದಿವನಸೇರಿ—ಸೀತಮ್ಮ
ಸಿರಿರಾಮರ ದಂಡ ನಡಸ್ಯಾಳು.

ಧ್ವನಿಪೂರ್ಣವಾಗಿ. ಹೆಣ್ಣಿನ ಸ್ವಭಾವವನ್ನೇ ಈ ತ್ರಿಪದಿ ಒಳಗೊಂಡಿದೆ. ಹೆಣ್ಣಿನ ಆಸೆ–ಆಕಾಂಕ್ಷೆ, ಮೊಂಡುತನ, ಹಲವೊಮ್ಮೆ ಅದರಿಂದಾಗುವ ಪರಿಣಾಮ, ಈ ಎಲ್ಲವನ್ನೂ ಅಲ್ಲಿ ಕಾಣಬಹುದು.

"ಸಾಮಾನ್ಯ ಗಾಯಕರು ಹಾಡುವ ಇಂತಹ ತ್ರಿಪದಿಗಳು. ರಾಮಾಯಣದ ಕಥೆಯ ಹಲವು ಸ್ವಾರಸ್ಯವಾದ ಅಂಶಗಳನ್ನು ಹೊರಗೆಡಹುತ್ತವೆ. ರಾಮಾಯಣದ ಸಮಗ್ರ ಚಿತ್ರವನ್ನು ಕೊಡುವ ಈ ತ್ರಿಪದಿಗಳು ಮೂಲ ಜನಪದ ರಾಮಾಯಣವೊಂದರ ಅಸ್ತಿತ್ವದ ಕಡೆ ಬೆರಳು ಮಾಡಿ ತೋರಿಸುತ್ತವೆ. ಬೇರೆಬೇರೆ ಅಧ್ಯಾಯಗಳಲ್ಲಿ ಕಂಠಸ್ಥ ಸಂಪ್ರದಾಯದಲ್ಲಿ ಉಳಿದಿದ್ದ ಅಪೂರ್ವ ಜನಪದ ರಾಮಾಯಣವೊಂದು ಕ್ರಮೇಣ ಕೆಲವು ಭಾಗಗಳನ್ನು ಕಳೆದುಕೊಳ್ಳುತ್ತ ಅಲ್ಲಿಷ್ಟು ಇಲ್ಲಿಷ್ಟು ಚೆಲ್ಲಿಹೋದ ತ್ರಿಪದಿಗಳಲ್ಲಿ ಮಾತ್ರ ಉಳಿದಂತೆ ತೋರುತ್ತದೆ"[7] ಇವೆಲ್ಲವನ್ನು ಸಮಗ್ರವಾಗಿ ಸಂಗ್ರಹಿಸಿದಾಗ ಸಂಪೂರ್ಣ ಜನಪದ ರಾಮಾಯಣದ ಸ್ವರೂಪವನ್ನು ಕಾಣಬಹುದು.

ಜನಪದ ರಾಮಾಯಣಕ್ಕೆ ಸಂಬಂಧಿಸಿದಂತೆ ಕೆಲವು ವೃತ್ತಿ ಗಾಯಕರು ಹಾಡುವುದರ ಜೊತೆಗೆ ; ಯಕ್ಷಗಾನ ಪ್ರಸಂಗಗಳಲ್ಲಿ, ತ್ರಿಪದಿಗಳಲ್ಲಿ ದೊರೆಯುವ ಕೆಲವು ಭಾಗಗಳು. ಜನಪದ ರಾಮಾಯಣದ ಪ್ರಾಚುರ್ಯವನ್ನು ತಿಳಿಸುತ್ತವೆ. ಇವಲ್ಲದೆ, "ರಾಮಾಯಣ ಮಹಾಭಾರತಗಳಿಗೆ ಸಂಬಂಧಿಸಿದಂತೆ ನಾಡಿನ ಎಲ್ಲಕಡೆಗಳಲ್ಲೂ ಐತಿಹ್ಯಗಳು ಕೇಳಿಬರುತ್ತವೆ. ಪಾಂಡವರ ಗವಿ, ಭೀಮನ ಹೆಜ್ಜೆ, ರಾಮತೀರ್ಥ, ಸೀತೆಕಟ್ಟೆ, ಧನುಷ್ಕೋಟಿ, ಮುಂತಾದ ವೈವಿಧ್ಯಮಯ ಐತಿಹ್ಯಗಳನ್ನೊಳಗೊಂಡ ನೆಲೆಗಳು ಅಸಂಖ್ಯಾತವಾಗಿವೆ. ಸಿದ್ಧಗಂಗೆಯ ಬೆಟ್ಟವೊಂದರ ಮೇಲೆ ಸೀತೆಯ ಸೆರಗಿನ ಗುರುತಿದೆ. ಚುಂಚನಕಟ್ಟೆಯ ಬಳಿ ಕಾವೇರಿಯಲ್ಲಿ ಸೀತೆ ಮಿಂದುದರಿಂದ ನೀರು ಇನ್ನೂ ಹಳದಿಯ ವರ್ಣದಲ್ಲೇ ಹರಿಯುತ್ತದೆ. ದಾವಣಗೆರೆಯ ಬೆಟ್ಟದ ನೆತ್ತಿಯೊಂದರಲ್ಲಿ

---

[7] ಡಾ. ಜೀಶಂಪ–ದ.ಕ. ಜನಪದ ಕಾವ್ಯಪ್ರಕಾರಗಳು—ಪು. ೨೮೭.

ತಟ್ಟೆಯೋಪಾದಿಯಲ್ಲಿ ದೊಡ್ಡ ಕುಳಿ ಬಿದ್ದಿದೆ : ಅದು ಭೀಮ ಊಟ ಮಾಡಿದ ನೆಲೆ, ಪಾಂಡವಪುರದ ಬೆಟ್ಟದಲ್ಲಿ ಪಾಂಡವರು ವಾಸವಾಗಿದ್ದರು ......"[8]

ಹೀಗೆ ಕರ್ನಾಟಕದಾದ್ಯಂತಪೂ, ತಾವು ಕಂಡ ಪ್ರಕೃತಿಯ ಅದ್ಭುತಗಳಿಗೆ, ರಾಮಾಯಣ, ಮಹಾಭಾರತದ ಪ್ರಸಂಗಗಳನ್ನು ಆರೋಪಿಸಿ ಆನಂದಿಸಿದ್ದಾರೆ. ತೃಪ್ತಿ ಪಟ್ಟಿದ್ದಾರೆ. ಕರ್ನಾಟಕದ ಎಲ್ಲ ಊರಿನ ಕೆರೆ ಕಟ್ಟೆ, ಬೆಟ್ಟ, ಗುಡ್ಡಗಳಿಗೆ ಸಂಬಂಧಿಸಿ ದಂತೆ ಇಂತಹ ಒಂದೊಂದು ಐತಿಹ್ಯಗಳು ಹುಟ್ಟಿಕೊಂಡಿರುವುದನ್ನು ಕಾಣಬಹುದಂ-ಕೇಳಬಹುದು. ಇವೆಲ್ಲವೂ ಜನಪದ ದೃಷ್ಟಿಯಲ್ಲಿ ರಾಮಾಯಣದ ಕಥೆ ಏನು ? ಎಂಬುದನ್ನು ಸ್ಪಷ್ಟಪಡಿಸುತ್ತವೆ. ಅದರ ದೃಷ್ಟಿಯಂತೆ ಅವರ ಈ ಎಲ್ಲ ಸೃಷ್ಟಿಗಳೂ ಕಂಡುಬರುತ್ತವೆ.

ಪ್ರಸ್ತುತ ವಿಷಯ : 'ಶ್ರೀ ರಾಮಾಯಣ ದರ್ಶನಂ' ಮತ್ತು 'ಜನಪದ ರಾಮಾಯಣಗಳು'. ಕನ್ನಡದಲ್ಲಿ ದೊರೆತಿರುವ ಜನಪದ ರಾಮಾಯಣಗಳನ್ನು ಶ್ರೀರಾಮಾಯಣ ದರ್ಶನಂ ಮಹಾಕಾವ್ಯದೊಂದಿಗೆ ಹೋಲಿಸಿ ನೋಡುವ ಪ್ರಯತ್ನ ವನ್ನು ಇಲ್ಲಿ ಮಾಡಲಾಗಿದೆ. ಹೀಗೆ ಜನಪದ ರಾಮಾಯಣವೊಂದನ್ನು ಶಿಷ್ಟ ರಾಮಾಯಣದೊಂದಿಗೆ ಹೋಲಿಸಿ ನೋಡುವಾಗ ಅನಿವಾರ್ಯವಾಗಿ ಹಲವು ಮಿತಿ ಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ಜನಪದ ರಾಮಾಯಣಕ್ಕೂ, ಶಿಷ್ಟ ರಾಮಾಯಣಕ್ಕೂ ಮೂಲಭೂತವಾಗಿಯೇ ಹಲವು ವ್ಯತ್ಯಾಸಗಳಿರುವುದು ಗಮನಾರ್ಹ. ಶಿಷ್ಟಕಾವ್ಯದ ದೃಷ್ಟಿಯಿಂದ, ಜನಪದ ಕಾವ್ಯವನ್ನು ಅಳೆಯುವುದು ಎಷ್ಟು ಸಮಂಜಸ ಎಂಬ ಪ್ರಶ್ನೆಯನ್ನು ಮೊದಲು ಹಾಕಿಕೊಳ್ಳಬೇಕಾಗುತ್ತದೆ. ಅದಕ್ಕೆ ಅದರದ್ದೇ ಆದ ಅಳತೆಗೋಲು ಬೇಕಾಗುತ್ತದೆ. ಜನಪದ ಕಾವ್ಯಕ್ಕೆ ಅದರದ್ದೇ ಆದ ಕೆಲವು ಪರಿಮಿತಿ ಗಳು ಇರುವುದು ಇದಕ್ಕೆ ಕಾರಣ.

ಹೀಗೆ ಈ ಕಾವ್ಯಗಳನ್ನು ತೌಲನಿಕವಾಗಿ ಪರಿಶೀಲಿಸುವಾಗ, ಪ್ರಧಾನವಾಗಿ ಕಥೆಯಲ್ಲಿ ಕಂಡುಬರುವ ಮಾರ್ಪಾಡುಗಳನ್ನು ಗಮನಿಸಲಾಗಿದೆ. ಅಲ್ಲಿ ಬರುವ ವರ್ಣನೆ ಗಳ ವೈಶಿಷ್ಟ್ಯವನ್ನು ಸ್ವಲ್ಪ ಮಟ್ಟಿಗೆ ಗಮನಿಸಬಹುದು. ಆದರೆ ಸಾಹಿತ್ಯದ ಇನ್ನಿತರ ಅಂಶಗಳನ್ನು, ಅಷ್ಟಾಗಿ ಗಮನಿಸದಿರುವುದೇ ಸೂಕ್ತ ಅನ್ನಿಸುತ್ತದೆ. ಏಕೆಂದರೆ ಜನಪದ ಕವಿಗಳ ಕಾವ್ಯದ ರೀತಿಯೇ ಬೇರೆ, ನೀತಿಯೇ ಬೇರೆ. ಅವರ ಕಾವ್ಯ ಸೃಷ್ಟಿ ಅವರಿಗೆ ವಿಶಿಷ್ಟವಾದದು. "ಕನ್ನಡ ಜನಪದ ಕಾವ್ಯಗಳಲ್ಲಿ ಪೌರಾಣಿಕ ವಿಷಯಗಳನ್ನೊಳ ಗೊಂಡಂತೆ ರಾಮಾಯಣ, ಮಹಾಭಾರತ, ಭಾಗವತ ಹಾಗೂ ಶಿವಕಲ್ಯಾಣಕ್ಕೆ ಸಂಬಂಧ ಪಟ್ಟ ಕತೆಗಳು ಲಭ್ಯವಾದರೂ, ಅವೆಲ್ಲ ಪುರಾಣಕತೆಗಳ ಅಥವಾ ಕಾವ್ಯಗಳ ಜಾಡಿನಲ್ಲಿ ನಡೆಯದೆ ಆ ಕತೆಗಳ ಜನಪದ ಸಂಪ್ರದಾಯವೊಂದನ್ನು ಸ್ಥಾಪಿಸಿರುವುದು ಅತ್ಯಂತ

---

[8] ಅದೇ.

ಗಮನಾರ್ಹ ವಿಷಯವಾಗಿದೆ, ಶಿಷ್ಟಕಾವ್ಯ ಸಂಪ್ರದಾಯದಿಂದ ಯಾವ ರೀತಿಯಿಂದಲೂ ಪ್ರಭಾವಿತನಾಗದೆ, ತನ್ನದೇ ಆದ ರಮ್ಯ ಆವರಣದಲ್ಲಿ ಪುರಾಣ ಕಥೆಗಳನ್ನು ಬೆಳೆಸಿರುವ ರೀತಿ ಪೋಷಕವಾದುದು. ರೈತನ ಬದುಕಿಗೆ ಹತ್ತಿರವಾದಂತೆ, ತಮ್ಮ ಜೀವನಾನುಭವಕ್ಕೆ ನಿಷ್ಠವಾಗಿರುವಂತೆ ಪೌರಾಣಿಕವಸ್ತುಗಳನ್ನು ಬಳಸಿಕೊಳ್ಳುವುದು ಜನಪದ ಕವಿಗಳಿಗೆ ಮಾತ್ರ ಸಾಧಿಸಿದ ಒಂದು ವರವೆನ್ನಬೇಕು. ಆದುದರಿಂದಲೇ ಪಾಂಡವರು ಕ್ಷತ್ರಿಯ ಕುಮಾರರಾಗಿ ತೋರದೆ, ಜನಪದ ಕವಿಗಳ ಕಲ್ಪನೆಯಲ್ಲಿ ಒಕ್ಕಲು ಮಕ್ಕಳಾಗಿ ತೋರಿಬರುತ್ತಾರೆ. ಶಿವ ಪಾರ್ವತಿಯರಾಗಲಿ, ರಾಮ ಸೀತೆಯರಾಗಲಿ, ಕೃಷ್ಣ ರುಕ್ಮಿಣಿಯರಾಗಲೀ ಯಾವುದೋ ಅಲೌಕಿಕ ಆವರಣದಲ್ಲಿ ಚಿತ್ರಿತವಾಗಿರುವ ಅಜ್ಞಾತ ದೇವತೆಗಳಾಗಿ ತೋರದೆ ಮಾನವರಂತೆಯೇ ಕಷ್ಟಸುಖಗಳನ್ನು ಹಂಚಿಕೊಳ್ಳುವ ಜೀವ ಭಾಗಗಳಿಂದ ಕೂಡಿದ ಮಣ್ಣಿನ ಮಕ್ಕಳಾಗಿ ಕಾಣಿಸುತ್ತಾರೆ. ಅವರಿಗೆ ಸುಖವುಂಟು, ದುಃಖವುಂಟು, ನೋವು ನಲಿವು ಎಲ್ಲವೂ ಉಂಟು; ಸೋಲು ಗೆಲುವುಗಳೂ ಉಂಟು''[೨] ಸಾಮಾನ್ಯ ಮಾನವರಂತೆಯೇ ಅವರನ್ನು ಕಂಡು ಚಿತ್ರಿಸಿರುವುದು ಜನಪದ ಕಾವ್ಯಗಳ ಒಂದು ವೈಶಿಷ್ಟ್ಯವಾಗಿದೆ.

ಯಕ್ಷಗಾನದ ರಾಮಾಯಣ ಪ್ರಸಂಗಗಳು ಸೇರಿದಂತೆ, ಜನಪದ ಗಾಯಕರು ಹಾಡುವ ಕೆಲವು ಬಿಡಿಭಾಗಗಳು ಈಗ ಲಭ್ಯವಾಗುತ್ತವೆ. ಸೀತೆಯ ಜನನ, ಸೀತೆಯ ಸ್ವಯಂವರ, ಲಂಕಾದಹನ, ಸೀತಾಪಹರಣ, ಇಂತಹ ಹಲವು ಬಿಡಿ ಭಾಗಗಳೂ ದೊರೆಯುತ್ತವೆ. ಈ ಸಂದರ್ಭದಲ್ಲಿ ನಾನು ಸ್ವಲ್ಪ ಸಮಗ್ರ ಎನ್ನಬಹುದಾದ ಹಾಗೂ, ಶ್ರೀರಾಮಾಣ ದರ್ಶನಂ ಕಾವ್ಯಕ್ಕೆ ಸ್ವಲ್ಪ ಹತ್ತಿರವಾಗಬಹುದಾದ–'ತಂಬೂರಿ ಸಂಪ್ರದಾಯದ ರಾಮಾಯಣ' ಹಾಗೂ 'ಭಾಗವಂತಿಕೆ ಸಂಪ್ರದಾಯದ ರಾಮಾಯಣ'ಗಳನ್ನು ಪ್ರಮುಖವಾಗಿಟ್ಟುಕೊಂಡು, ವರ್ಣನೆಯ ಸಂದರ್ಭದಲ್ಲಿ ಉಳಿದ ಭಾಗಗಳನ್ನು ಗಮನಿಸಿದ್ದೇನೆ. ಮೊದಲು, 'ಶ್ರೀರಾಮಾಯಣ ದರ್ಶನಂ', ಮತ್ತು 'ತಂಬೂರಿ ಸಂಪ್ರದಾಯದ ರಾಮಾಯಣ'ವನ್ನು ಪರಿಶೀಲಿಸಬಹುದು.

ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕನ್ನಡದ ಮಹಾಕಾವ್ಯಗಳಲ್ಲಿ ಒಂದು. ಆಧುನಿಕ ಯುಗದ ಮಹಾಕಾವ್ಯವೆನಿಸಿ, ಕನ್ನಡದ ಕೀರ್ತಿಯನ್ನು ಬೆಳಗಿದ ಕೃತಿ. ಸಂಸ್ಕೃತದ ವಾಲ್ಮೀಕಿ ರಾಮಾಯಣವೇ ಇದಕ್ಕೂ ಆಕರ ಗ್ರಂಥವೆನಿಸಿದರೂ– ಕೇವಲ ಕಥಾ ಚೌಕಟ್ಟಿನಲ್ಲಿ ಮಾತ್ರ. ವಾಲ್ಮೀಕಿ ಕಥೆಯನ್ನು ನೆಪವಾಗಿಟ್ಟುಕೊಂಡು, ಶ್ರೀರಾಮಾಯಣ ದರ್ಶನಂ ಕಲಾತ್ಮಕತೆಯಲ್ಲಿ ಕುವೆಂಪು ಅವರು ತಮ್ಮ ಪ್ರತಿಭೆಯನ್ನು ಅಸಾಧಾರಣ ರೀತಿಯಲ್ಲಿ ತೋರಿದ್ದಾರೆ. ಕಥೆ ಹಳೆಯದಾದರೂ ಕುವೆಂಪು ಅವರು ಹೊಸ ದರ್ಶನದ ಮೂಲಕ ರಸವತ್ತಾಗಿಸಿ, ಸರ್ವಾದರಣೀಯವಾಗಿಸಿದ್ದಾರೆ, ಅವರೇ

---

[೨] ಅದೇ–ಪು. ೩೦೪.

ಹೇಳುವಂತೆ :

ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ. ಬೇರೆ ವ್ಯೆಯಾಂತಂತೆ
ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್

ಕವಿಯೇ ಹೇಳುವಂತೆ ಇದೊಂದು 'ಮರುವುಟ್ಟುವಡೆದ' ಕಥೆ. ಅಷ್ಟೇ ಅಲ್ಲ, ಶ್ರೀರಾಮಾಯಣ ದರ್ಶನಂ—

ಬಹಿರ್ಘಟನೆಯಂ ಪ್ರತಿಕೃತಿಸುವಾ ಲೌಕಿಕ
ಚರಿತ್ರೆಯುಲ್ತಿದು. ಅಲೌಕಿಕ ನಿತ್ಯಸತ್ಯಂಗಳಂ
ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ ಕಣಾ . . . . . .

ಎನ್ನುತ್ತಾರೆ. ಆದರೆ ಜನಪದ ರಾಮಾಯಣಗಳಲ್ಲಿ ಈ ಯಾವ ದರ್ಶನವನ್ನಾಗಲಿ, ಚಿಂತನೆ ಆಲೋಚನೆಗಳನ್ನಾಗಲಿ ಅಥವಾ ಕಲಾತ್ಮಕತೆಯ ನಿರ್ದಿಷ್ಟರೂಪವನ್ನಾಗಲಿ ಕಾಣಲು ಸಾಧ್ಯವಿಲ್ಲ. ಅಲ್ಲಿ ಪ್ರಧಾನವಾಗಿ ಕಂಡುಬರುವುದು ಒಂದು ಕಥೆ. ಆ ಕಥೆಯನ್ನು ಹೇಳಿಕೊಂಡು ಹೋಗಲು ಅವರದ್ದೇ ಆದ ಒಂದು ವಿಶಿಷ್ಟ ತಂತ್ರ. ಹೆಚ್ಚು ವರ್ಣನೆಗಳಿಗೂ ಅವರು ಕಾಲ ವ್ಯಯ ಮಾಡುವುದಿಲ್ಲ, ಆದರೆ ಕೊಡುವ ವರ್ಣನೆಗಳನ್ನು ಆತ್ಮೀಯವಾಗಿ, ತೊಡಕಿಲ್ಲದೆ ಮನಮುಟ್ಟುವಂತೆ ಕೊಡಬಲ್ಲರು. ಆಯಾ ಸಂದರ್ಭದ ಘಟನೆಗಳನ್ನು ನೇರವಾಗಿ ಸ್ಪಷ್ಟವಾಗಿ ಹೇಳುವ ಒಂದು ವೈಶಿಷ್ಟ್ಯವನ್ನು ಜನಪದರಲ್ಲಿ ಕಾಣಬಹುದು.

ಮೊದಲು ಜನಪದ ರಾಮಾಯಣದಲ್ಲಿನ ಒಂದು ಘಟನೆಯನ್ನು ತೆಗೆದುಕೊಂಡು, ಅದೇ ಘಟನೆ ಶ್ರೀರಾಮಾಯಣ ದರ್ಶನಂನಲ್ಲಿ ಹೇಗೆ ಮೂಡಿ ಬಂದಿವೆ ಎಂಬುದನ್ನು ಕೆಲವು ಪರಿಮಿತಿಗಳೊಡನೆ ಪರಿಶೀಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ತಂಬೂರಿ ಸಂಪ್ರದಾಯದವರು ಹಾಡುವ 'ಸಂಪೂರ್ಣ ರಾಮಾಯಣ'ದ ಕಥೆ, ಶಿಷ್ಟ ರಾಮಾಯಣದ ಕಥೆಗಿಂತ ಭಿನ್ನವಾದುದು. "ಈ ಸಂಪೂರ್ಣ ರಾಮಾಯಣದ ಕಥೆಯನ್ನು ಅನುಸರಿಸದೆ ಭಿನ್ನ ಹಾದಿಯನ್ನು ಹಿಡಿದಿರುವುದು ಇಲ್ಲಿ ಎತ್ತಿ ಹೇಳಬೇಕಾಗಿರುವ ವಿಷಯ. ಕೆಲವು ವಿಚಾರಗಳಲ್ಲಿ ಹೋಲಿಕೆ ಕಾಣಿಸಿಕೊಂಡರೂ, ಅದು ವಾಲ್ಮೀಕಿಯ ಅನುಸರಣೆಯಿಂದಾದುದಲ್ಲದೆ, ಇವೆರಡಕ್ಕೂ ಮೂಲವಾಗಿರುವ ಮತ್ತು ಎಲ್ಲಕ್ಕೂ ಸಾಮಾನ್ಯವಾಗಿರುವ ಸಾರ್ವತ್ರಿಕ ಕಥಾಮಾದರಿ ಎಂಬುದನ್ನು ಮನಗಾಣಬೇಕಾಗುತ್ತದೆ. ವಾಲ್ಮೀಕಿಗೂ–ರಾಮ ಕಥೆಗೂ ಇರುವ ವೈಯಕ್ತಿಕ ಸಂಬಂಧವಾಗಲಿ, ಉತ್ತರ ರಾಮಾಯಣದ ಕಥನ ರೀತಿಯಾಗಲಿ ಯಾವುದೂ ಇಲ್ಲಿನ ಕಥೆಯಲ್ಲಿ ಕಾಣಿಸುವುದಿಲ್ಲ. ಇದು ವಾಲ್ಮೀಕಿಯ ರಾಮಾಯಣದ ಪರಂಪರೆಯ ಪ್ರಭಾವದಿಂದ ಬಿಡಿಸಿಕೊಂಡಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ, ಪರಿಣಾಮವಾಗಿ ಪ್ರತ್ಯೇಕ ಪರಂಪರೆಯಿಂದಾಗಿ

ಜನಪದದಲ್ಲಿ ಬಹಳ ಕಾಲ ಹರಿದು ಬಂದಿರುವ ಕತೆಯೊಂದನ್ನು ಸಾಕ್ಷಿ ಪಡಿಸುತ್ತದೆ. ಈ ಎಲ್ಲ ಕಾರಣಗಳಿಂದ ತಂಬೂರಿಯವರ ರಾಮಾಯಣ ಪ್ರಕೃತ ಗ್ರಂಥದಲ್ಲಿ ವಿಶೇಷ ಸ್ಥಾನವನ್ನು ಸ್ಥಾಪಿಸುತ್ತದೆ ; ಮತ್ತು ರಾಮಾಯಣದ ತೌಲನಿಕ ಅಧ್ಯಯನಕ್ಕೆ ಕೆಲವು ಪೂರಕ ಸಾಮಗ್ರಿಗಳನ್ನದು ಒದಗಿಸುತ್ತದೆ."[10]

ತಂಬೂರಿ ಸಂಪ್ರದಾಯದ ಜನಪದ ರಾಮಾಯಣದಲ್ಲಿ 'ಉತ್ತರ ರಾಮಾಯಣ'ದ ಪ್ರಸ್ತಾಪವೇ ಇಲ್ಲ. ರಾವಣನ ಅಂತ್ಯ ಹಾಗೂ ಶ್ರೀರಾಮನ ಪಟ್ಟಾಭಿಷೇಕದೊಂದಿಗೆ ಕಥೆ ಮುಕ್ತಾಯವಾಗುತ್ತದೆ. ಆದರೆ 'ಉತ್ತರ ರಾಮಾಯಣ'ಕ್ಕೇ ಸಂಬಂಧಿಸಿದ ಕಾವ್ಯವೊಂದು ನೀಲಗಾರರಲ್ಲಿ ಲಭ್ಯವಾಗುತ್ತದೆ. ವೃತ್ತಿಗಾಯಕ ಪರಂಪರೆಯ ಈ ಕಲಾವಿದರಲ್ಲಿ ಈ ಭಾಗ ಸ್ವತಂತ್ರವಾಗಿ ಉಳಿದು ಬಂದಿದೆ. ಅತ್ಯಂತ ಕುತೂಹಲಕಾರಿಯಾದ ಹಲವು ವೈಶಿಷ್ಟ್ಯಗಳನ್ನು ಒಳಗೊಂಡು ಈ ಭಾಗ ತುಂಬ ಆಕರ್ಷಕವಾಗಿದೆ. ವಾಲ್ಮೀಕಿ ರಾಮಾಯಣಕ್ಕೂ–ಇದಕ್ಕೂ ಅನೇಕ ಅಂಶಗಳಲ್ಲಿ ಭಿನ್ನತೆ ಇರುವುದು ಕಂಡುಬರುತ್ತದೆ. ನೀಲಗಾರರ ರಾಮಾಯಣದಲ್ಲಿಯೂ ಶ್ರೀರಾಮ ಲೋಕಾಪವಾದಕ್ಕೆ ಅಂಜಿ ಸೀತೆಯನ್ನು ಕಾಡಿಗೆ ಲಕ್ಷ್ಮಣನೊಂದಿಗೆ ಕಳುಹಿಸುತ್ತಾನೆಯಾದರೂ, ಅದರ ಮುಂದಿನ ಭಾಗಗಳೂ ಜನಪದ ಧಾಟಿಯುವೇ ಆಗಿದ್ದು ಮನ ಮುಟ್ಟುತ್ತವೆ.

ಸೀತೆಯನ್ನು ಕಾಡಿಗಟ್ಟಿ ಅವಳ ಶಿರಚ್ಛೇದನವನ್ನು ಮಾಡುವಂತೆ ಆಜ್ಞೆ ಮಾಡಿದ ಮೇಲೆ, ರಾಮನಿಗೂ ದುಃಖವಾಗುತ್ತದೆ. ಕಾಡಿನಿಂದ ಹಿಂತಿರುಗಿದ ಲಕ್ಷ್ಮಣನನ್ನು ಕಂಡಕೂಡಲೇ ಅವನ ದುಃಖದ ಕಟ್ಟೆಯೊಡೆದು ಕಣ್ಣೀರು ಹರಿಯುತ್ತದೆ. ಆ ಕಣ್ಣೀರ ಧಾರೆ ಹೊಳೆಯಾಗಿ ಹರಿದು ಸೀತೆಗೆ ಅಡ್ಡವಾಗುತ್ತದೆ. ಆ 'ಕಣ್ಣೀರ ಹೊಳೆ'ಯನ್ನು ಸೀತೆ ದಾಟ ಬೇಕಾಗಿ ಬರುತ್ತದೆ. ಆಗ ಲಕ್ಷ್ಮಣ 'ಪರಿಜವಳಿಕಡ್ಡಿ'ಯನ್ನು ಮಂತ್ರಿಸಿ ಎರಡು ವಿಮಾನುಗಳಾಗಿ ಮಾಡಿ ಆ ಹೊಳೆಯಲ್ಲಿ ತೇಲಿಬಿಟ್ಟು, ಆಚೆಯ ದಡಕ್ಕೆ ಸೀತೆಯನ್ನು ಮುಟ್ಟಿಸುವಂತೆ ಸೂಚಿಸುತ್ತಾನೆ. ಅವೇ ಅವಲು ವಿಮಾನು–ಕುಶಲು ವಿಮಾನು. ಅವೆರಡೂ ಸೀತೆಯನ್ನು ಆ ದಡಕ್ಕೆ ಮುಟ್ಟಿಸಿ, ಸೀತಾದೇವಿಯ ಮುಂದೆ ತಮ್ಮ ಒಂದು ಬೇಡಿಕೆಯನ್ನು ಮುಂದಿಡುತ್ತವೆ. ತನ್ನ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ತಮ್ಮ ಹೆಸರಿಡಬೇಕೆಂದು ಪ್ರಾರ್ಥಿಸುತ್ತವೆ. ಹೀಗೆ ಸೀತೆ ತನ್ನ ಮಕ್ಕಳಿಬ್ಬರಿಗೆ 'ಕುಶ_ಲವ'ರೆಂದು ಹೆಸರಿಡಲೂ ಈ 'ಅವಲು–ವಿಮಾನು, ಕುಶಲು–ವಿಮಾನು'ಗಳೇ ಕಾರಣ ಎಂಬಂತೆ ಜನಪದ ಕವಿ ಚಿತ್ರಿಸುತ್ತಾನೆ.

ಮತ್ತೊಂದು ಇಂತಹುದೇ ಅಪೂರ್ವ ಬದಲಾವಣೆ ಜನಪದ ಕಾವ್ಯದಲ್ಲಿ ಕಂಡು ಬರುತ್ತದೆ. ಇದರ ಪ್ರಕಾರ, ವಾಸ್ತವವಾಗಿ ಸೀತೆಗೆ ಜನಿಸಿದುದು ಒಂದೇ ಮಗು. ಆ

10. ಜನಪದ ರಾಮಾಯಣ–(ರಾಗೌ, ಪ್ರಸ್ತಾವನೆ)

ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ತಂದೆ ವಾಲ್ಮೀಕಿಯ ಬಳಿ ಬಿಟ್ಟು ಗಂಗೆ ಪೂಜೆಗೆ ಹೊರಡುತ್ತಾಳೆ. ಕುತೂಹಲದಿಂದ ಮಧ್ಯೆ ಹಿಂತಿರುಗಿ ಬಂದು ನೋಡುತ್ತಾಳೆ. ತಂದೆ ನಿದ್ರೆ ಹೋಗಿರುತ್ತಾನೆ. ಆಗ ಸೀತೆ ಮಗುವನ್ನೂ ತನ್ನ ಜೊತೆಯಲ್ಲಿಯೇ ತೆಗೆದು ಕೊಂಡು ಹೋಗುತ್ತಾಳೆ. ಇದಾದ ಮೇಲೆ ತಂದೆ ವಾಲ್ಮೀಕಿಗೆ ಎಚ್ಚರವಾಗುತ್ತದೆ ತೊಟ್ಟಿಲಲ್ಲಿ ಮಗುವಿರುವುದಿಲ್ಲ. ಸೀತೆಗೆ ಏನೆಂದು ಹೇಳುವುದೆಂದು ಹೆದರಿ, ದರ್ಭೆ ಯೊಂದರಿಂದ ಅಂತಹದೇ ಮಗುವನ್ನು ಸೃಷ್ಟಿಸಿ ತೊಟ್ಟಿಲಲ್ಲಿ ಮಲಗಿಸುತ್ತಾನೆ. ಸೀತೆ ಹಿಂತಿರುಗಿ ಬಂದಾಗ ತೊಟ್ಟಿಲಲ್ಲಿ ಮಲಗಿರುವ ಮಗುವನ್ನು ಕಂಡು ಇಬ್ಬರೂ ಆಶ್ಚರ್ಯಪಡುತ್ತಾರೆ. ವಾಲ್ಮೀಕಿ ಸ್ವಲ್ಪ ಅಪ್ರತಿಭನಾದರೂ, ಅದನ್ನು ತೋರಿಸಿ ಕೊಳ್ಳದೆ ತಕ್ಷಣ ಪರಿಹಾರವೊಂದನ್ನು ಕಂಡುಕೊಳ್ಳುತ್ತಾನೆ. ಆ ಎರಡೂ ಮಕ್ಕಳೂ ಸೀತೆಯದೇ ಎಂದು ವಾದಿಸುತ್ತಾನೆ. ಒಂದನ್ನು ಸ್ವಲ್ಪ ಕಾಲ ಸುಮ್ಮನೆ ಮರೆಮಾಡಿದ್ದೆ ಎಂದು ತೇಲಿಸಿಬಿಡುತ್ತಾನೆ. ಸೀತೆ ಅವನ್ನು ಒಪ್ಪಿಕೊಂಡು ಸುಮ್ಮನಾಗುತ್ತಾಳೆ. ಹೊಳೆ ಯನ್ನು ದಾಟುವಾಗ ಆ ಮೀನುಗಳಿಗೆ ಮಾತುಕೊಟ್ಟಂತೆ ಮಕ್ಕಳಿಬ್ಬರಿಗೂ— 'ಕುಶಲಯ್ಯ' 'ಲವಲಯ್ಯ' ಎಂದು ಹೆಸರಿಡುತ್ತಾಳೆ.

ಜನಪದ ಕವಿ ಮಾಡಿಕೊಂಡಿರುವ ಈ ಒಂದು ಬದಲಾವಣೆ, ಜನಪದ ಪ್ರತಿಭೆಗೆ ತಕ್ಕನಾಗಿರುವುದಷ್ಟೇ ಅಲ್ಲ. ಹೆಚ್ಚು ಕುತೂಹಲವುಂಟು ಮಾಡುವುದೂ ಆಗಿದೆ. ಅವರ ವಿಶಿಷ್ಟ ಪ್ರತಿಭೆಗೆ ಒಂದು ಸ್ಪಷ್ಟ ನಿದರ್ಶನ ಕೂಡ. " . ...ಈ ಜನಪದ ಕಾವ್ಯ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ರಾಮ-ಸೀತೆಯರ ಗಾಢವಾದ ಪ್ರೇಮ, ಲಕ್ಷ್ಮಣನ ಸಮಯೋಚಿತ ವರ್ತನೆ, ಕುಶ-ಲವರ ಸಾಹಸದ ಚಿತ್ರಣ, ಅಪೂರ್ವ ವರ್ಣನೆಗಳು, ಇವುಗಳಿಂದಾಗಿ ಈ ಜನಪದ ಉತ್ತರ ರಾಮಾಯಣ ಒಂದು ಉತ್ತಮ ಖಂಡ ಕಾವ್ಯ ವಾಗಿ ನಿಂತಿದೆ."[11] ಜನಪದ ಕವಿಗಳ ಕಲ್ಪನೆ ಅಪೂರ್ವ ರೀತಿಯದು. ಆ ಒಂದು ಸಂದರ್ಭದ ಹಿನ್ನೆಲೆಯಲ್ಲಿ ಅವು ಅಚ್ಚುಕಟ್ಟಾಗಿಯೇ ತೋರುತ್ತವೆ. ಅವುಗಳನ್ನು ಹೆಚ್ಚು ಹಿಂಜಿ-ಹಿಂಡಿದಾಗ ಮಾತ್ರ ಸ್ವಲ್ಪ ಜಾಳೆನಿಸಬಹುದೇ ಹೊರತು ಉಳಿದಂತೆ ಅವು ವಿಜೃಂಭಿಸುತ್ತವೆ. ಇಲ್ಲಿ 'ಉತ್ತರ ರಾಮಾಯಣ'ದಲ್ಲಿ ಬರುವ ಸಂದರ್ಭಗಳು ಅಂತಹವು.

ತಂಬೂರಿಯವರು ಹಾಡುವ ರಾಮಾಯಣದಲ್ಲಿ ಈ ಉತ್ತರ ರಾಮಾಯಣದ ಪ್ರಸಂಗ ಬರುವುದಿಲ್ಲ. ಶ್ರೀರಾಮಾಯಣ ದರ್ಶನಂನಲ್ಲಿಯೂ ಉತ್ತರ ರಾಮಾಯಣ ಪ್ರಸಂಗವಿಲ್ಲ. ಆದರೆ, 'ದಶಾನನ ಸ್ವಪ್ನಸಿದ್ಧಿ'ಯಲ್ಲಿ ಉತ್ತರ ರಾಮಾಯಣ ಪ್ರಸಂಗದ ಒಂದಂಶವನ್ನು ಕುವೆಂಪು ಅವರು ಅತ್ಯಂತ ಧ್ವನಿಪೂರ್ಣವಾಗಿ ತಂದಿದ್ದಾರೆ. ರಾವಣನು ತನ್ನ ಸಂಕಲ್ಪ ಸಿದ್ಧಿಗೆ ಮಹಾ ದುರ್ಗೆಯ ಆರಾಧನೆಯಲ್ಲಿ ತೊಡಗಿ, ವರವನ್ನು

11. ಡಾ. ಜೀಶಂಪ : ದ. ಕ. ಜನಪದ ಕಾವ್ಯ ಪ್ರಕಾರಗಳು- ಪು. ೨೨೮.

ಬೇಡಲು ತೊಡಗಿದ ಸಂದರ್ಭದಲ್ಲಿ ದುರ್ಗೆಯ ಕಾರಣದಿಂದಲೇ ರಾವಣನು ಸಮಾಧಿ ಸ್ಥಿತಿಗೇರುತ್ತಾನೆ. ಆಗ ಅವನು ಕಾಣುವ ಹಲವು ಕನಸುಗಳಲ್ಲಿ ಕುಂಭಕರ್ಣ ಮತ್ತು ರಾವಣರಿಬ್ಬರೂ ಮಕ್ಕಳಾಗಿ ಸೀತೆಯ ತೊಡೆಯ ಮೇಲೆ ಮಲಗುವ ಒಂದು ಭವ್ಯಾದ್ಭುತ ಚಿತ್ರವನ್ನು ಕುವೆಂಪು ಅವರು ಕೊಡುತ್ತಾರೆ. ಜಗದಂಬೆ ಶಿವೆ ಮತ್ತು ರಾವಣರ ಸಂಭಾಷಣೆಯಿಂದಲೇ ಅದು ಆರಂಭವಾಗುತ್ತದೆ. ರಾವಣನು ತನ್ನ ಬೇಡಿಕೆಗಳನ್ನು ಒಂದೊಂದಾಗಿ ಮುಂದಿಡುತ್ತಾನೆ :

"ದಶರಥ ಸುತಂ
ರಣದಿ ಸೋಲ್ವಂತೆನಗೆ ಮಾಡು ಕೃಪೆಯನ್ !"
"ತಥಾಸ್ತು !"
"ಸೀತೆ ವಶವಪ್ಪಂತೆ !"
"ತಥಾಸ್ತು !"
"ನೀಂ ತಾಯ್ ದಿಟಂ !
ನೀಂ ಕೃಪಾಬ್ಧಿಯೆ ದಿಟಂ ! ರಾಮಂಜಯಂಕಿಂ ಮಿಗಿಲ್
ಸೀತೆ ಸೋಲ್ವುದೆ ಸೋಜಿಗಂ !"
"ಸೋಜಿಗಮದೇಕೆ ?
ಒಲಿದ ಕಂದಗೆ ತಾಯಿ ಸೋಲ್ವುದೇನಚ್ಚರಿಯೆ
ಸಹಜಂ !"
"ಅದೇನ್ ಮತ್ತೆ ವಕ್ರೋಕ್ತಿ !"
"ವಕ್ರಮೇನ್ !
ನಿನ್ನೆರ್ದೆಯ ಗೂಢವೃತ್ತಿಗೆ ನನ್ನದುಕ್ತಿಯುಯ್ !"
"ಸೀತೆ ಸೋಲ್ವಳೆ ? ರಾಮನಂ ಗೆಲ್ವೆನಿದು ದಿಟಮೆ ?"
"ಸೀತೆಯಾಲಿಂಗಿಪಳ್, ಚುಂಬಿಸೆರ್ದೆಗೊತ್ತುವಳ್ ;
ರಣದಿ ರಾಮನ ಸೋಲಿಪಯ್, ಪುನರ್ ಜನ್ಮದೊಳ್ !
ಕಾಣ್ ತೋರ್ಪುದಂ" :

ಎಂದು ಹೇಳಿ, ಮುಂದಿನ ಅದ್ಭುತದೃಶ್ಯವನ್ನು ಕುವೆಂಪು ಅವರು ಅಪೂರ್ವ ರೀತಿಯಲ್ಲಿ ಕಂಡು ಕಡೆದಿದ್ದಾರೆ :

............ .... ...... ಬಿರುಬಿರನೆ
ತೇಲ್ದುದಸುರನ ನೌಕೆ, ನೆಗೆನೆಗೆದು ಮುಂದುರುಳಿ
ಧುಮ್ಮಿಕ್ಕಿದುದು ದುಘಮ್ಮನೆ ಕುದುರೆಮುಂಡಂ
ನದೀಜೀವನಂ ನೆತ್ತರೋಕುಳಿಯಾಗಿ ಕೆರಳೆ.
ತೆರೆ ಮುಸುಗಿದುದು. ದೋಣಿ ಮಗುಚಿತು ದರ್ಶನಂ
ರಕ್ತಮಯ ಜೀವನ ತರಂಗಿಣಿಯ ವಾಹದೊಳ್
ಸಿಲ್ಕಿದನ್ ; ತೇಲ್ದನೀಜಿದನಯ್ಯೊ ಕಂತಿದನ್ ;
ಮುಳುಗಿದನ್, ಮುಳುಗಿದನ್, ಕೆಳಕೆಳಗೆ ಮುಳುಂಗಿದನ್,
ತೆಕ್ಕನೆಯೆ, ಕುಂಭಕರ್ಣನ ಕಂಡು' ಕೂಗಿದನ್
ತಮ್ಮನಂ. ಬರ್ದುಕುವಾಸೆಗೆ ಸಹೋದರರೀರ್ವರುಂ

ಹೊಳೆಯೊಡನೆ ಹೋರಾಡಿ ದಡಕೇರ್ದರೇನಿದೇನ್
ಶಿಶುಗಳೊಲ್ ! ಸುತ್ತಲೆಸೆದಿರ್ದುದೊಂದಾತವಂ
ಚಿತ್ತಕಾದುದು ತಪಶ್ಶಾಂತಿ ಮರೆತುದು ಮನಂ
ತನ್ನ ಹಿಂತಣ ಪೂರ್ವಮಂ ನೆನೆಯಲೆಳಸಿದನ್
ಯತ್ನಮಾನಿತುಂ ವ್ಯರ್ಥಮಾದತ್ತು ವಿಸ್ಮೃತಿಯ
ವೈತರಣಿಗಳ್ದುದಾತ್ಮಂ. ಶಿಶು ಶರೀರದಿಂ
ಸಹೋದರಂ ಕುಂಭಕರ್ಣಂ ಪಸುಳೆಯೋಲಂತೆ
ರೋದಿಸುತ್ತಿರ್ದುದಂ ಕಂಡಾ ಶಿಶುಶರೀರಿ
ತಾನುಮಳತೊಡಗಿದನು ದೈತ್ಯೇಂದ್ರನಾಗಳೆಯೆ
ಪುಟ್ಟಿದರ್ಭಕನಂತೆವೋಲ್, ಬಂದಳಲ್ಲಿಗದೊ
ಸೀತೆ! ಮಕ್ಕಳನೆತ್ತಿ ಮುದ್ದಾಡಿದಳ್ ! ಪಾಡಿ
ಮೊಲೆಯೂಡಿದಳ್ ! ತೊಡೆಯನೇರಿಸಿದಳೆರ್ದೆಗಪ್ಪಿ
ಲಲ್ಲಯ್ಯಿದಳು ತನ್ನವಳಿಮಕ್ಕಳಂ, ತಮ್ಮನಂ
ಕುಂಭಕರ್ಣನನಂತೆ ತನ್ನನುಂ !

ಆ ಕನಸನ್ನು ಕಂಡ ರಾವಣ ಬೆಚ್ಚಿ ಎಚ್ಚರಗೊಳ್ಳುತ್ತಾನೆ. ಸೀತೆಯ ಬಗೆಗೆ ಅವನ ಅಂತರಾಳದಲ್ಲಿ ಅಡಕವಾಗಿರುವ ಸಾತ್ವಿಕಭಾವನೆಯನ್ನು ಕುರಿತು ಮಂಡೋದರಿ ಹೇಳುತ್ತಾಳೆ. ಕುವೆಂಪು ಅವರು ರಾವಣನ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಈ ಸನ್ನಿವೇಶ ವನ್ನು ಸಾರ್ಥಕವಾಗಿ ಬಳಸಿಕೊಂಡು ಉತ್ತರ ರಾಮಾಯಣದ ಸನ್ನಿವೇಶವನ್ನೂ ಧ್ವನಿ ಪೂರ್ಣವಾಗಿ ತಂದಿದ್ದಾರೆ.

ಜನಪದ ಸಾಹಿತ್ಯದಲ್ಲಿ ಸ್ತ್ರೀ ಸಂಬಂಧವಾದ ಸಾಹಿತ್ಯವೇ ಹೆಚ್ಚು. ಅಲ್ಲಿ ಬರುವ ಸಾಹಿತ್ಯದಲ್ಲಿ ಸ್ತ್ರೀ ಪ್ರಾಧಾನ್ಯತೆಯೇ ಹೆಚ್ಚು. ಜನಪದ ರಾಮಾಯಣವೂ ಇದಕ್ಕೆ ಹೊರತಾಗಿಲ್ಲ. ಬಿಡಿ ಹಾಡಿನಿಂದ ಹಿಡಿದು, ಸಮಗ್ರ ರಾಮಾಯಣದವರೆಗೂ ಸೀತಾ ಪ್ರಧಾನವಾದ ಅಂಶವನ್ನೇ ಹೆಚ್ಚಾಗಿ ಕಾಣುತ್ತೇವೆ.

'ಸೀತೆಯ ಜನನ ವೃತ್ತಾಂತ'ದಿಂದಲೇ ತಂಬೂರಿ ಸಂಪ್ರದಾಯದ ರಾಮಾ ಯಣದ ಕಥೆ ಆರಂಭವಾಗುತ್ತದೆ. ಆದರೆ ಎಲ್ಲಿಯೂ ದಶರಥನ ಪುತ್ರಾಪೇಕ್ಷೆಯಾಗಲಿ ಅಥವಾ ರಾಮಾದಿಗಳ ಜನನ ವೃತ್ತಾಂತವಾಗಲಿ ಪ್ರಸ್ತಾಪವಾಗಿಲ್ಲ. ಜನಪದ ರಾಮಾಯಣದಲ್ಲಿ ಸೀತಾಜನನ ವೃತ್ತಾಂತಕ್ಕೆ ಕೊಟ್ಟಿರುವ ಮಹತ್ವ, ಶಿಷ್ಟ ರಾಮಾ ಯಣದಲ್ಲಿ ಶ್ರೀರಾಮ ಜನನಕ್ಕೆ ಕೊಟ್ಟಿರುವುದು ಗಮನಾರ್ಹ. ಶಿಷ್ಟ ರಾಮಾಯಣ ದಲ್ಲಿ ಸೀತೆಯ ಜನನ ವೃತ್ತಾಂತಕ್ಕೆ ಪ್ರಾಧಾನ್ಯತೆ ಇಲ್ಲ ; ಜನಪದ ರಾಮಾಯಣದಲ್ಲಿ ಶ್ರೀರಾಮ ಜನನ ವೃತ್ತಾಂತಕ್ಕೆ ಪ್ರಾಧಾನ್ಯತೆ ಇಲ್ಲ. ಆದರೆ ಜನಪದ ರಾಮಾಯಣ ದಲ್ಲಿ ಸೀತಾಜನನಕ್ಕೆ ಸಂಬಂಧಿಸಿದಂತೆ ವಿವಿಧ ಪಾಠಾಂತರಗಳು ದೊರೆಯುತ್ತವೆ. ಅಷ್ಟೇ ಅಲ್ಲ. ಅವು ಜನಪದರ ವಿಶಿಷ್ಟ ಪ್ರತಿಭೆಗೆ, ಕಲ್ಪನೆಗೆ ವಿಕಾಸಲಾದುವುಗಳೇ ಆಗಿವೆ.

ಜನಪದ ರಾಮಾಯಣದಲ್ಲಿ ಸೀತೆ, ರಾವಣನ ಸ್ವಂತ ಮಗಳು. ಅವನ ಹೊಟ್ಟೆಯಲ್ಲೇ ಹುಟ್ಟಿದವಳು. ಸೀತೆಯ ಜನನಕ್ಕಿರುವ ಒಂದು ಅತಿಮಾನುಷ ಹಿನ್ನೆಲೆಯೂ ಇಲ್ಲಿ ಕಂಡುಬರುತ್ತದೆ. ಸೀತಾಜನನ ವೃತ್ತಾಂತಕ್ಕೆ ಸಂಬಂಧಿಸಿದ 'ಮಾವಿನ ಹಣ್ಣಿನ ಪ್ರಸಂಗ' ಹಾಗೂ 'ತಾವರೆ ಹೂವಿನ ಪ್ರಸಂಗ'ಗಳು ಗಮನಾರ್ಹವಾದವು. ತಂಬೂರಿ ಸಂಪ್ರದಾಯದ ರಾಮಾಯಣದಲ್ಲಿ 'ಮಾವಿನ ಹಣ್ಣಿನ ಪ್ರಸಂಗ'ದಿಂದ ಇದು ಕೂಡಿದೆ :

ಮದುವೆಯಾಗಿ ಹನ್ನೆರಡು ವರ್ಷಗಳಾದರೂ ಮಕ್ಕಳಾಗದ ಮಂಡೋದರಿ. ಮಕ್ಕಳಿಗಾಗಿ ಹಂಬಲಿಸುತ್ತಾಳೆ :

**ಹಕ್ಕೀಗೆ ಮಕ್ಕಳು ಚೆಕ್ಕೀಗೆ ಮಕ್ಕಳು**
**ನನ್ನಂತ ಪಾಪಿಗೆ ಮಕ್ಕಳಿಲ್ಲವಲ್ಲ ಶಿವನೆ**
**ನನಗೊಂದು ಫಲ ನೀನು ಕೊಡಲಿಲ್ಲ ಶಿವುರಾಯ**
**ಕೊಡಪ್ಪ ಶಿವುರಾಯ ನನಗೊಂದು ಫಲವ**

ಎಂದು ಶಿವರಾಯನನ್ನು ಬೇಡುತ್ತಾಳೆ. ಮಡದಿಯ ದುಃಖವನ್ನು ಕಂಡು ರಾವಣನು ಶಿವನನ್ನು ಕುರಿತು ತಪಸ್ಸು ಮಾಡುತ್ತಾನೆ. ಶಿವರಾಯ ಮಾವಿನ ಹಣ್ಣೊಂದನ್ನು ಮಂತ್ರಿಸಿ ಕೊಡುತ್ತಾನೆ. ಹಣ್ಣಿನ ಭಾಗವನ್ನು ಮಂಡೋದರಿಗೆ ಕೊಟ್ಟು, ಅದರ ವಾಟೆಯ ಭಾಗವನ್ನು ತಾನು ತಿನ್ನುವಂತೆ ಹೇಳಿಕಳುಹಿಸುತ್ತಾನೆ. ಆದರೆ, ಅದಕ್ಕೆ ಬದಲಾಗಿ ರಾವಣ ಹಣ್ಣಿನ ಭಾಗವನ್ನು ತಿಂದು ಮಂಡೋದರಿಗೆ ವಾಟೆಯ ಭಾಗವನ್ನು ಕೊಡುವ ಅಚಾತುರ್ಯ ನಡೆದು ಹೋಗುತ್ತದೆ. ಇದರಿಂದ ರಾವಣನೇ ಗರ್ಭಧರಿಸಬೇಕಾಗಿ ಬರುತ್ತದೆ. ಗಂಡು ಗರ್ಭಧರಿಸುವ ವಿಚಿತ್ರ ಆಶಯದೊಂದಿಗೆ ಇಲ್ಲಿಯ ಕಥೆ ಆರಂಭವಾಗುತ್ತದೆ. ಮತ್ತೊಂದು ಪಾಠಾಂತರದಲ್ಲಿ ಮಾವಿನ ಹಣ್ಣಿಗೆ ಬದಲಾಗಿ 'ತಾವರೆಯ ಹೂ' ಬರುತ್ತದೆ. ಸೀತೆಯೇ ಒಡಮೂಡಿದ್ದ ತಾವರೆಯ ಹೂವೊಂದನ್ನು ರಾವಣ ಅರಿಯದೆ ಮೂಸಿದಾಗ, ಸೀತೆ ರಾವಣನ ಮೂಗಿನ ಮೂಲಕ ಒಳಸೇರುತ್ತಾಳೆ. ಆದರೆ ಸೀನುವುದರ ಮೂಲಕ ಸೀತೆ ಹೊರ ಬಂದಳು ಎಂಬುದು ಎರಡರಲ್ಲಿಯೂ ಒಂದೇ ಆಗಿದೆ.

ಸೀತೆಯ ಜನನ ಈ ರೀತಿಯಲ್ಲಿ ಆದದ್ದು ಅನಿಷ್ಟಕಾರಕ, ಆದ್ದರಿಂದ ಲಂಕೆಗೇ ಕೇಡು ಎಂಬ ಸಂಗತಿ ಹುಟ್ಟಿಕೊಳ್ಳುತ್ತದೆ. ಈ ಕಾರಣಕ್ಕಾಗಿ ಲಂಕೆಯಿಂದ ಹೊರ ಹಾಕುತ್ತಾರೆ. ಪೆಟ್ಟಿಗೆಯೊಂದನ್ನು ಮಾಡಿಸಿ ಅದರಲ್ಲಿ ಮಗುವನ್ನಿಟ್ಟು ನದಿಯಲ್ಲಿ ತೇಲಿಬಿಡುತ್ತಾನೆ :

**ತುಂಬೀದ ಹೊಳೆಯಲಿ ಕಬ್ಬಿಣದ ಪೆಟ್ಗೇಲಿ**
**ಕಬ್ಬಿಣದ ಪೆಟ್ಗೇಲಿ ನಿನ್ನ ಬಿಡುತೀನಿ ಮಗಳೆ**
**ತುಂಬಿದ ಹೊಳೆಯಲ್ಲಿ ಬಿಟ್ಟಾರೆ ಎಲೆ ಮಗಳೆ**
**ನೀನು ಅಂಬಿಗರಿಗೋಲಾಗಿ ಬೆಳಬಾರೆ ಮಗಳೆ**

ಎಂದು ಹೇಳಿ ರಾವಣ ಹಿಂತಿರುಗುತ್ತಾನೆ. ಅದು ಮುಂದೆ ನದಿಯಲ್ಲಿ ಸ್ನಾನ

ಮಾಡುತ್ತಿದ್ದ ಜನಕರಾಜನಿಗೆ ಸಿಕ್ಕುತ್ತದೆ. ಸೀತೆಯನ್ನು ನದಿಯಲ್ಲಿ ಪೆಟ್ಟಿಗೆಯಲ್ಲಿಟ್ಟು ತೇಲಿಬಿಡುವ ಪ್ರಸಂಗ, ಮಹಾಭಾರತದಲ್ಲಿ ಕರ್ಣನ ಪ್ರಸಂಗವನ್ನು ನೆನಪಿಗೆ ತರುತ್ತದೆ. ಜನಪದ ಕವಿಯ ಮೇಲೆ ಅದೇ ಇಲ್ಲಿಯೂ ಪ್ರಭಾವ ಬೀರಿರಬೇಕು. ಇದು ಜನಪದ ಸಾಹಿತ್ಯದಲ್ಲಿ ಸಾಮಾನ್ಯ ಅಂಶ.

"ಸೀನೂವೆ ಬಂದಾಗ ಸೀತೆ ಹುಟ್ಟುವ" ಪ್ರಸಂಗವಾಗಲಿ, "ತುಂಬೀದ ಹೊಳೆಯಲ್ಲಿ ಕಬ್ಬಿಣದ ಪೆಟ್ಟಿಗೇಲಿ" ತೇಲಿಬಿಡುವ ಪ್ರಸಂಗವಾಗಲೀ, ಇವೆರಡೂ ಘಟನೆಗಳೂ ಶಿಷ್ಟ ರಾಮಾಯಣದಿಂದ ಸಂಪೂರ್ಣ ಭಿನ್ನವಾಗಿವೆ. ಜನಪದರ ವಿಶಿಷ್ಟ ಕಲ್ಪನೆಯ ಹಿನ್ನೆಲೆಯಲ್ಲಿ ಇವು ಆಕರ್ಷಕವಾಗಿ ಮೂಡಿ ಬಂದಿವೆ. ಸಾಮಾನ್ಯ ಜನಪದ ಕತೆಗಳ ಕುತೂಹಲ, ಆಸಕ್ತಿಗಳನ್ನೇ ಇಲ್ಲಿಯೂ ಕಾಣಬಹುದು. ಮತ್ತೊಂದು ಪಾಠಾಂತರದ ಪ್ರಕಾರ, ಸೀತೆಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಡುತ್ತಾರೆ. ಆದರೆ ಅವಳು ಮುಂದೆ ಜನಕರಾಜನನ್ನು ಸೇರಿದ ಬಗೆ ಹೇಗೆ ಎಂಬುದು ತಿಳಿಯುವುದಿಲ್ಲ.

ಜನಪದ ರಾಮಾಯಣ, ಸೀತೆಯ ಜನನದೊಂದಿಗೆ ಆರಂಭಗೊಂಡರೆ ; ಶ್ರೀರಾಮಾಯಣ ದರ್ಶನಂ, ಶ್ರೀರಾಮನ ಜನನದೊಂದಿಗೆ ಆರಂಭವಾಗುತ್ತದೆ. ಅಲ್ಲಿ ಮಂಡೋದರಿ ಮದುವೆಯಾಗಿ ಹನ್ನೆರಡು ವರ್ಷಗಳಾದರೂ ಮಕ್ಕಳಿಲ್ಲವೆಂಬ ಕೊರಗಿನಲ್ಲಿ "ಹಕ್ಕೀಗೆ ಮಕ್ಕಳು ಬೆಕ್ಕೀಗೆ ಮಕ್ಕಳು' ಎಂದು ಕೊರಗುತ್ತಿದ್ದರೆ ; ಇಲ್ಲಿ ದಶರಥ —

> **ತಾನೊರ್ಮೆ ತಿರುಗುತಿರಲರಮನೆಯ ಸಿರಿದೋಂಟದೊಳ್ ;**
> **ಮರಿಯ ತೆರೆವಾಯ್ಗಿಡುತೆ ತನ್ನ ಕೊಕ್ಕಿಂ, ಕುಟುಕು**
> **ಕೊಡುತಿರ್ದ ತಾಯ್ವಕ್ಕಿಯಂ ಕಂಡು, ಕಣ್‌ನಟ್ಟು,**
> **ಕಾಲ್‌ನಟ್ಟು ನಿಂದನು ಮರಂಬಟ್ಟು. ಮಕ್ಕಳು**
> **ಪಡೆದ ಪಕ್ಕಿಯ ಸಿರಿತನಂ ಚಕ್ರವರ್ತಿಗೆ ತನ್ನ**
> **ಬಡತನವನಾಡಿ ಮೂದಲಿಸಿತೆನೆ, ಕರುಬಿ ಕುದಿದನ್**
> **ಕೋಸಲೇಶ್ವರನಾ ವಿಹಂಗಮ ಸುಖಕೆ ಕಾತರಿಸಿ.**
> **ದೇವತೆಗಳಾಶಿತಮೊ ? ಋತಚಿದಿಚ್ಛೆಯೊ ? ವಿಧಿಯೊ ?**
> **ಪಕ್ಕಿ ಗುಬ್ಬಚ್ಚಿಯಾದೊಡಮೇಂ ? ವಿಭೂತಿಯಂ**
> **ತಿರೆಗೆ ಕರೆವಾಸೆಯಂ ಕೆರಳಿಸಿದುದಾದೊರೆಯ**
> **ಹೃದಯದಲಿ !**

ಜನಪದ ರಾಮಾಯಣದಲ್ಲಿ ಮಂಡೋದರಿಗೆ ಹಕ್ಕಿ–ಬೆಕ್ಕುಗಳ ಮರಿಗಳನ್ನು ನೋಡಿ ತನಗೆ ಮಕ್ಕಳಿಲ್ಲವೆಂಬ ದುಃಖ ಹೆಚ್ಚಾಗಿ, ಮಕ್ಕಳನ್ನು ಪಡೆಯುವ ಅಭೀಪ್ಸೆ ತೀವ್ರಗೊಂಡರೆ : ಶ್ರೀರಾಮಾಯಣ ದರ್ಶನಂನಲ್ಲಿ ದಶರಥನಿಗೆ, ತನ್ನ ಮರಿಗೆ ತಾಯ್ವಕ್ಕಿಯೊಂದು ಗುಟುಕು ಕೊಡುತ್ತಿದ್ದ ದೃಶ್ಯವನ್ನು ಕಂಡು ಆ ಆಸೆ ಇಮ್ಮಡಿ ಮುಮ್ಮಡಿಯಾಗುತ್ತದೆ. ಈ ಎರಡೂ ಸಂದರ್ಭಗಳಲ್ಲಿ ಒಂದು ಸಮಾನತೆ ಕಂಡುಬಂದಿರುವುದು ಆಕಸ್ಮಿಕವಾದರೂ ಅಷ್ಟೇ ಆಶ್ಚರ್ಯವನ್ನು ಉಂಟುಮಾಡುವಂತಹುದು. ಅಲ್ಲಿ

ರಾವಣ ಮಕ್ಕಳ ಫಲಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿದರೆ, ಇಲ್ಲಿ ದಶರಥ 'ಪುತ್ರಕಾಮೇಷ್ಟಿ'ಯನ್ನು ಕೈಗೊಳ್ಳುತ್ತಾನೆ. ಇವುಗಳ ಫಲವಾಗಿ ರಾವಣನ ಮಗಳಾಗಿ ಸೀತೆ ಜನಿಸಿದರೆ, ಇಲ್ಲಿ ದಶರಥನಿಗೆ ಶ್ರೀರಾಮಚಂದ್ರ ಮುಂತಾದವರು ಜನಿಸುತ್ತಾರೆ. ಶ್ರೀರಾಮ ಜನನದ ಉತ್ಸಾಹ ಸಂದರ್ಭಗಳು ಒಂದೆಡೆಯಾದರೆ, ಸೀತಾದೇವಿಯ ಜನನ, ಸೀತೆಯ ಮುಂದಿನ ದುಃಖತಪ್ತ ಬದುಕನ್ನು ಸೂಚಿಸುವಂತೆ, ಅಮಂಗಳಕಾರಿ ಎಂಬಂತೆ ಪ್ರಾರಂಭವಾಗುತ್ತದೆ.

ಮುಂದಿನ ಭಾಗಗಳಾದ—ಶ್ರೀರಾಮನ ಅಯೋಧ್ಯೆ ನಿರ್ಗಮನ, ಶ್ರೀರಾಮ ಪಟ್ಟಾಭಿಷೇಕ, ಕೈಕೆ ಅದನ್ನು ಅಡ್ಡಿಪಡಿಸುವುದು ಮುಂತಾದ ವಿಚಾರಗಳು ಬಹುವಾಗಿ ಶಿಷ್ಟರಾಮಾಯಣದಂತೆಯೇ ಇದೆಯಾದರೂ, ಕಥನವಿಧಾನದಲ್ಲಿ ಮಾತ್ರ ವ್ಯತ್ಯಾಸ ಕಂಡುಬರುತ್ತದೆ. ಜನಪದ ಕವಿ ಅಲ್ಲಿ ತನ್ನದೇ ಆದ ಹೊಸ ಹಾದಿ ಹಿಡಿದಿದ್ದಾನೆ.

ಜನಪದ ರಾಮಾಯಣದಲ್ಲಿ ವಿಶ್ವಾಮಿತ್ರನ ಪ್ರಸ್ತಾಪವಾಗಲಿ, ರಾಮಲಕ್ಷ್ಮಣರು ಅವರ ಜೊತೆಯಲ್ಲಿ ರಕ್ಷಣೆಗೆ ಹೋಗುವ ಪ್ರಸ್ತಾಪವಾಗಲಿ ಬರುವುದೇ ಇಲ್ಲ. ಮತ್ತೊಂದು ಪ್ರಮುಖ ವ್ಯತ್ಯಾಸ—'ಸೀತಾ ಸ್ವಯಂವರ'ಕ್ಕೆ ಸಂಬಂಧಿಸಿದ್ದು. ಶಿಷ್ಟ ರಾಮಾಯಣದಲ್ಲಿ, ವನವಾಸಕ್ಕೆ ಮೊದಲೇ ಸೀತಾ ಸ್ವಯಂವರ ನಡೆದು ರಾಮ-ಸೀತೆಯರಿಗೆ ವಿವಾಹ ನಡೆದಿದ್ದರೆ, ಜನಪದ ರಾಮಾಯಣದಲ್ಲಿ ಅದು ನಡೆಯುವುದು ವನವಾಸದ ಸಂದರ್ಭದಲ್ಲಿ. ಆದ್ದರಿಂದ ಅದನ್ನು ಮುಂದೆ ಗಮನಿಸಬಹುದು.

ಶ್ರೀರಾಮ ಪಟ್ಟಾಭಿಷೇಕ ಸಂದರ್ಭ ತಂಬೂರಿ ಸಂಪ್ರದಾಯದ ರಾಮಾಯಣದಲ್ಲಿ ವಿಶಿಷ್ಟ ರೀತಿಯಲ್ಲಿ ಬರುತ್ತದೆ. ದಶರಥ-ಕೈಕೆಯರ ವಾದ ವಿವಾದದಲ್ಲಿ ಪೂರ್ಣವಾಗದ ಚರ್ಚೆ ಕೊನೆಗೆ 'ದಂಡಿ'ನ ತೀರ್ಮಾನಕ್ಕೆ ಹೋಗುತ್ತದೆ :

**ರಾಮದೇವರ್ಗೆ ಪಟ್ಟಕಟ್ಟಬೇಕು ಶಿವನೆ**
**ಹತ್ತಿರಕೆ ಬಾಯಿಮಾತು ದೂರಕೆ ಕಾಗದ ಬರ್ದು**
**ಹತ್ತು ಜನಕೆ ತಿಳಿಸಿ ಪಟ್ಟಕಟ್ಟಬೇಕು ಶಿವನೆ**

ಎಂದು ವ್ಯವಸ್ಥೆ ಮಾಡುತ್ತಿರುವಾಗಲೇ, ಕೈಕೆ :

**ನನ್ನ ಮಗ ಭರತನಿಗೆ ಪಟ್ಟವ ನೀವು ಶಿವನೆ**
**ನನ್ನ ಮಗ ಭರತನಿಗೆ ಪಟ್ಟವ ಕಟ್ಟಬೇಕು......**
**ನೀವು ಭರವಸೆ ಕೊಟ್ಟು ನಂಬಿಸಿದ್ರಿ ಶಿವನೆ**

ಎಂದು ಪಟ್ಟುಹಿಡಿಯುತ್ತಾಳೆ. ಕೊನೆಗೆ ದಶರಥ ಅದರ ಪರಿಹಾರವನ್ನು ದಂಡಿಗೆ ಒಪ್ಪಿಸುವ ತೀರ್ಮಾನವನ್ನು ಕೈಗೊಳ್ಳುತ್ತಾನೆ :

**ಸಾವೀರ ದಂಡನು ಸೇರಿಸುತೀನಿ ಶಿವನೆ**
**ಸಾವೀರ ದಂಡೂ ಏನೇಳುತಾರೆ ಕೇಳು**

ಎಂದು ದಂಡಿನ ತೀರ್ಮಾನಕ್ಕೆ ಬಿಡುತ್ತಾನೆ. ಕೊನೆಗೆ ದಂಡಿನ ತೀರ್ಮಾನ—'ಹಿರಿಯರಾದವರಿಗೆ ಪಟ್ಟಾಭಿಷೇಕದ ಹಕ್ಕು' ಎಂದಾಗುತ್ತದೆ. ಆದರೆ ಕೈಕೆ ಅದಕ್ಕೂ

ಸಮ್ಮತಿಸದೆ, ಮತ್ತೊಂದು ಚಮತ್ಕಾರದ ಸವಾಲನ್ನು ಒಡ್ಡುತ್ತಾಳೆ.

**ಸತ್ಯದ ಮಗನಾಗಿ ಹುಟ್ಟಿದ್ರೆ ಶ್ರೀರಾಮ**
**ಆನಂದಡವೀಲಿ ಜೇನುಕಲ್ಲು ಮರದಿಲಿ**
**ಆನಂದಡವೀಲಿ ಹನ್ನೆರಡೊರಸ ಇರಲಿ**
**ತಬಸಾನೆ ಮಾಡಿಕೊಂಡು ಗೆದ್ದುವೆ ಬಂದಾರೆ**
**ಪಟ್ಟಣದ ರಾಜ ಪಟ್ಟ ಕಟ್ಟಿಸ್ತೀವಿ ಶಿವನೆ**

ಎಂದು ಪಠ ಹಿಡಿಯುತ್ತಾಳೆ. ದಶರಥ ತನಗೆ ಕೊಟ್ಟ ಭಾಷೆಯನ್ನೇ ಕೈಕೆ ಪಟ್ಟಾಗಿ ಹಿಡಿಯುತ್ತಾಳೆ.

ದಶರಥ ಪಟ್ಟಾಭಿಷೇಕದ ತೀರ್ಮಾನವನ್ನು ದಂಡಿಗೊಪ್ಪಿಸುವುದು ಜನಪದ ರಾಮಾಯಣದ ಒಂದು ವಿಶೇಷವಾಗಿದೆ. ಪ್ರಜಾಪ್ರಭುತ್ವದ ದಾರಿಯನ್ನು ಹಿಡಿದು ನಡೆದಿರುವುದು ಗಮನಾರ್ಹ ಅಂಶ. ಶಿಷ್ಟ ರಾಮಾಯಣಗಳಲ್ಲೆಲ್ಲಿಯೂ ಇದು ಕಂಡು ಬರುವುದಿಲ್ಲ.

'ಶ್ರೀ ರಾಮಾಯಣ ದರ್ಶನಂ'ನ ಕೈಕೆ ಈ ಸಂದರ್ಭದಲ್ಲಿ ದಶರಥ ತನಗೆ ಹಿಂದೆ ಕೊಟ್ಟ ವರವನ್ನು ನೆನಪು ಮಾಡಿ—

**......ಲೇಸಾಯ್ತು, ಲೇಸಾಯ್ತು ! ತಪ್ಪು**
**ನಿನ್ನದಾಗಿರಲೇತಕನ್ನನೀಪರಿ ಬಯ್ವು**
**ವರ್ತಿಸುತಿರ್ಪೆ ಸಾಮಾನ್ಯನೊಲ್, ವನ್ಯನೊಲ್,**
**ಕೋಸಲಾಧೀಶ ! ನೀನೆಯ ಮೆಚ್ಚಿಕೊಟ್ಟೆ ನನಗಾ**
**ವರಂಗಳಂ. ನೀನೊಪ್ಪಿ ಕೇಳೆಂದೊಡಾಂ ಕೇಳ್ದೆನಯ್**

ಎಂದು ವಾದಿಸಿದರೆ; ಜನಪದ ರಾಮಾಯಣದಲ್ಲಿನ ಕೈಕೆ—

**ಸಾವಿರಾರು ದಂಡಮಾತು ಹಿಂದೆ ಇರಲಿ ಶಿವನೆ**
**ಸಾವಿರಾರು ದಂಡಿನಮಾತು ಕೇಳುತೀನಿ ಅಂತೇಳಿ**
**ನೀವು ಈ ಮೊದಲೇಯ ನನಗೆ ಹೇಳಿರಲಿಲ್ಲ ಶಿವನೆ**
**ನೀವು ಕೊಟ್ಟಾವ ಮಾತನೀಗ**
**ನೀವು ತಪ್ಪಿ ಹೇಳುತೀರಿ**

ಎಂದು ಮರುಪ್ರಶ್ನೆ ಹಾಕುತ್ತಾಳೆ. ಈ ಸಂದರ್ಭದಲ್ಲಿ, ಕೈಕೆಯ ಸ್ವಭಾವ ಎರಡೂ ಕಡೆಯೂ ಒಂದೇಯಾಗಿ ಬಂದಿದೆ. ಆದರೆ ಇವರ ಮಾತಿನಲ್ಲಿ ಕಂಡುಬರುವ ಒಂದು ವ್ಯತ್ಯಾಸವೆಂದರೆ–ಶಿಷ್ಟರಾಮಾಯಣದ ಕೈಕೆ ; ತನ್ನ ಮಗನಿಗೆ ಪಟ್ಟಾಭಿಷೇಕ, ರಾಮನಿಗೆ ಹದಿನಾಲ್ಕು ವರ್ಷ ವನವಾಸ ಎಂದಷ್ಟೇ ಕೇಳಿದರೆ ; ಜನಪದ ರಾಮಾಯಣದಲ್ಲಿನ ಕೈಕೆ–ತನ್ನ ಮಗನಿಗೆ ಪಟ್ಟಾಭಿಷೇಕ ; ಹನ್ನೆರಡು ವರ್ಷ ವನವಾಸ ಮುಗಿಸಿಕೊಂಡು ಹಿಂತಿರುಗಿ ಬಂದ ಮೇಲೆ ರಾಮನಿಗೆ ಪಟ್ಟಾಭಿಷೇಕ ಎಂದು ಹೇಳುತ್ತಾಳೆ. ಇಲ್ಲಿಯ ಕೈಕೆಗೆ, "ಮುಂದಿನದನ್ನು ನೋಡಿಕೋಳ್ಳೋಣ" ಎಂಬ ಭಾವನೆಯೂ ಇರಬಹುದು. ಇಲ್ಲವೆ "ಹನ್ನೆರಡು ವರ್ಷ ಕಾಡಿನಲ್ಲಿ ತಪಸ್ಸು ಮಾಡಿ ರಾಮ ಮತ್ತೆ

ಉಳಿದು ಹಿಂತಿರುಗಲಾರ" ಎಂಬ ಭಾವನೆಯೂ ಇರಬಹುದು.

ಮಂಥರೆಯ ಪ್ರಸ್ತಾಪ ಶ್ರೀ ರಾಮಾಯಣ ದರ್ಶನಂನಲ್ಲಿ ಭವ್ಯಾದ್ಭುತವಾಗಿ, 'ಮರುಹುಟ್ಟುಪಡೆದು ಬಂದಿದ್ದರೆ, ಜನಪದ ರಾಮಾಯಣದಲ್ಲಿ ಆ ಪ್ರಸ್ತಾಪವೇ ಬರುವುದಿಲ್ಲ.

ಜನಪದ ರಾಮಾಯಣದಲ್ಲಿ, 'ಸೀತಾಸ್ವಯಂವರ' ಏರ್ಪಡುವುದು ರಾಮ–ಲಕ್ಷ್ಮಣರು ವನವಾಸದಲ್ಲಿದ್ದ ಸಂದರ್ಭದಲ್ಲಿ. ಇಲ್ಲಿ ವನವಾಸಕ್ಕೆಂದು ಹೊರಡುವವರು ರಾಮ–ಲಕ್ಷ್ಮಣರಿಬ್ಬರೇ. ಮಧ್ಯೆ ಸೀತೆ ಅವರನ್ನು ಸೇರಿಕೊಳ್ಳುತ್ತಾಳೆ. ಜನಪದ ರಾಮಾಯಣದಲ್ಲಿ ಕಂಡುಬರುವ ಮಹತ್ವದ ಬದಲಾವಣೆಗಳಲ್ಲಿ ಇದೂ ಒಂದು.

ರಾಮ–ಲಕ್ಷ್ಮಣರು ವನವಾಸದಲ್ಲಿರುವಾಗಲೇ, ಮಧ್ಯವರ್ತಿಯೊಬ್ಬನಿಂದ 'ಸೀತಾಸ್ವಯಂವರ'ದ ಸುದ್ದಿ ಅವರಿಗೆ ತಿಳಿಯುತ್ತದೆ. ರಾಮ–ಲಕ್ಷ್ಮಣರು ಅಲ್ಲಿಗೆ ತೆರಳುತ್ತಾರೆ, ಆದರೆ ಜನಪದ ಕವಿ ಇಲ್ಲಿಯೂ, ಜನಪದ ಪ್ರತಿಭೆಗನುಗುಣವಾದ ವಿಶೇಷತೆಯನ್ನು ಮೆರೆದಿದ್ದಾನೆ. ಸೀತಾಸ್ವಯಂವರಕ್ಕೆ ಹೋಗುವ ಮುನ್ನವೇ ಅವಳ ಗುಣ_ಸ್ವಭಾವಗಳನ್ನು ತಿಳಿಯಲು ಮಾರುವೇಷದಲ್ಲಿ ಹಲವಾರು ಪರೀಕ್ಷೆಗಳನ್ನು ನಡೆಸುತ್ತಾರೆ : ಬಿಲ್ಲು ಬಾಣಗಳನ್ನು ಮುಚ್ಚಿಟ್ಟುಕೊಂಡು ರಾಮ–ಲಕ್ಷ್ಮಣರಿಬ್ಬರೂ ಭಿಕ್ಷುಕ ವೇಷದಲ್ಲಿ ಹೊರಡುತ್ತಾರೆ. ಭಿಕ್ಷೆ ನೀಡಲು ಬಂದ ಸೀತೆಯನ್ನು ಬಗೆಬಗೆಯಾಗಿ ಪರೀಕ್ಷಿಸುತ್ತಾರೆ :

**ಕೇಳು ಕೇಳು ತಾಯಿ ನೀವು ಕೇಳಿ ತಾಯಿ**
**ನೀವು ಒಳಗೆ ಇರುವರ್‍ಯಾರು ಅಂತ ನೋಡಿ**
**ತಮ್ಮ ಲಕ್ಷಮನ ಕೇಳುವಂತ ಕಾಲದಲ್ಲಿ**
**ಅವಳು ಭಿಕ್ಷುವನಾದರೆ ತರುತಾಳೆ ಶಿವನೆ**
..............................
**ಅವಳು ಭಿಕ್ಷವ ತರುವಾಗ ಜೋಳಿಗೆ ಬಿಟ್ಟಾರು**
**ಮುಂಗೈನಾದರೆ ತರುತಾರೆ ಶಿವನೆ**
**ಮುಂಗೈನಾದರೆ ತರುವಾಗ ಅವರು**
**ಅವಳು ಏನೆಂದು ಕೇಳುತಾಳೆ ಶಿವನೆ**
**ಹಾಗೆಂದು ಬೇಗದಲಿ ಏನೆಂದು ಕೇಳೀಳು**
**ಹಾಗಿಲ್ಲ ಭಿಕ್ಷುಗಾರ ಹೀಗೆ ಒಡ್ಡು ಎಂದು**
**ಮುಂಗೈಯ ಒಡ್ಡಬೇಡ ಅಂಗೈಯ ಒಡ್ಡಿ ನೀವು**
**ಅಂತೇಳಿ ತನ್ನ ಕೈಯ ಒಡ್ಡುತಾಳೆ ಶಿವನೆ**
**ಹಾಗೆಂದು ಬೇಗುದಲ್ಲಿ ಭಿಕ್ಷಾವ ಕೊಡನಿಲ್ಲ**
**ಅಂಗೈಯನಾದರೆ ತೋರಿಸಾಳು ಬೇಗುದಲ್ಲಿ**
..............................



ಹೀಗೆ ಒಂದೊಂದು ಬಗೆಯಲ್ಲಿ ಸೀತೆಯ ಪರೀಕ್ಷೆ ನಡೆಯುತ್ತದೆ. ಇದಾದನಂತರವೇ ಅವರು ಸ್ವಯಂವರಕ್ಕೆ ಹೋಗುವುದು. ಉಳಿದೆಲ್ಲ ಜನಪದ ಕಥೆಗಳಲ್ಲಿಯೂ ಸಾಮಾನ್ಯ

ವಾಗಿ ಬರುವ ಅಂಶವನ್ನೇ ಜನಪದ ಕವಿ ಇಲ್ಲಿಯೂ ಬಳಸಿಕೊಂಡಿದ್ದಾನೆ. ಮತ್ತೊಂದು ಇಲ್ಲಿಯ ವಿಶೇಷ : ಶ್ರೀ ರಾಮನ ಬಿಲ್ಲುಬಾಣಗಳ ಜೊತೆ ಸೀತೆಯನ್ನು ಧಾರೆಯೆರೆದು ಕೊಡುವುದು. ಈ ವಿಶೇಷಗಳಾವುವೂ ಶಿಷ್ಟ ರಾಮಾಯಣದಲ್ಲಿ ಬರುವುದಿಲ್ಲ. ಇಲ್ಲಿ ಬರುವ, ಮೀನಿನ ಕಣ್ಣಿಗೆ ಗುರಿಯಿಟ್ಟು ಹೊಡೆದು ಸೀತೆಯನ್ನು ಗೆಲ್ಲುವ ಪ್ರಸಂಗವೂ ಭಾರತದ ಕಥೆಯಿಂದ ಪ್ರಭಾವಿತವಾದುದು. ಕಂಠಸ್ಥ ಸಂಪ್ರದಾಯದ ಈ ಕಾವ್ಯಗಳಲ್ಲಿ ಇಂತಹ ಸೇರ್ಪಡೆಗಳು ಸಾಮಾನ್ಯ. ಹಾಗೆಯೇ ಇರುವ ಭಾಗಗಳು ಬಿಟ್ಟುಹೋಗು ವುದು, ಬದಲಾಗುವುದೂ, ಅಷ್ಟೇ ಸಾಮಾನ್ಯ.

ಜನಪದ ರಾಮಾಯಣದಲ್ಲಿ ಬರುವ ಶೂರ್ಪನಖಿ ಪ್ರಸಂಗ, ಜನಪದದ ಒಂದು ಅದ್ಭುತ ಕಲ್ಪನೆ. ಯಾವ ಶಿಷ್ಟ ರಾಮಾಯಣದಲ್ಲಿಯೂ ಕಾಣದ ಒಂದು ವಿಶೇಷತೆ ಇದರಲ್ಲಿದೆ. ಇಲ್ಲಿ ಶೂರ್ಪನಖಿ ಮದುವೆಯಾಗಿರುವುದು. ಅವಳಿಗೊಬ್ಬ ಮಗನಿರುವುದು ಶೂರ್ಪನಖಿಯ ಗಂಡ ಹಲ್ಲೂರನನ್ನು ರಾವಣ ಕೊಲ್ಲುವುದು, ತನ್ನ ಗಂಡನನ್ನು ಕೊಂದ ಕಾರಣಕ್ಕಾಗಿ ಅಣ್ಣ ರಾವಣನನ್ನು ಕೊಲ್ಲುವಂತೆ ತನ್ನ ಮಗ ಸುಣ್ಣಕುಮಾರನನ್ನು ಪ್ರೇರೇಪಿಸುವುದು—ಮುಂತಾದವು ಜನಪದ ರಾಮಾಯಣದ ವಿಶಿಷ್ಟ ಅಂಶಗಳಾಗಿವೆ.

'ಸೀತಾಪಹರಣ'ದ ಸಂದರ್ಭದಲ್ಲಿಯೂ ಜನಪದ ರಾಮಾಯಣ ತನ್ನ ವೈಶಿಷ್ಟ್ಯ ವನ್ನು ಉಳಿಸಿಕೊಂಡಿದೆ. ಇಲ್ಲಿ ರಾವಣನೇ ಮಾಯಾಜಿಂಕೆಯಾಗಿ ಬರುತ್ತಾನೆ. ಜೊತೆಗೆ ಸೀತೆಯನ್ನು ಅಪಹರಿಸುವಾಗ ರಾವಣ ಸನ್ಯಾಸಿವೇಷದಲ್ಲಿ ಬರುವುದಿಲ್ಲ ; ರಾಮ ನಂತೆಯೇ ಕಾಣಿಸಿಕೊಂಡು ಬರುತ್ತಾನೆ. ರಾಮನಂತೆಯೇ ನಟಿಸುತ್ತಾನೆ. ಸೀತೆಯೂ ನಂಬಿಬಿಡುತ್ತಾಳೆ. ಆದರೆ ಅವನು ತನ್ನ ಜೊತೆಯಲ್ಲಿ ಕರೆದಾಗ, ಮೈದುನ ಲಕ್ಷ್ಮಣ ಬರುವವರೆಗೂ ಹೋಗುವುದು ಬೇಡವೆಂದು ಹಠ ಹಿಡಿಯುತ್ತಾಳೆ. "ನಮ್ಮ ಪಟ್ಟಣಕ್ಕೆ ಹೋಗುವ ಸೀತೆ" ಎಂದು ರಾಮವೇಷಧಾರಿ ರಾವಣ ಕರೆದಾಗ, ಸೀತೆ—

**ನೀವು ಜೋಡೀಲಿ ಇರುವೋರು ಶಿವನೆ**
**ಬಿಟ್ಟು ನೀವು ಹೋದರೆ ಅವರೇಗೆ ಬರುತಾರೆ**
**ಮೂರಾಳು ಒಟ್ಟಿಗೆ ಹೋಗುವ ಶಿವನೆ**
... ............ ...... ...
**ನಾನು ಮುಂದಕೊಂದೆಜ್ಜೆ ಬರದಿಲ್ಲ ಶಿವನೆ**

ಎಂದು ಜಗ್ಗದೆ ಅಲ್ಲಿಯೇ ನಿಲ್ಲುತ್ತಾಳೆ. ಇಲ್ಲಿ ಮಾರೀಚ ಪ್ರಸಂಗವಾಗಲಿ, ಜಟಾಯು ಪ್ರಸಂಗವಾಗಲಿ ಬರುವುದಿಲ್ಲ. ಕಳೆದುಹೋದ ಸೀತೆಯನ್ನು ಹುಡುಕುವ ಸಮಸ್ಯೆಯೇ ರಾಮ–ಲಕ್ಷ್ಮಣರಿಗೆ ಉದ್ಭವಿಸುವುದಿಲ್ಲ. ಸೀತೆಯನ್ನು ಯಾರು ಅಪಹರಿಸಿದ್ದಾರೆಂಬುದು ಅವರಿಗೆ ಕೂಡಲೇ ತಿಳಿಯುತ್ತದೆ. ರಾವಣನೇ ಈ ಕಾರ್ಯವನ್ನು ಮಾಡಿರುವವನು ಎಂಬುದು ಅವರಿಗೆ ದೃಢವಾಗುತ್ತದೆ. ಈ ದೃಢನಿರ್ಧಾರಕ್ಕೆ ಪ್ರಬಲ ಕಾರಣ ; ಸೀತಾಸ್ವಯಂವರ ಸಂದರ್ಭದಲ್ಲಿ ಬಿಲ್ಲನ್ನು ಎತ್ತಲಾರದೆ ಮೇಲೆ ಕೆಡವಿಕೊಂಡು ಬಿದ್ದು

ಅವಮಾನಿತನಾದ ರಾವಣ, ಆ ಸಂದರ್ಭದಲ್ಲಿ ಮಾಡಿದ ಪ್ರತಿಜ್ಞೆಯೇ ಕಾರಣವಾಗುತ್ತದೆ :

**ನಾನು ಜಿಂಕೆಯು ಮರಿನಾಗಿ ಅವತಾರ ತಾಳಿ**
**ಜಿಂಕೆಯು ಮರಿನಾಗಿ ಅವತಾರ ತಾಳಿಕೊಂಡು**
**ನಿನ್ನ ಬಿಲ್ಲ ಬಾಣದಲಿ ಹೊಡೆಸಾದೆ ಬಿಟ್ಟಾನೆ**
**ಹಾಗೆಂದು ಬೇಗದಲಿ ನೀನು ಬಾಣವ ಹಿಡಕೊಂಡು**
**ನೀನು ಜಿಂಕೆಯು ಹುಡುಕುತ್ತ ಇರಬೇಕು ಶಿವನೆ**
**ಜಿಂಕೆಯು ಹೊಡೆದಲ್ಲಿ ಅಣ್ಣ ತಮ್ಮೀರು**
**ಇಬ್ರಾಳು ಅಲ್ಲಿ ಹುಡುಕುತ್ತಾ ಶಿವನೆ**
**ಹಾಗೆಂದು ಬೇಗದಲಿ ಹುಡುಕುತ್ತಾ ಇರುವಾಗ**
**ನಾನು ಸೀತಾದೇವಿಯು ಹೊರದೆ ಬಿಟ್ಟೇನೆ**
**ಹಾಗೆಂದು ರಾವುಳಸುರ ಮಿಾಸೆಯು ತಿರುವುತ್ತ**
**ಸಭೆಯು ಮುಂದುಗಡೆ ಕೂತಿದಾನೆ ಶಿವನೆ**

'ಸೀತಾಪಹರಣ'ದ ಸೂಚನೆ, 'ಸೀತಾಸ್ವಯಂವರ'ದ ಸಂದರ್ಭದಲ್ಲಿಯೇ ರಾಮನಿಗೆ ತಿಳಿದಂತೆ ಜನಪದ ರಾಮಾಯಣದಲ್ಲಿ ಚಿತ್ರಿತವಾಗಿದ್ದರೂ ; ಆ ಬಗೆಗೆ ಅವರು ಸಂಪೂರ್ಣ ಅವಜ್ಞೆ ತೋರಿದಂತೆ ಇರುತ್ತಾರೆ.

ಜನಪದ ರಾಮಾಯಣದಲ್ಲಿನ ಈ ಕೆಲವು ಮಹತ್ವದ ಬದಲಾವಣೆಯಿಂದಾಗಿ, ಶಿಷ್ಟಪದದ ಅನೇಕ ಅಂಶಗಳು ಇಲ್ಲಿ ಕಾಣೆಯಾಗುತ್ತವೆ. ವಾಲಿ ಸುಗ್ರೀವರ ಪ್ರಸಂಗವಾಗಲಿ, ಹನುಮಂತ ಅಶೋಕವನಕ್ಕೆ ಹೋಗಿ ಬರುವ ಇತ್ಯಾದಿ ಸಂದರ್ಭಗಳು ಬರುವುದಿಲ್ಲ. ನೇರವಾಗಿ ರಾಮ-ಲಕ್ಷ್ಮಣರೇ ಸೀತೆಯನ್ನು ಬಿಡಿಸಿಕೊಂಡು ಬರಲು ಹೊರಡುತ್ತಾರೆ. ಆಗ ಅವರು ಮೊದಲು ಸಂಧಿಸುವುದು-ಮಂಡೋದರಿಯನ್ನು. ಇಲ್ಲಿಯ ಮತ್ತೊಂದು ಪ್ರಮುಖ ಬದಲಾವಣೆ, ರಾವಣ ಅಪಹರಿಸಿದ ಸೀತೆಯನ್ನು ಬೇರೊಂದು ಪಟ್ಟಣದಲ್ಲಿಟ್ಟಿರುತ್ತಾನೆ. ರಾಮ-ಲಕ್ಷ್ಮಣರಿಗೆ ಮಂಡೋದರಿಯಿಂದ ಈ ಎಲ್ಲ ವಿಷಯಗಳು ತಿಳಿಯುತ್ತವೆ. ಅಷ್ಟೇ ಅಲ್ಲ, ರಾವಣನ ಪ್ರಾಣದ ಗುಟ್ಟನ್ನು ಮಂಡೋದರಿ ಬಯಲು ಮಾಡುತ್ತಾಳೆ. ತನ್ನ ಗಂಡನ ಪ್ರಾಣಾಪಹರಣದ ಗುಟ್ಟನ್ನು ಹೇಳಿಕೊಡುವ ಮಂಡೋದರಿ ಇಲ್ಲಿ ವಿಚಿತ್ರವಾಗಿ ಕಾಣುತ್ತಾಳೆ. ಜನಪದ ಕತೆಗಳ ಆಶಯವೇ ಇಲ್ಲಿಯೂ ಪ್ರಬಲವಾಗಿ ಕೆಲಸ ಮಾಡಿರುವುದು ಗಮನಾರ್ಹ. ಮಂಡೋದರಿಯ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಘಟನೆಗಳೇ ಇಲ್ಲಿ ಮೇಲಿಂದ ಮೇಲೆ ಬರುತ್ತವೆ. ಇವೆಲ್ಲ ಯಾವುದೇ ಶಿಷ್ಟಪದದಲ್ಲಿ ಕಾಣದ ಅಂಶಗಳಾಗಿವೆ.

ಶ್ರೀರಾಮಾಯಣ ದರ್ಶನಂನಲ್ಲಿ ಕುವೆಂಪು ಅವರು ಚಿತ್ರಿಸಿರುವ ಮಂಡೋದರಿಯ ಪಾತ್ರಕ್ಕೂ, ಜನಪದ ಕವಿ ಚಿತ್ರಿಸಿರುವ ಮಂಡೋದರಿ ಪಾತ್ರಕ್ಕೂ ಅಜಗಜಾಂತರ. ರಾಮನನ್ನು ಗೆದ್ದು ಸೆರೆಹಿಡಿದು ತರುವವರೆಗೂ ಸೀತೆಯನ್ನು ಸೇವಿಸುತ್ತಿರು, ಎಂದು ಹೇಳಿ ಯುದ್ಧರಂಗಕ್ಕೆ ಹೊರಡುವ ರಾವಣನ ಪಾದಕ್ಕೆ ಎರಗುವ

ಮಂಡೋದರಿ, ರಾವಣನ ಪಾಲಿಗೆ– ''ಪಾಪಿಯುಂ ಕೈಬಿಡದೆ ಪುಣ್ಯಕೊಯ್ಯುವ ದೇವಿ.'' ಯುದ್ಧರಂಗಕ್ಕೆ ಪತಿಯನ್ನು ಆಕೆ ಕಳುಹಿಸಿಕೊಡುವ ರೀತಿಯಾದರೂ, ಮನಮಿಡಿಯುವ ದೃಶ್ಯ :

**ಮುಡಿಯನಡಿಗಿಟ್ಟು ನಮಿಸಿದಳ್,**
**ಶಿರದೊಳಾಂತಳು ಪತಿಚರಣಧೂಳಿಯಂ, 'ಗೆಲ್ಗೆ**
**ನಿನ್ನೀ ಪವಿತ್ರತಮ ವಿಜಯಯಾತ್ರಾರಣಂ !'**
**ಎಂಬ ಹೃದಯ ಧ್ವನಿಗೆ ಬಾಷ್ಪಂಗಳುರುಳುತಿರೆ**
**ಬೀಳ್ಕೊಂಡಳಿನಿಯನಂ ಲಂಕಾಮಹಾರಾಜ್ಞಿ !**

ಆದರೆ ಜನಪದ ರಾಮಾಯಣದ ಮಂಡೋದರಿ, ರಾವಣನ ಪ್ರಾಣದ ಗುಟ್ಟನ್ನು ಧಾರಾಳವಾಗಿ ಬಯಲುಮಾಡುತ್ತಾಳೆ :

**ಏಳು ಸಮುದ್ರ ಇಳಿಬೇಕು ಶಿವನೆ**
**ಲಂಕೆಯ ಸಮುದ್ರದಲ್ಲಿ ಉಕ್ಕಿನ ಪಂಜರ**
**ಉಕ್ಕಿನ ಪಂಜರದಲ್ಲಿ ಮಗ್ಗಿನ ಗಿಳಿ ಉಂಟು**
**ಮಗ್ಗಿನ ಗಿಳಿಯನ್ನು ಹಿಡಿದು ಏನ್ ಮಾಡ್ಬೇಕು**
**ಅದರ ಪುಕ್ಕವ ನೀವು ಕೀಳಬೇಕು ಶಿವನೆ**
**ಅದರ ರೆಕ್ಕ ಮುರಿದಾರೆ ಅವನರೆಟ್ಟೆ ಮುರಿದಂಗೆ**
............
**ಅದರ ಮೂಳೆ ಮುರಿದಾರೆ ಅವ ಸತ್ತೋಯ್ತಾನೆ ಶಿವನೆ**

ಎಂದು ದಾರಿ ತೋರುತ್ತಾಳೆ. ಜನಪದ ಜಾಯಮಾನಕ್ಕೆ ಒಗ್ಗಿದ, ಜನಪದ ಕತೆಯ ಆಶಯಗಳು ಇಲ್ಲಿಯೂ ಕಾಣಿಸಿಕೊಂಡಿವೆ. ರಾಕ್ಷಸ ಕತೆಗಳಲ್ಲಿ ಈ ಆಶಯ ಸಾಮಾನ್ಯ. ರಾವಣ ಅವರ ದೃಷ್ಟಿಯಲ್ಲಿ ಅವರಿಗಿಂತ ಭಿನ್ನವಾಗಿ ಕಂಡಿಲ್ಲ–ಮಂಡೋದರಿ ಕೂಡ. ರಾಕ್ಷಸನೊಬ್ಬನನ್ನು ಕೊಲ್ಲಲು ಬಂದ ರಾಜಕುಮಾರನಿಗೆ, ಮುದುಕಿಯೊಬ್ಬಳು ಆ ಗುಟ್ಟನ್ನು ಹೇಳಿಕೊಡುವ ಸಾಮಾನ್ಯ ರೀತಿಯಲ್ಲಿಯೇ ಇದೂ ನಡೆದುಹೋಗುತ್ತದೆ.

ಇನ್ನು ಕೊನೆಯಭಾಗವಂತೂ ತೀರಾ ಸಪ್ಪೆಯಾಗಿಬಿಡುತ್ತದೆ. ಇಲ್ಲಿ ಬರುವ ಯುದ್ಧ ಸಂದರ್ಭವಿರಲಿ, ರಾಮ–ರಾವಣರ ಪರಾಕ್ರಮದ ಸುಳಿವು ಇಲ್ಲಿ ಸಿಗುವುದಿಲ್ಲ. ಒಬ್ಬ ಹೇಡಿಯನ್ನು ಮತ್ತೊಬ್ಬ ಹೇಡಿ ಮೂರ್ಖನಾಗಿ ಕೊಲ್ಲುವಂತೆ ಚಿತ್ರಿಸಲಾಗಿದೆ :

**ಎಲಾ ಹಾಳಾದ ದುಷ್ಟದೊಳಾದ ದುಷ್ಟ**
**ನನ್ನಯ ಮಡದೀಯ ಕರಕಂದು ಬಂದೆ**
**ನಾನು ರಾಮಯಾಸ ತಾಳಿ ನಿನ್ನ ಕೊಲ್ಲುತೀನಿ**
**ಹಾಗಂದು ಬೇಗುದಲ್ಲಿ ಬಾಣವ ಬಿಟ್ಟಲ್ಲಿ**
**ಇಸದ ಬಾಣವ ತಗದವರೆ ರಾಮರು**
**ಕೇಳಿ ಕೇಳಿ ರಾಮರೆ ನಾನು ಮಾಡಿದ್ದು ತಪ್ಪಾಯ್ತು**
**ನಿಮ್ಮಯ ಕಾಲೀಗೆ ನಾನೀಗ ಬೀಳುತೀನಿ ರಾಮಾರೆ**
**ನಿಮ್ಮಯ ಕಾಲೀಗೆ ಬೀಳುತೀನಿ ಶಿವನೆ**
**ನನ್ನನ್ನು ನೀವು ಕೊಲ್ಲಬೇಡಿ ರಾಮರೆ**

**ಹಾಗೆಂದು ಬೇಗದಲ್ಲಿ ಬಾಣವ ಎಸೆದಾರು**
**ರಾವುಳನ ಎದೆಗೆ ಬಿತ್ತಲ್ಲೊ ಶಿವನೆ**

ಮಾಡಿದ್ದು ತಪ್ಪಾಯ್ತು ಎಂದು ರಾವಣ ಬೇಡಿಕೊಂಡರೂ ಬಿಡದೆ ಬಾಣಬಿಟ್ಟು ರಾಮ ಅವನನ್ನು ಕೊಲ್ಲುತಾನೆ. ಶ್ರೀರಾಮಾಯಣ ದರ್ಶನಂನಲ್ಲಿ ಬರುವ ರಾಮ-ರಾವಣರ ಪಾತ್ರ ಚಿತ್ರಣಕ್ಕೂ, ಜನಪದ ರಾವಣ ರಾಮರ ಪಾತ್ರ ಚಿತ್ರಣಕ್ಕೂ ಹೋಲಿಕೆಯೇ ಇಲ್ಲ ; ಸಾಹಿತ್ಯದೃಷ್ಟಿಯಿಂದಿರಲಿ, ಕೇವಲ ಸಂದರ್ಭದ ದೃಷ್ಟಿಯಿಂದಲೂ ಯಾವ ಹೋಲಿಕೆಯ ಅಂಶವೂ ಕಂಡುಬರುವುದಿಲ್ಲ. ರಾಮಾಯಣ ದರ್ಶನಂನ ರಾವಣ ಕಾಣುವ ಕನಸಿನ ದೃಶ್ಯ ಅವನ ಘನತೆಗೆ ತಕ್ಕನಾದುದು :

**ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ**
**ಕಂಡರಿಯದಾ ಕಾಣಲಾರದಾ ಕೋಳುಗುಳದಿ**
**ರಘುಕುಲ ಲಲಾಮನಂ, ಜಗದೇಕವೀರನಂ**
**ಗೆಲ್ದು, ಸೆರೆಯಾಳ್ ಮಾಡಿ ತಂದು, ಲಂಕೇಶ್ವರನ**
**ಸರ್ವಗರ್ವವನಿರದೆ ಸೋಲಿಸಿದ ಮೈಥಿಲಿಗೆ**
**ಕಪ್ಪಮೆನೆ ಕಾಣಿಕೆಯೊಪ್ಪಿಸುವ ಭವ್ಯತಾ**
**ದಿವ್ಯ ದೃಶ್ಯಂ !**



ತಂಬೂರಿ ಸಂಪ್ರದಾಯದ ರಾಮಾಯಣದಲ್ಲಿ 'ಸೀತಾಪರೀಕ್ಷೆ' ಸಂದರ್ಭ ವರ್ಣಿತವಾಗಿಲ್ಲ, ಅವರಲ್ಲಿ ಬಿಟ್ಟುಹೋದ ಭಾಗ ಇರಬೇಕು. ಆದರೆ ಗೀತಭಾಗಗಳಲ್ಲಿ ಈ ಘಟನೆ ವರ್ಣಿತವಾಗಿದೆ. ಅಗ್ನಿಪರೀಕ್ಷೆಯ ಜೊತೆಗೆ-ಮರಳು ಹರಬಿಯಲ್ಲಿ ನೀರು ತರುವುದು, ಹಾಗೂ ಹಾವಿನ ಸಿಂಬೆ ಮಾಡಿಕೊಂಡು 'ಒಂದರಿ'ಯಲ್ಲಿ ನೀರು ತರುವಂತಹ ಕಠಿಣ ಪರೀಕ್ಷೆಗಳನ್ನು ಒಡ್ಡುತ್ತಾರೆ. ಜನಪದ ರಾಮಾಯಣದಲ್ಲಿ ವರ್ಣಿತವಾಗಿರುವ ಈ ಘಟನೆ, ವಾಲ್ಮೀಕಿ ರಾಮಾಯಣಕ್ಕೆ ಕೆಲವಂಶಗಳಲ್ಲಿ ಸಾಮ್ಯವನ್ನು ಪಡೆದಿದ್ದರೂ, ಶ್ರೀರಾಮಾಯಣ ದರ್ಶನಂನಿಂದ ಸಂಪೂರ್ಣ ಭಿನ್ನವಾಗುತ್ತದೆ-ವಾಲ್ಮೀಕಿ ರಾಮಾಯಣವೂ ಸೇರಿದಂತೆ. ಶ್ರೀ ರಾಮಾಯಣದರ್ಶನಂನ ವಿಶಿಷ್ಟ ಪ್ರಸಂಗಗಳಲ್ಲೊಂದಾದ -ಸೀತೆಯೊಡನೆ, ರಾಮನೂ ಅಗ್ನಿಪ್ರವೇಶ ಮಾಡುವ ಚಿತ್ರಣ ಕುವೆಂಪು ಅವರ ಒಂದು ಅದ್ಭುತ ಸೃಷ್ಟಿ.

'ಶ್ರೀ ರಾಮಾಯಣದರ್ಶನಂ' ಮತ್ತು 'ಜನಪದ ರಾಮಾಯಣ' ಎನ್ನುವಾಗ, ನಾನು ಇಲ್ಲಿ ಜನಪದ ರಾಮಾಯಣಗಳಲ್ಲಿ ತಂಬೂರಿ ಸಂಪ್ರದಾಯದ ಒಂದೇ ಪಾಠವನ್ನು ಪ್ರಧಾನವಾಗಿ ಇಟ್ಟುಕೊಂಡು ನೋಡಿದ್ದೇನೆ ಏನೇ ಆದರೂ ಶಿಷ್ಟ ಕಾವ್ಯವೊಂದರ ಜೊತೆಯಲ್ಲಿ ಜನಪದ ಕಾವ್ಯವೊಂದನ್ನು ತುಲನೆಮಾಡಿ ನೋಡುವಾಗ ಕೆಲವು ಪರಿಮಿತಿಗಳನ್ನು ಇಟ್ಟುಕೊಳ್ಳಬೇಕಾಗುತ್ತದೆ. ಜನಪದರ ಪ್ರತಿಭೆ ಎಷ್ಟೇ ಇದ್ದರೂ, ಜನಪದ ಜಾಯಮಾನಕ್ಕೆ ತಕ್ಕಂತೆ ಕತೆ ಹೇಳುವುದಷ್ಟೇ ಅವರ ದೃಷ್ಟಿಯಾಗುತ್ತದೆಯೇ ಹೊರತು-ಶಿಷ್ಟ ಕವಿಗಳಂತೆ ಪಾತ್ರ ಚಿತ್ರಣದ ಕಡೆಗಾಗಲಿ, ಸನ್ನಿವೇಶಗಳ

ನಿರ್ಮಾಣ ಅಥವಾ ವರ್ಣನೆಗಳ ಕಡೆಗಾಗಲಿ ಹೆಚ್ಚು ಇರುವುದಿಲ್ಲ. ಅಲ್ಲಿ ಜನಪದ ಸಾಹಿತ್ಯ ಕಂಠಸ್ಥ ಸಂಪ್ರದಾಯದಲ್ಲಿರುವುದರಿಂದ ಅವರ ಮೊದಲ ರೂಪ ನಮಗೆ ನಿರ್ದಿಷ್ಟವಾಗಿ ತಿಳಿಯುವುದಿಲ್ಲ. ಅಲ್ಲದೆ ಕಾಲಾನಂತರದಲ್ಲಿ ಅದು ಹೊಂದಿರಬಹುದಾದ ಬದಲಾವಣೆಗಳನ್ನು ಗುರುತಿಸುವುದು ಕಷ್ಟವಾಗುತ್ತದೆ. ಅವರು ಎಲ್ಲೋ ಕೇಳಿದ ಘಟನೆಗಳು ಮತ್ತೆಲ್ಲಿಯೋ ಸೇರಿಕೊಳ್ಳುವುದು ಇಲ್ಲಿ ಸಾಮಾನ್ಯ. ಜನಪದ ರಾಮಾಯಣದಲ್ಲಿ ಮಹಾಭಾರತದ ಸನ್ನಿವೇಶವನ್ನು ಹೋಲುವ ಘಟನೆಗಳು ಆ ಪ್ರಭಾವದಿಂದಲೇ ಯಾವಾಗ ಬೇಕಾದರೂ ಸೇರಿರಲು ಅಥವಾ ಸೇರಲು ಸಾಧ್ಯ. ಸೀತೆ ಮಗುವಾಗಿದ್ದಾಗ ನದಿಯಲ್ಲಿ ತೇಲಿಬಿಡುವ ಪ್ರಸಂಗವಾಗಲಿ ಅಥವಾ ಸೀತಾ ಸ್ವಯಂವರದಲ್ಲಿನ ಸಂದರ್ಭವಾಗಲೀ ಮಹಾಭಾರತದ ಘಟನೆಯನ್ನು ನೆನಪಿಗೆ ತರುತ್ತದೆ.

ಇದರಿಂದಾಗಿ ಜನಪದ ರಾಮಾಯಣವನ್ನು ನೋಡುವ ನಮ್ಮ ದೃಷ್ಟಿಯೇ ಬೇರೆಯಾಗಬೇಕಾಗುತ್ತದೆ. 'ಪಾಪಿಗುದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್' ಎಂಬ ಶ್ರೀ ರಾಮಾಯಣ ದರ್ಶನಂ ಧ್ವನಿ ಈ ಸಂದರ್ಭದಲ್ಲಿ ಅರ್ಥ ಹೀನವಾಗುತ್ತದೆ.

ಜನಪದ ರಾಮಾಯಣದಲ್ಲಿ ಏನಿದ್ದರೂ ಜನಪದ ಕವಿಯ ಕೆಲವು ವಿಶಿಷ್ಟ ಕಲ್ಪನೆಗಳ ವಿನ್ಯಾಸವನ್ನು ಗುರುತಿಸಬಹುದು ಅಷ್ಟೇ. ಶಿಷ್ಟಕಾವ್ಯದಲ್ಲಿ ಕಾಣಲಾರದ ಇಂತಹ ಸಂದರ್ಭಗಳು ನಮ್ಮ ಗಮನ ಸೆಳೆಯುವಲ್ಲಿ ಯಶಸ್ವಿಯಾಗುತ್ತವೆ. ಯಾವುದೇ ಪಾತ್ರದ ಅಥವಾ ಸನ್ನಿವೇಶದ ಬೆಳವಣಿಗೆಗೆ ಇಲ್ಲಿ ಅಷ್ಟಾಗಿ ಅವಕಾಶವಿರುವುದಿಲ್ಲ.

ಜನಪದರು ಚಿತ್ರಿಸುವಾಗ ರಾಮನಾಗಲಿ-ಸೀತೆಯಾಗಲಿ, ಶಿವನಾಗಲಿ, ಪಾರ್ವತಿಯಾಗಲಿ, ಯಾರನ್ನೇ ಆದರೂ ಆತ್ಮೀಯವಾಗಿ ಕಾಣುತ್ತಾರೆ. ತಮ್ಮ ಹತ್ತಿರದ ಬಂಧುವಿನಂತೆಯೇ ಕಂಡು, ಸಾಮಾನ್ಯರೀತಿಯಲ್ಲಿಯೇ ಬಣ್ಣಿಸುತ್ತಾರೆ. ಗಂಗೆ-ಗೌರಿ ಮುಂದಲೆ ಹಿಡಿದು ಜಗಳವಾಡುತ್ತಾರೆ. ಶಿವನೊಂದಿಗೆ ಜಗಳವಾಡಿ ಮನೆಯ ಒಳಗೂ ಸೇರಿಸದೆ ಬಾಗಿಲ ಆಚೆಯೇ ನಿಲ್ಲಿಸುತ್ತಾರೆ ಹಾಗೆಯೇ ರಾಮ, ಸೀತೆಯರೂ ಹಲವು ಸಂದರ್ಭದಲ್ಲಿ ಕಂಡುಬರುತ್ತಾರೆ.

ಶ್ರೀ ರಾಮಾಯಣ ದರ್ಶನಂನೊಂದಿಗೆ ಜನಪದ ರಾಮಾಯಣವನ್ನು ಹೋಲಿಸಿ ನೋಡುವಾಗ ವಿಶೇಷವಾಗಿ ಕಥಾಸಂದರ್ಭಗಳನ್ನಷ್ಟೆ ಗಮನಿಸಲಾಗಿದೆ. ಪ್ರಮುಖ ಬದಲಾವಣೆಗಳನ್ನು ಗುರುತಿಸಲಾಗಿದೆ. ಈಗ ನಮಗೆ ದೊರೆತಿರುವ ಜನಪದ ರಾಮಾಯಣಗಳು ಅವರ ಸಮೆದ ರೂಪಗಳು ಎಂಬುದನ್ನು ನಾವು ಗಮನದಲ್ಲಿಟ್ಟು ಕೊಳ್ಳಬೇಕಾಗುತ್ತದೆ. ಅಂತಹ ಒಂದು ಸಮೆದ ರೂಪದೊಂದಿಗೆ, ಶಿಷ್ಟಪದವನ್ನು ಹೋಲಿಸುತ್ತಿದ್ದೇವೆಂಬ ಎಚ್ಚರವೂ ಅಗತ್ಯ. ಈ ಕೆಲವು ಪರಿಮಿತಿಗಳ ಚೌಕಟ್ಟಿನಲ್ಲಿ ಇವುಗಳ ಪರಿಶೀಲನೆ ಇಲ್ಲಿ ನಡೆದಿದೆ.

"ಯಾವುದೇ ಸಾಹಿತ್ಯದಲ್ಲಾದರೂ ಕಥಾವಸ್ತು ತುಂಬ ಪ್ರಾಚೀನವಾದದ್ದಾಗಿ ತನ್ನದೇ ಆದ ಪರಂಪರೆಯನ್ನು ಬಹುಮಟ್ಟಿಗೆ ಪಡೆದುಕೊಂಡಿರುತ್ತದೆ. ಅದು ಒಂದು ನಿಮಿತ್ತ ಮಾತ್ರವಾಗಿ ಉಳಿದು ಕವಿಯ ಶಕ್ತಿಯನ್ನು ಅವಲಂಬಿಸಿ ಆಯಾ ಕಾಲದಲ್ಲಿ ತನ್ನದೇ ಆದ ಸ್ವಂತಿಕೆಯನ್ನು ತುಂಬಿಕೊಂಡು ಅವತರಿಸುತ್ತದೆ. ಹೀಗಾಗಿ ನಮ್ಮಲ್ಲಿ ರಾಮಾಯಣ, ಮಹಾಭಾರತಾದಿಗಳು ಅನಂತ ಮುಖವಾಗಿ ಕಾಣಿಸಿಕೊಂಡಿವೆ. ಒಬ್ಬೊಬ್ಬ ಕವಿಯ ಕೈಯಲ್ಲಿ ಒಂದೊಂದು ದಿವ್ಯದೃಷ್ಟಿಯನ್ನು ಪಡೆದುಕೊಂಡು ಮೂಲಕಾವ್ಯಗಳ ಹೊಸವ್ಯಾಖ್ಯಾನಗಳೆಂಬಂತೆ, ಭಾಷ್ಯಗಳೆಂಬಂತೆ ಕಥೆಯಲ್ಲಿ ಹೊಸ ಅರ್ಥವನ್ನೂ ವಿನೂತನತೆಯನ್ನೂ ತಂದುಕೊಡುತ್ತವೆ.[12] ಆದ್ದರಿಂದ ಇತ್ತೀಚಿನ ಕೃತಿಯೊಂದಿಗೆ, ಬಹಳ ಹಿಂದಿನ ಕೃತಿಯೊಂದನ್ನು–ಅದೂ ಕಂಠಸ್ಥವಾಗಿ ಬರುವ ಕೃತಿಯೊಂದನ್ನು ಪರಿಶೀಲಿಸುವಾಗ ಅದಕ್ಕೆ ತಕ್ಕ ಅಳತೆಗೋಲನ್ನೇ ಬಳಸುವುದು ಅನಿವಾರ್ಯವಾಗುತ್ತದೆ.

ಡಾ. ಡಿ. ಕೆ. ರಾಜೇಂದ್ರ

---

12. ಡಾ. ಜೀಶಂಪ. ಕುವೆಂಪು ಸಾಹಿತಲೋಕ–ಪು. ೧೭೦

# ಜೈನರಾಮಾಯಣ – ಶ್ರೀ ರಾಮಾಯಣ ದರ್ಶನಂ

ಜನಪದದಲ್ಲಿ ಜನ್ಮತಳೆದ ರಾಮಾಯಣ ವಾಲ್ಮೀಕಿಯಲ್ಲಿ ಪರಿಪೂರ್ಣತೆಯನ್ನು ಪಡೆದು ಮಹಾಕಾವ್ಯವಾಗಿ ವಿಶ್ವಮಾನ್ಯತೆ ಪಡೆದಿದೆ. ವಾಲ್ಮೀಕಿ ರಾಮಾಯಣವನ್ನು ಆಧರಿಸಿದ ರಾಮಾಯಣದ ಹಲವು ಬೆಳವಣಿಗೆಯನ್ನು ಕಾಲಗಿಂದ ಕಾಲಕ್ಕೆ ವಿವಿಧ ಭಾಷೆಗಳಲ್ಲಿ ವಿವಿಧ ಪಾತ್ರಗಳಲ್ಲಿ ಗುರುತಿಸಬಹುದು. ವಾಲ್ಮೀಕಿಯಿಂದ ಕವಲೊಡೆದ ರಾಮಾಯಣಗಳಲ್ಲಿ ಮೂಲದಿಂದ ತೀರ ಭಿನ್ನವಾಗಿ ರಾಮಾಯಣವನ್ನು ಪರಿಭಾವಿಸಿದ ವರು ಬೌದ್ಧರು ಮತ್ತು ಜೈನರು. ಪ್ರಸ್ತುತ ಜೈನರಾಮಾಯಣಗಳೊಡನೆ ಶ್ರೀ ರಾಮಾಯಣದರ್ಶನಂ ಕೃತಿಯನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲು ಯತ್ನಿಸಿದೆ. ಜೈನರಾಮಾಯಣ ಮತ್ತು ಕುವೆಂಪು ಅವರ ಶ್ರೀ ರಾಮಾಯಣದರ್ಶನಂಗಳಿಗೆ ವಸ್ತು ವಿನ ಸಾಮ್ಯ ಸಾಕಷ್ಟು ಸ್ಥೂಲವಾಗಿದೆ. ಕಾರಣವಿಷ್ಟೆ ಈ ಎರಡೂ ರಾಮಾಯಣಗಳ ಆಕರ ಒಂದೇ ಆಗಿರುವುದು. ಅಂತೆಯೆ ಮೂಲ ರಾಮಾಯಣದಿಂದ ಭಿನ್ನವಾಗಿ ಒಡ ಮೂಡಿರುವ ಈ ಎರಡೂ ಕೃತಿಗಳು ಸ್ವೋಪಜ್ಞತೆಗೆ ಸಾಕ್ಷಿಯಾಗಿವೆ.

ದೇವಚಂದ್ರ ತನ್ನ ರಾಮಕಥಾವತಾರದಲ್ಲಿ ಜೈನರಾಮಾಯಣದ ಪರಂಪರೆ ಯನ್ನು ಸಾಂಪ್ರದಾಯಿಕವಾಗಿ ಹೀಗೆ ಹೇಳಿದ್ದಾನೆ—"ರಾಮಕಥೆಯಂ ಮುನ್ನ ಆದಿ ದೇವನ ಸಮವಸರಣದೊಳಾದಿಚಕ್ರಿಯಪ್ಪ ಭರತೇಶ್ವರಂಗಂ ಪುರುಪರಮೇಶ್ವರಂ ಮೃದು ಮಧುರ ಶ್ರಾವ್ಯ ಸವ್ಯ ದಿವ್ಯ ಭಾಷೆಯಿಂ ನಿರೂಪಿಸಿದುದು ಪರಂಪರಾತೀರ್ಥ ಸಂತಾನದಿಂ ಬರೆ ಪಶ್ಚಿಮ ತೀರ್ಥಂಕರರಪ್ಪ ಶ್ರೀ ವೀರವರ್ಧಮಾನಸ್ವಾಮಿಯು ಸರ್ವ ಭಾಷಾಸ್ವಭಾವದಿಂ ಶ್ರೇಣಿಕಮಹಾಮಂಡಲೇಶ್ವರಂಗರಿಯೆ ಪೇಳ್ವುದುಮದು ಅನು ಕ್ರಮದಿಂಗುರು ಪರಂಪರೆಯಿಂ ವ್ಯಕ್ತಮಾಗುತ್ತಂ ಬರೆ ಕೂಚಿಭಟ್ಟಾರಕರುಂ ನಂದಿ ಮುನಿವರರುಂ ಕವಿಪರಮೇಷ್ಠಿಗಳುಂ ರವಿಷೇಣಾರ್ಯರುಂ ವೀರಸೇನ ಸಿದ್ಧಸೇನರುಂ ಪದ್ಮನಂದಿಗರುಂ ಗುಣಭದ್ರರುಂ ಸಕಲಕೀರ್ತಿಗಳೆಂದಿವರಾದಿಯಾಗಿ ಪೇಳ್ದುದಂ ಚಾವುಂಡರಾಯ ನಾಗಚಂದ್ರ ಮಾಘಣಂದಿಸಿದ್ಧಾಂತಿ ಕುಮುದೇಂದು ನಯಸೇನರಾದಿ ಪೇಳ್ದ ಪುರಾಣದೊಳಂ"* ಎಂದಿದ್ದಾನೆ. ಮೇಲಿನ ಉದ್ಧರಣೆಯ ಪ್ರಕಾರ ಜೈನ ರಾಮಾಯಣವನ್ನು ಮೊದಲು ಆದಿತೀರ್ಥಂಕರ ಪುರುದೇವನು ತನ್ನ ಮಗ ಭರತನಿಗೆ ನಿರೂಪಿಸಿದನು. ಇದು ಪರಂಪರಾನುಗತವಾಗಿ ಕಡೆಯ ತೀರ್ಥಂಕರನ ವರೆಗೆ ಹರಿದು ಬಂದಿತು. ಮಹಾವೀರನು ಶ್ರೇಣಿಕನಿಗೆ ಈ ಕಥೆ ಹೇಳಿದನು. ಜೈನ ಸಂಪ್ರದಾಯದ

---

* ರಾಮಕಥಾವತಾರ ೧–೧೩ವ

ಪ್ರಕಾರ ರಾಮಕಥೆ ಸುವ್ರತಜಿನನ ಕಾಲಕ್ಕೆ ಸಂಬಂಧಿಸಿದೆ. ಆ ಬಳಿಕದಲ್ಲಿ ಕೂಚಿ ಭಟ್ಟಾರಕ, ನಂದಿಮುನಿ, ಕವಿಪರಮೇಷ್ಠಿ, ರವಿಷೇಣ, ವೀರಸೇನ, ಸಿದ್ಧಸೇನ, ಪದ್ಮ ನಂದೀಶ, ಗುಣಭದ್ರ ಇವರೇ ಮೊದಲಾದವರು ಈ ಪರಂಪರೆಯನ್ನು ಉಳಿಸಿ ಬೆಳೆ ಸಿರುವುದು ವ್ಯಕ್ತವಾಗುತ್ತದೆ.

ಐತಿಹಾಸಿಕವಾಗಿ ಜೈನರಾಮಾಯಣಗಳಲ್ಲಿ ಅತ್ಯಂತ ಪ್ರಾಚೀನವಾದುದೆಂದರೆ ಪ್ರಾಕೃತದಲ್ಲಿ ರಚಿತವಾದ ವಿಮಲಸೂರಿಯ 'ಪಉಮಚರಿಯ'. ಜೈನರಾಮಾಯಣ ಪರಂಪರೆಯಲ್ಲಿ ಮೂರು ಮುಖ್ಯ ಮಜಲುಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಅವುಗಳೆಂದರೆ ವಿಮಲಸೂರಿಗಳ ಸಂಪ್ರದಾಯ, ಸಂಘದಾಸ ಹರಿಷೇಣರ ಸಂಪ್ರದಾಯ ಮತ್ತು ಗುಣಭದ್ರರ ಸಂಪ್ರದಾಯ. ಕನ್ನಡದಲ್ಲಿ ಜೈನರಾಮಾಯಣ ಪರಂಪರೆಯ ರೂಪುರೇಖೆಗಳು ಕಂಡು ಬರುವುದು ಮೊದಲು ಚಾವುಂಡರಾಯನಲ್ಲಿ. ಅನಂತರ ನಯಸೇನ, ನಾಗರಾಜ ಮತ್ತು ಬಂಧುವರ್ಮರಲ್ಲಿ ಪ್ರಾಸಂಗಿಕವಾಗಿ ರಾಮಾಯಣದ ಪ್ರಸ್ತಾಪ ಬರುತ್ತದೆ. ಜೈನರಾಮಾಯಣ ಸಮಗ್ರ ಕಾವ್ಯವಾಗಿ, ಕಲಾತ್ಮಕವಾಗಿ ಮೈದೋರಿದ್ದು ಹನ್ನೆರಡನೆಯ ಶತಮಾನದ ನಾಗಚಂದ್ರನಲ್ಲಿ. ತರುವಾಯ ಬಂದ ಕುಮುದೇಂದು, ದೇವಚಂದ್ರ, ಚಂದ್ರಸಾಗರವರ್ಣಿ ಮೊದಲಾದವರು ನಾಗಚಂದ್ರನ ಪ್ರಭಾವಕ್ಕೆ ಜೋತುಬಿದ್ದರು. ಕನ್ನಡ ಜೈನರಾಮಾಯಣಗಳಲ್ಲಿ ನಾಗಚಂದ್ರನ ರಾಮ ಚಂದ್ರಚರಿತ ಪುರಾಣಕ್ಕೆ ವಿಶಿಷ್ಟ ಸ್ಥಾನವಿದ್ದು ಪ್ರಸ್ತುತ ಅಧ್ಯಯನಕ್ಕೆ ನಾಗಚಂದ್ರನ ರಾಮಾಯಣವನ್ನು ಪ್ರಧಾನವಾಗಿ ಪರಿಗಣಿಸಿದೆ.

ಜೈನರಾಮಾಯಣಗಳಿಗೂ ಕುವೆಂಪು ಅವರ ಕೃತಿಗೂ ಶತಶತಮಾನಗಳ ಅಂತರ ವಿದೆ. ಅಹಿಂಸೆಯನ್ನು ಮುಖ್ಯವಾಗಿ ಪ್ರತಿಪಾದಿಸುವ ಜೈನಧರ್ಮದ ನೆಲಗಟ್ಟಿನ ಮೇಲೆ ಜೈನರಾಮಾಯಣಗಳು ಸೃಷ್ಟಿಯಾಗಿವೆ. ಇಲ್ಲಿರುವುದೆಲ್ಲ ತೀರ್ಥಂಕರರ ದಿವ್ಯ ಸಂದೇಶಗಳು. ಕುವೆಂಪು ಅವರ 'ದರ್ಶನಂ'ಗೆ ಇಂಥ ಧಾರ್ಮಿಕ ಎಲ್ಲೆಕಟ್ಟುಗಳು ಸೀಮಾರೇಖೆಗಳು ಇಲ್ಲವಾದರೂ ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿ ಗಳೆಂಬ ತತ್ವಕ್ಕೆ ಬದ್ಧವಾಗಿದೆ. ಇಪ್ಪತ್ತನೆಯ ಶತಮಾನದ ದಿವ್ಯಪುರುಷರಾದ ರಾಮ ಕೃಷ್ಣ ಪರಮಹಂಸ, ಅರವಿಂದ ಮೊದಲಾದವರ ದರ್ಶನಗಳಿಂದ ಪ್ರಭಾವಿತವಾಗಿದೆ.

ಜೈನರಾಮಾಯಣಕ್ಕೆ ತನ್ನದೇ ಆದ ವೈಶಿಷ್ಟ್ಯಗಳಿವೆ. ಯಾವುದೇ ಸಂಪ್ರ ದಾಯದ ರಾಮಾಯಣಕ್ಕೂ ಕಥಾನಾಯಕ ರಾಮ. ಜೈನರಾಮಾಯಣದಲ್ಲಿ ರಾಮ ಬಲದೇವನಾಗಿ, ಲಕ್ಷ್ಮಣ ವಾಸುದೇವನಾಗಿ, ರಾವಣ ಪ್ರತಿವಾಸುದೇವನಾಗಿ ಕಾಣಿಸಿ ಕೊಂಡಿದ್ದಾರೆ. ಇಲ್ಲಿ ಯಜ್ಞಯಾಗಗಳಿಲ್ಲ. ಕುವೆಂಪು ಅವರು ರಾಮನ ಜನನ ಸಂದರ್ಭ ದಲ್ಲಿ ವಾಲ್ಮೀಕಿಯಂತೆ ಅಶ್ವಮೇಧಯಾಗಕ್ಕೆ ಮೊರೆಹೋಗುವುದಿಲ್ಲ. "ಹಿಂಸಾಕ್ರೌರ್ಯ ವಿಲ್ಲದಿಹ ಪ್ರೇಮಕ್ಕೆ ನೋಂತು ದೇವರ್ಕಳಂ ಪೂಜಿಸಲ್ ಮೆಚ್ಚುವುದು ಜಗವನಾಳುವ

ಋತಂ''[1]ಎಂಬ ಕುವೆಂಪು ಅಭಿವ್ಯಕ್ತಿಯಲ್ಲಿ ಜೈನಧರ್ಮದ ಪ್ರಭಾವವಿರಬಹುದಲ್ಲವೇ?

ವಾಲ್ಮೀಕಿಯಿಂದ ಕುವೆಂಪುವರೆಗೆ ದಶರಥನಿಗೆ ಮೂವರು ಹೆಂಡತಿಯರು ಮತ್ತು ರಾಮ ಏಕಪತ್ನೀವ್ರತಸ್ಥ. ಆದರೆ ಜೈನರಾಮಾಯಣವಲ್ಲಿ ದಶರಥನಿಗೆ ಅಪರಾಜಿತೆ, ಕೈಕೆ, ಸುಮಿತ್ರೆ ಮತ್ತು ಸುಪ್ರಭೆ ಎಂಬ ನಾಲ್ವರು ಹೆಂಡತಿಯರು. ಇಲ್ಲಿಯ ರಾಮ ಅಪರಾಜಿತೆಯ ಮಗ. ರಾಮ ಎಂಟು ಸಾವಿರ ಹೆಣ್ಣನ್ನೂ, ಲಕ್ಷ್ಮಣ ಹದಿನೆಂಟು ಸಾವಿರ ಸ್ತ್ರೀಯರನ್ನೂ ವಿವಾಹವಾಗಿರುತ್ತಾರೆ. ಈ ಸಂಖ್ಯೆಯಲ್ಲಿ ಜೈನ ರಾಮಾಯಣಗಳಲ್ಲೆ ಪರಸ್ಪರ ವ್ಯತ್ಯಯಗಳಿವೆ. ಕೆಲವು ಜೈನರಾಮಾಯಣಗಳಲ್ಲಿ ಸೀತೆ ನೇಗಿಲಲ್ಲಿ ಸಿಕ್ಕ ಶಿಶುವಲ್ಲ. ಈಕೆ ಜನಕನ ನಿಜ ತನುಜೆ. ಇವಳ ಸೋದರ ಪ್ರಭಾಮಂಡಲ. ವಾಲ್ಮೀಕಿಯ ಶೂರ್ಪನಖಿ ನಾಗಚಂದ್ರನ ರಾಮಚಂದ್ರ ಚರಿತಪುರಾಣ ಮತ್ತು ದರ್ಶನಂಗಳಲ್ಲಿ ಚಂದ್ರನಖಿ ಎಂದು ಬದಲಾಗಿದ್ದಾಳೆ. ಜೈನರಾಮಾಯಣದಲ್ಲಿ ಜೈನಧರ್ಮಕ್ಕನುಗುಣವಾಗಿ ಜೀವಿಗಳು ಭವಭವದಲ್ಲಿ ಅನೇಕ ಜನ್ಮವೆತ್ತಿ ಪ್ರತಿಯೊಂದು ಜನ್ಮದಲ್ಲಿಯೂ ಅವಗುಣಗಳನ್ನು ತೊರೆದು ಶುದ್ಧರಾಗುತ್ತ ಕಡೆಗೆ ಮೋಕ್ಷಹೊಂದುವರು. ಕುವೆಂಪು ಅವರು ಭವಾವಳಿಗಳನ್ನು ಹೇಳದಿದ್ದರೂ "ಪಾಪಿಗುದ್ಧಾರವಿಹುದೌ ಸೃಷ್ಟಿಯ ಮಹದ್ವ್ಯೂಹರಚನೆಯಲಿ" ಎಂಬಲ್ಲಿನ ತತ್ವ ಕೂಡ ಜೈನವಲಯದಿಂದ ಭಿನ್ನವಾದುದೆಂದು ಭಾಸವಾಗುವುದಿಲ್ಲ. 'ದರ್ಶನಂ'ನ ಧ್ಯೇಯ ಸಮಷ್ಟಿಯ ವಿಕಾಸದ ಕಡೆಗೆ. ಜೈನರಾಮಾಯಣದಲ್ಲಿ ರಾವಣನ ವಧೆ ಲಕ್ಷ್ಮಣನಿಂದ ಏಕೆಂದರೆ ರಾಮ ಅರ್ಹತ್ಪದವಿಗೆ ಯೋಗ್ಯನಾದವನು. ಈತನಿಂದ ಹಿಂಸೆ ಸಲ್ಲ. ಜೈನರಾಮಾಯಣ ಸೀತಾ ಪರಿತ್ಯಾಗದವರೆಗೆ ಮುಂದುವರೆದು ಕಡೆಯಲ್ಲಿ ರಾಮನು ರಾಮಭಟ್ಟಾರಕನಾಗಿ, ಸೀತೆ ಜನಸನ್ಯಾಸಿನಿ ಆಗುವಲ್ಲಿ ಮುಕ್ತಾಯವಾಗುತ್ತದೆ.

ಕುವೆಂಪು ಅವರು 'ದರ್ಶನಂ'ನ ಆರಂಭದಲ್ಲಿ ಪೂರ್ವಕವಿಗಳನ್ನು ಸ್ಮರಿಸಿದ್ದಾರೆ. ಆ ಯಾದಿಯಲ್ಲಿ ಜೈನರಾಮಾಯಣ ಕರ್ತೃಗಳಾದ ವಿಮಲಸೂರಿ, ನಾಗಚಂದ್ರ ಕುಮುದೇಂದು ಮೊದಲಾದವರ ಉಲ್ಲೇಖವಿಲ್ಲ ನಿಜ. ಆದರೂ 'ದರ್ಶನಂ'ನಲ್ಲಿನ ರಾವಣನ ಪಾತ್ರಸೃಷ್ಟಿಯಲ್ಲಿ ನಾಗಚಂದ್ರನ ರಾವಣ ಪಾತ್ರಪ್ರಭಾವ ಅಪ್ರಜ್ಞಾ ಪೂರ್ವಕವಾಗಿಯಾದರೂ ಆಗಿದೆ ಎಂಬುದರಲ್ಲಿ ಅನುಮಾನವಿಲ್ಲ. ಕುವೆಂಪು ಅವರು ಪ್ರಾಚೀನ ಕಾವ್ಯಗಳನ್ನು ಆಳವಾಗಿ ಅಧ್ಯಯನ ಮಾಡಿದರು. ಹಾಗೆ ನಾಗಚಂದ್ರನ ರಾಮಾಯಣವನ್ನೂ ಅಭ್ಯಾಸ ಮಾಡಿದರು. ಜೈನರಾಮಾಯಣಗಳು ವಾಲ್ಮೀಕಿಯ ಕಾವ್ಯವಸ್ತುವಿನ ಬಗೆಗೆ ಎತ್ತುವ ಕೆಲವೊಂದು ಮೂಲಭೂತ ಪ್ರಶ್ನೆಗಳು ಕುವೆಂಪು ಅವರನ್ನೂ ಕಾಡಿವೆ. ಉದಾಹರಣೆಗೆ ವಾಲ್ಮೀಕಿಯಲ್ಲಿ ರಾವಣನನ್ನು ರಾಕ್ಷಸನಂತೆ, ಹತ್ತುತಲೆ ಉಳ್ಳವನಂತೆ ವರ್ಣಿಸಿರುವುದನ್ನು ಜೈನರಾಮಾಯಣಗಳು ಮಾರ್ಪಾಟು

1. ಶ್ರೀರಾಮಾಯಣ ದರ್ಶನಂ ಪು. ೨೧

ಮಾಡಿಕೊಂಡಿವೆ. ಗೌತಮಗಣಧರರಿಂದ ರಾಮಾಯಣದ ಕಥೆಯನ್ನು ಕೇಳಿದ ಶ್ರೇಣಿಕ ಮಹಾರಾಜನಿಗೆ ಅನೇಕ ಸಮಸ್ಯೆಗಳು ಉದ್ಭವಿಸುತ್ತವೆ. ರಾವಣ ಕುಂಭಕರ್ಣರು ನರಮಾಂಸವನ್ನು ತಿನ್ನುವ, ಮಾನವರ ರಕ್ತ ಕುಡಿಯುವ ರಾಕ್ಷಸರೆ ಎಂದು ಆತ ಪ್ರಶ್ನಿಸುತ್ತಾನೆ. ಇದನ್ನು ಆಧಾರವಾಗಿಟ್ಟುಕೊಂಡೊ ಏನೊ ವಿಮಲಸೂರಿ ರಾವಣ ನನ್ನು ದಶಶಿರ ಎನ್ನುವುದಕ್ಕೆ ಚತುರ ಕಲ್ಪನೆಯನ್ನು ಮಾಡಿದ್ದಾನೆ. ಅದರಂತೆ-ಭೀಮ ಎಂಬುವನು ರಾವಣನಿಗೆ ವಜ್ರಹಾರವನ್ನು ಕೊಟ್ಟಿದ್ದನು. ಇದರಲ್ಲಿ ಸುಂದರವಾದ ರಾವಣನ ತಲೆ ಪ್ರತಿಬಿಂಬಿಸಿದುದರಿಂದ ಆತ ದಶಶಿರ ಎಂಬ ಬಿರುದು ಪಡೆದ. ಕುವೆಂಪು ಅವರ 'ಲಂಕೇಶನೊಲಿಸಿದನು ಮಾರೀಚನಂ' ಎಂಬ ಅಧ್ಯಾಯದಲ್ಲಿ ಇದೇ ಬಗೆಯ ಅಭಿಪ್ರಾಯಗಳು ವ್ಯಕ್ತವಾಗಿವೆ—

**......ನಾವು ರಾಕ್ಷಸರಂತೆ ! ನೀನರಿಯೆ**
**ನಮ್ಮನೆಂತವರು ಬಣ್ಣಿಪರೆಂಬುದಂ ದಶಶಿರಂ**
**ಎಂಬೆನ್ನ ಬಿರುದನವರೀರೈದು ತಲೆಯೆಂದು**
**ಚಿತ್ರಿಪರ್**

* * *

**...ನಮ್ಮ ಪೆಣ್ಗಳನವರ್**
**ಕೋರೆಗಳ್ ಕೋಡುಗಳ್‌ವೆರಸಿ ಬರೆದಪರಂತೆ**
**ನಾವು ನರರಂ ಕಡಿದು ಬಿಸಿನೆತ್ತರಂ ಕುಡಿದು**
**ಬರ್ದುಕುವವರಂತೆ** [1]

ವಿಧಿನಿಯಮ, ಕರ್ಮವಶ ಎಂಬ ಮಾತುಗಳು ಜೈನಕಾವ್ಯಗಳಲ್ಲಿ ಮತ್ತೆ ಮತ್ತೆ ಬರುತ್ತವೆ. ನಾಗಚಂದ್ರನಲ್ಲಿ ಸೀತೆಯ ಕಾರಣದಿಂದ ರಾವಣನ ವಧೆಯಾಗುವುದೆಂದು ನಾರದರು ಭವಿಷ್ಯ ನುಡಿಯುವಾಗ ವಿಧಿಯ ಪ್ರಸಕ್ತಿಯಿದೆ—

**ಏನುಂ ತೊಡರಿಲ್ಲದುವೆ ಶಿ**
**ಲಾನಿಕ್ಷಿಪ್ತಾಕ್ಷರಂ ವಿಭೀಷಣ ರಣದೊಳ್**
**ಜಾನಕಿಯ ದೂಸಱಿಂ ಲಂ**
**ಕಾನಾಥಂ ದಾಶರಥಿಯ ಕಯ್ಯೊಳ್ ಮಡಿಗುಂ**[2]

ವಿಧಿಯ ಕೈವಾಡದ ಬಗ್ಗೆ ಕುವೆಂಪು ಅವರ ನಂಬುಗೆ ಕೂಡ ಸ್ಪಷ್ಟವೇ. ''ಮಂಥರೆ ಸೀತೆ ರಾಮ ರಾವಣರೆಲ್ಲರುಂ ಸೂತ್ರಗೊಂಬೆಗಳಲ್ತೆ ಆ ವಿಧಿಯ ಹಸ್ತ ದಲಿ''[3]

ನಾಗಚಂದ್ರನ ರಾಮಚಂದ್ರಚರಿತ ಪುರಾಣದಲ್ಲಿ ನಾಂದಿಪದ್ಯಗಳಾದ ಬಳಿಕ ಕೋಸಲದೇಶದ ವರ್ಣನೆಯೊಂದಿಗೆ ಕಾವ್ಯ ಆರಂಭಗೊಳ್ಳುತ್ತದೆ --

---

1. ಶ್ರೀ ರಾಮಾಣದರ್ಶನಂ : ಪು. ೨೨೭ 2. ರಾಮಚಂದ್ರಚರಿತ ಪುರಾಣ ೩-೨೩
3. ಶ್ರೀರಾಮಾಯಣ ದರ್ಶನಂ : ಪು. ೯೮

ನಾಡೊಳ್ ಕೌಶಲದೇಶಮೊಂದೆ ಪುರದೊಳ್ ಸಾಕೇತಮೊಂದೀಕ್ಷಣ
ಕ್ರೀಡಾವಾಸಮೆನಲ್ ಪುರಂದರನಲಂಪಿಂ ನಾಭಿರಾಜಂಗಮಂ
ಮಾಡಿಟ್ಟಂ ಕರುವಿಟ್ಟು ಮನ್ಮಥನೆ ಒಣ್ಣಂಗೆಯ್ದನೆಂದೆಂದೊಡಾ
ನಾಡಂ ಬೇಡುಮನೊಂದೆ ನಾಲಗೆಯೊಳಿನ್ನೇವಣ್ಣಿಪಂ ಬಣ್ಣಿಪಂ[1]

ಶ್ರೀ ರಾಮಾಯಣದರ್ಶನಂ ಕೂಡ ಸರಸ್ವತಿ, ಪೂರ್ವಕವಿಸ್ತುತಿ ಇತ್ಯಾದಿಗಳ ಬಳಿಕ ಕೋಸಲ ದೇಶದ ವರ್ಣನೆಯೊಂದಿಗೆ ಅನಾವರಣಗೊಳ್ಳುವುದು ಆಕಸ್ಮಿಕವಲ್ಲ—

ದೇಶ ಕೋಸಲಮಿಹುದು ಧನ ಧಾನ್ಯ ಜನ ತುಂಬಿ
ಸರಯೂ ನದಿಯ ಮೇಲೆ. ಮೆರೆವುದು ವಿಷಯ ಮಧ್ಯೆ
ರಾಜಧಾನಿ ಅಯೋಧ್ಯೆ, ರವಿಸುಮಿಂದ್ರಿಯ ಸುಖದ
ನಡುವಣಾತ್ಮಾನಂದದಂತೆ. ಪೇಳೇನೆಂಬೆನಾ
ಪರ್ವಿತ್ತದರ ಜಸಂ, ರಾಕಾಶಶಾಂಕನಿಂ
ಪರ್ವಿತನೆ ಬೆಳ್ದಿಂಗಳೊಳ್ಪಿನ ಸೊದೆಯ ಸೋನೆ
ಲೋಕತ್ರಯುಂಗಳಂ.[2]

ಸೀತಾಪಹರಣದ ಸನ್ನಿವೇಶದಲ್ಲಿ ನಾಗಚಂದ್ರನ ರಾಮಚಂದ್ರ ಚರಿತ ಪುರಾಣ ದಲ್ಲಿ ಸೀತೆಯನ್ನರಸುತ್ತ ಹೊರಟ ರಾಮ ಅರಣ್ಯದ ಪುಷ್ಪಪಕ್ಷಿಗಳನ್ನೆಲ್ಲ ಸೀತೆಯನ್ನು ಕಂಡಿರೇ ಎಂದು ಕೇಳುತ್ತಾನೆ—

ಕಳಹಂಸಾಲಸಯಾನೆಯಂ ಮೃಗವಧೂವೋದಾಸ್ಯ ನಿಶ್ವಾಸೆಯಂ
ತಳಿರೇ ತಾವರೆಯೋ ಮದಾಳಿಕುಲಮೋ ಕರ್ಣೆಯ್ದಲೇ ಮತ್ತ ಕೋ
ಕಿಳಮೋ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ[3]

ಈ ಭಾಗ ಕುವೆಂಪು ಅವರ ಪ್ರತಿಭಾಸಂಸ್ಪರ್ಶದಿಂದ ಸೀತೆ ಪ್ರಕೃತಿಯೊಡನೆ ತಾದಾತ್ಮ್ಯಹೊಂದಿ ಅವಿನಾಭಾವವನ್ನು ಪಡೆದಂತೆ ರೂಪಿತವಾಗಿದೆ—

ಶೈಲಗತೆ
ತಾನೊರ್ಮೆ ಕಾಂತಾರಗತೆಯೊರ್ಮೆ ತರುಗತೆಯೊರ್ಮೆ
ಒರ್ಮೆ ಖಗಗತೆ ಒರ್ಮೆ ಮೃಗಗತೆ ತರಂಗಗತೆ
ಇನ್ನೊರ್ಮೆ ! ಒಮ್ಮೆ ಖಂಜನಪಕ್ಷಿ ಕೂಜಿತಳ್
ಒರ್ಮೆ ಕೋಕಿಲಕಂಠಭಾಷಿತಳ್ ಅದೊ ಅಲ್ಲಿ
ಸುಸಮೀರಲೋಲ ಕುಸುಮಿತ ಲತಾರಾಜಿತಳ್[4]

ನಾಗಚಂದ್ರನ ರಾಮಾಯಣದಲ್ಲಿ ಬರುವ ರಾವಣನ ಪಾತ್ರ ತನ್ನ ನವೀನತೆ ಯಿಂದ ಮಹತ್ವ ಪಡೆದಿದೆ. ವಾಲ್ಮೀಕಿಯ ರಾವಣ ದುಷ್ಟ, ಕ್ರೂರಿ, ಕಾಮುಕ. ನಾಗಚಂದ್ರನ ರಾವಣ ಮೂಲರಾಮಾಯಣದ ದುಷ್ಟತನವನ್ನು ಕಳೆದುಕೊಂಡು

---

1. ರಾಮಚಂದ್ರಚರಿತ ಪುರಾಣ ೧–೧೦೦ 2. ಶ್ರೀರಾಮಾಯಣದರ್ಶನಂ–ಪು. ೧೪
3. ರಾಮಚಂದ್ರ ಚರಿತಪುರಾಣ ೯–೧೧೮ 4. ಶ್ರೀ ರಾಮಾಯಣದರ್ಶನಂ ಪು, ೨೫೩

ದಯೆ, ಧರ್ಮ, ಗಾಂಭೀರ್ಯ ಮೊದಲಾದ ಗುಣಗಳ ಕೇಂದ್ರ. ಕುವೆಂಪು ಅವರ ರಾವಣ ಕೂಡ ನಾಗಚಂದ್ರನ ರಾವಣನ ಮೇಲ್ಪಂಕ್ತಿಯಲ್ಲಿ ರೂಪುಗೊಂಡಿದ್ದಾನೆ. ರಾವಣನ ಸಾಹಸಗಳಿಗಾಗಿ ನಾಗಚಂದ್ರನಲ್ಲಿ ಒಂದು ಸಂಧಿಯೆ ಮೀಸಲಾಗಿದೆ. ಕುವೆಂಪು ಅವರ 'ದಶಾನನ ಸ್ವಪ್ನ ಸಿದ್ಧಿ' 'ಅತ್ತಲಾದ್ಯೈತ್ಯ ಸಭೆಯೊಳ್' ಮೊದಲಾದ ಭಾಗಗಳಲ್ಲಿ ರಾವಣನ ಮಾನಸಿಕ ಪರಿಪಾಕ ಮತ್ತು ದೈಹಿಕ ಪರಾಕ್ರಮಗಳು ದಾಖಲಾಗಿವೆ. ಪಾತಾಳಲೋಕದಲ್ಲಿ ಪನ್ನಗರನ್ನು ನುಚ್ಚುನೂರಾಗಿಸಿದ್ದು, ಕುಬೇರನನ್ನು ಜಯಿಸಿ ಅವನ ಸಂಪತ್ತನ್ನು ಕೊಳ್ಳೆಹೊಡೆದದ್ದು, ತ್ರಿಪುರಾಸುರರಲ್ಲಿ ಒಬ್ಬನಾದ ಮಯನನ್ನು ಸಂಹರಿಸಿ ಆತನ ಮಗಳನ್ನು ಮದುವೆಯಾದದ್ದು, ರಸಾತಳವನ್ನು ಅಲ್ಲಾಡಿಸಿದ್ದು, ಯಮನ ಸೈನ್ಯವನ್ನು ಕೊಳ್ಳೆಹೊಡೆದದ್ದು ಇವೇ ಮೊದಲಾದ ಸಾಹಸಗಳು ದರ್ಶನಂ ನಲ್ಲಿ ಎಡೆಪಡೆದಿವ.

ನಾಗಚಂದ್ರನ ರಾವಣ ತನ್ನನ್ನು ಬಯಸಿ ಬಂದ ಉಪರಂಭೆಯನ್ನು ನಿರಾಕರಿಸಿ ಶೌಚಗುಣವನ್ನು ಮೆರೆಯುತ್ತಾನೆ. ಈತ ಸೀತಾಪಹರಣಕ್ಕೆ ಪೂರ್ವದಲ್ಲಿ ಪತಿವ್ರತಾ ವಿರತಿವ್ರತವನ್ನು ಸ್ವೀಕರಿಸಿದ್ದು ರಾವಣನ ಪಾತ್ರದ ದೃಷ್ಟಿಯಿಂದ ಮುಖ್ಯವಾದದ್ದು. ಕುವೆಂಪು ಅವರ ರಾವಣ ಸಹ ನಾಗಚಂದ್ರನ ರಾವಣನಷ್ಟೆ ಚೆಲುವ. ಈತನ ಸೌಂದರ್ಯಕ್ಕೆ ಅನೇಕ ಹದಿಬದೆಯರು ಮಾರುಹೋದರು. ಈ ಕಾರಣದಿಂದ ಕುವೆಂಪು ಅವರ ರಾವಣನಿಗೆ ಭೂಮಿಯಲ್ಲಿ ಹದಿಬದೆಯರೆ ಇಲ್ಲವೆಂಬ ದೃಢ ನಿಲುವು, 'ಹದಿಬದೆ ಯರಿಹರೆಂಬ ನಂಬುಗೆ ಸತ್ತುದೆನಗೆ, ಎಂಬ ಈತನ ಮಾತು ಮುಂದೆ ಈತನ ಮನಃ ಪರಿವರ್ತನೆಯ ದೃಷ್ಟಿಯಿಂದ ಗಮನಾರ್ಹವಾದುದ್ದು. 'ದರ್ಶನಂ'ನ ರಾವಣ ಹುಟ್ಟು ವಾಗಲೆ ಸ್ತ್ರೀಲೋಲುಪತೆಯನ್ನು ಹೊತ್ತುಕೊಂಡು ಬಂದಿರುತ್ತಾನೆ. ಅದನ್ನು ತೊಡೆಯಲೋಸುಗ ರಾವಣ ನಿಷ್ಠೆಯನ್ನು ಸ್ವೀಕರಿಸಿದ ಮಾತು ಕುವೆಂಪು ಅವ ರಲ್ಲಿಯೂ ಕಂಡುಬರುತ್ತದೆ—

> ...ಪುಟ್ಟುವಾಗಳೆಯೆ ನಾಂ
> ನೆತ್ತರೊಳೆ ಪೆಣ್ಣೊಡಲಿನಾಸೆಯಾ ಬೇಟಮಂ
> ಪೊತ್ತು ಪುಟ್ಟಿದೆನ್ನೆಸೆ ! ಜನ್ಮದೌರ್ಬಲ್ಯಮಂ
> ಜಯಿಸಲೆಂದಾನೆನಿತನಿತೊ ನಿಟ್ಟೆಯಂ ಪಟ್ಟು
> ಬೇಯಿಸಿದೆನಾತ್ಮಮಂ.[1]

ಇಂಥ ರಾವಣ ಕ್ಷಣಿಕ ದೌರ್ಬಲ್ಯಕ್ಕೆ ವಶನಾಗಿ ಸೀತೆಯನ್ನು ಮೋಹಿಸುತ್ತಾನೆ, ಅಪಹರಿಸುತ್ತಾನೆ. ಚಾವುಂಡರಾಯ ಪುರಾಣದಲ್ಲಿ ಸೀತಾಪಹರಣವಾಗುವುದು ರಾಮ ರೂಪಿ ರಾವಣನಿಂದ—"ಇತ್ತ ರಾವಣಂ ರಾಮವೇಷಧರನಾಗಿ ಸೀತೆಯಲ್ಲಿಗೆ ವಂದು ಮಣಿಮೃಗಪೋತಕಮಂ ಪಿಡಿದು ಪೋಟಲ್ಗಟ್ಟಿದೆನೀಗಳಸ್ತಮಯ ಸಮಯಮಾದುದು

1. ಶ್ರೀ ರಾಮಾಯಣದರ್ಶನಂ : ಪು. ೩೩೭

ಪೊಟಿಲ್ಗೆ ಪೋಪಂ ಸಿವಿಗೆಯನೇಱೆಂಬುದುಂ ಶಿಬಿಕಾಕಾರಮಾಗಿರ್ದ ಪುಷ್ಪಕವಿಮಾನವ ನೇಱೆ''[1] ಎಂದಿದೆ. ಈ ಭಾಗಕ್ಕೆ ವ್ಯಾಖ್ಯಾನವೆಂಬಂತೆ ಶ್ರೀ ರಾಮಾಯಣದರ್ಶನಂನಲ್ಲಿ ರಾವಣನನ್ನು ರಾಮತ್ವದ ಒಂದು ಅಂಶ ಎಂದು ಪರಿಗಣಿಸಲಾಗಿದೆ. ದರ್ಶನಂನಲ್ಲಿನ ರಾಮ ಸೀತಾಪಹರಣವನ್ನು ಪ್ರಸ್ತಾಪಿಸುತ್ತ—

ನಾನೆ ಅವನಲ್ಲದಿರೆ ಆ ದಶಗ್ರೀವಂಗದೇನ್
ಸೀತೆಯನ್ನೊಲಿವುದುಂ ಮೋಣವಳನುಯ್ವುದುಂ
ಕೇಳ್ ಮೊರ್ಗೆ[2]

ಎಂದು ಹೇಳಿರುವಲ್ಲಿ ಚಾವುಂಡರಾಯ ಪುರಾಣದ ಆಶಯವೆ ಅಡಗಿದೆ. ಸೀತೆಗೆ ರಾವಣ ಅದೆಷ್ಟು ಆಸೆ ಆಮಿಷಗಳನ್ನು ಒಡ್ಡಿದ. ಆದರೂ ಆಕೆ ಈತನಿಗೆ ಒಲಿಯದಾದಳು. ಪರಾಂಗನಾವಿರತಿವ್ರತವನ್ನು ಸ್ವೀಕರಿಸಿದ್ದರಿಂದ ನಾಗಚಂದ್ರನ ರಾವಣ ಸೀತೆಯನ್ನು ಬಲಾತ್ಕರಿಸಲಾರ. 'ದರ್ಶನಂ' ನಲ್ಲಿ ಪರಾಂಗನಾವಿರತಿವ್ರತದ ಪ್ರಸ್ತಾಪ ಪರಿಣಾಮ ಗಳನ್ನು ನಿರೂಪಿಸದಿದ್ದರೂ ಇದೇ ಭಾವವನ್ನು ರಾವಣ ಸೀತೆಯನ್ನು ಬೆದರಿಸಿದಾಗ ತ್ರಿಜಟೆಯ ಮೂಲಕ—

ಬಲ್ಲೆ ನಾನಾತನಂ
ಬಲದಿನೆಳೆತಂದೊಡಂ ಬಲದೊಳೊಡವೆರೆವನಿತು
ಪಶುಮಾತ್ರನಲ್ತು ; ಕಾಮುಕನಪ್ಪೊಡಂ ಮೆಚ್ಚಿ
ಬಗೆ ಸೋಲ್ತರನ್ನಲ್ಲದೆಯೆ : ಸೋಂಕನಾವಗಂ
ಕಠಿಣನಾದೊಡಮಸಂಸ್ಕೃತನಲ್ತು : ನಾರಿಯುಂ
ಮಿಾರಿ ಕೂಡುವ ಪೇಡಿಯಲ್ತು[3]

ಎಂದು ಹೇಳಿಸುವಲ್ಲಿ ಪಂಪರಾಮಾಯಣದ ರಾವಣನ ಗುಣವನ್ನು ಉಜ್ವಲಗೊಳಿಸ ಲಾಗಿದೆ.

ಸೀತೆಯನ್ನು ಒಲಿಸಿಕೊಳ್ಳುವುದು ಸಾಧ್ಯವಾಗದಿದ್ದಾಗ ನಾಗಚಂದ್ರನ ರಾವಣ ಬಹುರೂಪಿಣೀ ವಿದ್ಯೆಯನ್ನು ಸಾಧಿಸಿ ಸೀತೆಯನ್ನು ಭೇಟಿಮಾಡಲು ಆಕೆ ಮೂರ್ಛೆ ಹೋಗುತ್ತಾಳೆ. ಈ ಪ್ರಸಂಗ ರಾವಣನ ಮನಸ್ಸನ್ನು ಕಲಕುತ್ತದೆ. ಆ ಕ್ಷಣದಿಂದ ಅವಳ ಮೇಲಣ ಮೋಹ ಮಾಯವಾಗಿ ಆ ಸ್ಥಳದಲ್ಲಿ ದಯೆ ಅನುಕಂಪೆ ಕರುಣೆಗಳು ಮೂರ್ತಿವೆತ್ತುತ್ತವೆ. ತನ್ನ ತಪ್ಪಿನ ಅರಿವಾಗುತ್ತದೆ. ಕುವೆಂಪು ಅವರಲ್ಲಿ ಬಹುರೂಪಿಣೀ ವಿದ್ಯೆಯ ಉಲ್ಲೇಖವಿಲ್ಲ. ಇಲ್ಲಿ ರಾವಣನನ್ನು ವಿಚಲಿತನನ್ನಾಗಿ ಮಾಡುವವಳು ಮಂಡೋದರಿ ಎಂದು ಬದಲಾಯಿಸಿಕೊಳ್ಳಲಾಗಿದೆ. ಸೀತೆಯನ್ನು ಕದ್ದು ತಂದ ಬಳಿಕ ಲಂಕೆಯಲ್ಲಾದ ದುಶ್ಯಕುನಗಳು ಮಂಡೋದರಿಗೆ ಆತಂಕವನ್ನೊಡ್ಡುತ್ತವೆ. ಆಕೆಯು

1. ಚಾವುಂಡರಾಯಪುರಾಣಂ : ಪು. ೨೮೮ 2. ಶ್ರೀ ರಾಮಾಯಣದರ್ಶನಂ: ಪು ೭೫೨
3. ಶ್ರೀರಾಮಾಯಣದರ್ಶನಂ ಪು. ೪೮೬

ಸಂವೇದನಶೀಲ ಮನಸ್ಸು ಭವಿಷ್ಯದಲ್ಲಿ ಒದಗಬಹುದಾದ ಗಂಡಾಂತರವನ್ನು ನೆನೆದು ಭೀತಿಯ ಮಡುವಾಗುತ್ತದೆ. ಆಕೆ ಮನಶ್ಶಾಂತಿಗಾಗಿ ಶಿವಶಿವೆಯರ ಪಾದಗಳಿಗೆರಗುತ್ತಾಳೆ. ಆಕಸ್ಮಿಕವಾಗಿ ಕೇಳಿ ಬಂದ ಹನುಮಂತನ 'ರಾಮಚಂದ್ರಂ ಗೆಲ್ಗೆ! ಜನಕ ನಂದಿನಿ ಬಾಳ್ಗೆ' ಎಂಬ ಘೋಷಣೆ ಮಂಡೋದರಿಯ ಭೀತಿಯನ್ನು ಅಧಿಕಗೊಳಿಸುತ್ತದೆ. ಆಕೆ ಭಯದಿಂದ ಚೀರುತ್ತಾಳೆ. ಇವಳ ಭೀತಿ, ಚೀರುವಿಕೆಗೆ ರಾವಣನ ಚಿತ್ತವೂ ಕದಲುವುದು. ಜೊತೆಗೆ ಮಂಡೋದರಿ ಸೀತೆಯನ್ನು ಭೇಟಿಮಾಡಿದ ಸಂಗತಿ ಆತನನ್ನು ಪ್ರಪಾತಕ್ಕೆ ತಳ್ಳುತ್ತದೆ. ಆಕ್ಷಣವೇ ರಾವಣ—

ಕೆಟ್ಟೆ ನಾನ್ ! ಕೊಂದೆ ನೀಂ !
ಹಿಂದೆಂದು ಸೋಲರಿಯದೆನ್ನವಗ್ ಮಯಕುಮಾರಿ
ನೀಂ ಸೋಲಿಸಿದೆ, ಶುಭಕೆ ! ಕೇಳ್ ದೇವಿ ಪೇಳ್ದಪೆನ್
ರಣರಂಗವಾಗಿರ್ಪುದೆನ್ನ ಹೃದಯಂ ಹಿತಕೆ
ಮೇಣ್ ಪ್ರಿಯಕೆ, ರುಚಿಗೆ ಮೇಣ್ ಶುಚಿಗೆ[1]

ಎಂದು ಆತನ ಮನದಲ್ಲಿ ಗೊಂದಲ ಉಂಟಾಗುತ್ತದೆ. ಈ ಘಟನೆಯ ಬಳಿಕ ಆತ ಭ್ರಮೆಯಿಂದ ವಿಮುಕ್ತನಾಗುವತ್ತ ಸಾಗುತ್ತಾನೆ. ಮಂಡೋದರಿ, ವಿಭೀಷಣ, ಅನಲೆ, ಚಂದ್ರನಖಿಯರು ರಾವಣನಿಗೆ ಪರಿಪರಿಯಾಗಿ ಬುದ್ಧಿ ಹೇಳುತ್ತಾರೆ. ಹಿತೈಷಿಗಳ ಪ್ರಾರ್ಥನೆಯಿಂದ ರಾವಣ ಕ್ರಮೇಣ ಪರಿವರ್ತನೆ ಹೊಂದುತ್ತಾನೆ. ಜೈನರಾಮಾಯಣದ ರಾವಣನಂತೆ ಕುವೆಂಪು ಅವರ ರಾವಣನಿಗೂ ಸೀತೆಯ ಬಗೆಗೆ ಪೂಜ್ಯಭಾವನೆ ಉಂಟಾಗುತ್ತದೆ.

ನನಗೆ ದೇವತೆ ಮಾತೆ ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ ಪುಣ್ಯಮಾತೆ[2]

ಸೀತೆಯನ್ನು ರಾಮನಿಗೆ ಒಪ್ಪಿಸುವ ಮನಸ್ಸು ರಾವಣನಿಗಾದರೂ ಅಭಿಮಾನ ಮುಳುವಾಗುತ್ತದೆ. ರಾವಣನಲ್ಲಿ ಉಂಟಾಗುವ ಪಶ್ಚಾತ್ತಾಪದ ಪರಿಯನ್ನೂ ಅಭಿಮಾನದ ತಿರುವನ್ನೂ ನಾಗಚಂದ್ರನು ಹೀಗೆ ವರ್ಣಿಸಿದ್ದಾನೆ—

ಇರದುಯ್ದೀಗಳೆ ಕೊಟ್ಟೊಡೆನ್ನ ಕಡುಪುಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕುದೋಸರಿಸಿದಂತಾಗಿರ್ಕುಮಂತಾಗದಂ
ತಿರೆ ದೋರ್ಗರ್ವಮನಿರ್ವಲಂ ಪೊಗಟ್ಟಿನಂ ಸೌಮಿತ್ರಿಯುಂ ರಾಮನಂ
ವಿರಥರ್ಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ[3]

ರಣರಂಗದಲ್ಲಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ಸೀತೆಯನ್ನು ರಾಮನಿಗೆ ಕೊಡಬೇಕೆನ್ನುವ ಈತನ ಇಂಗಿತಕ್ಕೆ ಸಂವಾದಿಯಾಗಿ ಶ್ರೀ ರಾಮಾಯಣದರ್ಶನಂನಲ್ಲಿನ ರಾವಣನು

---

1. ಶ್ರೀರಾಮಾಯಣದರ್ಶನಂ. ಪು 2. ಅದೇ ಪುಟ ೭೯೮

3. ರಾಮಚಂದ್ರಚರಿತಪುರಾಣಂ: ೧೪–೧೧೯

ಮಂಡೋದರಿಗೆ 'ಕ್ಷಾತ್ರತೇಜಸ್ಸು ತಾನಾಗಿ ಸೋಲನ್ನು ಬಯಸುವುದಿಲ್ಲ. ನಾನು ಮೊದಲು ಸೀತೆಯನ್ನು ಅವಳ ಸೌಂದರ್ಯಕ್ಕಾಗಿ ಮೋಹಿಸಿದೆ. ಅವಳು ಸ್ನಾನ ಭೋಜನಗಳನ್ನು ತೊರೆದು ಅದನ್ನು ಕಂದಿಸಿದಳು. ಈಗ ಛಲ ಮಾತ್ರ ಉಳಿದಿದೆ' ಎನ್ನುತ್ತಾನೆ. ನಾಗಚಂದ್ರನಲ್ಲಿ ರಾವಣನು ರಾಮನಿಗೆ ಸೀತೆಯನ್ನು ಕಾಣಿಕೆಯಾಗಿ ಕೊಡುತ್ತೇನೆನ್ನುವುದನ್ನು ಕುವೆಂಪು ಅವರು ಬದಲಾವಣೆ ಮಾಡಿಕೊಂಡು ರಣರಂಗ ದಲ್ಲಿ ರಾಮನನ್ನು ಗೆದ್ದು ಸೀತೆಗೆ ಕಾಣಿಕೆ ನೀಡುವೆನೆಂದು ಹೇಳಿಸಿದ್ದಾರೆ—

**ರಘುಕುಲಲಲಾಮನಂ ಜಗದೇಕವೀರನಂ**
**ಗೆಲ್ದು ಸೆರೆಯಾಳ್ ಮಾಡಿ ತಂದು ಲಂಕೇಶ್ವರನ**
**ಸರ್ವಗರ್ವವನಿರದೆ ಸೋಲಿಸಿದ ಮೈಥಿಲಿಗೆ**
**ಕಪ್ಪಮನೆ ಕಾಣಿಕೆಯನೊಪ್ಪಿಸುವ ಭವ್ಯತಾ**
**ದಿವ್ಯದೃಶ್ಯಂ**[1]

ಮುಂದೆ ನಾಗಚಂದ್ರನ ರಾಮಾಯಣದಲ್ಲಿ ಜೈನಧರ್ಮಕ್ಕನುಗಣವಾಗಿ ಲಕ್ಷ್ಮಣನಿಂದ ರಾವಣ ವಧೆಯನ್ನು ಚಿತ್ರಿಸಲಾಗಿದೆ.

ಹೀಗೆ ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂನಲ್ಲಿ ಜೈನರಾಮಾಯಣದ ಪರಂಪರೆ ಗುಪ್ತಗಾಮಿನಿಯಾಗಿ ಪ್ರಭಾವ ಬೀರಿರುವುದನ್ನು ಗುರುತಿಸಬಹುದು. ಕೆಲವು ಸಂದರ್ಭಗಳಲ್ಲಿ ಇವೆರಡೂ ಕೃತಿಗಳು ಸಮಾನಾಂತರ ರೇಖೆಯಲ್ಲಿ ಸಾಗಿವೆ. ಕುವೆಂಪು ಅವರು ತಮ್ಮ ಅನನ್ಯಶಕ್ತಿಯಿಂದ 'ಕನ್ನಡದಿ ಬೇರೆ ಕಥೆಯೆಂಬಂತೆ ಬೇರೆ ಮೈಯಾಂತಂತೆ' ನಿರ್ವಹಿಸಿರುವುದರಲ್ಲಿ ಜೈನರಾಮಾಯಣದ ಕೊಡುಗೆಯೂ ಇರುವು ದನ್ನು ನಿರಾಕರಿಸುವಂತಿಲ್ಲ.

**ವೈ. ಸಿ. ಭಾನುಮತಿ**



1. ಶ್ರೀರಾಮಾಯಣದರ್ಶನಂ, ಪು. ೭೩೭

# ವೈದಿಕರಾಮಾಯಣ – ಶ್ರೀರಾಮಾಯಣ ದರ್ಶನಂ

ಕಾಲದಿಂದ ಕಾಲಕ್ಕೆ ಸಂಸ್ಕೃತಿ ಬದಲಾದಂತೆ, ಜನರ ಬುದ್ಧಿಮಟ್ಟ ಬದಲಾದಂತೆ, ಜೀವನಮೌಲ್ಯಗಳು ಬದಲಾದಂತೆ, ಜೀವನದ ಬಗೆಗಿನ ದೃಷ್ಟಿಕೋನ ಬದಲಾದಂತೆ ಒಂದು ಜನಪ್ರಿಯಕಥೆಯು ಅವುಗಳಿಗನುಗುಣವಾಗಿ ತಾನೂ ಸಹಜವಾಗಿಯೇ ವಿವಿಧ ಮಾರ್ಪಾಡುಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತ ಹೋಗುತ್ತದೆ ; ಅಂತೆಯೇ ವಿವಿಧ ರೂಪಗಳನ್ನು ಕೂಡ ತಳೆಯುತ್ತದೆ. ರಾಮಾಯಣದ ವಿಚಾರದಲ್ಲಂತೂ ಇದು ಸ್ಪಷ್ಟವಾಗಿದೆ. ವಿವಿಧ ದೇಶಗಳ, ವಿವಿಧ ಭಾಷೆಗಳ, ವಿವಿಧ ಕಾಲಗಳ, ವಿವಿಧ ಕವಿಗಳ ಕೈಯಲ್ಲಿ ಅದು ಇಂತಹ ಹಲವಾರು ಮಾರ್ಪಾಡುಗಳನ್ನು ಮೈಗೂಡಿಸಿಕೊಂಡು ಬೆಳೆದುಬಂದಿದೆ. ಮತಾನುಗುಣವಾಗಿಯಂತೂ ವೈದಿಕ, ಜೈನ, ಬೌದ್ಧ ಎಂಬ ತ್ರಿವೇಣಿಗಳಾಗಿ ಒಡೆದು ಪ್ರವಹಿಸಿದೆ. ವೈದಿಕದಲ್ಲಿ ಕೂಡ ಅದ್ವೈತಾದಿ ಸಿದ್ಧಾಂತಗಳಿಗನುಗುಣವಾಗಿ ವಿವಿಧ ಬದಲಾವಣೆಗಳು ಉಂಟಾಗಿವೆ. ಹೀಗಾಗಿ ಇಂದು ನಮಗೆ ಹಲವಾರು ರಾಮಾಯಣಗಳು ದೊರಕುತ್ತವೆ. ಇವುಗಳ ಪೈಕಿ ವೈದಿಕಸಂಪ್ರದಾಯದ ಪ್ರಮುಖ ಸಂಸ್ಕೃತ ರಾಮಾಯಣಗಳನ್ನಷ್ಟೇ ಆಯ್ದುಕೊಂಡು ಅವುಗಳೊಡನೆ, ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಅನ್ನು ಹೋಲಿಸಿ ನೋಡುವುದು ಪ್ರಕೃತದ ಉದ್ದೇಶ. ವಾಲ್ಮೀಕಿ ರಾಮಾಯಣದ ಬಗ್ಗೆ ಬೇರೆಯ ಪ್ರಬಂಧದಲ್ಲಿ ವಿವೇಚಿಸಲಿರುವುದರಿಂದ ಅದನ್ನು ಇಲ್ಲಿ ಕೈಬಿಡಲಾಗಿದೆ.

ಇನ್ನು, ಅಧ್ಯಯನಕ್ಕೆ ತೊಡಗುವ ಮೊದಲು, ಅದಕ್ಕಾಗಿ ಆಯ್ದುಕೊಂಡಿರುವ ಈ ವಿವಿಧ ರಾಮಾಯಣಗಳನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡಬೇಕಾದುದು ಅಗತ್ಯ. ವಾಲ್ಮೀಕಿ ರಾಮಾಯಣದ ಅನಂತರದಲ್ಲಿ ರಚಿತವಾದ ರಾಮಾಯಣಗಳ ಪೈಕಿ ಅಧ್ಯಾತ್ಮರಾಮಾಯಣ, ಆನಂದ ರಾಮಾಯಣ ಮತ್ತು ಅದ್ಭುತರಾಮಾಯಣ ಇವು ಪ್ರಮುಖವಾದುವು. ಮೊದಲಿಗೆ ಅಧ್ಯಾತ್ಮರಾಮಾಯಣ. ಇದರ ಕಾಲ ಕ್ರಿ.ಶ. ಸು. ೧೫ನೆಯ ಶತಮಾನ. ಶಂಕರಾಚಾರ್ಯರ ಅದ್ವೈತವೇದಾಂತದ ಆಧಾರದ ಮೇಲೆ ರಾಮಭಕ್ತಿಯನ್ನು ಪ್ರತಿಪಾದಿಸುತ್ತ ವಾಲ್ಮೀಕಿಯ ರಾಮಕಥೆಯಲ್ಲಿ ಕಿಂಚಿತ್ ಬದಲಾವಣೆಗಳನ್ನು ಮಾಡಿರುವುದು ಇಲ್ಲಿಯ ವಿಶೇಷ. ಹಿಂದಿಯ 'ರಾಮಚರಿತಮಾನಸ'ಕ್ಕೆ ಇದು ಮುಖ್ಯ ಆಕರ ಗ್ರಂಥ. ಸಮಸ್ತರಚನೆಯೂ ಪಾರ್ವತೀ ಪರಮೇಶ್ವರರ ಸಂವಾದದ ರೂಪದಲ್ಲಿರುವುದು, ನಾರದನು ಬ್ರಹ್ಮನಿಂದ ಈ ಸಂವಾದವನ್ನು ಕೇಳಿದನೆಂಬುದು, ರಾಮನು, ಪರಬ್ರಹ್ಮ–ಸೀತೆಯು ಮೂಲಪ್ರಕೃತೀಯೋಗಮಾಯೆ–ಲಕ್ಷ್ಮಣನು ಶೇಷನ ಅವತಾರ–ಎಂಬುದು ಉದ್ದಕ್ಕೂ ಪ್ರತಿಪಾದಿತವಾಗಿರುವುದು,

ವಿಶ್ವಾಮಿತ್ರ, ವಸಿಷ್ಠ, ಜನಕ, ಕೌಸಲ್ಯೆ, ಕುಂಭಕರ್ಣ, ರಾವಣ ಮುಂತಾದವರೆಲ್ಲ ರಾಮಾವತಾರದ ರಹಸ್ಯವನ್ನು ತಿಳಿದಿದ್ದರೆಂಬುದು, ರಾಮನ ಬಾಲಲೀಲೆಗಳು ಮತ್ತು ಅವನು ಕೌಸಲ್ಯೆಗೆ ತನ್ನ ವಿಷ್ಣುರೂಪವನ್ನು ತೋರಿಸುವುದು ಇತ್ಯಾದಿಗಳಲ್ಲಿ ಭಾಗವತದ ಅನುಕರಣವಿರುವುದು, ಯೌವರಾಜ್ಯಾಭಿಷೇಕಕ್ಕೆ ಮೊದಲು ರಾಮ–ನಾರದರ ಸಂವಾದ, ಮಂಥರೆಯಲ್ಲಿ ಸರಸ್ವತಿಯು ಪ್ರವೇಶಿಸುವುದು, ರಾಮನಾಮ ಮಹಾತ್ಮ್ಯೆಯನ್ನು ತೋರಿಸುವ ಸಲುವಾಗಿ ವಾಲ್ಮೀಕಿಯು ತನ್ನ ಜೀವನ ಚರಿತ್ರೆಯನ್ನು ಹೇಳುವುದು, ಮಾಯಾಮಯೀ ಸೀತೆಯ ಹರಣವೃತ್ತಾಂತ, ಲಕ್ಷ್ಮಣನು ೧೨ ವರ್ಷ ಉಪವಾಸ ಮಾಡಿದನೆಂಬುದು, ಸೇತುಬಂಧಕ್ಕೆ ಮೊದಲು ರಾಮನು ಶಿವಲಿಂಗವನ್ನು ಸ್ಥಾಪಿಸುವುದು, ಕಾಲನೇಮಿಯ ವೃತ್ತಾಂತ, ಶುಕ್ರನ ಆದೇಶದಂತೆ ರಾವಣನು ಯಜ್ಞ ಮಾಡಲಾರಂಭಿಸುವುದು, ಅಂಗದನು ಆ ಯಜ್ಞವನ್ನು ಭಂಗಗೊಳಿಸುವುದು, ರಾವಣನ ನಾಭಿದೇಶದಲ್ಲಿ ಅಮೃತವಿರುವುದರ ಉಲ್ಲೇಖ, ವೈಕುಂಠವನ್ನು ಸೇರುವ ಉದ್ದೇಶ ದಿಂದಲೇ ರಾವಣನು ಸೀತೆಯನ್ನು ಅಪಹರಿಸಿದನೆಂಬ ಉಲ್ಲೇಖ-ಇವು ಇದರಲ್ಲಿ ಗಮನಿಸಬೇಕಾದ ಪ್ರಮುಖ ಅಂಶಗಳು.

ಅಧ್ಯಾತ್ಮ ರಾಮಾಯಣದ ರಚನೆಯನಂತರ, ಆದರೆ ಏಕನಾಥನಿಗಿಂತ (ಕ್ರಿ.ಶ. ೧೬ನೆಯ ಶತಮಾನ) ಹಿಂದೆ, ಆನಂದ ರಾಮಾಯಣವು ರಚಿತವಾಗಿದೆ. ಹೆಚ್ಚಿನ ಮಟ್ಟಿಗೆ ೧೫ನೆಯ ಶತಮಾನದಲ್ಲಿ ರಚಿತವಾಗಿದೆಯೆಂದು ಊಹಿಸಲಾಗುತ್ತದೆ. ಇದರಲ್ಲಿ ಹಲವು ಕಡೆಗಳಲ್ಲಿ ಅಧ್ಯಾತ್ಮರಾಮಾಯಣದ ಉಲ್ಲೇಖಗಳು ಬರುತ್ತವೆ. ಅಂತೆಯೇ ಹಲವು ವಿಚಿತ್ರಕಥೆಗಳಿಗೆ ಕೂಡ ಅಲ್ಲಿ ಎಡೆ ದೊರತಿದೆ. ಹೀಗಾಗಿ ೧೨೨೫೨ ಶ್ಲೋಕಗಳಷ್ಟು ವಿಸ್ತಾರವಾಗಿ ಈ ಕೃತಿ ಹಬ್ಬಿದೆ. ಇದರಲ್ಲಿ ಒಂಬತ್ತು ಕಾಂಡಗಳಿವೆ. ಮೊದಲನೆಯದಾದ ಸಾರಕಾಂಡದಲ್ಲಿ, ದಶರಥ ಕೌಸಲ್ಯೆಯರ ವಿವಾಹವೃತ್ತಾಂತ, ರಾವಣನು ಕೌಸಲ್ಯೆಯನ್ನು ಕದ್ದೊಯ್ದಿದ್ದ ವೃತ್ತಾಂತ,ದೇವದಾನವ ಯುದ್ಧದಲ್ಲಿ ಕೈಕೇಯಿಗೆ ವರ ಪ್ರಾಪ್ತಿ, ಶ್ರವಣನ ವಧೆ, ದಶರಥನ ಯಜ್ಞ, ರಾಮನ ಬಾಲಲೀಲೆ, ಅಹಲ್ಯೋದ್ಧಾರ, ಸೀತಾಸ್ವಯಂವರ, ಸೀತೆಯ ಜನ್ಮಕಥೆ, ರಾವಣನು ಶಿವನಿಂದ ಆತ್ಮಲಿಂಗವನ್ನೂ ಪಾರ್ವತಿಯನ್ನೂ ಪಡೆದ ವೃತ್ತಾಂತ, ರಾಮ ಲಕ್ಷ್ಮಣರನ್ನು ಐರಾವಣ ಮೈರಾವಣರು ಪಾತಾಳಕ್ಕೆ ಎತ್ತಿಕೊಂಡು ಹೋಗುವುದು, ಹನುಮಂತನು ಅವರನ್ನು ಬಿಡಿಸುವುದು, ಸುಲೋಚನೆಯ ಕಥೆ, ಮುಕ್ತಿ ಪಡೆಯುವ ಉದ್ದೇಶದಿಂದ ರಾವಣನು ಸೀತೆಯನ್ನು ಕದ್ದೊಯ್ಯುವುದರ ಉಲ್ಲೇಖ–ಇವೆಲ್ಲ ವರ್ಣಿತವಾಗಿವೆ. ವಾಲ್ಮೀಕಿರಾಮಾಯಣದ ಉತ್ಪತ್ತಿ, ರಾಮನು ನಾಲ್ಕೂ ದಿಕ್ಕುಗಳಲ್ಲಿ ಮಾಡಿದ ತೀರ್ಥಯಾತ್ರೆಯ ವರ್ಣನೆ–ಇವು ಎರಡನೆಯದಾದ ಯಾತ್ರಾಕಾಂಡದಲ್ಲಿ ಬಂದಿವೆ. ಮೂರನೆಯದಾದ ಯಾಗಕಾಂಡದಲ್ಲಿ ರಾಮನ ಅಶ್ವಮೇಧದ ವರ್ಣನೆಯಿದೆ. ನಾಲ್ಕನೆಯದಾದ ವಿಲಾಸಕಾಂಡದಲ್ಲಿ ಶಂಕರ ಕೃತ ರಘುವೀರಸ್ತವ, ಸೀತೆಯ ನಖಶಿಖಾಂತ ವರ್ಣನೆ, ಸೀತಾಲಂಕಾರ, ಜಲಕ್ರೀಡೆ,

ಸೀತಾರಾಮರ ದಿಸಚರ್ಯೆ, ತನ್ನಲ್ಲಿ ಕಾಮಪೀಡಿತರಾಗಿದ್ದ ದೇವಪತ್ನಿಯರಿಗೆ ತನ್ನ ಕೃಷ್ಣಾವತಾರ ಸಮಯದಲ್ಲಿ ಗೋಪಿಯರಾಗಿ ಜನಿಸುವಂತೆ ತಿಳಿಸಿ ಆಗ ತಾನು ಅವರ ಬಯಕೆ ಪೂರೈಸುವುದಾಗಿ ರಾಮನು ಆಶ್ವಾಸನೆ ನೀಡುವುದು, ರಾಮನು ಸೀತೆಯೊಡನೆ ಕುರುಕ್ಷೇತ್ರದ ಯಾತ್ರೆ ಮಾಡುವುದು ಮುಂತಾದ ವಿಚಾರಗಳಿವೆ. ಐದನೆಯದಾದ ಜನ್ಮಕಾಂಡದಲ್ಲಿ ಸೀತಾಪರಿತ್ಯಾಗ, ಕುಶಜನ್ಮ, ವಾಲ್ಮೀಕಿಯಿಂದ ಲವನ ಸೃಷ್ಟಿ, ಲವಕುಶರ ಕಾಳಗ, ಸೀತೆಯ ಭೂಪ್ರವೇಶ, ಊರ್ಮಿಳೆ, ಮಾಂಡವಿ, ಶ್ರುತಕೀರ್ತಿಯರಿಗೆ ಇಬ್ಬಿಬ್ಬರು ಮಕ್ಕಳಾಗುವುದು ಇವೆಲ್ಲ ಬಂದಿವೆ. ಆರನೆಯದಾದ ವಿವಾಹ ಕಾಂಡದಲ್ಲಿ ರಾಮಾದಿಗಳ ಮಕ್ಕಳಿಗೆ ನಡೆಯುವ ವಿವಾಹಗಳ ವರ್ಣನೆಯಿದೆ. ಏಳನೆಯದಾದ ರಾಜ್ಯಕಾಂಡದಲ್ಲಿ ರಾಮನ ರಾಜ್ಯಾಡಳಿತದ ವಿಸ್ತಾರವಾದ ವರ್ಣನೆ, ವಿಜಯಯಾತ್ರೆಗಳ ಹಾಗೂ ರಾಜನೀತಿಯ ವರ್ಣನೆಗಳು, ಶತಕಂಠರಾವಣನಿಂದ ರಾಮನ ಪರಾಜಯ, ಸೀತೆಯಿಂದ ಶತಕಂಠರಾವಣನ ವಧೆ, ಚಂಡಿಯ ರೂಪದಿಂದ ಸೀತೆಯು ಮೂಲ ಕಾಸುರನನ್ನು ವಧಿಸುವುದು, ವಾಲ್ಮೀಕಿಯ ಪೂರ್ವಜನ್ಮಗಳ ವಿಚಾರ ಮುಂತಾದ ವಿಚಾರಗಳಿವೆ. ಎಂಟನೆಯದಾದ ಮನೋಹರ ಕಾಂಡದಲ್ಲಿ ರಾಮಾಯಣದ ಕಥೆ ಯೇನೂ ಇಲ್ಲ. ರಾಮೋಪಾಸನ ವಿಧಿ, ರಾಮನಾಮದ ಮಾಹಾತ್ಮ್ಯ, ಚೈತ್ರಮಹಿಮೆ, ರಾಮಕವಚ ಮುಂತಾದ ಅನ್ಯವಿಷಯಗಳು ಮಾತ್ರ ಇವೆ. ಒಂಬತ್ತನೆಯದಾದ ಪೂರ್ಣಕಾಂಡದಲ್ಲಿ ಸೋಮವಂಶದ ರಾಜರ ಆಕ್ರಮಣ, ಯುದ್ಧ ಮತ್ತು ಅನಂತರ ಅವರೊಡನೆ ಸಂಧಿಮಾಡಿಕೊಳ್ಳುವುದು, ಕುಶನಿಗೆ ಅಭಿಷೇಕ, ರಾಮಾದಿಗಳು ವೈಕುಂಠಾ ರೋಹಣ ಮಾಡುವುದು—ಈ ವಿಚಾರಗಳೆಲ್ಲ ಬಂದಿವೆ. ಒಟ್ಟಾರೆ, ಭಾಗವತದ ಪ್ರಭಾವ ಇದರ ಮೇಲೆ ವಿಶೇಷವಾಗಿ ಆಗಿದೆಯೆನ್ನಬಹುದು.

ಅದ್ಭುತ ರಾಮಾಯಣವು ಅಧ್ಯಾತ್ಮ ರಾಮಾಯಣವು ರಚಿತವಾದ ಸ್ವಲ್ಪಕಾಲದ ನಂತರದಲ್ಲಿ ರಚಿತವಾಗಿರಬೇಕೆಂದು ಹೇಳಲಾಗುತ್ತದೆ. ಒಟ್ಟುರೂಪದಲ್ಲಿ ಇದು ಕೂಡ ವಾಲ್ಮೀಕಿ ರಾಮಾಯಣಕ್ಕಿಂತ ಬಹಳ ಭಿನ್ನವಾಗಿದೆ. ಇದರ ಭೂಮಿಕೆಯಲ್ಲಿ, ಸಮಸ್ತ ವೃತ್ತಾಂತವನ್ನೂ ವಾಲ್ಮೀಕ ಭಾರದ್ವಾಜರ ಸಂವಾದದ ರೂಪದಲ್ಲಿ ನಿರೂಪಿಸಲಾಗಿದೆ. ರಾಮಾವತಾರಕ್ಕೆ ಕಾರಣ, ವಾಲ್ಮೀಕಿಯ ಚರಿತ ಮತ್ತು ಸಹಸ್ರಮುಖರಾವಣ ವಧೆ ಎಂಬುದಾಗಿ ಇದರ ಕಥಾವಸ್ತುವನ್ನು ಮೂರು ವಿಭಾಗಗಳಾಗಿ ವಿಂಗಡಿಸಿಕೊಳ್ಳ ಬಹುದು. ನಾರದ ಪರ್ವತರು ನಾರಾಯಣನಿಗೂ ಶ್ರೀಮತಿಗೂ ಶಾಪ ಕೊಡುವುದು, ಶ್ರೀಮತಿ ನಾರಾಯಣರೇ ಸೀತಾರಾಮರಾಗಿ ಜನಿಸುವುದು, ಲಕ್ಷ್ಮಿಯಿಂದ ಅವಮಾನಿತ ನಾದ ನಾರದನು ಅವಳಿಗೆ ಶಾಪಕೊಡುವುದು, ಅದರ ಫಲವಾಗಿ ಅವಳು ಮಂಡೋದರಿಯ ಮಗಳಾಗಿ ಜನಿಸುವುದು—ಈ ಎಲ್ಲ ವಿಚಾರಗಳೂ ಮೊದಲ ವಿಭಾಗ ದಲ್ಲಿ ಬರುತ್ತವೆ. ಪರಶುರಾಮನ ತೇಜೋಭಂಗದಿಂದ ಹಿಡಿದು ರಾವಣವಧಾನಂತರ ರಾಮನು ಅಯೋಧ್ಯೆಗೆ ಹಿಂತಿರುಗುವ ವರೆಗಿನ ಸಮಸ್ತ ಕಥೆಯೂ ಸಂಕ್ಷಿಪ್ತವಾಗಿ

ವರ್ಣಿತವಾಗಿರುವುದನ್ನು ಎರಡನೆಯ ವಿಭಾಗದಲ್ಲಿ ಕಾಣುತ್ತೇವೆ. ಪರಶುರಾಮನಿಗೂ, ಸೀತಾಪಹರಣದನಂತರ ಹನುಮಂತನಿಗೂ ರಾಮನು ತನ್ನ ವಿಷ್ಣುರೂಪವನ್ನು ತೋರಿಸುವುದು ಇದರಲ್ಲಿ ಗಮನಿಸಬೇಕಾದ ಒಂದು ಪ್ರಮುಖ ಅಂಶ. ಭಕ್ತಿಯ ವಿಷಯದಲ್ಲಿ ರಾಮ ಹನುಮಂತರ ನಡುವೆ ನಡೆಯುವ ವಿಸ್ತಾರವಾದ ಸಂವಾದವು ಈ ವಿಭಾಗದ ಹೆಚ್ಚಿನ ಸರ್ಗಗಳನ್ನು ಆಕ್ರಮಿಸಿದೆ. ಈ ವಿಭಾಗದಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ, ಸೇತುಬಂಧ ಪ್ರಸಂಗದಲ್ಲಿ ಲಕ್ಷ್ಮಣನು ಸಮುದ್ರವನ್ನು ಬತ್ತಿಸಿದನೆಂದೂ ಅನಂತರ ರಾಮನು ಅದನ್ನು ತನ್ನ ಕಣ್ಣೀರಿನಿಂದ ತುಂಬಿಸಿದನೆಂದೂ ಹೇಳಿರುವುದು. ಸೀತೆಯು ದೇವಿಯ ರೂಪವನ್ನು ಧರಿಸಿ, ಪುಷ್ಕರನಿವಾಸಿಯಾದ ಸಹಸ್ರಸ್ಕಂಧರಾವಣನನ್ನು ಸಂಹರಿಸುವುದು ಕೊನೆಯ ವಿಭಾಗದ ಕಥಾವಸ್ತು. ಇದರಲ್ಲಿ ದೇವೀಮಹಾತ್ಮೆಯ ಪ್ರತ್ಯಕ್ಷ ಅನುಕರಣೆಯನ್ನು ಕಾಣಬಹುದು.

ಈ ಮೂರು ಪ್ರಸಿದ್ಧರಾಮಾಯಣಗಳಲ್ಲದೆ, ಇನ್ನು ಕೆಲವು ಕೂಡ ಇವೆ. ಇವುಗಳಲ್ಲಿ ಹೆಸರಿಸಬಹುದಾದುದೆಂದರೆ 'ತತ್ತ್ವಸಂಗ್ರಹ ರಾಮಾಯಣ.' ಇದು ಸು. ೧೭ನೆಯ ಶತಮಾನದಲ್ಲಿ ರಾಮಬ್ರಹ್ಮಾನಂದರೆಂಬವರಿಂದ ರಚಿತವಾಗಿದೆ. ಮೂಲವಾದ ರಾಮಕಥೆಯ ಜೊತೆಗೆ, ರಾಮಾಯಣದ ಪ್ರಮುಖ ಪಾತ್ರಗಳ ವಿಚಾರವಾಗಿ ಪ್ರಚಲಿತವಿರುವ ವಿವಿಧ ಕಥೆಗಳ ಸಂಗ್ರಹ ಕೂಡ ಇದರಲ್ಲಿದೆ. ಅಂತೆಯೇ ಇದರಲ್ಲಿ ರಾಮಕಥೆಯು ತತ್ತ್ವದ ಅರ್ಥಾತ್, ರಾಮನ ಪರಬ್ರಹ್ಮತ್ವದ ಮೇಲೆ ಪ್ರಕಾಶ ಬೀರಲಾಗಿದೆ. ಇದರಿಂದಾಗಿಯೇ ಇದಕ್ಕೆ 'ತತ್ತ್ವಸಂಗ್ರಹರಾಮಾಯಣ'ವೆಂದು ಹೆಸರಿಟ್ಟಿರುವುದು. ಇದರ ಭೂಮಿಕೆಯಲ್ಲಿ ರಾಮನನ್ನು ವಿಷ್ಣು, ಶಿವ, ಬ್ರಹ್ಮ, ಹರಿಹರ, ತ್ರಿಮೂರ್ತಿ, ಪರಬ್ರಹ್ಮ ಇವರ ಅವತಾರವೆಂದು ಹೇಳಲಾಗಿದೆ. ಅನಂತರ, ರಾಮಾಯಣದ ಗಾಯತ್ರೀಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ಇದರ ನಂತರ, ಶಿವ ಪಾರ್ವತಿಯರ ಸಂವಾದ ರೂಪದಲ್ಲಿ ರಾಮಕಥೆಯನ್ನು ವರ್ಣಿಸಲಾಗಿದೆ. ಈ ಕೃತಿಯಲ್ಲಿ ಗಮನಿಸಬೇಕಾದ ಅಂಶಗಳು ಹಲವಿವೆ. ದಾಸ್ಯಭಕ್ತಿಯ ಪ್ರತಿಪಾದನೆಯ ಜೊತೆಗೆ, ಅದ್ವೈತ ರಾಮೋಪಾಸನೆಯ ಉಲ್ಲೇಖ ಕೂಡ ಇರುವುದು ಮೊದಲನೆಯ ಅಂಶ. ಇನ್ನೊಂದು ಅಂಶವೆಂದರೆ, ವಾರಣಾಸಿ, ಗಯಾ, ಗೋದಾವರೀ, ಧನುಷ್ಕೋಟಿ ಮುಂತಾದುವುಗಳ ಮಹಿಮೆಯನ್ನು ನಿರೂಪಿಸುವ ಸಲುವಾಗಿ ಅವುಗಳಿಗೆ ರಾಮನೊಡನೆ ಸಂಬಂಧ ಕಲ್ಪಿಸಿರುವುದು. ಸೀತಾಸ್ವಯಂವರದಲ್ಲಿ ಶಿವನು ಉಪಸ್ಥಿತನಾಗಿರುವುದು, ಕೈಕೇಯಿಯು ಪಶ್ಚಾತ್ತಾಪ ಪಡುವುದು, ಹಸ್ತರೇಖೆಯನ್ನು ತೋರಿಸುವ ಸಲುವಾಗಿ ಲಕ್ಷ್ಮಣ ರೇಖೆಯನ್ನು ದಾಟಿ ಸೀತೆಯು ರಾವಣನ ಬಳಿಗೆ ಬರುವುದು, ಮೃತ್ಯುವು ಮಾಯಾಸೀತೆಯ ರೂಪು ಧರಿಸುವುದು–ಇವೇ ಮುಂತಾದುವಂತೂ ಸ್ಕಾಂದಪುರಾಣದ ಧರ್ಮಖಂಡವನ್ನು ಆಧರಿಸಿ ನಿರೂಪಿತವಾದ ಅಂಶ

ಗಳಾಗಿವೆ. ಇನ್ನು ಕೆಲವು ಪ್ರಮುಖ ಅಂಶಗಳು ಹೀಗಿವೆ : ೧. ನಿಜವಾದ ಸೀತೆಯು ರಾಮನ ವಕ್ಷಸ್ಥಲದಲ್ಲೇ ಇರುತ್ತಾಳೆ ; ಮಾಯಾಸೀತೆಯು ರಾವಣನಿಂದ ಅಪಹೃತ ಳಾಗುತ್ತಾಳೆ–ಎಂಬುದು ; ೨. ರಾಮನು ಸುಗ್ರೀವನಿಗೆ ತನ್ನ ವಿಶ್ವರೂಪವನ್ನು ತೋರಿಸುವುದು ; ೩. ಸೀತೆಯು ಶತಮುಖ ರಾವಣನನ್ನು ಸಂಹರಿಸುವುದು ಇತ್ಯಾದಿ.

ಹೀಗೆ ಹಲವು ವಿಭಿನ್ನ ಅಂಶಗಳಿಂದ ಕೂಡಿದ ಹಲವು ರಾಮಾಯಣಗಳು ಸಂಸ್ಕೃತ ದಲ್ಲಿ ಕಾಲದಿಂದ ಕಾಲಕ್ಕೆ ರಚಿತವಾಗುತ್ತ ಬಂದಿವೆ. ಅವುಗಳ ಸಾಲಿನಲ್ಲಿ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಅನ್ನು ಇಟ್ಟುಕೊಂಡು, ಅದು ಅವುಗಳಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ಕುರಿತು, ಕೆಲವು ಪ್ರಮುಖ ಅಂಶಗಳನ್ನು ಹಿಡಿದು, ಇನ್ನು ವಿಚಾರ ಮಾಡಬಹುದು.

ರಾಮಾಯಣದರ್ಶನವು ಪ್ರಧಾನವಾಗಿ ವಾಲ್ಮೀಕಿ ರಾಮಾಯಣದ ಕಥಾಗತಿ ಯನ್ನೇ ಅನುಸರಿಸಿದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಾಗಲೀ ಇತರ ಜೈನೇತರ ರಾಮಾಯಣಗಳಲ್ಲಿಯಾಗಲಿ ಇಲ್ಲದ ಹಲವಾರು ನೂತನ ಹಾಗೂ ಸೂಕ್ಷ್ಮ ಬದಲಾವಣೆ ಗಳನ್ನು ಅದರಲ್ಲಿ ಕಾಣುತ್ತೇವೆ. ಉದಾಹರಣೆಗೆ, ೧. ಪರಶುರಾಮ–ರಾಮರ ಯುದ್ಧ ಅದರಲ್ಲಿ ನಡೆಯುವುದೇ ಇಲ್ಲ. ರಾಮನನ್ನು ಕಂಡ ಕೂಡಲೇ, ಪರಶುರಾಮನು ಅವನಿಗೆ ತನ್ನಲ್ಲಿದ್ದ ವಿಷ್ಣುಚಾಪವನ್ನು ಕೊಟ್ಟು ಹೊರಟುಹೋಗುತ್ತಾನೆ. ೨. ಶಬರಿ. ಊರ್ಮಿಳೆ, ಅಹಲ್ಯೆ, ಮಂಥರೆ ಮುಂತಾದ ಪಾತ್ರಗಳಿಗೆ ಇತರ ರಾಮಾಯಣಗಳಲ್ಲಿ ಅಂತಹ ಪ್ರಾಮುಖ್ಯವೇನೂ ದೊರಕಿಲ್ಲ. ರಾಮಾಯಣದರ್ಶನಂದಲ್ಲಿಯಾದರೋ ಅವುಗಳ ಬಗ್ಗೆ ಸಾಕಷ್ಟು ಗಮನಹರಿಸಲಾಗಿದೆ. ೩. ತನ್ನ ಮಾವನ ಮನೆಯಿಂದ ಊರಿಗೆ ಮರಳುವ ಮೊದಲು ಭರತನು, ಪಿತೃದೇವ ಮಂದಿರವನ್ನು ಪ್ರವೇಶಿಸಿ, ಅಲ್ಲಿ ದಶರಥನ ಮರಣದ ಸೂಚನೆಯನ್ನು ಕಂಡುಕೊಳ್ಳುವ ವಿಚಾರವು ರಾಮಾಯಣ ದರ್ಶನದಲ್ಲಿದೆ, ಇತರೆಡೆಗಳಲ್ಲಿಲ್ಲ. ಇದು ಭಾಸನ ಪ್ರತಿಮಾನಾಟಕದ ಪ್ರಭಾವದಿಂದ ಮೂಡಿದ ಅಂಶ. ೪. ಇತರ ರಾಮಾಯಣಗಳಲ್ಲಿರುವಂತೆ ಹನುಮಂತನ ಬಾಲಕ್ಕೆ ಬೆಂಕಿಯಿಡುವುದಾಗಲಿ, ಅದರಿಂದ ಅವನು ಲಂಕೆಯನ್ನು ಸುಡುವುದಾಗಲಿ ರಾಮಾಯಣ ದರ್ಶನದಲ್ಲಿ ಬರುವುದಿಲ್ಲ. ೫. ಸ್ವಪ್ನದರ್ಶನ ತಂತ್ರದ ಬಳಕೆಯನ್ನು ರಾಮಾಯಣ ದರ್ಶನದಲ್ಲಿ ಮೇಲಿಂದ ಮೇಲೆ ಕಾಣುತ್ತೇವೆ. ಮುಂದಾಗುವ ಒಳಿತು ಕೆಡಕುಗಳನ್ನು ಸೂಚಿಸಬೇಕಾದಾಗಲೆಲ್ಲ ಕವಿಯು ಒಬ್ಬರಲ್ಲ ಒಬ್ಬರಿಗೆ ಕನಸು ಕಾಣಿಸುತ್ತಾರೆ. ರಾಮ, ಭರತ, ಮಂಥರೆ, ಸೀತೆ, ರಾವಣ ಮುಂತಾಗಿ ಎಲ್ಲರೂ ಕನಸು ಕಾಣುತ್ತಾರೆ ; ಆ ಮೂಲಕ ಭವಿಷ್ಯದ ಬಗ್ಗೆ ಸೂಚನೆ ಪಡೆಯುತ್ತಾರೆ. ರಾವಣ ಕಾಣುವ ಸ್ವಪ್ನವಂತೂ ವಿನೂತನ, ಅತ್ಯದ್ಭುತ, ಇತರ ರಾಮಾಯಣಗಳಲ್ಲಿ ಈ ತಂತ್ರದ ಬಳಕೆ ಇಷ್ಟರ ಮಟ್ಟಿಗೆ ಕಾಣಸಿಕ್ಕುವುದಿಲ್ಲ. ೬. ಇದೇ ರೀತಿ, ಅರಣ್ಯವರ್ಣನೆಯಲ್ಲಿ ಕಂಡುಬರುವ ಮಲೆನಾಡಿನ ವರ್ಣನೆಯ ಪ್ರಭಾವ, ಇಡೀ ಕಾವ್ಯದಲ್ಲಿ ಕಂಡುಬರುವ ಯುಗಧರ್ಮದ ಮುದ್ರೆ

ಮುಂತಾದುವು ಕೂಡ. ಇವುಗಳಿಂದಾಗಿ ರಾಮಾಯಣದರ್ಶನಂನಲ್ಲಿ ಸ್ವೀಕೃತ ಬಹಳ ಭಿನ್ನವಾಗಿ ನಿಲ್ಲುತ್ತದೆ. ಸೂಕ್ಷ್ಮವಾಗಿ ನೋಡುತ್ತಾ ಹೋದಲ್ಲಿ ಅದರಲ್ಲಿ ಹೆಜ್ಜೆಹೆಜ್ಜೆಗೂ ಹೊಸತನವನ್ನು ಗುರುತಿಸುತ್ತಾ ಹೋಗಬಹುದು. ಆದರೆ, ಅದು ಪ್ರಕೃತದ ಮಿತಿಗೆ ಮೀರಿದ ಕೆಲಸ. ಆದ್ದರಿಂದ, ಕೆಲವು ಪ್ರಮುಖ ಅಂಶಗಳನ್ನಷ್ಟೇ ಆಯ್ದುಕೊಂಡು ಅವುಗಳ ಬಗ್ಗೆ ವಿಚಾರ ಮಾಡುವುದು ಮಾತ್ರ ಪ್ರಕೃತದ ಉದ್ದೇಶ.

ರಾಮಾಯಣದ ಮೂಲಗುರಿ ರಾವಣ ಅವನನ್ನು ವಧಿಸುವವನು ರಾಮ. ಈ ವಧೆಗೆ ಕಾರಣ ಸೀತಾಪಹರಣ. ಸೀತಾರಾಮರು ಕಾಡಿಗೆ ಬಂದದ್ದು ಕೈಕೆಯಿಂದಾಗಿ, ಅವಳಿಗೆ ಪ್ರಚೋದನೆ ಕೊಟ್ಟು ಮುನ್ನಡೆಸಿದವಳು ಮಂಥರೆ. ಆದ್ದರಿಂದ ಮಂಥರೆ, ಕೈಕೆ, ಸೀತೆ, ರಾಮ, ರಾವಣ-ಇವರ ಪಾತ್ರಚಿತ್ರಣ ಹೇಗೆ ನಡೆದಿದೆಯೆಂಬುದರ ಬಗ್ಗೆ ಸ್ಥೂಲವಾಗಿ ವಿಚಾರ ಮಾಡಿದರೆ, ಹೇಳಬೇಕಾದ ಪ್ರಮುಖ ಅಂಶಗಳನ್ನೆಲ್ಲ ಹೇಳಿದಂತಾಗುತ್ತದೆ.

ಮೊದಲಿಗೆ ಮಂಥರೆ. ರಾಮಾಯಣದ ಕಥೆಗೆ ಮಂಥರೆಯೇ ಮೂಲಕಾರಣ. ಮುಂದಿನ ಎಲ್ಲ ಕ್ರಿಯೆಗಳಿಗೂ ಮೂಲವಾದ ಬೀಜವನ್ನು ಬಿತ್ತಿದವಳು ಅವಳೇ. ಆದರೆ ಸದ್ಗುಣಸಂಪನ್ನನಾದ ರಾಮನಿಗೆ ಕೇಡೆಣಿಸುವ ಕೆಟ್ಟಬುದ್ಧಿ ಇವಳಿಗೇಕೆ ಬಂತು ಎಂಬುದು ಕೇಂದ್ರಪ್ರಶ್ನೆ. ಅದಕ್ಕೆ ವಿವಿಧ ರಾಮಾಯಣಗಳು ವಿವಿಧ ರೀತಿಯ ಸಮಾಧಾನಗಳನ್ನು ನೀಡಲು ಹೋಗಿವೆ.

ರಾಮಾವತಾರಕ್ಕೆ ಸಹಕಾರಿಗಳಾಗಿ ದೇವತೆಗಳು ಭೂಲೋಕದಲ್ಲಿ ಜನಿಸಿದರು. ಅಂತಹವರ ಪೈಕಿ ದುಂದುಭಿಯೆಂಬ ಗಂಧರ್ವಿಯೂ ಒಬ್ಬಳು ; ಅವಳೇ ಮಂಥರೆಯಾದವಳು-ಎಂಬುದಾಗಿ ಪದ್ಮಪುರಾಣ ಪಾತಾಳಖಂಡದ ಗೌಡೀಯ ಪಾಠ (ಅಧ್ಯಾಯ ೧೫) ಮತ್ತು ಆನಂದರಾಮಾಯಣ (೧-೨-೨)ಗಳಲ್ಲಿ ಹೇಳಲಾಗಿದೆ. ಇದರ ಪ್ರಕಾರ, ಮಂಥರೆಗೆ ರಾಮನನ್ನು ಕುರಿತಂತೆ ಪೂರ್ವಜನ್ಮದ ದ್ವೇಷವೇನೂ ಇಲ್ಲ. ಅವಳೂ ಉತ್ತಮಳೇ. ಆದರೆ, ಅವಳು ನಿರ್ವಹಿಸಬೇಕಾಗಿದ್ದ ಕರ್ತವ್ಯವೆಂದರೆ, ರಾಮಾವತಾರದ ಉದ್ದೇಶಸಾಫಲ್ಯಕ್ಕೆ, ಎಂದರೆ ರಾವಣವಧೆಗೆ, ಮೂಲಪ್ರಚೋದಕ ಶಕ್ತಿಯಾಗುವುದು. ಅದನ್ನು ಅವಳು ಅಚ್ಚುಕಟ್ಟಾಗಿ ನಿರ್ವಹಿಸಿದಳು ಅಷ್ಟೆ. ರಾಮನಿಗೆ ವನವಾಸವುಂಟಾಗದಿದ್ದರೆ ಸೀತಾಪಹರಣವೂ ಆಗುತ್ತಿರಲಿಲ್ಲ, ಆ ಕಾರಣವಾಗಿ ನಡೆದ ರಾವಣಾಸುರವಧೆಯೂ ಆಗುತ್ತಿರಲಿಲ್ಲ. ಆದರೆ ಈ ಕಠಿಣ ಕರ್ತವ್ಯದ ನಿರ್ವಹಣೆಗೆ ಅವಳು ಹೇಗೆ ಸಿದ್ಧಳಾದಳು, ಅಂತಹ ಉತ್ತಮಳಿಗೆ ರಾಮನನ್ನು ಕಾಡಿಗೆ ಕಳುಹಿಸುವಂತಹ ಬುದ್ಧಿಯಾದರೂ ಹೇಗೆ ಬಂತು ಎಂದರೆ, ಅವಳಲ್ಲಿ ಉಂಟಾದ ಅಜ್ಞಾನ ತಿಮಿರವೇ ಅದಕ್ಕೆ ಕಾರಣವಾಯಿತಂತೆ. ಅವಳಲ್ಲಿ ಆ ಅಜ್ಞಾನತಿಮಿರವನ್ನು ಉಂಟು ಮಾಡುವ ಸಲುವಾಗಿ ಸರಸ್ವತಿಯನ್ನು ಕಳುಹಿಸಲಾಯಿತೆಂದೇ ಅಧ್ಯಾತ್ಮ ರಾಮಾಯಣ (೨-೨-೪೪) ಮತ್ತು ಆನಂದರಾಮಾಯಣ (೧-೬-೪೧) ಗಳೆರಡೂ ಹೇಳುತ್ತವೆ.

ಆನಂದರಾಮಾಯಣದಲ್ಲಿಯಾದರೋ ಅವಳ ವೃತ್ತಾಂತವು ಅಷ್ಟಕ್ಕೇ ನಿಲ್ಲುವುದಿಲ್ಲ. ಮುಂದೆ ಕೃಷ್ಣಾವತಾರ ಕಾಲದಲ್ಲಿ ಅವಳು ಪೂತನಿಯಾಗಿ ಜನಿಸಿ, ಬಾಲಕೃಷ್ಣನನ್ನು ಕೊಲ್ಲಲು ಹೋಗಿ ಅವನಿಂದ ಹತಳಾದಳೆಂದೂ (೬-೫-೩೫) ಅನಂತರ ಕುಬ್ಜೆಯಾಗಿ ಕೃಷ್ಣನಿಂದ ಉದ್ಧಾರವಾದಳೆಂದೂ (೧-೨-೩) ಅದರಲ್ಲಿ ಹೇಳಲಾಗಿದೆ. ಆದ್ದರಿಂದ ಇವುಗಳ ಪ್ರಕಾರ ರಾಮ ಮಂಥರೆಯರ ನಡುವಣ ವೈರವೆಂಬುದು ಪೂರ್ವಜನ್ಮದಿಂದ ಬಂದುದಲ್ಲ ; ಆ ಜನ್ಮದಲ್ಲೇ ಉಂಟಾದದ್ದು ; ಆದರೆ ಮುಂದಿನ ಜನ್ಮಕ್ಕೂ ಅದು ಮುಂದುವರಿಯಿತು ಎಂದು ಹೇಳಬಹುದು.

ಸತ್ಯೋಪಾಖ್ಯಾನದಲ್ಲಿ ಮಾತ್ರ ಹೀಗಿಲ್ಲ. ಅದರ (ಅಧ್ಯಾಯ ೧೦-೧೪) ಪ್ರಕಾರ, ಅವಳ ವರ್ತನೆಗೆ ಪೂರ್ವ ಜನ್ಮದ ವೈರವೇ ಕಾರಣ. ಹಿಂದೆ ಅವಳು ದೈತ್ಯ ವಿರೋಚನನ ಮಗಳಾಗಿದ್ದಳು. ದೇವಾಸುರ ಯುದ್ಧದಲ್ಲಿ ದೇವತೆಗಳ ವಿಮಾನಗಳನ್ನೂ ವಾಹನಗಳನ್ನೂ ಪಾಶದಿಂದ ಕಟ್ಟಿಹಾಕಿದ್ದಳು. ಅದರಿಂದಾಗಿ ವಿಷ್ಣುವಿನ ಆಜ್ಞೆಯ ಪ್ರಕಾರ ಇಂದ್ರನು ತನ್ನ ವಜ್ರಾಯುಧದಿಂದ ಅವಳನ್ನು ಸಂಹರಿಸಿದ್ದನು. ಆದರಿಂದ ವಿಷ್ಣುವಿನ ಮೇಲೆ ತನಗೆ ಉಂಟಾದ ಸೇಡನ್ನು ತೀರಿಸಿ ಕೊಳ್ಳುವ ಸಲುವಾಗಿ, ಅವಳು ರಾಮಾವತಾರಕಾಲದಲ್ಲಿ ಮಂಥರೆಯಾಗಿ ಜನಿಸಿ ತನ್ನ ಉದ್ದೇಶವನ್ನು ಸಾಧಿಸಿಕೊಂಡಳು.

ಹಿಂದಿನ ವೈದಿಕರಾಮಾಯಣಗಳು ಹೀಗೆ ಜನ್ಮಾಂತರಗಳಿಗೆ ಹೆಚ್ಚಿನ ಒತ್ತು ಕೊಟ್ಟಿದ್ದರೆ, ಕುವೆಂಪು ಅವರು ಮಾತ್ರ ಇಹಜನ್ಮಕ್ಕೇ ಹೆಚ್ಚಿನ ಪ್ರಾಧಾನ್ಯವಿತ್ತಿದ್ದಾರೆ. ಅವಳ ವರ್ತನೆಗೆ ಕಾರಣವನ್ನು ಅವಳ ಪ್ರಕೃತಜನ್ಮದಲ್ಲೇ ಕಂಡುಕೊಳ್ಳಲು ಹೋಗಿದ್ದಾರೆ. ಅವಳ ಬಾಲ್ಯ-ಆಗ ಎಲ್ಲರಿಂದ ಲಭಿಸಿದ ತಿರಸ್ಕಾರ-ಕೈಕೆಯಿಂದ ದೊರಕಿದ ಒಲವಿನ ಏಕೈಕ ಆಸರೆ-ಅನಂತರ ಅದು ಭರತನಲ್ಲಿ ಕೇಂದ್ರೀಕೃತವಾದದ್ದು-ಕೌಸಲ್ಯೆ ಮುಂತಾದವರಿಂದ ಆಕೆ ಅವಮಾನಿತಳಾದದ್ದು-ಮುಂತಾದ ಲೌಕಿಕ ಅಂಶಗಳೆಲ್ಲ ಕಾರಣವಾಗಿ ಅವಳು ರಾಮನ ಬಗ್ಗೆ ಅಷ್ಟು ಕಟುವಾಗಿ ವರ್ತಿಸಿದಳೆಂದು ಅವರು ನಿರೂಪಿಸುತ್ತಾರೆ. ಅವರಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಅಂಶವೆಂದರೆ, ಅವಳನ್ನು ಗಾಢಪ್ರೇಮದ ಸಾಕಾರ ಮೂರ್ತಿಯಾಗಿ ಚಿತ್ರಿಸಿರುವುದು. ಅವಳ ಆ ಪ್ರೇಮವೆಲ್ಲ ಭರತನಲ್ಲಿ ಪುಂಜೀಕೃತವಾಗಿರುತ್ತದೆ. ಅವನ ಸುಖಕ್ಕಾಗಿ ಏನು ಮಾಡುವುದಕ್ಕಾದರೂ ಅವಳು ಸಿದ್ಧಳಾಗಿರುತ್ತಾಳೆ. ಆದರೆ ಅವಳ ಕೆಲಸಗಳೆಲ್ಲ ನೀರಿನ ಮೇಲೆ ಮಾಡಿದ ಹೋಮದಂತಾಗುತ್ತವೆ. ಅದರಿಂದಾಗಿಯೇ ಕೊನೆಗೆ ಆಕೆ, ಭರತನಿಗಾಗಿ, ರಾಮನನ್ನು ಕರೆತರಲು ಕಾಡಿಗೂ ಓಡಿಹೋಗುತ್ತಾಳೆ. ಆದರೆ, ರಾಮನೆಂದು ಭ್ರಮಿಸಿ ಕಾಳ್ಗಿಚ್ಚನ್ನು ಅಪ್ಪಿ ಅದಕ್ಕೆ ಬಲಿಯಾಗುತ್ತಾಳೆ.

ಅವಳ ಈ ಅಂತ್ಯವಾಗಲಿ, ಬಾಲ್ಯಜೀವನವಾಗಲಿ, ಮುಂದೆ ಅವಳು ಅಶರೀರಿಯಾಗಿ ಬಂದು ರಾಮನ ಆಗಮನದ ವೃತ್ತಾಂತವನ್ನು ಭರತನಿಗೆ ತಿಳಿಸುವುದಾಗಲಿ

ಬೇರೆಲ್ಲೂ ಕಾಣಸಿಕ್ಕುವುದಿಲ್ಲ. ಇದೆಲ್ಲ ಕುವೆಂಪು ಅವರ ದರ್ಶನದ ಫಲ. ಅಷ್ಟು ಮಾತ್ರವಲ್ಲ, ಇತರ ಕಡೆಗಳಲ್ಲಿ ಕಡೆಗಣಿತವಾಗಿದ್ದ ಅವಳಿಗಾಗಿ ಅವರು 'ಮಮತೆಯ ಸುಳಿ ಮಂಥರೆ' ಎಂಬ ಒಂದು ಸಂಚಿಕೆಯನ್ನೇ ಮೀಸಲಾಗಿಟ್ಟಿದ್ದಾರೆ. 'ಅಗ್ನಿಯಾತ್ರೆ'ಯೆಂಬ ಸಂಚಿಕೆ ಕೊನೆಗೊಳಿಸುವುದೂ ಅವಳ ವೃತ್ತಾಂತದಿಂದಲೇ. ಮೊದಲ ಮತ್ತು ಕೊನೆಯ ಸಂಚಿಕೆಗಳಲ್ಲಿ ಕೂಡ ಅವಳ ದರ್ಶನಮಾಡಿಸುತ್ತಾರೆ, ಅವಳು ರಾಮಾಯಣದ ಕೇಂದ್ರ ಬಿಂದುವೆಂಬುದನ್ನು ಕಂಡುಕೊಂಡ ಕುವೆಂಪು ಅವರು ಹೀಗೆ ಅವಳ ಪಾತ್ರವನ್ನು ಹೊಸ ದೃಷ್ಟಿಯಿಂದ ದರ್ಶಿಸಿ ವಿಸ್ತಾರವಾಗಿ ಚಿತ್ರಿಸಲು ಹೋಗಿದ್ದಾರೆ. ಆ ಮೂಲಕವಾಗಿ ಮಂಥರೆಯ ಬಗ್ಗೆ ಅನುಕಂಪ ಮೂಡುವಂತೆ ಮಾಡಿದ್ದಾರೆ. ಇದು 'ಶ್ರೀರಾಮಾಯಣ ದರ್ಶನಂ'ನ ವೈಶಿಷ್ಟ್ಯಗಳಲ್ಲಿ ಪ್ರಮುಖವಾದುದು.

ಇನ್ನು ಕೈಕೆ. ಕೈಕೆಯು ದುಷ್ಟೆ, ಕುಟಿಲೆ ಎಂಬುದಾಗಿ ವಾಲ್ಮೀಕಿಯು ಸ್ಪಷ್ಟವಾಗಿ ಸೂಚಿಸಿದ್ದಾನೆ. ಚಿತ್ರಕೂಟಯಾತ್ರೆಯ ಸಂದರ್ಭದಲ್ಲಿ (೫೩-೭-೧೮) ಅವನ ರಾಮನು ಕೂಡ ಅವಳ ಬಗ್ಗೆ ಶಂಕಿಸುತ್ತಾನೆ. ರಾಜ್ಯದ ಆಸೆಗಾಗಿ ದಶರಥನನ್ನು ಅವಳು ಕೊಲ್ಲದಿರುತ್ತಾಳೆಯೇ ? ಕೌಸಲ್ಯೆ ಸುಮಿತ್ರೆಯರಿಗೆ ವಿಷ ಹಾಕದಿರುತ್ತಾಳೆಯೆ ಎನ್ನುತ್ತಾನೆ. ಕಲಹಶೀಲೆಯೆಂದು ಸೀತೆ ಕೂಡ ನಿಂದಿಸುತ್ತಾಳೆ (೬-೩೨-೪). ಆದರೆ ಅದೇ ವಾಲ್ಮೀಕಿಯು ಮತ್ತೊಂದೆಡೆ, ಅವಳು ನಿರ್ದೋಷಿಯೆಂಬುದನ್ನೂ ನಿರೂಪಿಸುತ್ತಾನೆ. ಅವಳಲ್ಲಿ ದೋಷವಿಲ್ಲ, ರಾಮನ ವನಗಮನವು ದೇವದಾನವ ಹಿತದಿಂದ ಆಗುವಂತಹುದು ಎಂದು ಭಾರದ್ವಾಜ ಮುನಿಯಿಂದ ರಾಮನಿಗೆ ಹೇಳಿಸುತ್ತಾನೆ (೮೨-೩೧). ಚಿತ್ರಕೂಟದಲ್ಲಿಭರತನು ಕೈಕೆಯನ್ನು ನಿಂದಿಸುವಾಗಲಂತೂ ರಾಮನೇ ಅವಳ ಪಕ್ಷವಹಿಸಿ

> **ಪುರಾ ಭ್ರಾತಃ ಪಿತಾ ನಃ ಸಮಾತರಂ ತೇ ಸಮುದ್ವಹನ್ ।**
> **ಮಾತಾಮಹೇ ಸಮಾಶ್ರೌಷೀದ್ರಾಜ್ಯಶುಲ್ಕಮನುತ್ತಮಮ್ ॥** (೨-೧೦೭-೩)

ಎಂಬುದಾಗಿ ಹೇಳಿ, ದಶರಥನು ವಿವಾಹ ಸಮಯದಲ್ಲಿ ಅವಳ ಮಗನಿಗೆ ರಾಜ್ಯ ಕೊಡುವುದಾಗಿ ಮಾಡಿದ್ದ ಪ್ರತಿಜ್ಞೆಯನ್ನು ತಿಳಿಸುತ್ತಾನೆ.

ಅಧ್ಯಾತ್ಮ ರಾಮಾಯಣ (೨-೨, ೪೪-೪೬) ಮತ್ತು ಆನಂದರಾಮಾಯಣ (೮,೨-೫೬)ಗಳು ಮಂಥರೆಯಂತೆಯೇ ಕೈಕೆ ಕೂಡ ಉತ್ತಮಳೆಂಬುದನ್ನು ನಿರೂಪಿಸಲು ಹೋಗಿವೆ. ಅವಳು ಆ ರೀತಿ ವರಗಳನ್ನು ಬೇಡಿ ರಾಮನನ್ನು ಕಾಡಿಗೆ ಕಳುಹಿಸಲು ಕಾರಣ, ಅವಳಲ್ಲಿ ಕವಿದಿದ್ದ ಅಜ್ಞಾನ ತಿಮಿರ. ಅದನ್ನು ಅವಳಿಗೆ ಕವಿಸಿದವಳು ಸರಸ್ವತಿ. ಇದಕ್ಕಾಗಿಯೇ ಸರಸ್ವತಿಯು ಆ ಸಮಯದಲ್ಲಿ ದೇವಲೋಕದಿಂದ ಬರುತ್ತಾಳೆ. ಇಷ್ಟು ಮಾತ್ರವಲ್ಲ, ವಾಲ್ಮೀಕಿ ರಾಮಾಯಣದ ಪ್ರಕಾರ, ಚಿತ್ರಕೂಟದಲ್ಲಿ ಮೌನವಾಗಿದ್ದ ಕೈಕೆಯು ಅಧ್ಯಾತ್ಮರಾಮಾಯಣ (೨, ೯, ೫೫-೬೦). ಆನಂದ ರಾಮಾಯಣ (೨,೯-೬೩)ಗಳಲ್ಲಿ ಆ ಸನ್ನಿವೇಶದಲ್ಲಿ ಪಶ್ಚಾತ್ತಾಪ ಪಡುತ್ತಾಳೆ, ಕ್ಷಮೆಯಾಚಿಸುತ್ತಾಳೆ. ಅಧ್ಯಾತ್ಮ ರಾಮಾಯಣ (೨-೯-೬೩)ದ ಪ್ರಕಾರ, ಆಗ

ರಾಮನು, "ನನ್ನ ಪ್ರೇರಣೆಯಿಂದಲೇ ನಿನ್ನ ಬಾಯಿಂದ ಆ ಮಾತು ಹೊರಟಿತು" (ಮಯೈವ ಪ್ರೇರಿತಾವಾಣೀ ತವ ವಕ್ತ್ರಾದ್ವಿನಿರ್ಗತಾ) ಎಂದು ಹೇಳಿ ಅವಳನ್ನು ಸಮಾಧಾನ ಪಡಿಸುತ್ತಾನೆ.

ರಾಮಾಯಣದರ್ಶನದ ಕೈಕೆಯ ವ್ಯಕ್ತಿತ್ವವಾದರೋ ಹೊಸರೀತಿಯದು. ಅವಳೂ ಸಾಮಾನ್ಯ ಮನುಷ್ಯಳು, ರಾಮನಲ್ಲಿ ಅತಿಶಯವಾದ ಪ್ರೀತಿ ವಾತ್ಸಲ್ಯಗಳನ್ನು ಹೊಂದಿದ್ದವಳು. ರಾಮನೇಂ ? ಭರತನೇಂ ? ಮಕ್ಕಳಿರ್ವರುಮೊನ್ನವರ್' ಎಂದು ನಂಬಿದ್ದವಳು. ಅಂತಪವಳ ತಲೆಯಲ್ಲಿ ಮಂಥರೆಯು ವಿಷದ ಬೀಜವನ್ನು ಬಿತ್ತಿ ಕ್ರಮಕ್ರಮವಾಗಿ, ಭವಿಷ್ಯದ ಬಗ್ಗೆ ಹೆದರಿಕೆ ಹುಟ್ಟಿಸುತ್ತಾಳೆ. ಆಗ ಮಂಥರೆ ಹೇಳುವ ಈ ಮಾತುಗಳು ವಿನೂತನವಾಗಿವೆ, ಗಮನಾರ್ಹವಾಗಿವೆ :

**ಪೇಳ್ವೆ ನಾಂ ಕೇಳ್ ಮುಗ್ಧೆ, ಪಡೆವ ಬೇನೆಯೊಳಿರ್ದೆ.**
**ನೀನರಿಯೆ ! ನಾಲ್ವರೊಳ್ ಭರತನೆಯೆ ದಿಟದಿಂದೆಯುಂ**
**ಜ್ಯೇಷ್ಠನ್ ! ಅಚ್ಚರಿಯೇಕೆ ? ಬಲ್ಲೆ ನಾನೆಲ್ಲಮಂ**
**ದೊರೆ ಮಂತ್ರಿಕುಲಪುರೋಹಿತರೆಲ್ಲರೊಲವರದಿ**
**ಪಿರಿಯನಾದನ್ ಕೌಸಲೆಯ ಮಗಂ... (ಪು, ೭೪)**

ಇದರಿಂದ, ದಶರಥಾದಿಗಳು ಮಾಡುತ್ತಿರುವುದು ಮೋಸವೆಂಬುದು ಕೈಕೆಯ ಮನಸ್ಸಿಗೆ ನಾಟುತ್ತದೆ. ಆಗ, ಬಾಳಿನಲ್ಲಿ ಮುಂಗಾಣದ ಅವಳು ಮಂಥರೆಯನ್ನೇ ಏಕೈಕ ಆಸರೆಯಾಗಿ ಮೊರೆಹೋಗುತ್ತಾಳೆ. ಆಗ, ಮಂಥರೆ,

**............ ..... ನೆನೆ ಮಗಳೆ**
**ನೀನಂದು ನನಗೊರೆದ ಗೋಪ್ಯಮಂ, ದಶರಥಂ**
**ನಿನ್ನ ಚೆಲ್ವಿಂಗೋತು ಸೊಬಗಿಗಡಿಯಾಳಾಗಿ**
**ಮದುವೆಯಾಗುವ ಮೊದಲ್ ನಿನಗಿತ್ತ ಭಾಷೆಯಂ (ಪು, ೭೬)**

ಎಂದು ಉಪಾಯವನ್ನು ಸೂಚಿಸುತ್ತಾಳೆ. ವಾಲ್ಮೀಕಿ ರಾಮಾಯಣದಲ್ಲಿ ದಶರಥನು ತನ್ನ ವಿವಾಹದ ಸಮಯದಲ್ಲಿ ರಾಜ್ಯಶುಲ್ಕವೀಯುವುದಾಗಿ ವಚನವಿತ್ತಿದ್ದುದರ ಉಲ್ಲೇಖ ಬರುತ್ತದೆ. (ಇದನ್ನು ಹಿಂದೆಯೆ ಗಮನಿಸಲಾಗಿದೆ). ಅಂತೆಯೇ ದೇವಾಸುರ ಸಂಗ್ರಾಮ ಕಾಲದಲ್ಲಿ ಅವನಿಂದ ತಾನು ಪಡೆದಿದ್ದ ಎರಡು ವರಗಳನ್ನೇ ಕೈಕೆಯು ತನ್ನ ಅಸ್ತ್ರವಾಗಿ ಬಳಸಿಕೊಳ್ಳುತ್ತಾಳೆಂದೂ ಹೇಳಲಾಗಿದೆ. ಆನಂದರಾಮಾಯಣ (೧, ೧, ೮೩-೯೫)ದ ಪ್ರಕಾರ, ಅವಳು ಬಾಲಕಿಯಾಗಿದ್ದಾಗ ಒಬ್ಬ ಮುನಿಯ ಸೇವೆಯನ್ನು ಶ್ರದ್ಧೆಯಿಂದ ಮಾಡಿರುತ್ತಾಳೆ. ಆದರಿಂದ ಸಂತುಷ್ಟನಾದ ಆ ಮುನಿಯು 'ಸಮಯ ಬಂದಾಗ ನಿನ್ನ ಕೈ ವಜ್ರಕಠಿಣವಾಗಲಿ' ಎಂದು ಅವಳಿಗೆ ವರಕೊಟ್ಟಿರುತ್ತಾನೆ. ದೇವಾಸುರಯುದ್ಧದ ಸಂದರ್ಭದಲ್ಲಿ ದಶರಥನ ರಥದ ಅಕ್ಷ ಮುರಿದಿದ್ದಾಗ ಆಕೆ ತನ್ನ ಕೈ ಕೊಟ್ಟು ಆ ರಥವನ್ನು ನಿಲ್ಲಿಸುತ್ತಾಳೆ. ಇದರ ಫಲವಾಗಿ ದಶರಥನು ಅವಳಿಗೆ ವರಗಳನ್ನು ನೀಡುತ್ತಾನೆ, ಮುನಿಶುಶ್ರೂಷೆಮಾಡಿ, ಅವನಿಂದ ವರಪಡೆದಿದ್ದ ವಿಚಾರವು ಅಧ್ಯಾತ್ಮ

ರಾಮಾಯಣದಲ್ಲಿ ಇಲ್ಲ ; ಅವಳು ದಶರಥನ ರಥವನ್ನು ನಿಲ್ಲಿಸಿ ಸಹಾಯ ಮಾಡಿದ ವಿಚಾರ ಮಾತ್ರ ಬರುತ್ತದೆ. ರಾಮಾಯಣದರ್ಶನದಲ್ಲಿ ಈ ಯುದ್ಧದ ವಿಚಾರವಾಗಲಿ ಅಲ್ಲಿ ಕೈಕೆಯು ದಶರಥನಿಗೆ ಸಹಾಯಮಾಡಿ ಅವನಿಂದ ಎರಡು ವರಗಳನ್ನು ಪಡೆದ ವಿಚಾರವಾಗಲಿ ಬರುವುದಿಲ್ಲ. ಅವಳ ಸೊಬಗಿಗೆ ಮಾರುಹೋಗಿ ಅಡಿಯಾಳಾಗಿ, ಅವಳನ್ನು ಮದುವೆಯಾಗುವ ಮೊದಲು ಎರಡು ವರಗಳನ್ನು-ಭಾಷೆಯನ್ನು-ಕೊಟ್ಟಂತೆ ಮಾತ್ರ ಹೇಳಲಾಗಿದೆ. ದೇವಾಸುರ ಸಂಗ್ರಾಮದ ಪ್ರಸಂಗವು ಕೈಕೆಯ ಸಾಹಸಪ್ರವೃತ್ತಿಗೆ ಸಾಕ್ಷಿಯಾಗಿದೆ. ಆದರೆ ಕುವೆಂಪು ಅವರಿಗೆ ಕೈಕೆಯ ಸಾಹಸಪ್ರವೃತ್ತಿ ಮುಖ್ಯವಲ್ಲ, ಅವಳ ಸೌಂದರ್ಯ ಮುಖ್ಯ. ದಶರಥನು ಅವಳ ಆ ಸೌಂದರ್ಯದ ದಾಸನಾಗಿದ್ದ ಎಂಬುದಕ್ಕಷ್ಟೇ ಅವರು ಹೆಚ್ಚು ಒತ್ತು ಕೊಡುತ್ತಾರೆ. ಅದರಿಂದಾಗಿಯೇ ಈ ಬದಲಾವಣೆಯುಂಟಾಗಿರುವುದು. ಇದರಿಂದ. ಇಲ್ಲಿ. ದಶರಥನು ಸ್ತ್ರೀಲೋಲನಾಗಿ, ದುರಂತವ್ಯಕ್ತಿಯಾಗಿ ಕಂಡುಬರುತ್ತಾನೆ.

ಇತರ ರಾಮಾಯಣಗಳಲ್ಲಿ ಕೈಕೆಯ ವರ್ತನೆ ಕೂಡ ಬಹಳ ಕಠಿಣತರದ್ದಾಗಿರುತ್ತದೆ. ರಾಮಾದಿಗಳಿಗೆ ತಾನೇ ವಲ್ಕಲ ಕೊಡುವವರೆಗೂ ಮುಂದುವರಿಯುತ್ತಾಳೆ. ಆದರೆ ರಾಮಾಯಣದರ್ಶನದ ಕೈಕೆ ಹಾಗಲ್ಲ. ಸೌಂದರ್ಯಕ್ಕೆ ಅನುರೂಪವಾದ, ಕೋಮಲತ್ವವುಳ್ಳ ಸಾಮಾನ್ಯ ಹೆಂಗಸು, ಅಬಲೆ. ಮಂಥರೆಯ ಮಾತಿಗೆ ಮರುಳಾಗಿ ಅವಳು ಹೇಳಿದಂತೆ ನಡೆದುಕೊಳ್ಳುತ್ತಾಳೆ. ಆದರೆ, ಅದರ ಫಲವಾಗಿ ದಶರಥನು ಮೂರ್ಛಿತನಾದಾಗ, ಸಾಮಾನ್ಯ ಹೆಣ್ಣಿನಂತೆ ತಲೆಯ ಮೇಲೆ ಕೈಹೊತ್ತು ಅಳುತ್ತ ಕುಳಿತುಕೊಳ್ಳುತ್ತಾಳೆ. ರಾಮನು ಬಂದು ವಿಚಾರಿಸಿದಾಗ ಉತ್ತರಿಸುವ ಶಕ್ತಿ-ಧೈರ್ಯ ಕೂಡ ಅವಳಿಗಿರುವುದಿಲ್ಲ. ಅವಳ ಬದಲಾಗಿ ಆಗ ಮಂಥರೆಯೇ ಮಾತನಾಡುತ್ತಾಳೆ. ಇಷ್ಟಾದರೂ ಒಮ್ಮೆ ಮಾತ್ರ "ರೂಪಲಾವಣ್ಯದಿಂದ ಚೆನ್ನದ ಕಠಾರಿಯೋಲ್ ಮಿರುಮಿರುಗಿ ನಿಂದಿರ್ದ" ಕೈಕೆ ಒಮ್ಮೆಲೇ "ಬಿದಿಯ ಕೈ ರಘುಕುಲಕಿರಿಸುವ ಕೈದುವಾದಳೆನೆ" ಹುಬ್ಬುಗಂಟಿಕ್ಕಿ ಮಿಂಚಿದಳು ಎನ್ನುತ್ತಾರೆ. ಈ ಅತಿಶಯ ಸನ್ನಿವೇಶಕ್ಕೆ ಕಾರಣಕೊಡುವಲ್ಲಿ ಇತರರಂತೆ ಕುವೆಂಪು ಅವರು ಕೂಡ ವಿಧಿಯ ಮೊರೆ ಹೋಗುತ್ತಾರೆ.

> **ಕರೆದವಿದ್ಯಾಮಾಯೆಯುಂ ಬೆಸಸಿದನು ವಿಧಿ !**
> **"ವಿಭೂತಿಯಾವಿಷ್ಕಾರಸಾಧನಾರ್ಥಂ ಬೇಗಮಾ**
> **ಕೈಕೆಯಾತ್ಮಂಬೊಕ್ಕು ರಚಿಸುವ ವಿನ್ಯಾಸಮಂ** (ಪು. ೮೫)

ಎನ್ನುತ್ತಾರೆ. ಅವರ ಪ್ರಕಾರ ಆ ಅಜ್ಞಾನ ಕವಿದಿದ್ದಷ್ಟು ಹೊತ್ತು ಮಾತ್ರ ಅವಳು ಹಾಗಿರುತ್ತಾಳೆ. ಆ ತೆರೆ ಸರಿದ ಕೂಡಲೇ ಮತ್ತೆ ಅಬಲೆಯಾಗಿ, ತನ್ನ ಸುತ್ತ ನಡೆಯುತ್ತಿರುವ ಗೊಂದಲದಿಂದ ತತ್ತರಿಸುತ್ತಾಳೆ. ದಶರಥನ ಮರಣಾನಂತರವಲ್ಲಂತೂ ಅವಳು ಪಶ್ಚಾತ್ತಾಪದಿಂದ ಬೆಂದುಹೋಗುತ್ತಾಳೆ. ಸೋದರ ಮಾವನ ಮನೆಯಿಂದ ಹಿಂತಿರುಗಿದ ಭರತನು ಬಂದು ವಿಚಾರಿಸಿದಾಗ ಅವಳು "ಮನ್ನಿಸೆನ್ನನ್ ಮಗನೆ ಪಾಪಿ

ಯೆನ್'' ಎಂದು ತನ್ನನ್ನು ತಾನು ನಿಂದಿಸಿಕೊಳ್ಳುತ್ತಾಳೆ. ತನ್ನ ಸ್ಥಿತಿಯನ್ನು ಹೀಗೆ ವಿವರಿಸುತ್ತಾಳೆ :

.........ದಿವಂಗತ ದಶರಥಕುಮಾರ
ವನವಾಸಿ ರಘುರಾಮ ಹೃದಯಚಂದ್ರ ಚಕೋರ,
ಪೆತ್ತಳೆಂದೀ ನೀಚಳನ್ನೇಕೆ ಪೊಗಳಿದಪೆ ? ಕೇಳ್,
ಕೇಡನೆಸಗಿದೆ ಬೇಡಿ, ವರವೆನ್ನ ಭಾಗಕ್ಕೆ
ಶಾಪವಾದುದೊ, ಕಂದ. ಮುಂದುಗಾಣದೆ ತಂದೆನೈ
ತಂದೆಗಪಮೃತ್ಯುವಂ ! ಮೇಣರಣ್ಯಕ್ಕಟ್ಟಿದೆನ್
ಕೌಸಲೆಯ ಕಂದನಂ, ಕಟ್ಟಿದೆನ್ ಕುತ್ತಿಗೆಗೆ
ತಿರೆಹೊರೆಯುರೆಯನ್ನೆನ್ನ ಕಂದನ ಕಂದಳಕ್ಕೆ !
ಪುತ್ರಾಭ್ಯುದಯ ಮೋಹದ ತಮಸ್ಸು ತೀವಿರ್ದ
ಲೋಭಪೈಶಾಚಿಗೀ ಒರಿಯ ಬಲಿಯಹುದೆಂದು
ಮುನ್ನಮಾನರಿಯಲಾರದೆ ಹೋದೆ. ಹಾಳಾದೆ !
ನಿನ್ನ ಬಾಳಿನ ಪಾಲ್ಗೆ ವಿಷವಾದೆ ! ರವಿಕುಲದ
ಚಂದ್ರನ ಶ್ರೀವನಕೆ ದಾವಾಗ್ನಿಯಾದೆ ! ಹಾ,
ಲೋಕನಿಂದೆಯ ತೋರು ಬೆರಳಿಗೆ, ಕರುಣೆವತ್ಸ,
ಹೇಸುಗುರಿಯಾದೆ (ಪು. ೧೨೦)

ತನ್ನಲ್ಲಿ ಮಮತೆಯ ಈ ಬೆಂಕಿಯನ್ನು ಹತ್ತಿಸಿದವಳು ಮಂಥರೆ; ಅವಳ ಮಾರ್ಗ ದರ್ಶನದಂತೆ ತಾನು ಹಾಗೆ ನಡೆದುಕೊಂಡೆ; ಪುತ್ರಾಭ್ಯುದಯವೇ ತನ್ನ ಗುರಿಯಾ ಗಿತ್ತು—ಎಂದು ವಿವರಿಸುತ್ತಾಳೆ. ಅದನ್ನು ಕೇಳಿ ಮಗನ ಮನಸ್ಸು ಬದಲಾಗಿರಬಹು ದೆಂಬ ಭ್ರಮೆ ಆಗ ಅವಳಲ್ಲಿ ಉಂಟಾಗುತ್ತದೆ. ಮಗನು ರಾಜನಾಗಲೆಂಬ ಬಯಕೆ ಮತ್ತೆ ಚಿಗುರೊಡೆಯುತ್ತದೆ. ಕೊನೆಗೆ,

ಬರಿದೈದ ಹದನಕಿನ್ ರೋದಿಸಿದರೇನ್, ಮಗುವೆ ?
ಕಡೆಗೆಲ್ಲರೈದುವೆಡೆಗೈದಿದನ್ ಮುದಿಯರಸು,
ರಾಮಲಕ್ಷ್ಮಣ ನಾಮಮಾತ್ರವನೆ ಜಪಿಸುತ್ತೆ,
ಮರೆತು ಕೈಕೆಯ ಕುವರನಂ, ರಾಮನಾದೊಡಂ
ನಡೆದನಡವಿಗೆ ಪಿತನ ವಾಕ್ಯಪರಿಪಾಲನೆಗೆ
ಪದಿನಾಲ್ಕು ಬರಿಸಂಬರಂ, ನೆಲಮರಾಜಕಂ,
ನೀನಲ್ಲದಿನ್ನಾರ್ ಸುಜನಮೂರ್ತಿಗಳಿರ್ಪ್. ಪೇಳ್.
ಪ್ರಜಾಭ್ಯುದಯ ಕಾಂಕ್ಷಿಗಳ್ ಕೋಸಲಕೆ ? (ಪು. ೧೨೧)

ಎಂದು ತನ್ನಾಸೆಯನ್ನು ಮುಂದಿಡುತ್ತಾಳೆ, ಸಾಮಾನ್ಯ ಹೆಂಗಸಿನಂತೆ. ದಶರಥನನ್ನು 'ಮುದಿಯರಸು' ಎಂದು ಕರೆಯುವಲ್ಲಿ, ಅವನು ತನ್ನ ಕಡೆಗಾಲದಲ್ಲಿ ಕೂಡ ರಾಮ ಲಕ್ಷ್ಮಣರನ್ನು ಮಾತ್ರ ನೆನೆದ, ತನ್ನ ಮಗ ಭರತನನ್ನು ನೆನೆಯಲಿಲ್ಲ—ಎಂಬ ಅವನ ಬಗೆಗಿನ ಕ್ರೋಧ ತುಂಬಿ ತುಳುಕುತ್ತಿದೆ.

ಇಷ್ಟೆಲ್ಲ ಹೇಳಿದರೂ, ಕೈಕೆ ತೋರಿದ ದಾರಿಯೇ ಬೇರೆ. ಭರತ ಹೊರಟ

ದಾರಿಯೇ ಬೇರೆ. ಅವನ ಕಡುನಿಂದೆಗಷ್ಟೇ ಅವಳು ಗುರಿಯಾಗಬೇಕಾಗುತ್ತದೆ. ಕೊನೆಗೆ ಬೇರೆ ದಾರಿ ಕಾಣದೆ :

**......ಕೈಬಿಡದಿರೆನ್ನಂ, ಮಗನೆ, ಕೆಟ್ಟಳೆನ್ !**
**ಜಗವೆ ಕೈಬಿಟ್ಟಳೆನ್ ! ನೂಂಕು ನರಕಕೆ ; ಸಹಿಸಿ**
**ಬಹೆನೊ ಕೇಡಂ ತವಿಸಿ : ನೂಂಕದಿರೊ ಶೂನ್ಯತೆಗೆ !** (ಪು. ೧೨೨)

ಎಂದು ಮುಂತಾಗಿ ಆರ್ತಳಾಗಿ ಅಂಗಲಾಚುತ್ತಾಳೆ. ಅವಳ ಮನದ ವ್ಯಾಮೋಹದ ಅಜ್ಞಾನ ಪಟಲ ಸರಿಯುತ್ತದೆ. ಮಗನನ್ನೇ ಅನುಸರಿಸಿ ನಡೆಯಲು ಸಿದ್ಧಳಾಗುತ್ತಾಳೆ. ರಾಮನನ್ನುಕರೆತರುವ ಸಲುವಾಗಿ ಅರಣ್ಯಕ್ಕೆ ಹೊರಟ ಅವನೊಂದಿಗೆ ತಾನೂ ಹೊರಡುತ್ತಾಳೆ. ರಾಮನನ್ನು ಕಂಡಾಗ ಅವಳ ಅಪರಾಧಿಪ್ರಜ್ಞೆ ಅವಳನ್ನು ಬಹಳವಾಗಿ ಕುಗ್ಗಿಸುತ್ತದೆ."ಪಶ್ಚಾತ್ತಾಪ ಶೋಕ ಭಾರಾಕ್ರಾಂತಗಾತ್ರೆ"ಯಾಗಿ ತಲೆಬಾಗಿ ದೂರದಲ್ಲಿ ನಿಲ್ಲುತ್ತಾಳೆ. ಆಗ ರಾಮನು "ಪಾಪಿಯಂ ಬೆಂಬಿಡದೆ ಹಿಂಬಾಲಿಸಟ್ಟಿಹಿಡಿಯುವ ಕೃಪಾಕೇತುವೋಲ್" ಮುಟ್ಟಿ ಹಿಡಿಯುತ್ತಾನೆ, ಅವಳ ಪಾದಯುಗ್ಮವನ್ನು. ಆಗ ಅವಳು ಅವನ ಕಾಲಮೇಲೆ ಕುಸಿದು ಬೀಳುತ್ತಾಳೆ. "ಭಕ್ತನಾತ್ಮವನೆತ್ತುವಂತೆ ಭಗವತ್ಪ್ರೀತಿ" ರಾಮನು ಅವಳನ್ನು ಹಿಡಿದೆತ್ತುತ್ತಾನೆ. ಇಲ್ಲಿ 'ಎತ್ತುವಿಕೆ'ಯು ಧ್ವನಿಪೂರ್ಣವಾಗಿದೆ. ಅವಳನ್ನು ಉದ್ಧಾರಮಾಡಿದನು ಎಂಬ ಮುಖ್ಯಾರ್ಥ ಇದರಲ್ಲಿ ಧ್ವನಿತವಾಗುತ್ತದೆ.

ಇಷ್ಟಾದರೂ ಅವಳು ದುಃಖರಹಿತೆಯಾಗಲಿಲ್ಲ. ರಾಮನು ಮತ್ತೆ ಅಯೋಧ್ಯೆಗೆ ಬರಂವವರೆಗೂ ಅವಳ ಚಿತ್ತಕ್ಕೆ ಶಾಂತಿಯಿರುವುದಿಲ್ಲ. ರಾಮನು ಹಿಂತಿರುಗಿದಾಗ ಕೂಡ, ಅವನ ಎದುರಿಗೆ ಬರುವ ಧೈರ್ಯ ಅವಳಲ್ಲಿ ಉಳಿದಿರುವುದಿಲ್ಲ. ಕೌಸಲ್ಯೆ, ಸುಮಿತ್ರೆ, ಊರ್ಮಿಳೆಯರು ಅವಳನ್ನು ಸಂತೈಸಿ ಕರೆತರುತ್ತಾರೆ. ರಾಮನನ್ನು ಕಂಡಾಗ ಅವಳಲ್ಲಿ ನವಚೇತನ ಮೂಡುತ್ತದೆ. ಅತಿಶಾಂತಿಯಿಂದ ಅವನೆಡೆಗೆ ನಡೆಯುತ್ತಾಳೆ, ತನ್ನ ಪಾದಕ್ಕೆ ನಮಸ್ಕರಿಸಿದ ಅವನನ್ನು ಹಿಡಿದೆತ್ತುತ್ತಾಳೆ. ಆಗ "ನಿನ್ನ ಮೆಯ್ಯಂ ಪೆತ್ತ ತಾಯಲ್ತು, ನಿನ್ನಾತ್ಮಮಂ ಪೆತ್ತಳಾನೆಂಬ ಪೆರ್ಮೆಯಂ ನುಡಿಯಿಲ್ಲದೆಯೆ ನುಡಿದಳೆಂಬಂತೆ ಪರಸಿದಳ್ ಚಿನ್ಮಯ ಮಹಾಮೌನದಿಂ" (ಪು. ೮೭೪) ಎಂದಿದ್ದಾರೆ ಕವಿ. ಅವರ ದೃಷ್ಟಿಯಲ್ಲಿ ರಾಮನ ದೇಹವನ್ನು ಹೆತ್ತವಳು ಕೌಸಲ್ಯೆಯಾದರೆ, ಅವನ ಆತ್ಮವನ್ನು ಹೆತ್ತವಳು ಕೈಕೆ. ರಾಮನ 'ಶ್ರೀರಾಮತ್ವಕ್ಕೆ' ಅವಳೇ ಕಾರಣ. ಆದ್ದರಿಂದ ರಾಮಾಯಣದಲ್ಲಿ ಅವಳ ಸ್ಥಾನ ಕೌಸಲ್ಯೆಯ ಸ್ಥಾನಕ್ಕಿಂತ ಮಿಗಿಲಾದುದು. ಅವಳ ಆ ವರ್ತನೆ ಅವಳಂತಹ ಕೋಮಲೆಗೆ ಒಪ್ಪುವಂತಹುದಲ್ಲ ನಿಜ. ಆದರೆ, ಅವಳು ತಾನಾಗಿ ಹಾಗೆ ವರ್ತಿಸಲಿಲ್ಲ, ವಿಧಿಯ ನಿಯಂತ್ರಣಕ್ಕೊಳಗಾಗಿ ಹಾಗೆ ವರ್ತಿಸಿದಳು. ಪಾದುಕಾ ಪ್ರದಾನ ಸಂದರ್ಭದಲ್ಲಿ ರಾಮನು ಭರತನನ್ನು ಸಂತೈಸುತ್ತಾ ಹೀಗೆ ಹೇಳುತ್ತಾನೆ :

**................. ವಿಧಿಯ ನಿಯತಿಯ ಪವಿಯ**
**ಘಾತಕೆ ಸಿಲುಕಿ ತಂದೆ ನನ್ನನಡವಿಗೆ ನೊಂದು**

ಕಳುಹಿ ಬೆಂದುರಿದಳಿದನೈಸಲೆ ? ಜಿತೇಂದ್ರಿಯಂ
ತಾನಂತೆಸೆಗುವೊಲೆಸಗಿದತ್ತಾ ವಜ್ರವಿಧಿ !
ಕುಬ್ಜೆ ಮಂಥರೆ ಬರಿಯ ಹುಲುನೆವಂ : ಮೂಡುವುದೆ
ಲೋಕ ಲಾವಣ್ಯನಿಧಿ ಮಾತೆ ಕೈಕೆಯ ಮನದಿ
ಕುಚರ ಬುದ್ಧಿಯ ಕುರೂಪಂ ? ಪೊಣ್ಮುವುದೆ ವಿಕೃತಿ
ಸೌಂದರ್ಯದಿಂ ? ಚೆಲ್ವಿನಭಿಲಾಷೆ ತಾನೇಗಳುಂ
ಚೆಲ್ವಿಂಗೆ ತಾಯ್, ಧರ್ಮದೇವತಾಕ್ರೌರ್ಯಕ್ಕೆ
ಕರುಣೆಯಲ್ಲದೆ ಬೇರೆ ಗುರಿಯಿಹುದೆ ? ಕಿರಿಯ ತಾಯ್
ನಿಯತಿ ಹಸ್ತದೊಳೊಂದು ಕೈದು ತಾಂ. ಕೀರ್ತಿಯುಂ
ಮೇಣ್ ಜನಪ್ರೀತಿಯುಂ ತೆತ್ತಾಕೆ ತಾಂ ಧನ್ಯೆ,
ದೇವ ಸನ್ಮಾನ್ಯೆ ; ಮೆರೆವುದು ತುದಿಯೊಳಾ ಸನ್ನಿ ! (ಪು. ೧೮೩)

ಈ ಮಾತುಗಳು, ಕೈಕೆ ಮಂಥರೆಯರ ಪಾತ್ರಗಳನ್ನು ಕವಿ ದರ್ಶಿಸಿರುವ ರೀತಿಗೆ ಹಿಡಿದ ಕನ್ನಡಿಯಾಗಿವೆ.

ಇನ್ನು ಸೀತೆ. ಅವಳು ಮಹಾಲಕ್ಷ್ಮಿಯ ಅವತಾರವೆಂದು ಎಲ್ಲ ರಾಮಾಯಣಗಳೂ ಸಾರುತ್ತವೆ. ಅದ್ಭುತರಾಮಾಯಣದ ಪ್ರಕಾರ, ನಾರದನಿಂದ ಶಪಿತಳಾದ ಲಕ್ಷ್ಮಿಯು ಆ ಶಾಪದ ಫಲವಾಗಿ. ಸೀತೆಯಾಗಿ ಭೂಲೋಕದಲ್ಲಿ ಜನಿಸುತ್ತಾಳೆ. ಅವಳೇ ಸಹಸ್ರ ಸ್ಕಂಧರಾವಣನನ್ನು ಸಂಹರಿಸುವ ಶಕ್ತಿಸ್ವರೂಪಿಣಿಯಾಗಿಯೂ, ಕಂಡುಬರುತ್ತಾಳೆ. ತತ್ತ್ವಸಂಗ್ರಹ ರಾಮಾಯಣದ ಪ್ರಕಾರವಂತೂ, ಲಕ್ಷ್ಮಿಯಾಗಿದ್ದ ಆಕೆ ಸದಾ ರಾಮನ (ವಿಷ್ಣುವಿನ) ವಕ್ಷಸ್ಥಲದಲ್ಲೇ ಇರುತ್ತಾಳೆ. ಅವಳನ್ನು ಅಲ್ಲಿಂದ ಬೇರ್ಪಡಿಸುವುದು ಯಾರಿಗೂ ಸಾಧ್ಯವಿಲ್ಲ. ರಾವಣನಿಂದ ಅಪಹೃತಳಾದ ಸೀತೆಯು ಕೂಡ ನಿಜವಾದ ಸೀತೆಯಲ್ಲ, ಮಾಯಾಸೀತೆ, ಸೀತೆಗೆ ಮುಂದೆ ನಡೆಯುವ ವಿಚಾರವೆಲ್ಲ ಗೊತ್ತು. ರಾಮಾವತಾರದ ಮೂಲೋದ್ದೇಶವಾದ ರಾವಣವಧೆಗೆ ತನ್ನಿಂದ ಸಹಾಯವಾಗುವು ದೆಂಬುದನ್ನೂ ಅವಳು ಬಲ್ಲಳು. ಅದನ್ನೇ ಕಾರಣವಾಗಿಟ್ಟುಕೊಂಡು, ತನ್ನನ್ನೂ ಕಾಡಿಗೆ ಕರೆದುಕೊಂಡು ಹೋಗುವಂತೆ ರಾಮನನ್ನು ಅವಳು ಪ್ರಾರ್ಥಿಸುತ್ತಾಳೆ. ಅವನ ಅನುಮತಿಯಂತೆ ಅವನೊಡನೆ ಹೋಗಿಯೂ ಹೋಗುತ್ತಾಳೆ.

ರಾಮಾಯಣದರ್ಶನದಲ್ಲಿಯಾದರೋ, ಅವಳನ್ನು ದೇವಲೋಕಕ್ಕಿಂತ ಮನುಷ್ಯ ಲೋಕಕ್ಕೆ ಹತ್ತಿರದವಳಾಗಿ ಚಿತ್ರಿಸಲಾಗಿದೆ. ಭೂಜಾತೆಯಾದ್ದರಿಂದ ಅವಳು 'ಈ ಭೂಮಿಯ ಮಗಳು' ಎಂಬಂತೆ ಪರಿಗಣಿಸಲಾಗಿದೆ. ಎಂದರೆ ಅವಳನ್ನು ಒಬ್ಬಳು ಸಾಮಾನ್ಯ ಮನುಷ್ಯಳಂತೆಯೇ ನಿರೂಪಿಸಲಾಗಿದೆ ಇತರ ಹೆಂಗಸರಂತೆಯೇ ಆಕೆ ಯಲ್ಲೂ ಭಾವಭಾವನೆಗಳು ಉಕ್ಕಿಹರಿಯುತ್ತವೆ ಕಾಡಿನಲ್ಲಿ ಹಸಿವೆಯಿಂದ ಒಲೆ ಹತ್ತಿಸಲಾರದೆ ಒದ್ದಾಡುತ್ತಾಳೆ. ಮುಖ ಕೈ ಮೈಯನ್ನೆಲ್ಲ ಮಸಿಮಾಡಿಕೊಳ್ಳುತ್ತಾಳೆ. ಹಾಸ್ಯ ಮಾಡಿದ ಗಂಡನ ಮೇಲೆ ಸಿಡುಕುತ್ತಾಳೆ. ಇಷ್ಟೆಲ್ಲ ಇದ್ದರೂ ಅವಳ ದೃಢವ್ರತ, ಪತಿಪ್ರೇಮ, ಅತಿಶಯ ತೇಜಸ್ಸು, ಪಾತಿವ್ರತ್ಯದ ಹಿರಿಮೆ ಇವುಗಳ ಚಿತ್ರಣಕ್ಕೆ ಮಾತ್ರ

ಇಲ್ಲಿ ಕುಂದು ಬಂದಿಲ್ಲ. ಹೀಗಾಗಿ ಆಕೆ ಕೂಡ ಸಾಮಾನ್ಯ ಮಾನವಳಾಗಿದ್ದು ತನ್ನ ಅಸಾಮಾನ್ಯ ಗುಣಗಳಿಂದಾಗಿ ದೈವತ್ವಕ್ಕೇರಿದ್ದಾಳೆ.

ಶ್ರೀರಾಮನು ವಿಷ್ಣುವಿನ ಅವತಾರ. ಅವನು ದೇವರು, ಸರ್ವಶಕ್ತ ಎಂಬ ನಂಬಿಕೆ ನಮ್ಮಲ್ಲಿ ಆಳವಾಗಿ ಬೇರೂರಿದೆ. ದೈವತ್ವದ ಪರಿಕಲ್ಪನೆಯಾದರೋ, ಒಮ್ಮೆ ಮೂಡಿತೆಂದರೆ, ಅನಂತರದಲ್ಲಿ ಭಕ್ತರ ಭಾವಲಹರಿಗೆ, ನಂಬುಗೆಯ ವಿಧಾನಕ್ಕೆ ಅನುಗುಣವಾಗಿ, ನಿರಂತರವಾಗಿ ಹಲವು ದಿಕ್ಕುಗಳಲ್ಲಿ ಹರಿಯುತ್ತದೆ. ಇದನ್ನು ವಿವಿಧ ರಾಮಾಯಣಗಳ ಪರಿಶೀಲನೆಯಿಂದ ಮನಗಾಣಬಹುದು.

**ಸ ಹಿ ದೇವೈರುದೀರ್ಣಸ್ಯ ರಾವಣಸ್ಯ ವಧಾರ್ಥಿಭಿಃ**
**ಅರ್ಥಿತೋ ಮಾನುಷೇ ಲೋಕೇ ಜಜ್ಞೇ ವಿಷ್ಣುಃ ಸನಾತನಃ ॥**

ರಾವಣನ ವಧೆಯ ಸಲುವಾಗಿ ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಿದರು. ಅವನೇ ಶ್ರೀರಾಮನಾಗಿ ಜನಿಸಿದ ಎಂಬುದಾಗಿ ವಾಲ್ಮೀಕಿ ರಾಮಾಯಣದ ಅಯೋಧ್ಯಾಕಾಂಡ ದಲ್ಲಿ ಹೇಳಲಾಗಿದೆ. ಬಾಲಕಾಂಡ, ಯುದ್ಧಕಾಂಡಗಳಲ್ಲಿ ಕೂಡ ಈ ವಿಚಾರದ ಸೂಚನೆ ಇದೆ. ಪದ್ಮಪುರಾಣ, ಕೂರ್ಮಪುರಾಣ, ಭಾಗವತಪುರಾಣ, ಅಧ್ಯಾತ್ಮರಾಮಾಯಣ ಮುಂತಾದವುಗಳಲ್ಲಿಯೂ ಇವನ್ನು ಕಾಣುತ್ತೇವೆ. ಪದ್ಮಪುರಾಣದಲ್ಲಿ ಒಂದೆಡೆ ಶಿವನು ರಾಮನನ್ನು ಕುರಿತು,

**ತ್ವಂ ಹಿ ನಾರಾಯಣಃ ಶ್ರೀಮಾನ್ ಸೀತಾ ಲಕ್ಷ್ಮೀಃ ಸನಾತನೀ**
**ಮಾತಾ ಸರ್ವಸ್ಯ ವೈದೇಹೀ ಪಿತಾ ತ್ವಂ ರಘುನಂದನ ॥**

ನೀನೇ ಎಲ್ಲದಕ್ಕೂ ತಂದೆಯಾದ ಶ್ರೀಮನ್ನಾರಾಯಣ. ಸೀತೆಯೇ ಸರ್ವಮಾತೆಯಾದ ಮಹಾಲಕ್ಷ್ಮಿ—ಎಂದು ಪ್ರಾರ್ಥಿಸುತ್ತಾನೆ. ವಾಲ್ಮೀಕಿ ರಾಮಾಯಣದ ಬಾಲಕಾಂಡ ದಲ್ಲಂತೂ ''ಕೃತ್ವಾತ್ಮಾನಂ ಚತುರ್ವಿಧಂ'' ಎಂದರೆ ವಿಷ್ಣುವು ತನ್ನನ್ನೇ ನಾಲ್ಕು ಭಾಗ ಗಳಾಗಿ ಮಾಡಿಕೊಂಡು ನಾಲ್ಕು ಮಕ್ಕಳಾಗಿ ಜನಿಸಿದನು ಎಂದು ಕೂಡ ಹೇಳಿದೆ. ಅಗಸ್ತ್ಯ ಸಂಹಿತೆಯಲ್ಲಿ, ಮಹಾವಿಷ್ಣುವು ರಾಮನಾಗಿಯೂ, ಆದಿಶೇಷನು ಲಕ್ಷ್ಮಣ ನಾಗಿಯೂ, ಶಂಖಚಕ್ರಗಳು ಭರತ ಶತ್ರುಘ್ನರಾಗಿಯೂ ದೇವತೆಗಳು ಕಪಿಗಳಾಗಿಯೂ ಜನಿಸಿದರೆಂದು ಹೇಳಲಾಗಿದೆ.

ಇದೆಲ್ಲ ಹೀಗಿರುವಾಗ ಉತ್ತರ ಧರ್ಮಕಾಂಡ, ಶೇಷಧರ್ಮ, ಬ್ರಹ್ಮಾಂಡ ಪುರಾಣ, ಕಾವೇರೀಖಂಡ, ಮತ್ಸ್ಯಪುರಾಣ ಮುಂತಾದವುಗಳಲ್ಲಿ ಮತ್ತೊಂದು ರೀತಿಯ ಅಭಿಪ್ರಾಯವನ್ನು ಕಾಣುತ್ತೇವೆ.

**ಲಕ್ಷ್ಮಣೋಽಪಿ ಹರಿಃ ಸಾಕ್ಷಾತ್ ಸೇವಾಂ ಮಮ ಕರಿಷ್ಯತಿ**
**ರಾಮೋ ಮಮಾಂಶ ಸಂಭೂತಃ ಸೀತಾ ಚ ಗಿರಿಜಾಂಶಜಾ ॥**

ಎಂದು ಶಿವ ಹೇಳಿಕೊಳ್ಳುತ್ತಾನೆ. ಇದರ ಪ್ರಕಾರ, ಶಿವನೇ ರಾಮ, ಪಾರ್ವತಿಯೇ ಸೀತೆ, ಲಕ್ಷ್ಮಣನೇ ಹರಿ, ಎಂಬುದಾಗಿ ಅರ್ಥವಾಗುತ್ತದೆ. ಶಿವಾಧಿಕ್ಯವನ್ನು ಎತ್ತಿ

ಹಿಡಿಯುವ ಉದ್ದೇಶವನ್ನು ಇದರ ಹಿನ್ನೆಲೆಯಲ್ಲಿ ಗಮನಿಸಬಹುದು.

ಸಂಕ್ಷೇಪರಾಮಾಯಣದ ಪ್ರಕಾರ ರಾಮನು ಬ್ರಹ್ಮನ ಅವತಾರ, ಅವನು ಹನ್ನೊಂದು ಸಾವಿರ ವರ್ಷ ರಾಜ್ಯಭಾರಮಾಡಿ ಬ್ರಹ್ಮಲೋಕಕ್ಕೆ ಹಿಂದಿರುಗುತ್ತಾನೆಂದು ಅದರಲ್ಲಿ ಹೇಳಿದೆ. ಬ್ರಹ್ಮಪುರಾಣದಲ್ಲಿ ಕೂಡ ಈ ರಾಮಬ್ರಹ್ಮಸಮೀಕರಣವನ್ನು ಕಾಣಬಹುದು. ಅದರಲ್ಲಿ,

**ಲೋಕಸ್ರಷ್ಟಾ ಪುರಾದೇವೈಃ ಅವತೀರ್ಣೋ ಮಹೀತಲೇ**
**ರಾಮ ಇತ್ಯುಚ್ಯತೇ ಲೋಕೈಃ ರಾವಣಾದಿ ವಧಾನ್ಮುನೇ ॥**

ಎಲೈ ಮುನಿಯೇ, ಪೂರ್ವದಲ್ಲಿ ದೇವತೆಗಳೊಡನೆ ಭೂಮಿಯಲ್ಲವತರಿಸಿದ ಬ್ರಹ್ಮನು ರಾವಣಾದಿಗಳನ್ನು ಕೊಂದು ಜನರಿಗೆಲ್ಲ ಅಭಿರಾಮನಾದುದರಿಂದ ಸಮಸ್ತಲೋಕ ದಿಂದಲೂ ರಾಮನೆಂದು ಹೇಳಲ್ಪಡುತ್ತಿರುವನು–ಎಂದು ಸ್ಪಷ್ಟವಾಗಿ ಹೇಳಿದೆ.

ಸ್ಕಾಂದಪುರಾಣ ಗರುಡ ಪುರಾಣಗಳ ಪ್ರಕಾರ ರಾಮನು ಶಿವವಿಷ್ಣುಗಳ ಅಂಶ ದಿಂದ ಸಂಭವಿಸಿದವನು. "ರಾಮೋ ಹರಿಹರಾತ್ಮಃ ಪರಬ್ರಹ್ಮಸ್ವರೂಪೋಽಯಂ ಪ್ರಾಕೃತೋ ನಹಿ ಮಾನುಷಃ" ಎಂದು ಸ್ಕಾಂದಪುರಾಣದಲ್ಲಿ ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ನಿರ್ವಾಣಖಂಡದಲ್ಲಂತೂ ರಾಮನನ್ನು ಕುರಿತು ಶಿವನು,

**ಭ್ರಾತರಸ್ತೇ ತ್ರಯೋ ರಾಮ ಬ್ರಹ್ಮಾವಿಷ್ಣುರಹಂ ತಥಾ**
**ತ್ವತ್ತೋಽವಿನಿರ್ಗತಾ ಭೂಯೋ ಪರಂ ಲೀಯೇ ಮಹಿತ್ವಯೀ ॥**
**ತ್ವಮೇವ ಪರಮಂ ಗುಹ್ಯಂ ತ್ವಮೇವ ಪರಮಂ ಪದಂ**
**ತ್ವಮೇವ ಪರಮಂ ಬ್ರಹ್ಮ ತ್ವಮೇವ ಶರಣಂ ಹಿ ನಃ ॥**

'ಅಯ್ಯಾ ರಾಮ, ಬ್ರಹ್ಮನೂ ವಿಷ್ಣುವೂ ನಾನೂ ಕೂಡ ನಿನ್ನ ಮೂರು ಮಂದಿ ತಮ್ಮಂದಿರಾಗಿರುವೆವು. ನಾವು ನಿನ್ನ ದೆಸೆಯಿಂದಲೇ ಉದಯಿಸಿದವರಾಗಿರುವೆವು. ನಿನ್ನಲ್ಲಿಯೇ ಲಯವನ್ನು ಹೊಂದುವೆವು. ನೀನೇ ಪರಮರಹಸ್ಯವಾದ ಪದಾರ್ಥವು. ನೀನೇ ಪರಮಪದವು. ನೀನೇ ಪರಬ್ರಹ್ಮವು. ನಮಗೆಲ್ಲ ನೀನೇ ಗತಿ'' ಎಂದು ಹೇಳು ತ್ತಾನೆ. ಇದರ ಪ್ರಕಾರ ರಾಮನು ಬ್ರಹ್ಮ, ವಿಷ್ಣು, ರುದ್ರ ಈ ಮೂವರಿಗೂ ಮೀರಿ ದವನು. ಅವನೇ ಪರಮಪದ–ಪರಬ್ರಹ್ಮ ಎಂದಾಗುತ್ತದೆ. ವಿಷ್ಣುಯಾಮಳದಲ್ಲಿ ಕೂಡ ಇದೇ ವಿಚಾರ ಉಕ್ತವಾಗಿದೆ. ಅಲ್ಲಿ,

**ಬ್ರಹ್ಮ ವಿಷ್ಣು ಶಿವಾದ್ಯೈರ್ಯತ್ ಜಗಜ್ಜನ್ಮಾದಿ ಕಾರಣಮ್**
**ಸದಸದ್ರೂಪಮವ್ಯಕ್ತಂ ತದ್ರಾಮೋ ಭೂದ್ರಘೋಃಕುಲೇ ॥**

"ಬ್ರಹ್ಮ ವಿಷ್ಣು ಶಿವಾದಿರೂಪಗಳಿಂದ ಯಾವ ವಸ್ತುವು ಜಗತ್ತಿನ ಉತ್ಪತ್ತಿ ಲಯ ಮುಂತಾದುವಕ್ಕೆ ಕಾರಣವಾಗಿರುವುದೋ ಅಂತಹ ಸದಸದ್ರೂಪವಾದ ಅವ್ಯಕ್ತವಾದ ವಸ್ತುವೇ ರಘುಕುಲದಲ್ಲಿ ಶ್ರೀರಾಮರೂಪವಾಗಿ ಅವತರಿಸಿತು''–ಎಂದು ನಾರದನು ಹೇಳಿರುವುದನ್ನು ಇಲ್ಲಿ ಗಮನಿಸಬಹುದು.

ಹೀಗೆ ಜೈನೇತರ ರಾಮಾಯಣಗಳು ಶ್ರೀರಾಮನನ್ನು ಪರಮಾತ್ಮಸ್ವರೂಪನಾಗಿ

ಚಿತ್ರಿಸುತ್ತಾ ಹೋಗಿವೆ. ಆದರೆ ಕುವೆಂಪು ಅವರು ಈ ಅಂಶಕ್ಕಿಂತ ರಾಮನ ಆದರ್ಶ ಪುರುಷತ್ವಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಮಾನವನಾಗಿ ಮರ್ತ್ಯದಲ್ಲಿ ನಿಂತು ಆದರ್ಶವ್ಯಕ್ತಿತ್ವದಿಂದ ಮರ್ತ್ಯವನ್ನು ಮೀರಿ ದೈವತ್ವಕ್ಕೇರಿನಿಂತ ಮಹಾಪುರುಷನಾಗಿ ಅವನನ್ನು ಚಿತ್ರಿಸಿದ್ದಾರೆ. ಅವರ ಪ್ರಕಾರ ರಾಮನು ಕೂಡ ವಿಧಿಯ ಹಸ್ತದ ಹಿಡಿತಕ್ಕೆ ಹೊರತಾದವನಲ್ಲ. "ಮಂಥರೆ ರಾಮರಾವಣರೆಲ್ಲರು ಸೂತ್ರಗೊಂಬೆಗಳಲ್ತೆ ಆ ವಿಧಿಯ ಹಸ್ತದಲಿ" (ಪು. ೭೧) ಎಂದಿದ್ದಾರೆ. ಈ ವಿಧಿಯ ತತ್ತ್ವವನ್ನು ರಾಮನು ಚೆನ್ನಾಗಿ ತಿಳಿದಿದ್ದಾನೆ. ತಾನು ಕಾಡಿಗೆ ಹೋಗಬೇಕಾದುದು ವಿಧಿಯ ಇಚ್ಛೆ ; ಕನಸಿನಿಂದ ಅದು ಸೂಚಿತವಾಗುತ್ತಿದೆ : ಆದ್ದರಿಂದ ಅದನ್ನು ಮೀರಬಾರದು ಎಂದು ಕಾಡಿಗೆ ಹೊರಡುತ್ತಾನೆ. ಆದರೆ, ಹೀಗೆ ಹೇಳಿದ ಮಾತ್ರಕ್ಕೆ, ಅವನು, ಎಲ್ಲವನ್ನೂ ವಿಧಿಯ ಮೇಲೆಯೇ ಹಾಕಿ ಕೈಕಟ್ಟಿ ಕುಳಿತುಕೊಳ್ಳುವ ವ್ಯಕ್ತಿಯಲ್ಲ. ಅವನಿಗೆ ತನ್ನ ಪೌರುಷದಲ್ಲಿ ಅಚಲವಾದ ವಿಶ್ವಾಸವಿದೆ. ಆದರೆ ಆ ಪೌರುಷವನ್ನು ಹಿಂದೆ ಮುಂದೆ ನೋಡದೆ ಪ್ರಯೋಗಿಸುವ ಅವಿವೇಕಕ್ಕೆ ಮಾತ್ರ ಅವನು ಕೈಹಾಕುತ್ತಿರಲಿಲ್ಲ. ಪಟ್ಟಾಭಿಷೇಕ ತಪ್ಪಿದಾಗ ರೋಷಾವಿಷ್ಟನಾದ ಲಕ್ಷ್ಮಣನನ್ನು ಆತ ಹೀಗೆ ಸಂತೈಸುತ್ತಾನೆ :

> **ದೈವಮಂ ಮುಂದಲೆವಿಡಿದು ತರುಬುವದಟರ್ಕೆ,**
> **ಅವರಜನೆ. ವೇರೆಯಿದೆ ಮರ್ತ್ಯದ ಪರಾಕ್ರಮಕೆ.**
> **ಮರ್ತ್ಯದಾಳ್ ಬದಿಯೊಡನೆ ತಾಂ ನಡೆಯುವನ್ನೆಗಂ**
> **ಕಲಿ ; ಬಿಂಕದಿಂ ಬದಿಗಿದಿರ್ ಮಲೆಯೆ ಬಲಿ, ಕೂಡೆ**
> **ತಾನದರ ಚಕ್ರಶೈಲತೆಗೆ. ಪಾಯದಿರು ತಲೆ**
> **ಬಲ್ಲಿತೆಂದರೆ ಬಂಡೆಯಂ. ದುಡುಕದಿರು, ತಮ್ಮ.**
> **ಪಿತನ ದೌರ್ಬಲ್ಯದೊಳೆ ಕಾಣ್ ವಿಧಿಯ ವಿನ್ಯಾಸಮಂ.**
> **ನಿನ್ನ ಮಾತನೆ ಕೇಳ್ದು, ಬಂದೆಡರನೆಲ್ಲಮಂ**
> **ಗೆಲ್ದು, ಸಿಂಹಾಸನವನಡರೆ ನಾಂ, ನೆಮ್ಮದಿಯೆ ಪೇಳ್**
> **ಕೋಸಲಕೆ ? ನಮ್ಮ ನಮ್ಮಂತಃಕಲಹದಗ್ನಿ ತಾಂ**
> **ಸುಟ್ಟುರುಹದಿಹುದೆ ನಾಡನಿತುಮಂ ? ಕಾಡಿಂಗೆ**
> **ನಾನೊರ್ವನಾಗುವುದು ಲೇಸೊ ? ಯುಗಯುಗಗಳಿಂ**
> **ರವಿಕುಲದರಸುಗಳ್ಗೆ ನಚ್ಚುನೆಲೆವೀಡಾದ**
> **ನಾಡಿದೆಲ್ಲಂ ತವಿದು ಕಾಡಾಗುವುದು ಲೇಸೊ ?**
> **ನಾಡ ಹಿರಿಯೊಳ್ಪಿಗೋಸುಗಮೆ ಬಲಿಗೊಡುವೆನಯ್**
> **ನಾನೆನ್ನ ಕಿರಿಯೊಳ್ಪನಾನಂದದಿಂ ನೀನದಕೆ**
> **ನೆರವೀಯುವೆಳ್ಕೆನಗೆ, ಸೋದರನೆ, ತೊರೆರಭಸಮಂ.** (ಪು. ೯೪ – ೯೫)



ಇದು ಅವನ ವಿವೇಕಕ್ಕೆ ಸಾಕ್ಷಿಯಾಗಿದೆ. ಕಷ್ಟದ ಸಮಯದಲ್ಲಿ ವಿವೇಚನಾಶೂನ್ಯನಾಗದಿರುವುದು, ಕೆಡುಕಿನಲ್ಲೂ ಒಳಿತನ್ನು ಹುಡುಕಲು ಹೋಗುವುದು, ರಾಮನ ಒಳ್ಳೆಯ ಗುಣ.

ಕುವೆಂಪು ಅವರ ರಾಮನಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಅಂಶ

ವೆಂದರೆ ಗಿರಿವನಪ್ರಿಯುತೆ. ಯಜ್ಞರಕ್ಷಣೆಗೆ ಹೋಗಿದ್ದ ಸಂದರ್ಭದಲ್ಲಿ, ವಿಶ್ವಾಮಿತ್ರನನ್ನು ಕುರಿತ ಆತ :

.........   ............ ...ಗುರುದೇವ,
ನಿಮ್ಮ ಕರುಣೆಯಿಂದಮಗೆ ಲಭಿಸಿತೀ ವನಸುಖಂ.
ದಾರಿದ್ರ್ಯಮಲ್ತೆ ಆ ನಾಗರಿಕ ಜೀವನಂ
ಈ ವನ್ಯಸಂಸ್ಕೃತಿಯು ಮುಂದೆ ? (ಪು. ೪೪)

ಎನ್ನುತ್ತಾನೆ, ಅವನ ದೃಷ್ಟಿಯಲ್ಲಿ ನಾಡಿಗಿಂತ ಕಾಡೇ ಮಿಗಿಲಾದುದು. ಆದ್ದರಿಂದ ಪಟ್ಟಾಭಿಷೇಕ ತಪ್ಪಿದುದೂ ಆತನಿಗೆ ಹಿತವೇ ಆಗುತ್ತದೆ. ಕೈಕೆಯನ್ನು ಕುರಿತು ಆತ.

ನೀನ್ ಕೇಳ್ದುದಾವರಂ ನಾನೆ ಬೇಡಿದುದಲ್ತೆ ?
ಕಾಡನಲೆದಲ್ಲಲ್ಲಿ ಮುನಿವಸತಿಗಳೊಳಿರ್ದು
ಭೂಮಿಯುಂ ನೋಡಿ ಬಹೆನೆಂಬೆನ್ನ ಬೇಡಿತಕೆ
ಬೆದರಿದಯ್ಯಂ, ಬೇಗದಿಂ ಮುಕುಟಭಾರದಿನೆನ್ನ
ಹಾರಲೆಳಸಿದ ಗರಿಯ ಹಾರೈಕೆಯುಂ ತಡೆವ
ಮೋಹದಿಂದಿಂತೆಸಗಿದನ್. ಭರತನಂ ವಂಚಿಸುವ
ಬುದ್ಧಿಯಿನಿತಿಲ್ಲಮಾತನೊಳದಕೆ ನಾಂ ಸಾಕ್ಷಿ.
ನಿನ್ನಾಸೆ ಸಾರುತಿದೆ ನನ್ನ ಕಲ್ಯಾಣಮಂ ;
ನೀಂ ತಾಯ್ ದಿಟಂ ! ಭರತನಾಳುವನ್ ; ಬಾಳುವನ್ ;
ಕೋಸಲಧರಾಭಾರಮಂ ಜಗಂ ಮೆಚ್ಚುವೊಲ್
ತಾಳುವನ್ ಶಿರದಿ ! ವನವಾಸಮೇಂ ಸಾಹಸಂ ?
ಗಿರಿವನಪ್ರಿಯನೆನಗೆ ಗಿರಿವನಾವಾಸಮೇ
ಕಮಲಾನಂದಕರಮಲ್ತೆ ? ಮೇಣ್ ವಲ್ಕಲಜಟೆಗಳೇಂ
ಕಿರೀಟಕಿಂ ಕೀಳೆ ? ಪಿತೃ ವಚನ ಪರಿಪಾಲನೆಯೆ
ನನಗೆ ಧರ್ಮಂ, ಪ್ರಥಮಮುತ್ತಮಂ ! (ಪು. ೮೭)

ಎಂದು ಹೇಳುತ್ತಾನೆ. ರಾಮನ ಧರ್ಮಪರಿಪಾಲನಾದೃಷ್ಟಿಯನ್ನು ಕೂಡ ಇಲ್ಲಿ ಗಮನಿಸಬೇಕು.

ಹೀಗೆ ವಿಧಿಸತ್ವವನ್ನು ತಿಳಿದವನೂ ಗಿರಿವನಪ್ರಿಯನೂ ಆಗಿದ್ದರೂ ಪಿತೃಮರಣದ ವಾರ್ತೆಯನ್ನು ಕೇಳಿದಾಗ ಮಾತ್ರ ಸಾಮಾನ್ಯ ಮನುಷ್ಯನಂತೆಯೇ ದುಃಖಕ್ಕೊಳಗಾಗುತ್ತಾನೆ. "ಸುಯ್ದು, ಗುಹನ ತೋಳ್ಗಳಿಗೆ" ಒರಗುತ್ತಾನೆ. ಎಚ್ಚರವಾದ ಕೂಡಲೇ "ತಂದೆ ಹೋದನೆ, ತಮ್ಮ, ಸೌಮಿತ್ರಿ ?" ಎಂದು ಕೇಳಿ ಮತ್ತೆ ಮೂರ್ಛೆ ಹೋಗುತ್ತಾನೆ. ಆ ಸಂದರ್ಭದಲ್ಲಿ ಗುರುವಸಿಷ್ಠನು ಅವನಿಗೆ ಧೈರ್ಯ ತುಂಬಬೇಕಾಗುತ್ತದೆ.

. ......   .........ನೆನೆ ನೈಜಧರ್ಮಮಂ
ಜನ್ಮದುದ್ದೇಶಮಂ, ತಪನಕುಲನೃಪಸೂನು.
ಕಡಿಸುವೆಯೊ ಕಾಡೊಳಲೆದಾಯುಃ ಪ್ರಯಾಣಂ ?
ಲೋಕದುದ್ಧಾರಕ್ಕೆ ಮೇಣಾತ್ಮ ಸಂಸ್ಕೃತಿಗೆ
ನೈವೇದ್ಯವಾಗುವೆಯೊ ? ನೆನೆ ! (ಪು. ೧೮೨)

ಎಂದಾಗ ಅದ್ಭುತವಾದ ವಜ್ರಸುಸ್ಥಿರ ದೃಢತೆ ಆತನ ಮನದಲ್ಲಿ ಮೂಡುತ್ತದೆ.

ಇದೇ ರೀತಿ ಮತ್ತೊಂದೆಡೆ ಕೂಡ ರಾಮನ ಸಾಮಾನ್ಯ ಮನುಷ್ಯತ್ವವನ್ನು ಕಾಣುತ್ತೇವೆ. ಸೀತಾಪಹರಣವಾದ ಸಂದರ್ಭ. ಆ ಸಂದರ್ಭದಲ್ಲಿ ರಾಮನ ಮನಸ್ಸು ಸಾಮಾನ್ಯರ ಮನಸ್ಸಿನಂತೆಯೇ ವರ್ತಿಸುತ್ತದೆ. ಜಟಾಯುವು ಪರಿಚಿತ ಮತ್ತು ಸೀತಾರಾಮ ಲಕ್ಷ್ಮಣರ ಸಮೀಪದಲ್ಲೇ ವಾಸವಾಗಿದ್ದವನು ; ಅಂತಹವನು ಕಣ್ಣಿಗೆ ಬೀಳದೆ ಹೋದಾಗ, ತಾವು ಇಲ್ಲದ ಸಂದರ್ಭದಲ್ಲಿ ಸೀತೆಯನ್ನು ಅವನೇ ಕದ್ದೊಯ್ದಿರಬೇಕೆಂದು ರಾಮನು ಅವನ ಮೇಲೆಯೇ ಶಂಕಿತಾಳುತ್ತಾನೆ. ಆದರೆ ನಿಜಾಂಶ ತಿಳಿದಕೂಡಲೇ ಬಹಳವಾಗಿ ಪರಿತಪಿಸುತ್ತಾನೆ.

ಹೀಗೆ ಪಶ್ಚಾತ್ತಾಪಪಡುವುದನ್ನು ವಾಲಿವಧೆಯ ಸಂದರ್ಭದಲ್ಲಿ ಕೂಡ ಕಾಣುತ್ತೇವೆ. ವಾಲಿಯು ಮರಣೋನ್ಮುಖನಾಗಿದ್ದಾಗ, ರಾಮನು ಅವನ ಬಳಿ ಕುಳಿತು ದುಃಖಿಸುತ್ತಾನೆ. ಅವನು ನಿರಪರಾಧಿಯೆಂದು ತಿಳಿದಾಗ ಅವನ ಮುಂದೆ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. "ಮಾಡಿದ ತಪ್ಪನೊಪ್ಪಿಕೊಳ್ವುದೆ ಲೌಕಿಕದ ಬೀರಕ್ಕೆ ಸಲ್ಲಕ್ಷಣಂ" (ಪು. ೩೨೭) ಎಂಬುದು ರಾಮನ ಆದರ್ಶ. ಈ ಆದರ್ಶ ಇಂತಹ ಸಂದರ್ಭಗಳಲ್ಲಿ ಸ್ಪಷ್ಟವಾಗಿ ಪ್ರಕಟವಾಗುತ್ತದೆ.

ರಾಮನ ಹಿರಿಮೆಯನ್ನು, ಆದರ್ಶವನ್ನು ನಾವು ಕಾಣುವ ಮತ್ತೊಂದು ಪ್ರಸಂಗವೆಂದರೆ ಸೀತೆಯ ಅಗ್ನಿಪ್ರವೇಶದ ಸಂದರ್ಭ. ಸೀತೆಯ ಪಾತಿವ್ರತ್ಯವು ಲೋಕಕ್ಕೆ ಗೊತ್ತಾಗಬೇಕು ; ಅದಕ್ಕಾಗಿ ಅಗ್ನಿಪರೀಕ್ಷೆ. ಅದನ್ನು ಕೂಡ ರಾಮ ಸೂಚಿಸುವುದಿಲ್ಲ. ಎಲ್ಲಿಗಾದರೂ ಹೊರಟುಹೋಗೆಂದು ರಾಮನು ತನ್ನನ್ನು ತಿರಸ್ಕರಿಸಿದಾಗ ಸೀತೆ ತಾನಾಗಿಯೇ ಆಯ್ದುಕೊಂಡ ಮಾರ್ಗ, ಅದೂ ಪರೀಕ್ಷೆಗಾಗಿ ಅಲ್ಲ—ಪ್ರಾಣತ್ಯಾಗಕ್ಕಾಗಿ. ಅದಕ್ಕನುಗುಣವಾಗಿ ಅವಳು ಅಗ್ನಿಪ್ರವೇಶಮಾಡುತ್ತಾಳೆ. ಹಿಂದೆಯೇ ರಾಮ ಕೂಡ ಅಗ್ನಿಪ್ರವೇಶ ಮಾಡುತ್ತಾನೆ. ರಾಮನಿಲ್ಲದೆ ಸೀತೆ ಹೇಗೆ ಉಳಿಯುಳೋ ಹಾಗೆಯೇ ಸೀತೆಯಿಲ್ಲದೆ ರಾಮ ಕೂಡ ಉಳಿಯುವುದಿಲ್ಲವೆಂಬುದನ್ನು ನಿರೂಪಿಸುತ್ತಾನೆ. ಆದರೆ ಅವರ ಪ್ರೇಮದ ಮಹಿಮೆಯೋ ಎಂಬಂತೆ, ಎಲ್ಲರೂ ಸ್ತುತಿಸುತ್ತಿರಲು ಯಾವ ಅಪಾಯವೂ ಇಲ್ಲದೆ ಇಬ್ಬರೂ ಸುಖವಾಗಿ ಹೊರಬರುತ್ತಾರೆ.ಇದು ಬೇರಾವ ರಾಮಾಯಣದಲ್ಲೂ ಕಾಣಸಿಕ್ಕದ ವಿಶಿಷ್ಟ ಸನ್ನಿವೇಶ. ಅಗ್ನಿಪ್ರವೇಶದ ಮೂಲಕ, ರಾಮನು ಇಲ್ಲಿ ತನ್ನನ್ನು ಪರೀಕ್ಷೆಗೆ ಒಡ್ಡಿಕೊಂಡಿದ್ದಾನೆ. ಏಕಪತ್ನೀವ್ರತತ್ವವನ್ನು ಜಗತ್ತಿಗೆ ಪ್ರಕಟಗೊಳಿಸಿದ್ದಾನೆ. ನ್ಯಾಯದ-ಸತ್ಯದ-ಪರೀಕ್ಷೆಯ ದೃಷ್ಟಿಯಲ್ಲಿ ರಾಮ ಬೇರೆಯಲ್ಲ ಸೀತೆ ಬೇರೆಯಲ್ಲ ಎಂಬುದನ್ನು ಎತ್ತಿಹಿಡಿದಿದ್ದಾನೆ, ಆ ಮೂಲಕ ಆದರ್ಶಪುರುಷನಾಗಿದ್ದಾನೆ.

ಹೀಗೆ ಕುವೆಂಪು ಅವರು ರಾಮನನ್ನು ಆದರ್ಶಪುರುಷನನ್ನಾಗಿ ಚಿತ್ರಿಸಿದ್ದಾರೆಂದ ಮಾತ್ರಕ್ಕೆ ಅವನ ದೇವತ್ವವನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದಾರೆಂದಲ್ಲ. ರಾಮನು

ದೈವಾಂಶಸಂಭೂತನೆಂಬುದನ್ನು ಅವರೂ ಒಪ್ಪಿದ್ದಾರೆ ಅಲ್ಲಲ್ಲಿ ಅದನ್ನು ಸೂಚಿಸಿಯೂ ಇದ್ದಾರೆ. ಅವರ ಪ್ರಕಾರ, ಆ ವಿಚಾರವು ವಸಿಷ್ಠನಿಗೆ ಗೊತ್ತು. ಮಗುವಿನ ಮಹಾಮೂರ್ತಿಯನ್ನು ಕಂಡು ಹೆದರಿದ ಕೌಸಲ್ಯೆಗೆ ಅವನು ಅದನ್ನು ವಿವರಿಸುತ್ತಾನೆ. (ಪು. ೩೦) ಚಿತ್ರಕೂಟವಲ್ಲಿ ಭರದ್ವಾಜನು ಆ ಸತ್ಯವನ್ನು ಕಂಡುಕೊಳ್ಳುತ್ತಾನೆ. (ಪು. ೧೪೨). ರಾಮ ಕುಂಭಕರ್ಣರ ಯುದ್ಧಸನ್ನಿವೇಶಕ್ಕೆ ಹಿನ್ನೆಲೆಯಲ್ಲಿ ಬರುವ ಶಿವ-ಪಾರ್ವತಿಯನ್ನು ಕುರಿತು

> **ನಿನ್ನಂಶಮಾ ಸೀತೆ...... ........**
> **ನೀನೆಯೆ ಜಗನ್ಮಾತೆ ... .......**
> **............ ನೀಂ ವಾಣಿಯಾದಂದು**
> **ನಾನಜಂ ; ನೀಂ ಲಕ್ಷ್ಮಿಯಾದಂದು ವಿಷ್ಣುವಾಂ (ಪು. ೬೮೭)**

ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಸೀತಾರಾಮರ ಅಗ್ನಿಪ್ರವೇಶದ ಸಂದರ್ಭದಲ್ಲಿ ಬರುವ 'ಶ್ರೀವಾಣಿಗಳ ಸ್ತುತಿ'ಯಲ್ಲಂತೂ

> **......... . ...ಲಕ್ಷ್ಮಿಯಲ್ತೆ ನೀ !**
> **ರಾವಣವಧಾರ್ಥಮಿ ನರತನುವನಾಶ್ರಯಿಸಿ**
> **ಬಂದ ಲೀಲಾಮಾಯೆ, ದಶರಥಾತ್ಮಜನೆ (ಪು.೮೫೫)**

ಎಂದೇ ಬಂದಿದೆ, ಆದ್ದರಿಂದ, ರಾಮನ ದೈವತ್ವವನ್ನು ಕುವೆಂಪು ಅವರು ತಿರಸ್ಕರಿಸುವುದಿಲ್ಲ ; ಆದರೆ, ಆ ದೈವತ್ವವನ್ನು ಮತ್ತೆ ಮತ್ತೆ ಸೂಚಿಸುವುದರ ಮೂಲಕ, ಲೌಕಿಕ ಪೌರುಷದ ಮಹತ್ವಕ್ಕೆ ಮಾತ್ರ ಭಂಗವನ್ನು ತರುವುದಿಲ್ಲ.

ಇನ್ನು ರಾವಣ. ರಾವಣ ಕುಂಭಕರ್ಣರು ಜಯವಿಜಯರ ಅವತಾರವೆಂಬ ಕಲ್ಪನೆಯ ಸೂಚನೆ ಕೂಡ ರಾಮಾಯಣದರ್ಶನದಲ್ಲಿ ಬರುವುದಿಲ್ಲ. ಅಂತೆಯೇ ಇಲ್ಲಿ ರಾವಣನು ಹತ್ತುತಲೆಯುವನೂ ಅಲ್ಲ ; ಅದು ಅವನ ಕುಲದ ಹೆಸರು ಅಷ್ಟೆ. ಇದೇ ರೀತಿ ವಾನರರು ಕೂಡ ಕಪಿಗಳಲ್ಲ, ಕಪಿಧ್ವಜರು ಅಷ್ಟೆ. ರಾಮನು ಆರ್ಯ, ರಾವಣನು ದ್ರಾವಿಡ ಎಂದು ಹೇಳುವುದರ ಮೂಲಕ ರಾಮರಾವಣರ ಯುದ್ಧವನ್ನು ಆರ್ಯದ್ರಾವಿಡ ಸಂಗ್ರಾಮವಾಗಿ ಚಿತ್ರಿಸಿರುವುದಂತೂ ರಾಮಾಯಣದರ್ಶನದ ಒಂದು ಪ್ರಮುಖ ವೈಶಿಷ್ಟ್ಯವೇ ಆಗಿದೆ.

ರಾವಣ ಮಹಾಪರಾಕ್ರಮಶಾಲಿ. ಅವನಿಗೆ, ಆರ್ಯಕನ್ಯೆಯಾದ ಸೀತೆಯನ್ನು ಮದುವೆಯಾಗುವ ಮನಸ್ಸಾಗುತ್ತದೆ. ಅದರಂತೆ ಜನಕನ ಬಳಿಗೆ ಹೋಗುತ್ತಾನೆ ; ಪರೀಕ್ಷೆಗೆ ಸಿದ್ಧನಾಗುತ್ತಾನೆ. ಆದರೆ, ಹರಧನುವನ್ನು ಹೆದೆಯೇರಿಸಲಾಗದೆ, ಪರೀಕ್ಷೆಯಲ್ಲಿ ಸೋತು ಹಿಮ್ಮೆಟ್ಟುತ್ತಾನೆ ; ಜೊತೆಗೆ, ತಪದ ಬಲ್ಮೆಯನ್ನು ಪಡೆದು ಮತ್ತೆ ಬಂದು ಅವಳನ್ನು ಗೆಲ್ಲುವುದಾಗಿ ಘುಡುಘುಡಿಸಿ ಹಿಂದಿರುಗುತ್ತಾನೆ. ಅವನು ಮತ್ತೆ ಬಂದೇ ಬರುವನೆಂಬುದು ಜನಕನಿಗೂ ಗೊತ್ತು. ಆದರೆ ರಾಕ್ಷಸಕುಲದವನಾದ ಅವನಿಗೆ ಕುಸುಮಕೋಮಲೆಯಾದ ತನ್ನ ಮಗಳನ್ನು ಕೊಡುವುದು ಅವನಿಗೆ ಇಷ್ಟವಿಲ್ಲ.

ಆದ್ದರಿಂದ ಅವನು ಮತ್ತೆ ಬರುವಷ್ಟರಲ್ಲಿ ಉತ್ತಮ ವರನಿಗೆ ಅವಳನ್ನು ಕೊಟ್ಟು ಮದುವೆ ಮಾಡಿಬಿಡಬೇಕೆಂಬ ಕಳವಳದಲ್ಲಿರುತ್ತಾನೆ. ಅಷ್ಟರಲ್ಲಿ ರಾಮನು ಹರಧನುವನ್ನು ಭಂಗಿಸುವುದರ ಮೂಲಕ ಗೆದ್ದು ಅವಳನ್ನು ಮದುವೆಯಾಗುತ್ತಾನೆ. ಈ ವಿಚಾರ ತಿಳಿದ ರಾವಣನಿಗೆ, ಜನಕನ ಬಗ್ಗೆ ಕೋಪ ಮೂಡುತ್ತದೆ. ತಾನು ಬರುವಷ್ಟರವರೆಗೆ ಕಾಯದೆ ಅಷ್ಟರಲ್ಲೇ ಬೇರೊಬ್ಬನಿಗೆ ಕೊಟ್ಟು ಮದುವೆ ಮಾಡಬಿಟ್ಟನಲ್ಲ ಎಂದು ಒಳಗೊಳಗೇ ಕುದಿಯಲಾರಂಭಿಸುತ್ತಾನೆ. ಮುಂದೆ ಚಂದ್ರನಖಿಯ ಪ್ರೇರಣೆ ಸಿಕ್ಕಿದಾಗ, ಸೀತಾಪಹರಣಕ್ಕೆ ಒಮ್ಮೆಲೇ ಮನಸ್ಸು ಮಾಡುತ್ತಾನೆ. ಸೀತೆಯ ಮೇಲಿನ ಮೋಹ, ಜನಕನ ಮೇಲಿನ ಕೋಪ, ತಂಗಿಗಾದ ಅವಮಾನ, ಖರದೂಷಣರ ವಧೆ—ಇವೆಲ್ಲ ಆ ನಿರ್ಧಾರಕ್ಕೆ ಕಾರಣವಾಗುತ್ತವೆ. ಅದರಂತೆ ಅವಳನ್ನು ಅಪಹರಿಸುತ್ತಾನೆ. ಅವಳ ಒಲುಮೆಯನ್ನು ಗಳಿಸಿಕೊಳ್ಳಲು ಸರ್ವಪ್ರಯತ್ನಗಳನ್ನೂ ಮಾಡುತ್ತಾನೆ. ಆದರೆ ನಿರಶನದಿಂದ ಅವಳು ಎಲ್ಲಾದರೂ ಸತ್ತರೆ ? ಎಂಬ ಪ್ರಶ್ನೆ ಮುಂದಾದಾಗ ಮಾತ್ರ ನಿಸ್ಸಹಾಯಕನಾಗಿ,

> **ನಿರಶನವ್ರತರೂಪದಾತ್ಮಹತ್ಯೆಯಿನಾಕೆ**
> **ಮಡಿಯುವೊಡೆ, ಅದೆ ಚಿತೆಯನೇರುವೆನ್ ; ಪೆಣದೆಡೆಯೆ**
> **ಪವಡಿಪೆನ್ ; ಭಸ್ಮರೂಪದಿನಾದೊಡಂ ಕೂಡಿ**
> **ಹೊಂದುವೆನ್ ಸಾಯುಜ್ಯಮಂ (ಪು. ೫೧೦)**

ಎಂದು ಹೇಳುತ್ತಾನೆ. ಕಾಮವೆಂಬುದು ಎಂತಹ ಧೀರನನ್ನೂ ಎಂತಹ ಹೀನಸ್ಥಿತಿಗೆ ಎಳೆತರುತ್ತದೆ, ಅವನಿಂದ ಎಂತಹ ಮಾತುಗಳನ್ನು ಆಡಿಸುತ್ತದೆಯೆಂಬುದನ್ನು ಇಲ್ಲಿ ಕಾಣಬಹುದು. ಇಷ್ಟಾದರೂ ಬಲಾತ್ಕಾರದಿಂದ ಅವಳನ್ನು ಹೊಂದುವುದಕ್ಕೆ ಮಾತ್ರ ಆತ ಇಷ್ಟಪಡುವುದಿಲ್ಲ.

> **ಬಲದಿನೆಳೆತಂದೊಡಂ ಬಲದೊಳೊಡವೆರೆವನಿತು**
> **ಪಶುಮಾತ್ರನಲ್ತು ; ಕಾಮುಕನಪ್ಪೊಡಂ ಮೆಚ್ಚಿ**
> **ಬಗೆಸೋಲ್ವರನ್ನಲ್ಲದೆಯೆ ಸೋಂಕನಾವಗಂ ;**
> **ಕಠಿಣನಾದೊಡಮಸಂಸ್ಕೃತನಲ್ತು ; ನಾರಿಯಂ**
> **ಮೀರಿ ಕೂಡುವ ಪೇಡಿಯಲ್ತು, ಪೌರುಷಶಾಲಿ**
> **ತಾನಾವಗಂ ........... (ಪು.೫೦೨)**

ಎನ್ನುತ್ತಾಳೆ ತ್ರಿಜಟೆ. ಇದು ರಾವಣನ ವಿಶಿಷ್ಟ ಸಂಸ್ಕೃತಿ.

ಜಗತ್ತಿನಲ್ಲಿ ಪತಿವ್ರತೆಯರೇ ಇಲ್ಲ ; ಅಂತಹವರು ಸಿಕ್ಕಿದಲ್ಲಿ ಅವರ ದರ್ಶನದಿಂದ ತಾನು ಪುನೀತನಾಗುತ್ತೇನೆ—ಎಂಬುದು ರಾವಣನ ನಿರ್ಧಾರ. ಮಾರೀಚನನೊಪ್ಪಿಸುವ ಸಂದರ್ಭದಲ್ಲಿ ಇದನ್ನು ಅವನು ವ್ಯಕ್ತಪಡಿಸುತ್ತಾನೆ. ಸೀತೆ ಕೂಡ ಸಾಮಾನ್ಯ ಹೆಂಗಸು—ಪತಿವ್ರತೆಯಲ್ಲ—ಬೇಗ ತನಗೆ ಒಲಿಯುತ್ತಾಳೆ—ಎಂಬ ಕಾಮಭಾವನೆ ಅವನಲ್ಲಿ ತುಂಬಿತುಳುಕುತ್ತಿರುತ್ತದೆ. ಅವಳ ಮೇಲೆ ಅತಿಯಾದ ಮೋಹವುಂಟಾ

ಗಿರುತ್ತದೆ. ಆದರೆ ಆ ಮೋಹ ಹೆಚ್ಚುಕಾಲ ಉಳಿಯುವುದಿಲ್ಲ. ಯುದ್ಧ ಪ್ರಾರಂಭ ವಾದಮೇಲೆ, ಅದು ಬೇರೆ ತಿರುವನ್ನೇ ಪಡೆಯುತ್ತದೆ.

......... . . .... ........ಇನ್ನೆನಗೆ
**ರಣದ ಮೋಹವೆ ಮೋಹಮಾ ಜಾನಕಿಯ ಮೇಲೆ**
**ಮುನ್ನಿರ್ದ ಮೋಹಮೆಲ್ಲಂ ತಿರುಗಿಹುದು ರಣದ**
**ಮಧುರತರ ಸಾಹಸಕೆ** (ಪು. ೬೬೨)

ಎನ್ನುತ್ತಾನೆ ಆತ. ಕೊನೆಗೆ, ತನ್ನ ಕಡೆಯ ವೀರಾಧಿವೀರರೆಲ್ಲ ಅಳಿಯುತ್ತ ಬಂದಾಗ, ಬುದ್ಧಿವಾದ ಹೇಳಿದ ಚಂದ್ರನಖಿಗೆ, ತಾನು ಒಳಗಣ್ಣಿನಲ್ಲಿ ಕಂಡ ಅಲೌಕಿಕ ದೃಶ್ಯವನ್ನು ಹೀಗೆ ವಿವರಿಸುತ್ತಾನೆ :

ಅಃ ನಿನಗೆ
**ಕಾಣದಾ ದೃಶ್ಯಮದೂ ! ಏನ್ ದಿವ್ಯಮಾದೃಶ್ಯಂ :**
**ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ**
**ಕಂಡರಿಯದಾ ಕಾಣಲಾರದಾ ಕೊಳುಗುಳದಿ**
**ರಘುಕುಲಲಲಾಮನಂ, ಜಗದೇಕ ವೀರನಂ**
**ಗೆಲ್ದು, ಸೆರೆಯೊಳ್ ಮಾಡಿ ತಂದು ಲಂಕೇಶ್ವರನ**
**ಸರ್ವಗರ್ವವನಿರದೆ ಸೋಲಿಸಿದ ಮೈಥಿಲಿಗೆ**
**ಕಪ್ಪಮೆನೆ ಕಾಣಿಕೆಯನೊಪ್ಪಿಸುವ ಭವ್ಯತಾ**
**ದಿವ್ಯದೃಶ್ಯಂ** ... . ... .. (ಪು. ೭೫೪-೫೫)

ಆಗಲೇ ಸೀತೆಯ ಪಾತ್ರಿವ್ರತ್ಯದ ಮುಂದೆ ಆತ ತನ್ನ ಸೋಲನ್ನೊಪ್ಪಿಕೊಂಡಿರುತ್ತಾನೆ ; ಅವಳ ಬಗ್ಗೆ ಆತನಿಗೆ ಅಪಾರ ಗೌರವ ಮೂಡಿರುತ್ತದೆ. ಆದರೆ, ಅದಕ್ಕನುಗುಣವಾಗಿ, ಅವಳನ್ನು ಕರೆದುಕೊಂಡು ಹೋಗಿ, ರಾಮನಿಗೆ ಒಪ್ಪಿಸಲು ಮಾತ್ರ, ಅವನ ಪೌರುಷ-ಛಲ-ಒಪ್ಪುವುದಿಲ್ಲ. ಆದರಿಂದಾಗಿಯೇ ತನ್ನ ಶೌರ್ಯಕ್ಕೆ ಬೆಲೆಕೊಟ್ಟು. ಅದರ ಆಧಾರದಿಂದ, ರಾಮನನ್ನು ಹಿಡಿತಂದು, ಸೀತೆಗೊಪ್ಪಿಸಿ, ತಾನು ಕೃತಾರ್ಥನಾಗ ಬೇಕೆಂದು ಆತ ಬಯಸುತ್ತಾನೆ.

ಅವನ ಕನಸಿನಲ್ಲಿ ಅವನ ಮನಸ್ಸು ಮತ್ತೊಂದೆಡೆಗೆ ತಿರುಗುವುದನ್ನು ಕಾಣುತ್ತೇವೆ. ರಾಮನನ್ನು ಗೆಲ್ಲಬೇಕು, ಸೀತೆ ತನಗೆ ಒಲಿಯಬೇಕು—ಎಂಬುದು ಅವನ ಬಯಕೆ. ಇದು ಸಿದ್ಧಿಸುವುದೆಂದು ಜಗನ್ಮಾತೆಯು ಕನಸಿನಲ್ಲಿ ಅವನಿಗೆ ಆಶ್ವಾಸನೆ ನೀಡುತ್ತಾಳೆ. ಅದರಂತೆ ಅವನೂ, ಕುಂಭಕರ್ಣನೂ ಎರಡು ಮಕ್ಕಳಾಗಿ ಸೀತೆಯ ತೊಡೆಯೇರು ತ್ತಾರೆ, ಮುಂದೆ, ರಾವಣ ಕುಂಭಕರ್ಣರು ಸೀತೆಯ ಗರ್ಭದಲ್ಲಿ ಲವಕುಶರಾಗಿ ಜನಿಸಿ ಅವಳ ಒಲವಿಗೆ ಪಾತ್ರರಾಗುವರೆಂಬ, ರಾಮನನ್ನು ಅವರು ಆಗ ಸೋಲಿಸುವರೆಂಬ ವಿನೂತನ ಕಲ್ಪನೆಯನ್ನು ಆ ಕನಸಿನಲ್ಲಿ ಕಾಣುತ್ತೇವೆ. ಬೇರೆ ಯಾವ ರಾಮಾಯಣ ದಲ್ಲೂ ಇದು ಕಾಣಸಿಗದು.

ಯುದ್ಧರಂಗದಲ್ಲಂತೂ ರಾವಣನ ದೃಷ್ಟಿಕೋನವೇ ಬೇರೆಯಾಗಿರುತ್ತದೆ. ರಾಮನನ್ನು ಕಂಡಾಗ ಅವನು,

> **ಮಿಥಿಳೇಂದ್ರನಂ ಮೆಚ್ಚಿಸಿದ ಸುಲಭ ಕಲಿತನಂ**
> **ನಡೆಯದಿಲ್ಲಿಗೆ, ಮಾವನಿಂದು ಲಂಕೇಶ್ವರಂ.**
> **ಮೆಚ್ಚಿಸೆನ್ನಂ ಪಡೆಯವೇಳ್ಕುಮಾಂ ಪುಟವಿಟ್ಟು**
> **ಮೊದಲಿಗಿಂ ನೂರ್ಮಡಿಯೆ ತಳತಳಿಸಿ ಪೊಳೆವಂತೆ**
> **ಮಾಡಿಕೊಡಲಿರ್ಪೆನ್ನ ಪೊಡವಿಮಗಳಂ (ಪು. ೭೯೭)**

ಎಂದು ಹೇಳುತ್ತಾನೆ. ಸೀತೆಯನ್ನು ತನ್ನ ಮಗಳಂತೆಯೂ ರಾಮನನ್ನು ತನ್ನ ಅಳಿಯ ನಂತೆಯೂ ಅವನು ಕಾಣುವುದನ್ನು ಇಲ್ಲಿ ಗಮನಿಸಬೇಕು. ಆದರೆ ಈ ಉದ್ದೇಶವನ್ನು ಸಾಧಿಸುವಷ್ಟರಲ್ಲೇ ಸಾವನ್ನಪ್ಪುತ್ತಾನೆ-ರಾಮಬಾಣಕ್ಕೆ ಸಿಕ್ಕಿ.

ಹೀಗೆ ವಾಲ್ಮೀಕಿ ರಾಮಾಯಣದ ಕಥೆಯನ್ನು ಕುವೆಂಪು ಅವರು ವಿನೂತನ ರೀತಿಯಿಂದ ನಿರೂಪಿಸಿದ್ದಾರೆ ; ಉಳಿದೆಲ್ಲ ರಾಮಾಯಣಗಳಿಗಿಂತ ತಮ್ಮ ರಾಮಾಯ ಣವು ಭಿನ್ನವಾಗಿ ನಿಲ್ಲುವಂತೆ ಮಾಡಿದ್ದಾರೆ.

ಡಾ. ಕೆ. ಜಿ. ನಾರಾಯಣ ಪ್ರಸಾದ್



# ವಾಲ್ಮೀಕಿ ರಾಮಾಯಣ — ಶ್ರೀರಾಮಾಯಣ ದರ್ಶನಂ

ಭಾರತೀಯ ಕಾವ್ಯಗಳಲ್ಲಿ ವಾಲ್ಮೀಕಿ ರಾಮಾಯಣವೇ ಮೊತ್ತಮೊದಲನೆಯದು. ಶ್ರೀ ರಾಮನ ಉದಾತ್ತಚರಿತ್ರೆಯನ್ನು ಕೊಂಡಾಡಿದ-ಮಾನವೀಯ ಸಂವೇದನೆಯನ್ನು ವಿಶ್ಲೇಷಿಸಿದ ಮಹಾಕಾವ್ಯ. ಮುಂದಿನ ಭಾರತೀಯ ಕವಿಗಳಿಗೆಲ್ಲ ಅದೊಂದು ಆಕರ ಗ್ರಂಥ. ಅವರವರ ಪ್ರತಿಭೆಯ ಮೂಸೆಯಲ್ಲಿ ವಾಲ್ಮೀಕಿ ರಾಮಾಯಣವನ್ನು ಕರಗಿಸಿ ಹದಗೊಳಿಸಿ ತಮ್ಮದೇ ಆದ ಹೊಸ ಸ್ವರೂಪವನ್ನು ನೀಡಿ ಬರೆದ ಕವಿಗಳು ಹಲವರು. ಪರಿಣಾಮವಾಗಿ ಶತಕೋಟಿ ರಾಮಾಯಣಗಳು ಉದ್ಭವಿಸಿದುವು.

ಮಹಾಕವಿ ಶ್ರೀ ಕುವೆಂಪು ಸೃಜಿಸಿದ ರಾಮಾಯಣವು ಕೇವಲ ರಾಮಾಯಣವಲ್ಲ. ರಾಮಚಂದ್ರ ಚರಿತ್ರೆಯಲ್ಲ, ರಾಮಚಂದ್ರ ಪುರಾಣವೂ ಅಲ್ಲ, ಅದು ಶ್ರೀ ರಾಮಾಯಣ ದರ್ಶನಂ. ಒಟ್ಟು ಕಥೆಯ ದೃಷ್ಟಿಯಿಂದ ವಾಲ್ಮೀಕಿ ರಾಮಾಯಣವೇ ಇದಕ್ಕೂ ಮೂಲ.

**ವ್ಯೋಮಸಾಗರ ಸಮಂ ನಿನ್ನ ರಾಮಾಯಣಂ**
**ಗುರುವೆ, ರಸಋಷಿಯೆ, ಓ ವಾಲ್ಮೀಕಿ ಕ್ರಮಿಸಲ್ಕದಂ**
**ದಯೆಗೆಯ್ಯೆನಗೆ ವೈನತೇಯನ ವಜ್ರವೀರ್ಯಮಂ—**

ಎಂದು ಕವಿಯೇ ವಾಲ್ಮೀಕಿಯನ್ನು ಪ್ರಾರ್ಥಿಸುತ್ತಾರೆ. ಆದರೆ ಜೊತೆಯಲ್ಲೇ—

**ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಸ್ಟಿಪನೆ**
**ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ**
**ಕಥೆ ನಿನ್ನದಾದೊಡಂ ನೀನೆ ಮೇಣಾಶೀರ್ವದಿಸಿ**
**ಮತಿಗೆ ಬೋಧಮನಿತ್ತೊಡಂ, ಕೃತಿ ನನ್ನ ದರ್ಶನಂ**
**ಮೂರ್ತಿವೆತ್ತೊಂದಮರ ಕಾವ್ಯದಾ ಕೃತಿಯುಲ್ತೆ** ಎಂದೂ ಹೇಳುತ್ತಾರೆ.

ಶ್ರೀ ರಾಮಾಯಣ ದರ್ಶನಂ ಕಾವ್ಯದ ಕಥೆ ವಾಲ್ಮೀಕಿಯದೇ, ಆದರೆ ಆದರಲ್ಲಿರುವ ದರ್ಶನ ಬೇರೆಯೇ. ದರ್ಶನವೆಂದರೇನು ? "ದೃಷ್ಟಾರನಾದ ಕವಿ ಪೂರ್ಣ ದೃಷ್ಟಿಯಿಂದ ಕಂಡು ಕಂಡರಿಸುವ ಸತ್ಯವೇ ದರ್ಶನ. ಸ್ವಾನುಭವ ದೇಶದ ಸಂಸ್ಕೃತಿ, ಪಡೆದ ವಿದ್ಯೆ, ಹುಟ್ಟಿ ಬೆಳೆದ ಸನ್ನಿವೇಶ, ಮಹಾಪುರುಷರ ಸಹವಾಸ ಮುಂತಾದವುಗಳ ಪ್ರಭಾವದಿಂದ ಮೂಡುವ ಬುದ್ಧಿಸ್ಥಿತಿಯನ್ನು ಜೀವನ ದೃಷ್ಟಿಯೆಂದು ಕರೆಯುವುದು ಸಾಧು. ಅದು ರಸಾನುಭೂತಿಗೇರಿದರೆ ದರ್ಶನವಾಗುತ್ತದೆ" ಈ ವಾಕ್ಯಾರ್ಥಗಳಂತೆ ದರ್ಶನವೆಂಬುದು ವಿಶಿಷ್ಟ ರಸಾನುಭೂತಿ. ಪರಿಪೂರ್ಣ ದೃಷ್ಟಿಗೆ ಗೋಚರವಾಗುವ ನಿತ್ಯಸತ್ಯ. ಶ್ರೀ ರಾಮಾಯಣ ದರ್ಶನವೂ ವಾಲ್ಮೀಕಿಯನ್ನನುಸರಿಸಿದ ಕಥೆಯೇ ಆದರೂ ಆದರಲ್ಲಿ ಗೋಚರವಾಗುವ ದರ್ಶನ ವಿಶಿಷ್ಟವಾದದು. ಅದು ಮಹಾಕವಿಯ—

ದ್ರಷ್ಟಾರನ-ರಸಋಷಿಯ ಅಂತಃಚಕ್ಷುವಿಗೆ ಗೋಚರವಾದ ಸತ್ಯ. ಆದ್ದರಿಂದ ಕಥೆಯಲ್ಲೂ ಕೆಲವು ವ್ಯತ್ಯಾಸಗಳು ಇರುವುದು ಸಹಜ.

**ಪಂಜರದ ಹಳಮೆಯೊಳ್ ಪ್ರಾಣ ನವಪಕ್ಷಿಯಂ**
**ವಿಗ್ರಹಕೆ ದೇವತಾವಾಹನಂ ಗೆಯ್ವವೊಲ್—**

ಸಾವಿರಾರು ವರುಷಗಳ ಹಿಂದಿನ ಕಥಾಪಂಜರದಲ್ಲಿ ಪ್ರಾಣ ನವಪಕ್ಷಿಯನ್ನು ಆವಾಹನೆ ಮಾಡಿದಂತೆ ಮಹಾಕವಿ ಕುವೆಂಪುರವರು ವಾಲ್ಮೀಕಿಯನ್ನು ಹಲವೆಡೆ ಮೀರಿದ್ದಾರೆ. ಹಲವೆಡೆ ಅಧಿಕಗೊಳಿಸಿದ್ದಾರೆ ; ಹಲವೆಡೆ ಲಂಘಿಸಿ–ಬಿಟ್ಟಿದ್ದಾರೆ.

ಪ್ರಾರಂಭದಲ್ಲೇ ಕ್ರೌಂಚಮಿಥುನಗಳಲ್ಲೊಂದಕ್ಕೆ ಬಾಣವೆಸೆದ ಬೇಡನ ಬಗ್ಗೆ ವಾಲ್ಮೀಕಿಯಿಂದ ಹೊಮ್ಮಿದ–ಶೋಕವೇ ಶ್ಲೋಕವಾಗಿ ಪರಿಣಮಿಸಿದ–'ಮಾನಿಷಾದ ಪ್ರತಿಷ್ಠಾತ್ವಂ ಅಗಮಃ ಶಾಶ್ವತೀ ಸಮಾಃ' ಎಂಬುದು ಕುವೆಂಪುರವರಲ್ಲಿ—

**ಮಾಣ್ ನಿಷಾದನೆ ಮಾಣ್ ಕೊಲೆ ಸಾಲ್ಗುಮಬ್ಬೆ ಮಾಣ್**
**ನಲಿಯುತಿರೆ ಬಾನ್ ಬನದ ತೊರೆ ಮಲೆಯ ಭುವನ ಕವನಂ**
**ಸುಖದ ಸಂಗೀತಕೆ ವಿಷಾದವಂ ಶ್ರುತಿಯೊಡ್ಡಿ**
**ಕೆಡಿಸುವಯ್—**

ಎನ್ನುತ್ತ ತನ್ನ ವೃತ್ತಾಂತವನ್ನೆಲ್ಲ ಹೇಳಿ 'ಕಬ್ಬಿಲಗೆ ಬಗೆ ಕರಗುವಂತೆ' ಬೋಧೆ ಮಾಡಿ ಅವನಿಗೆ ಅಹಿಂಸಾ ರುಚಿಯನ್ನೂಡಿಸಿ ಕೊಂಬೆವಕ್ಕಿಗೆ ತಾಗಿದ ಬಾಣವನ್ನು ತೆಗೆದು ಪ್ರಾಣವನ್ನು ಬರಿಸುತ್ತಾನೆ. ವಾಲ್ಮೀಕಿ ಹಕ್ಕಿಗಳೆರಡೂ ಮತ್ತೆ ಸೇರುವಂತೆ ಮಾಡುತ್ತಾನೆ. ಶೋಕ ಶಾಪಗಳ ಬದಲು ಇಲ್ಲಿ ಅಹಿಂಸಾ ತತ್ವ ಮೈವೆತ್ತಿದೆ. ರಾಮಾಯಣ ದರ್ಶನದ ಮೊದಲ ದರ್ಶನವೇ ನಮಗಿಲ್ಲಿ ಆಗುತ್ತಿದೆ. ಪಾಪಿಯನ್ನೂ ಉದ್ಧಾರ ಮಾಡುವ ಚಿಂತನೆ-ಬೇಡನನ್ನೂ ಅಹಿಂಸಾವಾದಿಯನ್ನಾಗಿ ಮಾಡುವ-ಸತ್ತ ಹಕ್ಕಿಯನ್ನು ಬದುಕಿಸುವ ವಿಶಿಷ್ಟ ತತ್ವ–ಸತ್ಯ.

ಪುತ್ರಸಂತಾನವನ್ನಪೇಕ್ಷಿಸಿದ ದಶರಥನು ಅಶ್ವಮೇಧ, ಜ್ಯೋತಿಷ್ಟೋಮ, ಅತಿರಾತ್ರ, ಅಭಿಜಿತ್, ವಿಶ್ವಜಿತ್, ಅಪ್ತೋರ್ಯಾಮ ಇತ್ಯಾದಿ ಶಾಸ್ತ್ರವಿಹಿತ ಯಾಗಗಳನ್ನು ಪೂರೈಸಿ ಋಷ್ಯಶೃಂಗನನ್ನು ಪ್ರಾರ್ಥಿಸುತ್ತಾನೆ. ಋಷ್ಯಶೃಂಗ ಪುತ್ರ ಕಾಮೇಷ್ಟಿಯನ್ನು ಮಾಡಿಸುತ್ತಾನೆ. ಆಗ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನಾರಾಯಣನು ನರಜನ್ಮವೆತ್ತಲು ನಿರ್ಧರಿಸುತ್ತಾನೆ. ಯಜ್ಞದ ಕೊನೆಯಲ್ಲಿ ಪಾಯಸ ಬರುತ್ತದೆ. ಅದನ್ನು ಪಡೆದ ದಶರಥನು ಕೌಸಲ್ಯೆಗೆ ಅರ್ಧ ಸುಮಿತ್ರೆಗೆ (ನಾಲ್ಕನೇ ಒಂದು ಭಾಗ) ಕೈಕೆಯಿಗೆ ಉಳಿದದ್ದರಲ್ಲಿ ಕೊಟ್ಟು ಉಳಿದುದನ್ನು ಸುಮಿತ್ರೆಗೇ ಕೊಡುತ್ತಾನೆ. ಇದು ವಾಲ್ಮೀಕಿಯ ವಿವರಣೆ.

ಶ್ರೀ ರಾಮಾಯಣ ದರ್ಶನದಲ್ಲಿ ಇದು ವರ್ಣಿತವಾದ ರೀತಿಯೇ ಬೇರೆ. ಗುರುವಾದ ವಸಿಷ್ಠನು ಪುತ್ರಕಾಮೇಷ್ಟಿಯನ್ನು ಹೇಳಿ ಯಜ್ಞಶಾಲೆಗೆ ಹೋಗುತ್ತಾನೆ. ಅದನ್ನು ಕೇಳಿದ ಗುರುವರ ಜಾಬಾಲಿ ಋಷಿ ದಶರಥನೊಡನೆ ಹೀಗೆನ್ನುತ್ತಾನೆ.

ಪೂರ್ವಪದ್ಧತಿವಿಡಿದು
ಮಾಳ್ಪ ದಿಗ್ವಿಜಯ ಹಯಮೇಧ ಮೊದಲಾದುವಂ
ತೊರೆದು, ಹಿಂಸಾಕ್ರೌರ್ಯವಿಲ್ಲದಿಹ ಪ್ರೇಮಕ್ಕೆ
ನೋಂತು. ದೇವರ್ಕಳಂ ಪೂಜಿಸಲ್ ಮೆಚ್ಚುವುದು
ಜಗವನಾಳುವ ಋತಂ
........ ...ವಿಶ್ವಮಂ
ಸರ್ವತ್ರ ತುಂಬಿದಂತರ್ಯಾಮಿ ಚೇತನಂ ತಾಂ
ಪ್ರೇಮಾತ್ಮಮಾಗಿರ್ಪುದದರಿಂದೆ ಹಿಂಸೆಯಿಂ
ಪ್ರೇಮಮೂರ್ತಿಗಳಾದ ಸಂತಾನಮುದಿಸದಯ್

ಹೀಗೆ ಜಾಬಾಲಿ ಋಷಿಯ ಉಪದೇಶ—ಅಶ್ವಮೇಧಾದಿ ಯಾಗಗಳ ವಿರುದ್ಧ. ಹಿಂಸೆಯಿಲ್ಲದ–ಬಡಜನರನ್ನ ಸಂತೃಪ್ತಿಗೊಳಿಸುವ–ಪ್ರೇಮಮಯ ವಿಧಾನದಿಂದಲೇ ಸಂತಾನೋತ್ಪತ್ತಿ ಎಂಬ ಹಿತನುಡಿ, ಅನರಂತೆ ಆಚರಿಸುತ್ತಾನೆ ದಶರಥ, ಜನರನ್ನು ಅನ್ನದಾನಾದಿಗಳಿಂದ ಸಂತವಿಸುತ್ತಾನೆ.

ದೊರೆಯುಚ್ಛ್ವಿ ನೆರವೇರಿ
ಸೊಗವಾಗಲೆಂಬಾ ಹರಕೆ ಜನದ ಹೃದಯದಿಂ
ಜನ್ನವನೆಯಿಂದೇಳ್ವ ಹೋಮಧೂಮಂಬೋಲ್
ವ್ಯೋಮಾಂತರಕೆ ಪರ್ವಿದತ್ತು—

ದಶರಥನು ಯಜ್ಞದೀಕ್ಷಿತನಾಗಿ ಕುಳಿತು—

ಮನದೊಳೆ ತನುಜರೆಂದೆಂಬ
ಜಾಣ್ನುಡಿಯನರಿತು ಅಲ್ಪತೆಯ ಭಾವಂಗಳಂ
ನೆರೆತೊರೆದು ಗಗನಮಂ, ಪೃಥ್ವಿಯಂ, ವಾರ್ಧಿಯಂ
ಪರ್ವತಾರಣ್ಯ ವಿಸ್ತಾರ ಧೀರೋದಾತ್ತ
ಗಾಂಭೀರ್ಯಮಂ, ಭದ್ರವೀರ ಸೌಂದರ್ಯಮಂ
ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ
ಭೂಮಿಪಂ ತದ್ರೂಪ ಗುಣ ಹೃದಯರಂ

ಪರಿಣಾಮವಾಗಿ ಯಜ್ಞಕುಂಡದಿಂದ ಪಾಯಸ ಬಂತು. ಕೌಸಲ್ಯಾದಿಗಳು ಅದನ್ನುಂಡು ಗರ್ಭಿಣಿಯರಾದರು.

ವಾಲ್ಮೀಕಿಯಿಂದ ವರ್ಣಿತವಾದ ಸಾಂಪ್ರದಾಯಿಕ ಕ್ರಮವನ್ನು ಕುವೆಂಪುರವರು ಉದಾತ್ತಗೊಳಿಸಿದ್ದಾರೆ. ಯುಗಧರ್ಮಕ್ಕೆ ಸ್ಪಂದಿಸಿದ್ದಾರೆ.

**ಮಂಥರೆ**

ವಾಲ್ಮೀಕಿ ರಾಮಾಯಣದ ಮಂಥರೆ ಮಹಾಪಾಪಿ.ರಾಮ ವನವಾಸಕ್ಕೆ ಅವಳೇ–ಕಾರಣ. ಅವಳನ್ನು ಭರತ ಶತ್ರುಘ್ನರು ನಿಂದಿಸುತ್ತಾರೆ. ಶತ್ರುಘ್ನನು ಆಕೆಯನ್ನು ಕೊಲ್ಲಲು ಸಿದ್ಧನಾಗುತ್ತಾನೆ. ಹೆಂಗಸು ಎಂಬ ಕಾರಣಕ್ಕಾಗಿ—ಧರ್ಮಭೀರುವಾದ ರಾಮನು ಮೆಚ್ಚಲಾರನೆಂಬುದಕ್ಕಾಗಿ ಭರತ ಆತನನ್ನು ಸಮಾಧಾನ ಪಡಿಸುತ್ತಾನೆ.

ಆದರಿಂದಾಗಿ ಮಂಥರೆ ಬದುಕಿಕೊಳ್ಳುತ್ತಾಳೆ. ಆದರೆ ಆ ಬಳಿಕ ಆಕೆಯ ಗತಿ ಏನಾಯಿತು ಎಂಬುದರ ಬಗ್ಗೆ ವಾಲ್ಮೀಕಿ ಮೌನಿಯಾಗಿದ್ದಾನೆ.

ಮಂಥರೆಯ ಪೂರ್ವಚರಿತೆಯೂ ರಾಮಾಯಣದಲ್ಲಿಲ್ಲ. "ಜ್ಞಾತಿದಾಸೀಯತೋ ಜಾತಾ ಕೈಕೇಯ್ಯಾಸ್ತು ಸಹೋಷಿತಾ" ಎಂದು ಮಾತ್ರ ವರ್ಣಿಸಲಾಗಿದೆ. ಅವಳ ಕುಲ ಗೋತ್ರದರಿವಿಲ್ಲ. ಆಕೆ ಧುತ್ತೆಂದು ರಾಮ ಪಟ್ಟಾಭಿಷೇಕದ ಸಿದ್ಧತೆಯ ಸಮಯದಲ್ಲಿ ಕಾಣಿಸಿಕೊಳ್ಳುತ್ತಾಳೆ. ಕೈಕೆಯಿಗೆ ದುರ್ಬೋಧನೆ ನೀಡುತ್ತಾಳೆ. ಪ್ರಭಾವ ಶಾಲಿಯಾದ ವಾಕ್ ಜಾಣ್ಮೆಯಿಂದ ಕೈಕೆಯನ್ನು ಒಲಿಸುತ್ತಾಳೆ. ರಾಮನನ್ನು ಕಾಡಿಗಟ್ಟುವುದರಲ್ಲಿ ಯಶಸ್ವಿಯಾಗುತ್ತಾಳೆ. ಆಕೆಯ ಧೂರ್ತತೆಯೇ ರಾಮಾಯಣಕ್ಕೆ ಕಾರಣವಾಗುತ್ತದೆ.

ಶ್ರೀ ರಾಮಾಯಣ ದರ್ಶನದ ಮಂಥರೆಯ ಪರಿಯೇ ಬೇರೆ. ವಾಲ್ಮೀಕಿ ರಾಮಾಯಣದಂತೆ ಇಲ್ಲಿಯೂ ಮಂಥರೆ ರಾಮ ವನವಾಸಕ್ಕೆ ಕಾರಣಳು. ಆದರೆ ಅಲ್ಲಿಗೇ ಮುಗಿಯುವುದಿಲ್ಲ ಆಕೆಯ ಕಥೆ. ಮಹಾಪಾಪಿಯಾದರೂ ಪಶ್ಚಾತ್ತಾಪದಿಂದ ಪುನೀತಳಾಗಿ ಸಾಧಕಿಯಾಗಿ ಗೋಚರಿಸುತ್ತಾಳೆ.

ಮಂಥರೆಯ ಪೂರ್ವಚರಿತ್ರೆ ರಾಮಾಯಣ ದರ್ಶನದಲ್ಲಿದೆ. ಕೈಕೆಯ ರಾಜನಿಗೆ ಆಕೆ ಬೇಟೆಯ ಸಂದರ್ಭದಲ್ಲಿ ಸಿಕ್ಕಿದ ಅನಾಥ ಶಿಶು. ವಿಕೃತಾಕಾರದ ಆಕೆಯನ್ನು ರಾಜ ಮನೆಗೆ ತರುತ್ತಾನೆ ಸಲಹುತ್ತಾನೆ. ಆದರೆ ಅವಳಿಗೆ ಅಲ್ಲಿಯೂ ದೊರೆತದ್ದು ತಿರಸ್ಕಾರದ ಉಪಚಾರವೇ. ಮಂಥರೆ ಕನ್ಯೆಯಾಗಿ ಬೆಳೆಯುತ್ತಿದ್ದಾಗ ಕೈಕೆಯ ಜನನವಾಗುತ್ತದೆ. ಆ ಮಗುವನ್ನು ಆಡಿಸುವ ಕೈಂಕರ್ಯ ಮಂಥರೆಗೆ ದೊರೆಯುತ್ತದೆ. ಅಂದಿನಿಂದಲೇ ಕೈಕೆಯಿಗೆ ಆಕೆ ಆಪ್ತ—ಪ್ರೀತಿಯ ಪರಿಚಾರಿಕೆ. ಕೈಕೆಯ ಮದುವೆಯಾದಾಗ ಬಳುವಳಿಯಾಗಿ ಬಂದ ಸೇವಕಿಯರಲ್ಲಿ ಮಂಥರೆಯೂ ಒಬ್ಬಳು. ಅಯೋಧ್ಯೆಯಲ್ಲಿ ಈ ಗೂನಿಗೆ ಪುರಸ್ಕಾರವಿರಲಿಲ್ಲ—ತಿರಸ್ಕಾರವೇ. ಕೌಸಲ್ಯೆ ಸುಮಿತ್ರೆಯರಿಗೆ ಈಕೆಯನ್ನು ಕಂಡರಾಗದು. ಕೈಕೆಗಾಗಿ ಮಂಥರೆ ಎಲ್ಲವನ್ನೂ ಸಹಿಸುತ್ತಾಳೆ. ಭರತನ ಜನನದ ಬಳಿಕ ಮುದುಕಿ ಕೈಕೆಗೆ ಭರತನೇ ಸರ್ವಸ್ವ. ಎಲ್ಲ ತಿರಸ್ಕಾರಗಳನ್ನೂ ಸಹಿಸುತ್ತ ಬಾಳಿದ್ದು ಕೈಕೆ ಭರತರಿಗಾಗಿ.

**ಕೋಸಲದೊಳಾ**
**ಗೂನಿ ಮಂಥರೆಯ ಮೀರಿದ ತಿರಸ್ಕೃತೆಯುಮಂ**
**ಸಂತೃಪ್ತ ಸುಖಿಯುಮಂ ಕಾಣೆ...**
**.. ನರರನ್ಮರಿಲ್ಲಾಯ್ತು ಮಂಥರೆಯ**
**ಲೋಕಕ್ಕೆ, ಕೈಕೆ ಭರತರ್ವಿನಾ.**

ಭರತ ಕೈಕೆಯರಲ್ಲಿ ಮಂಥರೆ ಮಮತೆಯ ಸುಳಿಯಾದಳು ಪರಿಣಾಮವಾಗಿ ರಾಮನ ಪಟ್ಟಾಭಿಷೇಕದ ಸಮಯದಲ್ಲಿ—

**ಮಥಿಸಿದುದು ದಶಶಿರನ ವಿಧಿ ಮಂಥರೆಯ ಮನದಿ**
**ತನ್ನ ತಂತ್ರದ ಕೃತಿಯಿನಾ ಇರುಳ್ ಕನಸಿನಲಿ.**

ಭಯಂಕರವಾದ ಕನಸದು. ರಾಮ ಪಟ್ಟಾಭಿಷೇಕದ ವಾರ್ತೆಯಿಂದ ಕಂಗೆಟ್ಟ ಮಂಥರೆ ತನ್ನ ಭರತನಿಗೆ ದೊರೆಯಬೇಕಾದ ಪಟ್ಟವನ್ನು ರಾಮನಿಗೊಪ್ಪಿಸದಂತೆ ಮಾಡಲು ಯತ್ನಿಸಿದಳು. ಕೈಕೆಯನ್ನು ತನ್ನ ಮಾಯಾಜಾಲಕ್ಕೆ ಸಿಲುಕಿಸಿದಳು. ವರ ಕೇಳಿಸಿದಳು. ಎಲ್ಲವೂ ಭರತನ ಏಳಿಗೆಗಾಗಿ ಇದರಿಂದ ಆತ ತೃಪ್ತನಾಗುತ್ತಾನೆಂಬುದು ಆಕೆಯ ಎಣಿಕೆ ಆದರೆ ಅದು ಸತ್ಯವಾಗಲಿಲ್ಲ. ಶತ್ರುಘ್ನನಿಂದ ಸಾಕಷ್ಟು ಹಿಂಸೆಯನ್ನು ಪಡೆದ ಮಂಥರೆಗೆ ಭರತನಿಂದ ದೊರೆತ ಗೌರವವೆಂದರೆ—

**ಪೆತ್ತವಳನಳುಪುವೊಲ್**
**ಕಾಣಿಸುತ್ತಳಿಕೆಯ್ಕಿದ್ದಿದ ತನ್ನ ಕಣ್ಗಳನೆ**
**ಕಿತ್ತೆಸೆವನಂತೆ ನಾಂ–ಮಂಥರೆ ಬಿಸುಟ್ಟೆನಿದೊ**
**ನಿನ್ನನೆಂದೆಂದಿಗುಂ**

ಮಂಥರೆಗಿನ್ನೇನಿದೆ ?

**ಭರತನಳ್ಕರೆಯೊಂದೆ ಪಿರಿಯ ನೆವಮ್ಮಾಗಿರ್ದ**
**ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು-ಮತ್ತೆ**
**ಪುಡಿಪುಡಿಯಾಯ್ತು ಬೂದಿಯಾಯ್ತುಳ್ಳಿಯೋ ಉರಿದುರಿದು**
**ಭರತನಾಗ್ರಹ ಗ್ರಹದ ಘಾತಕ್ಕೆ**

ಕೊನೆಗೆ-

**ತನ್ನ ನಂಜಂ ತಾನೆ ಹೀರಲೆಳಸುವ ಕಾಳ**
**ಸರ್ಪಿಣಿಯ ತೆರದಿ 'ಹಾ' ತನ್ನ ಕೈಕೆಯ ಮಗುಗೆ**
**ತನ್ನ ಜೀವಾನಂದ ಸಾಗರ ಸುಧಾಂಶುಗೆ**
**ಭರತದೇವಗೆ ನೆಲದ ಸಿರಿಯುಕ್ಕೆ ಸೊಗವುಕ್ಕೆ**
**ಮುಡಿಗೆ ನೇಸರ ಬಳಿಯ ಮುಕುಟವುಕ್ಕೆಂದಲ್ತೆ**
**ರಾಮನನಡವಿಗಟ್ಟಿದೆನಯ್, ಮತ್ತೆ ರಾಮನಂ**
**ಮನೆಗೆ ಕರೆತಂದನಾದೊಡೆ ಕಂದ ಭರತಂಗೆ**
**ಮುದವಪ್ಪುದಪ್ಪುದಂತೆಯೆ ಕೈಕೆಗುತ್ಸವಂ**

ಈ ನಿರ್ಧಾರ ಮಾಡುತ್ತಾಳೆ. ಒಟ್ಟಿನಲ್ಲಿ ಭರತನೇಳ್ಗೆಯೇ ಆಕೆಯ ಆಕಾಂಕ್ಷೆ. ಭರತ ಬಿಟ್ಟರೂ ಮಂಥರೆಯ ಮಮತೆ ಆತನನ್ನು ಬಿಡದು. ರಾಮನನ್ನು ಕರೆತರಲು ಆಕೆಯೇ ಮುಂದಾಗುತ್ತಾಳೆ. ಹಸಿವು ನೀರಡಿಕೆಗಳನ್ನು ಲೆಕ್ಕಿಸದೆಯೇ ಆಕೆ ವನದಲ್ಲಿ "ಓ ಭರತನಣ್ಣಯ್ಯ. ಓ ನನ್ನ ರಾಮಯ್ಯ. ಬಾರಯ್ಯ, ದಮ್ಮಯ್ಯ" ಎನ್ನುತ್ತ ಸಾಗಿ ಕೊನೆಗೆ ದಾವಾಗ್ನಿಯಲ್ಲಿ ಬೆಂದು ಬೂದಿಯಾಗುತ್ತಾಳೆ. ಆಕೆಯ ಗೂನುಶರೀರ ಸುಟ್ಟು ಭಸ್ಮವಾಗುತ್ತದೆ.

ಮಂಥರೆಯ ಕಥೆ ಇಲ್ಲಿಗೆ ಮುಗಿಯಲಿಲ್ಲ ರಾಮಾಯಣ ದರ್ಶನದಲ್ಲಿ. ರಾಮ ಬರುವ ಅವಧಿಯಾದರೂ ಬರಲಿಲ್ಲವೆಂದು ಕಾತರಿಸಿ ಅಗ್ನಿಪ್ರವೇಶ ಮಾಡಲು ಭರತನು ಜ್ವಗಿಸಿದಾಗ ಆ ಬೆಂಕಿಯಿಂದ ಜ್ವಾಲೆಯೇಳುವಂತೆ ಸುಂದರಮೂರ್ತಿಯೊಂದು ಎದ್ದು

"ಕಂದ ನಿನ್ನಗ್ರಜಂ ಇಂದೊ ನಾಳೆಯೊ ದಿಟಂ ಹಿಂತಿರುಗಿ ಬಂದಪಂ" ಎನ್ನುತ್ತದೆ. ನೀನಾರೆಂದು ಕೇಳಿದಾಗ 'ಪುತ್ರಾರ್, ನಿನ್ನ ಸುಕ್ಷೇಮ ಚಿಂತನೆಯೊಳಿರ್ಪಳಾ ಮಂಥರೆ ವಿನಾ" ಎಂಬ ಉತ್ತರ ಬರುತ್ತದೆ. ಮಂಥರೆಯೆಂದಾಗ ಸಿಡಿಮಿಡಿಗೊಂಡು ಆಕೆಯಿಂದಲೇ ಬವಣೆವುಂಟಾಯಿತೆಂದೂ ಆಕೆಯ ಹೆಸರನ್ನು ಕೇಳಲಾರೆನೆಂದೂ ಭರತ ನುಡಿದಾಗ ಆ ಮೂರ್ತಿ ಹೇಳುತ್ತದೆ "ನಿನ್ನ ಬವಣೆಗೆ ಕಾರಣ ಮಂಥರೆಯಲ್ಲ,



**ವತ್ಸ ಕಾರಣಳಲ್ತು, ಬರಿ ಕರಣಮಾ ಕುಬ್ಜೆ**
**ಮಂಥರಾಪ್ರೇಮದಂತಃಕರಣಮಂ ಕಾಣ್**
**ನೀಂ, ರಾಮನಂ ಮತ್ತೆ ನಿನ್ನಭ್ಯುದಯಕಾಗಿ**
**ಮರಳ್ಚುವುದ್ಯೋಗದೊಳ್ ತೊಡಗಿರಲ್ಕವಳ್**
**ದಾವಾಗ್ನಿಗಾಹುತಿಯಾದಳಲ್ತೆ—**

ಹೀಗೆಂದು ಮೂರ್ತಿ ಮಾಯವಾಗುತ್ತದೆ. ಕವಿವಾಣಿ ಕೇಳುತ್ತದೆ.

**ಮೂಡುತಿರ್ದುವೆ ಮಹಾರತ್ನಗಳ್ ಪೇಳ್**
**ಮಥಿಸದಿರೆ ಮಂಥರೆಯ ವಾಸುಕಿಮಹಾಮಮತೆ ತಾಂ**
**ಕೈಕೆ ಮಂದರದಿಂದಮಾ ತ್ರೇತಾಸಮುದ್ರಮಂ**

ಮಂಥರೆಯುಳಿದರೂ ಆಕೆಯಾತ್ಮ ಭರತನೇಳ್ಗೆಗಾಗಿಯೇ ಹಾರೈಸುತ್ತಿತ್ತು. ಆತನನ್ನು ಕಾಯುತ್ತಲೇ ಇತ್ತು. ಇದು ರಾಮಾಯಣದರ್ಶನದ ಮಂಥರೆಯ ವೃತ್ತಾಂತ ವಾಲ್ಮೀಕಿರಾಮಾಯಣದಲ್ಲಿ ಕೆಲಹೊತ್ತು ಬಂದು ಹೋಗುವ ಮಂಥರೆಯ ವೃತ್ತಾಂತ. ಇಲ್ಲಿ ಕಥೆ ಯುದ್ಧಕ್ಕೂ ವ್ಯಾಪಿಸಿದೆ.

ಮಂಥರೆ ಪತಿತೆಯರ ಪ್ರತಿನಿಧಿಯೆಂಬಂತೆ ತೋರುತ್ತಿದ್ದಾಳೆ. ಆಕೆ ಪುಣ್ಯಾತ್ಮೆ, ಆಕೆಯ ಪ್ರೇಮ ಅಖಂಡವಾದುದು.

**ಕಬಂಧ**

ವಾಲ್ಮೀಕಿ ರಾಮಾಯಣದಲ್ಲಿ ಕಬಂಧ ವೃತ್ತಾಂತ ವಿಸ್ತಾರವಾಗಿಯೇ ಬಂದಿದೆ. ಅಲ್ಲಿ ಕಬಂಧವನಕ್ಕೆ ಬಂದಾಗ ಅಸ್ಥಿರನಾಗುವವನು ಲಕ್ಷ್ಮಣ. ಅಪಶಕುನಗಳಿಂದ ತತ್ತರಿಸಿ ಅಣ್ಣನೊಡನೆ ದುಃಖ ತೋಡಿಕೊಳ್ಳುತ್ತಾನೆ. ಕಬಂಧಬಾಹುವು ಅವರಿಬ್ಬರನ್ನೂ ಆಕ್ರಮಿಸಿದಾಗ ಲಕ್ಷ್ಮಣ "ನನ್ನನ್ನು ಬಲಿಗೊಟ್ಟು ನೀನು ಮುಂದೆ ಹೋಗು" ಎನ್ನುತ್ತಾನೆ. ರಾಮನೇ ಧೈರ್ಯ ಹೇಳಿ ಇಬ್ಬರೂ ಸೇರಿ ಕಬಂಧಬಾಹುಗಳನ್ನು ಕತ್ತರಿಸುತ್ತಾರೆ. (ಎಡಬಾಹುವನ್ನು ಲಕ್ಷ್ಮಣ. ಬಲಬಾಹುವನ್ನು ರಾಮ). ಕಬಂಧ ರಾಮಲಕ್ಷ್ಮಣರನ್ನು ವಿಚಾರಿಸುತ್ತಾನೆ. ಅವರಾರೆಂಬುದನ್ನರಿತು ಸಂತೋಷಪಟ್ಟು ತನ್ನ ಭಾಗ್ಯದ ಬಾಗಿಲು ತೆರೆಯಿತೆನ್ನುತ್ತ ತನ್ನಾತ್ಮಚರಿತೆಯನ್ನು ವಿವರಿಸುತ್ತಾನೆ. "ನನ್ನನ್ನು ಸುಟ್ಟ ಮೇಲೆ ನನ್ನ ಪೂರ್ವದ ನಿಜಸ್ವರೂಪವನ್ನು ಪಡೆದು ಯಾವಾತನಿಗೆ ಸೀತೆಯ ವಿಷಯ ತಿಳಿದಿರುತ್ತದೆಯೋ ಅದನ್ನು ತಿಳಿಸುತ್ತೇನೆ" ಎನ್ನುತ್ತಾನೆ. ಅದರಂತೆ ರಾಮಲಕ್ಷ್ಮಣರು ಕಬಂಧ ಶರೀರವನ್ನು ಸುಡುತ್ತಾರೆ. ಆಗ ಶಾಪವಿಮುಕ್ತನಾದ ಆತ

ರಾಮನು ಯಾವ ದಾರಿಯನ್ನು ಹಿಡಿಯಬೇಕೆಂದು ವಿವರಿಸುತ್ತಾನೆ. ಸುಗ್ರೀವನೊಡನೆ ಸಖ್ಯಮಾಡಿಕೊಳ್ಳಲು ಹೇಳುತ್ತಾನೆ. ದಾರಿಯನ್ನು ವಿವರಿಸುತ್ತಾನೆ. ಪಂಪಾಸರೋವರ, ಮತಂಗಾಶ್ರಮದಲ್ಲಿರುವ ಶಬರಿ ಮೊದಲಾದೆಲ್ಲವನ್ನು ವಿವರಿಸಿ ಮುನ್ನಡೆಯಲು ಹೇಳುತ್ತಾನೆ.

ಶ್ರೀ ರಾಮಾಯಣದರ್ಶನದಲ್ಲಿ ಆ ವೃತ್ತಾಂತ ಹೀಗಿದೆ :

ರಾಮನಿಗೆ ಸೀತಾವಿರಹದ ಬಾಧೆ ಅತಿಯಾಗುತ್ತದೆ. ಆತ ಭ್ರಾಂತನಾಗುತ್ತಾನೆ. "ಏತಕೆಲ್ಲಿಗ್ ಎತ್ತ ಪೋಗುತಿಹೆವಾವಿಂತು ? ಸೌಮಿತ್ರಿ," "ದೇವಿಯನ್ವೇಷಣೆಗೆ" "ಆರವಳ್ ಆ ದೇವಿ" ಹೀಗಾಗುತ್ತದೆ ರಾಮನ ಭ್ರಾಂತಿ. ಲಕ್ಷ್ಮಣ ಧೈರ್ಯ ಹೇಳುತ್ತಾನೆ. ಆಗ—

ಲಕ್ಷ್ಮಣಂ
**ನುಡಿಯುತಿರಲಿಂತು, ರಾಮಂಗಾದುದನುಭವಂ**
**ಮಾನಸಿಕದೊಂದದ್ಭುತಂ, ತುಂಬಿದುದು ಮುಂಜು**
**ಕಾಡೆಲ್ಲಮಂ, ದೃಷ್ಟಿಯಸ್ಫುಟಮಾಯ್ತು, ಭೀತಿ**
**ಆಕಾರವಾಧಾರವೊಂದನರಿಯದ ಭೀತಿ ತಾಂ**
**ಛಾಯೆಛಾಯೆಗಳಾಗಿ ರಾಹುವೋಲಲೆದತ್ತು**
**ಕುಳಿರ್ಚಳಿಗಳಂ ಸುಯ್ದು, ನೋಡುತಿರೆ ರಾಘವಂ**
**ಮೂಡಿತೊಂದಕಶೇರು: ಕಶ್ಮಲ ಸರೀಸೃಪಂ**
**ಮುಂಚೆ ಮೈಗೊಂಡಂತೆವೋಲ್, ಶ್ಲೇಷ್ಮ ಚರ್ಮದಿಂ**
**ಭೀಕರತೆವೆತ್ತುದಾ ವಿಕೃತ ತಿರ್ಯಗ್ಯೋನಿ**
**ಕುಕ್ಷಿಗಂ, ವ್ಯಾಳಾಕೃತಿಯ ರಾಕ್ಷಸಂ, ಇಲ್ಲ ಕೈ**
**ಇಲ್ಲ ಕಾಲ್, ಇಲ್ಲ ಮೆಯ್, ಹೊಟ್ಟೆತಾನದೆ ಮುಂದೆ**
**ಕಾಲುಗಳೊ ತೋಳುಗಳೊ ಕಿವಿಗಳಿರ್ಪೆಡೆಯಿಂದ**
**ಚಾಚಿದುವು ಯೋಜನಂ.. ...**

ಹೀಗೆ ಚಾಚಿದ ಬಾಹುಗಳು ರಾಮನನ್ನು ಹಿಡಿಯುತ್ತವೆ. ಆತ "ಕೆಟ್ಟೆನಯ್ ಲಕ್ಷ್ಮಣಾ" ಎನ್ನುತ್ತಾನೆ. "ಸಾವೆದಲ್ ದಿಟವೆಮಗೆ ಬಾಳ್ಕೆ" ಎಂದೊರಲುತ್ತಾನೆ. ಆಗ ಊರ್ಮಿಳಾ ವಲ್ಲಭನು ಮೇಲ್ವಾಯ್ದು ಆ ಬಾಹುಗಳನ್ನು ಖಡ್ಗದಿಂದ ಕಡಿಯುತ್ತಾನೆ. ಆಗ ರಾಕ್ಷಸನು ಮಾಯವಾಗಿ 'ವೈರಾಗ್ಯದಿಂದುದ್ಭವಿಸಿ ತೋರ್ಪವೊಲಾ ಮರೀಚಿ ತಾಂ, ಬೃಂದಾರಕಂ ಮೈದೋರ್ದನೋರ್ವನ್, ಮತ್ತೆ ಕೈದೋರಿದನ್. ಶಬರಿ ಕಾಯುತಿರ್ದಾಶ್ರಮ ದಿಶಾಶಾ ದಿಗಂತಕ್ಕೆ" ರಾಮನು ಭಯ ಮೂರ್ಛೆಯಿಂ ಮೈತಿಳಿದು "ಬದುಕಿದೆನೊ ನಿನ್ನಿಂದ ಸೌಮಿತ್ರಿ" ಎನ್ನುತ್ತಾನೆ. "ನಿನ್ನಿಂದ ಸತ್ತನೊ ನಿಶಾಚರಂ, ಕೊಂದೆನೊ ನಿರಾಶೆಯಂ ಗೆಲ್ದೆನೊ ಕಬಂಧನಂ. ಹತವಾದುದೊ ಹತಾಶೆ. ಬಾ ನಡೆವಮಿಲ್ಲಿಂದೆ : ಬಲ್ಗಜ್ಜವಿದಿರಿರ್ಪುದ ...' ಎನ್ನುತ್ತಾನೆ.

ಕಬಂಧ ಇಲ್ಲಿ ರಾಕ್ಷಸನಲ್ಲ, ಶಾಪಗ್ರಸ್ತನಲ್ಲ. ರಾಮನಲ್ಲಿ ಉಂಟಾದ ಹತಾಶೆ.

'ಪೃಥ್ವಿಗೆ ರಾಹು ಬೇರೆಯೇಂ ತನ್ನ ನೆಳಲಲ್ಲದೆಯೆ? ಅಂತೆಯೇ ಕಬಂಧ ರಾಮನ ಅಸ್ಥಿರತೆಯ-ನಿರಾಶೆಯ ಪ್ರತೀಕ, ಧೀರಲಕ್ಷ್ಮಣನಿಂದ ಅದರ ಸಂಹಾರ ರಾಮನಿಗೆ ಧೈರ್ಯದ ಪುನರವತಾರ.

**ಶಬರಿ**

ವಾಲ್ಮೀಕಿ ರಾಮಾಯಣದಲ್ಲಿ ಶಬರಿಯು "ಸಿದ್ಧಳೂ ಸಿದ್ಧರಿಗೆ ಪ್ರಿಯಳೂ ತಪಸ್ವಿನಿಯೂ" ಎಂದು ವರ್ಣಿತವಾಗಿದ್ದಾಳೆ. ರಾಮಲಕ್ಷ್ಮಣರು ಕಬಂಧನ ಹೇಳಿಕೆಯಂತೆ ಶಬರಿಯಾಶ್ರಮಕ್ಕೆ ಬಂದಾಗ ಆಕೆ ಅವರನ್ನು ಗುರುತಿಸುತ್ತಾಳೆ. ರಾಮ ಲಕ್ಷ್ಮಣರಿಗೆ ತನ್ನ ಗುರುವೂ ಮಹಾತ್ಮನೂ ಆದ ಮತಂಗ ಋಷಿಯ ಆಶ್ರಮವನ್ನು ತೋರಿಸಿ ರಾಮನೊಡನೆ "ನಿನ್ನ ಅಪ್ಪಣೆ ಪಡೆದು ನನ್ನ ಈ ಶರೀರವನ್ನು ಬಿಡಲು ಇಚ್ಛಿಸುವೆನು. ಇದು ಯಾವ ಋಷಿಗಳ ಆಶ್ರಮವೋ ಯಾರಿಗೆ ನಾನು ಸೇವಕಳೋ ಆತ್ಮಜ್ಞಾನಿಗಳಾದ ಅವರ ಸಮೀಪಕ್ಕೆ ಹೋಗಲು ಇಷ್ಟಪಡುವೆನು" ಎನ್ನುತ್ತಾಳೆ. ಆ ಋಷಿಗಳ ವಾಕ್ಯಾನುಸಾರವಾಗಿಯೇ ಆಕೆ ರಾಮನನ್ನು ಕಾಯುತ್ತಿದ್ದಳು. ಕಂದಮೂಲಾದಿಗಳನ್ನು ತಂದಿಟ್ಟುಕೊಂಡು ನಿರೀಕ್ಷಿಸುತ್ತಿದ್ದಳು. ರಾಮನ ದರ್ಶನದ ಬಳಿಕ ತನ್ನ ಜೀರ್ಣವಾದ ಶರೀರವನ್ನು ಬಿಡಲು ಆಸೆಪಟ್ಟಳು. ಅದರಂತೆ ಅಗ್ನಿಯಲ್ಲಿ ತನ್ನ ಶರೀರವನ್ನು ಸಮರ್ಪಿಸಿ ಅಗ್ನಿಗೆ ಸಮಾನಳಾಗಿ ತೇಜೋವಂತ ಶರೀರವನ್ನು ಪಡೆದು ಸ್ವರ್ಗಕ್ಕೆ ತೆರಳಿದಳು.

ಶ್ರೀರಾಮಾಯಣದರ್ಶನದಲ್ಲಿ ಶಬರಿಯ ವೃತ್ತಾಂತ ವಿಸ್ತಾರವಾಗಿ ರಸವತ್ತಾಗಿ ವರ್ಣಿತವಾಗಿದೆ.

> ಆ ಬೆಳ್ದಿಂಗಳಿರುಳಿನೊಳ್
> ಮುಪ್ಪು ಜವ್ವನಗನಸು ಕಾಣ್ಬೊಂದು ಮಾಳ್ಕೆಯಿಂ
> ಮುದುಕೆ ಕಂಡಳ್ ಕನಸನಾ ಶಬರಿ
> .................. ..........
> ................ ಗಗನ ನೀಲಾಭನಂ
> ಮರಳಿ ಚಿತ್ರಿಸಿಕೊಂಡಳಾ ಸ್ವಪ್ನದರ್ಶನದ
> ಶ್ರೀಮೂರ್ತಿಯಂ...............

ಆ ಶ್ರೀಮೂರ್ತಿಯಂ ನಿರೀಕ್ಷಿಸುತ್ತ

> ನೀನೆಂದಿಗೆ ಬರುವೆಯಯ್ಯ, ಓ ನನ್ನಯ್ಯ,
> ಕಂದಯ್ಯ ರಾಮಚಂದ್ರಯ್ಯ? ಗುರುದೇವನಾ
> ಮುನಿ ಮತಂಗನ ಮಾತು ಬೀತಪುದೆ ? ನಿನಗಾಗಿ
> ಕಾದಿರುವೆನೀರೈದು ವತ್ಸರಗಳಿಂ ವತ್ಸ
> ಪಣ್ಫಲಂಗಳನೆಲ್ಲ ಬಿತ್ತಿ ಬೆಳೆದಣೆಮಾಡಿ
> ಕಾಯುತಿಹುದೆನ್ನಾಶ್ರಮಂ, ನೋಯುತಿದೆ ಮನಂ

ಎಂದು ಹಂಬಲಿಸುತ್ತಿರುತ್ತಾಳೆ. ತಾನು ಮುದುಕಿಯಾಗಿ ಕಣ್ಣು ಕಾಣುವುದೂ ಕಷ್ಟ ವಾಗುತ್ತಿದೆಯೆಂಬ ಭಾವನೆಯಿಂದ ಆಕೆ ದುಃಖಕ್ಕೊಳಗಾಗುತ್ತಾಳೆ.

**ಕಣ್ಣಿಳಿದ**
**ಮೇಲೆ ನೀ ಬಂದರಯ್ಯೊಯ್ಯೊ, ಕಣ್ಣಾರ್ವಿನಂ**
**ನಿನ್ನನೆಂತಯ್ ನೋಳ್ಪೆನ್, ಕೈಯಿಂದ ಮೈಯೆಳಪಿ**
**ಸಂತಸಂಬಡುವೆನಾದೊಡಮೆಂತು ತಣಿಸುವೆನೊ ಹೇಳ್**
**ಕಣ್ಣಳೀ ನೀರಳ್ಕೆಯಂ**

ಕನಸಿನ ರಾತ್ರಿ ಹೋಗಿ ಬೆಳಗಾಗುತ್ತದೆ. ಶಬರಿ ತವಕಗೊಳ್ಳುತ್ತಾಳೆ. ಆ ನೀಲವರ್ಣನು ಬರುತ್ತಾನೆಯೇ ಎಂದು ನೋಡುತ್ತಾಳೆ. ಎಲೆವನೆಯ ಒಳ ಹೊರಗೆ ನೋಡುತ್ತಾಳೆ. ಬಾಗಿದ ಸೊಂಟವನ್ನು ನೇರಮಾಡಿ ನೋಡುತ್ತಾಳೆ. ''ಭಗವದಾಗಮನ ಮೇಂ ಭಕ್ತನ ನಿರೀಕ್ಷಿಸಿದ ರೂಪದಿಂ ಬಂದಪುದೆ ?'' ರಾಮಲಕ್ಷ್ಮಣರು ಬರುತ್ತಾರೆ. ರಾಮನೆಂತಿದ್ದಾನೆ ! 'ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ ಶಬರಿ ಬೇಡಂ ಗೆತ್ತಳೆನೆ ಮೈಥಿಲೀಪ್ರಿಯನ ದಾರುಣ ಸ್ಥಿತಿಗೇತಕಿನ್ ಬೇರೆ ಸಾಕ್ಷಿ ?' ತನ್ನವರೇ ಯಾರೋ ಎಂದು ಭಾವಿಸಿದಳಾಕೆ. ಲಕ್ಷ್ಮಣ ಆಕೆಯನ್ನುದ್ದೇಶಿಸಿ 'ಬಳಲಿ ಬಂದ ತಮಗೆ ಗುಡಿಸಲಲ್ಲಿ ಆಶ್ರಯ ಮತ್ತು ತಿನಿಸು ನೀಡೆಂದು, ಕೇಳುತ್ತಾನೆ.

**'ಕಂಡವರ್ಗೆಲ್ಲ**
**ಬರ್ಪ ಬೇಡರ್ಗೆಲ್ಲಮುಣಿಸಿತ್ತು ಬೀಡಿತ್ತು**
**ಮೆಲ್ಲಾಸನೀಯೆ ನಾನೇನು ಅಡುಗೂಳಜ್ಜಿ**
**ಅಲ್ಲ ಕಾಣಯ್ಯ,' ಇಂತು ನಿಷ್ಠುರವೆಂದೊಡಂ**
**'ಬಡವಳಿದ್ದುದನೀವೆ ಬನ್ನಿಂ'—ಎನ್ನುತ್ತಾಳೆ**

'ತಾವು ಮೀಯಬೇಕು ನಿರೆಲ್ಲಿದೆ' ಎಂದು ಕೇಳಿದಾಗ ಶಬರಿಗೆ ಸಂಶಯ ಬರುತ್ತದೆ. 'ಯಾರು ನೀವೆಂದು' ಪ್ರಶ್ನಿಸುತ್ತಾಳೆ. 'ನೆಲಗೆಟ್ಟವರು' ಎಂದು ಹೇಳಿದರೆ 'ಅರಗುಲಿ ಗಳೊರ್ವನ ಸತಿಗೆ ಮತ್ತೊರ್ವನಳಪುವಂ, ಎನ್ನುತ್ತಾಳೆ. ಮಿಂದು ಬಂದವರಿಗೆ ಹಣ್ಣು ಹಂಪಲು ನೀಡುತ್ತಾಳೆ.

**ಆರ ಸಂಪದಮಾರ್ಗೊ**
**ನಿಮ್ಮ ಸಯ್ಪಿದನವರಿಗಾಂ ಬಡಿಸಲೇನಳವೆ**
**ತಣಿಯುಂಡು ತಣಿಯಿರಯ್ ಮಗುಗಳಿರ ಬಂದತಿಥಿ**
**ಯಾರಾದರೇನೆಂತೆ–**

ಎಂಬ ಉದ್ಗಾರ ಆಕೆಯ ಬಾಯಿಯಿಂದ ಹೊರಡುತ್ತದೆ. ''ಯಾರ ಸಂಪತ್ತು ಯಾರಿಗೆ ಅಜ್ಜಿ'' ಎಂದಾಗ 'ದಶರಥಕುಮಾರನಿಗಾಗಿ ಕಾದಿರಿಸಿದ್ದು' ಎನ್ನು ತ್ತಾಳೆ. ಮಾತು ಮಾತುಗಳಲ್ಲಿ ಆಕೆ ರಾಮನ ವಾರ್ತೆಯನ್ನು ಕೇಳುತ್ತಾಳೆ. ಶಾಂತಿನಿಧಿಯೆಂತನೆನ್ನುತ್ತಾಳೆ. ಆಗ ರಾಮ ''ಮನೆಗೆಟ್ಟು ಹೇರಡವಿ ಮನೆಯಾದವ ಶಾಂತಿನಿಧಿಯೋ'' ಎಂದು ಮರು ಪ್ರಶ್ನಿತ್ತಾನೆ. ಶಬರಿ ಸಿಟ್ಟಾಗುತ್ತಾಳೆ. ''ಮಹಾತ್ಮನಂ

ತೆಗಳದಿರ್'' ಎನ್ನುತ್ತಾಳೆ.

ಊಟ ಮುಗಿದು ವಿಶ್ರಾಂತಿ ಪಡೆಯುತ್ತಿದ್ದ ರಾಮ ಕನಸಿನಲ್ಲಿ

**ನಿಲ್ ನಿಲ್**
**ರಾಕ್ಷಸಾಧಮಾ, ನಿಲ್, ಪೇಳೆಲ್ಲಿಗುಯ್ದಪಯ್**
**"ನನ್ನ ಸೀತೆಯನೆಲವೊ ನೀಚ"**

ಎಂದುದನ್ನು ಕೇಳಿಸಿಕೊಳ್ಳುತ್ತಾಳೆ. ನಿದ್ರಿಸುತ್ತಿದ್ದ ರಾಮನನ್ನೆ ಎವೆಯಿಕ್ಕದೆ ನೋಡುತ್ತಿದ್ದಂತೆ ಶಬರಿಗೆ ಸಂಶಯ ದೂರವಾಗುತ್ತದೆ. 'ಮುದುಕಿ ದೊಪ್ಪನೆ ಬಿಳ್ದಪ್ಪಿದಳ್ ರಾಮನಂ'. ರಾಮನೊಡನೆ "ಏನಾಯ್ತುಯ್ಯೊ ನನ್ನ ಮಗಳಿಗೆ ಹೇಳು ಸೀತೆಯೆಲ್ಲಿಹಳೆಲ್ಲಿ'' ಎಂದು ಕೇಳುತ್ತಾಳೆ. ರಾಮ ಎಲ್ಲವನ್ನು ವಿವರಿಸಬೇಕಾಗುತ್ತದೆ. ದುಃಖದಿಂದ ಆತ ತತ್ತರಿಸುತ್ತಾನೆ. 'ಶಬರಿ ತಾಯ್ಮಡಲಲ್ಲಿ ಸಿಸುವಾಗಿ' ಪರಿಣಮಿಸುತ್ತಾನೆ.

ರಾಮನ ಕಥೆಯನ್ನೆಲ್ಲ ಕೇಳುತ್ತಾಳೆ. ಅವನಿಗೆ ವಿಚಿತ್ರ ಕಾಯಿಲೆ ಪ್ರಾರಂಭವಾಗುತ್ತದೆ. ಹಗಲಿರುಳು ಅವನ ಹಾಸಿಗೆ ಬಳಿಯಲ್ಲೇ ಕುಳಿತು ಸಂತೈಸುತ್ತಾಳೆ. ರಾಮನ ವಿಚಿತ್ರಕಾಯಿಲೆ ಉಲ್ಬಣವಾಗುತ್ತದೆ. ಭೀಮವಪು ಕೃಶವಾಗುತ್ತದೆ. ಒಂದು ರಾತ್ರಿ ಅಣ್ಣನ ಸ್ಥಿತಿಯನ್ನು ತಡೆಯಲಾರದ ಲಕ್ಷ್ಮಣ ಕತ್ತಲಿನಲ್ಲಿ ಕುಳಿತು ಅಳ ತೊಡಗುತ್ತಾನೆ. ಬೆಳಗಿನ ಜಾವದವರೆಗೂ ಹಾಗೇ ಕುಳಿತಿರುತ್ತಾನೆ. ಆಗ ಶಬರಿ ಅಲ್ಲಿಗೆ ಬಂದು ಲಕ್ಷ್ಮಣನ ಬೆನ್ನು ಸವರುತ್ತಾಳೆ.

**ಬಾ ಒಳಗೆ ಬಿಡು ದುಃಖಮಂ**
**ಸೌಮಿತ್ರಿ, ನಿನ್ನಣ್ಣನುಸಿರಿಗಾಂ ಹೊಣೆಗಾರ್ತಿ**
**ನನ್ನ ಗುರುಕೃಪೆಯಿಂದೆ ರಾಮನ ರುಜೆಯೆಲ್ಲಮಂ**
**ಹೀರಿ ಬಿಸುಡುವೆ ನೋಡು ಬಾ—**

ಎನ್ನುತ್ತಾಳೆ. ಒಳಹೋಗಿ ರಾಮನ ಸುತ್ತ ಪ್ರದಕ್ಷಿಣೆ ಬಂದು ಗುರುವನ್ನು ಪ್ರಾರ್ಥಿಸಿ ಮಂತ್ರಘೋಷದೊಂದಿಗೆ ನಮಸ್ಕರಿಸುತ್ತಾಳೆ. ಲಕ್ಷ್ಮಣನೊಡನೆ 'ರಾಮನಿನ್ ಸುಕ್ಷೇಮನಯ್' ಎನ್ನುತ್ತಾಳೆ.

ಬೆಳಗಾಗುತ್ತಲೆ ರಾಮ ಚೇತರಿಸಿಕೊಳ್ಳುತ್ತಾನೆ. ಸುದೃಢಕಾಯದಾರೋಗ್ಯದಿಂದ ಮೇಲೇಳುತ್ತಾನೆ ಲಕ್ಷ್ಮಣನಿಗೆ ಆಶ್ಚರ್ಯವಾಗಿ ಶಬರಿಗೆ ತಲೆಬಾಗುತ್ತಾನೆ.

ಆ ದಿನವೆ ಶಬರಿ ಹಾಸಿಗೆ ಹಿಡಿಯುತ್ತಾಳೆ. ರಾಮನುಪಚರಿಸುತ್ತಾನೆ "ಮಗುವೆ, ಮರುಗದಿರೆನಗೆ ಪಸುರೆಲೆಗೆವೇಳ್ಕುಮುಪಚರ್ಯೆ ಪಣ್ಣೆಲೆಗೇಕೆ ?'' ನೀಂ ಪ್ರೀತಿ ಪರಿಚರ್ಯೆಗೆಯ್ಯುತಿರಲಾಂ ಶಾಂತಿಯಿಂ ಸೇರಿದಪೆನಧ್ಯಾತ್ಮಮಂ' ಎನ್ನುತ್ತಾಳೆ. ತಾನು ಸೀತೆಯಿರುವ ದಶಕಂಠನ ಉದ್ಯಾನವನವನ್ನು ಕನಸಿನಲ್ಲಿ ಕಂಡುದಾಗಿಯೂ, ಸೀತೆ ಕೊರಗಿರುವುದಾಗಿಯೂ ಮರುಗುತ್ತಿರುವುದಾಗಿಯೂ ಹೇಳಿ "ಸುಗ್ರೀವನ ಸಖ್ಯವನ್ನು ಪಡೆದು ನೀನು ಮುಂದೆ ನಡೆ ಗೆಲ್ಗೆ ದೈವೇಚ್ಛೆ, ನಿನ್ನಿಚ್ಛೆಯುಂ ಸಲ್ಗೆ'' ಎನ್ನುತ್ತ

ಕಣ್ಣೀರು ಹರಿಸುತ್ತ ಕಣ್ಮುಚ್ಚುತ್ತಾಳೆ ಶವಕಳೇಬರೆಯಾಗುತ್ತಾಳೆ.

ನರರೂಪಿಯಾದ ರಾಮನಿಗೆ ದುಃಖ ಸಂಕಟಗಳು ಬಂದಾಗ ತನ್ನ ಪ್ರಾಣವನ್ನಿತ್ತು—ಚೈತನ್ಯವುಂಟು ಮಾಡುವ ಶಬರಿ ಇಲ್ಲಿ ಮಮತೆಯ ಸಾಕಾರಮೂರ್ತಿ ಭಕ್ತಿಯ ಪರಾಕಾಷ್ಠೆಯ ಸಂಕೇತ.

ವಾಲ್ಮೀಕಿ ರಾಮಾಯಣದಲ್ಲಿ ಶಾಪಗ್ರಸ್ತ ಕಬಂಧನಿಂದ ರಾಮನಿಗೆ ಮುಂದಣ ಮಾರ್ಗ ತಿಳಿಯುವಂತಾದರೆ ಶ್ರೀ ರಾಮಾಯಣದರ್ಶನದಲ್ಲಿ ಮಾನವ ಸಹಜ ಪ್ರೀತಿ-ಭಕ್ತಿಯ ತಪಸ್ವಿನಿ ಶಬರಿಯಿಂದ ಜೀವದಾನ ಮಾರ್ಗದರ್ಶನ ಎರಡೂ ದೊರೆಯುತ್ತದೆ.

**ವಿಭೀಷಣ**

ವಿಭೀಷಣನು ರಾಮನ ಕಡೆ ಸೇರುವ ಸನ್ನಿವೇಶವೂ ವಾಲ್ಮೀಕಿ ರಾಮಾಯಣದಿಂದ ಶ್ರೀ ರಾಮಾಯಣ ದರ್ಶನದಲ್ಲಿ ಭಿನ್ನವಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ—

ರಾವಣನಿಗೆ ನಾನಾ ವಿಧವಾಗಿ ಹಿತದ ಮಾತುಗಳನ್ನಾಡಿ ಅವನಿಂದ ನಿಂದಿಸಲ್ಪಟ್ಟ ವಿಭೀಷಣನು ತನ್ನ ನಾಲ್ವರು ಅನುಯಾಯಿಗಳೊಡನೆ ಆಕಾಶಕ್ಕೆ ನೆಗೆದು ಅಲ್ಲಿಂದಲೇ ರಾವಣನಿಗೆ ಕೊನೆಯ ಮಾತನ್ನು ಹೇಳಿ ಹೊರಡುತ್ತಾನೆ. ತಡವಿಲ್ಲದೆ ರಾಮನಿದ್ದಲ್ಲಿಗೆ ಬರುತ್ತಾನೆ "ಆಜಗಾಮ ಮುಹೂರ್ತೇನ ಯತ್ರ ರಾಮಸ್ಸಲಕ್ಷ್ಮಣಃ'' ಆತನನ್ನು ನೋಡಿದ ವಾನರ ವೀರರಿಗೆ ಸಂದೇಹಬರುತ್ತದೆ. ಕೊಲ್ಲಲು ಬಂದರೆಂದೇ ಭಾವಿಸುತ್ತಾರೆ. ಆಗ ವಿಭೀಷಣನು–

"ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂ ಗತಃ
ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ
ನಿವೇದಯತ ಮಾಂಕ್ಷಿಪ್ರಂ ವಿಭೀಷಣಮುಪಸ್ಥಿತಂ'' ಎನ್ನುತ್ತಾನೆ

(ಹೆಂಡಿರು ಮಕ್ಕಳನ್ನು ತ್ಯಜಿಸಿ ರಾಮನಲ್ಲಿ ಶರಣು ಹೊಕ್ಕಿದ್ದೇನೆ. ಸರ್ವಲೋಕಗಳಿಗೂ ಶರಣ್ಯನಾದ ಮಹಾತ್ಮನಾದ ರಾಮನಿಗೆ, ವಿಭೀಷಣನು ಬಂದು ನಿಂತಿರುವುದನ್ನು ಬೇಗನೆ ತಿಳಿಸಿರಿ). ಸುಗ್ರೀವ ಜಾಂಬವ ಮೊದಲಾದವರಲ್ಲಿ ಈ ಬಗ್ಗೆ ಜಿಜ್ಞಾಸೆ ನಡೆಯುತ್ತದೆ. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಹೇಳುತ್ತಾರೆ. ಶತ್ರು ಪಕ್ಷದಿಂದ ಬಂದವನನ್ನು ಸೇರಿಸಿಕೊಳ್ಳಬಾರದೆಂಬುದೇ ಪ್ರಾಯಶಃ ಎಲ್ಲರ ಮತ. ಹನುಮಂತನೊಬ್ಬ ಮಾತ್ರ ವಿಭೀಷಣನನ್ನು ಬಲ್ಲವನಾಗಿದ್ದುದರಿಂದಲೋ ಏನೋ ವಿಭೀಷಣನ ಪರವಾಗಿ ನಿಲ್ಲುತ್ತಾನೆ. ಅವನ ಮಾತನ್ನು ಕೇಳಿದ ರಾಮ.

ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ
ದೋಷೋ ಯದ್ಯಪಿ ತಸ್ಯಸ್ಯಾತ್ ಸತಾಮೇತದಗರ್ಹಿತಂ

(ಮಿತ್ರನೆಂದು ಹೇಳಿಕೊಂಡು ಬಂದವನನ್ನು ಏನೇ ಆಗಲಿ ಬಿಡಲಾರೆನು. ಅದರಲ್ಲಿ ದೋಷವಿದ್ದರೂ ಸತ್ಪುರುಷರಿಗೆ ಅದು ನಿಂದನೀಯವಲ್ಲ) ಎನ್ನುತಾನೆ.

**ಸಕೃದೇವ ಪ್ರಪನ್ನಾಯ ತವಾಸ್ಮೀತಿಚಯಾಚತೇ**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತತ್ ವ್ರತಂ ಮಮ**

(ಒಂದೇ ಒಂದು ಬಾರಿ ಶರಣು ಹೊಕ್ಕು ನಾನು ನಿನ್ನವನೆಂದು ಯಾವನು ಹೇಳುತ್ತಾನೋ ಅಂಥವನು ಸಮಸ್ತ ಪ್ರಾಣಿಗಳಲ್ಲಿ ಯಾರೇ ಆಗಿರಲಿ ಅವನಿಗೆ ಅಭಯವನ್ನು ನೀಡುವೆನು ಇದೇ ನನ್ನ ವ್ರತ) ಎನ್ನುತ್ತ ವಿಭೀಷಣನನ್ನು ಕರೆತರುವಂತೆ ರಾಮ ಹೇಳುತ್ತಾನೆ.

ಈ ಘಟನೆ ನಡೆದದ್ದು ಸೇತುಬಂಧಕ್ಕೆ ಮೊದಲೇ --ವಿಭೀಷಣನು ರಾಮನನ್ನು ಕಂಡದ್ದು ಸಮುದ್ರದ ಈಚೆ ದಡದಲ್ಲಿ—ಸಮುದ್ರ ರಾಜನನ್ನು ಒಲಿಯುದಿರುವಾಗಲೇ. ಶ್ರೀ ರಾಮಾಯಣ ದರ್ಶನದಲ್ಲಿ ಈ ಘಟನೆಯ ಪರಿಯೇ ಬೇರೆ

"ಅತ್ತಲಾ ದೈತ್ಯ ಸಭೆಯೊಳ್'' ಗಂಭೀರ ವ್ಯಕ್ತಿತ್ವವುಳ್ಳ ವಿಭೀಷಣನು ಮಾತನಾಡುತ್ತಾನೆ. ''ರಾವಣಂ ಸೇರಿ ಸರ್ವರುಮಿಷ್ಟ ಗಂಭೀರ ಗೌರವದಿ ಚಾತಕ ರಾದರನಲೆಯ ಜನಕನಾತ್ಮದ ವಿಪಂಚೀಕ್ವಣಿಸ ಮಧುರ ಮಧು ಸುಧಾ ಶೀಕರಕೆ'' ವಿಭೀಷಣನು ಹಿತವಾದುದನ್ನೆ ಹೇಳುತ್ತಾನೆ. ಪೆಣ್ಣಳಲ್ ತಿಣ್ಣಮರಿಯಲ್ಕೆ, ಕುಲಕೀರ್ತಿನಾಶನ ಕರಂ ಪರಿಹರಿಪುದಾ ಒಂದು ಪಾಪಮನ್, ಅನಂತರಂ ರಾಮ ಲಕ್ಷ್ಮಣರಿರ್ಕೆ ಕಪಿಸೇನೆಗಳ್ ಬರ್ಕೆ ಲಂಕೆ ದುರ್ಗಂ ಸ್ವರ್ಗಮೆಮಗಂತೆ ವೈರಿಗುಂ ಸ್ವರ್ಗ ಕಾರಣ'' ಕವಾಟಂ ಎಂದು ಹೇಳುತ್ತಾನೆ. ಇದನ್ನು ಕೇಳಿದ ರಾವಣ ಅಸ್ವಸ್ಥನಾಗಿ ಸಭೆಯಿಂದೆದ್ದು. ಕಷ್ಟದಿಂದ ಹೋಗುತ್ತಾನೆ. ವಿಭೀಷಣನೂ ಸಭೆಯನ್ನು ವಿಸರ್ಜಿಸಿ ತನ್ನ ಕೇರ್ ಮನೆಗೆ ಹೋಗುತ್ತಾನೆ. ಅಲ್ಲಿ ತನ್ನ ಮಗಳಾದ ಅನಲೆಗೆ ವಿಷಯವನ್ನು ತಿಳಿಸಿ ದೊಡ್ಡಯ್ಯನ ಶುಶ್ರೂಷೆಗೆಂದು ಕಳುಹುತ್ತಾನೆ. ಮತ್ತೆ ತಾನೇ ರಾವಣನ ಮನೆಗೆ ಹೋಗುತ್ತಾನೆ. ಮೌನವಾಗಿ ಅವನ ಬಳಿ ಕುಳಿತುಕೊಳ್ಳುತ್ತಾನೆ. ರಾವಣ ಕನವರಿಸುತ್ತಾನೆ. ವಿಭೀಷಣನೂ ಅನಲೆಯೂ ತನ್ನನ್ನು ತೊರೆದಂತೆ ಕನಸಾದುದನ್ನು ಹೇಳುತ್ತಾನೆ. ಮತ್ತೆ ''ಅಕ್ಕ ನಿನ್ನಯ್ಯನೆಮ್ಮಂ ಬಿಡಲ್ ?'' ಎಂದು ಪ್ರಶ್ನಿಸುತ್ತಾನೆ. 'ನೀನೆ ನೋಡುವೆ ಅಕ್ಕ ತೊರೆದಪನೆ' ಎಂಬ ನಿರ್ಧಾರವನ್ನು ಹೇಳುತ್ತಾನೆ. ಆಗ ವಿಭೀಷಣನು ಅಲ್ಲಿಗೇ ಬಂದಿರುವುದನ್ನು ತಿಳಿಸುತ್ತಾಳೆ. ರಾವಣನ ಹೃದಯ ಕಲ್ಲಾಗುತ್ತದೆ ಮುಖ ರೌದ್ರವಾಗುತ್ತದೆ. 'ಈ ಕುಲದ್ರೋಹಿಯನ್ನು ಬಿಟ್ಟಪರಾರು' ಎಂದು ಗರ್ಜಿಸುತ್ತಾನೆ. ಅನಲೆಯನ್ನು ಮಾತ್ರ ಕರೆದೊಯ್ಯಬಾರದೆನ್ನುತ್ತಾನೆ. ಯಾವ ಮಾತೂ ಹಿಡಿಸದೆ ಕೊನೆಗೆ ವಿಭೀಷಣನಲ್ಲಿ—

**'ರಾಜಶಾಸನವಿರ್ಪೊಡಂ ಸೋದರನ ಕೊಲೆಗೆ ಕಾರಣಮಪ್ಪ ದುರ್ಮತಿಕೆ**
**ಪೇಳುವೆನ್ ಮನವಿರಲ್ ನೆರವಾಗು, ಇರದಿರಲ್**
**ಲಂಕೆಯನುಳಿದು ಪೋಗು, ಅನ್ಯವಾದಕ್ಕಿಲ್ಲಿ**
**ಕೇಳಿನಿತುಮನುವಿಲ್ಲ ನನ್ನ ಮಾರ್ಗಂ ನನಗೆ**
**ನಿನ್ನದು ನಿನಗೆ ಕಟ್ಟಕಡೆ ನಿರ್ಣಯವೊ ಕೊಟ್ಟ**
**ಕೊನೆ ನಿರ್ಣಯಂ''**

ರಾವಣ ದೃಢವಾಣಿಯಿಂದ ಹೇಳುತ್ತಾನೆ. ವಿಭೀಷಣನಲ್ಲಿ ಕೊಂಕನ್ನೂ ಆಡುತ್ತಾನೆ "ಕಡಲಾಚೆ ಹೋಗುವಿಯಲ್ಲವೆ ? (ರಾಮನಲ್ಲಿಗೆ)'' ಎಂದೂ ಕೇಳುತ್ತಾನೆ. ವಿಭೀಷಣ ನಾ "ನೀನಿನಿತು ಕೇಳ್ಮನನ್ ಮಿಂದಿದೆನಿಲ್ಲಿನ್ನೆಗಂ'' ಎಂದು ನಮಸ್ಕಾರ ಹೇಳಿ ಹೊರಡು ತ್ತಾನೆ.

ಅನಲೆಯನ್ನು ಕೇಳಿಕೊಂಡು ತನ್ನಲ್ಲಿಯೇ ರಾವಣ ಉಳಿಸಿಕೊಳ್ಳುತ್ತಾನೆ. ಬೇಕಾದಾಗ ಬೇಕಾದ ಕಡೆ ಹೋಗಬಹುದೆಂದೂ ಪುಷ್ಪಕವಿದೆಯೆಂದೂ ಹೇಳುತ್ತಾನೆ.

ವಿಭೀಷಣ ಅಲ್ಲಿಂದ ನೇರವಾಗಿ ರಾಮನಲ್ಲಿಗೆ ಹೋಗುವುದಿಲ್ಲ. ಹೆಂಡತಿ ಮಕ್ಕಳನ್ನು ತೊರೆದು ಕಾಡಲ್ಲಿ ಅಲೆಯುತ್ತಿರುತ್ತಾನೆ. ಈ ವಿಚಾರ ರಾಮನ ಸೈನ್ಯ ಶಕ್ತಿಯನ್ನು ಅಳೆಯಲು ಬಂದ ಶುಕಸಾರಣರಿಂದ ಬಯಲಾಗುತ್ತದೆ. ಹನುಮಂತನು "ಭಯಕ್ಕಲ್ಲದೆ ನಯಕೆ ಸೋಲರೀ ನಕ್ತಜೀವರ್, ವಿಭೀಷಣ ದೇವನೋರ್ವಂ ವಿನಾ ಕಂಡೆನಿಲ್ಲೊರ್ವನಂ ಸತ್ತ್ವಪ್ರಧಾನನಂ ಲಂಕಾಪುರುಷ ಮುಖ್ಯರೊಳ್'' ಎಂದಾಗ ಆ ಬೇಹುಗಾರ..." ಇಂದು ನಿನ್ನ ವಿಭೀಷಣಂ—

**ಲಂಕಾ ಪ್ರಮುಖನಲ್ಲಯ್ ಅರಸನಾಕ್ರೋಶಕ್ಕೆ**
**ದ್ರೋಹಕಾರಣದಿಂದೆ ಸಿಲ್ಕಿ ನಗರಚ್ಯುತಂ**
**ದೇಶಗೌರವ ಬಾಹಿರಂ ತನೂಜೆಯನಂತೆ**
**ಸತಿಯುಮಂ ತೊರೆದು ದೇಸಿಗನಾಗಿ ಪೊರಮಟ್ಟು**
**ವೃತಿಯಂತೆ ಪೊಳ್ತಗಳೆಯುತ್ತಿರ್ಪನಾ ದ್ರೋಹಿ**
**ದಿಕ್ಕುಗೆಟ್ಟೊಂಟಿಗವೇಲಾದ್ರಿಪಂಕ್ತಿಯ**
**ವಿಪಿನ ಮಧ್ಯೆ, ಕಾಗೆಯುಂ ಕರೆಯದವನತ್ತಣ್ಗೆ**
**ಇರ್ದನಂತರ್ವೈರಿಯೊರ್ವನವನುಂ ನಿಮಗೆ**
**ನೆರವೀಯದಂತಾಯ್ತಲಾ**

ಎಂದು ಬಿಡುತ್ತಾನೆ. ಇದನ್ನು ಕೇಳಿದ ಆಂಜನೇಯನಿಗೆ ಸಂತೋಷವಾಗುತ್ತದೆ. 'ಎಲ್ಲಿ ವಿಭೀಷಣಂ' ಎನ್ನುತ್ತ ಅವನ ವಿಚಾರವನ್ನಿಷ್ಟು ತಿಳಿಸಿದ ಬೇಹುಗಾರನನ್ನಪ್ಪಿಕೊಳ್ಳು ತ್ತಾನೆ. ಇದು ಪರಿಹಾಸವೆನ್ನುತ್ತಾನೆ ಬೇಹುಗಾರ'. ಅಂಜನಾಪುತ್ರನಿಗೆ ಸಿಟ್ಟುಬರು ತ್ತದೆ. ಕಪೀಂದ್ರನಿಗೆ

**ಬೆಸಸು ಬೇಗದಿಂ**
**ಶರಗ.ಲ್ಮ ಶೀತನಂ ಪಿಳಿದು ನಿಜವನಿತುಮಂ**
**ತಿಳಿದು ಬಾಳ್ವೆರಸಿಯೆ ವಿಸರ್ಜಿಸವೇಳ್ಕುಮೆಂಬ**
**ನಮ್ಮಿಚ್ಛೆಯುಂ ಎನ್ನುತ್ತಾನೆ**

ಹೀಗೆ ರಾಮನ ಕಡೆಯವರು ವಿಭಿಷಣನನಗರತ್ಯಾಗದ ವಿಚಾರವನ್ನರಿತುಕೊಳ್ಳುತ್ತಾರೆ. ಕಾವ್ಯಮಯ ಭಾಷೆಯ ಮೈಂದ ಮತ್ತು ದ್ವಿವಿದ ವಿಭೀಷಣನ ಬಳಿಗೆ ಹೋಗುತ್ತಾರೆ. ಮೆದುವಾದ ಮಾತುಗಳಿಂದ ಆತನನ್ನು ಒಲಿಸುತ್ತಾರೆ. ಆದರೆ ವಿಭಿಷಣ "ಕ್ಷುದ್ರ ವಿದ್ರೋಹಿಯಲ್ಲಾಂ, ಧರ್ಮಕ್ಕೆ ಜಯಮಕ್ಕೆ ಎಂದಾ ಜಗಚ್ಚೈತನ್ಯಮಂ ಪ್ರಾರ್ಥಿಸುತ್ತಿಲ್ಲಿ

ತಪಂಗೆಯ್ವುದೆನ್ನಾಸೆ'' ಎನ್ನುತ್ತಾನೆ. ರಾಯಭಾರಕ್ಕೆ ಹೋದವರು ಬಿಡುವರೇ ? ದ್ವಿವಿದ ಹೇಳುತ್ತಾನೆ —

**ರಾಮನಾಸೆಗೆ ನಿನ್ನದಿದಿರಲ್ತು ಲಂಕೆಯೊಳ್**
**ಬದುಕಲರ್ಹತೆಯಾಂತುವೆಲ್ಲಮಂ ಪೊರೆಯಲ್ಕೆ**
**ಪಾರುತಿರ್ಪಂ ನಿನ್ನ ನೆರಮ, ಕಪಿಧ್ವಜರ್**
**ಉತ್ತಮಾನುತ್ತಮಂಗಳನೆತುಟರಿವರ್ಽಯ್**
**ನಿಷ್ಪಕ್ಷಪಾತದಿಂ ನಿರ್ಮೂಲನಂಗೈದಪರ್**
**ಲಂಕಾಸಮಸ್ತಮಂ, ನೀನೆಮ್ಮ ಪಕ್ಕವಿರೆ**
**ಅಳಿವುದಧಮ, ಉಳಿವುದುತ್ತಮಂ, ನಮಗಾಗಿ**
**ಬರದಿರ್ದೊಡಂ ನಿನ್ನ ದೇಶಕ್ಕೆ ಜನಕೆ ಮೇಣ್**
**ಧರ್ಮಕೆ ಹಿತಂಗೆಯ್ಕಲಾದೊಡಂ ನೀಂ**
**ಬರಲ್ವೇಳ್ಕುಮಯ್ ಸತ್ವಶಾಲಿ**

ಈ ಪಾದದ ಮುಂದೆ ವಿಭೀಷಣ ತಲೆಬಾಗುತ್ತಾನೆ. ಆದರೂ ''ಈ ದಿನವಲ್ಲ ನಾಳೆ ಮುಂಜಾನೆ' ನಿರ್ಧಾರ ಹೇಳುವೆನೆನ್ನುತ್ತಾನೆ. ಹಿರಣ್ಯಕೇಶಿಯನ್ನು ಕರೆದು ''ನಾಳೆ ನೀನು ರಘೂದ್ವಹನಲ್ಲಿಗೆ ನನ್ನ ಪ್ರತಿನಿಧಿಯಾಗಿ ಹೋಗಬೇಕು'' ಎನ್ನುತ್ತಾನೆ.

ಹೀಗೆ ರಾಮನ ಪಕ್ಷಕ್ಕೆ ಬರುತ್ತಾನೆ ವಿಭೀಷಣ. ರಾವಣನನ್ನು ವಿರೋಧಿಸಿ ರಾಜ್ಯದಾಶೆಯಿಂದ ಆತ ಬರಲಿಲ್ಲ. ತಾನಾಗಿಯೇ ಬಂದು ರಾಮನಲ್ಲಿಗೆ ಸೇರಲಿಲ್ಲ, ವಾಲ್ಮೀಕಿ ರಾಮಾಯಣದ ವಿಭೀಷಣ ರಾಮನಿಗೆ ಶರಣ್ಯನಾಗಿ ಬಂದರೆ ಇಲ್ಲಿ ರಾಮನ ಪೇಕ್ಷೆಯಂತೆ ನೇಹಿಗನಾಗಿ ಬಂದು ಸೇರುತ್ತಾನೆ.

ಅನಲೆಯ ವೃತ್ತಾಂತ ವಾಲ್ಮೀಕಿ ರಾಮಾಯಣದಲ್ಲಿ ಇಲ್ಲವೇ ಇಲ್ಲ. ಶ್ರೀ ರಾಮಾಯಣ ದರ್ಶನದಲ್ಲಿ ಆಕೆಯ ಪಾತ್ರ ಹಿರಿದು.ವಿಭೀಷಣನ ಮಗಳಾದ ಆಕೆಯನ್ನು ರಾವಣ ಅತ್ಯಂತ ಪ್ರೀತಿಸುತ್ತಾನೆ. ಹೆಣ್ಣು ಮಕ್ಕಳಿಲ್ಲದ ರಾವಣನಿಗೆ ಆಕೆಯೇ ಪ್ರೀತಿಯ ಮಗಳು. ಹದಿನಾರರ ಹರೆಯದ ಆಕೆಯ ಹೃದಯಶ್ರೀ ಅನುಪಮವಾದುದು. ಆಕೆ ರಾವಣನ ಹೃದಯವನ್ನು ಪರಿವರ್ತಿಸುತ್ತಾಳೆ. ಸೀತೆಯ ಮೇಲೆ ರಾವಣನಿಗಿದ್ದ ಕಾಮವನ್ನು ಪ್ರೇಮವನ್ನಾಗಿಸುತ್ತಾಳೆ. ತಾಯಿಮೇಲಿನ ಪ್ರೀತಿಯನ್ನಾಗಿಸುತ್ತಾಳೆ. ಸೀತೆಯ ಹೃದಯವನ್ನೂ ಗೆದ್ದುಕೊಳ್ಳುತ್ತಾಳೆ. ಇಂದ್ರಜಿತು ನಿಕುಂಭಿಲಾ ಯಾಗವನ್ನು ಮಾಡಿ ಶತ್ರುಸಂಹಾರ ಮಾಡುತ್ತಾನೆಂದು ತಿಳಿದು ದುಃಖಿತೆಯಾದ ಸೀತೆಗೆ ಅನಲೆ ತೋರೆ ನಿರಾಶೆಯಂ ದೇವಿ, ವಾರ್ತೆಯನೆನ್ನ ತಂದೆಗೆ ಹಿರಣ್ಯಕೇಶಿಯ ಕೈಲಿ ಕಳುಹಿದೆನ್' ಎನ್ನುತ್ತಾಳೆ. ಮುಂದೆ—

**''ನೀನ್**
**ದೊಡ್ಡಯ್ಯನಿಂದಿಲ್ಲಿಗೈತರಲ್, ನಮ್ಮಿದಿರ್**
**ತಾಯಾಗಿ ತೋರ್ಪವೊಲ್ ತೋರಿ, ಕಂದಂಗೆಂತೊ**
**ಅಂತೆ, ಹಿತವನೊರೆ ಸದ್ಬುದ್ಧಿಯಂ ನಿಚ್ಚಮಾಂ**
**ನಿನ್ನನೆಯ ನೆನೆದಾತನಾತ್ಮಕ್ಕೆ ನಿನ್ನೊಂದು**

ಪೊಳೆಯುತೊಡಗಿದೆ ಮಹಿಮೆ.........
..................... ಇನ್ನೆಗಂ ನಿನ್ನರೊಲ್ ಪೇರುಸಿರ
ಪೆಣ್ಗಳಂ ಸಂಧಿಸಿದನಿಲ್ಲದುವೆ ಕಾರಣವಾಯ್ತು
ಲಂಕೇಶ್ವರನ ದುರ್ಗತಿಗೆ

ಎಂದೂ ಹೇಳುತ್ತಾಳೆ. ಹೀಗೆ ಅನಲೆ ರಾವಣನ ಹೃದಯಪರಿವರ್ತನೆಗೆ ಸಹಾಯಕಳಾಗುತ್ತಾಳೆ–ಸೀತೆಯ ಪತಿವ್ರತಾಸಿದ್ಧಿ ರಾವಣನನ್ನು ಪೂರ್ಣ ಒದಲಾಯಿಸುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಈ ಒದಲಾವಣೆಯನ್ನು ನಾವು ಕಾಣುವುದಿಲ್ಲ. ಕುಂಭಕರ್ಣನ ಸಾವಿನ ಬಳಿಕ ರಾವಣನಿಗೆ ರಾಮನ ಹಿರಿಮೆ ಅರ್ಥವಾಗುತ್ತದೆ. ಆತ ನಾರಾಯಣನೇ ಇರಬೇಕೆಂಬ ಊಹೆ ಅವನಿಗುಂಟಾಗುತ್ತದೆ ವಾಲ್ಮೀಕಿರಾಮಾಯಣದಲ್ಲಿ. ಶ್ರೀರಾಮಾಯಣ ದರ್ಶನದಲ್ಲಿ ಪತಿವ್ರತಾಶಿರೋಮಣಿಯಾದ ಸೀತೆಯ ಪತಿಯೆಂಬ ಗೌರವ ರಾಮನಿಗೆ ನಾರಾಯಣನೆಂದಲ್ಲ. ಆತನನ್ನು ಸೀತೆಗೆ ತಂದೊಪ್ಪಿಸಬೇಕೆಂಬ ಆಕಾಂಕ್ಷೆ ಅವನದಾಗುತ್ತದೆ. ರಾಮನನ್ನು ಇದಿರಿಸುವುದೂ––ರಾಮನೊಡನೆ ಯುದ್ಧ ಮಾಡುವುದೂ ಈ ಉದ್ದೇಶಕ್ಕಾಗಿಯೆ. ಅಂದರೆ ರಾಮನನ್ನು ಆತನ ಪತಿವ್ರತಾಸ್ತ್ರೀಗೆ ತಂದೊಪ್ಪಿಸುವುದಕ್ಕಾಗಿ, ಇದು ಶ್ರೀ ರಾಮಾಯಣ ದರ್ಶನದಲ್ಲಿ ಕಾಣುವ ರಾವಣ ಮನೋಭಾವನೆ. ವಾಲ್ಮೀಕಿಯ ರಾವಣನಿಗೂ ಇಲ್ಲಿಯ ರಾವಣನಿಗೂ ಬಹು ಅಂತರ.

ಸೀತಾಪಹರಣಕ್ಕೆ ಕಾರಣಳಾದ ಚಂದ್ರನಖಿಯೂ ಪರಿವರ್ತನೆ ಹೊಂದುತ್ತಾಳೆ. ಸೀತೆಯನ್ನು ಒಪ್ಪಿಸೆನ್ನುತ್ತಾಳೆ. ತನ್ನಿಂದಲೇ ಈ ಸಂಕಟ ಬಂದುದೆಂದು ಪರಿತಪಿಸುತ್ತಾಳೆ. ತಪ್ಪು ಮಾಡಿದವರು ಪಶ್ಚಾತ್ತಾಪದಿಂದ ಪುನೀತರಾಗುವುದೇ ಶ್ರೀರಾಮಾಯಣ ದರ್ಶನದ ದರ್ಶನ.

### ಇಂದ್ರಜಿತು ಮರಣ

ವಾಲ್ಮೀಕಿ ರಾಮಾಯಣದಲ್ಲಿ ಇಂದ್ರಜಿತುವನ್ನು ಅದ್ಭುತ ಪರಾಕ್ರಮಿಯೆಂದೇ ವರ್ಣಿಸಲಾಗಿದೆ. ಅವನು ಯುದ್ಧಕ್ಕೆ ಬಂದು ರಾಮಲಕ್ಷ್ಮಣರೀರ್ವರನ್ನೂ ಬ್ರಹ್ಮಾಸ್ತ್ರದಿಂದ ಮೂರ್ಛೆಗೊಳಿಸುತ್ತಾನೆ. ಆಗ ಜಾಂಬವಂತನ ಸೂಚನೆಯಂತೆ ಹನುಮಂತನು ಸಂಜೀವಿನಿದಿವ್ಯೌಷಧವನ್ನು ತಂದು ರಾಮಲಕ್ಷ್ಮಣರನ್ನು ವಾನರ ಸೇನೆಯನ್ನು ಬದುಕಿಸುತ್ತಾನೆ. ಇಂದ್ರಜಿತು ನಿಕುಂಭಿಲಾಯಾಗ ಮಾಡಿ ರಾಮಲಕ್ಷ್ಮಣರನ್ನು ಸಂಹರಿಸಲು ಹವಣಿಸುತ್ತಾನೆ. ಅದನ್ನರಿತ ವಿಭೀಷಣನು ವಾನರಸೈನ್ಯ ಆ ಯಾಗದಲ್ಲಿಗೆ ಹೋಗಿ ಗಲಭೆಯೆಬ್ಬಿಸುವಂತೆ ಹೇಳುತ್ತಾನೆ. ವಾಯುಪುತ್ರನ ಮುಂದಾಳ್ತನದಲ್ಲಿ ವಾನರ ಸೈನ್ಯ ಇಂದ್ರಜಿತು ಮಾಡುವ ಯಾಗದಲ್ಲಿಗೆ ಹೋಗುತ್ತದೆ. ಹಾವಳಿಯೆಬ್ಬಿಸುತ್ತದೆ. ಇಂದ್ರಜಿತು ತಾನೇ ಯಜ್ಞಪೂರ್ಣಮಾಡದೆ ಹೊರಬರುತ್ತಾನೆ. ಹನುಮಂತನೊಡನೆ ಕಾದಾಡುತ್ತಾನೆ. ಅದೇ ಸಂದರ್ಭದಲ್ಲಿ ವಿಭೀಷಣ ಲಕ್ಷ್ಮಣರು ಇಂದ್ರಜಿತುವಿಗೆ ಇದಿರಾಗಿ ಬರುತ್ತಾರೆ. ಲಕ್ಷ್ಮಣ ಯುದ್ಧಕ್ಕಾಹ್ವಾನಿಸುತ್ತಾನೆ ಮತ್ತೆ ಯಾಗಶಾಲೆಗೆ

ಹೋಗದಂತೆ ಮಾಡಿ ಇಂದ್ರಜಿತುವನ್ನು ಕೊಲ್ಲುತ್ತಾನೆ. ಶ್ರೀ ರಾಮಾಯಣದರ್ಶನದಲ್ಲಿಯು ಈ ಸನ್ನಿವೇಶದ ವೈಖರಿಯೇ ಬೇರೆ–



ತ್ರಿಕೂಟಗಿರಿ
ಗಹ್ವರ ಗಹನ ನಿಭೃತ ಕಂದರದೊಳಿರ್ದೊಂದು
ನ್ಯಗ್ರೋಧ ಮೂಲದ ಸವಿಸ್ತೃತ ಗುಹೋದರದಿ
ರಚಿಸಿದನು ಮಂತ್ರಮಂಟಪಂ ಮಹೇಂದ್ರಾದಿ
ದೇವ ದಾನವ ದೃಗುಭಯಂಕರಮೆನಲ್, ದೂರ
ಹೊರವಳಯದಲಿ ಕಾಪಿರಿಸಿದನು ನಚ್ಚಿನ ತನ್ನ
ಸುಭಟ ಶ್ರೇಷ್ಠರಂ, ಕೇಳ್ ಜಡಪ್ರಾಪಂಚಿಕದ
ಪಂಚಭೌತಾನ್ನಮಯದಲ್ಲಿ, ಮೇಣ್ ಸೂಕ್ಷ್ಮದಲಿ
ಕಾಪುವಿರಲ್ಪೇಳ್ದನು ಪಿಶಾಚರಿಗೆ. ಪ್ರಾಣಮಯ
ಚಕ್ರದೊಳ್ ನಿಲಿಸಿದನು ಭೂತಂಗಳಂ, ಮೇಣ್
ಪರೇತಂಗಳಂ, ಮೇಣ್ ಮಹಚ್ಛಕ್ತಿ ಯಂತ್ರಂಗಳಂ
ಪ್ರಾಣಮಯದಾಚೆಯ ಮನೋಮಯದ ಲೋಕದಲಿ
ತನ್ನಯ ತಪಶ್ಶಕ್ತಿಯಿಂದಗ್ನಿ ಶರಧಿಯಂ
ನಿರ್ಮಿಸುತ್ತದರ ಪರಿಧಿಯ ಮಧ್ಯೆ, ಪದ್ಮದೊಳ್
ದಲಸಹಸ್ರದಿ ಮೆರೆವ ವಜ್ರಮಯ ವೇದಿಯಂ
ಕಲ್ಪಿಸಿದನಾತ್ಮ ಸಂಕಲ್ಪದಿಂ, ತನ್ಮಧ್ಯೆ ಕೇಳ್
ಕುಳ್ತನಾ ಧೈರ್ಯ ದುರ್ಮಂತ್ರ ತಾಂತ್ರಿಕವರೇಣ್ಯಂ
ದುರ್ವಿಜ್ಞಾನ ಶಕ್ತಿಯಾಹ್ವಾನ ದೀಕ್ಷಿತನಾಗಿ
ಕಳವಳಿಸೆ ಕಾತರಿಸೆ ಭುವನತ್ರಯಂ, ರೇಚಕಂ
ಪೂರಕಂ ಕುಂಭಕವಿಧಾನದಿಂ ಪ್ರಾಣಂಗಳಂ
ಸ್ತಂಭಿಸುತೆ, ಜಡಭೌತನಿಯಮಾನ್ನಮಯ ಜಗನ್
ನಿಯತಿಗಳನತಿಗಳೆದು ಸೇರ್ದನು ಅವಿದ್ಯಾಮಾಯೆ
ತನ್ನ ವಿದ್ಯಾಬಲವನಾದ್ಯಶಕ್ತಿಯ ಸೇವೆಯೊಳ್
ಲೀಲಾರ್ಥಮೆನೆ ಸಾರ್ಥಕಂ ಗೆಯ್ದಿರ್ದ ಸರ್ವಾರ್ಥ
ಸಿದ್ಧಿಲೋಕಕ್ಕೆ

ಇಲ್ಲಿ ಇಂದ್ರಾರಿ ಮಾಡಿದ್ದು ಹವಿಸ್ಸಿನ, ತುಪ್ಪದ, ರಕ್ತಮಾಂಸದ ಯಜ್ಞವನ್ನಲ್ಲ. ಚಿತ್ತವೆಂಬ ರೂಪದಲ್ಲಿ ಇಂದ್ರಿಯಪಶುಗಳನ್ನು ಕಡಿದು ಬೇಳಲ್ಕೆ ಕಟ್ಟಿದನು. ಅತೀಂದ್ರಿಯ ವ್ಯಾಪಾರ ಬೇಳ್ವೆ ಅದು.

ಅಲ್ಲಿಗೆ ವಿಭೀಷಣನ ಮಾತಿನಂತೆ (ವಿಭೀಷಣನಿಗೆ ಇಂದ್ರಜಿತುವಿನ ಈ ಕಾರ್ಯವನ್ನು ತಿಳಿಸಿದವಳು ಅನಲೆ) ರಾಮನನ್ನು ನೆನೆದು ಮುನ್ನಡೆದ ಲಕ್ಷ್ಮಣನು 'ಕಾಲಿಟ್ಟನಾ ಅಗ್ನಿಚಕ್ರಕ್ಕಹಾ ! ಬ್ರಹ್ಮಾಂಡಮೊಡೆದುದೊ ಸಿಡಿಲ್ಗೆನಲ್ ಸದ್ದೆದ್ದು, ಲಕ್ಷ್ಮಣ. ಕಳೇಬರಂ ಸಿಡಿದು ಕೆಡೆದುದು ಸೀದ ಶವದಂತೆ'. ಹಿಂಬಾಲಿಸಿದ್ದ ವಿಭೀಷಣ, ನಳ, ಸುಷೇಣ, ಜಾಂಬವ, ಹನುಮಂತ ಇವರು ಸಂಕಟದಿಂದಲೇ ಬದುಕಿಕೊಂಡರು. ಲಕ್ಷ್ಮಣನ ವಿಕೃತ ಶರೀರವನ್ನು ನೋಡಿದರು. ಭಯಂಕರವಾಗಿತ್ತದಲ್ಲಿ. ಸುಷೇಣ

ಅದನ್ನು ನೋಡಿ ಮಂತ್ರ ತಿಳಿದಿದೆಯಾದರೂ ಔಷಧಿ ಬೇಕು. ಅದು ಬಹುದೂರ ದಲ್ಲಿದೆ. ಶೀಘ್ರವೇ ತರದೆಹೋದರೆ ಲಕ್ಷ್ಮಣ ಬದುಕುವಂತಿಲ್ಲ' ಎನ್ನುತ್ತಾನೆ. ಆಂಜನೇಯ ಕೂಡಲೇ ಸಿದ್ಧನಾಗಿ ಸುಷೇಣನ ಮಾರ್ಗದರ್ಶನದಂತೆ ಸಂಜೀವಿನಿಯನ್ನು ತರಲು ಹೋಗುತ್ತಾನೆ. ಯೋಗಿಯಾದ ಆತ ಪ್ರಾಣವಾಯುದಿಂದ ಮನೋಮಯಕ್ಕೇರಿ ಸಂಜೀವಿನಿಯಿರುವಲ್ಲಿಗೆ ತಲಪುತ್ತಾನೆ. ಮಧ್ಯಮಾರ್ಗದಲ್ಲಿ ಮಾರೀಚನಾತ್ಮವೂ ಸಿಗು ತ್ತದೆ. ಆದು ವಚಸೀಯವಲ್ಲದ ಅಚಿಂತ್ಯವಾದ ತನ್ನಾಸೆಗಳನ್ನು ಹೇಳಿಕೊಂಡು ತೃಪ್ತ ವಾಗುತ್ತದೆ. ಆಂಜನೇಯನು ಸಂಜೀವಿನಿಮಂತ್ರೌಷಧಿಯನ್ನು ಊರ್ಮಿಳೆಯ ಸೌಭಾಗ್ಯ ರಕ್ಷಣೆಗೆಂದು ಪ್ರಾರ್ಥಿಸಿ ಎತ್ತಿತರುತ್ತಾನೆ. ಲಂಕೆಯಲ್ಲಿ ಕಾತರತೆಯಿಂದ ಕಾಯುತ್ತಿದ್ದ ಸುಷೇಣಾದಿಗಳಿಗೆ ಜೀವ ಬಂದಂತಾಗುತ್ತದೆ. ಗುರು ಸುಷೇಣ ಔಷಧೋಪಚಾರ ಮಾಡುತ್ತಾನೆ ಆಗ ಚೇತರಿಸಿಕೊಂಡ ಅಕ್ಷತನಾದ ಲಕ್ಷ್ಮಣ "ಊರ್ಮಿಳಾ ಊರ್ಮಿಳಾ" ಎಂದು ಕೂಗಿಕೊಳ್ಳುತ್ತ ಅತ್ತಿತ್ತ ನೋಡುತ್ತಾನೆ. ಜಾಂಬವನಿಂದ ನಡೆದುದೆಲ್ಲವನ್ನು ತಿಳಿದು —

**ಕಂಡೆನಾಂ ದಿಟಂ**
**ವಲ್ಕಲವನುಟ್ಟಿರ್ದಳಂ ನನ್ನ ಸತಿಯಂ**
**ತಪಶ್ಚರ್ಯೆಯಿಂ ಪೂಜ್ಯೆಯಾಗಿರ್ದಳಂ, ತನ್ನ**
**ದಿವ್ಯ ಶಕ್ತಿಯೊಳೆನ್ನ ಹೃದಯಕಮೃತವನೆರೆದು**
**ಮೇಘನಾದಾಭಿಚಾರಿಕಯಾಗಕೆನ್ನಾಯು**
**ಕವಿಯದಂದದಿ ತೊಡಿಸಿದಳ್ ತಪಃ ಕವಚಮಂ**
**ಪೂಜ್ಯೆಯಂ ಪ್ರಾಣವಲ್ಲಭೆಯಾಗಿ ಪಡೆದ ನಾಂ**
**ಧನ್ಯನೈಸಲೆ ಧನ್ಯರೊಳ್**

ಎಂದು ನುಡಿದು 'ನಡೆವಮೀ ಅಗ್ನಿತಡೆಯನ್' ಎನ್ನುತ್ತ ಪಾವಕನ ಚಕ್ರಕ್ಕೆ ಹೋಗುತ್ತಾನೆ. ಅವನ ಬೆಂಬಿಡಿದು ಹನುಮಾದಿಗಳು ಹೋಗುತ್ತಾರೆ. ಅವರೆಲ್ಲರಿಗೂ ಒಂದೊಂದು ತರಹದ ಅನುಭವ–ಮನೋವಿಕಾರ ಗಳಾಗುತ್ತವೆ. ಲಕ್ಷ್ಮಣ ಸಾಗುತ್ತಾನೆ. ಆಂಜನೇಯನಿಗೆ ಮೇಘನಾದನ ಅಮೋಘ ಶಕ್ತಿಯ ದರ್ಶನವಾಗುತ್ತದೆ. ಆತ ಕೂಡಲೇ ದಿವ್ಯಾಸ್ತ್ರವನ್ನು ತೊಡಲು ಲಕ್ಷ್ಮಣನಿಗೆ ಹೇಳುತ್ತಾನೆ. ಆಗಲೇ ಮೇಘನಾದನ ಮಾಯಾಕೃತಕಗಳು ಮತ್ತೆ ಮತ್ತೆ ಗೋಚರ ವಾಗುತ್ತವೆ. ಅದನ್ನು ಬಲ್ಲ ಹನುಮಂತ ಪಡಿಮಾಯೆಯಿಂದ ಕೂಟರಣವನ್ನು ತೊಡಗುತ್ತಾನೆ. ಆಕಾಶವಾಣಿಯೊಂದಾಗುತ್ತದೆ' 'ತಡೆಯದೆ ಐಂದ್ರಾಸ್ತ್ರವನ್ನು ತೊಡು. ರಜನಿಮುಗಿಯುವುದರೊಳಗೆ ಈತ ಹತನಾಗಬೇಕು. ದೇವತೆಗಳೆಲ್ಲ ನಿನಗೆ ಸಹಾಯಕ ರಾಗಿ ಐಂದ್ರಾಸ್ತ್ರವನ್ನು ಹೊಕ್ಕು ಇಂದ್ರಾರಿಯ ಪ್ರಾಣ ತೆಗೆಯುತ್ತಾರೆ ಎನ್ನುತ್ತದೆ. ಲಕ್ಷ್ಮಣ ಅಂತೆಯೇ ಐಂದ್ರಾಸ್ತ್ರದಿಂದ ಇಂದ್ರಾರಿಯನ್ನು ವಧಿಸುತ್ತಾನೆ.

ಇಂದ್ರಜಿತುವಿನ ಸಾವಿನಿಂದ ವಾಲ್ಮೀಕಿ ರಾಮಾಯಣದ ರಾವಣನಿಗೆ ದುಃಖದ

ಜತೆ ಕೋಪವುಕ್ಕುತ್ತದೆ. ಸೀತೆಯನ್ನೇ ಕೊಲ್ಲುತ್ತೇನೆಂದು ಹೊರಡುತ್ತ ಯಾರು ಹೇಳಿದರೂ ಕೇಳದೆ ಅಶೋಕವನಕ್ಕೆ ನಡೆಯುತ್ತಾನೆ. ಕೊನೆಗೆ ಸುಪಾರ್ಶ್ವನೆಂಬ ಮಂತ್ರಿಯ ಮಾತಿನಿಂದ ಆ ಯತ್ನವನ್ನು ಬಿಟ್ಟು ರಾಮನವಧೆಯನ್ನು ನಿಶ್ಚಯಿಸಿ ಹಿಂದಿರುಗುತ್ತಾನೆ.

ಶ್ರೀ ರಾಮಾಯಣದರ್ಶನದ ರಾವಣ ಇಂದ್ರಜಿತು ವಧೆಯಿಂದ ಸೀತೆಯ ಮೇಲೆ ದ್ವೇಷಸಾಧಿಸ ಹೋರಡುವುದಿಲ್ಲ. ಮಂಡೋದರಿಯನ್ನು ಸಂತೈಸುತ್ತಾನೆ. ಅತಿಕಾಯನ ಮರಣದಿಂದ ದುಃಖಿತೆಯಾದ--ಪಶ್ಚಾತ್ತಾಪದಗ್ಧಳಾದ ಧಾನ್ಯಮಾಲಿನಿಯನ್ನು ಮರಣ ಶಯ್ಯೆಯಲ್ಲಿ ಕಂಡು ನಮಿಸುತ್ತಾನೆ. ಸಾಯಲು ಸಿದ್ಧಳಾದ ಇಂದ್ರಜಿತು ಪತ್ನಿ ತಾರಾಕ್ಷಿಯನ್ನು ಸಮಾಧಾನಪಡಿಸಿ ವಜ್ರಾರಿಯ ಬದುಕಿಗಾಗಿ ಆಕೆ ಬದುಕಬೇಕೆಂದು—ವಜ್ರಾರಿಯನ್ನು, ತನ್ನ ವಂಶದ ಕುಡಿಯನ್ನು ಆಕೆಗೊಪ್ಪಿಸಿ ಮರಣಯತ್ನದಿಂದ ವಿಮುಖಳಾಗುವಂತೆ ಮಾಡುತ್ತಾನೆ.

ಯುದ್ಧಸಿದ್ಧತೆಗೆ ಹೇಳಿ ಮಂಚದಲ್ಲೊರಗಿದ ರಾವಣನಲ್ಲಿಗೆ ಚಂದ್ರನಖಿ ಬರುತ್ತಾಳೆ. ಪಶ್ಚಾತ್ತಾಪದಿಂದ ಬೆಂದು, ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಬೇಡುತ್ತಾಳೆ ನಯವಾದ ಮಾತುಗಳಿಂದ ಆತನನ್ನು ಒಲಿಸಲೆತ್ನಿಸುತ್ತಾಳೆ. ಆದರೆ ಕೊನೆಗೆ ರಾವಣನ ದೃಢನಿರ್ಧಾರ ಪ್ರಕಟವಾಗುತ್ತದೆ.

**'ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ**
**ಕಂಡರಿಯದಾ ಕಾಣಲಾರದಾ ಕೊಳುಗುಳದಿ**
**ರಘುಕುಲ ಲಲಾಮನಂ. ಜಗದೇಕವೀರನಂ**
**ಗೆಲ್ದು ಸೆರೆಯೊಳ್ ಮಾಡಿ ತಂದು ಲಂಕೇಶ್ವರನ**
**ಸರ್ವಗರ್ವವನಿರದೆ ಸೋಲಿಸಿದ ಮೈಥಿಲಿಗೆ**
**ಕಪ್ಪಮೆನೆ ಕಾಣಿಕೆಯನೊಪ್ಪಿಸುವ ಭವ್ಯತಾ**
**ದೃಶ್ಯಮಂ — ಕಾಣದೊ—**

ಎನ್ನುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಈ ಪರಿಯಿಲ್ಲ. ಪರಿಪಾಕಗೊಳ್ಳುತ್ತಿರುವ ರಾವಣ ಮನಸ್ಸು ಶ್ರೀ ರಾಮಾಯಣದರ್ಶನದ್ದು.

ಯುದ್ಧಕ್ಕೆ ಹೊರಟ ರಾವಣ ಮತ್ತೊಮ್ಮೆ ಸೀತೆಯ ಬಳಿಗೆ ಹೋಗಲುದ್ಯುಕ್ತನಾಗುತ್ತಾನೆ.

**'ಕಿಡುವ ಮುನ್ನಂ ಸೊಡರ್ಕುಡಿಯುಜ್ವಲಿಸುವಂತೆ**
**ತೆಕ್ಕನುರ್ಕಿದುದೆರ್ದೆಗೆ ಮೈಥಿಲಿಯ ಮೈಯಾಸೆ'**

ಆಕೆಯ ಪಾತಿವ್ರತ್ಯವನ್ನು ಪರೀಕ್ಷಿಸಿ ನೋಡುತ್ತೇನೆನ್ನುವ ನೆವದಿಂದ ಅತ್ತ ಹೋಗುತ್ತಾನೆ. ಆದರೆ ಅತ್ತ ಸಾಗುತ್ತಿದ್ದಂತೆ ಅವನಿಗೆ ಮನಸ್ಕಾಂತಿಯ ದಿವ್ಯಾನುಭವವಾಗುತ್ತದೆ. ಪರ್ಣಕುಟೀರದ ಸಮೀಪಕ್ಕೆ ಹೋಗುತ್ತ ಬೆಂಕಿಯನ್ನು ಕಾಣುತ್ತಾನೆ. ಸೀತೆಯುಪರ್ಣಕುಟಿಯನ್ನು ಬೆಂಕಿಯಾವರಿಸಿದಂತೆ ಆತನಿಗೆ ತೋರುತ್ತದೆ ದುಃಖಿಸು

ತ್ತಾನೆ. ಆದರೆ ಕಂಚುಕಿಗೆ ಈ ವಿಷಯ ಹೇಳಿದಾಗ 'ಬೆಂಕಿಯೇನೂ ತನಗೆ ಕಾಣದೆನ್ನು ತ್ತಾನೆ. ಆಗ ರಕ್ಕಸನು ತನ್ನ ಮನೋದುರ್ಬಲತೆಗೆ ನಗುತ್ತಾನೆ. ಪರ್ಣಶಾಲೆಯನ್ನು ಅದ್ಭುತಚಿತಾಗ್ನಿ ಸುಡುವಂತೆ ರಣಚಂಡಿ ಅದರಲ್ಲಿ ಕುಣಿಯುತ್ತಿರುವಂತೆ ಆತನಿಗೆ ತೋರುತ್ತದೆ ಅಲ್ಲಿಂದ ಹಿಂದಿರುಗುತ್ತಾನೆ.

ಇದನ್ನು ಗಮನಿಸುತ್ತಿದ್ದ ತ್ರಿಜಟೆ ರಾವಣ ಬಂದು ಹಿಂದಿರುಗಿದುದನ್ನು ಹೇಳು ತ್ತಾಳೆ. ಧಾನ್ಯಸ್ಥೆ ಸೀತೆ...

**ಫಲಿಸಿತನಲಾ ಪ್ರಾರ್ಥನಂ**
**ಬಾರನಿನ್ ಬಳಿಗವನ್ ಈ ಜನ್ಮದೊಳ್, ತ್ರಿಜಟೆ,**
**ಕಡಿದುದಾತನ ಸೂತ್ರಮಾಯೆ, ಪಟವಾಡಿದಪಳ್**
**ಜೀವಗಳನಂಬೆ ಆದ್ಯಶಕ್ತಿಕಾಲವಶಿಯಿನ್**
**ರಾಕ್ಷಸನ ಬಾಳ್ ಪಟಂ**

ಎನ್ನುತ್ತಾಳೆ. ದಶಾನನ ಸ್ವಪ್ನಸಿದ್ಧಿ ವಾಲ್ಮೀಕಿ ರಾಮಾಯಣದಲ್ಲಿಲ್ಲದ ಭಾಗ. ಲಂಕಾ ಲಕ್ಷ್ಮಿಯ ದರ್ಶನ, ದೇವಿಯದರ್ಶನ, ದೇವಿಯಿಂದ ವರಪ್ರಸಾದ. 'ರಾಮನನ್ನು ಗೆಲ್ಲುವೆ, ಸೀತೆ ನಿನಗೊಲಿಯುತ್ತಾಳೆ. ಆದರೆ ಈ ಜನ್ಮದಲ್ಲಲ್ಲ ಮುಂದಿನ ಜನ್ಮದಲ್ಲಿ" ಎಂದು ಅಶ್ವಘೋದರ ದೃಶ್ಯ ತಾನು ಮತ್ತು ಕುಂಭಕರ್ಣ ಮಕ್ಕಳಾಗಿ ಸೀತೆಯ ಪರ್ಣಕುಟಿಗೆ ಸೇರುವುದು ಆಕೆಯಿಂದಾಲಿಂಗನ–ಈ ಮಹತ್ತರ ವಿಚಾರ ವಾಲ್ಮೀಕಿ ರಾಮಾಯಣದ್ದಲ್ಲ.

**ರಾವಣ ಸಂಹಾರ**

ರಾಮ ರಾವಣರ ಯುದ್ಧದ ಬಗೆಗೂ ಭಿನ್ನತೆಯನ್ನು ಕಾಣುತ್ತೇವೆ ಶ್ರೀರಾಮಾಯಣದರ್ಶನ ಮತ್ತು ವಾಲ್ಮೀಕಿ ರಾಮಾಯಣದಲ್ಲಿ. ರಾವಣನು ಯುದ್ಧಕ್ಕೆ ಹೊರಟಿರುವುದು ರಾಮನನ್ನು ಕೊಲ್ಲುವುದಕ್ಕಾಗಿ ಅಲ್ಲ. ಅವನನ್ನು ಸೆರೆಹಿಡಿದು ತರು ವುದಕ್ಕಾಗಿ ಇದು ರಾಮಾಯಣದರ್ಶನದಲ್ಲಿ ಪ್ರತಿಪಾದಿತ ಅಂಶ.

ವಾಲ್ಮೀಕಿ ರಾಮಾಯಣದ ರಾವಣನು ರಾಮನೊಡನೆ ಯುದ್ಧಮಾಡಲು ಬರು ತ್ತಾನೆ. ಇದಿರಾದ ವಿಭೀಷಣನನ್ನು ಕೊಲ್ಲಲು ಬಂದ ರಾವಣನನ್ನು ಲಕ್ಷ್ಮಣನು ತಡೆ ದಾಗ ಅಷ್ಟಘಂಟಾಶಕ್ತ್ಯಾಯುಧವನ್ನು ಲಕ್ಷ್ಮಣನ ಮೇಲೆಯೇ ಎಸೆದು ಅವನನ್ನು ಘಾತಿಸುತ್ತಾನೆ. ಸಂಜೀವಿನಿಯನ್ನು ತಂದು ಹನುಮಂತನು ಲಕ್ಷ್ಮಣನ ಬದುಕಿಗೆ ಕಾರಣನಾಗುತ್ತಾನೆ. ಸಿಟ್ಟುಗೊಂಡ ರಾಮನು ರಾವಣನಲ್ಲಿ ತೀವ್ರತರ ಯುದ್ಧಕ್ಕೆ ತೊಡಗುತ್ತಾನೆ ಆಗ ಅಗಸ್ತ್ಯ ಋಷಿಗಳು ಬಂದು ಆದಿತ್ಯಹೃದಯ ಮಂತ್ರವನ್ನುಪ ದೇಶಿಸುತ್ತಾರೆ. ಅದರ ಬಲದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ರಾಮು ರಾವಣನನ್ನು ಕೊಲ್ಲುತ್ತಾನೆ. ರಾಮು ಅಬಾಧಿತನಾಗಿರುತ್ತಾನೆ.

ಶ್ರೀ ರಾಮಾಯಣದರ್ಶನದ ರಾವಣ ಯುದ್ಧಕ್ಕೆ ಬಂದಾಗ ಸಂಪಾತಿಯಿದಿರಾಗಿ ಯುದ್ಧಮಾಡಿ ಅವನ ಶಿರಸ್ಸೊಂದನ್ನು ಹಿಂಜರಿಸುತ್ತಾನೆ. ಜಟಾಯುವಿನ ಆತ್ಮದ

ವಚನದಂತೆ ರಾವಣ ವಧೆಯನ್ನು ರಾಮನಿಗೆ ಮೀಸಲಿರಿಸಿ ತಾನು ತರಿದ ಶಿರಸ್ಸನ್ನೆತ್ತಿ ಕೊಂಡು ಹೋಗುತ್ತಾನೆ. (ಇದು ವಾಲ್ಮೀಕಿ ರಾಮಾಯಣದಲ್ಲಿಲ್ಲ). ಕೊನೆಗೆ ರಾಮ ರಾವಣರಿಗೆ ಯುದ್ಧ ಕೈಗೂಡುತ್ತದೆ. ರಾವಣನು ತನ್ನ ಅಮೂಲ್ಯ ಶಸ್ತ್ರವಾದ ಶೂಲಾಯುಧವನ್ನು ರಾಮನೆಡೆಗೆ ಎಸೆಯುತ್ತಾ ಹೀಗೆಂದು ಪ್ರಾರ್ಥಿಸುತ್ತಾನೆ.

**ತೊಟ್ಟ ಮೇಲ್ ನಿನ್ನ**
**ಬಲಿಗೆ ಶುಭನೈವೇದ್ಯವಿಟ್ಟಂತೆಯೇ ದಿಟಂ**
**ಅರಾತಿಯಸು ಆದೊಡಾ ವ್ರತವಿಂದು ನನಗಾಗಿ**
**ಭಂಗಮಂ ಸಹಿಸವೇಳ್ಕುಂ. ಶತ್ರು ಜೀವಮಂ**
**ಬಲಿಗೊಳ್ಳದಾತನಂ ಸೆರೆವಿಡಿಯಲೆನಗೆ ನೀಂ**
**ನೆರವಾಗು, ಮೈಮರೆವನಿತೆ ತಾಗು. ಹೋಗು.''**

ಹೀಗೆಂದು ಶೂಲವನ್ನು ಆಕಾಶಕ್ಕೆಸೆಯುತ್ತಾನೆ. ಅದನ್ನು ನೋಡಿದ ಮಾತಲಿ ರಾಮನನ್ನು ತ್ವರೆಗೊಳಿಸುತ್ತಾನೆ. ಶುಭ ಶಕುನಗಳನ್ನು ವಿವರಿಸುತ್ತಾನೆ. ಬ್ರಹ್ಮಾಸ್ತ್ರ ವನ್ನು ತೊಡುವಂತೆ ಹೇಳುತ್ತಾನೆ. ರಾಮನೂ ಅಗಸ್ತ್ಯನುಪದೇಶಿಸಿದ ಆದಿತ್ಯ ಹೃದಯ ಮಂತ್ರವನ್ನು ಜಪಿಸಿ ಹರಿಹರ ಬ್ರಹ್ಮ ಚೈತನ್ಯವನ್ನೊಳಗೊಂಡ ಅಸ್ತ್ರಕ್ಕೆ ರಾಮತ್ವ ಸತ್ವವನ್ನು ಹೊಯ್ದು ತಾನೇ ಪ್ರವೇಶಿಸಿ ಅಸ್ತ್ರ ಹೂಡುತ್ತಾನೆ. ದೈತ್ಯಾಯುಧ ತುಂಡಾ ಗುತ್ತದೆ.ಆದರೆ ಅದರ ಒಂದು ತುಂಡು ರಾಮನೆದೆಗೆ ತಾಗಿ ಆತನನ್ನು ಮೈಮರೆಸುತ್ತದೆ. ರಾಮನ ಬ್ರಹ್ಮಾಸ್ತ್ರ ರಾವಣನ ಹೃದಯವನ್ನು ಭೇದಿಸುತ್ತದೆ. ಅದನ್ನು ಭದ್ರವಾಗಿ ಹಿಡಿದ ರಾವಣನೂ ರಾಮನ ವಿಗ್ರಹವನ್ನದರಲ್ಲಿ ಕಂಡು ''ಸಿಲ್ಕಿದನಲಾ ಶತ್ರು'' ಎನ್ನುತ್ತ ರಥ ಹಿಂತಿರುಗಿಸಲು ಹೇಳುತ್ತಾನೆ.

ಅರಮನೆಗೆ ಬಂದು ಮಯಸುತೆಗೆ ರಾಮ ಸಿಕ್ಕಿದುದನ್ನು ಹೇಳುತ್ತಾನೆ. ಆಕೆ ರಾಮಬಾಣವನ್ನು ನೋಡಿ ರಾವಣನಿಗಾದ ಭ್ರಾಂತಿಯೆನ್ನುತ್ತಾಳೆ. ಆಗ ರಾವಣನು —

**ಭ್ರಾಂತಿಯಾರ್ಗೆಲಗೆ, ನಿನಗೆಯೊ ನನಗೊ, ರಾಮನಂ**
**ಪ್ರಾಣರೂಪದಿನಿಲ್ಲಿ ಪಡೆದಿಹೆನೌ ಪೂರ್ಣಮಂ**
**ಅಲ್ಲಿ ಗೋಳಿಡುತಿಹರ್ ವಾನರರ್, ರಾಮನ**
**ಕಳೇಬರಕೆ ವೈದ್ಯನೈವೇದ್ಯಂಗಳನೊಡರ್ಚಿ**
**ನೀಂ ಪತಿವ್ರತೆಯಪ್ಪೊಡೆನ್ನೆಂದುದಂ ಮಾಡು**
**ನನ್ನ ವಕ್ಷದಿನೆಳೆದು ತೆಗೆಯುದಂ, ಸೀತೆ ಮೇಣ್**
**ನೀನಲ್ಲದನ್ಯರಿಂದಾಗದೀ ರಾಮನ ಮಹಾನ್**
**ಶರ ಶರೀರಮಂ ಸ್ಪರ್ಶಿಸಲ್ಕೆ—**

ಎನ್ನುತ್ತಾನೆ. ಮಂಡೋದರಿ ಆ ವಸ್ತ್ರವನ್ನು ತೆಗೆಯುತ್ತಿದ್ದಂತೆ ರಾವಣನಸು ಹಾರು ತ್ತದೆ, ಅತ್ತ ಮೈಮರೆತ ರಾಮನೆಚ್ಚರುತ್ತಾನೆ. ''ಎಲ್ಲಿ ನನ್ನೊಡಲಿಲ್ಲಿ, ಪೇಳ್, ತಾಯಿ, ಕೌಸಲ್ಯ ತನೂಜತನು'' ಎಂದು ಕೇಳುತ್ತಾನೆ. ಅಂಜನಾಸೂನು ''ಇಲ್ಲಿಹುದಿಲ್ಲಿ, ದೇವ ಅವತರಿಸಿದಕೆ ಈ ನೀಲವಿಗ್ರಹಕೆ'' ಎನ್ನುತ್ತಾನೆ. ರಾಮನುದ್ಘೋದನದ ಮತ್ತೆ

ರಾವಣನ ನಿಧನಯೋಗದ ಶ್ರೀಮುಹೂರ್ತದಲಿ ಲೋಕಮೆಲ್ಲಂ ಹರ್ಷ ಶೋಕಮಯ ವಾಯ್ತು" ಎನ್ನುತ್ತಾರೆ ಕವಿ.

ಇಲ್ಲಿ ಕೇವಲ ರಾವಣಸಂಹಾರವಲ್ಲ. ರಾವಣತ್ವದ ಅಂತ್ಯ ರಾಮತ್ವದ ವಿಜಯ.

**ಸೀತಾಪರಿಗ್ರಹ**

ರಾವಣವಧೆಯಬಳಿಕ "ವಿದೇಹ ರಾಜನ ಮಗಳಾದ ಸೀತೆಗೆ ಮಂಗಳ ಸ್ನಾನ ಮಾಡಿಸಿ ದಿವ್ಯಾಭರಣಗಳನ್ನು ತೊಡಿಸಿ ಉತ್ತಮ ಲೇಪನಗಳನ್ನು ಮಾಡಿಸಿ ಇಲ್ಲಿಗೆ ಬೇಗನೆ ಕರೆತರುವವನಾಗು" ಎಂದು ವಿಭೀಷಣನಿಗೆ ಆಜ್ಞೆ ಮಾಡಿದ ರಾಮನು ಆಕೆ ಬಂದಾಗ ಎಲ್ಲರಿದಿರಿನಲ್ಲಿ "ಎಲೈ ಭದ್ರೆ, ತಿಳಿದುಕೋ, ನನ್ನ ಮಿತ್ರರ ಪರಾಕ್ರಮದಿಂದ ಈ ಯುದ್ಧಾಯಾಸವನ್ನು ಕೊನೆಗಾಣಿಸಿದುದು, ನಿನಗಾಗಿ ಅಲ್ಲ, ನನ್ನ ನಡತೆಯನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ. ನಾನು ಅನುಜ್ಞೆ ಕೊಡುತ್ತಿರುವೆನು ನೀನು ಇಷ್ಟಬಂದಂತೆ ಹೋಗು,... ನಿನ್ನಲ್ಲಿ ನನಗೆ ಅನುರಾಗವಿಲ್ಲ. ನೀನು ಲಕ್ಷ್ಮಣ, ಭರತ, ಸುಗ್ರೀವ, ವಿಭಿಷಣ ಯಾರಲ್ಲಿ ಬೇಕಾದರೂ ಮನಸ್ಸಿಡು – ಅಥವಾ ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು ಎನ್ನುತ್ತಾನೆ.

ದುಃಖಿತೆಯಾದ ಸೀತೆ ತನ್ನ ಪಾವಿತ್ರ್ಯವನ್ನು ಹೇಳಿಕೊಂಡು ಕೊನೆಗೆ ಲಕ್ಷ್ಮಣ ನಲ್ಲಿ ಚಿತೆಯನ್ನು ರಚಿಸುವಂತೆ ಹೇಳುತ್ತಾಳೆ. ರಾಮನ ಅನುಮತಿಯಿಂದ ಆತ ಚಿತೆ ಯನ್ನು ಸಿದ್ಧಪಡಿಸುತ್ತಾನೆ. "ಸಕಲ ಧರ್ಮಗಳನ್ನು ಬಲ್ಲವನಾದ ರಾಮನನ್ನು ನಾನು ಮನಸಾ ವಾಚಾ ಕರ್ಮಣಾ ಅತಿಕ್ರಮಿಸದೆ ಇದ್ದಲ್ಲಿ ನನ್ನನ್ನು ಅಗ್ನಿಯು ರಕ್ಷಿಸಲಿ" ಎನ್ನುತ್ತ ಅದರಲ್ಲಿ ಧುಮುಕಿದಳು. ಜನರ ಹಾಹಾಕಾರವೇಳುತ್ತದೆ.

ರಾಮನು ದುಃಖಿಸುತ್ತ ಕಣ್ಣುಗಳಲ್ಲಿ ನೀರು ತುಂಬಿದವನಾಗಿ ಸ್ವಲ್ಪ ಕಾಲ ಧ್ಯಾನಾಸಕ್ತನಾಗುತ್ತಾನೆ. ಆಗ ಇಂದ್ರಾದಿ ದೇವತೆಗಳಿಂದೊಡಗೂಡಿದ ಬ್ರಹ್ಮನು ಬಂದು ಸ್ತುತಿಸುತ್ತಾನೆ, ಆಗ ರಾಮನೆನ್ನುತ್ತಾನೆ.

**ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ**
**ಯೋಽಹಂ ಯಸ್ಯ ಯತಶ್ಚಾಹಂ ಭಗವಾಂಸ್ತದ್ಬ್ರವೀಮಿತೇ**

(ನಾನು ತಿಳಿದಂತೆ ದಶರಥನ ಮಗ ಮನುಷ್ಯ ನಾನು. ನಿಜವಾಗಿ ನಾನು ಯಾರೆಂಬು ದನ್ನು ತಿಳಿಸಿ) ಆಗಲೇ ರಾಮನ ನಿಜ ಸ್ವರೂಪವನ್ನು ಬ್ರಹ್ಮ ಬಹಿರಂಗಗೊಳಿಸುತ್ತಾನೆ. ಸಾಕ್ಷಾತ್ ನಾರಾಯಣ ಎನ್ನುತ್ತಾನೆ. ಸೀತೆಯೇ ಲಕ್ಷ್ಮಿ ಎಂದು ವಿವರಿಸುತ್ತಾನೆ.

ಅಗ್ನಿದೇವನು ತೊಡೆಯ ಮೇಲೆ ಸೀತೆಯನ್ನು ಕುಳ್ಳಿರಿಸಿಕೊಂಡು ಸಾಕ್ಷಾತ್ತಾಗಿ ಎದ್ದು ಬರುತ್ತಾನೆ.

ರಾಮನು ಸೀತೆಯ ಪಾವಿತ್ರ್ಯದ ಅರಿವಿದ್ದರೂ ಲೋಕದ ಅರಿವಿಗಾಗಿ ಹೀಗೆ ಮಾಡಿದೆನೆನ್ನುತ್ತಾ ಆಕೆಯನ್ನು ಪರಿಗ್ರಹಿಸುತ್ತಾನೆ.

ಇದು ವಾಲ್ಮೀಕಿ ರಾಮಾಯಣದ ವಿವರಣೆ.

ಶ್ರೀ ರಾಮಾಯಣದರ್ಶನದಲ್ಲಿ ಈ ಭಾಗ ಬಲು ಹೃದಯಸ್ಪರ್ಶಿಯಾಗಿ ನಿರೂಪಿತವಾಗಿದೆ— ರಾವಣ ವಧೆಯ ಬಳಿಕ ರಾಮ ತನ್ನಲ್ಲಿಗೆ ಬರುವನೆಂದು ಅಥವಾ ದೂತರನ್ನು ಕಳುಹುವನೆಂದು ಕಾತರಿಸುತ್ತಿದ್ದ ಸೀತೆಯಲ್ಲಿಗೆ ಅಸಲೆ, ವಿಭೀಷಣ, ಆಂಜನೇಯ ಬರುತ್ತಾರೆ. ಶುಭಸಂದೇಶವನ್ನು ಬಿತ್ತರಿಸುತ್ತಾರೆ. ರಾಮನಾಣತಿಯಂತೆ ಮಂಗಲಸ್ನಾತೆಯಾದ ಸಕಲಾಭರಣ ಭೂಷಿತೆಯಾದ ಸೀತೆಯನ್ನು ಕರತರುವಂತೆ ಹೇಳಿದ ಆಂಜನೇಯ ಹಿಂತಿರುಗುತ್ತಾನೆ. ಸೀತೆ ಅಸ್ನಾತೆಯಾಗಿಯೆ ತೆರಳಲು ಬಯಸುತ್ತಾಳೆ. ಆದರೆ ರಾಮನಾಜ್ಞೆಯೆಂದ ಬಳಿಕ ಅದನ್ನೆ ಶಿರಸಾವಹಿಸಿ ಸ್ನಾತೆಯಾಗಿ ದಿವ್ಯದ್ಯುತಿಯ ಶಿಬಿಕೆಯೇರಿ ಸ್ತ್ರೀಪರಿವಾರದೊಂದಿಗೆ ಬರುತ್ತಾಳೆ. ರಾಮನು ಸೀತೆಯನ್ನು ವಾನರರೆಲ್ಲರು ನೋಡುವಂತೆ ಡಂಗುರ ಹೊಯ್ಯುತ್ತಾನೆ. ಸೀತೆಯೊಬ್ಬಳೇ ಪರದೆಯೇನಿಲ್ಲದೆಯೇ ತನ್ನ ಮುಂದೆ ಸಭೆಗೆ ಬರುವಂತೆ ಹೇಳುತ್ತಾನೆ. ಅಂತೆಯೇ ಆಕೆ ಬಂದಾಗ ನಿಷ್ಠುರವಾದ ಮಾತುಗಳನ್ನಾಡುತ್ತಾನೆ. "ಭರ್ತೃವಾಕ್ಯಶಲ್ಯ ರೂಕ್ಷತೆಗೆ ಬಾಗಿದಳ್ ವ್ರೀಡೆಯಿಂ ಬಡಿಗೆ ಪೊಯ್ದಂತೆವೋಲ್ ಬೆನ್ಗೆ" ಮುಂದಿನ ತನ್ನ ಕಾರ್ಯವನ್ನು ನಿರ್ಧರಿಸುತ್ತ "ರಾಕ್ಷಸಂ ಮುಟ್ಟಿದನೆ, ನಾನಲ್ತು ದೈವಮಪರಾಧಿ, ಮೈಯನಲ್ಲದೆ ಮನವನೇಂ ಮುಟ್ಟಿದನೆ ? ಮುಟ್ಟಲಾರದೆ ಸುಟ್ಟು ಸೀದನಯ್... ಪಾವಮೇವುದೀ ಸಂಶಯ ನಿರಾಸಕೆ" ಎಂದುಸುರಿ, ಲಕ್ಷ್ಮಣನಲ್ಲಿ ಚಿತೆಯ ರಚಿಸು ಸೌಮಿತ್ರಿ, ಮಿಥ್ಯಾಪವಾದ ಘಾತಕೆ ಸಿಲ್ಕಿದೆನಗೆ ಬಾಳ್ ಮರಗೊಳನೊಂದು ಕೆಂಗೊಳ್. ಸಭಾಮಧ್ಯದೊಳ್ ಪ್ರಭುವಿಂ ತಿರಸ್ಕೃತೆಳ್, ಸದ್ಗತಿಗೆ ಶರಣೆನಗೆ ಹವ್ಯವಾಹನನಲ್ಲದನ್ಯರಂ ಕಾಣೆ" ಎನ್ನುತ್ತಾಳೆ. ಅಣ್ಣನ ಕಣ್ಸನ್ನೆಯ ಅನುಮತಿ ಪಡೆದ ಲಕ್ಷ್ಮಣ ಚಿತೆಯನ್ನು ರಚಿಸುತ್ತಾನೆ. ಸೀತೆ ಅಗ್ನಿಯ ಸನ್ನಿಧಿಗೆ ಸಾಗಿ

"ಓ ಅಗ್ನಿ
ನೀಂ ಲೋಕಸಾಕ್ಷಿ ನಡೆನುಡಿಗಳಲಿ ಬಗೆಯಲ್ಲಿ
ರಾಘವೇಂದ್ರನನಳಿದು ಚರಿಸಿರ್ದೊಡೆನ್ನುಸಿರ್
ನನ್ನಾಹುತಿಗೊಳ್...............
ಕಾಯ್ದುಕೊಳ್, ಕಾಯ್ದುಕೊಳ್, ಓ ಅನಿಲಸಖ ನಿನ್ನ
ಈ ಮಗಳನವಳ ಪತಿಚರಣ ಸೇವಾರ್ಥವೆನ್ನಂ

ಎನ್ನುತ್ತಾ 'ಪೊಕ್ಕಳ್ ಧಗದ್ಧಗಿಸುವುಜ್ಜ್ವಲ ಚಿತಾಗ್ನಿಯಂ
ಮಂಗಳಾಜ್ಯಾಹುತಿಯವೊಲ್"

ನಿಷ್ಠುರ ಶಿಲಾಮೂರ್ತಿಯಂತೆ ಎಲ್ಲವನ್ನು ನೋಡುತ್ತ ನಿಂತಿದ್ದ ರಾಮನ ಮುಖ ದೀಪ್ಯಮಾನವಾಗುತ್ತದೆ. ಚಿತೆಗೆ ತಾನೂ ಚಲಿಸುತ್ತಾನೆ. ಗೋಪುರೋಪಮದಗ್ನಿ ಮಧ್ಯೆ ಮರೆಯಾಗುತ್ತಾನೆ.

ಅಸಂಖ್ಯೆಯ ಗೀರ್ವಾಣ ಕಂಠಸ್ವನಂವೆರಸಿ
ಅಂಬರವೆ ತುಂಬಿಯಾದ ಶರೀರ ವೀಣಾ

ಸಹಸ್ರತಂತ್ರೀ ನಿಕ್ವಣಂ—ಕೇಳ್ದುದನಿಬರಿಗೆ.
"ಓಂ ನಮೋ ಸಚ್ಚಿದಾನಂದನೆ ನಮೋ ನಮೋ...

ಹೀಗೆ ಸ್ತೋತ್ರಗೀತೆ ಮೊಳಗುತ್ತಿರಲು "ನವರತ್ನರಾಗಗಳನಾಂತುದು ಚಿತಾಗ್ನಿಯುರಿ'

ಹವ್ಯವಾಹನ ಪವಿತ್ರತನುವಿಂ ಪೊಣ್ಮಿದನು ದಶರಥಾತ್ಮಜಂ
ಜಾನಕೀ ಪಾಣಿಗ್ರಹಣ ಕೃಪಾಲು ! ಸೀತೆಯುಂ
ಪಾವನಾಗ್ನಿಸ್ನಾತೆಯುಂ-ಕಿಚ್ಚಿನುರಿಯಿಂದೆ
ಕಾಯ್ದುತೆರದಿಂದೆ ಕರೆತಂದನೊಯ್ಯನೆ...

ಅನಲೆ ಆನಂದಾತಿರೇಕದಿಂದ ಬಂದು ರಾಮನ ಪಾದಗಳಲ್ಲಿ ಕೆಡೆಯುತ್ತಾಳೆ—

"ಪೂಜ್ಯೆಯುಂ
ಪಾಲಿಸುವ ನೆವದಿ ನೀನುಂ ಪರೀಕ್ಷಿತನಲಾ
ಲೋಕತೃಪ್ತಿಗೆ ಲೋಕಮರ್ಯಾದೆಗೊಳಗಾದೆ
ಸರ್ವ ಲೋಕಪ್ರಭುವೆ. ಲೋಕಗುರು ನೀಂ ದಿಟಂ"

ಎನ್ನುತ್ತಾಳೆ.

ಚಾರಿತ್ರ್ಯದ ಬಗ್ಗೆ ಸಂಶಯ ಸ್ತ್ರೀಗೆಂತೋ ಅಂತೆಯೇ ಪುರುಷನಿಗೂ ಅಲ್ಲವೇ ? ಇದು ಲೋಕಮರ್ಯಾದೆ ರಾಮನವರ್ತನೆಯಲ್ಲಿ ಲೋಕಮರ್ಯಾದೆಗೆ ತಕ್ಕುದಾದುದು. ವಾಲ್ಮೀಕಿರಾಮಾಯಣದಲ್ಲಿದ್ದ ರಾಮನ ಅಗ್ನಿಪ್ರವೇಶ ಇಲ್ಲಿ ಎಷ್ಟೊಂದು ಮಾರ್ಮಿಕವಾಗಿದೆ—ಹೃದಯಸ್ಪರ್ಶಿಯಾಗಿದೆ !

ಕಥಾಹಂದರದ ದೃಷ್ಟಿಯಿಂದ ಇವು ವಾಲ್ಮೀಕಿ ರಾಮಾಯಣ ಮತ್ತು ಶ್ರೀ ರಾಮಾಯಣದರ್ಶನಂನಲ್ಲಿರುವ ಭಿನ್ನತೆಗಳು. ಆದರೆ ಪಾತ್ರಗಳ ವ್ಯಕ್ತಿತ್ವ ವಿಕಾಸ-ನಿರೂಪಣೆ ಇವುಗಳಲ್ಲಿರುವ ಸೂಕ್ಷ್ಮ ವ್ಯತ್ಯಾಸಗಳು ಹಲವು.

ವಾಲ್ಮೀಕಿ ರಾಮಾಯಣವು ರಾಮನನ್ನು ಆದರ್ಶವ್ಯಕ್ತಿತ್ವವುಳ್ಳ ಮಾನುಷಶ್ರೇಷ್ಠನನ್ನಾಗಿಯೂ ರಾವಣನನ್ನು ದುಷ್ಟತೆಯ ಪ್ರತೀಕವನ್ನಾಗಿಯೂ ಪ್ರತಿಪಾದಿಸಿದೆ. ರಾವಣನ ಮಾರಣ ದುಷ್ಟಶಿಕ್ಷಣ. ಶ್ರೀ ರಾಮಾಯಣದರ್ಶನದಲ್ಲಿ ಅವನ್ನೆ ರಾಮನ ಈ ಮಾತುಗಳಲ್ಲಿ ಹಾಗೆ ವಿವರಿಸಿದೆ.

ನಾನೆ
ಆ ರಾವಣನ ಮೂಲಬಲಶಕ್ತಿ ! ನನ್ನ ಅಸತ್
ಶಕ್ತಿಯುಂ ಗೆಲಲರಿದು ನನಗಲ್ಲದಿತರರಿಗೆ
... ... ............ ...
ನಾನೆ ಅವನಲ್ಲದಿರೆ ಆ ದಶಗ್ರೀವಂಗದೇನ್
ಸೀತೆಯನ್ನೊಲಿವುದುಂ ಮೇಣವಳನುಯ್ವುದುಂ
ಪೇಳ್, ಮೊಗ್ಗೆ

ರಾಮ ರಾವಣರು ಒಂದೇ ಶಕ್ತಿಯ ಸತ್–ಅಸತ್ ರೂಪಗಳು ಜೀವಿಗಳಲ್ಲಿ ಈ ಎರಡೂ ಇರುತ್ತವೆ. ಅವುಗಳಲ್ಲಿ ಒಂದೊಂದು ಪ್ರಾಬಲ್ಯವನ್ನು ಪಡೆದು ವ್ಯಕ್ತಿತ್ವ

ವನ್ನು ರೂಪಿಸುತ್ತವೆ ಕೊನೆಗೆ ಒಂದುಗೂಡುತ್ತವೆ. ಇದು ರಾಮಾಯಣದರ್ಶನದ ದರ್ಶನವೆನಿಸುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿ ರಾಮ ನರರೂಪಿಯಾದ ನಾರಾಯಣ ಎಂದೂ ಅಜೇಯನೆಂದೂ ಪ್ರತಿಪಾದಿಸಿದೆ, ಶ್ರೀರಾಮಾಯಣದರ್ಶನದಲ್ಲಿ ಅಸತ್‌ನ ನಿರ್ಮೂಲನಕ್ಕೆ ರಾಮಬಾಣಕ್ಕಿಂತ ಪ್ರಭಾವಶಾಲಿ ಶಕ್ತಿಶಾಲಿಯಾದುದು ಸೀತೆಯ ಪಾತಿವ್ರತ್ಯದ ಅಗ್ನಿಜ್ವಾಲೆ ಊರ್ಮಿಳೆಯ ಪತಿವ್ರತಾ ತಪಸ್ಸು.

ಶ್ರೀ ರಾಮಾಯಣದರ್ಶನದಲ್ಲಿ ಒಟ್ಟು ರಾಮಾಯಣದ ಕಥೆ ಸೀತೆಯ ಮಾತಿನಲ್ಲಿ ಪ್ರತಿಬಿಂಬಿತವಾಗಿದೆ.

**ಆವುದಾಗಲಿ ನೆಪಂ**
**ಫಲದಾಯಕಂ ತಪಂ, ನನಗೆ, ರಘುನಾಥಂಗೆ**
**ಮೇಣ್ ರಾಕ್ಷಸೇಂದ್ರಂಗೆ ಮೂವರ್ಗ್ಗಮವರವರ**
**ಕರ್ಮಾನುಸಾರಿ ಜನ್ಮೋದ್ದೇಶ ಸಾಧನೆಗೆ**
**ಮೇಣಾತ್ಮವಿಕಸನದ ಪರಿಣಾಮ ಸಿದ್ಧಿಗೆ**
**ಸಹಾಯಮಾದುದು ಮಂಥರೆಯ ಮೂಲದೀ ಬೃಹದ್**
**ದುರ್ಘಟನೆ ಇನ್ನೆನಿತು ಜೀವರಿಗೆ ತಂತಮ್ಮ**
**ಕರ್ಮಕ್ಷಯಕೆ ಮತ್ತೆ ಧರ್ಮಾಭ್ಯುದಯಕಿದು**
**ನಿಮಿತ್ತಮಾದುದೊ ಪೇಳ್ವರಾರ್**

ಒಟ್ಟಿನಲ್ಲಿ ವಾಲ್ಮೀಕಿ ರಾಮಾಯಣದ 'ತನು'ವಿದ್ದರೂ ಶ್ರೀ ರಾಮಾಯಣ ದರ್ಶನದ ಚೈತನ್ಯ ಸ್ವತಂತ್ರವಾದುದು. ಕಥೆ ವಾಲ್ಮೀಕಿಯದಾದರೂ ದರ್ಶನ ಮಹಾಕವಿ ಕುವೆಂಪುರವರದು.

ಚಿರಂತನ

# ಶ್ರೀರಾಮಾಯಣದರ್ಶನಂ – ತೊರವೆರಾಮಾಯಣ

ಭರತಖಂಡದ ಜನಜೀವನವನ್ನು ರೂಪಿಸಿದ ಕೃತಿಗಳಲ್ಲಿ ರಾಮಾಯಣ ಮತ್ತು ಮಹಾಭಾರತಗಳಿಗೆ ಮಹತ್ತ್ವದ ಸ್ಥಾನವಿದೆ. ಜನತೆಯನ್ನು ಸುಸಂಸ್ಕೃತರನ್ನಾಗಿ ಮಾಡಿ ಊರ್ಧ್ವಗಾಮಿಗಳನ್ನಾಗಿ ಈ ಕೃತಿಗಳು ಮಾಡಿವೆ. ಸುಮಾರು 2,500 ವರ್ಷಗಳ ಹಿಂದೆ ಉದಯವಾದ ವಾಲ್ಮೀಕಿ ರಾಮಾಯಣವನ್ನು ಆಧರಿಸಿ ಕುಮಾರವ್ಯಾಸನು ಹೇಳುವಂತೆ "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ" ಎನ್ನುವಷ್ಟು ಕೃತಿಗಳು ರಚಿತವಾಗಿವೆ. ರಾಮನಿಗಿಂತ ರಾಮಾಯಣ ಮೊದಲು, ರಾಮನಿಗಿಂತ ರಾಮನಾಮ ಮಿಗಿಲು ಎನ್ನುವ ಮಾತು ಹುಟ್ಟಿಕೊಂಡಿದೆ. ಹಾಗಾಗಿ ರಾಮಾಯಣದ ಬೆಳವಣಿಗೆಗೆ ಸಂಬಂಧಿಸಿದಂತೆ ವೈದಿಕ, ಜೈನ, ಬೌದ್ಧ, ವೀರಶೈವ ಮುಂತಾದ ಎಲ್ಲ ಧರ್ಮಗಳ ಜನರೂ ಕಾರಣರಾಗಿದ್ದಾರೆ. ಆದುದರಿಂದಲೇ ರಾಮಾಯಣಕ್ಕೆ ರಾಷ್ಟ್ರೀಯ ಕಾವ್ಯದ ಸ್ಥಾನ ದೊರಕಿದೆ.

ಕುಮಾರವ್ಯಾಸ ಭಾರತ, ತೊರವೆ ರಾಮಾಯಣ, ಜೈಮಿನಿ ಭಾರತಗಳು ಕರ್ನಾಟಕದ ಮೂಲೆ ಮೂಡುಕುಗಳಲ್ಲಿ ಅನುರಣಿತವಾದ ಕೃತಿಗಳು. ಅಕ್ಷರ ಬಲ್ಲವರು ತಮ್ಮ ಮನೆಗಳಲ್ಲಿ ಓದಿಕೊಂಡರು, ಅನಕ್ಷರಸ್ಥರು ಗಮಕಿಗಳ ಮೂಲಕ ಹಾಡಿಸಿ ಕೇಳಿ ಆನಂದಿಸಿದರು. ವಿದ್ಯಾವಂತರು ತಪ್ಪಿದ ಕಡೆಗಳಲ್ಲಿ ಹಳಬರು ಮೇಲಿನ ಕೃತಿಗಳನ್ನು ತಮ್ಮ ನೆನಪಿನ ಶಕ್ತಿಯಿಂದ ಹೇಳಿ ತಿದ್ದುತ್ತಿದ್ದುದೂ ಉಂಟು. ಈ ಪರಿಣಾಮವಾಗಿ ಅನೇಕ ರಾಮಾಯಣಗಳು ವಿವಿಧ ಛಂದಸ್ಸುಗಳಲ್ಲಿ ತಲೆಯೆತ್ತಿದವು. ಪಂಡಿತ ವರ್ಗದಂತೆಯೇ ಜನಪದರೂ ತಮ್ಮ ಕಾಣಿಕೆಯನ್ನು ನೀಡಿದರು. ರಾಮಾಯಣದ ಅನೇಕ ಪ್ರಸಂಗಗಳು ಯಕ್ಷಗಾನ ರೂಪದಲ್ಲಿ ಕಂಡು ಬಂದುವು. 'ಕನ್ನಡದಲ್ಲಿ ರಾಮಾಯಣ' ಎನ್ನುವ ಇತ್ತೀಚಿನ ಸಮೀಕ್ಷಾಲೇಖನದಲ್ಲಿ ಡಾ. ಹಾ. ಮಾ. ನಾಯಕರು ಸುಮಾರು ಐವತ್ತಕ್ಕೂ ಮೀರಿದ ರಾಮಾಯಣ ಲೇಖಕರನ್ನು ಪಟ್ಟಿಮಾಡಿದ್ದಾರೆ. ಅಲ್ಲಿ ಅವರು "ವೈದಿಕ ಸಂಪ್ರದಾಯದ ರಾಮಾಯಣ ಕರ್ತೃಗಳ ಸಂಖ್ಯೆಯೇ ಬಹಳ ದೊಡ್ಡದು. ಆದರೆ ಗುಣದ ದೃಷ್ಟಿಯಿಂದ ದೊಡ್ಡದಾದ ಕೃತಿಯನ್ನು ಮಾತ್ರ ಅವರಲ್ಲಿ ಯಾರೂ ರಚಿಸಲಿಲ್ಲ. ನಾರಾಯಣ (ಸು ೧೬೦೦), ನರಸಪ್ಪ (೧೬೧೨), ತಿರುಮಲೆ ವೈದ್ಯ (ಸು. ೧೬೫೦), ಸುಬ್ರಹ್ಮಣ್ಯ (ಸು. ೧೭೫೦), ತಿಮ್ಮಾಮಾತ್ಯ (ಸು. ೧೭೫೦) ಮೊದಲಾದವರು ಅನೇಕರು ಇಂಥ ಕವಿಗಳಾಗಿದ್ದಾರೆ. ಇವರೆಲ್ಲ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಗೊಳ್ಳುತ್ತಾರೆ : ವಿಮರ್ಶೆಯಲ್ಲಿ ಕೊಚ್ಚಿಕೊಂಡು ಹೋಗುತ್ತಾರೆ" ಎಂದಿ

ದ್ದಾರೆ.[1] ಈ ಮಾತು ಅಕ್ಷರಶಃ ನಿಜ.

ಕನ್ನಡದಲ್ಲಿ ಗಮನಿಸಬಹುದಾದ ರಾಮಾಯಣಗಳೆಂದರೆ ನಾಗಚಂದ್ರನ 'ಶ್ರೀ ರಾಮಚಂದ್ರ ಚರಿತ ಪುರಾಣಂ', ನರಹರಿಯ 'ತೊರವೆ ರಾಮಾಯಣ', ಮುದ್ದಣನ 'ಶ್ರೀ ರಾಮಾಶ್ವಮೇಧಂ', ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮತ್ತು ಮಾಸ್ತಿ ಅವರ 'ಶ್ರೀರಾಮಪಟ್ಟಾಭಿಷೇಕ'ಗಳು. ಪ್ರಸ್ತುತ ತೊರವೆ ರಾಮಾಯಣ ಮತ್ತು ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ'ಗಳ ಬಗ್ಗೆ ವಿವೇಚನೆ ನಡೆಸಿದೆ.

ಕುಮಾರವ್ಯಾಸನನ್ನು ಆದರ್ಶವಾಗಿಟ್ಟುಕೊಂಡು ಕುಮಾರ ವಾಲ್ಮೀಕಿಯಾಗಿರುವ ನರಹರಿಯು ತೊರವೆಯವನು. ಇದು ಬಿಜಾಪುರ ಜಿಲ್ಲೆಯಲ್ಲಿದೆ. ಈತನು ಮಧ್ವಾಚಾರ್ಯರ ನೇರ ಶಿಷ್ಯನಾದುದರಿಂದ ಈತನ ಕಾಲ 1,300 ಎಂದೂ. ಈತನು ದೇವಗಿರಿಯ ಸೇವುಣ ರಾಮಚಂದ್ರನನ್ನು ತನ್ನ ಕಥಾನಾಯಕನಾದ ಶ್ರೀ ರಾಮನೊಡನೆ ಸಮೀಕರಿಸಿ ಈ ಕಾವ್ಯವನ್ನು ಬರೆದಿರುವುದಾಗಿಯೂ ಒಂದು ವಾದವಿದೆ. ಬಹುಜನ ವಿದ್ವಾಂಸರು ಈತನ ಕಾಲವನ್ನು ಸು. 1,500 ಎಂದು ಒಪ್ಪಿಕೊಂಡಿದ್ದಾರೆ. ವಾಲ್ಮೀಕಿ ರಾಮಾಯಣವನ್ನು ಮೊಟ್ಟಮೊದಲು ಕನ್ನಡದಲ್ಲಿ ಬರೆದ ಬ್ರಾಹ್ಮಣ ಕವಿ ಈತ. ಮಹಾಮುನಿ, ಆದಿಕವಿ ಪ್ರಾಚೇತಸ ಎಂದರೆ ವಾಲ್ಮೀಕಿಯನ್ನು ವಂದಿಸಿದ್ದಾನೆ. ಕುಮಾರವ್ಯಾಸನನ್ನು ಸ್ತುತಿಸಿದ್ದಾನೆ.

ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ'ನ ಕರ್ತೃ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳಿಯವರು. ವೆಂಕಟಪ್ಪಗೌಡರ ಮತ್ತು ಸೀತಮ್ಮನವರ ಮಕ್ಕಳು. ರಾಮಕೃಷ್ಣ ತತ್ವವನ್ನು ಅಭ್ಯಾಸ ಮಾಡಿದವರು. ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಅಧ್ಯಾಪಕ, ಪ್ರಾಧ್ಯಾಪಕ, ಪ್ರಿನ್ಸಿಪಾಲ್, ಉಪಕುಲಪತಿಗಳಾಗಿ ನಿವೃತ್ತರಾದವರು. ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಧೀಮಂತ ಕೃತಿಗಳನ್ನು ರಚಿಸಿದವರು. ಇಪ್ಪತ್ತನೆಯ ಶತಮಾನದಲ್ಲಿಯೂ ಮಹಾಕಾವ್ಯ ರಚನೆ ಸಾಧ್ಯ ಎಂದು ತೋರಿದವರು. ಆ ಮೂಲಕ ಕನ್ನಡಕ್ಕೆ ಮೊದಲ ಕೇಂದ್ರ ಸಾಹಿತ್ಯಅಕಾದೆಮಿ ಮತ್ತು ಭಾರತೀಯ ಜ್ಞಾನಪೀಠ ಪ್ರಶಸ್ತಿಯನ್ನು ದೊರಕಿಸಿ ಕೊಟ್ಟವರು. ಪುಣ್ಯವಶಾತ್ ನಾವು ಇಂದು ಅವರೊಂದಿಗಿದ್ದೇವೆ.

ಕುವೆಂಪು ಅವರು ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್, ನಾರಣಪ್ಪ, ಪಂಪ, ವ್ಯಾಸ, ಭಾಸ, ಭವಭೂತಿ, ಕಾಳಿದಾಸ, ನರಹರಿ, ತುಲಸಿದಾಸ, ಕಂಬ, ಅರವಿಂದ, ಹಳಬರು, ಹೊಸಬರು, ಹಿರಿಯರು, ಕಿರಿಯರು, ಹೀಗೆ ಜಗತ್ತಿನ ಎಲ್ಲ ಕಲಾಚಾರ್ಯರಿಗೂ ಕಾಲ ದೇಶ ನುಡಿ ಜಾತಿಯ ವಿಭೇದವನ್ನು ಮಾಡದೆ ಎಲ್ಲರಿಗೂ

---

1. ಆನಂದವನ : ಪುಟ 385-392 ಸದ್ಬೋಧಚಂದ್ರಿಕೆಯ ಕಾರ್ಯಾಲಯ ಅಗಡಿ. 1984.

ನಮಸ್ಕರಿಸಿದ್ದಾರೆ.

ಕಾಲಮಾನದ ದೃಷ್ಟಿಯಿಂದ ಕುವೆಂಪು ಅವರಿಗೆ ದೊರಕಿದ ಸೌಲಭ್ಯಗಳು ನರಹರಿಗೆ ದೊರೆಯಲಿಲ್ಲ. ಆತನು ವಾಲ್ಮೀಕಿ, ಕುಮಾರವ್ಯಾಸರನ್ನಷ್ಟೇ ಆಶ್ರಯಿಸ ಬೇಕಾಯಿತು. ಆದರೆ ಪುಟ್ಟಪ್ಪನವರಿಗೆ ಪಾಶ್ಚಾತ್ಯ ಮಹಾಕಾವ್ಯ ಪರಂಪರೆಯ ಲಾಭ ದೊರೆಯಿತು. ಆ ಕಾರಣದಿಂದ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ವಸ್ತುವನ್ನು ನೋಡುವ ದೃಷ್ಟಿ, ಪಾತ್ರಗಳನ್ನು ಪರಂಪರೆಯಿಂದ ಭಿನ್ನವಾಗಿ ನೋಡು ವುದು, ಮಹೋಪಮೆ ಮುಂತಾದ ಅಲಂಕಾರಗಳನ್ನು ಬಳಸುವುದು, ವಸ್ತುವಿಗೆ ತಕ್ಕ ಶೈಲಿಯನ್ನು ರೂಪಿಸುವುದು ಸಾಧ್ಯವಾಯಿತು. ವ್ಯಾಸರಿಗೆ ದೊರೆತ ಪಂಪ ಮತ್ತು ಕುಮಾರವ್ಯಾಸರಂಥ ಮಹಾ ಕವಿಗಳು ವಾಲ್ಮೀಕಿಗೆ ದೊರೆಯಲೇ ಇಲ್ಲ : ಇದ್ದುದರಲ್ಲಿ ನಾಗಚಂದ್ರ ಸ್ವಲ್ಪ ವಾಸಿ. ಆ ಕೊರತೆಯನ್ನು ಈ ಶತಮಾನದಲ್ಲಿ ಬಂದ ಕುವೆಂಪು ಮತ್ತು ಮಾಸ್ತಿಯವರು ತುಂಬಿದರೆನ್ನಬಹುದು.

ನರಹರಿ ಭಕ್ತಕವಿ. ಸ್ಮಾರ್ತ ಸಂಪ್ರದಾಯದ ಭಾಗವತ ಪಂಥಕ್ಕೆ ಸೇರಿ ದವನು. ಭಕ್ತಿಪಂಥಕ್ಕೆ ಸೇರಿದ ಆತನಿಗೆ ರಾಮಾಯಣ—

ಧರೆಯೊಳಗ್ಗದ ರಾಘವೇಂದ್ರನ
ಚರಿತ ಶತಕೋಟಿ ಪ್ರವಿಸ್ತರ
ವರ ಮಹಾಚಾರಿತ್ರ ರಚನಾ ಸುಪ್ರಬಂಧದಲಿ
ಪರಮ ಭಕ್ತಿಯೊಳಾವನೊಂದ
ಕ್ಷರವ ಕೇಳ್ದ ನರಂಗೆ ಪಾತಕ
ಹರವುದೆಂದು ಕುಮಾರರಿಗೆ ವಾಲ್ಮೀಕಿ ಮುನಿ ನುಡಿದ ॥
ಭವಭವಾರ್ಜಿತ ದುರಿತಕೋಟಿಯ
ತವಿಸುವಗ್ಗದ ನಾಮ ಸರಸಿಜ
ಭವಭವಾಚ್ಯುತರಮಲ ಪದವಿಯನೀವ ಗುಣನಾಮ
ಶಿವನ ನಚ್ಚಿನ ನಾಮ ಗಿರಿಸಂ
ಭವೆಯ ನೇಮದ ನಾಮ ಸುರ ನರ
ಭುವನ ಪಾವನನಾಮ ಸೀತಾಪತಿಯ ಸಿರಿನಾಮ ॥
ಒದೆವುದಘ ಸಂಹತಿಯ ತಲೆದೋ
ಚಿದಡೆ ದಹಿಸುವುದೆಡರನೌಕಿದ
ಡದುಹಿ ಬಿಸುಡುವುದುನ್ಮದ ಪ್ರಳಯ ಪ್ರಪಂಚಕವ
ಮುದವನಿಹದಲಿ ಕೊಡುವುದಚ್ಯುತ
ಪದವ ಪರದೊಳಗೀವುದಿದು ನಿಗ
ಮದ ರಹಸ್ಯ ಪುರಾಣ ಸಿದ್ಧವಿದೆಂದು ಮುನಿ ನುಡಿದ

ಬಾಲ ಕಾಂಡ ೧–೧೩, ೧೪, ೧೫

ಕುವೆಂಪು ಅವರು ಶ್ರೀರಾಮಕೃಷ್ಣರ, ವಿವೇಕಾನಂದರ ಪರಂಪರೆಯಲ್ಲಿ ಬಂದವರು. ಅವರು ನಾಸ್ತಿಕರಲ್ಲ. ಆದರೆ ಗೊಡ್ಡು ಸಂಪ್ರದಾಯಗಳನ್ನು, ಸಾಮಾಜಿಕ

ಅನಿಷ್ಟಗಳನ್ನು ವಿರೋಧಿಸಿದವರು. ಎರಡು ಸಾವಿರ ವರ್ಷಗಳಿಂದ ಬೆಳೆದು ಬಂದಿರುವ ರಾಮಾಯಣದ ಗಿರಿಯತುದಿಯಲ್ಲಿರುವವರು, ಆದುದರಿಂದಲೇ ಅವರಿಗೆ ರಾಮಾಯಣವೆಂದರೆ—

ಯುಗಯುಗದಿ ಸಂಭವಿಸೆನೆಂಬ ಭಗವದ್ದಿವ್ಯಮಾ
ವಚನಮೇಂ ನರರೂಪ ಮಾತ್ರಕ್ಕೆ ಮಿಸಿಪ, ಪೇಳ್ ?
ನರಸಿಂಹ ಮತ್ಸ್ಯ ಕೂರ್ಮಾದಿ ಚರಮಾ ಲೀಲೆಗೇಂ
ಪೊರತೆ ಈ ಕೃತಿ ರೂಪಮಾ ಭಗವದಾವಿರ್ಭಾವ
ಬಹುರೂಪ ಸೂತ್ರತೆಗೆ ? ರಾಮಂಗೆ ಮೊದಲಲ್ತೆ
ರಾಮಾಯಣಂ ? ಮುನ್ನಲ್ತೆ, ಪಿರಿದಲ್ತೆ, ಮೆಯ್ಯಲ್ತೆ,
ಮಸೆಯಲ್ತೆ ರಾಮಾಯಣಂ ? ರಾಮನಾಮದ ಮಹಿಮೆ
ರಾಮಂಗೆ ಮಿಗಿಲೆಂಬವೋಲ್ ರಾಮವತಾರಕಂ
ಗುರುತರಂ ತಾನೈಸೆ ರಾಮಾಯಣಾವತಾರಂ !

ಅಭಿಷೇಕ ವಿರಾಡ್ ದರ್ಶನಂ. ೨೨೩–೨೩೧

ವಾಲ್ಮೀಕಿ ರಾಮಾಯಣ ೨೪೦೦೦ ಶ್ಲೋಕಗಳಿಂದ ಕೂಡಿದೆ. ತೊರವೆಯ ರಾಮಾಯಣದಲ್ಲಿ ೧೧೮ ಸಂಧಿಗಳಿದ್ದು ಸು. ೫೨೦೦ ಭಾಮಿನೀಷಟ್ಪದಿಗಳಿವೆ. ಶ್ರೀರಾಮಾಯಣದರ್ಶನಂನಲ್ಲಿ ಅಯೋಧ್ಯಾ, ಕಿಷ್ಕಿಂಧಾ, ಲಂಕಾ, ಶ್ರೀಸಂಪುಟಗಳಲ್ಲಿ ೨೩ ಸಾವಿರ ಸಾಲುಗಳಿವೆ. ವಾಲ್ಮೀಕಿ ರಾಮಾಯಣವನ್ನು ಕುರಿತು ಕುವೆಂಪುರವರು– "ವಾಲ್ಮೀಕಿಯ ಕೃತಿ ಅದು ಹುಟ್ಟಿದಂದು 'ಕವಿಕೃತಿ'ಯಾಗಿತ್ತು : ಇಂದು 'ಪ್ರಕೃತಿ' ಯಾಗಿದೆ. ಭಾರತೀಯರ ಬಾಳುವೆಯ ಲೋಕದಲ್ಲಿ ಪರ್ವತ, ಅರಣ್ಯ, ಸಮುದ್ರ ಆಕಾಶಗಳಿರುವಂತೆ ರಾಮಾಯಣವೂ 'ಇದೆ'. ಬಹುಶಃ ಅವುಗಳಿಗಿಂತಲೂ ಸುಸ್ಥಿರವಾಗಿ ಸಮಧಿಕವಾಗಿ ಸತ್ಯತರವಾಗಿ ಬಾಹ್ಯಾಭ್ಯಂತರಗಳನ್ನು ಲೋಕಾಲೋಕಗಳನ್ನು ಆಕ್ರಮಿಸಿ ವ್ಯಾಪಿಸಿ, ಸೃಷ್ಟಿಯ ವಿಕಾಸರೂಪವಾದ ಪರಿಣಾಮಪಥದಲ್ಲಿ ಒಂದು ಪರಿವರ್ತನಾ ಸಮರ್ಥವಾದ ಸಾರಥಿಶಕ್ತಿಯಾಗಿದೆ. ಪ್ರಕೃತಿಯ ಪರ್ವತಾರಣ್ಯಗಳನ್ನೂ ಉಪ ಯೋಗಿಸಿಕೊಳ್ಳಬಹುದು. ಆ ಪರ್ವತದ ಬಂಡೆಗಳಲ್ಲಿ ಸಾಮರ್ಥ್ಯವಿರುವವರು ಯಾರು ಬೇಕಾದರೂ ತಂತಮ್ಮ ಪ್ರತಿಭೆಯ ಕಲ್ಪನಾಕೃತಿಗಳನ್ನು ಕಾಣಬಹುದು ; ಶಿಲ್ಪ ಕೃತಿಗಳನ್ನು ಕಡೆಯಬಹುದು. ಆ ಅರಣ್ಯದ ಅಂಶದಿಂದ ತಂತಮ್ಮ ದರ್ಶನಕ್ಕೆ ಅನು ರೂಪವಾಗಿ ಎಂತಹ ನಂದನೋದ್ಯಾನಗಳನ್ನು ಬೇಕಾದರೂ ರಚಿಸಿಕೊಳ್ಳಬಹುದು.' ಎಂದಿದ್ದಾರೆ ಈ ದೃಷ್ಟಿ ಅವರ ಶ್ರೀರಾಮಾಯಣದರ್ಶನಂನಲ್ಲಿ ಸಾರ್ಥಕತೆಯನು ಪಡೆದಿದೆ, ಅದನ್ನು—

"ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ,
ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ
ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ ?

ಪಂಜರದ ಪಳಮೆಯೊಳ್ ಪ್ರಾಣ ನವಪಕ್ಷಿಯುಂ,
ವಿಗ್ರಹಕೆ ದೇವತಾವಾಹನಂಗೆಯ್ವವೊಲ್,
ಭಕ್ತಿಯಿಂದಾಹ್ವಾನಿಪೆನ್ ಕವಿಗುರುವೆ, ನೀಡೆನಗೆ
ವಾಙ್ಮಂತ್ರ ಶಕ್ತಿಯಂ

ಕವಿಕ್ರತುದರ್ಶನಂ, ೧೦೧-೧೦೪

ಎನ್ನುವಲ್ಲಿ ಹೇಳಿದ್ದಾರೆ.

ರಾಮಾಯಣದ ಕಥೆ ತುಂಬ ಸರಳವಾದುದು. ರಾಮಾವತಾರ, ಸೀತಾಪಹರಣ, ರಾವಣವಧೆ ಇಲ್ಲಿಗೆ ರಾಮಾಯಣ ಮುಗಿಯಿತು, ನಿಜ. ಆದರೆ ಈ ಚೌಕಟ್ಟಿನಲ್ಲಿ ಬರುವಂತಹ ರಾಜ್ಯಾಡಳಿತ, ಪ್ರಜಾನುರಾಗ, ದಾಂಪತ್ಯ ಚಿತ್ರಗಳು, ಭ್ರಾತೃವಾತ್ಸಲ್ಯ, ಸೇವಕನ ನಿಷ್ಠೆ, ಧರ್ಮ ಅಧರ್ಮಗಳ ಹೋರಾಟದಲ್ಲಿ ಅಧರ್ಮದ ಸೋಲು ಮುಂತಾದವನ್ನು ಕಾಣಬಹುದು. ದಾಂಪತ್ಯಚಿತ್ರಗಳಲ್ಲಿಯೇ ಎಷ್ಟೊಂದು ವೈವಿಧ್ಯವಿದೆ ನೋಡಿ ದಶರಥನ ಬಹುಪತ್ನೀತ್ವ, ಅದರಿಂದ ಉಂಟಾಗುವ ಅನಿಷ್ಟಗಳು, ರಾಮನ ಏಕಪತ್ನೀತ್ವ, ಆತನು ಒಲಿದು ಬಂದ ಹೆಣ್ಣುಗಳನ್ನು ತಿರಸ್ಕರಿಸಿದ ಜಿತೇಂದ್ರಿಯತ್ವ, ವಾಲಿಸುಗ್ರೀವರು ಅಣ್ಣ-ತಮ್ಮಂದಿರಾಗಿಯೂ ಪರಸ್ಪರರ ಪತ್ನಿಯರನ್ನು ಅಪಹರಿಸುವುದು, ರಾವಣನು ಬೇರೊಬ್ಬನ ಪತ್ನಿಯನ್ನು ಅಪಹರಿಸುವುದು. ಹೀಗೆಯೇ ಸೋದರ ಸಂಬಂಧಗಳೂ ಇವೆ. ರಾಮ ಲಕ್ಷ್ಮಣ ಭರತ ಶತ್ರುಘ್ನರು ಪರಸ್ಪರ ಮಲತಾಯಿಯ ಮಕ್ಕಳಾದರೂ ಅವರಲ್ಲಿರುವ ಹೊಂದಾಣಿಕೆ. ವಾಲಿ ಸುಗ್ರೀವರು ಒಂದೇ ತಾಯಿಯ ಮಕ್ಕಳಾದರೂ ಅವರಲ್ಲಿರುವ ವೈರತ್ವ. ರಾವಣನ ಅನ್ಯಾಯವನ್ನು ಕಂಡು ಅವನ ಪಾಳೆಯದಿಂದ ಹೊರಬರುವ ವಿಭೀಷಣ, ರಾವಣನ ಅನ್ಯಾಯವನ್ನು ಕಂಡು ವಿರೋಧಿಸಿದರೂ ಭ್ರಾತೃವಾತ್ಸಲ್ಯಕ್ಕಾಗಿ ಅವನೊಡನೆ ನಿಲ್ಲುವ ಕುಂಭಕರ್ಣ. ಈ ಆರ್ಯ-ರಾಕ್ಷಸರ ಮಧ್ಯೆ ಬರುವ ಶಬರಿ, ಹನುಮಂತ, ಸುಗ್ರೀವ ಮುಂತಾದ ಬೇಡರು, ವಾನರರು. ಹೀಗೆ ರಂಗುರಂಗಿನ ಪ್ರಪಂಚವನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡಿದೆ ರಾಮಾಯಣ. ವಾಲ್ಮೀಕಿಯ ಬೃಹತ್‌ಕಾವ್ಯವನ್ನು ತೊರವ ರಾಮಾಯಣಕಾರ ಸಂಗ್ರಹಿಸಿ ನಿರೂಪಿಸುತ್ತ ಹೋಗಿದ್ದಾನೆ. ಪ್ರಶ್ನೆಮಾಡಿದ ಪಾರ್ವತಿಗೆ ಶಿವನು ರಾಮಾಯಣದ ಮಹತ್ತನ್ನು ತಿಳಿಸಿದಂತೆ ಕಥೆ ಆರಂಭವಾಗುತ್ತದೆ. ತೊರವೆ ರಾಮಾಯಣದ ಚೌಕಟ್ಟು ಅಧ್ಯಾತ್ಮರಾಮಾಯಣದ ಚೌಕಟ್ಟು. ವಸ್ತು ವಾಲ್ಮೀಕಿ ರಾಮಾಯಣದ್ದು. ಕುವೆಂಪು ಅವರು —

ರಾಮನ ಕಥೆಯ ಮಧುಧುನೀ ಪಥಂ
ಪಿಡಿದಾಂ ಮಹಾಛಂದಸ್ ತರಂಗವಿನ್ಯಾಸದಿಂ
ಸೇರುವೆನು ಗುರುಕೃಪೆಯೊಳಾ ಋತಚಿದ್ ರಸಾಬ್ಧಿಯಂ

ಕವಿಕ್ರತುದರ್ಶನಂ. ೯೦

ಎಂದು ಸಾಗಿದ್ದಾರೆ. ಹಾಗೆಯೇ ಮುಂದುವರಿದು—



ಬ್ರಹ್ಮ ಸತ್ಯೆಯುನಾ ಪರಬ್ರಹ್ಮ ಸತ್ಯೆಯಿಂ
ಮಾತ್ರಮೆಯೆ ದರ್ಶಿಸುತಿದಂ ಮಿಥ್ಯೆಯೆಂಬುದೇಂ
ಪೂರ್ಣ ಸತ್ಯಮೆ ? ಯೋಗವಿಜ್ಞಾನವೊಪ್ಪದು ಕಣಾ ।
ಪೂರ್ಣಮದು ; ಪೂರ್ಣಮಿದು ; ಪೂರ್ಣದಿಂ ಬಂದುದೀ
ಪೂರ್ಣಮಾ ಪೂರ್ಣದಿಂ ಪೂರ್ಣಮಂ ಕಳೆದೊಡಂ
ಪೂರ್ಣಮೆಯೆ ತಾನುಳಿವುದಾ ಪ್ರಜ್ಞೆಗದುವಿದುಂ
ಸರ್ವಮುಂ ಸತ್ಯದಾವಿಷ್ಕಾರ ವಿನ್ಯಾಸಗಳ್

ಕವಿಕ್ರತುದರ್ಶನಂ ೬೯–೭೫

ಎನ್ನುವ ದಿವ್ಯದರ್ಶನವನ್ನು ಕಂಡಿದ್ದಾರೆ. ಇಡೀ ರಾಮಾಯಣ ಅವರ ದೃಷ್ಟಿಯಲ್ಲಿ—

ಶ್ರೀರಾಮನಾಲೋಕದಿಂದವತರಿಸಿ ಬಂದು
ಈಲೋಕ ಸಂಭವೆಯನೆಮ್ಮ ಭೂಜಾತೆಯಂ
ಸೀತೆಯಂ ವರಿಸುತಾಕೆಯ ನೆವದಿ ವ್ಯಷ್ಟಿಕೃತಿಯಂ :—
ರಾವಣಾವಿದ್ಯೆಯಿಂ ನಮ್ಮ ಮರ್ತ್ಯಪ್ರಜ್ಞೆ ತಾಂ
ತನ್ನ ತಮದಿಂ ಮುಕ್ತಮಪ್ಪುದು, ದಿಟಂ, ನಿಮ್ಮ
ದೀಪ್ಯದೈವೀಪ್ರಜ್ಞೆಯಮೃತ ಗೋಪುರಕೇರ್ವವೋಲ್ !
ಓ ಬನ್ನಿಮವತರಿಸಿಮೀ ಮೃತ್ಕಲಾಪ್ರತಿಮೆಯೊಳ್
ಚಿತ್ಕಲಾ ಪ್ರಾಣಂ ಪ್ರತಿಷ್ಠಿತಂ ತಾನಪ್ಪವೋಲ್ ! ॥

ಶ್ರೀ ವೆಂಕಣ್ಣಯ್ಯನವರಿಗೆ ೩೮-೪೬

ಆ ಕಾರಣದಿಂದಲೆ ವಾಲ್ಮೀಕಿಯ, ತೊರವೆಯ ರಾಮಾಯಣದ ಮೂಲಕ ನಮಗೆ ಪರಿಚಯವಾಗಿದ್ದ ದಶರಥ, ಕೈಕೆ, ರಾಮ, ಸೀತೆ, ರಾವಣ ಎಲ್ಲರೂ ನಮ್ಮ ಮುಂದೆ ಹೊಸ ವೇಶ, ಆವೇಶ ಮತ್ತು ಅರ್ಥವಂತಿಕೆಗಳಿಂದ ಶ್ರೀರಾಮಾಯಣ ದರ್ಶನಂ ಮೂಲಕ ಗೋಚರಿಸುತ್ತಾರೆ. ಆದುದರಿಂದಲೇ ರಾಮಾಯಣದ ಸತ್ಪಾತ್ರಗಳ ಜೊತೆಗೆ ದುಷ್ಟಪಾತ್ರಗಳೂ ಶ್ರೀರಾಮಾಯಣದರ್ಶನಂನಲ್ಲಿ ರಾಮ ತತ್ತ್ವದಲ್ಲಿ ಐಕ್ಯವಾಗುತ್ತವೆ. ತೊರವೆಯ ರಾಮಾಯಣದಲ್ಲಿ–

"ಮಾಯೆ ಮಂಥರೆಯಾಗಿ ದಶರಥ
ರಾಯಭವನವ ಸಾರಿದಳು ..."

ಬಾಲಕಾಂಡ ೮–೭೧

ಮುಂದಿನ ಎಲ್ಲ ಕೇಡಿಗೂ ಕಾರಣಳಾದಳು. ಆದರೆ 'ಶ್ರೀರಾಮಾಯಣದರ್ಶನಂ, ಪ್ರತಿಪಾದಿಸುವ ತತ್ತ್ವವೇ ಬೇರೆ—

ಕುಬ್ಜೆ ಮಂಥರೆ ಬರಿಯ ಹುಲುನೆವಂ ಮೂಡುವುದೆ
ಲೋಕ ಲಾವಣ್ಯನಿಧಿ ಮಾತೆ ಕೈಕೆಯ ಮನದಿ
ಕುಚರ ಬುದ್ಧಿಯ ಕುರೂಪಂ ? ಪೊಣ್ಮುವುದೆ ವಿಕೃತಿ
ಸೌಂದರ್ಯದಿಂ ? ಚೆಲ್ವಿನಭಿಲಾಷೆ ತಾನೇಗಳುಂ
ಚೆಲ್ವಿಂಗೆ ತಾಯ್. ಧರ್ಮದೇವತಾಕ್ರೌರ್ಯಕ್ಕೆ

**ಕರುಣೆಯಲ್ಲದ ಬೇರೆ ಗುರಿಯಿಹುದೆ ? ಕಿರಿಯತಾಯ್**
**ನಿಯತಿ ಹಸ್ತದೊಳೊಂದು ಕೈದು ತಾಂ. ಕೀರ್ತಿಯುಂ**
**ಮೇಣ್ ಜನಪ್ರೀತಿಯುಂ ತೆತ್ತಾಕೆ ತಾಂ ಧನ್ಯೆ,**
**ದೇವ ಸನ್ಮಾನ್ಯೆ : ಮೆರೆವುದು ತುದಿಯೊಳಾ ಸನ್ನಿ !**

**ಪಾದುಕಾ ಕಿರೀಟಿ. ೫೭೦–೫೭೯**

ಹೀಗೆಯೇ ವಾಲಿಯ ಪ್ರಸಂಗ ಕೂಡ ಇಲ್ಲಿ ಮರುಹುಟ್ಟು ಪಡೆದಿದೆ. ತೊರವೆಯ ರಾಮಾಯಣದಲ್ಲಿ ರಾಮಬಾಣ ಹತಿಯಿಂದ ವಾಲಿ ಗತಾಸುವಾಗಿದ್ದಾನೆ. ಆಗ ಸುಗ್ರೀವನ ಜೊತೆಗೆ ರಾಮನು ಅಲ್ಲಿಗೆ ಬರುತ್ತಾನೆ. ವಾಲಿ ಆತನನ್ನು ಕುರಿತು "ನಮಗೂ ನಿಮಗೂ ಯಾವ ವಿಧವಾದ ವೈರವೂ ಇಲ್ಲ. ರಘುವಂಶದ ರಾಯರನ್ನು ನಾವು ಕೊಂದುದಿಲ್ಲ. ಅವರ ಸ್ತ್ರೀಯರಿಗೆ ನಾವು ಅಳುಪಿದುದಿಲ್ಲ ಮುಂತಾಗಿ ಇದು ನಮ್ಮ ಪ್ರಾರಬ್ಧ ಕರ್ಮವೆಂದನು.'' ಆಗ ರಾಮನು ನೀನು ಬೇರೆಯ ಹೆಣ್ಣಿಗಾಗಿ ಆಶಿಸಿದೆ. ತಮ್ಮನನ್ನು ಊರಹೊರಗೆ ಹಾಕಿದೆ. ನಾದಿನಿಯ ಬಳಕೆಯ ದೋಷವನ್ನು ಮಾಡಿದೆ. ಆದುದರಿಂದ ನೀನು ವಧೆಗೆ ಅರ್ಹ ಎಂದನು. ಆಗ ವಾಲಿ —

**ಇದು ಮಹೀಮಂಡಲದ ಭಾರವ**
**ನೊದೆಯಲಾದ ವಿಲಾಸ ವಿಭವಾ**
**ಸ್ಪದವಲಾ ಮನುಜಾಂಗವಿದು ತಾನಪ್ರಸಿದ್ಧವಲ**
**ಸುದತಿಯೆಂಬುದು ನೆವನು ತಾನಿಂ**
**ತಿದಱಮೇಲೀ ಪರಮದೈವದ**
**ಪದವ ಭಜಿಸಲು ಬೇಕೆನುತ ಕೈಮುಗಿದನಾ ವಾಲಿ ॥**

**ಕಿಷ್ಕಿಂಧಾಕಾಂಡ. ೪-೫೪**

ಎಂದು ಮುಕ್ತಾಯವಾಗುತ್ತದೆ. ಈ ಭಾಗ ಶ್ರೀರಾಮಾಯಣದರ್ಶನಂದಲ್ಲಿ ಹೊಸ ಆಯಾಮವನ್ನು ಪಡೆದು ಕೊಂಡಿದೆ—

ಶ್ರೀರಾಮನು ಮರೆಯಿಂದ ಬಿಟ್ಟ ಬಾಣದಿಂದ ಗತಾಸುವಾದ ವಾಲಿ ರಾಮನನ್ನು ಕುರಿತು "ಧಿಕ್ ನಿನ್ನ ಕಲಿತನಂ ! ಧಿಕ್ ನಿನ್ನ ವೀರಪಾರ್ಥಿವ ಕೀರ್ತಿ" ಎಂದು ನಿಂದಿಸುತ್ತಾನೆ. ಆಗ ರಾಮನು

**"ವಿಧಿಯ ವಿನ್ಯಾಸಮಂ ನಿಂದಿಸಿದೊಡೇಂ ಫಳಂ,**
**ಸುಗ್ರೀವನಗ್ರಜಾ !"**

**ನೀಂ ಸತ್ಯವ್ರತನೆ ದಿಟಂ. ೩೩೩-೩೩೪**

ಎನ್ನುತ್ತಾನೆ. ಆಗ—

**ಕೊಂಕು ನಗೆಯಿಂ ವಾಲಿ :**
**"ನಿನ್ನ ಮಡದಿಯನಸುರನುಯ್ದುದುಂ ವಿಧಿಲೀಲೆ !**
**ನೀನೇಕೆ ಪರಿತಪಿಸುತಿಹೆ ಮತ್ತೆ ?"**

**ನೀಂ ಸತ್ಯವ್ರತನೆ ದಿಟಂ. ೩೩೫-೩೩೭**

ಆಗ ರಾಮನು ಉತ್ತರಿಸಲಾಗದೆ-

> "ನಿನ್ನ ವಿಧಿ
> ನಿನಗೆ. ರಾಕ್ಷಸನ ವಿಧಿ ರಾಕ್ಷಸಗೆ. ನಿನ್ನಂತೆ, ಕೇಳ್
> ಹದಿಬದೆಗಳುಪಿದಸುರನುಂ ಕಡೆಯುನೆಯುದ್ದುವಂ"

ನೀಂ ಸತ್ಯವ್ರತನೆ ದಿಟಂ. ೩೩೮-೩೪೦

ಎನ್ನುತ್ತಾನೆ. ಆಗ ವಾಲಿ ಕಿವಿಮುಚ್ಚಿಕೊಳ್ಳುತ್ತಾನೆ.

ರುಮೆಯು ನನಗೆ ಮಗಳ ಸಮಾನ. ಇದಕ್ಕೆ ತಾರೆ ಸಾಕ್ಷಿ ಎನ್ನುತ್ತಾನೆ. ಹೀಗೆ ವಾದವಿವಾದಗಳು ನಡೆದು ವಾಲಿಯ ತರ್ಕಕ್ಕೆ ರಾಮ ತಲೆ ಬಾಗುತ್ತಾನೆ. ವಾಲಿಯ ಮೆಯ್ಗೆ ಸೋಂಕಿ ಕುಸಿಯುತ್ತಾನೆ. ಮಹಾವೀರ ನನ್ನನ್ನು ಮನ್ನಿಸು. ಬ್ರಹ್ಮವರದ ಬಲೆಗೆ ಸಿಕ್ಕಿ ನಾನು ತಪ್ಪಿದೆ ಎಂದು ರೋದಿಸುತ್ತಾನೆ. ಆಗ ವಾಲಿಯು ನಿನ್ನ ಮಹಾತ್ಯಾಗವನ್ನು, ಧೈರ್ಯವನ್ನು, ಕೇಳಿದ್ದೆ. ಈಗ ಕಣ್ಣಾರೆ ಕಾಣುವ ಪುಣ್ಯ ನನಗೊದಗಿತು. ನೀನು 'ಸತ್ಯವ್ರತನೆ ದಿಟಂ' ಎಂದು ಪ್ರಶಂಸಿಸುತ್ತಾನೆ. ಹೀಗೆ ಗೆದ್ದವನು ಸೋತವನಲ್ಲಿ ಕ್ಷಮೆ ಕೇಳುವುದು. ಸಾಯುವವನು ತನ್ನನ್ನು ಕೊಂದವನನ್ನು ಸ್ತುತಿಸುವುದನ್ನು ಜಗತ್ತಿನ ಸಾಹಿತ್ಯದಲ್ಲಿಯೇ ಕಾಣುವುದು ಕಷ್ಟ. ಇದು ಸಾಮಾನ್ಯ ಓದುಗನ ದೃಷ್ಟಿಯಿಂದಾಯಿತು. ಆದರೆ ಕುವೆಂಪು ಅವರು ವಾಲಿಯ ವಧೆಯ ಸಂದರ್ಭದಲ್ಲಿ ಬೇರೊಂದು ದರ್ಶನವನ್ನು—

> ನಿರ್ಲಕ್ಷಿಸುತೆ ದೈವಮಂ ಪ್ರತಿಭಟಿಸಿ
> ದೈವೀಪರಂಗಳಂ ಶಕ್ತಿಯಂ, ನೆಮ್ಮುತ್ತೆ
> ತನ್ನಹಂಕಾರಮಂ ಸ್ವಬಲಮಂ ಸ್ವಾರ್ಥಮಂ,
> ಚಲದಿಂ ವಿರೋಧಿಸಲ್ ವೈರಭಾವವನಾಂತ
> ಆಸುರೀಸಾಧನೆಯ ದೈವೀವಿಮುಖಮಪ್ಪ
> ಲೌಕಿಕ ಪರಾಕ್ರಮದ ಶಿಕ್ಷಾರಕ್ಷೆಗಿನ್ನಿಹುದೆ,
> ಪೇಳ್, ಕೃಪಾಬಾಣಕ್ಕೆ ಬೆನ್ನಲ್ಲದನ್ಯಲಕ್ಷ್ಯಂ
> ತುದಿಗೆ ?



ನೀಂ ಸತ್ಯವ್ರತನೆ ದಿಟಂ, ೨೬೫-೨೮೧

ಎನ್ನುವಲ್ಲಿ ಕಂಡಿದ್ದಾರೆ. ಈ ಮಾತಿನಿಂದಲಾದರೂ ದೈವೀವಿಮುಖವಾಗಿರುವ ಸಮಾಜ ಇಂದು ಎಚ್ಚೆತ್ತುಕೊಳ್ಳಬೇಕಾಗಿದೆ.

ರಾವಣನ ಪಾತ್ರವನ್ನು ಚಿತ್ರಿಸುವಲ್ಲಿ ಕುವೆಂಪು ಅವರು ಪಾಶ್ಚಾತ್ಯಸಾಹಿತ್ಯದ 'ದುರಂತನಾಯಕ', 'ಪ್ರತಿನಾಯಕ' (Anti Hero) ಕಾವ್ಯತತ್ತ್ವವನ್ನು ಅಳವಡಿಸಿದ್ದಾರೆ. ಖಳನಾಯಕನನ್ನಲ್ಲ. ಕನ್ನಡದಲ್ಲಿಯೂ ಜೈನರಾಮಾಯಣಗಳಲ್ಲಿ ಈ ಅಂಶ ಎದ್ದು ಕಾಣುತ್ತದೆ. ರಾವಣನು ಸಕಲ ಗುಣಸಂಪನ್ನ. ಅವನ ಜೀವಿತದಲ್ಲಿ ನಡೆದ ಏಕೈಕ ಘೋರ ಅಪರಾಧವೆಂದರೆ ಸೀತಾಪಹರಣ. ಅದಕ್ಕೆ ಅನೇಕ ಹಿನ್ನೆಲೆಗಳುಂಟು. ಅದು

ಬೇರೆ ವಿಷಯ, ಪ್ರಸ್ತುತ ತೊರವೆಯ ರಾಮಾಯಣದಲ್ಲಿ ಕೂಡ ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾಗಿ 'ರಾವಣಾನುಕಂಪೆ' ಕಂಡುಬರುತ್ತದೆ. ಆತ ತನ್ನ ಜೀವನದ ಅನೇಕ ಕ್ಷಣಗಳಲ್ಲಿ ತಾನು ಮಾಡಿದ ಅನುಚಿತವರ್ತನೆಯ ಬಗೆಗೆ ಪಶ್ಚಾತ್ತಾಪ ಪಟ್ಟಿದ್ದಾನೆ. ಯುದ್ಧದಲ್ಲಿ ತನ್ನ ಕಡೆಯುವರೆಲ್ಲಾ ಸತ್ತ ಸಂದರ್ಭದಲ್ಲಿ ಅವನು—

ಮಾಣದಾದೆನು ಮಾವನಾಡಿದ
ವಾಣಿಯನು ಕಾಮುಕತನದಿ ತಾ
ಕಾಣದಾದೆನು ಕಲಿವಿಭೀಷಣನುಚಿತ ಭಾಷಿತವ
ಪ್ರಾಣಮಿತ್ರನಲಾ ಪ್ರಹಸ್ತನ
ಲೂಣಯುವ ತಾಳಿದೆನು ಜನನಿಯು
ಜಾಣಕಿಯ ಜಾತ್ಯುತ್ತರವನತಿಗಳೆದೆನಕಟೆಂದ ॥

ಯುದ್ಧಕಾಂಡ ೪೮–೨.

ಅದೇ ರೀತಿ ಮಂಡೋದರಿಯು ರಾವಣನಿಗೆ ಸೀತೆಯನ್ನು ರಾಮನಿಗೆ ಒಪ್ಪಿಸು ವಂತೆ ಹೇಳುತ್ತಾಳೆ. ಆಗ ಆತ—

ಬಲ್ಲೆನೀ ರಘುನಾಥ ಲಕ್ಷ್ಮೀ
ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕೆ ನೆಱಿದ
ಭಲ್ಲುಕರು ಮರ್ಕಟರು ಸುರರೆಂ
ದೆಲ್ಲವೇತಕೆ ಕೇಳು ರಣಮುಖ
ದಲ್ಲಿ ರಾಮನ ಕೂಡುವುದು ಸಂಕಲ್ಪ ತನಗೆಂದ ॥

ಯುದ್ಧಕಾಂಡ ೪೬–೨೨

ಇಂತಹುದೇ ಸಂದರ್ಭ ಶ್ರೀ ರಾಮಾಯಣದರ್ಶನಂನಲ್ಲಿ ಕಂಡುಬರುತ್ತದೆ. ಮಲಿನವಸನನಾಗಿ ಬಂದ ರಾವಣನನ್ನು ಚಂದ್ರನಖಿ ಪ್ರಶ್ನಿಸುತ್ತಾಳೆ. ಅದಕ್ಕೆ ರಾವಣನ ಉತ್ತರ ಹೀಗಿದೆ—

ಪಾಪಿ ; ಪಶ್ಚಾತ್ತಾಪಿ ;
ಬಂದೆನಾಂ ಬಯಸಿ ಪ್ರಾಯಶ್ಚಿತ್ತಮಂ"

ನೀಂ ಮಹಚ್ಚಲ್ಪಿ ದಿಟಂ ೨೪೮–೨೪೯

ಆಗ ಆಕೆ ತಾನೇ ಈ ಅನಾಹುತಕ್ಕೆಲ್ಲ ಕಾರಣ ಎಂದು ಪರಿತಪಿಸುತ್ತಾಳೆ. ನಾನು ಮೊದಲಿನಂತಿಲ್ಲ. ನನ್ನಿಂದಲೇ ನೀನು ಕದ್ದು ಹದಿಬದೆಯನ್ನು ಎಳೆದುತಂದೆ ನಾನು ಲಂಕೆಯನ್ನು ಈ ಗತಿಗೆ ತಂದೆ. ಕುಂಭಕರ್ಣನನ್ನು ಅತಿಕಾಯನನ್ನು ಕೊಂದೆ. ಇಂದ್ರಜಿತು ಮೇಘನಾದಾದಿ ಮಕ್ಕಳನ್ನು ಕೊಂದೆ. ನಾನು ಕಾಲು ಹಿಡಿದು ಬೇಡುತ್ತೇನೆ. ಈ ರಣಮೇಧವನ್ನು ನಿಲ್ಲಿಸು ಎನ್ನುತ್ತಾಳೆ. ಸೀತೆಯನ್ನು ರಾಮನಿಗೆ ಒಪ್ಪಿಸು ಎನ್ನುತ್ತಾಳೆ. ಆಗ ರಾವಣನು ಒಂದು ದಿವ್ಯ ದರ್ಶನವನ್ನು ಕಾಣುತ್ತಾನೆ.

ಆ ದೃಶ್ಯ ಚಂದ್ರನಖಿಗೆ ಹೇಗೆ ಕಾಣಬೇಕು ? ರಾವಣನ ಮಾತುಗಳು ಅದನ್ನು ಹೀಗೆ ವರ್ಣಿಸುತ್ತವೆ—

"ಅಃ ! ನಿನಗೆ
ಕಾಣದಾ ದೃಶ್ಯಮದೊ ! ಏನ್ ದಿವ್ಯಮಾದೃಶ್ಯಂ :
ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ
ಕಂಡರಿಯದಾ ಕಾಣಲಾರದಾ ಕೊಳುಗುಳದಿ
ರಘುಕುಲ ಲಲಾಮನಂ, ಜಗದೇಕವೀರನಂ,
ಗೆಲ್ದು, ಸೆರೆಯೊಳ್ ಮಾಡಿ ತಂದು, ಲಂಕೇಶ್ವರನ
ಸರ್ವಗರ್ವವನಿರದೆ ಸೋಲಿಸಿದ ಮೈಥಿಲಿಗೆ
ಕಪ್ಪಮೆನೆ ಕಾಣಿಕೆಯನೊಪ್ಪಿಸುವ ಭವ್ಯತಾ
ದಿವ್ಯದೃಶ್ಯಂ !"

ನೀಂ ಮಹಚ್ಛಿಲ್ಪಿ ದಿಟಂ ೩೩೦—೩೩೮

ಕುವೆಂಪು ಅವರ 'ಪಾಪಿಗೂ ಉದ್ಧಾರವಿದೆ' ಎನ್ನುವ ಮೂಲಸೂತ್ರ ಈ ಎಲ್ಲ ಘಟನೆಗಳಲ್ಲಿಯೂ ಹಾಸುಹೊಕ್ಕಾಗಿರುವುದನ್ನು ನಾವು ಕಾಣಬಹುದು.

ಕಬಂಧನ ವಧೆಯಾದ ಮೇಲೆ ರಾಮಲಕ್ಷ್ಮಣರು ಶಬರಿಯನ್ನು ಭೇಟಿಯಾಗುತ್ತಾರೆ. ಆಕೆಯಾದರೋ ಮತಂಗಮುನಿಯ ಆದೇಶದಂತೆ ಹತ್ತಾರು ವರ್ಷಗಳ ಕಾಲ ರಾಮನನ್ನು ನಿರೀಕ್ಷಿಸುತ್ತಿರುತ್ತಾಳೆ. ವಾಲ್ಮೀಕಿ ರಾಮಾಯಣದಲ್ಲಿ ಶಬರಿ ರಾಮನನ್ನು ಕಂಡು ಪಾದ್ಯವನ್ನೂ ಆಚಮನೀಯವನ್ನೂ ವಿಧಿಪೂರ್ವಕವಾಗಿ ನೀಡುತ್ತಾಳೆ. ಪರಸ್ಪರ ಕುಶಲ ಸಮಾಚಾರವಾದ ಅನಂತರ ಆಕೆ ಪಂಪಾತೀರದಲ್ಲಿ ಬೆಳೆದ ವಿಧವಿಧವಾದ ಫಲ ಮೂಲಾದಿಗಳನ್ನು ತಂದಿಟ್ಟಿರುವೆನು ಎಂದಳು. ಮುಂದೆ ರಾಮನಪೇಕ್ಷೆಯಂತೆ ಮತಂಗ ಆಶ್ರಮವನ್ನು ತೋರಿಸಿ ಅಗ್ನಿಯಲ್ಲಿ ಶರೀರವನ್ನು ಸಮರ್ಪಿಸಿ ಸ್ವರ್ಗಕ್ಕೆ ತೆರಳಿದಳು,

ಈ ಪ್ರಸಂಗ ತೊರವೆ ರಾಮಾಯಣದಲ್ಲಿಯೂ ಬಂದಿದೆ. ರಾಮಲಕ್ಷ್ಮಣರು ಮುಪ್ಪಿನಲಿ ಲಂಬಿಸಿರ್ದ ಶಬರಿಯನ್ನು ಸಮೀಪಿಸಿದರು, ಶಬರಿ ಅವರನ್ನು ಎದ್ದು ಸತ್ಕರಿಸಿ ನವವಿಧಭಕ್ತಿಯಿಂದ ಆರಾಧಿಸಿದಳು.

ಅನಂತರ ಕಬಂಧನಿಂದ ಅವರು ಬಂದ ಸಮಾಚಾರವನ್ನು ತಿಳಿದು ರಾಮಲಕ್ಷ್ಮಣರಿಗೆ ಮಾರ್ಗದರ್ಶನ ಮಾಡಿ—

ಮನದ ಬಗೆ ಕೈಗೂಡುವುದು ರಿಪು
ಹನನ ನೆಜೆಸಿದ್ಧಿಪುದು ನಿಮ್ಮಯ
ವನಿತೆ ನಿಮಗಹಳೊಲಿವಳಲ್ಲಿಂ ಮೇಲೆ ಭೂವನಿತೆ
ವಿನುತ ಕೀರ್ತ್ಯಾಂಗನೆ ಜಯಾಂಗನೆ
ಜನಪಚಿತ್ರೈಸೆಂದು ಮಾಯಾ
ಮನುಜನನು ಬೀಳ್ಕೊಟ್ಟು ಬಿಜಯಂಗೈದಳಜಪುರಿಗೆ

ಅರಣ್ಯಕಾಂಡ ೧೨—೨೯.

ರಾಮಲಕ್ಷ್ಮಣರು ಅಲ್ಲಿಂದ ಪಂಪಾಕ್ಷೇತ್ರ ಮಂಡಲಕ್ಕೆ ಬಂದರು ಎಂದು ಮುಕ್ತಾಯವಾಗುತ್ತದೆ.

'ಶ್ರೀ ರಾಮಾಯಣದರ್ಶನಂ'ನಲ್ಲಿ ಶಬರಿಯ ಪ್ರಸಂಗ ಅದ್ಭುತವಾಗಿದೆ. ಪ್ರಾರ್ಥನೆಯ ಶಕ್ತಿಯನ್ನು, ತಪಸ್ಸಿನ ಶಕ್ತಿಯನ್ನು ಈ ಪ್ರಸಂಗ ಪ್ರತಿಮಿಸುತ್ತದೆ. ಭಗವಂತನನ್ನು ನಾವು ನಿರೀಕ್ಷಿಸುವುದು ಒಂದು ತರಹವಾದರೆ ಅವನ ದರ್ಶನ ಬೇರೆಯ ರೀತಿಯಲ್ಲಿ ಆಗುತ್ತದೆ. ಈ ದರ್ಶನವನ್ನು ಕುವೆಂಪು ಅವರು—

**ಭಗವದಾಗಮನವೇಂ**
**ಭಕ್ತನ ನಿರೀಕ್ಷಿಸಿದ ರೂಪದಿಂ ಬಂದಪುದೆ ?**
**ಸುಖದವೋಲಾಶಿಸಲ್ ದುಃಖದೊಲ್ ಮೈದೋರಿ.**
**ಭಕ್ತನನಿತುಂ ಸುಲಿದು ನೈವೇದ್ಯಮಂ ಕೊಳದೆ**
**ಪೇಳ್ ಅಹಂಕಾರಮುಂ ದಿವ್ಯಶೂನ್ಯತೆಗದ್ದುವೊರ್**
**ಸಂಪೂರ್ಣತಾ ಸಿದ್ಧಿಯೊಲ್ !**

**ಶಬರಿಗಾದನು ಅತಿಥಿ ದಾಶರಥಿ ೧೬೪–೧೯೯**

ಸೀತೆಯೊಡನೆ, ಸುಹಾಸಮೂರ್ತಿಯಾದ ರಾಮನನ್ನು ಕಾಣಲು ಶಬರಿ ಕಾತರಿಸಿದ್ದರೆ ದುಃಸ್ಥಿತಿಯ ವೇಷದಲ್ಲಿರುವ ರಾಮನನ್ನು ಕಾಣುತ್ತಾಳೆ ಆಕೆ. ಲಕ್ಷ್ಮಣ ಮತ್ತು ಶಬರಿಗೆ ನಡೆಯುವ ಸಂಭಾಷಣೆ ತುಂಬ ಮಾರ್ಮಿಕವಾಗಿದೆ. ಯಾರು ರಾಮನ ಸೇವೆಗಾಗಿ—

**ನೀನೆಂದಿಗೆ ಬರುವೆಯಯ್ಯ, ಓ ನನ್ನಯ್ಯ,**
**ಕಂದಯ್ಯ, ರಾಮಚಂದ್ರಯ್ಯ ?** ಶಬರಿಗಾದನು ಅತಿಥಿ ದಾಶರಥಿ ೧೧೬–೧೧೭

ಎಂದು ಕಾಯುತ್ತಿರುವಳೋ, ಆಕೆ ಅದೇ ರಾಮಲಕ್ಷ್ಮಣರು ಬಂದು ಆಕೆಯ ಮುಂದೆ ನಿಂತಿದ್ದಾರೆ. ಲಕ್ಷ್ಮಣನು—

**"ದಣಿದು ಬಂದಿಹೆವಜ್ಜಿ ;**
**ಬಿಸಿಲಳುರುತಿದೆ ; ಗುಡಿಸಲೊಳಗಿನಿತು ತಾವಿತ್ತು,**
**ತಿನಲಿತ್ತು ಕರುಣಿಸೈ ನಿನ್ನ ಈ ಪರದೇಶಿ**
**ಕಂದರಂ ಚಿರಋಣಿಗಳಂ !"**

**ಶಬರಿಗಾದನು ಅತಿಥಿ ದಾಶರಥಿ ೧೮೯-೧೮೨**

ಎನ್ನುತ್ತಾನೆ. ಆಗ ಶಬರಿ ಕೊಡುವ ಉತ್ತರವಾದರೂ ಏನು ?—

**"ಕಂಡವರ್ಗೆಲ್ಲ,**
**ಬರ್ಪ ಬೇಡರ್ಗೆಲ್ಲಮುಣಿಸಿತ್ತು, ಬೀಡಿತ್ತು,**
**ಮೆಲ್ವಾಸನೀಯೆ ನಾನೇನು ಅಡಂಗೂಳಜ್ಜಿ**
**ಅಲ್ಲ ಕಾಣಯ್ಯ !" ಇಂತು ನಿಷ್ಠುರವೆಂದೊಡಂ**
**"ಬಡವಳಿದ್ದುದನೀವೆ : ಬನ್ನಿಂ !" ಎನುತ್ತಾ ಅಜ್ಜಿ**
**ನಡೆದವಳೊಳಯಿಂಕೆ.** **ಶಬರಿಗಾದನು ಅತಿಥಿ ದಾಶರಥಿ ೧೮೩–೧೮೯**

ಶಬರಿಯ ಆಶ್ರಮದಲ್ಲಿ ರಾಮನು ಆರೋಗ್ಯ ತಪ್ಪುತ್ತಾನೆ. ಆಗ ಶಬರಿ

'ನಿನ್ನಣ್ಣನುಸಿರಿಗಾಂ ಹೊಣೆಗಾರ್ತಿ' ಎಂದು ಲಕ್ಷ್ಮಣನಿಗೆ ಭರವಸೆ ಕೊಡುತ್ತಾಳೆ. ಅನಂತರ

ತನ್ನ ಮೋಕ್ಷಕ್ಕೆ
ತನ್ನ ದೇವತೆಯಂ ಪ್ರದಕ್ಷಿಣಾಪೂರ್ವಕಂ
ಪ್ರಾರ್ಥಿಸುವಳೆಂಬಂತೆ ಮಂತ್ರಘೋಷಂಗೈದು
ಕೈಮುಗಿದಳಡ್ಡ ಬಿದ್ದಳ್ ರಾಮಸಂಘ್ರಿಯಂ
ಮುಟ್ಟಿ ಲಕ್ಷ್ಮಣನೆಡೆಗೆ ತಿರುಗಿದಳ್. ಬೆರಗಾಗಿ
ನೋಡುತಿದ್ದಾತಂಗೆ ನುಡಿದಳ್ ನಗುತೆ : "ವತ್ಸ,
ರಾಮನಿನ್ ಸುಕ್ಷೇಮನಯ್ ! ಪತ್ತುವಿಡು ನಿನ್ನ
ದುಃಖಮಂ !"

ಶಬರಿಗಾದನು ಅತಿಥಿ ದಾಶರಥಿ ೩೪೨–೩೪೯.

ಬೆಳಗಾಗುತ್ತಲೇ ರಾಮನು ಆರೋಗ್ಯವಂತನಾಗುತ್ತಾನೆ. ಶಬರಿ ಕಾಯಿಲೆ ಬಿದ್ದು ಸಾವನ್ನಪ್ಪುತ್ತಾಳೆ—

ದೇವ ಸೀತಾನಾಥ ದಿವ್ಯಾಶ್ರು ತೀರ್ಥಜಲ
ಸಂಸ್ನಾತೆ, ಸಂಪೂತೆ, ಮೇಣ್ ಶಿವಕಳೇಬರೆ ಧನ್ಯೆ !

ಶಬರಿಗಾದನು ಅತಿಥಿ ದಾಶರಥಿ ೩೮೫-೩೮೬

ಎಂದು ಮುಕ್ತಾಯ ಮಾಡುತ್ತಾರೆ. ಈ ಮುಕ್ತಾಯಕ್ಕೆ ಶ್ರೀ ಅರವಿಂದರ ಸಾವಿತ್ರಿಯ —

"He who has found his identity with God
Pays with the body's death his soul's vast light
His knowledge immortal triumphs by his death."

ಎನ್ನುವ ಮಾತು ಸಮರ್ಥನೆಯನ್ನು ನೀಡುತ್ತದೆ.

ಕಡೆಯದಾಗಿ ಶ್ರೀರಾಮನನ್ನು ಕುರಿತು ನೋಡೋಣ. ತೊರವೆಯ ರಾಮಾಯಣದಲ್ಲಿ—

... ಫಣಿ
ರಾಯ ಲಕ್ಷ್ಮಣನಾಗಿ ಜನಿಸಿದನಿಂದಿರಾವನಿತೆ
ರಾಯಜನಕನ ಮಗಳೆನಿಸಿ ವಸು
ಧಾಯುವತಿಯಿಂದುದಿಸಿದಳು ನಾ
ರಾಯಣನು ರೂಪಿಸಿದನನುಪಮ ರಾಮನಾಮದಲಿ ಬಾಲಕಾಂಡ ೮-೭೧.

ಹೀಗೆಯೇ ಮುಂದುವರಿದು ನರಹರಿ—

ಇದು ಕಣಾ ಜಗದೀಶ್ವರನ ಜನ
ನದ ಜಗದ್ವ್ಯಾಪಾರ ಜವನಿಕೆ
ಯುದಿಸಿ ತೋಱಿದನೆಂಬುದು ಮಿಥ್ಯಾಪ್ರಪಂಚವಲೆ

ತುದಿ ಮೊದಲು ನಡುವೆಂಬ ಲಯದ
ಭ್ಯುದಯವೆಂಬ ವಿಕಾರಗಳು ಸೋಂ
ಕದ ಸನಾಥನಿಗಾಯ್ತು ಲೀಲೆ ಮನುಷ್ಯರೂಪಿನಲಿ ॥ ಬಾಲಕಾಂಡ ೮-೭೨

ಎಂದಿದ್ದಾನೆ. ಕುವೆಂಪು ಅವರೂ ಸಹ ರಾಮನನ್ನು ಅಪ್ರಾಕೃತನೆಂದು ಒಪ್ಪಿದ್ದಾರೆ—

ಲಕ್ಷ್ಮಿಯೆ ಸೀತೆ
ರಾವಣವಧಾರ್ಥಮಿಾ ನರತನುವನಾಶ್ರಯಿಸಿ
ಬಂದ ಲೀಲಾವತಾರಿಯೆ, ದಶರಥಾತ್ಮಜನೆ,
ಪುರುಷೋತ್ತಮನೆ, ನಮೋ ! ಪುರುಷಸಿಂಹನೆ, ನಮೋ !
ರಯ್‌ಗೆ ಕರೆದೊಯ್, ಓ ಅಗ್ನಿ ! ೫೫೫-೫೫೮.

ಎಂದಿದ್ದಾರೆ. ಇಂತಹ ರಾಮನು ಜನಿಸಿ ಧರೆಗೆ ಕಾಣಿಸಿಕೊಂಡುದು ವಿಶೇಷ ಸಂದರ್ಭದಲ್ಲಿ ಎನ್ನುವುದು ಗಮನಾರ್ಹ. ಮಕ್ಕಳಿಲ್ಲದ ದಶರಥ ಪುತ್ರಪುತ್ರಕಾಮೇಷ್ಟಿಯನ್ನು ನಡೆಸಿ ಅಲ್ಲಿ ಮೂಡಿ ಬಂದ ಯಜ್ಞಪುರುಷನಿಂದ ಬಂದ ಪಾಯಸವನ್ನು ಮಡದಿಯರಿಗೆ ಕೊಟ್ಟು ಮಕ್ಕಳಾದ ರಾಮ ಲಕ್ಷ್ಮಣ ಭರತ ಶತ್ರುಘ್ನರನ್ನು ಪಡೆದನು. ಆ ಸಂದರ್ಭವನ್ನು ಕುರಿತಂತೆ ಕುವೆಂಪು ಅವರು

"ಜನಮನದ ಶಕ್ತಿ
ಮೇಣವರಭೀಪ್ಸೆಯೆ ಮಹಾತ್ಮರಂ ನಮ್ಮಳೆಗೆ
ತಪ್ಪದೆಳೆತರ್ಪುದು ಕಣಾ !" ಕವಿಕ್ರತು ದರ್ಶನಂ ೨೬೧-೨೬೩

ಎಂದಿದ್ದಾರೆ. ಹೀಗೆ 'ನರತನುವನಾಶ್ರಯಿಸಿ, ಹುಟ್ಟಿದ ಮಗುವಿಗೆ ಆರೋಗ್ಯ ತಪ್ಪುತ್ತದೆ—

ಒರ್ಮೆ ಆ ಹೂಹಗುರ ಶಿಶುವಿದ್ದಕಿದ್ದಂತೆ
ಗಿರಿಭಾರಮಾಗಿ ಬರೆ, ನೆಗಹಲಾರದೆ ತಾಯಿ
ತೇಂಕಿದಳು, ಕಾತರಿಸಿ ಮಗನಭ್ಯುದಯ ಶಂಕೆಯಿಂ
ಮತ್ತೊರ್ಮೆ ಪಚ್ಚೆದೊಟ್ಟಿಲ್ ಬಿಂಬದಲಿ ತನ್ನ
ಮುದ್ದು ಕಂದಗೆ ಬದಲ್ ಕಾಣಿಸೆ ಮಹಾಮೂರ್ತಿ
ಕೂಗಿಕೊಂಡಳು ದುಷ್ಟಕುಗ್ರಹ ಚೇಷ್ಟೆಯೆಂದಳ್ಕಿ ಕವಿಕ್ರತುದರ್ಶನಂ-೪೬೧-೪೬೬

ಗುರುವಸಿಷ್ಠರು ಬಂದು ಸಂತೈಸಿದ ಮೇಲೆಯೇ ಕೌಸಲ್ಯೆಗೆ ಸಮಾಧಾನ. ಹೀಗೆ ಬೆಳೆದ ರಾಮನು ಸೀತೆಯನ್ನು ಕಳೆದುಕೊಂಡಿದ್ದಾನೆ. ಅವನ ಆ ಪರಿಸ್ಥಿತಿಯನ್ನು ಹನುಮಂತ ಸೀತೆಗೆ ಹೀಗೆ ವರ್ಣಿಸುತ್ತಾನೆ—

ನಿನ್ನಗಲಿದ ರಾಮನನ್ನಮಂ ಮರೆತಿಹನ್ ;
ನೀನಲ್ಲದನ್ನ ಜೀವಿತಮಿಲ್ಲಮಾತಂಗೆ

* * *

ನಿನಗಾಗಿ
ರಾಮನಿಂದು ತಪಸ್ವಿ : ಮುಟ್ಟನಾ ಪಾರ್ಥಿವಂ
ಮದ್ಯಮಾಂಸಗಳಂ. ಕಂದ ಮೂಲಂಗಳಂ
ಪಣ್ಪಲಂಗಳನುಂಡು ಬರ್ದುಕಿಹನ್. ಧ್ಯಾನದೊಳ್
ಪೊಳ್ತುಗಳೆವನ್. ಶಕ್ತಿಯಾರ್ಜನೆಯ ಯೋಗದೊಳ್
ಮುಳುಗಿರ್ಪನಾ ಪ್ರತಿಜ್ಞಾ ಭೀಷ್ಮ ತೇಜಸ್ವಿ ! ಅಶ್ರುಗಂಗೋತ್ರಿ, ೩೭೯-೩೮೪

ಹೀಗೆ ಸೀತೆಗಾಗಿ ಪರಿತಪಿಸುವ ರಾಮ ರಾವಣವಧಾನಂತರ ಸೀತೆಯನ್ನು ನಡೆಸಿಕೊಳ್ಳುವ ರೀತಿ ವಾಲ್ಮೀಕಿ ರಾಮಾಯಣದಲ್ಲಾಗಲಿ, ಅದನ್ನು ಅನುಸರಿಸಿದ ತೊರವೆ ರಾಮಾಯಣದಲ್ಲಾಗಲಿ ಸಮರ್ಥನೀಯವಾಗುವುದಿಲ್ಲ. ವರ್ಷಕಾಲ ರಾವಣನ ಸೆರೆಯಲ್ಲಿದ್ದ ಅವಳ ಶೀಲಪರೀಕ್ಷೆ ಎನ್ನುವುದು ಒಂದು ಹುಲು ನೆಪವಾಗುತ್ತದೆ. ಜನ ಮೆಚ್ಚುಗೆಗಾಗಿ, ಲೋಕಾಪವಾದವನ್ನು ತಪ್ಪಿಸುವುದಕ್ಕಾಗಿ, ರಾಜನ ಕರ್ತವ್ಯದ ನಿಷ್ಠುರತೆಗಾಗಿ ಆ ಸಂದರ್ಭದಲ್ಲಿ ಸೀತೆಯ ಅಗ್ನಿಪರೀಕ್ಷೆಯಾಗುತ್ತದೆ. ಇಷ್ಟಾದರೂ ಮಬ್ಬಿಂದೆ ಅಗಸನಿಂದ ಅಪವಾದ ಸೀತೆಗೆ ತಪ್ಪಲಿಲ್ಲ ಎನ್ನುವುದನ್ನು ನಾವು ಮರೆಯುವಂತಿಲ್ಲ. ಆದರೆ ಶ್ರೀ ರಾಮಾಯಣದರ್ಶನಂನಲ್ಲಿ ಈ ಪ್ರಸಂಗ ಅತ್ಯಂತ ಸಮರ್ಥವಾಗಿ ರೋಚಕವಾಗಿ ಮೂಡಿಬಂದಿದೆ. ಸೀತೆ ಅಗ್ನಿಪ್ರವೇಶಕ್ಕೆ ಸಿದ್ಧಳಾಗುತ್ತಿದ್ದಂತೆಯೇ—

ಓ ಓ ಓ
ಹೋಯೆಂದು ಹರಿದು ಹಬ್ಬಿದುದಹಾ ರೋದನಂ
ರೋದೋಂತಮಂ !
ನಿಷ್ಠುರ ಶಿಲಾಮೂರ್ತಿಯನೆ
ನಿಷ್ಪಂದನಾಗಿ ನಿಂದನಿತುಮಂ ಸಾಕ್ಷಿಯೊಲ್
ನಿಟ್ಟಿಸುತಿರ್ದ ರಾಮಾನನಂ ತಾನಾಯ್ತು
ದೀಪ್ತಮಾನಂ. ಚಲಿಸಿದನು ಚಿತೆಗೆ. ನೋಳ್ಪರಾ
ವಿಸ್ಮಯಂ ಚಿಂತೆಗೆ ತಿರುಗುವಂತೆ. ಓವೋವೋ
ಎಂಬನಿತರೊಳೆ ತಾಂ ಪ್ರವೇಶಿಸುತ್ತೆಜ್ವಲಿಪ
ಗೋಪುರೋಪಮದಗ್ನಿ ಮಧ್ಯೆ ಮರೆಯಾದನೈ
ಜಮದಗ್ನಿ ಜಾತನಂ ಜಯಿಸಿದಾತನುಂ !



ರಯ್‌ಗೆ ಕರೆದೊಯ್, ಓ ಅಗ್ನಿ ! ೫೮೯–೫೯೮

ಹೀಗೆ ರಾಮನು ದೇವರಾಗಿ ಜನಿಸಿದುದಕ್ಕಿಂತ ಮಾನವನಾಗಿ ದೇವತ್ವಕ್ಕೇರಿದುದನ್ನು ಶ್ರೀ ರಾಮಾಯಣದರ್ಶನಂನಲ್ಲಿ ನಾವು ಕಾಣುತ್ತೇವೆ.

ಇದುವರೆಗೆ ವಾಲ್ಮೀಕಿ ರಾಮಾಯಣದ ಹಿನ್ನೆಲೆಯಲ್ಲಿ ತೊರವೆ ರಾಮಾಯಣ ಮತ್ತು ಶ್ರೀ ರಾಮಾಯಣದರ್ಶನಂಗಳ ತುಲನಾತ್ಮಕ ಅಧ್ಯಯನ ಸ್ಥೂಲವಾಗಿ ನಡೆದಿದೆ. ಈ ಅಧ್ಯಯನ ಕಾಲಕ್ರಮದಲ್ಲಿ ರಾಮಾಯಣದ ಬೆಳವಣಿಗೆ ಹೇಗೆ ಆಗಿದೆ ಎಂಬುದನ್ನು ಸೂಚಿಸುತ್ತದೆ. ಹೀಗೆಯೇ ಈ ಎರಡೂ ಕೃತಿಗಳ ಪ್ರಕೃತಿ ಭಾವ ಭಾಷೆ ಛಂದಸ್ಸು ಅಲಂಕಾರ ಮತ್ತು ಪ್ರತಿಪಾದಿತ ಸಿದ್ಧಾಂತಗಳ ಬಗ್ಗೆ ಅಧ್ಯಯನದ ಸಾಧ್ಯತೆಗಳಿವೆ. ಪ್ರಸ್ತುತ ತೊರವೆ ರಾಮಾಯಣಕ್ಕೆ ಕರ್ನಾಟಕದಾದ್ಯಂತ ಇರುವ ಜನಪ್ರಿಯತೆಯನ್ನು ಒಪ್ಪಿಕೊಳ್ಳಬಹುದಾಗಿದೆ. ಶ್ರೀ ರಾಮಾಯಣದರ್ಶನಂ ಸರ್ವರಿಗು ಸಮಪಾಲು ಸರ್ವರಿಗು ಸಮಬಾಳು ಎನ್ನುವ ಸರ್ವೋದಯ ತತ್ತ್ವವನ್ನು ಪ್ರತಿಪಾದಿಸಿದ ಎಲ್ಲ ಕಾಲಕ್ಕೂ ಉಳಿಯುವ ಮಹತ್ತ್ವಪೂರ್ಣ ಕೃತಿಯಾಗಿದೆ.

ಜಿ. ಜಿ. ಮಂಜುನಾಥನ್

## ಶ್ರೀ ರಾಮಾಯಣದರ್ಶನಂ — ತಮಿಳು ರಾಮಾಯಣಗಳು

ವಾಲ್ಮೀಕಿ ಮಹರ್ಷಿ ಪ್ರಣೀತವಾದ ಶ್ರೀಮದ್ರಾಮಾಯಣವು ಆದಿಕಾವ್ಯವೆನಿಸಿ ಭಾರತೀಯ ಸಂಸ್ಕೃತಿಯ ದ್ಯೋತಕವಾಗಿ ಬೆಳಗುತ್ತಾ ಪರಮ ಸುಂದರವೂ, ಪರಮ ಮಂಗಳಕರವೂ ಆದ ಗ್ರಂಥವೆಂದು ಜಗತ್ಪ್ರಸಿದ್ಧವಾಗಿದೆ. 24000 ಶ್ಲೋಕಗಳಿಂದ ಕೂಡಿರುವ ಈ ಕೃತಿ ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ಸರಳವಾದ, ಸುಮನೋಹರ ವಾದ ಶೈಲಿಯಲ್ಲಿ ಹೃದಯಂಗಮವಾಗಿ ರಚಿಸಲ್ಪಟ್ಟಿದೆ. ಸಾವಿರಾರು ವರ್ಷಗಳಿಂದ ಜನರು ಈ ಸರ್ವಶ್ರುತಿ ಮನೋಹರವಾದ ಕಾವ್ಯವನ್ನು ಕೇಳುತ್ತ, ಹಾಡುತ್ತ, ಅಭಿ ನಯಿಸುತ್ತ ಬಂದಿದ್ದಾರೆ. ಆದರೆ ಹೇಳಿದಷ್ಟೂ, ಮತ್ತೆ ಮತ್ತೆ ಹೇಳಬೇಕು, ಕೇಳ ಬೇಕು ಎನಿಸುವಂತಿರುವ ಈ ಕಾವ್ಯ ನಿತ್ಯನೂತನವಾಗಿದೆ. ಭರತಖಂಡದ ಹೊರಗೂ ವಿಸ್ತಾರವಾಗಿದೆ.

**ಯಾವತ್ ಸ್ಥಾಸ್ಯನ್ತಿ ಗಿರಯಃ ಸರಿತಶ್ಚ ಮಹೀತಲೇ ।**
**ತಾವದ್ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ ॥**

ಎಲ್ಲಿಯವರೆಗೆ ಪರ್ವತಗಳೂ ನದಿಗಳೂ ಭೂಮಿಯ ಮೇಲೆ ಇರುವುವೋ ಅಲ್ಲಿಯವರೆಗೆ ರಾಮಾಯಣ ಕಥೆಯು ಲೋಕಗಳಲ್ಲಿ ಪ್ರಚಾರವಾಗುತ್ತದೆ. ಇದು ವಾಲ್ಮೀಕಿಗೆ ಬ್ರಹ್ಮನು ಹೇಳಿದಮಾತು.

'ಕಾವ್ಯಂ ರಾಮಾಯಣಂ' ಇತ್ಯಾದಿ ವಚನಗಳಿಂದ ಇದು ಕಾವ್ಯವೆಂದೂ, ಪಠನ, ಶ್ರವಣ ಅಥವಾ ಸ್ಮರಣ ಮಾತ್ರದಿಂದಲೇ ಎಲ್ಲ ಪಾಪವನ್ನೂ ದೂರಮಾಡಿ ಸನ್ಮಂಗಳವನ್ನು ಕೊಡತಕ್ಕದ್ದೆಂದೂ ಭಾವಿಸಲ್ಪಟ್ಟಿದೆ. 'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂಬಂತೆ ನಮ್ಮ ಹೃದಯದಲ್ಲಿ ಇಷ್ಟವೆನಿಸುವ ಅನುಭವವನ್ನು ಉಂಟು ಮಾಡಿಸಬಲ್ಲ, ನಮ್ಮ ಎದೆಯನ್ನು ತಳಮಳಗೊಳಿಸುವ ವಾಕ್ಯ ಸಮುದಾಯವು ಕಾವ್ಯ. ಅದನ್ನು ಕೇಳಿದಾಗ, ಓದಿದಾಗ ಒಂದು ಕನಿಕರದ, ರೋಷದ, ಆಶ್ಚರ್ಯದ ಅಥವಾ ಸಂತೋಷಾತಿಶಯದ ಕೂಗು ನಮ್ಮ ಎದೆಯೊಳಗಿಂದ ಹೊರಡುವಂತೆ ಮಾಡುವ ಅನುಭವವೇ ರಸ. ಮನುಷ್ಯನ ಚಿಂತೆ, ಸಂತೋಷಗಳು ಮಾತಾಗಿ ಉಕ್ಕಿ ಹರಿದದ್ದೇ ಕಾವ್ಯ. ರಸವೆಂಬುದೇ ಕಾವ್ಯಸಾರವೆಂದು ಎಲ್ಲರಿಂದ ಅಂಗೀಕೃತವಾಗಿದೆ, ವೇದದಲ್ಲಿ ಪರಮಾತ್ಮನೇ ರಸ (ರಸೋವೈಸಃ) ರಸಾನುಭವದಿಂದ ಆನಂದ ಉಂಟಾಗುತ್ತದೆ.

**ರಸೈಃ ಶೃಂಗಾರ ಕರುಣ ಹಾಸ್ಯ ರೌದ್ರ ಭಯಾನಕೈಃ**
**ವೀರಾದಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಂ**

ಎಂದು ತನ್ನ ಕಾವ್ಯದ ಮೇಲ್ಮೆಯನ್ನು ವಾಲ್ಮೀಕಿಯು ಸೂಚಿಸಿರುವುದು ರಸ ಶಬ್ದ

ದಿಂದ ಗಾನರಸವು ಕಿವಿಗೆ, ರೂಪಲಾವಣ್ಯವು ಕಣ್ಣಿಗೆ, ಪಾಕರಸವು ನಾಲಿಗೆಗೆ ಹೇಗೋ ಹಾಗೆ ಕಾವ್ಯರಸವು ಮನಸ್ಸಿಗೆ ಆನಂದಕಾರಿ ಮತ್ತು ವಿಶೇಷವಾಗಿ ಜೀವನವನ್ನು ಪರಿಷ್ಕರಿಸುತ್ತದೆ. ರಾಮಾಯಣದ ಮನೋಹರವಾದ ಕಥೆಯನ್ನೂ, ಅದರ ಸಂಗತಿಗಳನ್ನೂ ನಮ್ಮ ಅಂತರಂಗದಲ್ಲಿ ಅನುಭವಿಸಿದಾಗ ಸದ್ಭಾವ ಪ್ರವಾಹ ಉಂಟಾಗಿ ನಮಗೆ ಸಾವಾಗಿ ವಿವೇಕ ಮಾಡಿಕೊಳ್ಳುವಂತಾಗುತ್ತದೆ. ಈ ಕಾವ್ಯವು ಹೃದಯ ಸಂಸ್ಕಾರ ಹಾಗೂ ಮನೋರಂಜನೆಯ ಸಾಮಗ್ರಿಯಾಗಿರುವುದರಿಂದ ಮಹಾ ಕಾವ್ಯವಾಗಿದೆ.

ಭಗವಂತನು ತನ್ನ ಪ್ರಜೆಗಳಾಗಿದ್ದೂ ಸಂಸಾರದಲ್ಲಿ ಬಿದ್ದು ತೊಳಲುತ್ತಿರುವ ಮಾನವರನ್ನು ಉದ್ಧರಿಸಲು ಇಲ್ಲಿಗೆ ಬಂದು ಅನೇಕ ರೂಪಗಳಿಂದ ಅವತರಿಸುತ್ತಾನೆಂಬುದು ಒಂದು ಅದ್ಭುತವಾದ ಸಿದ್ಧಾಂತ. ಹೀಗೆ ಅವನು ಎತ್ತಿದ ಅವತಾರಗಳಲ್ಲಿ ಶ್ರೀರಾಮ ಮತ್ತು ಕೃಷ್ಣಾವತಾರಗಳೇ ಹೆಚ್ಚು ಜನಾದರಣೀಯವಾದುವು.

ಶ್ರೀರಾಮಚಂದ್ರನು ಮರ್ಯಾದಾಪುರುಷೋತ್ತಮನೆನಿಸಿಕೊಂಡು, ಲೋಕಕ್ಕೆಲ್ಲಾ ಉಚ್ಚವಾದ ಆದರ್ಶವನ್ನು ತೋರಿಸಿಕೊಟ್ಟನು. ಅವನನ್ನು ದೇವರೆಂದೋ, ಮನುಷ್ಯನೆಂದೋ, ಕ್ಷತ್ರಿಯನೆಂದೋ, ಮಗನೆಂದೋ, ಅಣ್ಣನೆಂದೋ, ಗುರುವೆಂದೋ, ರಾಜನೆಂದೋ, ಪ್ರಜೆಯೆಂದೋ, ಪತಿಯೆಂದೋ, ಮಿತ್ರನೆಂದೋ, ಹೇಗೆ ಭಾವಿಸಿದರೂ ಆತನು ಆದರ್ಶ ಪುರುಷ. ತನ್ನ ನಡತೆ ಮತ್ತು ಶುಭ ಗುಣಗಳಿಂದ ನಮ್ಮ ಮನಸ್ಸನ್ನು ಕರಗಿಸಿ ನೀರಾಗಿ ಹರಿಸಿಬಿಡಬಲ್ಲನು. ಶ್ರೀರಾಮಾಯಣದಲ್ಲಿ ಬರತಕ್ಕ ಇತರ ಪಾತ್ರಗಳ ಗುಣಚೇಷ್ಟಿತಗಳೂಸಹ, ಹಾಗೆಯೇ ಪರಸ್ಪರ ಅನುರೂಪವಾಗಿಯೂ, ಅತ್ಯದ್ಭುತವಾಗಿಯೂ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತದೆ. ಆದುದರಿಂದ ಇಂತಹ ಶ್ರೇಷ್ಠಪಾತ್ರಗಳ ದಿವ್ಯವೈಭವವನ್ನು ವರ್ಣಿಸುವ ಈ ಗ್ರಂಥದ ವೈಭವ, ಪ್ರಭಾವಗಳು ಅಸಾಧಾರಣವಾದುವು. ಇದನ್ನೇ ಮಹಾಕವಿ ಕುವೆಂಪುರವರು 'ರಾಮಂಗೆ ಮೊದಲಲ್ತೆ ರಾಮಾಯಣಂ' ರಾಮನಾಮದ ಮಹಿಮೆ ರಾಮನಿಗಿಂತಲೂ ಮಿಗಿಲೆಂಬಂತೆ. ರಾಮಾವತಾರಕ್ಕಿಂತ ರಾಮಾಯಣಾವತಾರವು ಗುರುತರವಾದುದು ಎಂದಿರುವುದು.

**ಕನ್ನಡದಲ್ಲಿ ರಾಮಾಯಣಗಳು** : ಶ್ರೀಮದ್ರಾಮಾಯಣದಪ್ರಭಾವದಿಂದ ಪ್ರೇರಿತರಾದ ಕವಿಗಳು ಭಾರತದ ದೇಶ ಭಾಷೆಗಳಲ್ಲಿ ರಾಮಾಯಣ ಕಾವ್ಯಗಳನ್ನು ಅನೇಕವಾಗಿ ರಚಿಸಿದ್ದಾರೆ, ಕನ್ನಡಿಗರಿಗೆ ರಾಮಾಯಣವು ಪರಮಪ್ರಿಯವಾದ ಗ್ರಂಥ. ಸೀತಾರಾಮ ಸ್ಪರ್ಶದಿಂದ ಪವಿತ್ರಗೊಂಡ ಪಂಪಾಸರೋವರವೂ, ಸುಗ್ರೀವ ಆಂಜನೇಯರ ಸ್ಥಳವಾದ ಕಿಷ್ಕಿಂಧೆಯೂ ಕರ್ಣಾಟಕಕ್ಷೇತ್ರ-ಸಂಪತ್ತು. ಕುಮಾರವ್ಯಾಸನಕಾಲಕ್ಕೆ ಕನ್ನಡದಲ್ಲಿ ರಾಮಾಯಣ ಗ್ರಂಥಗಳೂ ಅನೇಕವಾಗಿದ್ದಿರಬೇಕು ಎಂಬುದನ್ನು 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂಬ ಅವನ ಮಾತಿನಿಂದ ತಿಳಿಯ

ಬಹುದು. ಪೊನ್ನನು (950 ಕ್ರಿ.ಶ) 'ಭುವನೈಕ ರಾಮಾಭ್ಯುದಯ'ಎಂಬ ಗ್ರಂಥವನ್ನು ಬರೆದಿರುವಂತೆ ತಿಳಿದುಬರುತ್ತದೆ. ಜೈನಕವಿನಾಗಚಂದ್ರ ಅಥವಾ ಅಭಿನವ ಪಂಪನು 'ರಾಮಚಂದ್ರ ಚರಿತ ಪುರಾಣ'ವನ್ನು ರಚಿಸಿದ್ದಾನೆ. ಷಟ್ಪದಿಯಲ್ಲಿ ಕುಮುದೇಂದುವು (1275 ಕ್ರಿ.ಶ) ರಾಮಕಥೆಯನ್ನೂ ಬೇರೆಬೇರೆ ಛಂದಸ್ಸುಗಳಲ್ಲಿ ಪದ್ಮನಾಭನು 'ರಾಮಚಂದ್ರಚಂದ್ರಚರಿತೆ'ಯನ್ನೂ, ಚಂದ್ರಸಾಗರ ವರ್ಣಿಯು (1810 ಕ್ರಿ.ಶ) ಜಿನ ರಾಮಾಯಣವನ್ನೂ. ದೇವಚಂದ್ರನು (1770-1841) ರಾಮಾಯಣ ಕಥಾವತಾರ ವನ್ನೂ ರಚಿಸಿದ್ದಾರೆ.

ವೈದಿಕ ಸಂಪ್ರದಾಯದಲ್ಲಿ ಕುಮಾರವ್ಯಾಸನನ್ನು ಅನುಸರಿಸಿ ನರಸಿಂಹನು (1600 ಕ್ರಿ.ಶ ) ತೊರವೆ ರಾಮಾಯಣವನ್ನು 5,000 ಪದ್ಯಗಳಿಗೂ ಮೀರಿದ ಕಾವ್ಯವಾಗಿ ರಚಿಸಿದ್ದಾನೆ. ಇವನಿಗೆ ಕುಮಾರ ವಾಲ್ಮೀಕಿ ಎಂದೂ ಹೆಸರು. ವಾಲ್ಮೀಕಿಯನ್ನು ಅನುಸರಿಸಿ ವೆಂಕಾಮಾತ್ಯನೆನ್ನುವ ಕವಿ 9,865 ವಾರ್ಧಕ ಷಟ್ಪದಿ ಪದ್ಯಗಳ ಕಾವ್ಯ ವೊಂದನ್ನು ಬರೆದಿದ್ದಾನೆ. 1,750 ರಲ್ಲಿ ತಿಮ್ಮಾಮಾತ್ಯನು 3,500 ಭಾಮಿನಿಷಟ್ಪದಿ ಪದ್ಯಗಳ ರಾಮಾಭ್ಯುದಯ ಕಥಾಮಂಜರಿ ಅಥವಾ ಆನಂದ ರಾಮಾಯಣವನ್ನು ರಚಿಸಿದ್ದಾನೆ. ಉಡುಪಿಯ ನಂದಳಿಕೆ ಲಕ್ಷ್ಮೀನಾರಣಪ್ಪ ಅಥವಾ ಮುದ್ದಣ ( 1870 – 1901 ) ಅದ್ಭುತ ರಾಮಾಯಣ ಮತ್ತು ರಾಮಾಶ್ವಮೇಧಂಗಳನ್ನು ಹಳಗನ್ನಡ ಗದ್ಯಶೈಲಿಯಲ್ಲೂ, 'ರಾಮ ಪಟ್ಟಾಭಿಷೇಕ'ವನ್ನು ವಾರ್ಧಕ ಷಟ್ಪದಿಯಲ್ಲೂ ರಚಿಸಿದ್ದಾನೆ. ವಿರೂಪಾಕ್ಷಪಂಡಿತನೆಂಬುವನಿಂದ ಮೈಸೂರು ದೊರೆ ಖಾಸಾ ಚಾಮರಾಜ ಒಡೆಯರು ( 1776 – 1796 ) ವಾಲ್ಮೀಕಿ ರಾಮಾಯಣವನ್ನು ಬರೆಸಿದರು. ಇದಕ್ಕೆ ಚಾಮರಾಜೋಕ್ತಿ ವಿಲಾಸವೆಂದು ಹೆಸರು. ಮುಮ್ಮಡಿ ಕೃಷ್ಣ ರಾಜ ಒಡೆಯರು ರಾಮಾಯಣ ಟೀಕೆ, ರಾಮಾಯಣ ತಾತ್ಪರ್ಯ ದೀಪಿಕಾ ಮತ್ತು ರಾಮಕಥಾಕಲ್ಪವೃಕ್ಷಗಳೆಂಬ ಗ್ರಂಥಗಳನ್ನು ಬರೆದಿದ್ದಾರೆ. ದೇವಶಿಖಾಮಣಿ ಆಳಶಿಂಗರಾಚಾರ್ಯರ ಕನ್ನಡ ಗದ್ಯ ರಾಮಾಯಣವು ತುಂಬ ಜನಪ್ರಿಯವಾಗಿದೆ. ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ವಾಲ್ಮೀಕಿ ರಾಮಾಯಣವನ್ನು ಮೂಲ, ಪ್ರತಿಪದಾರ್ಥ, ಭಾವಾರ್ಥ ಮತ್ತು ಹಲವು ವ್ಯಾಖ್ಯಾನಗಳ ಸಹಿತ ಸಂಪಾದಿಸಿ ಪ್ರಕಟಿಸಿದರು. ಇದಲ್ಲದೆ ಸಿದ್ಧವನಹಳ್ಳಿ ಕೃಷ್ಣಶರ್ಮರ ರಾಮಾವತಾರ, ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ಯರ ವಾಲ್ಮೀಕಿ ರಾಮಾಯಣ, ಎನ್. ರಂಗನಾಥ ಶರ್ಮರು ಸಂಪಾದಿಸಿದ ಮೂಲ ಸಹಿತ ತಾತ್ಪರ್ಯವುಳ್ಳ ರಾಮಾಯಣಗಳು ಮತ್ತು ಶ್ರೀರಂಗಂ ಆಂಡವನ್ ಸ್ವಾಮಿಗಳ 'ರಾಮಕಥಾಸಾರ' ಇಲ್ಲಿ ಹೆಸರಿಸಬೇಕಾದ ಗ್ರಂಥಗಳು. ಮಾರ್ಕಂಡೇಯ ರಾಮಾಯಣ, ಅಧ್ಯಾತ್ಮ ರಾಮಾಯಣ, ವಾಸಿಷ್ಠ ರಾಮಾಯಣಗಳು ಅನುವಾದಿತವಾಗಿವೆ.

ಕಾವ್ಯರೂಪದಲ್ಲಿ ಶೇಷ ರಾಮಾಯಣವನ್ನು ಸೋಸಲೆ ಅಯ್ಯಾಶಾಸ್ತ್ರಿಗಳು

ರಚಿಸಿದ್ದಾರೆ. ಬತ್ತಲೇಶ್ವರ ಕವಿಯ ಕೌಶಿಕರಾಮಾಯಣವನ್ನು ಶಿವರಾಮ ಕಾರಂತರು ಪ್ರಕಟಿಸಿದ್ದಾರೆ. ಇತ್ತೀಚೆಗೆ ಕಡಬದ ದೊರೆಸ್ವಾಮಿಅಯ್ಯಂಗಾರ್ಯರು ರಾಮಾಯಣ ವನ್ನು ಸುಂದರಕಾಂಡದಿಂದ ಆರಂಭಿಸಿ ರಚಿಸಿದ್ದಾರೆ. ವಿ. ಎಸ್. ರಾಮಕೃಷ್ಣರವರು ಶ್ರೀರಾಮಚರಿತಾಮೃತಂ ಅಥವಾ ಕುಶಲ ರಾಮಾಯಣವನ್ನು ವಾರ್ಧಕಷಟ್ಪದಿಯಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಇಂದಿನ ಕನ್ನಡ ಬೃಹತ್ಕಾವ್ಯಗಳಲ್ಲಿ ಕವಿ ಕುವೆಂಪು ವಿರಚಿತ ಶ್ರೀ ರಾಮಾಯಣದರ್ಶನಂ ಅತಿಪ್ರಮುಖವಾದುದು. ಹಿಂದಿನ ಪರಿಚಿತವಾದ ಛಂದಸ್ಸುಗಳಲ್ಲದೆ ಆಧುನಿಕ ಮಹಾಛಂದಸ್ಸಿನಲ್ಲಿ ಗತಿ ಲಯ ವಿನ್ಯಾಸಗಳಿರುವಂತೆ ರಚಿಸ ಲ್ಪಟ್ಟಿರುವ ಈ ರಾಮಾಯಣವು ನಾಲ್ಕು ಸಂಪುಟಗಳನ್ನೂ. 50 ಸಂಚಿಕೆಗಳನ್ನೂ. 22284 ಪಂಕ್ತಿಗಳನ್ನೂ ಒಳಗೊಂಡಿದೆ. ಇದರಲ್ಲಿ ಲಯದ ಬೆಡಗು, ಪ್ರಾಸದ ಕುಣಿತ, ಪದಲಾಲಿತ್ಯ, ಸಂಸ್ಕೃತ ಮತ್ತು ಕನ್ನಡದ ವಾಕ್‌ಲಹರಿ, ನವರಸಗಳು, ರೂಪಕಸಂಪತ್ತು, ಉಪಮೆಗಳು ಎಲ್ಲವೂ ಸೊಗಸಾಗಿ ಮೆರೆದಿವೆ. ಈ ಬೃಹತ್ಕಾವ್ಯದ ವಸ್ತು ಹಳೆಯ ದಾದರೂ, ಅಹಲ್ಯೋದ್ಧಾರ, ದಶರಥನ ಪ್ರಲಾಪ, ಸೀತಾಪಹರಣ, ವಾಲಿಯವಧೆ, ಸೀತೆಯ ಅಗ್ನಿಪರೀಕ್ಷೆ, ರಾಮ-ಭರತರ ಸಮಾಗಮ ಮುಂತಾದ ಹಲವು ಪ್ರಸಂಗಗಳಲ್ಲಿ ಮಾರ್ಪಾಡುಗಳು ಮತ್ತು ಪಾತ್ರಗಳು ಕವಿಯ ಪ್ರತಿಭಾಕೌಶಲ್ಯಪೂರಿತವಾದ ನಿರೂಪಣೆ ಯಿಂದ ಸತ್ವಪೂರ್ಣವಾಗಿ, ಸಹಜ ಸುಂದರವಾಗಿ ರೂಪುಗೊಂಡಿದ್ದು ಮನೋಜ್ಞ ವಾಗಿವೆ.

ಸದ್ಗುರು ತ್ಯಾಗರಾಜಸ್ವಾಮಿಗಳು ಈಶಮನೋಹರಿರಾಗದ 'ಮನಸಾ ಶ್ರೀರಾಮಚಂದ್ರುನಿ' ಎಂಬ ಕೃತಿಯಲ್ಲಿ ಶ್ರೀರಾಮನು ತ್ರಿಮೂರ್ತಿಗಳಿಗಿಂತ ಮೇಲ್ಪಟ್ಟ ವನು ಎಂದಿದ್ದಾರೆ. ಶ್ರೀ ರಾಮಾಯಣದರ್ಶನ ಕಾವ್ಯದಲ್ಲಿ ಶ್ರೀರಾಮನು ಆದರ್ಶ ಮಾನವ, ಆಹ್ಲಾದರೂಪಿ, ಔದಾರ್ಯನಿಧಿ, ಶಸ್ತ್ರಾಸ್ತ್ರ ವಿದ್ಯಾಪ್ರವೀಣ ರಣಪಂಡಿತ, ಅವತಾರಪುರುಷ, ಅಪ್ರಾಕೃತ, ಅಂತರ್ಯಾಮಿ, ಅಖಿಲವ್ಯಾಪಿ, ಪುರುಷೋತ್ತಮ. ವಿಶ್ವ ವೆಲ್ಲವೂ ರಾಮಮಯ, ನೀನೇ ಸ್ವಾಮಿ. ನಾನೇ ದಾಸ : ಇದೆಲ್ಲವೂ ನೀನೇ: ಇದೆಲ್ಲವೂ ನಾನೇ ; ಈ ಮೂರು ತತ್ವಗಳಲ್ಲಿ ಯಾವುದು ಪಕ್ವವಾದರೂ ಭಗವಂತನ ಸಾನ್ನಿಧ್ಯ ಸಿದ್ಧಿಸುತ್ತದೆ ಎಂಬ ಶ್ರೀರಾಮಕೃಷ್ಣ ಪರಮಹಂಸರ ಉಪದೇಶ ವಾಣಿಯಲ್ಲಿ ಮೂರ ನೆಯದಾದ ಅದ್ವೈತಸಿದ್ಧಿಯನ್ನು "ಬಹುನಾಮರೂಪಗಳು, ಬಹುಕಾಲದೇಶಗಳು ನನಗೆ, ನೀನುಂ ನಾನೆಯೆ, ಕುವೆಂಪು !" ಎಂಬ ಮಾತಿನಿಂದ ಕಂಡುಕೊಂಡಿರುವುದು ತಿಳಿದುಬರುತ್ತದೆ.

ಮಾನವನನ್ನು ಸಭ್ಯನನ್ನಾಗಿ ಮಾಡುವುದು ಧರ್ಮಗ್ರಂಥಗಳ ಗುರಿ. ರಾಮಾಯಣದಲ್ಲಿರುವ ಗುಣಗಳೆಲ್ಲವೂ ರಾಮಾಯಣದರ್ಶನ ಕಾವ್ಯದಲ್ಲಿದೆ. ನಮ್ಮಲ್ಲಿ ಸಭ್ಯತೆಯನ್ನು ಬೆಳೆಸಲು ಈ ಗ್ರಂಥವು ಬಹು ಸಹಾಯಕವಾಗಿದೆ. ವಾಲ್ಮೀಕಿ ರಾಮಾಯಣವನ್ನು ಮಾರ್ಗ ಸಂಗೀತದಲ್ಲಿ ಲವಕುಶರು ಹಾಡಿದರೆಂದು ತಿಳಿದು ಬರು

ತ್ತದೆ. ಆದರೆ ಅವರು ಯಾವ ರಾಗದಲ್ಲಿ ಹೇಗೆ ಹಾಡಿದರು ಎಂಬುದು ತಿಳಿದು ಬಂದಿಲ್ಲ. ಸಾವಿರಾರು ಕೃತಿಗಳನ್ನು ಅನೇಕ ರಾಗಗಳಲ್ಲಿ ರಚಿಸಿ ರಾಮಾಯಣವನ್ನು ಹಾಡಿ ತ್ಯಾಗರಾಜಸ್ವಾಮಿಗಳು ರಾಮಾಯಣ ವಾಗ್ಗೇಯಕಾರರೆನಿಸಿಕೊಂಡಿದ್ದಾರೆ. ಕುವೆಂಪುರಾಮಾಯಣವನ್ನು ನಮ್ಮ ಕನ್ನಡನಾಡಿನ ಖ್ಯಾತ ಗಮಕಿಗಳು ಎಲ್ಲೆಲ್ಲೂ ಹಾಡುತ್ತ ಬಂದಿದ್ದಾರೆ. ಕಾವ್ಯಗಾನಕ್ಕೆ ಸೊಗಸಾಗಿರುವ ಕನ್ನಡ ರಾಮಾಯಣವನ್ನು ರಚಿಸಿರುವವರಲ್ಲಿ ಕವಿ ಕುವೆಂಪುರವರು ಅತ್ಯಂತ ಪ್ರಮುಖರು.

**ತಮಿಳು ರಾಮಾಯಣಗಳು :** ತಮಿಳಿನ ಸಂಘ ಸಾಹಿತ್ಯದಲ್ಲಿ ರಾಮಾಯಣ ವನ್ನು ಆಧರಿಸಿದ ಕಥೆಗಳು ಪ್ರಚಾರದಲ್ಲಿದ್ದುವು. ವಿಷ್ಣುವನ್ನು ಮಾಯನ್, ಮಾನ್ ಎಂದು ಹೆಸರಿಸಲಾಗಿದೆ. ಕ್ರಿ.ಶ. ಪ್ರಾರಂಭದ ಶತಮಾನಗಳಿಗೆ ಸೇರಿದ ಪುರನಾನೂರು ಮತ್ತು ಅಹನಾನೂರು ಎಂಬ ಗ್ರಂಥಗಳಲ್ಲಿ ರಾಮಕಥೆಯನ್ನು ಪ್ರಾಸಂಗಿಕವಾಗಿ ಹೇಳ ಲಾಗಿದೆ. ಶಿಲಪ್ಪದಿಕಾರಂ ಎಂಬ ಗ್ರಂಥದಲ್ಲಿ ರಾಮಾಯಣ ಮತ್ತು ರಾಮಾವತಾರ ವಾಗಿ ಗ್ರಂಥಕರ್ತನಾದ ಇಲಂಗೋವಡಿಗಳ್ ಹೇಳಿದ್ದಾನೆ. ಮಣಿಮೇಖಲೈ ಮತ್ತು ಜೀವಕ ಚಿಂತಾಮಣಿ ಎಂಬ ಗ್ರಂಥಗಳಲ್ಲೂ ರಾಮಕಥೆಯ ವಿಚಾರವಿದೆ.

ಸುಮಾರು 8-9ನೆಯ ಶತಮಾನದಲ್ಲಿದ್ದ ಶ್ರೀವೈಷ್ಣವ ಆಳ್ವಾರರು ನಾಲಾಯಿರ ಪ್ರಬಂಧಂ-4000 ಪದ್ಯಗಳಿರುವ ದ್ರಾವಿಡವೇದ ಅಥವಾ ತಿರುವಾಯಿಮೊಳಿ ಎಂದು ಪ್ರಸಿದ್ಧವಾಗಿರುವ ಸಾಹಿತ್ಯದಲ್ಲಿ ರಾಮಾಯಣದ ಕಥೆಯನ್ನು ಪ್ರಸ್ತಾಪಿಸಿ ತಮ್ಮ ಭಕ್ತಿ ಯನ್ನು ತೋಡಿಕೊಂಡಿದ್ದಾರೆ. ಪೆರಿಯ ವಾಚ್ಚಾನ್ ಪಿಳ್ಳೈ ಎಂಬ ಶ್ರೀ ವೈಷ್ಣವ ಆಚಾರ್ಯರು ಪ್ರತಿಯೊಬ್ಬ ಆಳ್ವಾರರೂ ಹಾಡಿರುವ ರಾಮಾಯಣದ ಭಾಗಗಳನ್ನು ಕಾಂಡಗಳಿಗನುಸಾರವಾಗಿ ಕ್ರೋಢೀಕರಿಸಿದ್ದಾರೆ. ಇದಕ್ಕೆ ಪಾಶುರಪ್ಪಡಿ ರಾಮಾಯಣ ವೆಂದು ಹೆಸರು. ಇದು ಯುದ್ಧಕಾಂಡದೊಂದಿಗೆ ಮುಕ್ತಾಯವಾಗುತ್ತದೆ. 9ನೆಯ ಶತಮಾನದಲ್ಲಿದ್ದ ಚೇರ ದೊರೆ ಕುಲಶೇಖರಾಳ್ವಾರರು 11 ಪದ್ಯಗಳಲ್ಲಿ ಸಂಗ್ರಹ ರಾಮಾಯಣವನ್ನು ಹಾಡಿದ್ದಾರೆ. ಇದು ಅವರು ರಚಿಸಿರುವ ಪೆರಿಯತಿರುಮೊಳಿ ಎಂಬುದರ ಭಾಗವಾಗಿದೆ' ಶೈವನಾಯನ್ಮಾರರ ರಚನೆಗಳಲ್ಲಿ ರಾಮಕಥೆಯನ್ನು ಅಲ್ಲಲ್ಲಿ ಪ್ರಸ್ತಾಪಿಸಲಾಗಿದೆ. ಇವರ ತರುವಾಯ ರಚಿಸಲ್ಪಟ್ಟ ತಮಿಳು ಸಾಹಿತ್ಯದ ಮಕುಟ ಮಣಿಯಂತಿರುವ ಕಾವ್ಯವೆಂದರೆ ಕವಿಕಂಬರ್ ರಚಿಸಿರುವ ರಾಮಾಯಣ.

ನಮ್ಮ ದೇಶದ ಇತರ ಹಿಂದಿನ ಕವಿಗಳಂತೆ ಕಂಬರ್ ತನ್ನ ಬಗ್ಗೆ ಏನನ್ನೂ ಹೇಳಿ ಕೊಂಡಿಲ್ಲ. ವಿದ್ವಾಂಸರ ಅಭಿಪ್ರಾಯದಂತೆ ಈ ಕವಿಯ ಕಾಲ 9ನೆಯ ಶತಮಾನ. ಇವನ ತಂದೆ ಅಥವನ್ ಎಂಬುವನು. ಚೋಳ ದೊರೆ ಕುಲೋತ್ತುಂಗನ ಆಸ್ಥಾನದಲ್ಲಿ ಕಂಬರ್ ಕವಿಯಾಗಿದ್ದನು. ದೊರೆಯ ಮತ್ತು ತನ್ನ ಪೋಷಕನಾಗಿದ್ದ ಸದಯಪ್ಪರ್ ಕೋರಿಕೆಯಂತೆ ತಮಿಳಿನಲ್ಲಿ ರಾಮಾಯಣವನ್ನು ರಚಿಸಲು ತೊಡಗಿ ಒಂದು ದಿನಕ್ಕೆ 700 ಪದ್ಯಗಳಂತೆ ಶ್ರೀರಾಮ ಪಟ್ಟಾಭಿಷೇಕದವರೆಗೆ 15 ದಿನಗಳಲ್ಲಿ ಸಂಪೂರ್ಣಗೊಳಿ

ಸಿದ ನೆಂದು ಹೇಳುತ್ತಾರೆ.ಶ್ರೀ ವೈಷ್ಣವ ಆಳ್ವಾರರಲ್ಲಿ ಅತ್ಯಂತ ಪ್ರಮುಖರಾದ ನಮ್ಮಾಳ್ವಾರರ ಭಕ್ತನಾಗಿದ್ದ ಕಂಬರ್ ಕಿ. ಶ. 885ರಲ್ಲಿ ಶ್ರೀರಂಗದಲ್ಲಿ ಸೇರಿದ ಕವಿಗೋಷ್ಠಿಯಲ್ಲಿ ಈ ಬೃಹತ್ಕಾವ್ಯವನ್ನು ಹಾಡಿ ಅವರಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದನು. ಚೋಳ ದೇಶದ ತಿರುವಟುಂದೂರು ಎಂಬುದು ಕವಿಯ ಜನ್ಮ ಸ್ಥಳ. 60 ವರ್ಷಗಳ ಕಾಲ ಬಾಳಿ ಕಾರೈಕ್ಕುಡಿ ಬಳಿಯಿರುವ ನಟ್ಟರಸನ್ ಕೋಟೆ ಎಂಬಲ್ಲಿ ಕಾಲವಾದನೆಂದು ಹೇಳುತ್ತಾರೆ. ಇಲ್ಲಿ ಕವಿಯ ಸಮಾಧಿಯಿದೆ. ಇದರ ಸಮೀಪದಲ್ಲಿರುವ ದೇವಾಲಯದಲ್ಲಿ ಇಂದಿಗೂ ಪ್ರತಿವರ್ಷ ಕಂಬರ್ ದಿನವನ್ನು ಆಚರಿಸಲಾಗುತ್ತದೆ.

ಕಂಬರಾಮಾಯಣವು 10569 ಪದ್ಯಗಳಿರುವ ಕಾವ್ಯ. ಕೆಲವರ ಅಭಿಪ್ರಾಯದಂತೆ ಇದು 12000 ಪದ್ಯಗಳುಳ್ಳ ಕಾವ್ಯ. ಇತರರು ರಚಿಸಿ ಸೇರಿಸಿರುವ ಪದ್ಯಗಳನ್ನು ಗುರುತಿಸುವುದು ಕಷ್ಟವಾದರೂ 100 ಪದ್ಯಗಳನ್ನು ವೆಲ್ಲಿಯಂಬಲ ತಂಬಿರಾನ್ ಎಂಬುವರು ಸೇರಿಸಿದರೆಂದು ತಿಳಿದುಬರುತ್ತದೆ. ಕಂಬರ ಸಮಕಾಲೀನರಾಗಿದ್ದ ಒಟ್ಟಕ್ಕೂಟ್ಟನ್ ಎಂಬುವನು ಏಳನೆಯ ಕಾಂಡವನ್ನು ಬರೆದು ರಾಮಾಯಣವನ್ನು ಸುಖಾಂತವಾಗಿ ಪೂರ್ಣಗೊಳಿಸಿದನೆಂದು ತಿಳಿದುಬಂದಿದೆ. ಕಂಬರ್ ತನ್ನ ಕಾವ್ಯವನ್ನು ರಾಮಕಥೆ ಮತ್ತು ರಾಮಾವತಾರಂ ಎಂದು ಹೆಸರಿಸಿದ್ದಾನೆ. ವಾಲ್ಮೀಕಿ ಮಹರ್ಷಿಯಲ್ಲಿ ಅವನಿಗೆ ಅಪರಿಮಿತವಾದ ಭಕ್ತಿ. ಅವನ ಕಥೆಯನ್ನೇ ಅವಲಂಬಿಸಿದ್ದರೂ ಅಲ್ಲಲ್ಲಿ ಸಂದರ್ಭೋಚಿತವಾಗಿ ಮಾರ್ಪಾಡು ಮಾಡಿದ್ದಾನೆ. ಅವನ ದೃಷ್ಟಿಯಲ್ಲಿ ಶ್ರೀ ರಾಮನು ದೇವತೆ. ದೊರೆಯ ಮತ್ತು ತನ್ನ ಪೋಷಕನ ಕೋರಿಕೆಯಂತೆ ತನ್ನ ಮಹಾಕಾವ್ಯವನ್ನು ರಚಿಸಿದ್ದರೂ ಅದನ್ನು ತನ್ನ ಆತ್ಮಸಂತೋಷಕ್ಕಾಗಿ ರಚಿಸಲಾಯಿತೆಂದು ಕವಿಯೇ ಹೇಳಿದ್ದಾನೆ. ಶೈವ ಮತ್ತು ವೈಷ್ಣವ ಪಂಥಗಳನ್ನು ಪರಸ್ಪರ ಸಮೀಪಕ್ಕೆ ತರುವ ಇಚ್ಛೆ ಮತ್ತು ರಾಮಾಯಣ ಮಹಾಕಾವ್ಯವು ಜನರ ಹೃದಯದಲ್ಲಿ ಚೆನ್ನಾಗಿ ನೆಲೆಗೊಳ್ಳುವಂತೆ ಮಾಡಲು, ತಿರುಕ್ಕುರಳ್ ಗ್ರಂಥದಲ್ಲಿರುವ ಆದರ್ಶವನ್ನೂ, ನೀತಿಯನ್ನೂ ಕಥಾರೂಪದಲ್ಲಿ ನಿರೂಪಿಸಲು ಮತ್ತು ದೇವರು ಒಬ್ಬನೇ, ಅವನು ಕೇವಲ ಶಿವನೂ ಅಲ್ಲ, ವಿಷ್ಣುವೂ ಅಲ್ಲ ಎಂಬುದನ್ನು ಎತ್ತಿ ಹಿಡಿದು, ಅನೇಕ ಧರ್ಮಗಳು ಹುಟ್ಟಿಕೊಂಡಿದ್ದರೂ ಅವುಗಳೆಲ್ಲದರ ಗುರಿ ಒಂದೇ ಎಂದು ಸರ್ವಧರ್ಮಸಮನ್ವಯವನ್ನು ಸಾರಿದ್ದಾನೆ. ಭಕ್ತಿಯ ಮನೋಧರ್ಮಕ್ಕೆ ಅನುಗುಣವಾಗಿ ಕಂಬರ್ ಭಾವಗೀತೆಗಳ ಧಾಟಿಯನ್ನು ಹಿಡಿದಿದ್ದಾನೆ. ಶೈವರಿಗೆ ಪೆರಿಯಪುರಾಣಂ ಹೇಗೆ ಪ್ರಮಾಣಗ್ರಂಥವೋ ಹಾಗೆಯೇ ವೈಷ್ಣವರಿಗೆ ಕಂಬರಾಮಾಯಣ. ತಮಿಳುದೇಶದಲ್ಲಿ ರಾಮಭಕ್ತಿಯು ಬೇರೂರಿದ್ದು ಕಂಬರಾಮಾಯಣದ ಫಲವಾಗಿ. ಕವಿಗಳನ್ನು ಬಹು ಸಂಖ್ಯೆಯಲ್ಲಿ ಹೊಂದಿದ್ದ ತಮಿಳು ದೇಶದಲ್ಲಿ 'ಕವ್ವಿಯರ್ ಪೆರಿಯವನ್ ಕಂಬನ್' ಎಂಬ ಲೋಕೋಕ್ತಿ ಪ್ರಸಿದ್ಧವಾಗಿದೆ, ಕಂಬರಿಗೆ ಕಂಬನಾಡನ್. ಕಂಬನತ್ತಾಳ್ವಾರ್, ತಮಿಳು ವಾಲ್ಮೀಕಿ ಎಂಬ ಹೆಸರುಗಳಿವೆ.

ಕವಿ ಕಂಬರ್ ವಾಲ್ಮೀಕಿರಾಮಾಯಣವನ್ನೆ ಅನುಸರಿಸಿದ್ದರೂ ತಮಿಳು ಸಂಪ್ರದಾಯಗಳು ಮತ್ತು ಸಂಸ್ಕೃತಿಗಳಿಗನುಗುಣವಾಗಿ ಅನೇಕ ಸಂದರ್ಭಗಳನ್ನೂ ವರ್ಣನೆಗಳನ್ನೂ ಮಾರ್ಪಡಿಸಿದ್ದಾನೆ. ಹೀಗೆ ಮಾಡುವುದರಿಂದ ಮೂಲರಾಮಾಯಣಕ್ಕೆ ಯಾವ ಬಗೆಯ ಕುಂದು ಉಂಟಾಗಿಲ್ಲ. ಆದರೆ ಅದರ ಸ್ವಾರಸ್ಯವನ್ನು ಇನ್ನೂ ಹೆಚ್ಚಿಸಿದೆ ಎಂದು ವಿದ್ವಾಂಸರ ಅಭಿಪ್ರಾಯ.

ಕಂಬರಾಮಾಯಣ ಮತ್ತು ಶ್ರೀ ರಾಮಾಯಣದರ್ಶನಂ ಇವೆರಡು ಕಾವ್ಯಗಳಲ್ಲಿ ಮಾನವಸ್ವಭಾವದ ನೂರಾರುಮುಖಗಳನ್ನು ಕಂಡು ಅವುಗಳಿಗೆ ರೂಪವಿತ್ತು, ತನ್ಮೂಲಕ ತಮ್ಮ ಸಿದ್ಧಾಂತವನ್ನು ನಿರೂಪಿಸಿರುವ ಪ್ರತಿಭೆ ಈ ಇಬ್ಬರು ಮಹಾಕವಿಗಳದ್ದಾಗಿದೆ. ಇವೆರಡು ರಾಮಾಯಣಗಳ ಎಲ್ಲ ಪಾತ್ರಗಳನ್ನು ಪರಿಚಯ ಮಾಡಿಕೊಡಲು ಒಂದು ಉದ್ಗ್ರಂಥವೇ ಆಗುತ್ತದೆ. ಶ್ರೀರಾಮ, ಲಕ್ಷ್ಮಣ, ಸೀತಾ, ಭರತ, ಹನುಮಾನ್, ವಿಭೀಷಣ, ವಾಲಿ ಮತ್ತು ಸುಗ್ರೀವ. ರಾವಣ, ಮಂಥರೆ–ಈ ಪಾತ್ರಗಳ ನಿರೂಪಣೆಯಲ್ಲಿ ಕವಿಗಳ ಕೌಶಲ್ಯದ ರೇಖಾಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದೇನೆ. ಇದು ಕೇವಲ ಕಾವ್ಯಪ್ರಿಯನಾದ ಒಬ್ಬ ಸಾಮಾನ್ಯ ಓದುಗನ ಪ್ರಯತ್ನ.

**ಕವಿಕಂಬರ ಶ್ರೀರಾಮ :** ಶ್ರೀರಾಮನ ಪಾತ್ರವು ನಮ್ಮ ದೇಶದ ಕಾವ್ಯಗಳಲ್ಲಿ ಮತ್ತು ಪುರಾಣಗಳಲ್ಲಿ ಬರುವ ಎಲ್ಲ ಪಾತ್ರಗಳಿಗಿಂತ ಘನ ಗಂಭೀರವಾದುದು. ಶ್ರೀರಾಮನೇ ಕಾವ್ಯದ ನಾಯಕ. ಇವನು ಧರ್ಮಜ್ಞ, ಸತ್ಯಸಂಧ, ಕೃತಜ್ಞ, ಶುದ್ಧ ಚರಿತ್ರ, ರೂಪಸ, ಆದರ್ಶ ಪುರುಷ, ವೀರ್ಯವಂತ, ಮರ್ಯಾದಾಪುರುಷೋತ್ತಮ. ಕುಲಶೇಖರಾಳ್ವಾರರು ತಮ್ಮ ಪ್ರಬಂಧಗಳಲ್ಲಿ ಶ್ರೀಮನ್ನಾರಾಯಣನೇ ಮನುಷ್ಯರೂಪದಲ್ಲಿ ಶ್ರೀರಾಮನಾಗಿ ಧರೆಗಿಳಿದು ಬಂದಿದ್ದಾನೆ ಎಂದು ಹಾಡಿದ್ದಾರೆ. ಕಂಬರಕಾಲದ ವೇಳೆಗೆ ಈ ಭಾವನೆ ಭದ್ರವಾಗಿ ನೆಲೆ ಊರಿತ್ತು.

ಎರಡು ಅಥವಾ ಮೂರು ಸಲ ರಾಮನು ಭಗವಂತನೆಂದು ಸೂಚಿಸಿದ್ದರೂ ಆವನು ಅತ್ಯಂತ ಶೂರ, ಗುಣವಂತ, ಆದರ್ಶ ಪುರುಷ. "ಅಹಂ ತ್ವಾಂ ಮಾನುಷಂ ಮನ್ಯೇಂ"—ನನ್ನನ್ನು ಮನುಷ್ಯನೆಂದೇ ತಿಳಿ ಎಂದು ರಾಮನೇ ಹೇಳಿದ್ದಾನೆ. ಆದರೆ ಕಂಬರಾಮಾಯಣದಲ್ಲಿ ರಾಮನು ಭಗವಂತನ ಅವತಾರ, ಶ್ರೀಮನ್ನಾರಾಯಣ, ವೇದಗಳಿಗೂ ಗೋಚರವಾಗದವನು.

ರಾಮ ಲಕ್ಷ್ಮಣರು ಮಿಥಿಲಾನಗರದ ಬೀದಿಯಲ್ಲಿ ವಿಶ್ವಾಮಿತ್ರರೊಡನೆ ಹೋಗುತ್ತಿದ್ದಾಗ, ವಿವಾಹಕ್ಕೆ ಮೊದಲೇ, ಸೀತಾರಾಮರು ಪರಸ್ಪರ ನೋಡುತ್ತಾರೆ. ಇವರಲ್ಲಿ ಪ್ರಣಯಾಂಕುರವಾದ ಸಂದರ್ಭವನ್ನು ಕಂಬರ್ ಸ್ವಾರಸ್ಯವಾಗಿ ವರ್ಣಿಸಿದ್ದಾನೆ. ಇದನ್ನೇ ಆಧರಿಸಿ ರಾಮನಾಟಕಂ ಎಂಬುದರಲ್ಲಿ 'ಯಾರೋ, ಇವರ್ಯಾರೋ,

ಎನ್ನಪೇರೋ ಅರಿಯೇನೇ, ಎಂಬ ಹಾಡನ್ನು ಸೀತೆಯು ಹಾಡುವುದನ್ನು ಇಲ್ಲಿ ಸ್ಮರಿಸ ಬಹುದು.

ಈ ಘಟನೆಯು ವಾಲ್ಮೀಕಿರಾಮಾಯಣದಲ್ಲಿಲ್ಲ. ಈ ಪ್ರಣಯಾಂಕುರವು ಕ್ಷೀರ ಸಾಗರದಲ್ಲಿದ್ದ ಲಕ್ಷ್ಮೀ ನಾರಾಯಣರು ಪುನಃ ಸಮಾಗಮಗೊಂಡಿದ್ದಲ್ಲ. ಇದು ಆದಿ ಯಿಂದ ಹೀಗೆಯೇ ಇರುವಂತಹುದು ಎಂದಿದ್ದಾನೆ ಕಂಬರ್.

ಶ್ರೀರಾಮನು ಭಗವಂತನ ಅವತಾರವಾಗಿದ್ದರೂ ಅವನು ಮನುಷ್ಯನಂತೆ ವರ್ತಿಸಲು ಯಾವ ತಡೆಯೂ ಇಲ್ಲ. ಸೀತಾಪಹರಣದ ವಿರಹದಿಂದ ಪರಿತಪಿಸುತ್ತಾನೆ. ಗುಹನ ಸರಳವಾದ ಭಕ್ತಿಗೆ ಮಾರುಹೋಗಿ ಅವನನ್ನು ತನ್ನ ಸಹೋದರನೆಂದು ಭಾವಿಸಿ ದನು. ತಂದೆ ದಶರಥನ ಮರಣದ ಸುದ್ದಿಯನ್ನು ತಿಳಿದು ಬಹಳ ದುಃಖಿತನಾದನು. ಇಂದ್ರಜಿತ್‌ನೊಡನೆ ಯುದ್ಧ ಮಾಡುವಾಗ ಲಕ್ಷ್ಮಣನು ಮೂರ್ಛೆಹೋದಾಗ ಮತ್ತು ಇಂದ್ರಜಿತ್ ಸೀತೆಯನ್ನು ಕೊಂದನೆಂಬ ಸುದ್ದಿ ಕೇಳಿದಾಗ ದುಃಖದಿಂದ ತೀರ ವಿಹ್ವಲ ನಾದನು. ಹೀಗೆ ದೈವತ್ವ ಮತ್ತು ಮನುಷ್ಯತ್ವಗಳ ಸಮ್ಮಿಳನವು ಕಂಬರ ಕೈಯಲ್ಲಿ ಪರಸ್ಪರ ಪೂರಕವಾಗಿದ್ದು ಅಸ್ವಾಭಾವಿಕತೆಯು ತೋರುವುದಿಲ್ಲ.

ತನಗೆ ಪಟ್ಟಾಭಿಷೇಕವಾಗುತ್ತದೆಂದು ತಿಳಿದಾಗ ಶ್ರೀರಾಮನಿಗೆ ತೀರ ಸಂತೋಷ ವಾಗುವುದಿಲ್ಲ. ಅವನು ಬಹುವಾಗಿ ಹಿಗ್ಗುವುದಿಲ್ಲ. ತಂದೆಯ ಆಜ್ಞೆಯಂತೆ ನಡೆದು ಕೊಳ್ಳುವುದು ತನ್ನ ಕರ್ತವ್ಯವೆಂದು ಒಪ್ಪಿಕೊಂಡನು. ಇಲ್ಲಿಂದ ಮುಂದೆ ಕೈಕೆಗೆ ಉತ್ತರ ಕೊಡುವವರೆಗೂ ಒಂದು ಮಾತನ್ನೂ ಆಡುವುದಿಲ್ಲ. ಅವನ ವಿರಕ್ತ ಭಾವವನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾನೆ.

ಶ್ರೀರಾಮನು ಕೈಕೆಯನ್ನು ಯಾವಸಂದರ್ಭದಲ್ಲೂ ಧಿಕ್ಕರಿಸುವುದಿಲ್ಲ. ಲಕ್ಷ್ಮಣನು ವನವಾಸದ ಸುದ್ದಿಯನ್ನು ಮೊದಲು ಕೇಳಿದಾಗ, ಕೋಪಾವಿಷ್ಟನಾಗಿ ಕೈಕೆಯನ್ನು ನಿಂದಿಸಿದಾಗ—ತಂದೆಯನ್ನಾಗಲೀ, ತಾಯಿಯನ್ನಾಗಲೀ ನಿಂದಿಸಬೇಡ. ನದಿಗಳಲ್ಲಿ ಕೆಲವು ಸಲ ನೀರಿಲ್ಲದೆ ಹೋಗಬಹುದು. ವಿಧಿ ನಮ್ಮನ್ನು ಕಳುಹಿಸುತ್ತಿದೆ. ಈ ಕೋಪ ವೇಕೆ ?—ಎಂದು ತಮ್ಮನನ್ನು ಸಮಾಧಾನಪಡಿಸುತ್ತಾನೆ. ಭರತನಿಗೆ ರಾಮನ ವನ ವಾಸದ ವಿಚಾರವು ತಿಳಿದಾಗ ತನ್ನ ತಾಯಿ ಕೈಕೆಯನ್ನು ಕುರಿತು ನೀನು ಇನ್ನೂ ಬದುಕಿದ್ದೀಯೆ, ಏಕೆಂದರೆ ಕೈಕೆಯುವಧೆಯನ್ನು ರಾಮನು ಸಹಿಸುವುದಿಲ್ಲ—ಎನ್ನು ತ್ತಾನೆ. ಈ ಮಾತಿನಲ್ಲಿ ರಾಮನ ಗುಣವು ಎಂತಹ ಉದಾತ್ತವಾದುದು ಎಂಬುದು ಸೂಚಿತವಾಗಿದೆ. ರಾಮನು ವನವಾಸ ಮಾಡುತ್ತಿದ್ದಾಗಲೂ ಕೈಕೆಯಲ್ಲಿ ಹಿಂದಿನ ಪ್ರೀತಿ ಯನ್ನು ಇಟ್ಟಿದ್ದಾನೆ.

ತನ್ನ ಸ್ವಂತ ವಿಚಾರಗಳಲ್ಲಿ ಶ್ರೀರಾಮನು ವಿರಕ್ತನಾಗಿದ್ದರೂ ಇತರರ ದುಃಖ, ಕಷ್ಟಗಳಿಂದ ಅವನ ಹೃದಯವು ಸ್ತ್ರೀಯಂತೆ ಕರಗುತ್ತದೆ, ಮರುಗುತ್ತದೆ. ಯುದ್ಧದಲ್ಲಿ ಲಕ್ಷ್ಮಣನು ಮೂರ್ಛೆ ಬಿದ್ದಾಗ ಅವನ ದೇಹವನ್ನು ಎತ್ತಿ ತಬ್ಬಿಕೊಂಡು ಮಲಗಿಸಿ

'ಲಕ್ಷ್ಮಣಾ' ಯಾವ ಮನುಷ್ಯನಾದರೂ ನನ್ನಂತೆ ದುಃಖಿತನಾಗಿದ್ದಾನೆಯೇ ?—ಎಂದು ಪ್ರಲಾಪಿಸುತ್ತಾನೆ. ಮಾಯಾಸೀತೆಯ ವಧೆಯ ಸುದ್ದಿ ತಿಳಿದಾಗ ಮೂರ್ಛಿತನಾಗಿ, ಎಚ್ಚೆತ್ತು—ನನಗೆ ಕೊಟ್ಟ ಗೃಹವು ನಾಶವಾಯಿತು, ಇನ್ನೇನು ಉಳಿದಿದೆ ? ಎಂದು ರೋದಿಸುತ್ತಾನೆ.

ಗುಹನಲ್ಲದೆ, ಸುಗ್ರೀವ ಮತ್ತು ವಿಭೀಷಣನನ್ನು ತನ್ನ ಸೋದರರೆಂದು ಶ್ರೀರಾಮನು ಭಾವಿಸಿದನು,—ನನಗೆ ನಾಲ್ಕು ಸಹೋದರರಾದರು. ಸುಗ್ರೀವನು ಐದನೆಯವನಾದ. ವಿಭೀಷಣನ ಬರುವಿಕೆಯಿಂದ ನಾವು ಒಟ್ಟು ಪ್ರೀತಿಯ ಏಳು ಸಹೋದರರಾದೆವು. ಒಬ್ಬ ಮಗನನ್ನು ಕಾಡಿಗೆ ಕಳುಹಿಸಿದ ತಂದೆಗೆ ಏಳು ಪುತ್ರರಾದರು. ಅವನೇ ಭಾಗ್ಯವಂತ—ಎನ್ನುತ್ತಾನೆ.

ಅರಣ್ಯವಾಸದ ಕಾಲದಲ್ಲಿ ಶ್ರೀರಾಮನು ಭರತನನ್ನು ಒಂದು ಕ್ಷಣವೂ ಮರೆಯಲಿಲ್ಲ. ಚಿತ್ರಕೂಟಕ್ಕೆ ಭರತನು ಬರುತ್ತಿರುವುದನ್ನು ನೋಡಿದ ಲಕ್ಷ್ಮಣನು—ಅವನು ಶ್ರೀರಾಮನನ್ನು ಕೊಲ್ಲಲು ಬರುತ್ತಿದ್ದಾನೆ ಎಂದು ಹೇಳಿದಾಗ ಶ್ರೀರಾಮನು—ತಮ್ಮ ನೀನು ನನ್ನಲ್ಲಿಟ್ಟಿರುವ ಪ್ರೀತಿಯು ಭರತನ ಗುಣಗಳು ನಿನಗೆ ಕಾಣದಂತೆ ಮಾಡಿದೆ. ಭರತನ ಜೀವನದ ಭಾಷ್ಯವೇ ವೇದಗಳೆಂದು ತಿಳಿದಿದ್ದೇನೆ—ಎನ್ನುತ್ತಾನೆ. ತನ್ನ ಅಣ್ಣ ವಾಲಿಯನ್ನು ಕೊಲ್ಲಲು—ಸುಗ್ರೀವನು ಕೇಳಿಕೊಂಡದ್ದನ್ನು ಲಕ್ಷ್ಮಣನು ಟೀಕಿಸಿದಾಗ, ಎಲ್ಲರೂ ಭರತನಂತೆ ಸಹೋದರ ಪ್ರೇಮವುಳ್ಳವರಾಗಿದ್ದರೆ ಭರತನನ್ನು ಅಗ್ರಸ್ಥಾನದಲ್ಲಿಡಲು ಹೇಗೆ ಸಾಧ್ಯ ?—ಎನ್ನುತ್ತಾನೆ.

ಹನುಮಂತನಲ್ಲಿ ಶ್ರೀರಾಮನ ಪ್ರೀತಿ ಒಬ್ಬ ಮಹಾಗುರು ತನ್ನ ಒಬ್ಬ ಶ್ರೇಷ್ಠ ಶಿಷ್ಯನಲ್ಲಿಟ್ಟ ಪ್ರೀತಿ. ಈ ಮಹಾವಾನರನ ವಿದ್ವತ್ತು, ಬುದ್ಧಿ ಮತ್ತು ಶಕ್ತಿಯನ್ನು ರಾಮನು ಗೌರವಿಸುತ್ತಾನೆ. ಪ್ರಥಮ ಭೇಟಿಯಲ್ಲಿ ಅಂಕುರವಾದ ಈ ಗೌರವವು ಪ್ರೀತಿಯೊಡನೆ ಬೆಳೆಯುತ್ತದೆ. ಹನುಮಂತನ ಮೂಲಕ ಸೀತೆಗೆ ಆತ್ಮೀಯವಾದ ಸಂದೇಶವನ್ನು, ತನ್ನ ಅದ್ವಿತೀಯವಾದ ಚೂಡಾಮಣಿ ಸಹಿತ ಕಳುಹಿಸುತ್ತಾನೆ. ಇದೇ ಚೂಡಾಮಣಿಯನ್ನು ಭರತನನ್ನು ಅಗ್ನಿಪ್ರವೇಶ ಮಾಡುವುದನ್ನು ತಪ್ಪಿಸಲು ಹನುಮಂತನ ಕೈಯಲ್ಲಿ ಕಳುಹಿಸುತ್ತಾನೆ. ಯಾವಾಗಲೂ ಅವನನ್ನು ತನ್ನ ಸಮೀಪದಲ್ಲಿ ಇಟ್ಟುಕೊಂಡಿರುತ್ತಾನೆ. ರಾಕ್ಷಸರೊಡನೆ ಯುದ್ಧ ಮಾಡುವಾಗ ಸಂತೋಷದಿಂದ ಅವನ ಭುಜಗಳ ಮೇಲೆ ಕುಳಿತು ಯುದ್ಧ ಮಾಡುತ್ತಾನೆ. ಅದ್ವಿತೀಯಳಾದ ; ಪರಮ ಪವಿತ್ರಳಾದ ಸೀತೆಯಲ್ಲಿ ಅವನ ಪ್ರೀತಿ ಅಸಾಧಾರಣ, ತ್ಯಾಗರಾಜ ಸ್ವಾಮಿಗಳು ಇದನ್ನು 'ಒಕಮಾಟ, ಒಕಬಾಣಮು, ಒಕಪತ್ನಿವ್ರತುಡೇ' ಎಂಬ ಹರಿಕಾಂಭೋಜಿ ರಾಗದ ಕೃತಿಯಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ತಾನು ಪ್ರೀತಿಸಿದ ಸೀತೆಯ ಕೊರಳಿಗೆ ಹಾಕುವ ಹಾರವನ್ನು ಎತ್ತುವಂತೆ ತನ್ನ ಮುಂದೆ ಮೇರುಪರ್ವತದಂತಿದ್ದ ಶಿವಧನುಸ್ಸನ್ನು ಎತ್ತಿದನು. ಸೀತೆಯನ್ನು ರಾವಣನು ಅಪಹರಿಸಿದಾಗ ಹುಚ್ಚ

ನಂತಾಗುತ್ತಾನೆ. ಮಾಯಾಸೀತೆಯ ವಧೆಯ ವೃತ್ತಾಂತವನ್ನು ಕೇಳಿ ಸಿಡಿಲು ಬಡಿದ ಸಾಲವೃಕ್ಷದಂತೆ ಮೂರ್ಛಿತನಾಗಿ ಬೀಳುತ್ತಾನೆ. ಅವನಿಗೆ ಸೀತೆಯು ಆರುಂಧತಿ, ಅಮೃತಕ್ಕಿಂತ ಸಿಹಿ. ಚಿತ್ರಿಸಲು ಸಾಧ್ಯವಿಲ್ಲದ ಅನುಪಮ ಸುಂದರಿ. ಅವಳೇ ಬೆಳಕು. ಸ್ತ್ರೀ ಧರ್ಮದ ಆದರ್ಶ, ಇಂತಹ ಅವನ ನಿಸ್ಸೀಮ ಪ್ರೇಮವೇ ಕಾಂಚನಮೃಗದ ವಿಚಾರವಾಗಿ ಲಕ್ಷ್ಮಣನು ಹೇಳಿದ ಎಚ್ಚರಿಕೆಯ ಮಾತನ್ನು ಲಕ್ಷಿಸದಂತೆ ಮಾಡಿತು. ಹನುಮಂತನು ಸೀತೆಯನ್ನು ಅಶೋಕವನದಲ್ಲಿ ಕಂಡಾಗ ರಾಮನ ಪ್ರೀತಿಯನ್ನು ಈ ರೀತಿಯಾಗಿ ಹೇಳಿದ್ದಾನೆ—ತಾಯೇ, ಈಗ ರಾಮನ ಜೀವನದ ಗುಟ್ಟು ತಿಳಿಯಿತು. ನೀನು ಅವನ ಹೃದಯವನ್ನು ಬಿಟ್ಟಿಲ್ಲ. ಆದ್ದರಿಂದಲೇ ಅವನು ಇನ್ನೂ ಬದುಕಿದ್ದಾನೆ. ಅವನ ಜೀವವೇ ಆದ ನೀನು ಇಲ್ಲಿರುವಾಗ ಅವನಿಗೆ ಬೇರೆ ಜೀವವೆಲ್ಲಿದೆ ?"

ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ—'ರಾಮಃ ಶಸ್ತ್ರಭೃತ್ತಾಂ ಅಹಂ'— ಶಸ್ತ್ರಗಳನ್ನು ಬಳಸುವುದರಲ್ಲಿ ನಾನೇ ರಾಮ ಎಂದಿದ್ದಾನೆ. ಶ್ರೀರಾಮನು ಭಾರತದ ಆದರ್ಶ ಮಹಾವೀರ, ಯೋಧ, ನಾಯಕ. ಈ ಭಾವವನ್ನು ಕವಿ ಕಂಬರ್ ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ. ಶ್ರೀರಾಮನು ತನ್ನ ಶಕ್ತಿಯನ್ನು ತಾನೇ ಹೊಗಳಿಕೊಳ್ಳದಂತೆ ಕವಿ ಎಚ್ಚರಿಕೆ ವಹಿಸಿದ್ದಾನೆ. ಆದರೆ ಜಟಾಯುವಿನಿಂದ ಸೀತಾಪಹರಣದ ಸುದ್ದಿ ತಿಳಿದಾಗ ಕೋಪಾವಿಷ್ಟನಾಗಿ ಪ್ರಪಂಚವನ್ನೇ ನಾಶ ಮಾಡುವುದಾಗಿ ಘರ್ಜಿಸುತ್ತಾನೆ. ರಾವಣನ ಗೂಢಚಾರನನ್ನು ಹಿಡಿದು ತಂದು ಅವನ ಮುಂದೆ ನಿಲ್ಲಿಸಿದಾಗ ರುದ್ರ, ವಿಷ್ಣು ಮತ್ತು ಸಮಸ್ತ ಲೋಕಗಳಲ್ಲಿರುವವರು ಸೇರಿಕೊಂಡು ರಾವಣನಿಗೆ ಸಹಾಯ ಮಾಡಿದರೂ ಅವನನ್ನು ನಾಶಮಾಡಿ, ಜಟಾಯುವಿನ ಆತ್ಮಕ್ಕೆ ಶಾಂತಿಯನ್ನು ಅವನ ಶತ್ರುವಿನ ರಕ್ತದಿಂದ ತರ್ಪಣವಿತ್ತು ತಂದುಕೊಡುವುದಾಗಿ ಹೇಳುತ್ತಾನೆ.

ಇತರರ ಮಾತುಗಳಿಂದ ರಾಮನ ಶೌರ್ಯವು ಎಂಥಹುದು ಎಂಬುದು ತಿಳಿದು ಬರುತ್ತದೆ. ವೈಷ್ಣವಧನುಸ್ಸನ್ನು ಸುಲಭವಾಗಿ ಬಗ್ಗಿಸಿದ್ದನ್ನು ನೋಡಿದ ಪರಶುರಾಮನು ತಲೆಬಾಗಿ ತನ್ನ ಸೋಲನ್ನೇ ಒಪ್ಪಿಕೊಂಡು — ನೀನೇ ಸಾಕ್ಷಾತ್ ವಿಷ್ಣು ಎಂಬುದರಲ್ಲಿ ಸಂಶಯವಿಲ್ಲ ಎಂದು ಹೇಳಿದನು.

ರಾಮನ ಶೌರ್ಯಕ್ಕಿಂತ ಅವನ ಔದಾರ್ಯವು ಇನ್ನೂ ಹೆಚ್ಚಿನದು. ಮೊದಲ ದಿನದ ರಾಮರಾವಣ ಯುದ್ಧದಲ್ಲಿ ರಾವಣನು ಎಲ್ಲವನ್ನೂ ಕಳೆದುಕೊಂಡು ಒಂಟಿಯಾಗಿ ನಿಂತಾಗ ರಾಮನು—ಹೋಗು, ಸೀತೆಯನ್ನು ತಂದೊಪ್ಪಿಸು. ವಿಭೀಷಣನಿಗೆ ರಾಜ್ಯವನ್ನು ಕೊಡು, ಇಲ್ಲದಿದ್ದರೆ ನಿನ್ನ ಸರ್ವ ಶಕ್ತಿಯಿಂದ ಯುದ್ಧಕ್ಕೆ ಬಂದರೂ ನೀನು ಸಜೀವನಾಗಿ ಹಿಂತಿರುಗಲಾರೆ ಎಂದು ಹೇಳಿ. ಅವನನ್ನು ಸಂಹರಿಸದೆ ಹಿಂದಕ್ಕೆ ಕಳುಹಿಸಿದನು. ಸೀತೆಯು ಅಗ್ನಿಪ್ರವೇಶ ಮಾಡುವ ಸಂದರ್ಭದಲ್ಲಿ ಸ್ವರ್ಗದಿಂದ ದಶರಥನು ಇಳಿದು ಬಂದು ರಾಮನನ್ನು ಬಾಚಿ ತಬ್ಬಿಕೊಂಡಾಗ, ಶ್ರೀರಾಮನು ತಂದೆಯನ್ನು ಅವನು ಭೂಲೋಕದಲ್ಲಿದ್ದಾಗ ಕೈಕೆ ಮತ್ತು ಭರತನಿಗೆ ಕೊಟ್ಟ ಶಾಪವನ್ನು

ಹಿಂದಕ್ಕೆ ತೆಗೆದುಕೊಳ್ಳುವಂತೆ ಕೇಳುತ್ತಾನೆ. ರಾವಣನು ಯುದ್ಧಭೂಮಿಯಲ್ಲಿ ಮಡಿದು ಬಿದ್ದಾಗ ವಿಭೀಷಣನನ್ನು ಕರೆದು—ಅವನ ದುಷ್ಟತನವು ನಮ್ಮ ಹೃದಯವನ್ನು ಬಹು ವಾಗಿ ನೋಯಿಸಿದ್ದರೂ ಅವನನ್ನು ಕ್ಷಮಿಸೋಣ. ಅವನಿಗೆ ತಕ್ಕ ಸಂಸ್ಕಾರವನ್ನು ಮಾಡು—ಎಂದನು. ಈ ಅಪರಿಮಿತವಾದ ಔದಾರ್ಯವು ಅವನನ್ನು ಶರಣಾಗತ ವತ್ಸಲನನ್ನಾಗಿ ಮಾಡಿದೆ.

ವಿಭೀಷಣನು ರಾವಣನನ್ನು ತ್ಯಜಿಸಿ ರಾಮನ ಬಳಿಗೆ ಬಂದು ಆಶ್ರಯವನ್ನು ಬೇಡಿದಾಗ, ಸುಗ್ರೀವಾದಿಗಳು ಅವನಿಗೆ ಆಶ್ರಯವನ್ನು ಕೊಡಬಾರದೆಂದು ಹೇಳಿದರು. ಎಲ್ಲರ ಅಭಿಪ್ರಾಯವನ್ನು ಕೇಳಿದ ನಂತರ ಹನುಮಂತನ ಅಭಿಪ್ರಾಯವನ್ನು ಒಪ್ಪಿ ಕೊಂಡು—ನೀನು ಈಗಲೇ ಹೋಗಿ ಅವನನ್ನು ಕರೆದುಕೊಂಡು ಬಾ. ಒಂದುವೇಳೆ ಅವನು ಸಾಕ್ಷಾತ್‌ರಾವಣನೇ ಆಗಿ ಕಂಡುಬಂದರೂ ಸರಿಯೆ, ಅವನು ಯಾರಾದರೂ ಸರಿಯೆ, ಹಿಂದು ಮುಂದಾಲೋಚಿಸದೆ ಕರೆದು ಕೊಂಡುಬಾ—ಎಂದು ಅಪ್ಪಣೆಮಾಡಿ, ಅದರಂತೆ ತನ್ನ ಬಳಿಗೆ ಬಂದು ನಮಸ್ಕರಿಸಿ ನಿಂತ ವಿಭೀಷಣನನ್ನು ಮೃದು ಮಧುರ ವಚನಗಳಿಂದ ಸಂತೈಸಿ, ತನ್ನ ಅಂತರಂಗ ಸೇವೆ ಎಂಬ ಐಶ್ವರ್ಯವನ್ನು ಅನುಗ್ರಹಿಸಿ, ಅಷ್ಟರಿಂದ ತೃಪ್ತನಾಗದೆ ಆಗಲೇ ಅವನನ್ನು ಲಂಕಾರಾಜನಾಗಿ ಅಭಿಷೇಕಿಸಿ ಬಿಟ್ಟನು. ಸತ್ಯಸಂಕಲ್ಪ ಮತ್ತು ದೃಢವ್ರತ ಎಂಬ ಗುಣವಿಶೇಷಗಳು ಅವನಿಗೆ ಅತ್ಯಂತ ಪ್ರಿಯ ವಾದುವು. ಕವಿ ಕಂಬರ್ ಚಿತ್ರಿಸಿರುವ ಶ್ರೀರಾಮನು ಸಕಲಶ್ರೇಷ್ಠ ಗುಣಗಳುಳ್ಳ ಆದರ್ಶ ಧೀರೋದಾತ್ತ ನಾಯಕ.

**ಕುವೆಂಪು ಚಿತ್ರಿಸಿರುವ ಶ್ರೀರಾಮ**

ಶ್ರೀರಾಮನು ಬಾಲ್ಯದಲ್ಲಿ ತನ್ನ ಸಹೋದರರೊಡನೆ ಪ್ರೀತಿಯ ಶಿಶುವಾಗಿ ಬೆಳೆದವನು. ಗುರು ವಶಿಷ್ಠರ ನೇತೃತ್ವದಲ್ಲಿ ಧನುರ್ವಿದ್ಯೆ, ವೇದ, ಶಾಸ್ತ್ರಗಳನ್ನು ಕಲಿತು ಕ್ಷಮೆ, ದಯೆ, ಶಾಂತಿ, ಸತ್ಯ. ರೂಪ, ಗಾಂಭೀರ್ಯ ಮೂರ್ತಿಯಾಗಿ ಬೆಳೆದನು.

ದಶರಥನು ಶ್ರೀರಾಮನನ್ನು ಲಕ್ಷ್ಮಣಸಹಿತನಾಗಿ ವಿಶ್ವಾಮಿತ್ರರೊಂದಿಗೆ ಕಳುಹಿಸಿ ಕೊಟ್ಟನು. ಸಹೋದರರು ವಿಶ್ವಾಮಿತ್ರರಿಂದ ಬಲಾ, ಅತಿಬಲಾ ಎಂಬ ಮಂತ್ರವಿದ್ಯೆಯ ಉಪದೇಶ ಪಡೆದರು. ಲಕ್ಷ್ಮಣಸಹಿತನಾದ ಶ್ರೀರಾಮನು ರಾಕ್ಷಸರನ್ನು ಸಂಹರಿಸಿ ಯಾಗದ ರಕ್ಷಣೆ ಮಾಡಿದನು. ಜನಕ ಮಹಾರಾಜನ ಮಹಾಯಾಗ ವಾರ್ತೆ ಯನ್ನು ಕೇಳಿದ ವಿಶ್ವಾಮಿತ್ರರು ರಾಮ ಲಕ್ಷ್ಮಣರೊಡನೆ ಮಿಥಿಲೆಗೆ ಪ್ರಯಾಣ ಮಾಡಿದರು. ದಾರಿಯನ್ನು ಶಿವಧನುಸ್ಸಿನ ವೃತ್ತಾಂತವನ್ನು ಅವರಿಗೆ ತಿಳಿಸಿದರು. ಪ್ರಯಾಣ ಮಾಡುತ್ತಾ ಮೌನ ಆವರಿಸಿದ್ದ ಗೌತಮಾಶ್ರಮಕ್ಕೆ ಬಂದಾಗ ಶ್ರೀರಾಮನು ನೃತ್ಯ ಶೀಲನಾದನು. ಅಲ್ಲಿದ್ದ ಒಂದು ಬಂಡೆಯನ್ನೇರಿ ನರ್ತನಮಗ್ನನಾದಾಗ ಆ ಬಂಡೆ ಕರಗಿ ತಪಸ್ವಿನಿಯೊಬ್ಬಳು ಅವನ ಪಾದಗಳಿಗೆ ಮಣಿದು ನಿಂತಳು. ಶ್ರೀರಾಮನು ತನ್ನ ತಾಯಿಗೆ ನಮಸ್ಕರಿಸುವಂತೆ, ತನ್ನ ಕಾವ್ಯಕ್ಕೆ ಕವಿ ತಾನೇ ಮಣಿಯುವಂತೆ ಗೌತಮ

ಸತಿಯಾದ ಅಹಲ್ಯೆಯು ಪಾದಗಳಿಗೆ ನಮಸ್ಕರಿಸಿದನು. ಶ್ರೀರಾಮನ ಪಾದಗಳ ಮಹಿಮೆಯನ್ನು ತೋರ್ಪಡಿಸಿದ ಅಹಲ್ಯೆಯನ್ನು ಸ್ವೀಕರಿಸಲು ಬಂದ ಗೌತಮನು ರಾಮನನ್ನು ಆಲಿಂಗಿಸಿದನು. ಆ ರಾತ್ರಿಯನ್ನು ಗೌತಮಾಶ್ರಮದಲ್ಲಿ ಕಳೆದು ಬೆಳಗ್ಗೆ ಮಿಥಿಲೆಗೆ ಪ್ರಯಾಣಮಾಡಿ ಸೇರಿದರು.

ವಿಶ್ವಾಮಿತ್ರರ ಇಂಗಿತದಂತೆ ಪಕ್ಕದ ಹೂದೋಟಕ್ಕೆ ರಾಮಲಕ್ಷ್ಮಣರು ಹೋಗಿ ಅಲ್ಲಿಯ ಕೊಳದ ತಿಳಿನೀರಿಗೆ ಕಲ್ಲೆಸೆಯುವ ಆಟದಲ್ಲಿ ಮಗ್ನರಾದರು, ಆಗ ಅಲ್ಲಿಗೆ ಊರ್ಮಿಳೆ, ಮಾಂಡವಿ, ಶ್ರುತಕೀರ್ತಿಯರೊಡನೆ ಬಂದ ಸೀತೆಯು ಮಲ್ಲಿಗೆಯ ಪೊದರಿನ ಮರೆಯಲ್ಲಿ ನಿಂತು ಶ್ರೀರಾಮನ ಮೋಹಕಮೂರ್ತಿಯನ್ನು ನೋಡಿದಳು. ನಿತ್ಯವೂ ಅವಳಿಗೆ ಕನಸಿನಲ್ಲಿ ಕಾಣುತ್ತಿದ್ದ ನೀಲದೇಹನೇ ಅವನು ಎಂದು ತಿಳಿದಳು. ಮಾರನೆಯ ದಿನ ಯಾಗಶಾಲೆಯಲ್ಲಿ ವಿಶ್ವಾಮಿತ್ರನ ಆಣತಿಯಂತೆ ಶ್ರೀರಾಮನು ಶಿವ ಧನುಸ್ಸನ್ನು ಎತ್ತಿ ಹೆದೆಏರಿಸಿ ಮುರಿದನು. ವಿಶ್ವಾಮಿತ್ರರ ಪಾದಗಳಿಗೆರಗಿದನು, ಸೀತೆಯು ಸಾಗರವನ್ನು ಸೇರುವ ಜಾಹ್ನವಿಯಂತೆ ಮುಂದೆ ಬಂದು ಅವನ ಕೊರಳಿಗೆ ವಿಜಯಮಾಲೆಯನ್ನು ಹಾಕಿದಳು.

ಮದುವೆಯ ನಂತರದ ದಿಬ್ಬಣ ಮಿಥಿಲೆಯಿಂದ ಅಯೋಧ್ಯೆಗೆ ಹೊರಟಿತು. ದಾರಿಯಲ್ಲಿ ಜಮದಗ್ನಿ ಪುತ್ರನಾದ ಪರಶುರಾಮನ ಭೈರವಮೂರ್ತಿ ಕಾಣಿಸಿತು. ದಶರಥನೊಡನೆ ಸೈನ್ಯವೂ ಬೆಚ್ಚಿ ನಿಂತಿತು. ಆಗ ಶ್ರೀರಾಮನೊಬ್ಬನೇ ರಥವನ್ನಿಳಿದು ಪ್ರಸನ್ನತೆಯಿಂದ ಪರಶುರಾಮನ ಕಡೆ ನಡೆದನು. ಇವನ ಸೌಮ್ಯಶೀಲಕ್ಕೆ ಮಾರು ಹೋಗಿ ಪರಶುರಾಮನು ಪ್ರಸನ್ನಚಿತ್ತನಾಗಿ ಶ್ರೀರಾಮನಿಗೆ ವಿಷ್ಣುಚಾಪವನ್ನು ಕೊಟ್ಟು ಹರಸಿದನು.

ದಶರಥನು ಶ್ರೀರಾಮನಿಗೆ ಪಟ್ಟವನ್ನು ಕಟ್ಟಿ ತಾನು ಉಳಿದ ದಿನಗಳನ್ನು ತಪಸ್ಸಿನಲ್ಲಿ ಕಳೆಯಲು ನಿರ್ಧರಿಸಿ ಎಲ್ಲ ಏರ್ಪಾಡುಮಾಡಿದನು. ಆಗ ಕೈಕೆ ಮಂಥರೆಯ ದುರ್ಬೋಧನೆಗೆ ಒಳಗಾಗಿ ರಾಮನಿಗೆ ಹದಿನಾಲ್ಕುವರ್ಷ ವನವಾಸ ಮತ್ತು ಭರತನಿಗೆ ಪಟ್ಟವೆಂಬ ಎರಡು ವರಗಳನ್ನು ಕೇಳಿದಾಗ ದಶರಥನು ಗುಂಡಿಗೆಯ ಮೇಲೆ ಗರಗಸ ವೆಳೆದಂತೆ ಮತಿಶೂನ್ಯನಾಗಿ ಮೂರ್ಛೆಹೋದನು. ತಾಯಿಯೊಡನೆ ಪೂಜಾನಿರತನಾಗಿದ್ದ ಶ್ರೀರಾಮನು ಅಲ್ಲಿಗೆ ಬಂದು ಮಂಥರೆಯಿಂದ ನಡೆದುದೆಲ್ಲವನ್ನೂ ತಿಳಿದು, ನಗುವನ್ನು ಸೂಸುತ್ತ—ಗಿರಿವನಪ್ರಿಯನಾದ ನನಗೆ ಅರಣ್ಯವಾಸವೇ ಆನಂದದಾಯಕವಲ್ಲವೇ ? ವಲ್ಕಲ ಜಟೆಗಳು ಕಿರೀಟಕ್ಕಿಂತ ಕೀಳೇ. ತಂದೆಯ ವಚನಪಾಲನೆಯು ನನಗೆ ಧರ್ಮ—ಎನ್ನುತ್ತಾನೆ. ಶ್ರೀರಾಮನು ಸ್ಥಿತಪ್ರಜ್ಞನಂತಿರುತ್ತಾನೆ. ತಂದೆ ಎಚ್ಚರಗೊಂಡನಂತರ ಅವನ ಪಾದಗಳನ್ನು ಕಣ್ಣಿಗೆ ಒತ್ತಿಕೊಂಡು—ನಡೆದುದೆಲ್ಲವೂ ಒಳ್ಳೆಯದಕ್ಕೆ—ಎಂದು ಹೇಳಿ, ಕೈಕೆಗೆ ನಮಿಸಿ, ಶುಭವು ಮನೆಯನ್ನು ಬಿಟ್ಟು ಹೋಗುವಂತೆ ಅಲ್ಲಿಂದ ಹೊರಟನು. ಸುಖ ದುಃಖಗಳೇ ಮುಂತಾದ ದ್ವಂದ್ವಗಳಿಗೆ ಅತೀತನಾಗಿ. ದಿವ್ಯ

ಪುರುಷನಾಗಿ ಶ್ರೀರಾಮನು ಇಲ್ಲಿ ಕಂಡುಬರುತ್ತಾನೆ. ರಾಮೋ ವಿಗ್ರಹವಾನ್‌ಧರ್ಮಃ– ಎಂಬ ವಾಲ್ಮೀಕಿಯ ಮಾತು ಇಲ್ಲಿ ಸೊಗಸಾಗಿ ಶ್ರೀರಾಮನಲ್ಲಿ ಚಿತ್ರಿತವಾಗಿದೆ.

ಸೀತಾಪಹರಣವು ಶ್ರೀರಾಮನ ಜೀವನದಲ್ಲಿ ಮತ್ತೊಂದು ಮಹತ್ವಪೂರ್ಣ ವಾದ ಘಟನೆ. ವನವಾಸ ಮುಗಿಯುವ ಕೊನೆಯ ದಿನ ಶ್ರೀರಾಮ, ಸೀತಾ ಲಕ್ಷ್ಮಣರು ಸ್ವದೇಶಕ್ಕೆ ಹಿಂತಿರುಗಲು ಸಿದ್ಧರಾಗುತ್ತಿದ್ದರು. 'ಲೋಕ ಕಲ್ಯಾಣವೇ ಪೂರ್ತ ವಾದುದೊ' ಎಂಬಂತೆ ಕನಕಮೃಗರೂಪನಲ್ಲಿ ಮಾರೀಚನು ಸೀತೆಯ ಮುಂದೆ ಸುಳಿದ. ಅದನ್ನು ಹಿಡಿಯಲು ಶ್ರೀರಾಮನು ಹೋದಾಗ ಏನಾಯಿತೆಂಬುದು ತಿಳಿದ ವಿಷಯ. ಹಿಂದೆಯೇ ಬಂದ ಲಕ್ಷ್ಮಣನೊಡನೆ ಶ್ರೀರಾಮನು ಓಡೋಡಿ ಪರ್ಣಕುಟಿಗೆ ಬಂದನು. ಸೀತೆಯನ್ನು ಕಾಣದೆ ಎಲ್ಲೆಲ್ಲೂ ಹುಡುಕಿ ಉನ್ಮತ್ತನಂತೆ ವರ್ತಿಸಿ ಮೂರ್ಛೆಹೋದನು. ತಮ್ಮನ ಶೈತ್ಯೋಪಚಾರದಿಂದ ಚೇತರಿಸಿಕೊಂಡು ಜಟಾಯುವನ್ನು ಕೂಗಿದಾಗ ಉತ್ತರಬರದಿರಲು ಅವನ ಮೇಲೆ ಸಂಶಯಪಟ್ಟು ಕೋಪಾವೇಶದಿಂದ ಹುಡುಕಿ ಕೊಂಡು ಹೊರಟನು. ಪ್ರಾಣಹಿಡಿದು ಅವನನ್ನೇ ಎದುರು ನೋಡುತ್ತ ಬಿದ್ದಿದ್ದ ಜಟಾಯುವವನ್ನು ನೋಡಿ ಆ ಪಕ್ಷಿಯ ಕೊರಳನ್ನು ಎತ್ತಿಕೊಂಡನು. ಅದು ನಡೆದ ಸಂಗತಿಯನ್ನು ತಿಳಿಸಿ ಪ್ರಾಣಬಿಟ್ಟು ಮುಕ್ತಿಪಡೆಯಿತು. ರಾಮನು ಹುಚ್ಚನಂತೆ ಹಲುಬುತ್ತಾ ಗೋಳಾಡಿ ಸಾಧಾರಣ ಮನುಷ್ಯನಂತೆ ವರ್ತಿಸಿದನು.

ಶ್ರೀರಾಮನು ಶುದ್ಧಬ್ರಹ್ಮಪರಾತ್ಪರನು. ಭೂಜಾತೆಯಾದ ಸೀತೆ ಪ್ರಕೃತಿ– ಶಕ್ತಿ, ಆಕೆಯ ನೆವದಿಂದ ಭೂಮಿಗಿಳಿದು ಬಂದ ಪುರುಷೋತ್ತಮನು ತಮಃಶಕ್ತಿಯ ರೂಪಾಗಿದ್ದ ರಾವಣನನ್ನು ಮರ್ದಿಸಿದನು ಮತ್ತು ರಾಮನ ಕಥೆ ಆ ಪುರುಷೋತ್ತ ಮನ ಲೋಕ ಲೀಲಾದರ್ಶನವೆಂಬ ತತ್ವ ಮನೋಜ್ಞವಾಗಿದೆ.

ಮುಂದೆ ಶಬರಿಯ ಮಾತಿನಂತೆ ರಾಮನು ಕಿಷ್ಕಿಂಧೆಗೆ ಬಂದು ಸುಗ್ರೀವನ ಸಖ್ಯ ಮಾಡಿಕೊಂಡು ವಾಲಿಯನ್ನು ವಧಿಸುತ್ತಾನೆ. ವಾಲಿಯನ್ನು ಮರೆಯಲ್ಲಿ ನಿಂತು ಹೊಡೆದ ಪ್ರಸಂಗವನ್ನು ಕವಿ ಸಮರ್ಥಿಸಿರುವ ರೀತಿ ತಾತ್ವಿಕವಾಗಿದೆ. ಸುಗ್ರೀವನು ದೈವೀಪ್ರವೃತ್ತಿಯ ಪ್ರತೀಕ. ವಾಲಿಯು ಆಸುರೀಪ್ರವೃತ್ತಿಯ ಪ್ರತೀಕ. ಆಸುರೀ ಪ್ರವೃತ್ತಿಯು ದೇವರಿಗೆ ಮುಖಮಾಡಿ ನಿಲ್ಲುವುದಿಲ್ಲ. ಹಾಗೆ ನಿಂತರೆ ಅದು ದೈವೀ ಪ್ರವೃತ್ತಿಯಾಗುತ್ತದೆ, ಆದ್ದರಿಂದ ವಾಲಿಯನ್ನು ಅಂದರೆ ದೇವರಿಗೆ ವಿಮುಖವಾಗಿದ್ದ ತಮಃಪ್ರವೃತ್ತಿಯನ್ನು ಬೆನ್ನಿಗೇ ಹೊಡೆದುಕೊಲ್ಲುತ್ತಾನೆ. ವಾಲಿಯು ತಾರೆಯ ಹಿತವಚನದಿಂದ ದ್ವೇಷರಹಿತನಾಗಿ ತಮ್ಮನನ್ನು ಅಪ್ಪಿಕೊಂಡು ಊರಿನಕಡೆ ಹಿಂತಿರು ಗಿದಾಗ. ಈ ಮಾರ್ಪಾಡನ್ನು ಅರಿಯದೆ ಅವನ ಬೆನ್ನಿಗೆ ಬಾಣ ಬಿಟ್ಟು ಉರುಳಿಸಿದ ತನ್ನ ತಪ್ಪನ್ನರಿತ ಶ್ರೀರಾಮನು ಅವನ ಮನ್ನಣೆ ಕೇಳಿದನು. ಇದು ವೀರನಿಗೆ ಸಹಜವಾದ ಲಕ್ಷಣ.

ಮತ್ತೊಂದು ಪ್ರಸಂಗ ಸೀತೆಯ ಅಗ್ನಿಪ್ರವೇಶ. ಯುದ್ಧದ ನಂತರ ರಾಮಾಜ್ಞೆ

ಯಂತೆ ವಿಭೀಷಣನು ಭೂಜಾತೆಯನ್ನು ರಾಮಸನ್ನಿಧಿಗೆ ಕರೆತಂದನು. ರಾಮನು ಸಾಲಂಕೃತಳಾದ ಮಡದಿಯನ್ನು ಉಪೇಕ್ಷೆಯಿಂದ ನೋಡಿದನು. ಸೀತೆಯು 'ಆರ್ಯಪುತ್ರ' ಎಂದು ತೊದಲುತ್ತ ಅವನ ಮುಖವನ್ನು ನೋಡಿ, ಬೆರಗು ಬಡಿದವಳಂತೆ ಕಣ್ಣೀರಿಡುತ್ತ ನಿಂತಳು. ರಾಮನು ವಕ್ರೋಕ್ತಿಗಳಿಂದ ಅವಳ ಮನಸ್ಸನ್ನು ನೋಯಿಸಿ, ತನ್ನ ಕುಲಗೌರವ ಮತ್ತು ಪುರುಷಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ರಾವಣನನ್ನು ಕೊಂದು ಪ್ರತಿಜ್ಞೆ ನೆರವೇರಿಸಿದ್ದಾಯಿತು. ಅವಳು ಎಲ್ಲಾದರೂ ತೊಲಗಬಹುದು ಎಂದನು. ಆಗ ಅವಳ ಇಂಗಿತದಂತೆ ಮೈದುನನು ಚಿತೆಯನ್ನು ಸಿದ್ಧಪಡಿಸಿದ ಕೂಡಲೇ ತನ್ನ ಪಾತಿವ್ರತ್ಯ, ಪ್ರೇಮ, ಶೀಲ, ನಿಷ್ಠೆಗಳನ್ನು ಸ್ಥಾಪಿಸಲು ಅಗ್ನಿಪ್ರವೇಶ ಮಾಡಿದಳು. ಎಲ್ಲರೂ ನೋಡುತ್ತಿದ್ದಂತೆ ಶ್ರೀರಾಮನೂ ಅಗ್ನಿಪ್ರವೇಶಮಾಡಿದನು. ಅಗ್ನಿಜ್ವಾಲೆ ಇಬ್ಭಾಗವಾಯಿತು. ಶ್ರೀರಾಮನು ಜಾನಕಿಯ ಕೈ ಹಿಡಿದುಕೊಂಡು ಹೊರಹೊಮ್ಮಿ ಗಿರಿಯವೇದಿಕೆಗೆ ಕರೆತಂದನು. ಇವರನ್ನು ಕಂಡು ಎಲ್ಲರೂ ಹರ್ಷೋದ್ಗಾರ ಮಾಡಿದರು.

ಈ ಬಗೆಯ ಸೀತೆಯ ಅಗ್ನಿಪ್ರವೇಶದೊಡನೆ ರಾಮನ ಅಗ್ನಿಪ್ರವೇಶದ ಪ್ರಸಂಗವು ಕಂಬರ್ ಮತ್ತು ವಾಲ್ಮೀಕಿ ರಾಮಾಯಣದಲ್ಲಿಲ್ಲ. ರಾಮನು ತನ್ನ ಲೌಕಿಕವಾದ ಕ್ರೂರವರ್ತನೆಯು ತಪ್ಪು ಎಂಬ ದೋಷವನ್ನರಿತು ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧನಾದಂತೆ ಇಲ್ಲಿ ಕಾಣುತ್ತದೆ. 'ಪೂಜ್ಯೆಯನ್ನು ಪರೀಕ್ಷಿಸುವ ನೆವದಿಂದ ನೀನೂ ನಿನ್ನನ್ನು ಪರೀಕ್ಷಿಸಿಕೊಂಡು ನೀನು ನಿಜವಾಗಿಯೂ ಲೋಕಗುರು' ಎಂಬ ಅಸಲೆಯ ನುಡಿ ಈ ಪ್ರಸಂಗದ ವ್ಯಾಖ್ಯಾನದಂತಿದೆ.

ವನವಾಸವನ್ನು ಮುಗಿಸಿ ಅಯೋಧ್ಯೆಗೆ ಹಿಂತಿರುಗಿದ ಶ್ರೀರಾಮನನ್ನು ಕಂಡಾಗ ಕೌಸಲ್ಯೆ ಮುಂದೆ ಅಡಿಯಿಡಲಾರದೆ ನಿಂತಳು. ಕೈಕೆ ಅತಿ ಶಾಂತಿಯಿಂದ ಶ್ರೀರಾಮನೆಡೆಗೆ ನಡೆದಳು. ಶ್ರೀರಾಮನು ಅವಳ ಪಾದಗಳಿಗೆ ಮೊದಲು ನಮಸ್ಕರಿಸಿದನು.

ಇಲ್ಲಿ ಕೈಕೆಗೆ ಶ್ರೀರಾಮನು ಮೊದಲು ನಮಸ್ಕರಿಸುವುದು ಅರ್ಥಗರ್ಭಿತವಾಗಿದೆ. ಬೇರೊಂದು ರಾಮಾಯಣದಲ್ಲಿ ಶ್ರೀರಾಮನು ಕೈಕೆಗೆ ನಮಸ್ಕರಿಸಿ ಹೀಗೆ ಹೇಳುತ್ತಾನೆ. ತಾಯಿ ! ಈ ರಾಮನು ನಿನ್ನ ಉಪಕಾರವನ್ನು ಎಂದಿಗೂ ಮರೆಯುವಂತಿಲ್ಲ. ನೀನು ಅಂದು ತಂದೆಯ ಎದುರು ಹಠ ಹಿಡಿದು ನನ್ನನ್ನು ಕಾಡಿಗೆ ಅಟ್ಟಿದ್ದರಿಂದ ಈ ರಾಮನ ಕೀರ್ತಿ ಅಜರಾಮರವಾಯಿತು ಮತ್ತು ನನಗೆ ಎಷ್ಟೋ ಅಮೂಲ್ಯ ವಸ್ತುಗಳು ದೊರೆತು ನನ್ನ ಭಾಗ್ಯತೆರೆಯಿತು, ನೀನು ನನ್ನನ್ನು ಅರಣ್ಯಕ್ಕೆ ಕಳುಹಿಸಿದ್ದರಿಂದ ನಾನು ತಂದೆಯ ಆಜ್ಞೆಪಾಲಿಸಿದ್ದರಿಂದ ಅವನ ಆತ್ಮಕ್ಕೆ ಅತ್ಯಂತ ಸಂತೋಷ, ಶಾಂತಿ ಲಭಿಸಿ, ನನ್ನ ಮೇಲೆ ಅವನ ಪ್ರೇಮ ಮೊದಲಿಗಿಂತ ನೂರ್ಮಡಿ ಹೆಚ್ಚಾಯಿತು. ಮತ್ತು ಭರತನ ಸದ್ಗುಣ, ತ್ಯಾಗಗಳು ಜಗತ್ತಿಗೆಲ್ಲಾ ಗೊತ್ತಾದುವು. ಹನುಮಂತನಂತಹ ವೀರಾಧಿವೀರನಾದ ದೂತ ನಮಗೆ ದೊರಕಿದ. ಸುಗ್ರೀವನ ಗೆಳೆತನದ ಲಾಭವಾಯಿತು.

ಲಕ್ಷ್ಮಣನ ಭಕ್ತಿಯು ಆಳ ಎಷ್ಟಿದೆ ಎನ್ನುವುದು ಎಲ್ಲರಿಗೂ ತಿಳಿಯಿತು. ಸೀತೆಯು ಪತಿಭಕ್ತಿ ಪಾತಿವ್ರತ್ಯಗಳು ಅಗ್ನಿಪ್ರವೇಶದಿಂದ ವಿಶ್ವವಿದಿತವಾದುವು. ನನ್ನ ಸತ್ಯ ಪರಾಕ್ರಮ ವ್ಯಕ್ತವಾಯಿತು. ನಮಗೆ ಶತ್ರುಗಳಾರು, ಮಿತ್ರರು ಯಾರು ಎಂಬ ಪರಿಜ್ಞಾನವಾಯಿತು. ಇಷ್ಟೆಲ್ಲಾ ನಾನು ಅರಮನೆಯಲ್ಲಿದ್ದರೆ ಆಗುತ್ತಿತ್ತೇ ? ತಾಯಿ ! ಇದೆಲ್ಲವೂ ನಿನ್ನ ಪ್ರಸಾದ. ಒಟ್ಟಾರೆ ರಾಮ ದೊಡ್ಡ ಮನುಷ್ಯನಾದದ್ದು ನಿನ್ನಿಂದ. ರಾಮಾಯಣವು ಹುಟ್ಟಿದ್ದು ನಿನ್ನಿಂದ. ಆದ್ದರಿಂದ ನಿನಗೆ ಮೊದಲು ನಮಸ್ಕಾರ ಎಂದು ಮತ್ತೆ ವಂದಿಸಿದನಂತೆ.

**ಕಂಬರಾಮಾಯಣದ ಸೀತಾದೇವಿ**

ಸೀತೆಯು ರಾಮಕಥೆಯ ನಾಯಕಿ. ರಾಮಲಕ್ಷ್ಮಣರು ವಿಶ್ವಾಮಿತ್ರರೊಡನೆ ಮಿಥಿಲಾನಗರದ ಬೀದಿಯಲ್ಲಿ ಎರಡು ಕಡೆಗಳಲ್ಲೂ ನೋಡಿಕೊಂಡು ಬರುತ್ತಿದ್ದಾಗ ಮಾಳಿಗೆಯ ಮೇಲೆ ನಿಂತಿದ್ದ ಸೀತೆಯನ್ನು ನೋಡಿದ ರಾಮನು ಅವಾಕ್ಕಾಗಿ ನಿಂತನು. ಜನಕನ ರಾಜಧಾನಿಗೆ ಅವರನ್ನು ಕರೆತರಲು ಕಾರಣವನ್ನು ವಿಶ್ವಾಮಿತ್ರರು ತಿಳಿಸಿರಲಿಲ್ಲ. ಇಂತಹ ಅಪೂರ್ವದೃಶ್ಯಕ್ಕೆ ಅವರು ಸಿದ್ಧರಾಗಿರಲಿಲ್ಲ. ಸೀತೆಯ ದೃಷ್ಟಿ ಎಂಬ ಬಾಣಗಳು ಸುಂದರನಾದ ರಾಮನ ಭುಜಗಳನ್ನು ಆಳವಾಗಿ ಹೊಕ್ಕವು. ಅವ ರಿಬ್ಬರ ಹೃದಯಗಳು ಮೌನದಿಂದ ಮಾತನಾಡಿದುವು. ಅವರ ಹೃದಯಗಳಲ್ಲಿ ಅವರ ಹೃದಯಗಳು ಪರಸ್ಪರ ನೆಲೆಗೊಂಡವು ಎಂದಿದ್ದಾನೆ ಕವಿಕಂಬರ್. ಸೀತೆಯ ಪ್ರೇಮವನ್ನು ಕುರಿತು 40 ಪದ್ಯಗಳಲ್ಲಿ ಅವಳ ಕೊರಗನ್ನು ವರ್ಣಿಸಿದ್ದಾನೆ ಅವ ರಿಬ್ಬರೂ ಒಂದು ಮಾತನ್ನೂ ಆಡಲಿಲ್ಲ. ವನವಾಸಕ್ಕೆ ಹೊರಡುವಾಗ ಅವಳು ಅಯೋಧ್ಯೆಯಲ್ಲಿರಬೇಕು ಎಂದು ಹೇಳಿದ್ದೇ ಶ್ರೀರಾಮನು ಅವಳೊಡನೆ ಆಡುವ ಮೊದಲ ಮಾತು, ರಾಮನು ಸಹ ಮಿಥಿಲೆಯ ಅತಿಥಿಗೃಹದಲ್ಲಿರುವಾಗ ಹೆಸರೂ ತಿಳಿಯದೆ ಸೀತೆಯನ್ನು ಕುರಿತು ಮೌನವಾಗಿ ಚಿಂತಿಸುತ್ತಾನೆ. ಸೀತೆಯೂ ಅಂತಹ ಅನುಪಮಳಾದ ಲೋಕಸುಂದರಿ.

ಶ್ರೀರಾಮನಲ್ಲಿ ಅಂಕುರಿಸಿದ ಪ್ರೇಮವು ಕ್ಷಣಿಕವಾಗಿರಲಿಲ್ಲ. ಮಾರನೆಯ ದಿನ ನಡೆಯಬೇಕಾಗಿದ್ದ ಸ್ವಯಂವರದಲ್ಲಿ ರಾಮನಿಂದೇನಾದರೂ ಶಿವಧನುರ್ಭಂಗವಾಗದೆ ಹೋದರೆ ಸೀತೆಯು ಪ್ರಾಣತ್ಯಾಗ ಮಾಡಲು ನಿರ್ಧರಿಸಿದ್ದನ್ನು ಮುಂದೆ ರಾಮನೇ ಹನುಮಂತನಿಗೆ ತಿಳಿಸುತ್ತಾನೆ. ಕಾಡಿಗೆ ಹೋಗುವ ಮುನ್ನ ಅವಳು ಅಯೋಧ್ಯೆ ಯಲ್ಲಿರಬೇಕೆಂದು ರಾಮನು ಹೇಳಿದ್ದು ಅವಳಿಗೆ ಅತ್ಯಂತ ನೋವಾಯಿತು. ರಾಮನೇ ಅವಳ ಆತ್ಮ ಸರ್ವಸ್ವ.ಸೀತೆಯು ಮೌನವಾಗಿರುವ ಭಾರತೀಯ ಸಾಧ್ವೀ ಶಿರೋಮಣಿ. ದಶರಥನಿಗೆ ಸೀತೆಯಂತಹ ಸೊಸೆ ಲಭಿಸಿರುವುದು ತುಂಬಾ ಹೆಮ್ಮೆಯ ವಿಷಯ. ಸಪ್ತ ಲೋಕಗಳನ್ನು ಆಳುವ ಭಾಗ್ಯ ನನಗಿದ್ದನೂ, ಇಂದು ನನಗೆ ಸೌಭಾಗ್ಯದೇವತೆ ಮೊರ

ಕಿದಳು ಎಂದಿದ್ದಾನೆ ದಶರಥ.

ಅತ್ತೆಯುವರಿಗೆ ಸೀತೆ ಅತ್ಯಂತ ಅಕ್ಕರೆಯ ಸೊಸೆ. ವಿವಾಹದ ನಂತರ ಅವರಿಗೆ ಸೀತೆಯು ನಮಸ್ಕರಿಸಿದಾಗ ಅವರು ಅವಳನ್ನು ಅಪ್ಪಿಕೊಂಡು 'ರಾಮನಿಗೆ ನಿನ್ನಂಥ ವಳಲ್ಲದೆ ಇನ್ಯಾರುತಾನೇ ಪತ್ನಿಯಾಗಲು ಇದ್ದಾರೆ ? ಎಂದು ಹೇಳಿ ಅಪಾರ ಒಡವೆ ವಸ್ತ್ರಗಳನ್ನೂ ದಾಸಿಯರನ್ನೂ ಕೊಟ್ಟರು.

ಶ್ರೀರಾಮನು ತಾಪಸವೇಷಧಾರಿಯಾಗಿ ಅವಳ ಬಳಿಗೆ ಬಂದು ಅರಣ್ಯಕ್ಕೆ ಬರ ಬೇಡವೆಂದಾಗ-"ನನ್ನ ರಾಮನಿಂದ ಬೇರೆಯಾಗಿರುವುದಕ್ಕಿಂತ ಕಲ್ಲು ಮುಳ್ಳುಗಳಿರುವ ಕಾಡು ಹೆಚ್ಚು ಸುಡುವಂಥಹುದೇ ?-" ಎಂದು ಹೇಳಿ, ರಾಮನ ಪ್ರತ್ಯುತ್ತರಕ್ಕೂ ಕಾಯದೆ ಒಳಗೆ ಹೋಗಿ ಒರಟಾದ ಉಡುಪನ್ನು ಧರಿಸಿ ಅವನ ಪಕ್ಕದಲ್ಲಿ ಬಂದು ನಿಂತಳು, ಸೀತೆ. ಅರಣ್ಯವಾಸವು ಹೇಗಿರುತ್ತದೆ ಎಂಬ ಕಲ್ಪನೆಯೇ ಇರಲಿಲ್ಲ.

ಸೀತೆಯು ಲಕ್ಷ್ಮಿಯ ಅವತಾರವಾಗಿದ್ದರೂ ಕವಿಯು ಅವಳನ್ನು ಮಾನವಸಹ ಜತೆಯುಳ್ಳ ಅತ್ಯುತ್ತಮ ಸ್ತ್ರೀಯಂತೆ ಚಿತ್ರಿಸಿದ್ದಾನೆ. ರಾಮನು ಕಾಂಚನಮೃಗವನ್ನು ಹಿಡಿದುತರಲು ಹೋದಾಗ ಅವನ ಸಹಾಯಕ್ಕೆ ಲಕ್ಷ್ಮಣನು ಹೋಗಬೇಕೆಂದು ಹೇಳು ತ್ತಾಳೆ. ಲಕ್ಷ್ಮಣನ ಎಚ್ಚರಿಕೆಯ ಮಾತುಗಳಿಂದ ಅವಳು ಕೋಪಿಸಿಕೊಂಡು ನಿಷ್ಠು ರೋಕ್ತಿಗಳನ್ನಾಡುತ್ತಾಳೆ.

ಸೀತೆ ಮತ್ತು ಶೂರ್ಪನಖಿ—ಈ ಇಬ್ಬರು ಸ್ತ್ರೀಯರು ರಾವಣನ ವಿನಾಶಕ್ಕೆ ಕಾರಣರು. ರಾಮನ ಅತಿಶಯವಾದ ಸೀತಾಪ್ರೇಮವನ್ನು ಕಂಡ ಶೂರ್ಪನಖಿ— ಇವಳಲ್ಲಿ ಇವನ ಪ್ರೇಮ ಅದ್ವಿತೀಯವಾದುದು-ಎಂದುಕೊಳ್ಳುತ್ತಾಳೆ. ಈ ಭಾವ ನೆಯು ರಾವಣನ ನಾಶಕ್ಕೆ ಮೂಲವಾಯಿತು.

ರಾವಣನು ಸಂನ್ಯಾಸಿ ವೇಷದಲ್ಲಿ ಬಂದಾಗ ಅವನ ಮೋಸವು ಸೀತೆಗೆ ತಿಳಿಯು ವುದಿಲ್ಲ, ಅವನು ತಾನು ಯಾರು, ತನ್ನ ಇಚ್ಛೆಯೇನು ಎಂಬುದನ್ನು ತಿಳಿಸಿದಾಗ, ಸೀತೆ ತನ್ನ ಕಿವಿಗಳನ್ನು ಮುಚ್ಚಿಕೊಂಡು—"ಶ್ರೀರಾಮನ ಬಾಣಗಳಿಗೆ ಆಹುತಿಯಾಗ ಬೇಡ, ಓಡಿಹೋಗು ಎನ್ನುತ್ತಾಳೆ. "ನಿನ್ನ ಗಂಡನ ಬಾಣಗಳು ನನ್ನ ಕಲ್ಲಿನಂಥ ಎದೆಯ ಮೇಲೆ ಹೂವಿನಂತೆ ಬೀಳುತ್ತವೆ"—ಎಂದು ಅತನು ಹೇಳಿದ್ದನ್ನು ಕೇಳಿ ಭಯದಿಂದ ಕಿರಿಚುತ್ತಾ ಸಹಾಯಕ್ಕಾಗಿ ಲಕ್ಷ್ಮಣನನ್ನು ಕೂಗುತ್ತಾಳೆ. ತಕ್ಷಣವೇ ರಾವಣನು ಗುಡಿಸಲಿನ ಸಮೇತ ಅವಳನ್ನು ಎತ್ತಿಕೊಂಡು ತನ್ನ ವಿಮಾನಕ್ಕೆ ಹಾರಿ ಲಂಕೆಗೆ ಹೋಗುತ್ತಾನೆ,

ಹನುಮಂತನು ಅಶೋಕವನವನ್ನು ಪ್ರವೇಶಿಸಿದಾಗ ಕಂಡ ಸೀತೆಯ ದುಃಖವು ಹೇಗಿತ್ತೆಂಬುದನ್ನು ಕವಿಯು 20 ಪದ್ಯಗಳಲ್ಲಿ ನಮಗೆ ಕಣ್ಣೀರು ಬರುವಂತೆ ವಿವರಿಸಿ ದ್ದಾನೆ. ಹನುಮಂತನು ತನ್ನ ವಿಶ್ವರೂಪವನ್ನು ಸೀತೆಗೆ ತೋರಿಸಿ ಅವಳಲ್ಲಿ ವಿಶ್ವಾಸ ಮೂಡುವಂತೆ ಮಾಡಿ, ಅವಳನ್ನು ತನ್ನ ಹೆಗಲಿನ ಮೇಲೆ ಕುಳ್ಳಿರಿಸಿಕೊಂಡು ರಾಮನ

ಬಳಿಗೆ ಕರೆದೊಯ್ಯುವುದಾಗಿ ಹೇಳಿದಾಗ ಅದು ಸಾಧುವಲ್ಲವೆಂದು ಹೇಳಿ ನಿರಾಕರಿಸುತ್ತಾಳೆ.

ರಾವಣನ ವಧೆಯ ಸುದ್ದಿಯನ್ನು ರಾಮಾಜ್ಞೆಯಂತೆ ಹನುಮಂತನು ಸೀತೆಗೆ ತಿಳಿಸಿ ತ್ರಿಜಟೆಯ ವಿನಃ ಮಿಕ್ಕೆಲ್ಲ ರಾಕ್ಷಸಿಯರನ್ನು ವಧಿಸಲು ಅವಳ ಅಪ್ಪಣೆ ಬೇಡುತ್ತಾನೆ. ಭಯದಿಂದ ನಡುಗುತ್ತಾ ಆ ರಾಕ್ಷಸಿಯರು ಅವಳಲ್ಲಿ ಶರಣು ಹೋಗುತ್ತಾರೆ. ಅವಳು ಆ ರಾಕ್ಷಸಿಯರ ಮೇಲೆ ಕನಿಕರಗೊಂಡು ಅವರಿಗೆ ಅಭಯಪ್ರದಾನ ಮಾಡುತ್ತಾಳೆ. ರಾಮಾಜ್ಞೆಯಂತೆ ಅವಳು ಶುಚಿರ್ಭೂತಳಾಗಿ, ವಸ್ತ್ರಾಭರಣಾಲಂಕೃತಳಾಗಿ ಬರಬೇಕೆಂದು ತಿಳಿಸಿದಾಗ ತಾನು ಹೇಗೆ ಇದ್ದಳೋ ಹಾಗೆಯೇ ರಾಮನ ಬಳಿಗೆ ಬರಲು ಇಚ್ಛಿಸುತ್ತಾಳೆ.

ರಾಮನು ಅವಳ ಪರಿಶುದ್ಧತೆಯ ಬಗ್ಗೆ ಆಡಿದ ಕ್ರೂರವಾದ ಮಾತುಗಳಿಂದ ಚೇತರಿಸಿಕೊಂಡು ಶಾಂತಚಿತ್ತಳಾಗಿ ಚಿತೆಯನ್ನು ಸಿದ್ಧಪಡಿಸಲು ಲಕ್ಷ್ಮಣನಿಗೆ ಹೇಳುತ್ತಾಳೆ. ''ನನ್ನ ಪಾತಿವ್ರತ್ಯವನ್ನು ಹೇಗೆ ಸಮರ್ಥಿಸಿಕೊಳ್ಳಲಿ ? ಮರಣ ಹೊಂದುವುದೇ ನನಗೆ ಧರ್ಮಮಾರ್ಗ''—ಎಂದು ಹೇಳಿ ರಾಮನಿಗೆ ನಮಸ್ಕರಿಸಿ ಅಗ್ನಿ ಪ್ರವೇಶ ಮಾಡಿದಳು. ಅಗ್ನಿಭಗವಾನನು ಅವಳನ್ನು ಎತ್ತಿಕೊಂಡು ರಾಮನ ಬಳಿಗೆ ತಂದು ಬಿಟ್ಟನು. ರಾಮನು ಅವಳನ್ನು ಅಂಗೀಕರಿಸಿ ಶ್ರೀರಾಮನಾದನು, ಪ್ರಪಂಚವು ಉಸಿರಾಡಲು ತೊಡಗಿತು.

ಕಂಬರ್ ಚಿತ್ರಿಸಿರುವ ಸೀತೆಯ ಪಾತ್ರವು ನಮ್ಮ ಮನಸ್ಸಿನಲ್ಲಿ ಅಳಿಯದೆ ನಿಲ್ಲುವಂತಹುದು. ರಾಮಾಯಣಮಿದಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್' ಎಂದು ವಾಲ್ಮೀಕಿಯು ಹೇಳಿರುವಂತೆ ಕಂಬರಾಮಾಯಣವೂ ಸಹ ಸಾಧ್ವೀಶಿರೋಮಣಿಯಾದ ಸೀತೆಯ ಕಥೆ.

**ಶ್ರೀರಾಮಾಯಣ ದರ್ಶನದ ಸೀತಾದೇವಿ**

ರಾಮಲಕ್ಷ್ಮಣರು ವಿಶ್ವಾಮಿತ್ರರೊಡನೆ ಮಿಥಿಲೆಗೆ ಬಂದಾಗ ಸೀತೆಯು ರಾಮನನ್ನು ನೋಡಿದ ಪ್ರಸಂಗವು ಮನೋಹರವಾಗಿದೆ, ಜನಕರಾಜನ ಇಂಗಿತದಂತೆ ವಿಶ್ವಾಮಿತ್ರರು ರಾಮಲಕ್ಷ್ಮಣರು ಪಕ್ಕದ ಹೂದೋಟಕ್ಕೆ ಹೋಗುವಂತೆ ಸೂಚಿಸಿದರು. ಅಂತೆಯೇ ಅವರು ಹೂತೋಟವನ್ನು ಹೊಕ್ಕು ಅಲ್ಲಿಯ ಕೊಳದ ನೀರಿಗೆ ಕಲ್ಲೆಸೆಯುವ ಆಟದಲ್ಲಿ ಮಗ್ನರಾಗಿದ್ದಾಗ, ಅಲ್ಲಿಗೆ ಊರ್ಮಿಳೆ, ಮಾಂಡವಿ, ಶ್ರುತಕೀರ್ತಿಯರೊಡನೆ ಬಂದ ಸೀತೆ, ಒಂದು ಮಲ್ಲಿಗೆಗಿಡದ ಮರೆಯಲ್ಲಿ ನಿಂತು ಲಕ್ಷ್ಮಣಸಮೇತನಾದ ರಾಮನನ್ನು ನೋಡಿದಳು. ಅವಳ ಮುಖವು ಕೆಂಪೇರಿತು. ಬಾಲ್ಯದಿಂದ ತಾನು ಕನಸಿನಲ್ಲಿ ಕಾಣುತ್ತಿದ್ದ ನೀಲಮೇಘಶ್ಯಾಮಮೂರ್ತಿಯೇ ಆ ತರುಣನೆಂದು ಊರ್ಮಿಳೆಯೊಂದಿಗೆ ಹೇಳಿದಳು. ಅರಮನೆಗೆ ಹಿಂತಿರುಗಿದ ಕೂಡಲೇ ಗಿರಿಜೇಶನನ್ನು ಪೂಜಿಸಿ

ಅವನ ಧನುಸ್ಸು 'ಗರಿಯಂತೆ ಹಗುರಾಗಿ ಬಳ್ಳಿಯಂತೆ ಬಾಗು'ವಂತಾಗಬೇಕೆಂದು ಪ್ರಾರ್ಥಿಸಿದಳು.

ವಿವಾಹವಾದ ನಂತರ "ತನ್ನತನವನ್ನು ಇಲ್ಲಗೈದವಳಾದ" ಸೀತೆ ಶ್ರೀರಾಮ ಪ್ರೇಮದಲ್ಲಿ ತನ್ನ ಜೀವನದ ಪರಮಪುರುಷಾರ್ಥವನ್ನು ಕಂಡಳು. ರಾಮನು ವನವಾಸಕ್ಕೆ ಹೋಗುವುದನ್ನು ಕೇಳಿ–"ನಿನ್ನೊಡನಿದ್ದರೆ ನನಗೆ ಕಾಡೂ ನಾಡಾಗುತ್ತದೆ. ನೀನೇ ನನಗೆ ಸರ್ವಸುಖ"—ಎಂದು ಪ್ರಾರ್ಥಿಸಿ ಸಂಗಡ ಹೊರಟಳು.

ಮಾಯಾಮೃಗವು 'ಓ ಲಕ್ಷ್ಮಣಾ' ಎಂದು ಕೂಗಿ ಕೊಂಡದ್ದನ್ನು ಕೇಳಿ, ರಾಮನ ಸಹಾಯಕ್ಕೆ ಹೋಗಬೇಕೆಂದು ಲಕ್ಷ್ಮಣನನ್ನು ಬಲವಂತಮಾಡಿ, ಭೂತಿನಿಯಂತೆ ನೋಡಿ, ಅವನನ್ನು—ಭ್ರಾತೃಘಾತಕ ಪಾಪಿ, ಗೋಮುಖವ್ಯಾಘ್ರನೊಲ್ ಬಂದೆಯೆಮ್ಮೊಡಗೂಡಿ, ಪೂರ್ವಜನ್ಮದ ಪಾಪದಾ ಕರ್ಮಪಾಕ ಬರ್ಪವೋಲ್—ಎಂದು ನಿಂದಿಸುತ್ತಾಳೆ.

ರಾವಣನ ನಿಧನದ ಸುದ್ದಿಯನ್ನು ಶ್ರೀರಾಮನ ಆಜ್ಞೆಯಂತೆ ತಿಳಿಸಿದ ಹನುಮಂತನಿಗೆ—ಪುರುಷೋತ್ತಮ ಪ್ರಿಯತಮನ ಪುಣ್ಯದರ್ಶನಮೆ ಪರಮಪುರುಷಾರ್ಥಕಂ ಮಿಗಿಲೆನಗೆ ಪ್ರಿಯತಮಂ—ಎಂದು ಪ್ರತಿಸಂದೇಶವನ್ನು ಅನುಗ್ರಹಿಸುತ್ತಾಳೆ.

ಶ್ರೀರಾಮನ ಆಜ್ಞೆಯಂತೆ ಶುಚಿರ್ಭೂತಳಾಗಿ, ಸಾಲಂಕೃತೆಯಾಗಿ ಬಂದಳು. ರಾಮನು ಅವಳನ್ನು ನೋಡಿದನು, ತೃಪ್ತಿಮೂಡಿತು. ಕೂಡಲೇ ಬಿಮ್ಮನೆ ಬಿಗಿಯಾದ. ಅವಳನ್ನು ದುರದುರನೆ ನೋಡಿ—'ಶಿರಃಸ್ನಾತೆ, ಭೂಜಾತೆ, ರಾಕ್ಷಸಶ್ರೀಯುತೆ, ಅಲಂಕೃತೆ' ಎನ್ನುತ್ತ, 'ಕುಲತೇಜಮಂ ಮತ್ತೆನ್ನ ಪುರುಷಕಾರವನುಳಿಸೆ ಜಯಿಸಿದೆನ್, ಕೊಂದೆನ್ ದಶಗ್ರೀವನಂ, ನಿನ್ನ ಪಡೆಯಲಲ್ತು ; ತೊಲಗುನಡೆ, ಮೂರ್ಖೆ, ನೀನೆಲ್ಲಿಗಾದೊಡಮೆನ್ನ ಕಣ್ಮುಂದೆ ನಿಲ್ಲದಿರ್—ಎಂದು ನಿಷ್ಠೂರವಾಗಿ ಹೇಳಿದ್ದನ್ನು ಕೇಳಿ, ಆ ಮಿಥ್ಯಾಪವಾದಕ್ಕೆ ಗುರಿಯಾದ ಬಾಳು ಸಲ್ಲದೆಂದು, ಮೈದುನನಿಂದ ಚಿತೆಯನ್ನು ಸಿದ್ಧಗೊಳಿಸಿ, ರಾಮನಿಗೆ ಪ್ರದಕ್ಷಿಣೆ ಮಾಡಿ, ಪಾದಗಳಿಗೆ ನಮಿಸಿ ಅಗ್ನಿಪ್ರವೇಶ ಮಾಡಿದಳು. ಅವಳ ಹಿಂದೆಯೇ ಅಗ್ನಿಪ್ರವೇಶ ಮಾಡಿದ ಶ್ರೀರಾಮನ ಕೈಹಿಡಿದು ಹೊರಗೆ, ಬಂದು ಅಲೌಕಿಕ ಸ್ವರ್ಗೀಯ ಕಾಂತಿಯಿಂದ ವಿರಾಜಿಸಿದಳು.

ಕಂಬರಾಮಾಯಣದಲ್ಲಿರುವಂತೆ ಶ್ರೀರಾಮಾಯಣದರ್ಶನದಲ್ಲೂ ಲಕ್ಷ್ಮಿಯು ಸೀತೆ, ಆದರ್ಶಸತಿ, ಸಾಧ್ವೀಶಿರೋಮಣಿ.

**ಕಂಬರ್ ಚಿತ್ರಿಸಿರುವ ಲಕ್ಷ್ಮಣ**

ಸುಮಿತ್ರೆಯ ಮಗನಾದ ಲಕ್ಷ್ಮಣನು ಶ್ರೀರಾಮನ ವನವಾಸದ ಕಾಲದಲ್ಲಿ ಎಡಬಿಡದೆ ಅವನೊಡನೆ ಇದ್ದು, ಅವನ ಕೈಂಕರ್ಯವನ್ನು ಮಾಡಿದ ಮಹಾನುಭಾವ, ಅವನ ಭ್ರಾತೃಪ್ರೇಮವು ಅದ್ವಿತೀಯ, ರಾಮನ ಸೇವಾಭಾಗ್ಯವನ್ನು ಪಡೆದವನಾದ್ದ

ರಿಂದ, ಕೈಂಕರ್ಯ ಲಕ್ಷ್ಮಿಯನ್ನು ಪಡೆದವನಾದ್ದರಿಂದಲೇ ವಾಲ್ಮೀಕಿಯು ಲಕ್ಷ್ಮಣನನ್ನು 'ಲಕ್ಷ್ಮಣೋ ಲಕ್ಷ್ಮೀ ಸಂಪನ್ನಃ' ಎಂದಿರುವುದು. ಲಕ್ಷ್ಮಣನು ಶ್ರೀರಾಮನ ನೆರಳಿದ್ದಂತೆ.

ಲಕ್ಷ್ಮಣನು ವಿಶ್ವಾಮಿತ್ರರೊಡನೆ ರಾಮನನ್ನು ಅನುಸರಿಸಿ ಯಾಗರಕ್ಷಣೆಗೆ ಹೋಗುತ್ತಾನೆ. ರಾಮನ ಸಂಗಡ ಶಸ್ತ್ರಗಳ ಪ್ರಯೋಗದ ರಹಸ್ಯದ ಉಪದೇಶವನ್ನು ಪಡೆಯುತ್ತಾನೆ. ನಂತರ ರಾಮನೊಡನೆ ಮಿಥಿಲೆಗೆ ಹೋಗಿ ಊರ್ಮಿಳೆಯನ್ನು ವಿವಾಹವಾಗುತ್ತಾನೆ.

ಕೈಕೆ ರಾಮನಿಗೆ ವನವಾಸ ವಿಧಿಸಿದ್ದನ್ನು ಕೇಳಿ ಕೆಣಕಿದ ಸರ್ಪದಂತೆ ಕೋಪಾವಿಷ್ಟನಾಗಿ—ಸಿಂಹದ ಮರಿಗೆ ಸಿದ್ಧಗೊಳಿಸಿದ ಮಾಂಸವನ್ನು ನಾಯಿಗೆ ಹಾಕುವುದು ಕೈಕೆಗೆ ಇಷ್ಟವೇ ? ಆಹಾ ! ಎಂಥಾ ಬುದ್ಧಿವಂತಿಕೆ—ಎಂದು, ಕವಚ, ಕತ್ತಿ, ಧನುರ್ಬಾಣಗಳನ್ನು ಧರಿಸಿ ಅಯೋಧ್ಯೆಯ ಬೀದಿಗಳಲ್ಲಿ ಹೊರಟು—"ನನ್ನ ರಾಮನು ಅಯೋಧ್ಯೆಯ ದೊರೆಯಾಗುವುದನ್ನು ವಿರೋಧಿಸುವವರು ತ್ರಿಮೂರ್ತಿಗಳೇ ಆಗಲಿ, ಯಾರಾದರಾಗಲೀ ಅವರನ್ನು ನಾಶಮಾಡಿ ಭೂಭಾರ ಇಳಿಸುತ್ತೇನೆ. ಒಬ್ಬ ಸ್ತ್ರೀ ಈ ಪವಿತ್ರ ನಾಡಿನ ಸಿಂಹಾಸನವನ್ನು ಆಕ್ರಮಿಸುವುದಕ್ಕೆ ಅವಕಾಶ ಕೊಡುವುದಿಲ್ಲ.''—ಎಂದು ಘರ್ಜಿಸುತ್ತಾನೆ. ಇವನ ಧನುಷ್ಟಂಕಾರವನ್ನು ಕೇಳಿದ ರಾಮನು ಇವನನ್ನು ಮಗೂ, ನೀನು ದೇವತೆಗಳೊಂದಿಗೆ ಯುದ್ಧ ಮಾಡಲು ಹೊರಟಿಲ್ಲ, ಅಲ್ಲವೇ ?—ಎಂದಾಗ, ಲಕ್ಷ್ಮಣನು ನಿನಗೆ ಸಿಂಹಾಸನವನ್ನು ತಪ್ಪಿಸಿದವಳ ಕಣ್ಣೆದುರಿನಲ್ಲೇ ನಿನ್ನನ್ನು ದೊರೆಯಾಗಿ ಮಾಡಲು ಪ್ರತಿಜ್ಞೆ ಮಾಡಿದ್ದೇನೆ. ದಯವಿಟ್ಟು ನನ್ನ ಕೈಯಿಂದ ಕಿರೀಟವನ್ನು ಸ್ವೀಕರಿಸು. ನನಗೆ ನೀನೆ ತಂದೆ, ತಾಯಿ, ಪ್ರಭು, ಎಲ್ಲರೂ"—ಎನ್ನುತ್ತಾನೆ. ಈ ಮಾತುಗಳು ಅವನ ವ್ಯಕ್ತಿತ್ವದ ಪ್ರತೀಕವಾಗಿದೆ.

ರಾಮನು ತಾಪಸಿಯ ಉಡುಪನ್ನು ಧರಿಸಿದಾಗ ಲಕ್ಷ್ಮಣನು ಏನನ್ನೂ ಹೇಳದೆ ಮೌನವಾಗಿ ತನ್ನ ಬೆಲೆಬಾಳುವ ಉಡುಪನ್ನೆಲ್ಲಾ ತ್ಯಜಿಸಿ ತಾನೂ ಸಹ ತಾಪಸಿಯ ಉಡುಪನ್ನು ಧರಿಸುತ್ತಾನೆ. ಅವನನ್ನು ಅಯೋಧ್ಯೆಯಲ್ಲಿರುವಂತೆ ರಾಮನು ಹೇಳಿದಾಗ ಅವನ ಭ್ರಾತೃಪ್ರೇಮಕ್ಕೆ ಆಘಾತವಾದಂತಾಗಿ–''ನಾನು ನಿನಗೆ ಮಾಡಿರುವ ಅಪರಾಧವಾದರೂ ಏನು ?''—ಎಂದು ಬಹಳನೊಂದು ಹೇಳುತ್ತಾನೆ. ಅವನಿಗೆ ರಾಮನನ್ನು ಬಿಟ್ಟಿರಲು ಸಾಧ್ಯವೇ ಇಲ್ಲ. ರಾಮನು ಒಪ್ಪಿಗೆ ಕೊಡಬೇಕಾಯಿತು.

ವನವಾಸದ ಕಾಲದಲ್ಲಿ ಅಣ್ಣನು ಸುಖವಾಗಿರುವಂತೆ ನೋಡಿಕೊಳ್ಳುವುದು, ಜ್ಞಾತ ಮತ್ತು ಅಜ್ಞಾತ ಶತ್ರುಗಳಿಂದ ಅವನನ್ನು ರಕ್ಷಿಸಿಕೊಳ್ಳುವುದೊಂದೇ ಅವನ ಗುರಿ. ಅಣ್ಣನಿಗಾಗಿ ಪರ್ಣಕುಟಿಗಳನ್ನು ಕಟ್ಟುವುದು, ಗೆಡ್ಡೆಹಣ್ಣುಗಳನ್ನು ಆಹಾರಕ್ಕಾಗಿ ತಂದುಕೊಡುವುದು, ರಾಮ ಮತ್ತು ಸೀತೆ ನಿದ್ರಿಸುತ್ತಿರುವಾಗ ಕಾವಲಾಗಿರುವುದು–ಇದೇ ಆತನ ಕೈಂಕರ್ಯ.

ಅಣ್ಣನಿಗೆ ನೋವುಂಟು ಮಾಡುವವರೆಲ್ಲರೂ ತನ್ನ ಶತ್ರುಗಳೆಂದು ಲಕ್ಷ್ಮಣನು

ತಿಳಿದಿದ್ದನು. ಅವರು ನಿಜವಾಗಿ ನೋವುಂಟು ಮಾಡಿದ್ದಾರೆಯೇ ಎಂಬುದನ್ನು ವಿಚಾರಿಸಿ ತಿಳಿಯುವ ಗೋಜಿಗೆ ಹೋಗುತ್ತಿರಲಿಲ್ಲ. ಅಯೋಧ್ಯೆಗೆ ಹಿಂತಿರುಗ ಬೇಕೆಂದು ಶ್ರೀರಾಮನನ್ನು ಪ್ರಾರ್ಥಿಸಲು ಬರುತ್ತಿದ್ದ ಭರತನನ್ನು ನೋಡಿ ಅವನು ರಾಮನಿಗೆ ಅಪಾಯವುಂಟು ಮಾಡುವುದಕ್ಕಾಗಿಯೇ ಬರುತ್ತಿರುವನೆಂದು ತೀರ್ಮಾನಿಸಿ ಗುಡಿಸಲಿಗೆ ಓಡಿ ಬಂದು ಶಸ್ತ್ರಾಸ್ತ್ರಗಳನ್ನು ಧರಿಸಿ, ರಾಮನೊಂದಿಗೆ ಭರತನನ್ನು ನಿಂದಿಸಿ, ಅವನನ್ನು ನರಕಕ್ಕೆ ಕಳುಹಿಸುವುದಾಗಿ ಹೇಳುತ್ತಾನೆ. ರಾಮನಲ್ಲಿ ಅವನ ಪ್ರೀತಿ ಅಸಾಧಾರಣವಾದುದು.

ಚಿನ್ನದ ಜಿಂಕೆಯನ್ನು ಹಿಡಿದು ತರಲು ರಾಮನು ಹೊರಟಾಗ ಅದು ನಿಜವಾದ ಜಿಂಕೆಯಲ್ಲ ; ರಾಕ್ಷಸರ ಮಾಯೆ ಎಂದು ಎಚ್ಚರಿಸುತ್ತಾನೆ. ಅವನ ಎಚ್ಚರಿಕೆಯ ಮಾತು ನಿಜವಾದುದು ಎಂದು ಅನಂತರ ತಿಳಿದು ಬರುತ್ತದೆ. ಮಾರೀಚನು ಬಾಣದ ಏಟಿನಿಂದ ಕೆಳಗೆ ಬೀಳುವಾಗ ರಾಮನ ಧ್ವನಿಯನ್ನು ಅನುಸರಿಸಿ—ಹಾ ಸೀತೆ, ಹಾ ಲಕ್ಷ್ಮಣಾ—ಎಂದು ಕೂಗಿಕೊಂಡದ್ದು ಕೇಳಿದಾಗ ಅವನು ಮೋಸ ಹೋಗುವುದಿಲ್ಲ. ಅವನು ಸುಮ್ಮನಿದ್ದುದನ್ನು ನೋಡಿ ಸೀತೆ ನಿಷ್ಠುರೋಕ್ತಿಗಳನ್ನಾಡಿದಾಗ ಅಲ್ಲಿ ಒಂದು ಕ್ಷಣವೂ ನಿಲ್ಲಲಾರದೆ ಸೀತೆಯ ಕ್ಷೇಮವನ್ನೇ ಚಿಂತಿಸುತ್ತಾ ಆಶ್ರಮವನ್ನು ಬಿಟ್ಟು ಹೊರಟನು.

ಆಶ್ರಮಕ್ಕೆ ಹಿಂತಿರುಗಿ ಬಂದಾಗ ಸೀತೆ ಅಲ್ಲಿ ಇಲ್ಲದಿರುವುದನ್ನು ನೋಡಿ ರಥವು ಹೋಗಿರುವ ದಾರಿಯನ್ನು ಅನುಸರಿಸಬೇಕೆಂದೂ, ದಾರಿಯಲ್ಲಿ ಮುರಿದು ಬಿದ್ದಿದ್ದ ಧ್ವಜ ಇತ್ಯಾದಿಗಳನ್ನು ನೋಡಿ, ರಾವಣನು ಸೀತೆಯನ್ನು ಅಪಹರಿಸಿರ ಬೇಕೆಂದೂ, ದಾರಿಯಲ್ಲಿ ಜಟಾಯು ಅವನನ್ನು ತಡೆದಿರಬೇಕೆಂದೂ ರಾಮನಿಗೆ ಸಮಾಧಾನ ಹೇಳುತ್ತಾನೆ. ಗಾಯಗೊಂಡು ದಾರಿಯಲ್ಲಿ ಬಿದ್ದಿದ್ದ ಜಟಾಯುವಿನಿಂದ ವಿಷಯ ತಿಳಿದ ರಾಮನು ಅತ್ಯಂತ ದುಃಖಿತನಾಗಿ ವಿಲಾಪಿಸಿದಾಗ ಅವನಿಗೆ ಸಮಾಧಾನ ಹೇಳಿ ಧೈರ್ಯ ತುಂಬುತ್ತಾನೆ.

ಲಕ್ಷ್ಮಣನ ಪಾತ್ರವು ಹೆಚ್ಚಾಗಿ ಕಂಡು ಬರುವುದು ಯುದ್ಧಕಾಂಡದಲ್ಲಿ, ಮೊದಲ ಸಲ ರಾವಣನೊಂದಿಗೆ ಯುದ್ಧ ಮಾಡಿ ಅವನ ಪ್ರಶಂಸೆಗೆ ಪಾತ್ರನಾಗುತ್ತಾನೆ. ಎರಡನೆಯ ದಿನ ಕುಂಭಕರ್ಣನನ್ನು ಎದುರಿಸಿ ಯುದ್ಧ ಮಾಡುತ್ತಾನೆ. ಅತಿಕಾಯ ನೊಡನೆ ಯುದ್ಧ ಮಾಡಲು ಹೊರಟಾಗ ವಿಭೀಷಣನು ಅವನ ಬಗ್ಗೆ ಶಂಕಿಸಿದಾಗ ರಾಮನು ಅವನ ಶೌರ್ಯವನ್ನು ವಿಭೀಷಣನೊಡನೆ ಪ್ರಶಂಸಿಸುತ್ತಾನೆ. ರಾಮನಿಗೆ ನಮಿಸಿ ಅಂಗದನ ಭುಜಗಳ ಮೇಲೆ ಕುಳಿತು ಶೌರ್ಯದಿಂದ ಯುದ್ಧ ಮಾಡಿ ಅತಿಕಾಯ ನನ್ನು ವಧಿಸುತ್ತಾನೆ. ಈ ಸುದ್ದಿಯನ್ನು ತಿಳಿದ ಇಂದ್ರಜಿತ್ ಲಕ್ಷ್ಮಣನನ್ನು ಕೊಂದೇ ತೀರುವುದಾಗಿ ಪ್ರತಿಜ್ಞೆ ಮಾಡಿ ಯುದ್ಧಕ್ಕೆ ಬರುತ್ತಾನೆ. ಇವರಿಬ್ಬರಿಗೂ ಘೋರ ಯುದ್ಧ ನಡೆಯುತ್ತದೆ. ಲಕ್ಷ್ಮಣನ ಶೌರ್ಯ, ಕೌಶಲ್ಯವನ್ನು ಅನುಭವಿಸಿದ

ಇಂದ್ರಜಿತ್—ಇವನು ರಾಮ ಅಥವಾ ನಾರಾಯಣನೇ ಇರಬೇಕು. ಹಾಗಿಲ್ಲದಿದ್ದರೆ ಇವನ್ಯಾರೋ ತಿಳಿಯದು. ಇವನಿಗೆ ಸಮಾನರಾದವರು ನಮ್ಮ ರಾಜಧಾನಿಯಲ್ಲಿ ಯಾರಿದ್ದಾರೆ !" ಎನ್ನುತ್ತಾನೆ.

ಲಕ್ಷ್ಮಣ ಮತ್ತು ಇಂದ್ರಜಿತ್ತಿನ ಎರಡನೆ ಸಲದ ಯುದ್ಧವು ಇನ್ನೂ ಭಯಂಕರ ವಾಗಿ ನಡೆಯುತ್ತದೆ. ಈ ಯುದ್ಧದಲ್ಲಿ ಇಂದ್ರಜಿತ್ ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಲಕ್ಷ್ಮಣನು ಮೂರ್ಛೆ ಹೋಗುತ್ತಾನೆ ಮತ್ತು ಆಂಜನೇಯನು ತಂದ ಸಂಜೀವಿನಿ ಮೂಲಿಕೆಯಿಂದ ನಿದ್ರೆಯಿಂದ ಎದ್ದವನಂತೆ ಏಳುತ್ತಾನೆ.

ಕಂಬರ್ ಚಿತ್ರಿಸಿರುವ ಲಕ್ಷ್ಮಣನು ರಾಮನ ಪ್ರಾಣವೇ ಹೊರಗೆ ಲಕ್ಷ್ಮಣನ ರೂಪದಲ್ಲಿ ಚಲಿಸುತ್ತಿತ್ತು ಎಂಬಂತೆ, ಅನವರತ ರಾಮನನ್ನು ಅನುಸರಿಸುತ್ತಿದ್ದ ಅಕ್ಕರೆಯ ತಮ್ಮ.

**ಕವಿ ಕುವೆಂಪು ಚಿತ್ರಿಸಿರುವ ಲಕ್ಷ್ಮಣ**

ಲಕ್ಷ್ಮಣನು ತನ್ನ ಹಿರಿಯಣ್ಣನನ್ನು 'ಚಿರದಿನಂ ಬೆಂಬಿಡದೆ' ಇದ್ದವನು. ಅವನಿಗೆ ಸದಾ ಶ್ರೀರಾಮನ ಸಾಹಚರ್ಯ, ಜನಕರಾಜನ ಹೃದಯದ ಇಂಗಿತಕ್ಕೆ ಮನವೊಪ್ಪಿದ ಸೌಮಿತ್ರಿ ಊರ್ಮಿಳೆಯನ್ನು ವಿವಾಹವಾದನು. ಅಣ್ಣನಿಗೆ ವನವಾಸವೆಂದು ತಿಳಿದ ಕೂಡಲೇ ಕೋಪೋದ್ದೀಪಿತನಾಗಿ—ಪಿತನಾದೊಡೇಂ? ಚಪಲಮತಿ ಗೌರವಾರ್ಹನೇ ? ಶಾಸನಾರ್ಹಂ !—ಎಂದು ತಂದೆಯನ್ನು ನಿಂದಿಸಿ—ನೋಳ್ಪೆನಾಂ, ಸಾಕೇತ ಸಿಂಹಾಸನಕೆ ಸೆಣಸಿ ನಿಲ್ವರಾರ್ ?" —ಎಂದು ಯಾರನ್ನೂ ಲೆಕ್ಕಿಸದೆ ಮಾತನಾಡುತ್ತಾನೆ. ಅಣ್ಣನ ಸಮಾಧಾನವನ್ನು ಕೇಳಿ— ನಾಗಸ್ವರಂಗೇಳ್ದ ನಾಗರನ ತೆರನಾಗಿ'—ಶಾಂತನಾಗುತ್ತಾನೆ. ಅವನ ಪಾದಗಳಿಗೆ ಬಿದ್ದು ತನ್ನನ್ನೂ ಅರಣ್ಯಕ್ಕೆ ಸಂಗಡ ಕರೆದೊಯ್ಯಲು ಪ್ರಾರ್ಥಿಸಿ ಅವನು ಅಸ್ತು ಎನ್ನುವವರೆಗೂ ಮೇಲೇಳಲಿಲ್ಲ.

ಶ್ರೀರಾಮನನ್ನು ಅಯೋಧ್ಯೆಗೆ ಕರೆತರಲು ಭರತನು ಚಿತ್ರಕೂಟಕ್ಕೆ ಬರುತ್ತಿದ್ದಾಗ, ಅಣ್ಣನ ಮಾತಿನಂತೆ ಎತ್ತರದ ಮರವನ್ನೇರಿ ಸೇನಾವಾಹಿನಿಯನ್ನು ಕಂಡು— "ದುಷ್ಟಮತಿಯಾದ ಭರತನು ದುರುದ್ದೇಶದಿಂದ ಬರುತ್ತಿದ್ದಾನೆ. ಯುದ್ಧಕ್ಕೆ ಸಿದ್ಧನಾಗು" ಎಂದು ಅಣ್ಣನಿಗೆ ಹೇಳುತ್ತಾನೆ.

"ಆ ಧರ್ಮಶೀಲನು ರಾಜ್ಯವನ್ನು ಒಪ್ಪಿಸಲು ಬರುತ್ತಿದ್ದಾನೆ. ಅವನುಪ್ರಾಜ್ಞ, ದುಡುಕಬೇಡ"—ಎಂದು ರಾಮನು ಹೇಳಿದ್ದನ್ನು ಕೇಳಿ ಸುಮ್ಮನಾಗುತ್ತಾನೆ.

ಕಾಂಚನ ಮೃಗವು ಬೇಕೆಂದು ಆಸೆಪಟ್ಟ ಅತ್ತಿಗೆ ಸೀತೆಗೆ ಅದು ಮಾರೀಚ ಮಾಯಾಮೃಗವೆಂದು ತಿಳಿಸಿದನು. ಆ ಮೃಗರೂಪಿಯಾದ ಮಾರೀಚನು ರಾಮನ ಬಾಣದಿಂದ ಏಟುತಿಂದು—ಓ ಲಕ್ಷ್ಮಣಾ—ಎಂದು ಲೋಕಶೋಕವನ್ನೆಲ್ಲಾ ಕರೆಯುವಂತೆ ಆರ್ತನಾದ ಮಾಡಿದ್ದನ್ನು ಕೇಳಿದ ಸೀತೆ ಅವನನ್ನು ರಾಮನ ಸಹಾಯಕ್ಕೆ

ಹೋಗಬೇಕೆಂದು ನಿಷ್ಠುರವಾಗಿ ನಿಂದಿಸಿದಾಗ ನಿಶ್ಚಲತೆಯಿಂದ—ಹೆಣ್ಣಿನದ ಕಲ್ಪನಕ್ಕೆ ಎಲ್ಲೆಯುಂಟೆ—ಎಂದು ಅವಳ ಕ್ಷಮೆ ಬೇಡಿ ಹೊರಟನು. ಸೀತಾಪಹರಣವಾದುದನ್ನು ತಿಳಿದ ರಾಮನು ಮತಿವಿಕಲನಂತೆ ಗೋಳಾಡಿ, ಮೂರ್ಛೆಹೋದಾಗ ಅವನಿಗೆ ಶೈತ್ಯೋಪಚಾರಮಾಡಿ ಸಮಾಧಾನ ಹೇಳುತ್ತಾನೆ.

ಯುದ್ಧಕಾಲದಲ್ಲಿ ಇಂದ್ರಜಿತ್ ಮುಕ್ಕಣ್ಣನನ್ನು ಲೆಕ್ಕಿಸದಂತಹ ಶಕ್ತಿಯನ್ನು ಸಂಪಾದಿಸಲು ನಿಕುಂಭಿಳಾಯಾಗಶಾಲೆಯನ್ನು ಸೇರಿ ಯಾಗಮಾಡಲು ತೊಡಗಿದಾಗ, ವಿಭೀಷಣನು ಹೇಳಿದಂತೆ, ವಿಭೀಷಣ ಸುಷೇಣಾದಿಗಳೊಡನೆ ಅಲ್ಲಿಗೆ ಹೋಗಿ ರಾಮ ಧ್ಯಾನಮಾಡುತ್ತಾ ಅಗ್ನಿದ್ವಾರವನ್ನು ಪ್ರವೇಶಿಸಿ ಅಗ್ನಿಚಕ್ರಕ್ಕೆ ಕಾಲಿಟ್ಟ ಕೂಡಲೇ ಅವನ ದೇಹವು ಸಿಡಿದೆದ್ದು, ಸೀದ ಶವದಂತಾಯಿತು. ಮಹಾಮಂತ್ರವೈದ್ಯ ಸುಷೇಣನ ಆಣತಿಯಂತೆ ಸಮೀರಕುಮಾರನು ತಂದ ಸಂಜೀವಿನಿಲತೆಯ ಪ್ರಯೋಗದಿಂದ ಪ್ರಜ್ಞೆ ಹೊಂದಿ ಮತ್ತೆ ಅಗ್ನಿಚಕ್ರವನ್ನು ಪ್ರವೇಶಿಸಿ ದೇವತೆಗಳ ಮಾತಿನಂತೆ ಐಂದ್ರಾಸ್ತ್ರವನ್ನು ಪ್ರಯೋಗಿಸಿ ಇಂದ್ರಜಿತ್ತನ್ನು ಸಂಹರಿಸಿದನು.

ಮತ್ತೊಮ್ಮೆ ರಾಮ ರಾವಣಯುದ್ಧದಲ್ಲಿ ಲಕ್ಷ್ಮಣನು ರಾವಣನಸಾರಥಿ, ರಥಾಶ್ವಗಳನ್ನು ಧ್ವಂಸಮಾಡಿದನು. ವಿಭೀಷಣನ ಮೇಲೆ ರಾವಣನು ಶಕ್ತ್ಯಾಯುಧ ವನ್ನು .ಪ್ರಯೋಗಿಸಿದಾಗ ಮಧ್ಯೆ ನುಗ್ಗಿ ಅದನ್ನು ಕತ್ತರಿಸಿದನು. ಕೋಪಗೊಂಡ ರಾವಣನು ಪ್ರಯೋಗಿಸಿದ ಅಷ್ಟಘಂಟಾಶಕ್ತಿಯಿಂದ ಮೂರ್ಛಿತನಾಗಿ ಮಂತ್ರ ವೈದ್ಯನ ಚಿಕಿತ್ಸೆಯಿಂದ ಕ್ಷೇಮಗೊಂಡನು.

ಯುದ್ಧಾನಂತರ ರಾಮನಿಂದ ತಿರಸ್ಕರಿಸಲ್ಪಟ್ಟ ಸೀತೆಯ ಆಣತಿಯಂತೆ ಅತಿ ದುಃಖಿತನಾಗಿ ವಾನರರ ಸಹಾಯದಿಂದ ಬೃಹಚ್ಚಿತೆಯನ್ನು ಸಿದ್ಧಗೊಳಿಸುತ್ತಾನೆ.

ವಾಲ್ಮೀಕಿ ಮತ್ತು ಕಂಬರಾಮಾಯಣಗಳಲ್ಲಿರುವಂತೆ ಶ್ರೀರಾಮಾಯಣ ದರ್ಶನದಲ್ಲಿ ರಾಮಾನುಜನಾದ ಲಕ್ಷ್ಮಣನು ಶ್ರೀರಾಮನ ಮತ್ತೊಂದು ಪ್ರಾಣವೆಂಬಂತೆ ಚಿತ್ರಿಸಲ್ಪಟ್ಟಿದ್ದಾನೆ.

**ಕಂಬರ ಭರತ**

ಭರತನು ರಾಮಾಯಣದಲ್ಲಿ ಪೂರ್ತಿಯಾಗಿ ಸೇರಿಕೊಂಡಿಲ್ಲವಾದರೂ ಅವನ ಅಸದೃಶಭ್ರಾತೃ ಪ್ರೇಮ ಮತ್ತು ತ್ಯಾಗದಿಂದ ಹೃದಯಸ್ಪರ್ಶಿಯಾದ ಪಾತ್ರ ವಾಗಿದ್ದಾನೆ. ಅವನಿಗಾಗಿ ತಾಯಿ ಕೈಕೆ ರಾಮನನ್ನು ವನವಾಸಕ್ಕೆ ಕಳುಹಿಸಬೇಕೆಂದು ದಶರಥನನ್ನು ವರಕೇಳಿದಳು. ಭರತನು ಜನಕನ ತಮ್ಮನ ಮಗಳಾದ ಮಾಂಡವಿಯನ್ನು ವಿವಾಹವಾಗುತ್ತಾನೆ. ಅಯೋಧ್ಯಾಕಾಂಡದಲ್ಲಿ ಅವನ ಪಾತ್ರವು ರೂಪುಗೊಂಡು ಯುದ್ಧ ಕಾಂಡದಲ್ಲಿ ಅದು ಸಂಪೂರ್ಣಗೊಳ್ಳುತ್ತದೆ. ಕೈಕೆಯ ಕ್ರೂರವಾದ ನಡತೆಯು ಭರತನ ಪ್ರಾಮುಖ್ಯತೆಗೆ ಮೊದಲು ಕಾರಣವಾಗಿದೆ. ಹಾಗೂ ಈ ದುರ್ನಡತೆಯು

ನೆನಪು ಅವನ ಪರಿಶುದ್ಧವಾದ ಹೃದಯುವನ್ನು ಒತ್ತಿ ದುಃಖವುಂಟು ಮಾಡುತ್ತಾನೆ.

ವಶಿಷ್ಠರು ಮಾವನ ಮನೆಯಲ್ಲಿದ್ದ ಭರತನನ್ನು ಕರೆತರಲು ದೂತರನ್ನು ನಿಯೋಜಿಸಿ, ಅವನಿಗೆ ದಶರಥನ ಮರಣದ ಬಗ್ಗೆ ಸಂದೇಹ ಬರದಂತೆ ವಸ್ತ್ರಾಭರಣಗಳನ್ನು ಬಹುಮಾನವಾಗಿಕೊಟ್ಟು ಶೀಘ್ರವಾಗಿ ರಾಜಧಾನಿಗೆ ಬರುವಂತೆ ಸಂದೇಶವನ್ನು ಕಳುಹಿಸಿದರು. ಭರತನಾದರೋ ಅಣ್ಣನನ್ನು ನೋಡಲು ಕಾತುರನಾಗಿ ಸಂತೋಷದಿಂದ ಕೂಡಲೇ ಶತ್ರುಘ್ನ ಮತ್ತು ಪರಿವಾರದೊಡನೆ ವೇಗವಾಗಿ ಪ್ರಯಾಣ ಬೆಳೆಸಿದನು ಅಯೋಧ್ಯೆಯನ್ನು ಸಮೀಪಿಸಿ ನೋಡಿದ. ನಗರಕಳಾಹೀನವಾಗಿತ್ತು. ಆತ್ಮವಿಲ್ಲದ ದೇಹದಂತಿತ್ತು. ಯಾರ ಮುಖದಲ್ಲೂ ನಗೆಯಿಲ್ಲ. ಸ್ತ್ರೀಯರ ತುರುಬಿನಲ್ಲಿ ಹೂವಿಲ್ಲ. ಎಲ್ಲೂ ಚಟುವಟಿಕೆಗಳೇ ಕಾಣಲಿಲ್ಲ. ಉದ್ಯಾನವನ, ರಾಜ ಬೀದಿ ಎಲ್ಲವೂ ಶೂನ್ಯವಾಗಿತ್ತು. ಇದೇನು ಎಂದುಕೊಂಡು ಅರಮನೆಯನ್ನು ಪ್ರವೇಶಿಸಿ ತಂದೆಯನ್ನು ಹುಡುಕಿದ ಯಾರೂ ಅವನನ್ನು ಮಾತನಾಡಿಸಲಿಲ್ಲ. ದೂತರ ಸಂದೇಶದಂತೆ ತಾಯಿಯ ಬಳಿಗೆ ಹೋಗಿ ನಮಸ್ಕರಿಸಿದ. ತಂದೆಯ ಮರಣದ ವಾರ್ತೆಯನ್ನು ಕೇಳಿ ಸಾಲವೃಕ್ಷದಂತೆ ಮೂರ್ಛಿತನಾಗಿ ಬಿದ್ದು ಸ್ವಲ್ಪ ಸಮಯದ ನಂತರ ಚೇತರಿಸಿಕೊಂಡು ತಂದೆಯನ್ನು ಕುರಿತು ರೋದಿಸಿದ. "ರಾಮನೇ ನನಗೆ ತಂದೆ, ತಾಯಿ, ಪ್ರಭು ಅವನ ಪಾದಗಳಿಗೆ ಎರಗದ ವಿನಹಾ ನನಗೆ ಈ ದುಃಖವನ್ನು ತಡೆದು ಕೊಳ್ಳಲು ಸಾಧ್ಯವಿಲ್ಲ"—ಎಂದು ಹೇಳಿದಾಗ ತಾಯಿ ಕೈಕೆ ನಡೆದ ವಿಚಾರವನ್ನೆಲ್ಲಾ ತಿಳಿಸಿದಳು. ಇದು ಅವನಿಗೆ ಬೆಂಕಿಯನ್ನು ನುಂಗಿದಂತಾಯಿತು ಕೋಪ ಉಕ್ಕಿತು. ತಾಯಿಯನ್ನು ಕೊಂದುಬಿಡಬೇಕೆನ್ನಿಸಿತು. ಹಾಗೆ ಮಾಡಿದರೆ ರಾಮನಿಗೆ ಕೋಪ ಬರಬಹುದೆಂದು ಹೆದರಿ ಅವಳನ್ನು ಹಾಗೆಯೇ ಬಿಟ್ಟು ತಾಯಿಯನ್ನು ನಿಂದಿಸಿ—ರಾಮನಿಗೋಸ್ಕರ ನಿನ್ನನ್ನು ಸುಮ್ಮನೆ ಬಿಟ್ಟಿದ್ದೇನೆ' ಎಂದ. ತಾಯಿಯಲ್ಲಿಟ್ಟಿದ್ದ ಪ್ರೀತಿ, ಗೌರವ ಎಲ್ಲವೂ ಗಾಳಿಗೆ ತೂರಿಹೋದವು. ತಾನು ಕೈಕೆಯ ಮಗ, ತನಗಾಗಿ ಇಂಥಾ ಕ್ರೂರವಾದ ಪಿತೂರಿಯನ್ನು ತಾಯಿ ಮಾಡಿದಳು ಎಂಬುದನ್ನು ಮರೆಯಲಾರದವನಾದ, ತನಗೂ ಈ ದುರ್ಘಟನೆಗೂ ಯಾವ ಸಂಬಂಧವೂ ಇಲ್ಲ ಎಂದರೆ ಯಾರೂ ನಂಬುವುದಿಲ್ಲ ಎಂಬ ಚಿಂತೆ ಬಾಧಿಸತೊಡಗಿತು. ಬಂದಿರುವ ಕಳಂಕವನ್ನು ತೊಡೆದು ಹಾಕಲು ಪ್ರಾಣ ಬಿಡುವುದೊಂದೇ ಕೈಕೆಗೆ ಉಳಿದ ದಾರಿ ಎಂದು ಹೇಳಿ, ಕೌಸಲ್ಯೆಯ ಬಳಿಗೆ ಹೋಗಿ ಅವಳ ಪಾದಗಳಿಗೆ ಬಿದ್ದು ಹೊರಳಾಡಿ ರೋದಿಸಿದ. ಅವನ ದುಃಖವನ್ನು ನೋಡಿ ಕೌಸಲ್ಯೆಗೆ ಇದ್ದಕೋಪ ಮಾಯವಾಗಿ ಅವನು ಏನೂ ಅರಿಯದವನು ಮತ್ತು ಅವನು ಪಟ್ಟಾಭಿಷಿಕ್ತನಾಗುವುದಿಲ್ಲ ಎಂದು ತಿಳಿದಳು.

ವಾಲ್ಮೀಕಿಯಂತೆ ಕಂಬರ್ ಕೌಸಲ್ಯೆಯಿಂದ ಚುಚ್ಚು ಮಾತುಗಳನ್ನಾಡಿಸುವುದಿಲ್ಲ. ಅವಳ ಮಾತುಗಳಿಂದ ಅವಳ ವ್ಯಕ್ತಿತ್ವವು ಇನ್ನೂ ಗಂಭೀರವಾಗಿದೆ. ಭರತನು ದುಃಖಿತನಾಗಿ ತನ್ನನ್ನು ತಾನೇ ಹಳಿದುಕೊಳ್ಳುತ್ತಾನೆ. ಕೌಸಲ್ಯೆಯು ಅವನನ್ನು

ವಾತ್ಸಲ್ಯದಿಂದ ಅಪ್ಪಿಕೊಂಡು ಅವನನ್ನು ಶಂಕಿಸಿದ್ದಕ್ಕಾಗಿ ಪರಿತಪಿಸುತ್ತಾನೆ—ರಘು ವಂಶದಲ್ಲಿ ನಿನ್ನಷ್ಟು ಶುದ್ಧ ಹೃದಯವುಳ್ಳವನು ಯಾರಿದ್ದಾರೆ? ಎನ್ನುತ್ತಾನೆ.

ಹೀಗೆ ಇಬ್ಬರೂ ಸಂಕಟಪಡುತ್ತಿದ್ದಾಗ ವಸಿಷ್ಠರು ಬಂದು ಅವನ ತಂದೆಯ ಪಿತೃಕರ್ಮಗಳಿಗೆ ಗಮನಕೊಡಲು ಹೇಳುತ್ತಾರೆ. ಚಿತೆಗೆ ಅಗ್ನಿ ಇಡಲು ಭರತನು ಎದ್ದಾಗ ಅವನು ಚಿತೆಗೆ ಅಗ್ನಿ ಇಡಬಾರದೆಂದು ದಶರಥನು ಹೇಳಿದ್ದನೆಂದು ತಿಳಿಸಿದರು. ಇದರಿಂದ ಅವನ ನೊಂದಹೃದಯಕ್ಕೆ ಮತ್ತಷ್ಟು ನೋವಾಗಿ ಸಿಡಿಲು ಬಡಿದ ಸರ್ಪದಂತೆ ಕೆಳಗೆ ಬಿದ್ದು ತನ್ನ ಹೀನ ಅದೃಷ್ಟವನ್ನು ಕುರಿತು ವಿಲಾಪಿಸಿದನು. ಪಿತೃಕರ್ಮಗಳನ್ನು ಶತ್ರುಘ್ನನು ನೆರವೇರಿಸಿದನು. ಎಲ್ಲವೂ ಮುಗಿದನಂತರ ಸೇರಿದ ಸಭೆಯು ಭರತನು ಪಟ್ಟಾಭಿಷಿಕ್ತನಾಗಬೇಕೆಂದು ತೀರ್ಮಾನಿಸಿ ತಿಳಿಸಿತು. ಭರತನು ಜಗ್ಗಲಿಲ್ಲ. ಇನ್ನೊಂದು ಸಲ ಆ ಮಾತನ್ನು ತನಗೆ ಹೇಳಿದರೆ ಪ್ರಾಣತ್ಯಾಗ ಮಾಡುವುದಾಗಿ ಹೇಳಿದ. ಆಗಿಂದಾಗಲೇ ರಾಮನಿಗೆ ಪಟ್ಟಾಭಿಷೇಕ ಮಾಡುವುದಾಗಿ ಹೇಳಿ, ರಾಮನನ್ನು ಹಿಂದಕ್ಕೆ ಕರೆತರಲು ತನ್ನೊಡನೆ ಎಲ್ಲರೂ ಬರಬೇಕೆಂದು ಪ್ರಾರ್ಥಿಸಿದ. ಧನ್ಯ ಭರತ. ಸಾಧು ಸಾಧು ಎಂದು ಎಲ್ಲರೂ ಅವನನ್ನು ಕೊಂಡಾಡಿದರು.

ರಾಮನನ್ನು ಕರೆತರಲು ಇಡೀ ಅಯೋಧ್ಯೆ. ಕೌಸಲ್ಯೆ, ಸುಮಿತ್ರೆ, ಕೈಕೆ ಮತ್ತು ಸಮಸ್ತ ಸೈನ್ಯದೊಡನೆ ಹೊರಟಿತು. ಗಂಗೆಯ ತಟವನ್ನು ಸಮೀಪಿಸಿದಾಗ ದೂರ ದಿಂದಲೇ ಇದೆಲ್ಲವನ್ನೂ ನೋಡಿದ ಗುಹ ಭರತನ ಬಗ್ಗೆ ಶಂಕಿಸಿ ಯುದ್ಧಕ್ಕೆ ಸಿದ್ಧವಿರ ಬೇಕೆಂದು ತನ್ನವರಿಗೆ ತಿಳಿಸಿ, ಗಂಗೆಯನ್ನು ದಾಟಿ ಬಂದು ಭರತನಿಗೆ ನಮಸ್ಕರಿಸಿ ಅಯೋಧ್ಯೆಯನ್ನು ಬಿಟ್ಟು ಬರಲು ಕಾರಣವೇನೆಂದು ಕೇಳಿದಾಗ, ಭರತನು ಅವನ ಅಂತರ್ಯವನ್ನು ಕಂಡುಕೊಂಡು ತಾನು ಶ್ರೀರಾಮನನ್ನು ಹಿಂತಿರುಗಿಸುವ ಸಲುವಾಗಿ ಬಂದಿರುವುದಾಗಿ ಹೇಳಿದನು. ಗುಹನು ಪುನಃ ಅವನಿಗೆ ನಮಸ್ಕರಿಸಿ—"ಭರತ, ನೀನು ಪರಮಧನ್ಯ. ಸಾವಿರ ರಾಮರೂ ಒಬ್ಬ ಭರತನಿಗೆ ಸರಿಸಾಟಿಯಾಗಲಾರರು. ಅಣ್ಣನಿಗಾಗಿ ಹಂಬಲಿಸಿ ಬಂದಿದ್ದೀಯೆ. ಹಿಂದಿನ ಎಲ್ಲಾ ರಾಜರೂ ನಿನಗೆ ಸಮಾನರಾಗಲಾರರು—" ಎಂದ ಗುಹನ ಆತಿಥ್ಯವನ್ನು ಸ್ವೀಕರಿಸಿದ ಭರತನು ರಾತ್ರಿ ಎಲ್ಲಾ ಸೀತಾರಾಮ, ಲಕ್ಷ್ಮಣರ ವಿಚಾರವನ್ನು ಕೇಳುತ್ತಿದ್ದು—"ಅಯ್ಯೋ, ಸೀತಾರಾಮರು ಎಲೆಗಳ ಹಾಸಿಗೆಯ ಮೇಲೆ ಮಲಗುವಂತಾಯಿತೆ. ಇದಕ್ಕೆಲ್ಲಾ ಪಾಪಿಯಾದ ನಾನು ಕಾರಣ ನಾದೆನಲ್ಲಾ" ಎಂದು ಮರುಗಿದ.

ಬೆಳಗಾದ ನಂತರ ಗಂಗೆಯನ್ನು ದಾಟಿದನು ತನ್ನ ತಾಯಂದಿರನ್ನು ಗುಹನಿಗೆ ಪರಿಚಯ ಮಾಡಿಸುತ್ತಾ, ತನ್ನನ್ನು ತಾನು ನಿಂದಿಸಿಕೊಂಡು—ಈ ಎಲ್ಲ ಅನರ್ಥಗಳಿಗೂ ಕಾರಣಳಾದ ನನ್ನ ತಾಯಿ ಇವಳು—ಎಂದು—ಕೈಕೆಯ ಪರಿಚಯ ಮಾಡಿಕೊಟ್ಟನು. ದೂರದಿಂದ ರಾಮನನ್ನು ಕಾಣುತ್ತಲೇ ಅಂಜಲಿಬದ್ಧನಾಗಿ ಕಣ್ಣೀರಿಡುತ್ತ ಬಂದು ತನ್ನ ತಂದೆಯನ್ನು ಕಂಡಂತೆ ರಾಮನ ಪಾದಗಳಿಗೆರಗಿದ.

ಮಾರನೆಯ ದಿನ ಬೆಳಗ್ಗೆ ಅಲ್ಲಿಗೆ ಬಂದಿದ್ದ ಎಲ್ಲರ ಮುಂದೆ ರಾಮನು—"ಭರತ, ನೀನೇಕೆ ತಾಪಸಿಯಂತೆ ಉಡುಪು ಧರಿಸಿದ್ದೀಯೆ? ತಂದೆಯ ಆಜ್ಞೆಯಂತೆ ಸಾಮ್ರಾಜ್ಯವು ನಿನಗೆ ಸೇರಿದ್ದು ಕಿರೀಟಧಾರಣೆ ಏಕೆ ಮಾಡಲಿಲ್ಲ ?" ಎಂದು ಕೇಳಿದನು.

ಆಗ ಭರತನು ಎರಡು ಕೈಗಳನ್ನೂ ತನ್ನ ತಲೆಯ ಮೇಲಿಟ್ಟು ಕೈಮುಗಿದು — "ಅಣ್ಣಾ, ನೀನೇ ಧರ್ಮವಲ್ಲವೇ? ನಿನ್ನನ್ನುಳಿದು ನನಗೆ ಬೇರೆ ಧರ್ಮವೆಲ್ಲಿಯದು ?" ಎಂದು ಹೇಳಿ ಅಯೋಧ್ಯೆಗೆ ಹಿಂತಿರುಗಿ ಪಟ್ಟಾಭಿಷಿಕ್ತನಾಗುವಂತೆ ರಾಮನನ್ನು ಪ್ರಾರ್ಥಿಸಿದನು.

ರಾಮನು ಹಿಂತಿರುಗುವುದಿಲ್ಲ ಎಂಬುದು ಖಚಿತವಾದ ಮೇಲೆ ಒಂದು ನಿಬಂಧನದ ಮೇಲೆ ಭರತನು ಒಪ್ಪಿದ. ಅದೇನೆಂದರೆ ಹದಿನಾಲ್ಕು ವರ್ಷ ಕಳೆದ ಮಾರನೆಯ ದಿನ ಪ್ರಾತಃಕಾಲ ರಾಮನು ಬರದಿದ್ದರೆ ತಾನು ಅಗ್ನಿಪ್ರವೇಶ ಮಾಡುವುದಾಗಿ ಹೇಳಿ, ಅವನ ಪಾದುಕೆಗಳನ್ನಾದರೂ ಅನುಗ್ರಹಿಸುವಂತೆ ಶ್ರೀರಾಮನನ್ನು ಪ್ರಾರ್ಥಿಸಿ, ಅವುಗಳನ್ನೇ ಸಿಂಹಾಸನದ ಮೇಲಿರಿಸಿ ಅವುಗಳಿಗೆ ಕಿಂಕರನಾಗಿ ರಾಜ್ಯ ನಡೆಸುವುದಾಗಿ ಹೇಳಿ ಶ್ರೀರಾಮನ ಪಾದುಕೆಗಳನ್ನು ಪಡೆದು ಅವುಗಳನ್ನು ತನ್ನ ಶಿರದ ಮೇಲಿಟ್ಟುಕೊಂಡು ಶ್ರೀರಾಮನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅವನ ಆಶೀರ್ವಾದವನ್ನು ಪಡೆದು ಹಿಂತಿರುಗಿದನು.

ಅಯೋಧ್ಯೆಗೆ ಹೋಗಲು ಮನಸ್ಸಾಗದೆ ನಂದಿಗ್ರಾಮದಲ್ಲೇ ಉಳಿದು ಆ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ರಾಜಪ್ರತಿನಿಧಿಯಾಗಿ ರಾಜ್ಯದ ಆಡಳಿತವನ್ನು ನಡೆಸಿದನು. ರಾಮನಂತೆಯೇ ನಾರುಮಡಿಯನ್ನುಟ್ಟು, ನಿಯತಾಹಾರನಾಗಿ, ಜಿತೇಂದ್ರಿಯನಾಗಿ, ತಾಪಸಿಯ ಜೀವನ ನಡೆಸುತ್ತಾ—ಅಣ್ಣನು ಕಾಡಿಗೆ ಹೋಗಲು ತಾನು ಕಾರಣನಾದೆನಲ್ಲಾ ಎಂದು ದುಃಖದಿಂದ 14 ವರ್ಷಗಳನ್ನು ಕಳೆದನು.

ವೇದಾಂತದೇಶಿಕರು ಭರತನ ಹಿರಿಮೆಯನ್ನು ಕುರಿತು ವರ್ಣಿಸುತ್ತಾ ಹೀಗೆ ಹೇಳಿದ್ದಾರೆ.—

**ಭರತಾಯ ಪರಂ ನಮೋಸ್ತು ತಸ್ಮೈ  
ಪ್ರಥಮೋದಾಹರಣಾಯ ಭಕ್ತಿಭಾಜಾಂ ।  
ಯದುಪಜ್ಞಂ ಅಶೇಷತಃ ಪೃಥಿವ್ಯಾಂ  
ಪ್ರಥಿತೋ ರಾಘವಪಾದುಕಾ ಪ್ರಭಾವಃ ॥**

ರಾಮಾಯಣದಲ್ಲಿ ಮೊದಲ ವಂದನೆಗೆ ಅರ್ಹ ಎಂದರೆ ಭರತ. ಭರತನನ್ನೇ ನಾನು ಮೊದಲು ವಂದಿಸುತ್ತೇನೆ, ಏಕೆಂದರೆ ಭರತನಿಂದ ರಾಮನ ಪಾದುಕೆಗಳ ಪ್ರಭಾವ ಹೊರಬಂದಿತು. ಪಾದುಕೆಗಳ ಮಹತ್ವವನ್ನು ಭರತ ಪ್ರಸ್ತಾಪಿಸಿದ ಅವನಿಗೆ ನಮೋ ನಮಃ ಎಂದಿದ್ದಾರೆ.

ತ್ಯಾಗರಾಜಸ್ವಾಮಿಗಳು ಪಾದುಕೆಗಳ ಮಹಿಮೆಯನ್ನು ಕುರಿತು "ಸಂದೇಹ

ಮನು" ಎಂಬ ರಾಮಪ್ರಿಯರಾಗದ ಕೃತಿಯಲ್ಲಿ ಈ ರೀತಿ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು. "ರಾಮಾ ! ನನ್ನ ಸಂದೇಹವನ್ನು ನಿವಾರಿಸು. ನಿಂದ್ಯವಾದ ಸೋಕಿ ಸಲ್ಪಟ್ಟ ನಿನ್ನದಿವ್ಯ ಪಾದಗಳು ಮೇಲೋ ? ಅಥವಾ ನಿನ್ನ ಸುಂದರವಾದ ಪಾದುಕೆ ಗಳು ಮೇಲೋ ? ನಿನ್ನ ಪಾದಗಳನ್ನು ಸೋಕಿಸಿದ ಮಹಾಋಷಿಗಳು ನಿನ್ನ ವಾಸ ಸ್ಥಾನವಾದ ವೈಕುಂಠವನ್ನು ಪಡೆದರು, ಆದರೆ ಭರತನಾದರೋ ನಿನ್ನ ಪಾದುಕೆಗಳನ್ನು ಪೂಜಿಸಿ ನಿನ್ನನ್ನೇ ಪಡೆದನು" ಎಂದಿದ್ದಾರೆ.

ಶ್ರೀರಾಮನು ವನವಾಸವನ್ನು ಮುಗಿಸಿ ಹಿಂತಿರುಗಿ ಬರುವ ಪ್ರಾತಃಕಾಲವು ಸನ್ನಿಹಿತವಾಯಿತು. ಅವನು ಬರುವ ಸೂಚನೆಯೇ ಕಾಣಲಿಲ್ಲ. ರಾಮನು ಇನ್ನೂ ಬರಲಿಲ್ಲ ಎಂದು ಬಹುವಾಗಿ ದುಃಖಿಸಿ ಅಗ್ನಿಪ್ರವೇಶ ಮಾಡಲು ಸಿದ್ಧಗೊಳಿಸಿದ ಭರತ ವಿಷಯ ತಿಳಿದ ಎಲ್ಲರೂ ಕೌಸಲ್ಯೆಯನ್ನು ಮುಂದಿಟ್ಟುಕೊಂಡು ಅಲ್ಲಿಗೆ ಬಂದರು. ಕೌಸಲ್ಯೆ ಆತನನ್ನು ಆಲಿಂಗಿಸಿಕೊಂಡು ಆತುರಪಡಬೇಡ ನಾಳೆಯವರೆಗೆ ನೋಡೋಣ ಎಂದು ಹೇಳಿದರೂ ತನ್ನ ನಿರ್ಧಾರವನ್ನು ಅವನು ಬಿಟ್ಟುಕೊಡಲಿಲ್ಲ. ಅಗ್ನಿಯನ್ನು ಪ್ರದಕ್ಷಿಣೆ ಮಾಡಲು ತೊಡಗಿದ. ಎಲ್ಲರೂ ಗಟ್ಟಿಯಾಗಿ ರೋದಿಸಿದರು. ಆ ಸಮ ಯಕ್ಕೆ ಸರಿಯಾಗಿ—ನನ್ನ ಪ್ರಭು ಬರುತ್ತಿದ್ದಾನೆ. ರಘುಕುಲೋತ್ತಮ ! ನೀನು ಪ್ರಾಣತ್ಯಾಗ ಮಾಡಿದರೆ ಅವನು ಉಳಿಯುವನೇ ?" ಎಂದು ಗಟ್ಟಿಯಾಗಿ ಕೂಗಿ ಹೇಳುತ್ತ ರಾಮದೂತ ಆಂಜನೇಯನು ಬಂದಿಳಿದು ತನ್ನ ಘನವಾದ ಕೈಗಳಿಂದ ಬೆಂಕಿ ಯನ್ನು ಆರಿಸಿ ಶ್ರೀರಾಮನ ಉಂಗುರವನ್ನು ತೋರಿಸಿ ವಿಳಂಬವಾದುದಕ್ಕೆ ಕಾರಣ ತಿಳಿಸಿದನು. ಇದು ಭರತನಿಗೆ ಅಮೃತಸಿಂಚನವಾಯಿತು. ಹನುಮಂತನಿಗೆ ಪದೇ ಪದೇ ನಮಸ್ಕರಿಸಿ ಅವನನ್ನು ತಬ್ಬಿಕೊಂಡು ಸಂತೋಷದಿಂದ ಕುಣಿದಾಡಿ, ಅವನಿಗೆ ಸಕಲವಿಧವಾದ ಗೌರವವನ್ನು ನೀಡಿದನು. ಶ್ರೀರಾಮನನ್ನು ಸ್ವಾಗತಿಸಲು ಏರ್ಪಾಡು ಮಾಡುವಂತೆ ಆಜ್ಞಾಪಿಸಿ, ಎಲ್ಲರೊಡನೆ ಶ್ರೀ ರಾಮನನ್ನು ಎದುರುಗೊಳ್ಳಲು ಭಾರ ದ್ವಾಜಾಶ್ರಮದ ಕಡೆಗೆ ಹೊರಟನು. ದಾರಿಯಲ್ಲಿ ಅಲ್ಲಿಯವರೆಗೆ ನಡೆದ ರಾಮಕಥೆ ಯನ್ನು ಹನುಮಂತನಿಂದ ಕೇಳಿ ತಿಳಿದು, ರಾವಣನನ್ನು ಸಂಹರಿಸುವುದರಲ್ಲಿ ತಾನು ರಾಮಲಕ್ಷ್ಮಣರಿಗೆ ಸಹಾಯ ಮಾಡಲು ಆಗಲಿಲ್ಲವಲ್ಲಾ ಎಂದು ದುಃಖಿಸಿದ. ಶ್ರೀ ರಾಮನು ಪುಷ್ಪಕ ವಿಮಾನದಲ್ಲಿ ಬರುತ್ತಿರುವುದನ್ನು ನೋಡಿ ಅವನ ದುಃಖವೆಲ್ಲಾ ಮಾಯವಾಯಿತು. ತಂದೆಯೇ ಹಿಂತಿರುಗಿದಂತೆ ತಿಳಿದು ಅವನ ಪಾದಗಳಿಗೆರಗಿದ. ಶ್ರೀರಾಮನು ಅವನನ್ನು ಹಿಡಿದೆತ್ತಿ ಆಲಿಂಗಿಸಿದನು. ಇಬ್ಬರ ಕಣ್ಣುಗಳೂ ಒದ್ದೆ ಯಾದುವು. ಅವನನ್ನು ಸಂದೇಹಿಸಿದ್ದ ಲಕ್ಷ್ಮಣನು ಪೂಜ್ಯಭಾವದಿಂದ ಭರತನ ಪಾದ ಗಳಿಗೆ ನಮಸ್ಕರಿಸಿದನು. ಸಂತೋಷದಿಂದ ಭರತನು ಶ್ರೀರಾಮನನ್ನೂ, ಅವನ ಸೈನ್ಯವನ್ನೂ ಅಯೋಧ್ಯೆಗೆ ಕರೆದುಕೊಂಡು ಹೋಗಿ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಿ ಅವನ ಶಿರದ ಮೇಲೆ ಶ್ವೇತಛತ್ರವನ್ನು ಹಿಡಿದುನಿಂತಾಗ ಅವನ ಸಂತೋಷಕ್ಕೆ

ಪಾರವೇ ಇಲ್ಲ,

ಇದು ಕಂಬರ್ ಚಿತ್ರಿಸಿರುವ ಪಾರತಂತ್ರ್ಯವೇ ಮೂರ್ತಿವೆತ್ತಂತಿಪ್ಪ, ಮಹಾತ್ಮನಾದ ತ್ಯಾಗಿಯಾದ ಭರತ.

**ಶ್ರೀರಾಮಾಯಣ ದರ್ಶನಂ ಭರತ**

ಭರತನು ಭ್ರಾತೃವಾತ್ಸಲ್ಯಕ್ಕೆ ಪ್ರಸಿದ್ಧನಾದವನು ಪರಮಧನ್ಯ. ದಶರಥ ಮತ್ತು ಕೈಕೆಯರ ಪ್ರೀತಿಯ ಪುತ್ರ. ಮಾಂಡವಿಯ ಪತಿ. ದಶರಥನು ಅಯೋಧ್ಯೆಯಲ್ಲಿ ಮರಣ ಹೊಂದಿದ ಕಾಲದಲ್ಲಿ ಭರತನು ಕೇಕೆಯಪುರದಲ್ಲಿ ಮಾವನ ಮನೆಯಲ್ಲಿ ನಿದ್ರಿಸುತ್ತಿದ್ದ. ಆಗ ಒಂದು ಕೆಟ್ಟ ಸ್ವಪ್ನವನ್ನು ಕಂಡ. ಹಾಸಿಗೆಯಿಂದ ಎದ್ದು ಕುಳಿತು ನೋಡುತ್ತಿದ್ದಂತೆ ಆಕಾಶದಲ್ಲಿ ಒಂದು ನಕ್ಷತ್ರವು ಉದಿದುಬಿತ್ತು. ಶತ್ರುಘ್ನನನ್ನು ಎಬ್ಬಿಸಿ ಕನಸನ್ನು ಅವನಿಗೆ ತಿಳಿಸಿದನು. ಒಂದು ಬೆಟ್ಟದ ತುದಿಯ ಬಂಡೆಯ ಮೇಲಿಂದ ಮೈಕೊಳೆಯಾಗಿ ತಲೆ ಕೆದರಿದ್ದ ದಶರಥನು ಬುಡದ ಹೇಸಿಗೆಯ ಮಡುವಿಗೆ ತಲೆಕೆಳಕಾಗಿ ದುಮುಕಿ ಕೈಯಿಂದ ಎಣ್ಣೆಯನ್ನು ಎತ್ತಿ ಕುಡಿಯುತ್ತಾ ತಿಲಾನ್ನವನ್ನು ತಿನ್ನುತ್ತಿದ್ದನು. ಚಂದ್ರನು ಆಕಾಶದಿಂದ ಕೆಳಕ್ಕೆ ಬಿದ್ದ. ಆಮೇಲೆ ದಶರಥನು ಕಪ್ಪು ಬಟ್ಟೆ ಧರಿಸಿ, ಕೆಂಪು ಹೂಮಾಲೆಯನ್ನು ಧರಿಸಿ, ಕೆಂಪು ಗಂಧವನ್ನು ಬಳಿದುಕೊಂಡು ಕತ್ತೆಯ ಮೇಲೆ ಕುಳಿತು ದಕ್ಷಿಣ ದಿಕ್ಕಿಗೆ ಹೋಗುತ್ತಿದ್ದನು. ಅವನನ್ನು ಒಬ್ಬ ರಾಕ್ಷಸ ಸ್ತ್ರೀ ಹಿಡಿದೆಳದು ನಗುತ್ತಿದ್ದಳು.

ಈ ಸ್ವಪ್ನದಿಂದ ಸಂಕಟ, ಅನಿಷ್ಟದಶಂಕೆ ತುಂಬಿತು. ಇಬ್ಬರೂ ಹೇಗೋ ರಾತ್ರಿಕಳೆದು ಬೆಳಗಾದಕೂಡಲೇ ಮಾವನಿಗೆ ಹೇಳಿ, ಏಳು ದಿನಗಳಕಾಲ ಪ್ರಯಾಣ ಮಾಡಿ ಅಯೋಧ್ಯಾನಗರವನ್ನು ಸಮೀಪಿಸಿದರು. ಆ ನಗರದ ಶೋಕಾವಂತ ಕಳೆ ಎದುರಾಗುತ್ತದೆ. ಹೆಬ್ಬಾಗಿಲ ಬಳಿ ಇದ್ದ ಪಿತೃದೇವಮಂದಿರವನ್ನು ಭಕ್ತಿಯಿಂದ ಪ್ರವೇಶಿಸಿದರು. ದಿವಂಗತ ರಘುಕುಲನೃಪರ ಪ್ರತಿಮೆಗಳ ಸಾಲಿನ ಕೊನೆಯಲ್ಲಿ ದಶರಥನ ಪ್ರತಿಮೆಯನ್ನು ಕಂಡ ಭರತನಲ್ಲಿ ಭೀತಿಯಿಂದ ಸಂಶಯ ಮೂಡಿತು. ಮಾತಾಡದೆ ಇಬ್ಬರೂ ನಗರಕ್ಕೆ ಧಾವಿಸಿ ತಂದೆಯ ಅರಮನೆ ಸೇರಿದರು. ಎಲ್ಲೆಲ್ಲೂ ಶೂನ್ಯತೆ ಆವರಿಸಿತ್ತು.

ಈ ಸನ್ನಿವೇಶವನ್ನು ಕವಿಯು ಭಾಸನ ಪ್ರತಿಮಾನಾಟಕದಲ್ಲಿ ಬರುವ ಪ್ರತಿಮಾಗೃಹದ ಕಲ್ಪನೆಯನ್ನು ಸೂಕ್ತವಾಗಿ ಅಳವಡಿಸಿಕೊಂಡಿರುವಂತೆ ತೋರುತ್ತದೆ. ಮೊದಲೇ ಭಯ ಮತ್ತು ಶಂಕೆಯಿಂದ ಗಾಬರಿಗೊಂಡಿದ್ದ ಭರತನ ಮನಸ್ಸು ಮತ್ತಷ್ಟು ಗಾಬರಿಗೊಳ್ಳಲು ಈ ಸನ್ನಿವೇಶವನ್ನು ಇಲ್ಲಿ ಅಳವಡಿಸಿರುವುದು ಬಹಳ ಉಚಿತವಾಗಿದೆ.

ಭರತನು ತನ್ನ ತಾಯಿಯ ಅರಮನೆಗೆ ಹೋಗಿ ನಿರ್ಜನೆಯೂ ನಿರಾಭರಣೆಯೂ ರವಿವಿಹೀನೆಯೂ ದುಃಖದಗ್ಧಳೂ ಆದ ತಾಯಿಯ ಕಾಲುಗಳ ಮೇಲೆ ಉರುಳಿ ತಂದೆ

ಎಲ್ಲಿ, ಅರಮನೆ ಏಕೆ ಕುಂದಿದೆ, ನಿನ್ನ ಮುಖದಲ್ಲಿ ಏಕೆ ಶವಕಳೆ ಎಂದು ಕೇಳುತ್ತಾನೆ. ತಾಯಿಯಿಂದ ನಡೆದ ವಿಷಯವನ್ನು ತಿಳಿದು ಸಿಡಿಲುಬಡಿದ ಮರದಂತೆ ತಾಯಿಯ ಪಾದ ಮೂಲದಲ್ಲಿ ಉರುಳಿದ. ತಾಯಿಯೇ ಎಲ್ಲಕ್ಕೂ ಕಾರಣಳೆಂದು ತಿಳಿದು ಅವನ ದುಃಖವೆಲ್ಲ ಅವಳ ಮೇಲಿನ ಕೋಪವಾಗಿ ಮಾರ್ಪಟ್ಟಿತು. "ಮಗನನ್ನು ಪಡೆದೂ ನಿನಗೆ ಬಂಜೆತನ ಬಂದಿತು. ಹೆತ್ತಾಗಲೇ ಕತ್ತು ಹಿಸುಕದೆ ಏಕೆ ಸಾಕಿದೆ ? ಭರತಮಾತೇ ! ಎಂದು ಅವಳನ್ನು ನಿಂದಿಸಿ, ಅಣ್ಣದೇವನಿಲ್ಲದೆ ಬದುಕು ಅವನಿಗೆ ಸಾವಿಗೆ ಸಮ. ರಾಮನನ್ನು ಪುನಃ ಕರೆತಂದು ಅವನ ಸೇವೆಯಲ್ಲಿದ್ದು ಅವಳು ಮಾಡಿದ ಕುಕೃತ್ಯಕ್ಕಾಗಿ ತಪೋಜೀವನ ಮಾಡುವೆನೆಂದು ತಿರಸ್ಕಾರದಿಂದ ಹೊರಟನು.

ಭರತನ ನಿರ್ಧಾರದಲ್ಲಿ ಅವನ ತ್ಯಾಗಶೀಲತೆ, ಭ್ರಾತೃಪ್ರೇಮ. ತಾಯಿಯ ಕುಕೃತ್ಯಕ್ಕೆ ಕ್ಷಮಾಶೀಲತೆ ಕಂಡುಬರುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿಯಾಗಲೀ, ಕಂಬರಾಮಾಯಣದಲ್ಲಿಯಾಗಲೀ, ಕೈಕೆಯು ಭರತನನ್ನು ಸ್ವಾಗತಿಸಿ ಮಾತನಾಡುವ ರೀತಿಯೇ ಬೇರೆ. ಶ್ರೀರಾಮಾಯಣ ದರ್ಶನದಲ್ಲಿ ಕೈಕೆ ತನ್ನ ಒಂದು ಕ್ಷಣದ ಬುದ್ಧಿವಿಕಲಿಕೆಯಿಂದ ಉಂಟಾದ ಅನರ್ಥಗಳಿಗೆ ಪಶ್ಚಾತ್ತಾಪಪಟ್ಟು ಭರತನ ಕಾಲುಗಳ ಮೇಲೆ ಉರುಳುತ್ತಾಳೆ. ಕಲ್ಲಾದ ಅಹಲ್ಯೆಯನ್ನು ನುಡಿಸಿದ ರಾಮಪಾದದ ಸೋಂಕಿಗೂ ನನ್ನ ಕಲ್ಮಷ ಅಳಿಯದು ಎಂದು ಪಶ್ಚಾತ್ತಾಪದಗ್ಧಳಾದ ತಾಯಿಯನ್ನು ಭರತನು ಸಮಾಧಾನಗೊಳಿಸುತ್ತಾನೆ.

ದೊಡ್ಡಮ್ಮ ಕೌಸಲ್ಯೆಯನ್ನು ಕಾಣಲು ಕಾತುರತೆಯಿಂದ ಹೋಗುತ್ತಿದ್ದಾಗ ಶತ್ರುಘ್ನನ ಘಾತಕ್ಕೆ ಒಳಗಾದ ಮಂಥರೆಯು ಚೀರಿಡುವ ಧ್ವನಿಯು ಕೇಳಿಬರುತ್ತದೆ. ಅದನ್ನು ಕೇಳಿದ ಭರತ ಒಳನುಗ್ಗಿ ಅವಳನ್ನು ತಮ್ಮನಿಂದ ಬಿಡಿಸಿ ನಂತರ ಕೌಸಲ್ಯೆಯನ್ನು ಕಾಣಲು ಮುಂದುವರಿದನು. ಭರತನು ಕೌಸಲ್ಯೆಯನ್ನು ಕಾಣುವ ಸನ್ನಿವೇಶ ಹೃದಯ ಸ್ಪರ್ಶಿಯಾದುದು.

ಪತಿಪುತ್ರವಿಹೀನೆಯಾದ ಕೌಸಲ್ಯೆಯು ಭರತನನ್ನು ನೋಡಿದ ಕೂಡಲೇ ದುಃಖ ವಿಪರೀತವಾಗಿ ಮೂರ್ಛೆ ಹೋದಳು. ಭರತನು ಅವಳನ್ನು ಎತ್ತಿ ಕುಳ್ಳಿರಿಸಿ ಉಪಚರಿಸಿ ಅವಳ ಪಾದಗಳಿಗೆರಗಿ ಕಣ್ಣೀರಿನಿಂದ ಅವುಗಳನ್ನು ಅಭಿಷೇಕಿಸಿದನು. ಅವನಿಗೆ ತಾನು ಪರೋಕ್ಷವಾಗಿ ಇಷ್ಟಕ್ಕೆಲ್ಲ ಕಾರಣನಾದೆನಲ್ಲಾ ಎಂಬ ಕೊರಗು. ಇದನ್ನರಿತ ಕೌಸಲ್ಯೆ ಅವನನ್ನು ತಾಯ್ತನದ ಗಂಭೀರತೆಯಿಂದ ಸಂತೈಸಿ ರಾಮನನ್ನು ಹಿಂದಕ್ಕೆ ಕರೆತರುವ ಕಾರ್ಯಕ್ಕೆ ಆಶೀರ್ವದಿಸಿದಳು.

ಎಣ್ಣೆಯಿಂದ ಹೊರಕ್ಕೆ ತೆಗೆದ ತಂದೆ ದಶರಥನ ದೇಹವನ್ನು ನೋಡಿದೊಡನೆ ಅದನ್ನು ಬಿಗಿದಪ್ಪಿ ನೋಡಿ ನೋಡಿ, ಕರಗಿ ಕೊರಗಿ ಕುಸಿದನು. ವಸಿಷ್ಠರ ಅಣತಿಯಂತೆ ಪ್ರಾಜ್ಞಮತಿಯಾದ ಭರತನು ಸ್ಮಶಾನದಲ್ಲಿ ಚಿತೆಗೆ ಉರಿಯಿಟ್ಟನು. ವಾಲ್ಮೀಕಿರಾಮಾ

ಯಣದಲ್ಲೂ, ಕಂಬರಾಮಾಯಣದಲ್ಲೂ ಶತ್ರುಘ್ನನು ಈ ಕಾರ್ಯವನ್ನು ಮಾಡು ತ್ತಾನೆ.

ಶ್ರೀರಾಮನನ್ನು ಕರೆತರಲು ಇಡೀ ಅಯೋಧ್ಯೆಯೇ ಚಿತ್ರಕೂಟಕ್ಕೆ ಹೊರಟಿತು. ಚಿತ್ರಕೂಟವನ್ನು ಸಮೀಪಿಸಿದ ಭರತ ಎಲ್ಲರನ್ನೂ ಹಿಂದೆ ನಿಲ್ಲಿಸಿ, ಶತ್ರುಘ್ನ, ಗುಹ, ಸುಮಂತ್ರರೊಡನೆ ರಾಮಾಶ್ರಮಕ್ಕೆ ಹೋಗುತ್ತಾನೆ. ಅಣ್ಣನನ್ನು ಕಾಣುವ ತವಕದಿಂದ. ದೂರದಿಂದ ಸೀತಾಲಕ್ಷ್ಮಣ ಸಹಿತ ರಾಮನನ್ನು ನೋಡಿ ಬೆಟ್ಟದಿಂದ ತಲೆಕೆಳಗಾಗಿ ಉರುಳುವಂತೆ ನುಗ್ಗಿ–ಅಣ್ಣಯ್ಯ–ಎಂದು ದೊಪ್ಪನೆ ಬಿದ್ದನು ಜಟಾವಲ್ಕಲಧಾರಿಯೂ ಕೃಶನೂ ಆದ ಭರತನನ್ನು ಗುರುತಿಸಿದ ಶ್ರೀರಾಮನು ಓಡಿ ಬಂದು ಅವನನ್ನು ಎತ್ತಿ ಎದೆಗೆ ಅಪ್ಪಿಕೊಂಡು ಮಾತನಾಡಿಸಿದನು. ಗುಹನಿಂದ ತಂದೆಯ ನಿಧನ, ಭರತನ ಪ್ರತಿಜ್ಞೆಯನ್ನು ತಿಳಿದು ಮೈಮರೆತ, ಆಗ ಭರತನು ಅಣ್ಣನನ್ನು ಸಂತೈಸಿದನು.

ಶ್ರೀರಾಮನು ತನ್ನ ಪ್ರಾರ್ಥನೆಯಂತೆ ನಡೆದು ಕೊಳ್ಳುವುದಿಲ್ಲವೆಂದರಿತ ಭರತನು ಅಸಹಾಯಕತೆಯಿಂದ ಅಳುತ್ತಾ ರಾಮಪಾದಸ್ಪರ್ಶ ಮಹಿಮಾನ್ವಿತ ದಿವ್ಯಪಾದುಕೆ ಗಳನ್ನು ಬೇಡಿ ಪಡೆದು ಮುಡಿಗೇರಿಸುತ್ತ "ಆ ಪೂಜ್ಯಪಾದುಕೆಗಳನ್ನು ಸಿಂಹಾಸನ ದೊಳಿಟ್ಟು ಪೂಜಿಸುವೆನು. ಹದಿನಾಲ್ಕುವರ್ಷಗಳ ಅವಧಿ ಕಳೆದ ಮರುದಿನ ತನಗೆ ಶ್ರೀರಾಮದರ್ಶನವಾಗದಿದ್ದರೆ ತನ್ನ ದೇಹ ನ್ನು ಅಗ್ನಿಗೆ ಸಮರ್ಪಿಸುವುದಾಗಿಯೂ, ಅಲ್ಲಿಯ ತನಕ ತಾನು ಜಟಾವಲ್ಕಲಧಾರಿಯಾದ ವ್ರತಿಯಾಗಿಯೂ ಇರುವೆನೆಂಬ ತನ್ನ ಪ್ರತಿಜ್ಞೆಯನ್ನು ತಿಳಿಸಿ, ರಾಮಾಭ್ಯುದಯಕ್ಕಾಗಿ ತಪಸ್ಸು ಕೈಗೊಂಡಿರುವ ತನ್ನನ್ನು ಹರಸಬೇಕೆಂದು ಪ್ರಾರ್ಥಿಸಿ, ಪಾದುಕಾಕಿರೀಟಿಯಾಗಿ, ಹಿಂತಿರುಗಿ ನಂದಿಗ್ರಾಮದಲ್ಲಿ ಪಾದುಕಾಪಟ್ಟಾಭಿಷೇಕವನ್ನು ಮಾಡಿ, ಎಲ್ಲ ಸುಖಭೋಗಗಳನ್ನೂ ತೊರೆದು ತ್ಯಾಗ ಮೂರ್ತಿಯಾಗಿ, ರಾಜ್ಯಭಾರದಲ್ಲಿ ನಿರತನಾದನು.

ಹದಿನಾಲ್ಕು ವರ್ಷಗಳ ಆವಧಿ ಮುಗಿಯಲು ಇನ್ನೊಂದು ಹಗಲು ಉಳಿದಿದೆ ಎನ್ನುವಾಗ ಭರತನು ನಿರಶನವ್ರತಮಾಡಿ ಕೊನೆಯ ಜಾವ ಕಳೆದರೂ ರಾಮಾಗಮನದ ಸೂಚನೆಯನ್ನು ಕಾಣದೆ ಅಗ್ನಿಪ್ರವೇಶಕ್ಕೆ ನಿಶ್ಚಯಿಸಿದನು. ಆಗ ಅಗ್ನಿಕುಂಡದ ನಡುವೆ ಮಂಥರೆಯ ಜ್ವಾಲಾಮೂರ್ತಿ ಮೈದೋರಿತು. ರಾಮನು ಇಂದೋ ನಾಳೆಯೋ ಬರುತ್ತಾನೆಂದು ಆಶ್ವಾಸನೆ ನೀಡಿತು. ಅವಳ ಗುರುತನ್ನು ತಿಳಿದ ಕೂಡಲೇ ತನ್ನ ಅಸಮಾಧಾನವನ್ನು ವ್ಯಕ್ತಗೊಳಿಸಿದನು. ದೀರ್ಘಕಾಲ ತಪಸ್ವಿಯಾಗಿದ್ದರೂ ಅವನ ಮನಸ್ಸಿನ ಕಹಿ ಹೋಗಿರುವುದಿಲ್ಲ.

ಬೆಳಗಾಗುತ್ತಲೆ ರಾಮದೂತ ಹನುಮಂತನು ಶ್ರೀರಾಮಾಗಮನದ ವೃತ್ತಾಂತ ವನ್ನು ಗುಹನನ್ನು ಮುಂದಿಟ್ಟುಕೊಂಡು ಬಂದು ತಿಳಿಸಿದನು. ಅದನ್ನು ಕೇಳಿದ ಭರತನು ಮಗುವಿನಂತೆ ಅವನ ತೋಳ್ತೆಕ್ಕೆಯಲ್ಲಿ ಹರ್ಷದ ಮೂರ್ಛಿತನಾಗಿ ಓಲಾಡಿದ. ರಘುರಾಮನಾಗಮನದ ಸುದ್ದಿಯನ್ನು ರಾಜ್ಯಕ್ಕೆಲ್ಲಾ ಕಳುಹಿಸಿ ಶ್ರೀರಾಮನು ಸದ್ಭಾರ್

ಮಂಗಳಾರ್ಥವಾಗಿ ದೇವಸಿಲಯಗಳಲ್ಲಿ ಪೂಜೆ ನಡೆಯಲು ಆಜ್ಞೆಮಾಡಿದನು.

ಕಾತುರತೆಯಿಂದ ಪಾದುಕಾಕಿರೀಟಿಯಾಗಿ ಶ್ರೀರಾಮನನ್ನು ಇದಿರುಗೊಳ್ಳುವ ಆತುರದಿಂದ ಆಂಜನೇಯನ ಸತ್ಸಂಗ ಸುಖಿಯಾದ ಭರತನು ಭಾರದ್ವಾಜಾಶ್ರಮದ ಕಡೆಗೆ ನಡೆದನು. ಪುಷ್ಪಕ ವಿಮಾನದಲ್ಲಿ ಸೀತಾ ಲಕ್ಷ್ಮಣಸಹಿತ ಬಂದ ಶ್ರೀರಾಮನನ್ನು ಕಂಡು ಅವನ ಅಡಿಗಳಿಗೆ ಮಣಿದು ತಾನು ಪೂಜಿಸಿದ ಪೂಜ್ಯ ಪಾದುಕೆಗಳನ್ನು ಆ ಪೂಜ್ಯಪಾದನ ಪಾದಗಳಿಗೆ ಸಮಸ್ತಸೈನ್ಯ, ಅಯೋಧ್ಯೆಯ ಜನ, ವಿಭೀಷಣಾದಿಗಳು ನೋಡುತ್ತಿರುವಂತೆ ಕೂಡಿಸಿದನು.

ಭರತನು ಮಹಾತ್ಮ. ತ್ಯಾಗಿ, ಸಂಯಮಿ, ನಿಷ್ಕಲ್ಮಷ ಹೃದಯಿ, ನಿರಂತರ ಜಾನಕೀಪ್ರಿಯದರ್ಶನಧ್ಯಾನನಿರತ, ಧೀರಮತಿ, ಪ್ರಾಜ್ಞ, ವಾತ್ಸಲ್ಯ ಮತ್ತು ಭಕ್ತಿಯ ಆದರ್ಶಮೂರ್ತಿ.

**ಕಂಬರ್ ಚಿತ್ರಿಸಿರುವ ಹನುಮಾನ್ :** ಹಿಂದೂದೇವತೆಗಳಲ್ಲಿ ಹನುಮಂತನು ಅತ್ಯಂತ ಜನಪ್ರಿಯ ಮತ್ತು ಪ್ರಮುಖ. ನಮ್ಮ ದೇಶಾದ್ಯಂತ ಅವನ ಗುಡಿಗಳಿವೆ. ಶ್ರೀವೈಷ್ಣವರಿಗೆ ಅವನು–ಚಿನ್ನತಿರುವಡಿ–ವಿದ್ವಾಂಸರು ಅವನ ಧ್ಯಾನಮಾಡಿ ಊಹೆಗೂ ನಿಲುಕದ ಬುದ್ಧಿಶಕ್ತಿಯನ್ನು ಪಡೆದಿರುವುದುಂಟು. ಅವನ ಸೇವಾಕಾರ್ಯದ ಹಿರಿಮೆ ಭಾರತದಲ್ಲಿ ಚಿರದಿನವೂ ಗೌರವಕ್ಕೆ ಪಾತ್ರವಾಗಿದೆ.

ಹನುಮಂತನ ಅತಿ ಮುಖ್ಯವಾದ ಗುಣ ಅವನ ರಾಮಭಕ್ತಿ. ರಾಮಲಕ್ಷ್ಮಣರು ಋಷ್ಯಮೂಕ ಪರ್ವತ ಪ್ರದೇಶದಲ್ಲಿ ಸಂಚರಿಸುತ್ತಿದ್ದಾಗ ಅವರು ಯಾರು ಎಂಬುದನ್ನು ಕಂಡುಹಿಡಿಯಲು ಬಂದಾಗ ಮೊದಲ ನೋಟದಲ್ಲೇ ಅವರಿಗಾಗಿ ಅವನ ಹೃದಯವು ಕರಗಿತು. ಬಹಳ ವರ್ಷಗಳಿಂದ ಬೇರೆಯಾಗಿದ್ದ ಮಿತ್ರರನ್ನು ಒಮ್ಮೆಲೇ ಕಂಡಂತಾಯಿತು. ಬ್ರಹ್ಮಚಾರಿಯ ರೂಪದಲ್ಲಿ ಅವರ ಸಮೀಪಕ್ಕೆ ಬಂದ. ಇವನ ಮಧುರವಾಣಿಯಿಂದ ಶ್ರೀರಾಮನ ಮುಖ ಅಗಳಿತು.—ಸೌಮಿತ್ರಿ, ನೋಡು, ಇವನಿಗೆ ತಿಳಿಯದಿರುವ ವಿಷಯವೇ ಇಲ್ಲ. ಇವನು ಪೂರ್ಣವಾಗಿ ವೇದಾಧ್ಯಯನ ಮಾಡಿದವ ಎನ್ನುವುದು ಸ್ಪಷ್ಟವಾಗುತ್ತದೆ"—ಎಂದು ಲಕ್ಷ್ಮಣನೊಂದಿಗೆ ಹೇಳುತ್ತಾನೆ. ವಾಲ್ಮೀಕಿ ಹೇಳಿರುವಂತೆ ಹನುಮಂತನು "ಬುದ್ಧಿಮತಾಂ ವರಿಷ್ಠಂ".

ಸುಗ್ರೀವನನ್ನು ಕರೆತರಲು ಹೇಳಿ ಹೋಗುವಾಗ ರಾಮನ ಪಾದಗಳಿಗೆರಗಿದ. ಬ್ರಾಹ್ಮಣನಾಗಿದ್ದು ತನ್ನ ಪಾದಗಳಿಗೆ ನಮಸ್ಕರಿಸಬಾರದಾಗಿತ್ತು ಎಂದ ರಾಮ. ತಾನು ಕೇವಲ ವಾನರನೆಂದೂ, ತಾನು ರಾಮನ ಸೇವೆಮಾಡಲು ಅರ್ಹನೆಂದು ತೋರಿಸಿಕೊಳ್ಳಲು ತನ್ನ ನಿಜಸ್ವರೂಪವನ್ನು ತೋರಿಸಿದ. ಅವನ ಶಕ್ತಿಯುತವಾದ ಅದ್ಭುತಾಕಾರವನ್ನು ನೋಡಿ ಮೆಚ್ಚಿದ ರಾಮನು—"ಈ ವಾನರನ ರೂಪದಲ್ಲಿ ಸಂಪೂರ್ಣತೆ ಎಂಬುದು ಘನೆಗಳಿದು ಬಂದಿದೆ. ಶಕುನಗಳು ಚೆನ್ನಾಗಿವೆ. ನಮ್ಮ ಕಷ್ಟಗಳು ನಿವಾರಣೆಯಾದಂತೆಯೇ. ಸುಖದ ಕಾಲ ಸಮೀಪಿಸುತ್ತಿದೆ. ಇಂತಹ ವಿಧೇಯ

ನಾದ ವೀರನನ್ನು ಪಡೆದಿರುವ ವಾನರರದೊರೆ ಎಂತಹ ಪುಣ್ಯಾತ್ಮನೋ'' ಎಂದನು.

ಸುಗ್ರೀವನ ಬಳಿಗೆ ಹಿಂತಿರುಗುತ್ತಿದ್ದ ಹನುಮಂತನಿಗೆ ಪ್ರತಿಕ್ಷಣದಲ್ಲೂ ರಾಮ ಲಕ್ಷ್ಮಣರಲ್ಲಿ ಪ್ರೀತಿ ಹೆಚ್ಚುತ್ತಿತ್ತು. ರಾಮನ ವಿಚಾರವಲ್ಲಿ ಅದು ಭಕ್ತಿಯಾಗಿ ಬೆಳೆ ಯಿತು, ರಾಮನೇ ತ್ರಿಮೂರ್ತಿಗಳಿಗೂ ಮೇಲಾದ, ಪರಬ್ರಹ್ಮನೆಂದು ನಂಬಿ, ಸುಗ್ರೀವ ನೊಡನೆ ಹೇಳಿದ. ಈ ನಂಬಿಕೆಯು ಸಂಪಾತಿಯನ್ನು ಕಂಡಾಗ ಮತ್ತಷ್ಟು ದೃಢಗೊಳ್ಳು ತ್ತದೆ. ಮಹೇಂದ್ರ ಪರ್ವತದಲ್ಲಿ ರೆಕ್ಕೆಗಳನ್ನು ಕಳೆದುಕೊಂಡು ಬಿದ್ದಿದ್ದ ಸಂಪಾತಿಯ ಮಾತಿನಂತೆ ವಾನರರೆಲ್ಲರೂ ಒಟ್ಟಿಗೆ ಭಕ್ತಿಯಿಂದ ರಾಮನಾಮ ಜಪಮಾಡಿದಾಗ ಅವನ ರೆಕ್ಕೆಗಳು ಬೆಳೆಯುತ್ತವೆ. ರಾಮನೇ ಭಗವಂತ ಎಂಬ ನಂಬಿಕೆ ಹನುಮಂತನಲ್ಲಿ ನೂರ್ಮಡಿಯಾಗಿ ದೃಢಪಟ್ಟಿತು. ರಾಮದಾಸನಾಗಿ, ರಾಮನಿಗಾಗಿ ಬದುಕುತ್ತಾನೆ, ಶ್ರೀರಾಮನ ಕೈಂಕರ್ಯ ಒಂದೇ ಅವನ ಗುರಿ.

ಹನುಮಂತನಿಗೆ ಅವನ ಶಕ್ತಿಯ ಅರಿವೇ ಇರುವುದಿಲ್ಲ. ತನ್ನ ಪರಾಕ್ರಮವನ್ನು ಡಂಗುರ ಹೊಡೆದು ಗರ್ವಿಷ್ಠನಾಗಿರಲಿಲ್ಲ. ಸಮುದ್ರೋಲ್ಲಂಘನವನ್ನು ಕುರಿತು ವಾನರ ರೆಲ್ಲರೂ ತಮ್ಮ ಸಾಮರ್ಥ್ಯವನ್ನು ಹೇಳಿಕೊಂಡಾಗ ಹನುಮಂತನು ಮೌನಿಯಾಗಿ ದ್ದನು. ಅವನ ಸಾಮರ್ಥ್ಯವನ್ನು ಅರಿತ ಜಾಂಬವಂತನು ಪ್ರೋತ್ಸಾಹಿಸಲು ಆ ಮಹಾ ಸಾಹಸಕ್ಕೆ ಸಿದ್ಧನಾದನು. ಸಮುದ್ರೋಲ್ಲಂಘನ ಮಾಡಿದ್ದನ್ನೂ, ಲಂಕಾ ದಹನ ಮಾಡಿದ್ದನ್ನೂ, ಸಂಜೀವಿನಿ ಬೆಟ್ಟವನ್ನೇ ಕಿತ್ತುತಂದದ್ದನ್ನೂ ಯಾವ ಹಿಂದುವೂ ಮರೆಯಲಾರ. ಇಂದಿಗೂ ಗರಡಿಮಾಡುವವರು ಪ್ರತಿದಿನ ಹನುಮಂತನನ್ನು ಸ್ಮರಿಸಿ, ತಮ್ಮ ನಿತ್ಯಸಾಧನೆಯಲ್ಲಿ ತೊಡಗುತ್ತಾರೆ.

ಹನುಮಂತನು ಲಂಕಾನಗರವನ್ನು ಪ್ರವೇಶಿಸಲು ತೊಡಗಿದಾಗ ಆ ನಗರ ದೇವತೆ ಯಾದ ಲಂಕಿಣಿಯು ಗುರಿಯಿಟ್ಟು ಎಸೆದ ತ್ರಿಶೂಲವನ್ನು ತನ್ನ ಹಲ್ಲಿನಿಂದ ಹಿಡಿದು ಎರಡುತುಂಡುಗಳಾಗಿ ಮಾಡಿ ಅವಳಿಗೆ ಮೆಲ್ಲನೆ ಒಂದೇಟು ಹಾಕಿದಾಗ ಅವಳು ರಕ್ತ ಕಾರುತ್ತ ಬಿದ್ದಳು. ಆಗ ಯಾವ ತಡೆಯೂ ಇಲ್ಲದ ಲಂಕೆಯನ್ನು ಪ್ರವೇಶಿಸಿ ಸೀತೆ ಯನ್ನು ಪ್ರತಿಯೊಂದು ಗೃಹದಲ್ಲೂ ಹುಡುಕುತ್ತಾನೆ. ನಾನಾ ರೂಪತಾಳಿ ಎಲ್ಲೆಲ್ಲೂ ಪ್ರವೇಶಿಸುತ್ತಾನೆ. ಬಹಳ ಹುಡುಕಿದ ಮೇಲೆ ಒಂದು ದೊಡ್ಡ ಸಭಾಂಗಣದಲ್ಲಿ ಮಲಗಿ ನಿದ್ರಿಸುತ್ತಿದ್ದ ಬೃಹದಾಕಾರದ ರಾಕ್ಷಸನನ್ನು ನೋಡಿ, ಅವನಿಗೆ ಒಂದೇ ತಲೆ ಇರುವುದನ್ನು ಗಮನಿಸಿ, ಅವನು ಕುಂಭಕರ್ಣನಿರಬೇಕೆಂದು ತೀರ್ಮಾನಿಸಿ, ಹಲವಾರು ಅರಮನೆಗಳನ್ನು ಹುಡುಕುತ್ತಾ ವಿಭೀಷಣನ ಮನೆಗೆ ಬಂದು ಅವನು ನಿದ್ರಿಸುತ್ತಿರುವು ದನ್ನು ನೋಡಿದ. ರಾಕ್ಷಸನ ದೇಹದಲ್ಲಿ ಧರ್ಮವು ಮೂರ್ತಿವತ್ತಾಗಿದೆಯೋ ಎಂಬಂತಿದ್ದ ಆ ವಿಭೀಷಣ. ಸೀತೆಯನ್ನು ಅಲ್ಲಿ ಕಾಣದೆ ಹಲವಾರು ಅರಮನೆಗಳನ್ನು ದಾಟಿ, ಮೇನಕೆ, ರಂಭೆ, ತಿಲೋತ್ತಮೆ ಮತ್ತು ಊರ್ವಶಿಯರಿಂದ ಪಾದಸೇವನೆ ಮಾಡಿಸಿಕೊಂಡು ನಿದ್ರಿಸುತ್ತಿದ್ದ ಸುಂದರಿಯಾದ ಮಂಡೋದರಿಯನ್ನು ಅವಳ

ಅರಮನೆಯಲ್ಲಿ ಕಂಡನು. ಅವಳ ಮುಖವನ್ನು ನೋಡಿ ಮುಂಬರುವ ವೈಧವ್ಯದ ಸೂಚನೆಯನ್ನು ಕಂಡು ಅಲ್ಲಿಂದ ಮುಂದೆ ಹೊರಟು ಭವ್ಯವಾದ ರಾವಣನ ಅರಮನೆಯನ್ನು ಹೊಕ್ಕಾಗ, ನಿದ್ರಿಸುತ್ತಿದ್ದ ರಾಕ್ಷಸನ ಬಲಗಣ್ಣು ಅದುರಿತು. ಭೂಮಿ ನಡುಗಿತು. ಮಿಂಚಿಲ್ಲದೆ ಮೋಡಗಳು ಗುಡುಗಿದುವು. ಈ ದುಶ್ಶಕುನಗಳನ್ನು ನೋಡಿ ಈ ವೈಭವವೆಲ್ಲವೂ ಇನ್ನು ಕೆಲವು ದಿನಗಳಲ್ಲಿ ಇರುವುದಿಲ್ಲವಲ್ಲಾ ಎಂದು ಮರುಗಿದ, ಕ್ಷೀರಸಾಗರದ ಮೇಲೆ ಮತ್ತೊಂದು ಸಮುದ್ರವು ಮಲಗಿರುವಂತೆ ದೊಡ್ಡ ಬೆಳ್ಳಿಯ ಮಂಚದ ಮೇಲೆ ಮಲಗಿದ್ದ ದಶಗ್ರೀವನನ್ನು ನೋಡಿದನು. ದಶಗ್ರೀವನ ತುಟಿಯಲ್ಲಿ ಒಂದು ನಗುವಿತ್ತು. ಅದನ್ನು ನೋಡಿ ಅವನನ್ನು ಒದ್ದು ನಾಶಮಾಡಬೇಕೆಂದು ಯೋಚಿಸಿದ. ಕೂಡಲೇ ತನ್ನ ಕೋಪವನ್ನು ಹತೋಟಿಯಲ್ಲಿಟ್ಟುಕೊಂಡು. ಇದು ರಾಮನಿಗೆ ಅಪಕೀರ್ತಿ ತರುವಂತಹ ಕೆಲಸವಾಗುತ್ತದೆಂದು ಸುಮ್ಮನಾಗಿ, ಅಲ್ಲಿಂದ ಹೊರಟು ಎಲ್ಲೆಲ್ಲೂ ಸೀತೆಯನ್ನು ಕಾಣದೆ ನಿರಾಶೆಯಿಂದ ಅಲೆಯುತ್ತಾ ಇನ್ನೂ ನೋಡಿಲ್ಲದಿದ್ದ ಅಶೋಕವನಕ್ಕೆ ಬಂದನು. ಕೂಡಲೇ ಅವನ ಮೇಲೆ ಪುಷ್ಪವೃಷ್ಟಿಯಾಯಿತು. ರಾಕ್ಷಸಸ್ತ್ರೀಯರ ಮಧ್ಯೆ ಶೋಕಗ್ರಸ್ತಳಾಗಿ ಕುಳಿತಿದ್ದ ಸೀತೆಯನ್ನು ನೋಡಿದನು. ಕಾಳಮೇಘದ ಮಧ್ಯೆ ಬರುವ ಪ್ರಕಾಶಮಾನವಾದ ಮಿಂಚಿನಂತೆ ಇದ್ದ ಸೀತೆಯನ್ನು ನೋಡಿದಕೂಡಲೇ ಅವನಿಗೆ ಅತಿಶಯವಾದ ಸಂತೋಷವಾಯಿತು. ಧೂಳಿನಿಂದ ಮುಚ್ಚಿದ ಅನರ್ಘ್ಯರತ್ನದಂತೆ ಕಾಣಿಸುತ್ತಿದ್ದ ಸೀತೆಯಂತಹ ಭಾರ್ಯೆಗಾಗಿ ರಾಮನು ದುಃಖಿಸುತ್ತಿದ್ದುದು ಅವನಿಗೆ ಅತಿಶಯವೆನಿಸಲಿಲ್ಲ. ಸೀತೆಯ ಪರಿಶುದ್ಧತೆ ಮತ್ತು ಅತಿಶಯಗುಣಗಳನ್ನು ತನ್ನಲ್ಲಿ ತಾನು ಪ್ರಶಂಸಿಸುತ್ತಿದ್ದಾಗ, ಅವಳನ್ನು ನೋಡಲು ಬಂದ ರಾವಣನು ತಿರಸ್ಕೃತನಾಗಿ ಹಿಂತಿರುಗಿದನು. ಎಚ್ಚರವಾಗಿದ್ದು ಕಾವಲು ಕಾಯುತ್ತಿದ್ದ ರಾಕ್ಷಸಿಯರು ನಿದ್ರೆ ಹೋಗುವಂತೆ ಆಂಜನೇಯನು ಮಂತ್ರವನ್ನು ಉಚ್ಚರಿಸಲು ಅವರೆಲ್ಲರೂ ನಿದ್ರಾಪರವಶರಾದರು. ಸೀತೆಯು ಅತ್ಯಂತ ಶೋಕತಪ್ತಳಾಗಿ, ರಾಮನೂ ಕೈಬಿಟ್ಟಮೇಲೆ ಮರಣಹೊಂದುವುದೇ ಧರ್ಮವೆಂದು ನಿರ್ಧರಿಸಿ ಒಂದು ಮಲ್ಲಿಗೆ ಬಳ್ಳಿಯ ಕಡೆ ಹೊರಟಳು. ಆಗ ಹನುಮಂತನು ಅವಳ ಮುಂದೆ ಕಾಣಿಸಿಕೊಂಡು ಅಂಜಲಿಬದ್ಧನಾಗಿ, ಅವಳಿಗೆ ನಂಬಿಕೆ ಉಂಟಾಗುವಂತೆ ಮಾತಾನಾಡಿ, ರಾಮವೃತ್ತಾಂತವನ್ನು ತಿಳಿಸಿ, ಶ್ರೀರಾಮನ ಮುದ್ರಿಕೆಯನ್ನಿತ್ತನು. ಅನಂತರ ಅವಳ ಆಶೀರ್ವಾದವನ್ನು ಪಡೆದು, ವಾನರರ ಶಕ್ತಿಯ ಬಗ್ಗೆ ಅವಳ ಸಂದೇಹವನ್ನು ನಿವಾರಿಸಿ ಅವಳಿಂದ ಚೂಡಾಮಣಿಯನ್ನು ಪಡೆದನು.

ರಾಮನ ಬಳಿಗೆ ಹಿಂತಿರುಗುವ ಮುನ್ನ ತನ್ನ ಗುರುತಾಗಿ ಅಶೋಕವನವನ್ನು ಹಾಳುಮಾಡಿ ರಾಕ್ಷಸರನ್ನು ಕೊಲ್ಲಲು ಇಚ್ಛಿಸಿದನು. ಅವನ ಇಚ್ಛೆಯಂತೆ ಎಲ್ಲವೂ ನಡೆಯಿತು. ಅವನ ವಿರುದ್ಧವಾಗಿ ಬಂದ ರಾಕ್ಷಸ ಪಡೆಗಳೂ ಯೋಧರೂ ನಾಶವಾದರು. ಇಂದ್ರಜಿತುವು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಬಂಧಿತನಾಗಿ ರಾವಣನ

ಸಭೆಗೆ ಹೋಗಿ ರಾಮನ ರಾಯಭಾರಿಯಂತೆ ವರ್ತಿಸಿ, ಅವನಿಗೆ ವಿವೇಕವನ್ನು ಹೇಳಿದನು. ಲಂಕಾದಹನವನ್ನು ಮಾಡಿ ಸೀತೆಯು ಕ್ಷೇಮದಿಂದಿರುವುದನ್ನು ನೋಡಿ ಅವಳ ಸಂದೇಶವನ್ನು ಪಡೆದು ಸಮುದ್ರವನ್ನು ದಾಟಿ ತನ್ನ ಜೊತೆಗಾರರನ್ನು ಸೇರಿ ಕೊಂಡನು. ತರುವಾಯ ಅಲ್ಲಿದ್ದ ವಾನರರೊಡನೆ ಕಿಷ್ಕಿಂಧೆಗೆ ಹಿಂತಿರುಗಿ ಸೀತಾ ವೃತ್ತಾಂತವನ್ನು ಶ್ರೀ ರಾಮನಿಗೆ ತಿಳಿಸಿದನು.

ಯುದ್ಧದಲ್ಲಿ ತನ್ನ ಭುಜಗಳ ಮೇಲೆ ಕುಳಿತು ಯುದ್ಧ ಮಾಡಬೇಕೆಂದು ರಾಮನನ್ನು ಪ್ರಾರ್ಥಿಸಿದನು. ಅಂತೆಯೇ ರಾಮನು ಒಪ್ಪಿ ಯುದ್ಧಮಾಡಿದನು.

ಒಂದು ರೀತಿಯಲ್ಲಿ ರಾಮಾಯಣವು ಕಿಷ್ಕಿಂಧಾಕಾಂಡದಿಂದ ಹನುಮಂತನ ಶಕ್ತಿ ಸ್ಥೈರ್ಯಗಳ ಕಥೆಯಾಗಿದೆ ಎನ್ನಬಹುದು. ಅವನನ್ನು ಪ್ರಶಂಸಿಸದ ಶತ್ರುಗಳಿಲ್ಲ. ಅತ್ಯಂತಕಠಿಣವಾದ ಕೆಲಸ ಒದಗಿದಾಗಲೆಲ್ಲಾ ಅದನ್ನು ಸಾಧಿಸಿದವನು ಹನುಮಂತ ನೊಬ್ಬನೇ. ಬ್ರಹ್ಮಾಸ್ತ್ರದ ಪರಿಣಾಮದಿಂದ ವಾನರರನ್ನು ಉಳಿಸಲು ಉತ್ತರದಿಂದ ಸಂಜೀವಿನಿಯನ್ನು ತಂದವನು ಹನುಮಂತ. ಲಕ್ಷ್ಮಣನು ಸಂಜೀವಿನಿಯ ಪ್ರಯೋಗ ದಿಂದ ಎಚ್ಚರಗೊಂಡಾಗ ರಾಮನು ಹನುಮಂತನನ್ನು ಆಲಿಂಗಿಸಿಕೊಂಡು—ಎರಡನೆಯ ಜನ್ಮಕೊಟ್ಟವನು ನೀನು. ನೀನು ಚಿರಂಜೀವಿಯಾಗಿರು-- ಎನ್ನುತ್ತಾನೆ.

ಪಟ್ಟಾಭಿಷೇಕವಾದನಂತರ ಅಯೋಧ್ಯೆಯಿಂದ ಕಿಷ್ಕಿಂಧೆಗೆ ಹನುಮಂತನನ್ನು ಕಳುಹಿಸಿಕೊಡುವಾಗ ಶ್ರೀರಾಮನು ಅವನನ್ನು ಅತ್ಯಂತ ಪ್ರೀತಿಯಿಂದ ನೋಡಿ— ನಮಗೆ ಅಪಾಯ ಉಂಟಾದಾಗಲೆಲ್ಲ ನಮ್ಮನ್ನು ಪಾರು ಮಾಡಿದವರು ನಿನ್ನಂತೆ ಯಾರೂ ಇಲ್ಲ. ನಿನ್ನ ಅಮೂಲ್ಯವಾದ ಸೇವೆಗೆ ನಾನು ಏನನ್ನು ತಾನೇ ಕೊಡಬಲ್ಲೆ. ನನ್ನ ಧೀರೋಧಾತ್ತನೆ ! ನನ್ನನ್ನು ಆಲಿಂಗಿಸು –ಎಂದನು. ಋಷಿಗಳಿಗೂ ಅಲಭ್ಯವಾದ ಆ ದಿವ್ಯಸುಂದರ ವಿಗ್ರಹವನ್ನು ಆಲಿಂಗಿಸಿಕೊಂಡದಕ್ಕಿಂತ ಇನ್ನೇನು ಬೇಕು ಎಂದಿದ್ದಾನೆ ಕವಿಕಂಬರ್. ಹನುಮಂತನು ಆಗ ಅತ್ಯಂತ ವಿನಯದಿಂದ ತಲೆಬಾಗಿ ನಿಂತ. ಅವನು ಇಂತಹ ಗೌರವಕ್ಕೆ ಅರ್ಹನು. ಅವನ ಭಕ್ತಿ, ಕೈಂಕರ್ಯ, ಸ್ನೇಹಗಳು, ಸಾಧನೆಗಳು ಸ್ವಲ್ಪವೂ ಸ್ವಾರ್ಥದ ಲೇಪವಿಲ್ಲದ್ದು.

**ಕವಿ ಕುವೆಂಪು ಚಿತ್ರಿಸಿರುವ ಹನುಮಂತ :** ಶ್ರೀರಾಮಾಯಣ ದರ್ಶನದಲ್ಲಿ ರಾಮಭಕ್ತ ಅಂಜನಾ ಪುತ್ರನ ದರ್ಶನವು ನಮಗಾಗುವುದು ಅವನು ವಾಲಿಗೆ—"ವೈರ ದಿಂದ ಧರ್ಮಸಾಧನೆಯಾಗದು. ಸೋದರನ ಮಾತನ್ನು ನಂಬು"—ಎಂದು ವಿವೇಕ ಹೇಳಿದಾಗ. ತರುವಾಯ ರಾಮ ಲಕ್ಷ್ಮಣರು ಋಷ್ಯಮೂಕದಲ್ಲಿ ಕುಳಿತು ಮಾತನಾಡುತ್ತಿದ್ದಾಗ. ಸುಗ್ರೀವನ ಆಜ್ಞೆಯಂತೆ ಅಲ್ಲಿಗೆ ಬಂದು ಕಾಣಿಸಿಕೊಂಡು ತನ್ನ ಪರಿಚಯವನ್ನು ಹೇಳುತ್ತಾನೆ. ಅವನ ಸ ಸಂಸ್ಕೃತವಾಣಿಗೆ, ಸಚ್ಚಿತಮತಿಗೆ, ವೈ ಆಕೃತಿಗೆ ರಾಮನು ಸೋತ. ಅವರಿಬ್ಬರ ಪರಸ್ಪರ ನೋಡುವಿಕೆಯು ಪ್ರಸಿದ್ಧ ಕವಿಗಳಿಬ್ಬರು ಪರಸ್ಪರ ಅರಿತು ನೋಡಿ ಮೆಚ್ಚಿದಂತಾಯ್ತು.

ಸೀತಾನ್ವೇಷಣೆಗೆ ಹೊರಟ ಆಂಜನೇಯನ ಕೈಗಳನ್ನು ಶ್ರೀರಾಮನು ಪ್ರೀತಿಯಿಂದ ಹಿಡಿದುಕೊಂಡು ತನ್ನ ಅಂಗುಳೀಯವನ್ನು ಇತ್ತು ಹರಸಿ ಅಪ್ಪಿಕೊಂಡು ಬೀಳ್ಕೊಟ್ಟನು. ಆಗ ಮಿತಭಾಷಿಯಾದ ಆಂಜನೇಯನು —"ನಾನು ಧನ್ಯ"— ಎಂದಷ್ಟೇ ಹೇಳಿಹೊರಟ.

ಜಾಂಬವಂತನ ಮಾತಿನಂತೆ ತನ್ನ ನಿಜ ಮಹಿಮೆಯನ್ನು ತಾನು ಅರಿತು ಅಣುಮೂರ್ತಿಯಾಗಿದ್ದವನು ಬೆಳೆದು ಮುಗಿಲುಮುಟ್ಟಿದನು. ಮಹೇಂದ್ರಗಿರಿಯನ್ನೇರಿ ಗರಿ ಹಗುರವಾಗಿ ಆಕಾಶಕ್ಕೆ ನೆಗೆದು ದಾರಿಯಲ್ಲಿ ಒದಗಿದ ಅಡಚಣೆಗಳನ್ನು ನಿವಾರಿಸಿಕೊಂಡು, ಸಮುದ್ರವನ್ನು ದಾಟಿ ಲಂಬಶಿಖರವೆಂಬ ನಿರ್ಜನವಾದ ಗುಪ್ತಸ್ಥಾನವನ್ನು ಹುಡುಕಿ ನರರೂಪತಾಳಿ ಇಳಿದನು.

ಅಮರಾವತಿಯಂತೆ ಸುಂದರವಾದ ಲಂಕಾನಗರವನ್ನು ಪ್ರವೇಶಿಸಲು ಬಂದಾಗ ಲಂಕಿಣಿಯು ಅವನನ್ನು ತಡೆದು ಮಹಾತ್ರಿಶೂಲವನ್ನು ಗುರಿಯಿಟ್ಟು ಎಸೆದಳು. ಆಗ ಹನುಮಂತನು ಒಂದು ಪಕ್ಕಕ್ಕೆ ನೆಗೆದು ತಪ್ಪಿಸಿಕೊಂಡನು. ಆಗ ಅವಳು ರೋಷಭೀಷಣೆಯಾಗಿ ಶೂಲಾಯುಧವನ್ನೆತ್ತಿ ಗುರಿಹಿಡಿಯುವ ಮೊದಲೇ ಅವನ್ನು ಭದ್ರವಾಗಿ ಹಿಡಿದು ಬಗ್ಗಿಸಿದ. ಸೊಕ್ಕಡಗಿದ ಅವಳು ಅವನಾರೆಂದೂ, ಅವನು ಕೈಕೊಂಡಿದ್ದ ಕಾರ್ಯದ ಮಹತ್ವವನ್ನೂ ತಿಳಿದು ಅವನಿಗೆ ಗೆಲುವಾಗಲಿ ಎಂದು ಹೇಳಿ ಅವನನ್ನು ಒಳಗೆಬಿಟ್ಟಳು.

ಆಂಜನೇಯನು ಲಂಕೆಯನ್ನು ಪ್ರವೇಶಿಸಿ ಅದರ ವೈಭವವನ್ನು ನೋಡುತ್ತ ಸೀತೆಯನ್ನು ಮನೆ ಮನೆಯಲ್ಲಿ ಅರಸುತ್ತ ರಾವಣನ ಅಂತಃಪುರವನ್ನು ಪ್ರವೇಶಿಸಿದನು. ರಾತ್ರಿ ಕೊನೆಗೊಳ್ಳುವತನಕ ಎಲ್ಲೆಲ್ಲೂ ನೋಡಿ ಚಿಂತಾಕುಲನಾದ, ಕಾವಲ್ಪಡೆಯ ಸೈನಿಕರ ಸಂಭಾಷಣೆಯನ್ನು ಕೇಳಿ ಅವರನ್ನು ಹಿಂಬಾಲಿಸಿ ಅಶೋಕವನದಲ್ಲಿದ್ದ ತೃಣಕುಟೀರವನ್ನು ಕಂಡು ಹತ್ತಿರವಿದ್ದ ಒಂದು ಮರವನ್ನೇರಿ ಕುಳಿತನು. ರಾವಣನು ಅಲ್ಲಿಗೆ ಬಂದು ಸೀತೆಯನ್ನು ಬೆದರಿಸಿ ಹೋದನಂತರ, ಅವನು ಕೊಟ್ಟ ಅವಧಿಯೊಳಗೆ ತನಗೆ ರಾಮನ ರಕ್ಷೆ ಒದಗದಿದ್ದರೆ ಅಲ್ಲಿದ್ದ ಜಲಪಾತಕ್ಕೆ ಬೀಳುವುದೇ ಗತಿ ಎಂದು ಯೋಚಿಸಿ ಅರ್ಘ್ಯವನ್ನೆತ್ತಿ ಕುಳಿತಳು. ಆಗ ಆಂಜನೇಯನು ರಾಮವೃತ್ತಾಂತವನ್ನು ಹೇಳತೊಡಗಿದ. ಅವಳ ಜೋಗಸೆಗೆ ಅಂಗುಳೀಯವನ್ನು ಹಾಕಿದ. ಅವಳ ಶಂಕೆ ದೂರವಾಯಿತು. ಆಗ ಅವಳ ಮುಂದೆ ಬಂದು ಕೈಮುಗಿದನು.

ಸೀತೆಯೊಡನೆ ನಡೆಸಿದ ಸಂಭಾಷಣೆಯು ಕಂಬ ರಾಮಾಯಣದಲ್ಲಿರುವಂತೆ ಆಂಜನೇಯನು ಬುದ್ಧಿವಂತರಲ್ಲಿ ಶ್ರೇಷ್ಠ ಎಂಬುದನ್ನು ತೋರಿಸುತ್ತದೆ. ಅವನು ಕುಶಲಮತಿ, ವಿವೇಕಿ, ಪ್ರಾಜ್ಞ, ಈ ಸಂಭಾಷಣೆಯು ಬಹಳ ಹೃದಯಸ್ಪರ್ಶಿಯಾಗಿದೆ. ಸೀತೆಯು ತನ್ನ ದುಃಸ್ಥಿತಿಯನ್ನು ಹೇಳುತ್ತ ಗೋಳಿಡುತ್ತಿದ್ದುದನ್ನು ನೋಡಿ ಅವಳಿಗೆ ಕೈಮುಗಿದು, ಅವಳನ್ನು ತನ್ನ ಬೆನ್ನಮೇಲೆ ಕೂರಿಸಿಕೊಂಡು ಸಾಗರವನ್ನು

ದಾಟಿ ರಾಮನ ಬಳಿಗೆ ಕರೆದೊಯ್ಯುವುದಾಗಿ ಹೇಳಿದನು. ಈ ಪುಟ್ಟ ದೇಹದಿಂದ ನನ್ನನ್ನು ಹೊತ್ತು ಹೇಗೆ ಈ ಸಾಗರವನ್ನು ದಾಟುವೆ ?—ಎಂದು ಅವನಶಕ್ತಿಯನ್ನು ಶಂಕಿಸಿ ಕೇಳಿದ ಕೂಡಲೇ ಬೆಟ್ಟದಂತೆ ಬೆಳೆದು ನಿಂತು – ದೇವರನ್ನು ಗುಡಿಗೆ ಒಯ್ಯು ವಂತೆ ಸಂಜೆಯ ವೇಳೆಗೆ ಶ್ರೀ ರಾಮನ ಬಳಿಗೆ ಸೇರಿಸುತ್ತೇನೆ—ಎಂದನು. ರಾಮನ ಕೀರ್ತಿಯನ್ನು ಕಸಿದುಕೊಂಡ ಅಪವಾದ ಬೇಡವೆಂದು ಸೀತೆ ಹೇಳಿದಳು. ಆಂಜನೇ ಯನು ತರುವಾಯ ಅವಳಿಂದ ಚೂಡಾಮಣಿಯನ್ನು ಪಡೆದನು.

ಅನಂತರ ಆಂಜನೇಯನು ಪುರದ ಹೆಬ್ಬಾಗಿಲ ಕಡೆ ಧಾವಿಸಿದನು. ಅನಿಲರೂಪದ ಹನುಮಂತನನ್ನು ರಾಕ್ಷಸರು ತಾಗಿದರು. ಅವರೆಲ್ಲ ಸುಟ್ಟು ಬೂದಿಯಾದರು. ಲಂಕೆಯನ್ನು ಅಕಾಲಿಕವಾದ ಜಂಝಾಮಾರುತ ಅಪ್ಪಳಿಸಿತು.

ಕಿಷ್ಕಿಂಧೆಗೆ ಹಿಂತಿರುಗಿ—'ಹೇ ದಾಶರಥಿ! ಧನ್ಯನಾಂ ಕಂಡು ಪುಣ್ಯಶ್ಲೋಕೆಯಂ-' ಎಂದು ಹೇಳಿ ಚೂಡಾಮಣಿಯನ್ನು ಸೀತಾಪತಿಗೆ ಸಮರ್ಪಿಸಿ ಕೃತಾರ್ಥನಾದ. ಯುದ್ಧ ದಲ್ಲಿ ಒಂದು ದಿನ ಶ್ರೀ ರಾಮನು ಎತ್ತರವಾದ ಒಂದು ಸ್ಥಳದಲ್ಲಿ ತನ್ನ ಮಹಾ ಕೋದಂಡವನ್ನು ಊರಿ ರಣರಸಾನುಭವಾಸಕ್ತನಾಗಿ ನಿಂತಿದ್ದನು. ಹತಾಶನೂ ಜರ್ಝರಿತ ದೇಹಿಯೂ ಆದ ಹನುಮಂತನು ಯುದ್ಧವನ್ನು ತ್ಯಜಿಸಿ ಬಂದು ರಾಮ ನನ್ನು ನೋಡಿ ತನ್ನ ಅಸ್ಥಿರತೆಗೆ ನಾಚಿದನು. ಅವನಿಗೆ ವಿರಾಟ್‌ಶಕ್ತಿಯ ದರ್ಶನಾನು ಭವವಾಯಿತು. ತನ್ನನ್ನು ತಾನು ಮರೆತ, ರಾಮಪದದಲದಲ್ಲಿ ನಮಸ್ಕರಿಸಿ, ಗದ್ಗದಿತನಾಗಿ—"ದಾಶರಥಿ, ನಿನ್ನ ನಿಜತ್ವವನ್ನು ಮರೆಮಾಚಿ, ಸರ್ವಜ್ಞನೂ ಸರ್ವ ಶಕ್ತನೂ ಆಗಿದ್ದು ನಮ್ಮ ಶ್ರೇಯಸ್ಸಿಗಾಗಿ ನಮ್ಮ ನೆರವನ್ನು ಬೇಡಿದೆಯಲ್ಲವೆ ?— ಎಂದ. ಅದಕ್ಕೆ ಶ್ರೀರಾಮನು—"ಈ ನನ್ನ ನಿಜತ್ವ ನಿನಗಲ್ಲದೆ ಬೇರೆಯಾರಿಗೂ ಗೋಚರವಾಗದು, ನರತ್ವವನ್ನೂ ನಾರಾಯಣತ್ವವನ್ನೂ ಸೇರಿಸುವ ಚಿದ್ರೂಪದ ಸೇತುವೆ ನೀನು. ಮುಂದಿನ ಲೀಲೆಯನ್ನು ನೋಡುಬಾ"—ಎಂದನು

ಈ ಮಾತುಗಳಲ್ಲಿ ಕವಿಯು ಶ್ರೀರಾಮನ ದೈವತ್ವವನ್ನು ಮನಮುಟ್ಟುವಂತೆ ತಿಳಿಸಿದ್ದಾರೆ. ಅಲ್ಲದೆ ಆಂಜನೇಯ ಸದಾಚಾರ್ಯನ್. ಪರಮಾತ್ಮನ ಚಿಂತನೆಯಲ್ಲಿರುವ ಜೀವಾತ್ಮವನ್ನು ಪರಮಾತ್ಮನ ಬಳಿಗೆ ಸೇರಿಸುವವನು ಆಚಾರ್ಯ, ಅವನ ಕೆಲಸ ಗಳೆಲ್ಲವೂ ಜೀವನವನ್ನು ಉದ್ಧರಿಸುವುದಾಗಿದೆ ಎಂಬ ವಿಚಾರವೂ ಇಲ್ಲಿ ವಿದಿತವಾಗಿದೆ. ಈ ಸನ್ನಿವೇಶವು ಕಂಬರಾಮಾಯಣದಲ್ಲಿಲ್ಲ.

ಯುದ್ಧಾನಂತರ ಸೀತೆಯ ಅಂತಸ್ಥವನ್ನು ರಘುರಾಮನಡಿಯಲ್ಲಿ ಅರಿಕೆ ಮಾಡುವ ಕಾರ್ಯವನ್ನು ನೆರವೇರಿಸುವವನು ಆಂಜನೇಯ. ಮತ್ತೊಮ್ಮೆ ಗುಹ ನೊಡನೆ ಹೊರಟು ಅಗ್ನಿಪ್ರವೇಶ ಮಾಡಲು ಸಿದ್ಧನಾಗುತ್ತಿದ್ದ ಭರತನನ್ನ ಕಂಡು ಶ್ರೀರಾಮಚಂದ್ರನು ಸೀತಾ ಲಕ್ಷ್ಮಣ ಸಹಿತ ಕುಶಲವಾಗಿದ್ದು ಬರುವವನಿದ್ದಾನೆ— ಎಂಬ ಸಂದೇಶವನ್ನು ತಿಳಿಸುವ ಕಾರ್ಯವನ್ನು ಮಾಡಿ ಕೃತಾರ್ಥನಾಗುತ್ತಾನೆ.

ಆಂಜನೇಯನು ಮಹಾಶಕ್ತಿವಂತ, ಯುಕ್ತಿವಂತ, ಯುಕ್ತಾಯುಕ್ತಗಳನ್ನು ತಿಳಿದವ, ಕಾರುಣ್ಯವುಳ್ಳವ, ಶತ್ರುಗಳನ್ನು ಸದೆಬಡಿಯುವ ಪರಾಕ್ರಮಶಾಲಿ, ಮಹಾ ಮೇಧಾವಿ, ಜಿತೇಂದ್ರಿಯ, ಯೋಗಿ, ಕಾರ್ಯವನ್ನು ಸಾಧಿಸುವಂತಹ ಕಾರ್ಯತತ್ಪರತೆ ಯುಳ್ಳವ, ಶ್ರೀರಾಮಸದ್ಧರ್ಮದೂತ. ಸಂದೇಶವಾಹಕ ವರೇಣ್ಯ ಗುರು, ಜಗತ್ ಪ್ರಾಣ ಮುಖ್ಯ ಪ್ರಾಣ.

ಕಂಬರ್ ಚಿತ್ರಿಸಿರುವ ರಾವಣ : ರಾವಣನು ರಾಮಾಯಣದ ಖಳನಾಯಕ. ರಾಮನ ಶತ್ರುವಾದ ರಾವಣನ ಮುಖ್ಯ ದೌರ್ಬಲ್ಯ ಅವನ ಅತಿಯಾದ ಕಾಮುಕತೆ. ಅವನು ವೇದಾಧ್ಯಯನ ಸಂಪನ್ನ ತಪಶ್ಶಕ್ತಿಯಿಂದ ಅಪಾರ ಬಲಪರಾಕ್ರಮಗಳನ್ನು ಸಂಪಾದಿಸಿದವ. ಶಕ್ತಿಗೆ ತಕ್ಕಂತೆ ಮಹಾತೇಜಸ್ಸಿನಿಂದ ಕೂಡಿದ ಸುಂದರ ಪುರುಷ. ದೇವಾಸುರ ಯಕ್ಷನಾಗರವನ್ನೆಲ್ಲ ಸೋಲಿಸಿ ತ್ರಿಲೋಕಗಳ ಮೇಲೆ ಅಧಿಕಾರ ನಡೆ ಸುತ್ತಿದ್ದ. ಅಷ್ಟದಿಗ್ಗಜಗಳು ಅವನನ್ನು ತಮ್ಮ ಪ್ರಭುವಾಗಿ ಅಂಗೀಕರಿಸಿದ್ದುವು. ಅವನ ತಪಸ್ಸಿನ ಫಲವು ಮುಗಿಯುವವರೆಗೂ ತ್ರಿಮೂರ್ತಿಗಳೂ ಅವನ ವಿಚಾರಕ್ಕೆ ತಲೆ ಹಾಕಲು ಹಿಂತೆಗೆದರು. ಒಂದು ಸಲ ವಾಲಿಯಿಂದ, ಮತ್ತೊಂದು ಸಲ ಕಾರ್ತ ವೀರ್ಯಾರ್ಜುನನಿಂದ ಸೋಲನ್ನು ಅನುಭವಿಸಿದ್ದರೂ, ಪ್ರಪಂಚದ ಪ್ರಭುವಾಗಿ ಮುಂದು ವರಿದ. ಇವನನ್ನು ಇವನ ಶತ್ರುಗಳು ನಾಶ ಮಾಡಲು ಸಾಧ್ಯವಿಲ್ಲವೆಂದರಿತಿದ್ದರು.

ಲಕ್ಷ್ಮಣನಿಂದ ಅಂಗವಿಚ್ಛೇದನಗೊಂಡ ಶೂರ್ಪನಖಿಯು ತನ್ನ ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ಲಂಕೆಗೆ ಬಂದ ಮೋಡವು ಬಿದ್ದಂತೆ ರಾವಣನ ಕಾಲುಗಳ ಮೇಲೆ ಬಿದ್ದಳು. ಅವನು ಕೋಪಾವೇಶದಿಂದ ಯಾರು ಅಂಗವಿಚ್ಛೇದನ ಮಾಡಿದ ರೆಂದು ಕೇಳಿದನು. ರಾಮಲಕ್ಷ್ಮಣರನ್ನು ಮೋಹಿಸಿದ ಶೂರ್ಪನಖಿ ಅವರ ಸೌಂದರ್ಯ ಮತ್ತು ಶೌರ್ಯವನ್ನು ವರ್ಣಿಸಿ ಕೊನೆಯಲ್ಲಿ ಅವರು ದಶರಥ ಪುತ್ರರಾದ ರಾಮ ಲಕ್ಷ್ಮಣರೆಂದು ಹೇಳಿದಳು. ಖರ ಮತ್ತು ಇತರ ರಾಕ್ಷಸರು ಹತರಾದುದಕ್ಕೆ ಕಾರಣ ವನ್ನು ಕೇಳಿದಾಗ — "ಸಾಕ್ಷಾತ್ ಲಕ್ಷ್ಮಿಯೇ ಸೀತೆಯಾಗಿ ರಾಮನ ಸಂಗಡ ಇದ್ದಾಳೆ. ಅವಳಷ್ಟು ಸುಂದರಿ ಎಲ್ಲೂ ಇಲ್ಲ. ಅವಳ ಸೌಂದರ್ಯವನ್ನು ವರ್ಣಿಸಲು ನನಗೆ ಸಾಧ್ಯ ವಿಲ್ಲ. ಅವಳು ನಿನ್ನವಳಾದರೆ ನಿನ್ನ ಸಕಲೈಶ್ವರ್ಯವನ್ನೂ ಅವಳ ಪಾದಗಳಲ್ಲಿ ಇಟ್ಟು ಬಿಡುತ್ತೀಯೆ—'' ಎಂದಳು, ಆವಳ ಮಾತಿನಿಂದ ಅವನಿಗೆ ಸೀತೆಯಮೇಲೆ ಅತಿ ಆಸೆ ಕೆರಳಿತು.

ಕಂಬರ್ ಅಕಂಪನನ ಘಟನೆಯನ್ನು ಹೇಳಿಲ್ಲ, ಸೀತೆಯ ಮೇಲೆ ಉಂಟಾದ ಆಸೆಯೇ ಬೀಜವಾಗಿ ಅದು ಮುಂದಿನ ಘಟನೆಗಳಿಗೆಲ್ಲ ಕಾರಣವಾಗುತ್ತದೆ.

ಮನ್ಮಥನ ಬಾಣಗಳಿಂದ ಪೀಡಿತನಾದ ರಾವಣನು ಖರನನ್ನೂ, ತನ್ನ ತಂಗಿಗೆ ಅಂಗವಿಚ್ಛೇದನ ಮಾಡಿದವನ ಶಕ್ತಿಯನ್ನೂ, ತಾನು ಪಡೆದಿದ್ದ ವರಗಳ ಮಿತಿಯನ್ನೂ ತನಗಾಗಿದ್ದ ಅಪಮಾನವನ್ನೂ ಮರೆತ. ತಾನು ಕಾಣದಿದ್ದ ಸೀತೆಯನ್ನು ಮಾತ್ರ

ಮರೆಯಲಿಲ್ಲ. ಅವನ ದೇಹವು ಕಾಮಾಗ್ನಿಯಿಂದ ಉರಿಯ ತೊಡಗಿತು, ಚಳಿಗಾಲದಲ್ಲೂ ಅದನ್ನು ತಡೆಯಲಾಗಲಿಲ್ಲ. ಋತುಗಳೇ ಬೇಡವೆಂದು ಆಜ್ಞಾಪಿಸಿದ, ಏನು ಮಾಡುವುದು ಎಂದು ಪರಿತಪಿಸುತ್ತಿದ್ದಾಗ —''ನೀನೇಕೆ ಹಿಂಜರಿಯುವೆ ? ನಿನಗಾಗಿ ಅವಳನ್ನು ಅಲ್ಲಿಗೆ ಹೋಗಿ ಸೆರೆಹಿಡಿದುಕೊಂಡು ಬಾ—'' ಎಂದು ಶೂರ್ಪನಖಿ ಹೇಳಿದಳು. ಆಗ ತನ್ನ ಸಲಹೆಗಾರರೊಡನೆ ಸಮಾಲೋಚನೆ ಮಾಡಿ ವಿಶ್ರಾಂತ ಜೀವನ ಮಾಡುತ್ತಿದ್ದ ಮಾರೀಚನ ಸಹಾಯವನ್ನು ಕೇಳಲು ಹೊರಟನು. ಸೀತೆಯ ಮೇಲಿನ ಮೋಹವು ಅವನಿಗೆ ಕೀಳುದರ್ಜೆಯ ಕಾಮವಾಗಿರಲಿಲ್ಲ. ಸೀತೆಯ ಹೃದಯವನ್ನು ಗೆಲ್ಲದೆ ಅವಳನ್ನು ಬಲಾತ್ಕರಿಸಲಿಲ್ಲ. ಅವನಿಗೆ ಸೀತೆಯ ಪ್ರೇಮ ಬೇಕಾಗಿತ್ತು.

ಸೀತೆಯ ನಿಷ್ಠುರೋಕ್ತಿಗಳಿಂದ ಅನ್ಯಮಾರ್ಗವಿಲ್ಲದೆ ಲಕ್ಷ್ಮಣನು ಕುಟೀರದಿಂದ, ಹೋದಮೇಲೆ ಸಂನ್ಯಾಸಿಯ ವೇಷದಲ್ಲಿ ರಾವಣನು ಅಲ್ಲಿಗೆ ಹೋದನು. ಬಹಳ ದೂರನಡೆದು ಆಯಾಸಗೊಂಡಂತೆ ಕಂಡನು. ವೀಣೆಯನ್ನು ನುಡಿಸುತ್ತ ವೇದವನ್ನು ಹಾಡಿದನು. ಸೀತೆಯು ಅವನನ್ನು ಸಾಧುವೆಂದು ತಿಳಿದು ಸ್ವಾಗತಿಸಿದಳು. ಅವಳನ್ನು ನೋಡಿದ ಕೂಡಲೇ ಕಾಮತಪ್ತನಾಗಿದ್ದ ರಾವಣನು ಬೆದರಿದನು, ಅವಳನ್ನು ತನ್ನವಳನ್ನಾಗಿ ಮಾಡಿಕೊಂಡು ತ್ರಿಲೋಕಗಳಿಗೂ ರಾಣಿಯಾಗಿ ಮಾಡಿ ಎಲ್ಲ ಅಸುರರು ಮತ್ತು ದೇವತೆಗಳನ್ನು ಅವರ ಪತ್ನಿಯರೊಂದಿಗೆ ಅವಳ ಸೇವೆಗಾಗಿ ನೇಮಿಸುವುದಾಗಿ ಯೋಚಿಸಿದನು ಅವಳನ್ನು ಮಾತನಾಡಿಸಿ ತಾನು ಯಾರೆಂಬುದನ್ನು ತೋರಿಸಿಕೊಂಡನು. ಅವಳನ್ನು ಕುಟೀರದೊಡನೆ ಎತ್ತಿಕೊಂಡು ಲಂಕೆಗೆ ಹೋದನು.

ಸೀತೆಯ ವಿಚಾರವನ್ನು ಕೇಳಿದಾಗಿನಿಂದ ಅವನ ಸ್ತ್ರೀವ್ಯಾಮೋಹವು ಪ್ರಬಲವಾಯಿತು, ಅದಕ್ಕೆ ಮೊದಲು ಪ್ರಾಬಲ್ಯ, ಸಾಹಸ, ಕೀರ್ತಿಗಳ ವ್ಯಾಮೋಹ ಪ್ರಮುಖವಾಗಿತ್ತು.

ಅಪಮಾನವನ್ನು ಸಹಿಸಲು ಅವನಿಗೆ ಸಾಧ್ಯವಿರಲಿಲ್ಲ. ಸೀತೆಯು ಅವನು ಯಾರೆಂದು ಅರಿಯದೆ ಅವನ ಶೌರ್ಯ ಪ್ರತಾಪಗಳನ್ನು ಟೀಕಿಸಿದ್ದನ್ನು ಸಹಿಸಲಾಗದೆ ತನ್ನ ನಿಜ ಸ್ವರೂಪದಿಂದ ಅವಳ ಮುಂದೆ ನಿಂತ. ಶೂರ್ಪನಖಿಯ ಅಂಗವಿಚ್ಛೇದನ, ಹನುಮಂತನು ಲಂಕಾದಹನ ಮಾಡಿ ಜೀವಸಹಿತ ತಪ್ಪಿಸಿಕೊಂಡುದು, ಅವನಿಗೆ ತೀರ ಅಸಹನೀಯವಾಗಿತ್ತು. ಯುದ್ಧವು ಪ್ರಾರಂಭವಾಗುವ ಮುನ್ನ ಅವನು ಶತ್ರು ಸೈನ್ಯವನ್ನು ನೋಡುತ್ತಿದ್ದಾಗ, ಸುಗ್ರೀವನು ಹಾರಿ ಬಂದು ಅವನೊಡನೆ ಮುಷ್ಟಿಯುದ್ಧ ನಡೆಸಿ ಅವನ ಕಿರೀಟದ ನವರತ್ನಗಳನ್ನು ಕಿತ್ತುಕೊಂಡು ಹೋದಾಗ ಅವನಿಗೆ ತೀರ ಅಪಮಾನವಾಗಿ — ನಾನು ಸತ್ತು ಹೋಗಿದ್ದರೆ ಚೆನ್ನಾಗಿತ್ತು — ಎಂದುಕೊಳ್ಳುತ್ತಾನೆ.

ತನ್ನ ವಿಚಾರದಲ್ಲಿ ರಾವಣನಿಗೆ ತೀರ ಹೆಮ್ಮೆ ಮತ್ತು ಅಭಿಮಾನವಿದ್ದರೂ ತನ್ನ ಸಹೋದರರು ಮತ್ತು ಪುತ್ರರನ್ನು ಬಹುವಾಗಿ ಪ್ರೀತಿಸುತ್ತಿದ್ದನು. ಕುಂಭಕರ್ಣನು

ಯುದ್ಧದಲ್ಲಿ ಮಡಿದನೆಂಬುದನ್ನು ದೂತರು ತಿಳಿಸಿದಾಗ ಸಾಲವೃಕ್ಷದಂತೆ, ಪ್ರಜ್ಞಾಶೂನ್ಯನಾಗಿ ಬೀಳುತ್ತಾನೆ. ಅತಿಕಾಯನು ಮಡಿದನೆಂದು ತಿಳಿದಾಗ ದುಃಖದಿಂದ ರೋದಿಸಿದ. ಆದರೆ ಇಂದ್ರಜಿತ್ತಿನ ಮರಣದ ಸುದ್ದಿ ತಿಳಿದಾಗ ಅತೀವ ದುಃಖದಿಂದ ಮುಜ್ಜಸಂತಾಗಿ ದೂತರ ತಲೆಗಳನ್ನು ಒಂದೇ ಏಟಿಗೆ ಕಡಿದು ಹಾಕಿದನು. ತರುವಾಯ ನೆಲದ ಮೇಲೆ ಬಿದ್ದು ಹೊರಳಾಡಿದನು. ದುಃಖದಿಂದ ತನ್ನ ಪ್ರೀತಿಯ ಮಗನನ್ನು ಕುರಿತು ಅವನಾಡುವ ಒಂದೊಂದು ಮಾತನ್ನೂ ಕವಿಯು ಅವನ ಒಂದೊಂದು ಮುಖದಿಂದ ಹೇಳಿಸಿದ್ದಾನೆ. ಅರಮನೆಯಲ್ಲಿ ಈ ರೀತಿ ಗೋಳಾಡಿ, ತನ್ನ ಮಗನ ದೇಹವನ್ನು ಹುಡುಕಿತರಲು ಯುದ್ಧ ಭೂಮಿಗೆ ಹೋಗಿ ಅಲ್ಲಿಲ್ಲಿ ಬಹುವಾಗಿ ಹುಡುಕಿದಾಗ ಬಿಲ್ಲನ್ನು ಹಿಡಿದಿದ್ದ ಇಂದ್ರಜಿತ್ತಿನ ತೋಳು ಸಿಕ್ಕಿತು. ಅದನ್ನು ಅಪ್ಪಿದ, ತಲೆಯ ಮೇಲಿಟ್ಟುಕೊಂಡ, ಮೂರ್ಛೆಹೋದ, ಗೋಳಾಡಿದ. ಕೊನೆಗೆ ಸಿಕ್ಕಿದ ಮಗನ ದೇಹದ ಮೇಲೆ ಬಿದ್ದು ಅತ್ತು, ಅದನ್ನು ಎದೆಗೆ ಅಪ್ಪಿಕೊಂಡ, ಚುಚ್ಚಿಕೊಂಡಿದ್ದ ಬಾಣಗಳನ್ನು ಕಿತ್ತುಹಾಕಿ ಆ ದೇಹವನ್ನು ಚುಂಬಿಸಿದ. ಕೊನೆಗೂ ತಲೆಯು ಸಿಕ್ಕದೆ ಹೋದಾಗ ಮತ್ತೊಮ್ಮೆ ಗೋಳಾಡಿದ. —"ಹಿಂದೆ ನಾನು ಯಮನನ್ನೇ ಸೋಲಿಸಿದೆ. ಸ್ವರ್ಗಕ್ಕೆ ಮುತ್ತಿಗೆ ಹಾಕಿ ಗೆದ್ದೆ, ಈಗ ಕಾಮಕ್ಕೆ ಗುಲಾಮನಾದೆ. ನೀನು ನನಗೆ ಸಹಜವಾಗಿ ಪಿತೃಕೈಂಕರ್ಯ ಮಾಡಬೇಕು, ಆದರೆ ಈಗ ನಾನು ನಿನ್ನ ಅಪರಕರ್ಮವನ್ನು ಮಾಡಬೇಕಾಗಿ ಬಂತಲ್ಲಾ! ಲೋಕಗಳಲ್ಲಿ ನನ್ನಂತೆ ಯಾರಿದ್ದಾರೆ?" ಎಂದು ದುಃಖಿಸಿದ.

ರಾವಣನು ಅಸಾಧಾರಣ ಪರಾಕ್ರಮಿ. ಯುದ್ಧಕಾಂಡದಲ್ಲಿ ಕವಿಕಾಬರ್ ರಾವಣನ ಯುದ್ಧಕೌಶಲ್ಯವನ್ನೂ, ಪರಾಕ್ರಮವನ್ನೂ ಬಹು ಚೆನ್ನಾಗಿ ವರ್ಣಿಸಿದ್ದಾರೆ. ಆಂಜನೇಯನು ತನ್ನ ವಿರಾಟ್ ರೂಪದಿಂದ ಅವನನ್ನು ಎದುರಿಸಿದಾಗ ಅವನ ಶೌರ್ಯ, ಬುದ್ಧಿಶಕ್ತಿ, ಪರಾಕ್ರಮಗಳನ್ನು ಪ್ರಶಂಸಿಸಿ — "ಓ ಮಹಾವೀರ! ನಿನ್ನ ಸಮಾನ ತ್ರಿಲೋಕಗಳಲ್ಲಿ ಯಾರಿದ್ದಾರೆ?" – ಎಂದ. ಹನುಮಂತನು ಅವನ ಎದೆಗೆ ಮುಷ್ಟಿ ಪ್ರಹಾರ ಮಾಡಿದಾಗ ಅದನ್ನು ತಡೆದುಕೊಂಡು ಚೇತರಿಸಿಕೊಂಡು, "ನನ್ನ ಪ್ರಹಾರವನ್ನು ನೀನು ತಡೆದುಕೊಂಡರೆ ನಿನ್ನೆದುರು ನಿಲ್ಲುವವರು ಯಾರೂ ಇರುವುದಿಲ್ಲ. ನೀನು ಎಂದೆಂದಿಗೂ ಇರುವೆ– " ಎಂದ. ಲಕ್ಷ್ಮಣನ ಯುದ್ಧಕೌಶಲ್ಯವನ್ನು ಮೆಚ್ಚಿ ಪ್ರಶಂಸಿಸಿದ.

ರಾಮನೊಂದಿಗೆ ಯುದ್ಧ ಮಾಡುವವರೆಗೆ ಅವನ ಪರಾಕ್ರಮವನ್ನು ರಾವಣನು ಕಡೆಗಣಿಸಿದ್ದನು. ಆದರೆ ರಾಮರಾವಣ ಯುದ್ಧದಲ್ಲಿ ರಾಮನ ಕೈ ಮೇಲಾದರೂ ರಾಮನು ಅವನನ್ನು ಮರುಕದಿಂದ ಕೊಲ್ಲದೆ — "ಧರ್ಮವಿರುದ್ಧವಾಗಿ ವರ್ತಿಸುವವರಿಗೆ ಇದೇ ಗತಿ" — ಎಂದು ಹೇಳಿದಾಗ, ಯುದ್ಧಭೂಮಿಯಿಂದ ಓಡಿಹೋಗಿ ಅನೇಕ ದಿನಗಳಾದರೂ ಯುದ್ಧಕ್ಕೆ ಹೋಗಲಿಲ್ಲ. ಕುಂಭಕರ್ಣ, ಅತಿಕಾಯ, ಇಂದ್ರಜಿತ್,

ಎಲ್ಲರೂ ಮಡಿದರು. ಕೊನೆಯಲ್ಲಿ ತನ್ನ ವಿನಾಶಲು ಪಡೆಯೊಡನೆ ಯುದ್ಧಕ್ಕೆ ಹೋಗಿ ರಾಮನನ್ನು ಎದುರಿಸಿದನು. ಧರ್ಮ ಮತ್ತು ಅಧರ್ಮವೂ, ಜ್ಞಾನ ಮತ್ತು ಅಜ್ಞಾನವೂ, ಪುಣ್ಯ ಮತ್ತು ಪಾಪವೂ ಕೊನೆಯ ಹೋರಾಟ ನಡೆಸುವಂತಿತ್ತು ರಾಮರಾವಣ ಯುದ್ಧ. ಅವರಿಬ್ಬರೂ ಖಗೇಂದ್ರನಾದ ಗರುಡ ಮತ್ತು ಸಾವಿರ ಹೆಡೆಗಳುಳ್ಳ ಆದಿಶೇಷನಂತೆ ಕಂಡರು. ಸೋಲುವ ಸ್ಥಿತಿಯಲ್ಲಿದ್ದ ರಾವಣನನ್ನು ಬದುಕಿಸಲು ರಥವನ್ನು ರಾಮನಿಂದ ದೂರ ಒಂದಕ್ಕೆ ತಿರುಗಿಸಿದ ಸಾರಥಿಗೆ ವೀರನಾದ ರಾವಣನು ಹೀಗೆ ಹೇಳುತ್ತಾನೆ.—'' ರಥವನ್ನು ಹಿಂತಿರುಗಿಸಿ, ನನ್ನ ಪರಾಕ್ರಮವನ್ನು ನೋಡಿ ರಾಮನು ದೇವತೆಗಳ ಮುಂದೆ ನಗುವಂತೆ ಮಾಡಿದೆಯಾ, ದ್ರೋಹಿ ! ನಾನು ನಿನ್ನನ್ನು ನಂಬಿದೆ. ರಥವನ್ನು ಹಿಂತಿರುಗಿಸಿ ನನ್ನನ್ನು ಹೇಡಿಯನ್ನಾಗಿ ಮಾಡಿದೆ. ನಿನ್ನನ್ನು ಸುಮ್ಮನೆ ಬಿಡುವೆನೇ?'' — ಎಂದು ಕತ್ತಿಯನ್ನೇ ಹಿರಿದ. ಆದರೆ ಸಾರಥಿಯ ಉತ್ತರದಿಂದ ಸಮಾಧಾನ ಹೊಂದಿ ಪುನಃ ರಾಮನನ್ನು ಎದುರಿಸಿ, ರಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರ ಮತ್ತು ಅದರೊಡನೆ ಬಂದ ವಿಷ್ಣುಚಕ್ರದಿಂದ ಮರಣ ವನ್ನಪ್ಪಿದನು.

ಕಂಬರ್ ಚಿತ್ರಿಸಿರುವ ರಾವಣನು ಕೊನೆಯವರೆಗೂ ತೇಜಸ್ವಿ, ಪರಾಕ್ರಮಿ, ಗಂಭೀರನಾದ ಮಹಾಶೂರ. ಸೀತೆಯ ಮೇಲಿನ ಅಪರಿಮಿತವಾದ ವ್ಯಾಮೋಹದಿಂದ ಪತನಹೊಂದಿದನು.

**ಕುವೆಂಪು ಚಿತ್ರಿಸಿರುವ ರಾವಣ :** ಕುವೆಂಪು ರಾಮಾಯಣದ ರಾವಣನು ಕಾಮುಕನಾದರೂ, ತನ್ನ ದೌರ್ಬಲ್ಯವನ್ನು ಕಳೆದುಕೊಂಡು ಕ್ರಮ ಕ್ರಮವಾಗಿ ಸಾತ್ವಿಕನಾದ, ಅಜ್ಞಾನದಿಂದ ಜ್ಞಾನದೆಡೆಗೆ ಮುಂದುವರಿದು ಉದ್ಧಾರವಾದ ಖಳ ನಾಯಕನಾಗಿದ್ದಾನೆ. ಮಾಯಾವಿ ಮತ್ತು ವಂಚಕನಲ್ಲ. ಸರಸಸೌಜನ್ಯ, ಸಂಸ್ಕೃತಿ, ಸಹೃದಯತೆಗಳುಳ್ಳ ವ್ಯಕ್ತಿ. ಮೊದಲು ಇವನಿಗೆ ' ಪೆಣ್ಣೊಡಲಿನಾಸೆ ' ಪ್ರಬಲವಾಗಿತ್ತು. ಇವನ ರೂಪ ವೈಭವ, ರಸಿಕತೆ, ಯೌವನಕ್ಕೆ ವಶವಾಗದ ಹೆಣ್ಣುಗಳೇ ಇರಲಿಲ್ಲ. ಸ್ತ್ರೀಪಾತಿವ್ರತ್ಯದಲ್ಲಿ ಇವನು ನಂಬಿಕೆಯನ್ನು ಕಳೆದುಕೊಂಡವನಾಗಿದ್ದ. ಕಾಮದಾಹ ಅತಿಯಾಗಿತ್ತು. ರಾಮಲಕ್ಷ್ಮಣರಲ್ಲಿ ಮೋಹಗೊಂಡು ಮುಖ ಕೆತ್ತಿಸಿಕೊಂಡು ಅಪಮಾನಿತಳಾದ ತಂಗಿ ಶೂರ್ಪನಖಿಯ ಮಾತಿನಂತೆ ಸೀತೆಯನ್ನಪಹರಿಸಲು ನಿರ್ಧರಿಸಿ, ಮಾರೀಚನನ್ನು ಕಂಡು, ಅವನು ಎಷ್ಟು ವಿಧವಾಗಿ ವಿವೇಕ ಹೇಳಿದರೂ ಕೇಳದೆ ಅವನನ್ನು ಹೆದರಿಸಿ ಒಪ್ಪಿಸಿದನು. ಇವನ ಕಾಮುಕತನವು ಇವನನ್ನು ಪತನದೆಡೆಗೆ ಸೆಳೆಯಿತು.

ಇವನ ಅಭಿಲಾಷೆಯಂತೆ ಮಾರೀಚನು ಮಾಯಾಮೃಗವಾಗಿ ಪರ್ಣಕುಟಿಯ ಬಳಿ ಸುಳಿದಾಗ, ಸೀತಾ ರಾಮಲಕ್ಷ್ಮಣರು ತಮ್ಮ ವನವಾಸದ ಅವಧಿಯನ್ನು ಮುಗಿಸಿ ಅಯೋಧ್ಯೆಗೆ ಹಿಂತಿರುಗಲು ಸಿದ್ಧರಾಗುತ್ತಿದ್ದರು. ಸೀತೆಯು ಮಾಯಾ ಜಿಂಕೆಯನ್ನು

ನೋಡಿ ಮೋಹಗೊಂಡು ಅದನ್ನು ಹಿಡಿದು ತರಲು ಲಕ್ಷ್ಮಣನಿಗೆ ಹೇಳಿದಾಗ ಅದು ಕಾಮರೂಪಿಯಾದುದು, ಬೇಡವೆಂದನು. ಆಗ ಅವಳು ರಾಮನನ್ನು ಬೇಡಿದಳು. ರಾಮನು ಧನುರ್ಬಾಣಗಳನ್ನು ಧರಿಸಿ ಹೊರಟನು. ಅದು — 'ಓ ಲಕ್ಷ್ಮಣಾ' ಎಂದು ಆರ್ತನಾದಮಾಡಿತು. ಸೀತೆಯ ನಿಷ್ಠುರೋಕ್ತಿಯನ್ನು ತಡೆಯಲಾರದೆ ಲಕ್ಷ್ಮಣನೂ ಪರ್ಣಕುಟಿಯನ್ನು ಬಿಟ್ಟು ಹೊರಟನು. ಸೀತೆ ಒಬ್ಬಳೇ ಇರುವುದನ್ನು ಕಂಡು ರಾವಣನು ಜಟಾಧಾರಿಯಾದ ಸನ್ಯಾಸಿ ವೇಷದಲ್ಲಿ ಅಲ್ಲಿಗೆ ಬಂದು ಅವಳ ಇಚ್ಛೆಗೆ ವಿರುದ್ಧವಾಗಿ ಬಲಾತ್ಕಾರದಿಂದ ಲಂಕೆಗೆ ಕೊಂಡೊಯ್ದನು.

ಆದರೆ ಅವಳನ್ನು ಬಲಾತ್ಕಾರವಾಗಿ ಭೋಗಿಸುವ ಹೇಯಕೃತ್ಯಕ್ಕೆ ಮನಸ್ಸು ಮಾಡಲಿಲ್ಲ. ಸೀತೆ ಅವನನ್ನು ತಿರಸ್ಕರಿಸಿದರೂ ಅವಳಲ್ಲಿ ಅವನಿಗೆ ಮೋಹಕಡಿಮೆ ಯಾಗಲಿಲ್ಲ.

ಯುದ್ಧದಲ್ಲಿ ಇಂದ್ರಜಿತ್, ಅತಿಕಾಯ, ಕುಂಭಕರ್ಣ ಮತ್ತು ಇತರ ಶೂರರಾದ ಸೇನಾಪತಿಗಳು ಮಡಿದರು. ಧ್ಯಾನಮಾಲಿನಿಯ ಮರಣ ಮತ್ತು ಅವಳ ಕೊನೆಯ ಮಾತುಗಳು, ಇವೆಲ್ಲವೂ ಅವನಲ್ಲಿ ವೈರಾಗ್ಯ ಮೂಡಿಸಿದುವು. ಬದುಕಿನ ಬಗ್ಗೆ ಅವನ ನಂಬಿಕೆ ಅಲುಗಾಡಿತು. "ಬಾಳು ಸುಳ್ಳಿನತೆಕಂತೆ ಬರಿಯಬೊಂತೆ. ಅರ್ಥವಿಲ್ಲದ ಒಣಗು ಕಂಥೆ" ಎಂದಿತು ಅವನ ಅಂತರಂಗ. ಸೀತೆಯಲ್ಲಿ ಕಾಮಾಸಕ್ತಿ ಸತ್ತಿತು. ರಾಮರಾವಣರ ಯುದ್ಧದ ಹಿಂದಿನ ರಾತ್ರಿ ಅವನು ಸ್ವಪ್ನದಲ್ಲಿ ದಿವ್ಯದೃಶ್ಯವನ್ನು ಕಂಡ. ಅದರಲ್ಲಿ ಅವನ ಹೃದಯ ಪರಿವರ್ತನೆಯು ಸೂಚಿತವಾಗಿದೆ. ತನ್ನ ಸ್ವಪ್ನವನ್ನು ಮಂಡೋದರಿಗೆ ತಿಳಿಸುತ್ತಾ ಯಾವುದೋ ಒಂದು ಋಷ್ಯಾಶ್ರಮದಲ್ಲಿ ಅವನೂ ಅವನ ತಮ್ಮನೂ ಶಿಶುಗಳಾಗಿ ಸೀತೆಯ ತೊಡೆಯ ಮೇಲಿರುತ್ತಾರೆ. "ಸೀತೆ ನನಗೆ ದೇವತೆ ಮಾತೆ ಆತ್ಮಉದ್ಧಾರಮಂ ತಂದ ದೇವತೆ, ಪುಣ್ಯಮಾತೆ ! ಎನ್ನುತ್ತಾನೆ. ಅವನ ಕಾಮಭಾವನೆಯು ಪವಿತ್ರವಾದ ಮಾತೃಪ್ರೇಮವಾಗುತ್ತದೆ. ಸೀತೆಯನ್ನು ತನ್ನ ತಾಯಿಯಾಗಿ ಸ್ವೀಕರಿಸುತ್ತಾನೆ. ಅದು ದೈಹಿಕವಾಗಿ ಈ ಜನ್ಮದಲ್ಲಿ ಸಾಧ್ಯವಾಗುವುದಿಲ್ಲ. ಮುಂದಿನ ಜನ್ಮದಲ್ಲಿ ರಾವಣಕುಂಭಕರ್ಣರು ಲವಕುಶರಾಗಿ ಸೀತೆಯಲ್ಲಿ ಜನಿಸಿ ರಾಮನನ್ನು ಜಯಿಸುತ್ತಾರೆಂದು ಕವಿಯ ವಾಣಿಯಿಂದ ಧ್ವನಿತವಾಗಿದೆ. ದೇವಿಯ ವರವು ಮುಂದಿನ ಜನ್ಮದಲ್ಲಿ ಸೀತೆಯು ತಾಯಾಗಿ ವಶವಾಗುವಂತೆ ಈಡೇರುತ್ತದೆ. ತಾನು ಯುದ್ಧಕ್ಕೆ ಹೋಗುವುದು ಗೆಲ್ಲುವುದಕ್ಕೆ, ಕೊಲ್ಲುವುದಕ್ಕಲ್ಲ. ಸೀತೆಯು ದೇವತೆಯಾಗಿ, ಮಾತೆಯಾಗಿ ತನ್ನನ್ನು ಗೆದ್ದಿದ್ದಾಳೆ. ರಾಮನನ್ನು ಯುದ್ಧದಲ್ಲಿ ಗೆದ್ದು ಅವಳಿಗೆ ಅವನನ್ನು ಕಪ್ಪವಾಗಿ ಕೊಟ್ಟು ಕ್ಷಮೆ ಬೇಡುವ ತನ್ನ ಇಚ್ಛೆಯನ್ನು ತಿಳಿಸಿ, ತನ್ನ ಅಂದಿನ ಹೃದಯ ಪರಿವರ್ತನೆಯನ್ನೂ ಪ್ರತಿಜ್ಞೆಯನ್ನೂ ಯಾರಿಗೂ ತಿಳಿಸಬಾರದೆಂದು ಹೇಳುತ್ತಾನೆ. ಅವನ ಅಂತರಾತ್ಮವು ಸೊಬಗಿನಿಂದ ಬೆಳಗಿತು. ಶಾಂತಿ, ಶಕ್ತಿ, ತೇಜಸ್ಸು, ಅಮೃತತ್ವ ಅವನ ನಾಳನಾಳಗಳಲ್ಲಿ ಹರಿಯಿತು.

ಅವನಲ್ಲಿ ಒಂದು ಹೊಸ ತೇಜಸ್ಸು ತುಂಬಿತು. ಬೆಳಗಾಯಿತು ಈ ಹೊಸ ರಾವಣನಿಗೂ ರಾಮನಿಗೂ ಯುದ್ಧ ಜರುಗಿತು. ಮಹಾಶೂಲವನ್ನು ರಾಮನೆದೆಗೆ ಗುರಿಯಿಟ್ಟು ಎಸೆಯುವಾಗ "ಶತ್ರುವಿನ ಪ್ರಾಣವನ್ನು ಹೀರದೆ, ಅವನು ಮೈಮರೆಯುವಂತೆ ತಾಗು"–ಎಂದು ಶ್ರೀರಾಮನಿಗೆ ಮಂಗಳವನ್ನು ಬಯಸಿ ಆ ಅಸ್ತ್ರವನ್ನು ಪ್ರಾರ್ಥಿಸಿದನು. ಶ್ರೀರಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರವು ರಾವಣನ ಎದೆ ಹೊಕ್ಕಿತು. ಅದನ್ನು ತನ್ನ ಭದ್ರಮುಷ್ಟಿಯಿಂದ ಹಿಡಿದನು. ಅವನಿಗೆ ಶ್ರೀರಾಮನ ವಿಗ್ರಹವನ್ನು ಕಂಡಂತಾಯಿತು. ಶತ್ರು ಸೆರೆಸಿಕ್ಕಿದನೆಂದು ಸಾರಥಿಗೆ ಹೇಳಿದನು. ರಥವು ನಗರದ ಕಡೆಗೆ ತಿರುಗಿತು,

ಅರಮನೆಯಲ್ಲಿ ಮಂಡೋದರಿಗೆ ರಾವಣನು "ನನ್ನ ಭದ್ರಮುಷ್ಟಿಯಲ್ಲಿರುವ ಲೋಕೈಕವೀರನನ್ನುನೋಡು. ಇವನನ್ನು ಸೀತೆಗೆ ಕಾಣಿಕೆಯಾಗಿ ಕೊಟ್ಟು ತಪ್ಪನ್ನು ಮನ್ನಿಸುವಂತೆ ಬೇಡಿಕೊ" ಎಂದು ಹೇಳಿದನು. ಅವನ ಇಚ್ಛೆಯಂತೆ ಅವಳು ಬಾಣವನ್ನು ಕಿತ್ತಳು. ಅವನ ಪ್ರಾಣವು ರಾಮನ ಆತ್ಮದಲ್ಲಿ ಮೋಕ್ಷ ಪಡೆಯಿತು.

ರಾವಣನ ಆತ್ಮವು ಅಪ್ರಾಕೃತನಾದ ರಾಮನಲ್ಲಿ ಐಕ್ಯವಾದ ಚಿತ್ರವನ್ನು ನಾವು ಇಲ್ಲಿ ಕಾಣುತ್ತೇವೆ. ಇದು ಲೋಕಕಂಟಕನೂ, ದುಷ್ಟನೂ, ಕಾಮುಕನೂ ಆದ ಧೂರ್ತರಾಕ್ಷಸನ ದುರಂತದಲ್ಲಿ ಪರಿವರ್ತನೆಗೊಂಡ ಸಾತ್ವಿಕ ಆತ್ಮದ ಉದ್ಧಾರ ಮಂಗಳಕರವಾದ ಅಂತ್ಯ. ರಾಮಾಯಣದರ್ಶನದ ರಾವಣನು ವೀರ, ಶೂರ, ದಶಶಿರನೆಂದು ಬಿರುದು ಪಡೆದವನು. ರಾಕ್ಷಸ ಕುಲದವನಾದರೂ ಅಮಾನುಷನಲ್ಲ, ಅವನ ಬಗ್ಗೆ ನಮ್ಮಲ್ಲಿ ಗೌರವ, ಅನುಕಂಪ ಮೂಡುತ್ತದೆ. ದೋಷದಿಂದ ಅಪರಿಪೂರ್ಣನಾಗಿದ್ದು ದೋಷರಹಿತನಾಗಿ ಸಾತ್ವಿಕ ಮತ್ತು ಶುದ್ಧನಾಗಿ ಪರಿವರ್ತನೆಗೊಂಡ ವ್ಯಕ್ತಿಯಾಗಿದ್ದಾನೆ.

ರಾವಣನ ವ್ಯಕ್ತಿತ್ವದ ಹಿರಿಮೆಯನ್ನು ಕಾಳಿದಾಸರು ಚಿತ್ರಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

ರಾವಣನು ಕುಂಭಕರ್ಣನನ್ನು ಯುದ್ಧಕೋಸ್ಕರ ಎಬ್ಬಿಸಿದಾಗ ಕುಂಭಕರ್ಣನು ಈ ವೇಳೆಯಲ್ಲಿ ನನ್ನನ್ನು ಏಕೆ ಎಬ್ಬಿಸಿದೆಯೆಂದು ಕೇಳಿದನು. ರಾವಣನು ತಾನು ಸೀತಾಪಹರಣವನ್ನು ಮಾಡಿದ್ದು ಪಾಪಕೃತ್ಯವೆಂದು ತಿಳಿದು ಅದನ್ನು ತಮ್ಮನಿಗೆ ತಿಳಿಸಲು ಸಂಕೋಚಪಡುತ್ತಾನೆ. ನನ್ನನ್ನು ಎಬ್ಬಿಸಿದುದರಿಂದ ಪ್ರಯೋಜನವೇನು ? ಎಂದು ಕೇಳಿದಾಗ ರಾವಣನು ಉತ್ತರ ಕೊಡಲಿಲ್ಲ. "ಗಟ್ಟಿಯಾಗಿ ಹೇಳು ಪರವಾಗಿಲ್ಲ". ಹೀಗೆ ಕೇಳಿದರೂ ರಾವಣನಿಗೆ ಹೇಳಲು ಮನಸ್ಸಿಲ್ಲ. "ಸ್ನೇಹಿತನೇ, ಹೇಳು. ಸ್ನೇಹಿತನಾದ ನನಗೂ ಹೇಳದ ವಿಷಯ ಯಾವುದು. ಅದರಲ್ಲಿಯೂ ನಿನ್ನ ತಮ್ಮ." ಇಷ್ಟು ಹೇಳಿದ ಮೇಲೆ ರಾವಣನು ಸಂಕೋಚದಿಂದ ಮತ್ತಗೆ ಅಂದ–"ಶ್ರೀರಾಮ ಪತ್ನಿಯಾದ ಸೀತೆಯನ್ನು ಅಪಹರಿಸಿಬಿಟ್ಟಿದ್ದೇನೆ" "ಏನು ಅನುಭವಿಸಿದೆಯಾ ?–ಕುಂಭ

ಕರ್ಣನ ಪ್ರಶ್ನೆ. "ರಾಮನನ್ನು ಬಿಟ್ಟು ನನ್ನನ್ನು ಸೇವಿಸಲಾರಳು ಸೀತೆ" "ರಾಮನ ವೇಶವನ್ನು ತಾಳಿ ಅನುಭವಿಸಬಹುದಲ್ಲವೆ ?" "ಅದಾಗಲಾರದು, ಏತಕ್ಕೆಂದು ಕೇಳು. ರಾಮನ ವೇಷವನ್ನು ತಾಳುವವರೆಗೂ ಸೀತೆಯನ್ನು ಅನುಭವಿಸೋಣವೆಂದು ಮನಸ್ಸಿದೆ. ತಾಳಿದ ಮೇಲೆ, ಆಭಾವವೇ ಎಲ್ಲಿಯೋ ಲೀನವಾಗಿ ಹೋಗುವುದು" ಎಂದ.

ರಾವಣನಲ್ಲಿ ಕೇವಲ ರಜೋಗುಣವೇ ಪ್ರಧಾನವಾಗಿದ್ದರೂ ಸಾತ್ವಿಕತೆಯು ಹೂರ್ಣವಿದೆ. ಸೀತೆಯು ಅವನಾಗಿ ಕಾಮಿಸಿ ಬರುವವರೆಗೂ ಅವಳ ಗೊಡವೆಗೆ ಹೋಗಲಿಲ್ಲ. ರಾಕ್ಷಸಕುಲದವನಾದರೂ ಕಾಮವನ್ನು ಜಯಿಸಿದನು.

ಕಂಬರ್ ಚಿತ್ರಿಸಿರುವ ವಾಲಿ ಮತ್ತು ಸುಗ್ರೀವ

ರಾವಣನು ಸೀತೆಯನ್ನು ಅಪಹರಿಸಿದ ನಂತರ ರಾಮಲಕ್ಷ್ಮಣರು ದಂಡಕಾರಣ್ಯದಲ್ಲಿ ಅವಳನ್ನು ಎಲ್ಲೆಲ್ಲೂ ಹುಡುಕುತ್ತಾ ದಕ್ಷಿಣ ದಿಕ್ಕಿಗೆ ಬಂದರು. ಶ್ರೀ ಮಹಾತಪಸ್ವಿನಿಯಾಗಿದ್ದ ಶಬರಿಯ ಮಾತಿನಂತೆ ಸುಗ್ರೀವನನ್ನು ಹುಡುಕಿಕೊಂಡು ಋಷ್ಯಮೂಕ ಪರ್ವತ ಪ್ರದೇಶವನ್ನು ತಲುಪಿದರು. ಹನುಮಂತನ ಮುಖಾಂತರ ಇವರ ವಿಚಾರವನ್ನು ತಿಳಿದ ಸುಗ್ರೀವನು ಇವರನ್ನು ತನ್ನ ಕುಟೀರಕ್ಕೆ ಆಹ್ವಾನಿಸಿದನು. ಅಲ್ಲಿ ವಾನರಿಣ ಇಲ್ಲದ್ದನ್ನು ನೋಡಿ ತನ್ನಂತೆಯೇ ಪತ್ನಿಯನ್ನು ಕಳೆದುಕೊಂಡಿದ್ದಾನೆಯೇ ಎಂದು ಸುಗ್ರೀವನನ್ನು ಕೇಳಿದಾಗ ಹನುಮಂತನಿಂದ ಎಲ್ಲಾ ವಿಷಯಗಳನ್ನು ತಿಳಿದ ಕೂಡಲೇ, ರಾಮನು ವಾಲಿಯನ್ನು ಕೊಂದು ಸುಗ್ರೀವನನ್ನು ಕಿಷ್ಕಿಂಧಾಪತಿಯಾಗಿ ಮಾಡಲು ಪ್ರತಿಜ್ಞೆ ಮಾಡಿದನು. ರಾಮನ ಬಲವನ್ನರಿತ ಸುಗ್ರೀವನು ಕಿಷ್ಕಿಂಧೆಯ ದ್ವಾರಕ್ಕೆ ಹೋಗಿ ಘರ್ಜಿಸಿದ,

ಇದನ್ನು ಕೇಳಿದ ವಾಲಿಗೆ ನಗು ಬಂದಿತು. ತರುವಾಯ ಕೋಪ ಬಂದಿತು. ಮೇಲೆದ್ದು ತೋಳು ಮತ್ತು ತೊಡೆಗಳನ್ನು ತಟ್ಟಿದ. ಸಾಕ್ಷಾತ್ ಯಮನೇ ಹೆದರಿಕೊಳ್ಳುವಂತೆ ಕಂಡ. ಹೊರಡಲು ಸಿದ್ಧನಾದ, ಆಗ ಅವನ ಹೆಂಡತಿ ತಾರೆ ಅವನನ್ನು ತಡೆದು ವಿವೇಕ ಹೇಳಿದಳು. "ನನ್ನ ಹೆಸರನ್ನು ಕೇಳಿದರೆ ಯಮನೂ ನಡುಗುತ್ತಾನೆ. ಸುಗ್ರೀವನಿಗೆ ಸಹಾಯ ಮಾಡುವ ಮೂರ್ಖ ಯಾರು ? ನನ್ನೆದುರಿಗೆ ನಿಂತ ಶತ್ರುವಿನ ಶಕ್ತಿಯಲ್ಲಿ ಅರ್ಧ ನನಗೆ ಬರುವಂತೆ ವರವಿರುವಾಗ ನೀನೇಕೆ ಹೆದರುವೆ ಎಂದ ತಾರೆಯು, "ರಾಮನು ಸುಗ್ರೀವನ ಮಿತ್ರನಾಗಿ ಸಹಾಯಕ್ಕಿದ್ದಾನೆ' ಎಂದು ಹೇಳಿದಾಗ ಅವನ ಹೃದಯದ ಆದರ್ಶಮೂರ್ತಿಯಾದ ಶ್ರೀರಾಮನು ಹಾಗೆ ಕೊಲ್ಲಲು ಬಂದಿದ್ದಾನೆಂಬುದನ್ನು ನಂಬಲು ಆತನಿಗೆ ಸಾಧ್ಯವಾಗಲಿಲ್ಲ. ತಾರೆಗೆ ಮುಂದೆ ಮಾತನಾಡಲು ಆಸ್ಪದ ಕೊಡದೆ, ತಮ್ಮನೊಡನೆ ಹೋರಾಡಲು ಮುನ್ನುಗ್ಗಿದ.

ಮರಗಳ ಮರೆಯಲ್ಲಿ ನಿಂತು ವಾಲಿ ಸುಗ್ರೀವರ ಹೋರಾಟವನ್ನು ನೋಡುತ್ತಿದ್ದ ರಾಮನು ಲಕ್ಷ್ಮಣನಿಗ ಹೇಳಿದನು—ಇವರನ್ನು ಯಾವ ಸಮುದ್ರಗಳಿಗೆ,

ಬಿರುಗಾಳಿಗಳಿಗೆ, ಬೆಂಕಿಗೆ ಹೋಲಿಸಬಹುದು" ಲಕ್ಷ್ಮಣನ ಯೋಚನೆಯೇ ಬೇರೆಯಾಗಿತ್ತು. ತನ್ನ ಅಣ್ಣನನ್ನೇ ಕೊಲ್ಲಿಸಲು ಸುಗ್ರೀವ ಹೊರಟಿದ್ದಾನೆ. ಇಂತಹವನು ನಮಗೆ ಸಹಾಯ ಮಾಡುತ್ತಾನೆಯೇ ?"—ಎಂದ. "ಈ ಮೂರ್ಖವಾನರರಲ್ಲಿ ನಾವು ಆದರ್ಶ ನೀತಿಗಳನ್ನು ನಿರೀಕ್ಷಿಸಬಹುದೇ ? ದೋಷ ರಹಿತನಾದ ಯಾವ ಮಾನವನಿದ್ದಾನೆ ?"–ಎಂದ ಶ್ರೀರಾಮ.

ವಾಲಿಯ ಪ್ರಹಾರಗಳಿಂದ ಜರ್ಝರಿತನಾಗಿ ಸರ್ವ ಚೈತನ್ಯವನ್ನೂ ಕಳೆದುಕೊಂಡಿರುವ ಸುಗ್ರೀವನು. ನಿರೀಕ್ಷಿಸಿದ ದಿಕ್ಕಿನಿಂದ ಸಹಾಯ ಬರದೆ, ಕುಂಟುತ್ತ ರಾಮನು ಮರೆಯಾಗಿ ನಿಂತಿದ್ದ ಕಡೆಗೆ ಬಂದು ಅವನ ಪಾದಗಳಿಗೆ ಎರಗಿದನು. ವಾಲಿಯು ದೂರದಲ್ಲಿ ಸುಧಾರಿಸಿಕೊಳ್ಳಲು ಕುಳಿತ. ಸುಗ್ರೀವನ ಸ್ಥಿತಿಯನ್ನರಿತ ರಾಮನು ಅವರಿಬ್ಬರಲ್ಲಿ ವ್ಯತ್ಯಾಸವೇ ಕಾಣದೆ ಬಾಣಬಿಡಲು ಆಗಲಿಲ್ಲ ಎಂದು ಹೇಳಿ, ಸುಗ್ರೀವನ ಕೊರಳಿಗೆ ಒಂದು ಪುಷ್ಪಮಾಲೆಯನ್ನು ಹಾಕಿ ಅವನನ್ನು ಹುರಿದುಂಬಿಸಿ ಎರಡನೆಯಸಲ ವಾಲಿಯೊಡನೆ ಹೋರಾಡಲು ಕಳುಹಿಸಿದನು.

ಉತ್ಸಾಹದಿಂದ ಪುನಃ ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಕರೆದ. ವಾಲಿಯು ಕೋಪದಿಂದ ಘಾತಿಸಿದ ಪ್ರಹಾರದಿಂದ ಸುಗ್ರೀವನ ಬಾಯಿ ಕಣ್ಣುಗಳಿಂದ ರಕ್ತ ಸುರಿಯತೊಡಗಿತು. ರಾಮನು ಮರೆಯಾಗಿ ನಿಂತಿರುವ ದಿಕ್ಕಿನ ಕಡೆ ದೀನನಾಗಿ ನೋಡಿದ. ವಾಲಿಯು ಪುನಃ ಸುಗ್ರೀವನಿಗೆ ಅನೇಕ ಪ್ರಹಾರಗಳನ್ನು ಕೊಟ್ಟು ಒಂದು ಕೈಯಿಂದ ಸುಗ್ರೀವನ ಕತ್ತನ್ನೂ, ಮತ್ತೊಂದು ಕೈಯಿಂದ ಸೊಂಟವನ್ನೂ ಹಿಡಿದು ಬಂಡೆಗೆ ಅಪ್ಪಳಿಸಿ ಕೊಲ್ಲಲು ಮೇಲಕ್ಕೆ ಎತ್ತಿದ. ಆ ಸಮಯಕ್ಕೆ ಸರಿಯಾಗಿ ರಾಮನು ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ನೇರವಾಗಿ ವಾಲಿಯ ಎದೆಗೆ ಗುರಿಯಿಟ್ಟು ಬಾಣಬಿಟ್ಟನು. ಬಾಳೆಯ ಹಣ್ಣನ್ನು ಸೂಜಿಯು ಚುಚ್ಚಿಕೊಳ್ಳುವಂತೆ ಅದು ವಾಲಿಯ ಎದೆಯನ್ನು ಹೊಕ್ಕಿತು. ಮೇರು ಪರ್ವತವು ಉರುಳುವಂತೆ ಅವನು ನೆಲದ ಮೇಲೆ ಉರುಳಿದ. ಆ ಬಾಣವನ್ನು ತನ್ನ ಎರಡು ಕೈಗಳು ಮತ್ತು ಕಾಲ್ಗಳಿಂದ ಭದ್ರವಾಗಿ ಹಿಡಿದು ಎಳೆಯಲು ಪ್ರಯತ್ನಿಸಿದರೂ ಅದು ಇನ್ನೂ ಒಳಕ್ಕೆ ಕೊರೆದು ಹೋಗುತ್ತಿತ್ತು. ಅವನಿಗೇ ಆಶ್ಚರ್ಯ, ಅದು ವಿಷ್ಣುವಿನ ಚಕ್ರವೋ, ಧೂರ್ಜಟಿಯ ತ್ರಿಶೂಲವೋ ಅಥವಾ ಕಾರ್ತಿಕೇಯನ ವೇಲಾಯುಧವೋ ಎಂದು ಆಶ್ಚರ್ಯಪಟ್ಟ. ಕೊನೆಗೆ ಅದನ್ನು ಹೊರಕ್ಕೆ ಕಿತ್ತಾಗ ರಕ್ತವು ಸಮುದ್ರದ ಅಲೆಯಂತೆ ಹರಿಯಿತು. ಸುಗ್ರೀವನಿಗೆ ಭ್ರಾತೃಪ್ರೇಮವು ಮರುಕಳಿಸಿ ದುಃಖದಿಂದ ಮೂರ್ಛಿತನಾಗಿ ನೆಲದ ಮೇಲೆ ಉರುಳಿದ.

ಬಾಣದ ಹಿಂಭಾಗದಲ್ಲಿ ಪವಿತ್ರ ಮಂತ್ರವಾದ 'ರಾಮ' ಎಂದು ಕೆತ್ತಿರುವುದನ್ನು ನೋಡಿ ವಾಲಿಯು ನಕ್ಕ.—"ಸೂರ್ಯವಂಶಕ್ಕೆ ರಾಮನ ಜನನದಿಂದ ಮತ್ತು ಅವನ ಧನುಸ್ಸಿನಿಂದ ಧರ್ಮಕ್ಕೆ ಕಳಂಕ ಉಂಟಾಗಿದೆ, ಇದಕ್ಕಾಗಿ ಅವನು ಮನೆಯನ್ನು

ತ್ಯಜಿಸಿ ತಾಪಸಿಯಾಗಿ ವನವಾಸ ಮಾಡಲು ಬಂದನೇ ? ಅವನೇ ಧರ್ಮಮಾರ್ಗವನ್ನು ಬಿಟ್ಟಮೇಲೆ ನನ್ನಂಥ ಸಾಮಾನ್ಯನ ಬಗ್ಗೆ ಏನು ಹೇಳಬಹುದು ? ಅವನು ನನಗಿಂತ ಹೆಚ್ಚು ಕೆಟ್ಟದ್ದಾಗಿ ವರ್ತಿಸಿದ್ದಾನೆ.—'' ಎಂದ, ಹೀಗೆನ್ನುತ್ತಿದ್ದಾಗ ಅಲ್ಲಿಗೆ ಬಂದ ನೀಲಮೇಘಶ್ಯಾಮ ರಾಮನನ್ನು ದುರುಗುಟ್ಟಿ ನೋಡುತ್ತಾ ನಿಂದಿಸತೊಡಗಿದ— "ಗೌರವ ಮತ್ತು ಸತ್ಯಕ್ಕಾಗಿ ಜೀವವನ್ನೇ ತೊರೆದವನ ಪುತ್ರನಾಗಿ ನೀನು ಜನಿಸಿದ್ದು ವಿಧಿಯ ಕುರುಡುತನದಿಂದ. ನೀನು ದುಷ್ಟಶಿಕ್ಷಕ. ಆದರೆ ನೀನೇ ಅಧರ್ಮವನ್ನು ಮಾಡುತ್ತಿದ್ದೀಯೆ, ನಿನ್ನ ಕೀರ್ತಿಗೆ ಮಸಿ ಬಳಿದಂತಾಯಿತು. ಒಬ್ಬ ರಾಕ್ಷಸನು ನಿನ್ನ ಪತ್ನಿಯನ್ನು ಅಪಹರಿಸಿದರೆ ನೀನು ಒಬ್ಬ ವಾನರವೀರೆಯನ್ನು ಕೊಲ್ಲಬೇಕೆಂದು ಮನುಧರ್ಮಶಾಸ್ತ್ರದಲ್ಲಿ ವಿಧಿಸಿದೆಯೊ ? ನಿನ್ನ ಪರಮಕಾರುಣ್ಯವೆಲ್ಲಿ ಹೋಯಿತು ? ನಾನು ನಿನಗೆ ಮಾಡಿದ ಅಪರಾಧವೇನು ? ನನಗೆ ಕಾಣಿಸದೆ ಮರೆಯಲ್ಲಿ ನಿಂತು ಬಾಣವನ್ನು ಗುರಿಯಿಟ್ಟು ಹೊಡೆದುದು ಸರಿ ಎಂದರೆ ರಾಕ್ಷಸನೊರೆಯು ಮೋಸದಿಂದ ನಿನ್ನ ಪತ್ನಿಯನ್ನು ಅಪಹರಿಸಿದ್ದು ಹೇಗೆ ತಪ್ಪಾಗುತ್ತದೆ ? ನೀನು ಮಾಡಿದ್ದು ಧರ್ಮವೆ ? ಮರೆಯಲ್ಲಿ ನಿಂತು ನನ್ನನ್ನು ಹೊಡೆದು ನೀನು ಹೇಗೆ ಮಾನವ, ಯೋಧ ಎಂದು ಮುಖ ತೋರಿಸಲು ನಿನಗೆ ನಾಚಿಕೆಯಿಲ್ಲವೇ ? ನಿನಗೆ ಧಿಕ್ಕಾರ'' ಎಂದ.

ಇದನ್ನೆಲ್ಲ ಶಾಂತವಾಗಿ ಕೇಳುತ್ತ ನಿಂತಿದ್ದ ರಾಮನು ವಾಲಿಯು ಸುಗ್ರೀವನಿಗೆ ಮಾಡಿದ ಅನ್ಯಾಯವನ್ನೆಲ್ಲಾ ತಿಳಿಸಿ, ತಮ್ಮನ ಪತ್ನಿಯನ್ನು ಕಾಮಿಸಿದ್ದು ಅತ್ಯಂತ ನೀಚವಾದ ಅಧರ್ಮ ಮತ್ತು ಅಪರಾಧ.ದೀನರಿಗೂ, ಅನ್ಯಾಯಕ್ಕೆ ಸಿಕ್ಕಿ ನರಳುತ್ತಿರುವವರಿಗೂ ಸಹಾಯ ಮಾಡಿ ರಕ್ಷಿಸುವುದು ತನ್ನ ಪ್ರತಿಜ್ಞೆ ಎಂದು ತಿಳಿಸಿದನು. ಅದಕ್ಕೆ ವಾನರರ ಧರ್ಮವೇ ಬೇರೆ ಮಾನವರ ಧರ್ಮವೇ ಬೇರೆ, ತಾನು ಅಧರ್ಮವನ್ನು ಮಾಡಿಲ್ಲ ಎಂದು ವಾಲಿ ಉತ್ತರಿಸಿದನು.

"ನೀನು ಇಂದ್ರ ಪುತ್ರ, ದೊರೆಯಾಗಿರುವೆ. ಸರಿ ಮತ್ತು ತಪ್ಪು ಯಾವುದು ಎನ್ನುವುದನ್ನು ನೀನು ತಿಳಿದೇ ಇರುವೆ. ಧರ್ಮ –ಅಧರ್ಮಗಳಿಗೆ ವ್ಯತ್ಯಾಸ ತಿಳಿಯದಿರುವವನು ಮಾತ್ರ ಮೃಗ, ತಾವು ಮಾಡುವ ಒಳ್ಳೆಯ ಅಥವಾ ಕೆಟ್ಟಕಾರ್ಯಗಳಿಂದ ವ್ಯಕ್ತಿಗಳು ಉದ್ಧಾರವಾಗುತ್ತಾರೆ ಅಥವಾ ಪತನ ಹೊಂದುತ್ತಾರೆ ಇದು ನಿನಗೆ ತಿಳಿದಿದ್ದರೂ ನಿನ್ನ ಪತನಕ್ಕೆ ನೀನೇ ಕಾರಣನಾವೆ'' ಎಂದ ರಾಮ.

"ಮರೆಯಲ್ಲಿ ನಿಂತು ಏಕೆ ಒಬ್ಬ ಬೇಟೆಗಾರನಂತೆ ನನ್ನನ್ನು ಹೊಡೆದೆ ?'' ಎಂದು ವಾಲಿ ಕೇಳಲು ಅದಕ್ಕೆ ರಾಮನು ಉತ್ತರಕೊಡಲಿಲ್ಲ. ಲಕ್ಷ್ಮಣನು ಉತ್ತರ ಕೊಟ್ಟ—"ನಿನ್ನ ತಮ್ಮನು ಸಹಾಯ ಬೇಡಿದಾಗ ನನ್ನ ಅಣ್ಣನು ನಿನ್ನನ್ನು ಯಮ ಸದನಕ್ಕೆ ಕಳುಹಿಸುವುದಾಗಿ ಪ್ರತಿಜ್ಞೆ ಮಾಡಿದನು. ಅವನು ನಿನಗೆ ಕಾಣಿಸಿಕೊಂಡಿದ್ದರೆ ನೀನೂ ಅವನಿಗೆ ಶರಣು ಹೋಗಿ ಜೀವ ಉಳಿಸಿಕೊಳ್ಳಬಹುದೆಂದು ಶಂಕಿಸಿ ಮರೆಯಲ್ಲಿ ನಿಂತು ಹೊಡೆದನು''—ಎಂದ.

ವಾಲಿಯು ಮುಂದೆ ಏನನ್ನೂ ಪ್ರಶ್ನಿಸಲಿಲ್ಲ. ಅವನ ಅಜ್ಞಾನ ಕಳೆಯಿತು. ರಾಮನೇ ಧರೆಗಿಳಿದು ಬಂದಿರುವ ಭಗವಂತನೆಂದು ಅನ್ನಿಸಿತು, ಎರಡು ಕೈಗಳನ್ನೂ ಜೋಡಿಸಿ ಅವನಿಗೆ ನಮಸ್ಕರಿಸಿ—"ರಾಮಾ ; ನೀನು ಇದುವರೆಗೆ ಹೇಳಿದ್ದೆಲ್ಲಾ ಸರಿ. ನೀನು ಹೇಳಿದಂತೆ ನನ್ನ ಅಪರಾಧಕ್ಕೆ ಸರಿಯಾದ ಶಿಕ್ಷೆ ಕೊಟ್ಟೆ, ನಾನು ಧರ್ಮಾತ್ಮನಾದ ನಿನ್ನನ್ನು ವ್ಯರ್ಥವಾಗಿ ನಿಂದಿಸಿದೆ. ನನ್ನನ್ನು ಕ್ಷಮಿಸು. ನಿನ್ನ ಬಾಣವು ನನ್ನೆದೆಗೆ ತಾಗಿ ಜ್ಞಾನವನ್ನಿತ್ತಿದೆ. ನೀನೇ ಪರಬ್ರಹ್ಮ. ನಿನ್ನಲ್ಲಿ ನನ್ನ ಒಂದು ಕೊನೆಯ ಪ್ರಾರ್ಥನೆ. ನನ್ನ ಮರಣಕ್ಕೆ ಕಾರಣನಾದನೆಂದು ಸುಗ್ರೀವನನ್ನು ನಿನ್ನ ಸಹೋದರರು ತಿರಸ್ಕಾರದಿಂದ ಕಾಣದಿರಲಿ, ನನ್ನ ಬಾಲಕ್ಕೆ ರಾವಣನನ್ನು ಕಟ್ಟಿ ವಾನರ ಸಹಜವಾದ ಚೇಷ್ಟೆಗಳನ್ನು ತೋರಿಸುವ ಅಥವಾ ಅವನ ಕೈಕಾಲುಗಳಿಗೆ ಸರಪಣಿಗಳನ್ನು ಬಿಗಿದು ತಂದು ನಿನ್ನ ಪಾದಗಳ ಮೇಲೆ ಕೆಡಹುವ ಭಾಗ್ಯ ನನಗಿಲ್ಲದಾಯಿತು. ಈ ಹನುಮಂತನನ್ನು ನೋಡು. ನಿನ್ನ ಎಲ್ಲ ಆಜ್ಞೆಗಳನ್ನೂ ನೆರವೇರಿಸುತ್ತಾನೆ. ನನ್ನ ತಮ್ಮನನ್ನು ನಿನ್ನ ತಮ್ಮನಂತೆ ನೋಡಿಕೊ" ಎಂದ. ತರುವಾಯ ಸುಗ್ರೀವನನ್ನು ಸಮೀಪಕ್ಕೆ ಕರೆದು—"ಸುಗ್ರೀವ, ರಾಮನೇ ಧರೆಗಿಳಿದು ಬಂದಿರುವ ಭಗವಂತನೆಂಬುದನ್ನು ಮರೆಯಬೇಡ. ಅವನು ಧರ್ಮೋದ್ಧಾರಕ್ಕಾಗಿ ಬಂದಿದ್ದಾನೆ. ಕೃತಜ್ಞನಾಗಿದ್ದು ಅವರ ಆಜ್ಞೆಯಂತೆ ನಡೆದುಕೊ ಜಾಗ್ರತನಾಗಿರು" ಎಂದ.

ಆ ವೇಳೆಗೆ ಅಲ್ಲಿಗೆ ಬಂದ ತನ್ನ ಒಬ್ಬನೇ ಮಗನಾದ ಅಂಗದನನ್ನು ಅಪ್ಪಿಕೊಂಡು—"ಮಗೂ ಅಂಗದ, ನನ್ನ ತಪಸ್ಸಿನಿಂದ ನನಗೆ ಇಂತಹ ಅಂತ್ಯವು ದೊರಕಿದೆ. ನಿನ್ನ ಬಾಲ್ಯಚಾಪಲ್ಯವನ್ನೆಲ್ಲ ಬಿಡು. ಇಲ್ಲಿ ನನ್ನ ಕಣ್ಮುಂದೆ ನಿಂತಿರುವ ಶ್ರೀರಾಮನೇ ಪರಮಸತ್ಯರೂಪವಾದ ಪರಬ್ರಹ್ಮ. ಅವನನ್ನು ಪೂಜಿಸು' ಎಂದು ಹೇಳಿ ರಾಮನನ್ನು ನೋಡಿ "ರಾಮಾ. ನನ್ನ ಮುದ್ದು ಅಂಗದನನ್ನೂ, ಸುಗ್ರೀವನನ್ನೂ ಅವನ ಜನರನ್ನೂ ನಿನ್ನ ಪ್ರೀತಿಯ ರಕ್ಷಣೆಗೆ ಒಪ್ಪಿಸಿದ್ದೇನೆ" ಎಂದ. ತನ್ನ ಪಾದಗಳಿಗೆರಗಿದ ಅಂಗದನಿಗೆ ರಾಮನು ತನ್ನ ರಕ್ಷಣೆಯ ಸಂಕೇತವಾಗಿ ತನ್ನ ಕತ್ತಿಯನ್ನು ಕೊಟ್ಟನು. ಇದನ್ನು ನೋಡಿ ಎಲ್ಲರೂ ಹರ್ಷೋದ್ಗಾರ ಮಾಡಿದರು.

ಮನಶ್ಶಾಂತಿ ಮತ್ತು ಸಂಪೂರ್ಣ ಪರಿಶುದ್ಧತೆಯಿಂದ ವಾಲಿಯು ಅತ್ಯಂತ ಸುಖಿಯಾದ ತನಗೆ ಮೋಕ್ಷವು ಸಿದ್ಧವೆಂದು ತಿಳಿದ. ಅವನಿಗೆ ಹೇಳಲು ಯಾವ ಆಸೆಯೂ ಇರಲಿಲ್ಲ. ಶ್ರೀರಾಮನು ಅಂಗದನನ್ನು ಆಶೀರ್ವದಿಸಿದ್ದನ್ನು ನೋಡುತ್ತಿದ್ದಂತೆ ಅವನ ಆತ್ಮವು ಹೊರಟು ಪರಬ್ರಹ್ಮನಲ್ಲಿ ಸೇರಿಹೋಯಿತು.

ವಾಲಿಯ ಘಟನೆಯು ರಾಮಾಯಣದ ಒಂದು ಮುಖ್ಯ ಪ್ರಸಂಗ. ವಾಲ್ಮೀಕಿ ರಾಮಾಯಣದಲ್ಲಿ ವಾಲಿಸುಗ್ರೀವರ ಮೊದಲನೆಯ ಹೋರಾಟವಾದ ಬಹುಕಾಲದ ಮೇಲೆ ಎರಡನೆಯ ಹೋರಾಟವು ನಡೆಯುತ್ತದೆ, ಕಂಬರಾಮಾಯಣದಲ್ಲಿ ಅಂತಹ ಮಧ್ಯಂತರವಿಲ್ಲ. ವಾಲ್ಮೀಕಿ ರಾಮಾಯಣದಲ್ಲಿ ತಾರೆಯು ವಿವೇಕವಾಣಿ

ಯನ್ನು ವಾಲಿ ಪೂರ್ತಿ ಕೇಳುತ್ತಾನೆ ಆದರೆ ಇಲ್ಲಿ ರಾಮನ ಹೆಸರನ್ನು ಹೇಳಿದ ಕೂಡಲೇ ಅವಳ ಮಾತನ್ನು ನಿಲ್ಲಿಸುತ್ತಾನೆ. ವಾಲಿಯ ದೃಷ್ಟಿಯಲ್ಲಿ ರಾಮನು ಧರ್ಮಾವತಾರ. ತಮ್ಮನಿಗೆ ರಾಜ್ಯವನ್ನು ಬಿಟ್ಟುಕೊಟ್ಟ ಮಹಾನುಭಾವ. ಪರಮಕಾರಣಿಕ. ಆದರೆ ರಾಮನಿಗೆ ವಾಲಿಯು ಅಧರ್ಮಿ ಅವನ ಮೇಲೆ ಅಪಾರಕೋಪ. ಅವನನ್ನು ಮರೆಯಲ್ಲಿ ನಿಂತು ಕೊಲ್ಲಲು ಸಿದ್ಧನಾಗಿದ್ದಾನೆ. ಇದು ಈ ಘಟನೆಯ ದುರಂತವನ್ನು ಹೆಚ್ಚಿಸಿದೆ. ಇಲ್ಲಿ ಸನ್ನಿವೇಶದ ಆಗುಹೋಗುಗಳು ತ್ವರಿತಗತಿಯಿಂದ ಸಾಗುತ್ತವೆ. ತನ್ನೆದೆಗೆ ಹೊಕ್ಕಬಾಣವನ್ನು ಕೀಳಲು ವಾಲಿಯು ಮಾಡಿದ ಪ್ರಯತ್ನವು ನಮ್ಮ ಮನಸ್ಸನ್ನು ಸೆಳೆಯುತ್ತದೆ. ವಾಲಿಯ ದೇಹದಿಂದ ರಕ್ತ ಹರಿಯುವುದನ್ನು ನೋಡಿದ ಸುಗ್ರೀವನು ಮೂರ್ಛೆಬೀಳುತ್ತಾನೆ. ಇದರಿಂದ ಅವನ ಮೇಲಿನ ಕಳಂಕವನ್ನು ತೊಡೆದು ಹಾಕಲು ಕವಿ ಪ್ರಯತ್ನಿಸಿದ್ದಾನೆ. ವಾಲಿಯ ನಿಂದೆ ಮತ್ತು ರಾಮನ ಉತ್ತರಗಳು ಮನಮುಟ್ಟುವಂತಿವೆ, ಲಕ್ಷ್ಮಣನಿಂದ ವಾಲಿಗೆ ಉತ್ತರವನ್ನು ಹೇಳಿಸಿ ರಾಮನ ಧರ್ಮಸಂಕಟವನ್ನು ಕವಿ ತಪ್ಪಿಸಿದ್ದಾನೆ. ಸುಗ್ರೀವ. ಹನುಮಂತ ಮತ್ತು ಅಂಗದನ ಪರವಾಗಿ ವಾಲಿಯು ರಾಮನಿಗೆ ಹೇಳುವ ಮಾತುಗಳಿಂದ ಅವನ ವ್ಯಕ್ತಿತ್ವಕ್ಕೆ ಓರಿಮೆ ಬಂದಿವೆ. ಇದು ಶುಧ್ಧಾತ್ಮನ ಮಾತುಗಳಾಗಿವೆ. ಅಪಾರಶಕ್ತಿ. ಶೌರ್ಯ, ಅಪರಿಮಿತವಾದ ಆತ್ಮವಿಶ್ವಾಸ, ಪ್ರೀತಿ ಮತ್ತು ದ್ವೇಷದಿಂದ ಕೂಡಿದ ವಾಲಿ. ಪಶ್ಚಾತ್ತಾಪದಿಂದ ಶುದ್ಧನಾಗಿ, ಜ್ಞಾನಿಯಾಗಿ, ಮರೆಯಲಾಗದ ಒಬ್ಬ ಮಹಾವ್ಯಕ್ತಿಯಾಗಿದ್ದಾನೆ.

**ಕುವೆಂಪು ಚಿತ್ರಿಸಿರುವ ವಾಲಿ ಮತ್ತು ಸುಗ್ರೀವ :** ರಿಪುನಿಷೂದನನಾದ ವಾಲಿಯು ಕಿಷ್ಕಿಂಧೆಯ ದೊರೆ. ದುಂದುಭಿಯ ಮಗನಾದ ಮಾಯಾವಿಯು ವಾಲಿಯನ್ನು ತನ್ನ ತಂದೆಯನ್ನು ಕೊಂದ ಸೇಡನ್ನು ತೀರಿಸಿಕೊಳ್ಳಲು ಕಿಷ್ಕಿಂಧೆಗೆ ಬಂದು ಅಟ್ಟಹಾಸದಿಂದ ಗರ್ಜಿಸಿದ. ಯಮೋಪಮನಾದ ವಾಲಿಯು ತನ್ನ ಗದೆಯನ್ನೆತ್ತಿಕೊಂಡು ಅವನನ್ನು ಬೆನ್ನಟ್ಟಿದನು. ತನ್ನಣ್ಣನೊಡನೆ ಸುಗ್ರೀವನೂ ಬೆಂಬಲವಾಗಿ ಹೊರಟನು. ಆ ಮಾಯಾವಿಯು ಒಂದು ಗುಹೆಯನ್ನು ಹೊಕ್ಕನು. ತಾನು ಬರುವವರೆಗೂ ಆ ಬಿಲದ ಬಾಯಲ್ಲಿ ಕಾಯುತ್ತಿರಬೇಕೆಂದು ಸುಗ್ರೀವನಿಗೆ ಹೇಳಿ ವಾಲಿಯೂ ಒಳಕ್ಕೆ ನುಗ್ಗಿದ. ನೂರು ರಾತ್ರಿ ದೀರ್ಘ ದಶದಶ ದಿನಗಳು ಕಳೆದುವು. ಗುಹೆಯಿಂದ ಆರ್ಭಟ ಕೇಳಿಸಿತು. ವಾಲಿಯು ಮರಣ ಹೊಂದಿದನೆಂದು ತಿಳಿದು. ಬಿಲದ ಬಾಯಿಗೆ ಒಂದು ದೊಡ್ಡ ಬಂಡೆಯನ್ನಿಟ್ಟು ಮುಚ್ಚಿ ಹಿಂತಿರುಗಿ ಬಂದ ಸುಗ್ರೀವ ಕಪಿಕುಲದ. ದೊರೆಯಾದ.

ಮಾಯಾವಿಯನ್ನು ಕೊಂದ ವಾಲಿ ಗುಹೆಯ ಬಾಗಿಲಿಗೆ ಬಂದು ಮುಚ್ಚಿದ್ದ ಬಂಡೆಯನ್ನು ತಾರೆಯ ಹೆಸರನ್ನು ಹೇಳಿ ತಳ್ಳಿ ಹೊರಗೆ ಬಂದ. ಸುಗ್ರೀವನನ್ನು ಕಾಣದೆ ಕೋಪದಿಂದ ಹಿಂತಿರುಗಿ ಬಂದು ತಾರೆಯನ್ನು ಕಂಡ. ತನ್ನವರೆಲ್ಲರನ್ನೂ ಕರೆಸಿ ತಾನು ಪಟ್ಟಪಾಡೆಲ್ಲ ತಿಳಿಸಿ, ಪ್ರತೀಕಾರಛಲದಿಂದ ಆಸ್ಥಾನಕ್ಕೆ ಬಂದ. ಅವ

ನನ್ನು ನೋಡಿ ವಿಸ್ಮಿತನಾಗಿ ಹರ್ಷದಿಂದ ಸಿಂಹಾಸನವನ್ನು ಬಿಟ್ಟು ಎದ್ದುಬಂದು ಅಣ್ಣನನ್ನು ಸುಗ್ರೀವ ಬಿಗಿದಪ್ಪಿದ. ಆಗ ವಾಲಿ ಅವನನ್ನು ಕೆಳಕ್ಕೆ ತಳ್ಳಿ ನೀನು ರಾಜದ್ರೋಹಿ, ಪತಿತನಾದ ಪಾಪಿ, ಮರಣವೇ ನಿನಗೆ ಶಿಕ್ಷೆ ಎಂದ. ನಡೆದುದನ್ನು ಸುಗ್ರೀವನು ಹೇಳಿದರೂ ಕೇಳಲಿಲ್ಲ. ಆಂಜನೇಯನ ಹಿತವಚನವನ್ನೂ ಕೇಳಲಿಲ್ಲ. ಸುಗ್ರೀವನನ್ನು ಆಚೆಗೆ ಅಟ್ಟಿ ಅವನ ಪತ್ನಿ ರುಮೆಯನ್ನು ಸೆರೆಯಲ್ಲಿಟ್ಟ.

ರುಮೆಯನ್ನು ಸಂಗಡ ಕರೆದುಕೊಂಡು ಹೋಗುವ ಸುಗ್ರೀವನ ಪ್ರಯತ್ನ ವಿಫಲವಾಯಿತು, ಅವನನ್ನು ಎಲ್ಲಿಯೂ ನಿಲಗೊಡದೆ ವಾಲಿ ಬೇಟೆಯಾಡಿದ. ಮತಂಗಮುನಿಯ ಶಾಪದಿಂದ ವಾಲಿಗೆ ದುರ್ಗಮವಾದ ಋಷ್ಯಮೂಕಶೈಲಶೃಂಗಕ್ಕೆ ಹೋಗಿ ಅಲ್ಲೊಂದು ಕುಟೀರವನ್ನು ಕಟ್ಟಿಕೊಂಡು ವಾಸಿಸಲು ತೊಡಗಿದ.

ಸುಗ್ರೀವನಿಂದ ಕಳುಹಿಸಲ್ಪಟ್ಟ ಆಂಜನೇಯನು ರಾಮಲಕ್ಷ್ಮಣರನ್ನು ಆಹ್ವಾನಿಸಿ ದಾರಿಯಲ್ಲಿ ನಡೆದ ವಿಷಯವನ್ನೆಲ್ಲ ಅವರಿಗೆ ತಿಳಿಸಿದನು. ಸುಗ್ರೀವನು ಅವರನ್ನು ಸ್ವಾಗತಿಸಿ—"ನಾನು ಧನ್ಯನಾದೆ. ನಿನಗೆ ನಾನು, ನನಗೆ ನೀನು ಇದಕ್ಕೆ ಅಗ್ನಿಯೇ ಸಾಕ್ಷಿ. ನಿನ್ನ ಪತ್ನಿಯನ್ನು ಹುಡುಕಿ ಅವಳನ್ನು ಕದ್ದೊಯ್ದವನನ್ನು ಅರಸಿ ನಿನ್ನ ಸೇವೆಯಲ್ಲಿ ನನ್ನ ಸರ್ವಸ್ವವನ್ನು ಸಮರ್ಪಿಸುವೆನು" ಎಂದ ಸುಗ್ರೀವ. "ಸಕಲ ಕಿಷ್ಕಿಂಧೆಯು ನಿನ್ನದು ಎಂದು ತಿಳಿದುಕೊ. ನಿನ್ನ ಪತ್ನಿಯನ್ನು ಸೆರೆಯಲ್ಲಿಟ್ಟವನು ಸತ್ತನು ಎಂದು ತಿಳಿ' ಎಂದ ಶ್ರೀರಾಮಚಂದ್ರ. ವಾಲಿಯನ್ನು ಕೊಲ್ಲುವ ಶಕ್ತಿ ಶ್ರೀರಾಮನಿಗಿದೆಯೇ ಎಂದು ಸುಗ್ರೀವ ಶಂಕಿಸಿದ ಅದನ್ನು ನಿವಾರಿಸಲು ಒಂದೇ ಬಾಣದಿಂದ ಏಳು ಮರಗಳನ್ನು ತುಂಡುಮಾಡಿದುದನ್ನು ನೋಡಿ ಶ್ರೀರಾಮನಲ್ಲಿ ಅವನಿಗೆ ಸಂಪೂರ್ಣ ವಿಶ್ವಾಸ ದೃಢವಾಯಿತು.

ಶ್ರೀರಾಮನ ಬೆಂಬಲದಿಂದ ಧೈರ್ಯತಾಳಿದ ಸುಗ್ರೀವ ಕಿಷ್ಕಿಂಧೆಯ ಬಾಗಿಲಿಗೆ ಹೋಗಿ ಗರ್ಜಿಸಿ ಅಣ್ಣ ವಾಲಿಯನ್ನು ಯುದ್ಧಕ್ಕೆ ಕರೆದ. ವಾಲಿಯು ಬಂದು ತಮ್ಮನನ್ನು ನೋಡಿ ರೌದ್ರಾವೇಶದಿಂದ ಅವನೆಡೆಗೆ ನುಗ್ಗಿದ. ಅವರಿಬ್ಬರೂ ಭಯಂಕರವಾಗಿ ಹೋರಾಡಿದರು. ರೂಪವೇಷಸಾದೃಶ್ಯದಿಂದ ಅವರನ್ನು ಯಾರು ಯಾರೆಂದು ಗುರುತಿಸಲಾರದೆ ರಾಮನು ಸುಮ್ಮನೆ ನೋಡುತ್ತಿದ್ದ. ರಾಮನ ಬಾಣದ ಸಹಾಯವು ಬಿಸಿಲ್ಗುದುರೆಯಾದುದನ್ನು ಕಂಡ ಸುಗ್ರೀವ, ವಾಲಿಯ ವಜ್ರಾಘಾತಕ್ಕೆ ಮೈ ಮುರಿದು ರಕ್ತ ಸೋರುತ್ತಾ ಮತಂಗಾರಣ್ಯದ ಕಡೆಗೆ ಹೋದನು. ವಾಲಿಯು ಕಿಷ್ಕಿಂಧೆಗೆ ಹಿಂತಿರುಗಿದನು.

ಸುಗ್ರೀವನು ರಾಮನನ್ನು ನೋಡಿ "ನೀನು ವಾಲಿಯ ಬೇಹುಗಾರನೋ ? ನಂಬಿಸಿ ನನ್ನನ್ನೇತಕ್ಕೆ ಕೊಂದೆ ? ಎಂದು ಕೇಳಿದ್ದಕ್ಕೆ ರಾಮನು ಅವನ ಕ್ಷಮೆ ಬೇಡಿ ಕಾರಣವನ್ನು ತಿಳಿಸಿ, ಅವನ ಕತ್ತಿಗೆ ಹೂ ತುಂಬಿದ ಬಳ್ಳಿಯೊಂದನ್ನು ಮಾಲೆ ಹಾಕಿ ಪುನಃ ಹೋರಾಡಲು ಕಳುಹಿಸಿದನು. ಉತ್ಸಾಹದಿಂದ ಸುಗ್ರೀವನು ಮತ್ತೊಮ್ಮೆ

ಕಿಷ್ಕಿಂಧೆಯ ಕಡೆಗೆ ನಡೆವನು. ಅತ್ತ ದಣಿದು ಹಿಂತಿರುಗಿದ ವಾಲಿಯು ತಾರೆಯೊಂದಿಗೆ —"ಮನಸ್ಸೇಕೋ ಸಂತಾಪದಿಂದ ತುಂಬಿದೆ. ತಮ್ಮನ ವಿನಯದ ಮಾತನ್ನು ಕೇಳದೆ ಅವನನ್ನು ಪಿತೃಪುರದಿಂದ ಹೊರನೂಕಿದೆ. ರುಮಾದೇವಿಯನ್ನು ಸೆರೆಮನೆ ಯಲ್ಲಿಟ್ಟು ಸಂಕಟದಿಂದ ಬೇಯಿಸಿದೆ. ನಿನ್ನ ಹಿತವಾಕ್ಯವನ್ನು ಕೇಳಲಿಲ್ಲ"—ಎಂದು ಹೇಳುತ್ತಿದ್ದಾಗ ಸುಗ್ರೀವನ ಅರ್ಭಟ ಕೇಳಿಸಿತು. ಕೋಪದಿಂದ ಮೇಲೆದ್ದ. ತಡೆದ ತಾರೆಯನ್ನು ಕೈಯಿಂದ ತಳ್ಳಿದ. ಕೆಳಗುರುಳಿದ ತಾರೆ ಅವನ ಕಾಲುಗಳಿಗೆ ಬಿದ್ದು ಹೇಳಿ ದಳು —"ಪತಿವ್ರತಾರಮಣಿಯಾದ ಆ ರುಮಾದೇವಿಯನ್ನು ನೆನೆ. ತಾಯಿಯಂತೆ ತಂದೆ ಯನ್ನು ನೆನೆ. ನಿಮ್ಮಿಬ್ಬರ ಬಾಲ್ಯದ ಆಟಗಳನ್ನು ನೆನೆ. ನಿಮ್ಮಿಬ್ಬರಲ್ಲಿದ್ದ ಪ್ರೀತಿ ಯನ್ನು ನೆನೆ—" ಎಂದಳು. ಅವಳ ಮಾತನ್ನು ಕೇಳಿ ವಾಲಿಯ ಮನಸ್ಸು ಶಾಂತ ವಾಯಿತು. ರೋಷವು ಹೋಯಿತು. ತಮ್ಮನಲ್ಲಿ ಪ್ರೀತಿ ಮರುಕೊಳಿಸಿತು. "ಕಾಳ ಗದ ನೆಪದಲ್ಲಿ ಹೋಗಿ ತಮ್ಮನನ್ನು ತಂದು ರುಮೆಗೆ ಒಪ್ಪಿಸುವೆ. ತಂಗಿಯನ್ನು ಶೃಂಗ ರಿಸು" ಎಂದು ಹೇಳಿ ಉಲ್ಲಾಸದಿಂದ ಹೊರಕ್ಕೆ ಬಂದು ತಮ್ಮನನ್ನು ಅಪ್ಪಿಕೊಳ್ಳಲು ಮುನ್ನುಗ್ಗಿದ. ಅದನ್ನರಿಯದ ಸುಗ್ರೀವ ಅವನ ಮೇಲೆ ಬಂಡೆಗಳನ್ನೆಸೆದ. ಅವು ಗಳನ್ನು ನೂಕಿ ತಮ್ಮನ ಬಳಿಗೆ ಬಂದು ಅವನನ್ನು ಎತ್ತಿಕೊಂಡು ಊರಿನ ಕಡೆಗೆ ಸಾಗಿದ. ಇದನ್ನು ನೋಡಿದ ರಾಮನು ಕೈ ಮೀರಿತು ಎಂದು ಹೇಳುತ್ತ ವಾಲಿಯ ಬೆನ್ನಿಗೆ ಬಾಣವನ್ನು ಬಿಟ್ಟು ಅವನನ್ನು ಕೆಳಗುರುಳಿಸಿದನು.

ಕೆಳಗೆ ಬಿದ್ದ ವಾಲಿಯ ಸಮೀಪಕ್ಕೆ ಬಂದು ನೋಡಿದ ರಾಮನು ತನ್ನ ಬಿಲ್ಲಾ ಣ್ಮೆಯನ್ನು ಹಳಿದುಕೊಂಡನು. ಮೂರ್ಛೆಯಿಂದ ಎಚ್ಚೆತ್ತ ವಾಲಿಯು ಸುಗ್ರೀವನನ್ನು ನೋಡಿ—"ಏನು ಮಾಡಿಬಿಟ್ಟೆ ಸುಗ್ರೀವ, ಪ್ರೀತಿಯಿಂದ ಮುದ್ದಾಡಲೆಂದು ಬಂದು ಅಪ್ಪಿದ ತೋಳುಗಳನ್ನು ಛಿದ್ರಿಸಿದೆ ತೋರು ಆ ವೀರನನ್ನು" ಎಂದು ರಾಮನನ್ನು ನೋಡಿ "ಪ್ರೀತಿಯಿಂದ ತಮ್ಮನನ್ನು ಊರಿಗೆ ಕರೆದೊಯ್ಯುತ್ತಿದ್ದ ಅಣ್ಣನ ಬೆನ್ನಿಗೆ ಹೊಡೆದುಕೊಂಡೆ ನಿನ್ನ ಕಲಿತನಕ್ಕೆ ಹೇಡಿಯಂತಹ ಕೆಲಸಕ್ಕೆ ಧಿಕ್ಕಾರ" ಎಂದು ನಿಂದಿಸಿದ.

"ಅದು ನಿನ್ನ ವಿಧಿ ಪತಿವ್ರತೆಯನ್ನು ಒಯ್ದ ರಾಕ್ಷಸನಂತೆ ನಿನಗೂ ಸಹ" ಎಂದು ರಾಮನು ಹೇಳಿದ್ದನ್ನು ಕೇಳಿ ವಾಲಿಯು ಕಿವಿಗಳನ್ನು ಮುಚ್ಚಿಕೊಂಡನು. ರುಮೆಯು ನನಗೆ ಮಗಳಂತೆ ಇದಕ್ಕೆ ತಾರೆಯೇ ಸಾಕ್ಷಿ. ನಾನು ನಿರ್ದೋಷಿಯನ್ನು ತಾಯಿ ನಾಡಿನಿಂದ ಅಟ್ಟಿದ್ದಕ್ಕೆ ಈ ಶಿಕ್ಷೆಯೇ ? ನಾನೀಗ ಕೋಪದಿಂದ ಕೂಡಿದ ಪಾಪಿ ಯಲ್ಲ. ಪಶ್ಚಾತ್ತಾಪದಿಂದ ಭ್ರಾತೃಪ್ರೇಮದಿಂದ ಶುದ್ಧನಾಗಿದ್ದೇನೆ. ನನಗೆ ಹಗೆತನ ವಿಲ್ಲ" ಎಂದ.

ವಾಲಿಯ ಮಾತನ್ನು ಕೇಳಿದ ದಾಶರಥಿ ಸುಗ್ರೀವನನ್ನು ನೋಡಿದ. ಸುಗ್ರೀವನ ಕಣ್ಣುಗಳು ಅಶ್ರುಪೂರ್ಣವಾದುವು. ತಲೆಬಗ್ಗಿಸಿ—"ನನಗೆ ಇವನ ಮನಸ್ಸು ತಿಳಿಯ

ಲಿಲ್ಲ'' ಎಂದ. ''ವಕ್ರವಿಧಿಗೆ ಆಹುತಿಯಾದ ವಾಲಿ'' ಎನ್ನುತ್ತ ಮಾರುತಿಯು ವಾಲಿಯನ್ನೆತ್ತಿ ಸಮನಾದ ನೆಲದ ಮೇಲೆ ಹುಲ್ಲಿನಹಾಸಿಗೆಯಲ್ಲಿ ಮಲಗಿಸಿದನು. ರಾಮನು ಕಣ್ಣೀರು ತುಂಬಿದವನಾಗಿ ಧನುರ್ಬಾಣಗಳನ್ನು ಕೆಳಕ್ಕಿಸೆದು, ವಾಲಿಯ ಹತ್ತಿರ ಕುಳಿತು, ಅವನ ಕ್ಷಮೆಯನ್ನು ಬೇಡಿ ರೋದಿಸಿದನು. ಅವನನ್ನು ವಾಲಿಯು ನೋಡಿ—ನಿನ್ನ ''ಮಹಾತ್ಯಾಗವನ್ನು ಕೇಳಿದ್ದೆ ಧೈರ್ಯವನ್ನೂ ಕೇಳಿದ್ದೆ. ನೀನು ನಿಜವಾಗಿಯೂ ಅಷ್ಟೆ ಸತ್ಯ ವ್ರತ. ಇಲ್ಲದಿದ್ದರೆ ಸೋತವರೊಡನೆ ತಪ್ಪು ಒಪ್ಪಿಕೊಳ್ಳುತ್ತಿದ್ದೆಯಾ ? ನನ್ನೆದೆಯಲ್ಲಿ ಆದ ಪರಿವರ್ತನೆ ತಿಳಿಯದೆ ಹೀಗಾಯ್ತು, ವಿಧಿಯ ವಿನ್ಯಾಸ ಬೇರೆ. ನೀವು ಕಷ್ಟದಿಂದ ಸಾಧಿಸುತ್ತಿದ್ದುದನ್ನು ನಾನು ಲೀಲಾಜಾಲವಾಗಿ ಸಾಧಿಸುತ್ತಿದ್ದೆ'' ಎನ್ನುತ್ತಿದ್ದ ಹಾಗೆ ಅವನಿಗೆ ಮೇಲುಸಿರಾದುದನ್ನು ನೋಡಿ ಸುಗ್ರೀವನು ಅಳತೊಡಗಿದ. ನೀಲನು ವಾಲಿಗೆ ನೀರನ್ನು ಕುಡಿಸಿದನು. ನಳನು ಗಾಳಿ ಬೀಸಿದನು. ಕಣ್ತೆರೆದು ಸುಗ್ರೀವನನ್ನು ಕರೆದು—ವಾನರ ಕುಲದ ಹೆಮ್ಮೆಗೆ ತಕ್ಕಂತೆ ಈ ನಮ್ಮ ಅತಿಥಿಗೆ ನೆರವಾಗು ರಾಜನಾಗಿ ಆಳು'' ಎಂದನು. ಅಲ್ಲಿಗೆ ತಾರೆಯು ಅಂಗದನೊಡನೆ ಬಂದಳು ರೋದಿಸಿದಳು. ಅಂಗದನನ್ನು ರಾಮಗೆ ಒಪ್ಪಿಸಿದಳು. ಕನಿಕರದಿಂದ ಸುಗ್ರೀವನನ್ನು ನೋಡಿ. ರಾಮನ ಮಹಿಮೆಯನ್ನು ಕೊಂಡಾಡಿ, ಸೀತೆಯನ್ನು ನೆನೆದು ಮರುಗಿ, ಅಂಗದನನ್ನು ಮತ್ತೊಮ್ಮೆ ಅಪ್ಪಿಕೊಂಡು. ಅವನನ್ನು ರಾಮನ ಸೇವೆಗೆ ಸಲ್ಲಿಸಿ, ಪತಿಯ ಆತ್ಮವನ್ನು ಸೇರಲು ಚಿತೆ ಏರಿದಳು.

ಇಲ್ಲಿ ಚಿತ್ರಿತವಾಗಿರುವ ವಾಲಿಯ ವ್ಯಕ್ತಿತ್ವವು ನಮ್ಮ ಹೃದಯವನ್ನು ಕಲಕುತ್ತದೆ. ವಾನರ ಮಹಾವೀರನಾದ ವಾಲಿ ಸ್ವಬಲದಿಂದ, ಛಲದಿಂದ. ವೈರಭಾವದಿಂದ ಕೂಡಿ, ದೈವವನ್ನು ನಿರ್ಲಕ್ಷಿಸುವ ವ್ಯಕ್ತಿಯಾಗಿದ್ದ. ಅವನ ಲೌಕಿಕ ಪರಾಕ್ರಮವು ದೈವಕ್ಕೆ ವಿಮುಖವಾಗಿತ್ತು. ರಾಮನ ಕೃಪಾಬಾಣಕ್ಕೆ ಅವನ ಬೆನ್ನು ಗುರಿಯಾಯ್ತು. ಅವನು ಅಜ್ಞಾನದಿಂದ ಜ್ಞಾನದೆಡೆಗೆ ಸಾಗಿ ಶುದ್ಧಾತ್ಮನಾದ ಮಹಾವೀರ. ಮರೆಯಲಾಗದ ರೀತಿಯಲ್ಲಿ ಈ ಮಹಾವೀರನ ಚಿತ್ರವು ನಮ್ಮ ಮನಸ್ಸಿನಲ್ಲಿ ನಿಲ್ಲುತ್ತದೆ.

**ಕಂಬರ್ ಚಿತ್ರಿಸಿರುವ ವಿಭೀಷಣ :** ವಿಭೀಷಣನು ರಾವಣನ ಸಹೋದರರಲ್ಲಿ ಅತ್ಯಂತ ಕಿರಿಯವನು. ತನ್ನ ಅಣ್ಣಂದಿರು ಹಿಂದೆ ನಡೆಸಿದ ಯುದ್ಧಗಳಲ್ಲಿ ಭಾಗವಹಿಸದೆ ಲಂಕೆಯಲ್ಲಿದ್ದು, ಧರ್ಮಕಾರ್ಯಗಳಲ್ಲಿ ತೊಡಗಿದ್ದ. ರಾಮದೂತನಾದ ಹನುಮಂತನನ್ನು ಮರಣದಂಡನೆಗೆ ಗುರಿ ಮಾಡಬೇಕೆಂದು ರಾವಣನು ಹೇಳಿದಾಗ ಅದನ್ನು ವಿರೋಧಿಸಿ, ರಾಜದೂತರನ್ನು ಕೊಲ್ಲುವುದು ತೀರ ಹೇಯವಾದ ಕೃತ್ಯವೆಂದು ಹೇಳಿದನು. ಆಂಜನೇಯನು ಲಂಕಾದಹನ ಮಾಡಿದ ನಂತರ ಯುದ್ಧದ ಸಮಿತಿಯನ್ನು ಕುರಿತು ಯುದ್ಧ ಮಾಡುವುದನ್ನು ವಿರೋಧಿಸಿ ಸೀತೆಯನ್ನು ಅವಳ ಪತಿಯ ಬಳಿಗೆ ಹಿಂದಕ್ಕೆ ಕಳುಹಿಸಿಕೊಡಬೇಕೆಂದು ಹೇಳಿದನು. ರಾವಣನು ಮಂತ್ರಾಲೋಚನೆಗಾಗಿ ಕರೆದ ಸಭೆಯಲ್ಲಿ ಇಂದ್ರಜಿತ್ತನ್ನು ಧಿಕ್ಕರಿಸಿ ಸುಮ್ಮನಾಗುವಂತೆಮಾಡಿ ರಾವಣನ

ಕಡೆ ತಿರುಗಿ—"ರಾಜ, ಹಿಂದೆ ತಪಸ್ಸನ್ನು ಮಾಡಿ ದೇವತೆಗಳಿಂದ ವರಗಳನ್ನು ಪಡೆದೆ. ಆದರೆ ಮಾನವರು ಮತ್ತು ವಾನರರಿಂದ ಅಪಾಯ ಉಂಟಾಗದಂತೆ ಕೇಳಲಿಲ್ಲ. ವಾಲಿ ಕಾರ್ತವೀರ್ಯಾರ್ಜುನರ ಶಕ್ತಿ ಎಂತಹುದು ಎಂಬುದನ್ನು ಮರೆಯಬೇಡ. ನೀನು ಹಿಂದೆ ಒಬ್ಬ ಸ್ತ್ರೀಯನ್ನು ಬಲಾತ್ಕರಿಸಲು, ಅಗ್ನಿಪ್ರವೇಶ ಮಾಡಿ ನಿನ್ನನ್ನು ನಾಶ ಮಾಡುವಂತೆ ಪ್ರತಿಜ್ಞೆ ಮಾಡಿದ ಆಸ್ತ್ರೀಯೇ ಈಗ ಸೀತೆಯಾಗಿ ಅವತರಿಸಿದ್ದಾಳೆ. ಸಾಕ್ಷಾತ್ ಪರಬ್ರಹ್ಮನೇ ರಾಮ, ಲಕ್ಷ್ಮಣ ಸಹಿತ ಬಂದಿದ್ದಾನೆ. ಅವರ ಬಾಣಗಳು ನಿನ್ನನ್ನು ಅಳಿಸುವ ಮುನ್ನ ನಾನು ಹೇಳುವಂತೆ ಮಾಡು. ಸೀತೆಯನ್ನು ರಾಮನಿಗೆ ಒಪ್ಪಿಸಿ ಕೃತಾರ್ಥನಾಗಿ, ಜೀವವನ್ನು ಉಳಿಸಿಕೊ ಲಂಕೆಯನ್ನೂ, ಲಂಕಾಜನರನ್ನೂ ಉಳಿಸು" ಎಂದು ಮತ್ತೆ ಬುದ್ಧಿ ಹೇಳಿದನು.

ವಿಭೀಷಣನ ಹಿತೋಕ್ತಿ ರಾವಣನಿಗೆ ರುಚಿಸಲಿಲ್ಲ. ಕೋಪದಿಂದ ಕಠೋರ ವಾಣಿಯಲ್ಲಿ ಹೇಳಿದ —"ವಿಭೀಷಣ, ನಾನು ಯುದ್ಧದಲ್ಲಿ ಸತ್ತ ಕೂಡಲೇ ಲಂಕೆಯನ್ನು ಆಳಲು ಆಸೆಪಟ್ಟಿದ್ದೀಯೆ. ನನ್ನ ಶತ್ರುಗಳನ್ನು ಪ್ರೀತಿಸುತ್ತೀಯೆ. ನನ್ನ ನಾಶಕ್ಕಾಗಿ ಪಿತೂರಿ ಮಾಡುತ್ತಿದ್ದೀಯ. ನೀನು ದೂತನಾದ ವಾನರನನ್ನು ಕೊಲ್ಲ ಕೂಡದೆಂದು ಏಕೆ ಅಂದು ಹೇಳಿದೆ ಎಂಬುದು ಈಗ ತಿಳಿಯಿತು, ನೀನೊಬ್ಬ ಹೇಡಿ. ಸರ್ಪಕ್ಕಿಂತ ನೀನು ಹೆಚ್ಚು ಘೋರ ವಿಷವುಳ್ಳವನು. ತಮ್ಮನನ್ನು ಕೊಂದನೆಂಬ ಕಳಂಕ ನನಗೆ ಬೇಡ, ಕುಲಘಾತಕ. ಇನ್ನೊಂದು ಮಾತನಾಡದೆ ಹೊರಟುಹೋಗು. ನನ್ನ ರಾಜ್ಯದಲ್ಲಿ ಮುಖ ತೋರಿಸಿದರೆ ಮರಣ ಹೊಂದುವೆ, ಎಂದನು.

ನ್ಯಾಯವಾದಿಯಾದ ವಿಭೀಷಣನು ಅಲ್ಲಿ ಒಂದು ಕ್ಷಣವೂ ನಿಲ್ಲಲಾರದೆ ಪುನಃ— "ನಿನ್ನ ಹಿತಕ್ಕಾಗಿ ಹೇಳಿದೆ. ನೀನು ಕೇಳುವುದಿಲ್ಲ. ನನ್ನನ್ನು ಕ್ಷಮಿಸು, ನಾನು ಹೋಗುತ್ತೇನೆ"—ಎಂದು ಹೇಳಿ ತನ್ನ ಅನುಚರರಾದ ನಾಲ್ಕು ರಾಕ್ಷಸರೊಡನೆ ಕೂಡಿ ಆಕಾಶಕ್ಕೆ ಹಾರಿ, ರಾಮನೂ ಅವನ ವಾನರ ಸೇನೆಯೂ ಬೀಡು ಬಿಟ್ಟಿದ್ದ ಕಡೆಗೆ ಹೊರಟನು. ತನ್ನ ಸಲಹೆಗಾರರ ಮಾತನ್ನು ಒಪ್ಪಿ— "ರಾಮನ ಪಾದಗಳಿಗೆ ಶರಣು ಹೋಗೋಣ. ಜನನ ಮತ್ತು ಮರಣಗಳ ಚಕ್ರವ್ಯೂಹದಿಂದ ಬಿಡುಗಡೆ ಹೊಂದೋಣ" —ಎಂದನು.

ಬೆಳಗಾದ ಕೂಡಲೇ ಸೈನ್ಯದ ಪಾಳ್ಯದ ಮುಂದೆ ನಿಂತು ಗಟ್ಟಿಯಾಗಿ—" ಓ ರಾಘವ ! ನಾನು ನಿನ್ನಲ್ಲಿ ಶರಣು ಹೋಗಿದ್ದೇನೆ" —ಎಂದು ಹೇಳಿದನು. ವಾನರರಾದರೋ ಅವನನ್ನೂ ಅವನ ಸಂಗಡಿಗರನ್ನೂ ಶತ್ರುಗಳೆಂದು ತಿಳಿದು, ಅವರೊಡನೆ ಹೋರಾಡಲು ಸಿದ್ಧರಾದರು. ಆದರೆ ವಿಭೀಷಣನ ಕೂಗನ್ನು ಕೇಳಿಸಿಕೊಂಡ ರಾಮನು ದೂತರನ್ನು ಕಳುಹಿಸಿ ಆ ರಾಕ್ಷಸರನ್ನು ಯಾರೂ ಹಿಂಸಿಸ ಕೂಡದೆಂದು ಆಜ್ಞೆಮಾಡಿ, ಕಷ್ಟದಲ್ಲಿರುವವರು ಯಾರು ಎಂಬುದನ್ನರಿತು. ತನ್ನ ಮಿತ್ರರ ಸಭೆಯನ್ನು ಸೇರಿಸಿ ಅವರ ಸಲಹೆಯನ್ನು ಕೇಳಿದನು. ಕೊನೆಗೆ ಹನುಮಂತನ ಅಭಿಪ್ರಾಯವನ್ನು ಒಪ್ಪಿಕೊಂಡು ವಿಭೀಷಣನನ್ನು ಕರೆತರಲು ಸುಗ್ರೀವನನ್ನು ಕಳುಹಿಸಿದನು. ಸುಗ್ರೀವನು

ರಾಮನ ಆದೇಶವನ್ನು ತಿಳಿಸಿದಾಗ ವಿಭೀಷಣನ ಕಣ್ಣುಗಳು ಆನಂದಾಶ್ರುಗಳಿಂದ ತುಂಬಿದುವು.

ತನ್ನ ಸಮ್ಮುಖಕ್ಕೆ ಬಂದ ವಿಭೀಷಣನನ್ನು ರಾಮನು ತನ್ನ ಮತ್ತೊಬ್ಬ ಸಹೋದರನೆಂದು ಅಂಗೀಕರಿಸಿದನು. ಮತ್ತು ಅವನಿಗೆ ಲಂಕಾರಾಜ್ಯಾಭಿಷೇಕ ಮಾಡಿ ತನ್ನ ಹೆಸರು ಭೂಲೋಕದಲ್ಲಿರುವವರೆಗೂ ಅವನು ಲಂಕಾಧಿಪತಿಯಾಗಿರುವನೆಂದು ಘೋಷಿಸಿ ಅಭಯ ಪ್ರದಾನ ಮಾಡಿ ಲಂಕಾರಾಜ್ಯವನ್ನಿತ್ತನು.

ರಾವಣನನ್ನು ಕೊಂದು ತನಗೆ ರಾಜ್ಯವನ್ನು ಕೊಡಿಸಬೇಕೆಂಬ ಆಸೆಯಿಂದ ವಿಭೀಷಣನು ರಾಮಭಕ್ತನಾಗಿ ಬಂದನೆಂಬ ಶಂಕೆ ಬರದಂತೆ ಕಂಬರ್ ಎಚ್ಚರಿಕೆ ವಹಿಸಿದ್ದಾನೆ.

ವಿಭೀಷಣನ ಶರಣಾಗತಿಯು ಶರಣಾಗತಿತತ್ವವನ್ನು ಹೃದಯಂಗಮವಾಗಿ ನಿರೂಪಿಸುವ ಘಟ್ಟವಾಗಿದೆ. ಯಾವ ವಿಧವಾದ ತಾರತಮ್ಯವನ್ನೂ ನೋಡದೆ, ಶರಣಾಗತರಾಗುವ ಸಮಸ್ತ ಚೇತನರಿಗೂ ಭಗವಂತನು ಅಭಯವನ್ನು ನೀಡುತ್ತಾನೆಂಬುದು ಇಲ್ಲಿ ವ್ಯಕ್ತವಾಗಿದೆ.

ತನ್ನ ಸೂಕ್ಷ್ಮವಾದ ಪರಿಸ್ಥಿಯಿಂದ ವಿಭೀಷಣನು ಯುದ್ಧದಲ್ಲಿ ನೇರವಾಗಿ ಭಾಗವಹಿಸುವುದಿಲ್ಲ. ಇಂದ್ರಜಿತ್ ಇವನ ಕಡೆ ಶೂಲವನ್ನು ಗುರಿಯಿಟ್ಟು ಎಸೆದಾಗ ತನ್ನ ಗದೆಯಿಂದ ಅವನ ರಥವನ್ನು ಕುದುರೆಗಳ ಸಹಿತ ನಾಶ ಮಾಡುತ್ತಾನೆ. ಅಪಾಯ ಒದಗಿದಾಗಲೆಲ್ಲಾ ಏನು ಮಾಡಬೇಕೆಂದು ಲಕ್ಷ್ಮಣನಿಗೆ ಸಲಹೆ ನೀಡುತ್ತಾನೆ. ಆದ್ದರಿಂದಲೇ ಇಂದ್ರಜಿತ್ತಿನ ಶಿರವನ್ನು ರಾಮನ ಮುಂದೆ ತಂದು ತೋರಿಸಿದಾಗ— "ಇಂದ್ರಜಿತ್ತಿನ ಮರಣಕ್ಕೆ ಯಾವ ದೇವತೆಯ ವರವಾಗಲೀ ಹನುಮಂತನ ಶಕ್ತಿಯಾಗಲೀ ಕಾರಣವಲ್ಲ. ವಿಭೀಷಣನ ಅಮೂಲ್ಯವಾದ ಸಲಹೆಯಿಂದ ನಾವು ಗೆದ್ದಿದ್ದೇವೆ—" ಎನ್ನುತ್ತಾನೆ ರಾಮ. ರಾವಣನು ಲಕ್ಷ್ಮಣನ ಮೇಲೆ ಮೋಹನಾಸ್ತ್ರವನ್ನು ಪ್ರಯೋಗಿಸಿದಾಗ ವಿಭೀಷಣನ ಸಲಹೆಯಂತೆ ಲಕ್ಷ್ಮಣನು ನಾರಾಯಣಾಸ್ತ್ರವನ್ನು ಪ್ರಯೋಗಿಸಿ ನಿವಾರಿಸುತ್ತಾನೆ. ತನ್ನನ್ನು ಕಾಪಾಡಲು ಲಕ್ಷ್ಮಣನು ರಾವಣನು ಪ್ರಯೋಗಿಸಿದ ಶಕ್ತ್ಯಾಯುಧಕ್ಕೆ ಎದೆ ಕೊಟ್ಟು ಬಿದ್ದಾಗ ವಿಭೀಷಣನು ಕೋಪದಿಂದ ರಾವಣನ ಮೇಲೆ ಬಿದ್ದು, ಅವನ ರಥ, ಸಾರಥಿ, ಕುದುರೆಗಳನ್ನು ನುಚ್ಚುನೂರು ಮಾಡಿದನು.

ಕಂಬರಾಮಾಯಣದಲ್ಲಿ ಮತ್ತೊಂದು ದೃಶ್ಯವಿದೆ. ಕುಂಭಕರ್ಣನು ಯುದ್ಧ ಮಾಡಲು ಬಂದಾಗ ಅವನು ಯಾರೆಂಬುದನ್ನು ವಿಭೀಷಣನು ರಾಮನಿಗೆ ತಿಳಿಸಿದನು. ಸುಗ್ರೀವನ ಸಲಹೆಯಂತೆ ಅವನನ್ನು ರಾವಣನಿಂದ ಬೇರ್ಪಡಿಸಿ ತಮ್ಮ ಪಕ್ಷಕ್ಕೆ ಬರುವಂತೆ ಮಾಡಲು ರಾಮನ ಒಪ್ಪಿಗೆ ಪಡೆದು ರಾಕ್ಷಸರ ಸೈನ್ಯದ ಬೀಡಿಗೆ ಹೊರಟನು. ಕಾವಲುಗಾರರ ಮೂಲಕ ತಾನು ಬಂದಿರುವುದಾಗಿ ಕುಂಭಕರ್ಣನಿಗೆ ಸುದ್ದಿ ತಿಳಿಸಿದನು.

ಕುಂಭಕರ್ಣನಿಗೆ ಅವನ ಉದ್ದೇಶವು ತಿಳಿದಿರಲಿಲ್ಲ. ಆದರೂ ತಮ್ಮನನ್ನು ನೋಡುವ ಆಸೆಯಿಂದ ಅವನನ್ನು ಬರಮಾಡಿಕೊಂಡನು. ವಿಭೀಷಣನು ಒಳಗೆ ಹೋದಕೂಡಲೇ ಕುಂಭಕರ್ಣನ ಕಾಲುಗಳಿಗೆ ಬಿದ್ದು ನಮಸ್ಕರಿಸಿದನು. ಲಂಕೆಯಲ್ಲಿರುವ ಪಾಪಿಗಳೆಲ್ಲರೂ ರಾಮನ ಬಾಣಗಳಿಂದ ನಾಶವಾದ ಮೇಲೆ, ರಾಮನಿಂದ ಪಟ್ಟಾಭಿಷಿಕ್ತನಾಗಿ ರಾಜ್ಯ ವಾಳು. ರಾಘವನ ಬಳಿಗೆ ಹೋಗು ಎಂದು ಕುಂಭಕರ್ಣನಿಗೆ ತಾನು ಬಂದಿರುವ ಉದ್ದೇಶವನ್ನು ವಿಭೀಷಣನು ತಿಳಿಸಿದನು. ಕುಂಭಕರ್ಣನ ಹೃದಯವು ಕಲಕಿದರೂ ಅವನು ಮನಸ್ಸನ್ನು ಬದಲಾಯಿಸಲಿಲ್ಲ. ಕಣ್ಣೀರಿಡುತ್ತ ತಮ್ಮನನ್ನು ಅಪ್ಪಿಕೊಂಡು ಬೀಳ್ಕೊಟ್ಟನು, ಅಣ್ಣನ ಮನಸ್ಸನ್ನು ಬದಲಾಯಿಸಲು ಸಾಧ್ಯವಿಲ್ಲವೆಂದರಿತು ಅವನ ಪಾದಗಳಿಗೆ ಪುನಃ ನಮಿಸಿ ರಾಮನ ಬಿಡಾರಕ್ಕೆ ವಿಭೀಷಣನು ಹಿಂತಿರುಗಿದನು.

ಕಂಬರ್ ಚಿತ್ರಿಸಿರುವ ವಿಭೀಷಣನು ಶುದ್ಧ ಸತ್ವಗುಣ ಸಂಪನ್ನನಾದ ರಾಮ ಭಕ್ತ, ಯಾವ ಸಂದರ್ಭದಲ್ಲೂ ಅವನು ಸತ್ಯದಿಂದ, ಧರ್ಮಮಾರ್ಗದಿಂದ ವಿಚಲಿತ ನಾಗದ ಮಹಾತ್ಮ.

**ಕವಿ ಕುವೆಂಪು ಚಿತ್ರಿಸಿರುವ ವಿಭೀಷಣ :** ರಾವಣನ ಅತ್ಯಂತ ಕಿರಿಯ ತಮ್ಮನಾದ ವಿಭೀಷಣನನ್ನು ಆಂಜನೇಯನು ಸೀತೆಯನ್ನು ಹುಡುಕುತ್ತಾ ವಿಭೀಷಣನ ಮನೆಗೆ ಬಂದಾಗ ಮೊಟ್ಟ ಮೊದಲು ಕಾಣುತ್ತೇವೆ. ಕವಿಯು ವಿಭೀಷಣನ ಮನೆಯನ್ನು ವರ್ಣಿಸಿರುವುದು ಬಹಳ ರಮ್ಯವಾಗಿದೆ. ಸಹೃದಯ ಕಾವ್ಯದ ಎಲ್ಲ ರಸ ಪ್ರವಾಹ ಗಳಲ್ಲಿ ತೇಲಾಡಿ ತುದಿಗೆ ಕೊನೆಯ ಶಾಂತರಸವನ್ನು ಸಮೀಪಿಸುವಂತೆ ಆಂಜನೇಯನು ಸಾತ್ವಿಕ ಸುಗಂಧ ಮತ್ತು ವೀಣಾಗಾನಗಳಿಂದ ತುಂಬಿದ ಅವನ ಮನೆಯನ್ನು ಪ್ರವೇಶಿ ಸಿದನು. ಆ ಸಮಯದಲ್ಲಿ ವಿಭೀಷಣನು ತನ್ನ ಮಗಳು ಅನಲೆಯ ವೀಣಾವಾದನದ ರಸಾಸ್ವಾದನ ಮಾಡುತ್ತಾ ಕಣ್ಣು ಮುಚ್ಚಿ ಕುಳಿತಿದ್ದನು. ಅವನು ತನ್ನ ಮಗಳು ಮತ್ತು ಪತ್ನಿ ಸರಮೆಯೊಡನೆ ನಡೆಸುವ ಸಂಭಾಷಣೆ ಆ ಕುಟುಂಬದ ಸಂಸ್ಕೃತಿಯ ದ್ಯೋತಕ ವಾಗಿದೆ.

ಮತ್ತೊಮ್ಮೆ ನಾವು ಅವನನ್ನು ಕಾಣುವುದು ರಾವಣನ ಸಭೆಯಲ್ಲಿ. ಆ ಸಭೆ ಯಲ್ಲಿ ಪ್ರಹಸ್ತ, ಮಹಾಪಾರ್ಶ್ವ, ಅಕಂಪನ, ಹಿರಣ್ಯಕೇಶಿ, ಇಂದ್ರಜಿತ್ ಮುಂತಾದ ವರು ತಮ್ಮ ಅಭಿಪ್ರಾಯವನ್ನು ತಿಳಿಸಿದ ನಂತರ ಸಾತ್ವಿಕ ವಿಗ್ರಹನಾದ ವಿಭೀಷಣನು ಎದ್ದು ನಿಂತು ಬುದ್ಧಿವಾದ ಹೇಳಿದನು. —"ಅಧರ್ಮದಿಂದ ಕೆಡುಕು ಎಂಬುದು ಹಿರಿಯರ ಅನುಭವ. ಏಕಪತ್ನೀವ್ರತನಾದ ರಾಮನ ಪತಿವ್ರತೆಯಾದ ಸೀತೆಯ ತಪದ ತಾಪವು ಅತ್ಯಂತ ಕ್ರೂರವಾದುದು. ಎಲ್ಲರೂ ನಾಶವಾಗುತ್ತಾರೆ. ಈ ಒಂದು ಶಾಪ ದಿಂದ ಕುಲಕೀರ್ತಿ ನಾಶವಾಗುತ್ತದೆ" ಎಂದು ಹೇಳಿದ್ದನ್ನು ಕೇಳಿದ ರಾವಣನು ಕೋಪದಿಂದ ಸಭೆಯನ್ನು ತ್ಯಜಿಸಿ ಹೊರಟು ಹೋದನು. ಸೋದರನ ಮನಸ್ಸನ್ನು

ತಿಳಿದ ವಿಭೀಷಣನು ರಾಕ್ಷಸಕುಲದ ಕ್ಷೇಮವನ್ನು ಚಿಂತಿಸುತ್ತಾ ತನ್ನ ಮನೆಗೆ ಹೋದನು.

ಮತ್ತೊಮ್ಮೆ ಅಣ್ಣನನ್ನು ಕಾಣಲು ವಿಭೀಷಣನು ಅವನ ಮನೆಗೆ ಹೋದನು. ಆ ವೇಳೆಗೆ ರಾವಣನು ಅವನನ್ನು ಕುಲದ್ರೋಹಿ, ಶತ್ರುಮಿತ್ರ, ಕುಲವೈರಿ, ರಾಜವಿರೋಧಿ ಎಂದು ತೀರ್ಮಾನಿಸಿದ್ದನು. ವಿಭೀಷಣನು ರಾವಣನನ್ನು ಕಂಡು ತಾನು ಸಭೆಯಲ್ಲಿ ಆಡಿದ ಮಾತುಗಳಿಗಾಗಿ ಕ್ಷಮೆಬೇಡಿ, ಎಲ್ಲವೂ ಅವನ ಅಭ್ಯುದಯಕ್ಕಾಗಿಯೇ ವಿನಹಾ ಬೇರೆ ಯಾವ ಉದ್ದೇಶವೂ ಇಲ್ಲ. ಸಾವಧಾನದಿಂದ ಮುಂದೇನು ಮಾಡಬೇಕೆಂಬುದನ್ನು ನಿರ್ಣಯಿಸಬೇಕೆಂದು ಬೇಡಿಕೊಂಡನು. ರಾವಣನು ಕೋಪಾವಿಷ್ಟನಾಗಿ— "ನಿನಗೆ ಮನಸ್ಸಿದ್ದರೆ ನೆರವಾಗು, ಇಲ್ಲದಿದ್ದರೆ ಸೋದರನನ್ನು ವಧಿಸಿದ ಅಪಕೀರ್ತಿ ಎನಗೆ ಬೇಡ, ಲಂಕೆಯನ್ನು ಬಿಟ್ಟು ಹೋಗು, ಬೇರೆ ವಾದವು ನನಗೆ ಬೇಕಿಲ್ಲ. ನನ್ನ ದಾರಿ ನನಗೆ ನಿನ್ನದಾರಿ ನಿನಗೆ. ಇದು ನನ್ನ ಆಜ್ಞೆ"—ಎಂದನು. ಕೂಡಲೇ ವಿಭೀಷಣನು ಅಣ್ಣನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಮಲಾದ್ರಿಯ ಕಾಡಿನಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡು ವಾಸಿಸತೊಡಗಿದನು.

ರಾಮನ ಇಚ್ಛೆಯಂತೆ ಸುಗ್ರೀವನಾಜ್ಞಾಧಾರಕರಾದ ದ್ವಿವಿದ ಮತ್ತು ಮೈಂದರೆಂಬ ವಾನರರು ಅವನ ಬಳಿಗೆ ರಾಯಭಾರಿಗಳಾಗಿ ಬಂದರು. ಅವರ ರಾಯಭಾರವು ಸಫಲವಾಯ್ತು. ಮರುದಿನ ವಿಭೀಷಣನು ಶ್ರೀರಾಮನನ್ನು ಸೇರಿಕೊಂಡನು.

ಯುದ್ಧಕಾಲದಲ್ಲಿ ಕುಂಭಕರ್ಣನೊಡನೆ ಯುದ್ಧ ಮಾಡುವಾಗ ಮತ್ತು ನಿಕುಂಭಿಲಾಯಾಗ ಮಾಡುತ್ತಿದ್ದ ಇಂದ್ರಜಿತ್ತನ್ನು ನಿಗ್ರಹಿಸಲು ರಾಮ ಮತ್ತು ಲಕ್ಷ್ಮಣರಿಗೆ ಸಮಯೋಚಿತವಾದ ಸಲಹೆಗಳನ್ನಿತ್ತು ಸಹಾಯ ಮಾಡುತ್ತಾನೆ.

ರಾವಣನು ಲಂಕೆಯಲ್ಲಿ ಮರಣಹೊಂದಿದ ಮೇಲೆ ಲಂಕೆಯಿಂದ ಪುರಪ್ರಮುಖರ ಗೋಷ್ಠಿ ಅವನ ಬಳಿಗೆ ಬಂದಾಗ ಅವರಿಗೆ—"ಮೊದಲು ಪ್ರಭು ರಾಮನಿಗೆ ಕೈ ಮುಗಿಯಿರಿ. ಅವನಾಜ್ಞೆಯೇ ತಮಗೆ ಶಿಷ್ಯಪಥ್ಯ"—ಎಂದನು, "ರಾವಣನು ರಣರಂಗದಿಂದ ಹಿಂತಿರುಗಿದ ನಂತರ ಕಾಲವಾದನು. ಪತಿಯ ಪಾದದೊಳು ಮಂಡೋದರಿಯು ಇಚ್ಛೆಸಾವನ್ನು ಪಡೆದಳು. ಲಂಕೆಗೆ ಬಂದು ರಾಜ್ಯವನ್ನು ಕಾಪಾಡಬೇಕು. ಅಣ್ಣನ ದೇಹದ ಅಂತ್ಯಕ್ರಿಯೆಯನ್ನು ಮಾಡಲು ಬರಬೇಕೆಂದು ಗೋಷ್ಠಿ ಪ್ರಾರ್ಥಿಸಿತು.

ವಿಭೀಷಣನ ಕಣ್ಣುಗಳಿಂದ ಅಶ್ರುಬಿಂದು ತೊಟ್ಟಿಕ್ಕಿತು. ಲಂಕೆಗೆ ಹೋಗಿ ರಾವಣನಿಗೆ ಸಂಸ್ಕಾರ ಮಾಡುವ ವಿಚಾರದಲ್ಲಿ ಮನಸ್ಸು ಶಂಕೆಯಿಂದ ಕೂಡಿತು. ಆಗ ರಾಮನು—"ರಾವಣನು ವೀರ್ಯ, ನಿರ್ಭೀತ, ತೇಜಸ್ಸು ಮುಂತಾದುವುಗಳಲ್ಲಿ ನನಗೆ ಸಮನಾದವನು, ಸೋದರನಿಗೆ ರಾಜಗೌರವ ಸಹಿತ ಸಂಸ್ಕಾರವನ್ನು ನಡೆಸು. ಇದು ನನ್ನಾಜ್ಞೆ"—ಎಂದು ಹೇಳಿದನು. ಆಗ ರಾಮನ ಆಜ್ಞೆಗೆ ತಲೆಬಾಗಿ ಪುರಪ್ರಮುಖರ

ಗೋಷ್ಠಿಯೊಡನೆ ಲಂಕೆಗೆಹೋಗಿ ರಾವಣ ಮತ್ತು ಮಂಡೋದರಿಯ ಕಳೇಬರಗಳಿಗೆ ರಾಜ ಮರ್ಯಾದೆಯೊಡನೆ ಸಂಸ್ಕಾರ ಮಾಡಿ ಎಲ್ಲರನ್ನೂ ಸಂತೈಸಿ. ಆ ರಾತ್ರಿಯೇ ರಾಮನ ಸನ್ನಿಧಿಗೆ ಹಿಂತಿರುಗಿದನು.

ಶ್ರೀರಾಮನು ಲಂಕೆಯ ಕಿರೀಟವನ್ನು ಅವನ ಮುಡಿಗಿಡುವುದನ್ನು ಬಯಸದೆ ಆದನ್ನು ಇಂದ್ರಜಿತುವಿನ ಮಗ ವಜ್ರಾರಿಗಿಡಬೇಕೆಂದು ಇಚ್ಛಿಸಿದನು. ಶ್ರೀರಾಮನೊಡನೆ ಅಯೋಧ್ಯೆಗೆ ಹೋಗಿ ಭರತ ಮತ್ತು ರಾಮನ ಸಮಾಗಮದ ದಿವ್ಯದೃಶ್ಯವನ್ನೂ, ಶ್ರೀರಾಮಪಟ್ಟಾಭಿಷೇಕೋತ್ಸವವನ್ನೂ ನೋಡಿ ಕೃತಾರ್ಥನಾದನು.

ವಿಭೀಷಣನು ತಪಸ್ವಿ, ಸಂಯಮಿ, ಸತ್ವಶೀಲ, ತ್ಯಾಗಿ, ಧರ್ಮಾತ್ಮ ಮತ್ತು ರಾಮನ ಆಜ್ಞಾಧಾರಕ ಮಿತ್ರನಾಗಿ ಚಿತ್ರಿತನಾಗಿದ್ದಾನೆ.

**ಕವಿ ಕಂಬರ್ ಚಿತ್ರಿಸಿರುವ ಮಂಥರೆ :** ರಾಮಾಯಣದಲ್ಲಿ ಬರುವ ಪಾತ್ರಗಳಲ್ಲಿ ಮಂಥರೆಯ ಪಾತ್ರವು ಕುತೂಹಲಕಾರಿಯಾದುದು. ರಾಮಾಯಣಕ್ಕೆ ಒಂದು ಮುಖ್ಯ ತಿರುವುಕೊಟ್ಟ ಪಾತ್ರವಾಗಿದೆ. ಕಾಳಿದಾಸನು ಹೇಳಿರುವಂತೆ--"ಮಂಥರಾ ನಿರ್ಮಮಂಥ."

ಮಂಥರೆಯು ಕೈಕೆಯಿದಾಸಿ, ಅವಳೊಡನೆ ತವರುಮನೆಯಿಂದ ಬಂದವಳು ಅವಳಿಗೆ ಗೂನು ಬೆನ್ನು. ಅಂತೆಯೇ ಬುದ್ಧಿಯೂ ವಕ್ರ. ವಾಲ್ಮೀಕಿ ಅವಳ ಹುಟ್ಟನ್ನು ವರ್ಣಿಸಲು ಇಷ್ಟಪಡದೆ 'ಎಲ್ಲಿ ಹುಟ್ಟಿದವಳೋ ಅವಳು' ಎಂದು ಬೇಸರದಿಂದ ಹೇಳಿರುವುದು ಗಮನಾರ್ಹ. ಇವಳನ್ನು ನಾವು ನೋಡುವುದು ಅಯೋಧ್ಯಾಕಾಂಡದಲ್ಲಿ. ಶ್ರೀರಾಮನಿಗೆ ಯೌವರಾಜ್ಯಾಭಿಷೇಕ ಮಾಡಬೇಕೆಂದು ದಶರಥನು ತೀರ್ಮಾನಿಸಿದನು. ಹಿಂದಿನ ದಿನ ನಗರವು ಸಂಭ್ರಮದಿಂದಿರುವುದನ್ನು ಮಂಥರೆ ಕಂಡಳು. ಅಲ್ಲೇ ಮಾಳಿಗೆಯ ಮೇಲೆ ನಿಂತಿದ್ದ ಕೌಸಲ್ಯೆಯ ದಾಸಿಯನ್ನು ಕೇಳಿ ಸಡಗರದ ಕಾರಣವನ್ನು ತಿಳಿದೊಡನೆಯೇ ಅವಳ ಹೊಟ್ಟೆಯಲ್ಲಿ ಹುಳಿ ಕಿವಿಚಿದಂತಾಯಿತು. ಅದೇಕೋ ಅವಳಿಗೆ ಮೊದಲಿನಿಂದ ರಾಮನನ್ನು ಕಂಡರೆ ಆಗದು. ರಾಮನಿಗೆ ಕೇಡು ಮಾಡಲು ಸಮಯಸಿಕ್ಕೀತೇ ಎಂದು ಕಾಯುತ್ತಿದ್ದಳು. ಈಗ ಅವಳಿಗೆ ಸರಿಯಾದ ಅವಕಾಶ ಒದಗಿತು. ಬೇಗ ಕೈಕೆಯ ಅಂತಃಪುರವನ್ನು ಪ್ರವೇಶಿಸಿ, ಅವಳು ಸೊಗಸಾದ ಮೃದುಪರ್ಯಂಕದಲ್ಲಿ ಒರಗಿ ಅರ್ಧನಿದ್ರೆಯಲ್ಲಿರುವುದನ್ನು ಕಂಡಳು. ಅವಳ ಕಾಲುಗಳನ್ನು ಮೃದುವಾಗಿ ಒತ್ತಿ ಎಚ್ಚರಗೊಳ್ಳುವಂತೆ ಮಾಡಿದಳು. 'ಸರ್ವನಾಶವೇ ನಿನ್ನ ತಲೆಯ ಮೇಲೆ ನಿಂತಿರುವಾಗ ನಿದ್ರೆ ಮಾಡುತ್ತಿರುವೆಯಲ್ಲಾ' ಎಂದು ಹೇಳಿದರೂ ಕೈಕೆ ಮಲಗಿ ಕೊಂಡೇ—"ನನ್ನ ಎಲ್ಲಾ ವೀರಪುತ್ರರೂ ಧರ್ಮಮಾರ್ಗದಲ್ಲಿರುವಾಗ ನನಗೆ ಯಾವ ಅನರ್ಥ ಉಂಟಾಗುತ್ತದೆ ? ರಾಮನನ್ನು ಮಗನಾಗಿ ಉಳ್ಳ ನನಗೆ ಅಪಾಯ ಎಂದಿಗೂ ಒದಗುವುದಿಲ್ಲ. ಮಂಥರೇ" ಎಂದಳು.

ರಾಮನಲ್ಲಿ ಕೈಕೆಯು ಅಪರಿಮಿತವಾದ ವಾತ್ಸಲ್ಯವನ್ನು ಕಂಡ ಮಂಥರೆ ಅವಳಲ್ಲಿ

ಸ್ತ್ರೀ ಸಹಜವಾದ ಅಸೂಯೆಯನ್ನು ಜಾಗ್ರತಗೊಳಿಸಲು ಉದ್ದೇಶಿಸಿ ಕಣ್ಣೀರಿಡುತ್ತಾ "ನೀನು ಹಾಳಾದೆ. ನಿನ್ನ ಸಂತೋಷದ ದಿನಗಳು ಆಗಿ ಹೋದುವು. ಕೌಸಲ್ಯೆಯು ಅದೃಷ್ಟದ ತುದಿಗೆ ಏರಿದ್ದಾಳೆ" ಎಂದಳು. ಕೈಕೆ ಇದಕ್ಕೂ ಜಗ್ಗಲಿಲ್ಲ. "ಭರತನು ನನ್ನ ಮಗನಾಗಿರುವಾಗ ಕೌಸಲ್ಯೆಯು ನನಗಿಂತಲೂ ಉತ್ತಮಳು ಹೇಗಾಗುತ್ತಾಳೆ" ಎಂದಳು. ಮಂಥರಗೆ ತನ್ನ ಪ್ರಯತ್ನ ಸಫಲವಾಗುತ್ತಿರುವ ಸೂಚನೆ ದೊರಕಿತು. ವಿಷದ ಬಾಣವನ್ನು ಗುರಿಯಿಟ್ಟು ಹೊಡೆದಂತೆ ಹೇಳಿದಳು—"ನಾಳೆ ರಾಮನಿಗೆ ಪಟ್ಟಾಭಿಷೇಕ. ಕೌಸಲ್ಯೆ ನಿನಗಿಂತ ಹೇಗೆ ಉತ್ತಮ ಎಂದು ಕೇಳುತ್ತೀಯಲ್ಲಾ ?"

"ಏನು ! ಎಂಥಾ ಮಂಗಳವಾರ್ತೆ ! ಇದೋ ತೆಗೆದುಕೋ ! ಎಂದು ಕೈಕೆ ನವರತ್ನ ಹಾರವನ್ನು ತೆಗೆದು ಮಂಥರೆಯ ಕೊರಳಿಗೆ ಹಾಕಿದಳು. ಇದು ಮಂಥರೆಗೆ ಅನಿರೀಕ್ಷಿತ. ಅವಳ ಲೆಕ್ಕಾಚಾರ ತಪ್ಪಾಯಿತು. ಬೇರೆ ವಿಧಾನವನ್ನು ಅನುಸರಿಸಬೇಕೆಂದು ತೀರ್ಮಾನಿಸಿ ಅತ್ತಳು, ಗೋಳಾಡಿದಳು. ಕೈಕೆಯನ್ನು ಬೈದು ಅವಳು ಕೊಟ್ಟಹಾರ ವನ್ನು ನೆಲದಮೇಲೆ ಎಸೆದಳು, ಕೋಪದಿಂದ ಹೇಳಿದಳು "ಛೀ ಮೂಢೆ ! ನಾಳೆ ಕೌಸಲ್ಯೆಯ ಮಗನಿಗೆ ಪಟ್ಟಾಭಿಷೇಕ. ನಿನ್ನ ಮಗನು ಸಾಮಾನ್ಯನಂತೆ ನೆಲದ ಮೇಲೆ ಕೂರಬೇಕಾಗುತ್ತದೆ. ಅಯ್ಯೋ ಭರತ ! ನೀನು ಇನ್ನೂ ಬದುಕಿದ್ದೀಯೆ ನಿನ್ನ ತಂದೆಯೇ ನಿನಗೆ ಶತ್ರು ! ಕೇಕಯರಾಜ ವಂಶದಲ್ಲಿ ಹುಟ್ಟಿ ರಾಣಿಯಾಗಿರುವ ನೀನು ಮೂಲೆಯಲ್ಲಿ ದಾಸಿಯಂತೆ ಬಿದ್ದುಕೊಂಡಿರು. ನಿನಗಿಂತ ಮೂರ್ಖಳು ಯಾರಿದ್ದಾರೆ. ಕೈಕೇ !" ಎಂದಳು.

ಈ ಮಾತಿನಿಂದ ಕೈಕೆಗೆ ಕೋಪಬಂತು. ಅವಳಿಗೆ ರಾಮನ ಮೇಲಿದ್ದ ವಾತ್ಸಲ್ಯ ಕಡಿಮೆಯಾಗಲಿಲ್ಲ. "ಇನ್ನೊಂದು ಮಾತು ಹೇಳಿದರೆ ನಿನ್ನ ನಾಲಿಗೆ ಕತ್ತರಿಸುತ್ತೇನೆ. ಹೋಗು ಇಲ್ಲಿಂದ" ಎಂದಳು.

ಮಂಥರೆ ಸೋಲನ್ನು ಒಪ್ಪಿಕೊಳ್ಳಲು ಸಿದ್ಧಳಿರಲಿಲ್ಲ. ಕೈಕೆಯ ಕಾಲುಗಳ ಮೇಲೆ ಬಿದ್ದು ಗೋಳಾಡಿ ಎಲ್ಲವೂ ಅವಳ ಒಳ್ಳೆಯದಕ್ಕಾಗಿಯೇ ಎಂದು ಒತ್ತಿ ಹೇಳಿದಳು. ಅವಳ ದುರ್ಬೋಧನೆಯಿಂದ ಕೈಕೆಯ ಮನಸ್ಸು ವಿಚಲಿತವಾಯಿತು. "ಈಗೇನು ಮಾಡಲಿ ? ಎಂದು ಮಂಥರೆಯನ್ನೇ ಸಲಹೆ ಕೇಳಿದಳು. "ಹಿಂದೆ ದೇವಾಸುರ ಯುದ್ಧದಲ್ಲಿ ನೀನು ದಶರಥನಿಗೆ ಸಹಾಯ ಮಾಡಿದೆ. ಅದಕ್ಕೆ ಫಲವಾಗಿ ದಶರಥ ನಿನಗೆ ಎರಡು ವರಗಳನ್ನು ಕೊಡುತ್ತೇನೆ" ಎಂದಿದ್ದ. ಆ ವರಗಳನ್ನು ಈಗ ಕೇಳು, ಮೊದಲನೆಯ ವರದಿಂದ ರಾಮನಿಗೆ ಹದಿನಾಲ್ಕು ವರ್ಷಗಳ ವನವಾಸ ವನ್ನು ಕೇಳು, ಎರಡನೆಯ ವರದಿಂದ ಭರತನಿಗೇ ರಾಜ್ಯಾಭಿಷೇಕ ಆಗಬೇಕು" ಎಂದು ಉಪಾಯ ಹೇಳಿಕೊಟ್ಟಳು. ರಾಜ್ಯಕಾಮಳಾದ ಕೈಕೆ ಮಂಥರೆ ಹೇಳಿದಂತೆ ಮಾಡಿದಳು,

ಭರತನು ರಾಜಧಾನಿಗೆ ಬಂದು ನಡೆದು ಹೋದುದನ್ನು ಅರಿತು ಸಭೆಯನ್ನು

ಸೇರಿಸಿ ರಾಮನನ್ನು ಹಿಂದಕ್ಕೆ ಕರೆತರುವ ತನ್ನ ಉದ್ದೇಶವನ್ನು ತಿಳಿಸಿದನು. ಆ ಸಭೆಯಲ್ಲಿ ಸರ್ವಾಲಂಕಾರ ಭೂಷಿತಳಾಗಿ ಗೂನಿ ಮಂಥರೆ ಕುಳಿತಿದ್ದುದನ್ನು ನೋಡಿದ ಶತ್ರುಘ್ನ ಎಲ್ಲ ಅನರ್ಥಗಳಿಗೂ ಅವಳೇ ಕಾರಣವೆಂದು ತಿಳಿದು, ಕೋಪದಿಂದ ಬಂದು ಅವಳ ಮುಂಗೂದಲನ್ನು ಹಿಡಿದು ಜಗ್ಗಿಸಿಕೊಳ್ಳಲು ಹೊರಟವನ್ನು ನೋಡಿದ ಭರತನು ಅವಳನ್ನು ಬಿಡಿಸಿದನು.

**ಕುವೆಂಪು ರಾಮಾಯಣದ ಮಂಥರೆ :** ಮಂಥರೆಯು ಮಗು ಭರತನನ್ನು ಕಂಕುಳಲ್ಲಿ ಎತ್ತಿಕೊಂಡು ಒಂದು ಬೆಳುದಿಂಗಳ ರಾತ್ರಿ ಶಿಶು ರಾಮನು ಅಳುತ್ತಿದ್ದ ಕಡೆಗೆ ಬರುತ್ತಾಳೆ. ಶಿಶುರಾಮನು ಆಕಾಶದ ಚಂದ್ರನನ್ನು ಬಯಸಿ ಅಳುತ್ತಿದ್ದಾಗ ಅವನನ್ನು ಯಾರೂ ಸಮಾಧಾನ ಪಡಿಸಲಿಲ್ಲ. ಅವನನ್ನು ಸಂತೈಸಲು ಮಂಥರೆ ತನ್ನ ಸೆರಗಿನಲ್ಲಿ ಮುಚ್ಚಿಟ್ಟುಕೊಂಡಿದ್ದ ಕನ್ನಡಿಯನ್ನು ಕೈಕೆಗೆ ಕೊಟ್ಟಳು. ಕನ್ನಡಿಯಲ್ಲಿ ಚಂದ್ರನನ್ನು ನೋಡಿದ ಮಗು ರಾಮನು ಚಂದ್ರ ಕೈಗೆ ಸಿಕ್ಕಿದನೆಂದು ಹಿಗ್ಗಿತು. ಇದರಿಂದ ಸಂತೋಷಗೊಂಡ ಮಂಥರೆ ರಾಮನನ್ನು ಎತ್ತಿಕೊಳ್ಳಲು ಕೈಚಾಚಿದಳು. ತಾಯಿ ಕೌಸಲ್ಯೆಯು ಮುಟ್ಟಬೇಡವೆಂದಳು. ಆಗ ಅವಳಿಗೆ ನೋವಾಗಿ ತುಳಿದ ಸರ್ಪಿಣಿಯಂತೆ ಅಲ್ಲಿಂದ ಹೊರಟುಹೋದಳು.

ಅವಳಲ್ಲಿ ತುಂಬಿಕೊಂಡಿದ್ದ ಕೈಕೆಯ ಮೇಲಿನ ಪ್ರೀತಿಯನ್ನು ಕಾಯ್ದು ಕೊಳ್ಳುವುದೇ ಅವಳ ಶ್ರೇಷ್ಠ ಕರ್ತವ್ಯವಾಗಿತ್ತು. ಸೀತಾರಾಮ ಲಕ್ಷ್ಮಣರು ಕಾಡಿಗೆ ತೆರಳಿದ ನಂತರ ಅಯೋಧ್ಯೆ ಸ್ಮಶಾನಸದೃಶವಾಯಿತು. ಆದರೆ ಅಲ್ಲಿ ಭರತನ ರಾಜ್ಯಾಭಿಷೇಕವನ್ನು ಎದುರು ನೋಡುತ್ತ ಸಂಭ್ರಮದಿಂದ ಅಲೆಯುತ್ತಿದ್ದವಳು ಮಂಥರೆಯೊಬ್ಬಳೇ.

ನಡೆದ ವಿಷಯವನ್ನರಿತ ಶತ್ರುಘ್ನನು ಕೋಪಾವಿಷ್ಟನಾಗಿ ಅವಳ ಕೇಶಮುಖ ವಿಕಾರವನ್ನೆಲ್ಲಾ ಕತ್ತರಿಸಿ ಅವಳನ್ನು ಎತ್ತಿ ಕುಕ್ಕರಿಸುತ್ತಾನೆ. ಅವಳ ಆರ್ತನಾದವನ್ನು ಕೇಳಿದ ಭರತನು ತನ್ನನ್ನು ಸಾಕಿ ಸಲಹಿದ ಮುದುಕಿಯನ್ನು ಬಿಡಿಸಲು ಬಂದು, ಅವಳು ಮಾಡಿದ ಅನರ್ಥವನ್ನು ನೆನೆಸಿಕೊಂಡು ಅವಳನ್ನು ಬಿಡಿಸಿ 'ತೊಲಗು, ಹತ್ತಿರ ಬರಬೇಡ' ಎಂದು ತಿರಸ್ಕರಿಸುತ್ತಾನೆ.

ಭರತನ ಮೇಲೆ ಅವಳು ಇಟ್ಟಿದ್ದ ಅಪಾರ ವಾತ್ಸಲ್ಯಕ್ಕೆ ಅವನಾಡುವ ಒಂದೊಂದು ಮಾತೂ ಆಘಾತವಾಗಿ ಅವಳಿಗೆ ತೀವ್ರ ವೇದನೆಯಾಗುತ್ತದೆ. ರಾಮನನ್ನು ಕರೆತರದೆ ಭರತನ ಪ್ರೀತಿ ತನಗಿಲ್ಲ. ಭರತನಿಗೂ ಸುಖವಿಲ್ಲ ಎಂದು ಅವಳಿಗೆ ತಿಳಿಯು ತ್ತದೆ. ಅವಳಿಗೆ ಈಗ ಭರತನಿಗಾಗಿ ರಾಮಬೇಕು. ಅವನನ್ನು ಅರಸುತ್ತ ಹೊರಡುತ್ತಾಳೆ. ದೂರದಲ್ಲಿ ಒಂದು ಜ್ಯೋತಿ ಕಂಡಿತು. ಅದು ದಾವಾನಲ ವಾಗಿದ್ದರೂ ರಾಮನಂತೆ ಕಂಡಿತು. 'ಬಾ ನನ್ನ ರಾಮಯ್ಯ, ಭರತನಣ್ಣಯ್ಯ, ದಮ್ಮಯ್ಯ' ಎಂದು ಹಾರಿ ಮುನ್ನುಗ್ಗಿ ಆ ದಾವಾಗ್ನಿಯಲ್ಲಿ ಆಹುತಿಯಾಗುತ್ತಾಳೆ.

ಭರತನು ಹದಿನಾಲ್ಕು ವರ್ಷದ ಅವಧಿಯ ನಂತರ ರಾಮಾಗಮನವಾಗದಿರಲು ತವಕಗೊಂಡು ಯಜ್ಞವೇದಿಕೆ ಮುಂದೆ ಉಪವಾಸ ವ್ರತವನ್ನು ಕೈಗೊಂಡು ಕುಳಿತಿದ್ದಾಗ ಒಂದು ಅದ್ಭುತ ಘಟನೆ ನಡೆಯಿತು. ಅಗ್ನಿಕುಂಡದಿಂದ ಸುಂದರವಾದ ಸೂಕ್ಷ್ಮ ತೇಜಸ್ಸಿನ ಸುರಾಂಗನಾಮೂರ್ತಿ ಎದ್ದು ಭರತನನ್ನು ಕುರಿತು "ಇಂದೋ ನಾಳೆಯೋ ನಿನ್ನ ಅಗ್ರಜನುದಿಟವಾಗಿ ಬರುತ್ತಾನೆ" ಎನ್ನುತ್ತಾಳೆ. ಅವಳು ಯಾರು ಎಂಬುದು ತಿಳಿಯದೆ," ದೇವಿ, ನೀನಾರು ? ಬೆಂದ ಎದೆಗೆ ಅಮೃತಸುಖವನ್ನು ಎರೆಯುತ್ತಿರುವೆ" ಎಂದು ಕೇಳುತ್ತಾನೆ. "ಸದಾ ನಿನ್ನ ಸುಕ್ಷೇಮವನ್ನು ಚಿಂತಿಸುವ ಮಂಥರೆ ಅಲ್ಲದೆ ಇನ್ನಾರು" ಎಂದಳು. ಭರತನಿಗೆ ಆಶ್ಚರ್ಯ ಆದರೆ ಅವಳವಿಚಾರದಲ್ಲಿ ಇಷ್ಟು ದೀರ್ಘಕಾಲವಾದರೂ ಕಹಿಹೋಗಿಲ್ಲ. "ಪೂಜ್ಯೆ ಆ ಹೆಸರನ್ನೇ ಹೇಳಬೇಡ" ಎನ್ನುತ್ತಾನೆ. ಮಂಥರೆ ಹತಾಶಳಾಗಿ ಪುನಃ ಪ್ರಯತ್ನಿಸಿ ತಾನು ಪ್ರೇಮದ ಅಂತಃಕರಣವುಳ್ಳವಳು, ಅವನ ಅಭ್ಯುದಯಕ್ಕಾಗಿ ಹಾಗೆ ಮಾಡಿದವಳು. ನೋಡಲು ಗೂನಿ, ಆದರೂ ಅಂತರಾತ್ಮದ ಪುಣ್ಯಲಕ್ಷ್ಮಿ ಎನ್ನುತ್ತಾಳೆ. ಭರತನಿಗೆ ಇದು ಅರ್ಥವಾಗುವುದಿಲ್ಲ" ಅಂದಿನ ಮಂಥರೆ ಎಲ್ಲಿ, ಅಲ್ಲಿ ಕಾಣುವ ಭೈರವಿ ಎಲ್ಲಿ ಅದೇನು ತನ್ನ ನಿರಶನ ವ್ರತದಿಂದ ಉಂಟಾದ ಪಿತ್ತಚಿತ್ತದ ವಿಕರವೋ ಎಂದು ಕೇಳುತ್ತಾನೆ." "ನೀನೇ ನಿರ್ಧರಿಸು" ಎಂದು ಹೇಳಿ ಯಜ್ಞದ ಅಗ್ನಿಯಲ್ಲಿ ಮರೆಯಾಗುತ್ತಾಳೆ. ಮಂಥರೆ ಕಾಡುಗಿಚ್ಚಿನಲ್ಲಿ ಲಯವಾಗಿ ವಕ್ರಗೂನು ದೇಹವನ್ನು ಕಳೆದುಕೊಂಡು ಅಗ್ನಿ ಶರೀರಿಯಾಗಿ ಕಂಡಳು. ವಕ್ರದೇಹಿಯಾಗಿದ್ದವಳು ಮಂಗಳ ಶರೀರಿಯಾಗಿ ಪುಣ್ಯಲಕ್ಷ್ಮಿಯಾಗಿ ಪರಿವರ್ತನೆಗೊಂಡ ವ್ಯಕ್ತಿಯಾಗಿ ಮಂಥರೆ ಚಿತ್ರಿತವಾಗಿದ್ದಾಳೆ.

ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ

## ಗ್ರಂಥ ಸಹಾಯ


1. ಶ್ರೀರಾಮಾಯಣ ದರ್ಶನಂ—ಕುವೆಂಪು (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. 1971)
2. Kamba Ramayana—A. Story V. V. S. Aiyar
3. Kamban and His art—C. P. Venkatarama Iyer
4. Lectures on the Ramayana—Rt. Hon., V. S. Srinivasa-Sastry
5. Ramayana—C. Rajagopalachari
6. ರಾಮಕಥಾಸಾರ—ಶ್ರೀರಂಗಂ ಆಂಡವನ್ ಸ್ವಾಮಿಗಳು
7. ವಾಲ್ಮೀಕಿ ರಾಮಾಯಣ—ವೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿ

# ಶ್ರೀ ರಾಮಾಯಣದರ್ಶನಂ–ಮಲಯಾಳ ರಾಮಾಯಣಗಳು

ಮಹಾಕವಿ 'ವಾಲ್ಮೀಕಿ ರಾಮಾಯಣ'ದಲ್ಲಿನ ಮನೋಹರವಾದ ಕವಿತಾ ಸೌಂದರ್ಯವನ್ನು ಕಾಳಿದಾಸನ 'ರಘುವಂಶ' ಮಹಾಕಾವ್ಯದಲ್ಲೂ, ಭವಭೂತಿಯ 'ಜಾನಕೀಪರಿಣಯ' ಮತ್ತು 'ಉತ್ತರರಾಮಚರಿತ' ನಾಟಕಗಳಲ್ಲೂ, ಹಿಂದಿಯಲ್ಲಿ ತುಳಸೀದಾಸರ 'ರಾಮಚರಿತ ಮಾನಸ'ದಲ್ಲೂ, ತಮಿಳಿನಲ್ಲಿ 'ಕಂಬರಾಮಾಯಣ'ದಲ್ಲೂ ಮಲಯಾಳದಲ್ಲಿ ಎಳುತ್ತಚ್ಚನ್‌ರ 'ಅಧ್ಯಾತ್ಮರಾಮಾಯಣ'ದಲ್ಲೂ ಹಳೆಗನ್ನಡದಲ್ಲಿ 'ಪಂಪರಾಮಾಯಣ'ದಲ್ಲೂ, ಕಾಣಬಹುದು. ಈ ಇಪ್ಪತ್ತನೆಯ ಶತಮಾನದಲ್ಲಿ ಬರೆಯಲ್ಪಟ್ಟ ಅದ್ವಿತೀಯ ರಾಮಾಯಣ ಕೃತಿಗಳೆಂದರೆ ಮಲಯಾಳದಲ್ಲಿ ದಿ. ಮಹಾ ಕವಿ ವಳ್ಳತ್ತೋಳ್‌ರವರು ಬರೆದ 'ರಾಮಾಯಣ' ಮತ್ತು ಕನ್ನಡದಲ್ಲಿ ಮಹಾಕವಿ ಕುವೆಂಪುರವರು ಬರೆದ 'ಶ್ರೀ ರಾಮಾಯಣದರ್ಶನಂ'

ಮಹರ್ಷಿ ವಾಲ್ಮೀಕಿಯ ಅಮರಕಾವ್ಯದ ಕನ್ನಡರೂಪವಾದ ಕುವೆಂಪುರವರ ಶ್ರೀ ರಾಮಾಯಣದರ್ಶನಂ ಬಗ್ಗೆ ದಿವಂಗತ ರಾಷ್ಟ್ರಕವಿ ಮಂಜೇಶ್ವರಗೋವಿಂದ ಪೈ ರವರು "ಮಿಲ್ಟನ್‌ನ ಪ್ಯಾರಡೈಸ್ ಲಾಸ್ಟ್ (Paradise Lost), ಪ್ಯಾರಡೈಸ್ ರೀಗೇನ್ಡ್ Paradise regained) ಎಂಬ ಕಾವ್ಯಗಳ ನಂತರ ಯಾವಭಾಷೆಯಲ್ಲೇ ಆಗಲಿ ಈ ಪ್ರಮಾಣದ ಒಂದು ಮಹಾಕಾವ್ಯ ಬಂದದ್ದನ್ನು ಕಾಣೆ" ಎಂದು ಕೊಂಡಾಡಿದ್ದಾರೆ. ಪಂಪ ರನ್ನರ ವೃತ್ತಗಳನ್ನೂ, ಪಟುತ್ವವನ್ನೂ, ಹರಿಹರನ ರಗಳೆಯ ಸಿರಿಗಳ ಪ್ರವಾಹವನ್ನೂ, ಜನ್ನನ ಕಂದಗಳ ಲಾಲಿತ್ಯವನ್ನೂ, ನಾರಣಪ್ಪನ ಷಟ್ಪದಿಗಳ ಸರ್ವಭರತ್ವವನ್ನೂ, ರಾಘವಾಂಕನ ನಾಟಕೀಯತೆಯನ್ನೂ, ಲಕ್ಷ್ಮೀಶನ ನಾದಮಯತೆಯನ್ನೂ, ಒಳಗೊಂಡ ಮಹಾಛಂದಸ್ಸಿನಲ್ಲಿ ಬರೆಯಲಾಗಿರುವ ಈ ಕಾವ್ಯಶೈಲಿಯು, 'ರಾಮಾಯಣದರ್ಶನಂ' ಎಂಬ ಈ ಬೃಹತ್ ಕಾವ್ಯವನ್ನು ಆಧುನಿಕ ಯುಗದಲ್ಲಿ ಒಂದು ಮಹೋನ್ನತ ಕೃತಿಯನ್ನಾಗಿ ಮಾಡಿದೆ. ದಿವಂಗತ ಶ್ರೀ ಜಿ. ಪಿ. ರಾಜರತ್ನಂ ಹೇಳಿದಂತೆ, 'ಕುವೆಂಪು'ರವರ ಸ್ವಾತಂತ್ರ್ಯ, ಮಾಧುರ್ಯ ಸಂಯಮಗಳ, ಸಮನ್ವಯಗಳ ಪರಿಣತಿಯನ್ನು ಕಾವ್ಯದಲ್ಲಿ ನೋಡಬೇಕೆನಿಸಿದರೆ, ಶ್ರೀ ಕುವೆಂಪುರವರು ಸೃಜಿಸಿದ ಶ್ರೀ ರಾಮಾಯಣ ದರ್ಶನವನ್ನು ನೋಡಬೇಕು."

ವಾಲ್ಮೀಕಿ ಹಾಡಿದ ರಾಮಕಥೆಯನ್ನು ಕುವೆಂಪುರವರು ಮತ್ತೆ ಬಿತ್ತರಿಸುವಾಗ ಅವರ ಮನೋಧರ್ಮವು ಹೀಗಿದೆ.

**ವ್ಯೋಮಸಾಗರ ಸಮಂ ನಿನ್ನ ರಾಮಾಯಣಂ**
**ಗುರುವೆ, ದಸ ಋಷಿಯೆ, ಓ ವಾಲ್ಮೀಕಿ...**

**ತನು ನಿನ್ನದಾದೊಡಂ, ಚೈತನ್ಯಮೆನ್ನದೆನೆ,**
**ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ,**
**ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ**
**ಮೂರ್ತಿವೆತ್ತೊಂದಮರು!ಕಾವ್ಯದಾಕೃತಿಯಲ್ತೆ ?''**

ಪಾಶ್ಚಾತ್ಯ ಕವಿಗಳಾದ ಹೋಮರ್, ಷೇಕ್ಸ್‌ಪಿಯರ್, ಮಿಲ್ಟನ್, ಡಾಂಟೆ ಇವರುಗಳ ಪ್ರಭಾವವು 'ಶ್ರೀರಾಮಾಯಣದರ್ಶನಂ'ನಲ್ಲಿ ಕಾಣಬರುತ್ತದೆ. ಅಲ್ಲದೆ ಈ ಕಾವ್ಯದಲ್ಲಿ ಸಂಸ್ಕೃತ ಮತ್ತು ಕನ್ನಡದ ಕವಿಗಳ ಪ್ರಭಾವವನ್ನು ಕಾಣಬಹುದು. ಮಲಯಾಳ ರಾಮಾಯಣದಲ್ಲಾದರೆ, ಪಾಶ್ಚಾತ್ಯಕವಿಗಳ ಪ್ರಭಾವವು ಅಷ್ಟರಮಟ್ಟಿಗಿಲ್ಲದಿದ್ದರೂ ಸಂಸ್ಕೃತ, ತಮಿಳು ಮತ್ತು ಮಲಯಾಳದಲ್ಲಿನ ಕವಿಗಳ ಪ್ರಭಾವವನ್ನೇ ಹೆಚ್ಚಾಗಿ ಕಾಣಬಹುದು.

ರಾಷ್ಟ್ರಕವಿ ಕುವೆಂಪುರವರು 'ಶ್ರೀ ರಾಮಾಯಣದರ್ಶನಂ'ನಲ್ಲಿ ಅಲ್ಲಲ್ಲಿ ಮಾರ್ಪಾಡುಗಳನ್ನು ಮಾಡಿದ್ದಾರೆ. ಕೆಲ ಹೊಸ ಘಟನೆಗಳನ್ನು ಸೇರಿಸಿದ್ದಾರೆ. ಉದಾಹರಣೆಗೆ, ಶ್ರೀರಾಮನು ವನವಾಸಕ್ಕೆ ತೆರಳಲು ಒಂದು ವಿಧದಲ್ಲಿ ಕಾರಣಳಾದ ಮಂಥರೆಯು ಅಯೋಧ್ಯೆಯನ್ನು ತೊರೆದು ಹೋಗುತ್ತಾ ಕಾಡನ್ನು ಪ್ರವೇಶಿಸಿ,

**"ಓ ನನ್ನ ಭರತನಣ್ಣಯ್ಯ ! ಓ**
**ರಾಮಯ್ಯ ! ಹೇಳೆಲ್ಲಿರುವೆಯಯ್ಯ ? ದಮ್ಮಯ್ಯ !"**
**"ಓ ಭರತನಣ್ಣಯ್ಯ !**
**ಓ ನನ್ನ ರಾಮಯ್ಯ, ಬಾರಯ್ಯ ದಮ್ಮಯ್ಯ."**

ಎಂದು ಕೂಗಾಡುತ್ತ ಬೆಂಕಿಗೆ ಆಹುತಿಯಾಗುತ್ತಾಳೆ.

ಶ್ರೀರಾಮನು ವಾಲಿಯನ್ನು ಕೊಂದು ತಾನು ಮಾಡಿದ ಹೇಯಕೃತ್ಯಕ್ಕೆ ಪರಿತಪಿಸುತ್ತಾನೆ.

**''ಮನ್ನಿಸೆನ್ನಂ ಮಹಾ**
**ವೀರ ! ತಪ್ಪಿದೆನಯ್ಯೋ ಬ್ರಹ್ಮವರದಾಬಲೆಗೆ**
**ಸಿಲ್ಕಿ, ನಿನಗಾವರವೇ ಶಾಪಮಾದುದೋ ! ಕೀರ್ತಿ**
**ಮಸುಳಿಸುವವೋಲೆನ್ನನಡಗಿಸಿಕೋ ಮರೆವೊಕ್ಕನಾ**
**ಮರಕೇ ! ಮಾಡಿದ ತಪ್ಪನೊಪ್ಪಿಕೊಳ್ವುದೆ ಲೌಕಿಕದ**
**ಬೀರಕ್ಕೆ ಸಲ್ಲಕ್ಷಣಂ ........''**

ಶೂರ್ಪಣಖಿಯ ವೃತ್ತಾಂತವನ್ನೆಲ್ಲಾ ಕೇಳಿಯಾದ ಮೇಲೆ ಸೀತೆಯನ್ನು ಕದ್ದು ತರಲು ನಿಶ್ಚಯಿಸಿದ ರಾವಣನ ಇಂಗಿತವನ್ನು ಅರಿತ ಮಾರೀಚನು ಬಹುವಾಗಿ ಎಚ್ಚರಿಸುತ್ತಾನೆ.

**"...ಓ ಕೈತಸಿಯ ಕಂದಾ ! ರಾಮನ ಪರಾಕ್ರಮಮಂ**
**ತಾನೇಕೆ ? ಪಾವನ ಪತಿವ್ರತಾ ಹರಣಮದೆ, ಕೇಳ್**
**ನಿನ್ನ ಬಾಳ್ಗುರಿಯಿಕ್ಕುವುದು ಕಣಾ !"**

ಆಗ ರಾವಣನು

"ಶಿಶುಮತಿಗಳಿಗೆ
ಹೇಳಯ್ಯ, ನಿನ್ನ ಹದಿಬದೆಯತನದ ಹಿರಿಮೆಯ !
ಕಟ್ಟು ಕತೆಯೊಳಗಲ್ಲದೆಲ್ಲಿಹಳೊ ಪೃಥಿವಿಯಲಿ, ಪೇಳ್
ನಿನ್ನಾ ಪತಿವ್ರತಾ ಸ್ತ್ರೀ ?... .."
"...ವಶವಾಗದಿರ್ದವರನೊರ್ವರಂ
ಕಂಡೆನಿಲ್ಲಾಂ ?...........
ಕಂಡೆನಿಲ್ಲಾ ನೊರ್ವಳಂ, ನನಗೆ
ಮೆಚ್ಚಿ ವಶವಾಗದಿರ್ದಾ ಪವಿತ್ರಾಂಗಿಯಂ !
ಹದಿಬದೆಯರೆಂದು ಹೆಸರಾಂತ ಪೆಣ್ಮಣಿಗಳಂ
ಪರಿಕಿಸಿದೆನವರುಂ ಸುಲಭವಾದರಯ್, ಕಡೆಗೆ ಕೇಳ್
ಹದಿಬದೆಯರಿಹರೆಂಬ ನಂಬುಗೆ ಸತ್ತುದೆನ್ನೆದೆಗೆ"
"ರಾಮನಂ ನಿಸ್ತೇಜನಂ ಮಾಡೆ ಸೀತೆಯಂ
ತರ್ಪನದು ರಾಜಕೀಯ : ಧರ್ಮದ ವಿಷಯಮಲ್ತು"

ಎಂದು ಹೇಳುತ್ತಾನೆ. ಅದರಂತೆಯೇ ಮಲಯಾಳ ರಾಮಾಯಣಗಳಲ್ಲೂ ಮಲಯಾಳ ಕವಿಗಳು ಸಮಯೋಚಿತವಾಗಿ ಮಾರ್ಪಾಡುಗಳನ್ನು ಮಾಡಿದ್ದಾರೆ.

'ಶ್ರೀ ರಾಮಾಯಣದರ್ಶನಂ' ನಲ್ಲಿಂಬಂತೆ ಮಲಯಾಳಂ ರಾಮಾಯಣಗಳಲ್ಲೂ ಕೆಲವು ಪಾತ್ರಗಳಿಗೆ ಹೊಸ ರೂಪ, ಸ್ವತಂತ್ರ ವ್ಯಕ್ತಿತ್ವಗಳನ್ನು ಇತ್ತಿರುವುದನ್ನು ನಾವು ವ್ಯಕ್ತವಾಗಿ ಕಾಣುತ್ತೇವೆ. ಇಲ್ಲಿಯೂ ಅಗತ್ಯವಾದಾಗ ವರ್ಣನೆಯನ್ನು ವಿಸ್ತರಿಸಿಯೂ, ನಿರೂಪಣೆಯನ್ನು ಹೆಚ್ಚಿಸಿಯೂ, ಬೇಡದ ಕಡೆ ಕಥಾಸಾರವನ್ನು ಕೇವಲ ಕೆಲವು ಪಂಕ್ತಿಗಳು ಅಥವಾ ಪದಬಂಧಗಳಲ್ಲಿ ಸೆರೆ ಹಿಡಿದು ರಚಿಸಿದ್ದಾರೆ.

ಮಲಯಾಳದಲ್ಲಿ ಖ್ಯಾತಿವೆತ್ತ ರಾಮಾಯಣ ಕಾವ್ಯಗಳೆಂದರೆ, ಹನ್ನೆರಡನೆಯ ಶತಮಾನದಲ್ಲಿ ಬರೆದದ್ದೆಂದು ಹೇಳಲ್ಪಡುವ ಶ್ರೀ ವೀರರಾಮವರ್ಮ ಮಹಾರಾಜರ 'ರಾಮಚರಿತ ಪಾಟ್ಟು', ಹದಿನಾಲ್ಕನೆಯ ಶತಮಾನದಲ್ಲಿನ ನಿರಣಂ ಕವಿ ರಾಮ ಪಣಿಕ್ಕರ್‌ರ 'ಕಣ್ಣಶ್ಶರಾಮಾಯಣ', ಹದಿನೈದನೆಯ ಶತಮಾನದಲ್ಲಿನ 'ಪೂನಂ ನಂಬೂದಿರಿಯ' 'ರಾಮಾಯಣ ಚಂಪು', ಹದಿನಾರನೆಯ ಶತಮಾನದಲ್ಲಿನ ಎಳುತ್ತಚ್ಚನ್ ಬರೆದ 'ಅಧ್ಯಾತ್ಮ ರಾಮಾಯಣ' ಮತ್ತು 'ಉತ್ತರ ರಾಮಾಯಣ', ಹದಿನೇಳನೆಯ ಶತಮಾನದಲ್ಲಿನ ಕೇರಳ ವರ್ಮರಾಜ ಬರೆದ 'ರಾಮಾಯಣ' ಮತ್ತು ಇಪ್ಪತ್ತನೆಯ ಶತಮಾನದಲ್ಲಿನ ದಿವಂಗತ ಮಹಾಕವಿ ವಳ್ಳತ್ತೋಳ್ ಬರೆದ 'ರಾಮಾಯಣ.' ಇವುಗಳಲ್ಲದೆ, ಐಯ್ಯಪ್ಪಿಳ್ಳ ಆಶಾನ್‌ರವರ 'ರಾಮಕಥಾಪಾಟ್ಟು' ಕೊಟ್ಟಾರಕ್ಕಾರ ತುಂಬುರಾನ್ ಬರೆದ 'ರಾಮಾಯಣ ಆಟ್ಟಕಥ'ಗಳು ಪ್ರಸಿದ್ಧವಾದವು, ಮಲಯಾಳ ಕಾವ್ಯಗಳಾದ ಅಳಗತ್ತ ಪದ್ಮನಾಭ ಕುರುಪ್ ಬರೆದ 'ರಾಮಚಂದ್ರ ವಿಲಾಸ' ಕುಮಾರನ್ ಆಶಾನ್ ಬರೆದ 'ಚಿಂತಾವಿಷ್ಟಯಾಯ ಸೀತ' ಮತ್ತು 'ಬಾಲರಾಮಾಯಣ' ಮತ್ತು ದಿವಂಗತ ಮಹಾಕವಿ ವಳ್ಳತ್ತೋಳ್‌ರವರ 'ಕಿಳಿಕೊಂಜಲ್' ಮೊದಲಾದವೂ

ಸಹ ರಾಮಾಯಣದಲ್ಲಿನ ವಿಷಯಗಳನ್ನು ಪ್ರತಿಪಾದಿಸುತ್ತವೆ.

ಮಲಯಾಳದಲ್ಲಿನ ರಾಮಾಯಣ ಮಹಕಾವ್ಯಗಳ ವಿಷಯವಾಗಿ ದೊರಕಿರುವ ಮಾಹಿತಿಗಳನ್ನು ಸಂಗ್ರಹಿಸಿ ಈ ಕೆಳಗೆ ಕೊಡಲಾಗಿದೆ.

**ರಾಮಚರಿತ ಪಾಟ್ಟು**

ಈ ಮಹಾಕಾವ್ಯವು ಮೊತ್ತಮೊದಲಾಗಿ ಬರೆಯಲ್ಪಟ್ಟ ಮಲಯಾಳ ರಾಮಾಯಣ ಬೃಹತ್ಕಾವ್ಯವೆಂದು ಮಲಯಾಳ ಸಾಹಿತಿಗಳೂ ಸಂಶೋಧಕರೂ ಪ್ರಶಂಸಿಸಿದ್ದಾರೆ. ಈ ಮಹಾಕಾವ್ಯದ ಕೊನೆಯ ಹಾಡಿನಲ್ಲಿ 'ಶ್ರೀರಾಮನ್' ಎಂಬ ತೂಲಿಕಾನಾಮರ ಪ್ರಯೋಗವನ್ನು ಉಪಯೋಗಿಸಿರುವುದು ಕಂಡರೆ, ಇದರ ಕರ್ತೃವು ಕ್ರಿ. ಶ. 1195 ರಿಂದ 1208ರ ವರೆಗೆ ಮಣಿಕಂಠ ಎಂಬ ಬಿರುದು ಪಡೆದು ತಿರುವಾಂಕೂರನ್ನು ಆಳಿದ ಶ್ರೀ ವೀರರಾಮವರ್ಮ ಮಹಾರಾಜನಾಗಿರಬೇಕೆಂದು ಊಹಿಸಬೇಕಾಗಿದೆ 1814 ಹಾಡುಗಳಿರುವ ಒಂದು ಬೃಹತ್ಕಥೆಯಾದ ಈ ರಾಮಾಯಣದಲ್ಲಿ ಒಟ್ಟಿನಲ್ಲಿ 114 ಪರಿಚ್ಛೇದಗಳಿವೆ. ಒಂದೊಂದು ಪರಿಚ್ಛೇದದಲ್ಲೂ ಸಾಮಾನ್ಯವಾಗಿ 11 ಹಾಡುಗಳಿವೆ, ಈ ಪರಿಚ್ಛೇದಗಳನ್ನು ನಾನಾ ಬಗೆಯ ವೃತ್ತಗಳಲ್ಲಿ ಬರೆಯಲಾಗಿದೆ. ಒಟ್ಟಿನಲ್ಲಿ ಈ ಕಾವ್ಯದಲ್ಲಿ ಕವಿಯು 20 ವೃತ್ತಗಳಿಗಿಂತ ಹೆಚ್ಚು ಉಪಯೋಗಿಸಿದ ಹಾಗೆ ತೋರುವುದಿಲ್ಲ ಮಲಯಾಳ ಸಾಹಿತ್ಯದಲ್ಲಿ ಇಂದು ಕಾಡು ಬರುವ ಅನೇಕ ದ್ರಾವಿಡವೃತ್ತಗಳ ಪೂರ್ವರೂಪಗಳನ್ನು ಈ ಕಾವ್ಯದಲ್ಲಿ ಉಪಯೋಗಿಸಿರುವುದನ್ನು ಕಾಣಬಹುದು. ಈ ಕೃತಿಯಲ್ಲಿನ ಶೈಲಿಯು ಹಿಂದಿದ್ದ ನಾಯನಾರ್‌ಗಳು, ಆಳ್ವಾರ್‌ಗಳು ಬರೆದ ಶೈಲಿಯ ಅನುಕರಣೆಯಂತೆ ತೋರುತ್ತದೆ. ಅದುಮಾತ್ರವಲ್ಲ ಕ್ರಿ. ಶ. 1120 ರಿಂದ 1200ರವರೆಗೆ ದ್ರಾವಿಡದೇಶದಲ್ಲಿದ್ದ ತಮಿಳು ಕವಿಚಕ್ರವರ್ತಿಯಾದ ಕಂಬರ್ ಬರೆದ ರಾಮಾಯಣವನ್ನೂ ಅವರ ಭಾಷಾ ಶೈಲಿಯನ್ನೂ ಈ ಕೃತಿಯಲ್ಲಿ ಅವಲಂಬಿಸಿರುವುದಾಗಿ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಮಹಾವಿ ಕಂಬರು ಕೇರಳಕ್ಕೆ ಬಂದು ಅನೇಕ ಪಂಡಿತ ಸದಸ್ಸುಗಳಲ್ಲಿ ಭಾಗವಹಿಸಿದ್ದರೆಂದು ಹೇಳುವುದುಂಟು. 'ರಾಮಚರಿತ'ದ ಕರ್ತೃವು ಆದಿಕವಿ ವಾಲ್ಮೀಕಿಯನ್ನು ಆದ್ಯಂತವಾಗಿ ಅನುಸರಿಸಿಯೇ ಬರೆದಿರುವುದಾದರೂ ಅಲ್ಲಲ್ಲಿ ಕಥಾರೂಪದಲ್ಲಿ ತನ್ನ ಮನೋಧರ್ಮವನ್ನೂ ಮುಕ್ತಹಸ್ತದಿಂದ ಹರಿಸಿರುವುದುಂಟು. ರಾಮಾಯಣದ ಕಥೆಯನ್ನು ಈ ಮಹಾಕಾವ್ಯದಲ್ಲಿ ಯಥಾವಿಧಿ ಪೂರ್ಣವಾಗಿ ಪ್ರತಿಪಾದಿಸಲು ಇಷ್ಟವಿಲ್ಲದೆ ಕವಿಯು ಹೆಚ್ಚಾಗಿ ಯುದ್ಧಕಾಂಡವನ್ನೇ ಪ್ರತಿಪಾದಿಸಿರುವುದಾದರೂ ಆದಿಕವಿಯ ಸುಂದರಕಾಂಡ ಅರಣ್ಯ ಕಾಂಡಗಳನ್ನೂ ಸ್ವಲ್ಪಮಟ್ಟಿಗೆ ಆಶ್ರಯಿಸಿ ಅದರಲ್ಲಿನ ಹಿಂದಿನ ಕಥೆಗಳನ್ನು ಅಲ್ಲಲ್ಲಿ ಹೇಳಿರುವುದುಂಟು. ಇದರಲ್ಲಿ ಯುದ್ಧಕಾಂಡವನ್ನು ಹೆಚ್ಚಾಗಿ ಪ್ರತಿಪಾದಿಸಿರುವುದಕ್ಕೆ ಒಂದು ಕಾರಣವೇನೆಂದರೆ ಇದರ ಕರ್ತೃವಾದ ತಿರುವಾಂಕೂರು ಮಹಾರಾಜರು

ಇದನ್ನು ಓದಿ ತಿಳಿಯಬಲ್ಲ ಹಾಗೂ ಅರಿಯಬಲ್ಲ ತಮ್ಮ ಸೈನಿಕರಿಗೆ ಹೃದಯೋತ್ಸೇಜನವನ್ನು ಕೊಡಲೆಂದು ಬರೆದಿರುವುದಾಗಿ ಹೇಳುವುದುಂಟು. ಇದರ ಕರ್ತೃವು ಆದಿಕವಿ ವಾಲ್ಮೀಕಿಯ ರಾಮಾಯಣದಲ್ಲಿಲ್ಲದ ಕೆಲವನ್ನು ಇಲ್ಲಿ ಪ್ರತಿಪಾದಿಸಿರುವುದುಂಟು. ಉದಾಹರಣೆಗೆ ರಾವಣನು ಪಂಚವಟಿಗೆ ಭಿಕ್ಷುಕನ ವೇಷದಲ್ಲಿ ಬಂದು ಸೀತೆಯನ್ನು ಭರ್ತೃಸನ್ನಿಧಿಗೆ ಕರೆದೊಯ್ಯುತ್ತೇನೆಂದು ಹೇಳುತ್ತಾನೆ. ಆಗ ಶೂರ್ಪಣಖಿಯು ಅಲ್ಲಿ ಬಂದು ಸೀತೆಯನ್ನು ಕೊಂದುಹಾಕುವುದಾಗಿ ಹೆದರಿಸುತ್ತಾಳೆ. ಆಗ ರಾವಣನು ನಡುಗುತ್ತಾ ನಿಂತಿರುವ ಸೀತೆಯನ್ನು ಕರೆದು ತನ್ನ ರಥವನ್ನು ಹತ್ತಲು ಹೇಳುತ್ತಾನೆ. ಇದು ಮೂಲದಲ್ಲಿಲ್ಲ. ಶ್ರೀರಾಮ ಪಟ್ಟಾಭಿಷೇಕದ ಸಮಯದಲ್ಲಿ ನಾರದಮಹರ್ಷಿಯು ಒಂದು ದೀರ್ಘವಾದ ವಿಷ್ಣುಸ್ತೋತ್ರಗಾನವನ್ನು ಆಲಾಪಿಸಿರುವುದುಂಟು. ಇದು ಮೂಲದಲ್ಲಿಲ್ಲ. ಮತ್ತೆ ಈ ಮಹಾಕಾವ್ಯದಲ್ಲಿರುವ ಆದಿತ್ಯಹೃದಯವು ಮೂಲದಲ್ಲಿರುವುದಕ್ಕಿಂತ ದೀರ್ಘವಾಗಿದೆ. ಈ ಮಹಾಕಾವ್ಯದಲ್ಲಿ ಮನೋಹರವಾದ ವರ್ಣನೆಗಳು ಬಹಳವಾಗಿವೆ ಈ ಕಾವ್ಯದಲ್ಲಿ ಅಳವಡಿಸಿರುವ ರಸನಿಷ್ಠೆ, ಅಲಂಕಾರ ಚಾತುರ್ಯ ಮೊದಲಾದ ವಿಷಯಗಳಲ್ಲಿ ಕವಿಯು ಪ್ರಶಂಸನಾರ್ಹನು. ಇದನ್ನುಓದಿದವರಿಗೆ ಕವಿಯು ತಮಿಳು, ಸಂಸ್ಕೃತ, ಮಲಯಾಳ ಎಂಬೀ ಭಾಷೆಗಳಲ್ಲಿ ಉನ್ನತ ಪಂಡಿತನಾಗಿದ್ದನೆಂದು ಮಾತ್ರವಲ್ಲ. ಒಳ್ಳೆಯ ಅಭಿರುಚಿಯ ಮನೋಧರ್ಮವನ್ನುಳ್ಳವನೆಂದು ಯಾರುಬೇಕಾದರೂ ಹೇಳಬಹುದು. ಈ ಕಾವ್ಯವನ್ನು ಚೆನ್ನಾಗಿ ತಿಳಿಯಬೇಕಾದರೆ ಹಳೆಯ ತಮಿಳು ಭಾಷೆಯನ್ನು ಮಲಯಾಳ ಭಾಷೆಯನ್ನು ತಿಳಿದವರಿಗೆ ಮಾತ್ರ ಸಾಧ್ಯವೆಂದು ಮಲಯಾಳ ಸಾಹಿತಿಗಳು ಅಭಿಪ್ರಾಯಪಟ್ಟಿರುವುದುಂಟು. ಈ ಕವಿಯ ಅಸದೃಶವಾದ ಪದಘಟನಾ ಪಟುತ್ವವು ಓದುವವರನ್ನು ಆನಂದಪರವಶರನ್ನಾಗಿ ಮಾಡುತ್ತದೆ. ಈ ಕವಿಯನ್ನು ಮಲಯಾಳದ 'Chaucer' ಕವಿ ಎಂದು ಉಪಮಿಸುವುದುಂಟು. ಈ ಕವಿಯು ದೊಡ್ಡ ವಿಷ್ಣುಭಕ್ತನಾಗಿದ್ದನೆಂದು ಆತನ ಕಾವ್ಯದ ಅನೇಕ ಭಾಗಗಳಿಂದ ವ್ಯಕ್ತವಾಗಿ ತಿಳಿಯಬಹುದು. ಸಾಹಿತ್ಯರಸಿಕರಿಗೂ ಶಬ್ದಾಗಮ ಕಜ್ಞರಿಗೂ ಇದೊಂದು ಉತ್ತಮ ಕಾವ್ಯವು.

**ಕಣ್ಣಶ್ಶ ರಾಮಾಯಣ** : ಕೇರಳದಲ್ಲಿ ಸುಮಾರು ಕ್ರಿ.ಶ. 1350 ರಿಂದ 1450ರ ವರೆಗೆ ಇದ್ದವರೆಂದು ಹೇಳಲ್ಪಡುವ 'ಭಗವದ್ಗೀತೆ'ಯನ್ನು ಬರೆದ ಮಾಧವ ಪಣಿಕ್ಕರ್, 'ಭಾರತ ಮೂಲ' (ಅಥವಾ ಮಹಾಭಾರತ) ವನ್ನು ಬರೆದ ಶಂಕರ ಪಣಿಕ್ಕರ್ ಹಾಗೂ'ರಾಮಾಯಣ'ವನ್ನು ಬರದ ರಾಮಪಣಿಕ್ಕರ್ ನಿರಣಂ ಕವಿಗಳೆಂದು ಹೆಸರೆತ್ತಿದ್ದವರು. (ನಿರಣಂ ಎಂಬುದು ತಿರುವಲ್ಲಾ ತಾಲ್ಲೂಕಿಗೆ ಸೇರಿದ ಒಂದು ಊರು). ರಾಮಪಣಿಕ್ಕರ್ ಬರೆದ ರಾಮಾಯಣವನ್ನೇ'ಕಣ್ಣಶ್ಶ ರಾಮಾಯಣ'ಎಂದು ಹೇಳುವುದು. ರಾಮಪಣಿಕ್ಕರ್‌ನ ತಾಯಿತಂದೆಯ ಹೆಸರುಕಣ್ಣಶ್ಶನ್ (ಕರುಣಶ್ಶನ್) ಎಂದಾಗಿತ್ತು. ಆತನು ಬಹು ದೊಡ್ಡ ಸಂಸ್ಕೃತ ಪಂಡಿತನೂ ಕವೀಶ್ವರನೂ

ಆಗಿದ್ದನು. ಆತನಿಗೆ ಎರಡು ಗಂಡು ಮಕ್ಕಳು ಮತ್ತು ಮೂರು ಹೆಣ್ಣುಮಕ್ಕಳಿದ್ದರು. ಗಂಡುಮಕ್ಕಳು ಮಾಧವನ್‌ಪಣಿಕ್ಕರ್ ಮತ್ತು ಶಂಕರಪಣಿಕ್ಕಾರ್ ಆಗಿದ್ದರು. ರಾಮಪಣಿಕ್ಕರ್ ಕೊನೆಯ ಮಗಳ ಮಗನಾಗಿದ್ದನು. ರಾಮಪಣಿಕ್ಕಾರ್‌ನ ಸೋದರ ಮಾವಂದಿರೂ ಮಾತಾಮಹನಂತೆಯೇ ಉದ್ದಾಮಪಂಡಿತರಾಗಿದ್ದರು. ಈ ರಾಮಯಣ ಕೃತಿಯಂತೆ ವಿಶಿಷ್ಟವೂ ವಿಶ್ವಾಕರ್ಷಕವೂ ಆದ ಒಂದು ಕೃತಿ ನಿರಣಂ ಕವಿಗಳ ಕೃತಿಗಳಲ್ಲಿ ಮತ್ತೊಂದಿಲ್ಲವೆಂಬುದು ನಿರ್ವಿವಾದವಾದುದು. ಈ ಕೃತಿಯು ಅಮೃತಾನುಭವವನ್ನುಂಟುಮಾಡುವ ಒಂದು ಕೃತಿಯು. ಅದರ ಒಂದೊಂದು ಪದ್ಯದಲ್ಲೂ ಕಂಡುಬರುವ ಶಬ್ದಸುಖವೂ, ಅರ್ಥಚಮತ್ಕಾರವೂ, ಯಾವುದೇ ಸಹೃದಯನನ್ನೂ ಆನಂದಪರವಶನನ್ನಾಗಿ ಮಾಡುತ್ತದೆ. ಈ ರಾಮಾಯಣ ಕೃತಿಯು ಆತನವೇ ಎಂದು ಯಾರು ಬೇಕಾದರೂ ಹೇಳಬಹುದು. ವಾಲ್ಮೀಕಿ ರಾಮಾಯಣವನ್ನೇ ಕವಿಯು ಆಶ್ರಯಿಸಿರುವುದಾದರೂ ಅದನ್ನು ಭಾಷಾಂತರ ಮಾಡುವಾಗ ಅಭಿನಂದನಾರ್ಹವಾದ ಕೆಲವು ಸ್ವಾತಂತ್ರ್ಯಗಳನ್ನು ಪ್ರದರ್ಶಿಸಿರುವುದುಂಟು. ಮೂಲದಲ್ಲಿನ ಆಶ್ರಯಗಳನ್ನು ರಸಪುಷ್ಟಿಗಾಗಿ ಸಂಕುಚಿತವಾಗಿ ಮಾಡಬೇಕಾದೆಡೆಗಳಲ್ಲಿ ಸಂಕುಚಿಸಿಯೂ, ವಿಕಸನ ಮಾಡಬೇಕಾದೆಡೆ ವಿಕಸಿಸಿಯೂ, ಮಾಡಲೇಬೇಕೆನ್ನುವುದು ಬಹುಶಃ ಆತನ ನಿಯಮವಿರಬಹುದು. ಆತನ ಕಾವ್ಯದಲ್ಲಿ ಈ ವಿಧಾನವನ್ನು ಕಾಣಬಹುದು.

ರಾಮಾಯಣ ಚಂಪು : ಪೂನಂ ನಂಬೂದಿರಿ ಎಂಬ ಮಹಾಕವಿಯು ಕಲ್ಲಿಕೋಟೆಯಲ್ಲಿನ ಮಾನವಿಕ್ರಮರಾಜರ ಸದಸ್ಸಿನಲ್ಲಿ ಒಬ್ಬನಾಗಿದ್ದನು. ಈತನಿದ್ದ ಕಾಲ ಕ್ರಿ.ಶ. 1400ರಿಂದ 1500ರ ವರೆಗಿನ ಕಾಲವಾಗಿರಬೇಕೆಂದು ಅಂದಾಜುಮಾಡಲಾಗಿದೆ. ಈತನು ಬರೆದ ರಾಮಾಯಣವು ಚಂಪುನಲ್ಲಿದೆ. ಇದರಲ್ಲಿ ರಾಮನ ಉದ್ಭವ, ರಾಮಾವತಾರ, ತಾಟಕವಧೆ, ಅಹಲ್ಯಾಮೋಕ್ಷ, ಸೀತಾಸ್ವಯಂವರ, ಪರಶುರಾಮವಿಜಯ, ಪಾದುಕಾಪಟ್ಟಾಭಿಷೇಕ. ಖರದೂಷಣವಧೆ, ಸುಗ್ರೀವಸಖ್ಯ, ವಾಲಿವಧೆ, ಉದ್ಯಾನಪ್ರವೇಶ, ಮುದ್ರಮೋದಿರ, ಲಂಕಾಪ್ರವೇಶ, ರಾವಣವಧೆ, ಅಗ್ನಿಪ್ರವೇಶ, ಅಯೋಧ್ಯಾಪ್ರವೇಶ, ಪಟ್ಟಾಭಿಷೇಕ, ಸೀತಾಪರಿತ್ಯಾಗ, ಅಶ್ವಮೇಧ, ಸ್ವರ್ಗಾರೋಹಣ, ಮುಂತಾದ ಇಪ್ಪತ್ತು ಭಾಗಗಳಿವೆ. ವಾಲ್ಮೀಕಿರಾಮಾಯಣವನ್ನೇ ಕವಿಯು ಆಮೂಲಾಗ್ರವಾಗಿ ಅವಲಂಬಿಸಿರುವುದಾದರೂ ಸಹ ಕಥೆಯನ್ನು ಸಂಕುಚಿಸಬೇಕಾದ ಸ್ಥಳದಲ್ಲಿ ಸಂಕುಚಿಸಿಯೂ ವಿಕಾಸಗೊಳಿಸಬೇಕಾದ ಸ್ಥಳದಲ್ಲಿ ವಿಕಾಸಮಾಡಿಯೂ, ಸಮಯೋಚಿತ ಬದಲಾವಣೆಗಳನ್ನು ಮಾಡಿರುವುದುಂಟು. ಉತ್ತರರಾಮಚರಿತೆ, ಆಶ್ಚರ್ಯಚೂಡಾಮಣಿ ಮುಂತಾದ ಇತರ ಗ್ರಂಥಗಳಿಂದ ಇತಿವೃತ್ತಾಂತಗಳನ್ನು ತೆಗೆದುಕೊಂಡು ಉತ್ತಮಗೊಳಿಸಿಯೂ ಹೊಳಪಿತ್ತೂ, ಈ ಕೃತಿಯಲ್ಲಿ ಉಪಯೋಗಿಸಿರುವುದುಂಟು, ದಶರಥನಿಗೆ ಬಂದ ಶಾಪವನ್ನು ವಾಲ್ಮೀಕಿ ಹೇಳುವುದು ಅಯೋಧ್ಯಾಕಾಂಡದಲ್ಲಾದರೆ ಇದರಲ್ಲಿ ಅದನ್ನು ರಾಮಾವತಾರದಲ್ಲೇ ಹೇಳುತ್ತಾನೆ. ಆದಿಕಾವ್ಯದಲ್ಲಿ

ಶ್ರೀರಾಮನ ಯಾಗಾಶ್ವವನ್ನು ಸಂರಕ್ಷಿಸುವುದು ಶತ್ರುಘ್ನ, ಆದರೆ ಇಲ್ಲಿ ಲಕ್ಷ್ಮಣನ ಮಗನಾದ ಚಂದ್ರಕೇತು. ಅಶ್ವವನ್ನು ಸಂರಕ್ಷಿಸಿ ಹಿಂಬಾಲಿಸುವುದಲ್ಲದೆ ಲವನೊಂದಿಗೆ ಯುದ್ಧ ಮಾಡುತ್ತಾನೆ.

**ಅಧ್ಯಾತ್ಮ ರಾಮಾಯಣ ಮತ್ತು ಉತ್ತರ ರಾಮಾಯಣ :** ಅಧ್ಯಾತ್ಮ ರಾಮಾಯಣವನ್ನು ಬರೆದ ಎಳುತ್ತಚ್ಛನ್ 16ನೆಯ ಶತಮಾನದಲ್ಲಾಗಿರಬೇಕೆಂದು ಹೇಳುತ್ತಾರೆ. ಈತನು ಅಧ್ಯಾತ್ಮರಾಮಾಯಣ ಹಾಗೂ ಉತ್ತರರಾಮಾಯಣವನ್ನು ಬರೆದನಾದರೂ ಈತನು ಪ್ರಸಿದ್ಧಿ ಪಡೆದದ್ದು ಅಧ್ಯಾತ್ಮರಾಮಾಯಣದ ಕಾರಣ ದಿಂದಾಗಿತ್ತು. ಎಳುತ್ತಚ್ಛನ್ ದಂಪತಿಗಳಿಗೆ ಮಕ್ಕಳಿರಲಿಲ್ಲವಾದ ಕಾರಣದಿಂದಾಗಿ ಪತ್ನಿಯ ವಿಯೋಗದನಂತರ ಈತನು ಸನ್ಯಾಸವನ್ನು ಸ್ವೀಕರಿಸಿದನೆಂದು ಹೇಳುತ್ತಾರೆ.

ಅಧ್ಯಾತ್ಮರಾಮಾಯಣವು ಅಷ್ಟಾದಶ ಮಹಾಪುರಾಣಗಳಲ್ಲಿ ಒಂದಾದ ಬ್ರಹ್ಮಾಂಡಪುರಾಣದಲ್ಲಿ ಸೇರಿದ್ದೆಂದು ಹೇಳುತ್ತಾರೆ. ಮೂಲದಿಂದ ಅನುವಾದ ಮಾಡಿದಾಗ ಅದರಲ್ಲಿನ ಉತ್ತಮ ಭಾಗಗಳನ್ನು ಬಿಡದೆಯೂ. ಬೇಡವಾದ ಭಾಗಗಳನ್ನುಬಿಟ್ಟೂ. ಸಂಕುಚಿಸಿಯೂ ವಿಕಸಿಸಿಯೂ, ಬರೆದಿರುವುದುಂಟು. ಈ ಗ್ರಂಥ ದಲ್ಲಿ ವಾಲ್ಮೀಕಿ ರಾಮಾಯಣ, ರಘುವಂಶ, ಬಸಲನ ಚಂಪು, ಕಣ್ಣಶ್ಯ ರಾಮಾಯಣ ಮೊದಲಾದ ಹಿಂದಿನ ಕವಿಗಳ ಕಾವ್ಯಗಳಿಗೆ ಮನ್ನಣೆಯನ್ನಿತ್ತು. ಭಕ್ತಿರಸ; ಶೃಂಗಾರರಸ. ಹಾಸ್ಯರಸಗಳನ್ನು ಯಥೋಚಿತವಾಗಿ ತುಂಬಿ ಒಂದು ಸ್ವತಂತ್ರಕಾವ್ಯದಂತೆ ಬರೆದಿರು ವುದುಂಟು. ಅದರ ಆ ಶೈಲಿ ಆತನಿಗೆ ಮಾತ್ರ ಸ್ವತಃಸಿದ್ಧವಾದ ಒಂದೆನ್ನಬಹುದು. ಮತ್ತಾರ ಶೈಲಿಯನ್ನೂ ಆತನು ಅನುಕರಿಸಿಲ್ಲ. ಇದನ್ನು ಇಂದು ಕೇರಳದಲ್ಲಿ ಮಲಯಾಳಿಗಳು ಸಾಧಾರಣವಾಗಿ ಪಾರಾಯಣರಾಮಾಯಣವಾಗಿ ಕಾಣುತ್ತಾರೆ.

ಉತ್ತರ ರಾಮಾಯಣ ಬರೆಯಲು ಅನುಕರಿಸಿದ ಮೂಲಗ್ರಂಥ ಅಧ್ಯಾತ್ಮ ರಾಮಾಯಣವಲ್ಲ ವಾಲ್ಮೀಕಿ ರಾಮಾಯಣವೇ ಎನ್ನುವುದರಲ್ಲಿ ಸಂಶಯವಿಲ್ಲ. ಯಾವ ವಿಷಯವನ್ನೂ ಬಿಟ್ಟುಕೊಡದೆ ಕಥೆಯನ್ನು ಸಂಕ್ಷೇಪಿಸುವುದರಲ್ಲಿ ಆತನು ಅದ್ವಿತೀಯನು. ವಾಲ್ಮೀಕಿ ಬರೆದ ನೂರಿಪ್ಪತ್ತು ಸರ್ಗಗಳನ್ನು ಆತನು ಅನತಿ ದೀರ್ಘವಾದ ಮೂರು ಅಧ್ಯಾಯಗಳಲ್ಲಿ ಅನಾಯಾಸವಾಗಿ ಅಂತರ್ಭವಿಸಿದ್ದಾನೆ. ಪಟ್ಟಾಭಿಷೇಕ ಕಳೆದ ನಂತರ ಶ್ರೀರಾಮನನ್ನು ಕಾಣಲು ಯಾವ ಯಾವ ಮಹರ್ಷಿಗಳು ಬಂದರೆಂಬುದನ್ನು ತಿಳಿಸುವಾಗ ವಾಲ್ಮೀಕಿ ರಾಮಾಯಣದಲ್ಲಿ ಹೇಳಿರುವುದನ್ನೇ ಅನುಸರಿಸುತ್ತಾನೆ. ಆ ವಿವರಗಳು ಯಾವುದೂ ಅಧ್ಯಾತ್ಮ ರಾಮಾಯಣದಲ್ಲಿಲ್ಲ. ಎಳುತ್ತಚ್ಛನ್ ಬರೆದ ವೃತ್ತಗಳು ದ್ರಾವಿಡ ವೃತ್ತಗಳು. ಎಳುತ್ತಚ್ಛನ್ ಕೃತಿಗಳು ಭಕ್ತಿರಸ ಪ್ರಧಾನವೂ ಕರುಣರಸಪ್ರಧಾನವೂ ಆಗಿವೆ. ಆತನ ಭಾಷೆಯಲ್ಲಿ ಮಲಯಾಳ ಮತ್ತು ಸಂಸ್ಕೃತವನ್ನು ಒಂದು ಹದದಲ್ಲಿ ಸಮ್ಮಿಶ್ರಮಾಡಲಾಗಿದೆ. ಕೆಲವು ಕಡೆ ಪೂರ್ಣವಾಗಿ ಸಂಸ್ಕೃತದಲ್ಲೇ ಬರೆದಿರುವುದುಂಟು.

**ಕೇರಳವರ್ಮ ರಾಮಾಯಣ**

ಕ್ರಿ. ಶ. 1679ರಿಂದ 1699ರವರೆಗೆ ತಿರುವಾಂಕೂರ್‌ನಲ್ಲಿ ಯುವರಾಜರಾಗಿದ್ದ ಕೊಟ್ಟಯಂ ಕೇರಳವರ್ಮ ಬರೆದ ರಾಮಾಯಣದಲ್ಲಿ ವಾಲ್ಮೀಕಿ ರಾಮಾಯಣದ ಮೊದಲನೆಯ ಐದುಕಾಂಡಗಳು ಮಾತ್ರವೇ ಕವಿಯು ಭಾಷಾಂತರಿಸಿರುವುದು. ಇದಕ್ಕಿಂತ ಮುಂಚೆ ನಿರಣಂ ರಾಮಪಣಿಕ್ಕರ್ ಮಾತ್ರವೇ ವಾಲ್ಮೀಕಿ ರಾಮಾಯಣ ವನ್ನು ಭಾಷಾಂತರಿಸಿದ್ದು. ಯುವರಾಜರ ಭಾಷೆಯು ಮೂಢರಿಗೂ ತಿಳಿಯುವಂತೆ ಸರಳವಾಗಿಯೂ ಪ್ರಸನ್ನವಾಗಿಯೂ ಇದೆ. ಮೂಲದಲ್ಲಿನ ಯಾವ ವಿಷಯವನ್ನೂ ಬಿಡದೆ ಕವಿ ವಾಲ್ಮೀಕಿಯ ಕಾವ್ಯವನ್ನು ಅತ್ಯಂತ ಮನೋಹರವಾಗಿ ಅದ್ವಿತೀಯವಾಗಿ ಭಾಷಾಂತರಿಸಿದ್ದಾನೆ. ಆತನು ಪಾತಾಳ ರಾಮಾಯಣ(ಅಹಿರಾವಣ-ಮಹಿರಾವಣ)ವನ್ನು ಬರೆದಿರುವುದುಂಟು.

**ಮಹಾಕವಿ ವಳ್ಳತ್ತೋಳ್‌ರವರ ರಾಮಾಯಣ**

ಮಹಾಕವಿ ವಳ್ಳತ್ತೋಳ್ (1879_1958) ನಾರಾಯಣ ಮೆನೋನ್ ('ವಳ್ಳತ್ತೋಳ್' ಎಂಬ ಹೆಸರಿನಲ್ಲಿ ಪ್ರಖ್ಯಾತರಾದವರು.) ಪ್ರಾರಂಭದಲ್ಲಿ ಒಬ್ಬ ಕವಿಯೆಂದು ಮಾತ್ರ ತಿಳಿಯಲ್ಪಟ್ಟಿದ್ದರೂ ಸಹ, ಅನಂತರ ಕಥಕ್ಕಳಿಯ ಪುನರುದ್ಧಾರ ನಡೆಸಿಯೂ 'ಕೇರಳ ಕಲಾ ಮಂಡಲಂ'ವನ್ನು ಸ್ಥಾಪಿಸಿಯೂ, ದೇಶೀಯ ಪ್ರಶಸ್ತಿಗೆ ಪಾತ್ರರಾದರು. ಅವರ ಕವಿ ಪ್ರತಿಭೆಗೆ ಪರರಾಜ್ಯಗಳಲ್ಲೂ ಮನ್ನಣೆಯಿತ್ತು, ಕುಂಜಕುಟ್ಟನ್ ತಂಬುರಾನ್ ಬರೆದ ಮಹಾಭಾರತ ಅನುವಾದವನ್ನು ಓದಿದಾಗ ಅವರಿಗೆ ತಾವೂ ಇಂತಹ ಒಂದು ಬೃಹದ್ಗ್ರಂಥವನ್ನು ಬರೆಯಬೇಕೆಂಬ ಆಸೆ ಯುಂಟಾಯಿತು. ಈ ಪ್ರೇರಣೆಯಿಂದಲೇ ವಾಲ್ಮೀಕಿ ರಾಮಾಯಣವನ್ನು ತರ್ಜುಮೆ ಮಾಡಲು ಪ್ರಾರಂಭಿಸಿ ಅವರು ಸುಮಾರು ಇಪ್ಪತ್ತಮೂರು ತಿಂಗಳುಗಳು ತೆಗೆದುಕೊಂಡರು. 1909ರಲ್ಲಿ ಇವರ 31ನೆಯ ವರ್ಷದಲ್ಲಿ ರಾಮಾಯಣವು ಪುಸ್ತಕರೂಪದಲ್ಲಿ ಪ್ರಕಟಗೊಂಡಿತು. ಯುವ ಕವಿಯಾದ ವಳ್ಳತ್ತೋಳ್‌ರ ಕವಿತ್ವ ಕಲೆಯ ಒಂದು ಅಮೂಲ್ಯವಾದ ಕೀರ್ತಿಮುದ್ರೆಯಾಗಿತ್ತದು.

ಭಾರತದಲ್ಲಿ ನಿರಕ್ಷರರಾದ ಲಕ್ಷಾಂತರ ಜನರಿಗೆ ರಾಮಾಯಣವನ್ನು ಪರಿಚಯ ಮಾಡಿಕೊಟ್ಟ ಸೂರದಾಸ್, ತುಳಸೀದಾಸ್, ತುಕಾರಾಂ, ಕಂಬರ್, ಫಕೀರ್ ಮೋಹನ್ ಸೇನಾಪತಿ, ಮಧುಸೂದನ ದತ್ತ ಮುಂತಾದ ಕೇರಳೀಯರಲ್ಲದ ಕವಿಗಳ ಸಾಹಿತ್ಯ ಸೇವೆ ಸ್ಮರಣೀಯವಾದದ್ದು, ಅಪೂರ್ವವಾದದ್ದು. ಆದರೂ ಸಹ ಮೂಲಕೃತಿಯ ಸರಿಯಾದ ಒಂದು ತರ್ಜುಮೆಯನ್ನು ಮಲಯಾಳ ಸಾಹಿತ್ಯಕ್ಕೆ ಕೊಡುಗೆಯಾಗಿ ಇತ್ತ ಮಹಾಕವಿ ವಳ್ಳತ್ತೋಳ್ ಬಂಗಾಳಿಯಲ್ಲಿ ಹೇಮಚಂದ್ರ ವಿದ್ಯಾರತ್ನ, ತಮಿಳಿನಲ್ಲಿ ಶ್ರೀನಿವಾಸ ಅಯ್ಯಂಗಾರ್ ಇವರುಗಳಂತೆ ತಾವೂ ಅತಿ ಮಹತ್ತರ ಅದ್ವಿತೀಯವಾದ ಒಂದು

ಪೌರಾಣಿಕ ಗ್ರಂಥವನ್ನು ನಿರ್ದೋಷವಾಗಿಯೂ, ರಮಣೀಯವಾಗಿಯೂ ತರ್ಜುಮೆ ಮಾಡಿ ಅನುಗ್ರಹೀತರಾಗಿ ಸಾಹಿತ್ಯಪ್ರಪಂಚದಲ್ಲಿ ಒಂದು ಮಹತ್ತಾದ ಸೇವೆಯನ್ನು ಸಲ್ಲಿಸಿದಾರೆ. ಈ ಬೃಹದ್ಗ್ರಂಥವನ್ನು ಪ್ರಕಟಿಸಿ ಸುಮಾರು 75 ವರ್ಷಗಳಾಗುತ್ತ ಬಂದಿವೆ.

ಎಂ. ಎಸ್. ಲಕ್ಷ್ಮಣಾಚಾರ್

# ಶ್ರೀರಾಮಾಯಣ ದರ್ಶನಂ—ತೆಲುಗು ರಾಮಾಯಣ

ಶ್ರೀರಾಮಾಯಣ ದರ್ಶನದ ಸಮಗ್ರ ಅಧ್ಯಯನದ ದೃಷ್ಟಿಯಿಂದ ಬೇರೆ ಭಾಷೆಗಳ ರಾಮಾಯಣಸಾಹಿತ್ಯದೊಂದಿಗೆ ಹೋಲಿಸಿ ನೋಡಬೇಕೆಂಬ ಅಭಿಪ್ರಾಯ ಪ್ರಶಂಸಾರ್ಹವಾದುದು. ಶ್ರೀರಾಮಾಯಣ ದರ್ಶನಂ ಕನ್ನಡಕ್ಕೆ ಕೀರ್ತಿ ತಂದ ಮಹಾಕಾವ್ಯ. "ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ" ಎಂದು ಕುಮಾರವ್ಯಾಸ ಹೇಳಿದ ರಾಮಾಯಣಸಾಹಿತ್ಯದ ಗತಿ ಏನಾಯಿತೆಂದು ತಿಳಿಯದು ; ಆದರೆ ಶ್ರೀರಾಮಾಯಣ ದರ್ಶನಂ ನೂರಾರು ರಾಮಾಯಣಗಳಿಗೆ ಸಮಾನವಾದ ಮಹಾಕಾವ್ಯವೆಂಬುದರಲ್ಲಿ ಸಂದೇಹವಿಲ್ಲ. ಇಂತಹ ಮೇರುಕೃತಿಯನ್ನು ವಾಲ್ಮೀಕಿರಾಮಾಯಣದೊಂದಿಗಾದರೂ ತೌಲನಿಕವಾಗಿ ಪರಿಶೀಲಿಸುವ ಸಮಗ್ರ ವಿಮರ್ಶಾಗ್ರಂಥ ಇನ್ನೂ ಬರಬೇಕಾಗಿದೆ. ವಿಶ್ವನಾಥ ಸತ್ಯನಾರಾಯಣ ಅವರ ಶ್ರೀಮದ್ರಾಮಾಯಣ ಕಲ್ಪವೃಕ್ಷದೊಂದಿಗೆ ದರ್ಶನವನ್ನು ಹೋಲಿಸಿ ನೋಡಿದ ಪಿ.ಎಚ್.ಡಿ. ಪ್ರಬಂಧವೊಂದು ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಹೊರಬಂದಿರುವುದು ಸಂತೋಷದ ಸಂಗತಿ. ಮೈಸೂರು ವಿಶ್ವವಿದ್ಯಾನಿಲಯದಿಂದ ದರ್ಶನಂ ಮತ್ತು ಕಂಬರಾಮಾಯಣದ ತೌಲನಿಕ ಅಧ್ಯಯನಕ್ಕೆ ಪಿ.ಎಚ್.ಡಿ. ಬಂದಿದೆ.

ತೆಲುಗಿನ ರಾಮಾಯಣ ಸಾಹಿತ್ಯ ಬೃಹತ್ತು ಮಹತ್ತುಗಳಿಂದ ಅನನ್ಯ ಸದೃಶವಾದುದು. "ಗಗನದ ತಾರೆಗಳನ್ನೂ ತೆಲುಗು ರಾಮಾಯಣ ಕವಿಗಳನ್ನೂ ಎಣಿಸುವುದು ಅಸಾಧ್ಯ" ಎಂದು ತೆಲುಗು ಸಾಹಿತಿ ಆರುದ್ರ ಹೇಳುತ್ತಾರೆ. ತೆಲುಗಿನ ಸಾವಿರಕ್ಕೂ ಹೆಚ್ಚು ಸಂಖ್ಯೆಯ ರಾಮಾಯಣಗಳು ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ರಚಿತವಾಗಿವೆ. ಚಂಪೂ, ದ್ವಿಪದಿ, ಯಕ್ಷಗಾನ, ಕೀರ್ತನೆ, ಕಥೆ, ಕಾದಂಬರಿ ಮುಂತಾದ ಎಲ್ಲ ರೂಪಗಳನ್ನೂ ತಳೆದಿರುವ ರಾಮಾಯಣ ತೆಲುಗರ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿಬಿಟ್ಟಿದೆ. ಈ ಕಾರಣದಿಂದ ಯಾವುದೇ ಭಾಷೆಯ ರಾಮಾಯಣವಾಗಲಿ ತೆಲುಗು ರಾಮಾಯಣಗಳಿಗೆ ಹೋಲಿಸತಕ್ಕದ್ದಾಗಿರುತ್ತದೆ ಶ್ರೀರಾಮಕಥೆಯ ವಿಶ್ವರೂಪ ತೆಲುಗಿನ ರಾಮಾಯಣ ಸಾಹಿತ್ಯದಲ್ಲಿ ಕಾಣುತ್ತದೆ. ಶ್ರೀಮದ್ರಾಮಾಯಣ ಕಲ್ಪವೃಕ್ಷದಂತಹ ಮಹಾಕಾವ್ಯಗಳನ್ನೂ, ರಾಮಾಯಣ ವಿಷವೃಕ್ಷದಂತಹ ಬೃಹತ್‌ಕಾದಂಬರಿಗಳನ್ನೂ ತೆಲುಗಿನಲ್ಲಿ ಮಾತ್ರ ನೋಡಬಹುದು.

ಪ್ರಕೃತ ಪ್ರಬಂಧದಲ್ಲಿ ಕಥಾಕಥನದ ದೃಷ್ಟಿಯಿಂದ, ಛಂದಸ್ಸಿನ ದೃಷ್ಟಿಯಿಂದ, ಪಾತ್ರಚಿತ್ರಣದ ದೃಷ್ಟಿಯಿಂದ, ಕಾವ್ಯಶೈಲಿಯ ದೃಷ್ಟಿಯಿಂದ ಶ್ರೀರಾಮಾಯಣ ದರ್ಶನಂ ಮತ್ತು ತೆಲುಗು ರಾಮಾಯಣಗಳನ್ನು ಸ್ಥೂಲವಾಗಿ ಹೋಲಿಸಿ ನೋಡಲಾಗಿದೆ

ಸೂಕ್ಷ್ಮಪರಿಶೀಲನೆಯ ಆವಶ್ಯಕತೆಯನ್ನು ಸೂಚಿಸುವುದು ಮಾತ್ರ ಇಲ್ಲಿಯ ಮುಖ್ಯೋದ್ದೇಶ, ಮೊದಲು ತೆಲುಗು ರಾಮಾಯಣ ಸಾಹಿತ್ಯದ ಸ್ಥೂಲಪರಿಚಯ ವನ್ನು ಇಲ್ಲಿ ಕೊಡಲಾಗಿದೆ.

ಉಪಲಬ್ಧ ತೆಲುಗುರಾಮಾಯಣಗಳಲ್ಲಿ ಮೊದಲನೆಯದಾದ ರಂಗನಾಥ ರಾಮಾಯಣ (13 ಶತಮಾನ) ದ್ವಿಪದಿ ಛಂದಸ್ಸಿನಲ್ಲಿ ರಚಿತವಾದುದು. ಈ ರಾಮಾಯಣದ ಪೂರ್ವಭಾಗದ ಆರುಕಾಂಡಗಳಲ್ಲಿ ಸುಮಾರು 35,000 ಸಾಲು ಗಳಿವೆ. ಏಳುಶತಮಾನಗಳಿಂದ ಪಂಡಿತ, ಪಾಮರ ಜನರಲ್ಲಿ ಹೆಚ್ಚು ಜನಪ್ರಿಯ ವಾಗಿರುವ ಏಕೈಕ ರಾಮಾಯಣ ರಂಗನಾಥ ರಾಮಾಯಣವೆ. ಇದನ್ನು ರಂಗನಾಥ ನೆಂಬವನು ಬರೆದನೆಂದು ಕೆಲವರೂ, ಗೋನ ಬುದ್ಧಾರೆಡ್ಡಿ ಬರೆದನೆಂದು ಕೆಲವರೂ ಹೇಳುತ್ತಾರೆ. 13ನೆಯ ಶತಮಾನದ ಭಾಸ್ಕರ ರಾಮಾಯಣ ಚಂಪೂಕಾವ್ಯ. ಪಂಡಿತ ಲೋಕದಲ್ಲಿ ಅಂದಿಗೂ ಇಂದಿಗೂ ಪ್ರಚಲಿತವಾಗಿರುವ ಕಾವ್ಯ ಇದು. "ವಾಲ್ಮೀಕಿ ರಾಮಾಯಣವನ್ನು ಭಾಸ್ಕರಕವಿ ತೆಲುಗಿನಲ್ಲಿ ಬರೆದ. ಅದನ್ನೇ ಕುಮಾರ ವಾಲ್ಮೀಕಿ ಕನ್ನಡಿಸಿದ" ಎಂದು ಆರ್. ನರಸಿಂಹಾಚಾರ್ಯರು ಬರೆದಿದ್ದಾರೆ (ಕ.ಕ ಚ. ಭಾಗ 3, ಪು. 317). ತೊರವೆ ರಾಮಾಯಣದ್ದೇನಾದರೂ ದರ್ಶನದಲ್ಲಿದ್ದರೆ ಅದು ಭಾಸ್ಕರ ರಾಮಾಯಣದಿಂದ ಪರೋಕ್ಷವಾಗಿ ಬಂದದ್ದೆಂದು ಇದರಿಂದ ಹೇಳಬಹುದೇ ? ಪರಿ ಶೀಲಿಸಬೇಕಾಗಿದೆ.

15 ಅಥವಾ 16ನೆಯ ಶತಮಾನದ ಮೊಲ್ಲ ಎಂಬ ಕವಯಿತ್ರಿ ಮೊಲ್ಲ ರಾಮಾಯಣವೆಂಬ ಮಧುರ ಕಾವ್ಯವನ್ನು ಬರೆದಿದ್ದಾಳೆ. ಸ್ತ್ರೀ ಸಹಜವಾದ ಭಾವ ಸೌಕುಮಾರ್ಯದ ಸುಂದರ ಕಾವ್ಯವಿದು. ಶ್ರೀಕೃಷ್ಣದೇವರಾಯನ ಕಾಲದ ರಾಮಭದ್ರ ಕವಿಯ 'ರಾಮಾಭ್ಯುದಯ'ವೆಂಬ ಪ್ರಬಂಧ ಭುವನೈಕ ರಾಮಾಭ್ಯುದಯವನ್ನು ಅನುಸರಿಸಿ ಬರೆದದ್ದೇ ಎಂಬುದು ಪೊನ್ನನ ಕಾವ್ಯ ಸಿಕ್ಕುವವರೆಗೂ ಪ್ರಶ್ನೆಯಾಗಿಯೇ ಉಳಿಯುತ್ತದೆ.

ರಾಮದಾಸ ಕವಿ ಮತ್ತು ತ್ಯಾಗರಾಜರ ಕೀರ್ತನೆಗಳು ತೆಲುಗರಲ್ಲಿ ರಾಮಭಕ್ತಿ ಯನ್ನು ಹೆಚ್ಚಿಸಿದವು. ಹರಿಕಥೆ, ಬುರ್ರಕಥೆ, ಶತಕ, ಯಕ್ಷಗಾನ, ಖಂಡಕಾವ್ಯ, ಶ್ಲೇಷ ಕಾವ್ಯ ನಾಟಕ ಮುಂತಾದುವೂ ರಾಮಾಯಣ ರೂಪದಲ್ಲಿ ಬಂದವು. ಪ್ರಾಚೀನಕಾಲ ದಿಂದ ಇಂದಿನವರೆಗೂ ಸಾವಿರಾರು ಜನಪದ ಗೀತೆಗಳ ರೂಪದಲ್ಲಿ ರಾಮಾಯಣ ಸಾಹಿತ್ಯ ಹರಿದುಬಂದಿದೆ.

ಆಧುನಿಕ ಕಾಲದಲ್ಲೂ ಹಲವಾರು ರಾಮಾಯಣಗಳು ರಚಿತವಾದುವು. ವಾವಿಲಿಕೊಲನು ಸುಬ್ಬಾರಾವ್, ಜನಮಂಚಿ ಶೇಷಾದ್ರಿಶರ್ಮ, ಶ್ರೀಪಾದ ಕೃಷ್ಣಮೂರ್ತಿಶಾಸ್ತ್ರಿ, ಚೇಬ್ರೋಲು ಸರಸ್ವತಿ ಮಹಾಕಾವ್ಯ ನಿರ್ಮಾಣದಲ್ಲಿ ತೊಡಗಿದ ಆಧುನಿಕ ಲೇಖಕರಲ್ಲಿ ಕೆಲವರು. ಇತ್ತೀಚೆಗೆ ಕಾದಂಬರಿಯ ರೂಪದಲ್ಲಿ, ಆಕಾಶವಾಣಿಯ

ಕಥನದ ರೂಪದಲ್ಲಿ, ಕಥಾರೂಪದಲ್ಲಿ, ಚಿತ್ರಕಲೆಯ ರೂಪದಲ್ಲಿ ಹಲವು ರಾಮಾಯಣಗಳು ಬಂದಿವೆ. ಇವೆಲ್ಲ ಒಂದುಕಡೆಯಾದರೆ ವಿಶ್ವನಾಥ ಸತ್ಯನಾರಾಯಣರ ಕಲ್ಪವೃಕ್ಷವೇ ಮತ್ತೊಂದುಕಡೆ ನಿಲ್ಲಿಸಬಹುದಾದ ಮಹತ್ತ್ವದ ಕೃತಿ. ಕಲ್ಪವೃಕ್ಷ ಈ ಲೇಖಕರ ಜೀವನದ ತಪಸ್ಸು. 1939ರಿಂದ 1962ವರೆಗೆ ಇದರ ರಚನೆಯನ್ನು ಒಂದು ತಪಸ್ಸಿನಂತೆ ಮಾಡಿದ ವಿಶ್ವನಾಥ ಅವರಿಗೆ 1971ರಲ್ಲಿ ಜ್ಞಾನಪೀಠ ಪ್ರಶಸ್ತಿ ಲಭಿಸಿತು. 12,000 ಗದ್ಯಪದ್ಯಗಳ ಕಲ್ಪವೃಕ್ಷ ದರ್ಶನಕ್ಕಿಂತ ಸುಮಾರು ಎರಡು ಮಡಿ ದೊಡ್ಡದು. ಇದು ವಾಲ್ಮೀಕಿ ರಾಮಾಯಣಕ್ಕೆ ತಮ್ಮದೇ ಆದ ಭಾಷ್ಯವೆಂದು ವಿಶ್ವನಾಥ ಹೇಳಿಕೊಂಡಿದ್ದಾರೆ.

ಮೇಲಿನ ಸ್ಥೂಲಪರಿಚಯದ ಹಿನ್ನೆಲೆಯಲ್ಲಿ ಶ್ರೀರಾಮಾಯಣ ದರ್ಶನಂ ಮತ್ತು ತೆಲುಗು ರಾಮಾಯಣಗಳ ತೌಲನಿಕ ವಿವೇಚನೆಯನ್ನು ಮಾಡಲಾಗಿದೆ.

**ಕಥಾಕಥನ**

ವಾಲ್ಮೀಕಿಯ ಕಾಲದಿಂದ ಅಥವಾ ಅದಕ್ಕಿಂತ ಹಿಂದಿನ ಕಾಲದಿಂದಲೂ ಅವಿಚ್ಛಿನ್ನವಾಗಿ ಹರಿದುಬರುತ್ತಿರುವ ರಾಮಾಯಣ ಕಥಾಸ್ರವಂತಿ ಒಂದೊಂದು ಭಾಷೆಯಲ್ಲಿ. ಒಂದೊಂದು ಲೇಖನಿಯಲ್ಲಿ ಬೇರೆಬೇರೆ ರೂಪಗಳನ್ನು ಪಡೆಯುತ್ತಾ ಬಂದಿದೆ. ಕಥಾಕಥನದಲ್ಲಿ ಕೆಲವು ವ್ಯತ್ಯಾಸಗಳಿದ್ದರೂ ಕಥೆಯ ಮೂಲರೂಪ ಒಂದೇ. ತೆಲುಗಿನಲ್ಲಿ 'ಕಟ್ಟೆ–ಕೊಟ್ಟೆ–ತೆಚ್ಚೆ' (ಎಂದರೆ ಕಟ್ಟಿದ, ಹೊಡೆದ, ತಂದ—ಸೇತುವೆಯನ್ನು ಕಟ್ಟಿ, ರಾವಣನನ್ನು ಕೊಂದು, ಸೀತೆಯನ್ನು ತಂದ) ಎಂಬ ಮೂರೇ ಮಾತಿನಲ್ಲಿ ರಾಮಾಯಣದ ಕಥೆಯನ್ನೇ ಸೂಚಿಸಿಬಿಡುತ್ತಾರೆ. ದರ್ಶನದಲ್ಲೂ ರಾಮಾಯಣದ ಮೂಲರೂಪ ವ್ಯತ್ಯಾಸವಾಗಿಲ್ಲ. ಆದರೆ ಕಥೆಯ ಆಂತರ್ಯದ ವಿಕಾಸದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ದೈವೀಚೇತನದ ಸಹಾಯದಿಂದ ಎಂತಹ ಅವನತಸ್ಥಿತಿಯಲ್ಲಿದ್ದವನಾದರೂ ಸಮುನ್ನತಸ್ಥಿತಿಯನ್ನು ಪಡೆಯುತ್ತಾನೆಂಬ ಪೂರ್ಣದೃಷ್ಟಿ ಕುವೆಂಪು ದರ್ಶನದಲ್ಲಿ ಕಂಡುಬರುತ್ತದೆ.

ರಾಮಾಯಣದರ್ಶನದ ವಸ್ತುವಿನಲ್ಲಿರುವ ಅವಾಲ್ಮೀಕಿಯ ಅಂಶಗಳಲ್ಲಿ ಕೆಲವು ಜೈನರಾಮಾಯಣಗಳಿಂದ, ತೊರವೆ ರಾಮಾಯಣದಿಂದ, ಇತರ ರಾಮಾಯಣಗಳಿಂದ ಸ್ವೀಕರಿಸಿದಂತಹವು. ಕೆಲವು ಕವಿ ತಮ್ಮ ದರ್ಶನಕ್ಕೆ ಅನುಗುಣವಾಗಿ ಕಲ್ಪಿಸಿದಂತಹವು. ಮಂಥರೆಗೆ ರಾಮನ ಮೇಲೆ ಕೋಪ ಬರಲು ಒಂದು ಕಾರಣವನ್ನು ಕಲ್ಪಿಸಿದ್ದು, ಊರ್ಮಿಳೆ ಮಹಾಯೋಗಿನಿಯಾಗಿ ಹದಿನಾಲ್ಕು ವರ್ಷಗಳ ಕಾಲ ತಪೋದೀಕ್ಷೆಯಲ್ಲಿ ತೊಡಗುವುದು, ದಶರಥನ ಮೃತಿಯಿಂದ ಕೈಕೆಗೆ ಪಶ್ಚಾತ್ತಾಪವುಂಟಾಗಿ ರಾಮನನ್ನು ಕರೆತರುವಂತೆ ಭರತನಿಗೆ ಪ್ರೋತ್ಸಾಹ ನೀಡುವುದು, ಲಕ್ಷ್ಮಣನಿಂದ ಜಂಬುಮಾಲಿಯ ವಧೆ, ಶಬರಿ ತನ್ನ ಪ್ರಾಣವನ್ನೇ ಕೊಟ್ಟು ರಾಮನನ್ನು ಮೃತ್ಯುವಿನಿಂದ ಕಾಪಾಡಿದ್ದು,

ಪತಿವ್ರತೆಯಾದ ತಾರೆ ವಾಲಿಯೊಡನೆ ಸಹಗಮನ ಮಾಡುವುದು, ಲಂಕಾಧಿದೇವತೆ ಸುಂದರ ನಗರವನ್ನು ಹಾಳುಮಾಡಬೇಡವೆಂದು ಬೇಡಿಕೊಳ್ಳುವುದು, ಸೀತೆಯಮೇಲೆ ರಾವಣನಿಗೆ ಮಾತೃಭಾವನೆ ಏರ್ಪಡುವುದು, ರಾವಣ ರಾಮನಲ್ಲಿ ಐಕ್ಯವಾಗುವುದು ಸೀತೆಯೊಂದಿಗೆ ರಾಮನೂ ಅಗ್ನಿಪ್ರವೇಶಮಾಡುವುದು, ರಾವಣ ಕುಂಭಕರ್ಣರೇ ಲವಕುಶರಾಗಿ ಜನಿಸುವುದು—ಈ ಕೆಲವನ್ನು ಹೆಸರಿಸಬಹುದು.

ತೆಲುಗಿನ ಎಲ್ಲ ರಾಮಾಯಣಗಳಲ್ಲಿಯೂ ವಾಲ್ಮೀಕಿ ರಾಮಾಯಣಕ್ಕೆ ಭಿನ್ನವಾದ ಕೆಲವು ಅಂಶಗಳಾದರೂ ಇದ್ದೇ ಇರುತ್ತವೆ. ರಂಗನಾಥ ರಾಮಾಯಣ, ಭಾಸ್ಕರ ರಾಮಾಯಣ ಮುಂತಾದುವು ಬೇರೆ ಬೇರೆ ರಾಮಾಯಣಗಳಿಂದ, ಜನಪದ ರಾಮಾಯಣ ಗಳಿಂದ ಅನೇಕ ವಿಷಯಗಳನ್ನು ಸ್ವೀಕರಿಸಿವೆ. ಶ್ರೀಮದ್ರಾಮಾಯಣ ಕಲ್ಪವೃಕ್ಷ ವಿಶ್ವನಾಥ ಅವರ ಮಹತ್ತ್ವದ ಕಾವ್ಯತತ್ತ್ವಕ್ಕೆ ಅನುಗುಣವಾಗಿ ಸ್ವತಂತ್ರಕಾವ್ಯವೇ ಆಗಿರುತ್ತದೆ. ಮಂಥರೆಯನ್ನು ಬಾಲ್ಯ ಚಾಪಲ್ಯದಿಂದ ರಾಮ ಅವಮಾನಿಸಿದ ಘಟನೆ ತೆಲುಗಿನ ಅನೇಕ ರಾಮಾಯಣಗಳಲ್ಲಿ ಬರುತ್ತದೆ. ಅಹಲ್ಯೆ ಶಿಲಾಕೃತಿಯನ್ನು ಪಡೆದ ಅಂಶವನ್ನು ಹಲವು ರಾಮಾಯಣಗಳು ವರ್ಣಿಸಿವೆ. ಜಂಬುಮಾಲಿಯ ಕಥೆಯೂ ತೆಲುಗರಿಗೆ ಪರಿಚಿತವಾದುದೇ. ರಾವಣನ ಪಾತಾಳಹೋಮ, ಸುಲೋಚನೆಯ ಕಥೆ. ಕಾಲನೇಮಿಯ ಕಥೆ ಮುಂತಾದುವು ತೆಲುಗು ರಾಮಾಯಣಗಳಲ್ಲಿ ಕಂಡುಬರುವ ಕೆಲವು ಅವಾಲ್ಮೀಕ ಕಥಾಂಶಗಳಾಗಿವೆ.

ವಿಶ್ವನಾಥ ಸತ್ಯನಾರಾಯಣ ಅವರ ರಾಮಾಯಣ ಕಲ್ಪವೃಕ್ಷ ಕಾವ್ಯತ್ವದಲ್ಲಿ ಒಂದು ಬೃಹತ್ಸಾಧನೆ. ಧ್ವನಿಪ್ರಧಾನ ಕಾವ್ಯವದು. ವಿಶ್ವನಾಥ ಅವರು ಅನೇಕ ಕಲ್ಪನೆಗಳನ್ನು ಮಾಡಿದ್ದಾರೆ. ಕೈಕೆ ರಾಮನ ಅಭಿಲಾಷೆಯಂತೆ ಅವತಾರ ಪ್ರಯೋಜನವನ್ನು ಸಾಧಿಸಲು ಅರಣ್ಯವಾಸವನ್ನು ವಿಧಿಸಿದಳು. ರಾವಣ ಅಶೋಕವನದಲ್ಲಿ ಸೀತೆಯನ್ನು ಭೇಟಿಯಾಗಿ "ನನ್ನನ್ನು ವರಿಸದಿದ್ದರೆ ರಾಮನಿಂದ ನಿನಗೆ ಅಗ್ನಿಪ್ರವೇಶವೇ ಗತಿ" ಎಂದು ವ್ಯಂಗ್ಯವಾಗಿ ನುಡಿಯುತ್ತಾನೆ. ಅದನ್ನು ಗುರುವಾಕ್ಯವಾಗಿ ಸ್ವೀಕರಿಸಿ ಸೀತೆ "ರಾಮನು ವಿಜಯಿಯಾದರೆ ನಾನು ಅಗ್ನಿಪ್ರವೇಶ ಮಾಡುತ್ತೇನೆ" ಎಂದು ಹರಕೆ ಹೊತ್ತಳು. ಅದಕ್ಕೇ ಅಗ್ನಿಪ್ರವೇಶ, ಕಲ್ಪವೃಕ್ಷದ ರಾವಣ ಶ್ರೀವಿದ್ಯೋಪಾಸಕ. ಅವನನ್ನು ಕೊಲ್ಲವುದು ರಾಮನಿಗೆ ಸಾಧ್ಯವಾಗದು. ಅದಕ್ಕೆ ರಾಮನು ತಾನು ಶ್ರೀದೇವಿಯಾಗಿ ತ್ರಿಮೂರ್ತ್ಯಾತ್ಮಕವಾದ ಆದಿತ್ಯಹೃದಯದ ಸಹಾಯದಿಂದ ರಾವಣ ಹೃದಯವನ್ನು ಭೇದಿಸಲು ಸಾಧ್ಯವಾಯಿತು. ಸೀತೆ ಮಾತೃದೇವತೆ ಎಂಬ ಸೂಚನೆ ಶ್ರೀಮದ್ರಾಮಾಯಣ ಕಲ್ಪವೃಕ್ಷದಲ್ಲಿದೆ.

**ಪಾತ್ರಚಿತ್ರಣ**

ಶ್ರೀರಾಮಾಯಣ ದರ್ಶನದ ಪಾತ್ರಚಿತ್ರಣವನ್ನು ವಾಲ್ಮೀಕಿಗೆ ಹೋಲಿಸಿದಾಗ

ತಕ್ಕಮಟ್ಟಿಗೆ ಬದಲಾವಣೆಗಳು ಕಂಡುಬರುತ್ತವೆ. ಮೂಲ ರಾಮಾಯಣದ ಚಿಕ್ಕ ಪಾತ್ರಗಳಿಗೂ ಕುವೆಂಪು ಸ್ವಸ್ವರೂಪವನ್ನು ಕೊಟ್ಟ ಅನೇಕ ಸಂದರ್ಭಗಳಿವೆ. ಮುಖ್ಯವಾದ ಕೆಲವು ಬದಲಾವಣೆಗಳನ್ನು ಇಲ್ಲಿ ನೋಡಬಹುದು :

1. ರಾವಣಾದಿ ಪಾತ್ರಗಳು ರಾಕ್ಷಸ ಜಾತಿಯ ಕ್ರೂರರಲ್ಲ. ರಾಕ್ಷಸನಾಮದ ವಂಶದವರು. ಹನುಮಂತಾದಿಗಳು ವಾನರರಲ್ಲ, ವಾನರ ಧ್ವಜರು.

2. ಮಂಥರೆಯದು ಒಂದು ದುರಂತ ಪಾತ್ರ. ರೂಪವಿಹೀನೆಯಾಗಿ ಹುಟ್ಟಿ, ದುರದೃಷ್ಟಕರವಾದ ಬಾಳನ್ನು ನಡೆಸಿ, ಭರತನಿಗಿಂತ ಮೊದಲೇ ಕಾಡಿಗೆ ಹೊರಟು ಕಾಡ್ಗಿಚ್ಚಿನಲ್ಲಿ ಸುಟ್ಟು ಹೋದಳು. ಇವಳದೊಂದು ಅನುಕಂಪ ಹುಟ್ಟಿಸುವ ಕಥನ ವಾಗಿದೆ.

3. ಊರ್ಮಿಳೆಯ ಪಾತ್ರ ಒಂದು ಸ್ಪಷ್ಟ ರೂಪವನ್ನು ಪಡೆದಿದೆ. ತಪೋ ನಿರತಳಾಗಿ ಲಕ್ಷ್ಮಣನಿಗೆ ಶಕ್ತಿಯನ್ನು ನೀಡಿದ ಪತಿವ್ರತೆಯಾಗಿ ಚಿತ್ರಣ ಪಡೆದಳು.

5. ಮಹಾಪತಿವ್ರತೆಯಾದ ತಾರೆ ವಾಲಿ ಗುಹೆಯಲ್ಲಿ ಸಿಕ್ಕಿಕೊಂಡಾಗ ಯೋಗಿನಿಯಾದಳು, ಅನಂತರ ವಾಲಿ ಸತ್ತಾಗ ಸಹಗಮನ ಮಾಡಿದಳು.

6. ವಿಭೀಷಣ ನೇರವಾಗಿ ರಾಮನ ಬಳಿ ಬಂದು ಸೇರಲಿಲ್ಲ. ಅನೇಕರ ಸಲಹೆಯ ಮೇರೆಗೆ ಲಂಕೆಗೆ ಶ್ರೇಯಸ್ಸಾಗುವುದೆಂದು ನಂಬಿ ರಾಮನ ಪಕ್ಷಸೇರಿದ. ಕೊನೆಗೆ ರಾಜ್ಯವನ್ನು ಪಡೆಯಲಿಲ್ಲ. ಇಂದ್ರಜಿತುವಿನ ಮಗ ವಜ್ರಾರಿ ರಾಜನಾದ.

7. ರಾವಣನ ಪಾತ್ರ ದರ್ಶನವೆ ಹೃದಯದಂತಿದೆ, ಸೀತೆಗೆ ರಾಮನ ಕೃತ್ರಿಮ ಶಿರಸ್ಸನ್ನು ತೋರಿಸಲು ರಾವಣ ಒಪ್ಪುವುದಿಲ್ಲ. ಅವನು ತುಂಬ ಪೌರುಷವುಳ್ಳವನು. ಕೊನೆಕೊನೆಗೆ ಸೀತೆಯ ಮೇಲೆ ಮಾತೃಭಾವ ಬೆಳೆಯುತ್ತದೆ. ರಾಮನನ್ನು ಗೆದ್ದು ಸೀತೆಗೆ ರಾಮನನ್ನು ಒಪ್ಪಿಸ ಬೇಕೆಂದುಕೊಂಡ. ಆದರೆ ರಾವಣ ಕುಂಭಕರ್ಣರು ಲವಕುಶರಾಗಿ ಹುಟ್ಟಿದಾಗ ಮಾತ್ರ ಇದು ಸಾಧ್ಯವಾಯಿತು.

''ಪಾಪಿಗುದ್ಧಾರಮಿಹುದೌ ಸೃಷ್ಟಿಯ ಮಹದ್ವ್ಯೂಹ ರಚನೆಯಲಿ'' ಎಂಬ ದಿವ್ಯಸಂದೇಶಕ್ಕೆ ಅನುಗಣವಾಗಿ ದರ್ಶನದ ಪಾತ್ರಗಳು ಮೂಡಿ ಬಂದಿವೆ.

ತೆಲುಗಿನ ರಂಗನಾಥ ರಾಮಾಯಣದಿಂದ ಹಿಡಿದು ಹಲವು ರಾಮಾಯಣಗಳಲ್ಲಿ ಪಾತ್ರಚಿತ್ರಣದ ವಿಷಯದಲ್ಲಿ ಅನೇಕ ವ್ಯತ್ಯಾಸಗಳನ್ನು, ಪರಿಷ್ಕಾರ ಮಾಡಿದ ಸಂದರ್ಭ ಗಳನ್ನು ಗಮನಿಸಬಹುದು. ಮಂಥರೆಯ ಪಾತ್ರವನ್ನು ಅನೇಕರು ಸಂಸ್ಕರಿಸಿ ಬರೆ ದಿದ್ದಾರೆ. ರಂಗನಾಥ ರಾಮಾಯಣ ರಾಮನನ್ನು ವಿಷ್ಣುವಿನ ಅವತಾರವೆಂದೇ ಸ್ವೀಕ ರಿಸಿ ಆತನ ದಿವ್ಯತ್ವವನ್ನು ಆಗಾಗ್ಗೆ ಪ್ರದರ್ಶಿಸುತ್ತದೆ. ವಿಭೀಷಣ ರಾವಣನಿಂದ ಅವ ಮಾನಿತನಾಗಿ ಮೊದಲು ವೃದ್ಧಮಾತೆ ಕೈಕಸಿಯ ಬಳಿಗೆ ಹೋಗಿ ರಾವಣನನ್ನು ಕುರಿತು ಹೇಳುತ್ತಾನೆ, ಆಕೆ ವಿಭೀಷಣ ರಾಮನ ಆಶ್ರಯ ಪಡೆಯುವುದೇ ಉತ್ತಮವೆಂದು ಸಲಹೆ ನೀಡುತ್ತಾಳೆ. ರಾವಣನನ್ನು ಒಂದು ಉದಾತ್ತ ಪಾತ್ರವನ್ನಾಗಿಯೇ ರಂಗನಾಥ

ರಾಮಾಯಣ ಚಿತ್ರಿಸಿದೆ. ರಾವಣ ರಾಮನ ಪರಾಕ್ರಮವನ್ನು ಮೆಚ್ಚಿಕೊಳ್ಳುವ ಸಂದರ್ಭಗಳಿವೆ.

ತೆಲುಗು ಜನಪದ ರಾಮಾಯಣಗಳಲ್ಲಿ ಚಿತ್ರವಿಚಿತ್ರವಾದ ಅನೇಕ ಕಲ್ಪನೆಗಳಿವೆ. 'ಶಾಂತ ಗೋವಿಂದ ನಾಮಾಲು' ಎಂಬ ಜನಪದ ಗೀತೆಯಲ್ಲಿ ದೇವತೆಗಳು ಆದಿಲಕ್ಷ್ಮಿಯನ್ನು ರಾವಣವಧೆಗಾಗಿ ಬೇಡಿಕೊಳ್ಳುತ್ತಾರೆ. ಆಕೆ ಲಂಕೆಯ ಒಂದು ಕೊಳದಲ್ಲಿ ಕಮಲವಾಗುತ್ತಾಳೆ. ರಾವಣನಿಗೆ ಆ ಕಮಲ ಸಿಕ್ಕುತ್ತದೆ, ಅದನ್ನು ಅವನು ಮಂಡೋದರಿಗೆ ಕೊಡುತ್ತಾನೆ. ಅದರಲ್ಲಿ ಕುಳಿತಿರುವ ಬಾಲೆಯನ್ನು ರಾವಣ ಮದುವೆಯಾಗಬೇಕೆಂದುಕೊಳ್ಳುತ್ತಾನೆ. ದೈವಜ್ಞರು ಆ ಬಾಲೆಯಿಂದ ಲಂಕೆಗೆ ವಿನಾಶವಾಗುತ್ತದೆಂದರು. ಮಂಡೋದರಿ ಆ ಬಾಲೆಯನ್ನು ಒಂದು ಪೆಟ್ಟಿಗೆಯಲ್ಲಿಟ್ಟು "ಹುಚ್ಚು ರಾವಣ ಇವನು ಮಗನಂತೆ ನೋಡಿಕೊ–ಲಂಕೆಯನ್ನು ಕಾಪಾಡು" ಎಂದು ಹೇಳಿ ಸಮುದ್ರದಲ್ಲಿ ಬಿಟ್ಟಳು.

ವಿಶ್ವನಾಥ ಸತ್ಯನಾರಾಯಣ ಅವರ ಶ್ರೀಮದ್ರಾಮಾಯಣ ಕಲ್ಪವೃಕ್ಷವೂ ಅನೇಕ ಪಾತ್ರಗಳ ವಿಷಯದಲ್ಲಿ ಸ್ಪಷ್ಟವಾದ ರೂಪಕಲ್ಪನೆಯನ್ನು ನೀಡಿರುವುದನ್ನು ಇಲ್ಲಿ ನೆನೆಯಬಹುದು. ಜಟಾಯು, ಗುಹನಂತಹ ಸಣ್ಣ ಪಾತ್ರಗಳಿಗೂ ಸಂಪೂರ್ಣತ್ವವನ್ನುಕೊಡಲಾಗಿದೆ. ದಶರಥನ ಪುತ್ರಕಾಮೇಷ್ಟಿಗೆ ಬಂದವರಲ್ಲಿ ಜಟಾಯು, ಗುಹ, ಜನಕರೂ ಸೇರಿದ್ದರು. ಅಹಲ್ಯೆ, ಮಾರೀಚ, ಕೈಕೆ ಮುಂತಾದ ಪಾತ್ರಗಳನ್ನೂ ವಿಶ್ವನಾಥ ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

### ಛಂದಸ್ಸು

ಶ್ರೀ ರಾಮಾಯಣ ದರ್ಶನಂ ಮಹಾಛಂದಸ್ಸಿನಲ್ಲಿ ಮೂಡಿಬಂದಿದೆ. "ಭಾರತದ ಜನತೆಗೆ ರಕ್ತಗತವಾಗಿರುವ ಪುರಾತನ ಕತೆ ಒಂದನ್ನು ಕಾವ್ಯರೂಪದಲ್ಲಿ ಬರೆಯುವಾಗ ; ಕವಿ ತನ್ನದೇ ಆದ ಭಾಷೆಯನ್ನು ತನ್ನ ಕಾವ್ಯಸೃಷ್ಟಿಗೆ ಬಳಸಬೇಕಾದ ಅಗತ್ಯವೂ ಬರುತ್ತದೆ. ಈ ಅನಿವಾರ್ಯ ಅಗತ್ಯದಿಂದಲೇ ಕುವೆಂಪು ಮಹಾ ಛಂದಸ್ಸನ್ನು ಸೃಷ್ಟಿಸಬೇಕಾಯಿತು" ಎಂದಿದ್ದಾರೆ ವಿದ್ವಾಂಸರು. ಮಹಾಛಂದಸ್ಸು ಹೊಸಗನ್ನಡಕ್ಕೆ ಕುವೆಂಪು ಅವರ ಕಾಣಿಕೆ ಎಂದು ಅನೇಕ ವಿಮರ್ಶಕರು ಪ್ರಶಂಸಿಸಿದ್ದಾರೆ. ಮಹಾಕಾವ್ಯಕ್ಕೆ ಛಂದಸ್ಸನ್ನು ಈ ಶತಮಾನದಲ್ಲಿ ಇಷ್ಟು ಶಕ್ತಿಯುತವಾಗಿ ಬೇರೆಯವರು ಬಳಸಿಕೊಂಡಿಲ್ಲವೆಂದು ವಿದ್ವಾಂಸರು ಹೊಗಳಿದ್ದಾರೆ. ರಾಮಾಯಣದರ್ಶನದಲ್ಲಿ ಕುವೆಂಪು ಅವರದು "ನಡೆದರೆ ಗದ್ಯ ಕುಣಿದರೆ ಪದ್ಯ" ಶ್ರೀ ಮಾಡಾವು ಹರಿನಾರಾಯಣ ಹೀಗೆಂದಿದ್ದಾರೆ : "ತನ್ನ ಬುದ್ಧಿಯ ಪರಿಮಿತಿಯನ್ನು ಮೀರಿ, ಪ್ರತಿಭೆಯ ಕೂಸಾಗಿ ಜನಿಸಿದ ಈ ಛಂದೋ ಬಂಧದ ಮಹತ್ತಿಗೆ ಮಣಿದು ಕುವೆಂಪು ಅದನ್ನು ಮಹಾಛಂದಸ್ಸು ಎಂದು ಕರೆದಿರಬೇಕು" (ರಸಋಷಿ, 1972, ಪು. 118).

ಲಲಿತರಗಳೆ ಸರಳರಗಳೆಯಾಗಿ ಸರಳರಗಳೆ ಮಹಾಛಂದಸ್ಸಾಯಿತೆಂದು ವಿಮರ್ಶಕರು ಹೇಳುತ್ತಾರೆ. ಮಹಾಛಂದಸ್ಸಿನ ಮೂಲಲಯ ಐದು ಮಾತ್ರೆಗಳಿಂದ ಕೂಡಿದ್ದೆಂಬುದರಲ್ಲಿ ಸಂದೇಹವಿಲ್ಲ. ಈ ಲಯವನ್ನು ಕುವೆಂಪು ಕನ್ನಡದ ಮತ್ತು ಸಂಸ್ಕೃತದ ಎಲ್ಲ ಲಯಗಳನ್ನೂ ಬಾಗು ಬಳಕುಗಳನ್ನೂ ಜೀರ್ಣಿಸಿಕೊಂಡು ಸಾಧಿಸಿದ್ದಾರೆಂದು ಹೇಳಲಾಗಿದೆ. "ಪಂಪ, ರನ್ನರ ಚಂಪೂ, ಹರಿಹರನ ರಗಳೆ, ರಾಘವಾಂಕ ನಾರಣಪ್ಪ ಲಕ್ಷ್ಮೀಶರ ಷಟ್ಪದಿ, ಜನ್ನ ಷಡಕ್ಷರಿಯರ ಕಂದ, ವಚನಕಾರರ ವಚನ–ಈ ಎಲ್ಲದರ ಕೂಡ, ವ್ಯಾಸ ವಾಲ್ಮೀಕಿಗಳ ಶ್ಲೋಕ, ಉಪನಿಷತ್ತುಗಳ ಮಂತ್ರ ತಮ್ಮ ತಮ್ಮ ವಿಶಿಷ್ಟ ಅಂಶವನ್ನು ಈ ಶೈಲಿಗೆ ಧಾರೆಯೆರೆದಿವೆ." (ಸುಜನಾ, ಕುವೆಂಪು ಸಾಹಿತ್ಯ–ಕೆಲವು ಅವಲೋಕನಗಳು, ಅರ್ಕಾವತಿ ಪ್ರಕಾಶನ, ಮೈಸೂರು.).

ಚತುಷ್ಪಾದ ಪದ್ಯಗಳು ಇಲ್ಲದೆ ರಗಳೆಯಂತೆ ಅವಿಚ್ಛಿನ್ನವಾಗಿ ಓಡುವುದು ಮಹಾಛಂದಸ್ಸಿನ ಒಂದು ಲಕ್ಷಣ. ಆದರೆ ರಗಳೆಗೆ ಪಾದಾಂತ್ಯಯತಿ ಇರುತ್ತದೆ. ಮತ್ತು ಪ್ರಾಸವಿರುತ್ತದೆ. ತೆಲುಗಿನ ದ್ವಿಪದಿ ರಗಳೆಯಂತೆಯೇ ಇರುತ್ತದಾದರೂ ಪಾದಾಂತ್ಯಯತಿಯ ನಿರ್ಬಂಧವಿಲ್ಲ. ಮಂಜರೀ ದ್ವಿಪದ ಎಂಬ ತೆಲುಗು ಛಂದಸ್ಸಿಗೆ ಪ್ರಾಸವೂ ಬೇಕಾಗಿಲ್ಲ. ಈ ಕಾರಣಗಳಿಂದ ತೆಲುಗು ದ್ವಿಪದ ಸ್ವಲ್ಪಮಟ್ಟಿಗೆ ಮಹಾ ಛಂದಸ್ಸನ್ನು ಹೋಲುವಂತಹದು. ದ್ವಿಪದಿಯಲ್ಲಿ ಮೂರು ಇಂದ್ರಗಣಗಳು (ವಿಷ್ಣು ಗಣಕ್ಕೆ ಸಮಾನ), ಒಂದು ಸೂರ್ಯಗಣ (ಬ್ರಹ್ಮಗಣಕ್ಕೆ ಸಮಾನ) ವಿರುತ್ತವೆ. ಕೊನೆಯ ಲಘುವನ್ನು ಹಾಡುವಾಗ ಸ್ವಲ್ಪ ಎಳೆದರೆ ಅದು ಲಲಿತರಗಳೆಗೆ ತುಂಬ ಹತ್ತಿರ.

ತೆಲುಗಿನ ಮೊದಲ ರಾಮಾಯಣವಾದ ರಂಗನಾಥರಾಮಾಯಣ ದ್ವಿಪದಿಯಲ್ಲೇ ರಚಿತವಾದುದು. ಈ ರಾಮಾಯಣ ಛಂದಸ್ಸಿನ ದೃಷ್ಟಿಯಿಂದ, ಅವಾಲ್ಮೀಕ ಕಥಾ ಸಂದರ್ಭಗಳ ದೃಷ್ಟಿಯಿಂದ, ಪಾತ್ರ ಚಿತ್ರಣದ ದೃಷ್ಟಿಯಿಂದ, ಶೈಲಿಯ ದೃಷ್ಟಿಯಿಂದ ಶ್ರೀ ರಾಮಾಯಣದರ್ಶನಕ್ಕೆ ಹತ್ತಿರವಾದುದು. ರಂಗನಾಥರಾಮಾಯಣವಲ್ಲದೆ ವಾಸಿಷ್ಠರಾಮಾಯಣ, ಅಧ್ಯಾತ್ಮ ರಾಮಾಯಣ, ಶತಕಂಠರಾಮಾಯಣ, ಕಟ್ಟಾ ವರದರಾಜರಾಮಾಯಣ, ಬಾಲರಾಮಾಯಣ, ಏಕೋಜೀ ರಾಮಾಯಣ ಮುಂತಾದ ಅನೇಕ ರಾಮಾಯಣಗಳು ದ್ವಿಪದಿ ಛಂದಸ್ಸಿನಲ್ಲಿ ರಚಿತವಾಗಿವೆ.

## ಶೈಲಿ

"ಸಪ್ತವರ್ಣಗಳ ಸಮ್ಮಿಶ್ರಣದಿಂದ ಶ್ವೇತವರ್ಣ ಸಂಭವಿಸುವಂತೆ, ಹಲವು ಗುಣಗಳ ಕೂಡಲಿಯಿಂದ ಕುವೆಂಪು ಅವರ ಶೈಲಿ ಸಂಸಿದ್ಧವಾಗುತ್ತದೆ" ಎಂದು ದೇಜಗೌ ಬರೆದಿದ್ದಾರೆ (ಅವಲೋಕನ, ಪು. 29). "ತನ್ನ ನಾಡಿನ ಸಮಗ್ರ ಸಂಸ್ಕೃತಿಯ ಪರಂಪರೆಯನ್ನು ಯಾವ ಶಕ್ತ ಕವಿ ಮೈಗೂಡಿಸಿಕೊಳ್ಳುತ್ತಾನೆಯೋ ಅವನು ಮಹಾ

ಕವಿಯಾಗುತ್ತಾನೆ. ಆ ಮಹಾಕವಿ ತನ್ನ ಹಿಂದಿನ ಮಹಾಕಾವ್ಯಗಳ ಸಮಸ್ತ ತತ್ವವನ್ನು ತನ್ನಲ್ಲಿ ಸೇರಿಸಿಕೊಂಡು ನವ್ಯ ಸಂಸ್ಕಾರ ನೀಡಿ, ಸಮೀಚೀನ ರೂಪದಲ್ಲಿ ಚಿರಂಜೀವತ್ವವನ್ನು ದಯಪಾಲಿಸುತ್ತಾನೆ'' ಎಂದಿದ್ದಾರೆ ದೇಜಗೌ (ಪು. 29-30). ಕುವೆಂಪು ಸಂಸ್ಕೃತವನ್ನೂ ಕನ್ನಡವನ್ನೂ ನಿರ್ಭಯವಾಗಿ, ನಿರಾಯಾಸವಾಗಿ ಒಂದೇ ಸಮನೆ ಬಳಸಬಲ್ಲವರು ಎಂದು ವಿಮರ್ಶಕರು ಹೇಳಿದ್ದಾರೆ. ಸಂಸ್ಕೃತೀಕರಣಗೊಂಡ ಕನ್ನಡವನ್ನು, ಅಚ್ಚಗನ್ನಡವನ್ನು, ಪೂರ್ಣಸಂಸ್ಕೃತವನ್ನೂ ಭಾವಸೂಕ್ಷ್ಮತೆಗಾಗಿ ಬಳಸುವ ಶಕ್ತಿ ರಾಮಾಯಣದರ್ಶನದಲ್ಲಿ ಕಂಡುಬರುತ್ತದೆ.

ತೆಲುಗು ಮಹಾಕಾವ್ಯಗಳ ಶೈಲಿ ಸಾಮಾನ್ಯವಾಗಿ ಸಂಸ್ಕೃತ ಪದ ಬಹುಳವಾದ ಪ್ರೌಢಶೈಲಿ. ರಂಗನಾಥರಾಮಾಯಣ ಮಾತ್ರ ಸಂಸ್ಕೃತಾಂಧ್ರ ಪದಗಳ ಸಮ್ಮಿಶ್ರಣದಿಂದ ಸಾಮಾನ್ಯರಿಗೂ ವಿದ್ವಾಂಸರಿಗೂ ಮೆಚ್ಚಿಗೆಯಾಗುವ ರೀತಿಯಲ್ಲಿದೆ.

**ಇಂದೀವರಾಕ್ಷಿ ಪೂರ್ಣೇಂದು ನಿಭಾಸ್ಯ**
**ಇಂದಿಂದಿರಾಲಕ ಯೇಲಯೀ ಯಲುಕ**
**ಪವಳಿಂಪನೇಲನೇ ಬಾಲೇಂದುಫಾಲ......**

ಈ ಮೂರು ವಾಕ್ಯಗಳೂ ಮೂರು ತರವ ಇವೆ. ಮೊದಲನೆಯದು ಪೂರ್ಣ ಸಂಸ್ಕೃತ, ಎರಡನೆಯದು ಸಂಸ್ಕೃತ ಮತ್ತು ತೆಲುಗು, ಮೂರನೆಯದು ತೆಲುಗು ಮತ್ತು ಸಂಸ್ಕೃತ. ಹೀಗೆ ಎಲ್ಲ ರೀತಿಯ ಪದಗಳ ಜೋಡಣೆಯಿಂದ ಇದು ಮೃದು-ಮಧುರ ಕಾವ್ಯವಾಗಿದೆ.

ಭಾಸ್ಕರರಾಮಾಯಣದ್ದು ಪ್ರೌಢಶೈಲಿ, ಪ್ರೌಢಭಾವಗಳು.

**ಯಮುನದ್ಗಂಗಮು ಕೃಷ್ಣಭೂಮದಿಲಮುಬ್ಜಾಕ್ಷನ್ಮನುಷ್ಯಂಬು ನೀ**
**ಲಮಹೀಧ್ರನ್ನಿಖಿಲಾಚಲಾವಳಿ, ತಮಾಲದ್ಭೂಜಮಿಂದೀವರ**
**ತ್ಕುಮುದಶ್ರೇಣಿ, ಪಿಕದ್ವಿಹಂಗಮು ದಮಸ್ತೋಮದ್ಗ್ರಹಾರ್ಕ ಪ್ರಭಾ**
**ಸಮುದಾಯಂಬಗುಸುಂಡೆ ಲೋಕಮಲಘುಶ್ಯಾಮಾಭ್ರಮುಮುಲ್ ಪರ್ವಿನನ್**

(ಮಳೆಗಾಲದ ಕಪ್ಪುಮೋಡಗಳಿಂದ ಗಂಗೆ ಯಮುನೆಯಾಯಿತು, ನೆಲವೆಲ್ಲ ಕಪ್ಪಾಯಿತು, ಮನುಷ್ಯರು ನಾರಾಯಣರಾದರು, ಬೆಟ್ಟಗಳು ನೀಲಾದ್ರಿಗಳಾದುವು, ಮರಗಳು ಹೊಂಗೆಮರಗಳಾದುವು, ಬೆಳ್ದಾವರೆಗಳು ಕನ್ನೈದಿಲೆಗಳಾದುವು, ಹಕ್ಕಿಗಳೆಲ್ಲ ಕೋಗಿಲೆಗಳಾದುವು, ಸೂರ್ಯಾದಿ ಗ್ರಹನಕ್ಷತ್ರಗಳೆಲ್ಲ ಕತ್ತಲೆಯ ಮುದ್ದೆಗಳಾದುವು).

ಇದು ಸಾಮಾನ್ಯವಾಗಿ ತೆಲುಗು ಮಹಾಕಾವ್ಯಗಳ ಶೈಲಿ.

ಡಾ. ಆರ್ವಿಯಸ್ ಸುಂದರಂ

# ಶ್ರೀ ರಾಮಾಯಣದರ್ಶನಂ — ಮರಾಠೀರಾಮಾಯಣ

ಮಹಾಕವಿ ಕುವೆಂಪು ಅವರು "ಶ್ರೀ ರಾಮಾಯಣದರ್ಶನಂ" ಕಾವ್ಯದ 'ಕವಿ ಕೃತು ದರ್ಶನಂ' ಎಂಬ ಸಂಚಿಕೆ–೧ರಲ್ಲಿ

> "ಏರುವೆನು ವಾಗ್ದೇವಿಯಮೃತರಸನೆಯ ಲಸನ್
> ನಾವೆಯಂ ರಾಮನ ಕಥೆಯ ಮಧುಧುನೀ ಪಥಂ
> ಪಿಡಿದಾಂ ಮಹಾಛಂದಸ್ ತರಂಗವಿನ್ಯಾಸದಿಂ
> ಸೇರುವೆನು ಗುರು ಕೃಪೆಯೊಳಾ ಋತಚಿದ್ ರಸಾಬ್ಧಿಯಂ"

—ಎಂದು ತಾವು ಬರೆಯುತ್ತಿರುವ ಕೃತಿಯದಾರಿ ಏನು ಎತ್ತ ಎಂಬುದನ್ನು ವಿವರಿಸುತ್ತ

> "ವ್ಯೋಮಸಾಗರ ಸಮಂ ನಿನ್ನ ರಾಮಾಯಣಂ
> ಗುರುವೆ, ರಸಋಷಿಯೆ, ಓ ವಾಲ್ಮೀಕಿ ; ಕ್ರಮಿಸಲ್ಕದಂ
> ದಯೆಗೆಯ್ಯೆನಗೆ ವೈನತೇಯನ ವಜ್ರವೀರ್ಯಮಂ.
> ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ ?
> ತನು ನಿನ್ನದಾದೊಡಂ, ಚೈತನ್ಯಮೆನ್ನದೆನೆ,
> ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
> ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ"

ಎಂದು ಮುಂತಾಗಿ ಹೇಳುತ್ತ ತಮ್ಮ ಮೇಲೆ ಪ್ರಭಾವವನ್ನು ಬೀರಿದ ಮಹಾಕವಿಗಳ ಹೆಸರುಗಳನ್ನು ಹೇಳಿದ್ದಾರೆ :

> ಹೋಮರಗೆ ವರ್ಜಿಲಗೆ ಡಾಂಟೆ ಮೇಣ್ ಮಿಲ್ಟನಗೆ
> ನಾರಣಪ್ಪಂಗೆ ಮೇಣ್ ಪಂಪನಿಗೆ, ಋಷಿವ್ಯಾಸ
> ಭಾಸ ಭವಭೂತಿ ಮೇಣ್ ಕಾಳಿದಾಸಾದ್ಯರಿಗೆ,
> ನರಹರಿ ತುಲಸಿದಾಸ ಮೇಣ್ ಕೃತ್ತಿವಾಸಾದಿ
> ನನ್ನಯ್ಯ ಫಿರ್ದೂಸಿ ಕಂಬಾರವಿಂದರಿಗೆ,
> ಹಳಬರಿಗೆ ಹೊಸಬರಿಗೆ ಹಿರಿಯರಿಗೆ ಕಿರಿಯರಿಗೆ
> ........ ಮುಡಿಬಾಗಿ ಮಣಿದು ಕೈಜೋಡಿಸುವೆನಾಂ

ಈ ಹೆಸರುಗಳಲ್ಲಿ ಮರಾಠೀ ಕವಿಗಳಲ್ಲಿ ಯಾರೊಬ್ಬರದೂ ಹೆಸರಿಲ್ಲ. ಆದುದರಿಂದ ತೌಲನಿಕ ಅಧ್ಯಯನಕ್ಕೆ ಇಲ್ಲಿ ಕಾಲಿಡಲು ತೆರಪಿಲ್ಲ. ಏನಾದರೂ ಸಂಬಂಧ ಕಲ್ಪಿಸ ಹೊರಟರೆ ಅದು ಇಮಾಮ್ ಸಾಬಿಗೂ ಗೋಕುಲಾಷ್ಟಮಿಗೂ ಇರುವ ಸಂಬಂಧವನ್ನೇ ಹೇಳಿದಂತಾಗುತ್ತದೆ ! ಭಾರತೀಯ ಸೋದರ ಭಾಷೆಗಳಲ್ಲಿ ಇರುವ ರಾಮಾಯಣಗಳ ಪರಂಪರೆಯ ಅಧ್ಯಯನವೇ ಸಂಕಿರಣದ ಗುರಿಗಳಲ್ಲಿ ಒಂದೆಂದು ಸಂಚಾಲಕ ಸ್ನೇಹಿತರು ತಿಳಿಸಿದುದರಿಂದ ಅಂತಹ ಒಂದು ಪರಿವೀಕ್ಷಣೆಯನ್ನು ಇಲ್ಲಿ ಮಾಡಲಾಗಿದೆ.

ಕವಿರಾಜಮಾರ್ಗ ಪೂರ್ವದ ಶ್ರೀವಿಜಯನ 'ರಘುವಂಶ ಮಹಾಪುರಾಣ' ಅನಂತರದ ಪೊನ್ನನ 'ಭುವನೈಕ ರಾಮಾಭ್ಯುದಯ' (ಕ್ರಿ. ಶ. ಸು. 960)[1] ನಾಗಚಂದ್ರನ 'ರಾಮಚಂದ್ರ ಚರಿತಪುರಾಣ' ಅಥವಾ ಪಂಪರಾಮಾಯಣ (ಕ್ರಿ. ಶ. ಸು. 1100)[2] ಕುಮುದೇಂದು ರಾಮಾಯಣ, ನರಹರಿಯ 'ಕರ್ಣಾಟಕ ರಾಮಾಯಣ'[3] ಅಥವಾ 'ತೊರವೆ ರಾಮಾಯಣ' ಇತ್ಯಾದಿಗಳ ಹಾಗೆ ಮರಾಠೀ ಭಾಷೆಯಲ್ಲೂ ರಾಮಾಯಣಗಳ ಒಂದು ದೊಡ್ಡ ಪರಂಪರೆಯೇ ಇದೆ, ವಾಲ್ಮೀಕಿ ರಾಮಾಯಣದಷ್ಟು ವಿಸ್ತಾರವಾದವೂ ಇವೆ ; ಮಜ್ಜಿಗೆ ತಂದು ಕೊಡುವ ಕಾಲದಲ್ಲೇ ಮುಗಿಸಬಹುದಾದಷ್ಟು ಕಿರಿದಾದ 'ಟಾಕಾ ಪೂರ್ತಿ ರಾಮಾಯಣ' ರಚನೆಯೂ ಇದೆ.

ಮರಾಠೀ ಭಾಷೆಯ ಉಗಮ ಎಂದು ಏನು ಎಂಬದರ ಬಗ್ಗೆ ವಿದ್ವಾಂಸರಲ್ಲಿ ವಾದವಿವಾದಗಳಿವೆ ; ಸಾತವಾಹನರ ಕಾಲದಿಂದ ಮರಾಠೀ ಇತ್ತೆಂದು ಕೆಲವರು ವಾದಿಸಿದರೆ, ಕ್ರಿ. ಶ. ಏಳನೆಯ ಶತಮಾನವೆಂದು ಕೆಲವರು ವಿವರಿಸಿರುವುದೂ ಕಂಡು ಬರುತ್ತದೆ.[4] ಉಪಲಬ್ಧ ಮೊದಲ ಶಿಲಾಲೇಖ ಕೆಲವರ ಪ್ರಕಾರ ಸದ್ಯ ಶ್ರವಣಬೆಳಗೊಳದಲ್ಲಿ ಭವ್ಯಮೂರ್ತಿ ಗೊಮ್ಮಟೇಶ್ವರನ ಪಾದದಡಿಯಲ್ಲಿರುವ 'ಚಾವುಂಡರಾಜೇಂ ಕರವಿಲೇಂ' ಎಂಬುದೇ ಆದರೆ ಮತ್ತೆ ಕೆಲವರ ಪ್ರಕಾರ ಶಿಲಾಹಾರ ಲಕ್ಷ್ಮಣರಾಜನ ಕಾಲದಲ್ಲಿ ಬರೆದ ಅಕ್ಷಿಗ್ರಾಮದಲ್ಲಿ ದೊರೆತ ಶಾಸನವೇ ಪುರಾತನ

---

1. ರಾಷ್ಟ್ರಕೂಟ ಮುಮ್ಮಡಿ ಕೃಷ್ಣಚಕ್ರವರ್ತಿಯು ಚೋಳರನ್ನು ಕ್ರಿ.ಶ. 958-59ರಲ್ಲಿ ಗೆದ್ದುದು ಸೋಮದೇವಸೂರಿಯ 'ಯಶಸ್ತಿಲಕ ಚಂಪೂ' ಕೃತಿಯ ಪುಷ್ಪಿಕಾಗದ್ಯ' ಹಾಗೂ ಕೃಷ್ಣನ ಕರ್ಹಾಡ್ ತಾಮ್ರ ಶಾಸನಗಳಿಂದ ಸ್ಪಷ್ಟವಿದೆ. ಪೊನ್ನನಕೃತಿಗೆ ಚೋಳರನ್ನು ಗೆದ್ದುದೆ ಕಾವ್ಯದ ವಸ್ತುವಾಗಿರುವುದರಿಂದ 'ಭುವನೈಕ ರಾಮಾಭ್ಯುದಯ' ಕ್ರಿ ಶ. 959ರ ಅನಂತರದಲ್ಲಿ ರಚನೆಗೊಂಡಿದೆ.

2. ನಾಗಚಂದ್ರನ ರಾಮಚಂದ್ರಚರಿತ ಪುರಾಣದ ನಾಲ್ಕು ಪದ್ಯಗಳನ್ನು (೧-೧೨, ೧೫, ೧೭ ಮತ್ತು ೧೮) ಕ್ರಿ.ಶ. 1112ರ ಕಣ್ಣೂರಿನ ಶಾಸನದಲ್ಲಿ ಯಥಾವತ್ತಾಗಿ ಉಲ್ಲೇಖಿಸಿರುವುದರಿಂದ ಆ ಗ್ರಂಥ, ತತ್ಪೂರ್ವದಲ್ಲಿಯೆ ರಚಿಸಲ್ಪಟ್ಟದೆ (ಎರಡು ಹೊಸ ಶಾಸನಗಳು ಮತ್ತು ನಾಗಚಂದ್ರನ ಇತಿವೃತ್ತ–ಮಾನವಿಕ ಕರ್ಣಾಟಕ, ಸಂಪುಟ-೫, ಸಂಚಿಕೆ-೧, ಪು. ೧೨೧-೧೨೮)

3. ನರಹರಿಯು ದೇವಗಿರಿಯ ಸೇಉಣಚಕ್ರವರ್ತಿ ರಾಮಚಂದ್ರನ ಕಾಲದಲ್ಲಿ 'ರಾಮಾಯಣ' ಕಾವ್ಯವನ್ನು ಬರೆದಿದ್ದಾನೆ. ಈ ಕಾವ್ಯದಲ್ಲಿ 'ಕಲಿಸೇವಣ' 'ಸೇವಣ' ಎಂದು ಸೇವಣರ ಉಲ್ಲೇಖವಿರುವುದನ್ನು ಗಮನಿಸಬೇಕು. ಕುಮಾರವ್ಯಾಸ ಹಾಗೂ ಕುಮಾರವಾಲ್ಮೀಕಿ ಕವಿಗಳ ಬಗ್ಗೆ ವಿಶೇಷ ಮಾಹಿತಿಗೆ ದಯವಿಟ್ಟು ನೋಡಿ : ಕುಮಾರವ್ಯಾಸ ಹಾಗೂ ಕುಮಾರ ವಾಲ್ಮೀಕಿ ಕವಿಗಳ ಕಾಲ ಮತ್ತು ಮತಗಳ ವಿಚಾರ – ಬೆಂಗಳೂರು ವಿಶ್ವವಿದ್ಯಾನಿಲಯದ ಪತ್ರಿಕೆ 'ಸಾಧನೆ' ಸಂಪುಟ-೫, ಸಂಚಿಕೆ-೨, ಏಪ್ರಿಲ್-ಜೂನ್ 1976, ಪುಟಗಳು-೧೩೩-೧೭೮

4. Dr. Alfred Master 'A Grammer of old Marathi'

ವಾಗಿದೆ.[5] ಈ ಎರಡನ್ನೂ ಅವಲೋಕಿಸಿದರೂ ಕ್ರಿ. ಶ. ಹತ್ತನೆಯ ಶತಮಾನಕ್ಕೂ ಹಿಂದೆ ಹೋಗುವುದಿಲ್ಲ–ಮರಾಠೀಯ ಹಳಮೆ; ಮರಾಠೀ ಸಾಹಿತ್ಯದ ಹಳಮೆಯಂತೂ ಇನ್ನೂ ಇತ್ತೀಚಿನದ್ದಾಗಿದೆ. ಕ್ರಿ. ಶ. ೧೧೮೮ ರಲ್ಲಿ ಬರೆಯಲ್ಪಟ್ಟಿರುವ ಮುಕುಂದ ರಾಜನ "ವಿವೇಕಸಿಂಧೂ" ಗ್ರಂಥವೇ ಮೊದಲ ಗ್ರಂಥವಾಗಿದೆ. ಸುಮಾರು ಈ ಒಂದು ಸಾವಿರವರ್ಷದ ಅವಧಿಯಲ್ಲಿ ಮರಾಠಿಯಲ್ಲಿ ಹಲವು ರಾಮಾಯಣಗಳು ಸೃಷ್ಟಿಗೊಂಡಿದ್ದರೂ ಅವನ್ನು ಕನ್ನಡದಲ್ಲಿ 'ವಾಲ್ಮೀಕಿ ಪರಂಪರೆ' 'ಕಾಳಿದಾಸ ಪರಂಪರೆ ಮತ್ತು 'ವಿಮಲಸೂರಿ ಅಥವಾ ಜೈನ ರಾಮಾಯಣ ಪರಂಪರೆ' ಎಂದು ಗುರುತಿಸ ಬಹುದಾದ ರೀತಿಯಲ್ಲಿ ಗುರುತಿಸಲು ಸಾಧ್ಯವಿಲ್ಲ. ಮರಾಠೀ ರಾಮಾಯಣಗಳು ವಿಶೇಷತಃ ವಾಲ್ಮೀಕಿಯ ಪರಂಪರೆಗೆ ಸೇರಿವೆ. ಕುವೆಂಪು ಸೃಜಿಸಿದ 'ಶ್ರೀ ರಾಮಯಣ ದರ್ಶನಂ' ಮಹಾಕಾವ್ಯ ಮೂರು ಪರಂಪರೆಗಳನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು 'ಬೇರೆ ಮ್ಯೆಯ್ಯಾಂತು' ನಿಂತಿದೆ. ಇವುಗಳಲ್ಲಿ ಎಲ್ಲಿಯಾದರೂ ಸಾದೃಶ್ಯಗಳು ಕಂಡರೆ ಅವು ಮಹಾಕವಿಗಳ ಮಾತಿನಲ್ಲಿಯೇ ಹೇಳುವುದಾದರೆ ಮೂಲ ವಿಗ್ರಹಕ್ಕೆ ಸಂಬಂಧಿಸಿವೆ. ಇವುಗಳಲ್ಲಿ ಮುಖ್ಯವಾದ ಕೆಲವನ್ನು ಕಾಲಾನುಪೂರ್ವಿ ದೃಷ್ಟ್ಯಾ ಕೆಳಗಿನಂತೆ ವಿವರಿಸಬಹುದು : ಏಕನಾಥನ 'ಭಾವಾರ್ಥರಾಮಾಯಣ' ಮುಕ್ತೇಶ್ವರನ 'ರಾಮಾಯಣ' ಗಿರಿಧರ ಕವಿಯ 'ಮಂಗಲ ರಾಮಾಯಣ' ಅಜ್ಞಾತ ಕರ್ತೃವಿನ 'ಮಣಿರತ್ನ ರಾಮಾಯಣ' ಶ್ರೀಧರನ ರಾಮಾಯಣ 'ರಾಮವಿಜಯ' ವಾಮನನ 'ಭಾಗವತ ರಾಮಾಯಣ' ಮೋರೋಪಂತನ '೧೦೮ ರಾಮಾಯಣಗಳು' ನಿರಂಜನ ಮಾಧವನ 'ಚಿದ್ಬೋಧರಾಮಾಯಣ' ಮತ್ತು ಗ. ದಿ. ಮಾಡಗೂಳ್ಕರರ 'ಗೀತ ರಾಮಾಯಣ' ಇವಲ್ಲದೆ ಜಾನಪದ ಗೀತೆಗಳಲ್ಲಿ ರಾಮಾಯಣಗಳೂ ಮತ್ತು ರಾಮಾಯಣನ್ನು ಆಧರಿಸಿದ ಖಂಡಕಾವ್ಯಗಳೂ ಇವೆ.

**ಭಾವಾರ್ಥರಾಮಾಯಣ :** ಕ್ರಿ.ಶ. 1584ರಲ್ಲಿ ಜ್ಞಾನೇಶ್ವರಿಯ ಶುದ್ಧಪಾಠ ವನ್ನು ಹಲವು ಪ್ರತಿಗಳಿಂದ ಸಿದ್ಧಪಡಿಸಿದ, ಪೈಠಣದಲ್ಲಿದ್ದ, ಏಕನಾಥ (ಕ್ರಿ.ಶ, 1533–1599) ಒಬ್ಬ ದೊಡ್ಡ ಭಾಗವತ ಕವಿಯಾಗಿದ್ದ. ಭಾಗವತವೇ ಅವನ ಪ್ರಸಿದ್ಧ ಕೃತಿ. ಅದರ ಅನಂತರ 'ಭಾವಾರ್ಥ ರಾಮಾಯಣ' ; ಆದರೆ ಸಂತ ಏಕನಾಥನ ಕೃತಿಗಳಲ್ಲಿ ಗಾತ್ರದಲ್ಲಿ ಇದು ಎಲ್ಲಕ್ಕೂ ದೊಡ್ಡದು ; ಇದನ್ನು ಓವೀ ಛಂದದಲ್ಲಿ ಬರೆದಿವೆ. ಇದರಲ್ಲಿ

---

5. ಪ್ರೊ । . ಶಂ. ಗೋ. ತುಳಪುಳೆ 'ಅಕ್ಷಿಚಾ ಶಿಲಾಲೇಖ' ; ಪ್ರೊ।. ತುಳಪುಳೆ ಮತ್ತು ಡಾ॥ ಎ. ಎಸ್. ಅಳ್ತೇಕರ್ ಇವರು ಶ್ರವಣಬೆಳ್ಗೊಳದ ಶಿಲಾಲೇಖವನ್ನು ಲಿಪಿಶಾಸ್ತ್ರದ ಆಧಾರದ ಮೇಲೆ 11-12ನೆಯ ಶತಮಾನದ್ದೆಂದು ವಿವರಿಸಿದ್ದಾರೆ. ಇದು ಅವರ ಪ್ರಕಾರ ಹೊಯ್ಸಳ ದೊರೆ ವಿಷ್ಣುವರ್ಧನನ ಮಂತ್ರಿ ಗಂಗರಾಜನ ಕಾಲದ್ದು. "ಗಂಗರಾಜೇ ಸುತ್ತಾಲೇ ಕರವಿಲೇ" ಎಂಬ ಇನ್ನೊಂದು ಶಾಸನವಿರುವುದು ಇಲ್ಲಿ ಗಮನಾರ್ಹ.

6. ಶ್ರೀರಾಮಾಯಣದರ್ಶನಂ, ಪು. ೮೨೫ (೧೯೭೧ರ ಆವೃತ್ತಿ)

ಏಳು ಖಂಡಗಳಿದ್ದು ೨೯೭ ಅಧ್ಯಾಯಗಳಿವೆ. ಒಟ್ಟು ಪದ್ಯಗಳ ಸಂಖ್ಯೆ-೪೦,೦೦೦ ; ಆದರೂ ಇಲ್ಲಿ ಒಂದು ಮಾತನ್ನು ಹೇಳಬೇಕು. ಅದೇನೆಂದರೆ ಏಕನಾಥ ಈ ಗ್ರಂಥವನ್ನು ಪೂರ್ತಿಗೊಳಿಸಲಿಲ್ಲ;ಕೊನೆಯ ೪೪ ಅಧ್ಯಾಯಗಳನ್ನು ಏಕನಾಥನ ಶಿಷ್ಯ ಗಾವಬಾ ಎಂಬಾತನು ಬರೆದು ಮುಗಿಸಿದ್ದಾನೆಂದು[7] ಆಖ್ಯಾಯಿಕೆ. ಏಕನಾಥನ ಸರ್ವ ಗ್ರಂಥಗಳಲ್ಲಿ ಇದುವೆ ಕೊನೆಯದೆಂದು ತೋರುತ್ತದೆ. ವಸ್ತುಸ್ಥಿತಿಯಲ್ಲಿ ಏಕನಾಥನ ಕವಿತ್ವದ, ವಿದ್ವತ್ತತೆಯ ಹಾಗೂ ಆತ್ಮಾನುಭಾವದ ಸಾರಸರ್ವಸ್ವ ಈ ಗ್ರಂಥದಲ್ಲಿ ಘನೀಭೂತಗೊಂಡಿದೆ, ಹರಳುಗೊಂಡಿದೆ. ಈ ಗ್ರಂಥ, ಮರಾಠೀ ಭಾಷೆಯ ವೈಭವ ಸಂಪನ್ನತೆಯನ್ನು ಹೆಚ್ಚಿಸಿದುದಲ್ಲದೆ ಆ ಭಾಷೆಗೆ ಒಂದು ಸುಸ್ಥಿರ ಸ್ವರೂಪವನ್ನೂ ಒದಗಿಸಿತು. ಇದರಲ್ಲಿ ಭಕ್ತಿರಸದ ಪ್ರಾಚುರ್ಯತೆಯಿದ್ದರೂ ವೀರ ಹಾಗೂ ಕರುಣ ರಸಗಳೂ ಉಚಿತ ಸ್ಥಳಗಳಲ್ಲಿ ಯೋಗ್ಯ ರೀತಿಯಲ್ಲಿ ಆವಿರ್ಭವಿಸಿ ನಿಂತಿವೆ. ಭಕ್ತಿಪರ ಕಾವ್ಯದಲ್ಲಿ ಶೃಂಗಾರ ಗೌಣ ; ಅದು ಕೂಡ ಈ ಕಾವ್ಯದಲ್ಲಿ ಸಾಕಷ್ಟು ಬಂದಿದ್ದು ಔಚಿತ್ಯವನ್ನು ಮೀರಿಲ್ಲ. ಹಾಸ್ಯ ಇತ್ಯಾದಿ ಎಲ್ಲ ರಸಗಳೂ ಯಥಾವತ್ತಾಗಿ ಉಚಿತ ರೀತಿಯಲ್ಲಿ ಬಂದಿವೆ. ರಾಮಾಯಣ ಕಥೆ ಮುಖ್ಯವಾಗಿ ಐತಿಹಾಸಿಕವೆನಿಸಿದರೂ ಏಕನಾಥನಿಗೆ ಅದು ಹೆಚ್ಚಾಗಿ ಆಧ್ಯಾತ್ಮಿಕವೆ. ಇಲ್ಲಿ ನಮಗೆ ಏಕನಾಥ ಹಾಗೂ ಶ್ರೀ ಕುವೆಂಪು ಇವರಲ್ಲಿ ಒಂದೇ ಬಗೆಯ ದೃಷ್ಟಿಯಿದ್ದುದು ಕಂಡುಬರುತ್ತದೆ. ಈ ಇಬ್ಬರು ಮಹಾಕವಿಗಳೂ ನಮಗೆ ಗೊತ್ತಿದ್ದಂತೆ ಕೀರ್ತಿಶನಿಯ ಬೆನ್ನು ಹತ್ತಿ ಕಾವ್ಯಗಳನ್ನು ಸೃಷ್ಟಿಸಿಲ್ಲ; ಯಾರ ಬಲಾತ್ಕಾರಕ್ಕೂ ಅವರು ಕಾವ್ಯಗಳನ್ನು ಕೃತಿಸಿಲ್ಲ. ಅವರವರ ಅಂತರ್ಗತ ಭಕ್ತಿಗಳೇ ಕಾವ್ಯ ಕೃತಿ ರಚನೆಗಳಿಗೆ ಕಾರಣವಾಗಿವೆ—

ಕುವೆಂಪು ಹೀಗೆ ಹೇಳಿದ್ದಾರೆ :

**ವಿಗ್ರಹಕೆ ದೇವತಾವಾಹನಂ ಗೆಯ್ವವೋಲ್**
**ಭಕ್ತಿಯಿಂದಾಹ್ವಾನಿಪೆನ್. ಕವಿಗುರುವೆ, ನೀಡೆನಗೆ**
**ವಾಙ್ಮಂತ್ರ ಶಕ್ತಿಯಂ[8].**

* * * *

**ಇಂತಿಂತು ತೋರುತಾ ಪ್ರಾಣಮಯ ಲೋಕದಿಂ**
**ಗರ್ಭದಿಂದರ್ಭಕಂ ಯೋನಿ ಮುಖದಿಂದಿಳಿವವೊಲ್**
**ಕರುಣೆಯಿಂದೆನಗಾಗಿ ನನ್ನ ಗುರುದೇವನಾ**
**ಬ್ರಹ್ಮಕವಿ ತಾನುಮವತರಿಸಿದನು ನನ್ನೊಡನೆ**

---

7. 'ಭಾವಾರ್ಥ ರಾಮಾಯಣ' ಗ್ರಂಥದ ಕೊನೆಯ ಅಧ್ಯಾಯಗಳ ರಚನಾ ಸಂಬಂಧದಲ್ಲಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಶ್ರೀ ಪಾಂಗರಕರ್ ಕೊನೆಯ ೪೪ ಅಧ್ಯಾಯಗಳನ್ನು ಗಾವಬಾ ಬರೆದಿರುವವನೆಂದರೆ ಜ. ಸ. ಕರಂದೀಕರ್ ಅವರು ಗಾವಬಾ ಕೇವಲ 'ಉತ್ತರ ಕಾಂಡ'ವೊಂದನ್ನೇ ಬರೆದಿದ್ದಾನೆಂದು ಅಭಿಪ್ರಾಯ ಪಟ್ಟಿದ್ದಾರೆ.

8. ಪೂರ್ವೋಕ್ತ 'ಶ್ರೀರಾಮಾಯಣದರ್ಶನಂ' ಪು. ೧೬-೧೭

ಸುಪರಿಚಿತದನ್ನಮಯದ್ಯೆಂದ್ರಿಯ ಜಗತ್ತಲಕೆ !
ನೀಹಾರಿಕಾಲಕ್ಷಗಳ್, ನಕ್ಷತ್ರ ಕೋಟಿಗಳ್,
ಸೂರ್ಯಚಂದ್ರಾದಿ ವಂಕಿಮ ದೇಶಕಾಲದ
ಮನೋಜ್ಞವೀಧಿಯಿನಿಳಿದು ಕಂಡೆನೀ ಉರ್ವರೆಯ
ಶಾಶ್ವತ ಅಯೋಧ್ಯೆಯಂ :
ಕಾಣ್ಬುದದೊ ನೋಡಲ್ಲಿ
ರಾಮಪಟ್ಟಾಭಿಷೇಕೋತ್ಸವದ ಮೂಲವ್, ಆ
ಮಾನುಷ ಸ್ಥೂಲ ನಶ್ವರ ಕೃತಿಗೆ ತಾನಿದುವೆ
ನಿತ್ಯ ಶಾಶ್ವತ ದಿವ್ಯ ಮಾತೃಕೆ ಕಣಾ !

* * * *

ಮಾನವ ಕವಿಯಾಲಿಸಲ್ಕರಿಯವೀ ಸೃಷ್ಟಿ
ಗಾಥೆಯಂ ನಿತ್ಯ ರಾಮಾಯಣದ ರಾಮಂಗೆ
ನಿಚ್ಚಮಂ ನಡೆವ ಪಟ್ಟೋತ್ಸವ ಸ್ತೋತ್ರಮಂ
ಆಲಿಸದೊ ! ಸ್ಥಾವರದಿ, ಜಂಗಮದಿ, ಜಡಜೀವ
ಚೇತನ ಚರಾಚರದೊಳಣುರೇಣು ತೃಣಕಾಷ್ಠ
ಕೋಟಿ ಕೋಟಿಯ ಕಂಠದಿಂದೇಳುವಾನಂದ
ಗೋಷ್ಠಿಗಾನಂ !
…… ………… ರಾಮಂಗೆ ಮೊದಲಲ್ತೆ
ರಾಮಾಯಣಂ ? ಮುನ್ನಲ್ತೆ, ಪಿರಿದಲ್ತೆ, ಮೇಯ್ಕಲ್ತೆ
ಮನೆಯಲ್ತೆ ರಾಮಾಯಣಂ ? ರಾಮನಾಮದ ಮಹಿಮೆ
ರಾಮಂಗೆ ಮಿಗಿಲೆಂಬವೋಲ್ ರಾಮಾವತಾರಕಂ
ಗುರುತರಂ ತಾನ್ನೆಸೆ ರಾಮಾಯಣಾವತಾರಂ ! [9]

ಇಲ್ಲಿ ನಮಗೆ ರಾಮಾಯಣ ಮತ್ತು 'ರಾಮ' ಎಂದರೆ ಏನೆಂಬುದು ಸುಸ್ಪಷ್ಟ. ರಾಮ, ನಿತ್ಯ ! ಮಂಗಳ !! ಸರ್ವ ಬೆಳಕು !!!

ಏಕನಾಥ ತನ್ನ ರಾಮಾಯಣದ ರಚನೆಯ ಬಗ್ಗೆ ಹೀಗೆ ಹೇಳಿದ್ದಾನೆ ;

ಜಾಗೃತೀ ಮಾಜೇ ವರ್ತತಾ । ಪುಢೇ ಪ್ರಕಾಶೇ ರಾಮಕಥಾ ।
ದುಶ್ಚಿತಪಣೇ ಠೇವೇಜಾತಾ । ರಾಮ ತತ್ವತಾ ರಾಮಾಯಣ ದಾವೀ ॥
ಕರೂಜಾತಾ ಫುಕಟ ಗೋಷ್ಟೀ । ತ್ಯಾ ಮಾಜೇ ರಾಮಕಥಾ ಉಠೀ ।
ರಾಮೇ ಪುರವಿಲೀ ಪಾಠೀ । ಖಿಳಲೀ ದೃಷ್ಟೀ ರಾಮಾಯಣೇ ॥
ಐಸಿಯಾತ ನ ಕರೀ ಮ್ಹಣತಾ । ರಾಮ ಚಢೇ ಮೀಪಣಾಚೇ ಮಾಥಾ ।
ಮಗ ತೋ ಆಪಲಿಯೇ ಸಾಜಸತ್ತಾ । ವದವೀ ಕಥಾ ಬಲಾತ್ಕಾರೇ ॥ [10]

ರಾಮಪ್ರಭು ಕೇವಲ ಪ್ರೇರಣೆಯನ್ನು ಕೊಡಲಿಲ್ಲ. ಜಾಗ್ರುತ, ಸ್ವಪ್ನ ಮತ್ತು ಸುಷುಪ್ತ್ಯಾವಸ್ಥೆಗಳಲ್ಲಿ ಪ್ರತ್ಯಕ್ಷ ನಿಂತು 'ರಾಮಾಯಣ ರಚಿಸು' ಎಂದು ರಾಮಾಯಣದ ಪಾಠ

---

9. ಅದೇ 'ಅಭಿಷೇಕ ವಿರಾಡ್ ದರ್ಶನ' ಸಂಚಿಕೆಯ ಕೊನೆಯಲ್ಲಿಯ ಕೆಲ ಭಾಗಗಳು

10. ಭಾವಾರ್ಥರಾಮಾಯಣ, ಬಾಲಕಾಂಡ, ೪-೪೪

ವನ್ನು ಸೃಜಿಸುವಲ್ಲಿ ಪ್ರವೃತ್ತನನ್ನಾಗಿ ಮಾಡಿದ ; ತಕರಾರವನ್ನು ಮಾಡದ ಹಾಗೆ ರಾಜಸತ್ತೆಯಿಂದ (ನನ್ನ) ಅಹಂವಿಕೆಯ ತಲೆಯನ್ನೇರಿ ನಿಂತ, ಎಲ್ಲೆಲ್ಲೂ ರಾಮಕಥಾ ಪ್ರಕಾಶಿಸಿತು ! ಏಕನಾಥನಿಗೆ ರಾಮಾಯಣವೇ ಒಂದು ಮಹಾನ್ ರೂಪಕ. ಎಲ್ಲಿ

ಅಜ = ಬ್ರಹ್ಮ (ಪರಬ್ರಹ್ಮ)
ದಶರಥ = ದಶೇಂದ್ರಿಯಗಳು
ರಾಮ = ಅಹಮಾತ್ಮಾ ಅವತಾರ ಶಕ್ತಿ, ಆನಂದ ವಿಗ್ರಹೀ
ಕೌಸಲ್ಯೆ = ಸದ್ವಿದ್ಯೆ ;
ಸುಮಿತ್ರೆ = ಸದ್ಬುದ್ಧಿ ;
ಕೈಕೇಯಿ = ಅವಿದ್ಯಾ ;
ಮಂಥರೆ = ಕುವಿದ್ಯಾ ಮತ್ತು
ಸೀತೆ = ರಾಮನ ಚಿಚ್ಛಕ್ತಿ...ಇತ್ಯಾದಿ

ಹೀಗೆಯೆ ಇತರ ಪಾತ್ರಗಳು. ಈ ರೂಪಕ ಸೃಷ್ಟಿಯಂತೆಯೆ ಮಹಾಕವಿ ಕುವೆಂಪು ಅವರಿಗೆ ರಾಮಾಯಣವು ಒಂದು ಪ್ರತಿಮಾವಿಧಾನದ ಸಾಮ್ರಾಜ್ಯ. ಅವರು ಸಂತ, ಇವರು ಋಷಿ. ಅವರು ಇವರನ್ನು ಕಂಡಿಲ್ಲ ಇವರು ಅವರನ್ನು ನೋಡಿಲ್ಲ ! ಇಬ್ಬರಲ್ಲೂ ಅವತರಿಸಿದ್ದು ಒಂದೇ, ಅದು ನಿತ್ಯ ಸತ್ಯ ರಾಮಾಯಣ. ಏಕನಾಥರು ಮೂಲ ವಾಲ್ಮೀಕಿ ರಾಮಾಯಣವಲ್ಲದೆ ಅಧ್ಯಾತ್ಮರಾಮಾಯಣ, ಅದ್ಭುತರಾಮಾಯಣ, ಆನಂದರಾಮಾಯಣ, ಶಿವರಾಮಾಯಣ, ಸೇತುಬಂಧ ರಾಮಾಯಣ, ಭಾಗವತ, ಪದ್ಮಪುರಾಣ, ಸ್ಕಾಂದಪುರಾಣ, ನಾರದೀಯ ಪುರಾಣ, ಮಹಾಭಾರತ, ಯೋಗವಾಸಿಷ್ಠ ಇತ್ಯಾದಿಗಳನ್ನು ತಾವು ಬರೆದಿರುವ ರಾಮಾಯಣದಲ್ಲಿ ಬಳಸಿಕೊಂಡಿದ್ದಾರೆ. ಕುವೆಂಪು ಅವರ ಮೇಲೆ ಆದ ಪ್ರಭಾವಗಳ ಉಲ್ಲೇಖವನ್ನು ಈಗಾಗಲೇ ಕೊಟ್ಟಿದ್ದೇನೆ. ಇಬ್ಬರೂ ಮಹಾನುಭಾವರೆನ್ನುವಲ್ಲಿ ಭಿನ್ನಾಭಿಪ್ರಾಯ ಇರದು. ಇಬ್ಬರದೂ ಭಕ್ತಿಪ್ರಧಾನವಾದ ಅದ್ವೈತ ದೃಷ್ಟಿ.

ಮುಕ್ತೇಶ್ವರರಾಮಾಯಣ : — ಮುಕ್ತೇಶ್ವರ (ಕ್ರಿ. ಶ. 1521-1571) ಏಕನಾಥರಮೊಮ್ಮಗ; ಜನ್ಮಸ್ಥಳ ಪೈಠಣ. ಇವನು ದತ್ತ ಸಂಪ್ರದಾಯಿ, ಇವನ ರಾಮಾಯಣದ ದೃಷ್ಟಿ ಅಜ್ಜ ಏಕನಾಥನಿಂದ ಭಿನ್ನ. ಅಜ್ಜನದು ಜನಪ್ರಿಯ ಶೈಲಿಯಾದರೆ ಇವನದು ಪಾಂಡಿತ್ಯಪೂರ್ಣ ಶೈಲಿ. ವಿವಿಧ ವೃತ್ತಗಳಲ್ಲಿ ರಾಮಾಯಣವನ್ನು ಬರೆದಿದ್ದಾನೆ. ಭುಜಂಗಪ್ರಯಾತ, ಪಾದಾಕುಲಕ ವೃತ್ತ ಜಾತಿಗಳೇ ಹೆಚ್ಚಾಗಿವೆ. ಮುಕ್ತೇಶ್ವರನದು ಸ್ವಲ್ಪ ಕ್ಲಿಷ್ಟ ಶೈಲಿಯೆಂದೇ ಹೇಳಬೇಕು. ಸೃಷ್ಟಿ ಸೌಂದರ್ಯದ ವರ್ಣನೆಗಳು, ಮನೋವಿಶ್ಲೇಷಣೆಯ ರೂಪರೇಷೆಗಳು, ಮತ್ತು ಶಬ್ದ ಚಿತ್ರಗಳು ತೋರವಾಗಿ ಬಂದಿವೆ. ಮುಕ್ತೇಶ್ವರನ ಮಹಾಭಾರತ ರಾಮಾಯಣಕ್ಕಿಂತ ಹೆಚ್ಚು ಪ್ರಸಿದ್ಧ. ಅವನ ಕೃತಿಗಳಲ್ಲಿ ಅದಕ್ಕೆ ಅಗ್ರಸ್ಥಾನ.

**ಮುಸಲ್ಮಾನ ಮರಾಠೀ ಸಂತ ಕವಿಗಳು :** ಏಕನಾಥ–ತುಕಾರಾಮರ ಕಾಲದಲ್ಲಿ ಸಾಹಿತ್ಯ ಸೃಜಿಸಲು ಆರಂಭಿಸಿದ ಮುಸಲ್ಮಾನ ಸಂತ ಕವಿಗಳ ಕಾರ್ಯವೂ ೧೫ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಹಬ್ಬಿಕೊಂಡಿದ್ದು ಗಮನಾರ್ಹವಾಗಿವೆ. ಇವರಲ್ಲಿ ಆರಂಭದಲ್ಲೇ ಇದ್ದ ಶಾಹ ಮುಂತೋಜಿ ಅಗ್ರಗಣ್ಯ. ಈತ ಮೃತ್ಯುಂಜಯ ಎಂಬ ಹೆಸರಿನಿಂದ ಪ್ರಸಿದ್ಧ; ಬಹಮನೀ ರಾಜಮನೆತನಕ್ಕೆ ಸಂಬಂಧಿಸಿದ್ದನೆಂದೂ ತಿಳಿಯಲಾಗಿದೆ. ಈತನಿಗೆ ಸಹಜಾನಂದಸ್ವಾಮಿಗಳು ಗುರುಗಳಾಗಿದ್ದರು. ಬೀದರ ಜಿಲ್ಲೆಯ ಇಂದಿನ ಬಸವ ಕಲ್ಯಾಣ (ಚಾಲುಕ್ಯರ ರಾಜಧಾನಿ ಕಲ್ಯಾಣ) ಹಾಗೂ ಅದರ ಹತ್ತಿರದ ನಾರಾಯಣಪುರ ಸ್ಥಳದಲ್ಲಿ ಈತ ಇರುತ್ತಿದ್ದ. ನಾರಾಯಣಪುರದಲ್ಲಿ ಈತನ ಸಮಾಧಿಯಿದೆ. ಈತ 'ಅನುಭವಸಾರ' 'ಅದ್ವೈತ ಪ್ರಕಾಶ' ಮುಂತಾಗಿ ಒಂಭತ್ತು ಗ್ರಂಥಗಳನ್ನು ರಚಿಸಿದ್ದಾನೆ, "ಸಿದ್ಧ ಸಂಕೇತ ಪ್ರಬಂಧ" ಎಂಬುದು ಇವನ ಬೃಹತ್ಕೃತಿ. ಇದರಲ್ಲಿ ೨೦೦೦ ಓವಿಗಳು ಇವೆಯೆಂದು ತಿಳಿದುಬಂದಿದೆ. ಇದರ 2ನೆಯ ಪ್ರಕರಣಕ್ಕೆ 'ರಾಮ-ಜಾನಕೀ ಸಂವಾದ' ಎಂದು ಹೆಸರು. ಇಲ್ಲಿ ಪತಿ ಪತ್ನಿಯರು ಇರಬೇಕಾದ ನೀತಿ ನಿಯಮಗಳ ವಿವರಣೆ ಕಂಡುಬರುತ್ತವೆ. ಭಾಷೆ ಸರಳ ಹಾಗೂ ಸುಂದರವಾಗಿದೆ ; (ರಾಮ ಜಾನಕಿಗೆ ಹೇಳುತ್ತಾನೆ)

**ಮನ–ನಯನಾಂ ಯೇಕಾಂತ ಕರಾವಾ ।**
**ಪ್ರೇಮಭಾವ ಹೃದಯೀ ಧರಾವಾ ।**
**ಸತ್ಯ ವಿಶ್ವಾಸ ಮಾನಾವಾ ।**
**ನಿಶ್ಚಯಸೀ ॥ .....ಇತ್ಯಾದಿ.**

ಇವನು ಕೇವಲ ಮುಸಲ್ಮಾನ ಕವಿಗಳಲ್ಲಷ್ಟೇ ಅಲ್ಲ, ಮಹಾರಾಷ್ಟ್ರದ ಸಕಲ ಸಂತ ಮಂಡಲಿಯಲ್ಲಿ ಮಾನನೀಯ ಸ್ಥಾನವನ್ನು ಪಡೆದಿರುವನೆಂದು ಮತ್ತು "ಮಹಾಯೋಗಿ" ಎಂದು ಗೌರವಿಸಲ್ಪಟ್ಟಿರುವನೆಂದು ಆರ್. ಸಿ. ಢೇರೆ ವಿವರಿಸಿದ್ದಾರೆ.

**ಗಿರಿಧರ ಕವಿಯ 'ಮಂಗಲ ರಾಮಾಯಣ' (ಕ್ರಿ. ಶ. 17ನೆಯ ಶತಮಾನ) :** ಈತ ಸಮರ್ಥ ಸಂಪ್ರದಾಯಿ: ಏಳು ರಾಮಾಯಣಗಳನ್ನು ಬರೆದ ಹಾಗೆ ತಿಳಿದುಬರುತ್ತದೆ. 'ಮಂಗಲರಾಮಾಯಣ' ಎಂದು ಹೆಸರು ಬರಲು ಕಾರಣ ಇದರ ಪ್ರತಿ ಪದ್ಯದ ಮುಕ್ತಾಯ "ಕುರ್ಯಾತ್ ಮಂಗಲ ರಾಘವಂ ವಿಜಯತೇ ರಾಮಾಯಣಂ ಮಂಗಲಂ" ಎಂಬ ಪಂಕ್ತಿಯಿಂದ ಆಗುತ್ತಿರುವುದರಿಂದ; ಈ ರಾಮಾಯಣ ಸಂಪೂರ್ಣ ಶಾರ್ದೂಲವಿಕ್ರೀಡಿತ ವೃತ್ತದಲ್ಲಿದೆ. ಬಾಲಕಾಂಡ (ಪದ್ಯ ಸಂ. 174) ಅಯೋಧ್ಯಾಕಾಂಡ (ಪದ್ಯ ಸಂ. 123), ಅರಣ್ಯಕಾಂಡ (ಪದ್ಯ ಸಂ. 121), ವಿಷ್ಣುಪುರಾಣಕಾಂಡ (ಪದ್ಯ ಸಂ. 126) ಸುಂದರಕಾಂಡ (ಪದ್ಯ ಸಂ. 107) ಮತ್ತು ಯುದ್ಧಕಾಂಡ (ಪದ್ಯ ಸಂ. 914) ಗಳು ದೊರೆತಿದ್ದು ಉತ್ತರಕಾಂಡವು ದೊರೆತಿಲ್ಲ. ಅದನ್ನು ಬರೆದಿರುವ ಸೂಚನೆಯಿದೆ. ಇದೊಂದು ಸಾಮಾನ್ಯ ಕೃತಿ.

**ಶ್ರೀಧರ (ಗ್ರಂಥ ರಚನೆ 1702–1720)** : —ಈತ ಪಂಢರಪುರದ ಹತ್ತಿರ 'ನಾರಖುರೇಂ' ಎಂಬ ಗ್ರಾಮದವನು. ಮರಾಠಿಯಲ್ಲಿ ಅತ್ಯಂತ ಲೋಕಪ್ರಿಯ ಕವಿ, ಭಾರತ, ರಾಮಾಯಣ, ಭಾಗವತ ಮುಂತಾಗಿ ಹಲವು ಪುರಾಣಗಳಿಂದ ವಸ್ತುವನ್ನು ಎತ್ತಿಕೊಂಡು ಕೃತಿಗಳನ್ನು ರಚಿಸಿದ್ದಾನೆ. 'ರಾಮವಿಜಯ' ಇವನ ಕಾವ್ಯ. ಇದು ಆಬಾಲವೃದ್ಧರಿಗೂ ಅರ್ಥವಾಗುವ ಸರಳ ಶೈಲಿಯಲ್ಲಿದೆ.

**ಅಜ್ಞಾತ ಕವಿಕೃತ 'ಮಣಿರತ್ನರಾಮಾಯಣ'**:—ಈ ರಾಮಾಯಣದಲ್ಲಿ ೩೬೦೦೦ ಶ್ಲೋಕಗಳಿವೆ. ವಸಿಷ್ಠ ಮತ್ತು ಅರುಂಧತಿಯರ ಸಂವಾದ ರೂಪದಲ್ಲಿ ಗ್ರಂಥವನ್ನು ರಚಿಸಲಾಗಿದೆ. ಗ್ರಂಥವನ್ನು ಏಳು 'ಸೋಪಾನ'ಗಳಲ್ಲಿ ವಿಭಾಗಿಸಲಾಗಿದೆ. ಇವುಗಳಲ್ಲಿ ಪಂಚವಟಿಯ ಉತ್ಪತ್ತೀ, ಗೋದಾವರಿಯ ಉತ್ಪತ್ತೀ, ಚಿತ್ರಕೂಟ ಮಹತ್ವ, ವಾಲ್ಮೀಕಿ ಆಶ್ರಮ, ಸ್ತ್ರೀ ಧರ್ಮ ಇತ್ಯಾದಿಗಳ ವಿವರಣೆಯಿದೆ. ವೇದಸ್ತುತಿ, ಶಿವ ಸ್ತುತಿ, ಇಂದ್ರ, ಬ್ರಹ್ಮ, ಗಂಗಾ ಮುಂತಾದವರಸ್ತುತಿಗಳಲ್ಲದೆ 'ಗುರುಗೀತಾ' 'ದೇವ ಗೀತಾ' 'ಭಕ್ತಿಗೀತಾ' 'ಜ್ಞಾನಗೀತಾ' 'ಕರ್ಮಗೀತಾ' 'ಶಿವಗೀತಾ' ಮತ್ತು 'ವೇದ ಗೀತಾ' ಎಂಬ ಸಪ್ತಗೀತೆಗಳಿವೆ. ಇದು ಈ ರಾಮಾಯಣದ ವೈಶಿಷ್ಟ್ಯ.

**ವಾಮನನ 'ಭಾಗವತರಾಮಾಯಣ' (ಕ್ರಿ. ಶ. 18ನೆಯ ಶತಮಾನ)** : ಸಂತ ಕವಿಗಳಲ್ಲಿ ತುಕಾರಾಮನ ಅನಂತರ ಮರಾಠೀ ಭಾಷೆಯಲ್ಲಿ ಪಂಡಿತ ಕವಿಗಳ ಕಾಲ ಬರುತ್ತದೆ. ಇಂತಹ ಪಂಡಿತರಲ್ಲಿ ವಾಮನ ಪಂಡಿತ ಹಾಗೂ ಮೋರೋಪಂತ ಬಹಳ ಪ್ರಸಿದ್ಧರು. ವಾಮನ ಪಂಡಿತ ಶ್ಲೋಕ ರಚನೆಯಲ್ಲಿ ಶ್ರೇಷ್ಠನೆಂದು ಗಣಿಸ ಲಾಗುತ್ತದೆ : ಶ್ಲೋಕ ವಾಮನಾಚ. ಈತ ಏಕನಾಥನ ಕೃತಿಗಳ ಮೇಲೆ, ಟೀಕೆಗಳ ಮೇಲೆ ವಿವರಣೆಗಳನ್ನು ಬರೆದುದಲ್ಲದೆ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಯಥಾರ್ಥ ದೀಪಿಕಾ (ಗೀತೆಯ ಮೇಲಿನ ಟೀಕು) ಮತ್ತು ಭಾಗವತರಾಮಾಯಣ ಇವು ಬಹಳ ಪ್ರಮುಖವಾದವು. ಭಾಗವತರಾಮಾಯಣ ಒಂದು ರೀತಿಯಿಂದ ನೋಡಿದರೆ ಕೇವಲ ರಾಮಾಯಣವಲ್ಲ ; ಅದೊಂದು ದ್ವಿಸಂಧಾನ ಕಾವ್ಯ. ಅರ್ಥಾತ್ ರಾಮಾಯಣ ಪರವಾಗಿಯೂ ಮತ್ತು ಭಾಗವತ ಪರವಾಗಿಯೂ ಅರ್ಥ ಮಾಡ ಬಹುದು.

**ಮೋರೋಪಂತ** (ಕ್ರಿ.. ಶ. 1729–1794): ಮರಾಠೀ ಭಾಷೆಯ ಸಂಪತ್ತನ್ನು ಗ್ರಂಥಗಳ ಸಂಖ್ಯೆಯಿಂದ ಹೆಚ್ಚಿಸಿದ ಸಾಧುಪುರುಷರಲ್ಲಿ ಮೋರೋಪಂತ ಅತ್ಯಂತ ಪ್ರಸಿದ್ಧ ಹಾಗೂ ದೊಡ್ಡಕವಿ. ಕಾವ್ಯರಚನಾ ಸಾಮರ್ಥ್ಯವಂತು ಅದ್ವಿತೀಯ; ಆತನದು ಪ್ರಚಂಡ ಕಾವ್ಯೋದ್ಯೋಗ ; ಪರೀಕ್ಷಿಸುವೆನೆನ್ನುವವನಿಗೆ ಎಂಟೆದೆಬೇಕು, ಮಹಾಭಾರತ, ಭಾಗವತ, ರಾಮಾಯಣಗಳನ್ನು ಆರ್ಯಾಬದ್ಧ ಅನುವಾದಗಳಿಂದ ಮರಾಠಿಗೆ ತಂದಿರುವನಲ್ಲದೆ ೧೦೮ ರಾಮಾಯಣಗಳನ್ನು ರಚಿಸಿ ಒಟ್ಟು ಸುಮಾರು ೬೦,೦೦೦ ಕೃತಿಗಳಿಂದ ಅದರ ಭಂಡಾರವನ್ನು ಭರಿಸಿರುವನೆಂದು ತಿಳಿದು ಬರುತ್ತದೆ. ಮೋರೋ

ಪಂತನ ಭಾಷೆ ವ್ಯಾಕರಣ ಶುದ್ಧವಾದುದು ; ಆತ ಆಜೀವಪರ್ಯಂತ ರಾಮಭಕ್ತನಾಗಿದ್ದ.

ರಾಮಭಕ್ತಿಯಲ್ಲಿ ರಮಿಸಿದ, ವಿಹರಿಸಿದ. ಇದು ಆತನ ರಾಮಾಯಣಗಳನ್ನು ಪರಿಶೀಲಿಸಿದರೆ ವ್ಯಕ್ತವಾಗುತ್ತದೆ.

ರಾಮಂ ಲಕ್ಷ್ಮಣ ಪೂರ್ವಜಂ ರಘುವರಂ ಸೀತಾಪತಿಂ ಸುಂದರಂ
ಕಾಕುಸ್ಥಂ ಕರುಣಾರ್ಣವಂ ಗುಣನಿಧಿಂ ವಿಪ್ರಪ್ರಿಯಂ ಧಾರ್ಮಿಕಂ
ರಾಜೇಂದ್ರಂ ಸತ್ಯಸಂಧಂ ದಶರಥ ತನಯಂ ಶ್ಯಾಮಲಂ ಶಾಂತಮೂರ್ತಿಂ
ವಂದೇ ಲೋಕಾಭಿರಾಮಂ ರಘುಕುಲತಿಲಕಂ ರಾಘವಂ ರಾವಣಾರೀಮ್ ॥

ಎಂದು ಮುಂತಾಗಿ ರಾಮರಕ್ಷಾಸ್ತೋತ್ರವನ್ನು ರಚಿಸಿದ್ದಾನೆ. ಆತನು ಬರೆದ ರಾಮಾಯಣಗಳ ಹೆಸರುಗಳೂ ಗಮನಾರ್ಹವಾಗಿವೆ. ಮುಖ್ಯವಾದ ಕೆಲವು.

ಸೌಮ್ಯರಾಮಾಯಣ, ಸಾರರಾಮಾಯಣ, ರಘುರಾಜಸ್ತವ,
ವರದರಾಮಾಯಣ, ವಿಚಿತ್ರರಾಮಾಯಣ, ವಿಬುಧಪ್ರಿಯರಾಮಾಯಣ
ಮತ್ತಮಯೂರರಾಮಾಯಣ, ಶ್ರವಣಾಮೃತರಾಮಾಯಣ
ಸವಯಾರಾಮಾಯಣ, ಪಂಚಚಾಮರ ರಾಮಾಯಣ,
ಮಂಜುರಾಮಾಯಣ, ರಮಣೀಯರಾಮಾಯಣ,
ಕವಿಪ್ರಿಯರಾಮಾಯಣ, ಸದ್ರತ್ನರಾಮಾಯಣ,
ಗುರುರಾಮಾಯಣ, ದಂಡಕರಾಮಾಯಣ,
ಕಲ್ಯಾಣರಾಮಾಯಣ, ಮಂತ್ರಗರ್ಭಸಾಕೀರಾಮಾಯಣ,
ಪಂಚಶತೀರಾಮಾಯಣ, ದೋಹಾರಾಮಾಯಣ,
ಸೀತಾರಾಮಾಯಣ,......ಇತ್ಯಾದಿ ಇತ್ಯಾದಿ.

ರಾಮಾಯಣದಲ್ಲಿಯ ವಸ್ತುವನ್ನೇ ಆಧರಿಸಿದ ಕೃತಿಗಳು 'ಅಹಲ್ಯೋದ್ಧಾರ' ಮತ್ತು'ಕುಶಲವಾಖ್ಯಾನ'. ಕವಿ, ಭಾಷೆಯ ರಕ್ಷಕ ಹಾಗೂ ಪಾಲಕ ಎಂಬ ಜನೋಕ್ತಿಗೆ ಮೋರೋಪಂತ ಸದೈವ ಹಾಗೂ ಸಜೀವ ಉದಾಹರಣೆ. ಬಾಯಿಗೆ ಬಂದುದನ್ನು ಬೊಗಳುವ ಕವಿ ಆತನಲ್ಲ. ಆತನದು ವ್ಯಾಕರಣ ಶುದ್ಧ ಛಂದೋಬದ್ಧ ಪ್ರೌಢಶೈಲಿ; 'ಪದ್ಯಪ್ರಭು' ಎಂದೇ ಪ್ರಸಿದ್ಧ :

ಕವಿ ಹಾ ಭಾಷೇಚಾ ಪಾಲಕ ಹೀ ಜಾಣೇವ ಸದೈವ ಮನಾಂತ ವಾಗವೂನ ವ್ಯಾಕರಣಶುದ್ಧ,ಪ್ರೌಢ ಆಣಿ ಸುಸಂಸ್ಕೃತ ಭಾಷೇಂತ ಕರಣಾರಾ ಮೋಠ್ಯಾ ಪದ್ಯಪ್ರಭು ಮ್ಹಣಜೇ ಮೋರೋಪಂತಚ ಹೋಯ್.[11] ಪಂತರ ಸರ್ವರಾಮಾಯಣಗಳಲ್ಲಿ 'ಮಂತ್ರರಾಮಾಯಣ' ಕೃತಿ ದೊಡ್ಡದಾಗಿದ್ದು ಸರಸವೂ ಆಗಿದೆ ; ಅದರಲ್ಲಿ ಯುದ್ಧಕಾಂಡವು ಉಲ್ಲೇಖನೀಯ. ಭಾಷೆಯ ಶುದ್ಧಸ್ವರೂಪವನ್ನು ನೆನೆದಾಗ ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಮೋರೋಪಂತರ ಬಗೆಯ ಶುದ್ಧ ಸ್ವರೂಪದ ಕೃತಿಯೆಂದೇ ಹೇಳಬೇಕು. ಸರಾಗವಾಗಿ ಹರಿಯುವ ಸಲಿಲ ಮಂದಾಕಿನಿ

11. ಮಾಧವರಾವ್ ಪಟವರ್ಧನ 'ಛಂದೋರಚನಾ' ಪು. ೩೧ (೧೯೩೭)

